|| ಶ್ರೀಮೂಲರಾಮೋ ವಿಜಯತೇ ||



|| ಶ್ರೀಗುರುರಾಜೋ ವಿಜಯತೇ ||

# ಸದಾಚಾರಮುಕ್ತಾವಲೀ

(ಸದಾಚಾರಸ್ಮೃತಿ ಕನ್ನಡಾನುವಾದ, ಪ್ರಯೋಗಭಾಗ, ಅನುಸಂಧಾನ ವಿವರಣೆ
ಮತ್ತು ಅನೇಕ ಉಪಯುಕ್ತ ಮಾಹಿತಿಗಳಿಂದ ಕೂಡಿದೆ)


ಪ್ರಧಾನ ಸಂಪಾದಕರು

ರಾಜಾ ಎಸ್. ರಾಜಗೋಪಾಲಾಚಾರ್ಯ

ಮಂತ್ರಾಲಯ

ಅನುವಾದ ಮತ್ತು ಗ್ರಂಥಸಂಪಾದನೆ

ದಿವಂಗತ ಪಂಡಿತರತ್ನಂ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು

ವಿದ್ವಾನ್ ಡಿ. ಪಿ. ಮಧುಸೂದನಾಚಾರ್ಯ

ಸಂಶೋಧಕರು

ಪ್ರಾಚ್ಯವಿದ್ಯಾಸಂಶೋಧನಾಲಯ

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು



ಪ್ರಕಾಶಕರು

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ನಂಜನಗೂಡು ಶ್ರೀರಾಘವೇಂದ್ರಸ್ವಾಮಿಗಳವರ ಮಠ

**SADĀCĀRAMUKTĀVALĪ** : Compilation of traditional rituals with references of scriptures according to Vaiṣṇava (Mādhava) tradition; translated with notes by Late P.P.Lakṣmīnārāyaṇa Upādhyāya and Sri D.P. Madhusudanacharya

First Edition : April 2007. Published by Jagadguru Sriman Madhwacharya Moola Mahasamsthanam Nanjangud Sri Raghavendra Swamy Mutt, Mantralaya.

Pages : xlviii + 928

ಮೊದಲನೆ ಮುದ್ರಣ ಏಪ್ರಿಲ್ ೭ ೨೦೦೭

ಎರಡನೇ ಮುದ್ರಣ ಏಪ್ರಿಲ್ ೧೪ ೨೦೦೭

ಮೂರನೇ ಮುದ್ರಣ ಏಪ್ರಿಲ್ ೨೦ ೨೦೦೭

ನಾಲ್ಕನೇ ಮುದ್ರಣ ಏಪ್ರಿಲ್ ೨೭ ೨೦೦೭

ಐದನೇ ಮುದ್ರಣ ಮೇ ೭ ೨೦೦೭



ಬೆಲೆ : 100-00

ಮುಖಪುಟವಿನ್ಯಾಸ : ಗಂಜೀಫಾ ರಘುಪತಿಭಟ್

ಮುದ್ರಣ : ಎ. ಜಿ. ಸುವ್ರತೀಂದ್ರ, ವಾಣೀ ಪ್ರೆಸ್
ಗೀತಾ ರಸ್ತೆ, ಚಾಮರಾಜಪುರಂ, ಮೈಸೂರು ೫೭೦ ೦೦೫. ☎ ೨೩೩೦೨೯೫

# ಆಶೀರ್ವಚನ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ
ಸರ್ವತಂತ್ರಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಶ್ರೀಮನ್ಮೂಲರಘುಪತಿವೇದವ್ಯಾಸರೇವದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ
ಮೂಲಮಹಾಸಂಸ್ಥಾನಾಧೀಶ್ವರರಾದ ಶ್ರೀರಾಘವೇಂದ್ರಸ್ವಾಮಿಗಳವರ ಮಠದ
ವೇದಾಂತಸಾಮ್ರಾಜ್ಯ ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ ಶ್ರೀಮತ್ಸುಯಮೀಂದ್ರತೀರ್ಥ
ಶ್ರೀಪಾದಂಗಳವರ ಕರಕಮಲಸಂಜಾತರಾದ ಶ್ರೀಮತ್ಸುಜಯೀಂದ್ರತೀರ್ಥ ಶ್ರೀಪಾದಂಗಳವರ
ವರಕುಮಾರರಾದ

## ಶ್ರೀಮತ್ಸುಶಮೀಂದ್ರತೀರ್ಥ ಶ್ರೀಪಾದಂಗಳವರು

ಮತ್ತು

## ಶ್ರೀಮತ್ಸುಯತೀಂದ್ರತೀರ್ಥಶ್ರೀಪಾದಂಗಳವರು

ಮಾಡುವ ನಾರಾಯಣ ಸ್ಮರಣೆಗಳು

ಪ್ರಕೃತ, ನಮ್ಮ ಸಂಸ್ಥಾನದ ಮೂಲಪುರುಷರಾದ ಜಗದ್ಗುರು ಶ್ರೀಮಧ್ವಾಚಾರ್ಯರ ಕೃತಿ "ಸದಾಚಾರಸ್ಮೃತಿ"ಯನ್ನು ಕನ್ನಡಕ್ಕೆ ಭಾಷಾಂತರಿಸಿದವರು ವಿದ್ವಾನ್ ಲಕ್ಷ್ಮೀನಾರಾಯಣ ಉಪಾಧ್ಯಾಯರು. ನಮ್ಮ ಗುರುಗಳ ಕಾಲದಲ್ಲಿ, ಸಭೆಗಳಲ್ಲಿ ನಡೆದ ವಾಕ್ಯಾರ್ಥಗಳಲ್ಲಿ ಎದುರಾಳಿಗಳನ್ನು ಹಿಮ್ಮೆಟ್ಟಿಸಿ, ಸಿದ್ಧಾಂತವನ್ನು ಸ್ಥಾಪಿಸಿದ ಕೀರ್ತಿ ಆಚಾರ್ಯರದ್ದು. ಅನೇಕ ಕೃತಿಗಳಲ್ಲಿ ತಮ್ಮ ಪಾಂಡಿತ್ಯವನ್ನು ನಿರೂಪಿಸಿದವರು. ಅಂತಹ ಅವರ ಈ ಕೃತಿಯನ್ನು ಇನ್ನಷ್ಟು ವಿಸ್ತರಿಸಿ, ಉಪಯುಕ್ತವಾದ ಹಲವಾರು ಮಾಹಿತಿಗಳನ್ನು ಒದಗಿಸಿದವರು ನಮ್ಮ ಪ್ರಿಯಶಿಷ್ಯರಾದ ವಿದ್ವಾನ್ ಮಧುಸೂದನಾಚಾರ್ಯರು.

ಹೀಗೆ ತಲೆಮಾರುಗಳ ಮಿಶ್ರಣ, ಪರಿಶ್ರಮದಿಂದ ಮೂಡಿ ಬಂದಿರುವ ಈ ಕೃತಿಗೆ ಕೊಟ್ಟ ಹೆಸರು "ಸದಾಚಾರಮುಕ್ತಾವಲೀ".

ಆಚಾರ್ಯ ಮಧ್ವರು ಸಂಗ್ರಹಿಸಿದ ವೈಷ್ಣವರು ಮತ್ತು ಸಕಲ ಸಜ್ಜನರು ಆಚರಿಸಬೇಕಾದ ಸದಾಚಾರವನ್ನು ಪ್ರಪ್ರಥಮಬಾರಿಗೆ ವಿಸ್ತೃತವಾಗಿ ಅನಾವರಣಗೊಳಿಸಿದ ವಿದ್ವಾಂಸರ ಶ್ರಮವನ್ನು ಶ್ಲಾಘಿಸುತ್ತಾ, ಬೃಹತ್ ಗ್ರಂಥವಾದ್ದರಿಂದ ಬರಬಹುದಾದ ದೋಷಗಳಿಗೆ ಸಜ್ಜನರ ಆರೋಗ್ಯಕರ ವಿಮರ್ಶೆಯನ್ನು ಸ್ವಾಗತಿಸಿರುವ ಮಧುಸೂದನಾಚಾರ್ಯರ ಸಜ್ಜನಿಕೆ ಕಂಡು ಮೆಚ್ಚತಕ್ಕಂತಹದ್ದು ಎಂದು ಅಭಿಪ್ರಾಯ ಪಡುತ್ತೇವೆ.

ಈ ಗ್ರಂಥಕ್ಕೆ ಮನಸ್ಸಿಟ್ಟು ದುಡಿದ ಎಲ್ಲರಿಗೂ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ಅಭಿವೃದ್ಧಿಪಡಿಸಲಿ ಎಂದು ಅಸ್ಮದುಪಾಸ್ಯಮೂರ್ತಿ ಶ್ರೀಮನ್ ಮೂಲರಾಮಚಂದ್ರದೇವರಲ್ಲಿ ಪ್ರಾರ್ಥಿಸುತ್ತೇವೆ.

**ಇತಿ ನಾರಾಯಣಸ್ಮರಣೆಗಳು.**

**SRI PEJAVARA ADHOKSHAJA MATHA**
JAGADGURU SRI MADHWACHARYA SAMSTHANA
Udupi - 576 101. Karnataka
Phone : 020 : 2524198, 2526598
Mobile : 98454 68508




**ಶ್ರೀ ಪೇಜಾವರ ಅಧೋಕ್ಷಜ ಮಠ**
ಜಗದ್ಗುರು ಶ್ರೀ ಮಧ್ವಾಚಾರ್ಯ ಸಂಸ್ಥಾನ
ಉಡುಪಿ - ೫೭೬೧೦೧. ಕರ್ನಾಟಕ.
ದೂರವಾಣಿ : ೦೮೨೦ : ೨೫೨೪೧೯೮, ೨೫೨೬೫೯೮
ಮೊಬೈಲ್ : ೯೮೪೫೪ ೬೮೫೦೮

## ಆಶೀರ್ವಚನ

ವಿದ್ಯಾಮಠವೆಂದು ವಿಖ್ಯಾತವಾದ ಶ್ರೀರಾಘವೇಂದ್ರಮಠವು ನೂರಾರು ಅಪ್ರಕಾಶಿತ ಕೃತಿಗಳ ಪ್ರಕಾಶನ ಮತ್ತು ಕನ್ನಡ-ಆಂಗ್ಲಭಾಷೆಯಲ್ಲಿ ವಿಮರ್ಶಾತ್ಮಕ ಕೃತಿಗಳನ್ನು ಹೊರತರುವ ಮೂಲಕ ಜ್ಞಾನಕ್ಷೇತ್ರಕ್ಕೆ ಗಣನೀಯ ಸೇವೆ ಸಲ್ಲಿಸಿದೆ. ವಿದ್ವಾಂಸರ ಪುರಸ್ಕಾರ - ಸಾಮಾಜಿಕ ಸೇವಾಕಾರ್ಯಗಳಲ್ಲೂ ಶ್ರೀಮಠದ ಸೇವೆ ಅವಿಸ್ಮರಣೀಯವಾದುದು. ಶ್ರೀರಾಘವೇಂದ್ರಮಠಾಧೀಶರಾದ ಶ್ರೀಸುಶಮೀಂದ್ರತೀರ್ಥರ ಮತ್ತು ಶ್ರೀಸುಯತೀಂದ್ರತೀರ್ಥರ ಆದೇಶದಂತೆ ಪಂಚಾಂಗದೊಡನೆ "ಸದಾಚಾರಮುಕ್ತಾವಲೀ" ಗ್ರಂಥವನ್ನು ಪ್ರಕಾಶನಗೊಳಿಸಿ ಅಲ್ಪಬೆಲೆಗೆ ನೀಡುತ್ತಿರುವುದು ಸ್ತುತ್ಯ ಕಾರ್ಯವಾಗಿದೆ. ಇದರಲ್ಲಿ ಪಂಡಿತವರ್ಯರಾದ ದಿವಂಗತ ಪಿ.ಪಿ.ಲಕ್ಷ್ಮೀನಾರಾಯಣ ಉಪಾಧ್ಯಾಯರು ಕೆಲವು ಶ್ಲೋಕಗಳವರೆಗೆ ಮಾಡಿದ ಸದಾಚಾರಸ್ಮೃತಿಯ ಅನುವಾದ, ವಿವರಣೆ ಮತ್ತು ನಂತರದ ಶ್ಲೋಕಗಳಿಗೆ ನಮ್ಮ ಪ್ರಿಯಶಿಷ್ಯರಾದ ವಿದ್ವಾನ್ ಡಿ.ಪಿ.ಮಧುಸೂದನಾಚಾರ್ಯರು ಮಾಡಿದ ಅನುವಾದ ಸೇರಿದೆ. ಮೂಲಗ್ರಂಥಗಳಿಗೆ ಅನುಗುಣವಾಗಿ ನಡೆಸಬೇಕಾದ ಆಚಾರಪದ್ಧತಿಯನ್ನು ತಿಳಿಸುವ ತಂತ್ರ-ಮಂತ್ರಭಾಗವನ್ನು ಇದರೊಡನೆ ಸೇರಿಯವುದು ಇದರ ಉಪಯುಕ್ತತೆಯನ್ನು ಹೆಚ್ಚಿಸಿದೆ.

ಶ್ರೀಶ್ರೀಪಾದದ್ವಯರ ಆದೇಶದ ಮೇರೆಗೆ ಶ್ರೀಮಠದ ಆಪ್ತಕಾರ್ಯದರ್ಶಿಗಳಾದ ಶ್ರೀಯುತ ರಾಜಾ ರಾಜಗೋಪಾಲಾಚಾರ್ಯರು ಈ ಕೃತಿಯನ್ನು ಹೊರತರಲು ಅನುವಾಗುವಂತೆ ಅನುವಾದಿಸದಿರುವ ಭಾಗವನ್ನು ಅನುವಾದಿಸಿ, ಪರಿಷ್ಕರಿಸಿ, ತಂತ್ರಭಾಗವನ್ನು ಅಳವಡಿಸಿದ ನಮ್ಮ ಪ್ರಿಯಶಿಷ್ಯ ಮಧುಸೂದನಾಚಾರ್ಯರಿಗೂ ಮತ್ತು ಈ ಗ್ರಂಥವು ಪ್ರಕಟಗೊಳ್ಳಲು ಮುಖ್ಯ ಕಾರಣಕರ್ತರಾದ ಶ್ರೀ ರಾಜಾ ರಾಜಗೋಪಾಲಾಚಾರ್ಯರಿಗೂ ನಮ್ಮ ಆರಾಧ್ಯಮೂರ್ತಿ ಶ್ರೀಕೃಷ್ಣನು ಅನುಗ್ರಹವೃಷ್ಟಿಯನ್ನು ಮಾಡಲೆಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

**POORNA PRAJNA VIDYAPEETHA**
Katriguppa Main Road, Bangalore-560028, Karnataka. Phone : 080-26791728. Mobile : 9845468508. E-mail : ppsmb@vsnl.com

## ವಿದ್ವಾಂಸರ ದೃಷ್ಟಿಯಲ್ಲಿ "ಸದಾಚಾರಮುಕ್ತಾವಲೀ"

**ಸದ್ವೈಷ್ಣವ ಸಮಾಜಕ್ಕೆ ಶ್ರೀರಾಘವೇಂದ್ರಸ್ವಾಮಿ ಮಠದ ಅಪೂರ್ವ ಕೊಡುಗೆ**

ಹಿಂದೆ ಗೌತಮರ ಶಾಪದಿಂದ ಜ್ಞಾನ ತಿರೋಹಿತವಾಯಿತು. ಬ್ರಹ್ಮಾದಿ ದೇವತೆಗಳ ಪ್ರಾರ್ಥನೆಯಿಂದ ಭಗವಂತ ವ್ಯಾಸರೂಪದಿಂದ ಅವತರಿಸಿದ. ಮುಂದೆ ಕೆಲಕಾಲದ ಅನಂತರ "ಕೃಷ್ಣದ್ಯುಮಣಿ ನಿಮ್ಲೋಚೇ" ಕೃಷ್ಣನ ಪರಂಧಾಮ ಪ್ರಯಾಣ ಅನಂತರ ಮತ್ತೆ ಜ್ಞಾನಸೂರ್ಯನ ಅಸ್ತಮನ. ಆಗ ಯಾರ ಶಾಪವೂ ಇಲ್ಲ. ಆದರೆ ಜ್ಞಾನಲೋಪವಾಯಿತು. ಅದು ಕೂಡ ವೈದಿಕ ವೇಷದ ವಿಪ್ರರಿಂದಲೇ ವಿಜ್ಞಾನಭಾನು ಲೀನ.

ಅಜ್ಞಾನದ ಅಂಧಃತಮಸ್ಸು ಜಗತ್ತಿನ ತುಂಬಾ ವ್ಯಾಪಿಸಿತು. ಅದನ್ನೆಲ್ಲ ಕಳೆದು ಕೊಚ್ಚಿ ಹಾಕಲು ಸರ್ವಜ್ಞರೇ ಬೇಕಾಯಿತು. ಹರಿವಾಯುಗಳ ಹೊರತು ಬೇರೆ ಯಾರೂ ಸರ್ವಜ್ಞರಲ್ಲ. ಅವರಲ್ಲಿ ಶ್ರೀಹರಿಯು 'ತ್ರಿಯುಗಹೂತಿ' ಮೂರು ಯುಗಗಳಲ್ಲಿ ಮಾತ್ರ ಅವನಿಗೆ ಅವತಾರ. ಕಲಿಯುಗದಲ್ಲಿ ಭಗವಂತನಿಗೆ ಅವತಾರವಿಲ್ಲ. ವಾಯುದೇವರ ಹೊರತು ಬೇರೆ ಯಾರೂ ಸರ್ವಜ್ಞರಲ್ಲ, ಆದುದರಿಂದ 'ಸರ್ವಜ್ಞಮನ್ಯಮನವೇಕ್ಷ್ಯ' ಆ ವಾಯುದೇವರಿಗೆ ಅವತರಿಸಲು ಶ್ರೀಹರಿಯ ಆದೇಶ. ಆ ಆದೇಶದಂತೆ ಈ ದೇಶದಲ್ಲಿ ಅವತರಿಸಿದ ಸರ್ವಜ್ಞಾಚಾರ್ಯರೇ ಶ್ರೀಮಧ್ವರು.

ಈ ಗುರು ಮಧ್ವರ ಸರ್ವಜ್ಞತ್ವಕ್ಕೆ ಅವರು ಬರೆದ ಸರ್ವಮೂಲ ಗ್ರಂಥಗಳೇ ಪ್ರತ್ಯಕ್ಷಸಾಕ್ಷಿ. "ಸೂತ್ರ ಭಾಷ್ಯ ಅನುವ್ಯಾಖ್ಯಾನಗಳಂತೆ ಅವರ "ಕೃಷ್ಣಾಮೃತಮಹಾರ್ಣವ", "ಸದಾಚಾರ ಸ್ಮೃತಿ" ಮುಂತಾದ ಕೃತಿಗಳು ಆಕಾರದಲ್ಲಿ ಚಿಕ್ಕಪುಟ್ಟ ಎನಿಸಿದರೂ ವಿಷಯವ್ಯಾಪ್ತಿ ವೈವಿಧ್ಯ ವಿಸ್ತಾರದಲ್ಲಿ ಮಹತ್ತರ ಎನಿಸಿದ ಗ್ರಂಥಗಳು ಅವರ ಸರ್ವಜ್ಞತ್ವಕ್ಕೆ ಕನ್ನಡಿ ಹಿಡಿಯುತ್ತವೆ. ಅವುಗಳ ಟೀಕೆ ವ್ಯಾಖ್ಯೆಗಳಿಂದ ಇದು ವ್ಯಕ್ತವಾಗುತ್ತದೆ.

"ಸದಾಚಾರ ಸ್ಮೃತಿ"ಯು ಗುರು ಮಧ್ವರ ಅತ್ಯಂತ ಉಪಯುಕ್ತ ಹಾಗೂ ಅತ್ಯಂತ ಮಹತ್ತ್ವದ ಗ್ರಂಥ. ಆಚಾರ್ಯರು ತಮ್ಮ ಇತರ ಗ್ರಂಥಗಳಲ್ಲಿ ವೈದಿಕ ಜ್ಞಾನಕಾಂಡದ ಬ್ರಹ್ಮಾಂಡದರ್ಶನ ಮಾಡಿಸಿದರೆ, ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ, ತಂತ್ರಸಾರಾದಿ ಗ್ರಂಥಗಳಲ್ಲಿ ವೇದೋಕ್ತ ಕರ್ಮಕಾಂಡದ ಸಾಗ್ರ ಸಮಗ್ರ ಸಮ್ಯಗ್ದರ್ಶನವನ್ನು ಮಾಡಿಸುತ್ತಾರೆ.

ಶ್ರೀಮನ್ ಮಧ್ವಾಚಾರ್ಯರ ಹೊರತು ಬೇರೆ ಯಾವ ಮತೀಯ ಆಚಾರ್ಯರೂ ಮಾನವರ ದೈನಂದಿನ ಜೀವನದ ಬಗ್ಗೆ ಕಳಕಳಿ ಅಥವಾ ಕಾಳಜಿಯನ್ನು ವಹಿಸಿದ್ದು ಇಲ್ಲ, ಬರೆದದ್ದೂ ಇಲ್ಲ. ಮನುಷ್ಯನ ಬಾಳು ಸರ್ವಾಂಗ ಸುಂದರವಾಗಬೇಕು. ಅವನ ಜೀವನ ಒಂದು ಪಾವನ ಯಜ್ಞವಾಗಬೇಕು. ಅವನ ಪ್ರತಿಯೊಂದು ನಡೆ, ನುಡಿ, ಮಾತು, ಕೃತಿ ಎಲ್ಲವೂ ದೇವರ ಪೂಜೆಯಾಗಬೇಕು. "ಯದ್ಯತ್ ಕರ್ಮ ಕರೋಮಿ ತತ್ತದಖಿಲಂ ವಿಷ್ಣೋ ತವಾರಾಧನಮ್" ಎಂಬ ಅರಿವು, ಅನುಸಂಧಾನ ನಮ್ಮ ಪ್ರತಿಯೊಂದು ದೈಹಿಕ ವ್ಯಾಪಾರದಲ್ಲಿ ಇರಬೇಕು.

ಸ್ನಾನ, ಪಾನ, ಊಟ, ಪಾಠ, ನಡೆ, ನುಡಿ, ನಿದ್ರೆ ಮುಂತಾದ ಮಾನವರು ತಪ್ಪದೇ ಮಾಡುತ್ತಲಿರುವ ಕರ್ಮ ಕಲಾಪಗಳೆಲ್ಲಾ ಯಾವ ಅನುಸಂಧಾನದಿಂದ ಮಾಡಿದರೆ ಹರಿಪ್ರೀತಿಗೆ ಕಾರಣವಾಗುತ್ತದೆ ಎಂಬುದನ್ನು ಆಚಾರ್ಯರು ಸದಾಚಾರಸ್ಮೃತಿಯಲ್ಲಿ ಧಾರ್ಮಿಕವಾಗಿ, ಮಾರ್ಮಿಕವಾಗಿ ತಿಳಿಸಿಕೊಟ್ಟಿದ್ದಾರೆ.

ಒಟ್ಟು ಆಚಾರ್ಯರ ಗ್ರಂಥಗಳು ಮೂವತ್ತೇಳು. ಅದರಂತೆ ಸದಾಚಾರ ಸ್ಮೃತಿಯಲ್ಲಿ ಶ್ಲೋಕಗಳು ಮೂವತ್ತೇಳೇ. ಆ ಮೂವತ್ತೇಳು ಗ್ರಂಥಗಳಲ್ಲಿ ಹೇಳಿದ ಜ್ಞಾನಕಾಂಡದ ತತ್ತ್ವಾರ್ಥದ ಮರ್ಮವನ್ನು ಕರ್ಮಕಾಂಡದಲ್ಲಿ ಅಳವಡಿಸಿಕೊಂಡು ಹರಿಸರ್ವೋತ್ತಮ ತತ್ತ್ವದ ತಳಹದಿ ಮೇಲೆ ಶ್ರೀಹರಿಗೆ ಅರ್ಪಣೆ ಮಾಡಿದರೆ ಜನ್ಮ ಸಾರ್ಥಕವಾಗುವುದು. ಪುರುಷಾರ್ಥಪ್ರದವೂ

**SRI PEJAVARA ADHOKSHAJA MATHA**
JAGADGURU SRI MADHWACHARYA SAMSTHANA
Udupi - 576 101. Karnataka
Phone : 020 : 2524198, 2526598
Mobile : 98454 68508



**ಶ್ರೀ ಪೇಜಾವರ ಅಧೋಕ್ಷಜ ಮಠ**
ಜಗದ್ಗುರು ಶ್ರೀ ಮಧ್ವಾಚಾರ್ಯ ಸಂಸ್ಥಾನ
ಉಡುಪಿ - ೫೭೬೧೦೧. ಕರ್ನಾಟಕ.
ದೂರವಾಣಿ : ೦೮೨೦ : ೨೫೨೪೧೯೮, ೨೫೨೬೫೯೮
ಮೊಬೈಲ್ : ೯೮೪೫೪ ೬೮೫೦೮

# ಆಶೀರ್ವಚನ

ವಿದ್ಯಾಮಠವೆಂದು ವಿಖ್ಯಾತವಾದ ಶ್ರೀರಾಘವೇಂದ್ರಮಠವು ನೂರಾರು ಅಪ್ರಕಾಶಿತ ಕೃತಿಗಳ ಪ್ರಕಾಶನ ಮತ್ತು ಕನ್ನಡ-ಆಂಗ್ಲ ಭಾಷೆಯಲ್ಲಿ ವಿಮರ್ಶಾತ್ಮಕ ಕೃತಿಗಳನ್ನು ಹೊರತರುವ ಮೂಲಕ ಜ್ಞಾನಕ್ಷೇತ್ರಕ್ಕೆ ಗಣನೀಯ ಸೇವೆ ಸಲ್ಲಿಸಿದೆ. ವಿದ್ವಾಂಸರ ಪುರಸ್ಕಾರ - ಸಾಮಾಜಿಕ ಸೇವಾಕಾರ್ಯಗಳಲ್ಲೂ ಶ್ರೀಮಠದ ಸೇವೆ ಅವಿಸ್ಮರಣೀಯವಾದುದು. ಶ್ರೀರಾಘವೇಂದ್ರಮಠಾಧೀಶರಾದ ಶ್ರೀಸುಶಮೀಂದ್ರತೀರ್ಥರ ಮತ್ತು ಶ್ರೀಸುಯತೀಂದ್ರತೀರ್ಥರ ಆದೇಶದಂತೆ ಪಂಚಾಂಗದೊಡನೆ "ಸದಾಚಾರಮುಕ್ತಾವಲೀ" ಗ್ರಂಥವನ್ನು ಪ್ರಕಾಶನಗೊಳಿಸಿ ಅಲ್ಪಬೆಲೆಗೆ ನೀಡುತ್ತಿರುವುದು ಸ್ತುತ್ಯ ಕಾರ್ಯವಾಗಿದೆ. ಇದರಲ್ಲಿ ಪಂಡಿತವರ್ಯರಾದ ದಿವಂಗತ ಪಿ.ಪಿ.ಲಕ್ಷ್ಮೀನಾರಾಯಣ ಉಪಾಧ್ಯಾಯರು ಕೆಲವು ಶ್ಲೋಕಗಳವರೆಗೆ ಮಾಡಿದ ಸದಾಚಾರಸ್ಮೃತಿಯ ಅನುವಾದ, ವಿವರಣೆ ಮತ್ತು ನಂತರದ ಶ್ಲೋಕಗಳಿಗೆ ನಮ್ಮ ಪ್ರಿಯಶಿಷ್ಯರಾದ ವಿದ್ವಾನ್ ಡಿ.ಪಿ.ಮಧುಸೂದನಾಚಾರ್ಯರು ಮಾಡಿದ ಅನುವಾದ ಸೇರಿದೆ. ಮೂಲಗ್ರಂಥಗಳಿಗೆ ಅನುಗುಣವಾಗಿ ನಡೆಸಬೇಕಾದ ಆಚಾರಪದ್ಧತಿಯನ್ನು ತಿಳಿಸುವ ತಂತ್ರ-ಮಂತ್ರಭಾಗವನ್ನು ಇದರೊಡನೆ ಸೇರಿರುವುದು ಇದರ ಉಪಯುಕ್ತತೆಯನ್ನು ಹೆಚ್ಚಿಸಿದೆ.

ಶ್ರೀಶ್ರೀಪಾದದ್ವಯರ ಆದೇಶದ ಮೇರೆಗೆ ಶ್ರೀಮಠದ ಆಪ್ತಕಾರ್ಯದರ್ಶಿಗಳಾದ ಶ್ರೀಯುತ ರಾಜಾ ರಾಜಗೋಪಾಲಾಚಾರ್ಯರು ಈ ಕೃತಿಯನ್ನು ಹೊರತರಲು ಅನುವಾಗುವಂತೆ ಅನುವಾದಿಸದಿರುವ ಭಾಗವನ್ನು ಅನುವಾದಿಸಿ, ಪರಿಷ್ಕರಿಸಿ, ತಂತ್ರಭಾಗವನ್ನು ಅಳವಡಿಸಿದ ನಮ್ಮ ಪ್ರಿಯಶಿಷ್ಯ ಮಧುಸೂದನಾಚಾರ್ಯರಿಗೂ ಮತ್ತು ಈ ಗ್ರಂಥವು ಪ್ರಕಟಗೊಳ್ಳಲು ಮುಖ್ಯ ಕಾರಣಕರ್ತರಾದ ಶ್ರೀ ರಾಜಾ ರಾಜಗೋಪಾಲಾಚಾರ್ಯರಿಗೂ ನಮ್ಮ ಆರಾಧ್ಯಮೂರ್ತಿ ಶ್ರೀಕೃಷ್ಣನು ಅನುಗ್ರಹವೃಷ್ಟಿಯನ್ನು ಮಾಡಲೆಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

**POORNA PRAJNA VIDYAPEETHA**
Katriguppa Main Road, Bangalore-560028, Karnataka. Phone : 080-26791728. Mobile : 9845468508, E-mail : ppamb@vsnl.com

## ವಿದ್ವಾಂಸರ ದೃಷ್ಟಿಯಲ್ಲಿ "ಸದಾಚಾರಮುಕ್ತಾವಲೀ"

### ಸದ್ವೈಷ್ಣವ ಸಮಾಜಕ್ಕೆ ಶ್ರೀರಾಘವೇಂದ್ರಸ್ವಾಮಿ ಮಠದ ಅಪೂರ್ವ ಕೊಡುಗೆ

ಹಿಂದೆ ಗೌತಮರ ಶಾಪದಿಂದ ಜ್ಞಾನ ತಿರೋಹಿತವಾಯಿತು. ಬ್ರಹ್ಮಾದಿ ದೇವತೆಗಳ ಪ್ರಾರ್ಥನೆಯಿಂದ ಭಗವಂತ ವ್ಯಾಸರೂಪದಿಂದ ಅವತರಿಸಿದ. ಮುಂದೆ ಕೆಲಕಾಲದ ಅನಂತರ "ಕೃಷ್ಣದ್ಯುಮಣಿ ನಿಮ್ಲೋಚೇ" ಕೃಷ್ಣನ ಪರಂಧಾಮ ಪ್ರಯಾಣ ಅನಂತರ ಮತ್ತೆ ಜ್ಞಾನಸೂರ್ಯನ ಅಸ್ತಮನ. ಆಗ ಯಾರ ಶಾಪವೂ ಇಲ್ಲ. ಆದರೆ ಜ್ಞಾನಲೋಪವಾಯಿತು. ಅದು ಕೂಡ ವೈದಿಕ ವೇಷದ ವಿಪ್ರರಿಂದಲೇ ವಿಜ್ಞಾನಭಾನು ಲೀನ.

ಅಜ್ಞಾನದ ಅಂಧಃತಮಸ್ಸು ಜಗತ್ತಿನ ತುಂಬಾ ವ್ಯಾಪಿಸಿತು. ಅದನ್ನೆಲ್ಲ ಕಳೆದು ಕೊಚ್ಚಿ ಹಾಕಲು ಸರ್ವಜ್ಞರೇ ಬೇಕಾಯಿತು. ಹರಿವಾಯುಗಳ ಹೊರತು ಬೇರೆ ಯಾರೂ ಸರ್ವಜ್ಞರಲ್ಲ. ಅವರಲ್ಲಿ ಶ್ರೀಹರಿಯು 'ತ್ರಿಯುಗಹೂತಿ' ಮೂರು ಯುಗಗಳಲ್ಲಿ ಮಾತ್ರ ಅವನಿಗೆ ಅವತಾರ. ಕಲಿಯುಗದಲ್ಲಿ ಭಗವಂತನಿಗೆ ಅವತಾರವಿಲ್ಲ. ವಾಯುದೇವರ ಹೊರತು ಬೇರೆ ಯಾರೂ ಸರ್ವಜ್ಞರಲ್ಲ, ಆದುದರಿಂದ 'ಸರ್ವಜ್ಞಮನ್ಯಮನವೇಕ್ಷ್ಯ' ಆ ವಾಯುದೇವರಿಗೆ ಅವತರಿಸಲು ಶ್ರೀಹರಿಯ ಆದೇಶ. ಆ ಆದೇಶದಂತೆ ಈ ದೇಶದಲ್ಲಿ ಅವತರಿಸಿದ ಸರ್ವಜ್ಞಾಚಾರ್ಯರೇ ಶ್ರೀಮಧ್ವರು.

ಈ ಗುರು ಮಧ್ವರ ಸರ್ವಜ್ಞತ್ವಕ್ಕೆ ಅವರು ಬರೆದ ಸರ್ವಮೂಲ ಗ್ರಂಥಗಳೇ ಪ್ರತ್ಯಕ್ಷಸಾಕ್ಷಿ. "ಸೂತ್ರ ಭಾಷ್ಯ ಅನುವ್ಯಾಖ್ಯಾನಗಳಂತೆ ಅವರ "ಕೃಷ್ಣಾಮೃತಮಹಾರ್ಣವ", "ಸದಾಚಾರ ಸ್ಮೃತಿ" ಮುಂತಾದ ಕೃತಿಗಳು ಆಕಾರದಲ್ಲಿ ಚಿಕ್ಕಪುಟ್ಟ ಎನಿಸಿದರೂ ವಿಷಯವ್ಯಾಪ್ತಿ ವೈವಿಧ್ಯ ವಿಸ್ತಾರದಲ್ಲಿ ಮಹತ್ತರ ಎನಿಸಿದ ಗ್ರಂಥಗಳು ಅವರ ಸರ್ವಜ್ಞತ್ವಕ್ಕೆ ಕನ್ನಡಿ ಹಿಡಿಯುತ್ತವೆ. ಅವುಗಳ ಟೀಕೆ ವ್ಯಾಖ್ಯೆಗಳಿಂದ ಇದು ವ್ಯಕ್ತವಾಗುತ್ತದೆ.

"ಸದಾಚಾರ ಸ್ಮೃತಿ"ಯು ಗುರು ಮಧ್ವರ ಅತ್ಯಂತ ಉಪಯುಕ್ತ ಹಾಗೂ ಅತ್ಯಂತ ಮಹತ್ತ್ವದ ಗ್ರಂಥ. ಆಚಾರ್ಯರು ತಮ್ಮ ಇತರ ಗ್ರಂಥಗಳಲ್ಲಿ ವೈದಿಕ ಜ್ಞಾನಕಾಂಡದ ಬ್ರಹ್ಮಾಂಡದರ್ಶನ ಮಾಡಿಸಿದರೆ, ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ, ತಂತ್ರಸಾರಾದಿ ಗ್ರಂಥಗಳಲ್ಲಿ ವೇದೋಕ್ತ ಕರ್ಮಕಾಂಡದ ಸಾಗ್ರ ಸಮಗ್ರ ಸಮ್ಯಗ್ದರ್ಶನವನ್ನು ಮಾಡಿಸುತ್ತಾರೆ.

ಶ್ರೀಮನ್ ಮಧ್ವಾಚಾರ್ಯರ ಹೊರತು ಬೇರೆ ಯಾವ ಮತೀಯ ಆಚಾರ್ಯರೂ ಮಾನವರ ದೈನಂದಿನ ಜೀವನದ ಬಗ್ಗೆ ಕಳಕಳಿ ಅಥವಾ ಕಾಳಜಿಯನ್ನು ವಹಿಸಿದ್ದು ಇಲ್ಲ, ಬರೆದದ್ದೂ ಇಲ್ಲ. ಮನುಷ್ಯನ ಬಾಳು ಸರ್ವಾಂಗ ಸುಂದರವಾಗಬೇಕು. ಅವನ ಜೀವನ ಒಂದು ಪಾವನ ಯಜ್ಞವಾಗಬೇಕು. ಅವನ ಪ್ರತಿಯೊಂದು ನಡೆ, ನುಡಿ, ಮಾತು, ಕೃತಿ ಎಲ್ಲವೂ ದೇವರ ಪೂಜೆಯಾಗಬೇಕು. "ಯದ್ಯತ್ ಕರ್ಮ ಕರೋಮಿ ತತ್ತದಖಿಲಂ ವಿಷ್ಣೋ ತವಾರಾಧನಮ್" ಎಂಬ ಅರಿವು, ಅನುಸಂಧಾನ ನಮ್ಮ ಪ್ರತಿಯೊಂದು ದೈಹಿಕ ವ್ಯಾಪಾರದಲ್ಲಿ ಇರಬೇಕು.

ಸ್ನಾನ, ಪಾನ, ಊಟ, ಪಾಠ, ನಡೆ, ನುಡಿ, ನಿದ್ರೆ ಮುಂತಾದ ಮಾನವರು ತಪ್ಪದೇ ಮಾಡುತ್ತಲಿರುವ ಕರ್ಮ ಕಲಾಪಗಳೆಲ್ಲಾ ಯಾವ ಅನುಸಂಧಾನದಿಂದ ಮಾಡಿದರೆ ಹರಿಪ್ರೀತಿಗೆ ಕಾರಣವಾಗುತ್ತದೆ ಎಂಬುದನ್ನು ಆಚಾರ್ಯರು ಸದಾಚಾರಸ್ಮೃತಿಯಲ್ಲಿ ಧಾರ್ಮಿಕವಾಗಿ, ಮಾರ್ಮಿಕವಾಗಿ ತಿಳಿಸಿಕೊಟ್ಟಿದ್ದಾರೆ.

ಒಟ್ಟು ಆಚಾರ್ಯರ ಗ್ರಂಥಗಳು ಮೂವತ್ತೇಳು. ಅದರಂತೆ ಸದಾಚಾರ ಸ್ಮೃತಿಯಲ್ಲಿ ಶ್ಲೋಕಗಳು ಮೂವತ್ತೇಳೇ. ಆ ಮೂವತ್ತೇಳು ಗ್ರಂಥಗಳಲ್ಲಿ ಹೇಳಿದ ಜ್ಞಾನಕಾಂಡದ ತತ್ತ್ವಾರ್ಥದ ಮರ್ಮವನ್ನು ಕರ್ಮಕಾಂಡದಲ್ಲಿ ಅಳವಡಿಸಿಕೊಂಡು ಹರಿಸರ್ವೋತ್ತಮ ತತ್ತ್ವದ ತಳಹದಿ ಮೇಲೆ ಶ್ರೀಹರಿಗೆ ಅರ್ಪಣೆ ಮಾಡಿದರೆ ಜನ್ಮ ಸಾರ್ಥಕವಾಗುವುದು. ಪುರುಷಾರ್ಥಪ್ರದವೂ

ಆಗುವುದು ಎಂಬುದನ್ನು ಪಂಡಿತರಿಗೂ, ಪಾಮರರಿಗೂ, ಬುದ್ಧಿಗಮ್ಯವಾಗುವಂತೆ ಅನುಷ್ಠಾನ ಶ್ಲೋಕಗಳಲ್ಲಿ ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

ಅತ್ಯುಪಯುಕ್ತವೂ ಅವಶ್ಯ ಪಠನೀಯವೂ, ಪ್ರತಿದಿನ ಸ್ಮರಣೀಯವೂ, ಪದೇ ಪದೇ ಅನುಸರಣೀಯವೂ ಆದ ಈ ಗ್ರಂಥರತ್ನಕ್ಕೆ ಶ್ರೀನಿವಾಸ ಆಚಾರ್ಯರ 'ಆಹ್ನಿಕ ಕೌಸ್ತುಭ', ಶ್ರೀ ನರಸಿಂಹಾಚಾರ್ಯರ 'ಭಾವ ಪ್ರಕಾಶಿಕಾ', ಶ್ರೀವೇದವ್ಯಾಸಾಚಾರ್ಯರ 'ತಂತ್ರ ದೀಪಿಕಾ' ಮೊದಲಾದ ವ್ಯಾಖ್ಯೆಗಳಿರುತ್ತವೆ. ಅವುಗಳಲ್ಲಿ ಆಚಾರ್ಯರು ಸೂಚ್ಯವಾಗಿ ನಿರ್ದೇಶಿಸಿದ ಮಂತ್ರ, ತಂತ್ರ, ವಿಧಿ, ವಿಧಾನ, ಜಪ, ತಪ, ಅನುಷ್ಠಾನಗಳಿಗೆಲ್ಲ ವೇದ, ಶಾಸ್ತ್ರ, ಪುರಾಣ, ಗೀತಾಸ್ಮೃತಿ, ಉಪನಿಷತ್‌ಸ್ಮೃತಿ ಗ್ರಂಥಗಳ ಸಂವಾದವನ್ನು ಉಪಷ್ಟಂಭಕವಾಗಿ ತೋರಿಸುತ್ತಾರೆ, ಈ ವ್ಯಾಖ್ಯಾನಕಾರರು.

ಇದೆಲ್ಲವೂ ನಮ್ಮ ಪ್ರಾಚೀನ ಗ್ರಂಥಗಳ ಟೀಕಾ ವ್ಯಾಖ್ಯಾನಕಾರರು ಹಿಂದೆ ಮಾಡಿದ ಸಮೀಚೀನ ಪ್ರಯತ್ನವಾಗಿದೆ. ಆದರೆ ಇದೆಲ್ಲವೂ ಸಂಸ್ಕೃತಮಯ. 'ಅಜ್ಞಜನದುರ್ಜ್ಞೇಯ'. ಆದುದರಿಂದ ಸರ್ವ ಆಸ್ತಿಕ, ವೈದಿಕ ಮಾಧ್ವ ಸಮಾಜದ ಸರ್ವತೋಮುಖ ಅಭಿವೃದ್ಧಿ ಮತ್ತು ಭಗವದಭಿಮುಖವಾಗಿ ಪ್ರವೃತ್ತಿಯನ್ನು ನಿರ್ಮಿಸುವ ಏಕೈಕ ಉದ್ದೇಶದಿಂದ ಕಾರ್ಯಪ್ರವೃತ್ತವಾಗಿದೆ ಶ್ರೀಮಠ. ಶ್ರೀಗುರುಸಾರ್ವಭೌಮ ರಾಘವೇಂದ್ರ ಸ್ವಾಮಿ ಮಠದ ಶ್ರೀಪಾದಂಗಳವರು ಶ್ರೀ ಗುರುಸಾರ್ವಭೌಮ ಪತ್ರಿಕೆಯ ಮುಖಾಂತರ ಜ್ಞಾನ ಪ್ರಸಾರದ ಮಹಾಕಾರ್ಯವನ್ನು ಅರ್ಧ ಶತಮಾನಕ್ಕಿಂತ ಹೆಚ್ಚು ಕಾಲದಿಂದ ಅವ್ಯಾಹತವಾಗಿ ಮಾಡುತ್ತಲೇ ಇರುತ್ತಾರೆ.

ಆ ಕಾಲದಲ್ಲಿ ಆಸ್ಥಾನ ವಿದ್ವಾಂಸರಾದ ಪಂಡಿತ ಸಾರ್ವಭೌಮ ಶ್ರೀ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯ ಎಂಬ ವಿದ್ವದ್ವರೇಣ್ಯರು ಅಂದಿನ ಶ್ರೀ ರಾಘವೇಂದ್ರ ಮಠಾಧೀಶರ ಆಜ್ಞೆಯಂತೆ ಆಕಾರದಿಂದ ಲಘುತರವಾದರೂ ಭಾವಾರ್ಥಪ್ರಕಾರದಿಂದ ಗುರುತರವೂ, ವೇದೋಕ್ತಧರ್ಮ ಕರ್ಮಗಳ ದಿಗ್ದರ್ಶನದಿಂದ ಮಹತ್ತರವೂ ಆದ ಈ 'ಸದಾಚಾರಸ್ಮೃತಿ' ಗ್ರಂಥವನ್ನು ಇಡಿಕಿಡಿಯಾಗಿಯೂ ಸಾಗ್ರಸಮಗ್ರವಾಗಿಯೂ ಕನ್ನಡದಲ್ಲಿ ಅರ್ಥೈಸಿ ಅನುವಾದಿಸಿದರು. ಇದರಿಂದ, ಶ್ರೀಲಕ್ಷ್ಮೀನಾರಾಯಣ ಉಪಾಧ್ಯಾಯರು ಶ್ರೀರಾಯರ ಉಭಯ ಕುಲಾಬ್ಧಿ ಚಂದಿರರಾದ ಶ್ರೀ ಸುಯಮೀಂದ್ರತೀರ್ಥರು ಹಾಗೂ ಶ್ರೀ ಸುಜಯೀಂದ್ರತೀರ್ಥರೆಂಬ ಉಭಯ ಶ್ರೀಗಳವರ ಮತ್ತು ಶ್ರೀ ಗುರುಸಾರ್ವಭೌಮರ ನಿರವಗ್ರಹ ಅನುಗ್ರಹಕ್ಕೆ ಪಾತ್ರರಾದರು.

ಈ ಸದಾಚಾರ ಸ್ಮೃತಿಯಲ್ಲಿ ಆನಂದತೀರ್ಥರು ಆಸ್ತಿಕ ಜನರಿಗೆಲ್ಲಾ ಸಕಾಲದಲ್ಲಿ ತ್ರಿಕಾಲದಲ್ಲಿ, ಸದಾಕಾಲದಲ್ಲಿಯೂ ಮಾಡಬೇಕೆಂದು ವಿಧಿಸಿ, ಒಂದೊಂದು ಪದ, ಪಂಕ್ತಿ, ಅಕ್ಷರಗಳಿಂದ ಸಂಕೇತಗೈದಿದ್ದಾರೆ. ಅವರು ಸೂಚಿಸಿದ ವಿಧಿವಿಧಾನಗಳ ಅನುಷ್ಠಾನದ ಬಗೆಯನ್ನು ಈ ವ್ಯಾಖ್ಯಾನಕಾರರು ಚೆನ್ನಾಗಿ ವಿವರಿಸುತ್ತಾರೆ ಮತ್ತು ಅವುಗಳಿಗೆ ಉಪೋದ್ಬಲಕವಾದ ಶ್ರುತಿ, ಸ್ಮೃತಿ, ಗೀತಾ, ಉಪನಿಷದ್, ನಿಗಮಾಗಮಗಳ ವಚನಗಳನ್ನು ಕೂಡಾ ಉದಾಹರಿಸುತ್ತಾರೆ.

ಉಪಾಧ್ಯಾಯರ ಅತ್ಯುಪಯುಕ್ತವಾದ ಸದಾಚಾರ ಸ್ಮೃತಿಯ ಕನ್ನಡ ವ್ಯಾಖ್ಯಾನವು ಶ್ರೀಗುರುಸಾರ್ವಭೌಮಪತ್ರಿಕೆಯಲ್ಲಿ ಧಾರಾವಾಹಿಯಾಗಿ ಬಂದು ಅನೇಕ ವರ್ಷಗಳಾಗಿ ಹೋದವು. ಅವನ್ನೆಲ್ಲ ಕ್ರೋಢೀಕರಿಸಿ, ಪರಿಷ್ಕರಿಸಿ ಜನರಿಗೆಲ್ಲಾ ನೀಡುವ ಮಹಾಕಾರ್ಯವು ಇಂದು ಅತ್ಯಾವಶ್ಯಕವಾಗಿದ್ದಿತು.

ಪ್ರಸ್ತುತ ಶ್ರೀ ಶ್ರೀ ಸುಶಮೀಂದ್ರತೀರ್ಥರು ಸರ್ವಜ್ಞಪೀಠದ ಆರೋಹಣ ಮಾಡಿದ ಬಳಿಕ, ಸರ್ವಜ್ಞಾಚಾರ್ಯರ ಸರ್ವಗ್ರಂಥಗಳನ್ನು ಟೀಕಾ, ಟಿಪ್ಪಣಿ ಸಹಿತವಾಗಿ ಬೆಳಕಿನ ಬೆಟ್ಟದ ಮೇಲೆ ತರಿಸಿ, ಇರಿಸಿ, ಮೆರೆಸಬೇಕೆಂದು ಸಂಕಲ್ಪಗೈದಿದ್ದಾರೆ. ಆಚಾರ್ಯರ ಪ್ರತಿರೂಪದಂತಿರುವ ಮಾಧ್ವ ವಾಙ್ಮಯವನ್ನೆಲ್ಲಾ ಟೀಕಾಟಿಪ್ಪಣಿಗಳೊಂದಿಗೆ ಪ್ರಕಟಿಸಿ ಸರ್ವಜ್ಞಾಚಾರ್ಯರ ಹೊಚ್ಚ ಹೊಸ ಸರ್ವಸೇವೆಯನ್ನು ಗೈಯುವ ಅವರ ಸಂಕಲ್ಪ ಈಗಾಗಲೇ ಕಾರ್ಯ ಪ್ರವೃತ್ತವಾಗಿದೆ.

ಇದರಿಂದ ಕ್ರಿಮಿ, ಕೀಟ, ಇಲಿ, ಹೆಗ್ಗಣಗಳಿಗೆ ಆಹಾರವಾಗುತ್ತಿರುವ ಪ್ರಾಚೀನ ಅರ್ವಾಚೀನ, ಸಮೀಚೀನ ಕೃತಿಗಳು ಮುದ್ರಣದ ಮುಖ ಕಾಣುತ್ತಲಿವೆ. ಹಿಂದೆ ಮುದ್ರಿತವಾಗಿದ್ದರೂ ಸದ್ಯ ದುರ್ಮಿಳವಾದ ಅನೇಕ ಅಪರೂಪ ಗ್ರಂಥಗಳನ್ನು ಈಗ ಶ್ರೀರಾಯರ ಮಠದ ತಪ್ತಮುದ್ರಾಧಾರಣ ಮಾಡಿ, ಭದ್ರೋನ್ನಿದ್ರವಾಗಿ ಹೊರಬರುತ್ತಲಿದೆ.

ಹಿಂದೆ ಭೋಜರಾಜನು ಅಕ್ಷರಕ್ಕೊಂದು ಲಕ್ಷ ಕೊಡುತ್ತಿದ್ದನೆಂದು ದಂತಕಥೆ ಇದೆ. ಆದರೆ ಈಗ ಶ್ರೀಗುರುಸಾರ್ವಭೌಮ ಮಠದವರು ಪ್ರತ್ಯಕ್ಷವಾಗಿಯೇ ಒಂದೊಂದು ಅಪರೂಪ ಗ್ರಂಥಕ್ಕೂ, ಗ್ರಂಥಕಾರರಿಗೂ ಲಕ್ಷಲಕ್ಷರೂಪಾಯಿ, ಶಾಲು ಸಕಲಾದಿ ನೀಡುತ್ತಾರೆ. ಬಹುಮಾನ ಮಾಡುತ್ತಾರೆ. ಇದರಿಂದ ಆ ಗ್ರಂಥಗಳ ಕಡೆಗೂ ಈ ಗ್ರಂಥಕಾರರ ಕಡೆಗೂ ಲಕ್ಷಲಕ್ಷ ಜನರ ಲಕ್ಷ್ಯವು ತಿರುಗುವಂತೆ ಮಾಡುತ್ತಿದ್ದಾರೆ.

ಧರ್ಮರಾಜನ ರಾಜಸೂಯ ಯಾಗದಂತೆ ಪ್ರತಿವರ್ಷವೂ ಧರ್ಮಪೀಠಾಧಿಪತಿಗಳಾದ ಶ್ರೀರಾಘವೇಂದ್ರಸ್ವಾಮಿ ಮಠಾಧೀಶರಿಂದ ನೆರವೇರಿಸಲ್ಪಡುವ ಶ್ರೀರಾಯರ ಆರಾಧನೆ ಸಂದರ್ಭದಲ್ಲಿ ಲಕ್ಷಲಕ್ಷ ರೂಪಾಯಿಯ ಶ್ರೀರಾಘವೇಂದ್ರ ಅನುಗ್ರಹ ಪ್ರಶಸ್ತಿಯನ್ನು ಮಹಾ ಪಂಡಿತರಿಗೆ ಕೊಡಲಾಗುವುದು. ಅಂತಹ ರಾಜರ ಅನುಗ್ರಹದ ರಾಜಗೌರವ ಪಡೆದ ಪಂಡಿತಶ್ರೇಷ್ಠರಲ್ಲಿ ಅನ್ಯತಮರೂ, ಧನ್ಯತಮರೂ ಆದ ವಿದ್ವಾನ್ ಶ್ರೀ ಡಿ. ಪ್ರಹ್ಲಾದಾಚಾರ್ಯರ ಪಂಡಿತಪ್ರವರ ಪುತ್ರರಾದ ವಿದ್ವಾನ್ ಮಧುಸೂಧನಾಚಾರ್ಯರು, ಆನಂದತೀರ್ಥರ 'ಸದಾಚಾರಸ್ಮೃತಿ' ಗ್ರಂಥದ ಮೇಲೆ 'ಸದಾಚಾರಮುಕ್ತಾವಲಿ' ಎಂಬ ಗ್ರಂಥವನ್ನು ಸಿದ್ಧಪಡಿಸಿದ್ದಾರೆ.

ಆ ಸದಾಚಾರಸ್ಮೃತಿ ಗ್ರಂಥದ ಮೇಲಿನ ಉಪಲಬ್ಧವಿದ್ದ ಎಲ್ಲಾ ಟೀಕಾಟಿಪ್ಪಣಿಗಳ ಆಶಯ ಆಕೂತಗಳನ್ನೆಲ್ಲ ಸಾರೋದ್ಧಾರಮಾಡಿ, ಕ್ರೋಢೀಕರಿಸಿ, ಸುಮಾರು ಸಾವಿರ ಪುಟಗಳ ಮಹಾಗ್ರಂಥವನ್ನು ಕನ್ನಡದಲ್ಲಿ ಬರೆದು ಗುರುಸಾರ್ವಭೌಮರಿಗೆ ಮಧುಸೂಧನಾಚಾರ್ಯರು ಅರ್ಪಿಸಿದ್ದಾರೆ. ಅದರಲ್ಲಿ ಪ್ರಾಚೀನ ವ್ಯಾಖ್ಯಾನಗಳಲ್ಲದೇ ಇತ್ತೀಚೆಗೆ ಗುರುಸಾರ್ವಭೌಮ ಪತ್ರಿಕೆಯಲ್ಲಿ ಧಾರವಾಹಿಯಾಗಿ ಹರಿದುಬಂದ, ಬರೆದುಬಂದ ಜ್ಞಾನ ಧಾರೆಯನ್ನೆಲ್ಲ ತಮ್ಮ ಬುದ್ಧಿಯಿಂದ ಬೆಳಸಿ 'ಸದಾಚಾರಮುಕ್ತಾವಲಿ' ಎಂಬ ಹೆಸರಿನ ಅನ್ವರ್ಥಕ ಗ್ರಂಥವನ್ನು ಓದುಗರಿಗೆ ನೀಡಿದ್ದಾರೆ.

ವಿದ್ವಾನ್ ಮಧುಸೂದನಾಚಾರ್ಯರು 'ಸದಾಚಾರಸ್ಮೃತಿ' ಗ್ರಂಥದ ಮೇಲಿನ ಎಲ್ಲಾ ಸಂಸ್ಕೃತ ಅನುವಾದ ಗ್ರಂಥಗಳ ಗೂಢಾಶಯ, ಗಹನಾಕೂತಗಳನ್ನೆಲ್ಲ ಕ್ರೋಢೀಕರಿಸಿ, ಕನ್ನಡೀಕರಿಸಿ ಆಸ್ತಿಕ ಪ್ರಪಂಚಕ್ಕೆ ನೀಡುತ್ತಲಿದ್ದಾರೆ.

ಪ್ರಹ್ಲಾದಪುತ್ರರ ಈ ಗೈಮೆಯ ಗ್ರಂಥವು ಪ್ರಹ್ಲಾದ ಅಂಶರಾದ ಶ್ರೀರಾಯರ ಅನುಗ್ರಹಕ್ಕೂ ಸರ್ವ ಓದುಗರ ಪ್ರಹ್ಲಾದ, ಆಹ್ಲಾದಗಳಿಗೂ ಕಾರಣವಾಗುವುದರಲ್ಲಿ ಸಂದೇಹವಿಲ್ಲ.

पं. [illegible]नाथाचार्य गलगली

## ವಿದ್ವಾಂಸರ ದೃಷ್ಟಿಯಲ್ಲಿ "ಸದಾಚಾರಮುಕ್ತಾವಲೀ"

ಶ್ರೀಹರಿವಾಯುಗಳ ಅನುಗ್ರಹ ಪಡೆಯಬೇಕಾದರೆ ಮನಸ್ಸು ಶುದ್ಧವಾಗಿರಬೇಕು. ಮನಸ್ಸಿನ ಶುದ್ಧಿ ಸತ್ಕರ್ಮಗಳ ಆಚರಣೆಯಿಂದ ದೊರೆಯುತ್ತದೆ "ಆಚಾರಃ ಪ್ರಥಮೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ" ಎಂಬ ಪ್ರಾಚೀನ ವಚನ ಎಲ್ಲರಿಗೂ ತಿಳಿದಿದೆ. ಶ್ರುತಿಸ್ಮೃತಿಗಳಿಂದ ಕರ್ಮಗಳ ವಿಧಾನವು ದೊರೆಯುತ್ತದೆ. ಆದರೆ ಅಲ್ಪಜ್ಞರಿಗೆ ಶ್ರುತಿಸ್ಮೃತಿಗಳ ಆಧಾರದಿಂದ ಕರ್ಮಗಳ ಮತ್ತು ಅನುಷ್ಠಾನದ ಸ್ವರೂಪವನ್ನು ನಿರ್ಣಯಿಸಲು ಸಾಧ್ಯವಿಲ್ಲ. ಅದಕ್ಕಾಗಿ ಜ್ಞಾನಿಗಳು ಎಲ್ಲವನ್ನೂ ವಿಚಾರ ಮಾಡಿ ಕರ್ಮದ ಸ್ವರೂಪವನ್ನು ಅವುಗಳ ಅನುಷ್ಠಾನದ ಕ್ರಮವನ್ನು ನಿರ್ಣಯಿಸಿರುತ್ತಾರೆ. ಶ್ರೀಮದಾಚಾರ್ಯರ ಸದಾಚಾರಸ್ಮೃತಿ ಮತ್ತು ಅದರ ವ್ಯಾಖ್ಯಾನಗಳು ಈ ವಿಷಯದಲ್ಲಿ ತುಂಬಾ ಉಪಕಾರಿಗಳಾಗಿವೆ. ದಿವಂಗತ ಪಿ.ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರ ಕೃತಿಯನ್ನು ಅನುಸರಿಸಿ ಮತ್ತು ಮುಂದುವರೆಸಿ ಶ್ರೀ ಮಧುಸೂದನಾಚಾರ್ಯರು ಸಂಪಾದಿಸಿರುವ ಈ ಕೃತಿಯು ತುಂಬಾ ಉಪಯುಕ್ತವಾಗಿದೆ. ಅವರನ್ನು ಈ ಕಾರ್ಯದಲ್ಲಿ ಪ್ರೇರಿಸಿದ ಉಭಯ ಶ್ರೀಪಾದಂಗಳವರು ಮತ್ತು ಅವರ ಆಪ್ತ ಕಾಯದರ್ಶಿಗಳಾದ ರಾಜಾ ರಾಜಗೋಪಾಲಾಚಾರ್ಯರು ಸ್ತುತ್ಯರ್ಹರು. ಎಲ್ಲಾ ಸಜ್ಜನರು ಈ ಕೃತಿಯ ಉಪಯೋಗವನ್ನು ಪಡೆದು ತಮ್ಮ ಕರ್ಮಾಚರಣೆಯನ್ನು ಶೋಧಿಸಿಕೊಂಡು ನೆರವೇರಿಸಿ ಶ್ರೀಹರಿವಾಯುಗಳ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಆಶಿಸುತ್ತೇನೆ.

*ಪಿ.ಎಸ್. ಶೇಷಗಿರಿ ಆಚಾರ್ಯ*

ಮೈಸೂರು.

# ವಿದ್ವಾಂಸರ ದೃಷ್ಟಿಯಲ್ಲಿ "ಸದಾಚಾರಮುಕ್ತಾವಲೀ"

"ಸದಾಚಾರಸ್ಮೃತಿ" ಶ್ರೀಮದಾಚಾರ್ಯರ, ಗಾತ್ರದಲ್ಲಿ ಅತ್ಯಂತ ಚಿಕ್ಕದಾದ, ಆದರೆ ಅಷ್ಟೇ ಮಹತ್ತ್ವಪೂರ್ಣವಾದ ಕೃತಿ. ಜೀವನದಲ್ಲಿ ಮುಮುಕ್ಷು ಮಾನವನ ಪ್ರಧಾನ ಗುರಿ ತತ್ತ್ವಜ್ಞಾನಸಂಪಾದನೆ. ಆ ಗುರಿಯನ್ನು ಮುಟ್ಟಲು ಶಾಸ್ತ್ರಾಧ್ಯಯನ ಎಷ್ಟು ಆವಶ್ಯಕವೋ ಅಷ್ಟೇ ಮುಖ್ಯವಾದದ್ದು ಸದಾಚಾರದ ಅನುಷ್ಠಾನ. ಸದಾಚಾರದ ಅನುಷ್ಠಾನದಿಂದ ನೈರ್ಮಲ್ಯವನ್ನು ಪಡೆಯದ ಅಂತಃಕರಣ ಮಲಿನವಾಗಿರುವ ಕನ್ನಡಿಯಂತೆ. ಅದು ನಮಗೆ ತತ್ತ್ವವನ್ನು ಸಂಶಯಕ್ಕೆಡೆ ಇಲ್ಲದಂತೆ ಸ್ಪಷ್ಟವಾಗಿ ತೋರಿಸಲಾರದು. ಆದ್ದರಿಂದಲೇ ತತ್ತ್ವಜಿಜ್ಞಾಸುಗಳನ್ನು ಅನುಗ್ರಹಿಸಲು ಆಚಾರ್ಯರು ತತ್ತ್ವಶಾಸ್ತ್ರಗ್ರಂಥಗಳನ್ನು ರಚಿಸಿದ್ದಲ್ಲದೆ, ಸದಾಚಾರದ ನೈಜ ಸ್ವರೂಪವನ್ನು ಅದರ ಮಹತ್ತ್ವವನ್ನು ಬಿಂಬಿಸಲು ಧರ್ಮಶಾಸ್ತ್ರಗಳ ಸಾರಸಂಗ್ರಹವಾದ ಸದಾಚಾರಸ್ಮೃತಿಯನ್ನೂ ರಚಿಸಿದರು.

"ಆಚಾರಃ ಪರಮೋ ಧರ್ಮಃ ...." (ಮನುಸ್ಮೃತಿ)

ಎಂದು ಮನುಸ್ಮೃತಿ ಉದ್ಘೋಷಿಸಿರುವಂತೆ ಸದಾಚಾರವೇ ಪರಮಧರ್ಮ. ಅದರ ಮೂಲ ಶ್ರುತಿಸ್ಮೃತಿಗಳು. ಅವೆಲ್ಲದರ ಸಾರವನ್ನು ಆಚಾರ್ಯರು ಕೆಲವೇ ಶ್ಲೋಕಗಳಲ್ಲಿ ಸಂಗ್ರಹಿಸಿದ್ದು, ಸಾಮಾನ್ಯರು ಸದಾಚಾರದ ಸೂಕ್ಷ್ಮಗಳನ್ನು ಆಚಾರ್ಯರ ಗ್ರಂಥದಿಂದ ಅರಿಯಲಾರರು. ಧರ್ಮದ ಎಲ್ಲ ಸೂಕ್ಷ್ಮಗಳನ್ನು, ಅವುಗಳಿಗೆ ಈ ಪ್ರಮಾಣಗಳನ್ನು ಮೂಲ ಗ್ರಂಥಗಳಿಂದ ಸಂಗ್ರಹಿಸಿ, ಸದಾಚಾರಸ್ಮೃತಿಯ ಅನುವಾದದೊಡನೆ ಎಲ್ಲ ಜಿಜ್ಞಾಸುಗಳಿಗೆ ಉಪಕಾರವಾಗುವಂತೆ ಕಳೆದ ಶತಮಾನದ ಏಳನೆಯ ದಶಕದಲ್ಲಿ ಪಂಡಿತವರೇಣ್ಯರಾದ ಪಿ.ಪಿ.ಲಕ್ಷ್ಮೀನಾರಾಯಣ ಉಪಾಧ್ಯಾಯರು ಶ್ರೀಗುರುಸಾರ್ವಭೌಮಪತ್ರಿಕೆಯಲ್ಲಿ ಧಾರಾವಾಹಿ ಲೇಖನಗಳನ್ನು ಪ್ರಕಟಿಸಿದರು. ಅಪೂರ್ಣವಾಗಿದ್ದ ಅವರ ಅನುವಾದ, ವಿವರಣೆಗಳನ್ನು ಪೂರ್ಣಗೊಳಿಸಿ, ಹೆಚ್ಚಿನ ಉಪಯುಕ್ತ ಮಾಹಿತಿಗಳನ್ನು ಸೇರಿಸಿ ಒಂದು ಬೃಹತ್ ಸಂಪುಟವನ್ನು ಸಿದ್ಧಪಡಿಸಿ ಜಿಜ್ಞಾಸುಗಳಿಗೆ ಅತ್ಯಲ್ಪ ಬೆಲೆಯಲ್ಲಿ ಒದಗಿಸುವ ಅಪೂರ್ವ ಯೋಜನೆ ಪರಮಪೂಜ್ಯ ಶ್ರೀಸುಶಮೀಂದ್ರತೀರ್ಥರ ಆಪ್ತಕಾರ್ಯದರ್ಶಿಗಳಾದ ಶ್ರೀ ರಾಜಾ ರಾಜಗೋಪಾಲಾಚಾರ್ಯರದ್ದು. ಇದಕ್ಕಾಗಿ ಅವರು ಎಲ್ಲರ ಕೃತಜ್ಞತೆಗೆ ಪಾತ್ರರು.

ಶ್ರೀ ರಾಜಾ ರಾಜಗೋಪಾಲಾಚಾರ್ಯರ ಸೂಚನೆಯಂತೆ ನಾನಾ ಮೂಲಗಳಿಂದ ವಿಶೇಷ ವಿಷಯಗಳನ್ನು ಸಂಗ್ರಹಿಸಲು ವಿಶೇಷ ಶ್ರಮ ವಹಿಸಿದ ಚಿ. ಮಧುಸೂದನಾಚಾರ್ಯ ವಿದ್ವಜ್ಜನರ, ಶ್ರೀರಾಘವೇಂದ್ರಸ್ವಾಮಿಗಳ ಅನುಗ್ರಹಕ್ಕೆ ಪಾತ್ರವಾಗಲಿ ಎಂದು ಹಾರೈಸುತ್ತೇನೆ.

ಸರ್ವೋಪಯೋಗಿಯೂ, ಸರ್ವಸಂಗ್ರಾಹ್ಯವೂ ಆದ ಇಂತಹ ಅನೇಕ ಗ್ರಂಥಗಳ ಪ್ರಕಾಶನವೇ ಪರಮ ಧ್ಯೇಯವಾಗಿರುವ ಶ್ರೀರಾಘವೇಂದ್ರಸ್ವಾಮಿಗಳ ಮಠಕ್ಕೆ ಎಲ್ಲ ಜಿಜ್ಞಾಸುಗಳು ಅತ್ಯಂತ ಋಣಿಗಳು.

# ಪ್ರಕಾಶಕರ ನುಡಿ

**ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ |**
**ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಮ್ ||**

**ಆಚಾರಾಲ್ಲಭತೇ ಹ್ಯಾಯುರಾಚಾರಾದೀಪ್ಸಿತಾಃ ಪ್ರಜಾಃ |**
**ಆಚಾರಾದ್ಧನಮಕ್ಷಯ್ಯಮಾಚಾರೋ ಹಂತ್ಯಲಕ್ಷಣಮ್ ||**

**ಸರ್ವಲಕ್ಷಣಹೀನೋಽಪಿ ಯಃ ಸದಾಚಾರವಾನ್ ನರಃ |**
**ಶ್ರದ್ದಧಾನೋಽನಸೂಯಶ್ಚ ಶತಂ ವರ್ಷಾಣಿ ಜೀವತಿ ||**

*"ವೇದಗಳು, ಸ್ಮೃತಿ, ಸದಾಚಾರ ಮತ್ತು ಆತ್ಮ ಸಂತೋಷ ಈ ನಾಲ್ಕು ಧರ್ಮದ ವಿಷಯದಲ್ಲಿ ಕ್ರಮಗಳು."*

*"ಆಚಾರದಿಂದ ಮನುಷ್ಯನ ಆಯುಷ್ಯ ಹೆಚ್ಚುತ್ತದೆ. ಒಳ್ಳೆಯ ಸಂತಾನವು ಲಭಿಸುತ್ತದೆ. ವಿಪುಲವಾದ ಐಶ್ವರ್ಯವೂ ದೊರೆಯುತ್ತದೆ. ಶರೀರದ ಎಲ್ಲಾ ದುರ್ಲಕ್ಷಣಗಳು ಕೊನೆಗಾಣುತ್ತವೆ."*

*"ಒಳ್ಳೆಯ ಲಕ್ಷಣಗಳು ಸರಿಯಾಗಿ ಇಲ್ಲದಿದ್ದರೂ ಸಹ "ಸದಾಚಾರ"ವನ್ನು ಅನುಸರಿಸುವ ಶ್ರದ್ಧೆಯುಳ್ಳ ಮನುಷ್ಯನು ನೂರು ವರ್ಷಗಳ ತುಂಬು ಜೀವನವನ್ನು ಅನುಭವಿಸುತ್ತಾನೆ."*

ಪರಮಾತ್ಮನನ್ನು ತೋರಿಸಬಲ್ಲ ಪವನಾಂಶರಾದ ಪೂರ್ಣಪ್ರಜ್ಞರು ರಚಿಸಿದ ಚಿಕ್ಕ ಚೊಕ್ಕ ಕೃತಿ ಸದಾಚಾರಸ್ಮೃತಿ.

ವೇದ, ಭಾಗವತಾದಿ ಪುರಾಣ, ಸ್ಮೃತಿ, ಗೀತೆ ಮುಂತಾದವುಗಳಲ್ಲಿರುವ ಅನರ್ಘ್ಯರತ್ನಗಳನ್ನು ಜೋಡಿಸಿರುವ ಕಿರೀಟ ಆಚಾರ್ಯರ "ಸದಾಚಾರಸ್ಮೃತಿ". ಅದೇ ಸದಾಚಾರ. ವಿಚಾರವಂತರು ಸ್ವೀಕರಿಸಿದ ಸಂಪತ್ತು. ವಿಪತ್ತುಗಳ ಗ್ರಹಚಾರವನ್ನು ಇನ್ನಿಲ್ಲದಂತೆ ಮಾಡುವ, ಸಾತ್ವಿಕ ಶಕ್ತಿ-ಭಕ್ತಿಗಳನ್ನು ಕೊಡುವ ಅಮೃತಕಲಶ.

ಕಳೆದ ತಲೆಮಾರಿನ ಸುಪ್ರಸಿದ್ಧ ವಿದ್ವಾಂಸರಾದ ವಿದ್ವಾನ್ ಪಿ.ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರ ಲೇಖನಿಯಲ್ಲಿ ಮೂಡಿಬಂದ ಈ ಅದ್ಭುತ ಸಂಪಾದನೆ ಎಪ್ಪತ್ತರ ದಶಕದ "ಶ್ರೀಗುರುಸಾರ್ವಭೌಮ" ಚಂದಾದಾರರ ಕಣ್ಮಣಿ. ಶ್ರೀಮಠದ ಇತಿಹಾಸದಲ್ಲಿ ಉಪಾಧ್ಯಾಯರ ಸೇವೆ ಅವಿಸ್ಮರಣೀಯ.

ಮೂವತ್ತಾರು ವರ್ಷಗಳ ನಂತರ ಈ ಕೃತಿಯನ್ನು ಪರಿಷ್ಕರಿಸಿ ಸಂಪಾದನೆ ಮಾಡಿದ ನಾಡಿನ ಯುವವಿದ್ವಾಂಸ ಶ್ರೀ ಮಧುಸೂದನಾಚಾರ್ಯರದ್ದು ಬಹುಮುಖ ವ್ಯಕ್ತಿತ್ವ. ಹಂಪೆಯ ಯಂತ್ರೋದ್ಧಾರಕ ಪ್ರಾಣದೇವರ ಬಳಿ ಪರಮಪೂಜ್ಯ ಶ್ರೀ ಪೇಜಾವರರ ಶ್ರೀಗಳಿಂದ ಸುಧಾ ಮಂಗಳ, ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಸಂಶೋಧನಾ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಆಚಾರ್ಯರು ಪಾಠಪ್ರವಚನಗಳಲ್ಲಿ ಆಸಕ್ತರು. ಇವರ ನಾಲ್ಕಾರು ಕೃತಿಗಳು ಜನರ ಮೆಚ್ಚುಗೆಗೆ ಪಾತ್ರವಾಗಿವೆ. ಮೊಟ್ಟಮೊದಲ ಬಾರಿಗೆ ಪ್ರಾತಃಸ್ಮರಣೀಯರಾದ ಹಾಗೂ ಹದಿನೇಳನೆ ಶತಮಾನ ಕಂಡ ಅದ್ಭುತ ಗ್ರಂಥಕಾರರು, ವ್ಯಾಖ್ಯಾನಕಾರರು ಮತ್ತು ಮಹಾತಪಸ್ವಿಗಳು ಆದ ಶ್ರೀಧೀರೇಂದ್ರತೀರ್ಥ ಗುರುಸಾರ್ವಭೌಮರು (ಹೊಸರಿತ್ತಿ) ರಚಿಸಿದ ಎಲ್ಲಾ ಕೃತಿಗಳನ್ನು ಒಂದೆಡೆ ಸಂಗ್ರಹಿಸಿ ಇವರು ಅನುವಾದಿಸಿದ, ಶ್ರೀಮಠದಿಂದ ನೂರೊಂದು ಗ್ರಂಥಗಳ ಯೋಜನೆ ಅಡಿಯಲ್ಲಿ ಪ್ರಕಾಶಿತವಾದ ಶ್ರೀಧೀರೇಂದ್ರತೀರ್ಥ ಕೃತಿಮಂಜರಿಯು ಅಪಾರ ಜನಮನ್ನಣೆ ಗಳಿಸಿದ ಕೃತಿಯಾಗಿದೆ.

ಶ್ರೀರಾಘವೇಂದ್ರಾನುಗ್ರಹ ಪ್ರಶಸ್ತಿ ವಿಜೇತರಾದ ನಾಡಿನ ಅತ್ಯುನ್ನತ ವಿದ್ವಾಂಸರಲ್ಲಿ ಒಬ್ಬರಾದ ವಿದ್ವಾನ್ ಡಿ. ಪ್ರಹ್ಲಾದಾಚಾರ್ಯರ ಸುಪುತ್ರರಲ್ಲಿ ಒಬ್ಬರಾದ ಇವರು ತಮ್ಮದೇ ಶೈಲಿಯನ್ನು ಬರವಣಿಗೆಯನ್ನು ರೂಢಿಸಿಕೊಂಡವರು. ಪ್ರಸ್ತುತ ಮೈಸೂರಿನಲ್ಲಿ ಹತ್ತಾರು ಯುವಕರಿಗೆ ಶಾಸ್ತ್ರಾಧ್ಯಯನದ ರುಚಿಯನ್ನು ಬಡಿಸುತ್ತಿದ್ದಾರೆ. ಶ್ರೀಮಠದ ಪ್ರತಿಷ್ಠಿತ ವಿದ್ವತ್ ಸಭೆಯಾದ "ಶ್ರೀ ಸಮೀರಸಮಯ ಸಂವರ್ಧಿನಿ ಸಭಾ"ದ ಕಾರ್ಯದರ್ಶಿಗಳಾದ ಹುಲಿ. ವೇ. ಪವಮಾನಾಚಾರ್ಯರು, ಡಾ. ಜೋಶಿ, ರಾಜಾ ಎಸ್. ವಾದೀಂದ್ರಾಚಾರ್ಯ, ರಾಜಾ ಎಸ್.ಬಂಡಾಚಾರ್ಯರಂಥವರು ಆಚಾರ್ಯರ ಶಿಷ್ಯ ಮತ್ತು ಆಪ್ತವಲಯದವರು.

ಸುಮಾರು ಆರು ತಿಂಗಳಿಗೂ ಹೆಚ್ಚುಕಾಲ ಈ ಕೃತಿಯ ಸಂಪಾದನ ಕಾರ್ಯದಲ್ಲಿ ಹಗಲಿರುಳೆನ್ನದೆ ಶ್ರಮವಹಿಸಿ ತಮ್ಮನ್ನು ತೊಡಗಿಸಿಕೊಂಡಿದ್ದ ಶ್ರೀ ಆಚಾರ್ಯರಿಗೆ ನಾವು ಯಾವತ್ತು ಆಭಾರಿ. ಶ್ರೀಹರಿ-ವಾಯು-ಗುರುಗಳು ಇವರಿಂದ ಸಾರಸ್ವತ ಪ್ರಪಂಚಕ್ಕೆ ಇನ್ನು ಹೆಚ್ಚಿನ ಸೇವೆಯನ್ನು ತೆಗೆದುಕೊಳ್ಳಲಿ ಎಂದು ಪ್ರಾರ್ಥಿಸುತ್ತೇವೆ.

ಜನಸಾಮಾನ್ಯರಿಗೆ ಕೈಗೆಟಕುವ ದರದಲ್ಲಿ ದೊರೆಯುವಂತೆ ಉದಾರತೆ ಮೆರೆದ ಪರಮಪೂಜ್ಯ 1008 ಶ್ರೀ ಶ್ರೀಸುಶಮೀಂದ್ರತೀರ್ಥ ಶ್ರೀಪಾದಂಗಳವರಿಗೂ ಹಾಗೂ ಉತ್ತರಾಧಿಕಾರಿಗಳಾದ ಪರಮಪೂಜ್ಯ 1008 ಶ್ರೀ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರಿಗೂ ಮತ್ತು ಅನುಗ್ರಹ ವಚನವಿತ್ತು ಆಶೀರ್ವದಿಸಿದ ಪರಮಪೂಜ್ಯ 1008 ಶ್ರೀ ಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರಿಗೂ ನನ್ನ ಅನಂತಾನಂತ ಶಿರಸಾಷ್ಟಾಂಗ ಪ್ರಣಾಮಗಳು.

ಮುನ್ನುಡಿಯಿಂದ ಗ್ರಂಥವನ್ನು ಶ್ರೀಮಂತಗೊಳಿಸಿದ ಶ್ರೀರಾಘವೇಂದ್ರಾನುಗ್ರಹ ಪ್ರಶಸ್ತಿವಿಜೇತರಾದ ವಿದ್ವಾನ್ ಶ್ರೀ ಶೇಷಗಿರಿ ಆಚಾರ್ಯರು, ವಿದ್ವಾನ್ ಶ್ರೀ ಡಿ. ಪ್ರಹ್ಲಾದಾಚಾರ್ಯ ಹಾಗೂ ವಿದ್ವಾನ್ ಶ್ರೀ ಪಂಡರಿನಾಥಾಚಾರ್ಯ ಗಲಗಲಿ ಇವರಿಗೂ ವಂದನೆ ಮತ್ತು ಅಭಿನಂದನೆಗಳನ್ನು ಸಲ್ಲಿಸುತ್ತೇವೆ.

ಕೃತಿಯು ಮೆರಗುವಂತೆ ಮಾಡಲು ಸಹಕರಿಸಿದ, ಮುಖಪುಟದಲ್ಲಿ ಅರ್ಥಪೂರ್ಣ ಸಂಕೇತವನ್ನು ಅಭಿವ್ಯಕ್ತಗೊಳಿಸಿದ ಅಂತರರಾಷ್ಟ್ರೀಯ ಮಟ್ಟದ ಚಿತ್ರಕಲಾವಿದರಾದ ಶ್ರೀ ಗಂಜೀಫಾ ರಘುಪತಿ ಭಟ್ಟರಿಗೆ ವಿಶೇಷ ಅಭಿನಂದನೆಗಳು.

ಈ ಕೃತಿಗೆ ಸಹಕರಿಸಿದ ಸನ್ಮಾನ್ಯರಾದ ವಿದ್ವಾನ್ ಶ್ರೀ ಡಿ.ಮಾಧವಾಚಾರ್ಯರವರಿಗೂ, ಪರೋಕ್ಷವಾಗಿ ಅಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ಹಾಗೂ ಸುಂದರವಾಗಿ ಮುದ್ರಿಸಿಕೊಟ್ಟ ವಾಣಿ ಮುದ್ರಣಾಲಯದ ಮಿತ್ರರಾದ ಶ್ರೀ ಸುವ್ರತೀಂದ್ರರಾವ್ ಮತ್ತು ಸಿಬ್ಬಂದಿ ವರ್ಗದವರಿಗೂ ಹಾಗೂ ಅಂದವಾದ ಅಕ್ಷರಜೋಡಣೆಯನ್ನು ಮಾಡಿದ ಗೌರಿಯವರಿಗೆ ನನ್ನ ಗೌರವವು ಸಲ್ಲುತ್ತದೆ.

ಕೊನೆಯದಾಗಿ, ಧರ್ಮಶಾಸ್ತ್ರದರ್ಪಣ, ವ್ರತಮುಕ್ತಾವಳಿ, ಸ್ತೋತ್ರಮುಕ್ತಾವಳಿ ಗ್ರಂಥಗಳ ಅದ್ಭುತ ಯಶಸ್ಸಿನಲ್ಲಿ ಪಾಲುದಾರರಾದ ಓದುಗರ ಸಹಕಾರ, ಮೆಚ್ಚುಗೆಯ ಪ್ರತಿಕ್ರಿಯೆಯೇ ಈ ಕಾರ್ಯಕ್ಕೆ ಸ್ಫೂರ್ತಿ ಎಂದು ಹೆಮ್ಮೆಯಿಂದ ಒಪ್ಪಿಕೊಳ್ಳುತ್ತಾ ಅಂತಹುದೇ ಮತ್ತೊಂದು ಕೃತಿಯನ್ನು ನಿಮಗೆ ಒಪ್ಪಿಸುತ್ತಿದ್ದೇವೆ. ಒಳ್ಳೆಯ ಕೆಲಸಕ್ಕೆ, ಒಳ್ಳೆಯ ಕೃತಿಗೆ ವಿಜಯ ತಂದುಕೊಡುವ ಓದುಗರ ಹೃದಯದಲ್ಲಿರುವ ಭಾರತೀರಮಣ ಮುಖ್ಯಪ್ರಾಣದೇವರಿಗೆ ಈ ಕೃತಿಯನ್ನು ಸಮರ್ಪಿಸುತ್ತಿದ್ದೇನೆ.

*ರಾಜಾ ಎಸ್. ರಾಜಗೋಪಾಲಾಚಾರ್ಯ*

ಶ್ರೀಪಾದಂಗಳವರ ಆಪ್ತಕಾರ್ಯದರ್ಶಿಗಳು

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

## ಸಂಪಾದಕರ ನುಡಿ

ಸಾಧಕನಾದ ಜೀವನು ಪರಮಾತ್ಮನೆಡೆಗೆ ಪಯಣಿಸುವ ಸುಪರ್ಣನಂತೆ ಎರಡು ರೆಕ್ಕೆಗಳಿಂದ ಹಕ್ಕಿಯು ಹಾರುವಂತೆ ಜೀವನು ಆಚಾರ ಮತ್ತು ವಿಚಾರಗಳೆಂಬ ಎರಡು ರೆಕ್ಕೆಗಳ ಮೂಲಕ ಪರಮಾತ್ಮನೆಂಬ ಗಮ್ಯಸ್ಥಾನವನ್ನು ತಲುಪುವನು. ಜಗದ್ಗುರು ಶ್ರೀಮಧ್ವಾಚಾರ್ಯರು ಅವತರಿಸುವುದಕ್ಕಿಂತ ಮುಂಚೆ ವೈದಿಕ ಮಾರ್ಗದಲ್ಲಿ ನಾನಾ ಬಗೆಯ ಸಂಪ್ರದಾಯದ ಅಶುದ್ಧಿಗಳು ಸೇರಿಕೊಂಡಿದ್ದವು. ಇದರೊಡನೆ ವೈದಿಕವಿಚಾರಧಾರೆಯು ಮಲಿನಗೊಂಡಿತ್ತು. ಇಂತಹ ಪ್ರಸಂಗದಲ್ಲಿ ಹದಿಮೂರನೇ ಶತಮಾನದಲ್ಲಿ ಅವತರಿಸಿದ ಜಗದ್ಗುರು ಶ್ರೀಮಧ್ವಾಚಾರ್ಯರು ಕೇವಲ ಸಜ್ಜನರನ್ನು ಅನುಗ್ರಹಿಸುವ ದೃಷ್ಟಿಯಿಂದ ಪ್ರಮಾಣ ಹಾಗೂ ಪ್ರಮೇಯಗಳಿಗೆ ಸಂಬಂಧಿಸಿದಂತೆ ಸರ್ವಮೂಲವೆಂದು ಪ್ರಸಿದ್ಧವಾದ ಅಪೂರ್ವ ಪ್ರಬಂಧಗಳನ್ನು ಕರುಣಿಸಿದರು. ವೇದ, ಬ್ರಹ್ಮಸೂತ್ರಗಳು, ಉಪನಿಷತ್ತುಗಳು, ಇತಿಹಾಸ, ಪುರಾಣ, ಜ್ಯೋತಿಷ್ಯ, ಧರ್ಮಶಾಸ್ತ್ರ ಹೀಗೆ ಜ್ಞಾನದ ಎಲ್ಲ ಶಾಖೆಗಳಿಗೆ ಸಂಬಂಧಿಸಿದಂತೆ ತಮ್ಮ ಪೂರ್ಣಜ್ಞಾನದ ಪ್ರಭೆಯನ್ನು ವಿಶ್ವಕ್ಕೆ ಪರಿಚಯಿಸಿಕೊಟ್ಟರು.

ಅಂತಹ ಶ್ರೀಮದಾಚಾರ್ಯರಿಂದ ರಚನೆಯಾದ ಸದಾಚಾರಸ್ಮೃತಿ ಗ್ರಂಥವು ಸಾಧನಮಾರ್ಗದ ಪಯಣಿಗನಿಗೆ ದೀಪಸ್ತಂಭವಾಗಿದೆ. ಈ ಕೃತಿಯಲ್ಲಿ ನಿರೂಪಿಸಿದಂತೆ ಇವರ ಗೃಹಸ್ಥ ಶಿಷ್ಯರುಗಳು ಧರ್ಮಾಚರಣೆ ಮಾಡಿದ್ದು ಮಧ್ವವಿಜಯದಲ್ಲಿ ಉಲ್ಲೇಖವಾಗಿದೆ. ಇವರಂತೆ ನಾವೂ ಸಹ ನಮ್ಮ ಆಚಾರಪದ್ಧತಿಯನ್ನು ಕಾಪಾಡಿಕೊಂಡಲ್ಲಿ ಹರಿಗುರುಗಳ ಅನುಗ್ರಹಕ್ಕೆ ಪಾತ್ರರಾಗುವಲ್ಲಿ ಸಂಶಯವಿಲ್ಲ. ಉಪನಿಷತ್ತುಗಳು "ತಮೇವಂ ವಿದಿತ್ವಾ ಮೃತ್ಯುಮೇತಿ "ನಾನ್ಯಃ ಪಂಥಾ ವಿದ್ಯತೇ ಅಯನಾಯ", "ತಮೇವಂ ವಿದ್ವಾನ್ ಅಮೃತ ಇಹ ಭವತಿ" ಇತ್ಯಾದಿಯಾಗಿ ಪರಮಾತ್ಮಜ್ಞಾನವೇ ಮುಕ್ತಿಸಾಧನವೆಂದು ಸ್ಪಷ್ಟವಾದ ಭಾಷೆಯಲ್ಲಿ ಸಾರುತ್ತಿದೆ. ಆದರೂ ಅಂತಹ ನಿರ್ಮಲಜ್ಞಾನ ಹುಟ್ಟಲು ಆಚಾರದ ಆವಶ್ಯಕತೆಯನ್ನು ಒತ್ತಿ ಹೇಳಿದೆ. "ನಾವಿರತೋ ದುಶ್ಚರಿತಾತ್ ನಾಶಾಂತೋ ನಾಸಮಾಹಿತಃ ಪ್ರಜ್ಞಾನೇನೈನಮಾಪ್ನುಯಾತ್" ಎಂಬುದಾಗಿ ಆಥರ್ವಣಶ್ರುತಿಯು ದುರಾಚಾರವನ್ನು ಬಿಡದ ತನಕ ನಿರ್ಮಲವಾದ ತತ್ತ್ವಜ್ಞಾನವು ಹುಟ್ಟುವುದಿಲ್ಲವೆಂದು ಎಚ್ಚರವನ್ನು ನೀಡಿದೆ.

ಶ್ರೀಮದ್ಭಾಗವತದ ದಶಮಸ್ಕಂದದ ಶ್ರುತಿಗೀತೆಯು "ಹೃದಿ ಗತಃ ಅಸ್ಮೃತ ಕಂಠಮಣಿಃ ದುರಧಿಗಮೋ ಅಸತಾಮ್" ಎಂಬುದಾಗಿ ಸದಾಚಾರವನ್ನು ತೊರೆದವರಿಗೆ ಒಳಗಿರುವ ಭಗವಂತನು ಕಾಣಲಾರನೆಂದು ಸದಾಚಾರದ ಮಹತ್ತ್ವವನ್ನು ಒತ್ತಿಹೇಳಿದೆ. "ಆಚಾರಹೀನಂ ನ ಪುನಂತಿ ವೇದಾಃ" ಎಂಬ ಆರ್ಷವಾಣಿಯು ಆಚಾರದ ಮಹತ್ವವನ್ನು ನಮಗೆ ಸ್ಫುಟಪಡಿಸುತ್ತಿದೆ. ಈ ಹಿನ್ನೆಲೆಯಲ್ಲಿ ಸದಾಚಾರದ ಸ್ವರೂಪವನ್ನು ಅರಿಯುವ, ಅನುಷ್ಠಾನಕ್ಕೆ ತರುವ ಅವಶ್ಯಕತೆಯಿದೆ ಎಂಬುದನ್ನು ಪ್ರತ್ಯೇಕ ಹೇಳಬೇಕಿಲ್ಲ. ವೇದಶಾಸ್ತ್ರಗಳಲ್ಲಿ ವರ್ಣಿಸಿದಂತೆ ಆಹಾರದ ನಿಯಮ, ಏಕಾದಶೀವ್ರತಾನುಷ್ಠಾನ, ಚಾತುರ್ಮಾಸ್ಯ ವ್ರತಾನುಷ್ಠಾನ, ಮಹಾತ್ಮರ ಸೇವೆ, ನಿರಂತರ ಪಾಠಪ್ರವಚನ, ಅಧ್ಯಯನ, ಮೊದಲಾದ ಸಾಧನಗಳನ್ನು ಮೈಗೂಡಿಸಿಕೊಳ್ಳದಿದ್ದರೆ, ಅದರೊಡನೆ ಇಂದ್ರಿಯನಿಗ್ರಹವನ್ನು ಸಂಪಾದನೆ ಮಾಡಿಕೊಳ್ಳದಿದ್ದರೆ ನಮ್ಮ ಸಾಧನೆಯೆಲ್ಲವೂ ವ್ಯರ್ಥವಾಗುವುದೆಂದು ಭಾಗವತವು ನಮ್ಮನ್ನು ಮತ್ತೆ ಮತ್ತೆ ಎಚ್ಚರಿಸಿದೆ. "ಮೌನವ್ರತಶ್ರುತತಪೋಽಧ್ಯಯನಸ್ವಧರ್ಮವ್ಯಾಖ್ಯಾರತೋ ಜಪಸಮಾಧಯ ಆಪವರ್ಗ್ಯಾಃ ಪ್ರಾಯಃ ಪರಂ ಪುರುಷತೇತ್ವಜಿತೇಂದ್ರಿಯಾಣಾಂ ವಾರ್ತಾ ಭವಂತಿ ಉತ ನವಾತ್ರ ತು ಡಾಂಭಿಕಾನಾಮ್" ಎಂಬುದಾಗಿ ಆಚಾರಶುದ್ಧಿಯಿಲ್ಲದ ಪಾಠಪ್ರವಚನ, ಧ್ಯಾನ ಇವುಗಳೆಲ್ಲ ಕೆಲ ಕಾಲದವರೆಗೆ ಮಾತ್ರ ಹೊಟ್ಟೆಗೆ ಹಿಟ್ಟು ದೊರಕಿಸಬಲ್ಲದೇ ಹೊರತು ಹಿರಿಯರ ಕಾರುಣ್ಯವನ್ನು ದೊರಕಿಸಿಕೊಡಲಾರದು. ಹೀಗೆ ಭಾಗವತ ಮೊದಲಾದ ಗ್ರಂಥಗಳು ಆಚಾರದ ಮಹತ್ತ್ವವನ್ನು ದುರಾಚಾರದ ತ್ಯಾಜ್ಯತೆಯನ್ನು ಒತ್ತಿಹೇಳಿವೆ. ಈ ಹಿನ್ನೆಲೆಯಲ್ಲಿ ಜಗದ್ಗುರು ಮಧ್ವಾಚಾರ್ಯರು ಹಾಗೂ ಅವರ ಗ್ರಂಥದ ವ್ಯಾಖ್ಯಾನಕಾರರು ತೋರಿದ ಮಾರ್ಗದಲ್ಲಿ ನಮ್ಮ ಬದುಕನ್ನು ಹೆಚ್ಚು ನಿರ್ಮಲವಾಗಿರುವ ಪ್ರಯತ್ನವನ್ನು

ನಾವು ಮಾಡಬೇಕಿದೆ. ಈ ಹಿನ್ನೆಲೆಯಲ್ಲಿ ಸದಾಚಾರಮುಕ್ತಾವಲೀ ಎಂಬ ಈ ಗ್ರಂಥವು ಶ್ರೀರಾಘವೇಂದ್ರಗುರುಸಾರ್ವಭೌಮರ ಮಠದಿಂದ ಸುಜನರಿಗೆ ಸಂಪ್ರದಾಯಾಗತ ಸದಾಚಾರ ಮಾರ್ಗದರ್ಶನಕ್ಕಾಗಿ ಮೂಡಿಬಂದಿದೆ.

ಪ್ರಸ್ತುತ, ಶ್ರೀ ಶ್ರೀರಾಘವೇಂದ್ರಸ್ವಾಮಿಗಳ ಪೀಠವನ್ನಲಂಕರಿಸಿರುವ ಹಿರಿಯ ಶ್ರೀಗಳಾದ ಪರಮಪೂಜ್ಯ ಅನಂತ ಶ್ರೀ ವಿಭೂಷಿತ ಶ್ರೀ ಶ್ರೀಸುಶಮೀಂದ್ರತೀರ್ಥಶ್ರೀಪಾದಂಗಳವರ ಹಾಗೂ ಕಿರಿಯ ಶ್ರೀಗಳಾದ ಪರಮಪೂಜ್ಯ ಅನಂತ ಶ್ರೀ ವಿಭೂಷಿತ ಶ್ರೀಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ ಆದೇಶದಂತೆ ಕೆಲವು ತಿಂಗಳ ಹಿಂದೆ ಶ್ರೀಪಾದಂಗಳವರ ಆಪ್ತಕಾರ್ಯದರ್ಶಿಗಳೂ, ಶ್ರೀಮಠದ ಈ ಸರ್ವತೋಮುಖ ಅಭಿವೃದ್ಧಿಯಲ್ಲಿ ತಮ್ಮದೇ ಆದ ವಿನೂತನವಾದ, ವಿಶಿಷ್ಟವಾದ ಕೊಡುಗೆಯನ್ನು ನೀಡುತ್ತಿರುವ ಶ್ರೀಯುತರಾದ ರಾಜಾ ರಾಜಗೋಪಾಲಾಚಾರ್ಯರು ನನಗೆ ಈ ಗ್ರಂಥವನ್ನು ಸಂಪಾದಿಸುವ ಕಾರ್ಯವನ್ನು ಮಾಡಲು ಸೂಚನೆ ನೀಡಿದರು. ಶ್ರೀಯುತ ರಾಜಾ ರಾಜಗೋಪಾಲಾಚಾರ್ಯರ ಕರ್ತೃತ್ವಶಕ್ತಿಯನ್ನು ನಾನು ಅನೇಕ ಪ್ರಸಂಗಗಳಲ್ಲಿ ಅನುಭವಿಸಿದ್ದೇನೆ. ನೂರಕ್ಕೂ ಹೆಚ್ಚು ಅಪೂರ್ವವಾದ, ಅಪ್ರಕಾಶಿತವಾದ ಸಂಸ್ಕೃತ ಗ್ರಂಥಗಳನ್ನು ಶ್ರೀರಘುನಂದನತೀರ್ಥರ ಆರಾಧನಾ ಮಹೋತ್ಸವದ ಸಂದರ್ಭದಲ್ಲಿ ಬಿಡುಗಡೆಗೊಳಿಸುವ ಸಂಕಲ್ಪವನ್ನು ಅವರು ಮಾಡಿದ್ದರು. ಶ್ರೀರಾಯರ ಮನೆತನದಲ್ಲಿ ಜನಿಸಿದ ಅವರ ಮೇಲಿರುವ ರಾಯರ ಕಾರುಣ್ಯವೋ ಎಂಬಂತೆ ಅವರ ಯೋಜನೆ ಅಪೂರ್ವರೀತಿಯಿಂದ ಸುಜನರಿಗೆಲ್ಲ ಉಪಕಾರವಾಗುವಂತೆ ಪೂರ್ಣತೆಯನ್ನು ಒಳಗೊಂಡಿತು. ನೂರಾರು ವಿದ್ವಾಂಸರು ಹಗಲಿರುಳು ಪರಿಶ್ರಮ ವಹಿಸಿ, ಅನೇಕ ಗ್ರಂಥಗಳನ್ನು ಅನುವಾದಿಸಿ ನೀಡಿದರು. ಕೆಲವರು ಅಪ್ರಕಾಶಿತ ತಾಳಪತ್ರಗಳನ್ನು ಶೋಧಿಸಿ, ಗ್ರಂಥಗಳನ್ನು ಸಿದ್ಧಪಡಿಸಿದರು. ಆ ಪ್ರಸಂಗದಲ್ಲಿ ನನಗೂ ಕೂಡ ಶ್ರೀಧೀರೇಂದ್ರತೀರ್ಥರ ಸಮಗ್ರಕೃತಿಗಳನ್ನು ಒಂದೆಡೆ ಸೇರಿಸಿ ಆ ಬಗ್ಗೆ ಒಂದು ಉಪೋದ್ಘಾತವನ್ನು ರಚಿಸಿ, ಪ್ರಕಾಶನಕ್ಕೆ ಸಿದ್ಧಪಡಿಸಿಕೊಡಬೇಕೆಂದು ಆತ್ಮೀಯತೆಯಿಂದ ಸೂಚಿಸಿದ್ದರು. ಶ್ರೀಗುರುರಾಜರ ಅನುಗ್ರಹದ ಹೆಬ್ಬಯಕೆಯಿಂದ ನಾನು ಆ ಕಾರ್ಯವನ್ನು ನಿರ್ವಹಿಸಿದೆನು. ಕೆಲವೇ ತಿಂಗಳ ಹಿಂದೆ ಪುನಃ ಶ್ರೀ ರಾಜಾ ರಾಜಗೋಪಾಲಾಚಾರ್ಯರು ನನ್ನನ್ನು ಕರೆದು ಇಂತಹುದೇ ಮತ್ತೊಂದು ಜ್ಞಾನಕಾರ್ಯವು ಶ್ರೀರಾಯರ ಸನ್ನಿಧಾನದಲ್ಲಿ ನಿಮ್ಮಿಂದ ಆಗಬೇಕೆಂದು ಸೂಚಿಸಿದರು.

ಪಂಡಿತಪ್ರವರರಾದ ದಿವಂಗತ ಪಿ.ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು ಸದಾಚಾರಸ್ಮೃತಿಗೆ 13ನೇ ಶ್ಲೋಕದವರೆಗೆ ಕನ್ನಡದಲ್ಲಿ ವಿಸ್ತೃತವಾದ ವಿವರಣೆಯೊಂದನ್ನು ಬರೆದಿದ್ದಾರೆ. ಅದನ್ನು ಮುದ್ರಿಸುವಂತೆ ಆಗಬೇಕು. ಅದರ ಜೊತೆಗೆ 14ನೇ ಶ್ಲೋಕದಿಂದ ಸದಾಚಾರಸ್ಮೃತಿಯ ಕೊನೆಯ ಶ್ಲೋಕದವರೆಗೆ ನೀವು ಅನುವಾದವನ್ನು ಮಾಡಬೇಕು. ಅನೇಕ ಉಪಯುಕ್ತ ಅಂಶಗಳನ್ನೊಳಗೊಂಡ ಹೊತ್ತಿಗೆಯೊಂದನ್ನು ಸಿದ್ಧಪಡಿಸಬೇಕೆಂದು ಸೂಚಿಸಿದರು.

ಈ ಹಿನ್ನೆಲೆಯಲ್ಲಿ ಪಿ.ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರ ಸಮಗ್ರ ಅನುವಾದವನ್ನು ಅವಲೋಕಿಸಿದೆನು. ಧರ್ಮಶಾಸ್ತ್ರಕ್ಕೆ ಸಂಬಂಧಿಸಿದಂತೆ ಕೆಲವು ಕಡೆಗಳಲ್ಲಿ ಭಾಷೆಯ ಸರಳತೆ ದೃಷ್ಟಿಯಿಂದ ಅತ್ಯಲ್ಪ ಬದಲಾವಣೆಯೊಂದಿಗೆ ಸಾಮಾನ್ಯ ಓದುಗರಿಗೂ ಅದು ಅರ್ಥವಾಗುವಂತೆ ಪ್ರಯತ್ನವನ್ನು ನಡೆಸಿದೆನು. 14ನೆಯ ಶ್ಲೋಕದಿಂದ ಕೊನೆಯ ಶ್ಲೋಕದವರೆಗೆ ಸಂಕ್ಷಿಪ್ತವಾದ ಅನುವಾದ ಮತ್ತು ವಿವರಣೆಯನ್ನೂ ಕೂಡ ಈ ಕೃತಿಯಲ್ಲಿ ನೀಡಿದ್ದೇನೆ. ಇದಾದ ನಂತರ ಸದಾಚಾರಸ್ಮೃತಿಯನ್ನು ಅವಲಂಬಿಸಿದ ವಿಸ್ತೃತವಾದ ಅನುಷ್ಠಾನಭಾಗದ ಪ್ರಯೋಗ ಅಂಶವನ್ನು ಎರಡನೇ ಭಾಗವಾಗಿ ಈ ಸಂಪುಟದಲ್ಲಿ ಸೇರಿಸಲಾಗಿದೆ. ಸಾಧಕರಿಗೆ ಅಧ್ಯಯನಕ್ಕೆ ಅನುಕೂಲವಾಗುವಂತೆ ಇದರಲ್ಲಿ ಏಳು ಉಪವಿಭಾಗಗಳನ್ನು ಮಾಡಲಾಗಿದೆ -

1. ಅನುಷ್ಠಾನಮುಕ್ತಾವಲೀ
(ಸಂಧ್ಯಾವಂದನೆ ಇತ್ಯಾದಿ)
2. ಜಪಮುಕ್ತಾವಲೀ
(ಅಷ್ಟಮಹಾಮಂತ್ರಗಳು ಇತ್ಯಾದಿ)
3. ಪುನಶ್ಚರಣ ಮುಕ್ತಾವಲೀ
(ಮನ್ಯುಸೂಕ್ತಪುನಶ್ಚರಣೆ ಇತ್ಯಾದಿ)
4. ಮಂತ್ರಮುಕ್ತಾವಲೀ
(ಶ್ರೀಸೂಕ್ತ ಇತ್ಯಾದಿ ವೇದಮಂತ್ರಗಳು)
5. ಆಚಾರಮುಕ್ತಾವಲೀ
(ಗ್ರಹಣ ವಿಚಾರ ಇತ್ಯಾದಿ)
6. ಸಂಗ್ರಹಮುಕ್ತಾವಲೀ
(ಗೋತ್ರಪ್ರವರಸಂಗ್ರಹ, ಅಷ್ಟಾವಧಾನ ಇತ್ಯಾದಿ)
7. ಶಾಸ್ತ್ರಮುಕ್ತಾವಲೀ
(ಮಾಧ್ವವಾಙ್ಮಯದ ಕೃತಿಗಳು ಇತ್ಯಾದಿ)

ಹೀಗೆ ಪ್ರತಿಯೊಂದು ಭಾಗದಲ್ಲಿ ಬರುವ ವಿಚಾರಗಳಿಗೆ ಸಂಬಂಧಿಸಿದ ಕಿರುಟಿಪ್ಪಣಿಯನ್ನು ನೀಡಿ ಸಿದ್ಧಪಡಿಸಿದ್ದೇನೆ. ಸಮಷ್ಟಿಯಾಗಿ ಏಳು ಅಂಶಗಳನ್ನೊಳಗೊಂಡ ಈ ಕೃತಿಗೆ "ಸದಾಚಾರಮುಕ್ತಾವಲೀ" ಎಂಬುದಾಗಿ ಶೀರ್ಷಿಕೆಯನ್ನು ನೀಡಲು ಶ್ರೀ ರಾಜಾ ರಾಜಗೋಪಾಲಾಚಾರ್ಯರು ಸೂಚಿಸಿದರು. ಶ್ರೀರಾಯರ ವಂಶದಲ್ಲಿ ಜನಿಸಿದ ರಾಜಗೋಪಾಲಾಚಾರ್ಯರ ಸೂಚನೆಯನ್ನು ಶ್ರೀರಾಯರ ಅನುಗ್ರಹದ ಸಂಕೇತವೆಂದೇ ಭಾವಿಸಿಕೊಂಡು ತುಂಬ ಶ್ರದ್ಧೆಯಿಂದ, ಎಚ್ಚರಿಕೆಯಿಂದ ಈ ಕಾರ್ಯದಲ್ಲಿ ಪ್ರವೃತ್ತನಾಗಿದ್ದೇನೆ. ಅತ್ಯಲ್ಪ ಕಾಲಮಿತಿಯಲ್ಲಿ ನೂರಾರು ಪುಟಗಳ ಕರಡುಪ್ರತಿಯನ್ನು ತಿದ್ದುವಾಗ, ಲೇಖನವನ್ನು ಸಿದ್ಧಪಡಿಸುವಾಗ ಸಂಭವಿಸಬಹುದಾದ ಅಜ್ಞಾನಮೂಲಕವಾದ ದೋಷಗಳನ್ನು ಮಹಾತ್ಮರು, ಸುಜನರಾದ ಓದುಗರು ಮನ್ನಿಸಿ, ಇದರ ಹಿಂದೆ ಇರುವ ಪ್ರಾಮಾಣಿಕ, ಶ್ರದ್ಧಾಪೂರ್ಣವಾದ ಪ್ರಯತ್ನವನ್ನು ಗುರುತಿಸಿ ಆಶೀರ್ವದಿಸುವರೆಂದು ನಾನು ನಂಬಿದ್ದೇನೆ.

ಶ್ರೀವಿದ್ಯಾಮಠದ ಪರಮಪೂಜ್ಯ ಶ್ರೀಪಾದಂಗಳವರ ಆಪ್ತ ಕಾರ್ಯದರ್ಶಿಗಳಾದ ಶ್ರೀ ರಾಜಾ ರಾಜಗೋಪಾಲಾಚಾರ್ಯರು ಈ ವರ್ಷದ ಪಂಚಾಂಗದ ಜೊತೆಗೆ ಅತ್ಯಲ್ಪ ಬೆಲೆಗೆ ಅನೇಕ ವಿಷಯಗಳನ್ನೊಳಗೊಂಡ ಈ ಬೃಹತ್ ಹೊತ್ತಿಗೆಯೊಂದನ್ನು ಸುಜನ ಬಂಧುಗಳಿಗೆ ಸಮರ್ಪಿಸಲು, ಆ ಮೂಲಕ ಗುರುರಾಜರ ಅನುಗ್ರಹವನ್ನು ಸಂಪಾದಿಸಲು ವಿಶಿಷ್ಟ ಕಾರ್ಯಕ್ಕೆ ಪ್ರೇರಣೆಯೊಂದನ್ನು ಕೊಟ್ಟಿದ್ದಾರೆ. ಅದರ ಫಲವಾಗಿ ಶ್ರೀಮಠದ ಮೂಲಕ ಈ ಕೃತಿಕುಸುಮವು ಸಜ್ಜನರ ಬಿಂಬಮೂರ್ತಿಯ ಆರಾಧನೆಗೆ ಸಮರ್ಪಿತವಾಗಿದೆ.

## ಕೃತಜ್ಞತೆಗಳು

ಜಗದ್ಗುರು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಮೂಲಮಹಾಸಂಸ್ಥಾನ ಅಧಿಪತಿಗಳಾದ ಶ್ರೀ ಗುರುಸಾರ್ವಭೌಮರ ಪ್ರತೀಕಸ್ಥಾನೀಯರೂ ಆದ ಶ್ರೀ ಶ್ರೀಸುಶಮೀಂದ್ರತೀರ್ಥ ಶ್ರೀಪಾದಂಗಳವರು ಹಾಗೂ ಅವರ ವರಕುಮಾರರಾದ ಶ್ರೀ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರಿಗೂ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತಾ ಅನುಗ್ರಹಮಂತ್ರಾಕ್ಷತೆಯು ಸದಾಕಾಲ ನನ್ನ ಮೇಲೆ ಇರಲೆಂದು ಪ್ರಾರ್ಥಿಸುತ್ತೇನೆ.

ಪೂರ್ಣಪ್ರಜ್ಞವಿದ್ಯಾಪೀಠದಲ್ಲಿ ಹನ್ನೆರಡು ವರ್ಷಗಳ ಕಾಲ ನಮ್ಮನ್ನು ಬೆಳೆಸಿ ಅನ್ನ, ವಸ್ತ್ರಗಳ ಜೊತೆಗೆ ಬ್ರಹ್ಮವಿದ್ಯೆಯನ್ನು ಕರುಣಿಸಿದ ಪರಮಪೂಜ್ಯ ಗುರುಗಳಾದ ಪೇಜಾವರ ಮಠಾಧೀಶರಾದ ವಿಶ್ವೇಶತೀರ್ಥ ಶ್ರೀಪಾದಂಗಳವರು ಈ ಪ್ರಯತ್ನವನ್ನು ಕಂಡು ಹೃದಯ ತುಂಬಿ ಹರಿಸಿ ವಾತ್ಸಲ್ಯದ ನುಡಿಗಳನ್ನು ಕರುಣಿಸಿ ಅನುಗ್ರಹಿಸಿದ್ದಾರೆ. ಪರಮಪೂಜ್ಯ ಶ್ರೀ ಶ್ರೀಪಾದಂಗಳವರಿಗೆ ನನ್ನ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಆಧ್ಯಾತ್ಮಿಕ ಸಾಧನೆಗೆ ಪೂರಕವಾದ ಜೀವನವನ್ನು ಕಲ್ಪಿಸಿ, ಸದಾ ಜ್ಞಾನಕಾರ್ಯದಲ್ಲಿ ಮಾರ್ಗದರ್ಶನ ಮಾಡುತ್ತಿರುವ ಮಾತಾಪಿತೃಗಳಾದ ಸೌ. ಶಾಂತಾ ಮತ್ತು ಪ್ರೊ. ಡಿ.ಪ್ರಹ್ಲಾದಾಚಾರ್ಯ ಇವರಿಗೆ ನನ್ನ ಭಕ್ತಿಪೂರ್ವಕ ನಮನಗಳು.

ನಾನು ಕಾರ್ಯ ಮರೆತಾಗಲೆಲ್ಲ ಎಚ್ಚರಿಸಿ ದಾರಿತೋರುವ ನನ್ನ ಸಂಶೋಧನವೃತ್ತಿಗೆ ಮೂಲಕಾರಣರಾದ ಹಿರಿಯ ಬಂಧುಗಳಾದ ಡಾ. ಎ.ವಿ.ನಾಗಸಂಪಿಗೆ ಅವರಿಗೆ ಕೃತಜ್ಞತಾಪೂರ್ವಕ ನಮಸ್ಕಾರಗಳು.

ಧರ್ಮಶಾಸ್ತ್ರಕ್ಕೆ ಸಂಬಂಧಿಸಿದಂತೆ ಉಪಯುಕ್ತ ಸಲಹೆಗಳನ್ನು ನೀಡಿ, ಸಹಕರಿಸಿದ ಗುರುಸಾರ್ವಭೌಮ ವಿದ್ಯಾಪೀಠದ ಪ್ರಾಂಶುಪಾಲರಾದ ಕಡಪ ರಾಘವೇಂದ್ರಾಚಾರ್ಯರು ಹಾಗೂ ಅಧ್ಯಾಪಕವೃಂದದವರಿಗೆ ಕೃತಜ್ಞತೆಗಳು.

ಈ ಗ್ರಂಥದ ಕರಡಚ್ಚುಪ್ರತಿ ತಿದ್ದುವುದರಲ್ಲಿ ಸಹಕಾರವನ್ನು ನೀಡುವುದಲ್ಲದೇ ಅನೇಕ ವಿಷಯಗಳ ಬಗ್ಗೆ ಮಾಹಿತಿಯನ್ನು ನೀಡಿರುವ ಪ್ರಾಚ್ಯವಿದ್ಯಾಸಂಶೋಧನಾಲಯದ ಹಿರಿಯ ಸಂಶೋಧಕರಾದ ಡಾ. ಟಿ.ವಿ.ಸತ್ಯನಾರಾಯಣ ಅವರಿಗೆ ಹಾಗೂ ಡಾ. ಎಸ್.ಜಗನ್ನಾಥ ಅವರಿಗೆ ...

ಈ ಕೃತಿಗೆ ಸಂಬಂಧಪಟ್ಟಂತೆ ಉತ್ತಮ ಸಲಹೆಗಳನ್ನು ನೀಡಿರುವ ವಿದ್ವಾನ್ ತಿರುಮಲಾಚಾರ್ಯ ಕುಲಕರ್ಣಿ ಅವರಿಗೆ, ಹಾಗೆಯೇ ಕರಡಚ್ಚು ತಿದ್ದುವುದರಲ್ಲಿ ವಿಶೇಷ ಅನುಭವವುಳ್ಳ ಮಿತ್ರರಾದ ವಿದ್ವಾನ್ ಪ್ರದೀಪಸಿಂಹಾಚಾರ್ಯ ಅವರಿಗೆ ...

ನನ್ನೆಲ್ಲಾ ಕಾರ್ಯಗಳಿಗೆ ಸದಾ ಆತ್ಮೀಯ ಬೆಂಬಲವನ್ನು ನೀಡುವ ಅಣ್ಣನಾದ ಅನಂತ ಅವರಿಗೆ ಹಾಗೂ ಡಾ.ಶ್ರೀನಿವಾಸಾಚಾರ್ಯ ವರಖೇಡಿ ಮತ್ತು ಮಿತ್ರರಾದ ವಿದ್ವಾನ್ ಗಿರಿಧರಾಚಾರ್ಯ ಅವರಿಗೆ ...

ಈ ಕೃತಿಯಲ್ಲಿನ ವೇದಮಂತ್ರಗಳನ್ನು ಸಸ್ವರವಾಗಿ ಕೂಲಂಕಷವಾಗಿ ಪರಿಶೀಲಿಸಿರುವ ಗುರುಸಾರ್ವಭೌಮ ಸಂಸ್ಕೃತ ಮಾಸಪತ್ರಿಕೆಯ ಸಂಪಾದಕರಾದ, ಸಹೋದರ ಡಿ.ಮಾಧವಾಚಾರ್ಯ ಅವರಿಗೆ ...

ಈ ಕೃತಿಯನ್ನು ರಚಿಸುವಾಗ ಅನೇಕ ಗ್ರಂಥಗಳ ಉಪಯೋಗವನ್ನು ಪಡೆದುಕೊಳ್ಳಲಾಗಿದೆ. ಆ ಗ್ರಂಥಗಳ ಎಲ್ಲ ಸಂಪಾದಕರೂ, ಲೇಖಕರೂ ಹಾಗೂ ಪ್ರಕಾಶಕರಿಗೆ ...

ಅಂದವಾದ ಮುಖಪುಟವಿನ್ಯಾಸವನ್ನು ಮಾಡಿಕೊಟ್ಟ ಅಂತರರಾಷ್ಟ್ರೀಯಮಟ್ಟದ ಕಲಾವಿದರಾದ ಶ್ರೀ ಗಂಜೀಫ ರಘುಪತಿಭಟ್ಟ ಅವರಿಗೆ ...

ಸಮಯಕ್ಕೆ ಸರಿಯಾಗಿ ಈ ಕೃತಿಯನ್ನು ಅಂದವಾಗಿ ಮುದ್ರಿಸಿದ ವಾಣಿ ಮುದ್ರಣಾಲಯದ ಶ್ರೀ ಸುವ್ರತೀಂದ್ರರಾವ್, ವಿದ್ಯಾರ್ಥಿಗಳಾದ ವಾದಿರಾಜ ಎಸ್. ರಾವ್, ಎಸ್. ಟಿ. ಪ್ರದ್ಯುಮ್ನ ಮತ್ತು ಸುಂದರವಾಗಿ ಬಹಳ ತಾಳ್ಮೆಯಿಂದ ಹಗಲಿರುಳು ಶ್ರಮಪಟ್ಟು ಡಿ.ಟಿ.ಪಿ. ಮಾಡಿದ ಗೌರಿಯವರಿಗೆ ...

ಸುಜನವಿಧೇಯ

*ವಿದ್ವಾನ್ ಡಿ. ಪಿ. ಮಧುಸೂದನಾಚಾರ್ಯ*

ಸಂಶೋಧಕರು

ಪ್ರಾಚ್ಯವಿದ್ಯಾಸಂಶೋಧನಾಲಯ

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ವಿಷಯಾನುಕ್ರಮಣಿಕಾ
## ಭಾಗ ಒಂದು

ಸ್ನಾನನಿಷೇಧಗಳು



ಅಭ್ಯಂಗವಿಧಿ

ಆಸನವಿಧಿ-ಲಕ್ಷಣ

# ವಿಷಯಾನುಕ್ರಮಣಿಕಾ

## ಭಾಗ ಎರಡು

### ಅನುಷ್ಠಾನಮುಕ್ತಾವಲೀ

## ಮಂತ್ರಮುಕ್ತಾವಲೀ



## ಪುನಶ್ಚರಣಮುಕ್ತಾವಲೀ



## ಸೂಕ್ತಮುಕ್ತಾವಲೀ

## ಆಚಾರಮುಕ್ತಾವಲೀ



## ಸಂಗ್ರಹಮುಕ್ತಾವಲೀ

## ಶಾಸ್ತ್ರಮುಕ್ತಾವಲೀ

# ಸದಾಚಾರಸ್ಮೃತಿಃ

(ಶ್ರೀಮಧ್ವಾಚಾರ್ಯಕೃತಾ)

ಯಸ್ಮಿನ್ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ |
ನಿರಾಶೀರ್ನಿರ್ಮಮೋ ಯಾತಿ ಪರಂ ಜಯತಿ ಸೋಽಚ್ಯುತಃ || 1 ||

ಪದಚ್ಛೇದ - ಯಸ್ಮಿನ್ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯ ಅಧ್ಯಾತ್ಮಚೇತಸಾ ನಿರಾಶೀಃ ನಿರ್ಮಮಃ ಯಾತಿ ಪರಂ ಜಯತಿ ಸಃ ಅಚ್ಯುತಃ

ಅನ್ವಯ - (ಸಜ್ಜನವರ್ಗಃ) ಅಧ್ಯಾತ್ಮಚೇತಸಾ (ಕೃತಾನಿ) ಸರ್ವಾಣಿ ಕರ್ಮಾಣಿ ನಿರಾಶೀಃ ನಿರ್ಮಮಃ ಯಸ್ಮಿನ್ ಸನ್ನ್ಯಸ್ಯ ಪರಂ ಯಾತಿ ಸಃ ಅಚ್ಯುತಃ ಜಯತಿ.

ಅರ್ಥ - (ಸಜ್ಜನವರ್ಗಃ) ಸಜ್ಜನರ ಸಮೂಹವು, ಅಧ್ಯಾತ್ಮಚೇತಸಾ 'ಅಧ್ಯಾತ್ಮ' ಶರೀರದೊಳಗಿರುವ ಮತ್ತು ಸರ್ವೋತ್ತಮನಾದ ಶ್ರೀಹರಿಯನ್ನು ಸ್ಮರಿಸುತ್ತಿರುವ 'ಚೇತಸಾ' ಮನಸ್ಸಿನಿಂದ (ಕೃತಾನಿ) ತನ್ನಿಂದ ಮಾಡಲ್ಪಟ್ಟಿರುವ 'ಸರ್ವಾಣಿ ಕರ್ಮಾಣಿ' ಈ ಗ್ರಂಥದಲ್ಲಿ ಹೇಳಲ್ಪಡುವ ಎಲ್ಲಾ ಕರ್ಮಗಳನ್ನೂ 'ನಿರಾಶೀಃ' ಯಾವ ವಿಧವಾದ ನಿಷಿದ್ಧಫಲಗಳ ಆಸೆಯಿಲ್ಲದವನಾಗಿಯೂ 'ನಿರ್ಮಮಃ' ನಾನೇ ಮಾಡಿರುವೆನು ಎಂಬ ಮಮತೆಯಿಲ್ಲದವನಾಗಿಯೂ 'ಯಸ್ಮಿನ್' ಯಾವ ಶ್ರೀಹರಿಯಲ್ಲಿ 'ಸನ್ನ್ಯಸ್ಯ' ಸಮರ್ಪಿಸಿ 'ಪರಂ' ಸರ್ವೋತ್ತಮನಾದ ಶ್ರೀಹರಿಯನ್ನು 'ಯಾತಿ' ಹೊಂದುತ್ತಾನೆಯೋ 'ಸಃ' ಅಂತಹ 'ಅಚ್ಯುತಃ' ಸಕಲದೋಷರಹಿತನೂ ಸಕಲಗುಣಪೂರ್ಣನೂ ಚತುರ್ವಿಧನಾಶವಿಲ್ಲದವನೂ ಆಗಿರುವ ಶ್ರೀಹರಿಯು 'ಜಯತಿ' ಸರ್ವೋತ್ತಮನಾಗಿರುವನು.

ತಾತ್ಪರ್ಯ - ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಸದಾಚಾರಸ್ಮೃತಿ ಎಂಬ ಗ್ರಂಥವನ್ನು ಬರೆಯಲು ಆರಂಭಿಸಿರುವರು. ಈ ಗ್ರಂಥದಲ್ಲಿ ಹೇಳಿದ ರೀತಿಯಿಂದ ಎಲ್ಲಾ ಸತ್ಕರ್ಮಗಳನ್ನೂ ಮಾಡಬೇಕು. ಹೀಗೆ ಮಾಡಿದರೇನೇ ಮನಸ್ಸು ನಿರ್ಮಲವಾಗುತ್ತದೆ. ಬೇರೆ ವಿಧದಿಂದ ಮಾಡಿದರೆ ಆಗುವುದಿಲ್ಲ. ಮನಸ್ಸು ನಿರ್ಮಲವಾದರೆ ಶ್ರೀಹರಿಯ ಮಹಿಮೆಯನ್ನು ತಿಳಿಯಬೇಕೆಂಬ ಆಸೆಯು ಹೆಚ್ಚುತ್ತದೆ. ಅದರಿಂದ ಯಾವಾಗಲೂ ಶ್ರೀಹರಿಯ ಗುಣಗಳನ್ನು ಹಿರಿಯರಿಂದ ಕೇಳಿ ತಿಳಿಯುವನು. ಶ್ರೀಹರಿಮಾಹಾತ್ಮ್ಯ ಜ್ಞಾನವು ದೃಢವಾದರೆ ಶ್ರೀಹರಿಯನ್ನು ಎಡೆಬಿಡದೆ ಧ್ಯಾನಿಸುವನು. ಧ್ಯಾನದಿಂದ ಪ್ರಸನ್ನನಾದ ಶ್ರೀಹರಿಯು ತನ್ನ ದರ್ಶನವನ್ನು ನೀಡುವನು. ಆ ದರ್ಶನದಿಂದ ಭಕ್ತಿಯು ಪೂರ್ಣವಾಗುವುದು. ಈ ಭಕ್ತಿಯಿಂದ ಪ್ರಸನ್ನನಾದ ಶ್ರೀಹರಿಯು ಸಂಸಾರಬಂಧನದಿಂದ ಬಿಡಿಸಿ ಮುಕ್ತಿಸುಖವನ್ನು ನೀಡುವನು. ಹೀಗೆ ಪರಂಪರೆಯಿಂದ ಮೋಕ್ಷಕ್ಕೆ ಸಾಧನವಾಗಿರುವ ಆದ್ದರಿಂದಲೇ ಸಕಲ ಸಜ್ಜನರಿಂದಲೂ ಮಾನ್ಯವಾದ ಈ ಕೃತಿಯನ್ನು ರಚಿಸಿರುವರು.

ಶ್ರೀಮಧ್ವಾಚಾರ್ಯರು ಶ್ರೀಹರಿಯ ಪೂರ್ಣಾನುಗ್ರಹಕ್ಕೆ ಪಾತ್ರರಾಗಿರುವವರು. ಅವರಿಗೆ ಯಾವ ಕಾರ್ಯವನ್ನು ಮಾಡುವಾಗಲೂ ಯಾವ ವಿಧವಾದ ವಿಘ್ನವೂ ಇಲ್ಲ. ಆದ್ದರಿಂದ ಗ್ರಂಥಾರಂಭದಲ್ಲಿ ವಿಘ್ನಪರಿಹಾರಕ್ಕಾಗಿಯೂ ಗ್ರಂಥದ ವಿಶೇಷ ಪ್ರಚಾರಕ್ಕಾಗಿಯೂ ಮಾಡಬೇಕಾದ ಮಂಗಳಾಚರಣವನ್ನು ಅವರು ಮಾಡಬೇಕಾಗಿಲ್ಲ.

ಆದರೂ ಶಿಷ್ಯರಿಗೆ ಈ ಗ್ರಂಥವನ್ನು ಓದುವಾಗ ವಿಘ್ನಗಳು ಬರುವ ಸಂಭವವಿದೆ. ಅವರೆಲ್ಲರೂ ಈ ಮಂಗಳಾಚರಣ ಶ್ಲೋಕವನ್ನು ಭಕ್ತಿಯಿಂದ ಪಠನ ಮಾಡಲಿ. ತಮ್ಮ ವಿಘ್ನಗಳನ್ನೆಲ್ಲವನ್ನೂ ಕಳೆದುಕೊಳ್ಳಲಿ. ಈ ಗ್ರಂಥದ ಅಧ್ಯಯನದಿಂದ ಬಂದಿರುವ ಜ್ಞಾನವನ್ನು ಹೆಚ್ಚಿಸಿಕೊಳ್ಳಲಿ. ಈ ಗ್ರಂಥದಲ್ಲಿ ಹೇಳಿರುವ ಸತ್ಕರ್ಮಗಳನ್ನು ಯಾವ ವಿಘ್ನವೂ ಇಲ್ಲದಂತೆ ಮಾಡಿಕೊಳ್ಳಲಿ. ಆ ಸತ್ಕರ್ಮಗಳ ಫಲವಾದ ಮುಕ್ತಿಯನ್ನೂ ವಿಘ್ನವಿಲ್ಲದಂತೆ ಪಡೆಯಲಿ ಎಂಬ ಸದುದ್ದೇಶದಿಂದ

ಶ್ರೀಮಧ್ವಾಚಾರ್ಯರು ಈ ಮಂಗಳಾಚರಣವನ್ನು ಶಿಷ್ಯರಿಗಾಗಿಯೇ ಮಾಡಿರುವರು.

(1) ಶ್ರೀಹರಿಯಲ್ಲಿ ಅನಂತಗುಣಗಳು ಪೂರ್ಣವಾಗಿವೆ. ಆ ಗುಣಗಳಿಂದ 'ಚ್ಯುತಿ' ಅಂದರೆ ಬಿಡುಗಡೆಯು ಅವನಿಗೆ ಯಾವ ಕಾಲದಿಂದಲೂ ಇಲ್ಲ. ಅಂದರೆ ಅನಂತ ಗುಣಗಳಿಂದ ಅವನು ಯಾವಾಗಲೂ ಪೂರ್ಣನಾಗಿರುವನು.

(2) 'ಚ್ಯುತಿ' ಅಂದರೆ ದೋಷಗಳು. ಅವುಗಳಿಂದ ಯಾವಾಗಲೂ ಬಿಡುಗಡೆಯನ್ನು ಹೊಂದಿದವನು. ಅಂದರೆ ಅವನಲ್ಲಿ ಯಾವಾಗಲೂ ಯಾವ ದೋಷವೂ ಇಲ್ಲ. ಈ ಕಾರಣದಿಂದ ಅವನು 'ಅಚ್ಯುತ' ಎಂಬ ಬಿರುದಿನಿಂದ ಯುಕ್ತನಾಗಿರುವನು.

(3) ನಾಶವು ನಾಲ್ಕು ವಿಧವಾಗಿದೆ. (1) ಗಡಿಗೆ ಮುಂತಾದ ಜಡವಸ್ತುಗಳು ಕೆಲಕಾಲದಲ್ಲಿದ್ದು ಆಮೇಲೆ ಪುಡಿಪುಡಿಯಾಗಿ ಹೋಗುತ್ತವೆ. ಇದು ಅನಿತ್ಯತ್ವ ಎಂಬ ನಾಶವಾಗಿರುತ್ತದೆ. ಈ ನಾಶವು ಸರ್ವಕಾಲದಲ್ಲಿಯೂ ಇರುವ ಆದ್ದರಿಂದಲೇ ನಿತ್ಯನೆನಿಸಿದ ಶ್ರೀಹರಿಯಲ್ಲಿ ಇಲ್ಲ. (2) ಬ್ರಹ್ಮದೇವರಿಗೂ ಅವರಿಗಿಂತ ಕೆಳಗಣ ದರ್ಜೆಯಲ್ಲಿರುವ ಸರ್ವಜೀವರಿಗೂ ಎಲುಬು ಮಾಂಸ ಮುಂತಾದ ವಸ್ತುಗಳಿಂದ ಯುಕ್ತವಾಗಿರುವ ಪ್ರಾಕೃತದೇಹವೂ ಅದರ ಬಿಡುಗಡೆಯೂ ಇರುತ್ತದೆ. ಈ ದೇಹದ ಬಿಡುಗಡೆಯೇ ಎರಡನೆಯ ನಾಶವೆನಿಸುತ್ತದೆ. ಈ ನಾಶವು ಪ್ರಾಕೃತದೇಹವೇ ಇಲ್ಲದಿರುವ ಶ್ರೀಹರಿಗೆ ಇರುವುದಿಲ್ಲ. (3) ಪ್ರಾಕೃತದೇಹವು ಬಂದಾಗ ಆ ದೇಹದಲ್ಲಿ ನಾನು ಎಂಬ ಅಹಂಕಾರವೂ ಆ ದೇಹಕ್ಕೆ ಸಂಬಂಧಿಸಿದ ಪತ್ನೀ ಪುತ್ರ ಮುಂತಾದ ವಸ್ತುಗಳಲ್ಲಿ ನನ್ನವರು ಎಂಬ ಮಮಕಾರವೂ ಏರ್ಪಟ್ಟು ಅದರಿಂದ ನಾನಾ ವಿಧವಾದ ದುಃಖವು ಏರ್ಪಡುತ್ತದೆ. ಈ ದುಃಖಪ್ರಾಪ್ತಿಯು ಮೂರನೆಯ ನಾಶವೆನಿಸುತ್ತದೆ. ಈ ನಾಶವು ರುದ್ರದೇವರಿಗೂ ಅವರಿಗಿಂತ ಕೆಳಗಿನ ದರ್ಜೆಯಲ್ಲಿರುವ ಸರ್ವಜೀವರಿಗೂ ಇರುತ್ತದೆ. ಬ್ರಹ್ಮದೇವರಿಗೆ ಪ್ರಾಕೃತದೇಹವಿದ್ದರೂ ಅಹಂಕಾರ ಮಮಕಾರಗಳಿಲ್ಲದಿರುವುದರಿಂದ ಇರುವುದಿಲ್ಲ. ಹೀಗಿರುವಾಗ ಪ್ರಾಕೃತದೇಹವೇ ಇಲ್ಲದಿರುವ ಶ್ರೀಹರಿಗೆ ಈ ನಾಶವು ಇರುವ ಸಂಭವವೇ ಇಲ್ಲ. (4) ಪ್ರಾಕೃತದೇಹವಿಲ್ಲದಿರುವ ಲಕ್ಷ್ಮೀದೇವಿಯರಲ್ಲಿಯೂ ಅವರಿಗಿಂತ ಕೆಳಗಿನ ದರ್ಜೆಯಲ್ಲಿರುವ ಸರ್ವಜೀವರಲ್ಲಿಯೂ ನಿತ್ಯವಾದ ಪ್ರಕೃತಿ ಮುಂತಾದ ಜಡವಸ್ತುಗಳಲ್ಲಿಯೂ ಯಾವ ಗುಣವೂ ಪೂರ್ಣವಾಗಿಲ್ಲ. ಈ ಅಪೂರ್ಣತೆಯು ನಾಲ್ಕನೆಯ ನಾಶವೆನಿಸುತ್ತದೆ. ಈ ನಾಶವು ಗುಣಗಳಿಂದ ಪೂರ್ಣನಾದ ಶ್ರೀಹರಿಯಲಿಲ್ಲ.

ಹಿಂದೆ ಹೇಳಿದಂತೆ ಈ ನಾಲ್ಕು ವಿಧವಾದ ನಾಶಗಳ ಮಧ್ಯದಲ್ಲಿ ಅನಿತ್ಯವಾದ ಜಡವಸ್ತುಗಳಲ್ಲಿ ಅನಿತ್ಯತ್ವ ಅಪೂರ್ಣತಾ ಎಂಬ ಎರಡು ನಾಶಗಳೂ ರುದ್ರದೇವರಲ್ಲಿಯೂ ಅವರಿಗಿಂತ ಕೆಳಗಿನ ದರ್ಜೆಯಲ್ಲಿರುವ ಸರ್ವಜೀವರಲ್ಲಿಯೂ ಅನಿತ್ಯತ್ವವನ್ನು ಬಿಟ್ಟು ಉಳಿದ ಮೂರು ನಾಶಗಳೂ ಬ್ರಹ್ಮದೇವರಲ್ಲಿಯೂ ಋಜುಗಣದಲ್ಲಿ ಸೇರಿರುವ ಸರ್ವಜೀವರಲ್ಲಿಯೂ ಅವರ ಪತ್ನಿಯರಲ್ಲಿಯೂ ದೇಹಹಾನಿ ಅಪೂರ್ಣತಾ ಎಂಬ ಎರಡು ವಿಧವಾದ ನಾಶಗಳೂ ಲಕ್ಷ್ಮೀದೇವಿಯರಲ್ಲಿಯೂ ನಿತ್ಯವಾದ ಪ್ರಕೃತಿ ಮುಂತಾದ ಜಡವಸ್ತುಗಳಲ್ಲಿಯೂ ಅಪೂರ್ಣತೆ ಎಂಬ ಒಂದು ನಾಶವೂ ಇರುತ್ತದೆ. ಶ್ರೀಹರಿಯಲ್ಲಿ ಈ ನಾಲ್ಕರಲ್ಲಿ ಒಂದೂ ಇರುವುದಿಲ್ಲ. ಈ ನಾಶಗಳಿಗೆ ಚ್ಯುತಿ ಎಂದು ಹೆಸರು. ಈ ನಾಶವೆಂಬ ಚ್ಯುತಿಯು ಇಲ್ಲದಿರುವುದರಿಂದ ಶ್ರೀಹರಿಯು ಅಚ್ಯುತ ಎಂಬ ಬಿರುದಿನಿಂದ ಯುಕ್ತನಾಗಿರುವನು. ಆದ್ದರಿಂದಲೇ ಸರ್ವೋತ್ತಮನೆನಿಸುವನು.

ಹೀಗೆ ಮೇಲ್ಕಂಡ ಮೂರು ಕಾರಣಗಳಿಂದ ಶ್ರೀಹರಿಯ ಸರ್ವೋತ್ತಮತ್ವವನ್ನು ಅಚ್ಯುತ ಎಂಬ ಪದವು ತಿಳಿಸುತ್ತದೆ. ಈ ಸರ್ವೋತ್ತಮನಾದ ಶ್ರೀಹರಿಯಲ್ಲಿರುವ ಸರ್ವೋತ್ಕರ್ಷವನ್ನು ಯಾವಾಗಲೂ ಸ್ಮರಿಸುತ್ತಿರುವುದು ನಮ್ಮೆಲ್ಲರ ಕರ್ತವ್ಯವಾಗಿದೆ. ಆದ್ದರಿಂದ ನಾನು ಯಾವಾಗಲೂ ಸ್ಮರಿಸುತ್ತಿರುವೆನು.

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾಽಽತ್ಮನಾ ವಾಽನುಸೃತಃ ಸ್ವಭಾವಮ್ |
ಕರೋತಿ ಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯೇತ್ತತ್ || (ಭಾಗವತ)

(ದೇಹ ಮತ್ತು ಇಂದ್ರಿಯಗಳು ಬುದ್ಧಿ ಸ್ವಪ್ರಯತ್ನ ಮುಂತಾದವುಗಳಿಂದ ಜೀವನು ತನ್ನಲ್ಲಿರುವ ಅನಾದಿಯಾದ

ಸ್ವಭಾವವನ್ನನುಸರಿಸಿ ಶ್ರೀಹರಿಯಿಂದ ಪ್ರೇರಿತನಾಗಿ ಎಲ್ಲಾ ಕರ್ಮಗಳನ್ನೂ ಮಾಡುತ್ತಿರುವನು. ಅವುಗಳೆಲ್ಲವನ್ನೂ ಶ್ರೀಹರಿಗೆ ಸಮರ್ಪಿಸಬೇಕು) ಎಂದು ಈ ವಾಕ್ಯವು ತಿಳಿಸುತ್ತದೆ. ಹೀಗೆ ಸರ್ವಸಮರ್ಪಣವನ್ನು ಮಾಡುವಾಗ ಮನಸ್ಸಿನ ಪರಿಪಾಕವು ಹೇಗಿರಬೇಕೆಂಬ ವಿಷಯವನ್ನು ಈ ಶ್ಲೋಕದಲ್ಲಿರುವ 'ಅಧ್ಯಾತ್ಮಚೇತಸಾ, ನಿರಾಶೀಃ ನಿರ್ಮಮಃ' ಎಂಬ ಮೂರು ಪದಗಳು ತಿಳಿಸುತ್ತವೆ.

'ಶ್ರೀಹರಿಗೆ ಸಮನಾಗಿಯೂ ಅವನಿಗಿಂತ ಉತ್ತಮನಾಗಿಯೂ ಇರುವ ವ್ಯಕ್ತಿಯು ದೇವತೆಗಳೇ ಮೊದಲಾದ ಸರ್ವಚೇತನರಲ್ಲಿಯೂ ಇಲ್ಲ. ಆದ್ದರಿಂದ ಅವನೇ ಸರ್ವೋತ್ತಮನು. ಅವನೇ ನನ್ನಲ್ಲಿಯೂ ಲಕ್ಷ್ಮೀ ಬ್ರಹ್ಮಾದಿ ಸಕಲ ಚೇತನರಲ್ಲಿಯೂ ಇದ್ದು ಈಗಲೂ ಮುಕ್ತಿಯನ್ನು ಪಡೆದ ಮೇಲೆಯೂ ಪ್ರೇರಕನಾಗಿರುವನು. ಅವನ ಪ್ರೇರಣೆಯಿಂದಲೇ ನನ್ನ ಯೋಗ್ಯತಾನುಸಾರವಾಗಿ ನಾನು ಕೆಟ್ಟ ಕೆಲಸಗಳನ್ನೂ, ಒಳ್ಳೆಯ ಕೆಲಸಗಳನ್ನೂ, ಮಿಶ್ರವಾದ ಕೆಲಸಗಳನ್ನೂ ಮಾಡಿರುವೆನು. ಮಾಡುತ್ತಿರುವೆನು. ಮಾಡುವೆನು. ಈ ಎಲ್ಲಾ ಕರ್ಮಗಳನ್ನೂ ಅವನಿಗೆ ಸಮರ್ಪಿಸಿರುವೆನು.' ಎಂದು ಮನಃಪೂರ್ವಕವಾಗಿ ಶ್ರೀಹರಿಗೆ ಸಮರ್ಪಿಸಬೇಕು. ಈ ಅಂಶವು 'ಅಧ್ಯಾತ್ಮಚೇತಸಾ' ಎಂಬ ಪದದಿಂದ ತಿಳಿಸಲ್ಪಟ್ಟಿದೆ.

ಎಲ್ಲಾ ಕಾರ್ಯಗಳಿಗೂ ಫಲವನ್ನು ಕೊಡುವವನು ಶ್ರೀಹರಿಯೇ ಹೊರತು ಬೇರೆ ಯಾರೂ ಅಲ್ಲ. ಈ ಫಲವನ್ನು ಅವನಿಗೆ ಇಷ್ಟ ಬಂದಂತೆ ಕೊಡುತ್ತಾನೆ. ನಮ್ಮ ಇಷ್ಟದಂತೆ ಕೊಡುವುದಿಲ್ಲ. ಆದ್ದರಿಂದ 'ಇದನ್ನು ಕೊಡು, ಅದನ್ನು ಕೊಡು' ಎಂದು ಫಲವನ್ನು ಬೇಡಿ ಫಲವಿಲ್ಲ. 'ಓ ಶ್ರೀಹರಿಯೇ, ಈ ಕರ್ಮಗಳನ್ನು ನಿನಗೆ ಸಮರ್ಪಿಸಿರುವೆನು. ನೀನು ಪ್ರಸನ್ನನಾಗು. ನಿನ್ನಲ್ಲಿ ಭಕ್ತಿಯನ್ನು ಹೆಚ್ಚಿಸು. ನಿನ್ನನ್ನು ಬಿಟ್ಟು ಬೇರೆ ಫಲವನ್ನು ಬೇಡುವ ದುರ್ಬುದ್ಧಿಯನ್ನು ನನಗೆ ಕೊಡಬೇಡ' ಎಂದು ಪ್ರಾರ್ಥಿಸುತ್ತಾ ಕರ್ಮಗಳನ್ನು ಸಮರ್ಪಿಸಬೇಕು. ಈ ಅಂಶವನ್ನು 'ನಿರಾಶೀಃ' ಎಂಬ ಪದದಿಂದ ತಿಳಿಸಿರುವರು.

'ನಾನು ಸ್ವತಂತ್ರನಲ್ಲ. ನೀನೇ ಸ್ವತಂತ್ರನಾಗಿರುವಿ. ನನ್ನ ಮೂಲಕವಾಗಿ ನಡೆದಿರುವ ಈ ಎಲ್ಲಾ ಕರ್ಮಗಳನ್ನೂ ನಿನ್ನ ಅಧೀನನಾದ ನನ್ನಿಂದ ನೀನು ಮಾಡಿಸಿರುವಿ. ನನ್ನಿಂದ ಈ ಕರ್ಮಗಳನ್ನು ಮಾಡಿಸಿದಂತೆ ಅದಕ್ಕೆ ತಕ್ಕ ಫಲವನ್ನೂ ನೀನೇ ಕೊಡುತ್ತಿರುವಿ. ಆದ್ದರಿಂದ ಫಲವನ್ನು ಕೊಡು ಎಂದು ಹೇಳುವುದಕ್ಕೂ ಬಿಡು ಎಂದು ಹೇಳುವುದಕ್ಕೂ ನಾನು ಸ್ವತಂತ್ರನಲ್ಲ. ನಿನ್ನ ಇಷ್ಟವಿದ್ದಂತೆ ಮಾಡು' ಎಂದು ಪ್ರಾರ್ಥಿಸುತ್ತಾ ಸಮರ್ಪಿಸಬೇಕು. ಈ ಅಂಶವನ್ನು 'ನಿರ್ಮಮಃ' ಎಂಬ ಪದದಿಂದ ತಿಳಿಸಿರುವರು.

ಹೀಗೆ ಮಾಡಿದ ಕರ್ಮಗಳ ಫಲವನ್ನು 'ಪರಂ ಯಾತಿ' ಎಂದು ತಿಳಿಸಿರುವರು. ಕೃಷಿಯನ್ನು ಮಾಡುವಾಗ ಕ್ರಿಮಿಕೀಟಾದಿಗಳ ಉಪದ್ರವದಿಂದಲೂ, ಮಳೆಯು ಬಾರದಿರುವುದು ಮುಂತಾದವುಗಳಿಂದಲೂ ಸಸಿಗಳೇ ನಾಶವಾಗುವ ಸಂಭವವಿದೆ. ಸಸಿಗಳು ಕೆಡದಿದ್ದರೂ ತಾನು ಅಪೇಕ್ಷಿಸಿದಷ್ಟು ಧಾನ್ಯವು ಬೆಳೆಯದಿರುವ ಸಂಭವವಿದೆ. ಹಾಗೆ ಬೆಳೆದರೂ ಅದನ್ನು ಇನ್ನೊಬ್ಬರು ಅಪಹರಿಸುವುದು ಮುಂತಾದ ಅನರ್ಥಗಳ ಸಂಭವವಿದೆ. ಹಾಗೆ ಅಪಹರಿಸದಿದ್ದರೂ ಆ ಧಾನ್ಯವನ್ನು ಕೆಲಕಾಲದವರೆಗೆ ಅನುಭವಿಸಬಹುದೇ ಹೊರತು ಸರ್ವಕಾಲದಲ್ಲಿಯೂ ಅನುಭವಿಸುವಂತಿಲ್ಲ. ಆದ್ದರಿಂದ ಈ ಲೋಕದಲ್ಲಿರುವ ಯಾವ ಫಲವೂ ಉತ್ತಮವಲ್ಲ.

ಸ್ವರ್ಗ ಮುಂತಾದ ಪರಲೋಕಗಳಿಗೆ ಹೋದರೂ ಪುಣ್ಯವು ಮುಗಿದ ಕೂಡಲೇ ಹಿಂದಿರುಗಿ ಬಂದೇ ಬರಬೇಕಾಗುತ್ತದೆ. ಆ ಲೋಕದ ಅಧಿಪತಿಗಳಿಗೇ ರಾವಣಾದಿಗಳ ಬಾಧೆಯಿಂದ ನಡುನಡುವಿನಲ್ಲಿ ಆ ಲೋಕದ ವಿಯೋಗವು ಏರ್ಪಡುತ್ತಿರುವಾಗ ಪುಣ್ಯದಿಂದ ಅಲ್ಲಿಗೆ ಹೋದವನಿಗೆ ಆ ಲೋಕವು ಶಾಶ್ವತವಲ್ಲವೆಂದು ಹೇಳಬೇಕಾಗಿಲ್ಲ. ಅಲ್ಲಿಯೂ ತನಗಿಂತ ಹೆಚ್ಚಿನ ಸುಖವನ್ನು ಅನುಭವಿಸುತ್ತಿರುವವರನ್ನು ನೋಡಿ ಹೊಟ್ಟೆಕಿಚ್ಚು ಏರ್ಪಡುತ್ತದೆ. ದುಃಖವೂ ಬರುತ್ತದೆ. ಆದ್ದರಿಂದ ಅಲ್ಲಿರುವ ಯಾವ ಫಲವೂ ಉತ್ತಮವಲ್ಲ.

ಶ್ರೀಹರಿಯು ಒಬ್ಬನೇ ಉತ್ತಮನು. ಅವನನ್ನು ಪಡೆದವನು ಪುನಃ ಸಂಸಾರಕ್ಕೆ ಬರುವುದಿಲ್ಲ. ಅವನ ಅನುಗ್ರಹದಿಂದ ನಿರಂತರದಲ್ಲಿಯೂ ಪೂರ್ಣಸುಖವನ್ನು ಅನುಭವಿಸುವನು. ಆದ್ದರಿಂದ ಶ್ರೀಹರಿಯ ಪ್ರಾಪ್ತಿಯೇ ಮಹಾಫಲವೆನಿಸುತ್ತದೆ. ಈ ಅಂಶವನ್ನು 'ಪರಂ ಯಾತಿ' ಎಂಬ ಎರಡು ಪದಗಳಿಂದ ತಿಳಿಸಿರುವರು.

ಭಗವದ್ಗೀತೆಯಲ್ಲಿರುವ 'ಮಯಿ ಸರ್ವಾಣಿ' ಎಂಬ ಶ್ಲೋಕವು ಕರ್ಮಗಳನ್ನು ಮಾಡುವ ಕ್ರಮವನ್ನು ತಿಳಿಸುತ್ತದೆ. ಆ ಶ್ಲೋಕದಲ್ಲಿ ಕರ್ಮವನ್ನು ಮಾಡುವ ಕ್ರಮವನ್ನು ತಿಳಿಸುವುದಕ್ಕಾಗಿ ಶ್ರೀಕೃಷ್ಣನು ಹೇಳಿರುವ ಕರ್ಮಗಳ ಫಲವನ್ನು ತಿಳಿಸಿರುವರು. ಇದರಿಂದ ಈ ಶ್ಲೋಕದಲ್ಲಿಯೂ ಮುಂದಿನ ಶ್ಲೋಕಗಳಲ್ಲಿಯೂ ಹೇಳಿರುವ ಎಲ್ಲಾ ವಿಷಯಗಳೂ ತಮ್ಮ ಕಲ್ಪನೆಯಲ್ಲವೆಂದೂ ಪ್ರಮಾಣಸಿದ್ಧವಾಗಿರುತ್ತವೆಯೆಂದೂ ತಿಳಿಸಿರುವರು. ||1||

**ಸ್ಮೃತ್ವಾ ವಿಷ್ಣುಂ ಸಮುತ್ಥಾಯ ಕೃತಶೌಚೋ ಯಥಾವಿಧಿ |**
**ಧೌತದಂತಃ ಸಮಾಚಮ್ಯ ಸ್ನಾನಂ ಕುರ್ಯಾದ್ವಿಧಾನತಃ ||2||**

**ಪದಚ್ಛೇದ** - ಸ್ಮೃತ್ವಾ ವಿಷ್ಣುಂ ಸಮುತ್ಥಾಯ ಕೃತಶೌಚಃ ಯಥಾವಿಧಿ ಧೌತದಂತಃ ಸಮಾಚಮ್ಯ ಸ್ನಾನಂ ಕುರ್ಯಾತ್ ವಿಧಾನತಃ

**ಅನ್ವಯ** - ಸಮುತ್ಥಾಯ, ಸಮಾಚಮ್ಯ, ವಿಷ್ಣುಂ ಸ್ಮೃತ್ವಾ, ಯಥಾವಿಧಿ (ಗುರೂನ್ ಚ) ಸ್ಮೃತ್ವಾ, ಯಥಾವಿಧಿ (ಪ್ರಶಸ್ತಾನಿ ಅವಲೋಕ್ಯ, ಅಪ್ರಶಸ್ತಾನಿ ಅನವಲೋಕ್ಯ), ಯಥಾವಿಧಿ ಕೃತಶೌಚಃ, ಯಥಾವಿಧಿ ಧೌತದಂತಃ, ಸಮಾಚಮ್ಯ, ವಿಧಾನತಃ ಸ್ನಾನಂ ಕುರ್ಯಾತ್.

**ಅರ್ಥ** - 'ಸಮುತ್ಥಾಯ' ಶ್ರೀಹರಿಯನ್ನು ಸ್ಮರಿಸುತ್ತಾ ಎದ್ದು 'ಸಮಾಚಮ್ಯ' ಸರಿಯಾಗಿ ಆಚಮನವನ್ನು ಮಾಡಿ, 'ವಿಷ್ಣುಂ' ಶ್ರೀಹರಿಯನ್ನು 'ಸ್ಮೃತ್ವಾ' ಪುನಃ ಸ್ಮರಿಸಿ 'ಯಥಾವಿಧಿ' ಶಾಸ್ತ್ರೋಕ್ತಕ್ರಮವನ್ನು ಅನುಸರಿಸಿ (ಗುರೂನ್ ಚ) ಸಕಲ ಗುರುಗಳನ್ನೂ (ಧ್ಯಾತ್ವಾ) ಸ್ಮರಿಸಿ 'ಯಥಾವಿಧಿ' ಕ್ರಮವನ್ನು ತಪ್ಪದಂತೆ (ಪ್ರಶಸ್ತಾನಿ ಅವಲೋಕ್ಯ) ಮಂಗಲಕರವಾದ ಶಾಲಗ್ರಾಮ ತುಲಸೀ ಮುಂತಾದವುಗಳನ್ನು ನೋಡಿ (ಅಪ್ರಶಸ್ತಾನಿ ಅನವಲೋಕ್ಯ) ಅಮಂಗಲಕರವಾದ ವಸ್ತುಗಳನ್ನು ನೋಡದೆ 'ಯಥಾವಿಧಿ' ಕ್ರಮವನ್ನು ಬಿಡದೆ 'ಕೃತಶೌಚಃ' ಮಲಮೂತ್ರವಿಸರ್ಜನಗಳಿಂದಲೂ ಮೃತ್ತಿಕಾಶೌಚಾದಿಗಳಿಂದಲೂ ದೇಹಶುದ್ಧಿಯನ್ನು ಮಾಡಿಕೊಂಡವನಾಗಿ, 'ಧೌತದಂತಃ' 'ಧೌತ' ತೊಳೆಯಲ್ಪಟ್ಟ 'ದಂತಃ' ಹಲ್ಲುಗಳುಳ್ಳವನಾಗಿ 'ಸಮಾಚಮ್ಯ' ಆಚಮನವನ್ನು ಮಾಡಿದವನಾಗಿ 'ವಿಧಾನತಃ' ಶಾಸ್ತ್ರದಲ್ಲಿ ಹೇಳಿರುವ ವಿಧಿಯನ್ನು ಮೀರದಂತೆ 'ಸ್ನಾನಂ' ಸ್ನಾನವನ್ನು 'ಕುರ್ಯಾತ್' ಮಾಡಬೇಕು.

**ವಿಗ್ರಹ** - (ವೇವೇಷ್ಟಿ ಇತಿ ವಿಷ್ಣುಃ, ತಂ ವಿಷ್ಣುಂ) (ಸಮ್ಯಕ್ ಉತ್ಥಾಯ ಸಮುತ್ಥಾಯ) (ಕೃತಂ ಶೌಚಂ ಯೇನ ಸಃ ಕೃತಶೌಚಃ) (ವಿಧಿಮ್ ಅನತಿಕ್ರಮ್ಯ ಯಥಾವಿಧಿ) (ಧೌತಾಃ ದಂತಾಃ ಯೇನ ಸಃ ಧೌತದಂತಃ) (ಸಮ್ಯಕ್ ಆಚಮ್ಯ ಸಮಾಚಮ್ಯ) (ವಿಧಾನಮ್ ಅನುಸೃತ್ಯ ವಿಧಾನತಃ)

**ತಾತ್ಪರ್ಯ** - ಈ ಶ್ಲೋಕದಲ್ಲಿ ಬೆಳಿಗ್ಗೆ ಏಳುವುದರಿಂದ ಆರಂಭಿಸಿ ಸ್ನಾನ ಮಾಡುವವರೆಗಿನ ಕಾರ್ಯಗಳು ಸಂಗ್ರಹಿಸಲ್ಪಟ್ಟಿವೆ. ಅವುಗಳನ್ನು ಶ್ರೀರಾಘವೇಂದ್ರತೀರ್ಥರ ಪರಮಶಿಷ್ಯರಾಗಿರುವ ಶ್ರೀಕೃಷ್ಣಾಚಾರ್ಯರು ಬರೆದಿರುವ ಸ್ಮೃತಿಮುಕ್ತಾವಲೀ ಗ್ರಂಥದ ಆಧಾರದಿಂದ ಸ್ಪಷ್ಟಪಡಿಸುತ್ತೇವೆ.

ಶಾಸ್ತ್ರೋಕ್ತವಾದ ಎಲ್ಲಾ ಕರ್ಮಗಳೂ ಶ್ರೀಹರಿಪೂಜೆಯೆನಿಸುತ್ತವೆ. ಇವುಗಳನ್ನು ಮಾಡುವುದರಿಂದ ಶ್ರೀಹರಿಯಲ್ಲಿ ಭಕ್ತಿಯು ಹೆಚ್ಚುತ್ತದೆ. (1) ಬಾಯಿ ಮುಕ್ಕಳಿಸುವುದು (2) ದಂತಕಾಷ್ಠದಿಂದ ಹಲ್ಲನ್ನು ಉಜ್ಜುವುದು (3) ಮೃತ್ತಿಕಾಶೌಚ (4) ಆಚಮನ (5) ಸ್ನಾನ (6) ವಸ್ತ್ರಧಾರಣ (7) ಊರ್ಧ್ವಪುಂಡ್ರನಾಮಗಳನ್ನು ಧರಿಸುವುದು ಇವುಗಳು ಕರ್ಮಗಳಿಗೆ ಉಪಾಂಗಗಳೆನಿಸುವವು. (1) ಸರಿಯಾದ ಸಮಯದಲ್ಲಿ ಏಳುವುದು ಮತ್ತು ಅಜಾಗ್ರತೆಯಿಲ್ಲದೆ ಕರ್ಮಗಳನ್ನು ಮಾಡುತ್ತಿರುವುದು

(2) ತನ್ನ ಶಕ್ತಿಯನ್ನು ವಿಮರ್ಶಿಸಿ ಅದಕ್ಕೆ ಯೋಗ್ಯವಾದ ಕರ್ಮವನ್ನು ಆರಂಭಿಸುವುದು (3) ಮನಸ್ಸಿನಲ್ಲಿ ಕಳವಳವಿಲ್ಲದಿರುವಿಕೆ (4) ಮನಸ್ಸು , ಮಾತು ಮತ್ತು ದೇಹಗಳ ಶುದ್ಧಿ ಇವುಗಳು ಕಾರ್ಯಸಿದ್ಧ್ಯಂಗಗಳು. ಅಂದರೆ ಆರಂಭಿಸಿದ ಕಾರ್ಯಗಳನ್ನು ಮುಗಿಸುವುದಕ್ಕೆ ಕಾರಣಗಳಾದ ಅಂಗಗಳು. (1) ವೇದ ಮತ್ತು ಸ್ಮೃತಿಗಳ ವಿಚಾರ (2) ನಂಬಿಕೆ (3) ಸಜ್ಜನರ ಸಹವಾಸ (4) ಶ್ರೀಹರಿಭಕ್ತಿ (5) ಶ್ರೀಹರಿಯೇ ನನ್ನಿಂದ ಈ ಕಾರ್ಯಗಳನ್ನು ಮಾಡಿಸುತ್ತಿರುವನೆಂಬ ತಿಳುವಳಿಕೆ (6) ಉಪವಾಸ ಮುಂತಾದ ನಿಯಮಗಳು, ಇವುಗಳು ಕರ್ಮಗಳಿಗೆ ಅಂಗಗಳು. ಶ್ರೀಹರಿಗೆ ಎಲ್ಲಾ ಕರ್ಮಗಳನ್ನು ಸಮರ್ಪಿಸುವುದು ಎಲ್ಲಾ ಅಂಗಗಳ ಮಧ್ಯದಲ್ಲಿಯೂ ಅತಿಮುಖ್ಯವಾದುದು. ಹೀಗೆ ಉಪಾಂಗಗಳಿಂದಲೂ, ಕಾರ್ಯಸಿದ್ಧ್ಯಂಗಗಳಿಂದಲೂ, ಅಂಗಗಳಿಂದಲೂ, ಪ್ರಧಾನಾಂಗದಿಂದಲೂ ಯುಕ್ತವಾಗಿರುವ ಕರ್ಮವನ್ನು ತಿಳಿದು ಮಾಡಬೇಕು. ಇದರಿಂದ ಉತ್ತಮವಾದ ಜ್ಞಾನವೂ ಅದರಿಂದ ಮುಕ್ತಿಯೂ ಸಿಗುತ್ತದೆ.

ಬೆಳಿಗ್ಗೆ ಮಾಡಬೇಕಾಗಿರುವ ಮತ್ತು ಶ್ರೀಹರಿಯ ಆರಾಧನೆಗೆ ಅಂಗವಾಗಿರುವ ನಿಯಮಗಳನ್ನು ಎರಡನೆಯ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

## ನಿದ್ರೆಯಿಂದ ಏಳುವ ವಿಧಿ

(1) 'ಸಮುತ್ಥಾಯ' (ಚೆನ್ನಾಗಿ ಎದ್ದು) ಈ ಪದದಲ್ಲಿರುವ 'ಸಮ್' ಎಂಬ ಉಪಸರ್ಗವು 'ಬೆಳಿಗ್ಗೆ ಚೆನ್ನಾಗಿ ಏಳಬೇಕು' ಎಂಬ ಅರ್ಥವನ್ನು ತಿಳಿಸುತ್ತದೆ. ಅದನ್ನು ಈಗ ವಿವರಿಸುತ್ತೇವೆ.

## ಬ್ರಾಹ್ಮಮುಹೂರ್ತ

ರಾತ್ರೇಃ ಪಶ್ಚಿಮಯಾಮಸ್ಯ ಮುಹೂರ್ತೋ ಯಸ್ತೃತೀಯಕಃ |
ಸ ಬ್ರಾಹ್ಮ ಇತಿ ವಿಜ್ಞೇಯೋ ವಿಹಿತಃ ಸಃ ಪ್ರಬೋಧನೇ ||

ಸೂರ್ಯಾಸ್ತಮನ ಕಾಲದಿಂದ ಮರುದಿನ ಸೂರ್ಯೋದಯಕಾಲದವರೆಗಿನ ಕಾಲವು ರಾತ್ರಿಯೆನಿಸುತ್ತದೆ. ಆ ರಾತ್ರಿಯನ್ನು ನಾಲ್ಕು ವಿಭಾಗವಾಗಿ ವಿಂಗಡಿಸಿದರೆ ನಾಲ್ಕು ಯಾಮಗಳಾಗುತ್ತವೆ. ಅವುಗಳಲ್ಲಿ ನಾಲ್ಕನೆಯ ಯಾಮವನ್ನು ನಾಲ್ಕು ವಿಭಾಗವಾಗಿ ವಿಂಗಡಿಸಬೇಕು. ಅವುಗಳಲ್ಲಿ ಮೂರನೆಯ ವಿಭಾಗವು ಅಂದರೆ ಸೂರ್ಯೋದಯಕ್ಕಿಂತ ಹಿಂದಿನ ಎರಡು ಗಳಿಗೆಗಳನ್ನು ಬಿಟ್ಟು ಅದಕ್ಕಿಂತಲೂ ಎರಡು ಗಳಿಗೆಗಳು ಬ್ರಾಹ್ಮ ಮುಹೂರ್ತವೆನಿಸುತ್ತವೆ.

ಹೊರಗಿನ ವಸ್ತುಗಳನ್ನು ತಿಳಿಯುತ್ತಿರುವ ಸ್ಥಿತಿಯು ಜಾಗ್ರದವಸ್ಥೆಯೆನಿಸುತ್ತದೆ. ಒಳಗಿರುವ ವಸ್ತುಗಳನ್ನು ಮಾತ್ರ ತಿಳಿಯುತ್ತಿರುವ ಕನಸಿನ ಸ್ಥಿತಿಯು ಸ್ವಪ್ನಾವಸ್ಥೆಯೆನಿಸುತ್ತದೆ. ಈ ಎರಡನ್ನೂ ತಿಳಿಯದಿರುವ ಸ್ಥಿತಿಯು ಸುಷುಪ್ತ್ಯವಸ್ಥೆಯೆನಿಸುತ್ತದೆ. 'ಶ್ರೀಹರಿಯೇ, ಎಲ್ಲಾ ವಸ್ತುಗಳಲ್ಲಿಯೂ ಇರುವುದರಿಂದ ವಿಷ್ಣು ಎಂದು ಪ್ರಸಿದ್ಧನಾಗಿರುವ ನೀನು ನನ್ನೊಳಗಿದ್ದು ನನ್ನಿಂದ ಎಲ್ಲಾ ಕಾರ್ಯಗಳನ್ನೂ ಮಾಡಿಸುತ್ತಿರುವಿ. ಇಷ್ಟರವರೆಗೆ ಸುಷುಪ್ತ್ಯವಸ್ಥೆಯಿಂದ ನನ್ನ ಸರ್ವೇಂದ್ರಿಯಗಳಿಗೂ ನವಚೈತನ್ಯವನ್ನು ಕೊಟ್ಟು, ನನ್ನನ್ನು ತೃಪ್ತಿಪಡಿಸಿರುವ ನೀನು ಈಗ ನನಗೆ ಜಾಗ್ರದವಸ್ಥೆಯನ್ನು ಕೊಡುತ್ತಿರುವಿ. ನಾನು ನಿನ್ನ ದಾಸನು. ನಿನ್ನಿಂದ ಈಗ ಎಬ್ಬಿಸಲ್ಪಟ್ಟ ನನ್ನಿಂದ ಇಂದಿನ ದಿನದಲ್ಲಿ ನಿನ್ನ ಆರಾಧನೆಯನ್ನು ಉತ್ತಮ ರೀತಿಯಿಂದ ಮಾಡಿಸು. ನಿನಗೆ ಪ್ರಿಯವಾದ ಸತ್ಕರ್ಮಗಳನ್ನು ನಿನ್ನ ಪ್ರೀತಿಗಾಗಿ ಮಾಡುವ ವಿಷಯದಲ್ಲಿ ನನ್ನ ಮನಸ್ಸನ್ನೂ, ಇತರ ಇಂದ್ರಿಯಗಳನ್ನೂ ಪ್ರೇರಿಸು. ನಿನಗೆ ಅಪ್ರಿಯವಾದ ದುಷ್ಕರ್ಮಗಳನ್ನು ಮಾಡಿಸಬೇಡ' ಎಂದು ಶ್ರೀಹರಿಯನ್ನು ಪ್ರಾರ್ಥಿಸುತ್ತಾ ಏಳಬೇಕು. ನಾಲ್ಕು ಕೈಗಳು, ಅವುಗಳಲ್ಲಿ ಶಂಖ ಚಕ್ರ ಗದಾ ಪದ್ಮಗಳು, ಶರೀರದಲ್ಲಿ ಸರ್ವಾಭರಣಗಳು, ಮುಖದಲ್ಲಿ ಮುಗುಳುನಗೆ, ಕಣ್ಣುಗಳಲ್ಲಿ ಕರುಣೆಯ ನೋಟ ಇವುಗಳಿಂದ ಯುಕ್ತನಾದ ಶ್ರೀಹರಿಯನ್ನು ಸ್ಮರಿಸಬೇಕು.

(2) ವಿಷ್ಣುಂ ಸ್ಮೃತ್ವಾ - (ವಿಷ್ಣುವನ್ನು ಸ್ಮರಿಸಿ) ಆಚಮನವನ್ನು ಮಾಡಬೇಕು. ತನ್ನನ್ನೂ ದೇಹವನ್ನೂ ಶ್ರೀಹರಿಯನ್ನೂ ಸ್ಮರಿಸುತ್ತಾ ಪ್ರಾರ್ಥಿಸಬೇಕು. 'ಮಹಾಪ್ರಭೋ, ನನ್ನ ಈ ದೇಹವು ತಂದೆ ತಾಯಿಗಳ ಶುಕ್ರಶೋಣಿತಗಳಿಂದ ಹುಟ್ಟಿರುತ್ತದೆ. ಇದು ಎಲ್ಲ ರೋಗಗಳಿಗೂ ಉತ್ಪತ್ತಿಸ್ಥಾನವಾಗಿರುತ್ತದೆ. ಮಲ-ಮೂತ್ರ ಮುಂತಾದ ಅಸಹ್ಯ ವಸ್ತುಗಳ ನಿಧಿಯಾಗಿರುತ್ತದೆ. ಗರ್ಭವಾಸ ಮುಂತಾದ ಸಕಲ ಅನರ್ಥಗಳಿಗೂ ಕಾರಣವಾಗಿದೆ. ದುಃಖದ ಮನೆಯಂತಿರುವ ಈ ದೇಹದಲ್ಲಿ ಕೈದಿಯಂತಿದ್ದು ತಾಪತ್ರಯಗಳಿಂದಲೂ ದುರಾಶೆಗಳಿಂದಲೂ ಬೆಂದು ಹೋಗುತ್ತಿರುವೆನು. ಈ ದೇಹಕ್ಕಿಂತಲೂ ನಾನು ಭಿನ್ನನಾಗಿದ್ದರೂ ಅಹಂಕಾರದಿಂದ ದೇಹಕ್ಕೆ ಬಂದಿರುವ ಎಲ್ಲಾ ಅನರ್ಥಗಳನ್ನೂ ನನ್ನಲ್ಲಿ ಬಂದಂತೆ ಭಾವಿಸಿ ಕಷ್ಟಪಡುತ್ತಿರುವೆನು. ಇದರಿಂದ ನನಗೆ ಬಿಡುಗಡೆಯನ್ನು ಕೊಡು. ಅದಕ್ಕಾಗಿ ನಿನ್ನನ್ನು ಸ್ಮರಿಸುವೆನು' ಎಂದು ಪ್ರಾರ್ಥಿಸುತ್ತಾ ಸ್ವಲ್ಪಕಾಲದವರೆಗೆ ಅವನನ್ನು ಧ್ಯಾನಿಸಬೇಕು.

ಪ್ರಾತಃಕಾಲೋದಿತಂ ಕರ್ಮ ನಿತ್ಯಂ ನೈಮಿತ್ತಿಕಂ ತಥಾ |
ವಿಷ್ಣೋರಾರಾಧನಾರ್ಥಾಯ ಕರಿಷ್ಯೇಽಹಂ ತವಾಜ್ಞಯಾ ||
ಸ್ವಾಮಿನ್ ದಾಸೋಽಸ್ಮಿ ತೇ ನಿತ್ಯಂ ಪ್ರೀತಯೇ ಕರವಾಣ್ಯಹಮ್ |
ಅಪ್ರಿಯೇ ಭವತೋ ನಾಥ ಮಾ ಯಾನ್ಮೇ ಮನ ಆದಿಕಮ್ ||
ಸರ್ವೇಂದ್ರಿಯಾಭಿಮಾನಿಶ್ರೀಪ್ರಾಣಸಂಸ್ಥೇನ ವಿಷ್ಣುನಾ |
ಪ್ರೇರಿತಃ ಶ್ರೀಶತುಷ್ಟ್ಯರ್ಥಂ ಕರಿಷ್ಯೇ ಕರ್ಮ ಚಾಖಿಲಮ್ || (ಸಂಗ್ರಹವಾಕ್ಯ)

(ಓ ಹರಿಯೇ, ಬೆಳಿಗ್ಗೆ ಮಾಡಬೇಕಾದ ಸಂಧ್ಯಾವಂದನ ಮುಂತಾದ ನಿತ್ಯಕರ್ಮಗಳೂ ಆಶೌಚಸ್ನಾನ ಮುಂತಾದ ನೈಮಿತ್ತಿಕ ಕರ್ಮಗಳೂ ನಿನ್ನ ಪೂಜೆಯೆನಿಸುತ್ತವೆ. ಇವುಗಳನ್ನು ನಿನ್ನ ಪ್ರೀತಿಗಾಗಿ ಮಾಡುವೆನು. ಸ್ವಾಮಿ, ನಿನಗೆ ಅಪ್ರಿಯವಾದ ಕರ್ಮಗಳಲ್ಲಿ ಮನಸ್ಸು ಮುಂತಾದ ಇಂದ್ರಿಯಗಳು ಹೋಗದಿರಲಿ. ಎಲ್ಲಾ ಜೀವರ ಎಲ್ಲಾ ಇಂದ್ರಿಯಗಳಿಗೂ ಶ್ರೀಮುಖ್ಯಪ್ರಾಣದೇವರು ಪ್ರೇರಕರು. ಅವರ ಸರ್ವೇಂದ್ರಿಯಗಳಿಗೆ ನೀನು ಪ್ರೇರಕನು. ನಿನ್ನಿಂದ ಶ್ರೀಮುಖ್ಯಪ್ರಾಣದೇವರು ಪ್ರೇರಿಸಲ್ಪಡುತ್ತಾರೆ. ಅವರಿಂದ ಪ್ರೇರಿತನಾದ ನಾನು ನಿನ್ನ ಅಪ್ಪಣೆಯಿಂದ ನಿನ್ನ ಪ್ರೀತಿಗಾಗಿ ಎಲ್ಲಾ ಕರ್ಮಗಳನ್ನೂ ಮಾಡುವೆನು) ಎಂದು ಪ್ರಾರ್ಥಿಸಬೇಕು. ಇದೇ ರೀತಿಯಿಂದ ಗಜೇಂದ್ರಮೋಕ್ಷ, ದಧಿವಾಮನಸ್ತೋತ್ರ ಮುಂತಾದ ಸ್ತೋತ್ರಗಳಿಂದ ಪ್ರಾರ್ಥಿಸಬೇಕು.

(3) 'ವಿಷ್ಣುಂ ಸ್ತುತ್ವಾ' ಎಂಬ ವಾಕ್ಯದಲ್ಲಿರುವ 'ವಿಷ್ಣು' ಎಂಬ ಪದವು ವಿಷ್ಣುಭಕ್ತರನ್ನೂ ಎಂದು ತಿಳಿಸುತ್ತದೆ. ಆದ್ದರಿಂದ ವಿಷ್ಣುವನ್ನು ಸ್ತುತಿಸಿದ ಮೇಲೆ ವಿಷ್ಣುಭಕ್ತರನ್ನು ಸ್ತುತಿಸಬೇಕೆಂದು ಅದೇ ವಾಕ್ಯದಿಂದ ತಿಳಿಸಿದಂತಾಯಿತು. ಅದಕ್ಕಾಗಿ ವಿಷ್ಣುಭಕ್ತರ ಸ್ತುತಿಯನ್ನು ಕೆಳಗೆ ಕೊಟ್ಟಿರುವೆವು.

### ತತ್ತ್ವಾಭಿಮಾನಿದೇವತಾಪ್ರಾರ್ಥನೆ

ನಮೋ ವಸ್ತ್ವಾತ್ತ್ವಿಕಾ ದೇವಾ ವಿಷ್ಣುಭಕ್ತಿಪರಾಯಣಾಃ |
ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವ ಹಿ ||
ಶರೀರಚೇಷ್ಟಾಪಿ ಮಮ ಪ್ರಣಾಮಃ ಸ್ತುತಿಸ್ತು ವಾಗಿಂದ್ರಿಯವೃತ್ತಿರಸ್ತು |
ಸರ್ವಾಽತ್ಮನೋ ವೃತ್ತಿರನುಸ್ಮೃತಿಸ್ತೇ ಸರ್ವಂ ತ್ವದಾರಾಧನಮೇವ ಭೂಯಾತ್||

(ಓ ತತ್ತ್ವಾಭಿಮಾನಿದೇವತೆಗಳಿರಾ, ವಿಷ್ಣುಭಕ್ತರಾಗಿರುವ ನಿಮ್ಮನ್ನು ನಮಸ್ಕರಿಸುವೆನು. ನೀವೆಲ್ಲರೂ ನನ್ನನ್ನು ಧರ್ಮಮಾರ್ಗದಲ್ಲಿ ಪ್ರೇರೇಪಿಸಿರಿ. ಶರೀರದ ಸರ್ವ ವ್ಯಾಪಾರಗಳು ಶ್ರೀಹರಿ ನಮಸ್ಕಾರಗಳಾಗಿಯೂ, ವಾಗಿಂದ್ರಿಯ

ವ್ಯಾಪಾರಗಳು ಶ್ರೀಹರಿ ಸ್ತುತಿರೂಪವಾಗಿಯೂ, ಮನಸ್ಸಿನ ವ್ಯಾಪಾರಗಳು ಶ್ರೀಹರಿ ಸ್ಮರಣರೂಪವಾಗಿಯೂ ಹೀಗೆ ಎಲ್ಲಾ ವ್ಯಾಪಾರಗಳೂ ಶ್ರೀಹರಿಪೂಜಾರೂಪವಾಗಿ ಪರಿಣಮಿಸುವಂತೆ ಮಾಡಿರಿ.)

### ಭೂದೇವಿಪ್ರಾರ್ಥನೆ

ಸಮುದ್ರವಸನೇ ದೇವಿ ಪರ್ವತಸ್ತನಮಂಡಿತೇ |
ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ||
ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ |
ಶಿರಸಾ ಧಾರಯಿಷ್ಯಾಮಿ ರಕ್ಷ ಮಾಂ ಚ ಪದೇ ಪದೇ ||

(ಓ ಭೂದೇವಿಯೇ, ಸಮುದ್ರವೇ ನಿನ್ನ ವಸ್ತ್ರ. ಪರ್ವತಗಳೇ ಸ್ತನಗಳು. ಶ್ರೀಹರಿಯೇ ನಿನ್ನ ಪತಿ. ಇಂತಹ ಮಹತ್ತ್ವವುಳ್ಳ ನಿನ್ನನ್ನು ನಾನು ತುಳಿಯುತ್ತಿರುವೆನು. ಈ ಅಪರಾಧವನ್ನು ಮನ್ನಿಸು. ಇದಕ್ಕಾಗಿ ನಿನ್ನನ್ನು ನಮಸ್ಕರಿಸುವೆನು. ಶ್ರೀಹರಿಯ ಪಾದಸ್ಪರ್ಶದಿಂದ ಪಾವನಳಾಗಿರುವ ನಿನ್ನನ್ನು ಶಿರಸ್ಸಿನಲ್ಲಿ ಧರಿಸುವೆನು. ರಥ ಕುದುರೆ ಮುಂತಾದ ವಾಹನಗಳಿಂದಲೂ ಕಾಲುನಡೆಯಿಂದಲೂ ನಿನ್ನಲ್ಲಿ ಸಂಚರಿಸುತ್ತಿರುವ ನನ್ನನ್ನು ಹೆಜ್ಜೆ ಹೆಜ್ಜೆಗೂ ರಕ್ಷಿಸು.)

### ಮಂಗಲವಸ್ತುದರ್ಶನ

(4) ಪ್ರಶಸ್ತಾನ್ಯವಲೋಕ್ಯ (ಪ್ರಶಸ್ತವಾದ ವಸ್ತುಗಳನ್ನು ನೋಡಿ) 'ವಿಷ್ಣುಂ ಸ್ಮೃತ್ವಾ' ಎಂಬ ವಾಕ್ಯದಲ್ಲಿ ವಿಷ್ಣುವನ್ನು ಸ್ಮರಿಸಬೇಕೆಂದು ಹೇಳಿರುವುದರಿಂದ ಶ್ರೀಹರಿಯ ವಿಶೇಷ ಸನ್ನಿಧಾನವುಳ್ಳ ವೇದವನ್ನು ಓದಿ ಅದರ ಅರ್ಥವನ್ನು ತಿಳಿದಿರುವ ಬ್ರಾಹ್ಮಣ, ಕಪಿಲಗೋವು, ಕನ್ನಡಿ, ಸೂರ್ಯ, ಭಾಗ್ಯವಂತನಾದ ಪುರುಷ, ಧಾರ್ಮಿಕನಾದ ರಾಜ, ವಿದ್ಯೋಪದೇಶವನ್ನು ಮಾಡುತ್ತಿರುವ ಆಚಾರ್ಯರು, ಅನ್ನವನ್ನು ಕೊಟ್ಟು ರಕ್ಷಿಸುವವರು, ಪತಿವ್ರತೆ, ಅಗ್ನಿ, ಅಗ್ನಿಹೋತ್ರವನ್ನು ಮಾಡುತ್ತಿರುವವರು ಮುಂತಾದವರನ್ನು ಬೆಳಿಗ್ಗೆ ಎದ್ದು ನೋಡಬೇಕೆಂದೂ ಅದರಿಂದ ಎಲ್ಲಾ ಆಪತ್ತುಗಳೂ ದೂರವಾಗುತ್ತವೆಯೆಂದೂ ಹೇಳಿದಂತಾಯಿತು. ಇದೇ ವಿಷಯವನ್ನು

ಕಪಿಲಾಂ ದರ್ಪಣಂ ಭಾನುಂ ಭಾಗ್ಯವಂತಂ ಚ ಭೂಪತಿಮ್ |
ಆಚಾರ್ಯಮನ್ನದಾತಾರಂ ಪ್ರಾತಃ ಪಶ್ಯೇತ್ಪತಿವ್ರತಾಮ್ ||
ಶ್ರೋತ್ರಿಯಂ ಸುಭಗಂ ಗಾಂ ಚ ಅಗ್ನಿಮಗ್ನಿಚಿತಂ ತಥಾ |
ಪ್ರಾತರುತ್ಥಾಯ ಯಃ ಪಶ್ಯೇದಾಪದ್ಭ್ಯಃ ಸ ವಿಮುಚ್ಯತೇ ||

ಮುಂತಾದ ಪ್ರಮಾಣಗಳು ತಿಳಿಸುತ್ತವೆ.

### ಅಮಂಗಲವಸ್ತು ದರ್ಶನವನ್ನು ಮಾಡದಿರುವುದು

(5) ಅಪ್ರಶಸ್ತಾನ್ಯನವಲೋಕ್ಯ (ಅಮಂಗಲವಸ್ತುಗಳನ್ನು ನೋಡದೆ) 'ವಿಷ್ಣುಂ ಸ್ಮೃತ್ವಾ' ಎಂಬ ವಾಕ್ಯದಿಂದಲೇ ವಿಷ್ಣುವಿನ ವಿಶೇಷ ಸನ್ನಿಧಾನವಿಲ್ಲದಿರುವ ಪಾಪಿಷ್ಠ ಪುರುಷ ದುರದೃಷ್ಟವುಳ್ಳವನು, ಅಂಗಹೀನನು, ಚಿಕ್ಕ ಹುಡುಗನನ್ನು ಬಿಟ್ಟು ಉಳಿದ ಬೆತ್ತಲೆಯಾದ ಸ್ತ್ರೀ ಅಥವಾ ಪುರುಷ, ಮೂಗು ಕತ್ತರಿಸಿದವನು ಇವರೆಲ್ಲರನ್ನೂ ಬೆಳಿಗ್ಗೆ ನೋಡಬಾರದು. ನೋಡಿದವನಲ್ಲಿ ಕಲಿಸಾನ್ನಿಧ್ಯವುಂಟಾಗುತ್ತದೆಯೆಂದು ಹೇಳಿದಂತಾಯಿತು. ಈ ಅಂಶವು

ಪಾಪಿಷ್ಠಂ ದುರ್ಭಗಂ ವ್ಯಂಗ್ಯಂ ನಗ್ನಮುತ್ಕೃತ್ತನಾಸಿಕಮ್ |
ಪ್ರಾತರುತ್ಥಾಯ ಯಃ ಪಶ್ಯೇತ್ಸ ಕಲೇರುಪಲಕ್ಷಣಮ್ ||

ಎಂಬ ಪ್ರಮಾಣದಿಂದ ತಿಳಿಸಲ್ಪಟ್ಟಿದೆ.

## ಮಲಮೂತ್ರವಿಸರ್ಜನವಿಧಿ

ಹಿಂದೆ ಹೇಳಿದಂತೆ ಶ್ರೀಹರಿಯನ್ನೂ ಅವನ ಭಕ್ತರಾದ ದೇವತೆಗಳನ್ನೂ ಗುರುಗಳೇ ಮೊದಲಾದವರನ್ನೂ ಸ್ಮರಿಸಿದ ಮೇಲೆ ಮಲಮೂತ್ರವಿಸರ್ಜನೆಯನ್ನು ಮಾಡಬೇಕು. ದೇಹದಲ್ಲಿರುವ ಮಲಮೂತ್ರಗಳು ದೂರವಾದರೆ ಆ ದೇಹದಲ್ಲಿ ಶ್ರೀಹರಿಸಾನ್ನಿಧ್ಯವು ಏರ್ಪಡುತ್ತದೆ. ಅದಕ್ಕಾಗಿ ವಿಧಿಪ್ರಕಾರವಾಗಿ ಮಲಮೂತ್ರಗಳ ವಿಸರ್ಜನಕ್ರಮವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

### ನಿಷಿದ್ಧ ಸ್ಥಳ ಮುಂತಾದವುಗಳು

(6) ಯಥಾವಿಧಿ ಕೃತಶೌಚಃ (ಶಾಸ್ತ್ರೋಕ್ತ ವಿಧಿಯಿಂದ ಮಲಮೂತ್ರ ವಿಸರ್ಜನವನ್ನು ಮಾಡಿದವನಾಗಿ) ಮಲಮೂತ್ರವಿಸರ್ಜನೆಗೆ ನಿಷಿದ್ಧವಾದ ಸ್ಥಳ ಮುಂತಾದವುಗಳನ್ನು ಮೊದಲು ಹೇಳುತ್ತೇವೆ. ಮಾರ್ಗಮಧ್ಯ, ಮನೆಯ ಒಳಗಿನ ಪ್ರದೇಶ, ದನಗಳ ಕೊಟ್ಟಿಗೆ, ಉಳಲ್ಪಟ್ಟ ಹೊಲ, ನೀರಿನ ಮಧ್ಯ, ಪರ್ವತದ ಮೇಲ್ಭಾಗ, ಅಗ್ನಿಕುಂಡ, ಜೀರ್ಣ ದೇವಾಲಯ, ಹುತ್ತ, ಹಳ್ಳ, ನದೀತೀರ, ಗುಹೆ, ಧಾನ್ಯರಾಶಿ, ಬರೀ ನೆಲ, ಪಶುಗಳ ದೇಹ ಮುಂತಾದವುಗಳಲ್ಲಿ ಮಲಮೂತ್ರವಿಸರ್ಜನವನ್ನು ಮಾಡಬಾರದು. ನಿಂತುಕೊಂಡೂ, ನಡೆಯುತ್ತಲೂ ಮಾಡಬಾರದು. ಸೂರ್ಯ, ಅಗ್ನಿ, ಬ್ರಾಹ್ಮಣರು, ಗೋವುಗಳು ಮುಂತಾದ ಪೂಜ್ಯ ವಸ್ತುಗಳಿಗೆ ಅಭಿಮುಖವಾಗಿ ಮಾಡಿದರೆ ಆಯುಸ್ಸು ಕ್ಷೀಣವಾಗುತ್ತದೆ. ಮಲಮೂತ್ರವಿಸರ್ಜನ ಕಾಲದಲ್ಲಿ ಮೊಣಕಾಲು ಮತ್ತು ತಲೆಗಳನ್ನು ಮುಚ್ಚಬಾರದು. ಮೇಲೆ ಕೆಳಗೆ ಮತ್ತು ಪಾರ್ಶ್ವಗಳನ್ನು ನೋಡಬಾರದು. ಮಲವನ್ನು ನೋಡಬಾರದು. ಹಾಗೆ ನೋಡಿದರೆ ಸೂರ್ಯ ಮುಂತಾದ ಪಾವನವಸ್ತುಗಳನ್ನು ನೋಡಬೇಕು. ಸ್ನಾನ ಮಾಡಿದ ಮೇಲೆ ಒದ್ದೆ ಬಟ್ಟೆಯನ್ನು ಉಟ್ಟುಕೊಂಡು ಮಾಡಿದರೆ ಮೂರು ಸಲ ಪ್ರಾಣಾಯಾಮವನ್ನು ಮಾಡಿ ಪುನಃ ಸ್ನಾನವನ್ನು ಮಾಡಬೇಕು. ಮಧ್ಯದಲ್ಲಿ ಮಾತನಾಡಬಾರದು. ತೊಳೆದುಕೊಳ್ಳುವುದಕ್ಕೆ ನೀರು ಮತ್ತು ಮಣ್ಣುಗಳನ್ನು ಸಿದ್ಧಪಡಿಸಿಕೊಳ್ಳದಂತೆ ಮಾಡಬಾರದು.

### ವಿಹಿತವಾದ ಸ್ಥಳ ಮುಂತಾದವುಗಳು

ಬೆಳಿಗ್ಗೆ ಬ್ರಾಹ್ಮಮುಹೂರ್ತದಲ್ಲಿ ಮಲಮೂತ್ರವಿಸರ್ಜನವನ್ನು ಮಾಡಬೇಕು. ಜನರು ಸಂಚರಿಸುವ ಮಾರ್ಗದಿಂದ ನೈಋತ್ಯದಿಕ್ಕಿಗೆ ಅಭಿಮುಖವಾಗಿ ಸ್ವಲ್ಪದೂರದವರೆಗೆ ಯಾರೂ ನೋಡದಿರುವ ಶುದ್ಧವಾದ ಸ್ಥಳಕ್ಕೆ ಹೋಗಬೇಕು. ಕಳ್ಳರು ಮತ್ತು ಹುಲಿ ಮುಂತಾದ ಪ್ರಾಣಿಗಳ ಭಯವಿರುವಾಗ ರಾತ್ರಿಕಾಲದಲ್ಲಿ ಊರಿನ ಹೊರಗೂ ಮನೆಯಿಂದ ದೂರಕ್ಕೂ ಹೋಗಬೇಕಾಗಿಲ್ಲ. ಮುಖವನ್ನು ಬಿಟ್ಟು ಉಳಿದ ತಲೆಯ ಭಾಗವನ್ನೂ ಮೊಣಕಾಲಿನ ಅಥವಾ ಸೊಂಟದ ಮೇಲಿನ ಪ್ರದೇಶವನ್ನೂ ಬಟ್ಟೆಯಿಂದ ಮುಚ್ಚಿಕೊಳ್ಳಬೇಕು. ಒಂದೆ ಬಟ್ಟೆಯನ್ನು ಧರಿಸಿದ್ದರೆ ಯಜ್ಞೋಪವೀತವನ್ನು ಮಾಲಾಕಾರವಾಗಿ ಮಾಡಿಕೊಂಡು ಬಲಗಿವಿಗೆ ಸುತ್ತಿಸಬೇಕು. ಎರಡು ಬಟ್ಟೆಗಳನ್ನು ಧರಿಸಿದ್ದರೆ ಕುತ್ತಿಗೆಯ ಹಿಂಭಾಗದಲ್ಲಿ ಬೆನ್ನಿನ ಮೇಲೆ ಮಾಲಾಕಾರವಾಗಿ ಹಾಕಿಕೊಳ್ಳಬೇಕು. ಹಗಲು ಮತ್ತು ಸಂಧ್ಯಾಕಾಲಗಳಲ್ಲಿ ಉತ್ತರಾಭಿಮುಖವಾಗಿಯೂ, ರಾತ್ರಿಯಲ್ಲಿ ದಕ್ಷಿಣಾಭಿಮುಖವಾಗಿಯೂ ಕುಳಿತುಕೊಳ್ಳಬೇಕು.

### ಮೃತ್ತಿಕಾಶೌಚ

(7) ಯಥಾವಿಧಿ ಕೃತಶೌಚಃ (ಶಾಸ್ತ್ರೋಕ್ತವಿಧಿಯಿಂದ ಮಣ್ಣಿನಿಂದಲೂ ನೀರಿನಿಂದಲೂ ಗುದ ಮತ್ತು ಕೈಗಳನ್ನು ತೊಳೆದುಕೊಂಡವನಾಗಿ ಎಡಗೈಯಿಂದ ಲಿಂಗವನ್ನು ಹಿಡಿದುಕೊಂಡು ಏಳಬೇಕು. ಆ ಸ್ಥಳದಿಂದ ಬೇರೆ ಸ್ಥಳಕ್ಕೆ ಹೋಗಬೇಕು. ಮೊದಲೇ ಸಿದ್ಧಪಡಿಸಿರುವ ಮಣ್ಣಿನಿಂದಲೂ ನೀರಿನಿಂದಲೂ ಎಡಗೈಯಿಂದ ಗುದವನ್ನೂ ಎಡಗೈಯನ್ನೂ ಮಲವು ಸಂಪೂರ್ಣವಾಗಿ ಹೋಗುವವರೆಗೆ ತೊಳೆಯಬೇಕು. ಇದು ಮೃತ್ತಿಕಾಶೌಚವೆನಿಸುತ್ತದೆ. ಈ ಮಣ್ಣುಗಳಿಂದಲೂ ನೀರಿನಿಂದಲೂ ಮಾಡುವ ಶುದ್ಧಿಯನ್ನು ತಂಬಿಗೆ ಮುಂತಾದ ಪಾತ್ರಗಳಿಂದ ತಂದಿರುವ ನೀರಿನಿಂದ ನದೀ ಮುಂತಾದ ಜಲಾಶಯಗಳನ್ನು ಬಿಟ್ಟು ಬೇರೆ

ಸ್ಥಳಗಳಲ್ಲಿ ಮಾಡಬೇಕು. ನದೀ ಮುಂತಾದ ಜಲಾಶಯಗಳಲ್ಲಿ ಸಾಕ್ಷಾತ್ತಾಗಿ ಮಾಡಬಾರದು. ಮಾರ್ಗಮಧ್ಯದಲ್ಲಿಯೂ ಆಪತ್ಕಾಲದಲ್ಲಿಯೂ ನೀರನ್ನು ಜಲಾಶಯದಿಂದ ಹೊರಗೆ ತರಲು ಸಾಧ್ಯವಿಲ್ಲದಿದ್ದರೆ ಜಲಾಶಯದಲ್ಲಿ ಸಾಕ್ಷಾತ್ತಾಗಿಯೇ ಮೃತ್ತಿಕಾಶೌಚವನ್ನು ಮಾಡಿ ಆ ಸ್ಥಳವನ್ನು ತೊಳೆಯಬೇಕು. ಮೃತ್ತಿಕಾಶೌಚವನ್ನು ಮಾಡಿದ ಮೇಲೆ ಉಳಿದಿರುವ ಮಣ್ಣನ್ನು ಪೂರ್ತಿಯಾಗಿ ಕರಗಿಸಬೇಕು. ಇಲ್ಲದಿದ್ದರೆ ಅಶುದ್ಧನಾಗುವನು.

ಮೃತ್ತಿಕಾಶೌಚಕ್ಕೆ ಬೇಕಾದ ಮಣ್ಣು - ಈ ಮೃತ್ತಿಕಾಶೌಚಕ್ಕೆ ಬ್ರಾಹ್ಮಣರಿಗೆ ಬಿಳಿ ಬಣ್ಣದ ಮಣ್ಣು, ಕ್ಷತ್ರಿಯರಿಗೆ ಕಪ್ಪು ಬಣ್ಣದ ಮಣ್ಣು, ವೈಶ್ಯರಿಗೆ ಹಳದಿ ಬಣ್ಣದ ಮಣ್ಣು, ಶೂದ್ರರಿಗೆ ಕಪ್ಪು ಕೆಂಪು ಮಿಶ್ರಬಣ್ಣದ ಮಣ್ಣು ಉತ್ತಮವೆನಿಸುತ್ತದೆ. ಇದು ಸಿಗದಿದ್ದರೆ ಆಯಾ ಊರಿನಲ್ಲಿರುವ ಮಣ್ಣು ಶ್ಲಾಘ್ಯವೆನಿಸುತ್ತದೆ. ಈ ಮಣ್ಣು ಉಸುಗಿನಿಂದ ಯುಕ್ತವಾಗಿರಬೇಕು. ನದೀತೀರದಿಂದ ಇದನ್ನು ತರಬೇಕು. ಉಳಲ್ಪಟ್ಟ ಹೊಲ, ಹುತ್ತ, ಉಸುಗಿನ ರಾಶಿ, ಕೆಸರು, ಮಾರ್ಗಮಧ್ಯ, ಉಸುಗಿನ ಭೂಮಿ, ಶ್ಮಶಾನ, ಮರಗಳ ಬುಡ, ದನಗಳ ಕೊಟ್ಟಿಗೆ, ದೇವಾಲಯ, ಮನೆಯ ಸಮೀಪ, ಕೆರೆ ಬಾವಿ ಮುಂತಾದವುಗಳನ್ನು ಬಿಟ್ಟು ಉಳಿದ ನೀರಿನ ಮಧ್ಯ ಇವುಗಳಿಂದ ತಂದಿರುವ ಮಣ್ಣನ್ನೂ ಇನ್ನೊಬ್ಬನು ಮೃತ್ತಿಕಾಶೌಚವನ್ನು ಮಾಡಿ ಉಳಿದಿರುವ ಮಣ್ಣನ್ನೂ ಮೃತ್ತಿಕಾಶೌಚಕ್ಕೆ ಉಪಯೋಗಿಸಿದರೆ ಈ ಮೃತ್ತಿಕಾಶೌಚವು ವ್ಯರ್ಥವಾಗುತ್ತದೆ. ಕೆರೆ ಬಾವಿ ಮುಂತಾದವುಗಳು ಇರುವ ಸ್ಥಳದಲ್ಲಿ ಅದರ ಮಧ್ಯದಲ್ಲಿರುವ ಮಣ್ಣನ್ನೇ ತೆಗೆದುಕೊಳ್ಳಬೇಕು. ಅಂಗಾರ, ಹೊಟ್ಟು, ಹುಳಗಳು, ಎಲುಬು ಇವುಗಳಿಂದ ಯುಕ್ತವಾದ ಮಣ್ಣನ್ನು ಉಪಯೋಗಿಸಬಾರದು.

### ಮಣ್ಣಿನ ಅಳತೆ ಮತ್ತು ಸಂಖ್ಯೆ

ಮೃತ್ತಿಕಾಶೌಚಕ್ಕೆ ಹಸಿನೆಲ್ಲಿಕಾಯಿಯಷ್ಟು ಪರಿಮಾಣವುಳ್ಳ ಒಂದೊಂದು ಮಣ್ಣಿನ ಗುಳಿಗೆಗಳನ್ನು ಒಮ್ಮೊಮ್ಮೆ ಉಪಯೋಗಿಸಬೇಕು. ಮೂತ್ರವಿಸರ್ಜನಕಾಲದಲ್ಲಿ ಲಿಂಗದಲ್ಲಿ ಒಮ್ಮೆ, ಗುದದಲ್ಲಿ ಮೂರು ಸಲ, ಎಡಗೈಯಲ್ಲಿ ಮೂರು ಸಲ, ಬಲಗೈಯಲ್ಲಿ ಎರಡು ಸಲ, ಎರಡು ಕಾಲುಗಳಲ್ಲಿ ಮೂರು ಮೂರು ಸಲ ಮಣ್ಣನ್ನು ಹಚ್ಚಿ ತೊಳೆಯಬೇಕು. ಮಲವಿಸರ್ಜನಕಾಲದಲ್ಲಿ ಇದಕ್ಕೆ ಎರಡರಷ್ಟು ಸಲ ತೊಳೆಯಬೇಕು. ಇದು ಗೃಹಸ್ಥನಿಗೆ. ಇದಕ್ಕೆ ಎರಡರಷ್ಟು ಬ್ರಹ್ಮಚಾರಿಯೂ, ಮೂರರಷ್ಟು ಗೃಹಸ್ಥನೂ, ನಾಲ್ಕರಷ್ಟು ಸನ್ಯಾಸಿಯೂ, ಅರ್ಧದಷ್ಟು ಸ್ತ್ರೀ ಮತ್ತು ಶೂದ್ರರೂ ಮೃತ್ತಿಕಾಶೌಚವನ್ನು ಮಾಡಬೇಕು. ಹಗಲಿನಲ್ಲಿ ಮಾಡಿದ್ದಕ್ಕಿಂತ ಅರ್ಧದಷ್ಟು ರಾತ್ರಿಯಲ್ಲಿಯೂ, ಮಾರ್ಗಮಧ್ಯದಲ್ಲಿ ಕಾಲುಭಾಗದಷ್ಟೂ, ರೋಗಿಯಾದವನು ಶಕ್ತಿಯಿದ್ದಷ್ಟೂ, ಶಕ್ತಿಯುಳ್ಳವನು ಪೂರ್ಣವಾಗಿಯೂ ಮಾಡಬೇಕು. ದೇಶ ಕಾಲ ತನ್ನ ಸ್ಥಿತಿ ಅನುಕೂಲತೆ ಮುಂತಾದವುಗಳನ್ನು ನೋಡಿ ಅದಕ್ಕೆ ಅನುಗುಣವಾಗಿ ಮಾಡಬೇಕು. ಕೈಗಳನ್ನು ಮಣಿಗಂಟಿನವರೆಗೂ ಕಾಲುಗಳನ್ನು ಮೊಣಕಾಲಿನವರೆಗೂ ತೊಳೆಯಬೇಕು. ಮಳೆಯ ನೀರಿನ ಧಾರೆಯಿಂದ ಹೇಳಿದ ಸಂಖ್ಯೆಗಿಂತ ಅರ್ಧದಷ್ಟು ಮೃತ್ತಿಕಾಶೌಚವನ್ನು ಮಾಡಬೇಕು. ದುರ್ಗಂಧವು ಹೋಗುವುದೇ ಮುಖ್ಯವಾಗಿದೆ. ಹಿಂದೆ ಹೇಳಿದಷ್ಟು ಸಲ ತೊಳೆಯಲೇ ಬೇಕು. ಅಷ್ಟು ಸಲ ತೊಳೆದರೂ ಕೈಯಲ್ಲಿಯೂ ಕಾಲಿನಲ್ಲಿಯೂ ದುರ್ಗಂಧವು ಪೂರ್ಣವಾಗಿ ಹೋಗದಿದ್ದರೆ ದುರ್ಗಂಧವು ಹೋಗುವವರೆಗೂ ತೊಳೆಯಬೇಕು. ಶೂದ್ರರಿಗೂ ಉಪನಯನಕ್ಕಿಂತ ಪೂರ್ವದಲ್ಲಿ ಬ್ರಾಹ್ಮಣ ಕ್ಷತ್ರಿಯ ಮತ್ತು ವೈಶ್ಯರಿಗೂ ವಿವಾಹಕ್ಕಿಂತ ಪೂರ್ವದಲ್ಲಿ ಸ್ತ್ರೀಯರಿಗೂ ಮೃತ್ತಿಕಾಶೌಚ ಸಂಖ್ಯೆಯ ನಿಯಮವಿಲ್ಲ. ದುರ್ಗಂಧವು ಹೋಗುವವರೆಗೆ ಮಾಡಬೇಕು. ಉಳಿದವರಿಗೆ ದುರ್ಗಂಧವು ಹೋದ ಮೇಲೆಯೂ ಅವರವರಿಗೆ ಕ್ಲೃಪ್ತವಾದ ಸಂಖ್ಯೆಯು ಮುಗಿಯುವವರೆಗೆ ಮಾಡಲೇ ಬೇಕೆಂಬ ನಿಯಮವಿದೆ. ಈ ಮೃತ್ತಿಕಾಶೌಚದಿಂದ ದೇಹಶುದ್ಧಿಯು ಏರ್ಪಡುತ್ತದೆ. ಆದರೆ ಮನಃಶುದ್ಧಿಯಿಲ್ಲದವನಿಗೆ ಈ ಶುದ್ಧಿಯು ನಿಷ್ಫಲವಾಗುತ್ತದೆ. ಈ ಮನಃಶುದ್ಧಿ ಮತ್ತು ದೇಹಶುದ್ಧಿಯು ಎಲ್ಲಾ ಕರ್ಮಗಳ ಅನುಷ್ಠಾನಕ್ಕೂ ಮೂಲವೆನಿಸುತ್ತದೆ.

## ಶರೀರದಲ್ಲಿರುವ ಇತರ ಮಲಗಳು

ಹೊಕ್ಕಳಿಗಿಂತ ಮೇಲ್ಭಾಗದಲ್ಲಿರುವ ಕಣ್ಣು ಕಿವಿ ಮೂಗು ಬಾಯಿ ಎಂಬ ಇಂದ್ರಿಯದ್ವಾರಗಳು ಸ್ವಭಾವದಿಂದ ಶುದ್ಧವಾಗಿರುತ್ತವೆ. ಕೆಳಗಿರುವ ಮಲಮೂತ್ರ ವಿಸರ್ಜನದ್ವಾರಗಳು ಸ್ವಭಾವದಿಂದ ಅಶುದ್ಧವಾಗಿರುತ್ತವೆ. ಈ ನವದ್ವಾರಗಳಿಂದಲೂ ರೋಮರಂಧ್ರಗಳಿಂದಲೂ ಹನ್ನೆರಡು ವಿಧವಾದ ಅಶುದ್ಧ ಪದಾರ್ಥಗಳು ಹೊರಗೆ ಬರುತ್ತವೆ. (1) ವಸಾ ಅಂದರೆ ಶರೀರದಲ್ಲಿರುವ ಎಣ್ಣೆ (2) ಶುಕ್ರ ಎಂದರೆ ಪುರುಷನ ಗುಹ್ಯೇಂದ್ರಿಯದಿಂದ ಬರುವ ರೇತಸ್ಸು (3) ರಕ್ತ (4) ಮಜ್ಜಾ ಅಂದರೆ ತಲೆಯಲ್ಲಿರುವ ಮೇದಸ್ಸು (5) ಮೂತ್ರ (6) ಗುದದ್ವಾರದಿಂದ ಬರುವ ಮಲ (7) ಕಿವಿಯ ಮಲ (8) ಬಾಯಿಯಲ್ಲಿ ಹಲ್ಲಿನಲ್ಲಿರುವ ಮಲ (9) ಶೀಂಬಳ (10) ಕಣ್ಣಿನ ಮಲ (11) ಕಫ (12) ಬೆವರು ಈ ಹನ್ನೆರಡು ವಸ್ತುಗಳಲ್ಲಿ ಮೊದಲನೆಯ ಆರು ಮಲಗಳಿಂದ ಶುದ್ಧಿಯಾಗುವುದಕ್ಕೆ ಬರೇ ನೀರಿನಿಂದ ತೊಳೆಯಬೇಕು. ಇನ್ನೊಬ್ಬರ ಎಲುಬು, ವಸಾ, ಮಲ, ಸ್ತ್ರೀಯರ ಶೋಣಿತ, ಮೂತ್ರ, ರೇತಸ್ಸು, ರಕ್ತ, ಮಜ್ಜಾ ಇವುಗಳನ್ನು ಮುಟ್ಟಿದರೆ ಬಟ್ಟೆಗಳನ್ನು ಒದ್ದೆ ಮಾಡಿ ಸ್ನಾನ ಮಾಡಬೇಕು. ಆ ಮೇಲೆ ಆಚಮನವನ್ನು ಮಾಡಬೇಕು. ಅದರಿಂದ ಶುದ್ಧಿಯು ಏರ್ಪಡುತ್ತದೆ. ತನ್ನ ಎಲುಬು ಮುಂತಾದ ಅದೇ ವಸ್ತುಗಳನ್ನು ಮುಟ್ಟಿದರೆ ಕೈಯನ್ನು ತೊಳೆದುಕೊಂಡರೆ ಶುದ್ಧಿಯಾಗುತ್ತದೆ.

ಈ ಮೃತ್ತಿಕಾಶೌಚದಲ್ಲಿ ಮಣ್ಣನ್ನೇ ಉಪಯೋಗಿಸಬೇಕೆಂದೂ, ದುರ್ಗಂಧವು ಸಂಪೂರ್ಣವಾಗಿ ತೊಲಗಿ ಹೋಗಬೇಕೆಂದೂ ಕ್ಲೃಪ್ತವಾದ ಮೃತ್ತಿಕಾಶೌಚದ ಸಂಖ್ಯೆಯು ಮುಗಿದ ಮೇಲೆಯೂ ದುರ್ಗಂಧವು ಉಳಿದರೆ ದುರ್ಗಂಧವು ಹೋಗುವವರೆಗೆ ಮೃತ್ತಿಕಾಶೌಚವನ್ನು ಮಾಡಲೇಬೇಕೆಂದೂ ಶಾಸ್ತ್ರವು ತಿಳಿಸುತ್ತದೆ. ಮಣ್ಣಿನಿಂದ ತೊಳೆದರೆ ಮಲವು ದೂರವಾಗುವುದಲ್ಲದೆ ಅದರ ದುರ್ಗಂಧವು ಬೇಗನೆ ದೂರವಾಗುತ್ತದೆ. ಈಗಿನ ಕಾಲದವರು ನಾಗರಿಕ ವ್ಯವಹಾರಗಳ ಬಲೆಗೆ ಬಿದ್ದು ಸಾಬೂನಿನಿಂದ ಕೈ ಮತ್ತು ಕಾಲುಗಳನ್ನು ತೊಳೆಯುತ್ತಾರೆ. ಅದರಿಂದ ಕೈಯಲ್ಲಿ ದುರ್ಗಂಧವು ಇದ್ದರೂ ಸಾಬೂನಿನ ವಾಸನೆಯಿಂದ ತಿಳಿಯುವುದಿಲ್ಲ. ಆದ್ದರಿಂದ ಸಾಬೂನಿನಿಂದ ತೊಳೆದರೆ ಕೈಯಲ್ಲಿರುವ ದುರ್ಗಂಧವು ಸಂಪೂರ್ಣವಾಗಿ ಹೋಯಿತೆಂದು ಹೇಳುವಂತಿಲ್ಲ. ಸಾಬೂನಿನಲ್ಲಿ ಚರ್ಬಿ ಮುಂತಾದ ಅಶುದ್ಧ ವಸ್ತುಗಳು ಸೇರಿದ್ದರೆ ಅದರಿಂದ ತೊಳೆಯುವುದರಿಂದ ಶುದ್ಧಿಯೂ ಆಗುವುದಿಲ್ಲ.

## ದಂತಧಾವನವಿಧಿ

(8) ಯಥಾವಿಧಿ ಧೌತದಂತಃ (ಶಾಸ್ತ್ರೋಕ್ತ ಪ್ರಕಾರವಾಗಿ ಹಲ್ಲುಗಳನ್ನು ಶುದ್ಧಪಡಿಸಿಕೊಂಡವನಾಗಿ) ಮುಖವು ದುರ್ಗಂಧವಾದರೆ ದೇಹವು ಅಶುದ್ಧವಾಗುತ್ತದೆ. ಅದರ ಶುದ್ಧಿಗಾಗಿ ಹಲ್ಲುಗಳನ್ನು ಉಜ್ಜಬೇಕು. ಅದರ ವಿಧಿಯನ್ನು ಕೆಳಗೆ ಕೊಟ್ಟಿರುತ್ತೇವೆ.

ಕೈಗಳನ್ನೂ ಕಾಲುಗಳನ್ನೂ ಬಾಯಿಯನ್ನೂ ತೊಳೆದುಕೊಳ್ಳಬೇಕು. ಎರಡು ಪಾದಗಳನ್ನು ಕೆಳಗೆ ಊರಿ ಕೋಳಿಯು ಕುಳಿತಂತೆ ಈಶಾನ್ಯ ಅಥವಾ ಪೂರ್ವದಿಕ್ಕಿಗೆ ಅಭಿಮುಖವಾಗಿ ಕುಳಿತುಕೊಳ್ಳಬೇಕು. ಬಲಗೈಯನ್ನು ಮೊಣಕಾಲುಗಳ ಮಧ್ಯದಲ್ಲಿಟ್ಟುಕೊಳ್ಳಬೇಕು. ಬ್ರಾಹ್ಮಣನು 12 ಅಂಗುಲ, ಕ್ಷತ್ರಿಯನು 9 ಅಂಗುಲ, ವೈಶ್ಯನು 6 ಅಂಗುಲ, ಶೂದ್ರನು 4 ಅಂಗುಲ ಉದ್ದವಾಗಿಯೂ ಕಿರುಬೆರಳಿನಷ್ಟು ಅಗಲವಾಗಿಯೂ ಇರುವ ದಂತಕಾಷ್ಠವನ್ನು ಕೈಯಲ್ಲಿ ತೆಗೆದುಕೊಂಡು ಅದನ್ನು ಚೆನ್ನಾಗಿ ತೊಳೆಯಬೇಕು. ಅದರಲ್ಲಿ ಒಂದು ಭಾಗದ ಅಗ್ರಭಾಗವನ್ನು ಚಚ್ಚಿ ಕೂರ್ಚದಂತೆ ಮಾಡಿಕೊಂಡು ಆ ಭಾಗದಿಂದ ಹಲ್ಲುಗಳನ್ನು ಮೌನವಾಗಿ ಬೆಳಿಗ್ಗೆ ಸ್ನಾನಕ್ಕಿಂತ ಪೂರ್ವದಲ್ಲಿ ನೀರಿರುವ ಸ್ಥಳಕ್ಕಿಂತ ಸ್ವಲ್ಪ ದೂರದಲ್ಲಿ ಉಜ್ಜಬೇಕು. ಹಲ್ಲುಗಳು ಸೂಕ್ಷ್ಮವಾಗಿದ್ದರೆ ಸೂಕ್ಷ್ಮವಾದ ಮಧ್ಯಮವಾಗಿದ್ದರೆ ಮಧ್ಯಮವಾದ ಸ್ಥೂಲವಾಗಿದ್ದರೆ ಸ್ಥೂಲವಾದ ಕಾಷ್ಠವನ್ನು ಉಪಯೋಗಿಸಬೇಕು. ಈ ಕಾಷ್ಠಗಳಿಂದ ಹಲ್ಲುಗಳನ್ನು ಉಜ್ಜಿ ಮುಗಿದ ಮೇಲೆ ಅವುಗಳನ್ನು ಪುನಃ ತೊಳೆದು ಬಿಸಾಡಬೇಕು. ಉಜ್ಜುವಾಗ ಈ ಕೆಳಗೆ ಬರೆದಿರುವ ಮಂತ್ರವನ್ನು ಜಪಿಸಬೇಕು.

ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ |
ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ||

**ಅರ್ಥ** - 'ಓ ವನಸ್ಪತಿ ದೇವತೆಯೇ, ಆಯುಸ್ಸು, ಬಲ, ಕೀರ್ತಿ, ತೇಜಸ್ಸು, ಸಂತತಿ, ಪಶುಗಳು, ಹಣ, ವೇದಾದಿ ಶಾಸ್ತ್ರಗಳು, ದಿವ್ಯಜ್ಞಾನ, ಬುದ್ಧಿಶಕ್ತಿ ಇವುಗಳನ್ನು ನೀನು ನಮ್ಮೆಲ್ಲರಿಗೂ ಕೊಡು'

ಹೀಗೆ ಹಲ್ಲುಗಳನ್ನು ಉಜ್ಜಿ ನಾಲಿಗೆಯಲ್ಲಿರುವ ಅಗ್ರ ಎಂಬ ಮಲವನ್ನು ಸೂಕ್ಷ್ಮವಾದ ಕಡ್ಡಿಯಿಂದ ಕೆರೆದು ತೆಗೆಯಬೇಕು.

**ಗ್ರಾಹ್ಯವಾದ ದಂತಕಾಷ್ಠಗಳು** - ಹಸಿದಂತಕಾಷ್ಠಗಳಿಂದ ಹಲ್ಲುಗಳನ್ನು ಉಜ್ಜಬೇಕು. ಅದು ಸಿಗದಿದ್ದರೆ ಒಣಗಿದ ದಂತಕಾಷ್ಠಗಳಿಂದಲೂ ಉಜ್ಜಬಹುದು. ಕಹಿ, ಕಾರ, ಒಗರು ರಸಗಳಿಂದ ಯುಕ್ತವಾಗಿರುವ ಕಾಷ್ಠ, ಸುಗಂಧವುಳ್ಳ ಮತ್ತು ಮುಳ್ಳುಗಳುಳ್ಳ ಕಾಷ್ಠ, ಮತ್ತು ಹಾಲು ಇರುವ ಮರಗಳ ಕಾಷ್ಠ ಇವುಗಳು ಪ್ರಶಸ್ತವೆನಿಸುತ್ತವೆ. ಮಾವು, ಪುನ್ನಾಗ, ಬಿಲ್ವ, ಉತ್ತರಣೆ, ಬಾಗೆ, ಆಲ, ಎಕ್ಕೆ, ಕಗ್ಗಲಿ, ಮಲ್ಲಿಗೆ, ಪ್ರಿಯಂಗು ಮತ್ತು ಮುಳ್ಳಿನ ಗಿಡಗಳ ಕಾಷ್ಠಗಳನ್ನು ಉಪಯೋಗಿಸಬೇಕು. ದಂತಕಾಷ್ಠಗಳಿಂದ ದಂತಧಾವನವು ನಿಷಿದ್ಧವಾದ ದಿನಗಳಲ್ಲಿ ಈ ಮರಗಳ ಎಲೆಗಳಿಂದ ಅಥವಾ ನೀರಿನಿಂದ ಹಲ್ಲುಗಳನ್ನು ಉಜ್ಜಬೇಕು.

**ದಂತಧಾವನದಲ್ಲಿ ನಿಷಿದ್ಧವಾದವುಗಳು** - ನೆಲ್ಲಿ, ದಾಸವಾಳ, ಹತ್ತಿ, ಪಲಾಶ, ಅಶೋಕ, ಬೂರುಗ, ಶಮೀ, ಶಾಂತಿ, ಗುಗ್ಗುಲ, ಅಡಿಕೆ, ಬಿದಿರು ಮುಂತಾದ ಗಿಡಗಳ ಕಾಷ್ಠಗಳಿಂದ ಹಲ್ಲುಗಳನ್ನು ಉಜ್ಜಬಾರದು. ಇಷ್ಟರವರೆಗೆ ನಾವು ತಿಳಿಯದ ಗಿಡದ ಕಾಷ್ಠವನ್ನೂ, ಎರಡಾಗಿ ಮುರಿದ ಕಾಷ್ಠವನ್ನೂ, ಸಿಪ್ಪೆಯಿಲ್ಲದಿರುವ ಕಾಷ್ಠವನ್ನೂ, ಗಂಟುಗಳುಳ್ಳ ಕಾಷ್ಠವನ್ನೂ, ತುದಿಭಾಗವು ಒಣಗಿರುವ ಕಾಷ್ಠವನ್ನೂ ಉಪಯೋಗಿಸಬಾರದು. ಇಟ್ಟಿಗೆ, ಮಣ್ಣು, ಕಲ್ಲು, ಕಿರುಬೆರಳು, ನಡುಬೆರಳು, ತೋರ್ಬೆರಳು, ಹುಲ್ಲು, ಎಲೆ, ನೀರು ಇವುಗಳಿಂದ ಹಲ್ಲನ್ನು ಉಜ್ಜಬಾರದು.

**ದಂತಧಾವನಕ್ಕೆ ನಿಷಿದ್ಧ ದಿನಗಳು** - ಪಾಡ್ಯ, ಚತುರ್ಥೀ, ಷಷ್ಠೀ, ಅಷ್ಟಮೀ, ನವಮೀ, ಏಕಾದಶೀ, ದ್ವಾದಶೀ, ಚತುರ್ದಶೀ, ಹುಣ್ಣಿಮೆ, ಅಮಾವಾಸ್ಯಾ ತಿಥಿಗಳು, ಉಪವಾಸ ದಿನಗಳು, ರವಿವಾರ, ಕುಜವಾರ, ಶುಕ್ರವಾರ, ಶನಿವಾರಗಳು, ವ್ಯತೀಪಾತಯೋಗ, ಶ್ರಾದ್ಧದಿನ, ಗ್ರಹಣದಿನ, ಭರಣೀ, ಕೃತ್ತಿಕಾ, ಆರ್ದ್ರಾ, ಆಶ್ಲೇಷಾ, ವಿಶಾಖಾ ನಕ್ಷತ್ರಗಳು, ಜನ್ಮನಕ್ಷತ್ರ, ಅದರಿಂದ ಹತ್ತನೆಯ ಮತ್ತು ಹತ್ತೊಂಭತ್ತನೆಯ ನಕ್ಷತ್ರಗಳು, ವ್ರತದಿನಗಳು, ಯಜ್ಞದೀಕ್ಷಾಸ್ವೀಕಾರ ಕಾಲ, ಮಧ್ಯಾಹ್ನ ಸ್ನಾನಕಾಲ, ವಿಶೇಷನಿಯಮಸ್ವೀಕಾರ ಕಾಲ, ಗಂಡನು ಊರಿನಲ್ಲಿಲ್ಲದಿರುವ ಕಾಲ, ಸಾಯಂಕಾಲ, ಸೂರ್ಯ ಸಂಕ್ರಾತಿ ದಿನಗಳು ಇವುಗಳೆಲ್ಲವೂ ದಂತಧಾವನಕ್ಕೆ ನಿಷೇಧಿಸಲ್ಪಟ್ಟಿವೆ. ವಿಧವಾ, ಬ್ರಹ್ಮಚಾರಿ ಮತ್ತು ಕನ್ಯೆಯರು ದಂತಕಾಷ್ಠದಿಂದ ಹಲ್ಲುಗಳನ್ನು ಉಜ್ಜಬಾರದು. ಮಾವಿನ ಎಲೆ ಮುಂತಾದ ಎಲೆಗಳಿಂದ ಉಜ್ಜ ಬೇಕು.

**ದಂತಧಾವನಕ್ಕೆ ನಿಷಿದ್ಧ ಸ್ಥಳ ಮತ್ತು ವಸ್ತುಗಳು** - ನದೀ, ದೇವಾಲಯ, ದನದ ಕೊಟ್ಟಿಗೆ, ಸ್ಮಶಾನ, ನೀರಿನ ಮಧ್ಯ, ಯೋಗಸ್ಥಾನ ಶುದ್ಧವಾದ ಇತರ ಸ್ಥಳಗಳು ಅತ್ತಿ ಮುಂತಾದ ಯಜ್ಞೋಪಯುಕ್ತ ಮರಗಳು ಮತ್ತು ಕೃಷ್ಣಾಜಿನ, ಹುಲಿಯ ಚರ್ಮ, ದರ್ಭಾಸನ ಮುಂತಾದ ಪವಿತ್ರ ಆಸನಗಳು ಇವುಗಳಲ್ಲಿ ಕುಳಿತು ಮಾಡಬಾರದು. ತಲೆಯಲ್ಲಿ ಎಣ್ಣೆಯನ್ನು ಹಚ್ಚಿಕೊಂಡು ಮಾಡಬಾರದು. ಹನ್ನೆರಡು ಅಂಗುಲಕ್ಕಿಂತ ಉದ್ದವಾದ ಕಾಷ್ಠಗಳಿಂದ ಮಾಡಬಾರದು.

**ಕಾಷ್ಠವಿಶೇಷದಿಂದ ವಿಶೇಷ ಫಲ** - ವಜ್ರಮರದ ಕಾಷ್ಠದಿಂದ ಧೈರ್ಯವೃದ್ಧಿ, ಆಲದಮರದ ಕಾಷ್ಠದಿಂದ ತೇಜೋವೃದ್ಧಿ, ಅತ್ತಿಯ ಕಾಷ್ಠದಿಂದ ವಾಕ್ಸಿದ್ಧಿ, ಕರಂಜಕಾಷ್ಠದಿಂದ ಯುದ್ಧದಲ್ಲಿ ಜಯ, ಅಶ್ವತ್ಥಕಾಷ್ಠದಿಂದ ಸಂಪತ್ತು, ಬೋರೆ ಮರದ ಕಾಷ್ಠದಿಂದ ಮಧುರಸ್ವರ, ಕಗ್ಗಲಿ ಮರದ ಕಾಷ್ಠದಿಂದ ಸುಗಂಧ, ಬಿಲ್ವಕಾಷ್ಠದಿಂದ ಹಣ, ಉತ್ತರಣೆ ಕಾಷ್ಠದಿಂದ ಸೌಭಾಗ್ಯ,

ಧೈರ್ಯ, ಬುದ್ಧಿ ಶಕ್ತಿ ಮುಂತಾದ ಎಲ್ಲಾ ಗುಣಗಳು, ಮತ್ತಿ ಮರದ ಕಾಷ್ಠದಿಂದ ಉತ್ತಮ ಸಂಪತ್ತು, ಮಾವಿನ ಕಾಷ್ಠದಿಂದ ಆರೋಗ್ಯ, ಎಕ್ಕೆಯ ಗಿಡದ ಕಾಷ್ಠದಿಂದ ರೋಗ ಪರಿಹಾರ ಮುಂತಾದ ಫಲಗಳು ಏರ್ಪಡುತ್ತವೆ. ಮೇಲೆ ಹಲ್ಲುಗಳನ್ನು ಉಜ್ಜುವುದಕ್ಕಾಗಿ ಹೇಳಿರುವ ಮರಗಳ ಎಲೆಗಳಿಂದಲೂ ಹಲ್ಲುಗಳನ್ನು ಉಜ್ಜಬಹುದು.

## ಗಂಡೂಷವಿಧಿ

(9) '**ಧೌತದಂತಃ**' ಎಂದು ಹೇಳಿದ್ದರಿಂದಲೇ ಹಲ್ಲುಗಳನ್ನು ಉಜ್ಜಿದ ಕೂಡಲೇ ಬಾಯಿಯನ್ನು ಶುದ್ಧಿ ಪಡಿಸುವುದಕ್ಕಾಗಿ ಬಾಯಿಯನ್ನು ಮುಕ್ಕಳಿಸಬೇಕೆಂದು ಶ್ರೀಮಧ್ವಾಚಾರ್ಯರು ಸೂಚಿಸಿದ್ದಾರೆ. ದುರ್ವಾಸನೆಯಿಂದ ಯುಕ್ತವಾದ ಬಾಯಿಯನ್ನು ಶುದ್ಧಪಡಿಸುವುದಕ್ಕಾಗಿ ಹಲ್ಲನ್ನು ಉಜ್ಜಿದ ಮೇಲೆ ಬಾಯಿ ಮುಕ್ಕಳಿಸದಿದ್ದರೆ ಹಲ್ಲುಗಳನ್ನು ಉಜ್ಜಿಯೂ ಫಲವಿಲ್ಲವಲ್ಲವೇ? ಮೂತ್ರವಿಸರ್ಜನೆಯನ್ನು ಮಾಡಿದವನು 4 ಸಲ, ಮಲ ವಿಸರ್ಜನೆ ಮಾಡಿದವನು 8 ಸಲ, ಭೋಜನಾನಂತರದಲ್ಲಿ 12 ಸಲ, ರೇತಸ್ಸು ಸ್ಖಲನವಾದರೆ ಹದಿನಾರು ಸಲ ಬಾಯಿಯನ್ನು ಶುದ್ಧವಾದ ಜಲದಿಂದ ತುಂಬಿ ಮುಕ್ಕಳಿಸಬೇಕು. ಅನಂತರದಲ್ಲಿ ಎರಡು ಕೈಗಳನ್ನು ಮಣಿಗಂಟಿನವರೆಗೂ, ಕಾಲುಗಳನ್ನು ಮೊಣಕಾಲುಗಳವರೆಗೂ ತೊಳೆಯಬೇಕು.

ಹಲ್ಲುಗಳನ್ನೂ ಸಹ 'ಬ್ರಷ್'ಗಳಿಂದಲೂ 'ಕ್ರೀಂ'ಗಳಿಂದಲೂ ತೊಳೆಯುವ ಸಂಪ್ರದಾಯವು ಈಗ ಬಂದಿರುತ್ತದೆ. 'ಕ್ರೀಂ'ನಲ್ಲಿ ಅಶುದ್ಧವಾದ ಪದಾರ್ಥವಿದ್ದರೆ ಅದರಿಂದ ತೊಳೆದದ್ದರಿಂದ ದಂತಗಳೂ ಬಾಯಿಯೂ ಶುದ್ಧವಾಗುವುದಿಲ್ಲ. ಅಶುದ್ಧವೇ ಆಗುತ್ತವೆ. ಅದರಲ್ಲಿ ಅಶುದ್ಧವಾದ ವಸ್ತುಗಳು ಇಲ್ಲದಿದ್ದರೂ ಸ್ವಭಾವದಿಂದಲೇ ಶುದ್ಧವೂ, ಹಲ್ಲುಗಳ ಪೋಷಣೆಗೆ ಉಪಯುಕ್ತವೂ, ಶಾಸ್ತ್ರವಿಹಿತವೂ ಆಗಿರುವ ದಂತಕಾಷ್ಠಗಳಿಂದ ಬರುವ ಶುದ್ಧಿಯು ಅದರಿಂದ ಖಂಡಿತವಾಗಿಯೂ ಬರುವುದಿಲ್ಲ.

## ಆಚಮನವಿಧಿ

(10) **ಯಥಾವಿಧಿ ಸಮಾಚಮ್ಯ** (ಶಾಸ್ತ್ರೋಕ್ತವಿಧಿಯಿಂದ ಚೆನ್ನಾಗಿ ಆಚಮನವನ್ನು ಮಾಡಿ) '**ಸಮಾಚಮ್ಯ**' ಎಂಬ ಪದದಲ್ಲಿರುವ 'ಸಮ್' ಎಂಬ ಉಪಸರ್ಗದಿಂದ ಶ್ರೀಮಧ್ವಾಚಾರ್ಯರು 'ಆಚಮನವು ಶಾಸ್ತ್ರಸಮ್ಮತವಾಗಿರಬೇಕು' ಎಂದು ಸೂಚಿಸಿರುತ್ತಾರೆ. ಅದೇ ಅಂಶವನ್ನು 'ಯಥಾವಿಧಿ' ಎಂಬ ಪದದಿಂದ ವಿವರಿಸಿರುತ್ತಾರೆ. ಈ ಅಂಶವನ್ನು ಈಗ ಸ್ಪಷ್ಟಪಡಿಸುತ್ತೇವೆ.

**ಆಚಮನಪೂರ್ವಾಂಗಗಳು** - ಆಯಾಯಾ ಕಾರ್ಯಗಳನ್ನು ಮಾಡುವುದಕ್ಕೆ ಪೂರ್ವದಲ್ಲಿ ಮಾಡಬೇಕಾದ ದೇಹಶುದ್ಧಿಯನ್ನು ಮಾಡಿಕೊಳ್ಳಬೇಕು. ಕೈಗಳಲ್ಲಿ ಮಣಿಗಂಟುಗಳಿಗಿಂತ ಕೆಳಗಿನ ಎಲ್ಲಾ ಭಾಗವನ್ನೂ, ಕಾಲುಗಳಲ್ಲಿ ಮೊಣಕಾಲುಗಳಿಗಿಂತ ಕೆಳಗಿನ ಎಲ್ಲ ಭಾಗವನ್ನೂ, ಮುಖವನ್ನೂ ಚೆನ್ನಾಗಿ ತೊಳೆದುಕೊಳ್ಳಬೇಕು. ಯಜ್ಞೋಪವೀತವನ್ನು ಬಲಕ್ಕೆ ಹಾಕಿಕೊಳ್ಳಬೇಕು. ಒಗೆದಿರುವ ಮತ್ತು ಶುದ್ಧವಾದ ಬಟ್ಟೆಯನ್ನು ಉಟ್ಟುಕೊಳ್ಳಬೇಕು. ಈ ಬಟ್ಟೆಯೊಳಗೆ ಕೌಪೀನ ಚಡ್ಡಿ ಮುಂತಾದ ಇನ್ನೊಂದು ವಸ್ತ್ರವು ಇರಬಾರದು. ಕಚ್ಚೆಯನ್ನು ಹಾಕಿಕೊಳ್ಳಬೇಕು. ಯಜ್ಞೋಪವೀತದಂತೆ ಮೇಲಿನ ಬಟ್ಟೆಯನ್ನು ಹೊದ್ದುಕೊಳ್ಳಬೇಕು. ಹೊದ್ದುಕೊಳ್ಳುವ ಬಟ್ಟೆಯಿಲ್ಲದಿದ್ದರೆ ಅದಕ್ಕೆ ಬದಲಾಗಿ ಒಂದು ಯಜ್ಞೋಪವೀತವನ್ನು ಅಧಿಕವಾಗಿ ಧರಿಸಬೇಕು. ಅಥವಾ ನೇಪಾಲದೇಶದ ಕಂಬಲವನ್ನು ಉಟ್ಟುಕೊಳ್ಳಬೇಕು. ಅಥವಾ ಹುಲಿಯ ಚರ್ಮ, ಜಿಂಕೆಯ ಚರ್ಮ, ನೂಲುಗಳು ಈ ಮೂರರಲ್ಲಿ ಯಾವುದಾದರೊಂದರಿಂದ ನಿರ್ಮಿತವಾದ ಯೋಗಪಟ್ಟ ಅಂದರೆ ನಾಲ್ಕು ಅಂಗುಲ ಅಗಲ ಯಜ್ಞೋಪವೀತದಷ್ಟು ಉದ್ದವಾಗಿರುವ, ವರ್ತುಲಾಕಾರವಾದ ವಸ್ತುವನ್ನು ಬೆನ್ನಿಗೂ, ಮೊಣಕಾಲುಗಳಿಗೂ ಸೇರಿಸಿ ಧರಿಸಬೇಕು. ತಲೆಯ ಕೂದಲನ್ನು ಗಂಟು ಹಾಕಿಕೊಳ್ಳಬೇಕು. ಪಾದದ ಕೆಳಗೆ ಮಣೆ ಮುಂತಾದ ಆಸನವು ಇರಬಾರದು. ನೆಲದಲ್ಲಿ ಕಾಲನ್ನು ಊರಿ ಕೋಳಿಯು ಕುಳಿತಂತೆ ಕೂಡಬೇಕು. ಉತ್ತರ ಈಶಾನ್ಯ ಅಥವಾ ಪೂರ್ವದಿಕ್ಕಿಗೆ ಅಭಿಮುಖವಾಗಿ ಕೂಡಬೇಕು. ದಕ್ಷಿಣದಿಕ್ಕಿಗೆ ಅಭಿಮುಖವಾಗಿ ಕುಳಿತು ಆಚಮನವನ್ನು ಮಾಡಿದರೆ ಪುನಃ ಸ್ನಾನವನ್ನು ಮಾಡಬೇಕು.

ಪಶ್ಚಿಮದಿಕ್ಕನ್ನು ನೋಡುತ್ತಾ ಮಾಡಿದರೆ ಪುನಃ ಆಚಮನವನ್ನು ಮಾಡಬೇಕು. ಊಟ ಮಾಡಿ ಮುಗಿದ ಮೇಲೆ ಮಾಡುವ ಆಚಮನವನ್ನು ಮಾತ್ರ ಆಸನದಲ್ಲಿ ಕಾಲುಗಳನ್ನು ಇಟ್ಟುಕೊಂಡು ಮಾಡಬೇಕು. ಬೇರೆ ಸಮಯದಲ್ಲಿ ಮಾಡಬಾರದು. ಎರಡು ಮೊಣಕಾಲುಗಳ ಮಧ್ಯದಲ್ಲಿ ಕೈಗಳನ್ನು ಇಟ್ಟುಕೊಳ್ಳಬೇಕು. ರುಮಾಲನ್ನು ಸುತ್ತಿಕೊಳ್ಳಬಾರದು. ಕುತ್ತಿಗೆಗೆ ಸುತ್ತಿಕೊಳ್ಳಬಾರದು. ಉಟ್ಟುಕೊಂಡಿರುವ ಬಟ್ಟೆಯ ಒಂದು ಭಾಗವನ್ನು ಮೈಮೇಲೆ ಹೊದ್ದುಕೊಳ್ಳಬಾರದು.

ಎರಡು ಕೈಗಳ ಅನಾಮಿಕಾ ಅಂದರೆ ಉಂಗುರದ ಬೆರಳುಗಳಲ್ಲಿ ಎರಡೆರಡು ದರ್ಭೆಗಳನ್ನು ಸುತ್ತಿಸಿಕೊಳ್ಳಬೇಕು. ಈ ದರ್ಭೆಗಳಿಗೆ ಪವಿತ್ರಗಂಟನ್ನು ಹಾಕಿರಬಾರದು. ಇದು ಗಂಟಿಲ್ಲದ ಪವಿತ್ರವೆನಿಸುತ್ತದೆ. ಈ ಪವಿತ್ರವು ಆಚಮನವನ್ನು ಮಾಡಿದರೂ ಅಶುದ್ಧವಾಗುವುದಿಲ್ಲ. ಹಾಗೆ ಗಂಟನ್ನು ಹಾಕಿದ್ದರೆ ಆಚಮನವನ್ನು ಮಾಡಿದ ಕೂಡಲೇ ಅಶುದ್ಧವಾಗುತ್ತದೆ. ಅದಕ್ಕಾಗಿ ಕೂಡಲೇ ಅದನ್ನು ಬಿಟ್ಟು ಬೇರೆ ಪವಿತ್ರವನ್ನು ಹಾಕಿಕೊಳ್ಳಬೇಕು. ಎಂಭತ್ತು ಗುಲಗಂಜಿ ತೂಕಕ್ಕಿಂತ ಹೆಚ್ಚಿನ ತೂಕವುಳ್ಳ ಬಂಗಾರದಿಂದ ಮಾಡಿರುವ ಪವಿತ್ರ ಉಂಗುರವನ್ನೂ ಧರಿಸಬಹುದು. ಇದು ಯಾವಾಗಲೂ ಅಶುದ್ಧವಾಗುವುದಿಲ್ಲ. ಇದೇ ರೀತಿಯಲ್ಲಿ ಬೆಳ್ಳಿಯಿಂದ ಮಾಡಿದ ಉಂಗುರವೂ ಯಾವಾಗಲೂ ಪರಿಶುದ್ಧವಾಗಿರುತ್ತದೆ. ಎರಡು ಕೈಗಳಲ್ಲಿ ಪವಿತ್ರವನ್ನು ಧರಿಸಿ ಆಚಮನವನ್ನು ಮಾಡಿದರೆ ಸೋಮಪಾನದ ಫಲವು ಬರುತ್ತದೆ. ಹಾಗೆ ಎರಡು ಕೈಗಳಲ್ಲಿ ಪವಿತ್ರವನ್ನು ಧರಿಸಲು ಸಾಧ್ಯವಾಗದಿದ್ದರೆ ಬಲಗೈಯಲ್ಲಿ ಮಾತ್ರ ಧರಿಸಬೇಕು. ಎಡಗೈಯಲ್ಲಿ ಧರಿಸಬಾರದು.

**ಆಚಮನಕ್ಕೆ ಉಪಯುಕ್ತವಾದ ನೀರು -** ಒಂದು ಪಾತ್ರದಲ್ಲಿ ಆಚಮನಕ್ಕಾಗಿ ನೀರನ್ನು ಇಟ್ಟುಕೊಳ್ಳಬೇಕು. ಆ ನೀರಿನಲ್ಲಿ ನೊರೆ, ಗುಳ್ಳೆಗಳು, ಕಲ್ಮಷ ಮತ್ತು ಮಣ್ಣು ಇರಬಾರದು. ನೀರಿನ ಸ್ವಾಭಾವಿಕವಾದ ಮಾಧುರ್ಯ ರಸವನ್ನೂ ಶುಭ್ರವರ್ಣವನ್ನೂ ಬಿಟ್ಟು ಉಪ್ಪು, ಸಿಹಿ ಮುಂತಾದ ಇತರ ರಸಗಳೂ ಇತರ ಬಣ್ಣಗಳೂ ಅದರಲ್ಲಿರಬಾರದು. ಒಂದು ಗೋವಿನ ತೃಪ್ತಿಗೆ ಬೇಕಾದಷ್ಟೇ ನೀರಿನಿಂದ ಯುಕ್ತವಾಗಿರುವ ಚಿಕ್ಕ ಹಳ್ಳದ ನೀರಾಗಿರಬಾರದು. ಅಶುದ್ಧವಾಗಿರಬಾರದು. ಉಷ್ಣಜಲವನ್ನೇ ಕುಡಿಯಬೇಕೆಂಬ ನಿರ್ಬಂಧವುಳ್ಳ ರೋಗಿಗಳು ಮತ್ತು ಯಾವಾಗಲೂ ಬಿಸಿ ನೀರನ್ನೇ ಕುಡಿಯುತ್ತಿರುವವರು ಉಷ್ಣಜಲದಿಂದ ಆಚಮನವನನು ಮಾಡಬಹುದು. ಉಳಿದವರು ತಣ್ಣೀರನ್ನೇ ಉಪಯೋಗಿಸಬೇಕು. ವಸ್ತ್ರದಿಂದ ಶೋಧಿಸಲ್ಪಟ್ಟ ಮತ್ತು ಕಣ್ಣಿನಿಂದ ನೋಡಿ ಪರೀಕ್ಷಿಸಲ್ಪಟ್ಟ ನೀರಾಗಿರಬೇಕು. ರಾತ್ರಿಯಲ್ಲಿ ಈ ಪರೀಕ್ಷೆಯ ಅವಶ್ಯವಿಲ್ಲ. ಆಕಾಶದಿಂದ ಸುರಿಯುತ್ತಿರುವ ಮಳೆಯ ನೀರು ಮುಂತಾದವುಗಳನ್ನು ಬೇರೆ ಪಾತ್ರೆಯಲ್ಲಿ ಹಿಡಿದು ಆಚಮನವನ್ನು ಮಾಡಬೇಕು. ಒಡಕು ಮಡಿಕೆ ಮುಂತಾದವುಗಳ ರಂಧ್ರದಿಂದ ಬಂದಿರುವ ನೀರಾಗಿರಬಾರದು. ಹಳೆಯ ಅಂದರೆ ತುಂಬಿಟ್ಟ ನೀರಾಗಿರಬಾರದು. ಕ್ರಿಮಿಯುಕ್ತವಾಗಿರಬಾರದು. ಸುಗಂಧ ಅಥವಾ ದುರ್ಗಂಧಯುಕ್ತವಾಗಿರಬಾರದು. ದೇವರಿಗೆ ಅಭಿಷೇಕ ಮಾಡಿದ ತೀರ್ಥವಾಗಿರಬಾರದು. ಎಡಗೈಯಿಂದ ಧಾರೆಯಾಗಿ ನೀರನ್ನು ಸುರಿಸುತ್ತಾ ಬಲಗೈಯಿಂದ ಅದ್ದ ಹಿಡಿದು ತೆಗೆದು ಆಚಮನವನ್ನು ಮಾಡಬಾರದು. ಆ ನೀರಿಗೆ ಉಗುರು ತಗಲಿರಬಾರದು. ಹೋಮಶೇಷವಾದ ನೀರನ್ನು ಆಚಮನಕ್ಕೆ ಉಪಯೋಗಿಸಬಹುದು. ಕಾಲು ತೊಳೆಯುವುದು ಮುಂತಾದ ಹೀನಕಾರ್ಯಗಳಿಗೆ ಉಪಯೋಗಿಸಬಾರದು. ನದೀ ಸರೋವರ ಮುಂತಾದ ಸ್ಥಳಗಳಲ್ಲಿ ಬಲಗೈಯನ್ನು ನೀರಿಗೆ ಮುಳುಗಿಸಿ ನೀರನ್ನು ಆಡಿಸಿ ತೆಗೆದು ಆಚಮನವನ್ನು ಮಾಡಬೇಕು. ಪಾತ್ರೆಯಲ್ಲಿರುವ ನೀರಿನಲ್ಲಿ ಬಲಗೈಯನ್ನು ಮುಳುಗಿಸಿ ತೆಗೆದ ನೀರು ಆಚಮನಕ್ಕೆ ನಿಷಿದ್ಧವಾಗಿದೆ.

**ಆಚಮನದ ನೀರಿನ ಪ್ರಮಾಣ -** ಬಲಗೈಯ ಐದು ಬೆರಳುಗಳನ್ನು ಪಕ್ಕಪಕ್ಕದ ಬೆರಳುಗಳು ಅಂಟಿಕೊಳ್ಳುವಂತೆ ಜೋಡಿಸಬೇಕು. ಅಂಗುಷ್ಠವನ್ನು ನಡು ಬೆರಳಿನ ಬುಡಕ್ಕೆ ತಗುಲಿಸಿ, ಎಲ್ಲಾ ಬೆರಳುಗಳನ್ನೂ ಸ್ವಲ್ಪ ಬಗ್ಗಿಸಿ ಗೋವಿನ ಕಿವಿಯಂತೆ ಮಾಡಬೇಕು. ಎಡಗೈಯಿಂದ ಪಾತ್ರೆಯಲ್ಲಿರುವ ನೀರನ್ನು ಉದ್ಧರಣೆಯಿಂದ ತೆಗೆದು ಬಲಗೈಯಲ್ಲಿ ತುಂಬಬೇಕು. ಕಿರುಬೆರಳನ್ನೂ, ಅಂಗುಷ್ಠವನ್ನೂ ಬಿಡಿಸಿ ದೂರ ಮಾಡಬೇಕು. ಆಗ ಕೈಯಲ್ಲಿ ಉಳಿಯುವ ನೀರು 'ಮಾಷಮಗ್ನ' ಅಂದರೆ

'ಐದು ಗುಲಗಂಜಿ ತೂಕದ ಬಂಗಾರವನ್ನು ಒಂದು ಗುಳಿಗೆಯಾಗಿ ಮಾಡಿದಾಗ ಆ ಗುಳಿಗೆಯು ಮುಳುಗುವುದಕ್ಕೆ ಬೇಕಾದಷ್ಟು ನೀರು' ಎನಿಸುತ್ತದೆ. ಈ ನೀರು ಎದೆಯವರೆಗೆ ಹೋಗುತ್ತದೆ. ಅದರ ಮೇಲೆಯೂ ಹೋಗುವುದಿಲ್ಲ. ಅದರ ಹಿಂದೆಯೂ ನಿಲ್ಲುವುದಿಲ್ಲ. ಆದ್ದರಿಂದಲೇ ಇದನ್ನು 'ಹೃದಯಂಗಮ' ಅಂದರೆ ಎದೆಯವರೆಗೆ ಹೋಗುವ ನೀರು ಎಂದು ಹೇಳುತ್ತಾರೆ. ಬ್ರಾಹ್ಮಣನು ಆಚಮನಕಾಲದಲ್ಲಿ ಒಮ್ಮೊಮ್ಮೆ ನೀರನ್ನು ಕುಡಿಯುವಾಗ ಈ ಅಳತೆಯ ನೀರನ್ನು ಕುಡಿಯಬೇಕು. ಕ್ಷತ್ರಿಯನು ಕುತ್ತಿಗೆಯವರೆಗೆ ಹೋಗುವಷ್ಟು ಅಂದರೆ ಇದಕ್ಕೆ ಅರ್ಧದಷ್ಟು ನೀರನ್ನೂ ವೈಶ್ಯನು ಬಾಯಿ ಒದ್ದೆಯಾಗುವಷ್ಟು ಅಂದರೆ ಇದಕ್ಕೆ ಕಾಲು ಭಾಗದಷ್ಟು ನೀರನ್ನೂ, ಶೂದ್ರರು ಮತ್ತು ಸ್ತ್ರೀಯರ ಬಾಯಿಗೆ ಮುಟ್ಟುವಷ್ಟು ನೀರನ್ನೂ ಕುಡಿಯಬೇಕು.

**ಆಚಮನ ನೀರನ್ನು ಹಾಕುವುದಕ್ಕೆ ಉಪಯುಕ್ತವಾದ ತೀರ್ಥಗಳು** - ಅಂಗುಷ್ಠ ಮತ್ತು ದೇಶಿನೀ ಅಂದರೆ ತೋರ್ಬೆರಳು ಈ ಎರಡು ಬೆರಳುಗಳ ಬುಡಗಳ ಮಧ್ಯದಲ್ಲಿ ಅಂಗುಷ್ಠದಲ್ಲಿರುವ ಭಾಗವು ಪಿತೃತೀರ್ಥವೆನಿಸುತ್ತದೆ. ಅಂಗುಷ್ಠದ ಬುಡದಿಂದ ಉತ್ತರದಲ್ಲಿ ಅಂಗೈಯಲ್ಲಿರುವ ಪೂರ್ವಾಭಿಮುಖವಾದ ರೇಖೆಯು ಬ್ರಾಹ್ಮತೀರ್ಥವೆನಿಸುತ್ತದೆ. ಕನಿಷ್ಠಿಕಾ ಅಂದರೆ ಕಿರುಬೆರಳಿನ ಬುಡ ಮತ್ತು ಅಂಗೈಯ ಮಧ್ಯಭಾಗವು ಪ್ರಾಜಾಪತ್ಯ ತೀರ್ಥವೆನಿಸುತ್ತದೆ. ಎಲ್ಲಾ ಬೆರಳುಗಳ ತುದಿಯು ದೇವತೀರ್ಥವೆನಿಸುತ್ತದೆ. ಈ ನಾಲ್ಕು ತೀರ್ಥಗಳ ಮಧ್ಯದಲ್ಲಿ ಪಿತೃತೀರ್ಥವನ್ನು ಬಿಟ್ಟು ಉಳಿದ ಮೂರು ತೀರ್ಥಗಳಿರುವ ಸ್ಥಾನಗಳಲ್ಲಿ ನೀರನ್ನು ಹಾಕಬೇಕು. ಆ ನೀರನ್ನು ಆಚಮನದಲ್ಲಿ ಕುಡಿಯಬೇಕು.

**ವೈಷ್ಣವಾಚಮನ** - ಓಂ ಕೇಶವಾಯ ಸ್ವಾಹಾ, ಓಂ ನಾರಾಯಣಾಯ ಸ್ವಾಹಾ, ಓಂ ಮಾಧವಾಯ ಸ್ವಾಹಾ ಎಂಬ ಮೂರು ಮಂತ್ರಗಳಿಂದ ಮೇಲೆ ಹೇಳಿದಂತೆ ನೀರನ್ನು ಮೂರು ಸಲ ಕುಡಿಯಬೇಕು. ಈ ನೀರನ್ನು ಕುಡಿಯುವಾಗ ಎಡಗೈಯಿಂದ ನೀರನ್ನು ಮುಟ್ಟಿಕೊಂಡಿರಬೇಕು. ಆಗ ಈ ನೀರು ಮೈಮೇಲೆ ಬೀಳದಂತೆ ಸ್ವಲ್ಪ ಬಗ್ಗಿ ಕುಡಿಯಬೇಕು. ಕುಡಿಯುವಾಗ ಶಬ್ದವಾಗಬಾರದು. ನೀರನ್ನು ನೋಡುತ್ತಾ ಕುಡಿಯಬೇಕು. ಕೈಯಲ್ಲಿದ್ದ ನೀರನ್ನು ಒಮ್ಮೆಯೇ ಬಾಯಿಯಲ್ಲಿ ಹಾಕಿಕೊಳ್ಳಬೇಕು. ಆ ನೀರನ್ನು ಒಮ್ಮೆಯೇ ನುಂಗಬೇಕು. ಹೀಗೆ ಮೂರು ಸಲ ನೀರನ್ನು ಕುಡಿದ ಮೇಲೆ ಶರೀರದಲ್ಲಿರುವ ಬೇರೆ ಬೇರೆ ಅವಯವಗಳನ್ನು ಮುಂದೆ ಹೇಳುವ ಮಂತ್ರಗಳಿಂದ ಒದ್ದೆಯಾಗಿರುವ ಕೈಯಿಂದ ಮುಟ್ಟಬೇಕು. ಓಂ ಗೋವಿಂದಾಯ ನಮಃ, ಓಂ ವಿಷ್ಣವೇ ನಮಃ ಎಂಬ ಈ ಎರಡು ಮಂತ್ರಗಳಿಂದ ಕ್ರಮವಾಗಿ ಬಲಗೈಯಿಂದ ಎಡಗೈಯನ್ನೂ ಎಡಗೈಯಿಂದ ಬಲಗೈಯನ್ನೂ ತೊಳೆಯಬೇಕು. ಓಂ ಮಧುಸೂದನಾಯ ನಮಃ ಎಂಬ ಮಂತ್ರದಿಂದ ಅಂಗುಷ್ಠದ ಬುಡದಿಂದ ಮೇಲಿನ ಮತ್ತು ಕೆಳಗಿನ ತುಟಿಗಳನ್ನು ಒರೆಸಬೇಕು. ಓಂ ತ್ರಿವಿಕ್ರಮಾಯ ನಮಃ ಎಂಬ ಮಂತ್ರದಿಂದ ಎಲ್ಲಾ ಬೆರಳುಗಳನ್ನೂ ಒಟ್ಟುಗೂಡಿಸಿ ಅವುಗಳಿಂದ ರೋಮವಿಲ್ಲದಿರುವ ಎರಡು ಕೆನ್ನೆಗಳ ಭಾಗವನ್ನು ಮುಟ್ಟಬೇಕು. ಓಂ ವಾಮನಾಯ ನಮಃ, ಓಂ ಶ್ರೀಧರಾಯ ನಮಃ, ಓಂ ಹೃಷಿಕೇಶಾಯ ನಮಃ ಎಂಬ ಮೂರು ಮಂತ್ರಗಳಿಂದ ಕ್ರಮವಾಗಿ ಎಡಗೈಯನ್ನೂ, ಎರಡು ಕಾಲುಗಳನ್ನೂ, ತಲೆಯನ್ನೂ ಪ್ರೋಕ್ಷಿಸಬೇಕು. ಓಂ ಪದ್ಮನಾಭಾಯ ನಮಃ, ಓಂ ದಾಮೋದರಾಯ ನಮಃ ಎಂಬ ಎರಡು ಮಂತ್ರಗಳಿಂದ ಕ್ರಮವಾಗಿ ಬಲಮೂಗಿನ ರಂಧ್ರವನ್ನೂ, ಎಡಮೂಗಿನ ರಂಧ್ರವನ್ನೂ ಮುಟ್ಟಬೇಕು. ಓಂ ಸಂಕರ್ಷಣಾಯ ನಮಃ, ಓಂ ವಾಸುದೇವಾಯ ನಮಃ ಎಂಬ ಎರಡು ಮಂತ್ರಗಳಿಂದ ಅಂಗುಷ್ಠ ಮತ್ತು ಅನಾಮಿಕಾ ಬೆರಳುಗಳಿಂದ ಬಲಗಣ್ಣನ್ನೂ, ಎಡಗಣ್ಣನ್ನೂ ಕ್ರಮವಾಗಿ ಮುಟ್ಟಬೇಕು. ಓಂ ಪ್ರದ್ಯುಮ್ನಾಯ ನಮಃ, ಓಂ ಅನಿರುದ್ಧಾಯ ನಮಃ ಎಂಬ ಎರಡು ಮಂತ್ರಗಳಿಂದ ಕ್ರಮವಾಗಿ ಹಿಂದಿನಂತೆ ಎರಡು ಕಿವಿಗಳನ್ನು ಮುಟ್ಟಬೇಕು. ಓಂ ಪುರುಷೋತ್ತಮಾಯ ನಮಃ ಎಂಬ ಮಂತ್ರದಿಂದ ಅಂಗುಷ್ಠ ಮತ್ತು ತೋರ್ಬೆರಳುಗಳಿಂದ ಹೊಕ್ಕಳನ್ನು ಮುಟ್ಟಬೇಕು. ಓಂ ಅಧೋಕ್ಷಜಾಯ ನಮಃ, ಓಂ ನಾರಸಿಂಹಾಯ ನಮಃ ಎಂಬ ಎರಡು ಮಂತ್ರಗಳಿಂದ ಎದೆಯನ್ನೂ, ಓಂ ಅಚ್ಯುತಾಯ ನಮಃ, ಓಂ ಜನಾರ್ದನಾಯ ನಮಃ ಎಂಬ ಎರಡು ಮಂತ್ರಗಳಿಂದ ತಲೆಯನ್ನೂ ಮುಟ್ಟಬೇಕು. ಓಂ ಉಪೇಂದ್ರಾಯ ನಮಃ, ಓಂ ಹರಯೇ ನಮಃ ಎಂಬ

ಎರಡು ಮಂತ್ರಗಳಿಂದ ಕ್ರಮವಾಗಿ ಬಲಹೆಗಲನ್ನೂ ಎಡಹೆಗಲನ್ನೂ ಮುಟ್ಟಬೇಕು. ಓಂ ಉಪೇಂದ್ರಾಯ ನಮಃ ಎಂಬ ಮಂತ್ರವನ್ನು ಶ್ರೀಹರಿಯನ್ನು ಸ್ಮರಿಸುತ್ತಾ ಹೇಳಬೇಕು. ಇದು ವೈಷ್ಣವಾಚಮನವೆನಿಸುತ್ತದೆ.

ಆಚಮನ ಪ್ರಭೇದಗಳು - ಶ್ರೌತಾಚಮನ, ಸ್ಮಾರ್ತಾಚಮನ, ತಾಂತ್ರಿಕಾಚಮನ, ಪೌರಾಣಿಕಾಚಮನ ಎಂದು ಆಚಮನವು ನಾಲ್ಕು ವಿಧವಾಗಿದೆ. (1) 'ದಕ್ಷಿಣತ ಉಪವೀಯೋಪವಿಶ್ಯ ಹಸ್ತಾವವನಿಜ್ಯ ತ್ರಿರಾಚಾಮೇತ್, ದ್ವಿಃ ಪರಿಮೃಜ್ಯ ಸಕೃದುಪಸ್ಪೃಶ್ಯ' ಅಂದರೆ 'ಯಜ್ಞೋಪವೀತವನ್ನು ಬಲಕ್ಕೆ ಹಾಕಿಕೊಂಡು ಕುಳಿತುಕೊಂಡು ಎರಡು ಕೈಗಳನ್ನು ತೊಳೆದುಕೊಂಡು ಮೂರು ಸಲ ನೀರನ್ನು ಕುಡಿಯಬೇಕು. ಎರಡು ಸಲ ಒರೆಸಿ ಇಂದ್ರಿಯಗಳನ್ನು ಒಮ್ಮೊಮ್ಮೆ ಮುಟ್ಟಬೇಕು.' ಎಂದು ತೈತ್ತಿರೀಯಾರಣ್ಯಕ (2-11)ದಲ್ಲಿ ಹೇಳಿರುತ್ತದೆ.

ತ್ರಿರಾಚಾಮೇದಪಃ ಪೂರ್ವಂ ದ್ವಿಃ ಪ್ರಮೃಜ್ಯಾತ್ತತೋ ಮುಖಮ್ |
ಖಾನಿ ಚೈವ ಸ್ಪೃಶೇದದ್ಭಿರಾತ್ಮಾನಂ ಶಿರ ಏವ ಚ || (ಮನುಸ್ಮೃತಿ)

'ಮೊದಲು ಮೂರು ಸಲ ನೀರನ್ನು ಕುಡಿಯಬೇಕು. ಎರಡು ಸಲ ಮುಖವನ್ನು ನೀರಿನಿಂದ ಒರೆಸಬೇಕು. ಇಂದ್ರಿಯಗಳನ್ನು ನೀರಿನಿಂದ ಮುಟ್ಟಬೇಕು. ತನ್ನನ್ನೂ ತಲೆಯನ್ನೂ ಮುಟ್ಟಬೇಕು,' ಎಂದು ಮೇಲ್ಕಂಡ ಶ್ರುತಿಯ ಅಭಿಪ್ರಾಯವನ್ನು ಮನುವು ವಿವರಿಸಿದ್ದಾನೆ. ಹೀಗೆಯೇ ಬೇರೆ ಬೇರೆ ಮಹರ್ಷಿಗಳು ಮೇಲ್ಕಂಡ ವಾಕ್ಯದ ಅಭಿಪ್ರಾಯವನ್ನು ಬೇರೆ ಬೇರೆ ವಿಧವಾಗಿ ವಿವರಿಸಿದ್ದಾರೆ. ಈ ಶ್ರೌತಾಚಮನದಲ್ಲಿ ಮಂತ್ರಗಳನ್ನೂ ಬೇರೆ ಬೇರೆ ವಿಧವಾಗಿ ಹೇಳಿರುತ್ತಾರೆ (2) ಆಶ್ವಲಾಯನರು, ಶೌನಕರು, ಕಾತ್ಯಾಯನರು, ಗೋಭಿಲರು ಮುಂತಾದ ಮಹರ್ಷಿಗಳು ತಮ್ಮಿಂದ ರಚಿತವಾದ ಸ್ಮೃತಿಗಳಲ್ಲಿ ಈ ಆಚಮನವನ್ನು ಮಾಡುವ ವಿಷಯದಲ್ಲಿ ಬೇರೆ ಬೇರೆ ಕ್ರಮವನ್ನು ತಿಳಿಸಿದ್ದಾರೆ. ಇದು ಸ್ಮಾರ್ತಾಚಮನವೆನಿಸುತ್ತದೆ. (3) ಸ್ವತಂತ್ರತಂತ್ರ, ಕೌಲಾವಲೀತಂತ್ರ, ಭೈರವತಂತ್ರ ಮುಂತಾದ ತಂತ್ರಗ್ರಂಥಗಳಲ್ಲಿ ತಮ್ಮ ತಮ್ಮ ತಂತ್ರಗ್ರಂಥಗಳಲ್ಲಿ ಹೇಳಿರುವ ಕಾಲೀ ಮುಂತಾದ ಆರಾಧ್ಯದೇವತೆಗಳ ಹೆಸರುಗಳಿಂದ ಆಚಮನವನ್ನು ಮಾಡುವ ಕ್ರಮವು ಹೇಳಲ್ಪಟ್ಟಿದೆ. ಇದು ತಾಂತ್ರಿಕಾಚಮನವೆನಿಸುತ್ತದೆ. (4) ಪುರಾಣಗಳಲ್ಲಿ ಹೇಳಿದ ಆಚಮನವು ಪೌರಾಣಿಕಾಚಮನವೆನಿಸುತ್ತದೆ. ಇದನ್ನೇ ವೈಷ್ಣವಾಚಮನವೆಂದು ಶಾಸ್ತ್ರಕಾರರು ಹೇಳಿರುತ್ತಾರೆ.

ಈ ನಾಲ್ಕು ವಿಧವಾದ ಆಚಮನಗಳಲ್ಲಿ ತಾಂತ್ರಿಕಾಚಮನವು ಆಯಾ ತಂತ್ರಗಳಲ್ಲಿ ಹೇಳಿರುವ ಕಾಳೀ ಮುಂತಾದ ದೇವತೆಗಳ ಉಪಾಸನೆಗೆ ಉಪಯುಕ್ತವಾಗಿರುತ್ತದೆ. ಸ್ಮಾರ್ತಾಚಮನವು ಬೇರೆ ಬೇರೆ ಋಷಿಗಳ ಮತದಂತೆ ಅನೇಕ ವಿಧವಾಗಿರುತ್ತದೆ. ಆದ್ದರಿಂದ ಇವೆರಡೂ ಸರ್ವರಿಂದಲೂ ಮಾಡುವ ಸಕಲ ಕಾರ್ಯಗಳಿಗೆ ಉಪಯುಕ್ತವಾಗಿರುವುದಿಲ್ಲ. ಆದ್ದರಿಂದ ಅವುಗಳ ವಿಷಯವನ್ನು ಇಲ್ಲಿ ವಿವರಿಸಿಲ್ಲ. ಉಳಿದ ಎರಡು ಆಚಮನಗಳು ಸರ್ವರಿಂದಲೂ ಮಾಡುವ ಎಲ್ಲಾ ಕಾರ್ಯಗಳಿಗೂ ಉಪಯುಕ್ತವಾದವುಗಳು. ಅವುಗಳಲ್ಲಿ ಶ್ರೌತಾಚಮನವನ್ನು ಉಡುಪಿದೇಶದಲ್ಲಿರುವ ಮಾಧ್ವರೇ ಮೊದಲಾದವರು, ಪೌರಾಣಿಕಾಚಮನ ಅಥವಾ ವೈಷ್ಣವಾಚಮನ ಎಂದು ಪ್ರಸಿದ್ಧವಾಗಿರುವ ಆಚಮನವನ್ನು ಉಡುಪಿ ದೇಶದಲ್ಲಿರುವ ಮಾಧ್ವರೇ ಮೊದಲಾದವರನ್ನು ಬಿಟ್ಟು ಉಳಿದ ಸಕಲ ಮಾಧ್ವರು ಮತ್ತು ಸ್ಮಾರ್ತರೇ ಮೊದಲಾದ ಹೆಚ್ಚಿನ ಜನರೂ ಅನುಷ್ಠಾನದಲ್ಲಿ ಇಟ್ಟುಕೊಂಡಿರುವರು. ಈ ವೈಷ್ಣವಾಚಮನವು ಸಹ ಬೇರೆ ಬೇರೆ ಗ್ರಂಥಗಳಲ್ಲಿ ಸ್ವಲ್ಪ ವ್ಯತ್ಯಾಸದಿಂದ ಹೇಳಲ್ಪಟ್ಟಿದೆ. ಅವುಗಳಲ್ಲಿ ಸ್ಮೃತಿಮುಕ್ತಾವಲೀಗ್ರಂಥದಲ್ಲಿ ಹೇಳಿದ ಕ್ರಮವನ್ನು ಅನುಸರಿಸಿ ಹಿಂದೆ ಬರೆದಿರುವೆನು. ಈಗ ಶ್ರೌತಾಚಮನವನ್ನು ಮನುವು ವಿವರಿಸಿದ ಕ್ರಮದಿಂದ ಕೆಳಗೆ ಕೊಡುತ್ತಿದ್ದೇನೆ.

ಶ್ರೌತಾಚಮನ - ಓಂ ಋಗ್ವೇದಾಯ ಸ್ವಾಹಾ, ಓಂ ಯಜುರ್ವೇದಾಯ ಸ್ವಾಹಾ, ಓಂ ಸಾಮವೇದಾಯ ಸ್ವಾಹಾ ಈ ಮೂರು ಮಂತ್ರಗಳಿಂದ ಮೂರು ಸಲ ನೀರನ್ನು ಕುಡಿಯಬೇಕು. ಓಂ ಅಥರ್ವವೇದಾಯ ನಮಃ ಈ ಮಂತ್ರದಿಂದ ಬಲಗೈಯ

ರೋಮವುಳ್ಳ ಭಾಗವನ್ನು ಒದ್ದೆಯಾದ ಎಡಗೈಯ ಅಂಗುಷ್ಠದ ಬುಡದಿಂದ ಒರೆಸಬೇಕು. "ಇತಿಹಾಸಪುರಾಣೇಭ್ಯೋ ನಮಃ" ಈ ಮಂತ್ರದಿಂದ ಬಲಗೈಯ ಅಂಗುಷ್ಠದ ಬುಡದಿಂದ ಎಡಗೈಯ ರೋಮವುಳ್ಳ ಭಾಗವನ್ನು ಒರೆಸಬೇಕು. ಓಂ ಅಗ್ನಯೇ ನಮಃ, ಓಂ ಅಗ್ನಯೇ ನಮಃ ಎಂಬ ಎರಡು ಮಂತ್ರಗಳಿಂದ ಎಲ್ಲಾ ಬೆರಳುಗಳ ತುದಿಯಿಂದ ಕ್ರಮವಾಗಿ ಮೇಲಿನ ಮತ್ತು ಕೆಳಗಿನ ತುಟಿಗಳನ್ನು ಮುಟ್ಟಬೇಕು. ಓಂ ವಾಯವೇ ನಮಃ, ಓಂ ವಾಯವೇ ನಮಃ ಎಂಬ ಎರಡು ಮಂತ್ರಗಳಿಂದ ಅಂಗುಷ್ಠ ಮತ್ತು ನಡುಬೆರಳುಗಳಿಂದ ಮೂಗಿನ ಎಡ ಮತ್ತು ಬಲ ರಂಧ್ರಗಳನ್ನು ಕ್ರಮವಾಗಿ ಮುಟ್ಟಬೇಕು, ಓಂ ಸೂರ್ಯಾಯ ನಮಃ, ಓಂ ಚಂದ್ರಾಯ ನಮಃ ಎಂಬ ಎರಡು ಮಂತ್ರಗಳಿಂದ ಅಂಗುಷ್ಠ ಮತ್ತು ತೋರ್ಬೆರಳುಗಳಿಂದ ಕ್ರಮವಾಗಿ ಬಲಗಣ್ಣನ್ನೂ ಎಡಗಣ್ಣನ್ನೂ ಮುಟ್ಟಬೇಕು. ಓಂ ದಿಗ್ಭ್ಯೋ ನಮಃ, ಓಂ ದಿಗ್ಭ್ಯೋ ನಮಃ ಎಂಬ ಎರಡು ಮಂತ್ರಗಳಿಂದ ಅಂಗುಷ್ಠ ಮತ್ತು ನಡು ಬೆರಳುಗಳಿಂದ ಬಲಗಿವಿಯನ್ನೂ ಎಡಗಿವಿಯನ್ನೂ ಕ್ರಮವಾಗಿ ಮುಟ್ಟಬೇಕು. ಓಂ ಇಂದ್ರಾಯ ನಮಃ, ಓಂ ಇಂದ್ರಾಯ ನಮಃ ಎಂಬ ಎರಡು ಮಂತ್ರಗಳಿಂದ ಅಂಗುಷ್ಠ ಮತ್ತು ಉಂಗುರದ ಬೆರಳುಗಳಿಂದ ಬಲ ಮತ್ತು ಎಡ ಹೆಗಲನ್ನು ಮುಟ್ಟಬೇಕು. ಓಂ ವಿಷ್ಣವೇ ನಮಃ, ಓಂ ವಿಷ್ಣವೇ ನಮಃ ಎಂಬ ಎರಡು ಮಂತ್ರಗಳಿಂದ ಎಲ್ಲಾ ಬೆರಳುಗಳಿಂದ ಬಲ ಮತ್ತು ಎಡ ಮೊಣಕಾಲುಗಳನ್ನು ಮುಟ್ಟಬೇಕು. ಓಂ ಪೃಥಿವ್ಯೈ ನಮಃ, ಓಂ ಪೃಥಿವ್ಯೈ ನಮಃ ಎಂಬ ಎರಡು ಮಂತ್ರಗಳಿಂದ ಎಲ್ಲಾ ಬೆರಳುಗಳಿಂದ ಬಲ ಮತ್ತು ಎಡಪಾದಗಳನ್ನು ಮುಟ್ಟಬೇಕು. ಓಂ ಆತ್ಮನೇ ನಮಃ ಎಂಬ ಮಂತ್ರದಿಂದ ಅಂಗುಷ್ಠ ಮತ್ತು ಕಿರುಬೆರಳುಗಳಿಂದ ಹೊಕ್ಕಳನ್ನು ಮುಟ್ಟಬೇಕು. ಓಂ ಅಂತರಾತ್ಮನೇ ನಮಃ ಎಂಬ ಮಂತ್ರದಿಂದ ಅಂಗೈಯಿಂದ ಎದೆಯನ್ನು ಮುಟ್ಟಬೇಕು. ಓಂ ಪರಮಾತ್ಮನೇ ನಮಃ ಎಂಬ ಮಂತ್ರದಿಂದ ಎಲ್ಲಾ ಬೆರಳುಗಳ ತುದಿಯಿಂದ ತಲೆಯ ನಡುವನ್ನು ಮುಟ್ಟಬೇಕು.

ವೈಷ್ಣವಾಚಮನ ಮತ್ತು ಶ್ರೌತಾಚಮನಗಳಲ್ಲಿ ಮೇಲೆ ಹೇಳಿರುವ ಅವಯವಗಳನ್ನು ಎಡಗೈಯಿಂದಲೇ ಮುಟ್ಟಬೇಕೆಂದು ಹೇಳಿರುವ ಸ್ಥಳಗಳನ್ನು ಬಿಟ್ಟು ಉಳಿದ ಸ್ಥಳಗಳಲ್ಲಿ ಬಲಗೈಯಿಂದಲೇ ಮುಟ್ಟಬೇಕು.

**ಆಚಮನ ನಿಮಿತ್ತಗಳು** - ಮಲ ಮತ್ತು ಮೂತ್ರ ವಿಸರ್ಜನಕ್ಕಿಂತ ಹಿಂದೆ ಮತ್ತು ಮುಂದೆ ಆಚಮನವನ್ನು ಮಾಡಬೇಕು. ಅಶುಚಿಪುರುಷರೊಡನೆ ಸಂಭಾಷಣೆ, ಎಂಜಲು ಕೈಯಿಂದ ಯುಕ್ತನಾದವನನ್ನು ನೋಡುವುದು, ತಿನ್ನುವುದಕ್ಕೆ ಅನರ್ಹವಾದ ಮಾಂಸ ಮುಂತಾದ ವಸ್ತುಗಳನ್ನು ನೋಡುವುದು, ಕಣ್ಣೀರು ಬಿಡುವುದು, ದೇಹದಿಂದ ರಕ್ತವು ಹೊರಗೆ ಬರುವುದು, ಬೆಂಕಿಯನ್ನೂ, ನೀರನ್ನೂ, ಅಶುದ್ಧವ್ಯಕ್ತಿಯನ್ನೂ, ಸ್ತ್ರೀಯರನ್ನೂ ಮುಟ್ಟುವುದು, ಬಟ್ಟೆಯನ್ನು ಉಟ್ಟುಕೊಳ್ಳುವುದು, ಊಟ ಮತ್ತು ಮಲಗುವುದಕ್ಕೆ ಮುಂಚೆ ದೇವರ ಪೂಜೆ, ಗುರುಪೂಜೆ ಮುಂತಾದ ಎಲ್ಲಾ ವಿಶಿಷ್ಟ ಕಾರ್ಯಗಳ ಆರಂಭಕಾಲ ಮತ್ತು ಸಮಾಪ್ತ್ಯನಂತರಕಾಲ, ತಾಂಬೂಲಚರ್ವಣಾನಂತರಕಾಲ, ತುಟಿಗಳನ್ನು ಮುಟ್ಟುವುದು ಇವುಗಳು ಆಚಮನಕ್ಕೆ ನಿಮಿತ್ತವೆನಿಸುತ್ತವೆ.

ಪೂಜಾದಿಕರ್ಮಗಳನ್ನು ಮಾಡುತ್ತಿರುವಾಗ ಅಪಾನವಾಯುವನ್ನು ಬಿಡುವುದು, ಅಳುವುದು, ಕೋಪ ಬರುವುದು, ಬೆಕ್ಕು ಮತ್ತು ಇಲಿಗಳನ್ನು ಮುಟ್ಟುವುದು, ತುಂಬಾ ಗಟ್ಟಿಯಾಗಿ ನಗುವುದು, ಸುಳ್ಳು ಹೇಳುವುದು ಮುಂತಾದವುಗಳನ್ನು ಮಾಡಿದರೆ ಕೂಡಲೇ ಆಚಮನವನ್ನು ಮಾಡಬೇಕು. ನದಿಯಲ್ಲಿ ಇಳಿದಾಗಲೂ, ದಾಟಿದ ಕೂಡಲೆಯೂ ಆಚಮನವನ್ನು ಮಾಡಬೇಕು. ಜುಟ್ಟು ಬಿಚ್ಚಿ ಹೋದರೆ ಕೂಡಲೇ ಗಂಟು ಹಾಕಿಕೊಂಡು ಆಚಮನವನ್ನು ಮಾಡಬೇಕು. ಜನಿವಾರವು ಕಡಿದು ಹೋದರೆ ಆಚಮನವನ್ನು ಮಾಡಿ ಹೊಸ ಯಜ್ಞೋಪವೀತವನ್ನು ಹಾಕಿಕೊಂಡು ಪುನಃ ಆಚಮನವನ್ನು ಮಾಡಬೇಕು. ಸಂಶಯಗಳು ಬಂದಾಗ ಆಚಮನವನ್ನು ಮಾಡಬೇಕು. ಜಪ ಮತ್ತು ಹೋಮ ಮುಂತಾದ ಪವಿತ್ರ ಕಾರ್ಯಗಳನ್ನು ಮಾಡುತ್ತಿರುವಾಗ ಅಶುದ್ಧಪುರುಷ ನಾಯಿ ಮುಂತಾದ ಅಶುದ್ಧ ಪ್ರಾಣಿಗಳ ದರ್ಶನವು ಏರ್ಪಟ್ಟಾಗಲೂ ಆಚಮನವನ್ನು ಮಾಡಬೇಕು.

ಆಚಮನಕ್ಕೆ ಪ್ರತಿನಿಧಿ - ಮೇಲ್ಕಂಡ ನಿಮಿತ್ತಗಳು ಏರ್ಪಟ್ಟಾಗ ಆಚಮನವನ್ನು ಮಾಡುವುದಕ್ಕೆ ರೋಗಾದಿ ನಿಮಿತ್ತದಿಂದ ಸಾಧ್ಯವಾಗದಿದ್ದರೆ ಅಥವಾ ನೀರು ಸಿಗದಿದ್ದರೆ ಬ್ರಾಹ್ಮಣನು ತನ್ನ ಬಲಗಿವಿಯನ್ನು ಮುಟ್ಟಬೇಕು. ಅದರಲ್ಲಿ ಪ್ರಭಾಸ ಮುಂತಾದ ತೀರ್ಥಗಳೂ ಗಂಗಾದಿನದಿಗಳೂ ಸನ್ನಿಹಿತವಾಗಿವೆ. ಉಳಿದವರು ಶ್ರೇಷ್ಠವಾದ ಮೂಲಿಕೆ ಗೋವು ಭೂಮಿ ಹುಲ್ಲುಗಾವಲು ಇವುಗಳಲ್ಲಿ ಯಾವುದಾದರೊಂದನ್ನು ಒಮ್ಮೆ ಮುಟ್ಟಬೇಕು. ಆಚಮನವನ್ನು ಮಾಡಲು ಶಕ್ಯವಿದ್ದಾಗ ಇವುಗಳನ್ನು ಮುಟ್ಟಿದರೂ ಫಲವಿಲ್ಲ.

ಆಚಮನ ಮಾಡುವಾಗ ನಿಂದ್ಯವಾದುದು - ನಿಂತುಕೊಂಡು, ಮಲಗಿ, ನಗುತ್ತಾ, ಮಾತಾಡುತ್ತಾ, ಇನ್ನೊಬ್ಬನ ಮಾತನ್ನು ಕೇಳುತ್ತಾ, ಇನ್ನೊಬ್ಬನನ್ನು ಮುಟ್ಟುತ್ತಾ, ಕೆಳಗೆ ಮೇಲೆ ಮತ್ತು ಬೇರೆ ಬೇರೆ ದಿಕ್ಕುಗಳನ್ನು ನೋಡುತ್ತಾ, ಆಚಮನವನ್ನು ಮಾಡಬಾರದು. ಕಾಗೆ, ನಾಯಿ, ಕತ್ತೆ, ಹಂದಿ, ಕೋಳಿ, ರಜಸ್ವಲಾ ಸ್ತ್ರೀ, ಅಶುದ್ಧಪುರುಷರು, ದೇವಾಲಯದಲ್ಲಿ ದುಡ್ಡಿಗಾಗಿಯೇ ದೇವರನ್ನು ಪೂಜಿಸುವವನು, ವೈದ್ಯ, ಮಹಾಪಾಪಿ ಮತ್ತು ಇವರಂತಿರುವ ಅಶುಚಿವ್ಯಕ್ತಿಗಳನ್ನು ನೋಡುತ್ತಾ ಮಾಡಬಾರದು. ಚಪ್ಪಲಿಯನ್ನು ಧರಿಸಿಕೊಂಡು, ಮೊಣಕಾಲುಗಳ ಹೊರಗೆ ಕೈಗಳನ್ನು ಇಟ್ಟುಕೊಂಡು, ರುಮಾಲನ್ನು ತಲೆಯಲ್ಲಿ ಸುತ್ತಿಕೊಂಡು, ಅಂಗಿಯನ್ನು ಹಾಕಿಕೊಂಡು ಒಳಗೆ ಚಡ್ಡಿ, ಕೌಪೀನ ಮುತಾದ ವಸ್ತ್ರಗಳನ್ನು ಧರಿಸಿ ಅದರ ಮೇಲೆ ಇನ್ನೊಂದು ವಸ್ತ್ರವನ್ನು ಉಟ್ಟುಕೊಂಡು, ಬೆತ್ತಲೆಯಾಗಿ ಆಚಮನವನ್ನು ಮಾಡಬಾರದು. ಊಟ ಮಾಡಿ ಎದ್ದ ಮೇಲೆ ಮಾತ್ರ ಆಸನದಲ್ಲಿ ಕುಳಿತುಕೊಂಡು ಆಚಮನವನ್ನು ಮಾಡಬೇಕು. ಬೇರೆ ಕಾಲದಲ್ಲಿ ಆಸನದಲ್ಲಿ ಕುಳಿತು ಮಾಡಬಾರದು. ಎಡಗೈಯಿಂದ ನೀರನ್ನು ಮುಟ್ಟಿಕೊಂಡಿರದೆ ಮಾಡಬಾರದು. ನೀರಿನ ಮಧ್ಯದಲ್ಲಿ, ಜುಟ್ಟು, ಗಂಟು ಹಾಕದೆ, ತಲೆಗೆ ಮುಸುಕು ಹಾಕಿಕೊಂಡು, ತಲೆ ಕೂದಲು ಉಟ್ಟ ಬಟ್ಟೆ ಹೊಕ್ಕಳಿನಿಂದ ಕೆಳಭಾಗದ ಅವಯವಗಳು ನೆಲ ಇವುಗಳನ್ನು ಮುಟ್ಟಿಕೊಂಡು, ಒಂದು ಕಾಲನ್ನು ಎತ್ತರದಲ್ಲಿಯೂ ಇನ್ನೊಂದು ಕಾಲನ್ನು ತಗ್ಗಿನಲ್ಲಿಯೂ ಇಟ್ಟುಕೊಂಡು ಆಚಮನವನ್ನು ಮಾಡಬಾರದು. ಕಾಲನ್ನು ತೊಳೆದು ಉಳಿದ ನೀರು, ಅಶುದ್ಧಪುರುಷರು ಒಂದೇ ಕೈಯಿಂದ ತಂದಿರುವ ನೀರು ಇವುಗಳಿಂದ ಮಾಡಬಾರದು. ಅವಸರವಾಗಿ ಮಾಡಬಾರದು. ಯಜ್ಞೋಪವೀತವನ್ನು ಬಲಕ್ಕೆ ಹಾಕಿಕೊಳ್ಳದೆ, ಒಗೆದು ಶುದ್ಧ ಮಾಡದಿರುವ ಬಟ್ಟೆಯನ್ನು ಉಟ್ಟುಕೊಂಡು, ವಾಹನದಲ್ಲಿ ಕುಳಿತುಕೊಂಡು, ತುದಿಕಾಲಿನಿಂದ ಕುಳಿತುಕೊಂಡು, ಮೊಣಕಾಲಿನ ಮತ್ತು ಜಂಘೆಯ ಅಂದರೆ ಮೊಣಕಾಲಿಗಿಂತ ಕೆಳಗಿರುವ ಅವಯವದ ಮೇಲೆ ಕೈಯನ್ನು ಇಟ್ಟುಕೊಂಡು, ಆಸನದ ಮೇಲೆ ಕಾಲನ್ನು ಇಟ್ಟುಕೊಂಡು ಮಾಡಬಾರದು. ನೀರಿನ ಮಧ್ಯದಲ್ಲಿ ಮಾಡಬೇಕಾದ ಕೆಲಸಗಳಿಗೆ ನೆಲದ ಮೇಲೆಯೂ, ನೆಲದ ಮೇಲೆ ಮಾಡಬೇಕಾದ ಕೆಲಸಗಳಿಗೆ ನೀರಿನಲ್ಲಿಯೂ, ನೀರು ಮತ್ತು ನೆಲ ಈ ಎರಡು ಕಡೆಯಲ್ಲಿ ಮಾಡಬೇಕಾದ ಕೆಲಸಗಳಿಗೆ ಬರೇ ನೀರಿನಲ್ಲಿಯೂ, ಬರೇ ನೆಲದಲ್ಲಿಯೂ ಆಚಮನವನ್ನು ಮಾಡಬಾರದು. ನೀರಿನ ಮಧ್ಯದಲ್ಲಿ ಮಾಡಬೇಕಾದ ಕೆಲಸಗಳಿಗೆ ಮೊಣಕಾಲಿನಷ್ಟು, ಅಥವಾ ಅದಕ್ಕಿಂತ ಹೆಚ್ಚಾಗಿರುವ ನೀರಿನಲ್ಲಿ ನಿಂತು ಆಚಮನವನ್ನು ಮಾಡಬೇಕು. ಅದಕ್ಕಿಂತ ಕಡಿಮೆ ನೀರಿನಲ್ಲಿ ಮಾಡಬಾರದು. ನೆಲದಲ್ಲಿ ಮಾಡಬೇಕಾದ ಕೆಲಸಕ್ಕೆ ನೆಲದಲ್ಲಿಯೂ, ನೀರಿನಲ್ಲಿ ಮಾಡಬೇಕಾದ ಕೆಲಸಕ್ಕೆ ನೀರಿನಲ್ಲಿಯೂ, ನೀರು ಮತ್ತು ನೆಲದಲ್ಲಿ ಮಾಡಬೇಕಾದ ಕೆಲಸಕ್ಕೆ ನೀರಿನಲ್ಲಿ ಒಂದು ಕಾಲನ್ನೂ, ನೆಲದಲ್ಲಿ ಒಂದು ಕಾಲನ್ನೂ ಇಟ್ಟುಕೊಂಡು ಮಾಡಬೇಕು. ಕಾಲುಗಳನ್ನು ತೊಳೆಯದೆ, ಅಂಗಡಿಬೀದಿಯಲ್ಲಿ, ಕುತ್ತಿಗೆಯನ್ನೂ ತಲೆಯನ್ನೂ ಮುಚ್ಚಿಕೊಂಡು ಮಾಡಬಾರದು. ನೀರಿನ ಮಧ್ಯದಲ್ಲಿ, ಒದ್ದೆ ನೆಲದಲ್ಲಿ, ಒದ್ದೆ ಬಟ್ಟೆಯನ್ನು ಉಟ್ಟುಕೊಂಡು ಮಾಡಬಾರದು. ಎಡಗೈಯಿಂದ ಮಾಡಬಾರದು. ಕೈಯನ್ನು ಪಾತ್ರೆಗೆ ಮುಳುಗಿಸಿ ನೀರನ್ನು ತೆಗೆದು ಮಾಡಬಾರದು. ಮಡಿಕೆ, ತಾಮ್ರಪಾತ್ರ, ಬಂಗಾರದ ಪಾತ್ರ, ಕಂಚಿನ ಪಾತ್ರ, ಬೆಳ್ಳಿ ಪಾತ್ರ ಇವುಗಳು ಯಾವಾಗಲೂ ಶುದ್ಧವಾಗಿರುತ್ತವೆ. ಇವುಗಳಲ್ಲಿರುವ ನೀರನ್ನು ತಾನೇ ತನ್ನ ಎಡಗೈಯಿಂದ ಬಲಗೈಗೆ ಉದ್ಧರಣೆಯಿಂದ ಹಾಕಿಕೊಂಡು ಮಾಡಬೇಕು. ಇನ್ನೊಬ್ಬರು ಹಾಕಿದ ನೀರಿನಿಂದ ಮಾಡಬಾರದು. ಕುಡಿಯುವಾಗ ಬಾಯಿಯಲ್ಲಿ ಶಬ್ದವಾಗಬಾರದು.

ಎರಡು ಅಥವಾ ಮೂರು ಸಲ ಆಚಮನವನ್ನು ಮಾಡಬೇಕಾದ ಸಂದರ್ಭಗಳು - ದೀರ್ಘಶ್ವಾಸವನ್ನು ಬಿಡುವುದು, ಶೂದ್ರನೊಡನೆ ಭಾಷಣ, ನಾಲ್ಕು ರಸ್ತೆ ಸೇರಿದ ಸ್ಥಳ ಮತ್ತು ಸ್ಮಶಾನಕ್ಕೆ ಹೋಗಿ ಬಂದಿರುವುದು, ತುಟಿಯ ಸ್ಪರ್ಶ, ರೇತಸ್ಸಿನ ಸ್ಖಲನ, ತೇಗುವುದು, ಕೆಮ್ಮುವುದು, ಸೀನುವುದು, ನಿದ್ರೆ, ರಸ್ತೆಯಲ್ಲಿ ಸಂಚಾರ, ವಸ್ತ್ರಧಾರಣ, ಐದು ಉಗುರುಗಳಿಂದ ಯುಕ್ತವಾದ ಪ್ರಾಣಿಯ ಎಲುಬು ಮತ್ತು ದೇಹದಲ್ಲಿರುವ ಎಣ್ಣೆ ಮುಂತಾದವುಗಳ ಸ್ಪರ್ಶ, ಅಶುದ್ಧ ವ್ಯಕ್ತಿಗಳು ಮುಂತಾದವರೊಡನೆ ಭಾಷಣ ಇವುಗಳು ಏರ್ಪಟ್ಟ ಮೇಲೆಯೂ ಎರಡು ಸಂಧ್ಯಾಕಾಲಗಳಲ್ಲಿಯೂ ಎರಡೆರಡು ಸಲ ಆಚಮನವನ್ನು ಮಾಡಬೇಕು. ಊಟ, ಹೋಮ, ದಾನ ಮಾಡುವುದು, ದೇವತಾರ್ಚನ, ದಾನ ತೆಗೆದುಕೊಳ್ಳುವುದು, ಹವಿಸ್ಸಿನ ಭಕ್ಷಣ, ಸ್ನಾನ, ಜಪ, ಪಾನ, ಭೋಜನ, ಅಧ್ಯಯನ, ಇವುಗಳು ಏರ್ಪಟ್ಟಾಗ ಆರಂಭದಲ್ಲಿಯೂ, ಕೊನೆಯಲ್ಲಿಯೂ ಎರಡೆರಡು ಸಲ ಆಚಮನವನ್ನು ಮಾಡಬೇಕು. ಸಂಧ್ಯಾವಂದನದ ಆರಂಭದಲ್ಲಿಯೂ, ಕೊನೆಯಲ್ಲಿಯೂ ಎರಡು ಸಲ ಆಚಮನವನ್ನು ಮಾಡಬೇಕು. ಸೂರ್ಯಾರ್ಘ್ಯವನ್ನು ಕೊಟ್ಟ ಮೇಲೆ ಮಾತ್ರ ಮೂರು ಸಲ ಆಚಮನವನ್ನು ಮಾಡಬೇಕು. ಸಂಧ್ಯಾವಂದನದ ಮಧ್ಯದಲ್ಲಿ ಮಾಡಬೇಕಾದ ಬೇರೆ ಆಚಮನಗಳನ್ನು ಒಮ್ಮೊಮ್ಮೆ ಮಾಡಬೇಕು.

ಒಂದೊಂದು ಆಹಾರವನ್ನು ತಿಂದಾಗ ನಮಗೆ ಅಶುದ್ಧಿಯು ಏರ್ಪಡುತ್ತದೆ. ಆದರೆ ಮಧುಪರ್ಕ, ಸೋಮಪಾನ, ಜಲಪಾನ, ಪ್ರಾಣಾಹುತಿಗಳನ್ನು ಸ್ವೀಕರಿಸುವುದು ಮುಂತಾದ ಮುಖಹೋಮ ಅಂದರೆ 'ಶ್ರೀಹರಿಯ ಪ್ರೀತಿಗಾಗಿ ಮುಖದಿಂದ ಪರಿಶುದ್ಧವಾದ ಆಹಾರವಸ್ತುಗಳನ್ನು ತಿನ್ನುವುದು' ಇವುಗಳಲ್ಲಿ ಈ ಆಹಾರವನ್ನು ಭಕ್ಷಿಸಿದ್ದರಿಂದ ಅಶುದ್ಧಿಯು ಏರ್ಪಡುವುದಿಲ್ಲ. ಹೀಗೆ ಮೇಲೆ ಹೇಳಿದಂತೆ ಅಶುದ್ಧಿಯು ಏರ್ಪಡದಿರುವ ಸಂದರ್ಭಗಳಲ್ಲಿ ಅಶುದ್ಧಿಯ ಪರಿಹಾರಕ್ಕಾಗಿ ಆಚಮನವನ್ನು ಮಾಡಬೇಕಾಗಿಲ್ಲ. ಅಶುದ್ಧಿಯು ಏರ್ಪಟ್ಟಾಗ ಮಾತ್ರ ಮಾಡಬೇಕು.

(11) **'ಯಥಾವಿಧಿ ಸಮಾಚಮ್ಯ'** - ಎಂಬ ವಾಕ್ಯದಲ್ಲಿಯೂ ಮುಂದಿನ ವಾಕ್ಯಗಳಲ್ಲಿಯೂ ಆಚಮನ ಮುಂತಾದ ಸಕಲ ಕರ್ಮಗಳನ್ನೂ ಶಾಸ್ತ್ರೋಕ್ತವಿಧಿಯಿಂದ ಮಾಡಬೇಕೆಂದು ಹೇಳಿರುತ್ತದೆ. ಆದ್ದರಿಂದ ಈ ಆಚಮನಕ್ಕೆ ಮತ್ತು ಸ್ನಾನ ಮುಂತಾದ ಸಕಲಕರ್ಮಗಳಿಗೂ ಅತ್ಯುಪಯುಕ್ತವಾದ ದರ್ಭೆಯನ್ನೂ, ಅವುಗಳಿಂದ ಮಾಡಬೇಕಾದ ಪವಿತ್ರಗಳ ಲಕ್ಷಣವನ್ನೂ, ಈ ವಾಕ್ಯ ಮತ್ತು ಮುಂದಿನ ವಾಕ್ಯಗಳಿಂದ ಸೂಚಿಸಿದಂತಾಯಿತು. ಈ ವಿಷಯವನ್ನು ಕೆಳಗೆ ಕೊಟ್ಟಿರುತ್ತೇವೆ.

## ದರ್ಭೆಗಳು

**ದರ್ಭೆಯ ಮಹಿಮೆ** - ದರ್ಭೆಯ ಬುಡದಲ್ಲಿ ಬ್ರಹ್ಮದೇವರೂ, ಮಧ್ಯದಲ್ಲಿ ಶ್ರೀಹರಿಯೂ, ತುದಿಯಲ್ಲಿ ರುದ್ರದೇವರೂ, ಸುತ್ತಲೂ ಉಳಿದ ಎಲ್ಲಾ ದೇವತೆಗಳೂ ಇರುತ್ತಾರೆ. ದರ್ಭೆಯನ್ನು ಧರಿಸಿ ಮಾಡುವ ಸ್ನಾನ ಪಾನ ಆಚಮನ ಜಪ ದಾನ ಭೋಜನ ಮುಂತಾದ ಸಕಲ ಪುಣ್ಯಕಾರ್ಯಗಳಿಗೂ ಲೆಕ್ಕವಿಲ್ಲದ ಪುಣ್ಯಫಲವು ಸಿಗುತ್ತದೆ. ದರ್ಭೆಯ ಆಸನವು ಯಾವಾಗಲೂ ಪರಿಶುದ್ಧವೂ, ಜಪ, ಧ್ಯಾನ ಮುಂತಾದವುಗಳ ಸಿದ್ಧಿಗೆ ಕಾರಣವೂ ಆಗಿರುತ್ತದೆ. ಸನ್ಯಾಸಿಗಳಿಗೆ ವಿಶೇಷ ಸಿದ್ಧಿಕರವಾಗಿದೆ. ಅಸುರರು ಜಪ, ಹೋಮ ಮುಂತಾದ ಸತ್ಕಾರ್ಯವನ್ನು ಕೆಡಿಸುವುದಕ್ಕೂ, ಅವುಗಳಿಂದ ಬರುವ ಪುಣ್ಯವನ್ನು ಅಪಹರಿಸುವುದಕ್ಕೂ ಯಾವಾಗಲೂ ಕಾದಿರುತ್ತಾರೆ. ದರ್ಭೆಯ ಪವಿತ್ರವನ್ನು ಧರಿಸಿದವನನ್ನು ನೋಡಿ ಹತ್ತು ದಿಕ್ಕುಗಳಲ್ಲಿ ಓಡುತ್ತಾರೆ. ಕಮಲದ ಎಲೆಯಲ್ಲಿ ನೀರು ಹೇಗೆ ಅಂಟುವುದಿಲ್ಲವೋ ಅದರಂತೆ ಪವಿತ್ರವನ್ನು ಧರಿಸುವವನನ್ನು ಪಾಪವು ಅಂಟುವುದಿಲ್ಲ.

**ದರ್ಭೆಯನ್ನು ಕೀಳುವ ವಿಧಾನ** - ಪೂರ್ವ ಉತ್ತರ ಅಥವಾ ಈಶಾನ್ಯದಿಕ್ಕನ್ನು ನೋಡುತ್ತಾ 'ಓಂ' ಎಂಬ ಮಂತ್ರವನ್ನು ಉಚ್ಚರಿಸುತ್ತಾ ದರ್ಭೆಯ ಗಿಡವನ್ನು ಮುಟ್ಟಬೇಕು.

ವಿರಿಂಚಿನಾ ಸಹೋತ್ಪನ್ನ ಪರಮೇಷ್ಠಿನಿಸರ್ಗಜ |
ನುದ ಪಾಪಾನಿ ಸರ್ವಾಣಿ ದರ್ಭ ಸ್ವಸ್ತಿಕರೋ ಮಮ ||

ಎಂಬ ಮಂತ್ರದಿಂದ ಕೀಳಬೇಕು. ಶ್ರಾವಣತಿಂಗಳಿನ ಅಮಾವಾಸ್ಯಾದಿನದಲ್ಲಿ ಕಿತ್ತು ತೆಗೆದ ದರ್ಭೆಯನ್ನು ಒಂದು ಕಾರ್ಯಕ್ಕೆ ಉಪಯೋಗಿಸಿದ ಮೇಲೆ ಪುನಃ ಪುನಃ ಬೇರೆ ಬೇರೆ ಕಾರ್ಯಗಳಿಗೂ ಉಪಯೋಗಿಸಬಹುದು. ಬೇರೆ ದಿನದಲ್ಲಿ ಕಿತ್ತು ತೆಗೆದ ದರ್ಭೆಯು ಒಂದು ಕಾರ್ಯಕ್ಕೆ ಉಪಯೋಗಿಸಿದ ಕೂಡಲೇ ಅಶುದ್ಧವಾಗುತ್ತದೆ. ಪುನಃ ಇನ್ನೊಂದು ಕಾರ್ಯಕ್ಕೆ ಉಪಯುಕ್ತವಾಗುವುದಿಲ್ಲ.

ಪವಿತ್ರಲಕ್ಷಣ - ಈ ದರ್ಭೆಯಿಂದ ನಿರ್ಮಿತವಾದ ಪವಿತ್ರವನ್ನೂ ಬೆಳ್ಳಿ ಅಥವಾ ಬಂಗಾರದಿಂದ ನಿರ್ಮಿತವಾದ ಪವಿತ್ರಗಳನ್ನೂ, ಕಿರುಬೆರಳುಗಳ ಪಕ್ಕದಲ್ಲಿರುವ ಬೆರಳುಗಳಲ್ಲಿ ಧರಿಸಬೇಕು. ಎರಡು ಕೈಗಳಲ್ಲಿ ಅಥವಾ ಬಲಗೈಯಲ್ಲಿ ಧರಿಸಬೇಕು. ಏಳು ದರ್ಭೆಗಳಿಂದ ಬ್ರಹ್ಮಪವಿತ್ರವನ್ನು ಮಾಡಬೇಕು. ಬ್ರಾಹ್ಮಣರು ನಾಲ್ಕು ದರ್ಭೆಗಳಿಂದಲೂ ಕ್ಷತ್ರಿಯರು ಮೂರು, ವೈಶ್ಯರು ಎರಡು, ಶೂದ್ರರು ಒಂದು ದರ್ಭೆಗಳಿಂದಲೂ ಪವಿತ್ರವನ್ನು ಮಾಡಬೇಕು. ರೋಗಪರಿಹಾರ ಮುಂತಾದವುಗಳಿಗೆ ಮಾಡುವ ಶಾಂತಿಕರ್ಮಗಳಿಗೆ ಮೂರು ದರ್ಭೆಗಳಿಂದಲೂ ಸಂಪದ್ವೃದ್ಧಿ ಮುಂತಾದ ಪುಷ್ಟಿಗಳಿಗೆ ಕಾರಣವಾದ ಪೌಷ್ಟಿಕಕರ್ಮಗಳನ್ನು ಮಾಡುವಾಗ ಐದು ದರ್ಭೆಗಳಿಂಲೂ, ಮಾಟ ಮುಂತಾದ ಪರಹಿಂಸೆಗಾಗಿ ಮಾಡುವ ಅಭಿಚಾರ ಹೋಮ ಮುಂತಾದ ಕಾರ್ಯಗಳನ್ನು ಮಾಡುವಾಗ ನಾಲ್ಕು ದರ್ಭೆಗಳಿಂದಲೂ ನಿರ್ಮಿತವಾದ ಪವಿತ್ರವನ್ನು ಧರಿಸಬೇಕು.

ಪವಿತ್ರವನ್ನು ಮಾಡುವ ಕ್ರಮ - ದರ್ಭೆಯ ತುದಿಯನ್ನೂ ಬುಡವನ್ನೂ ಒಟ್ಟುಗೂಡಿಸಿ ಬಲಗೈಯಿಂದ ಹಿಡಿಯಬೇಕು. ದರ್ಭೆಯ ಮಧ್ಯಭಾಗವನ್ನು ಎಡಗೈಯಿಂದ ಹಿಡಿಯಬೇಕು. ಬಲಗೈಯಿಂದ ಹಿಡಿದಿರುವ ದರ್ಭೆಯ ಭಾಗವನ್ನು ಎಡಗೈಯಿಂದ ಹಿಡಿದಿರುವ ದರ್ಭೆಯ ಮಧ್ಯಭಾಗಕ್ಕೆ ಒಂದು ಸಲ ಸುತ್ತಿಸಬೇಕು. ಆ ಭಾಗವನ್ನು ಹಿಂದಿನ ಕಡೆಯಿಂದ ದರ್ಭೆಯ ಮಧ್ಯದಲ್ಲಿರುವ ರಂಧ್ರದಿಂದ ಮುಂಭಾಗಕ್ಕೆ ತರಬೇಕು. ಇದು ವರ್ತುಲಗ್ರಂಥಿ ಪವಿತ್ರವೆನಿಸುತ್ತದೆ. ಇನ್ನು ಅರ್ಧ ಸುತ್ತನ್ನು ಹೆಚ್ಚಾಗಿ ಸುತ್ತಿಸಿ ಮುಂದಿನ ಕಡೆಯಿಂದ ಅದೇ ಭಾಗವನ್ನು ಅದೇ ರಂಧ್ರದಿಂದ ಹಿಂಭಾಗಕ್ಕೆ ತಂದರೆ ಬ್ರಹ್ಮಗ್ರಂಥಿಪವಿತ್ರವೆನಿಸುತ್ತದೆ.

ಶ್ರೇಷ್ಠವಾದ ದರ್ಭೆಗಳು - ಒಂದೇ ಗಿಡದಲ್ಲಿ ಏಳು ಎಲೆಗಳಿಂದ ಉಪಯಕ್ತವಾದ ದರ್ಭೆಗಳು ಮತ್ತು ಎಳ್ಳಿನ ಹೊಲದಲ್ಲಿ ಬೆಳೆದ ದರ್ಭೆಗಳು ಪವಿತ್ರವನ್ನು ಮಾಡುವುದಕ್ಕೆ ಶ್ರೇಷ್ಠವೆನಿಸುತ್ತವೆ. ದರ್ಭೆಯ ಗಿಡಗಳು ಎರಡು ವಿಧವಾಗಿವೆ. ಅವುಗಳಲ್ಲಿ ಹೂ ಇರುವ ಗಿಡವು ಕಾಶ ಎಂದೂ ಹೂ ಇಲ್ಲದಿರುವ ಗಿಡವು ಕುಶ ಎಂದೂ ಹೇಳಲ್ಪಡುತ್ತದೆ. ಇವುಗಳಲ್ಲಿ ಕುಶವು ಅತಿಶ್ರೇಷ್ಠವಾಗಿದೆ. ಯಜ್ಞಕ್ಕೆ ಹಸುರು ಬಣ್ಣದ ದರ್ಭೆಗಳನ್ನೂ, ಪಾಕಯಜ್ಞಗಳಿಗೆ ಹಳದಿ ಬಣ್ಣದ ದರ್ಭೆಗಳನ್ನೂ, ಪಿತೃಕಾರ್ಯಗಳಿಗೆ ಬೇರಿನೊಡನಿರುವ ದರ್ಭೆಗಳನ್ನೂ, ವೈಶ್ವದೇವಕ್ಕೆ ಅನೇಕ ಬಣ್ಣಗಳುಳ್ಳ ದರ್ಭೆಗಳನ್ನೂ, ಉಪಯೋಗಿಸಬೇಕು. ಬೇರಿನಿಂದ ಯುಕ್ತವಾದ ದರ್ಭೆಯಿಂದ ಆಸನವನ್ನು ತಯಾರಿಸಬೇಕು. ತುದಿಯು ಕತ್ತರಿಸಲ್ಪಡದಿರುವ, ಬೇರಿನಿಂದ ಸಹಿತವಾದ, ಎಲೆಯುಳ್ಳ ಮೃದುವಾದ ಕುಶವನ್ನು ವೇದವನ್ನು ಜಪಿಸುವ ಕಾಲದಲ್ಲಿ ಧರಿಸಬೇಕು. ಅಗ್ನಿಕಾರ್ಯ ಮತ್ತು ಯಜ್ಞವನ್ನು ಮಾಡುತ್ತಿರುವಾಗ ಬೇರಿಲ್ಲದಿರುವ ದರ್ಭೆಯನ್ನು ಉಪಯೋಗಿಸಬೇಕು. ಏಕೋದ್ದಿಷ್ಟಶ್ರಾದ್ಧದಲ್ಲಿ ಬೇರು ಸಹಿತವಾದ ದರ್ಭೆಯನ್ನು ಉಪಯೋಗಿಸಬೇಕು. ಉಳಿದ ಪಿತೃಕಾರ್ಯಗಳಲ್ಲಿ ಬೇರಿನ ಮೇಲ್ಭಾಗದಲ್ಲಿ ಒಮ್ಮೆಯೇ ಕತ್ತರಿಸಲ್ಪಟ್ಟ ದರ್ಭೆಯನ್ನು ಉಪಯೋಗಿಸಬೇಕು. ಬೇರಿನ ಸಮೀಪದಲ್ಲಿ ಕತ್ತರಿಸಲ್ಪಟ್ಟ ಈ ದರ್ಭೆಗಳಲ್ಲಿಯೂ ಕೆಳಗಿನ ಭಾಗದಿಂದ ಪಿತೃಕಾರ್ಯವನ್ನೂ, ಮಧ್ಯದಿಂದ ಮನುಷ್ಯ ಕಾರ್ಯವನ್ನೂ, ತುದಿಯ ಭಾಗದಿಂದ ದೇವತಾಕಾರ್ಯವನ್ನೂ ಮಾಡಬೇಕು.

ದರ್ಭೆಗಳಿಗೆ ಪ್ರತಿನಿಧಿ - ಕುಶವು ಸಿಗದಿದ್ದರೆ ಕಾಶವನ್ನೂ, ಅದೂ ಸಿಗದಿದ್ದಾಗ ಗರಿಕೆಹುಲ್ಲನ್ನೂ, ಅದೂ ಸಿಗದಿದ್ದಾಗ ಜವೆಗೋಧಿಯ ಗಿಡವನ್ನೂ, ಅದೂ ಸಿಗದಿದ್ದಾಗ ಭತ್ತದ ಗಿಡವನ್ನೂ ಪವಿತ್ರಕ್ಕಾಗಿ ಸ್ವೀಕರಿಸಬೇಕು. ದನದ ಬಾಲದಲ್ಲಿರುವ ರೋಮಗಳಿಂದ ನಿರ್ಮಿತವಾದ ಪವಿತ್ರವು ಅತಿ ಪರಿಶುದ್ಧವಾಗಿರುತ್ತದೆ.

**ನಿಂದ್ಯವಾದ ದರ್ಭೆಗಳು** - ಚಿತೆಯಲ್ಲಿ ಇಡಲ್ಪಟ್ಟ, ಹಾದಿಯಲ್ಲಿ ಬಿದ್ದಿರುವ, ಯಜ್ಞಭೂಮಿಯಲ್ಲಿರುವ ಪರಿಸ್ತರಣ ಆಸನ ಮತ್ತು ಪಿಂಡಗಳಲ್ಲಿ ಉಪಯೋಗಿಸಿರುವ, ಶ್ರಾದ್ಧಕ್ಕೆ ಉಪಯೋಗಿಸಿರುವ, ಮಲಮೂತ್ರಗಳ ಸ್ಪರ್ಶವಾಗಿರುವ, ಉಗುರುಗಳಿಂದ ಕೀಳಲ್ಪಟ್ಟಿರುವ, ಬೆಂದು ಹೋದಂತೆ ಜೀರ್ಣವಾಗಿರುವ, ಅರ್ಧ ಸುಟ್ಟಿರುವ ದರ್ಭೆಗಳು ನಿಂದ್ಯವಾಗಿವೆ.

**ಗ್ರಾಹ್ಯವಾದ ದರ್ಭೆಗಳು** - ಸೊಂಟದಲ್ಲಿ ಸಿಕ್ಕಿಸಿಕೊಂಡಿರುವ ಮತ್ತು ಬ್ರಹ್ಮಯಜ್ಞದಲ್ಲಿ ಉಪಯೋಗಿಸಿರುವ ದರ್ಭೆಗಳು ಗ್ರಾಹ್ಯವಾಗಿವೆ.

**ಪವಿತ್ರವನ್ನು ಧರಿಸುವ ವಿಷಯದಲ್ಲಿ ವಿಶೇಷ ವಿಷಯಗಳು** - ಬ್ರಾಹ್ಮಣರು ಬೆರಳಿನ ಬುಡದಲ್ಲಿಯೂ, ಕ್ಷತ್ರಿಯರು ಬೆರಳಿನ ಮಧ್ಯದ ಗಂಟಿನಲ್ಲಿಯೂ, ವೈಶ್ಯರು ತುದಿಯ ಗಂಟಿನಲ್ಲಿಯೂ ಧರಿಸಬೇಕು. ಪವಿತ್ರವನ್ನು ಅರ್ಘ್ಯಪಾತ್ರ ಮುಂತಾದ ಪಾತ್ರಗಳಲ್ಲಿಡಬಾರದು. ನೆಲದಲ್ಲಿ ಮಂಡಲವನ್ನು ಮಾಡಿ ಅದರ ಮೇಲಿಡಬೇಕು. ದರ್ಭೆಯನ್ನು ಧರಿಸದೆ ಊಟವನ್ನು ಮಾಡಬಾರದು. ಹಾಗೆ ಮಾಡಿದರೆ 100 ಗಾಯತ್ರೀಮಂತ್ರ ಜಪವನ್ನು ಮಾಡಬೇಕು.

(12) ಶ್ರೀಮಧ್ವಾಚಾರ್ಯರು 'ಸ್ನಾನಂ ಕುರ್ಯಾದ್ವಿಧಾನತಃ' ಎಂಬ ವಾಕ್ಯದಿಂದ ಸ್ನಾನವನ್ನು ವಿಧಿಪೂರ್ವಕವಾಗಿ ಮಾಡಬೇಕು' ಎಂದು ಹೇಳಿರುತ್ತಾರೆ. ಸ್ನಾನಕ್ಕಿಂತ ಪೂರ್ವಕಾಲದಲ್ಲಿ ಮಾಡಬೇಕಾದ ಎಲ್ಲಾ ಕಾರ್ಯಗಳನ್ನು ಮಾಡಿದ ಮೇಲೆ ಸ್ನಾನವನ್ನು ಮಾಡಿದಾಗಲೇ ಆ ಸ್ನಾನವು ವಿಧಿಪೂರ್ವಕವಾಗಿ ಮಾಡಿದ ಸ್ನಾನವೆನಿಸುತ್ತದೆ. ಇಲ್ಲದಿದ್ದರೆ ಇಲ್ಲ. ಅದಕ್ಕಾಗಿ 'ಸ್ನಾನಕ್ಕಿಂತ ಪೂರ್ವದಲ್ಲಿ ಅವಶ್ಯವಾಗಿ ಮಾಡಬೇಕಾದ ಎಲ್ಲಾ ಕಾರ್ಯಗಳನ್ನು ಮಾಡಿದ ಮೇಲೆ ಸ್ನಾನವನ್ನು ಮಾಡಬೇಕು' ಎಂಬ ಅಂಶವನ್ನು ಮೇಲ್ಕಂಡ ತನ್ನ ಮಾತಿನಿಂದಲೇ ತಿಳಿಸಿರುವರು. ಆದ್ದರಿಂದ ಸ್ನಾನಕ್ಕಿಂತ ಪೂರ್ವದಲ್ಲಿ ಮಾಡಬೇಕಾದ ಕಾರ್ಯಗಳನ್ನು ಈಗ ವಿವರಿಸುತ್ತಿದ್ದೇವೆ.

## ಪ್ರಾತಃಕಾಲಿಕ ಕೃತ್ಯಗಳು

### ಹಾಸಿಗೆಯಿಂದ ಏಳುವಾಗ ಹೇಳಬೇಕಾದ ಮಂತ್ರಗಳು

ದೇಹೇಂದ್ರಿಯಾತ್ಪರಃ ಸಾಕ್ಷಾತ್ಪಂಚವಿಂಶಾತ್ಮಕೋ ಹ್ಯಹಮ್ |
ಅಸ್ಮಿನ್ ದೇಹೇ ನಿವತ್ಸ್ಯಾಮಿ ಶೇಷಭೂತೋಽಸ್ಮಿ ಶಾರ್ಙ್ಗಿಣಃ || 1 ||
ಶುಕ್ಲಶೋಣಿತಸಂಭೂತೇ ಜರಾರೋಗಾದ್ಯುಪದ್ರುತೇ |
ಮೇದೋಮಜ್ಜಾಸ್ಥಿಮಾಂಸಾದಿಹೇಯದ್ರವ್ಯಸಮಾಕುಲೇ || 2 ||
ಮಲಮೂತ್ರವಸಾಪಂಕೇ ನಾನಾದುಃಖಸಮಾಕುಲೇ |
ತಾಪತ್ರಯಮಹಾವಹ್ನಿದಹ್ಯಮಾನೋಽನಿಶಂ ಭೃಶಮ್ || 3 ||
ಈಷಣಾತ್ರಯತೃಷ್ಣಾಗ್ನಿಪಚ್ಯಮಾನೋ ದುರತ್ಯಯೇ |
ಕ್ಲೇಶಾದಿಪಾಪಭೂಯಿಷ್ಠೇ ಕಾರಾಗೃಹನಿಭೇಽಶುಭೇ || 4 ||
ಬಹುಜನಬಹುಕ್ಲೇಶಗರ್ಭವಾಸಾದಿದುಃಖಿತೇ |
ವಸಾಮಿ ಸರ್ವದೋಷಾಣಾಂ ಶಮಲೇ ದುಃಖಭಾಜನೇ || 5 ||
ತಸ್ಮಾದ್ವಿಮೋಕ್ಷಣಾರ್ಥಾಯ ಚಿಂತಯಿಷ್ಯಾಮಿ ಕೇಶವಮ್ |
ವೈಕುಂಠೇ ಪರಮೇ ವ್ಯೋಮ್ನಿ ದುಗ್ಧಾಬ್ಧೌ ವೈಷ್ಣವೇ ಪದೇ || 6 ||
ಅನಂತಭೋಗಪರ್ಯಂಕೇ ಸಮಾಸೀನಂ ಶ್ರಿಯಃ ಪತಿಮ್ |
ಇಂದ್ರನೀಲಮಣಿಶ್ಯಾಮಂ ಶಂಖಚಕ್ರಗದಾಧರಮ್ || 7 ||

ಪೀತಾಂಬರಧರಂ ದೇವಂ ಪದ್ಮಪತ್ರನಿಭೇಕ್ಷಣಮ್ |
ಶ್ರೀವತ್ಸಕೌಸ್ತುಭೋರಸ್ಕಂ ಸರ್ವಾಭರಣಭೂಷಿತಮ್ || 8 ||

ಅರ್ಥ - ಈ ದೇಹದಲ್ಲಿ ಮಹತ್ತತ್ವ, ಅಹಂಕಾರತತ್ವ, ಮನಸ್ಸು, ಬುದ್ಧಿ, ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಗಿಂದ್ರಿಯ ಎಂಬ ಐದು ಜ್ಞಾನೇಂದ್ರಿಯಗಳು, ಕೈಗಳು ಕಾಲುಗಳು ವಾಗಿಂದ್ರಿಯ ಉಪಸ್ಥ ಪಾಯು ಅಂದರೆ ಮಲ ವಿಸರ್ಜನೇಂದ್ರಿಯ ಎಂಬ ಐದು ಕರ್ಮೇಂದ್ರಿಯಗಳು, ರೂಪ, ರಸ, ಗಂಧ, ಸ್ಪರ್ಶ, ಶಬ್ದ ಎಂಬ ಐದು ವಿಷಯಗಳು, ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ ಎಂಬ ಐದು ಭೂತಗಳು ಹೀಗೆ 24 ತತ್ತ್ವಗಳೂ ಅವುಗಳ ತತ್ತ್ವಾಭಿಮಾನಿದೇವತೆಗಳೂ ದೈತ್ಯರೂ ಇರುವರು. 25ನೆಯವನಾಗಿ ನಾನಿರುವೆನು. ಈ ದೇಹಕ್ಕಿಂತಲೂ ಇಂದ್ರಿಯಗಳಿಗಿಂತಲೂ ಇಂದ್ರಿಯಾಭಿಮಾನಿಗಳಿಗಿಂತಲೂ ನಾನು 25ನೆಯವನಾಗಿರುವೆನು. ಶ್ರೀಹರಿಯ ದಾಸನಾಗಿರುವೆನು. ಈ ದೇಹವು ತಂದೆಯ ಶುಕ್ರದಿಂದಲೂ ತಾಯಿಯ ರಕ್ತದಿಂದಲೂ ಭಿನ್ನನಾಗಿರುತ್ತದೆ. ಮುಪ್ಪು ಮುಂತಾದ ಅವಸ್ಥೆಗಳಿಂದಲೂ ರೋಗಗಳಿಂದಲೂ ಪೀಡಿಸಲ್ಪಡುತ್ತಿದೆ. ಮೇದಸ್ಸು ಮಜ್ಜೆ ಹುಟ್ಟಿರುವ ಮಾಂಸ, ಮಲ, ಮೂತ್ರ, ವಸಾ ಮುಂತಾದ ಹೊಲಸು ವಸ್ತುಗಳಿಂದ ತುಂಬಲ್ಪಟ್ಟಿದೆ. ನಾನಾ ವಿಧವಾದ ಎಲುಬು ಮಜ್ಜೆಗೆ ಜನ್ಮಸ್ಥಳವಾಗಿದೆ. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಎಂಬ ಮೂರು ವಿಧವಾದ ತಾಪಗಳೂ, ಹಣದ ಆಸೆ, ಹೆಣ್ಣಿನ ಆಸೆ, ಲೋಕಗಳ ಆಸೆ ಎಂಬ ಮೂರು ವಿಧವಾದ ಆಸೆಗಳೂ ನನ್ನನ್ನು ಬೆಂಕಿಯಂತೆ ಹಗಲಿರುಳು ಸುಡುತ್ತಿವೆ. ಆಸೆ ಕ್ಲೇಶ ಮುಂತಾದ ಅನರ್ಥಗಳಿಗೂ, ಪಾಪಕರ್ಮಗಳಿಗೂ, ಈ ದೇಹವು ಕಾರಣವಾಗಿ ಅನಂತಜನ್ಮಗಳಲ್ಲಿ ಗರ್ಭವಾಸ ಮುಂತಾದವುಗಳನ್ನು ಕೊಡುತ್ತಿದೆ. ತಪ್ಪಿಸಿಕೊಂಡು ಹೋಗುವುದಕ್ಕೆ ಸಾಧ್ಯವಿಲ್ಲದ ಜೈಲಿನಂತಿದೆ. ಸಕಲದೋಷಗಳಿಗೂ ದುಃಖಕ್ಕೂ ಆಶ್ರಯವಾಗಿರುವ ಈ ದೇಹದಲ್ಲಿ ಸಿಕ್ಕಿಬಿದ್ದಿರುವೆನು. ಈ ದೇಹದಿಂದ ಬಿಡುಗಡೆಯು ಸಿಗಬೇಕಾಗಿದೆ. ಅದಕ್ಕಾಗಿ ಶ್ರೀಹರಿಯನ್ನು ಸ್ಮರಿಸುವೆನು. ಕ್ಷೀರಸಮುದ್ರದ ಮಧ್ಯದಲ್ಲಿರುವ ಸರ್ವೋತ್ತಮನಾದ ವೈಕುಂಠಲೋಕದಲ್ಲಿ ಶೇಷದೇವನ ದೇಹದಲ್ಲಿ ಕುಳಿತಿರುವವನೂ, ಇಂದ್ರನೀಲಮಣಿಯಂತೆ ನೀಲವಾದ ದೇಹವುಳ್ಳವನೂ, ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿರುವವನೂ, ಪೀತಾಂಬರಧಾರಿಯೂ, ಶ್ರೀವತ್ಸ ಕೌಸ್ತುಭಮಣಿ ಮುಂತಾದ ಸರ್ವಾಭರಣಗಳಿಂದ ಭೂಷಿತನೂ ಆಗಿರುವ ಶ್ರೀಹರಿಯು ಲಕ್ಷ್ಮೀಸಮೇತನಾಗಿ ಕಮಲದಂತೆ ಸುಂದರವಾದ ಕೃಪಾದೃಷ್ಟಿಯಿಂದ ನನ್ನನ್ನು ನೋಡಲಿ.

ಮೇಲ್ಕಂಡ ಶ್ಲೋಕಗಳಿಂದ ಶ್ರೀಹರಿಯನ್ನು ಸ್ತುತಿಸಬೇಕು. ನಾರಾಯಣ ಎಂದು 108 ಸಲ ಹೇಳಬೇಕು.

ಶ್ರೀಹರ್ಯುತ್ಥಾಪನ - ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ |
ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಲಂ ಕುರು ||

'ಗೋವಿಂದ, ಏಳು ಎದ್ದೇಳು. ಗರುಡವಾಹನನೇ, ಏಳು, ಲಕ್ಷ್ಮೀರಮಣನೇ, ಏಳು, ಮೂರು ಲೋಕವೂ ಮಂಗಳಮಯವಾಗುವಂತೆ ಮಾಡು' ಎಂದು ಹೇಳುತ್ತಾ ಏಳಬೇಕು.

ಕರದರ್ಶನ - ಕರಾಗ್ರೇ ವಸತೇ ಲಕ್ಷ್ಮೀಃ ಕರಮಧ್ಯೇ ಸರಸ್ವತೀ |
ಕರಮೂಲೇ ತಥಾ ಗೌರೀ ಪ್ರಭಾತೇ ಕರದರ್ಶನಮ್ ||

'ಅಂಗೈಗಳ ತುದಿಯಲ್ಲಿ ಲಕ್ಷ್ಮೀದೇವಿಯೂ ಮಧ್ಯದಲ್ಲಿ ಸರಸ್ವತೀದೇವಿಯೂ ಬುಡದಲ್ಲಿ ಗೌರೀ ದೇವಿಯೂ ಸನ್ನಿಹಿತರಾಗಿದ್ದಾರೆ. ಆದ್ದರಿಂದ ಅರುಣೋದಯಕಾಲದಲ್ಲಿ ಅಂಗೈಗಳನ್ನು ನೋಡಬೇಕು.' ಎಂದು ಹೇಳುತ್ತಾ ಅಂಗೈಗಳನ್ನು ನೋಡಬೇಕು.

ಶ್ರೀವಿಷ್ಣುಪ್ರಾರ್ಥನೆ - ತಮದ್ಭುತಬಾಲಕಮಂಬುಜೇಕ್ಷಣಂ ಚತುರ್ಭುಜಂ ಶಂಖಗದಾದ್ಯುದಾಯುಧಮ್ |
ಶ್ರೀವತ್ಸಲಕ್ಷ್ಮಂ ಗಲಶೋಭಿಕೌಸ್ತುಭಂ ಪೀತಾಂಬರಂ ಸಾಂದ್ರಪಯೋದಸೌಭಗಮ್ ||
ಮಹಾರ್ಹವೈಡೂರ್ಯಕಿರೀಟಕುಂಡಲತ್ವಿಷಾ ಪರಿಷ್ವಕ್ತಸಹಸ್ರಕುಂತಲಮ್ |
ಉದ್ದಾಮಕಾಂಚ್ಯಂಗದಕಂಕಣಾದಿಭಿರ್ವಿರೋಚಮಾನಂ ವಸುದೇವ ಐಕ್ಷತ ||

'ಕಮಲದಂತಿರುವ ಕಣ್ಣುಗಳು, ನಾಲ್ಕು ಕೈಗಳಿಂದ ಶಂಖ ಚಕ್ರ ಗದಾ ಪದ್ಮಗಳು, ಎದೆಯಲ್ಲಿ ಶ್ರೀವತ್ಸಚಿಹ್ನ, ಕುತ್ತಿಗೆಯಲ್ಲಿ ಕೌಸ್ತುಭಮಣಿ, ಪೀತಾಂಬರ, ಅಮೂಲ್ಯವಾದ ಉಡುದಾರ ಭುಜಕೀರ್ತಿ ಹಸ್ತಾಭರಣ ಮುಂತಾದ ಆಭರಣಗಳಿಂದ ಶೋಭಿತನಾದ ಶ್ರೀಕೃಷ್ಣನೆಂಬ ಅದ್ಭುತ ಕೂಸನ್ನು ವಸುದೇವನು ನೋಡಿದನು.'

ಲಕ್ಷ್ಮೀಸ್ಮರಣ

ಕೌಶೇಯಪೀತವಸನಾಮರವಿಂದನೇತ್ರಾಂ ಪದ್ಮದ್ವಯಾಭಯವರೋದ್ಯತಪದ್ಮಹಸ್ತಾಮ್ |
ಉದ್ಯಚ್ಛತಾರ್ಕಸದೃಶೀಂ ಪರಮಾಂಕಸಂಸ್ಥಾಂ ಧ್ಯಾಯೇದ್ವಿಧೀಶನುತಪಾದಯುಗಾಂ ಜನಿತ್ರೀಮ್ ||

'ಹಳದಿಯಾದ ಪಟ್ಟೆ ಮಡಿ, ನಾಲ್ಕು ಕೈಗಳಲ್ಲಿ ಪದ್ಮ ಪದ್ಮ ಅಭಯ ವರಗಳನ್ನು ಧರಿಸಿರುವಳೂ, ಉದಯಿಸುತ್ತಿರುವ ಸೂರ್ಯನ ಕಾಂತಿಯುಳ್ಳವಳೂ, ಶ್ರೀಹರಿಯ ಎಡತೊಡೆಯಲ್ಲಿ ಕುಳಿತಿರುವವಳೂ, ಬ್ರಹ್ಮರುದ್ರರಿಂದ ವಂದಿಸಲ್ಪಡುತ್ತಿರುವ ಪಾದಗಳುಳ್ಳವಳೂ, ಕಮಲದಂತಿರುವ ಕಣ್ಣುಗಳುಳ್ಳವಳೂ ಆಗಿರುವ ಲಕ್ಷ್ಮೀದೇವಿಯನ್ನು ಸ್ಮರಿಸುವೆನು.'

ತತ್ತ್ವಾಭಿಮಾನಿದೇವತಾಸ್ಮರಣ

ಸರ್ವೋತ್ತಮೋ ವಿಷ್ಣುರಥೋ ರಮಾ ಚ ಬ್ರಹ್ಮಾ ಚ ವಾಯುಶ್ಚ ತದೀಯಪತ್ನ್ಯೌ |
ಅನ್ಯೇ ಚ ದೇವಾಃ ಸತತಂ ಪ್ರಸನ್ನಾ ಹೆಕಾ ಸುಭಕ್ತಿಂ ಮಯಿ ಸಂದಿಶಂತು ||

'ಸರ್ವೋತ್ತಮನಾದ ಶ್ರೀಹರಿ, ಅನಂತರದಲ್ಲಿ ಕ್ರಮವಾಗಿ ರಮಾದೇವಿಯರು, ಬ್ರಹ್ಮ ದೇವರು, ವಾಯುದೇವರು ಅವರಿಬ್ಬರ ಪತ್ನಿಯರಾದ ಸರಸ್ವತೀ ಮತ್ತು ಭಾರತೀದೇವಿಯರು, ಉಳಿದ ಎಲ್ಲಾ ದೇವತೆಗಳು ಪ್ರಸನ್ನರಾಗಿ ಯಾವಾಗಲೂ ಶ್ರೀಹರಿಯಲ್ಲಿ ಉತ್ತಮ ಭಕ್ತಿಯನ್ನು ನೀಡಲಿ.'

ಪತಿವ್ರತಾಸ್ಮರಣ - ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ |
ಪಂಚಕಂ ನಾ ಸ್ಮರೇನ್ನಿತ್ಯಂ ಮಹಾಪಾತಕನಾಶನಮ್ ||

ಅಹಲ್ಯೆ ದ್ರೌಪದಿ ಸೀತೆ ತಾರೆ ಮಂಡೋದರಿ ಎಂಬ ಐದು ನಾರಿಯರನ್ನು ಯಾವಾಗಲೂ ಸ್ಮರಿಸಬೇಕು. ಇದರಿಂದ ಎಲ್ಲಾ ಪಾಪಗಳೂ ನಶಿಸುತ್ತವೆ.

ಪುಣ್ಯಶ್ಲೋಕಸ್ಮರಣ - ಕರ್ಕೋಟಕಸ್ಯ ನಾಗಸ್ಯ ದಮಯಂತ್ಯಾ ನಳಸ್ಯ ಚ |
ಋತುಪರ್ಣಸ್ಯ ರಾಜರ್ಷೇಃ ಕೀರ್ತನಂ ಕಲಿನಾಶನಮ್ ||

'ಕರ್ಕೋಟಕಸರ್ಪ, ದಮಯಂತೀ, ನಳ, ರಾಜರ್ಷಿಯಾದ ಋತುಪರ್ಣ ಇವರ ನಾಮಸಂಕೀರ್ತನದಿಂದ ಕಲಿಬಾಧೆಯು ದೂರವಾಗುತ್ತದೆ.'

ಪುಣ್ಯಕ್ಷೇತ್ರಸ್ಮರಣ - ಅಹಂ ಕಾಶೀಂ ಗಮಿಷ್ಯಾಮಿ ತತ್ರೈವ ನಿವಸಾಮ್ಯಹಮ್ |
ಇತಿ ಬ್ರುವಾಣಃ ಸತತಂ ಕಾಶೀವಾಸಫಲಂ ಲಭೇತ್ ||

'ನಾನು ಕಾಶಿಗೆ ಹೋಗುವೆನು. ಅಲ್ಲಿಯೇ ಇರುವೆನು ಎಂದು ಹೇಳುವವನೂ ಸಹ ಕಾಶೀವಾಸದ ಫಲವನ್ನು ಪಡೆಯುವನು.'

ಗೋಕರ್ಣ ಸೇತೋ ಹಿಮವತ್ಪ್ರಯಾಗೌ ಕಾಶ್ಮೀರಸೋಮೇಶ್ವರವಿಷ್ಣುಪಾದಾ: |
ಶ್ರೀರಂಗ ಕೇದಾರ ಅನಂತ ಕನ್ಯೇ ಸ್ವಾಮಿನ್ ಕುರುಕ್ಷೇತ್ರ ಸದಾ ನಮಸ್ತೇ ||

'ಗೋಕರ್ಣ, ರಾಮಸೇತು, ಹಿಮವತ್ಪರ್ವತ, ಪ್ರಯಾಗ, ಕಾಶ್ಮೀರ, ಸೋಮೇಶ್ವರ, ವಿಷ್ಣುಪಾದ, ಶ್ರೀರಂಗ, ಕೇದಾರ, ಅನಂತಶಯನ, ಕನ್ಯಾಕುಮಾರಿ ಮುಂತಾದ ಕ್ಷೇತ್ರಾಭಿಮಾನಿದೇವತೆಗಳೇ ನಿಮ್ಮನ್ನು ಯಾವಾಗಲೂ ವಂದಿಸುವೆನು.

ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ |
ಪುರೀ ದ್ವಾರಾವತೀ ಚೈವ ಸಪ್ತೈತಾ ಮೋಕ್ಷದಾಯಕಾ: ||

ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಕಾಂಚೀ, ಅವಂತೀ, ದ್ವಾರಕಾಪುರೀ ಈ ಏಳು ಪಟ್ಟಣಗಳು ಮುಕ್ತಿದಾಯಕ ಕ್ಷೇತ್ರಗಳು.

ಸ್ವಾತ್ಮನಿವೇದನ - ನಾಹಂ ಕರ್ತಾ ಹರಿ: ಕರ್ತಾ ತತ್ಪೂಜಾ ಕರ್ಮ ಚಾಖಿಲಮ್ |
ತಥಾಪಿ ಮತ್ಕೃತಾ ಪೂಜಾ ತತ್ಪ್ರಸಾದೇನ ನಾನ್ಯಥಾ ||

'ನಾನು ಸ್ವತಂತ್ರ ಕರ್ತನಲ್ಲ. ಹರಿಯೇ ಸ್ವತಂತ್ರ ಕರ್ತನು. ನನ್ನಿಂದ ಏರ್ಪಡುತ್ತಿರುವ ಎಲ್ಲಾ ಕಾರ್ಯಗಳೂ ಅವನ ಪೂಜೆ. ನನ್ನಿಂದ ಮಾಡಲ್ಪಟ್ಟ ಈ ಎಲ್ಲಾ ಪೂಜೆಯೂ ಅವನ ಅನುಗ್ರಹದಿಂದಲೇ ಏರ್ಪಟ್ಟಿದೆ. ನನ್ನ ಇಷ್ಟದಂತೆ ಏರ್ಪಟ್ಟಿಲ್ಲ. ಅವನ ಇಷ್ಟದಂತೆಯೇ ಏರ್ಪಟ್ಟಿದೆ.'

ಹೀಗೆ ಸ್ಮರಿಸುತ್ತಾ ಎದ್ದು ಹಿಂದೆ ಹೇಳಿದಂತೆ ಮಲಮೂತ್ರವಿಸರ್ಜನದಿಂದ ಆರಂಭಿಸಿ ಆಚಮನದವರೆಗಿನ ಎಲ್ಲಾಕಾರ್ಯಗಳನ್ನು ಮಾಡಬೇಕು.

ತುಲಸೀವಂದನ - ಶುದ್ಧವಾದ ಜಲವನ್ನು ತೆಗೆದುಕೊಂಡು ತುಲಸೀವೃಂದಾವನದ ಸಮೀಪಕ್ಕೆ ಹೋಗಬೇಕು. ತುಳಸೀಗಿಡದ ಬುಡಕ್ಕೆ ನೀರನ್ನು ಎರೆಯಬೇಕು. ತುಳಸೀಮೂಲದಲ್ಲಿರುವ ನೀರನ್ನು ಪ್ರೋಕ್ಷಿಸಿಕೊಳ್ಳಬೇಕು. ಕೆಳಗೆ ಬರೆದಿರುವ ಮಂತ್ರಗಳಿಂದ ಪ್ರಾರ್ಥಿಸಬೇಕು.

ಪಾಪಾನಿ ಯಾನಿ ರವಿಸೂನುಪಟಸ್ಥಿತಾನಿ ಗೋಬ್ರಹ್ಮಬಾಲಪಿತೃಮಾತೃವಧಾದಿಕಾನಿ |
ನಶ್ಯಂತಿ ತಾನಿ ತುಲಸೀವನದರ್ಶನೇನ ಗೋಕೋಟಿದಾನಸದೃಶಂ ಫಲಮಾಶು ಚ ಸ್ಯಾತ್ ||

'ಯಮದೇವರ ಪಟ್ಟಿಯಲ್ಲಿರುವ ಗೋಹತ್ಯಾ, ಬ್ರಹ್ಮಹತ್ಯಾ, ಬಾಲಹತ್ಯಾ, ಪಿತೃಹತ್ಯಾ, ಮಾತೃಹತ್ಯಾ ಮುಂತಾದ ಎಲ್ಲಾಪಾಪಗಳು ತುಲಸೀವನದರ್ಶನದಿಂದ ನಶಿಸುತ್ತವೆ. ಕೋಟಿಗೋದಾನಗಳಿಗೆ ಸಮವಾದ ಫಲವು ಬರುತ್ತದೆ.'

ಲಲಾಟೇ ಯಸ್ಯ ದೃಶ್ಯೇತ ತುಲಸೀಮೂಲಮೃತ್ತಿಕಾ |
ಯಮಸ್ತಂ ನೇಕ್ಷಿತುಂ ಶಕ್ತ: ಕಿಮು ದೂತಾ ಭಯಂಕರಾ: ||

'ಯಾರ ಹಣೆಯಲ್ಲಿ ತುಳಸೀಗಿಡದ ಮೂಲ ಮೃತ್ತಿಕೆಯು ಕಾಣಿಸುತ್ತಿದೆಯೋ ಅವನನ್ನು ನೋಡಲು ಯಮನೇ ಶಕ್ತನಲ್ಲ. ಅವನ ದೂತರು ಶಕ್ತರಲ್ಲವೆಂದು ಹೇಳುವುದರಲ್ಲಿ ಆಶ್ಚರ್ಯವೇನಿದೆ?'

ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾ: ಸರಿತಸ್ತಥಾ |
ವಾಸುದೇವಾಜ್ಞಯಾ ದೇವಾ ವಸಂತಿ ತುಲಸೀವನೇ ||

'ಪುಷ್ಕರ ಮುಂತಾದ ತೀರ್ಥಗಳು, ಗಂಗೆ ಮುಂತಾದ ನದಿಗಳು, ಎಲ್ಲಾ ದೇವತೆಗಳು, ವಾಸುದೇವನ ಅಪ್ಪಣೆಯಿಂದ ತುಳಸೀವನದಲ್ಲಿ ವಾಸಿಸುತ್ತಿರುವರು.'

ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ |
ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ||

'ತುಳಸಿಯ ವನ, ಪದ್ಮವನ ಮತ್ತು ವೈಷ್ಣವರು ಎಲ್ಲೆಲ್ಲಿರುವರೋ ಅಲ್ಲಲ್ಲಿ ಶ್ರೀಹರಿಯು ಸನ್ನಿಹಿತನಾಗಿರುವನು.'

ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ |
ಯದಗ್ರೇ ಸರ್ವವೇದಾಶ್ಚ ತುಲಸೀ ತ್ವಾಂ ನಮಾಮ್ಯಹಮ್ ||

'ಯಾವ ತುಳಸಿಯ ಬೇರಿನಲ್ಲಿ ಸರ್ವತೀರ್ಥಗಳೂ, ಮಧ್ಯದಲ್ಲಿ ಸರ್ವದೇವತೆಗಳೂ, ತುದಿಯಲ್ಲಿ ಎಲ್ಲಾ ವೇದಗಳೂ ಇವೆಯೋ ಅಂತಹ ಓ ತುಳಸಿಯೇ, ನಿನ್ನನ್ನು ನಾನು ನಮಸ್ಕರಿಸುವೆನು.'

ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ||
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ||

'ಓ ತುಲಸಿಯೇ, ನೀನು ನಿನ್ನನ್ನು ನೋಡುತ್ತಿರುವವರ ಪಾಪವನ್ನು ಪರಿಹರಿಸುತ್ತಿರುವಿ. ಮುಟ್ಟುವವರ ಮೈಯನ್ನು ಶುದ್ಧವಾಗುವಂತೆ ಮಾಡುವಿ. ನಮಸ್ಕರಿಸುವವರ ರೋಗಗಳನ್ನು ದೂರ ಮಾಡುವಿ. ನಿನ್ನ ಬುಡದಲ್ಲಿ ನೀರನ್ನು ಎರೆಯುವವರನ್ನು ನೋಡಿದ ಯಮನಿಗೆ ಭಯವನ್ನು ಹುಟ್ಟಿಸುವಿ. ನಿನ್ನ ಗಿಡವನ್ನು ಬೆಳೆಸುವವರಿಗೆ ಶ್ರೀಕೃಷ್ಣನ ಸಮೀಪಕ್ಕೆ ಕರೆದುಕೊಂಡು ಹೋಗುತ್ತಿರುವಿ. ಶ್ರೀಕೃಷ್ಣನ ಪಾದಾರವಿಂದದಲ್ಲಿ ನಿನ್ನನ್ನು ಸಮರ್ಪಿಸುವವರಿಗೆ ಮುಕ್ತಿಯನ್ನು ಕೊಡುತ್ತಿರುವಿ. ಅಂತಹ ನಿನ್ನನ್ನು ನಮಸ್ಕರಿಸುವೆನು.'

ತುಲಸೀ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ |
ನಮಸ್ತೇ ನಾರದನುತೇ ನಾರಾಯಣಮನಃಪ್ರಿಯೇ ||

'ಓ ತುಳಸಿಯೇ, ನೀನು ಲಕ್ಷ್ಮೀದೇವಿಯರ ಸಖಿಯಾಗಿರುವಿ. ಮಂಗಲ ರೂಪಿಣಿಯಾಗಿರುವಿ. ಪಾಪಗಳನ್ನು ಪರಿಹರಿಸುತ್ತಿರುವಿ. ಪುಣ್ಯಗಳನ್ನು ಕೊಡುತ್ತಿರುವಿ. ನಾರದರಿಂದ ಸ್ತುತಿಸಲ್ಪಡುತ್ತಿರುವಿ. ನಾರಾಯಣನಿಗೆ ಅತಿ ಪ್ರಿಯಳಾಗಿರುವಿ. ನಿನ್ನನ್ನು ನಮಸ್ಕರಿಸುವೆನು.'

ಈ ಮಂತ್ರಗಳಿಂದ ತುಳಸಿಯನ್ನು ಪ್ರಾರ್ಥಿಸಬೇಕು. ತುಳಸೀಮೂಲಮೃತ್ತಿಕೆಯನ್ನು ಹಣೆಯಲ್ಲಿ ಧರಿಸಬೇಕು. ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಬೇಕು.

**ಗೋವಂದನ** - ಗೋವುಗಳ ಕೊಟ್ಟಿಗೆಗೆ ಹೋಗಬೇಕು. ಗೋವಿಗೆ ಕೆಳಗಿನ ಮಂತ್ರಗಳಿಂದ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಬೇಕು. ಗೋಪ್ರದಕ್ಷಿಣೆಯಿಂದ ಸಪ್ತದ್ವೀಪಸಹಿತವಾದ ಭೂಮಿಯ ಪ್ರದಕ್ಷಿಣವನ್ನು ಮಾಡಿದ ಫಲವು ಬರುತ್ತದೆ.

ಸರ್ವಕಾಮದುಘೇ ದೇವಿ ಸರ್ವತೀರ್ಥಾಭಿಷೇಚನಿ |
ಪಾವನೇ ಸುರಭಿ ಶ್ರೇಷ್ಠೇ ದೇವಿ ತುಭ್ಯಂ ನಮೋಽಸ್ತು ತೇ ||

'ಗೋಮಾತೆಯೇ, ನೀನು ಎಲ್ಲರಿಗೂ ಎಲ್ಲಾ ಇಷ್ಟಾರ್ಥಗಳನ್ನೂ ಕೊಡುತ್ತಿರುವಿ. ಎಲ್ಲಾ ತೀರ್ಥಗಳ ಅಭಿಷೇಕದ ಫಲವನ್ನೂ ಕೊಡುತ್ತಿರುವಿ. ಶ್ರೇಷ್ಠಳೂ ಪಾವನಳೂ ಆಗಿರುವ ನಿನ್ನನ್ನು ನಮಸ್ಕರಿಸುವೆನು.'

**ದೇವನಮಸ್ಕಾರ** - ದೇವರ ಮನೆಗೆ ಹೋಗಿ ದೇವರನ್ನು ಸ್ತುತಿಸಿ ನಮಸ್ಕರಿಸಬೇಕು. ಮಂಗಳಾಷ್ಟಕ, ಗೋಪಿಗೀತ, ಗಜೇಂದ್ರಮೋಕ್ಷ, ವೇಣುಗೀತ, ಭ್ರಮರಗೀತ ಮುಂತಾದವುಗಳನ್ನು ಪಠಿಸಬೇಕು.

## ಸ್ನಾನವಿಧಿ

(12) ವಿಧಾನತಃ ಸ್ನಾನಂ ಕುರ್ಯಾತ್ (ಶಾಸ್ತ್ರೋಕ್ತ ವಿಧಿಯಿಂದ ಸ್ನಾನವನ್ನು ಮಾಡಬೇಕು)

ಧ್ಯಾನಸ್ನಾನ - ಹಿಂದೆ ಹೇಳಿದ ತುಳಸೀದರ್ಶನಾದಿಗಳನ್ನು ಮಾಡುವುದಕ್ಕಿಂತ ಮುಂಚಿತವಾಗಿ ಧ್ಯಾನಸ್ನಾನವನ್ನು ಮಾಡಬೇಕು.

ಆಕಾಶದಲ್ಲಿರುವ ಸೂರ್ಯಮಂಡಲದ ಮಧ್ಯದಲ್ಲಿರುವ ಸವಿತೃನಾಮಕನಾದ ನಾರಾಯಣನನ್ನು ಸ್ಮರಿಸಬೇಕು. ಅವನು ಸಕಲ ಮಂತ್ರಗಳಿಂದಲೂ ಹೊಗಳಲ್ಪಡುವ ಗುಣಗಳಿಂದ ಯುಕ್ತನಾಗಿರುವನು. ಅನಂತಸೂರ್ಯನಂತೆ ಹೊಳೆಯುತ್ತಿರುವನು. ನಾಲ್ಕು ಕೈಗಳಿಂದ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸುತ್ತಾ, ಪೀತಾಂಬರವನ್ನು ಉಟ್ಟುಕೊಂಡು ಕಮಲದಂತಿರುವ ಕಣ್ಣುಗಳಿಂದಲೂ, ಪ್ರಸನ್ನಮುಖದಿಂದಲೂ, ಶಾಂತದೃಷ್ಟಿಯಿಂದಲೂ ನಮ್ಮನ್ನು ನೋಡುತ್ತಿರುವಂತೆ ಸ್ಮರಿಸಬೇಕು. ಅನೇಕ ರತ್ನಗಳಿಂದ ಖಚಿತವಾದ ರತ್ನಕುಂಡಲ, ವನಮಾಲೆ, ಸುವರ್ಣದ ಹಸ್ತಾಭರಣ, ಭುಜಕೀರ್ತಿ, ಕಿರುಗೆಜ್ಜೆ, ರತ್ನಕಿರೀಟ ಮುಂತಾದ ಸರ್ವಾಭರಣಗಳಿಂದ ಅಲಂಕೃತನಾದ ಅವನ ಪಾದಗಳನ್ನು ಸ್ಮರಿಸಬೇಕು. ಧ್ವಜ, ಅಂಕುಶ, ವಜ್ರ ಮುಂತಾದ ಲಕ್ಷಣಗಳಿಂದ ಯುಕ್ತವಾದ ಅವನ ಪಾದಗಳಿಂದ ಹುಟ್ಟಿದ ಗಂಗೆಯು ಅವನ ಪಾದದಿಂದ ಹೊರಟು ಆಕಾಶಮಾರ್ಗದಿಂದ ನಮ್ಮ ತಲೆಯ ಮೇಲೆ ದುಮುಕುತ್ತಿರುವಂತೆ ಸ್ಮರಿಸಬೇಕು. ಅಲ್ಲಿಂದ ತಲೆಯ ಮಧ್ಯದಲ್ಲಿರುವ ಬ್ರಹ್ಮರಂಧ್ರ ಮಾರ್ಗದಿಂದ ನಮ್ಮ ದೇಹದೊಳಗೆ ಪ್ರವೇಶಿಸಿ ಎಲ್ಲಾ ಕಡೆಯಲ್ಲಿಯೂ ಸಂಚರಿಸುತ್ತಾ ನಮ್ಮ ದೇಹವನ್ನು ಶುದ್ಧಿಗೊಳಿಸುವಂತಿರುವಂತೆ ಭಾವಿಸಬೇಕು. ದೇಹದೊಳಗೆ ಬಲಭಾಗದಲ್ಲಿರುವ ನಾಡಿಯಲ್ಲಿ ಗಂಗೆಯೂ, ಎಡಭಾಗದಲ್ಲಿರುವ ನಾಡಿಯಲ್ಲಿ ಯಮುನೆಯೂ, ಮಧ್ಯದಲ್ಲಿರುವ ನಾಡಿಯಲ್ಲಿ ಸರಸ್ವತಿಯೂ, ಉಳಿದ ಎಲ್ಲಾ ನಾಡಿಗಳಲ್ಲಿ ಮೂರುವರೆ ಕೋಟಿ ತೀರ್ಥಾಭಿಮಾನಿದೇವತೆಗಳೂ ಇದ್ದು ನಮ್ಮ ದೇಹವನ್ನು ಪರಿಶುದ್ಧಿಗೊಳಿಸುತ್ತಿರುವಂತೆ ಭಾವಿಸಬೇಕು. ಅದೇ ಸಮಯದಲ್ಲಿ ಮನಸ್ಸಿನಲ್ಲಿ ತನಗೆ ತಿಳಿದಿರುವ ಮಂತ್ರಗಳನ್ನು ಅರ್ಥಾನುಸಂಧಾನಮಾಡುತ್ತಾ ಸ್ಮರಿಸಬೇಕು. ಇದರಿಂದ ಅನಂತಪಾಲು ಅಧಿಕಫಲವು ಬರುತ್ತದೆ. ಹೀಗೆ ಧ್ಯಾನವನ್ನು ಮಾಡುತ್ತಾ ಕೆಳಗಿನ ಮಂತ್ರವನ್ನು ಪಠಿಸಬೇಕು.

ಅತಿನೀಲಘನಶ್ಯಾಮಂ ನಲಿನಾಯತಲೋಚನಮ್ |
ಸ್ಮರಾಮಿ ಪುಂಡರೀಕಾಕ್ಷಂ ತೇನ ಸ್ನಾತೋ ಭವಾಮ್ಯಹಮ್ ||

'ಅತಿ ನೀಲವಾದ ಮೇಘದಂತೆ ನೀಲವರ್ಣವುಳ್ಳವನು, ಕಮಲದಂತಿರುವ ಕಣ್ಣುಗಳುಳ್ಳವನೂ, ಆಗಿರುವ ಪುಂಡರೀಕಾಕ್ಷನನ್ನು ಸ್ಮರಿಸುವೆನು. ಇದರಿಂದ ನಾನು ಸ್ನಾನಫಲವನ್ನು ಪಡೆಯುವೆನು.'

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ |
ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ||

'ಶುದ್ಧನಾಗಿದ್ದರೂ, ಅಶುದ್ಧನಾಗಿದ್ದರೂ ,ಎಲ್ಲಾ ವಿಧವಾದ ಅವಸ್ಥೆಯುಳ್ಳವನಾಗಿದ್ದರೂ, ಪುಂಡರೀಕಾಕ್ಷನನ್ನು ಹಿಂದೆ ಹೇಳಿದ ರೀತಿಯಿಂದ ಸ್ಮರಿಸಿದರೆ ದೇಹಶುದ್ಧಿ, ಮನಃಶುದ್ಧಿ ಮುಂತಾದ ಎಲ್ಲಾ ಶುದ್ಧಿಯನ್ನೂ ಪಡೆಯುನು.' ಇದೇ ಧ್ಯಾನಸ್ನಾನವೆನಿಸುತ್ತದೆ.

(13) ಸ್ನಾನದ ಆವಶ್ಯಕತೆ - ಸ್ನಾನಂ ಕುರ್ಯಾತ್ - ಎಂಬ ವಾಕ್ಯದಲ್ಲಿರುವ 'ಕುರ್ಯಾತ್' ಎಂಬ ಪದದಲ್ಲಿ ಲಿಙ್ ಪ್ರತ್ಯಯವು ಇದೆ. ಈ ಪ್ರತ್ಯಯವು ಆಜ್ಞೆಯನ್ನು ತಿಳಿಸುತ್ತದೆ. "ಸ್ನಾನವನ್ನು ಮಾಡು, ಎಂದು ನಾನು ಮಾತ್ರ ಹೇಳುತ್ತಿಲ್ಲ. ಇದು ಶ್ರೀಹರಿಯ ಆಜ್ಞೆಯಾಗಿರುತ್ತದೆ. 'ಶ್ರುತಿಸ್ಮೃತೀ ಹರೇರಾಜ್ಞೇ' ಅಂದರೆ ಶ್ರೀಹರಿಯ ಆಜ್ಞೆಯಾಗಿರುವ ವೇದಗಳಲ್ಲಿಯೂ ಮನುಸ್ಮೃತಿ ಮುಂತಾದ ಸ್ಮೃತಿಗಳಲ್ಲಿಯೂ, ಹೇಳಿರುವ ಸಾರವನ್ನೇ ನಾನು ಹೇಳುತ್ತಿದ್ದೇನೆ. ಸರ್ವೋತ್ತಮನಾದ ಶ್ರೀಹರಿಯ

ಆಜ್ಞೆಯಂತೆ ನಡೆದುಕೊಂಡವನಿಗೆ ಎಲ್ಲಾ ವಿಧವಾದ ಕ್ಷೇಮವು ಏರ್ಪಡುವುದರಲ್ಲಿಯೂ, ನಡೆದುಕೊಳ್ಳದವನಿಗೆ ಅನಿಷ್ಟವೂ ಏರ್ಪಡುವುದರಲ್ಲಿಯೂ ಸಂಶಯವಿಲ್ಲ. ಆದ್ದರಿಂದ ಒಬ್ಬೊಬ್ಬನೂ ಸ್ನಾನವನ್ನು ಮಾಡಲೇಬೇಕು. ಈ ಸ್ನಾನದಿಂದ ಎಲ್ಲಾ ಅನಿಷ್ಟಗಳೂ ದೂರವಾಗಿ ಎಲ್ಲಾ ವಿಧವಾದ ಶ್ರೇಯಸ್ಸೂ ಏರ್ಪಡುತ್ತದೆ" ಎಂದು ಶ್ರೀಮದಾಚಾರ್ಯರು ಆಜ್ಞಾಪಿಸಿರುವರು. ಈ ವಿಷಯವು ಕೆಳಗಿನ ಪ್ರಮಾಣಗಳಿಂದ ಸ್ಪಷ್ಟವಾಗುತ್ತದೆ.

ಅಗಮ್ಯಾಗಮನಾತ್ ಸ್ತೇಯಾತ್ ಪಾಪೇಭ್ಯಶ್ಚ ಪ್ರತಿಗ್ರಹಾತ್ |
ರಹಸ್ಯಾಚರಿತಾತ್ಪಾಪಾನ್ಮುಚ್ಯತೇ ಸ್ನಾನಮಾಚರನ್ ||
ಮನಃಪ್ರಸಾದಜನನಂ ರೂಪಸೌಭಾಗ್ಯವರ್ಧನಮ್ |
ಶೋಕದುಃಸ್ವಪ್ನಹಂ ಸ್ನಾನಂ ಮೋಕ್ಷದಂ ಹ್ಲಾದನಂ ತಥಾ || (ಯೋಗಿಯಾಜ್ಞವಲ್ಕ್ಯ ವಚನ)

"ಸಂಗಕ್ಕೆ ಅನರ್ಹರಾಗಿರುವ ಸ್ತ್ರೀಯರೊಡನೆ ಸಂಗವನ್ನು ಮಾಡುವುದು, ಕದಿಯುವುದು, ಪಾಪಿಗಳಿಂದ ದಾನವನ್ನು ತೆಗೆದುಕೊಳ್ಳುವುದು, ಗುಟ್ಟಿನಲ್ಲಿ ಪಾಪವನ್ನು ಮಾಡುವುದು ಮುಂತಾದ ಎಲ್ಲಾ ಪಾಪಗಳೂ ಸ್ನಾನವನ್ನು ಮಾಡುವುದರಿಂದ ದೂರವಾಗುತ್ತವೆ. ಮನಸ್ಸಿನಲ್ಲಿ ನೈರ್ಮಲ್ಯ, ಸೌಂದರ್ಯ ಮತ್ತು ಸೌಭಾಗ್ಯಗಳ ವೃದ್ಧಿ, ದುಃಖ ಮತ್ತು ದುಃಸ್ವಪ್ನಗಳಿಂದ ಬರಲಿರುವ ಅನಿಷ್ಟಗಳ ಪರಿಹಾರ, ಸಂಸಾರದಿಂದ ಬಿಡುಗಡೆ, ಮುಕ್ತಿಸುಖಾನುಭವ ಇವುಗಳಲ್ಲಿ ಕೆಲವು ಸಾಕ್ಷಾತ್ತಾಗಿಯೂ ಕೆಲವು ಪರಂಪರೆಯಿಂದಲೂ ಸ್ನಾನದಿಂದ ಸಿಗುತ್ತವೆ."

(14) **ಸ್ನಾನವು ಸಕಲಕಾರ್ಯಗಳಿಗೂ ಅಂಗವಾಗಿರುತ್ತದೆ** - ಸ್ನಾನಂ ಕುರ್ಯಾತ್ - ಎಂದು ಹೇಳಿರುವರು. ಆಮೇಲೆ ಸಂಧ್ಯಾವಂದನ ಮುಂತಾದ ಎಲ್ಲಾ ಕಾರ್ಯಗಳನ್ನು ಮಾಡುವ ಕ್ರಮವನ್ನು ತಿಳಿಸಿರುವರು. ಇದರಿಂದ 'ಎಲ್ಲಾ ಕರ್ಮಗಳನ್ನು ಮಾಡುವುದಕ್ಕಿಂತ ಮುಂಚಿತವಾಗಿ ಸ್ನಾನವನ್ನು ಮಾಡಲೇ ಬೇಕು. ಈ ಸ್ನಾನವು ಎಲ್ಲಾ ಕರ್ಮಗಳಿಗೂ ಅಂಗವಾಗಿರುತ್ತದೆ. ಸ್ನಾನವನ್ನು ಮಾಡದೆ ಯಾವ ಕಾರ್ಯಗಳನ್ನು ಮಾಡಿದರೂ ಆ ಕರ್ಮಗಳು ಅಂಗಹೀನವಾದುದರಿಂದ ಫಲವನ್ನು ಕೊಡಲಾರವು. ಆದ್ದರಿಂದ ಸ್ನಾನ ಮಾಡದಿರುವವನಿಗೆ ಸಂಧ್ಯಾವಂದನ ಮುಂತಾದ ಶಾಸ್ತ್ರೋಕ್ತವಾದ ಯಾವ ಕರ್ಮಗಳನ್ನು ಮಾಡುವುದಕ್ಕೂ ಅಧಿಕಾರವಿಲ್ಲ' ಎಂದು ಶ್ರೀಮಧ್ವಾಚಾರ್ಯರು ಆಜ್ಞಾಪಿಸಿರುವರು. ಇದೇ ವಿಷಯವನ್ನು ಕೆಳಗಿನ ಪ್ರಮಾಣವು ಸ್ಪಷ್ಟಪಡಿಸುತ್ತದೆ.

(15) **ಪ್ರಾತಃಸ್ನಾನವು ನಿತ್ಯ** - ಸಮುತ್ಥಾಯ ಸ್ನಾನಂ ಕುರ್ಯಾತ್ - 'ಎದ್ದ ಮೇಲೆ ಸ್ನಾನವನ್ನು ಮಾಡಬೇಕು' ಎಂದು ಆಜ್ಞಾಪಿಸಿರುರು. ಎದ್ದ ಮೇಲೆ ಮಾಡುವ ಸ್ನಾನವು ಪ್ರಾತಃಸ್ನಾನವೇ ಹೊರತು ಬೇರೆ ಅಲ್ಲ. ಆದ್ದರಿಂದ 'ಒಬ್ಬೊಬ್ಬನೂ ಬೆಳಿಗ್ಗೆ ಎದ್ದ ಮೇಲೆ ಸ್ನಾನಕ್ಕೆ ಪೂರ್ವಾಂಗವಾದ ಮಲಮೂತ್ರವಿಸರ್ಜನ, ಮೃತ್ತಿಕಾಶೌಚ, ದಂತಧಾವನ, ಆಚಮನ ಮುಂತಾದವುಗಳನ್ನು ಮಾಡಿ ಮುಗಿದ ಕೂಡಲೇ ಸ್ನಾನವನ್ನು ಮಾಡಬೇಕು. ಮಧ್ಯಾಹ್ನದವರೆಗೆ ಸುಮ್ಮನೆ ಇದ್ದು ತನಗೆ ತೋರಿದಾಗ ಸ್ನಾನವನ್ನು ಮಾಡುವುದು ತಪ್ಪು' ಎಂದು ತಿಳಿಸಿರುವರು. ಹೀಗೆ ಈ ಪ್ರಾತಃಸ್ನಾನವನ್ನು ಮಾಡಲೇ ಬೇಕು ಎಂದು ಹೇಳಿರುವುದರಿಂದ 'ಪ್ರಾತಃಸ್ನಾನವು ಸಂಧ್ಯಾವಂದನದಂತೆ ನಿತ್ಯ' ಎಂದು ಹೇಳಿದಂತಾಯಿತು. 'ಸಂಧ್ಯಾವಂದನ ಮುಂತಾದ ನಿತ್ಯಕರ್ಮಗಳನ್ನು ಮಾಡದವನು ಪಾಪವನ್ನು ಪಡೆಯುವಂತೆ ಪ್ರಾತಃಸ್ನಾನವನ್ನು ಮಾಡದವನೂ ಪಾಪವನ್ನು ಪಡೆಯುತ್ತಾನೆ' ಎಂದೂ ಹೇಳಿದಂತಾಯಿತು. ಈ ವಿಷಯವನ್ನು ಕೆಳಗಿನ ಪ್ರಮಾಣವು ಸ್ಪಷ್ಟಪಡಿಸುತ್ತದೆ.

ಪ್ರಕ್ಷಾಲ್ಯ ದಂತಕಾಷ್ಠಂ ವೈ ಭಕ್ಷಯಿತ್ವಾ ಯಥಾವಿಧಿ |
ಆಚಮ್ಯ ಪ್ರಯತೋ ನಿತ್ಯಂ ಪ್ರಾತಃಸ್ನಾನಂ ಸಮಾಚರೇತ್ ||
ಅಸ್ನಾತಸ್ತು ದ್ವಿಜೋ ನಾರ್ಹೋ ಜಪ್ಯಾಗ್ನಿಹವನಾದಿಷು |
ಪ್ರಾತಃಸ್ನಾನಂ ತದರ್ಥಂ ತು ನಿತ್ಯಸ್ನಾನಂ ಪ್ರಕೀರ್ತಿತಮ್ || (ಕೂರ್ಮಪುರಾಣ)

'ಬೆಳಿಗ್ಗೆ ಹಲ್ಲುಗಳನ್ನು ಉಜ್ಜಿಕೊಂಡು ಮುಖವನ್ನು ತೊಳೆದುಕೊಳ್ಳಬೇಕು. ಅನಂತರ ಆಚಮನವನ್ನು ಮಾಡಬೇಕು. ಇದರಿಂದ ಶುದ್ಧನಾಗಿ ಪ್ರಾತಃಸ್ನಾನವನ್ನು ಮಾಡಬೇಕು. ಸ್ನಾನವನ್ನು ಮಾಡದವನು ಜಪ ಹೋಮ ಮುಂತಾದ ಯಾವ ಕರ್ಮಗಳನ್ನು ಮಾಡುವುದಕ್ಕೂ ಅರ್ಹನಾಗುವುದಿಲ್ಲ. ಆದ್ದರಿಂದ ಎಲ್ಲಾ ಕರ್ಮಗಳನ್ನೂ ಮಾಡುವ ಅರ್ಹತೆಯನ್ನು ಪಡೆಯುವುದಕ್ಕಾಗಿ ಮಾಡುತ್ತಿರುವ ಪ್ರಾತಃಸ್ನಾನವು ನಿತ್ಯಕರ್ಮಗಳಲ್ಲಿ ಒಂದಾಗಿದೆ.

ಯಥಾಽಹನಿ ತಥಾ ಪ್ರಾತರ್ನಿತ್ಯಂ ಸ್ನಾಯಾದತಂದ್ರಿತಃ |
ದಂತಾನ್ ಪ್ರಕ್ಷಾಲ್ಯ ನದ್ಯಾದೌ ಗೃಹೇ ಚೇತ್ತದಮಂತ್ರವತ್ || (ವ್ಯೆಯಾಘ್ರಪಾದವಚನ)
ಅಮಂತ್ರವದಿತಿ ಬಹುಮಂತ್ರತ್ವನಿಷೇಧಾಯ || (ಸ್ಮೃತಿಮುಕ್ತಾವಲೀವಚನ)

'ಸ್ವಲ್ಪವೂ ಆಲಸ್ಯವಿಲ್ಲದೆ ಶಾಸ್ತ್ರದಲ್ಲಿ ಹೇಳಿದಂತೆ ಹಗಲಿನಲ್ಲಿ ಸ್ನಾನವನ್ನು ಮಾಡಬೇಕು. ಅದರಲ್ಲಿಯೂ ಬೆಳಿಗ್ಗೆ ಹಲ್ಲುಗಳನ್ನು ಉಜ್ಜಿದ ಮೇಲೆ ನಿತ್ಯವೂ ಸ್ನಾನವನ್ನು ಮಾಡಬೇಕು. ನದೀ, ಸರೋವರ ಮುಂತಾದ ಮನೆಯಿಂದ ಹೊರಗಿರುವ ನೀರಿನಲ್ಲಿ ಸ್ನಾನ ಮಾಡುವಾಗ ಹೆಚ್ಚು ಮಂತ್ರಗಳನ್ನು ಹೇಳುತ್ತಾ ಸ್ನಾನ ಮಾಡಬೇಕು. ಮನೆಯೊಳಗೆ ಸ್ನಾನ ಮಾಡುವುದಾದರೆ ಅಷ್ಟು ಅಧಿಕವಾದ ಮಂತ್ರಗಳನ್ನು ಜಪಿಸಬೇಕಾದ ನಿರ್ಬಂಧವಿಲ್ಲ.'

(16) ಪ್ರಾತಃಸ್ನಾನವನ್ನು ಮಾಡದಿದ್ದರೆ ದೋಷವುಂಟು - ಸಮುತ್ಥಾಯ ಸ್ನಾನಂ ಕುರ್ಯಾತ್ - 'ಬೆಳಿಗ್ಗೆ ಎದ್ದು ಸ್ನಾನವನ್ನು ಮಾಡಬೇಕು' ಎಂದು ಆಜ್ಞಾಪಿಸಿರುವರು. ಇದರಿಂದ 'ಪ್ರಾತಃಸ್ನಾನವನ್ನು ಮಾಡದಿರುವವನಿಗೆ ಅನಿಷ್ಟಗಳು ಏರ್ಪಡುತ್ತವೆ' ಎಂದು ಸೂಚಿಸಿರುವರು. ಅನಿಷ್ಟಗಳು ಬಾರದಿದ್ದರೆ ಹಾಗೆ ಆಜ್ಞಾಪಿಸುತ್ತಿದ್ದಿಲ್ಲ. ಈ ವಿಷಯವನ್ನು ಕೆಳಗಿನ ಪ್ರಮಾಣವು ತಿಳಿಸುತ್ತದೆ.

ಲಾಲಾಸ್ವೇದಸಮಾಕೀರ್ಣಃ ಶಯನಾದುತ್ಥಿತಃ ಪುಮಾನ್ |
ಅಸ್ನಾತ್ವಾಽಸೌ ಚರೇತ್ಕರ್ಮ ಜಪಹೋಮಾದಿಕಂ ಯದಿ ||
ಪಚ್ಯತೇ ನರಕೇ ಘೋರೇ ನಿತ್ಯದುಃಖಸಮನ್ವಿತಃ |
ಅತ್ಯಂತಮಲಿನಃ ಕಾಯೋ ನವಛಿದ್ರಸಮನ್ವಿತಃ ||
ಸ್ರವತ್ಯೇವ ದಿವಾ ರಾತ್ರೌ ಪ್ರಾತಃಸ್ನಾನಂ ವಿಶೋಧನಮ್ |
ಪ್ರಾತಃಸ್ನಾನಂ ಪ್ರಶಂಸಂತಿ ದೃಷ್ಟಾದೃಷ್ಟಫಲಂ ಹಿ ತತ್ ||
ಅಲಕ್ಷ್ಮೀಃ ಕಾಲಕರ್ಣೀ ಚ ದುಃಸ್ವಪ್ನಂ ದುರ್ವಿಚಿಂತನಂ | (ಕಾಲಕರ್ಣೀ ಕೃತ್ಯಾ)
ಪ್ರಾತಃಸ್ನಾನೇನ ಪಾಪಾನಿ ಪೂಯಂತೇ ನಾತ್ರ ಸಂಶಯಃ ||
ಅಜ್ಞಾನಾದ್ಯದಿ ಮೋಹಾದ್ವಾ ರಾತ್ರೌ ದುಶ್ಚರಿತಂ ಕೃತಮ್ |
ಪ್ರಾತಃಸ್ನಾನೇನ ತತ್ಸರ್ವಂ ಶೋಧಯಂತಿ ದ್ವಿಜಾತಯಃ || (ವ್ಯಾಸವಚನ)

'ಬೆಳಿಗ್ಗೆ ಏಳುವಾಗ ದೇಹದಲ್ಲಿ ಜೊಲ್ಲು ಮತ್ತು ಬೆವರು ಅಂಟಿರುತ್ತದೆ. ಅದು ಮಾತ್ರವಲ್ಲ. ಈ ದೇಹವು ಸ್ವತಃ ಅತ್ಯಂತ ಮಲಿನವಾಗಿರುತ್ತದೆ. ಈ ದೇಹದಲ್ಲಿ ಎರಡು ಕಣ್ಣುಗಳು, ಎರಡು ಮೂಗಿನ ರಂಧ್ರಗಳು, ಎರಡು ಕಿವಿಗಳು, ಬಾಯಿ, ಮಲವಿಸರ್ಜನದ್ವಾರ, ಮೂತ್ರವಿಸರ್ಜನದ್ವಾರ ಎಂಬ ಒಂಭತ್ತು ಬಾಗಿಲುಗಳಿವೆ. ಇವುಗಳಿಂದ ಹಗಲಿರುಳು ಎಡೆಬಿಡದೆ ಮಲಗಳು ಹೊರಬೀಳುತ್ತಿರುತ್ತವೆ. ಪ್ರಾತಃಸ್ನಾನವನ್ನು ಮಾಡಿದ್ದರಿಂದ ಈ ಎಲ್ಲಾ ಮಲಗಳನ್ನೂ ತೊಳೆದು ದೇಹವನ್ನು ಒಮ್ಮೆ ಶುದ್ಧಿ ಮಾಡಿದಂತಾಗುತ್ತದೆ. ಪ್ರಾತಃಸ್ನಾನವು ದೇಹಶುದ್ಧಿ ಎಂಬ ದೃಷ್ಟ ಅಂದರೆ ನಮಗೆ ತಿಳಿದ ಫಲವನ್ನೂ ಅದೃಷ್ಟ ಅಂದರೆ ನಮಗೆ ತಿಳಿಯದಿರುವ ಪಾಪಪರಿಹಾರ ಎಂಬ ಫಲವನ್ನೂ ಕೊಡುತ್ತದೆ. ಆದ್ದರಿಂದ ಈ ಸ್ನಾನವು

'ದೃಷ್ಟಾದೃಷ್ಟಫಲಕ' ಅಂದರೆ 'ದೃಷ್ಟ ಮತ್ತು ಅದೃಷ್ಟ ಎಂಬ ಎರಡು ಫಲಗಳನ್ನು ಕೊಡಬಲ್ಲುದು' ಎಂದು ಜ್ಞಾನಿಗಳು ಹೇಳುತ್ತಾರೆ. ಪ್ರಾತಃಸ್ನಾನವನ್ನು ಮಾಡದೆ ಜಪಹೋಮ ಮುಂತಾದ ಕರ್ಮಗಳನ್ನು ಮಾಡುವವನು ಘೋರವಾದ ನರಕದಲ್ಲಿ ಬಿದ್ದು ನಿತ್ಯದುಃಖವನ್ನು ಅನುಭವಿಸುವನು. ಕಲಿಸಾನ್ನಿಧ್ಯ, ಅಭಿಚಾರ ಅಂದರೆ ಮಾಟ ಮುಂತಾದವುಗಳು, ದುಃಸ್ವಪ್ನಗಳು, ದುರಾಲೋಚನೆ ಮುಂತಾದವುಗಳಿಂದ ಏರ್ಪಡುವ ಎಲ್ಲಾ ದೋಷಗಳೂ, ಎಲ್ಲಾ ಪಾಪಗಳೂ, ಪ್ರಾತಃಸ್ನಾನದಿಂದ ನಶಿಸುತ್ತವೆ. ಸಂಶಯವಿಲ್ಲ. ತಿಳಿಯದೆ ಅಥವಾ ತಿಳಿದು ಅಥವಾ ವಿಪರೀತಜ್ಞಾನದಿಂದ ರಾತ್ರಿಯಲ್ಲಿ ಮಾಡಿರುವ ಎಲ್ಲಾ ಪಾಪಗಳನ್ನೂ ಜ್ಞಾನಿಗಳಾದ ಬ್ರಾಹ್ಮಣರು ಪ್ರಾತಃಸ್ನಾನದಿಂದ ಕಳೆದುಕೊಳ್ಳುವರು.'

(17) ಪ್ರಾತಸ್ಸ್ನಾನಕಾಲ - ಯಥಾವಿಧಿ ಸ್ನಾನಂ ಕುರ್ಯಾತ್ - ಈ ವಾಕ್ಯದಲ್ಲಿ ಶಾಸ್ತ್ರೋಕ್ತವಿಧಿಯಿಂದ ಸ್ನಾನವನ್ನು ಮಾಡಬೇಕೆಂದು ಆಜ್ಞಾಪಿಸಿರುತ್ತಾರೆ. ಇದರಿಂದ ಶಾಸ್ತ್ರದಲ್ಲಿ ಹೇಳಿರುವ ಪ್ರಾತಃಸ್ನಾನಕಾಲ, ಕ್ರಮ ಮುಂತಾದ ಪ್ರಾತಃಸ್ನಾನಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನೂ ಸೂಚಿಸಿರುವರು. ಅವುಗಳಲ್ಲಿ ಪ್ರಾತಃಸ್ನಾನಕಾಲವನ್ನು ಕೆಳಗಿನ ಪ್ರಮಾಣವು ಸ್ಪಷ್ಟಪಡಿಸುತ್ತದೆ.

ಸತತಂ ಪ್ರಾತರುತ್ಥಾಯ ದಂತಧಾವನಪೂರ್ವಕಮ್ |
ಆಚರೇದುಷಸಿ ಸ್ನಾನಂ ತರ್ಪಯೇದ್ದೇವಮಾನುಷಾನ್ || (ಜಾಬಾಲಿವಚನ)

'ಬೆಳಿಗ್ಗೆ ಬೇಗನೆ ಏಳಬೇಕು. ಹಲ್ಲುಗಳನ್ನು ಉಜ್ಜಬೇಕು. ಉಷಃಕಾಲದಲ್ಲಿ ಸ್ನಾನವನ್ನು ಮಾಡಬೇಕು. ಅನಂತರದಲ್ಲಿ ದೇವತೆಗಳನ್ನೂ ಮನುಷ್ಯರನ್ನೂ ತೃಪ್ತಿಪಡಿಸಬೇಕು.'

ಪ್ರಾತಃಸ್ನಾಯ್ಯರುಣಕರಗ್ರಸ್ತಾಂ ಪ್ರಾಚೀಮವಲೋಕ್ಯ ಸ್ನಾಯಾತ್ || (ವಿಷ್ಣುವಚನ)

'ಪ್ರಾತಃಸ್ನಾನವನ್ನು ಮಾಡುವವನು ಸೂರ್ಯಸಾರಥಿಯಾದ ಅರುಣನ ಕಿರಣಗಳಿಂದ ಪೂರ್ವದಿಕ್ಕು ಕೆಂಪಾಗಿರುವುದನ್ನು ನೋಡಿ ಆ ಸಮಯದಲ್ಲಿ ಸ್ನಾನವನ್ನು ಮಾಡಬೇಕು.'

ಮೇಲೆ ಹೇಳಿದ ಜಾಬಾಲಿವಚನವು ಉಷಃಕಾಲದಲ್ಲಿ ಪ್ರಾತಃಸ್ನಾನವನ್ನು ಮಾಡಬೇಕೆಂದು ಹೇಳುತ್ತದೆ. ವಿಷ್ಣುವಚನವು ಅರುಣನ ಕಿರಣಗಳಿಂದ ಪೂರ್ವದಿಕ್ಕು ಕೆಂಪಾಗಿರುವ ಕಾಲದಲ್ಲಿ ಪ್ರಾತಃಸ್ನಾನವನ್ನು ಮಾಡಬೇಕೆಂದು ಹೇಳುತ್ತದೆ. ಈ ಎರಡು ವಾಕ್ಯಗಳನ್ನು ಒಟ್ಟುಗೂಡಿಸಿ ಅರ್ಥವನ್ನು ತಿಳಿಯುವಾಗ ಅರುಣನ ಕಿರಣಗಳಿಂದ ಮೂಡು ದಿಕ್ಕು ಕೆಂಪಾಗಿರುವ ಕಾಲವೇ ಉಷಃಕಾಲವೆಂದು ತಿಳಿಯುತ್ತದೆ.

ಚತಸ್ರೋ ಘಟಿಕಾಃ ಪ್ರಾತರರುಣೋದಯ ಉಚ್ಯತೇ |
ಯತೀನಾಂ ಸ್ನಾನಕಾಲೋಽಯಂ ಗಂಗಾಂಭಃ ಸದೃಶಃ ಸ್ಮೃತಃ || (ಶ್ರೀಮಧ್ವಾಚಾರ್ಯರ ವಚನ)

'ಸೂರ್ಯೋದಯಕ್ಕಿಂತ ಹಿಂದಿನ 4 ಗಳಿಗೆಗಳು ಅರುಣೋದಯ ಕಾಲವೆನಿಸುತ್ತವೆ. ಈ ಅರುಣೋದಯಕಾಲವು ಗಂಗಾಜಲದಂತೆ ಅತ್ಯಂತ ಪಾವನವಾದದ್ದು. ಈ ಕಾಲವು ಯತಿಗಳಿಗೆ ಸ್ನಾನಕಾಲವಾಗಿರುತ್ತದೆ' ಈ ಆಚಾರ್ಯರ ವಚನವು ಮೇಲ್ಕಂಡ ಉಷಃಕಾಲದ ಸ್ವರೂಪವನ್ನು ಅತಿ ಸ್ಪಷ್ಟಪಡಿಸಿರುತ್ತದೆ.

ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮುತ್ತರಾಂ ಸದಿವಾಕರಾಮ್ || (ಆಚಾರ್ಯರ ವಚನ)

'ಪ್ರಾತಃಸಂಧ್ಯಾವಂದನವನ್ನು ನಕ್ಷತ್ರಗಳಿರುವ ಕಾಲದಲ್ಲಿ ಮಾಡಬೇಕು. ಸಾಯಂಸಂಧ್ಯಾವಂದನವನ್ನು ಸೂರ್ಯನಿರುವಾಗಲೇ ಮಾಡಬೇಕು.'

ಆಸೂರ್ಯದರ್ಶನಾತ್ತಿಷ್ಠೇತ್ ತತಸ್ತೂಪವಿಶೇತ ವಾ || (ಆಚಾರ್ಯರ ವಚನ)

'ಸೂರ್ಯ ದರ್ಶನವಾಗುವವರೆಗೆ ನಿಂತು ಗಾಯತ್ರೀಮಂತ್ರವನ್ನು ಜಪಿಸಬೇಕು. ಸೂರ್ಯೋದಯವಾದ ಮೇಲೆ ನಿಂತು ಅಥವಾ ಕುಳಿತು ಗಾಯತ್ರೀಮಂತ್ರವನ್ನು ಜಪಿಸಬೇಕು.'

ಈ ಎರಡು ಆಚಾರ್ಯವಚನಗಳಲ್ಲಿ ಹೇಳಿರುವ ಸಂಧ್ಯಾವಂದನ ಮತ್ತು ಗಾಯತ್ರೀಮಂತ್ರಗಳ ಜಪಗಳ ಕಾಲಕ್ಕಿಂತ ಹಿಂದೆಯೇ ಪ್ರಾತಃಸ್ನಾನವನ್ನು ಮಾಡಬೇಕೆಂದು ಸೂಚಿಸಲ್ಪಟ್ಟಿದೆ.

ತಸ್ಮಾತ್ ಉದಯಾತ್ಪ್ರಾಗೇವ ಅರುಣಕರಸ್ಪರ್ಶನಮಾತ್ರೇ ಸತಿ ಪ್ರಾತಃಸ್ನಾನಂ ಕಾರ್ಯಮ್ |

(ಸ್ಮೃತಿಮುಕ್ತಾವಲಿ)

"ಹಿಂದೆ ಹೇಳಿರುವ ಎಲ್ಲಾ ವಾಕ್ಯಗಳಿಂದ 'ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಸೂರ್ಯಸಾರಥಿಯಾದ ಅರುಣನ ಕಿರಣಗಳು ಪೂರ್ವದಿಕ್ಕಿನಲ್ಲಿ ಸ್ಪರ್ಶಿಸಿದ ಕೂಡಲೇ ಪ್ರಾತಃಸ್ನಾನವನ್ನು ಮಾಡಬೇಕು' ಎಂದು ತಿಳಿಯುತ್ತದೆ."

(18) ಸ್ನಾನದಲ್ಲಿ ಅವಾಂತರಭೇದಗಳು - ಯಥಾವಿಧಿ ಸ್ನಾನಂ ಕುರ್ಯಾತ್ - ಈ ವಾಕ್ಯದಲ್ಲಿ ಶಾಸ್ತ್ರೋಕ್ತ ರೀತಿಯಿಂದ ಸ್ನಾನವನ್ನು ಮಾಡಲೇ ಬೇಕು ಎಂದು ಆಜ್ಞಾಪಿಸಿದ್ದಾರೆ.

ಇಲ್ಲಿರುವ 'ಸ್ನಾನ' ಎಂಬ ಪದವು ಶಾಸ್ತ್ರಪ್ರಸಿದ್ಧವಾದ ಎಲ್ಲಾ ಸ್ನಾನಗಳನ್ನೂ ತಿಳಿಸುತ್ತದೆ. ಯಾವ ಯಾವ ಸಂದರ್ಭದಲ್ಲಿ ಯಾವ ಯಾವ ಸ್ನಾನವನ್ನು ಮಾಡಬೇಕೆಂದು ಶಾಸ್ತ್ರವು ತಿಳಿಸುತ್ತದೆಯೋ, ಆಯಾ ಸಂದರ್ಭದಲ್ಲಿ ಅವಕ್ಕೆ ಯೋಗ್ಯವಾದ ಎಲ್ಲಾ ಸ್ನಾನಗಳನ್ನೂ ಮಾಡಬೇಕೆಂದು ಈ ಪದದಿಂದ ಶ್ರೀಮದಾಚಾರ್ಯರು ತಿಳಿಸಿರುತ್ತಾರೆ. ಸ್ನಾನದಲ್ಲಿರುವ ಅವಾಂತರಭೇದವು ಕೆಳಗಿನ ಪ್ರಮಾಣದಿಂದ ಸ್ಪಷ್ಟವಾಗುತ್ತದೆ.

ಸ್ನಾನಂ ತು ದ್ವಿವಿಧಂ ಪ್ರೋಕ್ತಂ ಗೌಣಮುಖ್ಯಪ್ರಭೇದತಃ |
ತಯೋಸ್ತು ವಾರುಣಂ ಮುಖ್ಯಂ ತತ್ಪುನಃ ಷಡ್ವಿಧಂ ಭವೇತ್ ||
ನಿತ್ಯಂ ನೈಮಿತ್ತಿಕಂ ಕಾಮ್ಯಂ ಕ್ರಿಯಾಂಗಂ ಕಾಲಕರ್ಮಣಾಮ್ |
ಕ್ರಿಯಾಸ್ನಾನಂ ತಥಾ ಷಷ್ಠಂ ಷೋಢಾ ಸ್ನಾನಂ ಪ್ರಕೀರ್ತಿತಮ್ || (ಶಂಖವಚನ)

ಸ್ನಾನವು ಗೌಣಸ್ನಾನ, ಮುಖ್ಯಸ್ನಾನ ಎಂದು ಎರಡು ವಿಧವಾಗಿದೆ. ಇವುಗಳಲ್ಲಿ ವಾರುಣಸ್ನಾನ ಅಂದರೆ ನೀರನಲ್ಲಿ ಮುಳುಗಿ ಮಾಡುವ ಸ್ನಾನವು ಮುಖ್ಯಸ್ನಾನವೆನಿಸುತ್ತದೆ. ಈ ವಾರುಣಸ್ನಾನವು (1) ನಿತ್ಯಸ್ನಾನ (2) ನೈಮಿತ್ತಿಕಸ್ನಾನ (3) ಕಾಮ್ಯ ಸ್ನಾನ (4) ಕಾಲಾಂಗಸ್ನಾನ (5) ಕರ್ಮಾಂಗಸ್ನಾನ (6) ಕ್ರಿಯಾಸ್ನಾನ ಎಂದು ಆರು ವಿಧವಾಗಿದೆ. ಈ ಆರುವಿಧವಾದ ಸ್ನಾನಗಳಲ್ಲಿ ಪ್ರಾತಃಸ್ನಾನವು ನಿತ್ಯವಾದುದರಿಂದ ಅದನ್ನು ಶ್ರೀಮಧ್ವಾಚಾರ್ಯರು ವಿಸ್ತಾರವಾಗಿ ಹೇಳಿರುವರು. ಈ ವಾರುಣಸ್ನಾನವನ್ನು ಮಾಡಲು ಶಕ್ತಿಯಿಲ್ಲದವರು ಗೌಣಸ್ನಾನಗಳನ್ನು ಮಾಡಬೇಕು. ಈ ಗೌಣಸ್ನಾನಗಳನ್ನು ಕೆಳಗಿನ ಪ್ರಮಾಣಗಳು ತಿಳಿಸುತ್ತವೆ.

### ಗೌಣಸ್ನಾನ

ಮಾಂತ್ರಂ ಭೌಮಂ ತಥಾಽಗ್ನೇಯಂ ವಾಯವ್ಯಂ ದಿವ್ಯಮೇವ ಚ |
ವಾರುಣಂ ಮಾನಸಂ ಚೈವ ಸಪ್ತಸ್ನಾನಾನ್ಯನುಕ್ರಮಾತ್ ||

(1) ಮಂತ್ರಸ್ನಾನ (2) ಭೂಮಿಸ್ನಾನ (3) ಅಗ್ನಿಸ್ನಾನ (4) ವಾಯುಸ್ನಾನ (5) ದಿವ್ಯಸ್ನಾನ (6) ವಾರುಣಸ್ನಾನ (7) ಮಾನಸಸ್ನಾನ ಎಂದು ಸ್ನಾನವು ಏಳು ವಿಧವಾದ ಸ್ನಾನಗಳ ಲಕ್ಷಣವನ್ನು ಕೆಳಗಿನ ಪ್ರಮಾಣವು ಸ್ಪಷ್ಟಪಡಿಸುತ್ತದೆ.

### ಏಳುವಿಧವಾದ ಗೌಣಸ್ನಾನಗಳ ಲಕ್ಷಣ

ಆಪೋಹಿಷ್ಠಾದಿಭಿರ್ಮಾಂತ್ರಂ ಮೃದಾಲಂಭಸ್ತು ಪಾರ್ಥಿವಮ್ |
ಆಗ್ನೇಯಂ ಭಸ್ಮನಾ ಸ್ನಾನಂ ವಾಯವ್ಯಂ ಗೋರಜಃ ಸ್ಮೃತಮ್ ||
ಯತ್ತು ಸಾತಪವರ್ಷೇಣ ಸ್ನಾನಂ ತದ್ದಿವ್ಯಮುಚ್ಯತೇ |
ಅವಗಾಹ್ಯಂ ವಾರುಣಂ ತು ಮಾನಸಂ ವಿಷ್ಣುಚಿಂತನಮ್ ||

ಅಸಾಮರ್ಥ್ಯಾಚ್ಛರೀರಸ್ಯ ವೈಷಮ್ಯಾದ್ದೇಶಕಾಲಯೋಃ |
ಸ್ನಾನಾನ್ಯೇತಾನಿ ತುಲ್ಯಾನಿ ಮಾನಸಂ ಶ್ರೇಷ್ಠಮುಚ್ಯತೇ ||
ಜಲೇ ನಿಪತಿತಂ ಪಂಕಂ ಜಲೇನ ಪರಿಶುಧ್ಯತಿ |
ಹೃದಯೇ ಮಲಿನಂ ಪಾಪಂ ಮನಸಾ ಪರಿಶುಧ್ಯತಿ ||

(1) 'ಆಪೋ ಹಿ ಷ್ಠಾ ಮಯೋಭುವಃ' ಎಂಬ ಮಂತ್ರದಿಂದ ಪ್ರೋಕ್ಷಣೆ ಮಾಡಿ ಕೊಳ್ಳುವುದು ಅಥವಾ ಬ್ರಾಹ್ಮಣರಿಂದ ಮಾಡಿಸಿಕೊಳ್ಳುವುದು ಮಂತ್ರಸ್ನಾನವೆನಿಸುತ್ತದೆ. (2) ತುಳಸೀ ಮೃತ್ತಿಕೆ ಮುಂತಾದ ಪವಿತ್ರ ಮೃತ್ತಿಕೆಗಳಿಂದ ದೇಹದಲ್ಲಿ ಲೇಪನವನ್ನು ಮಾಡಿಕೊಳ್ಳುವುದು ಭೂಮಿಸ್ನಾನ ಅಥವಾ ಮೃತ್ತಿಕಾಸ್ನಾನವೆನಿಸುತ್ತದೆ. (3) ಹೋಮ ಕುಂಡದಲ್ಲಿರುವ ಭಸ್ಮವನ್ನು ದೇಹದಲ್ಲಿ ಹಚ್ಚಿಕೊಳ್ಳುವುದು ಭಸ್ಮಸ್ನಾನ ಅಥವಾ ಆಗ್ನೇಯಸ್ನಾನವೆನಿಸುತ್ತದೆ. (4) ದನಗಳ ಕಾಲಿನಿಂದ ಹೊರಟ ಧೂಳಿಯು ಗಾಳಿಯಿಂದ ದೇಹದಲ್ಲಿ ತಗಲುವುದು ವಾಯವ್ಯಸ್ನಾನವೆನಿಸುತ್ತದೆ. (5) ಬಿಸಿಲಿನಲ್ಲಿ ಸುರಿಯುತ್ತಿರುವ ಮಳೆಯಲ್ಲಿ ನಿಂತುಕೊಂಡಿರುವುದು ದಿವ್ಯಸ್ನಾನವೆನಿಸುತ್ತದೆ. (6) ನೀರಿನಲ್ಲಿ ಮುಳುಗಿ ಮಾಡುವ ಅವಗಾಹನ ಸ್ನಾನವು ವಾರುಣಸ್ನಾನವೆನಿಸುತ್ತದೆ. (7) ಶ್ರೀಹರಿಯ ಸ್ಮರಣವು ಮಾನಸಸ್ನಾನವೆನಿಸುತ್ತದೆ.

ದೇಹದಲ್ಲಿ ಶಕ್ತಿಯು ಇರುವುದಿಲ್ಲ. ಕಾಲ ಮತ್ತು ದೇಶಗಳು ಪ್ರತಿಕೂಲವಾಗಿರುತ್ತವೆ. ಇಂತಹ ಸಂದರ್ಭದಲ್ಲಿ ವಾರುಣಸ್ನಾನವನ್ನು ಮಾಡಲು ಸಾಧ್ಯವಾಗುವುದಿಲ್ಲ. ಆಗ ಈ ಗೌಣಸ್ನಾನಗಳಲ್ಲಿ ಯಾವ ಸ್ನಾನವನ್ನು ಮಾಡಲು ಸಾಧ್ಯವಿದೆಯೋ ಆ ಸ್ನಾನವನ್ನು ಮಾಡಬೇಕು. ಈ ಗೌಣಸ್ನಾನಗಳಲ್ಲಿ ಮಂತ್ರಸ್ನಾನ ಮತ್ತು ಮಾನಸಸ್ನಾನಗಳು ಅತ್ಯುತ್ತಮವಾದವುಗಳು ಉಳಿದ ಐದು ಸ್ನಾನಗಳು ಸಮಾನವಾದ ಅಂತಸ್ತನ್ನು ಪಡೆದಿರುತ್ತವೆ.

ದೇಹದಲ್ಲಿ ಅಂಟಿಕೊಂಡ ಕೆಸರು ನೀರಿನಿಂದ ದೂರವಾಗುತ್ತದೆ. ನೀರನಲ್ಲಿ ಬಿದ್ದ ಕೆಸರು ನೀರಿನಿಂದಲೇ ದೂರವಾಗುತ್ತದೆ. ಅದರಂತೆ ಮನಸ್ಸಿನಲ್ಲಿರುವ ಪಾಪವೆಂಬ ಕೊಳೆಯು ಮನಸ್ಸಿನಿಂದಲೇ ಮಾನಸಸ್ನಾನ ಮೂಲಕವಾಗಿ ದೂರವಾಗುತ್ತದೆ. ಆದ್ದರಿಂದ ಎಲ್ಲಾ ಸ್ನಾನಗಳ ಮಧ್ಯದಲ್ಲಿ ಮಾನಸಸ್ನಾನವೇ ಅತ್ಯುತ್ತಮವಾದುದು. ಈ ಏಳು ಸ್ನಾನಗಳಂತೆ ಇನ್ನೂ ಕೆಲವು ಸ್ನಾನಗಳನ್ನು ಜ್ಞಾನಿಗಳು ಹೇಳಿರುತ್ತಾರೆ. ಅವುಗಳಿಗೆ ಸಂಬಂಧಿಸಿರುವ ಪ್ರಮಾಣವಚನಗಳು ಕೆಳಗೆ ಕೊಡಲ್ಪಟ್ಟಿವೆ.

### ಸಾರಸ್ವತಸ್ನಾನ

ವಿದ್ವತ್ಸರಸ್ವತೀಪ್ರಾಪ್ತಂ ಸ್ನಾನಂ ಸಾರಸ್ವತಂ ಸ್ಮೃತಮ್ |
ಪ್ರಾಪ್ಯ ಸಾರಸ್ವತಂ ಸ್ನಾನಂ ಭವೇನ್ಮುದಿತಮಾನಸಃ ||
ಸರ್ವತೀರ್ಥಾಭಿಷೇಕೇಭ್ಯಃ ಪವಿತ್ರಾ ವಿದುಷಾಂ ಹಿ ವಾಕ್ || (ಬೃಹಸ್ಪತಿವಚನ)

ಜ್ಞಾನಿಗಳ ವಾಣಿಯು ಸರಸ್ವತೀ ಎನಿಸುತ್ತದೆ. ಅವರು ಹೇಳಿದಂತೆ ನಡೆದುಕೊಳ್ಳುವುದು ಸಾರಸ್ವತಸ್ನಾನವೆನಿಸುತ್ತದೆ. ಈ ಸಾರಸ್ವತಸ್ನಾನವು ಸರ್ವತೀರ್ಥಗಳಲ್ಲಿ ಮಾಡುವ ಸ್ನಾನಕ್ಕಿಂತಲೂ ಉತ್ತಮವೆನಿಸುತ್ತದೆ. ಈ ಸ್ನಾನದಿಂದ ಮನಸ್ಸಿನಲ್ಲಿರುವ ಪಾಪಗಳೆಲ್ಲವೂ ದೂರವಾಗಿ ಆನಂದವು ನೆಲೆಗೊಳ್ಳುತ್ತದೆ.

### ತೀರ್ಥಸ್ನಾನ

ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ |
ಯೋ ವಹೇಚ್ಛಿರಸಾ ನಿತ್ಯಂ ಶಾಲಗ್ರಾಮಶಿಲಾಜಲಮ್ || (ಸಂಗ್ರಹವಾಕ್ಯ)

ಶಾಲಿಗ್ರಾಮತೀರ್ಥವನ್ನು ಶಿರಸ್ಸಿನಲ್ಲಿ ಧರಿಸುವುದು ತೀರ್ಥಸ್ನಾನವೆನಿಸುತ್ತದೆ. ಈ ಸ್ನಾನವು ಸರ್ವತೀರ್ಥಗಳಲ್ಲಿ ಸ್ನಾನ ಮತ್ತು ಸರ್ವಯಜ್ಞಗಳನ್ನು ಮಾಡುವುದು ಇವುಗಳಿಂದ ಬರುವ ಫಲವನ್ನು ಕೊಡುತ್ತದೆ.

## ಗಾಯತ್ರಸ್ನಾನ

ಗಾಯತ್ರ್ಯಾ ಜಲಮಾದಾಯ ದಶಕೃತ್ವೋಽಭಿಮಂತ್ರ್ಯ ಚ |
ಶಿರ ಆದೀನಿ ಸರ್ವಾಣಿ ಪ್ರೋಕ್ಷಯೇತ್ತೇನ ವಾರಿಣಾ ||
ಸ್ನಾನಂ ಗಾಯತ್ರಕಂ ನಾಮ ಸರ್ವಪಾಪಪ್ರಣಾಶನಮ್ || (ಸಂಗ್ರಹವಾಕ್ಯ)

ಗಾಯತ್ರೀಮಂತ್ರವನ್ನು ಜಪಿಸುತ್ತಾ ಉದ್ಧರಣೆಯಿಂದ ನೀರನ್ನು ತೆಗೆಯಬೇಕು. ಗಾಯತ್ರೀಮಂತ್ರದಿಂದ ಹತ್ತು ಸಲ ಜಪಿಸಬೇಕು. ಆ ಜಲದಿಂದ ತಲೆಯಿಂದ ಆರಂಭಿಸಿ ಎಲ್ಲಾ ಅಂಗಗಳನ್ನೂ ಗಾಯತ್ರೀಮಂತ್ರವನ್ನು ಪಠಿಸುತ್ತಾ ಪ್ರೋಕ್ಷಣೆ ಮಾಡಬೇಕು. ಇದು ಗಾಯತ್ರಸ್ನಾನವೆನಿಸುತ್ತದೆ. ಇದರಿಂದ ಎಲ್ಲಾ ಪಾಪವೂ ದೂರವಾಗುತ್ತದೆ.

## ಕಂಠಸ್ನಾನ

ಅಶಿರಸ್ಕಂ ಭವೇತ್ಸ್ನಾನಂ ಸ್ನಾನಾಶಕ್ತೌ ಚ ಕರ್ಮಿಣಾಮ್ | (ಜಾಬಾಲಿವಚನ)
ಕಂಠಸ್ನಾನಂ ಸದಾ ಕುರ್ಯಾಚ್ಛಿರೋರೋಗೀ ಜಟೀ ತಥಾ || (ದಕ್ಷವಚನ)

ತಲೆನೋವು ಮುಂತಾದ ಶಿರೋರೋಗಗಳಿಂದ ಪೀಡಿತರಾಗಿರುವ ಕೆಲವರಿಗೆ ತಲೆಯ ಮೇಲೆ ನೀರು ಬಿದ್ದರೆ ಅಪಾಯವು ಏರ್ಪಡುವ ಸಂಭವವಿರುತ್ತದೆ. ಮತ್ತೆ ಕೆಲವರಿಗೆ ತಲೆಯಲ್ಲಿ ಜಟೆ ಬೆಳೆದು ಶಿರಃಸ್ನಾನವು ಅಪಾಯಕರವಾಗಿರುತ್ತದೆ. ಅವರು ಶಿರಃಸ್ನಾನವನ್ನು ಮಾಡಬೇಕೆಂಬ ನಿರ್ಬಂಧವಿಲ್ಲ. ತಲೆಯನ್ನು ಬಿಟ್ಟು ಕುತ್ತಿಗೆವರೆಗಿನ ಭಾಗವನ್ನು ನೀರಿನಲ್ಲಿ ಮುಳುಗಿಸಿ ಸ್ನಾನವನ್ನು ಮಾಡಬೇಕು. ಈ ಸ್ನಾನವು ಕಂಠಸ್ನಾನವೆನಿಸುತ್ತದೆ.

## ಕಟಿಸ್ನಾನ

ಸಾಯಂಕಾಲೇ ಕಟಿಸ್ನಾನಂ ಕಾಪಿಲಂ ವಾ ಯತಿಶ್ಚರೇತ್ || (ದಕ್ಷವಚನ)

ಶಿರಃಸ್ನಾನವನ್ನೂ, ಕಂಠಸ್ನಾನವನ್ನೂ, ಮಾಡಲು ಶಕ್ತಿಯಿಲ್ಲದವರು ಸಾಯಂಕಾಲದಲ್ಲಿ ಸೊಂಟದವರೆಗೆ ನೀರಿನಲ್ಲಿ ಮುಳುಗಿ ಸ್ನಾನವನ್ನು ಮಾಡಬೇಕು. ಇದು ಕಟಿಸ್ನಾನವೆನಿಸುತ್ತದೆ. ಅಥವಾ ಕಾಪಿಲಸ್ನಾನ ಅಂದರೆ ವಾಯವ್ಯ ಸ್ನಾನವನ್ನು ಮಾಡಬೇಕು. ಗೋವಿನ ಪಾದಧೂಳಿಯು ಗಾಳಿಯಿಂದ ದೇಹದ ಮೇಲೆ ಬೀಳುವುದು ವಾಯವ್ಯಸ್ನಾನವೆಂದು ಹಿಂದೆ ತಿಳಿಸಿರುತ್ತೇವೆ.

## ಮಾರ್ಜನಸ್ನಾನ

ಆರ್ದ್ರೇಣ ವಾಸಸಾ ವಾಪಿ ಮಾರ್ಜನಂ ದೈಹಿಕಂ ವಿದುಃ | (ಜಾಬಾಲಿವಚನ)

ಮೇಲ್ಕಂಡ ಕಟಿಸ್ನಾನವನ್ನೂ ಮಾಡಲು ಶಕ್ತಿಯಿಲ್ಲದವರು ಒದ್ದೆ ಬಟ್ಟೆಯಿಂದ ದೇಹವನ್ನು ಒರೆಸಿಕೊಳ್ಳಬೇಕು. ಇದು ಮಾರ್ಜನಸ್ನಾನವೆನಿಸುತ್ತದೆ.

## ಮಂತ್ರಸ್ನಾನ

ಸಂಧ್ಯೋಪಾಸನಕರ್ಮಾದಾವಧಿಕಾರಸ್ಯ ಸಿದ್ಧಯೇ |
ಆರ್ದ್ರವಸ್ತ್ರೇಣ ಸಂಮಾರ್ಜ್ಯ ಸರ್ವಗಾತ್ರಭವಂ ಮಲಮ್ ||
ಪೂರ್ವವಸ್ತ್ರಂ ಪರಿತ್ಯಜ್ಯ ಅನ್ಯದ್ಧೌತಂ ವಿಧಾರಯನ್ |
ಆಚಮ್ಯ ಜಲಮಾದಾಯ ಪಾತ್ರೇ ವಾಮಕರೇಽಥ ವಾ ||
ಗಾಯತ್ರ್ಯಾ ಮೂಲಮಂತ್ರೇಣ ತ್ರಿವಾರಮಭಿಮಂತ್ರಯೇತ್ |
ತಜ್ಜಲಂ ಪ್ರೋಕ್ಷಯೇದ್ಗಾತ್ರೇ ದರ್ಭೈರ್ವಾ ತುಲಸೀದಲೈಃ ||

ತರ್ಜನೀಮಧ್ಯಮಾಭ್ಯಾಂ ವಾ ತೃಚೇನಾಬ್ದೈವತೇನ ವೈ |
ಭೂಮೌ ಶಿರಸಿ ಚಾಽಽಕಾಶೇ ಆಕಾಶೇ ಭುವಿ ಮಸ್ತಕೇ ||
ಮಸ್ತಕೇ ಚ ತಥಾಽಽಕಾಶೇ ಭೂಮೌ ಚ ನವಧಾ ಕ್ಷಿಪೇತ್ |
ಅಬ್ದೈವತಃ ಸ್ಮೃತೋ ಮಂತ್ರ ಆಪೋ ಹಿ ಷ್ಠೇತಿ ನವಧಾ ದ್ವಿಜಃ |
ಆಕಾಶಂ ಹೃದಯಂ ಪ್ರೋಕ್ತಂ ಭೂಮಿಃ ಪಾದಾವಿತಿ ಸ್ಮೃತಮ್ ||
ತತ ಆಚಮ್ಯ ವಿಧಿವತ್ಕುರ್ಯಾತ್ಸಂಧ್ಯಾದಿಕರ್ಮ ಚ | (ವರಾಹಪುರಾಣವಚನ)
ಪಾರ್ಥಿವಸ್ನಾನಮಬ್ಲಿಂಗೈರ್ಮಂತ್ರೈರ್ವಿಪ್ರಕರಚ್ಯುತೈಃ |
ಅಂಭೋಭಿಃ ಪ್ರೋಕ್ಷಣಾಂ ಕುರ್ಯಾತ್ತನ್ಮಂತ್ರಸ್ನಾನಮಿಷ್ಯತೇ || (ಪಾದ್ಮಪುರಾಣವಚನ)
ಪಾದೇ ಮೂರ್ಧ್ನಿ ತಥಾಽಽಕಾಶೇ ಮೂರ್ಧ್ನ್ಯಾಕಾಶೇ ತಥಾ ಹೃದಿ |
ಆಕಾಶೇ ಭುವಿ ಮೂರ್ಧ್ನಿ ಸ್ಯಾನ್ಮಂತ್ರಸ್ನಾನಂ ವಿಧೀಯತೇ ||

ನೀರಿನಲ್ಲಿ ಮುಳುಗಿ ಸ್ನಾನವನ್ನು ಮಾಡಲು ಶಕ್ತಿಯಿಲ್ಲದವರು ಮಂತ್ರಸ್ನಾನವನ್ನು ಮಾಡಬೇಕು. ಅದರ ಕ್ರಮವನ್ನು ಮೇಲ್ಕಂಡ ಪ್ರಮಾಣಗಳು ತಿಳಿಸುತ್ತವೆ. ಒದ್ದೆ ಬಟ್ಟೆಯಿಂದ ದೇಹದ ಎಲ್ಲಾ ಅವಯವಗಳನ್ನೂ ಚೆನ್ನಾಗಿ ಒರೆಸಿ ಅಲ್ಲಿರುವ ಎಲ್ಲಾ ಕೊಳೆಗಳನ್ನೂ ತೆಗೆಯಬೇಕು. ಹಳೆಯ ಬಟ್ಟೆಯನ್ನು ಬಿಟ್ಟ ಒಗೆದು ಶುದ್ಧ ಮಾಡಿರುವ ಮಡಿಬಟ್ಟೆಯನ್ನು ಉಟ್ಟುಕೊಳ್ಳಬೇಕು. ಆಚಮನವನ್ನು ಮಾಡಬೇಕು. ಎಡಗೈಯಿಂದ ಉದ್ಧರಣೆ ಅಥವಾ ಪಾತ್ರೆಯಲ್ಲಿ ನೀರನ್ನು ಧರಿಸಬೇಕು. ಅವೆರಡೂ ಇಲ್ಲದಿರುವಾಗ ಎಡ ಅಂಗೈಯಲ್ಲಿ ನೀರನ್ನು ಧರಿಸಬೇಕು. ಗಾಯತ್ರೀ ಮತ್ತು ನಾರಾಯಣಾಷ್ಟಾಕ್ಷರ ಮಂತ್ರಗಳನ್ನು ಮೂರು ಸಲ ಹೇಳುತ್ತಾ ಬಲಗೈಯಿಂದ ಆ ನೀರನ್ನು ಮುಟ್ಟಿ ಜಪಿಸಬೇಕು. 'ಆಪೋ ಹಿ ಷ್ಠಾ' ಎಂಬ ಮಂತ್ರದಲ್ಲಿರುವ ಒಂಭತ್ತು ಪಾದಗಳಲ್ಲಿ ಒಂದೊಂದು ಪಾದಗಳಿಂದ ಒಂದೊಂದು ಅವಯವವನ್ನು ಪ್ರೋಕ್ಷಿಸಬೇಕು. ಈ ಪ್ರೋಕ್ಷಣವನ್ನು ಎರಡು ದರ್ಭೆಗಳನ್ನು ಬಲಗೈಯಲ್ಲಿಟ್ಟುಕೊಂಡು ಮಾಡಬೇಕು. ದರ್ಭೆಯು ಸಿಗದಿದ್ದರೆ ನಿರ್ಮಾಲ್ಯ ತುಲಸಿಯಿಂದ ಮಾಡಬೇಕು. ಅದೂ ಸಿಗದಿದ್ದರೆ ಬಲಗೈಯ ತರ್ಜನೀ ಅಂದರೆ ತೋರ್ಬೆರಳು ಮತ್ತು ನಡುಬೆರಳು ಇವೆರಡನ್ನು ಒಟ್ಟುಗೂಡಿಸಿ ಅವುಗಳಿಂದ ಮಾಡಬೇಕು. ಇದೇ 'ಆಪೋ ಹಿ ಷ್ಠಾ' ಎಂಬ ಮಂತ್ರವನ್ನು ಮೂರು ಸಲ ಜಪಿಸುತ್ತಾ ಪ್ರೋಕ್ಷಣೆ ಮಾಡಬೇಕು. ಇದೆಲ್ಲವೂ ಮುಗಿದ ಮೇಲೆ ಆಚಮನವನ್ನು ಮಾಡಬೇಕು. ಇದು ಮಂತ್ರಸ್ನಾನವೆನಿಸುತ್ತದೆ. ನೀರಿನಿಂದ ಸ್ನಾನವನ್ನು ಮಾಡಲು ಶಕ್ತಿಯಿಲ್ಲದವರು ಈ ಮಂತ್ರಸ್ನಾನವನ್ನು ಮಾಡಿದರೆ ಸಂಧ್ಯಾವಂದನ ಮುಂತಾದ ಎಲ್ಲಾ ಕರ್ಮಗಳನ್ನು ಮಾಡುವ ಅಧಿಕಾರವು ಬರುತ್ತದೆ. ಈಗ ಆಪೋ ಹಿ ಷ್ಠಾ ಎಂಬ ಮಂತ್ರವನ್ನೂ ಆ ಮಂತ್ರದಲ್ಲಿರುವ ಒಂಭತ್ತು ಪಾದಗಳಿಂದ ಪ್ರೋಕ್ಷಿಸಬೇಕಾದ ಅವಯವಗಳನ್ನೂ ಕೆಳಗೆ ಕೊಟ್ಟಿದ್ದೇವೆ.

(1) ಆಪೋ ಹಿ ಷ್ಠಾ ಮಯೋಭುವಃ (ಎರಡು ಕಾಲುಗಳು) (2) ತಾ ನ ಊರ್ಜೇ ದಧಾತ ನ (ತಲೆ) (3) ಮಹೇ ರಣಾಯ ಚಕ್ಷಸೇ (ಹೃದಯ) (4) ಯೋ ವಃ ಶಿವತಮೋ ರಸಃ (ಹೃದಯ ಅಥವಾ ತಲೆ) (5) ತಸ್ಯ ಭಾಜಯತೇಹ ನಃ (ಕಾಲುಗಳು ಅಥವಾ ಎದೆ) (6) ಉಶತೀರಿವ ಮಾತರಃ (ತಲೆ ಅಥವಾ ಎದೆ) (7) ತಸ್ಮಾ ಅರಂ ಗಮಾಮ ವಃ (ತಲೆ ಅಥವಾ ಎದೆ) (8) ಯಸ್ಯ ಕ್ಷಯಾಯ ಜಿನ್ವಥ (ಎದೆ ಅಥವಾ ಕಾಲುಗಳು) (9) ಆಪೋ ಜನಯಥಾ ಚ ನಃ (ಎದೆ ಅಥವಾ ತಲೆ)

ಈ ಮಂತ್ರಗಳ ಅರ್ಥವನ್ನು ಮುಂದೆ ಸಂಧ್ಯಾವಂದನಪ್ರಕರಣವನ್ನು ವಿವರಿಸುವಾಗ ತಿಳಿಸುತ್ತೇವೆ. ಮೇಲ್ಕಂಡ ಪ್ರಮಾಣಗಳಲ್ಲಿ ಪ್ರೋಕ್ಷಣವನ್ನು ಮಾಡುವ ಅವಯವಗಳಲ್ಲಿ ಸ್ವಲ್ಪ ಅಭಿಪ್ರಾಯ ಭೇದವಿದೆ. ವ್ಯತ್ಯಾಸವಿರುವ ಸ್ಥಳಗಳಲ್ಲಿ ಎರಡು ಅವಯವಗಳನ್ನೂ ಬರೆದಿರುತ್ತೇವೆ. ಅವುಗಳಲ್ಲಿ ಮೊದಲನೆಯದಕ್ಕೆ ಹೆಚ್ಚಿನ ಸ್ಥಾನವನ್ನು ಕೊಡಬೇಕು. ಈ

ಮಂತ್ರಸ್ನಾನದಲ್ಲಿ 'ಆಪೋ ಹಿ ಷ್ಠಾ' ಎಂಬ ಮಂತ್ರದಿಂದ ಬ್ರಾಹ್ಮಣರಿಂದ ಪ್ರೋಕ್ಷಣೆಯನ್ನು ಮಾಡಿಸಿ ಕೊಳ್ಳಬೇಕು ಎಂದು ಪದ್ಮಪುರಾಣದಲ್ಲಿ ಹೇಳಿರುತ್ತದೆ. ಇದರಿಂದ ಬ್ರಾಹ್ಮಣರು ಪ್ರೋಕ್ಷಣೆ ಮಾಡುವುದು ಉತ್ತಮವೆಂದೂ ಅದು ಸಾಧ್ಯವಾಗದಿದ್ದಲ್ಲಿ ತಾವೇ ಪ್ರೋಕ್ಷಣೆ ಮಾಡಿಕೊಳ್ಳಬೇಕೆಂದೂ ತಿಳಿಯಬೇಕು. ಹೀಗೆ ನೀರಿನಲ್ಲಿ ಮುಖ್ಯಸ್ನಾನವನ್ನು ಮಾಡಲು ಶಕ್ತರಲ್ಲದವರು ಮಾಡಬೇಕಾದ (1) ಮಂತ್ರಸ್ನಾನ (2) ಪಾರ್ಥಿವಸ್ನಾನ ಅಥವಾ ಭೌಮಸ್ನಾನ (3) ಆಗ್ನೇಯಸ್ನಾನ ಅಥವಾ ಭಸ್ಮಸ್ನಾನ (4) ವಾಯವ್ಯಸ್ನಾನ (5) ದಿವ್ಯಸ್ನಾನ (6) ಮಾನಸಸ್ನಾನ (7) ಸಾರಸ್ವತಸ್ನಾನ (8) ತೀರ್ಥಸ್ನಾನ (9) ಗಾಯತ್ರಸ್ನಾನ (10) ಕಂಠಸ್ನಾನ (11) ಕಟಿಸ್ನಾನ ಎಂಬ ಗೌಣಸ್ನಾನಗಳನ್ನು ಹೇಳಿದೆವು.

ಸ್ನಾತೋಽಪಿ ವಿಧಿವಚ್ಛಕ್ತೋ ವಾರುಣೇನ ಜಲೇನ ವಾ |
ಮಂತ್ರಸ್ನಾನಂ ತಥಾ ಧ್ಯಾನಸ್ನಾನಂ ಕುರ್ಯಾಚ್ಚ ನಿತ್ಯದಾ ||
ಅಧಿಕಾಸ್ಯ ಭವೇತ್ಸಿದ್ಧಿಃ ಸ್ನಾನದ್ವಯಸಮುದ್ಭವಾ || (ವರಾಹಪುರಾಣವಚನ)

ಈ ಎಲ್ಲಾ ಗೌಣಸ್ನಾನಗಳ ಮಧ್ಯದಲ್ಲಿ ಮಂತ್ರಸ್ನಾನ ಮತ್ತು ಮಾನಸಸ್ನಾನಗಳು ಅತಿಶ್ರೇಷ್ಠವಾಗಿವೆ. ಇವೆರಡನ್ನು ಯಾವಾಗಲೂ ಮಾಡಬೇಕು. ಇತರ ಗೌಣ ಮತ್ತು ಮುಖ್ಯಸ್ನಾನಗಳನ್ನು ಮಾಡಿದವರೂ ಈ ಎರಡು ಸ್ನಾನಗಳನ್ನು ಮಾಡಿದರೆ ಅತ್ಯಧಿಕವಾದ ಶುದ್ಧಿಯು ಏರ್ಪಡುತ್ತದೆ.

ವಾರುಣಸ್ನಾನ ಅಥವಾ ಜಲಸ್ನಾನ

ಈ ವಾರುಣಸ್ನಾನವೇ ಮುಖ್ಯಸ್ನಾನವೆಂದೂ, ಶಕ್ತಿಯುಳ್ಳವರು ನೀರಿನಿಂದ ಮಾಡುವ ಈ ಸ್ನಾನವನ್ನು ಅವಶ್ಯವಾಗಿ ಮಾಡಬೇಕೆಂದೂ ಹಿಂದೆ ಹೇಳಿರುತ್ತೇವೆ. ಈ ವಾರುಣಸ್ನಾನವು ನಿತ್ಯಸ್ನಾನ, ನೈಮಿತ್ತಿಕಸ್ನಾನ, ಕಾಮ್ಯಸ್ನಾನ, ಕಾಲಾಂಗಸ್ನಾನ, ಕರ್ಮಾಂಗಸ್ನಾನ, ಕ್ರಿಯಾಸ್ನಾನ ಎಂದು ಆರುವಿಧವಾಗಿದೆ ಎಂದು ಹಿಂದೆ ತಿಳಿಸಿರುವೆವು ಇವುಗಳ ವಿಷಯವನ್ನು ಈಗ ವಿವರಿಸುವೆವು.

ಉಷ್ಣೋದಕಸ್ನಾನ

ವೃಥಾ ತೂಷ್ಣೋದಕಸ್ನಾನಂ ವೃಥಾ ಜಪ್ಯಮವೈದಿಕಮ್ |
ವೃಥಾ ತ್ವಶ್ರೋತ್ರಿಯೇ ದಾನಂ ವೃಥಾ ಭುಕ್ತಮಸಾಕ್ಷಿಕಮ್ || (ಯಾಜ್ಞವಲ್ಕ್ಯವಚನ)

ವೇದಮಂತ್ರಗಳನ್ನು ಬಿಟ್ಟು ಉಳಿದ ಮಂತ್ರಗಳನ್ನು ಜಪಿಸುವುದು, ವೇದಾಧ್ಯಯನವನ್ನು ಮಾಡದವನಿಗೆ ದಾನ ಕೊಡುವುದು, ಎಲ್ಲರನ್ನು ಬಿಟ್ಟು ಒಬ್ಬನೇ ಊಟ ಮಾಡುವುದು, ಉಷ್ಣೋದಕದಿಂದ ಸ್ನಾನ ಮಾಡುವುದು ಇವೆಲ್ಲವೂ ನಿಷ್ಫಲವೆನಿಸುತ್ತವೆ.

ಆಪ ಏವ ಸದಾ ಪೂತಾಸ್ತಾಸಾಂ ವಹ್ನಿರ್ವಿಶೋಧಕಃ |
ತಸ್ಮಾತ್ಸರ್ವೇಷು ಕಾಲೇಷು ಉಷ್ಣಾಂಭಃ ಪಾವನಂ ಸ್ಮೃತಮ್ || (ಯಮವಚನ)

ನೀರೇ ಯಾವಾಗಲೂ ಶುದ್ಧವಾಗಿದೆ. ಅದಕ್ಕೆ ಬೆಂಕಿಯು ಇನ್ನೂ ಹೆಚ್ಚಿನ ಶುದ್ಧಿಯನ್ನು ಕೊಡುತ್ತದೆ. ಆದ್ದರಿಂದ ಎಲ್ಲಾ ಕಾಲಗಳಲ್ಲಿಯೂ ಉಷ್ಣೋದಕವು ಪರಿಶುದ್ಧವಾಗಿದೆ.

ಆಪಃ ಸ್ವಭಾವತೋ ಮೇಧ್ಯಾಃ ಕಿಂ ಪುನರ್ವಹ್ನಿಸಂಯುತಾಃ |
ತೇನ ಸಂತಃ ಪ್ರಶಂಸಂತಿ ಸ್ನಾನಮುಷ್ಣೇನ ವಾರಿಣಾ || (ಷಟ್ತ್ರಿಂಶನ್ಮತವಚನ)

ನೀರು ಸ್ವಭಾವದಿಂದ ಶುದ್ಧವಾದುದು. ಈ ನೀರು ಅಗ್ನಿಯ ಸಂಪರ್ಕದಿಂದ ಅತ್ಯಧಿಕವಾದ ಶುದ್ಧಿಯನ್ನು ಪಡೆಯುತ್ತದೆಯೆಂದು ಹೇಳಬೇಕಾಗಿಲ್ಲ. ಆದ್ದರಿಂದಲೇ ಸಜ್ಜನರು ಉಷ್ಣಜಲದಿಂದ ಮಾಡುವ ಸ್ನಾನವನ್ನು ಹೊಗಳುತ್ತಾರೆ.

ಮೇಲ್ಕಂಡ ವಾಕ್ಯಗಳಲ್ಲಿ ಒಂದು ವಾಕ್ಯವು ಉಷ್ಣೋದಕಸ್ನಾನವನ್ನು ನಿಷೇಧಿಸುತ್ತದೆ. ಎರಡು ವಾಕ್ಯಗಳು ಹೊಗಳುತ್ತವೆ. ಆದ್ದರಿಂದ ಆರೋಗ್ಯವುಳ್ಳವರು ತಣ್ಣೀರಿನಿಂದಲೇ ಸ್ನಾನವನ್ನು ಮಾಡಬೇಕೆಂದೂ ರೋಗಿಗಳು ಉಷ್ಣೋದಕದಿಂದ ಸ್ನಾನವನ್ನು ಮಾಡಬಹುದೆಂದೂ ಸ್ನಾನವಿಲ್ಲದೆ ಸರ್ವಥಾ ಯಾವ ಕರ್ಮವನ್ನೂ ಮಾಡಬಾರದೆಂದೂ ಆ ಮಾತುಗಳ ಅಭಿಪ್ರಾಯವೆಂದು ತಿಳಿಯಬೇಕು. ಇದೇ ವಿಷಯವನ್ನು ಕೆಳಗಿನ ಯಮವಚನವು ತಿಳಿಸುತ್ತದೆ.

ಆದಿತ್ಯಕಿರಣೈಃ ಪೂತಂ ಪುನಃ ಪೂತಂ ತು ವಹ್ನಿನಾ |
ಆಮ್ನಾತಮಾತುರೇ ಸ್ನಾನಂ ಪ್ರಶಸ್ತಂ ತು ಶೃತೋದಕಮ್ || (ಯಮವಚನ)

ಕೆರೆ ಬಾವಿ ನದಿ ಮುಂತಾದ ಜಲಾಶಯಗಳಲ್ಲಿರುವ ನೀರುಗಳು ಸೂರ್ಯಕಿರಣಗಳ ಸಂಪರ್ಕದಿಂದ ಮೊದಲೇ ಪರಿಶುದ್ಧವಾಗಿರುತ್ತವೆ. ಎರಡನೆಯದಾಗಿ ಅಗ್ನಿಸಂಬಂಧದಿಂದ ಪರಿಶುದ್ಧವಾಗುತ್ತವೆ. ಆದ್ದರಿಂದ ರೋಗಿಗಳು ಬಿಸಿ ನೀರಿನಿಂದ ಸ್ನಾನವನ್ನು ಮಾಡಬೇಕೆಂದೂ ಈ ಸ್ನಾನವು ಪ್ರಶಸ್ತವೆಂದೂ ಶಾಸ್ತ್ರವು ತಿಳಿಸುತ್ತದೆ.

ನಿತ್ಯಂ ನೈಮಿತ್ತಿಕಂ ಸ್ನಾನಂ ಕ್ರಿಯಾಂಗಂ ಮಲಕರ್ಷಣಮ್ |
ತೀರ್ಥಾಭಾವೇ ತು ಕರ್ತವ್ಯಮುಷ್ಣೋದಕಪರೋದಕೈಃ || (ಯಮವಚನ)

ನಿತ್ಯಸ್ನಾನ, ನೈಮಿತ್ತಿಕಸ್ನಾನ, ಕ್ರಿಯಾಂಗಸ್ನಾನ, ಮಲಾಪಕರ್ಷಣಸ್ನಾನ ಮುಂತಾದ ಸ್ನಾನಗಳನ್ನು ನದೀ ಮುಂತಾದ ತೀರ್ಥವು ಸಿಗದಿದ್ದರೆ ಉಷ್ಣೋದಕ ಮತ್ತು ಬೇರೆ ಜನರಿಂದ ತರಲ್ಪಟ್ಟ ನೀರಿನಿಂದ ಮಾಡಬೇಕು.

ಸರ್ವಥಾ ನಿತ್ಯಕರ್ಮಾರ್ಥಂ ಸ್ನಾಯಾದೇವ ಕಥಂಚನ |
ವಿನಾ ಮೃತ್ತಿಕಯಾ ವಾಪಿ ಸಕೃದುಷ್ಣೇನ ವಾರಿಣಾ ||

ನಿತ್ಯಕರ್ಮವನ್ನು ಮಾಡುವುದಕ್ಕಾಗಿ ಮಾಡುವ ನಿತ್ಯಸ್ನಾನವನ್ನು ಮೃತ್ತಿಕಾ ಮತ್ತು ಶೀತೋದಕದಿಂದ ಮಾಡಲು ಸಾಧ್ಯವಾಗದಿದ್ದರೆ ಮೃತ್ತಿಕೆಯಿಲ್ಲದೆಯೂ ಒಮ್ಮೆ ಉಷ್ಣೋದಕದಿಂದಲೂ ಮಾಡಲೇ ಬೇಕು.

ಈ ಮೇಲ್ಕಂಡ ಪ್ರಮಾಣಗಳಿಂದ ರೋಗಿಗಳೂ ನದೀ ಮುಂತಾದ ನೀರು ಸಿಗದಿರುವಾಗಲೂ ನಿತ್ಯ ಸ್ನಾನವನ್ನು ಮಾಡುವವರು ಉಷ್ಣೋದಕಸ್ನಾನವನ್ನು ಮಾಡ ಬಹುದೆಂದು ತಿಳಿಯುತ್ತದೆ.

**ಉಷ್ಣೋದಕಸ್ನಾನವನ್ನು ಮಾಡದಿರುವುದಕ್ಕೆ ಕಾರಣಗಳು**

ಮೃತೇ ಜನ್ಮನಿ ಸಂಕ್ರಾಂತ್ಯಾ ಶ್ರಾದ್ಧೇ ಜನ್ಮದಿನೇ ತಥಾ |
ಅಸ್ಪೃಶ್ಯಸ್ಪರ್ಶನೇ ಚೈವ ನ ಸ್ನಾಯಾದುಷ್ಣವಾರಿಣಾ ||
ಸಂಕ್ರಾಂತೌ ಭಾನುವಾರೇ ಚ ಸಪ್ತಮ್ಯಾಂ ರಾಹುದರ್ಶನೇ |
ಆರೋಗ್ಯಪುತ್ರಮಿತ್ರಾರ್ಥೀ ನ ಸ್ನಾಯಾದುಷ್ಣವಾರಿಣಾ ||
ಪೌರ್ಣಮಾಸ್ಯಾಂ ತಥಾ ದರ್ಶೇ ನ ಸ್ನಾಯಾದುಷ್ಣವಾರಿಣಾ |
ಸ ಗೋಹತ್ಯಾಕೃತಂ ಪಾಪಂ ಪ್ರಾಪ್ನೋತ್ಯೇವ ನ ಸಂಶಯಃ || (ವೃದ್ಧಮನುವಚನ)

ಏತೇನ ಉಕ್ತೇಷು ಮರಣಾದಿಷು ತೀರ್ಥಾದ್ಯಭಾವೇಽಪಿ ನ ಕ್ವಚಿದಪ್ಯುಷ್ಣೋದಕೈಃ ಸ್ನಾಯಾತ್. ಪರೋದಕೈರುದ್ಧೃತಕೂಪೋದಕೈರ್ವಾ ಸ್ನಾಯಾದಿತಿ ಭಾವಃ (ಸ್ಮೃತಿಮುಕ್ತಾವಲೀವಚನ)

ಮರಣ, ಜನನ, ಸಂಕ್ರಾಂತಿ, ಶ್ರಾದ್ಧ, ಜನ್ಮದಿನ, ಸ್ಪತಃ ಮೈಲಿಗೆಯವರನ್ನು ಮುಟ್ಟುವಿಕೆ, ಹುಣ್ಣಿಮೆ, ಅಮಾವಾಸ್ಯಾ, ಗ್ರಹಣ ಮುಂತಾದ ನಿಮಿತ್ತಗಳು ಬಂದಾಗಲೂ, ಆದಿತ್ಯವಾರ, ಸಪ್ತಮೀ, ಹುಣ್ಣಿಮೆ ಮತ್ತು ಅಮಾವಾಸ್ಯಾ ದಿನಗಳಲ್ಲಿಯೂ ಮಾಡುವ ಸ್ನಾನವನ್ನು ಉಷ್ಣೋದಕದಿಂದ ಮಾಡಲೇಕೂಡದು. ಹಾಗೆ ಮಾಡಿದರೆ ಆರೋಗ್ಯ, ಪುತ್ರ, ಮಿತ್ರಹಾನಿಯಾಗುತ್ತದೆ.

ಗೋಹತ್ಯೆಯಿಂದ ಬರುವ ಪಾಪವೂ ಬರುತ್ತದೆ. ಆದ್ದರಿಂದ ತೀರ್ಥವು ಸಿಗದಿರುವಾಗ ಉಷ್ಣೋದಕದಿಂದ ನಿತ್ಯ ಸ್ನಾನವನ್ನು ಮಾಡಿದರೂ ನೈಮಿತ್ತಿಕಸ್ನಾನವನ್ನು ಮಾಡಲೇಬಾರದು. ಆದಿತ್ಯವಾರ, ಹುಣ್ಣಿಮೆ, ಅಮಾವಾಸ್ಯಾ, ಸಪ್ತಮೀ ದಿನಗಳಲ್ಲಿಯೂ ಮಾಡಬಾರದು. ಈ ದಿನಗಳಲ್ಲಿ ಮುಳುಗಿ ಸ್ನಾನ ಮಾಡುವುದಕ್ಕೆ ತೀರ್ಥಜಲವು ಸಿಗದಿದ್ದರೆ ಬಾವಿಯಿಂದ ಸೇದಿದ ನೀರು ಅಥವಾ ಇನ್ನೊಬ್ಬರಿಂದ ತರಲ್ಪಟ್ಟ ತಣ್ಣೀರಿನಿಂದ ಸ್ನಾನವನ್ನು ಮಾಡಬೇಕು.

ಉಷ್ಣೋದಕ ಸ್ನಾನವನ್ನು ಮಾಡಬಹುದಾದ ಸಂದರ್ಭದಲ್ಲಿಯೂ ಈ ಉಷ್ಣೋದಕಸ್ನಾನವನ್ನು ಮಾಡುವ ವಿಧಾನವನ್ನು ಕೆಳಗೆ ಕೊಟ್ಟಿರುತ್ತೇನೆ.

### ಉಷ್ಣೋದಕಸ್ನಾನವಿಧಿ

ಶೀತಾಸ್ವಪ್ಸು ನಿಷಿಚ್ಯೋಷ್ಣಾ ಮಂತ್ರಸಂಭಾರಸಂಭೃತಾಃ |
ಗೇಹೇಽಪಿ ಶಸ್ಯತೇ ಸ್ನಾನಂ ತದ್ಧೀನಮಫಲಂ ಬಹಿಃ || (ವ್ಯಾಸವಚನ)
ಶೀತಾಸ್ವಪ್ಸು ನಿಷಿಚ್ಯೋಷ್ಣಂ ವಾರಿ ಪಶ್ಚಾಚ್ಚ ಶೀತಲಮ್ |
ತುಲಸೀಮೃತ್ತಿಕಾಯುಕ್ತಂ ಗಾಯತ್ರ್ಯಾ ಹ್ಯಭಿಮಂತ್ರಿತಮ್ |
ಜಲಂ ವಿಧಾಯ ಕುರ್ವೀತ ಯೋ ಹ್ಯಶಕ್ತೋ ಭವೇದ್ದ್ವಿಜಃ || (ವರಾಹಪುರಾಣವಚನ)

ಒಂದು ಪಾತ್ರೆಯಲ್ಲಿ ತಣ್ಣೀರನ್ನು ಸ್ವಲ್ಪ ಇಟ್ಟುಕೊಳ್ಳಬೇಕು. ಅದರಲ್ಲಿ ಬೇಕಾದಷ್ಟು ಬಿಸಿ ನೀರನ್ನು ಹಾಕಿ ಕೊಳ್ಳಬೇಕು. ಅದರ ಮೇಲೆ ಪುನಃ ಸ್ವಲ್ಪ ತಣ್ಣೀರನ್ನು ಹಾಕಬೇಕು. ಅದರಲ್ಲಿ ಸ್ವಲ್ಪ ತುಳಸೀ ಮೃತ್ತಿಕೆಯನ್ನು ಹಾಕಬೇಕು. ಗಾಯತ್ರೀಮಂತ್ರವನ್ನು ಹತ್ತು ಸಲ ಜಪಿಸುತ್ತಾ ಆ ನೀರನ್ನು ಮುಟ್ಟಬೇಕು. 'ಆಪೋ ಹಿ ಷ್ಠಾ' ಎಂಬ ಮಂತ್ರವನ್ನೂ ಅಘಮರ್ಷಣಸೂಕ್ತವನ್ನೂ ವರುಣಸೂಕ್ತವನ್ನೂ ಪಠಿಸುತ್ತಾ ಸ್ನಾನ ಮಾಡಬೇಕು. ಈ ಮಂತ್ರಗಳನ್ನು ಪಠಿಸದೇ ನದೀ ಮುಂತಾದ ಜಲಾಶಯಗಳಲ್ಲಿ ಸ್ನಾನ ಮಾಡಿದರೂ ಫಲವಿಲ್ಲ. ಹೀಗೆ ಮನೆಯಲ್ಲಿಯೇ ಉಷ್ಣೋದಕ ಸ್ನಾನವನ್ನು ರೋಗಿಗಳೇ ಮೊದಲಾದವರು ಮಾಡಿದರೆ ಅವರಿಗೆ ಸ್ನಾನದ ಪೂರ್ಣಫಲವು ಬರುತ್ತದೆ.

### ಸ್ನಾನಕ್ಕೆ ನಿಷಿದ್ಧ ಕಾಲ ಅವಸ್ಥೆ ಮತ್ತು ಜಲ

ಪ್ರಭೂತೇ ವಿದ್ಯಮಾನೇ ತು ಉದಕೇ ಸುಮನೋಹರೇ |
ನಾಲ್ಪೋದಕೇ ದ್ವಿಜಃ ಸ್ನಾಯಾನ್ನದೀಂ ಚೋತ್ಸೃಜ್ಯ ಕೃತ್ರಿಮೇ || (ಯಾಜ್ಞವಲ್ಕ್ಯವಚನ)

ಶುದ್ಧವಾದ ನೀರು ತುಂಬಾ ಇರುವ ಸರೋವರ ಮುಂತಾದವುಗಳು ಇರುವಾಗ ಅವುಗಳನ್ನು ಬಿಟ್ಟು ಅಲ್ಪ ಜಲವುಳ್ಳ ಹಳ್ಳ ಮುಂತಾದವುಗಳಲ್ಲಿ ಸ್ನಾನವನ್ನು ಮಾಡಬಾರದು. ನದಿಯು ಇರುವಾಗ ಅದನ್ನು ಬಿಟ್ಟು ಜನರಿಂದ ನಿರ್ಮಿತವಾದ ಕೆರೆ ಬಾವಿ ಮುಂತಾದವುಗಳಲ್ಲಿ ಸ್ನಾನವನ್ನು ಮಾಡಬಾರದು.

ನದ್ಯಾಮಸ್ತಮಿತೇ ಸ್ನಾನಂ ವರ್ಜಯೇತ್ತು ಸದಾ ಬುಧಃ |
ನದ್ಯಾಂ ಸ್ನಾತ್ವಾ ನದೀಮನ್ಯಾಂ ನ ಪ್ರಶಂಸೇತ ಧರ್ಮವಿತ್ || (ವ್ಯಾಸವಚನ)

ಸೂರ್ಯಾಸ್ತಮಾನವಾದ ಮೇಲೆ ನದಿಯಲ್ಲಿ ಸ್ನಾನ ಮಾಡಬಾರದು. ಒಂದು ನದಿಯಲ್ಲಿ ಸ್ನಾನ ಮಾಡಿ ಇನ್ನೊಂದು ನದಿಯನ್ನು ಹೊಗಳಬಾರದು.

ನ ಮೇಹೇತ ಜಲದ್ರೋಣ್ಯಾಂ ಸ್ನಾತುಂ ಚ ನ ನದೀಂ ತರೇತ್ |
ನದ್ಯಾ ಯಚ್ಚ ಪರಿಭ್ರಷ್ಟಂ ನದ್ಯಾ ಯಚ್ಚ ವಿವರ್ಜಿತುಮ್ ||
ಗತಪ್ರತ್ಯಾಗತಂ ಚೈವ ತತ್ತೋಯಂ ಪರಿವರ್ಜಯೇತ್ | (ವ್ಯಾಸವಚನ)

ನೀರು ಹರಿಯುತ್ತಿರುವ ನದೀ ಪ್ರದೇಶದಲ್ಲಿ ಮಲಮೂತ್ರ ವಿಸರ್ಜನ ಮಾಡಬಾರದು. ಸ್ನಾನಕ್ಕಾಗಿ ನದಿಯನ್ನು ದಾಟಿ ಬೇರೆ ಕಡೆಗೆ ಹೋಗಬಾರದು. ನದಿಯಲ್ಲಿ ಪ್ರವಾಹವಿಲ್ಲದೆ ಅಲ್ಲಲ್ಲಿ ಸ್ವಲ್ಪ ನೀರು ಹಳ್ಳದಂತೆ ನಿಂತಿದ್ದರೆ ಆ ಜಲದಲ್ಲಿ ಸ್ನಾನ ಮಾಡಬಾರದು. ಪ್ರವಾಹವು ಅವಿಚ್ಛಿನ್ನವಾಗಿದ್ದರೂ ಅಮೇಧ್ಯ ಮುಂತಾದ ಅಶುಚಿ ಪದಾರ್ಥಗಳಿದ್ದರೂ ಆ ಜಲದಲ್ಲಿ ಸ್ನಾನವನ್ನು ಮಾಡಬಾರದು. ಸುಳಿಯಿರುವ ಸ್ಥಳದಲ್ಲಿಯೂ ಸ್ನಾನವನ್ನು ಮಾಡಬಾರದು.

ಅಥಾಽವರ್ತೋದಕೇ ಸ್ನಾನಂ ನದ್ಯಾಂ ವರ್ಜ್ಯಂ ದ್ವಿಜಾತಿಭಿಃ |
ತಸ್ಯಾಂ ರಜಕತೀರ್ಥೇ ತು ದಶಹಸ್ತೇನ ವರ್ಜಯೇತ್ ||
ಸ್ನಾನಂ ರಜಕತೀರ್ಥೇಷು ಭೋಜನಂ ಗಣಿಕಾಗೃಹೇ |
ಪಶ್ಚಿಮೋತ್ತರಶಾಯಿತ್ವಂ ಶಕ್ರಸ್ಯಾಪಿ ಶ್ರಿಯಂ ಹರೇತ್ || (ಬೋಧಾಯನವಚನ)

ನದಿಯಲ್ಲಿ ಸುಳಿಯುಳ್ಳ ಸ್ಥಳದಲ್ಲಾಗಲಿ ಬ್ರಾಹ್ಮಣ ಕ್ಷತ್ರಿಯ ಮತ್ತು ವೈಶ್ಯರು ಸ್ನಾನ ಮಾಡಕೂಡದು. ಅಗಸರು ಬಟ್ಟೆಯನ್ನು ಒಗೆಯುವ ಘಟ್ಟದಲ್ಲಿ ಹತ್ತು ಮೊಳವನ್ನಾದರೂ ಬಿಟ್ಟು, ದೂರದಲ್ಲಿ ಸ್ನಾನವನ್ನು ಮಾಡಬೇಕು. ಅಗಸರು ಒಗೆಯುವ ಘಟ್ಟದಲ್ಲಿ ಸ್ನಾನವನ್ನು ಮಾಡುವುದು, ಸೂಳೆಯ ಮನೆಯಲ್ಲಿ ಊಟ ಮಾಡುವುದು, ವಾಯವ್ಯದಿಕ್ಕಿಗೆ ತಲೆಯನ್ನಿಟ್ಟು ಮಲಗುವುದು ಈ ಮೂರು ಇಂದ್ರನ ಸಂಪತ್ತನ್ನೂ ಕೂಡ ನಾಶಮಾಡುತ್ತವೆ.

ಅಗ್ರಾಹ್ಯಾಸ್ತ್ವಗ್ರಿಮಾ ಆಪೋ ನದ್ಯಾಃ ಪ್ರಥಮವೇಗಿತಾಃ |
ಪ್ರಕ್ಷೋಭಿತಾಶ್ಚ ಕೇನಾಪಿ ಯಾಶ್ಚ ತೀರ್ಥಾದ್ವಿನಿಸ್ಸೃತಾಃ || (ಯೋಗಿಯಾಜ್ಞವಲ್ಕ್ಯವಚನ)

ಮಳೆಯಿಂದ ಬಂದಿರುವ ಹೊಸ ನೀರು, ಅತಿವೇಗವಾಗಿ ಹರಿಯುತ್ತಿರುವ ನೀರು, ಇನ್ನೊಬ್ಬನಿಂದ ಕಲಡಿಸಲ್ಪಟ್ಟ ನೀರು, ಸ್ನಾನಘಟ್ಟದಿಂದ ಮುಂದೆ ಹರಿಯುತ್ತಿರುವ ನೀರು ಇವುಗಳಲ್ಲಿ ಸ್ನಾನವನ್ನು ಮಾಡಬಾರದು.

ಯಾಃ ಶೋಷಮುಪಗಚ್ಛಂತಿ ಗ್ರೀಷ್ಮೇ ಕುಸರಿತೋ ಭುವಿ |
ತಾಸು ಪ್ರಾವೃಷಿ ನ ಸ್ನಾಯಾದಪೂರ್ಣೇ ದಶವಾಸರೇ || (ಕಾತ್ಯಾಯನವಚನ)

ಬೇಸಿಗೆಯಲ್ಲಿ ಒಣಗಿ ಹೋಗುವ ಕ್ಷುದ್ರನದಿಗಳಲ್ಲಿ ಮಳೆಯಿಂದ ನೀರು ತುಂಬಿದ ಮೇಲೆ 10 ದಿನಗಳವರೆಗೆ ಸ್ನಾನವನ್ನು ಮಾಡಬಾರದು.

ಅಜಾ ಗಾವೋ ಮಹಿಷ್ಯಶ್ಚ ಬ್ರಾಹ್ಮಣಶ್ಚ ಪ್ರಸೂತಕೇ |
ದಶರಾತ್ರೇಣ ಶುದ್ಧ್ಯಂತಿ ಭೂಮಿಷ್ಠಂ ಚ ನವೋದಕಂ ||

ಆಡುಗಳು, ದನಗಳು, ಎಮ್ಮೆಗಳು, ಬ್ರಾಹ್ಮಣ ಇವರುಗಳಿಗೆ ಜಾತಾಶೌಚವು ಹತ್ತು ದಿನವಾಗಿರುತ್ತದೆ. ಭೂಮಿಯಲ್ಲಿರುವ ಹೊಸ ನೀರೂ ಇದರಂತೆ ಹತ್ತು ದಿನಗಳವರೆಗೆ ಮೈಲಿಗೆಯಾಗಿರುತ್ತದೆ.

ಹೀಗೆ ಮೇಲ್ಕಂಡ ಪ್ರಮಾಣಾನುಸಾರವಾಗಿ ನದೀ ಮುಂತಾದ ಜಲಗಳಲ್ಲಿ ದೋಷವಿಲ್ಲದಿರುವಾಗ ನಿತ್ಯ ನೈಮಿತ್ತಿಕ ಮುಂತಾದ ಸ್ನಾನಗಳನ್ನು ಮಾಡಬೇಕು.

## ನೈಮಿತ್ತಿಕ ಸ್ನಾನ

ನಿಮಿತ್ತ ವಿಶೇಷವು ಏರ್ಪಟ್ಟಾಗ ಮಾಡಬೇಕಾದ ಸ್ನಾನವು ನೈಮಿತ್ತಿಕಸ್ನಾನವೆನಿಸುತ್ತದೆ. ಈಗ ಸ್ನಾನಕ್ಕೆ ಕಾರಣವಾದ ನಿಮಿತ್ತಗಳನ್ನು ಕ್ರಮವಾಗಿ ಕೊಡುತ್ತೇವೆ.

ದಿವಾಕೀರ್ತಿಮುದಕ್ಯಾಂ ಚ ಪತಿತಂ ಸೂತಿಕಾಂ ತಥಾ |
ಶವಂ ತತ್ಸ್ಪೃಷ್ಟಿನಂ ಚೈವ ಸ್ಪೃಷ್ಟ್ವಾ ಸ್ನಾನೇನ ಶುಧ್ಯತಿ || (ಮನುವಚನ)

ಅಸಂಸ್ಕೃತರನ್ನೂ, ರಜಸ್ವಲಾಸ್ತ್ರೀಯನ್ನೂ, ಪತಿತರನ್ನು, ಪ್ರಸವಿಸಿದ ಸ್ತ್ರೀಯನ್ನೂ, ಹೆಣವನ್ನೂ ಮುಟ್ಟಬಾರದು. ಇವುಗಳನ್ನು ಮುಟ್ಟಿದವರನ್ನೂ ಮುಟ್ಟಬಾರದು. ಹಾಗೆ ಮುಟ್ಟಿದವರು ಅಶುದ್ಧರಾಗುವರು. ಈ ಅಶುದ್ಧಿಯ ಪರಿಹಾರಕ್ಕಾಗಿ ಸ್ನಾನವನ್ನು ಮಾಡಬೇಕು.

ಶವಸ್ಪೃಶಂ ದಿವಾಕೀರ್ತಿಮುದಕ್ಯಾಂ ಸೂತಿಕಾಂ ತಥಾ |
ಸ್ಪೃಷ್ಟ್ವಾ ಸ್ನಾನೇನ ಶುದ್ಧಿಃ ಸ್ಯಾತ್ಸಚೇಲೇನ ನ ಸಂಶಯಃ || (ಅಂಗಿರಸರ ವಚನ)

ಮೇಲ್ಕಂಡವರನ್ನು ಮುಟ್ಟಿದಾಗ ಉಟ್ಟ ಬಟ್ಟೆಯೊಡನೆ ಸ್ನಾನ ಮಾಡಿದರೆ ಶುದ್ಧಿಯಾಗುತ್ತದೆ. ಇಲ್ಲದಿದ್ದರೆ ಇಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ.

ಕೃತ್ವಾ ಸಚೈಲಂ ಹುತ್ವಾಗ್ನಿಂ ಘೃತಂ ಪ್ರಾಶ್ಯ ವಿಶುಧ್ಯತಿ | (ಅಂಗಿರಸರ ವಚನ)

ಉಟ್ಟ ಬಟ್ಟೆಯೊಡನೆ ಸ್ನಾನವನ್ನು ಮಾಡಿದ ಮೇಲೆ ಬ್ರಹ್ಮಚಾರಿಯಾಗಿದ್ದರೆ ಅಗ್ನಿಕಾರ್ಯವನ್ನೂ ಗೃಹಸ್ಥನಾಗಿದ್ದರೆ ಔಪಾಸನವನ್ನೂ ಮಾಡಿ ಹೋಮಶೇಷವಾದ ತುಪ್ಪವನ್ನು ಸ್ವೀಕರಿಸಬೇಕು. ಇಷ್ಟು ಮಾಡಿದ ಮೇಲೆ ಶುದ್ಧನಾಗುವನು.

ಚೈತ್ಯವೃಕ್ಷಶ್ಚಿತಿರ್ಯೂಪಶ್ಚಂಡಾಲಃ ಸೋಮವಿಕ್ರಯೀ |
ಏತಾನ್ ಸ್ಪೃಷ್ಟ್ವಾ ಬ್ರಾಹ್ಮಣಸ್ತು ಸಚೈಲಂ ಜಲಮಾವಿಶೇತ್ || (ಪರಾಶರವಚನ)

ಹೆಣವನ್ನುಸುಟ್ಟ ಅಥವಾ ಹೂಳಿದ ಸ್ಥಳದಲ್ಲಿ ನೆಟ್ಟಿರುವ ಮರವು ಚೈತ್ಯವೃಕ್ಷವೆನಿಸುತ್ತದೆ. ಹೆಣವನ್ನು ಸುಡುವುದಕ್ಕಾಗಿ ಏರ್ಪಡಿಸಿದ ಕಟ್ಟಿಗೆಯ ಜೋಡಣೆಯು ಚಿತೆಯೆನಿಸುತ್ತದೆ. ಗೋರಿಯು ಯೂಪವೆನಿಸುತ್ತದೆ. ಹಣ ಸಂಪಾದನೆಗಾಗಿ ಸೋಮಯಾಗವನ್ನು ಮಾಡುವವನು ಸೋಮವಿಕ್ರಯಿಯೆನಿಸುವನು. ಬ್ರಾಹ್ಮಣನು ಇವುಗಳನ್ನು ಮುಟ್ಟಿದರೆ ಉಟ್ಟ ಬಟ್ಟೆಯೊಡನೆ ನೀರಿನಲ್ಲಿ ಮುಳುಗಿ ಸ್ನಾನವನ್ನು ಮಾಡಬೇಕು.

ವೇದವಿಕ್ರಯಿಣಾಂ ಚಾಪಿ ಸ್ಪೃಷ್ಟ್ವಾ ಸ್ನಾನಂ ಸಮಾಚರೇತ್ || (ಬೋಧಾಯನವಚನ)

ಹಣಕ್ಕಾಗಿ ವೇದಪಾಠವನ್ನು ಹೇಳುವವನು ವೇದವಿಕ್ರಯಿಯೆನಿಸುವನು. ಇವನನ್ನು ಮುಟ್ಟಿದರೂ ಸ್ನಾನವನ್ನು ಮಾಡಬೇಕು.

ವಾಯಸಾಂಶ್ಚಾಥ ಮಾರ್ಜಾರಖರೋಷ್ಟ್ರಾಂಶ್ಚಾಶ್ವಸೂಕರಾನ್ |
ಅಮೇಧ್ಯಾನಪಿ ಸಂಸ್ಪೃಶ್ಯ ಸಚೈಲೋ ಜಲಮಾವಿಶೇತ್ || (ವ್ಯಾಸವಚನ)

ಕಾಗೆಗಳು, ಬೆಕ್ಕುಗಳು, ಕತ್ತೆಗಳು, ಕುದುರೆಗಳು, ಹಂದಿಗಳು ಇದರಂತಿರುವ ಅಶುದ್ಧ ಪ್ರಾಣಿಗಳನ್ನು ಮುಟ್ಟಿದರೂ ಉಟ್ಟ ಬಟ್ಟೆಯೊಡನೆ ನೀರಿನಲ್ಲಿ ಮುಳುಗಿ ಸ್ನಾನವನ್ನು ಮಾಡಬೇಕು.

### ಬೆಕ್ಕಿನ ವಿಷಯದಲ್ಲಿ ವಿಶೇಷ

ಮಾರ್ಜಾರಸ್ಪರ್ಶವಿಷಯೇ ವಿಶೇಷಂ ಮನುರಬ್ರವೀತ್ |
ಪುಚ್ಛೇ ಮಾರ್ಜಾಲಕಂ ಸ್ಪೃಷ್ಟ್ವಾ ಸ್ನಾತ್ವಾ ವಿಪ್ರೋ ವಿಶುಧ್ಯತಿ ||
ಭೋಜನೇ ಕರ್ಮಕಾಲೇ ಚ ವಿಧಿರೇಷ ಉದಾಹೃತಃ |
ಶುದ್ಧಿಂ ತಸ್ಯಾನ್ಯಕಾಲೇ ತು ಸ ಏವ ಮನುರಬ್ರವೀತ್ ||
ಮಾರ್ಜಾರಶ್ಚೈವ ದರ್ವೀ ಚ ಮಾರುತಶ್ಚ ಸದಾ ಶುಚಿಃ || (ಮನುವಚನ)

ಬೆಕ್ಕಿನ ಬಾಲವು ಮಾತ್ರ ಅಶುದ್ಧವಾಗಿರುತ್ತದೆ. ಉಳಿದ ಭಾಗವು ಅಶುದ್ಧವಲ್ಲ. ಊಟ ಮಾಡುವಾಗಲೂ ನಿತ್ಯನೈಮಿತ್ತಿಕಕರ್ಮಗಳನ್ನು ಮಾಡುವಾಗಲೂ ಬೆಕ್ಕಿನ ಬಾಲವನ್ನು ಬ್ರಾಹ್ಮಣನು ಮುಟ್ಟಬಾರದು. ಹಾಗೆ ಮುಟ್ಟಿದರೆ ಸ್ನಾನವನ್ನು

ಮಾಡಬೇಕು. ಬೇರೆ ಸಮಯದಲ್ಲಿ ಬೆಕ್ಕಿನ ಬಾಲವೂ ಶುದ್ಧವಾಗಿರುತ್ತದೆ. ಆದ್ದರಿಂದ ಬೆಕ್ಕು ಯಾವಾಗಲೂ ಮಡಿಯಾದ ಪ್ರಾಣಿ ಎನಿಸುತ್ತದೆ. ಸೌಟನಿಂದ ಸಾರು ಮುಂತಾದ ರಸಪದಾರ್ಥವನ್ನು ಬಡಿಸುವಾಗ ಎಂಜಲು ಎಲೆಗೂ ಸೌಟಿಗೂ ಸಾಕ್ಷಾತ್ತಾಗಿ ಸಂಪರ್ಕವು ಏರ್ಪಡದಿದ್ದರೂ ಸೌಟನ್ನು ಮುಟ್ಟಿರುವ ರಸಪದಾರ್ಥವು ಎಲೆಯನ್ನು ಮುಟ್ಟುವುದರಿಂದ ಪರಂಪರಾ ಸಂಪರ್ಕವು ಏರ್ಪಡುತ್ತದೆ. ಆದರೂ ಸೌಟು ಯಾವಾಗಲೂ ಶುದ್ಧವೇ ಆಗಿರುತ್ತದೆ. ಗಾಳಿಯು ಮೈಲಿಗೆಯವರನ್ನು ಮುಟ್ಟಿದರೂ ಮೈಲಿಗೆಯಾಗುವುದಿಲ್ಲ. ಯಾವಾಗಲೂ ಶುದ್ಧವಾಗಿಯೇ ಇರುತ್ತದೆ.

### ಎಲುಬಿನ ವಿಷಯದಲ್ಲಿ ವಿಶೇಷ

ಸ್ನೇಹಯುಕ್ತಾಸ್ಥಿವಿಷಯೇ ಸ್ನಾನಮೇತತ್ಪ್ರಕೀರ್ತಿತಮ್ ।
ನಾಪಃ ಸ್ಪೃಷ್ಟ್ವಾಽಸ್ಥಿ ನಿಃಸ್ನೇಹಂ ಗಾಮಾಲಭ್ಯಾರ್ಕಮೀಕ್ಷಯೇತ್ ॥ (ವಿಷ್ಣುವಚನ)

ಮನುಷ್ಯನ ಎಲುಬು, ವಸಾ, ಮೇದಸ್ಸು ಮುಂತಾದ ಜಿಡ್ಡಿನಿಂದ ಯುಕ್ತವಾಗಿರುವಾಗ ಮುಟ್ಟಿದರೆ ಹಿಂದೆ ಹೇಳಿದಂತೆ ಸ್ನಾನವನ್ನು ಮಾಡಬೇಕು. ಜಿಡ್ಡೆಲ್ಲವೂ ಒಣಗಿದ ಮೇಲೆ ಮುಟ್ಟಿದರೆ ಗೋವನ್ನು ಮುಟ್ಟಿ ಸೂರ್ಯನನ್ನು ನೋಡಬೇಕು. ಸ್ನಾನವನ್ನು ಮಾಡಬೇಕಾದ ಒತ್ತಾಯವಿಲ್ಲ.

ಅಮಾನುಷೇ ವಿಶೇಷಂ ತು ಸ ಏವ ಪುನರಬ್ರವೀತ್ ।
ಭಕ್ಷ್ಯವರ್ಜ್ಯಂ ಪಂಚನಖಂ ಶವಂ ತದಸ್ಥಿ ವಸಾಸ್ನೇಹಂ ಚ ಸ್ಪೃಷ್ಟ್ವಾ ಸ್ನಾಯಾತ್॥ (ವಿಷ್ಣುವಚನ)

ಮನುಷ್ಯರಲ್ಲದ ಪ್ರಾಣಿಗಳ ಎಲುಬಿನ ವಿಷಯದಲ್ಲಿ ವಿಷ್ಣುವು ಬೇರೆ ವಿಧವಾಗಿ ಹೇಳಿರುವರು. ಪ್ರಾಣಿಗಳಲ್ಲಿ ತಿನ್ನುವುದಕ್ಕೆ ಯೋಗ್ಯವಾದ ಪ್ರಾಣಿಗಳನ್ನಾಗಲೀ, ಅವುಗಳ ಎಲುಬನ್ನಾಗಲೀ ಅವುಗಳನ್ನು ತಿನ್ನಲು ಅರ್ಹತೆಯುಳ್ಳ ಮನುಷ್ಯರು ಮುಟ್ಟಿದರೆ ಸ್ನಾನವನ್ನು ಮಾಡಬೇಕಾಗಿಲ್ಲ. ತಾನು ತಿನ್ನುವುದಕ್ಕೆ ಯೋಗ್ಯವಲ್ಲದ ಐದು ಉಗುರುಗಳುಳ್ಳ ಪ್ರಾಣಿಗಳ ಹೆಣ ಅವುಗಳ ಎಲುಬು ಮತ್ತು ಆ ಎಲುಬುಗಳಲ್ಲಿರುವ ವಸಾ, ಮೇದಸ್ಸು ಮುಂತಾದವುಗಳ ಜಿಡ್ಡು ಇವುಗಳನ್ನು ಮುಟ್ಟಿದರೆ ಸ್ನಾನವನ್ನು ಮಾಡಬೇಕು.

ಅಜೀರ್ಣೇಽಭ್ಯುದಿತೇ ವಾಂತೇ ಶ್ಮಶ್ರುಕರ್ಮಣಿ ಮೈಥುನೇ ।
ದುಃಸ್ವಪ್ನೇ ದುರ್ಜನಸ್ಪರ್ಶೇ ಸ್ನಾನಮಾತ್ರಂ ವಿಧೀಯತೇ ॥

ಹಿಂದಿನ ದಿನದಲ್ಲಿ ಮಾಡಿದ ಊಟವು ಅಜೀರ್ಣವಾಗದಿರುವಾಗ ಮರುದಿನದಲ್ಲಿ ಪುನಃ ಊಟವನ್ನು ಮಾಡಿದ ಮೇಲೆ ಏರ್ಪಡುವ ವಾಂತಿಯು ಅಜೀರ್ಣವಾಂತಿಯೆನಿಸುತ್ತದೆ. ಮಲಗಿದಲ್ಲಿಯೇ ಮಾಡುವ ವಾಂತಿಯು ಅಭ್ಯುದಿತ ವಾಂತಿಯೆನಿಸುತ್ತದೆ. ಈ ಎರಡು ವಿಧವಾದ ವಾಂತಿಗಳಲ್ಲಿಯೂ, ಕ್ಷೌರವನ್ನು ಮಾಡಿಕೊಂಡಾಗಲೂ ರತಿಕ್ರೀಡೆಯು ಮುಗಿದ ಮೇಲೆಯೂ ಕೆಟ್ಟ ಸ್ವಪ್ನಗಳನ್ನು ಕಂಡ ಮೇಲೆಯೂ ದುರ್ಜನರನ್ನು ಮುಟ್ಟಿದ ಮೇಲೆಯೂ ಬರೇ ಸ್ನಾನದಿಂದ ಶುದ್ಧಿಯು ಏರ್ಪಡುತ್ತದೆ.

ಅಸ್ಥಿಸಂಚಯನಾತ್ಪೂರ್ವಂ ರುದಿತ್ವಾ ಸ್ನಾನಮಾಚರೇತ್ ।
ಅಂತರ್ದಶಾಹೇ ವಿಪ್ರಸ್ಯ ಊರ್ಧ್ವಮಾಚಮನಂ ಸ್ಮೃತಮ್ ॥ (ಪರಾಶರವಚನ)

ಸತ್ತವರ ಎಲುಬನ್ನು ಒಟ್ಟುಗೂಡಿಸುವುದಕ್ಕೆ ಅಸ್ಥಿಸಂಚಯನ ಎಂದು ಹೆಸರು. ಈ ಅಸ್ಥಿಸಂಚಯನಕ್ಕಿಂತ ಮುಂಚಿತವಾಗಿ ಅವರಿಗಾಗಿ ಅಳುವುದು, ಕಣ್ಣೀರು ಸುರಿಸುವುದು ಮುಂತಾದವುಗಳನ್ನು ಮಾಡಿದರೆ ಸ್ನಾನವನ್ನು ಮಾಡಬೇಕು. ಅಸ್ಥಿಸಂಚಯನವು ಮುಗಿದ ಮೇಲೆ ಸತ್ತು ಹತ್ತು ದಿನ ಮುಗಿಯುವುದರೊಳಗೆ ಅಳುವುದು ಮುಂತಾದವುಗಳನ್ನು ಮಾಡಿದರೆ ಸ್ನಾನ ಮಾಡಬೇಕು. ಹತ್ತು ದಿನಗಳ ಅನಂತರದಲ್ಲಿ ಮಾಡಿದರೆ ಸ್ನಾನ ಮಾಡಬೇಕಾಗಿಲ್ಲ. ಆಚಮನವನ್ನು ಮಾಡಿದರೆ ಸಾಕು. ಕೃತತ್ರೇತದ್ವಾಪರಯುಗಗಳಲ್ಲಿ ಹೀಗೆ ಮಾಡಬೇಕು. ಕಲಿಯುಗದಲ್ಲಿ ಈ ನಿಯಮವಿಲ್ಲ

ವಿರಿಕ್ತೇ ಮೈಥುನೇ ವಾಂತೇ ಸ್ಮಶಾನಸ್ಪರ್ಶನೇऽಪಿ ಚ |
ಕ್ಷುರಕರ್ಮಣಿ ಸಂಪ್ರಾಪ್ತೇ ಸ್ನಾನಂ ಸಮ್ಯಕ್ಸಮಾಚರೇತ್ || (ಪರಾಶರವಚನ)

ವಾಂತಿಯನ್ನೂ, ಭೇದಿಯನ್ನೂ ಮಾಡಿದವನು ಸ್ನಾನವನ್ನು ಮಾಡಬೇಕು. ಸ್ಮಶಾನದಲ್ಲಿರುವ ವಸ್ತುಗಳನ್ನಾಗಲೀ ಸ್ಮಶಾನಕ್ಕೆ ಹೋಗಿ ಬಂದವರನ್ನಾಗಲೀ ಮುಟ್ಟಿದರೆ ಅಥವಾ ಸ್ಮಶಾನಕ್ಕೆ ಹೋಗಿ ಬಂದರೆ ಸ್ನಾನವನ್ನು ಮಾಡಬೇಕು. ಕ್ಷೌರ ಮತ್ತು ರತಿಕ್ರೀಡೆಯು ಮುಗಿದ ಮೇಲೆ ಸ್ನಾನವನ್ನು ಮಾಡಬೇಕು.

### ವಾಂತಿ ಮುಂತಾದವುಗಳಲ್ಲಿ ವಿಶೇಷ

ವಮನಾದೌ ವಿಶೇಷಂ ಚ ಮನುಃ ಸಂಪ್ರಾಹ ಧರ್ಮವಿತ್ |
ವಾಂತೋ ವಿರಿಕ್ತಃ ಸ್ನಾತ್ವಾ ತು ಘೃತಪ್ರಾಶನಮಾಚರೇತ್ |
ಆಚಾಮೇದೇವ ಭುಕ್ತ್ವಾನ್ನಂ ಸ್ನಾನಂ ಮೈಥುನಿನಃ ಸ್ಮೃತಮ್ || (ಪರಾಶರವಚನ)

ವಾಂತಿ ಮಾಡಿದವನೂ, ಭೇದಿ ಮಾಡಿದವನೂ, ಸ್ನಾನ ಮಾಡಿ ಸ್ವಲ್ಪ ತುಪ್ಪವನ್ನು ಕುಡಿಯಬೇಕು. ಊಟ ಮಾಡಿದ ಕೂಡಲೇ ವಾಂತಿ ಮಾಡಿದವನು ಆಚಮನವನ್ನು ಮಾಡಬೇಕು. ರತಿಕ್ರೀಡೆಯನ್ನು ಮಾಡಿದವನು ಸ್ನಾನವನ್ನು ಮಾಡಬೇಕು.

### ರತಿಕ್ರೀಡೆಯಲ್ಲಿ ವಿಶೇಷ

ಋತೌ ತು ಗರ್ಭಶಂಕಿತ್ವಾತ್ಸ್ನಾನಂ ಮೈಥುನಿನಃ ಸ್ಮೃತಮ್ |
ಅನೃತೌ ತು ಯದಾ ಗರ್ಭೇ ಶೌಚಂ ಮೂತ್ರಪುರೀಷಮ್ || (ಶಾತಾತಪವಚನ)

ಮುಟ್ಟುಸ್ನಾನವು ಮುಗಿದ ಮೇಲೆ ಮುಟ್ಟಾಗಿ ಹದಿನಾರು ದಿನಗಳೊಳಗೆ ರತಿಕ್ರೀಡೆಯನ್ನು ಮಾಡಿದರೆ ಗರ್ಭವು ಏರ್ಪಡುವ ಸಂಭವವಿದೆ. ಆದರಿಂದ ಈ ದಿನಗಳಲ್ಲಿ ರತಿಕ್ರೀಡೆಯನ್ನು ಮಾಡಿದರೆ ಸ್ನಾನವನ್ನು ಮಾಡಬೇಕು. ಹದಿನಾರು ದಿನಗಳು ಮುಗಿದ ಮೇಲೆ ಸ್ತ್ರೀಸಂಗವನ್ನು ಮಾಡಿದರೂ ಒಮ್ಮೊಮ್ಮೆ ಗರ್ಭಧಾರಣೆಯು ಏರ್ಪಡುವುದುಂಟು. ಅದು ತಿಳಿದರೆ ಮಲಮೂತ್ರವಿಸರ್ಜನಾದಿಗಳನ್ನು ಮಾಡಿದಾಗ ಹೇಳಿರುವಂತೆ ಮೃತ್ತಿಕಾಶೌಚಾದಿಗಳನ್ನು ಮಾಡಿ ಸ್ನಾನವನ್ನು ಮಾಡಬೇಕು.

ಅನೃತಾವಪಿ ಚ ಸ್ನಾನಮುಕ್ತಂ ಕಾಲವಿಶೇಷತಃ | (ಚಂದ್ರಿಕಾವಚನ)
ಅಷ್ಟಮ್ಯಾಂ ಚ ಚತುರ್ದಶ್ಯಾಂ ದಿವಾ ಪರ್ವಣಿ ಮೈಥುನಮ್ |
ಕೃತ್ವಾ ಸಚೈಲಂ ಸ್ನಾತ್ವಾ ತು ವಾರುಣೀಭಿಶ್ಚ ಮಾರ್ಜಯೇತ್ ||

ಮುಟ್ಟಾದ ಮೇಲೆ ಹದಿನಾರು ದಿನಗಳು ಮುಗಿದ ಮೇಲೆ ಗರ್ಭಧಾರಣ ಚಿಹ್ನವು ತಿಳಿಯದಿದ್ದರೂ, ಅಷ್ಟಮೀ, ಚತುರ್ದಶೀ, ಅಮಾವಾಸ್ಯಾ, ಹುಣ್ಣಿಮೆ ಸಂಕ್ರಮಣ ದಿನ ಈ ದಿನಗಳಲ್ಲಿಯೂ, ಹಗಲಿನಲ್ಲಿಯೂ ರತಿಕ್ರೀಡೆಯನ್ನು ಮಾಡಿದರೆ ಸ್ನಾನವನ್ನು ಮಾಡಬೇಕು.

### ನೀರಿಲ್ಲದೆ ಮಲಮೂತ್ರವಿಸರ್ಜನೆ ಮಾಡಿದರೆ ವಿಶೇಷ

ಕೃತ್ವಾ ಮೂತ್ರಪುರೀಷಂ ತು ಯದಾ ನೈವೋದಕಂ ಭವೇತ್ |
ಸ್ನಾತ್ವಾ ಲಬ್ಧೋದಕಃ ಪಶ್ಚಾತ್ಸಚೈಲಸ್ತು ವಿಶುದ್ಧ್ಯತಿ || (ಪೈಠೀನಸಿ ವಚನ)

ನೀರಿಲ್ಲದ ಸ್ಥಳದಲ್ಲಿ ಮಲಮೂತ್ರವಿಸರ್ಜನೆ ಮಾಡಿದವರು ನೀರು ಸಿಕ್ಕಿದ ಕೂಡಲೇ ಪುನಃ ಉಟ್ಟ ಬಟ್ಟೆಯೊಡನೆ ಸ್ನಾನವನ್ನು ಮಾಡಿದರೆ ಶುದ್ಧಿಯಾಗುತ್ತದೆ.

### ನಾಯಿ ಮುಟ್ಟಿದಾಗ ವಿಶೇಷ

ಶುನೋಪಹತಃ ಸಚೈಲೋऽವಗಾಹೇತ, ಪ್ರಕ್ಷಾಲ್ಯ ಪಾದದೇಶಮಗ್ನಿನಾ ಸಂಸ್ಪೃಶ್ಯ ಪುನಃ ಪ್ರಕ್ಷಾಳ್ಯಪಾದೌ ಚಾಚಮ್ಯ ಪ್ರಯತೋ ಭವತಿ (ಆಪಸ್ತಂಬವಚನ)

ಅತ್ರ ವ್ಯವಸ್ಥಾಂ ಸಂಪ್ರಾಹ ವಿಷ್ಣುರ್ಧರ್ಮವಿದಾಂ ವರಃ |
ನಾಭೇರಧಃ ಕರಾಗ್ರಂ ವಾ ಶುನಾ ಯದ್ಯುಪಹನ್ಯತೇ ||
ಪ್ರಕ್ಷಾಲ್ಯ ತಮಭಿಜ್ವಾಲ್ಯ ಪುನರಾಚಮ್ಯ ಶುದ್ಧ್ಯತಿ |
ನಾಭೇರೂರ್ಧ್ವಂ ಶುನಾ ಸ್ಪೃಷ್ಟೋ ಲಿಪ್ತೋಽಮೇಧ್ಯೇನ ವಾ ಪುನಃ ||
ಪ್ರಕ್ಷಾಲ್ಯ ಮೃದ್ಭಿರಂಗಾನಿ ಸಚೈಲಂ ಸ್ನಾನಮರ್ಹತಿ ||

ನಾಯಿ ಮುಟ್ಟಿದಾಗ ಉಟ್ಟ ಬಟ್ಟೆಯೊಡನೆ ಮುಳುಗಿ ಸ್ನಾನ ಮಾಡಬೇಕು. ಮುಟ್ಟಿದ ಸ್ಥಳವನ್ನು ತೊಳೆದು ಬೆಂಕಿಗೆ ತೋರಿಸಿ ಪುನಃ ತೊಳೆದು ಆಚಮನವನ್ನು ಮಾಡಬೇಕು. ಇದರಿಂದ ಶುದ್ಧಿಯಾಗುತ್ತದೆಯೆಂದು ಆಪಸ್ತಂಬರು ಹೇಳಿರುತ್ತಾರೆ.

ಈ ಆಪಸ್ತಂಬರ ವಚನವನ್ನು ವಿಷ್ಣು ಎಂಬ ಸ್ಮೃತಿಕಾರರು ಸ್ಪಷ್ಟಪಡಿಸಿರುತ್ತಾರೆ. ಅದನ್ನು ಈಗ ಹೇಳುತ್ತೇವೆ. ಹೊಕ್ಕಳಿನ ಕೆಳಭಾಗ ಮತ್ತು ಕೈಯ ತುದಿಯನ್ನು ನಾಯಿಯು ಮುಟ್ಟಿದರೆ ಆ ಪ್ರದೇಶವನ್ನು ತೊಳೆದು ಬೆಂಕಿಗೆ ಹಿಡಿದು ಪುನಃ ತೊಳೆದು ಆಚಮನವನ್ನು ಮಾಡಿದರೆ ಶುದ್ಧಿಯು ಏರ್ಪಡುತ್ತದೆ. ಹೊಕ್ಕಳಿಗಿಂತ ಮೇಲ್ಭಾಗವನ್ನು ಮುಟ್ಟಿದರೆ ಅಥವಾ ದೇಹದ ಯಾವ ಭಾಗದಲ್ಲಾದರೂ ನಾಯಿಯ ಅಮೇಧ್ಯವು ತಗಲಿದರೆ ಆ ಅವಯವವನ್ನು ಮಣ್ಣಿನಿಂದ ತೊಳೆದು ಉಟ್ಟ ಬಟ್ಟೆಯೊಡನೆ ಸ್ನಾನ ಮಾಡಿದರೆ ಶುದ್ಧಿಯು ಏರ್ಪಡುತ್ತದೆ.

### ರಸ್ತೆಯ ನೀರು ಮುಂತಾದ ಅಶುದ್ಧ ವಸ್ತುಗಳು ತಗಲಿದರೆ ವಿಶೇಷ

ರಥ್ಯಾಕರ್ದಮತೋಯೇನ ಷ್ಠೀವನಾದ್ಯೇನ ವಾ ಪುನಃ |
ನಾಭೇರೂರ್ಧ್ವಂ ನರಃ ಸ್ಪೃಷ್ಟಃ ಸದ್ಯಃ ಸ್ನಾನೇನ ಶುದ್ಧ್ಯತಿ || (ಶಂಖ ವಚನ)

ರಸ್ತೆಯಲ್ಲಿರುವ ಕೆಸರಿನ ನೀರು ಅಥವಾ ಉಗುಳಿದ ಎಂಜಲು ಇವುಗಳು ಹೊಕ್ಕಳಿಗಿಂತ ಮೇಲೆ ತಗಲಿದರೆ ಕೂಡಲೇ ಸ್ನಾನದಿಂದ ಶುದ್ಧಿಯು ಏರ್ಪಡುತ್ತದೆ.

ಊರ್ಧ್ವಂ ನಾಭೇಃ ಕರಂ ಮುಕ್ತ್ವಾ ಯದಂಗಂ ಸ್ಪೃಶತೇ ಖಗಃ (ಖರಃ) |
ಸ್ನಾನಂ ತತ್ರ ಪ್ರಕುರ್ವೀತ ಶೇಷಂ ಪ್ರಕ್ಷಾಳ್ಯ ಶುದ್ಧ್ಯತಿ || (ಜಾತೂಕರ್ಣ್ಯವಚನ)

ಕೈಯನ್ನು ಬಿಟ್ಟು ಉಳಿದ ಹೊಕ್ಕಳಿನ ಮೇಲ್ಭಾಗದಲ್ಲಿರುವ ಅವಯವಗಳನ್ನು ಯಾವುದಾದರೊಂದು ಪಕ್ಷಿಯಾಗಲೀ, ಕತ್ತೆ ಮುಂತಾದ ಅಶುದ್ಧ ಮೃಗವಾಗಲೀ ಮುಟ್ಟಿದರೆ ಮುಟ್ಟಿದ ಕೂಡಲೇ ಸ್ನಾನದಿಂದ ಶುದ್ಧಿಯಾಗುತ್ತದೆ. ಹೊಕ್ಕಳಿನ ಕೆಳಗಿನ ಅವಯವಗಳನ್ನೂ, ಕೈಯನ್ನೂ ಮುಟ್ಟಿದರೆ ಆ ಅವಯವವನ್ನು ತೊಳೆದರೆ ಶುದ್ಧಿಯಾಗುತ್ತದೆ.

### ಅಶುದ್ಧರನ್ನು ಅಶುದ್ಧರು ಮುಟ್ಟಿದರೆ ಪ್ರಾಯಶ್ಚಿತ್ತ

ಅಶುದ್ಧಾನ್ ಸ್ವಯಮಪ್ಯೇತಾನಶುದ್ಧಸ್ತು ಯದಿ ಸ್ಪೃಶೇತ್ |
ವಿಶುದ್ಧ್ಯತ್ಯುಪವಾಸೇನ ತದಾ ಕೃಚ್ಛ್ರೇಣ ವಾ ಪುನಃ ||
ಉಪವಾಸಾದಿಕಂ ಜ್ಞೇಯಂ ಸಂಸ್ಪರ್ಶೇ ಬುದ್ಧಿಪೂರ್ವಕೇ |

ಬ್ರಹ್ಮಹತ್ಯಾ ಮುಂತಾದ ಮಹಾಪಾಪಗಳಿಂದ ಅಶುದ್ಧರಾಗಿರುವವರನ್ನು ಅಶುದ್ಧರಾದವರು ತಿಳಿಯದೆ ಮುಟ್ಟಿದರೆ ಉಪವಾಸ ಅಥವಾ ಕೃಚ್ಛ್ರ ಪ್ರಾಯಶ್ಚಿತ್ತವನ್ನು ಮಾಡಿದರೆ ಶುದ್ಧರಾಗುವರು. ಬುದ್ಧಿಪೂರ್ವಕವಾಗಿ ಮುಟ್ಟಿದರೆ ಉಪವಾಸ ಮತ್ತು ಕೃಛ್ರ ಮುಂತಾದ ಪ್ರಾಯಶ್ಚಿತ್ತಗಳನ್ನು ಎರಡನ್ನೂ ಮಾಡಬೇಕು.

ಉದಯಾಸ್ತಮಯೇ ಸ್ಕಂದಿತ್ವಾ ಅಕ್ಷಿಸ್ಪಂದನೇ ಕರ್ಣಾಕ್ರೋಶನೇ ಚಿತ್ಯಾರೋಹಣೇ ಯೂಪಸ್ಪರ್ಶನೇ ಸಚೈಲಸ್ನಾನಂ ಕೃತ್ವಾ 'ಪುನರ್ಮನಃ' ಇತಿ ಜಪೇತ್. ಮಹಾವ್ಯಾಹೃತಿಭಿಃ ಸಪ್ತಾಜ್ಯಾಹುತೀರ್ಜುಹುಯಾತ್ (ಕಾಶ್ಯಪವಚನ)

"ಸೂರ್ಯೋದಯ ಮತ್ತು ಸೂರ್ಯಾಸ್ತಕಾಲಗಳಲ್ಲಿ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಡದೆ ಬೇರೆ ಕಾರ್ಯಗಳನ್ನು ಮಾಡುವುದು ಉದಯಾಸ್ತಮನ ಸ್ಕಂದವೆನಿಸುತ್ತದೆ. ನಿಷ್ಕಾರಣವಾಗಿ ಎಡೆಬಿಡದೆ ಗಂಟೆಗಟ್ಟಲೆ ಕಣ್ಣು ಚಲಿಸುತ್ತಿರುವುದು ಅಕ್ಷಿಸ್ಪಂದನವೆನಿಸುತ್ತದೆ. ಕಿವಿಯೊಳಗೆ ಯಾವಾಗಲೂ ಶಬ್ದ ಏರ್ಪಡುತ್ತಿರುವುದು ಕರ್ಣಾಕ್ರೋಶ ವೆನಿಸುತ್ತದೆ. ಇವುಗಳು ಏರ್ಪಟ್ಟಾಗಲೂ, ಚಿತೆಯನ್ನು ಏರ್ಪಡಿಸಿದಾಗಲೂ, ಗೋರಿಯನ್ನು ಮುಟ್ಟಿದಾಗಲೂ, ಉಟ್ಟ ಬಟ್ಟೆಯೊಡನೆ ಸ್ನಾನವನ್ನು ಮಾಡಬೇಕು. 'ಪುನರ್ಮನಃ' ಎಂಬ ಮಂತ್ರವನ್ನು ಜಪಿಸಬೇಕು. ಮಹಾವ್ಯಾಹೃತಿ ಮಂತ್ರಗಳಿಂದ ಏಳು ಆಹುತಿಗಳನ್ನು ಯಜ್ಞದಲ್ಲಿ ಕೊಡಬೇಕು."

### ಕಾಗೆ ಮತ್ತು ಗೂಬೆಗಳನ್ನು ಮುಟ್ಟಿದಾಗ ಮಾಡಬೇಕಾದುದು

ಕಾಕೋಲೂಕಸ್ಪರ್ಶನೇ ಸಚೇಲಸ್ನಾನಂ (ಪೈಠೀನಸಿವಚನ)

"ಕಾಗೆ ಮತ್ತು ಗೂಬೆಗಳು ಮುಟ್ಟಿದರೆ ಉಟ್ಟ ಬಟ್ಟೆಯೊಡನೆ ಮುಳುಗಿ ಸ್ನಾನವನ್ನು ಮಾಡಬೇಕು."

### ಪರಕೀಯರಕ್ತಾದಿಗಳ ಸ್ಪರ್ಶ ಏರ್ಪಟ್ಟಾಗ

ಪರಸ್ಯ ಶೋಣಿತಸ್ಪರ್ಶೇ ರೇತೋವಿಣ್ಮೂತ್ರಜೇ ತಥಾ |
ಚತುರ್ಣಾಮಪಿ ವರ್ಣಾನಾಂ ದ್ವಾತ್ರಿಂಶನ್ಮೃತ್ತಿಕಾ ಸ್ಮೃತಾ || (ಬೋಧಾಯನ ವಚನ)

"ಇನ್ನೊಬ್ಬನ ರಕ್ತ, ರೇತಸ್ಸು, ಮೂತ್ರ ಮುಂತಾದ ವಸ್ತುಗಳನ್ನು ಮುಟ್ಟಿದರೆ ಬ್ರಾಹ್ಮಣ ಮುಂತಾದ ನಾಲ್ಕು ಜಾತಿಯವರೂ ಮೂವತ್ತೆರಡು ಸಲ ಮೃತ್ತಿಕಾಶೌಚವನ್ನು ಮಾಡಿ ಉಟ್ಟ ಬಟ್ಟೆಯೊಡನೆ ಮುಳುಗಿ ಸ್ನಾನವನ್ನು ಮಾಡಬೇಕು."

### ಅಶುದ್ಧಿಪರಿಹಾರಕ್ಕಾಗಿ ಮಾಡುವ ಸ್ನಾನದ ಕ್ರಮ

ತೂಷ್ಣೀಮೇವಾವಗಾಹೇತ ಯದಾ ಸ್ಯಾದಶುಚಿರ್ನರಃ |
ಆಚಮ್ಯ ಪ್ರಯತಃ ಪಶ್ಚಾತ್ ಸ್ನಾನಂ ವಿಧಿವದಾಚರೇತ್ ||

"ಮೇಲ್ಕಂಡ ಅನೇಕವಿಧಗಳಿಂದ ಅಶುದ್ಧನಾದವನು ಮೊಟ್ಟಮೊದಲು ಮಂತ್ರವಿಲ್ಲದೆ ನೀರಿನಲ್ಲಿ ಮುಳುಗಿ ಸ್ನಾನವನ್ನು ಮಾಡಬೇಕು. ಆ ಮೇಲೆ ಆಚಮನವನ್ನು ಮಾಡಬೇಕು. ಆಗ ಶಾಸ್ತ್ರೋಕ್ತವಿಧಿಯಿಂದ ಮಾಡುವ ಸ್ನಾನಕ್ಕೆ ಅರ್ಹನಾಗುವನು. ಆಮೇಲೆ ವಿಧಿಪ್ರಕಾರವಾಗಿ ಸ್ನಾನವನ್ನು ಮಾಡಬೇಕು."

### ಹಲ್ಲಿ ಮುಂತಾದವುಗಳು ಮುಟ್ಟಿದರೆ ಮಾಡಬೇಕಾದುದು

ಗೌಳ್ಯಾಶ್ಚ ಸ್ಪರ್ಶಮಾತ್ರೇ ತು ಸರಟೀಕೃಕಲಾಸಯೋಃ |
ಶುಭದೇಽಶುಭದೇ ವಾಪಿ ಸಚೈಲಂ ಸ್ನಾನಮಾಚರೇತ್ || (ವ್ಯಾಸವಚನ)

"ಹಲ್ಲಿ ಹಂಟೆಗೊದ್ದ (ಅರಣೆ) ಇವುಗಳನ್ನು ಮುಟ್ಟಿದಾಗ ಕೆಲವು ಸಂದರ್ಭದಲ್ಲಿ ಶುಭಫಲವೂ ಮತ್ತೆ ಕೆಲವು ಸಂದರ್ಭದಲ್ಲಿ ಅಶುಭಫಲವೂ ಏರ್ಪಡುವುದಾಗಿ ಜ್ಯೋತಿಃಶಾಸ್ತ್ರದಲ್ಲಿ ಹೇಳಿರುತ್ತದೆ. ಈ ಎರಡುವಿಧವಾದ ಸ್ಪರ್ಶಗಳಲ್ಲಿ ಯಾವ ಸ್ಪರ್ಶವು ಏರ್ಪಟ್ಟರೂ ಉಟ್ಟ ಬಟ್ಟೆಯೊಡನೆ ಸ್ನಾನವನ್ನು ಮಾಡಬೇಕು."

### ಉಟ್ಟ ಬಟ್ಟೆಯೊಡನೆ ಮಾಡುವ ಸ್ನಾನದ ಕ್ರಮ

ಯತ್ಸಾಕ್ಷತ್ಪಂಚಾಂಗರಹಿತಂ ಯದ್ಗೃತ್ಸ್ನಾನಾದನಾವೃತಮ್ |
ಯದಂಗಶುದ್ಧಿದಂ ಸ್ನಾನಂ ತತ್ಸಚೇಲಕಮುಚ್ಯತೇ || (ಹಾರೀತವಚನ)

"ಸ್ನಾನಕ್ಕೆ ಸಂಕಲ್ಪ ಮುಂತಾದ ಐದು ಅಂಗಗಳನ್ನು ಮುಂದೆ ತಿಳಿಸುವೆವು. (1) ಆ ಅಂಗಗಳು ಯಾವುದೂ ಇರಬಾರದು. (2) ಮನೆಯಲ್ಲಿ ಯಾರೂ ನೋಡದಂತೆ ಬಚ್ಚಲು ಮನೆ ಮುಂತಾದ ಸ್ಥಳಗಳಲ್ಲಿ ಮಾಡಬಾರದು. (3) ಎಲ್ಲರೂ ನೋಡುವಂತೆ

ಕೆರೆ ಮುಂತಾದವುಗಳಲ್ಲಿ ಮಾಡಬೇಕು. (4) ಇತರರ ಸ್ಪರ್ಶ ಮುಂತಾದವುಗಳಿಂದ ಬಂದಿರುವ ಅಶುದ್ಧಿಯ ಪರಿಹಾರಕ್ಕಾಗಿ ಮಾಡಬೇಕು. ಇಂತಹ ಸ್ನಾನವು ಉಟ್ಟ ಬಟ್ಟೆಯೊಡನೆ ಮಾಡುವ ಸ್ನಾನವೆನಿಸುತ್ತದೆ."

**ಅಮೇಧ್ಯವು ಇಂದ್ರಿಯಗಳೊಳಗೆ ಪ್ರವೇಶಿಸಿದಾಗ ಮಾಡಬೇಕಾದುದು**

ಇಂದ್ರಿಯೇಣ ಪ್ರವಿಷ್ಟಂ ಸ್ಯಾದಮೇಧ್ಯಂ ಯದಿ ಕರ್ಹಿಚಿತ್ |
ಮುಖೇ ತು ಪ್ರವಿಶೇತ್ತಚ್ಚೇತ್ಸ್ನಾನಂ ತತ್ರ ವಿಧೀಯತೇ || (ಅತ್ರಿವಚನ)

"ಕಿವಿ ಮೂಗು ಮುಂತಾದ ಇಂದ್ರಿಯಗಳ ರಂಧ್ರಗಳಲ್ಲಿ ಮಲವು ಪ್ರವೇಶಿಸಿದರೂ, ಬಾಯಿಯೊಳಗೆ ಪ್ರವೇಶಿಸಿದರೂ ಉಟ್ಟ ಬಟ್ಟೆಯೊಡನೆ ಸ್ನಾನವನ್ನು ಮಾಡಬೇಕು."

**ಮುಟ್ಟಾದವಳು ಮುಂತಾದವರನ್ನು ಮುಟ್ಟಿದಾಗ ಮಾಡಬೇಕಾದುದು**

ಶಿಶುಬಾಲಕುಮಾರಾಣಾಂ ಸ್ಪರ್ಶೇ ಜಾತೇ ಪರಾಶರಃ |
ರಜಸ್ವಲಾದಿಭಿಃ ಪ್ರಾಹ ಶುದ್ಧಿಂ ಸಮ್ಯಗ್ಯಥಾಕ್ರಮಮ್ ||
ಶಿಶೋರಭ್ಯುಕ್ಷಣಂ ಪ್ರೋಕ್ತಂ ಬಾಲಸ್ಯಾಚಮನಂ ಸ್ಮೃತಮ್ |
ರಜಸ್ವಲಾದಿಸಂಸ್ಪರ್ಶೇ ಸ್ನಾನಮೇವ ಕುಮಾರಕೇ ||
ಶಿಶುರಾದಂತಜನನಾದಾಚೌಲಾದ್ಬಾಲಕಃ ಸ್ಮೃತಃ |
ಕುಮಾರಃ ಸ ತು ವಿಜ್ಞೇಯೋ ಬುಧೈರಾಮೌಂಜೀಬಂಧನಾತ್ || (ಪರಾಶರವಚನ)

"ಹಲ್ಲು ಹುಟ್ಟಿದ ಮೇಲೆ ಚೌಲಕಾಲ ಅಂದರೆ ಮೂರುವರ್ಷಗಳು ಪೂರ್ತಿಯಾಗುವವರೆಗಿನ ವಯಸ್ಸಿನ ಮಗುವು 'ಶಿಶು' ಎನಿಸುತ್ತದೆ. ಅದರ ಮೇಲೆ ಉಪನಯನಕಾಲ ಅಂದರೆ ಎಂಟುವರ್ಷಗಳವರೆಗಿನ ಹುಡುಗ ಅಥವಾ ಹುಡುಗಿಯು ಬಾಲ ಎಂದು ಹೇಳಲ್ಪಡುತ್ತವೆ. ಉಪನಯನಕಾಲಾನಂತರದಲ್ಲಿ ಅಂದರೆ ಎಂಟು ವರ್ಷಗಳು ಮುಗಿದ ಮೇಲಿನ ವಯಸ್ಸಿನ ಹುಡುಗರಿಗೆ 'ಕುಮಾರ' ಎಂದು ಹೆಸರು. ಮುಟ್ಟಾದವಳನ್ನು ಶಿಶುವು ಮುಟ್ಟಿದರೆ ಆ ಶಿಶುವನ್ನು ನೀರಿನಿಂದ ಪ್ರೋಕ್ಷಿಸಬೇಕು. ಬಾಲಕನು ಮುಟ್ಟಿದರೆ ಅವನಿಂದ ಆಚಮನವನ್ನು ಮಾಡಿಸಬೇಕು. ಕುಮಾರನು ಮುಟ್ಟಿದರೆ ಅವನು ಸ್ನಾನವನ್ನು ಮಾಡಬೇಕು. ಇದರಿಂದ ಶುದ್ಧಿಯು ಏರ್ಪಡುತ್ತದೆ.

**ಉಟ್ಟ ಬಟ್ಟೆಯೊಡನೆ ಮಾಡುವ ಸ್ನಾನದ ಕ್ರಮದಲ್ಲಿ ವಿಶೇಷ**

ಯತ್ರ ಪುಂಸಃ ಸಚೇಲಂ ಸ್ಯಾತ್ಸ್ನಾನಂ ತತ್ರ ದಿವಾ ನಿಶಿ |
ಕುರ್ವೀತೈವ ಶಿರಃಸ್ನಾನಂ ಕಟಿರೋಗೀ ಶಿರಸ್ತಥಾ || (ಸ್ಮೃತಿಸಾರವಚನ)

"ಉಟ್ಟಬಟ್ಟೆಯೊಡನೆ ಸ್ನಾನವನ್ನು ಮಾಡಬೇಕೆಂದು ಹೇಳಿರುವ ಸಂದರ್ಭದಲ್ಲಿ ಮುಳುಗಿಯೇ ಸ್ನಾನವನ್ನು ಮಾಡಬೇಕು. ಇಂತಹ ಸಂದರ್ಭದಲ್ಲಿ ಸೊಂಟನೋವು ಮುಂತಾದ ರೋಗಗಳಿಂದ ಎದ್ದು ನಡೆಯಲು ಸಾಧ್ಯವಿಲ್ಲದಿದ್ದರೂ ಮುಳುಗಿಯೇ ಸ್ನಾನವನ್ನು ಮಾಡಬೇಕು."

ಮಾನುಷಾಸ್ಥಿ ವಸಾಂ ವಿಷ್ಠಾಮಾರ್ತವಂ ಮೂತ್ರರೇತಸೀ |
ಮಜ್ಜಾನಂ ಶೋಣಿತಂ ಸ್ಪೃಷ್ಟ್ವಾ ಸಚೈಲಂ ಸ್ನಾನಮಾಚರೇತ್ ||
ಸ್ನಾತ್ವಾ ನಿಮೃಜ್ಯ ಲೇಪಾದೀನಾಚಮ್ಯ ಚ ಶುಚಿರ್ಭವೇತ್ ||
ಸ್ನಾತ್ವೈತಾನಿ ಸಂಸ್ಪೃಶ್ಯ ಪ್ರಕ್ಷಾಳ್ಯ ಚ ಶುಚಿರ್ಭವೇತ್ || (ಷಟ್ತ್ರಿಂಶನ್ಮತವಚನ)

"ಮನುಷ್ಯರ ಎಲುಬು, ದೇಹದೊಳಗಿರುವ ಜಿಡ್ಡು, ಮಲ, ಮುಟ್ಟಾದವರ ಮುಟ್ಟಿನ ರಕ್ತ, ಮೂತ್ರ, ರೇತಸ್ಸು ರಕ್ತ

ಮಜ್ಜೆ ಇವುಗಳನ್ನು ಮುಟ್ಟಿದರೆ ಮೊದಲು ನೀರಿನಲ್ಲಿ ಮುಳುಗಬೇಕು. ಆ ಮೇಲೆ ದೇಹದಲ್ಲಿ ಮೇಲ್ಕಂಡ ವಸ್ತುಗಳು ಮುಟ್ಟಿರುವ ಸ್ಥಳವನ್ನು ಚೆನ್ನಾಗಿ ತೊಳೆಯಬೇಕು. ಆ ಮೇಲೆ ಪುನಃ ಮುಳುಗಿ ಸ್ನಾನ ಮಾಡಬೇಕು. ಆಚಮನ ಮಾಡಬೇಕು. ಇನ್ನೊಮ್ಮೆ ಆ ಅವಯವವನ್ನು ತೊಳೆಯಬೇಕು. ಪುನಃ ಮುಳುಗಿ ಸ್ನಾನ ಮಾಡಬೇಕು. ಇದರಿಂದ ಶುದ್ಧನಾಗುವನು."

ಪ್ರಾಯಶ್ಚಿತ್ತೇ ಸಮುತ್ಪನ್ನೇ ಸ್ನಾನಮೇವಂ ವಿಧೀಯತೇ |
ಪೂರ್ವೋದ್ದಿಷ್ಟೈಸ್ತಥಾ ಮಂತ್ರೈರನ್ಯಥಾ ಮಾರ್ಜನಂ ಸ್ಮೃತಮ್ || (ಯೋಗಿಯಾಜ್ಞವಲ್ಕ್ಯವಚನ)

"ಯಾವುದಾದರೂ ಪಾಪವನ್ನು ಮಾಡಿ ಅದಕ್ಕೆ ಪ್ರಾಯಶ್ಚಿತ್ತವನ್ನು ಮಾಡುವ ಸಂದರ್ಭ ಬಂದಾಗ ಹಿಂದೆ ಹೇಳಿದಂತೆ ಉಟ್ಟ ಬಟ್ಟೆಯೊಡನೆ ಸ್ನಾನವನ್ನು ಮಾಡಲೇಬೇಕು. ಸಾಧಾರಣವಾಗಿ ಸ್ನಾನವನ್ನು ಮಾಡಬೇಕಾದ ಸಂದರ್ಭದಲ್ಲಿ ಸ್ನಾನವನ್ನು ಮಾಡಲು ಸಾಧ್ಯವಾಗದಿದ್ದಲ್ಲಿ ಮೇಲೆ ಹೇಳಿದ 'ಆಪೋ ಹಿ ಷ್ಠಾ' ಮುಂತಾದ ಮಂತ್ರಗಳಿಂದ ಪ್ರೋಕ್ಷಣವನ್ನು ಮಾಡಿಕೊಳ್ಳಬೇಕು.

### ರಾತ್ರಿ ಸ್ನಾನವನ್ನು ಮಾಡಬೇಕಾದ ಸಂದರ್ಭ

ವ್ಯಾಸೋ ನೈಮಿತ್ತಿಕೇ ಸ್ನಾನೇ ವಿಶೇಷಂ ಮುನಿರಬ್ರವೀತ್ |
ರಾತ್ರಿಸ್ನಾನಂ ನ ಕುರ್ವೀತ ದಾನಂ ಚೈವ ವಿಶೇಷತಃ ||
ನೈಮಿತ್ತಿಕಂ ತು ಕುರ್ವೀತ ಸ್ನಾನಂ ದಾನಂ ಚ ರಾತ್ರಿಷು || (ವ್ಯಾಸವಚನ)

"ರಾತ್ರಿಯಲ್ಲಿ ಸ್ನಾನ ದಾನ ಇವೆರಡನ್ನು ಯಾವ ಕಾರಣದಿಂದಲೂ ಮಾಡಬಾರದು. ರಜಸ್ವಲಾಸ್ಪರ್ಶ ಮುಂತಾದ ಕಾರಣಗಳು ಏರ್ಪಟ್ಟರೆ ರಾತ್ರಿಯಲ್ಲಿಯೂ ಸ್ನಾನವನ್ನು ಮಾಡಬೇಕು. ಇದರಂತೆ ಸತ್ಪುತ್ರಲಾಭ ಮುಂತಾದ ಕಾರಣವಿಶೇಷವು ಏರ್ಪಟ್ಟಾಗ ರಾತ್ರಿಯಲ್ಲಿ ದಾನವನ್ನೂ ಮಾಡಬೇಕು." ಇದು ವ್ಯಾಸಮುನಿಯ ಮತವಾಗಿದೆ.

ಗ್ರಹಣೋದ್ವಾಹಸಂಕ್ರಾಂತಿಯಾತ್ರಾರ್ತಿಪ್ರಸವೇಷು ಚ |
ಸ್ನಾನಂ ನೈಮಿತ್ತಿಕಂ ಜ್ಞೇಯಂ ರಾತ್ರಾವಪಿ ನ ದುಷ್ಯತಿ ||
ಮಹಾನಿಶಾ ತು ವಿಜ್ಞೇಯಾ ಮಧ್ಯಸ್ಥಪ್ರಹರದ್ವಯಮ್ |
ತತ್ರ ಸ್ನಾನಂ ನ ಕುರ್ವೀತ ಕಾಮ್ಯನೈಮಿತ್ತಿಕಾದೃತೇ || (ದೇವಲವಚನ)

"ರಾತ್ರಿಯ ಪ್ರಮಾಣವನ್ನು ನಾಲ್ಕು ಭಾಗವಾಗಿ ವಿಂಗಡಿಸಬೇಕು. ಒಂದೊಂದು ವಿಭಾಗವೂ ಪ್ರಹರ ಎಂದು ಹೇಳಲ್ಪಡುತ್ತದೆ. ಈ ನಾಲ್ಕು ಪ್ರಹರಗಳಲ್ಲಿ ಎರಡನೆಯ ಮತ್ತು ಮೂರನೆಯ ಪ್ರಹರಗಳು ಮಹಾನಿಶಾ ಎಂದು ಹೇಳಲ್ಪಡುತ್ತವೆ. ಈ ಮಹಾನಿಶಾಕಾಲದಲ್ಲಿ ನಿತ್ಯಸ್ನಾನವನ್ನು ಮಾಡಕೂಡದು. ನೈಮಿತ್ತಿಕಸ್ನಾನ ಮತ್ತು ಕಾಮ್ಯಸ್ನಾನ ಈ ಎರಡು ಸ್ನಾನಗಳನ್ನು ಮಾತ್ರ ಮಾಡಬಹುದು. ಗ್ರಹಣ, ವಿವಾಹ, ಸಂಕ್ರಮಣ, ತೀರ್ಥಯಾತ್ರೆ, ಮರಣ, ಪ್ರಸವ ಮುಂತಾದ ನಿಮಿತ್ತವು ಏರ್ಪಟ್ಟಿರುವಾಗ ಮಾಡುವ ಸ್ನಾನವು ನೈಮಿತ್ತಿಕಸ್ನಾನವೆನಿಸುತ್ತದೆ. ಕೆಲವು ಫಲಗಳನ್ನು ಅಪೇಕ್ಷಿಸುವವರು ಮಹಾನಿಶಾಕಾಲದಲ್ಲಿಯೂ ಕೆಲವು ಕರ್ಮಗಳನ್ನು ಮಾಡಬೇಕೆಂದು ಶಾಸ್ತ್ರವು ತಿಳಿಸುತ್ತದೆ. ಈ ಕರ್ಮಗಳು ಕಾಮ್ಯಕರ್ಮಗಳೆನಿಸುತ್ತವೆ. ಈ ಕಾಮ್ಯಕರ್ಮಗಳನ್ನೂ, ಮೇಲ್ಕಂಡ ನೈಮಿತ್ತಿಕಕರ್ಮಗಳನ್ನೂ ಮಾಡುವವರು ಮಹಾನಿಶಾ ಕಾಲದಲ್ಲಿಯೂ ಸ್ನಾನವನ್ನು ಮಾಡಬಹುದು."

### ರಾತ್ರಿಯಲ್ಲಿ ನಿತ್ಯಸ್ನಾನಕಾಲ

ಮಹಾನಿಶಾ ತು ವಿಜ್ಞೇಯಾ ಮಧ್ಯಸ್ಥಂ ಪ್ರಹರದ್ವಯಮ್ |
ಪ್ರದೋಷಪಶ್ಚಿಮೌ ಯಾಮೌ ದಿನವತ್ಸ್ನಾನಮಾಚರೇತ್ || (ಪರಾಶರವಚನ)

"ರಾತ್ರಿಯಲ್ಲಿರುವ ನಾಲ್ಕು ಪ್ರಹರಗಳಲ್ಲಿ ಮಧ್ಯದಲ್ಲಿರುವ ಎರಡನೆಯ ಮತ್ತು ಮೂರನೆಯ ಪ್ರಹರಗಳಲ್ಲಿ ನಿತ್ಯಸ್ನಾನವನ್ನು ಮಾಡಬಾರದು. ಮೊದಲನೆಯ ಮತ್ತು ನಾಲ್ಕನೆಯ ಪ್ರಹರಗಳಲ್ಲಿ ಮಾಡಬಹುದು."

ಪೂತಂ ದಿವಾಕರಕರೈರ್ದಿವಾಸ್ನಾನಂ ಪ್ರಶಸ್ಯತೇ |
ಅಪ್ರಶಸ್ತಂ ನಿಶಿ ಸ್ನಾನಂ ನಿತ್ಯನೈಮಿತ್ತಿಕೇ ವಿನಾ ||

ಸೂರ್ಯನ ಕಿರಣಗಳಿಂದ ಪರಿಶುದ್ಧವಾದ ಹಗಲಿನಲ್ಲಿ ಸ್ನಾನವನ್ನು ಮಾಡುವುದು ಪ್ರಶಸ್ತವಾಗಿದೆ. ರಾತ್ರಿಯಲ್ಲಿ ಕಾಮ್ಯಸ್ನಾನ ಮತ್ತು ನೈಮಿತ್ತಿಕಸ್ನಾನಗಳನ್ನು ಬಿಟ್ಟು ಉಳಿದಿರುವ ನಿತ್ಯಸ್ನಾನವನ್ನು ಮಾಡುವುದು ಅಪ್ರಶಸ್ತವಾಗಿದೆ.

"ಮೇಲ್ಕಂಡ ಪರಾಶರ ವಚನದಲ್ಲಿ ರಾತ್ರಿಯ ಮೊದಲನೆಯ ಮತ್ತು ಕೊನೆಯ ಪ್ರಹರಗಳಲ್ಲಿ ನಿತ್ಯಸ್ನಾನವನ್ನು ಮಾಡಬೇಕೆಂದು ಹೇಳಿದೆ. ಈ ವಾಕ್ಯದಲ್ಲಿ ರಾತ್ರಿಯಲ್ಲಿ ನಿತ್ಯಸ್ನಾನವನ್ನು ಮಾಡಲೇಕೂಡದೆಂದೂ, ಕಾಮ್ಯ ಮತ್ತು ನೈಮಿತ್ತಿಕಸ್ನಾನಗಳನ್ನು ಮಾತ್ರ ಮಾಡಬೇಕೆಂದೂ ಹೇಳಿರುತ್ತದೆ. ಆದ್ದರಿಂದ ಈ ಎರಡು ವಾಕ್ಯಗಳಿಗೆ ವಿರೋಧವು ಬಂದಿರುತ್ತದೆ. ಈ ವಿರೋಧವನ್ನು ಪರಿಹರಿಸುವುದಕ್ಕಾಗಿ ಸ್ಮೃತಿಮುಕ್ತಾವಲೀಕಾರರು 'ಏತದಪ್ಯಾಪದ್ವಿಷಯಂ' ಎಂದು ಹೇಳಿರುವರು. ಇದರಿಂದ ಯಾವುದಾದರೂ ಆಪತ್ತಿನಿಂದ ಹಗಲಿನಲ್ಲಿ ನಿತ್ಯಸ್ನಾನವನ್ನು ಮಾಡಲು ಸಾಧ್ಯವಿಲ್ಲದೆ ಹೋದರೆ ರಾತ್ರಿಯ ಮೊದಲನೆಯ ಪ್ರಹರದಲ್ಲಿ ನಿತ್ಯಸ್ನಾನವನ್ನು ಮಾಡಬಹುದೆಂದೂ, ಅದೇ ರೀತಿಯಿಂದ ಯಾವುದೋ ಆಪತ್ತಿನಿಂದ ಮಾಧ್ಯಾಹ್ನಿಕಸ್ನಾನ ಮುಂತಾದ ನಿತ್ಯಸ್ನಾನಗಳನ್ನು ಹಗಲಿನಲ್ಲಿ ಮಾಡಲು ಸಾಧ್ಯವಾಗದಿರುವ ಸಂದರ್ಭದಲ್ಲಿ ಆ ನಿತ್ಯಸ್ನಾನಗಳನ್ನು ರಾತ್ರಿಯ ಕೊನೆಯ ಪ್ರಹರದಲ್ಲಿ ಮಾಡಬೇಕೆಂದೂ ಪರಾಶರವಚನವು ತಿಳಿಸುತ್ತದೆ. ಆಪತ್ತು ಇಲ್ಲದಿರುವಾಗ ರಾತ್ರಿಯಲ್ಲಿ ಸರ್ವಥಾ ನಿತ್ಯಸ್ನಾನವನ್ನು ಮಾಡಕೂಡದೆಂದೂ, ಹಗಲಿನಲ್ಲಿಯೇ ಮಾಡಬೇಕೆಂದೂ ಇತರ ಸ್ಮೃತಿವಾಕ್ಯಗಳು ತಿಳಿಸುತ್ತವೆ. ಆದ್ದರಿಂದ ಎರಡು ಸ್ಮೃತಿಗಳಿಗೂ ವಿರೋಧವಿಲ್ಲ ಎಂದು ತಿಳಿಯಬೇಕು.

### ರಾತ್ರಿಸ್ನಾನವನ್ನು ಮಾಡುವಾಗ ಮಾಡಬೇಕಾದ ವಿಶೇಷ ಕರ್ತವ್ಯ

ರಾತ್ರಿಸ್ನಾನೇ ವಿಶೇಷಂ ತು ಪ್ರಾಹ ಸಮ್ಯಕ್ಪರಾಶರಃ |
ದಿವಾಹೃತಂ ತು ಯತ್ತೋಯಂ ಕೃತ್ವಾ ಸ್ವರ್ಣಯುತಂ ಚ ತತ್ ||
ರಾತ್ರಿಸ್ನಾನೇ ತು ಸಂಪ್ರಾಪ್ತೇ ಕುರ್ಯಾದನಲಸನ್ನಿಧೌ | (ಪರಾಶರಮತ)

"ರಾತ್ರಿಸ್ನಾನವನ್ನು ಮಾಡಬೇಕಾದ ಸಂದರ್ಭ ಬಂದಾಗ ಹಗಲಿನಲ್ಲಿಯೇ ನೀರನ್ನು ತೆಗೆದಿಡಬೇಕು. ಅದರಲ್ಲಿ ಬಂಗಾರವನ್ನು ಹಾಕಬೇಕು. ಆ ನೀರಿನಿಂದ ಅಗ್ನಿಯ ಸನ್ನಿಧಾನದಲ್ಲಿ ಸ್ನಾನಮಾಡಬೇಕು." ಇದು ಪರಾಶರರು ಹೇಳಿರುವ ವಿಶೇಷವಾಗಿದೆ.

ದಿವಾಹೃತಂ ತು ಯತ್ತೋಯಂ ಗೃಹೇ ಯದಿ ನ ವಿದ್ಯತೇ |
ಪ್ರಜ್ವಾಲ್ಯಾಗ್ನಿಂ ತದಾ ಸ್ನಾಯಾನ್ನದೀಪುಷ್ಕರಣೀಷು ಚ || (ಮರೀಚಿವಚನ)

"ಹಗಲಿನಲ್ಲಿ ತುಂಬಿಟ್ಟ ನೀರಿನಿಂದಲೇ ರಾತ್ರಿಯಲ್ಲಿ ಸ್ನಾನವನ್ನು ಮಾಡಬೇಕೆಂದು ಹಿಂದಿನ ಪರಾಶರರ ವಾಕ್ಯದಲ್ಲಿ ಹೇಳಿದೆ. ಹಾಗೆ ತುಂಬಿಟ್ಟ ನೀರು ಇಲ್ಲದಿದ್ದರೆ ನದೀ ಅಥವಾ ಸರೋವರ ಮುಂತಾದವುಗಳ ನೀರಿನಲ್ಲಿ ಮುಳುಗಿ ಸ್ನಾನ ಮಾಡಬೇಕು. ಆಗ ನದೀ ಮುಂತಾದವುಗಳ ತೀರದಲ್ಲಿ ದೊಡ್ಡ ಬೆಂಕಿಯನ್ನು ಮಾಡಿ ಆ ಬೆಂಕಿಯ ಬೆಳಕಿನಲ್ಲಿ ಸ್ನಾನ ಮಾಡಬೇಕು."

### ರಾತ್ರಿಯಲ್ಲಿ ಸೇದಿದ ನೀರಿನಿಂದ ಸ್ನಾನ ಮಾಡಬಾರದು

ಪ್ರವೇಶಾದ್ವರುಣಸ್ಯಾಪ್ಸು ನ ರಾತ್ರೌ ಜಲಮುದ್ಧರೇತ್ || (ಕಾತ್ಯಾಯನವಚನ)

"ರಾತ್ರಿಕಾಲದಲ್ಲಿ ವರುಣದೇವನು ನೀರಿನಲ್ಲಿ ಪ್ರವೇಶಿಸಿರುವನು. ಆದ್ದರಿಂದ ರಾತ್ರಿಯಲ್ಲಿ ನೀರನ್ನು ಸೇದಿದರೆ ವರುಣದೇವನಿಗೆ ತೊಂದರೆಯನ್ನು ಕೊಟ್ಟಂತಾಗುವುದು. ಅದಕ್ಕಾಗಿ ರಾತ್ರಿಯಲ್ಲಿ ನೀರನ್ನು ಸೇದಬಾರದು."

### ರಾತ್ರಿಯಲ್ಲಿ ನೀರನ್ನು ಸೇದಬೇಕಾದರೆ ಮಾಡಬೇಕಾದುದು

ವಿಶೇಷಮಂತ್ರಂ ಸ ಪ್ರಾಹ ಮುನಿಃ ಸಮ್ಯಕ್ಪರಾಶರಃ |
ಯದಿ ಗೇಹೇ ನ ತೋಯಂ ಸ್ಯಾತ್ಸ್ನಾನಶುದ್ಧಿಃ ಕಥಂ ಭವೇತ್ ||
ಧಾಮ್ನೋ ಧಾಮೇತಿ ಮಂತ್ರೇಣ ಗೃಹ್ಣೀಯಾದಗ್ನಿಸನ್ನಿಧೌ |
ರಾತ್ರೌ ಗೃಹಾಂಶುಭಿಃ ಪೂತಂ ದಿವಾ ಪೂತಂ ತು ಭಾನುನಾ ||
ಅನೇನೈವ ವಿಶುದ್ಧ್ಯೇತ ಯಥಾ ರಾತ್ರೌ ದಿವಾ ತಥಾ |

"ರಾತ್ರಿಕಾಲದಲ್ಲಿ ಮನೆಯಲ್ಲಿ ತುಂಬಿಡಲ್ಪಟ್ಟ ನೀರು ಇಲ್ಲ. ಹೊರಗೆ ನದೀ ಕೆರೆ ಮುಂತಾದವುಗಳೂ ಇಲ್ಲ. ಆಗ ಸ್ನಾನವನ್ನು ಹೇಗೆ ಮಾಡಬೇಕು? ಎಂಬ ಪ್ರಶ್ನೆಯು ಬರುತ್ತದೆ. 'ದಾಮ್ನೋ ಧಾಮಾ' ಎಂಬ ಮಂತ್ರವನ್ನು ಜಪಿಸುತ್ತಾ ಅಗ್ನಿಯ ಸನ್ನಿಧಿಯಲ್ಲಿ ನೀರನ್ನು ಸೇರಿ ಸ್ನಾನವನ್ನು ಮಾಡಬೇಕು." ಇದು ಮೇಲ್ಕಂಡ ಪ್ರಶ್ನೆಗೆ ಶ್ರೀಪರಾಶರರು ಹೇಳಿರುವ ಸಮಾಧಾನ.

"ಹಗಲಿನಲ್ಲಿ ಸೂರ್ಯನ ಬೆಳಕಿನಿಂದ ನೀರು ಶುದ್ಧವಾಗಿರುತ್ತದೆ. ರಾತ್ರಿಯಲ್ಲಿ ಮನೆಯಲ್ಲಿರುವ ದೀಪದ ಬೆಳಕಿನಿಂದ ಸ್ವಭಾವದಿಂದ ಶುದ್ಧವಾಗಿರುತ್ತದೆ. ಆದ್ದರಿಂದ ನೀರಿನ ಶುದ್ಧಿಗಾಗಿ ಮೇಲ್ಕಂಡ 'ಧಾಮ್ನೋ ಧಾಮಾ' ಎಂಬ ಮಂತ್ರವನ್ನು ಜಪಿಸುವ ಅವಶ್ಯವಿಲ್ಲ." ಇದು ಅದೇ ಪರಾಶರರು ಹೇಳಿರುವ ಇನ್ನೊಂದು ಸಮಾಧಾನ.

### ನೈಮಿತ್ತಕಸ್ನಾನವನ್ನು ತಣ್ಣೀರಿನಿಂದಲೇ ಮಾಡಬೇಕು

ವಿಶೇಷಂ ಪ್ರಾಹ ಗಾರ್ಗ್ಯಸ್ತು ಸ್ನಾನೇ ನೈಮಿತ್ತಿಕೇ ಮುನಿಃ |
ಕುರ್ಯಾನ್ನೈಮಿತ್ತಿಕಂ ಸ್ನಾನಂ ಶೀತಾದ್ಭಿಃ ಕಾರ್ಯಮೇವ ಚ ||
ನಿತ್ಯಂ ಯಾದೃಚ್ಛಿಕಂ ಚೈವ ಯಥಾರುಚಿ ಸಮಾಚರೇತ್ |
ಮಲಪ್ರಪೋಹನಂ ಸ್ನಾನಂ ಸ್ಮೃತಂ ಯಾದೃಚ್ಛಿಕಂ ತು ತತ್ ||

"ನೈಮಿತ್ತಿಕಸ್ನಾನವನ್ನು ತಣ್ಣೀರಿನಿಂದಲೇ ಮಾಡಬೇಕು. ನಿತ್ಯಸ್ನಾನ ಮತ್ತು ದೇಹದಲ್ಲಿರುವ ಕೊಳೆಯನ್ನು ಪರಿಹರಿಸುವುದಕ್ಕಾಗಿ ಮಾಡುವ ಯಾದೃಚ್ಛಿಕಸ್ನಾನ ಈ ಎರಡು ಸ್ನಾನಗಳನ್ನು ತನ್ನ ಇಷ್ಟದಂತೆ ಬಿಸಿನೀರಿನಿಂದ ಅಥವಾ ತಣ್ಣೀರಿನಿಂದ ಮಾಡಬೇಕು. ಇದು ಗಾರ್ಗ್ಯ ಮುನಿಯು ಹೇಳಿರುವುದು."

### ರೋಗಿಗಳು ಅಶುದ್ಧರಾದರೆ ವಿಶೇಷ

ವಿಶೇಷಮಾತುರಸ್ನಾನೇ ಪ್ರಾಹ ಸಮ್ಯಕ್ಪರಾಶರಃ |
ಆತುರಸ್ನಾನ ಉತ್ಪನ್ನೇ ದಶಕೃತ್ವೋ ಹ್ಯನಾತುರಃ ||
ಸ್ನಾತ್ವಾ ಸ್ನಾತ್ವಾ ಸ್ಪೃಶೇದೇನಂ ತತಃ ಶುದ್ಧ್ಯೇತ್ಸ ಆತುರಃ |

"ರೋಗಿಯಾದವನಿಗೆ ಅಶುದ್ಧಿಯು ಏರ್ಪಟ್ಟರೆ ಅವನು ಸ್ವತಃ ಸ್ನಾನವನ್ನು ಮಾಡಬೇಕಾಗಿಲ್ಲ. ಅವನಿಗಾಗಿ ಅವನಲ್ಲಿ ಪ್ರೀತಿಯುಳ್ಳ ಬಂಧು ಮುಂತಾದವರು ಸ್ನಾನವನ್ನು ಹತ್ತು ಸಲ ಮಾಡಬೇಕು. ಒಮ್ಮೊಮ್ಮೆ ಸ್ನಾನ ಮಾಡಿದ ಕೂಡಲೇ ಅವನನ್ನು ಮುಟ್ಟಬೇಕು. ಹೀಗೆ ಹತ್ತು ಸಲ ಸ್ನಾನವನ್ನು ಮಾಡಿ ಹತ್ತು ಸಲ ಮುಟ್ಟಿದರೆ ಅವನಿಗೆ ಶುದ್ಧಿಯಾಗುವುದು. ಇದು ಪರಾಶರರು ಹೇಳಿರುವುದು."

### ರಜಸ್ವಲೆಯಾದ ಸ್ತ್ರೀಯರ ಶುದ್ಧಿ

ಸ್ನಾನಂ ರಜಸ್ವಲಾಯಾಸ್ತು ಚತುರ್ಥೇ ದಿವಸೇ ಸ್ಮೃತಮ್ |
ಸ್ನಾನಂ ರಜಸ್ವಲಾಯಾಸ್ತು ಚತುರ್ಥೇಽಹನಿ ಶುದ್ಧ್ಯತಿ ||
ಕುರ್ಯಾದ್ರಜಸಿ ನಿರ್ವೃತ್ತೇ ಶೌಚಾರ್ಥಂ ತು ತತಃ ಪುನಃ | (ಅಂಗಿರಸರ ವಚನ)

"ಮುಟ್ಟಾದವಳು ನಾಲ್ಕನೇ ದಿನದಲ್ಲಿ ಸ್ನಾನದಿಂದ ಶುದ್ಧಳಾಗುವಳು. ಆದರೆ ರಜಸ್ಸು ಅಂದು ನಿಂತರೆ ಅಂದೇ ಪರಿಶುದ್ಧಳಾಗುವಳು. ಇಲ್ಲದಿದ್ದರೆ ರಜಸ್ಸು ಪೂರ್ಣವಾಗಿ ನಿಂತ ಮೇಲೆ ಶುದ್ಧಳಾಗುವಳು. ಅದಕ್ಕಾಗಿ ರಜಸ್ಸು ಪೂರ್ಣವಾಗಿ ನಿಂತ ಮೇಲೆ ಶುದ್ಧಿಗಾಗಿ ಪುನಃ ಸ್ನಾನವನ್ನು ಮಾಡಬೇಕು. ಇದು ಅಂಗಿರಸ ಎಂಬ ಮುನಿಗಳು ಹೇಳಿದುದು.

ರಜಸ್ಯುಪರತೇ ಸಾಧ್ವೀ ಸ್ನಾನೇನ ಸ್ತ್ರೀ ರಜಸ್ವಲಾ | (ಮನುವಿನ ವಚನ)

"ರಜಸ್ಸು ಪೂರ್ತಿಯಾಗಿ ನಿಂತ ಮೇಲೆ ಸ್ನಾನವನ್ನು ಮಾಡಬೇಕು. ಇದರಿಂದ ರಜಸ್ವಲೆಯು ಪೂರ್ಣಶುದ್ಧಿಯನ್ನು ಪಡೆದು ದೇವಕಾರ್ಯಾದಿಗಳಿಗೆ ಅರ್ಹಳಾಗುವಳು." ಇದು ಮನುವು ಹೇಳಿರುವುದು.

ಶುದ್ಧಾ ಭರ್ತುಶ್ಚತುರ್ಥೇಽಹ್ನಿ ಸ್ನಾತ್ವಾ ನಾರೀ ರಜಸ್ವಲಾ |
ದೈವೇ ಕರ್ಮಣಿ ಪಿತ್ರ್ಯೇ ಚ ಪಂಚಮೇಽಹನಿ ಶುದ್ಧ್ಯತಿ || (ಅಂಗಿರಸರ ವಚನ)

"ರಜಸ್ವಲೆಯಾದ ಸ್ತ್ರೀಯು ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿದರೆ ಪತಿಸೇವೆಗೆ ಶುದ್ಧಳಾಗುವಳು. ಐದನೆಯ ದಿನದಲ್ಲಿ ಸ್ನಾನ ಮಾಡಿದ ಮೇಲೆ ದೇವತಾಕಾರ್ಯ ಮತ್ತು ಪಿತೃಕಾರ್ಯಗಳಿಗೆ ಯೋಗ್ಯವಾದ ಶುದ್ಧಿಯನ್ನು ಪಡೆಯುವಳು." ಇದು ಅಂಗಿರಸರ ವಚನ.

ಮೇಲ್ಕಂಡ ಅಂಗಿರಸರ ವಚನ ಮತ್ತು ಮನುವಿನ ವಚನಗಳಲ್ಲಿ ನಾಲ್ಕನೆಯ ದಿನದಲ್ಲಿ ರಜಸ್ಸು ನಿಲ್ಲದಿದ್ದರೆ ಶುದ್ಧಿಯು ಪೂರ್ಣವಾಗಿ ಏರ್ಪಡುವುದಿಲ್ಲವೆಂದೂ, ರಜಸ್ಸು ಪೂರ್ಣವಾಗಿ ನಿಂತ ಮೇಲೆಯೇ ಪೂರ್ಣವಾದ ಶುದ್ಧಿಯು ಏರ್ಪಡುವುದಾಗಿಯೂ ಹೇಳಿರುತ್ತದೆ. ಈಗ ಹೇಳಿರುವ ಅಂಗಿರಸರ ವಚನದಲ್ಲಿ ನಾಲ್ಕನೆಯ ದಿನದಲ್ಲಿಯೇ ಪೂರ್ಣ ಶುದ್ಧಿಯು ಏರ್ಪಡುವುದಾಗಿಯೂ, ಐದನೆಯ ದಿನದಲ್ಲಿ ದೇವಕಾರ್ಯ ಮುಂತಾದ ಕಾರ್ಯಗಳನ್ನು ಮಾಡುವುದಕ್ಕೆ ಬೇಕಾದ ಶುದ್ಧಿಯು ಏರ್ಪಡುವುದಾಗಿಯೂ ಹೇಳಿದೆ. ಆದ್ದರಿಂದ ಈ ವಾಕ್ಯಗಳಿಗೆ ವಿರೋಧವು ಬಂತು. ಈ ವಿರೋಧವನ್ನು ಪರಿಹರಿಸುವುದಕ್ಕಾಗಿ ಅದೇ ಅಂಗಿರಸರು ಹೇಳಿರುವ ಇನ್ನೊಂದು ವಾಕ್ಯವನ್ನು ಕೆಳಗೆ ಕೊಟ್ಟಿರುವೆವು.

ಸಾಧ್ವಾಚಾರಾ ನ ತಾವತ್ಸ್ಯಾತ್ಸ್ನಾತಾಽಪಿ ಸ್ತ್ರೀ ರಜಸ್ವಲಾ |
ಯಾವತ್ಪ್ರವರ್ತಮಾನಂ ಹಿ ರಜೋ ನ ಹಿ ನಿವರ್ತತೇ ||
ಸ್ನಾನಾದನಂತರಂ ತಾವತ್ಸ್ಪರ್ಶಯೋಗ್ಯೇತಿ ಸಾ ಸ್ಮೃತಾ | (ಅಂಗಿರೋವಚನ)
ರಜಸ್ವಲಾ ಚತುರ್ಥೇಽಹ್ನಿ ಸ್ನಾನಾಚ್ಛುದ್ಧಿಮವಾಪ್ನುಯಾತ್ || (ಕಾತ್ಯಾಯನ ವಚನ)
ಸಾಧ್ವಾಚಾರ ದೇವಾದಿಕರ್ಮಯೋಗ್ಯೇತ್ಯರ್ಥಃ | (ಸ್ಮೃತಿಮುಕ್ತಾವಲೀಕಾರರ ವಚನ)

"ರಜಸ್ವಲೆಯಾದ ಸ್ತ್ರೀಯು ರಜಸ್ವಲೆಯಾದ ದಿನದಿಂದ ಆರಂಭಿಸಿ ಮೂರು ದಿನಗಳು ಮುಗಿದು ನಾಲ್ಕನೆಯ ದಿನವು ಆರಂಭಿಸುವವರೆಗೆ ಮುಟ್ಟುವುದಕ್ಕೆ ಅರ್ಹಳಲ್ಲ. ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿದ ಮೇಲೆ ಮುಟ್ಟುವುದಕ್ಕೆ ಅರ್ಹಳಾಗುವಳು. ಐದನೆಯ ದಿನದಲ್ಲಿ ದೇವಕಾರ್ಯ ಮತ್ತು ಪಿತೃಕಾರ್ಯಗಳಿಗೆ ಅರ್ಹಳಾಗುವಳು. ಆದರೆ ಐದನೆಯ ದಿನದಲ್ಲಿ ಸ್ನಾನ ಮಾಡುವುದಕ್ಕೆ ಪೂರ್ವದಲ್ಲಿ ರಜಸ್ಸು ಸಂಪೂರ್ಣವಾಗಿ ನಿಂತು ಹೋದರೆ ಮಾತ್ರ ಅಂದು ದೇವಕಾರ್ಯ ಮತ್ತು ಪಿತೃಕಾರ್ಯಗಳಿಗೆ ಅರ್ಹಳಾಗುವಳು. ಇಲ್ಲದಿದ್ದರೆ ಆ ರಜಸ್ಸು ಪೂರ್ಣವಾಗಿ ನಿಲ್ಲುವವರೆಗೂ ಅರ್ಹಳಾಗುವುದಿಲ್ಲ. ಈ ಅರ್ಥವು 'ಸಾಧ್ವಾಚಾರಾ' ಎಂಬ ಪದದಿಂದ ಹೇಳಲ್ಪಟ್ಟಿದೆ ಎಂದು ಸ್ಮೃತಿಮುಕ್ತಾವಲೀಕಾರರು ಅಭಿಪ್ರಾಯಪಟ್ಟಿರುತ್ತಾರೆ.

## ರೋಗದಿಂದ ರಜಸ್ಸು ಏರ್ಪಟ್ಟಿದ್ದರೆ ಮೈಲಿಗೆಯಿಲ್ಲ

ರೋಗೇಣ ಹಿ ರಜೋತ್ಪತ್ತೌ ನ ತೇನಾಶುಚಿರಿಷ್ಯತೇ | (ಸ್ಮೃತಿಮುಕ್ತಾವಲೀಕಾರರ ವಚನ)
ರೋಗೇಣ ಯದ್ರಜಃ ಸ್ತ್ರೀಣಾಮತ್ಯರ್ಥಂ ತು ಪ್ರವರ್ತತೇ ||
ಅಶುದ್ಧಾ ನೈವ ಸಾ ತೇನ ಯಸ್ಮಾದ್ವೈಕಾರಿಕಂ ಹಿ ತತ್ | (ಅಂಗಿರೋ ವಚನ)

"ರೋಗದಿಂದ ಕೆಲವು ಸ್ತ್ರೀಯರಿಗೆ ರಜಸ್ಸು ತುಂಬಾ ಅಧಿಕವಾಗಿ ಬರುತ್ತಿರುತ್ತದೆ. ಈ ರಜಸ್ಸು ದೇಹದಲ್ಲಿರುವ ಧಾತುಗಳ ವಿಕಾರದಿಂದ ಏರ್ಪಡುವುದರಿಂದ ವೈಕಾರಿಕವೆನಿಸುತ್ತದೆ. ಸ್ವಾಭಾವಿಕವಲ್ಲ. ಸ್ವಾಭಾವಿಕವಾದ ರಜಸ್ಸೇ ಮೈಲಿಗೆಗೆ ಕಾರಣವಾಗುತ್ತದೆ. ವೈಕಾರಿಕವಾದ ಮೇಲ್ಕಂಡ ರಜಸ್ಸು ಮೈಲಿಗೆಗೆ ಕಾರಣವಲ್ಲ. ಆದ್ದರಿಂದ ಅಂತಹ ವೈಕಾರಿಕ ರಜಸ್ಸಿನಿಂದ ಯುಕ್ತಳಾದ ಸ್ತ್ರೀಯು ಸ್ನಾನವನ್ನು ಮಾಡಿದರೆ ದೇವಕಾರ್ಯ ಮತ್ತು ಪಿತೃಕಾರ್ಯಗಳಿಗೆ ಅರ್ಹಳಾಗುವಳು.

**ಅಕಾಲದಲ್ಲಿ ರಜಸ್ವಲೆಯಾದರೆ ಅಶುಚಿಯಾಗುವುದಿಲ್ಲ**

ಅಕಾಲೇ ಯದ್ಧ್ವವೇತ್ಸ್ತ್ರೀಣಾಂ ರಕ್ತಮಾಹುರ್ಮನೀಷಿಣಃ |
ಕಾಲೇ ತು ಯದ್ರಜಃ ಪ್ರೋಕ್ತಂ ತಸ್ಮಾತ್ತತ್ರೈವ ಸಾಽಶುಚಿಃ ||

ಅಕಾಲದಲ್ಲಿ ಅಂದರೆ ರಜಸ್ವಲೆಯಾದ ದಿನದಿಂದ ಹದಿನಾರು ದಿನಗಳೊಳಗೆ ಪುನಃ ರಜಸ್ವಲೆಯಾದರೆ ಅವಳಲ್ಲಿ ಬರುವ ರಕ್ತವು ರಜಸ್ಸು ಎಂದು ಹೇಳಲ್ಪಡುವುದಿಲ್ಲ. ಆದ್ದರಿಂದ ಅವಳು ರಜಸ್ವಲೆ ಅಂದರೆ 'ರಜಸ್ಸಿನಿಂದ ಯುಕ್ತಳಾದವಳು' ಎಂದು ಹೇಳಲ್ಪಡುವುದಿಲ್ಲ. ಆಗ ಅವಳಲ್ಲಿ ಬರುವ ರಕ್ತವು ಬರೇ ರಕ್ತವೆನಿಸುತ್ತದೆ. ಗಾಯದಿಂದ ರಕ್ತವು ಬಂದಾಗ ಹೇಗೆ ಮೈಲಿಗೆ ಇಲ್ಲವೋ ಅದೇ ರೀತಿಯಾಗಿ ಆ ಸ್ತ್ರೀಯು ಮೈಲಿಗೆಯಾಗುವುದಿಲ್ಲ.

**ರಜಸ್ವಲೆಯಾದ ಸ್ತ್ರೀಯರಿಗೆ ಅಶುದ್ಧವ್ಯಕ್ತಿಗಳ ಸ್ಪರ್ಶವು ಏರ್ಪಟ್ಟಾಗ ಮಾಡುವ ಸ್ನಾನ**

ರಜಸ್ವಲಾ ಯದಾ ಸ್ಪೃಷ್ಟಾ ಚಂಡಾಲಪತಿತಾದಿಭಿಃ |
ತದಾ ಸ್ನಾನಪ್ರಕಾರಂ ತು ಸಮ್ಯಗಾಹ ಪರಾಶರಃ || (ಸ್ಮೃತಿಮುಕ್ತಾವಲೀಕಾರರ ವಚನ)
ಸ್ನಾನೇ ನೈಮಿತ್ತಿಕೇ ಪ್ರಾಪ್ತೇ ನಾರೀ ಯದಿ ರಜಸ್ವಲಾ |
ಪಾತ್ರಾಂತರಸ್ಥತೋಯೇನ ಸ್ನಾನಂ ಕೃತ್ವಾ ವ್ರತಂ ಚರೇತ್ ||
ಸಿಕ್ತಗಾತ್ರಾ ಭವೇದದ್ಭಿಃ ಸಾಂಗೋಪಾಂಗಾ ಕಥಂಚನ |
ನ ವಸ್ತ್ರಪೀಡನಂ ಕುರ್ಯಾನ್ನಾನ್ಯದ್ವಸ್ತ್ರಂ ಚ ಧಾರಯೇತ್ || (ಪರಾಶರರ ವಚನ)

"ರಜಸ್ವಲೆಯಾದ ಸ್ತ್ರೀಯು ಅಶುಚಿವ್ಯಕ್ತಿಗಳನ್ನು ಮುಟ್ಟಿದರೆ ರಜಸ್ವಲೆಯಾಗಿರುವಾಗ ತನಗೆ ಏರ್ಪಟ್ಟಿರುವ ಮೈಲಿಗೆಗಿಂತಲೂ ಅಧಿಕವಾದ ಮೈಲಿಗೆಯನ್ನು ಪಡೆಯುವಳು. ಆ ಅಧಿಕವಾದ ಮೈಲಿಗೆಯನ್ನು ಕಳೆದುಕೊಂಡ ಮೇಲೆಯೇ ಅವಳು ಭೋಜನ ಜಲಪಾನ ಮುಂತಾದವುಗಳಿಗೆ ಅರ್ಹಳಾಗುವಳು. ಈ ಮೈಲಿಗೆಯನ್ನು ಕಳೆದುಕೊಳ್ಳುವುದಕ್ಕಾಗಿ ನದೀ ಸರೋವರ ಮುಂತಾದವುಗಳಲ್ಲಿ ಮುಳುಗಿ ಸ್ನಾನ ಮಾಡಬಾರದು. ತಾನೇ ಬಾವಿ ಮುಂತಾದವುಗಳಿಂದ ನೀರನ್ನು ಸೇದಿಯೂ ಸ್ನಾನ ಮಾಡಬಾರದು. ತಂಬಿಗೆ ಮುಂತಾದ ಪಾತ್ರದಲ್ಲಿ ಶುದ್ಧವಾದ ಜಲವನ್ನು ಶುದ್ಧರಾದ ಸ್ತ್ರೀಯರು ಅಥವಾ ಪುರುಷರು ಹಾಕಬೇಕು. ಆ ನೀರಿನಿಂದ ರಜಸ್ವಲೆಯಾದವಳು ಸ್ನಾನವನ್ನು ಮಾಡಬೇಕು. ತನ್ನ ಸೀರೆಯೂ ಸರ್ವಾವಯವಗಳೂ ಒದ್ದೆಯಾಗುವಂತೆ ಅವಳು ಸ್ನಾನವನ್ನು ಮಾಡಬೇಕು. ಉಟ್ಟುಕೊಂಡ ಸೀರೆಯನ್ನು ಸ್ನಾನ ಮಾಡಿದ ಮೇಲೆ ಹಿಂಡಬಾರದು. ಆ ಸೀರೆಯನ್ನು ಬಿಚ್ಚಿ ಬೇರೆ ಸೀರೆಯನ್ನು ಉಟ್ಟುಕೊಳ್ಳಲೂ ಬಾರದು. ಆ ಒದ್ದೆ ಬಟ್ಟೆಯು ಮೈಯಲ್ಲಿಯೇ ಒಣಗಬೇಕು. ಹೀಗೆ ಮಾಡಿದರೆ ಅವಳು ಭೋಜನ ಮತ್ತು ಜಲಪಾನಕ್ಕೆ ಅರ್ಹಳಾಗುವಳು." ಇದು ಅಂಗಿರಸರು ಹೇಳಿರುವುದು.

**ರೋಗಿಯಾದ ರಜಸ್ವಲೆಯ ಶುದ್ಧಿಗಾಗಿ ಮಾಡಬೇಕಾದ ಕರ್ತವ್ಯ**

ಜ್ವರಾಭಿಭೂತನಾರ್ಯಾಸ್ತು ಸ್ನಾನಮಾಹಾನ್ಯಥೋಶನಾಃ | (ಸ್ಮೃತಿಮುಕ್ತಾವಲೀಕಾರರ ವಚನ)
ಜ್ವರಾಭಿಭೂತಾ ಯಾ ನಾರೀ ರಜಸಾ ಚ ಪರಿಪ್ಲುತಾ |
ಕಥಂ ತಸ್ಯಾ ಭವೇಚ್ಛೌಚಂ ಶುದ್ಧ್ಯತೇ ಕೇನ ಕರ್ಮಣಾ ||

"ಮುಟ್ಟಾದವಳು ನಾಲ್ಕನೇ ದಿನದಲ್ಲಿ ಸ್ನಾನದಿಂದ ಶುದ್ಧಳಾಗುವಳು. ಆದರೆ ರಜಸ್ಸು ಅಂದು ನಿಂತರೆ ಅಂದೇ ಪರಿಶುದ್ಧಳಾಗುವಳು. ಇಲ್ಲದಿದ್ದರೆ ರಜಸ್ಸು ಪೂರ್ಣವಾಗಿ ನಿಂತ ಮೇಲೆ ಶುದ್ಧಳಾಗುವಳು. ಅದಕ್ಕಾಗಿ ರಜಸ್ಸು ಪೂರ್ಣವಾಗಿ ನಿಂತ ಮೇಲೆ ಶುದ್ಧಿಗಾಗಿ ಪುನಃ ಸ್ನಾನವನ್ನು ಮಾಡಬೇಕು. ಇದು ಅಂಗಿರಸ ಎಂಬ ಮುನಿಗಳು ಹೇಳಿದುದು.

ರಜಸ್ಯುಪರತೇ ಸಾಧ್ವೀ ಸ್ನಾನೇನ ಸ್ತ್ರೀ ರಜಸ್ವಲಾ | (ಮನುವಿನ ವಚನ)

"ರಜಸ್ಸು ಪೂರ್ತಿಯಾಗಿ ನಿಂತ ಮೇಲೆ ಸ್ನಾನವನ್ನು ಮಾಡಬೇಕು. ಇದರಿಂದ ರಜಸ್ವಲೆಯು ಪೂರ್ಣಶುದ್ಧಿಯನ್ನು ಪಡೆದು ದೇವಕಾರ್ಯಾದಿಗಳಿಗೆ ಅರ್ಹಳಾಗುವಳು." ಇದು ಮನುವು ಹೇಳಿರುವುದು.

ಶುದ್ಧಾ ಭರ್ತುಶ್ಚತುರ್ಥೇಽಹ್ನಿ ಸ್ನಾತ್ವಾ ನಾರೀ ರಜಸ್ವಲಾ |
ದೈವೇ ಕರ್ಮಣಿ ಪಿತ್ರ್ಯೇ ಚ ಪಂಚಮೇಽಹನಿ ಶುದ್ಧ್ಯತಿ || (ಅಂಗಿರಸರ ವಚನ)

"ರಜಸ್ವಲೆಯಾದ ಸ್ತ್ರೀಯು ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿದರೆ ಪತಿಸೇವೆಗೆ ಶುದ್ಧಳಾಗುವಳು. ಐದನೆಯ ದಿನದಲ್ಲಿ ಸ್ನಾನ ಮಾಡಿದ ಮೇಲೆ ದೇವತಾಕಾರ್ಯ ಮತ್ತು ಪಿತೃಕಾರ್ಯಗಳಿಗೆ ಯೋಗ್ಯವಾದ ಶುದ್ಧಿಯನ್ನು ಪಡೆಯುವಳು." ಇದು ಅಂಗಿರಸರ ವಚನ.

ಮೇಲ್ಕಂಡ ಅಂಗಿರಸರ ವಚನ ಮತ್ತು ಮನುವಿನ ವಚನಗಳಲ್ಲಿ ನಾಲ್ಕನೆಯ ದಿನದಲ್ಲಿ ರಜಸ್ಸು ನಿಲ್ಲದಿದ್ದರೆ ಶುದ್ಧಿಯು ಪೂರ್ಣವಾಗಿ ಏರ್ಪಡುವುದಿಲ್ಲವೆಂದೂ, ರಜಸ್ಸು ಪೂರ್ಣವಾಗಿ ನಿಂತ ಮೇಲೆಯೇ ಪೂರ್ಣವಾದ ಶುದ್ಧಿಯು ಏರ್ಪಡುವುದಾಗಿಯೂ ಹೇಳಿರುತ್ತದೆ. ಈಗ ಹೇಳಿರುವ ಅಂಗಿರಸರ ವಚನದಲ್ಲಿ ನಾಲ್ಕನೆಯ ದಿನದಲ್ಲಿಯೇ ಪೂರ್ಣ ಶುದ್ಧಿಯು ಏರ್ಪಡುವುದಾಗಿಯೂ, ಐದನೆಯ ದಿನದಲ್ಲಿ ದೇವಕಾರ್ಯ ಮುಂತಾದ ಕಾರ್ಯಗಳನ್ನು ಮಾಡುವುದಕ್ಕೆ ಬೇಕಾದ ಶುದ್ಧಿಯು ಏರ್ಪಡುವುದಾಗಿಯೂ ಹೇಳಿದೆ. ಆದ್ದರಿಂದ ಈ ವಾಕ್ಯಗಳಿಗೆ ವಿರೋಧವು ಬಂತು. ಈ ವಿರೋಧವನ್ನು ಪರಿಹರಿಸುವುದಕ್ಕಾಗಿ ಅದೇ ಅಂಗಿರಸರು ಹೇಳಿರುವ ಇನ್ನೊಂದು ವಾಕ್ಯವನ್ನು ಕೆಳಗೆ ಕೊಟ್ಟಿರುವೆವು.

ಸಾಧ್ವಾಚಾರಾ ನ ತಾವತ್ಸ್ಯಾತ್ಸ್ನಾತಾಽಪಿ ಸ್ತ್ರೀ ರಜಸ್ವಲಾ |
ಯಾವತ್ಪ್ರವರ್ತಮಾನಂ ಹಿ ರಜೋ ನ ಹಿ ನಿವರ್ತತೇ ||
ಸ್ನಾನಾದನಂತರಂ ತಾವತ್ಸ್ಪರ್ಶಯೋಗ್ಯೇತಿ ಸಾ ಸ್ಮೃತಾ | (ಅಂಗಿರೋವಚನ)
ರಜಸ್ವಲಾ ಚತುರ್ಥೇಽಹ್ನಿ ಸ್ನಾನಾಚ್ಛುದ್ಧಿಮವಾಪ್ನುಯಾತ್ || (ಕಾತ್ಯಾಯನ ವಚನ)
ಸಾಧ್ವಾಚಾರ ದೇವಾದಿಕರ್ಮಯೋಗ್ಯೇತ್ಯರ್ಥಃ | (ಸ್ಮೃತಿಮುಕ್ತಾವಲೀಕಾರರ ವಚನ)

"ರಜಸ್ವಲೆಯಾದ ಸ್ತ್ರೀಯು ರಜಸ್ವಲೆಯಾದ ದಿನದಿಂದ ಆರಂಭಿಸಿ ಮೂರು ದಿನಗಳು ಮುಗಿದು ನಾಲ್ಕನೆಯ ದಿನವು ಆರಂಭಿಸುವವರೆಗೆ ಮುಟ್ಟುವುದಕ್ಕೆ ಅರ್ಹಳಲ್ಲ. ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿದ ಮೇಲೆ ಮುಟ್ಟುವುದಕ್ಕೆ ಅರ್ಹಳಾಗುವಳು. ಐದನೆಯ ದಿನದಲ್ಲಿ ದೇವಕಾರ್ಯ ಮತ್ತು ಪಿತೃಕಾರ್ಯಗಳಿಗೆ ಅರ್ಹಳಾಗುವಳು. ಆದರೆ ಐದನೆಯ ದಿನದಲ್ಲಿ ಸ್ನಾನ ಮಾಡುವುದಕ್ಕೆ ಪೂರ್ವದಲ್ಲಿ ರಜಸ್ಸು ಸಂಪೂರ್ಣವಾಗಿ ನಿಂತು ಹೋದರೆ ಮಾತ್ರ ಅಂದು ದೇವಕಾರ್ಯ ಮತ್ತು ಪಿತೃಕಾರ್ಯಗಳಿಗೆ ಅರ್ಹಳಾಗುವಳು. ಇಲ್ಲದಿದ್ದರೆ ಆ ರಜಸ್ಸು ಪೂರ್ಣವಾಗಿ ನಿಲ್ಲುವವರೆಗೂ ಅರ್ಹಳಾಗುವುದಿಲ್ಲ. ಈ ಅರ್ಥವು 'ಸಾಧ್ವಾಚಾರಾ' ಎಂಬ ಪದದಿಂದ ಹೇಳಲ್ಪಟ್ಟಿದೆ ಎಂದು ಸ್ಮೃತಿಮುಕ್ತಾವಲೀಕಾರರು ಅಭಿಪ್ರಾಯಪಟ್ಟಿರುತ್ತಾರೆ.

## ರೋಗದಿಂದ ರಜಸ್ಸು ಏರ್ಪಟ್ಟಿದ್ದರೆ ಮೈಲಿಗೆಯಿಲ್ಲ

ರೋಗೇಣ ಹಿ ರಜೋತ್ಪತ್ತೌ ನ ತೇನಾಶುಚಿರಿಷ್ಯತೇ | (ಸ್ಮೃತಿಮುಕ್ತಾವಲೀಕಾರರ ವಚನ)
ರೋಗೇಣ ಯದ್ರಜಃ ಸ್ತ್ರೀಣಾಮತ್ಯರ್ಥಂ ತು ಪ್ರವರ್ತತೇ ||
ಅಶುದ್ಧಾ ನೈವ ಸಾ ತೇನ ಯಸ್ಮಾದ್ವೈಕಾರಿಕಂ ಹಿ ತತ್ | (ಅಂಗಿರೋ ವಚನ)

"ರೋಗದಿಂದ ಕೆಲವು ಸ್ತ್ರೀಯರಿಗೆ ರಜಸ್ಸು ತುಂಬಾ ಅಧಿಕವಾಗಿ ಬರುತ್ತಿರುತ್ತದೆ. ಈ ರಜಸ್ಸು ದೇಹದಲ್ಲಿರುವ ಧಾತುಗಳ ವಿಕಾರದಿಂದ ಏರ್ಪಡುವುದರಿಂದ ವೈಕಾರಿಕವೆನಿಸುತ್ತದೆ. ಸ್ವಾಭಾವಿಕವಲ್ಲ. ಸ್ವಾಭಾವಿಕವಾದ ರಜಸ್ಸೇ ಮೈಲಿಗೆಗೆ ಕಾರಣವಾಗುತ್ತದೆ. ವೈಕಾರಿಕವಾದ ಮೇಲ್ಕಂಡ ರಜಸ್ಸು ಮೈಲಿಗೆಗೆ ಕಾರಣವಲ್ಲ. ಆದ್ದರಿಂದ ಅಂತಹ ವೈಕಾರಿಕ ರಜಸ್ಸಿನಿಂದ ಯುಕ್ತಳಾದ ಸ್ತ್ರೀಯು ಸ್ನಾನವನ್ನು ಮಾಡಿದರೆ ದೇವಕಾರ್ಯ ಮತ್ತು ಪಿತೃಕಾರ್ಯಗಳಿಗೆ ಅರ್ಹಳಾಗುವಳು.

### ಅಕಾಲದಲ್ಲಿ ರಜಸ್ವಲೆಯಾದರೆ ಅಶುಚಿಯಾಗುವುದಿಲ್ಲ

ಅಕಾಲೇ ಯದ್ಭವೇತ್ಸ್ತ್ರೀಣಾಂ ರಕ್ತಮಾಹುರ್ಮನೀಷಿಣಃ |
ಕಾಲೇ ತು ಯದ್ರಜಃ ಪ್ರೋಕ್ತಂ ತಸ್ಮಾತ್ತತ್ರೈವ ಸಾಽಶುಚಿಃ ||

ಅಕಾಲದಲ್ಲಿ ಅಂದರೆ ರಜಸ್ವಲೆಯಾದ ದಿನದಿಂದ ಹದಿನಾರು ದಿನಗಳೊಳಗೆ ಪುನಃ ರಜಸ್ವಲೆಯಾದರೆ ಅವಳಲ್ಲಿ ಬರುವ ರಕ್ತವು ರಜಸ್ಸು ಎಂದು ಹೇಳಲ್ಪಡುವುದಿಲ್ಲ. ಆದ್ದರಿಂದ ಅವಳು ರಜಸ್ವಲೆ ಅಂದರೆ 'ರಜಸ್ಸಿನಿಂದ ಯುಕ್ತಳಾದವಳು' ಎಂದು ಹೇಳಲ್ಪಡುವುದಿಲ್ಲ. ಆಗ ಅವಳಲ್ಲಿ ಬರುವ ರಕ್ತವು ಬರೇ ರಕ್ತವೆನಿಸುತ್ತದೆ. ಗಾಯದಿಂದ ರಕ್ತವು ಬಂದಾಗ ಹೇಗೆ ಮೈಲಿಗೆ ಇಲ್ಲವೋ ಅದೇ ರೀತಿಯಾಗಿ ಆ ಸ್ತ್ರೀಯು ಮೈಲಿಗೆಯಾಗುವುದಿಲ್ಲ.

### ರಜಸ್ವಲೆಯಾದ ಸ್ತ್ರೀಯರಿಗೆ ಅಶುದ್ಧವ್ಯಕ್ತಿಗಳ ಸ್ಪರ್ಶವು ಏರ್ಪಟ್ಟಾಗ ಮಾಡುವ ಸ್ನಾನ

ರಜಸ್ವಲಾ ಯದಾ ಸ್ಪೃಷ್ಟ್ವಾ ಚಂಡಾಲಪತಿತಾದಿಭಿಃ |
ತದಾ ಸ್ನಾನಪ್ರಕಾರಂ ತು ಸಮ್ಯಗಾಹ ಪರಾಶರಃ || (ಸ್ಮೃತಿಮುಕ್ತಾವಲೀಕಾರರ ವಚನ)
ಸ್ನಾನೇ ನೈಮಿತ್ತಿಕೇ ಪ್ರಾಪ್ತೇ ನಾರೀ ಯದಿ ರಜಸ್ವಲಾ |
ಪಾತ್ರಾಂತರಸ್ಥತೋಯೇನ ಸ್ನಾನಂ ಕೃತ್ವಾ ವ್ರತಂ ಚರೇತ್ ||
ಸಿಕ್ತಗಾತ್ರಾ ಭವೇದದ್ಭಿಃ ಸಾಂಗೋಪಾಂಗಾ ಕಥಂಚನ |
ನ ವಸ್ತ್ರಪೀಡನಂ ಕುರ್ಯಾನ್ನಾನ್ಯದ್ವಸ್ತ್ರಂ ಚ ಧಾರಯೇತ್ || (ಪರಾಶರರ ವಚನ)

"ರಜಸ್ವಲೆಯಾದ ಸ್ತ್ರೀಯು ಅಶುಚಿವ್ಯಕ್ತಿಗಳನ್ನು ಮುಟ್ಟಿದರೆ ರಜಸ್ವಲೆಯಾಗಿರುವಾಗ ತನಗೆ ಏರ್ಪಟ್ಟಿರುವ ಮೈಲಿಗೆಗಿಂತಲೂ ಅಧಿಕವಾದ ಮೈಲಿಗೆಯನ್ನು ಪಡೆಯುವಳು. ಆ ಅಧಿಕವಾದ ಮೈಲಿಗೆಯನ್ನು ಕಳೆದುಕೊಂಡ ಮೇಲೆಯೇ ಅವಳು ಭೋಜನ ಜಲಪಾನ ಮುಂತಾದವುಗಳಿಗೆ ಅರ್ಹಳಾಗುವಳು. ಈ ಮೈಲಿಗೆಯನ್ನು ಕಳೆದುಕೊಳ್ಳುವುದಕ್ಕಾಗಿ ನದೀ ಸರೋವರ ಮುಂತಾದವುಗಳಲ್ಲಿ ಮುಳುಗಿ ಸ್ನಾನ ಮಾಡಬಾರದು. ತಾನೇ ಬಾವಿ ಮುಂತಾದವುಗಳಿಂದ ನೀರನ್ನು ಸೇದಿಯೂ ಸ್ನಾನ ಮಾಡಬಾರದು. ತಂಬಿಗೆ ಮುಂತಾದ ಪಾತ್ರದಲ್ಲಿ ಶುದ್ಧವಾದ ಜಲವನ್ನು ಶುದ್ಧರಾದ ಸ್ತ್ರೀಯರು ಅಥವಾ ಪುರುಷರು ಹಾಕಬೇಕು. ಆ ನೀರಿನಿಂದ ರಜಸ್ವಲೆಯಾದವಳು ಸ್ನಾನವನ್ನು ಮಾಡಬೇಕು. ತನ್ನ ಸೀರೆಯೂ ಸರ್ವಾವಯವಗಳೂ ಒದ್ದೆಯಾಗುವಂತೆ ಅವಳು ಸ್ನಾನವನ್ನು ಮಾಡಬೇಕು. ಉಟ್ಟುಕೊಂಡ ಸೀರೆಯನ್ನು ಸ್ನಾನ ಮಾಡಿದ ಮೇಲೆ ಹಿಂಡಬಾರದು. ಆ ಸೀರೆಯನ್ನು ಬಿಚ್ಚಿ ಬೇರೆ ಸೀರೆಯನ್ನು ಉಟ್ಟುಕೊಳ್ಳಲೂ ಬಾರದು. ಆ ಒದ್ದೆ ಬಟ್ಟೆಯು ಮೈಯಲ್ಲಿಯೇ ಒಣಗಬೇಕು. ಹೀಗೆ ಮಾಡಿದರೆ ಅವಳು ಭೋಜನ ಮತ್ತು ಜಲಪಾನಕ್ಕೆ ಅರ್ಹಳಾಗುವಳು." ಇದು ಅಂಗಿರಸರು ಹೇಳಿರುವುದು.

### ರೋಗಿಯಾದ ರಜಸ್ವಲೆಯ ಶುದ್ಧಿಗಾಗಿ ಮಾಡಬೇಕಾದ ಕರ್ತವ್ಯ

ಜ್ವರಾಭಿಭೂತನಾರ್ಯಾಸ್ತು ಸ್ನಾನಮಾಹಾನ್ಯಥೋಶನಾಃ | (ಸ್ಮೃತಿಮುಕ್ತಾವಲೀಕಾರರ ವಚನ)
ಜ್ವರಾಭಿಭೂತಾ ಯಾ ನಾರೀ ರಜಸಾ ಚ ಪರಿಪ್ಲುತಾ |
ಕಥಂ ತಸ್ಯಾ ಭವೇಚ್ಛೌಚಂ ಶುದ್ಧ್ಯತೇ ಕೇನ ಕರ್ಮಣಾ ||

ಚತುರ್ಥೇಽಹನಿ ಸಂಪ್ರಾಪ್ತೇ ಸ್ಪೃಶೇದನ್ಯಾ ತು ತಾಂ ಸ್ತ್ರಿಯಮ್ |
ಸ ಸಚೈಲಾಽವಗಾಹ್ಯಾಪಃ ಸ್ನಾತ್ವಾ ಸ್ನಾತ್ವಾ ಪುನಃ ಸ್ಪೃಶೇತ್ ||
ದಶದ್ವಾದಶಕೃತ್ವೋ ವಾ ಹ್ಯಾಚಾಮೇಚ್ಚ ಪುನಃ ಪುನಃ |
ಅಂತೇ ಚ ವಾಸಸಸ್ತ್ಯಾಗಸ್ತತಃ ಶುದ್ಧಾ ಭವೇತ್ತು ಸಾ ||
ದದ್ಯಾಚ್ಛಕ್ತ್ಯಾ ತತೋ ದಾನಂ ಪುಣ್ಯಾಹೇನ ವಿಶುಧ್ಯತಿ | (ಉಶನರ ವಚನ)

"ರಜಸ್ವಲೆಯು ಸನ್ನಿಪಾತಜ್ವರ ಮುಂತಾದ ಪ್ರಬಲ ಜ್ವರದಿಂದ ಪೀಡಿತಳಾಗಿರುವಾಗ ಸ್ನಾನವನ್ನು ಮಾಡಿದರೆ ಅವಳಿಗೆ ಪ್ರಾಣಾಪಾಯವು ಏರ್ಪಡುವ ಸಂಭವವಿದೆ. ಅಂತಹ ಸಮಯದಲ್ಲಿ ನಾಲ್ಕನೆಯ ದಿನದಲ್ಲಿ ಅವಳು ಸ್ವತಃ ಸ್ನಾನವನ್ನು ಮಾಡಕೂಡದು. ಅವಳು ಸ್ನಾನವನ್ನು ಮಾಡದಿದ್ದರೂ ಅವಳಿಗೆ ಶುದ್ಧಿಯು ಏರ್ಪಡುವ ವಿಷಯವನ್ನು ಉಶನಾ ಅಂದರೆ ಶುಕ್ರಚಾರ್ಯರು ಹೇಳಿರುತ್ತಾರೆ. ನಾಲ್ಕನೆಯ ದಿನದಲ್ಲಿ ಜ್ವರಪೀಡಿತಳಾದ ಮುಟ್ಟಾದವಳನ್ನು ಶುದ್ಧಳಾದ ಸ್ತ್ರೀಯು ಮುಟ್ಟಬೇಕು. ಉಟ್ಟ ಬಟ್ಟೆಯೊಡನೆ ಸ್ನಾನ ಮಾಡಬೇಕು. ಆಚಮನ ಮಾಡಬೇಕು. ಪುನಃ ಅವಳನ್ನು ಮುಟ್ಟಬೇಕು. ಪುನಃ ಸ್ನಾನವನ್ನು ಉಟ್ಟಬಟ್ಟೆಯೊಡನೆ ಮಾಡಬೇಕು. ಪುನಃ ಆಚಮನ ಮಾಡಬೇಕು. ಹೀಗೆ ಹತ್ತು ಸಲ ಅಥವಾ ಹನ್ನೆರಡು ಸಲ ಮಾಡಬೇಕು. ಜ್ವರಪೀಡಿತಳಾದ ರಜಸ್ವಲೆಗೆ ಚಂಡಾಲ ಮುಂತಾದ ಅಶುಚಿ ಪುರುಷರ ಸ್ಪರ್ಶವು ಏರ್ಪಡದಿರುವಾಗ ಹತ್ತುಸಲ, ಏರ್ಪಟ್ಟಿರುವಾಗ ಹನ್ನೆರಡು ಸಲ ಮಾಡಬೇಕು. ಕೊನೆಗೆ ಆಚಮನವನ್ನು ಮಾಡಿ ತಾನು ಉಟ್ಟುಕೊಂಡಿರುವ ಸೀರೆಯನ್ನು ಬಿಚ್ಚಿ ಶುದ್ಧವಾದ ಬೇರೆ ಸೀರೆಯನ್ನು ಉಟ್ಟುಕೊಳ್ಳಬೇಕು. ರಜಸ್ವಲೆಗೂ ಬೇರೆ ಸೀರೆಯನ್ನು ಉಡಿಸಬೇಕು. ರಜಸ್ವಲೆಯ ದೇಹಶುದ್ಧಿಗಾಗಿ ಶಕ್ತ್ಯನುಸಾರ ದಾನವನ್ನು ಮಾಡಬೇಕು. ಬ್ರಾಹ್ಮಣರಿಂದ ಪುಣ್ಯಾಹ-ವಾಚನವನ್ನು ಮಾಡಿಸಿ ಪುಣ್ಯಾಹಜಲದಿಂದ ಪ್ರೋಕ್ಷಣ ಮಾಡಬೇಕು. ಇದರಿಂದ ಜ್ವರ ಪೀಡಿತಳಾದ ರಜಸ್ವಲೆಯು ಸ್ನಾನವನ್ನು ಮಾಡದಿದ್ದರೂ ಶುದ್ಧಳಾಗುವಳು." ಇದು ಶುಕ್ರಾಚಾರ್ಯರು ಹೇಳಿರುವುದು.

## ಎರಡು ರಜಸ್ವಲೆಯರು ಮಾತಾಡಿಕೊಂಡರೆ ಪ್ರಾಯಶ್ಚಿತ್ತ

ಆರ್ತವಾಭಿಪ್ಲುತೇ ನಾರ್ಯೌ ಸಂಭಾಷೇತೇ ಮಿಥೋ ಯದಿ |
ಉಪವಾಸಂ ತಯೋರಾಹುರಶುದ್ಧೌ ಶುದ್ಧಿಕಾರಣಮ್ || (ಬೃಹಸ್ಪತಿ ವಚನ)

"ರಜಸ್ವಲೆಯರಾದ ಇಬ್ಬರು ಸ್ತ್ರೀಯರು ಅನ್ಯೋನ್ಯವಾಗಿ ಮಾತಾಡಿಕೊಂಡರೆ ಇಬ್ಬರೂ ರಜಸ್ವಲೆಯರಾಗಿದ್ದಾಗ ಏರ್ಪಟ್ಟ ಅಶುದ್ಧಿಗಿಂತ ಹೆಚ್ಚಿನ ಅಶುದ್ಧಿಯನ್ನು ಪಡೆಯುವರು. ಆ ಅಶುದ್ಧಿಯ ಪರಿಹಾರಕ್ಕಾಗಿ ಇಬ್ಬರೂ ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡುವವರೆಗೆ ಉಪವಾಸವಿರಬೇಕು. ಇದರಿಂದ ಇಬ್ಬರಿಗೂ ಏರ್ಪಟ್ಟ ಹೆಚ್ಚಿನ ಅಶುದ್ಧಿಯು ದೂರವಾಗುತ್ತದೆ.

## ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯು ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯನ್ನು ಬುದ್ಧಿಪೂರ್ವಕವಾಗಿ ಮುಟ್ಟಿದರೆ ಪ್ರಾಯಶ್ಚಿತ್ತ

ಆರ್ತವಾಭಿಪ್ಲುತಾ ನಾರೀ ಸಾರ್ತವಾಂ ಯದಿ ಸಂಸ್ಪೃಶೇತ್ |
ಆಸ್ನಾನಕಾಲಾನ್ನಾಶ್ನೀಯಾದ್ಭುಕ್ತ್ವಾ ಚಾಂದ್ರಾಯಣಂ ಚರೇತ್ || (ಸಂಗ್ರಹವಚನ)

"ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯು, ರಜಸ್ವಲೆಯಾಗಿರುವ ಬ್ರಾಹ್ಮಣಸ್ತ್ರೀಯನ್ನು ಬುದ್ಧಿಪೂರ್ವಕವಾಗಿ ಮುಟ್ಟಿದರೆ ಮುಟ್ಟಿದವಳು ಮುಟ್ಟಿದ ಕ್ಷಣದಿಂದ ಆರಂಭಿಸಿ ನಾಲ್ಕನೆಯ ದಿನದಲ್ಲಿ ಸ್ನಾನ ಮಾಡುವವರೆಗೂ ಉಪವಾಸವನ್ನು ಮಾಡಬೇಕು. ಮಧ್ಯದಲ್ಲಿ ಊಟವನ್ನು ಮಾಡಿದರೆ ಚಾಂದ್ರಾಯಣವ್ರತವನ್ನು ಮಾಡಬೇಕು." (ಈ ಶ್ಲೋಕದಲ್ಲಿ ಬ್ರಾಹ್ಮಣಸ್ತ್ರೀಯು ಬ್ರಾಹ್ಮಣಸ್ತ್ರೀಯನ್ನು ಬುದ್ಧಿಪೂರ್ವಕವಾಗಿ ಮುಟ್ಟಿದರೆ ಈ ಪ್ರಾಯಶ್ಚಿತ್ತವೆಂದು ಸ್ಪಷ್ಟವಾಗಿ ಹೇಳಿಲ್ಲ. ಆದರೂ ಸ್ಮೃತಿಮುಕ್ತಾವಲೀಕಾರರು ಇತರ ಪ್ರಮಾಣಗಳ ಆಧಾರದಿಂದ ಮೇಲ್ಕಂಡ ವ್ಯಾಖ್ಯಾನವನ್ನು ಮಾಡಿರುತ್ತಾರೆ.)

## ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯು ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯನ್ನು ತಿಳಿಯದೆ ಮುಟ್ಟಿದರೆ ಪ್ರಾಯಶ್ಚಿತ್ತ

ಆರ್ತವಾಭಿಪ್ಲುತಾ ನಾರೀ ತ್ವಾರ್ತವಾಭಿಪ್ಲುತಾಂ ಸ್ಪೃಶೇತ್ |
ಸ್ನಾತ್ವೋಽಪವಾಸಂ ಕುರ್ಯಾತಾಂ ಪಂಚಗವ್ಯೇನ ಶುದ್ಧ್ಯತಃ || (ಸಂಗ್ರಹವಚನ)

ಸ್ನಾತ್ವಾ ಉದ್ಧೃತೋದಕೈರಿತಿ ಶೇಷಃ. ಉಪವಾಸಃ ಅವಶಿಷ್ಟದಿನ ಇತಿ ಶೇಷಃ. ಚತುರ್ಥೇಽಹನಿ ಸ್ನಾತ್ವಾ ಪಂಚಗವ್ಯಂ ಪ್ರಾಶ್ಯ ಶುದ್ಧ್ಯತೀತ್ಯರ್ಥಃ. (ಸ್ಮೃತಿಮುಕ್ತಾವಲೀಕಾರರ ವಚನ)

"ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯು ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯನ್ನು ತಿಳಿಯದೆ ಮುಟ್ಟಿದರೆ ಕೂಡಲೇ ಇಬ್ಬರೂ ಸ್ನಾನವನ್ನು ಮಾಡಬೇಕು. ಇಬ್ಬರೂ ಆ ಕ್ಷಣದಿಂದ ಆರಂಭಿಸಿ ನಾಲ್ಕನೆಯ ದಿನದಲ್ಲಿ ಸ್ನಾನ ಮಾಡುವವರೆಗೆ ಉಪವಾಸವನ್ನು ಮಾಡಬೇಕು. ಈ ಸ್ನಾನವನ್ನು ನದೀ ಸರೋವರ ಮುಂತಾದ ಸ್ಥಳಗಳಲ್ಲಿ ಮುಳುಗಬಾರದು. ತಾನೂ ಸಹ ಬಾವಿಯಿಂದ ಸ್ವತಃ ನೀರನ್ನು ಸೇದಿ ಮಾಡಬಾರದು. ಇನ್ನೊಬ್ಬರು ತಂಬಿಗೆ ಮುಂತಾದ ಪಾತ್ರಗಳಲ್ಲಿ ನೀರನ್ನು ತುಂಬಿಸಬೇಕು. ಆ ನೀರಿನಿಂದ ಸ್ನಾನ ಮಾಡಬೇಕು. ಹೀಗೆ ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿದ ಮೇಲೆ ಪಂಚಗವ್ಯವನ್ನು ಪ್ರಾಶನ ಮಾಡಬೇಕು. ಇದರಿಂದ ಇಬ್ಬರೂ ಶುದ್ಧರಾಗುವರು. (ಈ ಶ್ಲೋಕದಲ್ಲಿಯೂ ಬ್ರಾಹ್ಮಣಸ್ತ್ರೀಯನ್ನು ಬ್ರಾಹ್ಮಣಸ್ತ್ರೀಯು ತಿಳಿಯದೆ ಮುಟ್ಟಿದರೆ ಈ ಪ್ರಾಯಶ್ಚಿತ್ತವೆಂದು ಸ್ಪಷ್ಟವಾಗಿ ಹೇಳಿಲ್ಲ. ಆದರೂ ಸ್ಮೃತಿಮುಕ್ತಾವಲೀಕಾರರು ಇತರ ಪ್ರಮಾಣಗಳ ಆಧಾರದಿಂದ ಮೇಲ್ಕಂಡ ವ್ಯಾಖ್ಯಾನವನ್ನು ಬರೆದಿರುವರು.)

## ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯು ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯನ್ನು ಮುಟ್ಟಿದಾಗ ಪ್ರಾಯಶ್ಚಿತ್ತ ತಾರತಮ್ಯ

ಕೃಚ್ಛ್ರಂ ತಸ್ಯಾ ಯಯಾ ಸ್ಪೃಷ್ಟಮನ್ಯಸ್ಯಾಸ್ತು ತದರ್ಧಕಮ್ |
ದಂಡಾದ್ಯಂತರ್ಹಿತೇ ನೋ ಚೇದನ್ಯಸ್ಯ ಅಪಿ ಕೃಚ್ಛ್ರಕಮ್ || (ಸಂಗ್ರಹವಚನ)
ದಂಡಾದೀತ್ಯಾದಿನಾ ಲೋಷ್ಟಪಾಷಾಣಾದಿಕಮಪಿ ಗೃಹ್ಯತೇ | (ಸ್ಮೃತಿಮುಕ್ತಾವಲೀ ವಚನ)

"ಮುಟ್ಟಾದ ಬ್ರಾಹ್ಮಣಸ್ತ್ರೀಯು, ಮುಟ್ಟಾದ ಬ್ರಾಹ್ಮಣಸ್ತ್ರೀಯನ್ನು ಸಾಕ್ಷಾತ್ತಾಗಿ ಮುಟ್ಟದೆ ಕೋಲು, ಕಲ್ಲು ಮುಂದಾದವುಗಳಿಂದ ಪರಂಪರೆಯಿಂದ ಮುಟ್ಟಿದರೆ ಮುಟ್ಟಿದವಳು ಕೃಚ್ಛ್ರ ಎಂಬ ಕಠಿನವಾದ ಪ್ರಾಯಶ್ಚಿತ್ತವನ್ನು ಪೂರ್ಣವಾಗಿ ಮಾಡಬೇಕು. ಮುಟ್ಟಲ್ಪಟ್ಟವಳು ಅರ್ಧಕೃಚ್ಛ್ರಪ್ರಾಯಶ್ಚಿತ್ತವನ್ನು ಮಾಡಬೇಕು. ಪರಂಪರೆಯಿಂದ ಮುಟ್ಟದೆ ಸಾಕ್ಷಾತ್ತಾಗಿಯೇ ಮುಟ್ಟಿದರೆ ಇಬ್ಬರೂ ಕೃಚ್ಛ್ರ ಪ್ರಾಯಶ್ಚಿತ್ತವನ್ನು ಪೂರ್ಣವಾಗಿ ಮಾಡಬೇಕು."

(ಮೇಲ್ಕಂಡ ವಾಕ್ಯಗಳಲ್ಲಿ ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯು ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯನ್ನು ಮುಟ್ಟಿದಾಗ ಇಬ್ಬರಿಗೂ ಒಂದೇ ವಿಧವಾದ ಮೈಲಿಗೆಯೆಂದು ತೋರುತ್ತದೆ. ಹಾಗಿಲ್ಲ. ಮುಟ್ಟಿದವಳಿಗೆ ಮೈಲಿಗೆಯು ಅಧಿಕವೆಂದು ಮುಟ್ಟಲ್ಪಟ್ಟವಳಿಗೆ ಮೈಲಿಗೆಯು ಕಡಿಮೆಯೆಂದೂ ತಿಳಿಸುವುದಕ್ಕಾಗಿ ಈ ಪ್ರಮಾಣವಚನವು ಹೊರಟಿರುತ್ತದೆ.)

## ರಜಸ್ವಲೆಯಾದ ಬ್ರಾಹ್ಮಣ ಸ್ತ್ರೀಯು ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯನ್ನು ಮುಟ್ಟಿದಾಗ ಮಾಡುವ ಪ್ರಾಯಶ್ಚಿತ್ತ

ಉದಕ್ಯಯಾ ತು ಸಂಸ್ಪೃಷ್ಟಾ ಬ್ರಾಹ್ಮಣ್ಯಾ ಬ್ರಾಹ್ಮಣೀ ಯದಿ |
ಏಕರಾತ್ರಂ ನಿರಾಹಾರಾ ಪಂಚಗವ್ಯೇನ ಶುದ್ಧ್ಯತಿ || (ಕಾಶ್ಯಪ ವಚನ)
ಇದಮಜ್ಞಾನಾತ್ಸ್ಪರ್ಶೇಯಾಹುಃ ಸ್ಪರ್ಶವಿಷಯಮ್ | (ಸ್ಮೃತಿಮುಕ್ತಾವಲೀ ವಚನ)

(ಮೇಲ್ಕಂಡ ವಾಕ್ಯಗಳಲ್ಲಿ ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯು ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯನ್ನು ತಿಳಿಯದೆ ಮುಟ್ಟಿದರೆ ಒಂದು ಪ್ರಾಯಶ್ಚಿತ್ತವನ್ನೂ, ತಿಳಿದು ಮುಟ್ಟಿದರೆ ಇನ್ನೊಂದು ಪ್ರಾಯಶ್ಚಿತ್ತವನ್ನೂ ಹೇಳಿರುವುದಾಗಿ ಸ್ಮೃತಿಮುಕ್ತಾವಲೀಕಾರರು ವ್ಯಾಖ್ಯಾನವನ್ನು ಮಾಡಿರುವರು. ಆ ಅರ್ಥವು ಆ ಶ್ಲೋಕಗಳಲ್ಲಿ ಸ್ಪಷ್ಟವಾಗಿಲ್ಲ. ಆ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ ಈ ಶ್ಲೋಕವನ್ನು ಬರೆದಿರುವರು.) "ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯು ರಜಸ್ವಲೆಯಾದ ಬ್ರಾಹ್ಮಣಸ್ತ್ರೀಯಿಂದ ಮುಟ್ಟಾಗಿ ಮೂರನೆಯ ದಿನದಲ್ಲಿ ತಿಳಿಯದೆ ಮುಟ್ಟಲ್ಪಟ್ಟರೆ ಉಳಿದ ಒಂದು ದಿನ ಉಪವಾಸವಾಗಿದ್ದು ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿ ಪಂಚಗವ್ಯವನ್ನು ಕುಡಿಯಬೇಕು. ಇದರಿಂದ ಶುದ್ಧಿಯು ಏರ್ಪಡುತ್ತದೆ." (ಈ ಶ್ಲೋಕದಲ್ಲಿಯೂ ತಿಳಿಯದೆ ಮುಟ್ಟಿದರೆ ಎಂಬ ಅಂಶವು ಮೂರನೆಯ ದಿನದಲ್ಲಿ ಮುಟ್ಟಿದರೆ ಎಂಬ ಅಂಶವು ಸ್ಪಷ್ಟವಾಗಿಲ್ಲ. ಆದರೂ ಸ್ಮೃತಿಮುಕ್ತಾವಲೀಕಾರರು ಮೇಲ್ಕಂಡ 'ಸ್ನಾತ್ವೋಽಪವಾಸಃ' ಎಂಬ ವಾಕ್ಯದಲ್ಲಿ ಹೇಳಿರುವ ಅರ್ಥಕ್ಕೆ ಅನುಗುಣವಾಗಿ ವ್ಯಾಖ್ಯಾನವನ್ನು ಮಾಡಿರುವರು. ಆ ವಾಕ್ಯದಲ್ಲಿ ಮುಟ್ಟಿದ ಕ್ಷಣದಿಂದ ಆರಂಭಿಸಿ ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿ ಪಂಚಗವ್ಯವನ್ನು ಕುಡಿಯುವವರೆಗೂ ಉಪವಾಸವಾಗಿರಬೇಕು ಎಂದು ಹೇಳಿದೆ. ಈ ವಾಕ್ಯದಲ್ಲಿ ಒಂದು ದಿನ ಮಾತ್ರ ಉಪವಾಸವಾಗಿರಬೇಕೆಂದು ಹೇಳಿದೆ. ಇದು ವಿರುದ್ಧವಾಗಿದೆ. ಆದಕ್ಕಾಗಿ ಈ ವಾಕ್ಯದಲ್ಲಿ ರಜಸ್ವಲೆಯಾಗಿ ಮೂರನೆಯ ದಿನದಲ್ಲಿ ಮುಟ್ಟಿದರೆ ಒಂದು ದಿನ ಉಪವಾಸವಾಗಿರಬೇಕು ಎಂದು ವ್ಯಾಖ್ಯಾನ ಮಾಡಿದರೆ ಮುಟ್ಟಿದ ಕ್ಷಣದಿಂದ ನಾಲ್ಕನೇ ದಿನದಲ್ಲಿ ಮಾಡುವ ಸ್ನಾನಕ್ಕೆ ಮಧ್ಯದಲ್ಲಿ ಒಂದೇ ದಿನವು ಉಳಿದಿರುವುದರಿಂದ ಒಂದೇ ದಿನ ಉಪವಾಸವಾಗಿದ್ದರೆ ಎರಡು ಪ್ರಮಾಣಗಳಂತೆಯೂ ನಡೆದುಕೊಂಡಂತಾಗುತ್ತದೆ. ಪ್ರಮಾಣಗಳಿಗೆ ವಿರೋಧವಿಲ್ಲದಂತೆಯೂ ಆಗುತ್ತದೆ.)

**ರಜಸ್ವಲೆಯಾದ ಸ್ವಜಾತಿ ಸ್ತ್ರೀಯನ್ನು ರಜಸ್ವಲೆಯು ಮುಟ್ಟಿದರೆ ಮೇಲ್ಕಂಡ ಪ್ರಾಯಶ್ಚಿತ್ತವನ್ನು ಮಾಡಲು ಶಕ್ತಿಯಿಲ್ಲದಿದ್ದಾಗ ಮಾಡಬೇಕಾದ ಪ್ರಾಯಶ್ಚಿತ್ತ**

ಉದಕ್ಯಯಾ ಸವರ್ಣಾ ಚ ಸಂಸ್ಪೃಷ್ಟಾ ಚೇದ್ರಜಸ್ವಲಾ |
ತಸ್ಮಿನ್ನೇವಾಹನಿ ಸ್ನಾತ್ವಾ ಶುದ್ಧಿಮಾಪ್ನೋತ್ಯಸಂಶಯಮ್ || (ಮಾರ್ಕಂಡೇಯವಚನ)

"ರಜಸ್ವಲೆಯು ತನ್ನ ಜಾತಿಯ ಇನ್ನೊಬ್ಬ ರಜಸ್ವಲೆಯನ್ನು ಮುಟ್ಟಿದರೆ ಅದೇ ದಿನದಲ್ಲಿ ಸ್ನಾನ ಮಾಡಬೇಕು. ಹಾಗೆ ಮಾಡಿದರೆ ಶುದ್ಧಳಾಗುವಳು. ಈ ವಿಷಯದಲ್ಲಿ ಸಂಶಯವು ಬೇಡ." (ಈ ವಾಕ್ಯದಲ್ಲಿ ರಜಸ್ವಲೆಯು ತನ್ನ ಜಾತಿಯ ರಜಸ್ವಲೆಯನ್ನು ಮುಟ್ಟಿದರೆ ನಾಲ್ಕನೆಯ ದಿನದವರೆಗೆ ಉಪವಾಸವಾಗಿರಬೇಕೆಂದು ಹೇಳಲಿಲ್ಲ. ಅದೇ ದಿನದಲ್ಲಿ ಸ್ನಾನ ಮಾಡಿ ಬಿಟ್ಟರೆ ಶುದ್ಧಿಯಾಗುತ್ತದೆಂದು ಹೇಳಿದೆ. ಹಿಂದಿನ ವಾಕ್ಯಗಳಲ್ಲಿ ನಾಲ್ಕನೆಯ ದಿನದವರೆಗೆ ಉಪವಾಸವಾಗಿರಬೇಕೆಂದೂ, ನಾಲ್ಕನೆಯ ದಿನದಲ್ಲಿ ಸ್ನಾನ ಮಾಡಿದ ಮೇಲೆ ಪಂಚಗವ್ಯವನ್ನು ಕುಡಿಯಬೇಕೆಂದೂ, ಇದರಿಂದಲೇ ಶುದ್ಧಿಯು ಏರ್ಪಡುವುದಾಗಿಯೂ ಹೇಳಿರುತ್ತದೆ. ಆದ್ದರಿಂದ ಈ ವಾಕ್ಯಗಳಿಗೆ ಪರಸ್ಪರ ವಿರೋಧವು ಬಂತು. ಈ ವಿರೋಧವನ್ನು ಪರಿಹರಿಸುವುದಕ್ಕಾಗಿ ಸ್ಮೃತಿಮುಕ್ತಾವಲೀಕಾರರು ಶಕ್ತರಾದವರು ಹಿಂದಿನ ವಾಕ್ಯಗಳಲ್ಲಿ ಹೇಳಿದಂತೆ ಉಪವಾಸ ಮುಂತಾದವುಗಳನ್ನು ಮಾಡಬೇಕೆಂದೂ ಅಶಕ್ತರಾದವರು ಈ ವಾಕ್ಯದಲ್ಲಿ ಹೇಳಿರುವಂತೆ ಮುಟ್ಟಿದ ದಿನದಲ್ಲಿ ಸ್ನಾನವನ್ನು ಮಾತ್ರ ಮಾಡಿದರೆ ಸಾಕೆಂದೂ, ಉಪವಾಸ ಮುಂತಾದ ಪ್ರಾಯಶ್ಚಿತ್ತವನ್ನು ಮಾಡಬೇಕಾದ ನಿರ್ಬಂಧವಿಲ್ಲವೆಂದೂ 'ಅಶಕ್ತೌ ಮಾರ್ಕಂಡೇಯಃ' ಎಂದು ನಿರ್ಣಯಿಸಿರುವರು.)

**ರಜಸ್ವಲೆಯು ಇನ್ನೊಬ್ಬ ರಜಸ್ವಲೆಯನ್ನು ಮುಟ್ಟಿ ಸ್ನಾನವನ್ನು ಮಾಡದಿರುವಾಗ ಪ್ರಾಯಶ್ಚಿತ್ತ**

ಅಸ್ನಾನಾದುಪವಾಸಂ ಚ ಕೃಚ್ಛ್ರಂ ಸಾಂತಪನಂ ತತಃ |
ಬ್ರಾಹ್ಮಣಾನ್ಭೋಜಯೇತ್ಪಶ್ಚಾದ್ವಿಪ್ರಾಣಾಮನುಶಾಸನಾತ್ || (ವಿಷ್ಣುವಚನ)

"ರಜಸ್ವಲೆಯು ಇನ್ನೊಬ್ಬ ರಜಸ್ವಲೆಯನ್ನು ಮುಟ್ಟಿದಾಗ ಕೂಡಲೇ ಸ್ನಾನವನ್ನು ಮಾಡಬೇಕೆಂದೂ, ನಾಲ್ಕನೆಯ ದಿನದವರೆಗೂ ಉಪವಾಸವನ್ನು ಮಾಡಬೇಕೆಂದೂ ಹಿಂದೆ ಹೇಳಿರುತ್ತದೆ. ಈಗ ರಜಸ್ವಲೆಯು ಇನ್ನೊಬ್ಬ ರಜಸ್ವಲೆಯನ್ನು ಮುಟ್ಟಿದಾಗ ಮುಟ್ಟಿದ ದಿನದಲ್ಲಿ ಸ್ನಾನವನ್ನು ಮಾಡದಿದ್ದರೆ ಹೆಚ್ಚಿನ ಪ್ರಾಯಶ್ಚಿತ್ತವನ್ನು ತಿಳಿಸುತ್ತಿದ್ದಾರೆ. ಅಂತಹ ಸ್ತ್ರೀಯು ಇತರ ರಜಸ್ವಲೆಯನ್ನು ಮುಟ್ಟಿದ ಕ್ಷಣದಿಂದ ಉಪವಾಸವನ್ನೂ, ನಾಲ್ಕನೆಯ ದಿನದಲ್ಲಿ ಸ್ನಾನ ಮಾಡಿದ ಮೇಲೆ ಸಾಂತಪನ ಕೃಚ್ಛ್ರವ್ರತವನ್ನೂ ಮಾಡಬೇಕು. ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ತೃಪ್ತರಾದ ಬ್ರಾಹ್ಮಣರ ಅನುಮತಿಯನ್ನು ಪಡೆದು ಭೋಜನ ಮಾಡಬೇಕು." ಇದು ವಿಷ್ಣುವಚನ.

**ಈ ಸಾಂತಪನಕೃಚ್ಛ್ರವನ್ನು ಮಾಡಲು ಶಕ್ತಿಯಿಲ್ಲದವರಿಗೆ ಪ್ರಾಯಶ್ಚಿತ್ತ**

ಸಾಂತಪನಪ್ರತಿನಿಧಿರ್ಗೋದ್ವಯಂ ನಿಷ್ಕದ್ವಯಂ ವಾ | (ಸ್ಮೃತಿಮುಕ್ತಾವಲೀಕಾರರ ವಚನ)

"ಸಾಂತಪನಕೃಚ್ಛ್ರವನ್ನು ಮಾಡಲು ಶಕ್ತಿಯಿಲ್ಲದವಳು ಅದಕ್ಕೆ ಬದಲಾಗಿ ಎರಡು ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು. ಅದರಲ್ಲಿಯೂ ಶಕ್ತಿಯಿಲ್ಲದವಳು ಎರಡು ರೂಪಾಯಿಗಳನ್ನು ದಾನ ಮಾಡಬೇಕು." ಇದು ಸ್ಮೃತಿಮುಕ್ತಾವಲೀಕಾರರ ವಚನ.

**ಒಂದೇ ಜಾತಿಯ ಎರಡು ರಜಸ್ವಲೆಯರಲ್ಲಿ ಒಬ್ಬಳನ್ನೊಬ್ಬಳು ಇಷ್ಟದಿಂದ ಮುಟ್ಟಿದರೆ ಪ್ರಾಯಶ್ಚಿತ್ತ**

ರಜಸ್ವಲೇ ಯದಾಽನ್ಯೋನ್ಯಂ ಸಂಸ್ಪೃಶೇತಾಂ ಮಿಥೋ ಯದಿ |

ಸವರ್ಣೇ ಪಂಚಗವ್ಯೇನ ಬ್ರಹ್ಮಕೂರ್ಚೇನ ಶುದ್ಧ್ಯತಃ || (ಅಖಂಡಾದರ್ಶವಚನ)

ಮಂತ್ರಸಂಯೋಜಿತಂ ಹುತಶಿಷ್ಟಂ ಪಂಚಗವ್ಯಂ ಬ್ರಹಕೂರ್ಚಂ ಬ್ರಹ್ಮಸುವರ್ಚಲೇಽತಿ ಚೋಚ್ಯತೇ. (ಸ್ಮೃತಿಮುಕ್ತಾವಲೀಕಾರರ ವಚನ)

"ಹಾಲು, ಮೊಸರು, ತುಪ್ಪ, ಗೋಮಯ ಮತ್ತು ಗೋಮೂತ್ರ ಈ ಐದು ಗೋವಿನ ವಸ್ತುಗಳು ಪಂಚಗವ್ಯಗಳೆನಿಸುತ್ತವೆ. ಇವುಗಳಲ್ಲಿ ಒಂದೊಂದು ಪದಾರ್ಥಗಳನ್ನು ಒಟ್ಟುಗೂಡಿಸುವುದಕ್ಕೆ ಒಂದೊಂದು ಮಂತ್ರಗಳಿವೆ. ಆ ಮಂತ್ರಗಳಿಂದ ಈ ಐದು ಪದಾರ್ಥಗಳನ್ನು ಕ್ರಮವಾಗಿ ಒಟ್ಟುಗೂಡಿಸಬೇಕು. ಈ ಪಂಚಗವ್ಯದಿಂದ ಪಂಚಗವ್ಯಹೋಮವನ್ನು ಮಾಡಬೇಕು. ಹೋಮ ಮಾಡಿ ಉಳಿದ ಪಂಚಗವ್ಯಕ್ಕೆ ಬ್ರಹ್ಮಕೂರ್ಚ ಅಥವಾ ಬ್ರಹ್ಮಸುವರ್ಚಲಾ ಎಂದು ಹೆಸರು" ಇದು ಸ್ಮೃತಿಮುಕ್ತಾವಲೀಕಾರರ ವಚನ.

"ಒಂದೇ ಜಾತಿಯಲ್ಲಿ ಹುಟ್ಟಿರುವ ಎರಡು ರಜಸ್ವಲೆಯರಲ್ಲಿ ಇಬ್ಬರೂ ಒಬ್ಬಳನ್ನೊಬ್ಬಳು ಇಷ್ಟದಿಂದ ಮುಟ್ಟಿದರೆ ನಾಲ್ಕನೇ ದಿನದಲ್ಲಿ ಸ್ನಾನವನ್ನು ಮಾಡಿ ಮೇಲ್ಕಂಡ ಬ್ರಹ್ಮಕೂರ್ಚವನ್ನು ಇಬ್ಬರೂ ಸ್ವೀಕರಿಸಬೇಕು."

**ಒಂದೇ ಗೋತ್ರದಲ್ಲಿ ಹುಟ್ಟಿರುವ ಅಥವಾ ಒಬ್ಬನ ಪತ್ನಿಯಾಗಿರುವ ಎರಡು ರಜಸ್ವಲೆಯರು ಒಬ್ಬಳನ್ನೊಬ್ಬಳು ಮುಟ್ಟಿದರೆ ಪ್ರಾಯಶ್ಚಿತ್ತ**

ಸ್ಪೃಷ್ಟೇ ರಜಸ್ವಲೇಽನ್ಯೋನ್ಯಂ ಸಗೋತ್ರೇ ಚೈಕಭರ್ತೃಕೇ |

ಕಾಮತೋಽಕಾಮತೋ ವಾಪಿ ತ್ರಿರಾತ್ರೇಣ ವಿಶುದ್ಧ್ಯತಃ || (ಅಖಂಡಾದರ್ಶವಚನ)

ತ್ರಿರಾತ್ರೇಣೋಽಪವಾಸೇನ | (ಸ್ಮೃತಿಮುಕ್ತಾವಲೀವಚನ)

"ಒಂದೇ ಗೋತ್ರದಲ್ಲಿ ಹುಟ್ಟಿರುವ ಎರಡು ರಜಸ್ವಲೆಯರು ಅಥವಾ ಒಂದೇ ಪುರುಷನ ಪತ್ನಿಯರಾಗಿರುವ ಎರಡು ರಜಸ್ವಲೆಯರು ಇವರಲ್ಲಿ ಒಬ್ಬಳನ್ನೊಬ್ಬಳು ತಿಳಿದು ಅಥವಾ ತಿಳಿಯದೆ ಮುಟ್ಟಿದರೆ ಮೂರು ದಿನಗಳವರೆಗೆ ಇಬ್ಬರೂ ಉಪವಾಸವನ್ನು ಮಾಡಬೇಕು. ಇದರಿಂದ ಇಬ್ಬರೂ ಶುದ್ಧರಾಗುವರು." ಇದು ಅಖಂಡಾದರ್ಶವಚನ.

ಈ ವಚನದಲ್ಲಿ 'ತ್ರಿರಾತ್ರೇಣ' ಎಂಬ ಪದವಿದೆ. ಅದಕ್ಕೆ 'ಮೂರು ದಿನಗಳು ಮುಗಿದ ಮೇಲೆ ಶುದ್ಧಿಯು ಏರ್ಪಡುತ್ತದೆ' ಎಂಬ ಅರ್ಥವು ತಿಳಿಯುತ್ತದೆ. ಇದು ದೊಡ್ಡ ಪ್ರಾಯಶ್ಚಿತ್ತವಲ್ಲ. ಅದಕ್ಕಾಗಿ 'ಮೂರು ದಿನಗಳಲ್ಲಿ ಉಪವಾಸವನ್ನು ಮಾಡಿದ ಮೇಲೆ ಶುದ್ಧಿಯು ಏರ್ಪಡುತ್ತದೆ' ಎಂದು ಸ್ಮೃತಿಮುಕ್ತಾವಲೀಕಾರರು ಆ ಪದದ ಅರ್ಥವನ್ನು ಸ್ಪಷ್ಟಪಡಿಸಿರುವರು.

**ಕೃಚ್ಛ್ರ ಮತ್ತು ಚಾಂದ್ರಾಯಣವ್ರತಗಳಿಗೆ ಪ್ರತಿನಿಧಿಯಾಗಿ ಮಾಡಬೇಕಾದ ಪ್ರಾಯಶ್ಚಿತ್ತ**

"ಪ್ರಾಯಶ್ಚಿತ್ತಸ್ಯ ಗುರುತ್ವಾತ್ಕೃಚ್ಛ್ರೇ ಗೌರ್ನಿಷ್ಕಂ ವಾ ಚಾಂದ್ರಾಯಣೇ ತು ಗಾಸ್ತಿಸ್ರೋ ನಿಷ್ಕತ್ರಯಂ ವಾ ದದ್ಯಾದಿತಿ ಜಾತೂಕರ್ಣಿಃ"

"ಕೃಚ್ಛ್ರ ಮತ್ತು ಚಾಂದ್ರಾಯಣವ್ರತ ಎಂಬ ಪ್ರಾಯಶ್ಚಿತ್ತಗಳು ತುಂಬಾ ಶ್ರಮಸಾಧ್ಯವಾಗಿರುತ್ತವೆ. ಅವುಗಳನ್ನು ಮಾಡುವುದು ತುಂಬಾ ಕಷ್ಟವಾಗಿರುತ್ತದೆ. ಅದಕ್ಕಾಗಿ ಕೃಚ್ಛ್ರವ್ರತಕ್ಕೆ ಪ್ರತಿನಿಧಿಯಾಗಿ ಒಂದು ಗೋವನ್ನು, ಚಾಂದ್ರಾಯಣವ್ರತಕ್ಕೆ ಬದಲಾಗಿ ಮೂರು ಗೋವುಗಳನ್ನೂ ದಾನ ಮಾಡಬೇಕು. ಇದಕ್ಕೂ ಶಕ್ತಿಯಿಲ್ಲದವರು ಕೃಚ್ಛ್ರಕ್ಕೆ ಬದಲಾಗಿ ಒಂದು ರೂಪಾಯಿಯನ್ನೂ, ಚಾಂದ್ರಾಯಣಕ್ಕೆ ಬದಲಾಗಿ ಮೂರು ರೂಪಾಯಿಗಳನ್ನು ದಾನ ಮಾಡಬೇಕು." ಇದು ಜಾತೂಕರ್ಣಿಯ ಮತವಾಗಿದೆ.

**ರಜಸ್ವಲೆಯು ಹಂದಿ ನಾಯಿ ಮುಂತಾದವುಗಳನ್ನು ಮುಟ್ಟಿ ಸ್ನಾನಮಾಡದೆ ಊಟ ಮಾಡಿದರೆ ಪ್ರಾಯಶ್ಚಿತ್ತ**

ರಜಸ್ವಲಾ ಯದಾ ನಾರೀ ಹ್ಯಶುದ್ಧಾನ್ ಸ್ಪೃಶತೇ ಯದಿ |
ಅಸ್ನಾತ್ವಾ ಭೋಜನಂ ಕೃತ್ವಾ ಪ್ರಾಜಾಪತ್ಯಂ ಸಮಾಚರೇತ್ || (ಭೃಗುವಚನ)
ಅಶುದ್ಧಾನ್ ಶ್ವಸೂಕರಶಿವಾದೀನ್ | (ಸ್ಮೃತಿಮುಕ್ತಾವಲೀಕಾರರ ವ್ಯಾಖ್ಯಾನ)

"ನಾಯಿ, ಹಂದಿ, ನರಿ ಮುಂತಾದ ಪ್ರಾಣಿಗಳು ಸ್ವತಃ ಅಶುದ್ಧವಾದ ಪ್ರಾಣಿಗಳು. ರಜಸ್ವಲೆಯಾದ ಸ್ತ್ರೀಯು ಈ ಪ್ರಾಣಿಗಳನ್ನು ಮುಟ್ಟಿದರೆ ಹೆಚ್ಚಿನ ಅಶುದ್ಧಿಯನ್ನು ಪಡೆಯುವಳು. ಅವುಗಳನ್ನು ಮುಟ್ಟಿದರೆ ಸ್ನಾನವನ್ನು ಮಾಡಿ ಊಟ ಮಾಡಬೇಕು. ಅವುಗಳನ್ನು ಮುಟ್ಟಿ ಸ್ನಾನ ಮಾಡದೆ ಊಟ ಮಾಡಿದರೆ ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿ ಪ್ರಾಜಾಪತ್ಯಕೃಚ್ಛ್ರವ್ರತವನ್ನು ಮಾಡಬೇಕು. ಇದರಿಂದ ಅವಳು ಶುದ್ಧಳಾಗುವಳು."

**ಜಾತಾಶೌಚ ಮತ್ತು ಮೃತಾಶೌಚವುಳ್ಳವರನ್ನು ರಜಸ್ವಲೆಯು ಮುಟ್ಟಿದರೆ ವಿಶೇಷ ಪ್ರಾಯಶ್ಚಿತ್ತ**

ಸೂತಕಂ ಪ್ರೇತಕಂ ಸ್ಪೃಷ್ಟ್ವಾ ಶ್ರುತ್ವಾ ಬಂಧುಷು ಮಾರಣಮ್ |
ಅಸ್ನಾನಕಾಲಂ ನಾಶ್ನೀಯಾತ್ಪಿಬೇದ್ಬ್ರಹ್ಮಸುವರ್ಚಲಾಮ್ || (ಭೃಗುವಚನ)

"ಜಾತಾಶೌಚವುಳ್ಳವನಿಗೆ ಸೂತಕ ಎಂದು ಹೆಸರು. ಮೃತಾಶೌಚವುಳ್ಳವನಿಗೆ ಪ್ರೇತಕ ಎಂದು ಹೆಸರು. ಇವರಿಬ್ಬರನ್ನು ಮುಟ್ಟಿದರೆ ಮುಟ್ಟಿದ ಕ್ಷಣದಿಂದ ಆರಂಭಿಸಿ ನಾಲ್ಕನೆಯ ದಿನದವರೆಗೆ ಭೋಜನವನ್ನು ಮಾಡಬಾರದು. ನಾಲ್ಕನೆಯ ದಿನದಲ್ಲಿ ಬ್ರಹ್ಮಸುವರ್ಚಲಾ ಎಂಬ ಹಿಂದೆ ಹೇಳಿದ ಲಕ್ಷಣವುಳ್ಳ ಪಂಚಗವ್ಯವನ್ನು ಕುಡಿಯಬೇಕು. ರಜಸ್ವಲೆಯಾಗಿರುವ ಕಾಲದಲ್ಲಿ ಅವರ ಬಂಧುಗಳ ಮರಣ ಸುದ್ದಿಯು ತಿಳಿದರೂ ಇದೇ ಪ್ರಾಯಶ್ಚಿತ್ತವನ್ನೇ ಮಾಡಬೇಕು."

**ಜಾತಾಶೌಚ ಮತ್ತು ಮೃತಾಶೌಚಕಾಲದಲ್ಲಿ ರಜಸ್ವಲೆಯಾದರೆ**

ಶಾವೇ ಚ ಸೂತಕೇ ಚೈವ ಅಂತರಾ ಚೇದೃತುರ್ಭವೇತ್ |
ನಾಸ್ನಾತ್ವಾ ಭೋಜನಂ ಕುರ್ಯಾದ್ಭುಕ್ತ್ವಾ ಚೋಪವಸೇದಹಃ ||

ಜಾತಾಶೌಚ ಮತ್ತು ಮೃತಾಶೌಚದಲ್ಲಿ ಸ್ತ್ರೀಯು ರಜಸ್ವಲೆಯಾದರೆ ಸ್ನಾನವನ್ನು ಮಾಡಿ ಭೋಜನ ಮಾಡಬೇಕು. ಸ್ನಾನ ಮಾಡದೆ ಭೋಜನ ಮಾಡಿದರೆ ಒಂದು ದಿನ ಉಪವಾಸವನ್ನು ಮಾಡಬೇಕು.

ಮೃತಸೂತಕಸಂಪರ್ಕೇ ರಜೋದೃಷ್ಟೌ ಕಥಂ ಭವೇತ್ |
ಬ್ರಾಹ್ಮಣಾನಾಂ ಕರೈರ್ಮುಕ್ತಂ ತೋಯಂ ಶಿರಸಿ ಧಾರಯೇತ್ |
ಸರ್ವತೀರ್ಥಜಲಾಚ್ಛ್ರೇಷ್ಠಂ ತೋಯಂ ವಿಪ್ರಕರಾಚ್ಚ್ಯುತಮ್ ||

ಬ್ರಾಹ್ಮಣರ ಕೈಯಿಂದ ಬಂದಿರುವ ನೀರು ಎಲ್ಲಾ ತೀರ್ಥಗಳ ನೀರಿಗಿಂತ ಉತ್ತಮ. ಮೃತಾಶೌಚವು ಏರ್ಪಟ್ಟಾಗ ರಜಸ್ವಲೆಯಾದರೆ ಬ್ರಾಹ್ಮಣರ ಕೈಯಿಂದ ಬಂದಿರುವ ನೀರನ್ನು ತಲೆಯಲ್ಲಿ ಧರಿಸಬೇಕು. ರೋಗಾದಿಗಳಿಂದ ಸ್ನಾನವನ್ನು ಮಾಡಲು ಸಾಧ್ಯವಿಲ್ಲದವರು ಈ ಶ್ಲೋಕದಲ್ಲಿ ಹೇಳಿದಂತೆ ಮಾಡಬೇಕು. ಸಾಧ್ಯವಿದ್ದವರು ಸ್ನಾನವನ್ನೇ ಮಾಡಬೇಕು.

**ರಜಸ್ವಲೆಯಾಗಿರುವಾಗ ಜಾತಾಶೌಚ ಅಥವಾ ಮೃತಾಶೌಚವು ಏರ್ಪಟ್ಟರೆ**

ಆರ್ತವಾಭಿಪ್ಲುತಾಯಾಸ್ತು ಶಾವಾಶೌಚಂ ಭವೇದ್ಯದಿ |
ಸೂತಕಂ ವಾ ಭವೇನ್ಮಧ್ಯೇ ಸ್ನಾತ್ವಾ ಭೋಜನಮಿಷ್ಯತೇ ||

ರಜಸ್ವಲೆಯಾಗಿರುವಾಗ ಜಾತಾಶೌಚ ಅಥವಾ ಮೃತಾಶೌಚವು ಏರ್ಪಟ್ಟರೆ ಸ್ನಾನವನ್ನು ಮಾಡಿ ಭೋಜನ ಮಾಡಬೇಕು.

ರಜಸ್ವಲಾ ತು ಸಂಸ್ಪೃಷ್ಟಾ ಶ್ವಜಂಬೂಕಖರಾದಿಭಿಃ |
ನಿರಾಹಾರಾ ಭವೇತ್ತಾವದ್ಯಾವತ್ಸ್ನಾತ್ವಾ ಭವೇಚ್ಛುಚಿಃ ||

ರಜಸ್ವಲೆಯು ನಾಯಿ, ನರಿ, ಕತ್ತೆ ಮುಂತಾದ ಪ್ರಾಣಿಗಳಿಂದ ಮುಟ್ಟಲ್ಪಟ್ಟರೆ ನಾಲ್ಕನೇ ದಿನದಲ್ಲಿ ಸ್ನಾನವನ್ನು ಮಾಡುವವರೆಗೂ ಉಪವಾಸವಾಗಿರಬೇಕು. ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿದ ಮೇಲೆ ಶುದ್ಧಳಾಗುವಳು.

**ರಜಸ್ವಲೆಯ ವಸ್ತ್ರ ಪಾತ್ರ ಮುಂತಾದವುಗಳನ್ನು ಮುಟ್ಟಿದರೆ**

"ದ್ವಿಜಃ ಕಾಮಾದುದಕ್ಯಾಂ ಸ್ಪೃಷ್ಟ್ವಾ ಅಸ್ನಾತ್ವಾ ಭುಂಜಾನ ಉಪವಾಸತ್ರಯಂ ಚರೇತ್, ತಚ್ಛಯನಂ ಭುಕ್ತಿಪಾತ್ರಂ ವಾ ಸ್ಪೃಷ್ಟ್ವಾ ಅಸ್ನಾತ್ವಾ ಭುಂಜನ್ನುಪವಾಸೇನ ಶುದ್ಧ್ಯೇತ್, ಮಲಮಯಂ ತದ್ವಾಸಸ್ತದನ್ನಂ ಚ ಸ್ಪೃಷ್ಟ್ವಾ ಅಸ್ನಾತ್ವಾ ಭುಂಜನ್ನುಪವಾಸತ್ರಯಂ ಚರೇತ್. ಉದಕ್ಯಾಪಾತ್ರೇ ಅಜ್ಞಾನಾದ್ಭುಂಜನ್ ಪ್ರಾಜಾಪತ್ಯಂ ಅಭ್ಯಾಸೇ ದ್ವಿಗುಣಂ ಚರೇತ್. ಉದಕ್ಯೋಚ್ಛಿಷ್ಟಂ ಭುಂಜನ್ ಕೃಚ್ಛ್ರಂ ಸಾಂತಪನಂ ಚರೇತ್."

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಜಾತಿಯವರು ಇಚ್ಛೆಯಿಂದ ರಜಸ್ವಲೆಯನ್ನು ಮುಟ್ಟಿ ಸ್ನಾನ ಮಾಡದೆ ಭೋಜನ ಮಾಡಿದರೆ ಮೂರು ದಿನಗಳವರೆಗೆ ಉಪವಾಸ ಮಾಡಬೇಕು. ಮುಟ್ಟಾದವಳ ಹಾಸಿಗೆ ಅಥವಾ ಅವಳು ಭೋಜನ ಮಾಡಿದ ಎಲೆ ಮುಂತಾದವುಗಳನ್ನು ಮುಟ್ಟಿ, ಸ್ನಾನ ಮಾಡದೆ ಊಟ ಮಾಡಿದರೆ ಒಂದು ದಿನ ಉಪವಾಸ ಮಾಡಬೇಕು. ರಜೋರಕ್ತದಿಂದ ಯುಕ್ತವಾದ ಅವಳ ವಸ್ತ್ರವನ್ನೂ, ಅವಳ ಅನ್ನವನ್ನೂ ಮುಟ್ಟಿ, ಸ್ನಾನ ಮಾಡದೆ ಊಟ ಮಾಡಿದರೆ ಮೂರು ದಿನಗಳವರೆಗೆ ಉಪವಾಸವಾಗಿರಬೇಕು. ರಜಸ್ವಲೆಯು ಉಪಯೋಗಿಸಿದ ಪಾತ್ರೆಯಲ್ಲಿ ತಿಳಿಯದೆ ಒಮ್ಮೆ ಭೋಜನ ಮಾಡಿದರೆ ಪ್ರಾಜಾಪತ್ಯಕೃಚ್ಛ್ರವನ್ನು ಮಾಡಬೇಕು. ಎರಡಾವರ್ತಿ ಅಥವಾ ಅದಕ್ಕಿಂತ ಅಧಿಕ ಸಲ ಊಟ ಮಾಡಿದರೆ ಎರಡು ಪ್ರಾಜಾಪತ್ಯ ಕೃಛ್ರವನ್ನು ಮಾಡಬೇಕು. ರಜಸ್ವಲೆಯ ಎಂಜಲನ್ನು ತಿಂದರೆ ಸಾಂತಪನಕೃಛ್ರವ್ರತವನ್ನು ಮಾಡಬೇಕು.

**ಕನ್ಯೆಯು ಪ್ರಥಮ ಋತುಮತಿಯಾದಾಗ ಮಾಡಬೇಕಾದ ಕರ್ತವ್ಯ**

ಕನ್ಯಾಯಾಮಪಿ ಚೇಚ್ಛಾಯಾ ಆರ್ತವೇ ಪ್ರಥಮೇ ಸತಿ |
ಅಕ್ಷತೈರಾಸನ್ನೈಃ ಕ್ಲೃಪ್ತೈಃ ಸದೀಪೈರ್ವಾಸಯೇತ್ಸ್ತ್ರಿಯಮ್ ||
ಅಪೂಪಂ ಲವಣಂ ಮುದ್ಗಂ ಗುಡಮಿಶ್ರಂ ತಥಾ ಹವಿಃ |
ದದ್ಯಾದ್ಬ್ರಾಹ್ಮಣಪತ್ನೀಭ್ಯಃ ||

ಕನ್ಯೆಯರಲ್ಲಿ ಮೊಟ್ಟ ಮೊದಲು ಋತುಮತಿಯಾದ ಲಕ್ಷಣವು ತಿಳಿದರೆ ಅವರನ್ನು ಮಣೆಯಲ್ಲಿ ಕುಳ್ಳಿರಿಸಬೇಕು. ಆ ಮಣೆಯು ಒಡಕಾಗಿರದೆ ಶುದ್ಧವಾಗಿರಬೇಕು. ಮತ್ತು ನಾಲ್ಕು ದಿನಗಳಲ್ಲಿಯೂ ಒಂದೇ ಆಸನವನ್ನು ಕುಳ್ಳಿರಿಸಬೇಕು. ನಾಲ್ಕು ದಿನಗಳವರೆಗೂ ಅವರು ಇರುವ ಸ್ಥಳದಲ್ಲಿ ದೀಪವನ್ನಿಡಬೇಕು. ಆರತಿಯನ್ನು ಮಾಡಬೇಕು. ಸುಮಂಗಲಿಯರಾದ ಬ್ರಾಹ್ಮಣಸ್ತ್ರೀಯರಿಗೆ ಅಪೂಪ, ಉಪ್ಪು, ಹೆಸರು, ಬೆಲ್ಲಮಿಶ್ರಿತವಾದ ಎಳ್ಳು ಮುಂತಾದ ವಸ್ತುಗಳನ್ನು ಕೊಡಬೇಕು. ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿಸಬೇಕು.

## ರಾತ್ರಿಯಲ್ಲಿ ರಜಸ್ವಲೆಯಾದರೆ ದಿನಗಣನೆ

ರಾತ್ರೌ ತೃತೀಯಭಾಗಾತ್ಪ್ರಾಗ್ಯದಿ ವಾಸಸಿ ಯೋಷಿತಾಮ್ |
ಮಲಂ ಸ್ಯಾಚ್ಚೇತ್ತ್ರಿಭಾಗೇನ ಪೂರ್ವೇಣಾಹ್ನಾ ತು ಶುದ್ಧ್ಯತಿ || (ಅತ್ರಿವಚನ)

ಹಗಲಿನಲ್ಲಿ ರಜಸ್ವಲೆಯಾದರೆ ಅಂದಿನಿಂದ ಆರಂಭಿಸಿ ನಾಲ್ಕನೆಯ ದಿನದಲ್ಲಿ ಸ್ನಾನ ಮಾಡಿದರೆ ಶುದ್ಧಿಯು ಏರ್ಪಡುತ್ತದೆ. ರಾತ್ರಿಯಲ್ಲಿ ಏರ್ಪಟ್ಟರೆ ಕೆಳಗಿನಂತೆ ನಿರ್ಣಯಿಸಬೇಕು. ಮೂರು ವಿಭಾಗವಾಗಿ ವಿಂಗಡಿಸಲ್ಪಟ್ಟ ರಾತ್ರಿಯ ಮೊದಲನೆಯ ಎರಡು ಭಾಗಗಳಲ್ಲಿ ರಜಸ್ವಲೆಯಾದರೆ ಮರುದಿನ ಸೂರ್ಯೋದಯದಿಂದ ಮೂರನೆಯ ದಿನದಲ್ಲಿ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ರಾತ್ರಿಯ ಮೂರನೆಯ ಭಾಗವು ಆರಂಭಿಸಿದ ಮೇಲೆ ಶುದ್ಧಿಯು ಏರ್ಪಡುತ್ತದೆ. ಸೂರ್ಯಾಸ್ತಮಾನಕಾಲದಿಂದ ಆರಂಭಿಸಿ ಮರುದಿನ ಸೂರ್ಯೋದಯದವರೆಗಿನ ಕಾಲವು ರಾತ್ರಿಕಾಲವೆನಿಸುತ್ತದೆ. ಈ ರಾತ್ರಿ ಕಾಲದ ಪ್ರಮಾಣವನ್ನು ಮೂರು ಭಾಗವಾಗಿ ವಿಂಗಡಿಸಬೇಕು. ಈ ಮೂರು ಭಾಗಗಳಲ್ಲಿ ಕೊನೆಯ ಭಾಗದಲ್ಲಿ ರಜಸ್ವಲೆಯಾದರೆ ಮರುದಿನದಲ್ಲಿಯೇ ರಜಸ್ವಲೆಯಾದಂತೆ ತಿಳಿಯಬೇಕು. ಮರುದಿನದಿಂದ ನಾಲ್ಕನೆಯ ದಿನದಲ್ಲಿ ಬೆಳಗ್ಗೆ ಸ್ನಾನ ಮಾಡಿದರೆ ಶುದ್ಧಿಯು ಏರ್ಪಡುತ್ತದೆ. ಮೊದಲನೆಯ ಎರಡು ಭಾಗಗಳಲ್ಲಿ ರಜಸ್ವಲೆಯಾದರೆ ಹಿಂದಿನ ದಿನದಲ್ಲಿಯೇ ರಜಸ್ವಲೆಯಾದಂತೆ ತಿಳಿಯಬೇಕು. ಹಿಂದಿನ ದಿನದಿಂದ ನಾಲ್ಕನೆಯ ದಿನದಲ್ಲಿ ಬೆಳಗ್ಗೆ ಸ್ನಾನ ಮಾಡಿದರೆ ಶುದ್ಧಿಯು ಏರ್ಪಡುತ್ತದೆ. ಉದಾಹರಣೆ - ಸೂರ್ಯಾಸ್ತಮಾನ 6 ಗಂ. 30 ನಿ. ಸೂರ್ಯೋದಯ 5 ಗಂ. 30 ನಿ. ಹೀಗೆ ಇದ್ದಾಗ ಸೂರ್ಯಾಸ್ತಮನದಿಂದ ಸೂರ್ಯೋದಯದವರೆಗಿನ ಕಾಲವು 11 ಗಂಟೆಗಳಾಗುತ್ತವೆ. ಇದೇ ರಾತ್ರಿ ಪ್ರಮಾಣವೆನಿಸುತ್ತದೆ. ಇದನ್ನು ಮೂರು ವಿಭಾಗ ಮಾಡಿದಾಗ 3 ಗಂ. 40 ನಿಮಿಷಗಳಿಗೆ ಒಂದೊಂದು ಭಾಗವು ಏರ್ಪಡುತ್ತದೆ. ಈ ಮೂರು ಭಾಗಗಳಲ್ಲಿ ಮೊದಲನೆಯ ಎರಡು ಭಾಗಗಳನ್ನು ಒಟ್ಟುಗೂಡಿದರೆ 7ಗಂ. 20 ನಿಮಿಷಗಳಾಗುತ್ತವೆ. ಈ 7 ಗಂ. 20 ನಿಮಿಷಗಳನ್ನು ಸೂರ್ಯಾಸ್ತಮಾನ ಕಾಲವಾದ 6 ಗಂ. 30 ನಿಮಿಷಗಳಲ್ಲಿ ಕೂಡಿಸಿದರೆ ರಾತ್ರಿ 1 ಗಂ. 50 ನಿಮಿಷಗಳಾಗುತ್ತವೆ. ಈ ಸಮಯದಲ್ಲಿ ರಾತ್ರಿಯ ಎರಡು ಭಾಗಗಳು ಮುಗಿದು ಮೂರನೆಯ ಭಾಗದ ಆರಂಭವಾಗುತ್ತದೆ. ಈ ದಿನದಲ್ಲಿ ರಾತ್ರಿ 1 ಗಂ. 50 ನಿಮಿಷಗಳಿಗಿಂತ ಪೂರ್ವದಲ್ಲಿ ರಜಸ್ವಲೆಯಾದರೆ ಹಿಂದಿನ ದಿನದಲ್ಲಿಯೂ, ಅನಂತರದಲ್ಲಿ ರಜಸ್ವಲೆಯಾದರೆ ಮರುದಿನದಲ್ಲಿಯೂ ರಜಸ್ವಲೆಯಾದಂತೆ ಭಾವಿಸಬೇಕು.

ಪಂಚಾಂಗದಲ್ಲಿ ಅಂದಂದು ಬರೆದಿರುವ ಮಂತ್ರಾಲಯದ ಉದಯಾಸ್ತಕಾಲಗಳಿಂದ ಅಲ್ಲಿ ಬರೆದಿರುವ ಕೋಷ್ಟಕಗಳನ್ನು ಅರ್ಥ ಮಾಡಿಕೊಂಡು ತಮ್ಮ ತಮ್ಮ ಊರುಗಳ ಅಥವಾ ಅದಕ್ಕೆ ಸಮೀಪದಲ್ಲಿರುವ ಊರುಗಳ ಉದಯಾಸ್ತ ಕಾಲಗಳನ್ನು ತಿಳಿದುಕೊಂಡು ಮೇಲ್ಕಂಡ ಶ್ಲೋಕದಲ್ಲಿ ಹೇಳಿದಂತೆ ರಜಸ್ವಲೆಯಾಗುವ ಕಾಲದಿಂದ ರಜಸ್ವಲೆಯಾದ ದಿನವು ಹಿಂದಿನ ದಿನವೇ ಮುಂದಿನ ದಿನವೇ ಎಂದು ತೀರ್ಮಾನಿಸಬೇಕು.

ತೃತೀಯಭಾಗೇ ಸಂಪ್ರಾಪ್ತೇ ಮಲಂ ಸ್ಯಾನ್ನಿಶಿ ಚೇತ್ಸ್ತ್ರಿಯಃ |
ಪ್ರಭಾತಾದಿತ್ರಿರಾತ್ರಂ ಸ್ಯಾದಶುಚಿರ್ವರವರ್ಣಿನೀ || (ಪ್ರಜಾಪತಿವಚನ)

ಮೂರು ಭಾಗವಾಗಿ ವಿಂಗಡಿಸಲ್ಪಟ್ಟ ರಾತ್ರಿಯ ಮೂರನೆಯ ಭಾಗದಲ್ಲಿ ರಜಸ್ವಲೆಯಾದರೆ ಅಂದಿನ ದಿನದ ಅರುಣೋದಯಕಾಲದಿಂದ ಆರಂಭಿಸಿ ಮೂರು ದಿನಗಳು ಮುಗಿಯುವವರೆಗೆ ಅಶುಚಿಯಾಗಿರುವಳು. ಅಂದರೆ ಮರುದಿನದಿಂದ ನಾಲ್ಕನೆಯ ದಿನದಲ್ಲಿ ಸೂರ್ಯೋದಯಕ್ಕಿಂತ ಪೂರ್ವದಲ್ಲಿ, ರಾತ್ರಿಯ ಮೂರನೆಯ ಭಾಗವು ಆರಂಭವಾದ ಮೇಲೆ ಶುದ್ಧಿಯು ಏರ್ಪಡುತ್ತದೆ. ಇದು ಪ್ರಜಾಪತಿಯ ವಚನ.

ರಜೋ ದೃಷ್ಟ್ವಾ ತು-ರಾತ್ರೌ ಚೇದ್ವಿಭಜ್ಯೈವ ತ್ರಿಧಾ ನಿಶಾಮ್ |
ಪೂರ್ವಭಾಗದ್ವಯೇ ಪೂರ್ವಮೂರ್ಧ್ವಂ ಚೇದುತ್ತರೇऽಹನಿ || (ಯಮವಚನ)

"ರಾತ್ರಿಯಲ್ಲಿ ರಜಸ್ವಲೆಯಾದರೆ ರಾತ್ರಿಯ ಪ್ರಮಾಣವನ್ನು ಮೂರು ಭಾಗವಾಗಿ ವಿಂಗಡಿಸಿ, ಮೊದಲನೆಯ ಎರಡು ಭಾಗಗಳಲ್ಲಿ ರಜಸ್ವಲೆಯಾದರೆ ಮೊದಲನೆಯ ದಿನದಲ್ಲಿಯೂ, ಕೊನೆಯ ಭಾಗದಲ್ಲಿ ರಜಸ್ವಲೆಯಾದರೆ ಮರು ದಿನದಲ್ಲಿಯೂ, ರಜಸ್ವಲೆಯಾದಂತೆ ತಿಳಿಯಬೇಕು." ಇದು ಯಮನ ವಚನ.

"ಕೇಚಿತ್ತು ಸೂರ್ಯೋದಯಪರ್ಯಂತಂ ರಾತ್ರೌ ರಜೋದರ್ಶನೇ ಪೂರ್ವದಿನಮೇವ ಗ್ರಾಹ್ಯಮಿತ್ಯಾಹುಃ" (ಸ್ಮೃತಿಮುಕ್ತಾವಲೀಕಾರರ ವಚನ)

ರಾತ್ರಾವೇವ ಸಮುತ್ಪನ್ನೇ ಮೃತೇ ರಜಸಿ ಸೂತಕೇ |
ಪೂರ್ವಮೇವ ದಿನಂ ಗ್ರಾಹ್ಯಂ ಯಾವನ್ನೋದಯತೇ ರವಿಃ ||

"ಮರಣ, ಪ್ರಸವ, ಮುಟ್ಟಾಗುವಿಕೆ ಇವುಗಳು ರಾತ್ರಿಯಲ್ಲಿ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಯಾವಾಗ ಏರ್ಪಟ್ಟರೂ ಹಿಂದಿನ ದಿನವೇ ಮೊದಲನೆಯ ದಿನವೆಂದು ತಿಳಿಯಬೇಕು. ಹಿಂದೆ ಹೇಳಿದ ಅತ್ರಿ, ಪ್ರಜಾಪತಿ, ಯಮ ಆ ಮೂವರ ವಚನಗಳಂತೆ ರಾತ್ರಿಯ ಪ್ರಮಾಣವನ್ನು ಮೂರು ವಿಧವಾಗಿ ವಿಂಗಡಿಸಿ ತಿಳಿಯಬೇಕಾಗಿಲ್ಲ." ಈ ವಾಕ್ಯದಲ್ಲಿ ಹೇಳಿರುವ ಅರ್ಥವನ್ನು ಸ್ಮೃತಿಮುಕ್ತಾವಲೀಕಾರರು ತನ್ನ ಸ್ವಂತ ವಾಕ್ಯಗಳಿಂದಲೂ ಹೇಳಿರುತ್ತಾರೆ. ಇದು ರಾತ್ರಿಯಲ್ಲಿ ರಜಸ್ವಲೆಯಾದಾಗ ನಿರ್ಣಯ ಮಾಡುವ ವಿಷಯದಲ್ಲಿ ಎರಡನೆಯ ಮತವಾಗಿದೆ.

ಅನ್ಯೇ ತು - ಅರ್ಧರಾತ್ರಾದಧಸ್ತಾಚ್ಚೇತ್ಸೂತಕೇ ಮೃತಕೇऽಪಿ ವಾ |
ಪೂರ್ವಮೇವ ದಿನಂ ಗ್ರಾಹ್ಯಮೂರ್ಧ್ವಂ ಚೇದುತ್ತರೇऽಹನಿ || ಇತ್ಯಾಹುಃ |
ಅತ್ರ ಸ್ಮೃತೀನಾಂ ಸಮಬಲತ್ವಾದ್ದೇಶಾಚಾರಾದ್ವ್ಯವಸ್ಥಾ ಜ್ಞೇಯಾ | (ಸ್ಮೃತಿಮುಕ್ತಾವಲೀವಚನ)

"ಅರ್ಧರಾತ್ರಿಗಿಂತ ಪೂರ್ವದಲ್ಲಿ ಮರಣ ಪ್ರಸವ ಏರ್ಪಟ್ಟರೆ ಹಿಂದಿನ ದಿನವೂ, ಅನಂತರದಲ್ಲಿ ಏರ್ಪಟ್ಟರೆ ಮರುದಿನವೂ, ಮೊದಲನೆಯ ದಿನವೆಂದು ತಿಳಿಯಬೇಕು." ಇದು ಮೂರನೆಯ ಮತವಾಗಿದೆ. (ಈ ವಾಕ್ಯದಲ್ಲಿ ರಜಸ್ವಲೆಯ ವಿಚಾರವು ಹೇಳಿಲ್ಲ. ಅತ್ರಿವಚನದಲ್ಲಿ ಜಾತಾಶೌಚ ಮತ್ತು ಮೃತಾಶೌಚಗಳ ವಿಚಾರ ಹೇಳಿಲ್ಲ. ಆದರೂ 'ರಾತ್ರಾವೇವ ಸಮುತ್ಪನ್ನೇ' ಎಂಬ ಎರಡನೆಯ ಪ್ರಮಾಣವಾಕ್ಯದಲ್ಲಿ ಜಾತಾಶೌಚ, ಮೃತಾಶೌಚ, ಮುಟ್ಟಾಗುವಿಕೆ ಈ ಮೂರನ್ನೂ ಒಂದೇ ದರ್ಜೆಗೆ ಸೇರಿಸುವುದರಿಂದ ಉಳಿದ ಎರಡು ವಾಕ್ಯಗಳಲ್ಲಿಯೂ ಈ ಮೂರನ್ನೂ ಸಮವಾಗಿ ಸ್ವೀಕರಿಸಬೇಕೆಂದು ಸ್ಮೃತಿಮುಕ್ತಾವಲೀಕಾರರು ಅಭಿಪ್ರಾಯಪಟ್ಟಿರುವರು.)

"ಹಿಂದೆ ಹೇಳಿದ ಮೂರು ಆಚಾರಗಳೂ ಸ್ಮೃತಿಗಳಿಂದ ಸಿದ್ಧವಾಗಿವೆ. ಈ ಎಲ್ಲಾ ಸ್ಮೃತಿಗಳಿಗೂ ಬಲವು ಸಮವಾಗಿದೆ. ಆದ್ದರಿಂದ ಈ ಮೂರು ವಿಧವಾದ ಆಚಾರಗಳೂ ಶಾಸ್ತ್ರಸಮ್ಮತವಾಗಿವೆ. ಈ ಮೂರು ಆಚಾರಗಳಲ್ಲಿ ಯಾವ ಆಚಾರವು ಯಾವ ದೇಶದಲ್ಲಿ ಪರಂಪರೆಯಿಂದ ಬಂದಿರುತ್ತದೋ ಆ ದೇಶದವರು ಆ ಆಚಾರದಂತೆ ನಡೆದುಕೊಳ್ಳಬೇಕು." (ಇದು ಸ್ಮೃತಿಮುಕ್ತಾವಲೀಕಾರರ ತೀರ್ಮಾನ)

### ರಜಸ್ವಲೆಯಾದ ಸ್ತ್ರೀಯು ಪುನಃ ರಜಸ್ವಲೆಯಾಗುವ ದಿನದಿಂದ ಅವಳ ಶುದ್ಧಿ ವಿಚಾರ

ಅತ್ರಿಃ ಶುದ್ಧಿಕ್ರಮಂ ಪ್ರಾಹ ರಜಸೋ ದರ್ಶನೇ ಪುನಃ |
ರಜಸ್ವಲಾ ಯದಿ ಸ್ನಾತ್ವಾ ಪುನರೇವ ರಜಸ್ವಲಾ ||
ಅಷ್ಟಾದಶದಿನಾದರ್ವಾಗಶುಚಿತ್ವಂ ನ ವಿಂದತಿ |
ಏಕೋನವಿಂಶತೇರರ್ವಾಗೇಕಾಹಂ ಸ್ಯಾತ್ತತೋ ದ್ವ್ಯಹಮ್ ||
ವಿಂಶತ್ಪ್ರಭೃತ್ಯುತ್ತರೇಷು ತ್ರಿರಾತ್ರಮಶುಚಿರ್ಭವೇತ್ || ಇತಿ ||

"ರಜಸ್ವಲೆಯು ಸ್ನಾನವನ್ನು ಮಾಡಿದ ಮೇಲೆ ಹದಿನೆಂಟು ದಿನಗಳೊಳಗೆ ಪುನಃ ರಜಸ್ವಲೆಯಾದರೆ ಅಶುಚಿಯಾಗುವುದಿಲ್ಲ. ಹತ್ತೊಂಭತ್ತು ದಿನಗಳೊಳಗೆ ರಜಸ್ವಲೆಯಾದರೆ ಒಂದು ದಿನ ಹೊರಗಿದ್ದು ಎರಡನೇ ದಿನದಲ್ಲಿ ಸ್ನಾನವನ್ನು ಮಾಡಿದರೆ ಶುದ್ಧಿಯಾಗುತ್ತದೆ. ಇಪ್ಪತ್ತು ದಿನಗಳೊಳಗೆ ರಜಸ್ವಲೆಯಾದರೆ ಎರಡು ದಿನಗಳವರೆಗೆ ಹೊರಗಿದ್ದು ಮೂರನೆಯ ದಿನದಲ್ಲಿ ಸ್ನಾನವನ್ನು ಮಾಡಬೇಕು. ಇಪ್ಪತ್ತು ದಿನಗಳಿಗಿಂತ ಅಧಿಕದಿನಗಳಾದ ಮೇಲೆ ರಜಸ್ವಲೆಯಾದರೆ ಮೂರು ದಿನಗಳವರೆಗೆ ಹೊರಗಿದ್ದು ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿದ ಮೇಲೆ ಶುದ್ಧಿಯು ಏರ್ಪಡುತ್ತದೆ." (ಇದು ಅತ್ರಿಋಷಿಗಳು ಹೇಳಿರುವುದು.)

ಅಜಸ್ರಸ್ರಾವವಿಷಯೇ ಸ ಏವ ಪುನರಬ್ರವೀತ್ |
ಭವೇದ್ವಿಂಶದ್ದಿನಾದರ್ವಾಗ್ಯದಿ ನಿತ್ಯಂ ರಜಃಸ್ರವಃ ||
ಏಕಾದಶದಿನಾದರ್ವಾಗಶುಚಿತ್ವಂ ನ ವಿದ್ಯತೇ |
ಏಕಾದಶದಿನೇ ದೃಷ್ಟ್ವಾ ಏಕಾಹಂ ದ್ವಾದಶೇಽಹನಿ ||
ದ್ವಿರಾತ್ರಂ ತು ತತಃ ಪಶ್ಚಾತ್ತ್ರಿರಾತ್ರಮಿತಿ ನಿಶ್ಚಯಃ |

ಎಡೆಬಿಡದೆ ಒಂದೊಂದು ದಿನದಲ್ಲಿಯೂ ರಜಸ್ಸು ಹೋಗುತ್ತಿದ್ದರೆ ಈ ವಿಷಯದಲ್ಲಿ ಅತ್ರಿ ಋಷಿಗಳು ಕೆಳಗಣ ತೀರ್ಮಾನವನ್ನು ತಿಳಿಸಿರುತ್ತಾರೆ. ರಜಸ್ವಲೆಯಾಗಿ ಇಪ್ಪತ್ತು ದಿನಗಳೊಳಗೆ ಎಡೆಬಿಡದೆ ಹತ್ತು ದಿನಗಳು ಮತ್ತು ಅದಕ್ಕಿಂತ ಕಡಿಮೆ ದಿನಗಳಲ್ಲಿ ರಜಸ್ಸು ಹೋಗುತ್ತಿದ್ದರೆ ಮೈಲಿಗೆಯಲ್ಲ. ಹನ್ನೊಂದು ದಿನಗಳವರೆಗೆ ಹೋಗುತ್ತಿದ್ದರೆ ಒಂದು ದಿನವೂ ಹನ್ನೆರಡು ದಿನಗಳವರೆಗೆ ಹೋಗುತ್ತಿದ್ದರೆ ಎರಡು ದಿನಗಳೂ ಅದಕ್ಕಿಂತ ಹೆಚ್ಚಿನ ದಿನಗಳವರೆಗೆ ಹೋಗುತ್ತಿದ್ದರೆ ಮೂರು ದಿನಗಳೂ ಅಶುಚಿಯಾಗುತ್ತಾಳೆ.

### ರೋಗ ಮುಂತಾದ ನಿಮಿತ್ತಗಳಿಂದ ರಜಸ್ವಲೆಯಾದರೆ

ಯದಿ ರೋಗಾದಿನಾ ಜ್ಞಾತೇ ಅರ್ವಾಗ್ಜ್ಞಾತೇ ಚ ದರ್ಶನಾತ್ |
ಸ್ರಾವಾದ್ವಾಶೌಚಮುದ್ದಿಷ್ಟಂ ಜ್ಞಾನಾತ್ತು ಜನನಾದಿಷು ||
ಸಾರ್ತವಾ ರಜಸೋಽಭ್ಯಾಸಾ ನಾಶುಚಿರ್ನ ಚ ಮೈಥುನೀ |

(1) ರೋಗದಿಂದ ರಜಸ್ಸು ತಿಳಿದರೆ (2) ರಜಸ್ಸಿನ ಕಾಲ ಅಂದರೆ ಹದಿನೆಂಟು ದಿನಗಳಿಗಿಂತ ಪೂರ್ವದಲ್ಲಿ ರಜಸ್ಸು ತಿಳಿದರೆ (3) ಬಿಟ್ಟು ಬಿಟ್ಟು ಸಮೀಪ ದಿನಗಳಲ್ಲಿ ರಜಸ್ಸು ಏರ್ಪಡುತ್ತಿದ್ದರೆ (4) ರತಿಕ್ರೀಡೆಯ ಕಾಲದಲ್ಲಿ ರತಿಕ್ರೀಡೆಯ ನಿಮಿತ್ತದಿಂದ ರಜಸ್ಸು ಏರ್ಪಟ್ಟರೆ ಅಶುದ್ಧಳಾಗುವುದಿಲ್ಲ. ಗರ್ಭಸ್ರಾವ ಪ್ರಸವ ಮುಂತಾದವುಗಳು ಏರ್ಪಟ್ಟಾಗ ಅದರ ನಿಮಿತ್ತದಿಂದ ರಜಸ್ವಲೆಯಾದರೆ ಗರ್ಭಸ್ರಾವ, ಪ್ರಸವ ಮುಂತಾದವುಗಳಿಗೆ ಹೇಳಿರುವ ಕಾಲದವರೆಗೆ ಅಶುಚಿಯಾಗಿರುವಳು. ಆ ಸಂದರ್ಭದಲ್ಲಿ ಮೂರುದಿನಗಳವರೆಗೆ ಮೈಲಿಗೆ ಎಂಬ ನಿಯಮವಿಲ್ಲ. ಅದಕ್ಕಿಂತ ಅಧಿಕಕಾಲವೂ ಆಗುವುದುಂಟು.

### ರೋಗ ಮತ್ತು ಕಾಲಗಳಲ್ಲಿ ಏರ್ಪಡುವ ರಜಸ್ಸು

ರೋಗಜೇ ವಿದ್ಯಮಾನೇಽಪಿ ಕಾಲಜಂ ಹಿ ಯದಾ ಭವೇತ್ |
ಸ್ನಾತವ್ಯಂ ಸಾವಧಾನೇನ ಅತ್ರಿಃ ಸಮ್ಯಕ್ಸಮಬ್ರವೀತ್ ||
ರೋಗಜೇ ವಿದ್ಯಮಾನೇಽಪಿ ಕಾಲೇ ನಿರ್ಯಾತಿ ಕಾಲಜಮ್ |
ತಸ್ಮಾತ್ಕಾಲೇಽಪ್ರಮತ್ತಾ ಸ್ಯಾದನ್ಯಥಾ ಸಂಕರೋ ಭವೇತ್ ||

"ರೋಗದಿಂದ ರಜಸ್ವಲೆಯಾದರೆ ಮೈಲಿಗೆಯಿಲ್ಲವೆಂದೂ, ರಜಸ್ವಲೆಯಾಗುವ ಕಾಲದಲ್ಲಿ ರಜಸ್ವಲೆಯಾದರೆ ಮೈಲಿಗೆ ಇದೆಯೆಂದೂ ಹಿಂದೆ ತಿಳಿಸಿರುವೆವು. ರೋಗದಿಂದ ರಜಸ್ಸು ಹೋಗುತ್ತಿರುವಾಗಲೇ ರಜಸ್ವಲೆಯಾಗುವ ಕಾಲವು ಬಂದರೆ ಕಾಲನಿಮಿತ್ತದಿಂದಲೂ ರಜಸ್ಸು ಹೋಗುತ್ತದೆ. ಈ ಎರಡು ರಜಸ್ಸುಗಳೂ ಏಕಕಾಲದಲ್ಲಿ ಏರ್ಪಡುವುದರಿಂದ ಆಗ ಆ ಸ್ತ್ರೀಯು ಅಶುದ್ಧಳಾಗುವಳು. ಆದ್ದರಿಂದ ರೋಗದಿಂದ ರಜಸ್ಸು ಬರುತ್ತಿದ್ದರೆ ತಾನು ಮೈಲಿಗೆಯಲ್ಲವೆಂದು ಅವಳು ಯಾವಾಗಲೂ ತಿಳಿಯಬಾರದು. ರಜಸ್ವಲೆಯಾಗುವ ಕಾಲವು ಬಂದಕೂಡಲೇ ರೋಗದಿಂದ ಯಾವಾಗಲೂ ಏರ್ಪಡುವ ರಜಸ್ಸಿಗಿಂತ ವ್ಯತ್ಯಾಸವು ಕಂಡರೆ 'ಈ ರಜಸ್ಸು ಬರೇ ರೋಗದಿಂದ ಬಂದಿಲ್ಲ. ಕಾಲನಿಮಿತ್ತದಿಂದ ಬಂದಿರುತ್ತದೆ' ಎಂದು ತೀರ್ಮಾನಿಸಬೇಕು. ಹಾಗೆ ತೀರ್ಮಾನಿಸಿ ಮೂರು ದಿನಗಳವರೆಗೆ ಹೊರಗೆ ಕೂಡಬೇಕು. ಹಾಗೆ ಮಾಡದೆ ಬರೇ ರೋಗದ ರಜಸ್ಸು ಎಂದು ಭ್ರಮಿಸಿ ಮೈಲಿಗೆಯನ್ನು ಅನುಷ್ಠಾನ ಮಾಡದವಳು ತಾನೂ ಅಶುದ್ಧಳಾಗಿ ಸರ್ವರನ್ನೂ ಅಶುದ್ಧರಾಗುವಂತೆ ಮಾಡಿದ ದೋಷಕ್ಕೆ ಗುರಿಯಾಗುವಳು."

### ರಜಸ್ಸಿನ ಲಕ್ಷಣ

ವೈಷಮ್ಯಮುಭಯೋಃ ಪ್ರಾಹ ಋಷಿರತ್ರಿಃ ಸ ಏವ ಹಿ |
ಅಕಾಲೇ ಯದ್ಭವೇತ್ಸ್ತ್ರೀಣಾಂ ರಕ್ತಂ ಪ್ರಾಹುರ್ಮನೀಷಿಣಃ ||
ಕಾಲಜಂ ತು ರಜಃ ಪ್ರೋಕ್ತಂ ತಸ್ಮಾತ್ತತ್ರೈವ ಸಾಽಶುಚಿಃ |

"ಅದೇ ಅತ್ರಿ ಋಷಿಗಳು ರೋಗ ಮುಂತಾದವುಗಳಿಂದ ಏರ್ಪಡುವ ರಜಸ್ಸಿಗೂ ಕಾಲದಲ್ಲಿ ಏರ್ಪಡುವ ರಜಸ್ಸಿಗೂ ವ್ಯತ್ಯಾಸವನ್ನು ಹೇಳಿರುವರು. ಸ್ತ್ರೀಯರಿಗೆ ಮುಟ್ಟಾಗುವ ಕಾಲವನ್ನು ಬಿಟ್ಟು, ಅಂದರೆ ಹದಿನೆಂಟು ದಿನಗಳೊಳಗೆ ಬರುವ ರಜಸ್ಸಿಗೆ 'ರಕ್ತ' ಎಂದು ಹೆಸರು. ಸರಿಯಾದ ಕಾಲದಲ್ಲಿ ಬರುವ ರಜಸ್ಸಿಗೆ ರಜಸ್ಸು ಎಂದು ಹೆಸರು. ಈ ರಜಸ್ಸಿನಿಂದ ಯುಕ್ತಳಾಗಿರುವವಳೇ ರಜಸ್ವಲೆಯೆನಿಸುವಳು. ಇವಳೇ ಅಶುದ್ಧಳಾಗುವಳು. ರಕ್ತವು ಬರುತ್ತಿರುವಾಗ ಅವಳು ರಜಸ್ವಲೆಯೆನಿಸುವುದಿಲ್ಲ. ಅಶುದ್ಧಳೂ ಆಗುವುದಿಲ್ಲ."

### ರಜಸ್ಸಿನಲ್ಲಿ ನಾಲ್ಕು ವಿಧ

ಸ್ಮೃತ್ಯಂತರೇ ರಜೋಭೇದಃ ಸ್ಪಷ್ಟಮೇವ ಪ್ರದರ್ಶಿತಃ |
ರಾಗಜಂ ರೋಗಜಂ ಚೈವ ದ್ರವ್ಯಜಂ ಕಾಲಜಂ ತಥಾ || (ಸ್ಮೃತ್ಯಂತರ ವಚನ)

"ಈ ರಜಸ್ಸು ಹೊರಡುವುದು ನಾಲ್ಕು ವಿಧವಾಗಿದೆ. (1) ಆಸೆಯಿಂದ ಹೊರಡುವುದು. (2) ರೋಗದಿಂದ ಹೊರಡುವುದು. (3) ದ್ರವ್ಯನಿಮಿತ್ತದಿಂದ ಹೊರಡುವುದು. (4) ಕಾಲನಿಮಿತ್ತದಿಂದ ಹೊರಡುವುದು." ಹೀಗೆ ಸ್ಮೃತ್ಯಂತರದಲ್ಲಿ ಹೇಳಿರುತ್ತದೆ.

### ಅವುಗಳ ಲಕ್ಷಣ

ಲಕ್ಷಣಾನಿ ತಥಾ ತೇಷಾಂ ಕ್ರಮೇಣಾತ್ರ ಪ್ರದರ್ಶ್ಯತೇ |
ಯದ್ರಾಗರೋಗದ್ರವ್ಯೋತ್ಥಂ ತದ್ರಕ್ತಂ ಪ್ರಾಹ ಭಾರ್ಗವಃ ||

ಗರ್ಭಿಣ್ಯಾ ಗರ್ಭದೋಷೇಣ ಶೋಣಿತಂ ಯದ್ವಿನಿಸ್ಸೃತಮ್ |
ತದ್ರಾಗಜಮಿತಿ ಪ್ರಾಹ ಗರ್ಭದೋಷಸ್ಯ ಕಾರಣಮ್ ||
ಪಿತ್ತಾದಿದೋಷವೈಷಮ್ಯಾದಸೃಕ್ಚ ಪ್ರವರ್ತತೇ |
ರೋಗಜಂ ತತ್ಸಮುದ್ದಿಷ್ಟಮಥ ದ್ರವ್ಯಜಮುಚ್ಯತೇ ||
ದ್ರವ್ಯಜಂ ಧಾತು ವೈಷಮ್ಯಾದ್ಧೇತುದ್ರವ್ಯೋಪಭೋಗಜಮ್ |
ಆರಭ್ಯ ಚಾರ್ತವದಿನಾದೇಕವಿಂಶತಿವಾಸರಮ್ ||
ಮಾಸಾದೂರ್ಧ್ವಂ ರಜೋ ಯತ್ಸ್ಯಾತ್ತತ್ಕಾಲಜಮುದಾಹೃತಮ್ ||

"ಹಿಂದೆ ಹೇಳಿರ ನಾಲ್ಕು ವಿಧವಾದ ರಜಸ್ಸಿನ ಲಕ್ಷಣವನ್ನು ಭಾರ್ಗವ ಮುನಿಗಳು ಹೇಳಿರುವರು. ಅದನ್ನು ಈಗ ತಿಳಿಸುತ್ತೇವೆ. ನಾಲ್ಕು ವಿಧವಾದ ರಜಸ್ಸುಗಳಲ್ಲಿ ರಾಗಜ, ರೋಗಜ, ದ್ರವ್ಯಜ ಎಂಬ ಮೂರರಲ್ಲಿ ಬರುವ ರಜಸ್ಸನ್ನು 'ರಕ್ತ' ಎಂದು ಭೃಗುಮುನಿಯು ಹೇಳಿರುವರು. ಅದು ಅಶುದ್ಧಿಕರವಲ್ಲ. ನಾಲ್ಕನೆಯದು ರಜಸ್ಸು ಎಂದು ಹೇಳಲ್ಪಡುತ್ತದೆ. ಅದು ಅಶುದ್ಧಿಗೆ ಕಾರಣವಾಗುತ್ತದೆ. (1) ಗರ್ಭಿಣಿಯಾದವಳಿಗೆ ಗರ್ಭದಲ್ಲಿರುವ ದೋಷ ಮತ್ತು ಬಯಕೆಯಿಂದ ರಕ್ತವು ಬರುವುದುಂಟು. ಇದು ರಾಗಜರಕ್ತವೆನಿಸುತ್ತದೆ. ಇದರಿಂದ ಅಶುದ್ಧಿಯು ಏರ್ಪಡುವುದಿಲ್ಲ. ಆದರೂ ಗರ್ಭದಲ್ಲಿ ಅನೇಕ ವಿಧವಾದ ರೋಗಗಳು ಹೆಚ್ಚಲು ಕಾರಣವಾಗುತ್ತದೆ. (2) ಪಿತ್ತ ವಾಯು ಕಫ ಮುಂತಾದ ಧಾತುಗಳು ಕೆರಳಿದ್ದರಿಂದ ಆಗಾಗ್ಗೆ ಬರುತ್ತಿರುವ ರಕ್ತವು ರೋಗಜರಕ್ತವೆನಿಸುತ್ತದೆ. (3) ರಜಸ್ವಲೆಯಾಗುವುದಕ್ಕೆ ಕಾರಣವಾಗಿರುವ ವಸ್ತುಗಳನ್ನು ಆಗಾಗ್ಗೆ ಸೇವಿಸುತ್ತಿರುವುದರಿಂದ ದೇಹದಲ್ಲಿರುವ ಧಾತುಗಳು ಕೆಡುತ್ತವೆ. ಇದರಿಂದ ಬರುವ ರಕ್ತವು ದ್ರವ್ಯಜರಕ್ತವೆನಿಸುತ್ತದೆ. (4) ರಜಸ್ವಲೆಯಾಗಿ ಇಪ್ಪತ್ತೊಂದನೆಯ ದಿನ ಅಥವಾ ಅದಕ್ಕೆ ಅನಂತರದ ದಿನಗಳಲ್ಲಿ ಬರುವ ರಕ್ತವು ರಜಸ್ಸು ಎಂದು ಹೇಳುತ್ತದೆ. ಮೇಲೆ ಹೇಳಿದ ನಾಲ್ಕು ವಿಧವಾದ ರಕ್ತಗಳಲ್ಲಿ ನಾಲ್ಕನೆಯ ರಕ್ತವು 'ಕಾಲದ ರಜಸ್ಸು' ಎಂದು ಹೇಳಲ್ಪಡುತ್ತದೆ."

### ರಜಸ್ಸನ್ನು ತಿಳಿಯದಿದ್ದರೆ ಮೈಲಿಗೆಯಿಲ್ಲ

ಅವಿಜ್ಞಾತೇ ರಜಃಸ್ರಾವೇ ಮಲವದ್ವಸನಾ ಯದಿ |
ಗೃಹಕೃತ್ಯೇಷು ತಿಷ್ಠಂತೀ ಜ್ಞಾನಾದಶುಚಿರಿಷ್ಯತೇ ||
ನಿಸ್ಸಂದಿಗ್ಧಪರಿಜ್ಞಾನಮಾರ್ತವೇಽಶುದ್ಧಿಕಾರಣಮ್ |
ಸಂದಿಗ್ಧಮಾತ್ರೇ ಸ್ನಾನಂ ಸ್ಯಾದಿತ್ಯುವಾಚ ಬೃಹಸ್ಪತಿಃ ||

"ಮನೆಯ ಕೆಲಸವನ್ನು ಮಾಡುತ್ತಿದ್ದಾಗ ತಾನು ರಜಸ್ವಲೆಯಾದ ವಿಷಯವು ತನಗೆ ತಿಳಿಯದಿದ್ದರೆ ಅಷ್ಟರವರೆಗೆ ಅವಳು ಅಶುಚಿಯಾಗುವುದಿಲ್ಲ. ತಿಳಿದ ಮೇಲೆಯೇ ಅಶುಚಿಯಾಗುವಳು. ತಾನು ರಜಸ್ವಲೆಯಾದ ವಿಷಯದಲ್ಲಿ ತನಗೆ ಸಂಶಯವಿದ್ದರೂ ಅವಳು ಅಶುಚಿಯಾಗುವುದಿಲ್ಲ. ಸಂದೇಹವಿಲ್ಲದಂತೆ ನಿಶ್ಚಯವು ಏರ್ಪಟ್ಟ ಮೇಲೆಯೇ ಅಶುಚಿಯಾಗುವಳು." ಇದು ಬೃಹಸ್ಪತ್ಯಾಚಾರ್ಯರ ಮತವಾಗಿದೆ.

### ರಜಸ್ವಲೆಯರ ಧರ್ಮ

ಧರ್ಮೋ ರಜಸ್ವಲಾಯಾಸ್ತು ಪ್ರಸಂಗಾತ್ಕಥ್ಯತೇಽತ್ರ ಹಿ |
ಅಂಜನಾಭ್ಯಂಜನಂ ಸ್ನಾನಂ ಪ್ರವಾಸಂ ದಂತಧಾವನಮ್ ||
ಭೋಜನಂ ಸರ್ವರಾತ್ರೇಣ ಸರ್ವಂ ತ್ಯಾಜ್ಯಂ ವಿದುರ್ಬುಧಾಃ |
ರಜಸ್ವಲಾ ಸತೀ ನಾರೀ ಯತ್ರ ವೇಶ್ಮನಿ ಸಂಸ್ಪೃಶೇತ್ ||

ಶಯೀತ ವಾಽಥ ಭುಂಜೀತ ಸ ದೇಶೋ ಗೋಮಯೈಃ ಪುನಃ |
ಉಪಲಿಪ್ತೋ ಗವಾ ಕ್ರಾಂತಃ ಶುದ್ಧಿಮರ್ಹತಿ ನಾನ್ಯಥಾ ||
ತತ್ಕ್ಷಣಾಚ್ಚೈವ ಕುರ್ವೀತ ಸ್ಪರ್ಶನೇ ದಾರುಣಾಂ ತಥಾ |
ಕ್ಷಾಲನಂ ಸ್ಯಾತ್ಪ್ರತಿದಿನಂ ತೃಣಾನಾಂ ತ್ಯಾಗ ಏವ ಚ ||
ಚತುರ್ಥೇ ದಿವಸೇ ಶುದ್ಧಿಕ್ರಮಂ ವ್ಯಾಸೋಽಬ್ರವೀನ್ಮುನಿಃ |
ರಜಸ್ವಲಾ ಚತುರ್ಥೇಽಹ್ನಿ ಮೃತ್ತಿಕಾಷಷ್ಟಿಭಿಃ ಪೃಥಕ್ ||
ಶೌಚಂ ಕೃತ್ವಾ ಯಥಾನ್ಯಾಯಂ ದಂತಾನಾಂ ಧಾವನಂ ತಥಾ |
ಕೃತ್ವಾಽಥ ಸಂಗಮೇಽತೀತೇ ಸಚೈಲಸ್ನಾನಮಾಚರೇತ್ ||
ಭಸ್ಮಗೋಮಯಮೃದ್ಭಿಶ್ಚ ಸರ್ವೈರನ್ಯತಮೈಸ್ತಥಾ |
ಸ್ನಾತ್ವಾಂಽಶುಕಂ ಪರಿಚ್ಛಾದ್ಯ ಗಂಧಪುಷ್ಪೈರಲಂಕೃತಾ ||
ಆಚಮ್ಯ ಪುಷ್ಪೈರಾದಿತ್ಯಮರ್ಚಯಿತ್ವಾ ಯಥೋಽದಿತಮ್ |
'ಐಂದ್ರಂ ಪದಂ ಪ್ರಭೋ ಮಹ್ಯಮಿದಾನೀಂ ದಾತುಮರ್ಹಸಿ' ||
ಇತ್ಯುಕ್ತ್ವಾ ಚೇಂದ್ರಭಾವೇನ ಪ್ರಾರ್ಥಯೇಚ್ಚ ಪತಿಂ ವಧೂಃ |
ಋತುಸ್ನಾತಾ ಯದಾ ನಾರೀ ಯತ್ಸ್ನೇಹಾನ್ನರಮೀಕ್ಷತೇ ||
ತಾದೃಶಂ ಜನಯೇತ್ಪುತ್ರಂ ಪತಿಮೇವ ನಿರೀಕ್ಷಯೇತ್ ||

"ರಜಸ್ವಲೆಯು ನಡೆದುಕೊಳ್ಳಬೇಕಾದ ಧರ್ಮವನ್ನು ಈಗ ಹೇಳುತ್ತೇವೆ. (1) ಎಣ್ಣೆಯನ್ನು ತಲೆಗಾಗಲೀ ಮೈಗಾಗಲೀ ಹಚ್ಚಿಕೊಳ್ಳಬಾರದು. (2) ಅಭ್ಯಂಗಸ್ನಾನವನ್ನು ಮಾಡಬಾರದು. (3) ಸ್ನಾನ ಮಾಡಬಾರದು. (4) ದಂತಕಾಷ್ಠ ಮುಂತಾದ ಸಾಧನಗಳಿಂದ ಹಲ್ಲುಗಳನ್ನು ಉಜ್ಜಬಾರದು. (5) ರಾತ್ರಿಯಲ್ಲಿ ಊಟವನ್ನು ಮಾಡಬಾರದು."

"ರಜಸ್ವಲೆಯು ವಾಸಿಸಿದ ಸ್ಥಳ, ಮಲಗಿದ ಸ್ಥಳ, ಊಟ ಮಾಡಿದ ಸ್ಥಳ ಮುಂತಾದ ಸ್ಥಳಗಳನ್ನು ಗೋಮಯದಿಂದ ಸಾರಿಸಬೇಕು. ಅದರ ಮೇಲೆ ಗೋವುಗಳನ್ನು ಓಡಾಡಿಸಬೇಕು. ಹೀಗೆ ಮಾಡಿದರೆ ಆ ಸ್ಥಳವು ಶುದ್ಧವಾಗುತ್ತದೆ. ಇಲ್ಲದಿದ್ದರೆ ಇಲ್ಲ."

"ಮರಗಳನ್ನು ಮುಟ್ಟಿದರೆ ಮುಟ್ಟಿದ ಕೂಡಲೇ ತೊಳೆಯಬೇಕು. ಮತ್ತು ಅವಳು ಸ್ನಾನ ಮಾಡುವವರೆಗೂ ಪ್ರತಿದಿನದಲ್ಲಿಯೂ ತೊಳೆಯಬೇಕು. ಅವಳು ಮುಟ್ಟಿದ ಹುಲ್ಲನ್ನು ದೂರದಲ್ಲಿ ಬಿಸಾಡುವಂತೆ ಹೇಳಬೇಕು. ನಾವು ಮುಟ್ಟಲೂ ಬಾರದು. ತೊಳೆದುಕೊಳ್ಳಲೂ ಬಾರದು."

ನಾಲ್ಕನೆಯ ದಿನದಲ್ಲಿ ಅವಳು ಮಾಡಬೇಕಾದ ಸ್ನಾನ ಮತ್ತು ಇತರ ಕಾರ್ಯಗಳನ್ನು ಶ್ರೀ ವೇದವ್ಯಾಸರು ಹೇಳಿರುವರು. ಅದನ್ನು ಈಗ ವಿವರಿಸುತ್ತೇವೆ. ನಾಲ್ಕನೇ ದಿನದಲ್ಲಿ ಅರವತ್ತು ಸಲ ಮಣ್ಣಿನಿಂದ ಕೈಕಾಲುಗಳನ್ನು ಹಿಂದೆ ಹೇಳಿದ ಮೃತ್ತಿಕಾಶೌಚಕ್ರಮದಿಂದ ತೊಳೆದುಕೊಳ್ಳಬೇಕು. ಹಿಂದೆ ಹೇಳಿದ ಕ್ರಮದಿಂದ ದಂತಕಾಷ್ಠದಿಂದ ಹಲ್ಲುಗಳನ್ನು ತೊಳೆದುಕೊಳ್ಳಬೇಕು. ತಾನು ಉಟ್ಟುಕೊಂಡಿರುವ ಬಟ್ಟೆಯೊಡನೆ ಸ್ನಾನವನ್ನು ಮಾಡಬೇಕು. ಈ ಸ್ನಾನವನ್ನು ಸಂಗಮಕಾಲವು (ಹಗಲಿನ ಪ್ರಮಾಣವನ್ನು ಐದು ವಿಭಾಗ ಮಾಡಿ ಅವುಗಳಲ್ಲಿ ಎರಡನೆಯ ವಿಭಾಗವು ದಾಟಿದ ಮೇಲೆ ಮೂರನೆಯ ವಿಭಾಗವು ಮುಗಿಯುವವರೆಗಿನ ಕಾಲವು ಸಂಗಮಕಾಲವೆನಿಸುತ್ತದೆ. ಅಂದರೆ ಸೂರ್ಯೋದಯವು ಬೆಳಿಗ್ಗೆ ಆರು ಗಂಟೆಗೂ ಹಗಲಿನ ಪ್ರಮಾಣವು 12 ಗಂಟೆ ಕಾಲವೂ ಆಗಿದ್ದರೆ ಬೆಳಿಗ್ಗೆ 10 ಗಂಟೆ 48 ನಿಮಿಷಗಳು ಮುಗಿಯುವಾಗ ಸಂಗಮಕಾಲವು ಮುಗಿಯುತ್ತದೆ.)

ಮುಗಿದ ಮೇಲೆ ಮಾಡಬೇಕು. ಈ ಸ್ನಾನವನ್ನು ಮಾಡುವಾಗ ಭಸ್ಮ, ಗೋಮಯ, ಮೃತ್ತಿಕಾ ಈ ಮೂರನ್ನು ಒಟ್ಟುಗೂಡಿಸಿ ದೇಹದಲ್ಲಿ ಹಚ್ಚಿಕೊಂಡು ಮೊದಲು ಸ್ನಾನ ಮಾಡಬೇಕು. ಆ ಮೇಲೆ ಅವುಗಳಲ್ಲಿ ಒಂದೊಂದನ್ನು ಪ್ರತ್ಯೇಕವಾಗಿ ಹಚ್ಚಿಕೊಂಡು ಸ್ನಾನ ಮಾಡಬೇಕು. ಸ್ನಾನವು ಮುಗಿದ ಮೇಲೆ ಶುದ್ಧ ವಸ್ತ್ರವನ್ನು ಧರಿಸಬೇಕು. ಕುಂಕುಮ, ಗಂಧ, ಪುಷ್ಪ ಮುಂತಾದವುಗಳಿಂದ ಅಲಂಕೃತಳಾಗಬೇಕು. ಆಚಮನ ಮಾಡಬೇಕು. ಸೂರ್ಯಾಂತರ್ಯಾಮಿಯಾದ ನಾರಾಯಣನನ್ನು ಪುಷ್ಪಗಳಿಂದ ಪೂಜಿಸಬೇಕು. ಗಂಡನಲ್ಲಿ ಇಂದ್ರನಾಮಕನಾದ ಶ್ರೀಹರಿಯು ಸನ್ನಿಹಿತನಾಗಿರುವಂತೆ ಧ್ಯಾನ ಮಾಡಬೇಕು. 'ಓ ಇಂದ್ರದೇವ, ನಿನ್ನ ಸ್ನಾನವನ್ನು ನನಗೆ ಕೊಡು' ಎಂದು ಪ್ರಾರ್ಥಿಸಬೇಕು. ನಾಲ್ಕನೆಯ ದಿನದಲ್ಲಿ ಸ್ನಾನ ಮಾಡಿರುವ ಋತುಮತಿಯು ಯಾವ ಪುರುಷನನ್ನು ಆಸೆಯಿಂದ ನೋಡುವಳೋ ಅಂತಹ ಮಗನು ಹುಟ್ಟುವನು. ಆದ್ದರಿಂದ ಆ ಕಾಲದಲ್ಲಿ ಪತಿಯನ್ನೇ ನೋಡಬೇಕು. ಇತರ ಪುರುಷನನ್ನು ನೋಡಬಾರದು."

ರಜಸ್ವಲೆಯು ಸ್ನಾನವನ್ನು ಮಾಡಿದ ಕೂಡಲೇ ಪರಪುರುಷನನ್ನು ನೋಡಿದರೆ

ಮುನಿರ್ಯಮಸ್ತು ಸಂಪ್ರಾಹ ಪ್ರಾಯಶ್ಚಿತ್ತಂ ನಿರೀಕ್ಷಣೇ |
ಈಕ್ಷೇತ ಪುರುಷಂ ನಾರೀ ಬ್ರಹ್ಮಕೂರ್ಚಂ ತತಃ ಪಿಬೇತ್ ||
ಕೇವಲಂ ಪಂಚಗವ್ಯಂ ವಾ ಕ್ಷೀರಂ ವಾಪಿ ವಿಶುದ್ಧಯೇ |
ಇತ್ಥಂ ನೈಮಿತ್ತಿಕಂ ಸ್ನಾನಂ ಸಪ್ರಪಂಚಂ ನಿರೂಪಿತಮ್ ||

"ರಜಸ್ವಲೆಯು ನಾಲ್ಕನೆಯ ದಿನದಲ್ಲಿ ಸ್ನಾನವನ್ನು ಮಾಡಿದ ಕೂಡಲೇ ಮೊದಲನೆಯದಾಗಿ ಪತಿಯನ್ನೇ ನೋಡಬೇಕು. ಪರಪುರುಷನನ್ನು ನೋಡಕೂಡದು. ಎಂದು ಹಿಂದೆ ಹೇಳಿರುತ್ತದೆ. ಆಕಸ್ಮಾತ್ತಾಗಿ ಪರಪುರುಷನನ್ನು ನೋಡಿದರೆ ಅದರಿಂದ ಬರುವ ದೋಷದ ಪರಿಹಾರಕ್ಕಾಗಿ ಬ್ರಹ್ಮಕೂರ್ಚ ಎಂಬ ಪಂಚಗವ್ಯವನ್ನು ಸೇವಿಸಬೇಕು. ಅದು ಸಾಧ್ಯವಾಗದಿದ್ದರೆ ಸಾಧಾರಣ ಪಂಚಗವ್ಯವನ್ನೂ, ಅದೂ ಸಾಧ್ಯವಾಗದಿದ್ದರೆ ದನದ ಹಾಲನ್ನೂ ಕುಡಿಯಬೇಕು. ಇದರಿಂದ ಅವಳು ಶುದ್ಧಳಾಗುವಳು." ಇದು ಯಮ ಎಂಬ ಮುನಿಯು ಹೇಳಿರುವುದು.

ನೈಮಿತ್ತಿಕಸ್ನಾನದ ವಿಷಯವು ಮುಗಿಯಿತು.

* * *

ನೈಮಿತ್ತಿಕಸ್ನಾನಗಳಿಗೆ ಅಪವಾದ

ಗ್ರಾಮೇಷು ಯತ್ರ ಸಂಸ್ಪೃಷ್ಟಿರ್ಯಾತ್ರಾಯಾಂ ಕಲಹಾದಿಷು |
ಗ್ರಾಮಸಂದೂಷಣೇ ಚೈವ ಸ್ಪೃಷ್ಟಿದೋಷೋ ನ ವಿದ್ಯತೇ || (ಶಾತಾತಪವಚನ)

ಮೈಲಿಗೆಯುಳ್ಳವರನ್ನು ಮುಟ್ಟಿದರೆ ಶುದ್ಧಿಗಾಗಿ ಸ್ನಾನವನ್ನು ಮಾಡಬೇಕೆಂದು ಹಿಂದೆ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಈಗ ಕೆಲವು ಸಂದರ್ಭಗಳಲ್ಲಿ ಮೈಲಿಗೆಯುಳ್ಳವರನ್ನು ಮುಟ್ಟಿದರೂ ದೋಷವಿಲ್ಲವೆಂದು ಹೇಳುತ್ತಾ ಆ ವಿಷಯವನ್ನು ಬೇರೆ ಬೇರೆ ಮುನಿಗಳ ವಾಕ್ಯಗಳನ್ನು ಉದಾಹರಿಸಿ ಸ್ಪಷ್ಟಪಡಿಸುತ್ತಾರೆ. "(1) ಯಾತ್ರಾಕಾಲ, ಕಲಹ ಮುಂತಾದ ಅನಿವಾರ್ಯ ಸಂದರ್ಭಗಳು. (2) ಊರೇ ಕೆಡುವ ಸಂದರ್ಭ. ಈ ಸಂದರ್ಭಗಳಲ್ಲಿ ಅಶುದ್ಧರಾದವರ ಸ್ಪರ್ಶದಿಂದ ದೋಷವು ಏರ್ಪಡುವುದಿಲ್ಲ. ಆದಕ್ಕಾಗಿ ಸ್ನಾನವನ್ನು ಮಾಡಬೇಕಾಗಿಲ್ಲ. ಇದು ಶಾತಾತಪರ ವಚನ.

ದೇವಯಾತ್ರಾವಿಹಾರೇಷು ಯಜ್ಞೇಷು ಪ್ರಕೃತೇಷು ಚ |
ಉತ್ಸವೇಷು ಚ ಸರ್ವೇಷು ಸ್ಪೃಷ್ಟಾಸ್ಪೃಷ್ಟಿರ್ನ ವಿದ್ಯತೇ || (ಷಟ್ತ್ರಿಂಶನ್ಮತವಚನ)

(1) ದೇವಯಾತ್ರೆ (2) ನಾನಾವಿಧವಾದ ಆಟಗಳು (3) ಯಜ್ಞಗಳು (4) ಎಲ್ಲಾ ವಿಧವಾದ ಉತ್ಸವಗಳು ಇವುಗಳಲ್ಲಿ ಮೈಲಿಗೆಯವರನ್ನು ಮುಟ್ಟಿದರೂ ಮೈಲಿಗೆಯಾಗುವುದಿಲ್ಲ. ಇದು ಷಟ್ತ್ರಿಂಶನ್ಮತವಚನ.

ತೀರ್ಥೇ ವಿವಾಹೇ ಯಾತ್ರಾಯಾಂ ಸಂಗ್ರಾಮೇ ದೇಶವಿಪ್ಲವೇ |
ಗ್ರಾಮದಾಹೇ ಪ್ರವಾಸೇ ಚ ಸ್ಪೃಷ್ಟಾಸ್ಪೃಷ್ಟಿರ್ನ ವಿದ್ಯತೇ ||(ಬೃಹಸ್ಪತಿವಚನ)

(1) ಗಂಗಾದಿತೀರ್ಥಗಳಲ್ಲಿ ಸ್ನಾನವನ್ನು ಮಾಡುವ ಸಂದರ್ಭ (2) ವಿವಾಹ ಕಾಲ (3) ತೀರ್ಥಯಾತ್ರಾ ಸಂದರ್ಭ (4) ಯುದ್ಧದಲ್ಲಿ ಸಂಬಂಧಿಸಿರುವಿಕೆ (5) ದೇಶಕ್ಕೆ ಅನಿಷ್ಟವು ಏರ್ಪಟ್ಟಿರುವ ಸಮಯ (6) ಊರು ಬೆಂಕಿಯಿಂದ ಸುಡುತ್ತಿರುವ ಸಮಯ (7) ಪರ ಊರಿನಲ್ಲಿ ಸಂಚರಿಸುತ್ತಿರುವುದು ಈ ಸಂದರ್ಭಗಳಲ್ಲಿ ಅಸ್ಪೃಶ್ಯರನ್ನು ಮುಟ್ಟಿದರೆ ದೋಷವಿಲ್ಲ. ಇದು ಬೃಹಸ್ಪತಿಯು ಹೇಳಿರುವುದು.

(1) ಏತಚ್ಚ ವಾಕ್ಯತ್ರಯಂ 'ಅತ್ರಾಹಮನೇನ ಸ್ಪೃಷ್ಟಃ' ಇತಿ ಜ್ಞಾನಂ ನಾಸ್ತಿ ತದ್ವಿಷಯಮಿತಿ ಕೇಚಿತ್ | (ಸ್ಮೃತಿಮುಕ್ತಾವಲೀವಚನ)

"ಮೇಲೆ ಬರೆದಿರುವ ಶಾತಾತಪವಚನ, ಷಟ್ತ್ರಿಂಶನ್ಮತವಚನ, ಬೃಹಸ್ಪತಿವಚನಗಳಲ್ಲಿ ಯಾತ್ರೆ ಮುಂತಾದ ಕಾಲಗಳಲ್ಲಿ ಮೈಲಿಗೆಯವರನ್ನು ಮುಟ್ಟಿದರೆ ದೋಷವಿಲ್ಲವೆಂದು ಹೇಳಿದೆ. ಈ ವಾಕ್ಯಗಳು 'ಈ ಸ್ಥಳದಲ್ಲಿ ಅಶುದ್ಧನಾದ ಇವನು ನನ್ನನ್ನು ಮುಟ್ಟಿದನು.' ಎಂದು ತಿಳಿಯದಿರುವಾಗ ದೋಷವಿಲ್ಲವೆಂದು ತಿಳಿಸುತ್ತವೆ. ಅಶುದ್ಧನಾದವನು ಯಾರು? ಎಲ್ಲಿ ಮುಟ್ಟಿದನು? ಎಂದು ತಿಳಿದಿದ್ದರೆ ಮೈಲಿಗೆಯು ಇದ್ದೇ ಇರುತ್ತದೆ. ಅದಕ್ಕೆ ಸ್ನಾನವನ್ನು ಮಾಡಲೇ ಬೇಕು." ಇದು ಕೆಲವು ಜ್ಞಾನಿಗಳ ಅಭಿಪ್ರಾಯವಾಗಿದೆ.

(2) ಉಚ್ಛಿಷ್ಟಾಶುಚಿಸಂಸ್ಪೃಷ್ಟವಿಷಯಮಿತ್ಯನ್ಯೇ |

"ಎಂಜಲನ್ನು ಮುಟ್ಟಿದವನನ್ನೂ ಮೈಲಿಗೆಯಾದವನನ್ನು ಮುಟ್ಟಿದವನನ್ನೂ ಮುಟ್ಟಿದರೆ ದೋಷವಿಲ್ಲವೆಂದು ಮೇಲ್ಕಂಡ ಮೂರು ವಾಕ್ಯಗಳು ತಿಳಿಸುತ್ತವೆ" ಎಂದು ಮತ್ತೆ ಕೆಲವರು ಜ್ಞಾನಿಗಳು ಹೇಳುತ್ತಿರುವರು. ಈ ಎರಡು ವಿಧವಾದ ಅಭಿಪ್ರಾಯಗಳನ್ನು ಸ್ಮೃತಿಮುಕ್ತಾವಲೀಕಾರರು ಹೇಳಿರುತ್ತಾರೆ.

ಶಕ್ತಿವಿಷಯೇ ನ ಮುಹೂರ್ತಮಪ್ಯಪ್ರಯತಃ ಸ್ಯಾತ್ |(ಆಪಸ್ತಂಬ ವಚನ)

"ತಪೋಬಲ ಜ್ಞಾನಬಲ ಮುಂತಾದ ದೈವಿಕ ಶಕ್ತಿಯುಳ್ಳವರು ಯಾವ ನಿಮಿತ್ತದಿಂದಲೂ ಒಂದು ಕ್ಷಣವೂ ಅಶುದ್ಧರಾಗುವುದಿಲ್ಲ. ಆದ್ದರಿಂದ ಅವರಿಗೆ ಮೈಲಿಗೆಯುಳ್ಳವರ ಸ್ಪರ್ಶವು ಏರ್ಪಟ್ಟರೂ ಅದಕ್ಕಾಗಿ ಸ್ನಾನವನ್ನು ಮಾಡಬೇಕಾಗಿಲ್ಲ." ಇದು ಆಪಸ್ತಂಬರ ವಚನ.

ಉತ್ಸವೇ ವಾಸುದೇವಸ್ಯ ಯಃ ಸ್ನಾತಿ ಸ್ಪರ್ಶಶಂಕಯಾ |
ಸ್ವರ್ಗಸ್ಥಾಃ ಪಿತರಸ್ತಸ್ಯ ಪತಂತಿ ನರಕೇ ಕ್ಷಣಾತ್ ||
ವಿಷ್ಣ್ವಾಲಯಸಮೀಪಸ್ಥಾನ್ ವಿಷ್ಣುಸೇವಾರ್ಥಮಾಗತಾನ್ |
ಚಂಡಾಲಾನ್ ಪತಿತಾನ್ವಾಪಿ ಸ್ಪೃಷ್ಟ್ವಾ ನ ಸ್ನಾನಮಾಚರೇತ್ || (ಪದ್ಮಪುರಾಣವಚನ)

ವಾಸುದೇವನ ಉತ್ಸವಕಾಲದಲ್ಲಿ ಅಶುದ್ಧರಾದವರ ಸ್ಪರ್ಶವು ಏರ್ಪಟ್ಟಿರಬಹುದು ಎಂಬ ಸಂಶಯದಿಂದ ಸ್ನಾನವನ್ನು ಯಾರು ಮಾಡುವನೋ ಅವನ ಪಿತೃಗಳು ಅದೇ ಕ್ಷಣದಲ್ಲಿ ನರಕದಲ್ಲಿ ಬೀಳುವರು. ವಿಷ್ಣುಮಂದಿರದ ಸಮೀಪದಲ್ಲಿರುವವರು ಮತ್ತು ವಿಷ್ಣುಸೇವೆಗಾಗಿ ಬಂದಿರುವವರು ಇವರುಗಳು ಅಶುದ್ಧರಾಗಿದ್ದರೂ ಅವರನ್ನು ಮುಟ್ಟಿ ಸ್ನಾನವನ್ನು ಮಾಡಬಾರದು. ಇದು ಪದ್ಮಪುರಾಣವಚನ.

ಈ ಶ್ಲೋಕದಲ್ಲಿ 'ವಿಷ್ಣುಸೇವಾರ್ಥಮ್ ಆಗತಾನ್' ಎಂದರೆ ವಿಷ್ಣುಸೇವೆಗಾಗಿ ಬಂದಿರುವ ಅಶುದ್ಧರಾದವರನ್ನು ಮುಟ್ಟಿದರೆ ಸ್ನಾನವನ್ನು ಮಾಡಬೇಕಾದ್ದಿಲ್ಲ' ಎಂದು ಹೇಳಿದೆ. ಆದ್ದರಿಂದ ವಿಷ್ಣುಸೇವೆಯ ಉದ್ದೇಶ್ಯವಿಲ್ಲದೆ ತಮ್ಮ ಸ್ವಂತ

ಕಾರ್ಯಗಳಿಗಾಗಿ ಬಂದಿರುವ ಅಶುದ್ಧರಾದವರನ್ನು ಮುಟ್ಟಿದರೆ ಮೈಲಿಗೆಯು ಏರ್ಪಡುತ್ತದೆಯೆಂದೂ ಆ ಸಂದರ್ಭದಲ್ಲಿ ಸ್ನಾನವನ್ನು ಮಾಡಲೇ ಬೇಕೆಂದೂ ಸ್ಮೃತಿಮುಕ್ತಾವಲೀಕಾರರು 'ದೇವಸೇವಾರ್ಥಪಿತಿ ವಿಶೇಷಣಾತ್ ಸ್ವಕಾರ್ಯಾರ್ಥಮಾಗತದೇವಾಲಯ ಸಮೀಪಸ್ಥಚಂಡಾಲಾದಿಸ್ಪರ್ಶನೇ ಸ್ನಾನಂ ಭವತ್ಯೇವ' ಎಂಬ ವಾಕ್ಯದಿಂದ ಸ್ಪಷ್ಟಪಡಿಸಿರುವರು.

ವಿಷ್ಣೋರುತ್ಸವಸೇವಾರ್ಥಮಾಗತಾಸ್ತತ್ರ ಯೇ ಜನಾಃ |
ತೇಽಪಿ ದೇವಸಮಾ ಜ್ಞೇಯಾಃ ಪ್ರತಿಲೋಮಾದಯೋಽಪಿ ಚ || (ವಿಷ್ಣುಮಂದಿರವಚನ)

ಶ್ರೀಹರಿಯ ಉತ್ಸವವನ್ನು ಸೇವಿಸುವುದಕ್ಕಾಗಿ ಬಂದಿರುವ ಅಶುದ್ಧರಾದವರೇ ಮೊದಲಾದವರೂ ಸಹ ದೇವತೆಗಳಿಗೆ ಸಮರಾಗಿರುವರು. ಇದು ವಿಷ್ಣುಮಂದಿರ ಎಂಬ ಗ್ರಂಥದ ವಚನ. ಹೀಗೆ ಮೇಲ್ಕಂಡ ನಿಮಿತ್ತಗಳನ್ನು ಬಿಟ್ಟು ಹಿಂದೆ ಹೇಳಿದ ಎಲ್ಲಾ ನಿಮಿತ್ತಗಳಲ್ಲಿಯೂ ಸ್ನಾನವನ್ನೂ ಮಾಡಬೇಕು.

ಇಲ್ಲಿಗೆ ನೈಮಿತ್ತಿಕಸ್ನಾನಾಪವಾದವು ಮುಗಿಯಿತು.

* * *

## ಕಾಮ್ಯಸ್ನಾನ

ಪುಷ್ಯೇ ತು ಜನ್ಮನಕ್ಷತ್ರೇ ವ್ಯತೀಪಾತೇ ಚ ವೈಧೃತೌ (ದಿನತ್ರಯೇ) |
ಅಮಾಯಾಂ ಚ ನದೀಸ್ನಾನಂ ಪುನಾತ್ಯಾಸಪ್ತಮಂ ಕುಲಮ್ (ಕುಲಕೋಟಿಂ ಸಮುದ್ಧರೇತ್) ||
ರವ್ಯಂಗಾರಕಯೋರ್ವಾರೇ ಸ್ನಾನಂ ಕುರ್ವಂತಿ ಯೇ ನರಾಃ |
ವ್ಯಾಧಿಭಿಸ್ತೇ ನ ಪೀಡ್ಯಂತೇ ಮೃಗೈಃ ಕೇಸರಿಣೋ ಯಥಾ ||
ಚೈತ್ರಕೃಷ್ಣಚತುರ್ದಶ್ಯಾಂ ಯಃ ಸ್ನಾಯಾಚ್ಛಿವಸನ್ನಿಧೌ |
ನ ಪ್ರೇತತ್ವಮವಾಪ್ನೋತಿ ಗಂಗಾಯಾಂ ಚ ವಿಶೇಷತಃ || (ಪುಲಸ್ತ್ಯರ ವಚನ)

"ಆಯುಸ್ಸು ಸಂಪತ್ತು ಮುಂತಾದ ಈ ಲೋಕದ ಫಲಗಳನ್ನೂ ಸ್ವರ್ಗ ಮುಂತಾದ ಪರಲೋಕಗಳ ಫಲಗಳನ್ನೂ ಅಪೇಕ್ಷಿಸಿ ಮಾಡುವ ಸ್ನಾನವು ಕಾಮ್ಯಸ್ನಾನವೆನಿಸುತ್ತದೆ. ಫಲವನ್ನು ಬಯಸುವವರು ಫಲಕ್ಕಾಗಿಯೂ ಫಲಾಪೇಕ್ಷೆಯಿಲ್ಲದವರು ಶ್ರೀಹರಿಪ್ರೀತಿಗಾಗಿಯೂ ಈ ಸ್ನಾನವನ್ನು ಮಾಡಬೇಕು. ಈ ಕಾಮ್ಯಸ್ನಾನವನ್ನು ಈಗ ಸ್ಪಷ್ಟಪಡಿಸುತ್ತೇನೆ. (1) ಪ್ರತಿ ತಿಂಗಳಿನಲ್ಲಿಯೂ ಬರುವ ಪುಷ್ಯನಕ್ಷತ್ರ (2) ಜನ್ಮನಕ್ಷತ್ರ (3) ವ್ಯತೀಪಾತಯೋಗ (4) ವೈಧೃತಿಯೋಗ (5) ಅಮಾವಾಸ್ಯಾ ಈ ದಿನಗಳಲ್ಲಿ ಸ್ನಾನ ಮಾಡಬೇಕು. 'ವ್ಯತೀಪಾತೇ ಚ ವೈಧೃತೌ' ಎಂಬ ಪಾಠಕ್ಕೆ ಬದಲಾಗಿ 'ವ್ಯತೀಪಾತೇ ದಿನತ್ರಯೇ' ಎಂಬ ಪಾಠಾಂತರವಿದೆ. ಆ ಪಾಠದಲ್ಲಿ ದಶಮೀ ಏಕಾದಶೀ ದ್ವಾದಶೀ ಎಂಬ ಮೂರು ದಿನಗಳಲ್ಲಿ ಮೇಲ್ಕಂಡ ಸ್ನಾನವನ್ನು ಮಾಡಬೇಕು ಎಂದು 'ದಿನತ್ರಯ' ಎಂಬ ಪದವು ತಿಳಿಸುತ್ತದೆ. ಈ ದಿನಗಳಲ್ಲಿ ಸ್ನಾನ ಮಾಡುವವರೂ ಅವರ ತಂದೆ ತಾತ ಮುಂತಾದ ಹಿಂದಿನ ಏಳು ಜನರೂ ಪಾಪದಿಂದ ಬಿಡುಗಡೆಯನ್ನು ಪಡೆಯುವರು. ಈ ಶ್ಲೋಕದಲ್ಲಿ 'ಕುಲಕೋಟಿಂ ಸಮುದ್ಧರೇತ್' ಎಂದು ಪಾಠಾಂತರವಿದೆ. ಆ ಪಾಠದಲ್ಲಿ ಸ್ನಾನ ಮಾಡುವವರ ಹಿಂದಿನ ಅಸಂಖ್ಯಜನರು ಪಾಪದಿಂದ ಬಿಡುಗಡೆಯನ್ನು ಪಡೆಯುವರು ಎಂದು ಅರ್ಥವನ್ನು ತಿಳಿಯಬೇಕು.

"ಆದಿತ್ಯವಾರ ಮಂಗಳವಾರ ಈ ಎರಡು ದಿನಗಳಲ್ಲಿ ನದೀಸ್ನಾನವನ್ನು ಮಾಡಬೇಕು. ಈ ಸ್ನಾನವನ್ನು ಮಾಡುವವರಿಗೆ ಮೃಗಗಳಿಂದ ಮೃಗರಾಜನಾದ ಸಿಂಹಕ್ಕೆ ಹೇಗೆ ಭಯವಿಲ್ಲವೋ ಅದರಂತೆ ರೋಗ ಮುಂತಾದ ಅನಿಷ್ಟಗಳಿಂದ ಪೀಡೆಯು ಏರ್ಪಡುವುದಿಲ್ಲ."

"ಚೈತ್ರಕೃಷ್ಣಚತುರ್ದಶೀ ದಿನದಲ್ಲಿ ಶ್ರೀರುದ್ರದೇವರ ಸನ್ನಿಧಿಯಲ್ಲಿ ನದೀಸ್ನಾನವನ್ನು ಮಾಡಬೇಕು. ಅವನು ಪ್ರೇತತ್ವವನ್ನು ಪಡೆಯುವುದಿಲ್ಲ. ಗಂಗೆಯಲ್ಲಿ ಇದೇ ದಿನದಲ್ಲಿ ಸ್ನಾನವನ್ನು ಮಾಡುವವನಿಗೆ ಅತ್ಯಧಿಕವಾದ ಶ್ರೇಯಸ್ಸು ಏರ್ಪಡುತ್ತದೆ." ಇದು ಪುಲಸ್ತ್ಯರ ವಚನ.

ಶಿವಲಿಂಗಸಮೀಪೇ ತು ಯತ್ತೋಯಂ ಪುರತಃ ಸ್ಥಿತಮ್ |
ಶಿವಾ ಗಂಗೇತಿ ವಿಜ್ಞೇಯಂ ತತ್ರ ಸ್ನಾತ್ವಾ ಶಿವಂ ವ್ರಜೇತ್ || (ಭವಿಷ್ಯತ್ಪುರಾಣವಾಕ್ಯ)

"ಶಿವಲಿಂಗದ ಎದುರಿನಲ್ಲಿ ಅತ್ಯಂತ ಸಮೀಪದಲ್ಲಿರುವ ನೀರು ಶಿವಗಂಗಾ ಎಂದು ಹೇಳಲ್ಪಡುತ್ತದೆ. ಈ ನೀರಿನಲ್ಲಿ ಸ್ನಾನ ಮಾಡುವವರು ಎಲ್ಲಾ ಪಾಪಗಳನ್ನೂ ಕಳೆದುಕೊಂಡು ರುದ್ರದೇವರ ಸನ್ನಿಧಾನವನ್ನು ಪಡೆಯುವರು." ಇದು ಭವಿಷ್ಯತ್ಪುರಾಣವಾಕ್ಯ.

ಕಾರ್ತಿಕ್ಯಾಂ ಪುಷ್ಕರೇ ಸ್ನಾತಃ ಸರ್ವಪಾಪೈಃ ಪ್ರಮುಚ್ಯತೇ |
ಮಾಘ್ಯಾಂ ಸ್ನಾತಃ ಪ್ರಯಾಗೇ ಚ ಮುಚ್ಯತೇ ಸರ್ವಕಿಲ್ಬಿಷೈಃ ||
ಜ್ಯೇಷ್ಠಮಾಸೇ ಸಿತೇ ಪಕ್ಷೇ ನವಮ್ಯಾಂ ಹಸ್ತಸಂಯುತೇ |
ದಶಜನ್ಮಾಘಹಾ ಗಂಗಾ ತೇನ ಪಾಪಹರಾ ಸ್ಮೃತಾ ||
ಯಮುನಾಯಾಂ ತಥಾ ಸ್ನಾತ್ವಾ ಮಾಘಕೃಷ್ಣಚತುರ್ದಶೀಮ್ |
ವೈಶಾಖಶುಕ್ಲಪಕ್ಷೇ ತು ತೃತೀಯಾಯಾಂ ತಥೈವ ಚ ||
ಗಂಗಾತೋಯೇ ನರಃ ಸ್ನಾತ್ವಾ ಮುಚ್ಯತೇ ಸರ್ವಕಿಲ್ಬಿಷೈಃ || (ಯಮವಚನ)

"ಕಾರ್ತಿಕಹುಣ್ಣಿಮೆಯಲ್ಲಿ ಪುಷ್ಕರಕ್ಷೇತ್ರದಲ್ಲಿಯೂ ಮಾಘಹುಣ್ಣಿಮೆ ದಿನದಲ್ಲಿ ಪ್ರಯಾಗದಲ್ಲಿಯೂ ಸ್ನಾನವನ್ನು ಮಾಡುವವರು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಪಡೆಯುವರು."

"ಜ್ಯೇಷ್ಠಮಾಸ ಶುಕ್ಲಪಕ್ಷ ನವಮೀದಿನದಲ್ಲಿ ಹಸ್ತನಕ್ಷತ್ರವು ಸೇರಿದ್ದರೆ ಮಹಾಪುಣ್ಯಕಾಲವೆನಿಸುತ್ತದೆ. ಈ ಪುಣ್ಯಕಾಲದಲ್ಲಿ ಗಂಗೆಯಲ್ಲಿ ಸ್ನಾನವನ್ನು ಮಾಡಿದರೆ ಹತ್ತು ಜನ್ಮಗಳಲ್ಲಿ ಮಾಡಿದ ಎಲ್ಲಾ ಪಾಪಗಳೂ ದೂರವಾಗುತ್ತವೆ."

"ಮಾಘ ಬಹುಳ ಚತುರ್ದಶೀದಿನದಲ್ಲಿ ಯಮುನಾನದಿಯಲ್ಲಿ ಸ್ನಾನವನ್ನು ಮಾಡಬೇಕು. ವೈಶಾಖ ಶುಕ್ಲ ತದಿಗೆ ಅಂದರೆ ಅಕ್ಷಯತದಿಗೆದಿನದಲ್ಲಿ ಗಂಗೆಯಲ್ಲಿ ಸ್ನಾನವನ್ನು ಮಾಡಬೇಕು. ಇದರಿಂದ ಎಲ್ಲಾ ಪಾಪಗಳಿಂದಲೂ ಬಿಡುಗೆಯಾಗುತ್ತದೆ." ಇದು ಯಮವಚನ.

ಗವಾಂ ಕೋಟಿಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ಫಲಮ್ |
ತತ್ಫಲಂ ಜಾಹ್ನವೀಸ್ನಾನೇ ರಾಹುಗ್ರಸ್ತೇ ದಿವಾಕರೇ || (ಮಾರ್ಕಂಡೇಯವಚನ)

"ಸೂರ್ಯಗ್ರಹಣ ಕಾಲದಲ್ಲಿ ಗಂಗೆಯಲ್ಲಿ ಸ್ನಾನ ಮಾಡಬೇಕು. ಈ ಸ್ನಾನದಿಂದ ಅಸಂಖ್ಯ ಗೋವುಗಳನ್ನು ವಿಧಿಪ್ರಕಾರವಾಗಿ ಉತ್ತಮ ರೀತಿಯಿಂದ ದಾನ ಮಾಡಿದವರಿಗೆ ಬರುವ ಫಲವು ಬರುತ್ತದೆ." ಇದು ಮಾರ್ಕಂಡೇಯರ ವಾಕ್ಯ.

ಕಾರ್ತಿಕೇ ನವಮೀ ಶುಕ್ಲೇ ಪಿತೄಣಾಮುತ್ಸವಾಯ ಸಾ |
ತಸ್ಯಾಂ ಸ್ನಾನಂ ಹುತಂ ದತ್ತಮನಂತಫಲದಂ ಭವೇತ್ || (ಪದ್ಮಪುರಾಣವಾಕ್ಯ)

"ಕಾರ್ತಿಕ ಶುಕ್ಲ ನವಮಿಯು ಪಿತೃಗಳಿಗೆ ವಿಶೇಷ ಸಂತೋಷಕರವಾದ ದಿನವಾಗಿದೆ. ಅಂದು ಸ್ನಾನ ಹೋಮ ಮತ್ತು ದಾನಗಳನ್ನು ಮಾಡಿದರೆ ಅನಂತಫಲವು ಸಿಗುತ್ತದೆ." ಇದು ಪದ್ಮಪುರಾಣವಚನ.

ಸೂರ್ಯಗ್ರಹಣತುಲ್ಯಾ ಹಿ ಮಾಘಮಾಸಸ್ಯ ಸಪ್ತಮೀ |
ಅರುಣೋದಯವೇಲಾಯಾಂ ತಸ್ಯಾಂ ಸ್ನಾನಂ ಮಹಾಫಲಮ್ ||

ಪುನರ್ವಸುಬುಧೋಪೇತಾ ಚೈತ್ರಮಾಸೇ ಸಿತಾಷ್ಟಮೀ |
ಸ್ರೋತಸ್ಸು ವಿಧಿವತ್ ಸ್ನಾತ್ವಾ ವಾಜಪೇಯಫಲಂ ಲಭೇತ್ || (ವಿಷ್ಣುವಚನ)

"ಮಾಘಮಾಸದ ಸಪ್ತಮಿಯು ಸೂರ್ಯಗ್ರಹಣಕ್ಕೆ ಸಮವಾಗಿದೆ. ಆ ದಿನದಲ್ಲಿ ಅರುಣೋದಯಕಾಲದಲ್ಲಿ ಸ್ನಾನವನ್ನು ಮಾಡಿದರೆ ಮಹಾಫಲವು ಸಿಗುತ್ತದೆ."

"ಚೈತ್ರಮಾಸ ಶುಕ್ಲಪಕ್ಷದ ಅಷ್ಟಮೀದಿನದೊಡನೆ ಪುನರ್ವಸು ನಕ್ಷತ್ರ ಮತ್ತು ಬುಧವಾರವು ಸೇರಿದರೆ ಮಹಾಪುಣ್ಯಕರವಾದ ಯೋಗವೆನಿಸುತ್ತದೆ. ಅಂದು ನದೀ ಮುಂತಾದ ಪುಣ್ಯತೀರ್ಥಗಳಲ್ಲಿ ಶಾಸ್ತ್ರೋಕ್ತವಿಧಿಯಿಂದ ಸ್ನಾನವನ್ನು ಮಾಡಿದರೆ ವಾಜಪೇಯಯಾಗವನ್ನು ಮಾಡಿದರೆ ಬರುವ ಫಲವು ಸಿಗುತ್ತದೆ." ಇದು ವಿಷ್ಣುವಚನ.

ಅಮಾವಾಸ್ಯಾ ರವೇರ್ವಾರೇ ತಥಾ ಭೂಮಿಸುತಸ್ಯ ವೈ |
ಜಾಹ್ನವೀಸ್ನಾನಮಾತ್ರೇಣ ಗೋಸಹಸ್ರಫಲಂ ಲಭೇತ್ || (ಶಾತಾತಪವಚನ)

"ಅಮಾವಾಸ್ಯಾದಿನದೊಡನೆ ರವಿವಾರ ಅಥವಾ ಕುಜವಾರವು ಸೇರಿದಾಗ ಗಂಗೆಯಲ್ಲಿ ಬರೀ ಸ್ನಾನ ಮಾಡಿದರೂ ಒಂದು ಸಾವಿರ ಗೋದಾನವನ್ನು ಮಾಡಿದ ಫಲವು ಸಿಗುತ್ತದೆ." ಇದು ಶಾತಾತಪರ ವಚನ.

ಕಾರ್ತಿಕಂ ಸಕಲಂ ಮಾಸಂ ನಿತ್ಯಸ್ನಾಯೀ ಜಿತೇಂದ್ರಿಯಃ |
ಜಪನ್ ಹವಿಷ್ಯಭುಕ್ ಸ್ನಾತಃ ಸರ್ವಪಾಪೈಃ ಪ್ರಮುಚ್ಯತೇ ||
ತುಲಾಮಕರಮೇಷೇಷು ಪ್ರಾತಃಸ್ನಾಯೀ ಸದಾ ಭವೇತ್ |
ಹವಿಷ್ಯಂ ಬ್ರಹ್ಮಚರ್ಯಂ ಚ ಮಹಾಪಾತಕನಾಶನಮ್ || (ಪುರಾಣವಚನ)

"ಆಶ್ವಿಜ ಹುಣ್ಣಿಮೆಯಿಂದ ಆರಂಭಿಸಿ ಕಾರ್ತಿಕ ಹುಣ್ಣಿಮೆವರೆಗೆ ಒಂದು ದಿನವೂ ಬಿಡದೆ ಎಲ್ಲಾ ದಿನಗಳಲ್ಲಿಯೂ ನದೀ ಮುಂತಾದ ತೀರ್ಥಗಳಲ್ಲಿ ಸ್ನಾನ ಮಾಡಬೇಕು. ಈ ದಿನಗಳಲ್ಲಿ ವಿಶೇಷ ಮಂತ್ರಗಳನ್ನು ಜಪಿಸಬೇಕು. ಹವಿಷ್ಯಾನ್ನವನ್ನು ಭಕ್ಷಣ ಮಾಡಬೇಕು. ಇಂದ್ರಿಯಗಳನ್ನು ವಶಪಡಿಸಿಕೊಳ್ಳಬೇಕು. ಹೀಗಿರುವವನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಪಡೆಯುವನು."

"ತುಲಾಮಾಸ ಮಕರಮಾಸ ಮೇಷಮಾಸ ಈ ಮೂರು ತಿಂಗಳುಗಳಲ್ಲಿ ಬೆಳಿಗ್ಗೆ ಬೇಗನೇ ತೀರ್ಥಗಳಲ್ಲಿ ಸ್ನಾನ ಮಾಡಬೇಕು. ಹವಿಷ್ಯಾನ್ನವನ್ನೇ ಭಕ್ಷಿಸಬೇಕು. ಬ್ರಹ್ಮಚರ್ಯವ್ರತವನ್ನು ಪಾಲಿಸಬೇಕು. ಹೀಗೆ ಮಾಡುವವನು ಎಲ್ಲಾ ಪಾಪಗಳಿಂದಲೂ ಮುಕ್ತನಾಗುವನು." ಇದು ಪುರಾಣವಚನ.

ಯ ಇಚ್ಛೇದ್ವಿಪುಲಾನ್ ಭೋಗಾಂಶ್ಚಂದ್ರಸೂರ್ಯಗ್ರಹೇ ಪುಮಾನ್ |
ಪ್ರಾತಃಸ್ನಾಯೀ ಭವೇನ್ನಿತ್ಯಂ ಮಾಸೌ ದ್ವೌ ಮಾಘಫಾಲ್ಗುನೌ || (ಯಮವಚನ)

"ಹಣ ಮನೆ ಮುಂತಾದ ಐಹಿಕ ಸುಖಸಾಮಗ್ರಿಗಳನ್ನೂ ಸ್ವರ್ಗ ಮುಂತಾದ ಪಾರತ್ರಿಕ ಸುಖಸಾಮಗ್ರಿಗಳನ್ನೂ ಅಪೇಕ್ಷಿಸುವವನು ಚಂದ್ರಗ್ರಹಣಕಾಲ ಮತ್ತು ಸೂರ್ಯಗ್ರಹಣಕಾಲಗಳಲ್ಲಿ ಸ್ನಾನ ಮಾಡಬೇಕು. ಪುಷ್ಯಶುದ್ಧ ಹುಣ್ಣಿಮೆಯಿಂದ ಆರಂಭಿಸಿ ಫಾಲ್ಗುಣ ಶುದ್ಧ ಹುಣ್ಣಿಮೆವರೆಗಿನ ಎರಡು ತಿಂಗಳುಗಳಲ್ಲಿ ನಿತ್ಯವೂ ಪ್ರಾತಃಸ್ನಾನವನ್ನು ಮಾಡಬೇಕು." ಇದು ಯಮವಚನ.

ಆಷಾಢಾದಿಚತುರ್ಮಾಸಾನ್ ಪ್ರಾತಃಸ್ನಾಯೀ ಸದಾ ಭವೇತ್ |
ವಿಪ್ರೇಭ್ಯೋ ಭೋಜನಂ ದತ್ವಾ ಕಾರ್ತಿಕ್ಯಾಂ ಗೋಪ್ರದೋ ಭವೇತ್ ||
ಸ ವೈಷ್ಣವಂ ಪದಂ ಯಾತಿ ವಿಷ್ಣುವ್ರತಮಿದಂ ಸ್ಮೃತಂ | (ಮತ್ಸ್ಯಪುರಾಣ)"

ಆಷಾಢಹುಣ್ಣಿಮೆಯಿಂದ ಆರಂಭಿಸಿ ಕಾರ್ತಿಕ ಹುಣ್ಣಿಮೆವರೆಗೆ ನಾಲ್ಕು ತಿಂಗಳು ಪೂರ್ತಿಯಾಗಿ ಎಲ್ಲಾ ದಿನಗಳಲ್ಲಿಯೂ ಬೆಳಿಗ್ಗೆ ಸ್ನಾನ ಮಾಡಬೇಕು. ಎಲ್ಲಾ ದಿನಗಳಲ್ಲಿಯೂ ಬ್ರಾಹ್ಮಣಭೋಜನ ಮಾಡಿಸಬೇಕು. ಕಾರ್ತಿಕ ಹುಣ್ಣಿಮೆ ದಿನದಲ್ಲಿ ಗೋದಾನ ಮಾಡಬೇಕು. ಇದು ವಿಷ್ಣುವ್ರತವೆನಿಸುತ್ತದೆ. ಇದನ್ನು ಮಾಡುವವರು ವಿಷ್ಣುಲೋಕವಾದ ಮುಕ್ತಿಸ್ಥಾನವನ್ನು ಪಡೆಯುವರು." ಇದು ಮತ್ಸ್ಯಪುರಾಣವಚನ.

### ಮಾಘಸ್ನಾನ

ಪುಷ್ಯಫಾಲ್ಗುನಯೋರ್ಮಧ್ಯೇ ಪ್ರಾತಃಸ್ನಾಯೀ ಸದಾ ಭವೇತ್ |
ದರ್ಶಂ ವಾ ಪೌರ್ಣಮಾಸೀಂ ವಾ ಪ್ರಾರಭ್ಯ ಸ್ನಾನಮಾಚರೇತ್ ||
ಪುಣ್ಯಾನ್ಯಹಾನಿ ತ್ರಿಶಂತ್ತು ಮಕರಸ್ಥೇ ದಿವಾಕರೇ || (ನಾರದೀಯವಚನ)

"ಪುಷ್ಯಮಾಸವು ಪೂರ್ತಿಯಾಗಿ ಮುಗಿದು ಫಾಲ್ಗುಣಮಾಸವು ಆರಂಭಿಸುವವರೆಗಿನ ಕಾಲವು ಮಾಘಮಾಸವೆನಿಸುತ್ತದೆ. ಮಾಸವು ಮೂರು ವಿಧವಾಗಿದೆ. (1) ಒಂದು ಹುಣ್ಣಿಮೆಯಿಂದ ಆರಂಭಿಸಿ ಮುಂದಿನ ಹುಣ್ಣಿಮೆಯು ಮುಗಿಯುವವರೆಗಿನ ಕಾಲವು ಪೂರ್ಣಿಮಾಂತ ಮಾಸವೆನಿಸುತ್ತದೆ. ಈ ಕ್ರಮದಿಂದ ಪುಷ್ಯ ತಿಂಗಳಿನ ಹುಣ್ಣಿಮೆಯಿಂದ ಆರಂಭಿಸಿ ಮಾಘಮಾಸ ಹುಣ್ಣಿಮೆವರೆಗಿನ ಕಾಲವು ಮಾಘಮಾಸವೆನಿಸುತ್ತದೆ. (2) ಒಂದು ಅಮಾವಾಸ್ಯೆಯಿಂದ ಆರಂಭಿಸಿ ಮುಂದಿನ ಅಮಾವಾಸ್ಯೆಯು ಮುಗಿಯುವವರೆಗಿನ ಕಾಲವು ಅಮಾವಾಸ್ಯಾಂತಮಾಸವೆನಿಸುತ್ತದೆ. ಈ ಕ್ರಮದಿಂದ ಪುಷ್ಯ ಅಮಾವಾಸ್ಯೆಯಿಂದ ಆರಂಭಿಸಿ ಮಾಘ ಅಮಾವಾಸ್ಯೆ ಮುಗಿಯುವವರೆಗಿನ ಕಾಲವು ಮಾಘಮಾಸವೆನಿಸುತ್ತದೆ. ಮೇಲ್ಕಂಡ ಎರಡು ಪಕ್ಷಗಳೂ ಚಾಂದ್ರಮಾನಪದ್ಧತಿಯನ್ನು ಅವಲಂಬಿಸಿ ಹೇಳಲ್ಪಟ್ಟಿದೆ. (3) ಒಂದು ಸಂಕ್ರಮಣ ದಿನದಿಂದ ಆರಂಭಿಸಿ ಮುಂದಿನ ಸಂಕ್ರಮಣದವರೆಗಿನ ಕಾಲವು ಸೌರಮಾನವೆನಿಸುತ್ತದೆ. ಈ ಕ್ರಮದಿಂದ ಮಕರ ಸಂಕ್ರಾಂತಿ ಪ್ರವೇಶಕಾಲದಿಂದ ಆರಂಭಿಸಿ ಕುಂಭಸಂಕ್ರಮಣದವರೆಗಿನ ಕಾಲವು ಮಾಘಮಾಸವೆನಿಸುತ್ತದೆ. ಇದು ಸೌರಮಾನವನ್ನು ಅವಲಂಬಿಸಿ ಹೇಳಲ್ಪಟ್ಟಿದೆ. ಈ ಮೂರು ವಿಧವಾದ ಮಾಘಮಾಸಗಳಲ್ಲಿ ತಮ್ಮ ಕುಲದಲ್ಲಿ ಪರಂಪರೆಯಿಂದ ಬಂದಿರುವ ಯಾವುದಾದರೊಂದು ಪದ್ಧತಿಯನ್ನು ಅವಲಂಬಿಸಬೇಕು. ಅಥವಾ ಮೂರು ಪದ್ಧತಿಗಳನ್ನು ಅನುಸರಿಸಿದರೂ ಅನುಸರಿಸಬಹುದು. ಹೀಗೆ ತಮಗೆ ಅಭಿಮತವಾದ ಮಾಘಮಾಸದಲ್ಲಿ ಮೂವತ್ತು ದಿನದಲ್ಲಿಯೂ ಪ್ರಾತಃಸ್ನಾನವನ್ನು ಮಾಡಬೇಕು. ಈ ದಿನಗಳೆಲ್ಲವೂ ಪರಮ ಪುಣ್ಯದಿನಗಳೆನಿಸುತ್ತವೆ." ಇದು ನಾರದೀಯಪುರಾಣವಚನವಾಗಿದೆ.

ಮಾಘಸ್ನಾನಫಲಂ ಚಾಪಿ ಪುರಾಣೇ ಪ್ರತಿಪಾದಿತಮ್ |
ಮಾಘಮಾಸೇ ರಟಂತ್ಯಾಪಃ ಕಿಂಚಿದಭ್ಯುದಿತೇ ರವೌ ||
ಬ್ರಹ್ಮಘ್ನಂ ವಾ ಸುರಾಪಂ ವಾ ಕಂ ಪತಂತಂ ಪುನೀಮಹೇ || (ಪುರಾಣವಚನ)

"ಮಾಘಮಾಸದಲ್ಲಿ ನದೀ ಮುಂತಾದ ತೀರ್ಥಗಳು 'ನಮ್ಮಲ್ಲಿ ಬಂದು ಸ್ನಾನ ಮಾಡವವರ ಪಾಪಗಳನ್ನೆಲ್ಲಾ ಪರಿಹರಿಸುವೆವು. ಯಾವ ಅದೃಷ್ಟಶಾಲಿಯೂ ನಮ್ಮಲ್ಲಿ ಬಂದು ಮುಳುಗುವನೋ ತಿಳಿಯಲಿಲ್ಲ' ಎಂದು ಅರುಣೋದಯ ಕಾಲದಿಂದ ಆರಂಭಿಸಿ ಸುರ್ಯೋದಯವಾಗಿ ಸ್ವಲ್ಪಕಾಲದವರೆಗೆ ಗರ್ಜನೆ ಮಾಡುತ್ತಿರುತ್ತವೆ" ಎಂದು ಪುರಾಣಗಳಲ್ಲಿ ಮಾಘಸ್ನಾನದ ಫಲವು ತುಂಬಾ ಹೊಗಳಲ್ಪಟ್ಟಿದೆ. ಇದು ಪುರಾಣವಚನ.

ಬಾಲಸ್ತರುಣಕೋ ವೃದ್ಧಾ ನರನಾರೀನಪುಂಸಕಾಃ |
ಸ್ನಾತ್ವಾ ಮಾಘೇ ಶುಭೇ ತೀರ್ಥೇ ಪ್ರಾಪ್ನುವಂತೀಪ್ಸಿತಂ ಫಲಮ್ ||
ಅಪ್ರಾವೃತಶರೀರಸ್ತು ಯಃ ಕಷ್ಟಂ ಸ್ನಾನಮಾಚರೇತ್ |
ಪದೇ ಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತಿ ಮಾನವಃ ||

ಸ್ನಾತಸ್ಯ ಮಾಘಮಾಸೇ ತು ಶಸ್ತಂ ವೈ ನಿಮ್ನಗಾಜಲಮ್ |
ಸ್ನಾತೋ ವಹ್ನಿಂ ನ ಸೇವೇತ ಹ್ಯಸ್ನಾತೋ ವಾ ಕಥಂಚನ || (ವಿಷ್ಣುವಚನ)

"ಚಿಕ್ಕಮಕ್ಕಳು, ತರುಣರು, ಮುದುಕರು, ಗಂಡಸರು, ಹೆಂಗಸರು, ನಪುಂಸಕರು ಇವರೆಲ್ಲರೂ ಮಾಘಮಾಸದಲ್ಲಿ ಪರಿಶುದ್ಧವಾದ ತೀರ್ಥದಲ್ಲಿ ಸ್ನಾನ ಮಾಡಬೇಕು. ಇದರಿಂದ ಅವರವರು ಅಪೇಕ್ಷಿಸುವ ಫಲವನ್ನು ಪಡೆಯುವರು."

"ಈ ಸ್ನಾನವನ್ನು ಮಾಡುವವರು ಮನೆಯಿಂದ ನದೀ ಮುಂತಾದ ತೀರ್ಥಗಳಿಗೆ ಹೋಗುವಾಗ ಹೊದ್ದುಕೊಂಡು ಹೋಗಬಾರದು. ಚಳಿಯಿಂದ ತುಂಬಾ ಕಷ್ಟಗಳು ಬಂದರೂ ಆ ಕಷ್ಟಗಳನ್ನು ಸಹಿಸಿಕೊಂಡು ಸ್ನಾನವನ್ನು ಮಾಡುವವರು ಸ್ನಾನಕ್ಕೆ ಹೋಗುವಾಗಲೂ ಹಿಂದಿರುಗಿ ಬರುವಾಗಲೂ ಒಂದೊಂದು ಹೆಜ್ಜೆಗೆ ಒಂದೊಂದು ಅಶ್ವಮೇಧಯಾಗದ ಫಲವನ್ನು ಪಡೆಯುವರು."

"ಈ ಸ್ನಾನವನ್ನು ನದಿಯಲ್ಲಿ ಮಾಡಿದರೆ ಮಹಾಫಲವು ಬರುತ್ತದೆ. ಸ್ನಾನ ಮಾಡುವುದಕ್ಕಿಂತ ಮುಂಚಿತವಾಗಿಯೂ ಸ್ನಾನಾನಂತರ ಕಾಲದಲ್ಲಿಯೂ ಚಳಿಗಾಗಿ ಅಗ್ನಿಯನ್ನು ಸೇವಿಸಬಾರದು." ಇದು ವಿಷ್ಣುವಚನ.

ಸರಿತ್ತೋಯಂ ಮಹಾವೇಗಂ ನವಕುಂಭಸ್ಥಿತಂ ತಥಾ |
ವಾಯುನಾ ವಾಸಿತಂ ರಾತ್ರೌ ಗಂಗಾಸ್ನಾನಸಮಂ ಸ್ಮೃತಮ್ || (ವಿಷ್ಣುವಚನ)

"(1) ನದೀಜಲ (2) ಅತಿವೇಗವಾಗಿ ಹರಿಯುತ್ತಿರುವ ನೀರು (3) ಹೊಸಗಡಿಗೆಯಲ್ಲಿ ಹಿಂದಿನ ದಿನದಲ್ಲಿ ನೀರನ್ನು ತುಂಬಿಸಬೇಕು. ಗಾಳಿ ಬೀಸುವ ಪ್ರದೇಶದಲ್ಲಿ ಆಕಾಶದ ಕೆಳಗೆ ರಾತ್ರಿಯ ಆರಂಭದಿಂದ ಬೆಳಗಿನವರೆಗೆ ಇಡಬೇಕು. ಈ ಮೂರುವಿಧವಾದ ನೀರುಗಳು ಗಂಗೆಗೆ ಸಮಾನವಾಗಿವೆ. ಈ ನೀರುಗಳಲ್ಲಿ ಯಾವುದಾದರೊಂದು ನೀರಿನಿಂದ ಸ್ನಾನ ಮಾಡಿದರೆ ಗಂಗಾಸ್ನಾನಫಲವು ಸಿಗುತ್ತದೆ." ಇದು ವಿಷ್ಣುವಚನ.

ಸಂಕಲ್ಪ್ಯ ವಿಧಿವತ್ ಸ್ನಾಯಾದಿತ್ಯೇವಂ ವಿಷ್ಣುರಬ್ರವೀತ್ |
ಸ ಏವ ಸ್ನಾನಮಂತ್ರಮಾಹ, ಮಾಘಮಾಸಮಿದಂ ಪೂರ್ಣಂ ಸಸ್ನೇಹಂ ಸ್ನಾನಮಾದರಾತ್ ||
ತೀರ್ಥಸ್ಯ ಸ ಜಲೇ ನಿತ್ಯಮಿತಿ ಸಂಕಲ್ಪ್ಯ ಚೇತಸಿ |
ತತಃ ಸ್ನಾತ್ವಾ ಶುಭೇ ತೀರ್ಥೇ ಧೃತ್ವಾ ಶಿರಸಿ ವೈ ಮೃದಮ್ ||
ವೇದೋಕ್ತವಿಧಿನಾ ರಾಜನ್ ಸೂರ್ಯಾಯಾರ್ಘ್ಯಂ ಪ್ರದಾಪಯೇತ್ |
ಪಿತ್ರ್ನ್ ಸಂತರ್ಪಯಿತ್ವಾ ತು ಅವತೀರ್ಯ ತತೋ ಜಲಾತ್ ||
ಕಾಷ್ಠಮೌನೀ ನಮಸ್ಕೃತ್ಯ ಪೂಜಯೇತ್ಪುರುಷೋತ್ತಮಮ್ |
ಶಂಖಚಕ್ರಧರಂ ದೇವಂ ಮಾಧವಂ ನಾಮ ಪೂಜಯೇತ್ ||
ವಹ್ನೌ ಹುತ್ವಾ ವಿಧಾನೇನ ತತಸ್ತ್ವೇಕಾಸನೋ ಭವೇತ್ |
ಭೂಶಯ್ಯೋ ಬ್ರಹ್ಮಚರ್ಯೇಣ ಶಕ್ತಃ ಸ್ನಾನಂ ಸಮಾಚರೇತ್ ||
ಅಶಕ್ತಸ್ಯ ಧನಾಢ್ಯಸ್ಯ ಸ್ವೇಚ್ಛಾ ಸರ್ವತ್ರ ಕಥ್ಯತೇ |
ಅಶಕ್ಯಮೇವ ಕರ್ತವ್ಯಂ ಮಾಘಸ್ನಾನಮಿತಿ ಸ್ಥಿತಮ್ || (ವಿಷ್ಣುವಚನ)

"ಮಾಘಸ್ನಾನವನ್ನು ಆರಂಭಿಸುವುದಕ್ಕೆ ಪೂರ್ವದಲ್ಲಿ ಒಂದು ತಿಂಗಳಿನವರೆಗೆ ಯಾವುದಾದರೊಂದು ತೀರ್ಥದಲ್ಲಿ ಮೂವತ್ತುದಿನಗಳವರೆಗೂ ಸ್ನಾನ ಮಾಡುವುದಾಗಿ ನಿರ್ಣಯಿಸಬೇಕು. ಆ ಕಾಲದಲ್ಲಿ ತಾನು ಸ್ವೀಕರಿಸುವ ವಿಶೇಷ ನಿಯಮಗಳನ್ನು ಹೇಳಿ ವಿಧಿಪೂರ್ವಕವಾಗಿ ಸಂಕಲ್ಪ ಮಾಡಿ ಸ್ನಾನವನ್ನು ಆರಂಭಿಸಬೇಕು. ಪ್ರತಿದಿನದಲ್ಲಿಯೂ ಸ್ನಾನಕ್ಕಿಂತ

ಪೂರ್ವದಲ್ಲಿ ವಿಧಿಪೂರ್ವಕವಾಗಿ ಸಂಕಲ್ಪ ಮಾಡಬೇಕು. ಸ್ನಾನಕಾಲದಲ್ಲಿ ಹೇಳಬೇಕಾದ ಮಂತ್ರಗಳನ್ನು ಮುಂದೆ ಹೇಳುವೆವು. ಅವುಗಳನ್ನೂ ಪಠಿಸಬೇಕು. ತುಂಬಾ ಭಕ್ತಿಯಿಂದ ತೀರ್ಥಜಲದಲ್ಲಿ ಒಂದು ತಿಂಗಳು ಮುಗಿಯುವವರೆಗೆ ಶ್ರದ್ಧೆಯಿಂದ ಸ್ನಾನ ಮಾಡಬೇಕು. ಸ್ನಾನ ಮಾಡಿ ಮುಗಿದ ಮೇಲೆ ಆ ತೀರ್ಥದಲ್ಲಿರುವ ಮೃತ್ತಿಕೆಯನ್ನು ಶಿರಸ್ಸಿನಲ್ಲಿ ಧರಿಸಬೇಕು. ಗೋಪೀಚಂದನ ಮತ್ತು ಮುದ್ರೆಗಳನ್ನು ಧರಿಸಬೇಕು. ವೇದೋಕ್ತವಿಧಿಯಿಂದ ಸೂರ್ಯದೇವರಿಗೆ ಅರ್ಘ್ಯ ಕೊಡಬೇಕು. ಪಿತೃಗಳಿಗೆ ತರ್ಪಣ ಕೊಡಬೇಕು. ನೀರಿನಿಂದ ಮೇಲೆ ಬರಬೇಕು. ಯಾವ ಕಾರಣದಿಂದಲೂ ಮಾತಾಡಬಾರದು. ಕಟ್ಟಿಗೆಯು ಹೇಗೆ ಮಾತಾಡುವುದಿಲ್ಲವೋ ಅದರಂತಿರಬೇಕು. ಇದೇ ಕಾಷ್ಠಮೌನವೆನಿಸುತ್ತದೆ. ಈ ಕಾಷ್ಠಮೌನವನ್ನು ಧರಿಸಿ ಮನೆಗೆ ಬರಬೇಕು. ಶಂಖಚಕ್ರಗಳನ್ನು ಧರಿಸಿರುವ ಪುರುಷೋತ್ತಮನಾದ 'ಮಾಧವ' ಎಂಬ ಹೆಸರುಳ್ಳ ಶ್ರೀಹರಿಯನ್ನು ಪೂಜಿಸಬೇಕು. ಅಗ್ನಿಯಲ್ಲಿ ಅಗ್ನಿಹೋತ್ರಹೋಮ ಮುಂತಾದ ಹೋಮಗಳನ್ನು ಮಾಡಬೇಕು. ತಿಂಗಳು ಪೂರ್ತಿಯಾಗುವವರೆಗೆ ಒಂದೇ ಸ್ಥಳದಲ್ಲಿರಬೇಕು. ಒಂದೇ ಆಸನದಲ್ಲಿ ಕೂಡಬೇಕು. ಶಕ್ತಿಯಿದ್ದವರು ಬ್ರಹ್ಮಚರ್ಯವ್ರತದಿಂದ ನೆಲದಲ್ಲಿ ಮಲಗಬೇಕು. ಶಕ್ತಿಯಿಲ್ಲದ ಶ್ರೀಮಂತರು ತಮ್ಮ ಸೌಕರ್ಯಾನುಸಾರವಾಗಿ ಆದಷ್ಟು ನಿಯಮಗಳನ್ನು ಪಾಲಿಸಬೇಕು. ಆದರೆ ಈ ಮಾಘಸ್ನಾನದ ವಿಷಯದಲ್ಲಿ ಶಕ್ತಿಯಿಲ್ಲದವರೂ ಎಲ್ಲಾ ವಿಶೇಷ ನಿಯಮಗಳನ್ನು ಪಾಲಿಸುವುದೇ ಉತ್ತಮವೆನಿಸುತ್ತದೆ." ಇದು ವಿಷ್ಣುವಚನ.

### ಆಮಲಕಸ್ನಾನಂ

ತುಷ್ಯತ್ಯಾಮಲಕೈರ್ವಿಷ್ಣುರೇಕಾದಶ್ಯಾಂ ವಿಶೇಷತಃ |
ದ್ವಾದಶ್ಯಾಂ ತು ವಿಶೇಷೇಣ ಭಕ್ಷಯೇತ್ಸ್ನಾನಮಾಚರೇತ್ ||

"ನೆಲ್ಲಿಯಿಂದ ಸ್ನಾನ ಮತ್ತು ನೆಲ್ಲಿಯ ಭಕ್ಷಣ ಇವೆರಡರಿಂದ ಶ್ರೀ ವಿಷ್ಣುವು ಸಂತುಷ್ಟನಾಗುವನು. ಏಕಾದಶೀ ದಿನದಲ್ಲಿ ನೆಲ್ಲಿಯ ಸ್ನಾನದಿಂದಲೂ ದ್ವಾದಶೀದಿನದಲ್ಲಿ ನೆಲ್ಲಿಯ ಸ್ನಾನ ಮತ್ತು ಭಕ್ಷಣಗಳಿಂದಲೂ ಶ್ರೀಹರಿಯು ವಿಶೇಷವಾಗಿ ಪ್ರೀತನಾಗುವನು."

ವರ್ಜ್ಯಾನ್ಯಾಮಲಕಸ್ನಾನೇ ವ್ಯಾಸಃ ಸಂಪ್ರಾಹ ಧರ್ಮವಿತ್ |
ಸಪ್ತಮೀಂ ನವಮೀಂ ಚೈವ ಪರ್ವಕಾಲಂ ಚ ವರ್ಜಯೇತ್ ||
ರವಿಭೌಮದಿನಂ ಚೈವ ಪರ್ವಕಾಲಂ ಚ ವರ್ಜಯೇತ್ |
ರವಿಭೌಮದಿನಂ ಚೈವ ಗ್ರಹಣಂ ಸೂರ್ಯಸಂಕ್ರಮಮ್ ||
ಷಷ್ಠೀಂ ಚೈವ ಸದಾ ರಾತ್ರಿಂ ವರ್ಜಯೇಚ್ಚ ತ್ರಯೋದಶೀಮ್ | (ವ್ಯಾಸವಚನ)

"ನೆಲ್ಲಿಯಿಂದ ಸ್ನಾನ ಮಾಡಲು ನಿಷಿದ್ಧವಾಗಿರುವ ದಿನಗಳನ್ನು ತಿಳಿಸುತ್ತೇವೆ. (1) ಸಪ್ತಮೀ (2) ನವಮೀ (3) ರವಿವಾರ (4) ಮಂಗಳವಾರ (5) ಗ್ರಹಣದಿನ (6) ಸಂಕ್ರಾಂತಿದಿನ (7) ಷಷ್ಠೀ (8) ಪರ್ವದಿನಗಳು (9) ರಾತ್ರಿಕಾಲ (10) ಹುಣ್ಣಿಮೆ (11) ಅಮಾವಾಸ್ಯೆ ಇಷ್ಟು ಸಂದರ್ಭಗಳಲ್ಲಿ ನೆಲ್ಲಿಯಿಂದ ಸ್ನಾನ ಮಾಡಕೂಡದು." ಇದು ವ್ಯಾಸರು ಹೇಳಿರುವುದು.

ಧಾತ್ರೀಫಲೇನ ಚ ಸ್ನಾನಂ ಪ್ರಾತಃಕಾಲೇ ಚ ವರ್ಜಯೇತ್ | (ಶಾತಾತಪರ ವಚನ)

ಏತದ್ದ್ವಾದಶೀವ್ಯತಿರಿಕ್ತವಿಷಯಂ 'ದ್ವಾದಶ್ಯಾಂ ತು ವಿಶೇಷೇಣ ಭಕ್ಷಯೇತ್ಸ್ನಾನಮಾಚರೇತ್' ಇತಿ ವಿಶೇಷವಿಧಾನಾತ್ (ಸ್ಮೃತಿಮುಕ್ತಾವಲೀವಚನ)

"ನೆಲ್ಲಿಯಿಂದ ಪ್ರಾತಃಕಾಲದಲ್ಲಿ ಸ್ನಾನ ಮಾಡಬಾರದು" ಇದು ಶಾತಾತಪರ ವಚನ. ಈ ಶಾತಾತಪರ ವಚನದಲ್ಲಿ ಎಲ್ಲಾ ದಿನಗಳಲ್ಲಿಯೂ ನೆಲ್ಲಿಯಿಂದ ಬೆಳಿಗ್ಗೆ ಸ್ನಾನ ಮಾಡಕೂಡದು ಎಂದು ಹೇಳಿದೆ. ಹಿಂದೆ ಹೇಳಿರುವ 'ದ್ವಾದಶ್ಯಾಂ ತು ವಿಶೇಷೇಣ' ಎಂಬ ವಾಕ್ಯದಲ್ಲಿ ದ್ವಾದಶೀದಿನದಲ್ಲಿ ನೆಲ್ಲಿಯ ಸ್ನಾನವು ವಿಶೇಷಫಲವನ್ನು ಕೊಡುವುದಾಗಿ ಹೇಳಿದೆ.

ದ್ವಾದಶೀದಿನದಲ್ಲಿ ನೆಲ್ಲಿಯಿಂದ ಸ್ನಾನವನ್ನು ಮಾಡುವುದಾಗಿದ್ದರೆ ಪ್ರಾತಃಕಾಲದಲ್ಲಿಯೇ ಮಾಡಬೇಕು. ಆದ್ದರಿಂದ ಈ ವಚನಕ್ಕೂ ಶಾತಾತಪರ ವಚನಕ್ಕೂ ವಿರೋಧವು ಬಂತು. ಈ ವಿರೋಧವನ್ನು ಪರಿಹರಿಸಬೇಕು. ಅದಕ್ಕಾಗಿ ಶಾತಾತಪರ ವಚನವು ದ್ವಾದಶೀದಿನವನ್ನು ಬಿಟ್ಟು ಇತರ ದಿನಗಳಲ್ಲಿ ಪ್ರಾತಃಕಾಲದಲ್ಲಿ ನೆಲ್ಲಿಯಿಂದ ಸ್ನಾನವನ್ನು ಮಾಡಕೂಡದು ಎಂದು ಹೇಳುತ್ತದೆಯೆಂದು ತಿಳಿಯಬೇಕು. ಇದರಿಂದ ಎರಡು ವಾಕ್ಯಗಳಿಗೂ ವಿರೋಧವು ಪರಿಹರಿಸಲ್ಪಟ್ಟಂತಾಗುವುದು. ಇದು ಸ್ಮೃತಿಮುಕ್ತಾವಲೀಕಾರರು ತಿಳಿಸಿರುವ ನಿರ್ಣಯ.

ನಿಷಿದ್ಧದಿನೇ ಆಮಲಕಸ್ನಾನೇ ದೋಷಃ ಸ್ಮೃತ್ಯಂತರೇ ಪ್ರತಿಪಾದಿತಃ | (ಸ್ಮೃತಿಮುಕ್ತಾವಲೀ ವಚನ)

ಆದಿತ್ಯವಾರೇ ಸಂಕ್ರಾಂತ್ಯಾಂ ನವಮ್ಯಾಂ ಪರ್ವಣೋರ್ದ್ವಯೋಃ |
ನರೋ ನಾಮಲಕೈಃ ಸ್ನಾಯಾದಲಕ್ಷ್ಮ್ಯಾ ಪರಿಗೃಹ್ಯತೇ || (ಸ್ಮೃತ್ಯಂತರವಚನ)

"ನಿಷಿದ್ಧದಿನಗಳಲ್ಲಿ ನೆಲ್ಲಿಯಿಂದ ಸ್ನಾನ ಮಾಡಿದರೆ ಬರುವ ದೋಷವು ಸ್ಮೃತ್ಯಂತರದಲ್ಲಿ ಹೇಳಲ್ಪಟ್ಟಿದೆ." ಇದು ಸ್ಮೃತಿಮುಕ್ತಾವಲೀಕಾರರ ವಚನ. "(1) ಆದಿತ್ಯವಾರ (2) ಸಂಕ್ರಾಂತಿ (3) ನವಮೀ (4) ಅಮಾವಾಸ್ಯಾ (5) ಹುಣ್ಣಿಮೆ ಮುಂತಾದ ನಿಷಿದ್ಧದಿನಗಳಲ್ಲಿ ನೆಲ್ಲಿಯಿಂದ ಸ್ನಾನ ಮಾಡಬಾರದು. ಹಾಗೆ ಮಾಡಿದರೆ ದಾರಿದ್ರ್ಯವು ಏರ್ಪಡುತ್ತದೆ." ಇದು ಸ್ಮೃತ್ಯಂತರ ವಚನ.

**ಯತ್ತು,** ತುಷ್ಯತ್ಯಾಮಲಕೈರ್ವಿಷ್ಣುರೇಕಾದಶ್ಯಾಂ ವಿಶೇಷತಃ |
ಸ್ನಾಯಾತ್ತು ರವಿವಾರೇಽಪಿ ಸಂಕ್ರಾಂತೌ ಭೌಮವಾಸರೇ ||
ದ್ವಾದಶ್ಯಾಂ ಭಕ್ಷಯೇದೇನಂ ಸರ್ವಪಾಪೈಃ ಪ್ರಮುಚ್ಯತೇ | (ಷಟ್ತ್ರಿಂಶನ್ಮತ)

ಇತಿ ಷಟ್ತ್ರಿಂಶನ್ಮತೇ ತತ್ ವ್ಯಾಸಶಾತಾತಪಸ್ಮೃತ್ಯಂತರವಿರೋಧಾದಾಮಲಕಪ್ರಶಂಸಾಪರಮ್ || (ಸ್ಮೃತಿಮುಕ್ತಾವಲೀವಾಕ್ಯ)

(1) ಏಕಾದಶೀ (2) ರವಿವಾರ (3) ಸಂಕ್ರಾಂತಿ (4) ಕುಜವಾರ (5) ದ್ವಾದಶೀ ಈ ದಿನಗಳಲ್ಲಿ ನೆಲ್ಲಿಯಿಂದ ಸ್ನಾನ ಮಾಡಿದರೆ ಎಲ್ಲಾ ಪಾಪಗಳೂ ದೂರವಾಗುತ್ತವೆ." ಎಂದು ಷಟ್ತ್ರಿಂಶನ್ಮತವಚನ.

"ಈ ವಚನದಲ್ಲಿ (1) ರವಿವಾರ (2) ಸಂಕ್ರಾಂತಿ (3) ಕುಜವಾರ ಈ ಮೂರುದಿನಗಳಲ್ಲಿ ನೆಲ್ಲಿಯಿಂದ ಸ್ನಾನ ಮಾಡಬೇಕೆಂದು ಹೇಳಿದೆ. ಹಿಂದೆ ಹೇಳಿದ ವ್ಯಾಸವಚನ, ಶಾತಾತಪವಚನ ಮತ್ತು ಸ್ಮೃತ್ಯಂತರವಚನಗಳಲ್ಲಿ ಮಾಡಕೂಡದೆಂದು ಹೇಳಿದೆ. ಆದ್ದರಿಂದ ಷಟ್ತ್ರಿಂಶನ್ಮತವಚನಕ್ಕೂ ವ್ಯಾಸ ಮುಂತಾದವರ ವಚನಗಳಿಗೂ ವಿರೋಧವು ಬಂತು. ಅದಕ್ಕಾಗಿ ಷಟ್ತ್ರಿಂಶನ್ಮತಗ್ರಂಥವು ರವಿವಾರ, ಸಂಕ್ರಾಂತಿ, ಮಂಗಳವಾರಗಳಲ್ಲಿ ನೆಲ್ಲಿಯಿಂದ ಸ್ನಾನ ಮಾಡಬೇಕೆಂದು ಹೇಳುವುದಕ್ಕಾಗಿ ಹೊರಟಿಲ್ಲವೆಂದೂ ನೆಲ್ಲಿಯಿಂದ ಸ್ನಾನವನ್ನು ಮಾಡುವುದು ಪ್ರಶಸ್ತ ಎಂದು ಹೊಗಳುವುದಕ್ಕಾಗಿ ಆ ವಾಕ್ಯವು ಹೊರಟಿದೆಯೆಂದೂ ಹೇಳಬೇಕು. ಇದರಿಂದ ವಿರೋಧವು ಪರಿಹರಿಸಲ್ಪಡುತ್ತದೆ." ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

### ತಿಲಸ್ನಾನಂ

ತಿಲಸ್ನಾಯೀ ತಿಲೋದ್ವರ್ತೀ ತಿಲಹೋಮೀ ತಿಲೋದಕೀ |
ತಿಲಭುಕ್ತಿಲದಾತಾ ಚ ಷಟ್ತಿಲೋ ನಾವಸೀದತಿ ||

(1) ಎಳ್ಳಿನಿಂದ ಸ್ನಾನ (2) ಎಳ್ಳಿನ ಪುಡಿಯಿಂದ ದೇಹವನ್ನು ತೊಳೆಯುವುದು (3) ಎಳ್ಳಿನಿಂದ ಹೋಮ ಮಾಡುವುದು (4) ಎಳ್ಳಿನಿಂದ ಪಿತೃಗಳಿಗೆ ತರ್ಪಣ ಕೊಡುವುದು (5) ಎಳ್ಳು ಬೆಲ್ಲಗಳನ್ನು ಸೇರಿಸಿ ತಿನ್ನುವುದು (6) ಎಳ್ಳನ್ನು ದಾನ ಮಾಡುವುದು ಈ ಆರು ಕಾರ್ಯಗಳನ್ನು ಮಾಡುತ್ತಿರುವವನಿಗೆ ಶ್ರಮಗಳೆಲ್ಲವೂ ದೂರವಾಗುತ್ತದೆ.

ಸರ್ವದಾ ತು ತಿಲೈಃ ಸ್ನಾನಂ ಪುಣ್ಯಂ ವ್ಯಾಸೋಽಬ್ರವೀನ್ಮುನಿಃ (ವ್ಯಾಸ ವಚನ)
ಅಮಾಯಾಂ ಚೈವ ಸಂಕ್ರಾಂತಾವಷ್ಟಮ್ಯಾಂ ರವಿವಾಸರೇ |
ಪೌರ್ಣಮಾಸ್ಯಾಂ ವ್ಯತೀಪಾತೇ ಗ್ರಹಣೇ ವೈಧೃತೌ ನಿಶಿ ||
ಏಕಾದಶ್ಯಾಂ ವಿಶೇಷೇಣ ದ್ವಾದಶ್ಯಾಂ ಚ ವ್ರ(ಮೃ)ತೇಽಹನಿ |
ಭೃತ್ಯಮಿತ್ರಕಲತ್ರಾರ್ಥಂ ತಿಲಪಿಷ್ಟಂ ಚ ನ ಸ್ಪೃಶೇತ್ ||
ತೈಲೇನ ತಿಲಕಲ್ಕೇನ ನ ಸ್ನಾಯಾತ್ತು ಸದಾ ನಿಶಿ |
ನ ತೈಲಂ ತಿಲಕಲ್ಕಂ ಚ ಪಿಣ್ಯಾಕಂ ಭಕ್ಷಯೇದಿತಿ || (ವ್ಯಾಸ ವಚನ)

ಯಾವಾಗಲೂ ಎಳ್ಳುಗಳಿಂದ ಸ್ನಾನವನ್ನು ಮಾಡಬೇಕೆಂದು ವ್ಯಾಸ ಎಂಬ ಮುನಿಯು ಹೇಳಿರುವರು. ಅದೇ ವ್ಯಾಸರು ಇನ್ನೊಂದು ಸಂದರ್ಭದಲ್ಲಿ ಕೆಲವು ಸಂದರ್ಭಗಳಲ್ಲಿ ಎಳ್ಳಿನಿಂದ ಸ್ನಾನವನ್ನು ನಿಷೇಧಿಸಿರುವರು. ಅದನ್ನು ಈಗ ತಿಳಿಸುತ್ತೇವೆ. (1) ಅಮಾವಾಸ್ಯಾ (2) ಸಂಕ್ರಾಂತಿದಿನ (3) ಅಷ್ಟಮೀತಿಥಿ (4) ರವಿವಾರ (5) ಹುಣ್ಣಿಮೆ (6) ವ್ಯತೀಪಾತಯೋಗ (7) ಗ್ರಹಣದಿನ (8) ವೈಧೃತಿಯೋಗ (9) ಅರ್ಧರಾತ್ರಿಕಾಲ (10) ಏಕಾದಶೀತಿಥಿ (11) ದ್ವಾದಶೀ ತಿಥಿ (12) ವ್ರತಗಳನ್ನು ಅನುಷ್ಠಾನ ಮಾಡುವ ದಿನಗಳು (13) ಪಿತೃಶ್ರಾದ್ಧದಿನಗಳು ಈ ದಿನಗಳಲ್ಲಿ ಸೇವಕರಿಗೂ ಮಿತ್ರರಿಗೂ ಕ್ಷೇಮವನ್ನು ಬಯಸುವವರು ಎಳ್ಳಿನಿಂದ ಮಿಶ್ರಿತವಾದ ಹಿಟ್ಟನ್ನು ಮುಟ್ಟಲೂ ಕೂಡದು. ಎಳ್ಳೆಣ್ಣೆ, ರುಬ್ಬಿದ ಎಳ್ಳಿನ ಮುದ್ದೆ ಇವುಗಳಿಂದ ರಾತ್ರಿಯಲ್ಲಿ ಸರ್ವಥಾ ಸ್ನಾನ ಮಾಡಬಾರದು. ಎಳ್ಳೆಣ್ಣೆ, ರುಬ್ಬಿದ ಎಳ್ಳಿನ ಮುದ್ದೆ, ಎಳ್ಳಿನ ಹಿಂಡಿ ಇವುಗಳನ್ನು ರಾತ್ರಿಕಾಲದಲ್ಲಿ ಯಾವಾಗಲೂ ತಿನ್ನಬಾರದು.

### ಅರಳನ್ನು ರಾತ್ರಿಯಲ್ಲಿ ಭಕ್ಷಿಸಬಾರದು

ಧಾನಾದಧಿಕಸಕ್ತೂಂಶ್ಚ ಶ್ರೀಕಾಮೋ ವರ್ಜಯೇನ್ನಿಶಿ |
ಭೋಜನಂ ತಿಲಸಂಮಿಶ್ರಂ ಸ್ನಾನಂ ಚೈವ ವಿಚಕ್ಷಣಃ || (ವ್ಯಾಸವಚನ)

ಬೀಜಕ್ಕಿಂತ ದೊಡ್ಡ ಆಕಾರವನ್ನು ಪಡೆದಿರುವ ಅವಲಕ್ಕಿ, ಅರಳು ಮುಂತಾದ ವಸ್ತುಗಳನ್ನು ರಾತ್ರಿಯಲ್ಲಿ ಭಕ್ಷಿಸಿದರೆ ಸಂಪತ್ತಿನ ನಾಶವಾಗುತ್ತದೆ. ಎಳ್ಳಿನಿಂದ ಮಿಶ್ರಿತವಾದ ವಸ್ತುವಿನ ಭಕ್ಷಣವನ್ನೂ, ಎಳ್ಳಿನಿಂದ ಸ್ನಾನವನ್ನೂ ರಾತ್ರಿಯಲ್ಲಿ ಮಾಡಬಾರದು.

### ಸಮುದ್ರಸ್ನಾನ ವಿಧಿ

ಪಾಷಾಣಮಂತ್ರಂ ಪ್ರಥಮಂ ಪುರಸ್ತಾದಾವಾಹನಂ ತತ್ರ ನಮಸ್ಕ್ರಿಯಾ ಚ |
ಅರ್ಘ್ಯಂ ತಥಾ ಪ್ರಾರ್ಥನಮಭ್ಯನುಜ್ಞಾ ಸ್ನಾನಂ ಪ್ರಕುರ್ಯಾದ್ದಶತರ್ಪಣಂ ಚ || (ಸಂಗ್ರಹಶ್ಲೋಕ)

(1) ಪಾಷಾಣಮಂತ್ರ (2) ಆವಾಹನ (3) ನಮಸ್ಕಾರ (4) ಅರ್ಘ್ಯ (5) ಪ್ರಾರ್ಥನೆ (6) ಅನುಜ್ಞಾಸ್ವೀಕಾರ (7) ಸ್ನಾನ (8) ಹತ್ತು ತರ್ಪಣಗಳು. ಈ ಎಂಟರಿಂದ ಸಮುದ್ರಸ್ನಾನವು ಪೂರ್ಣವಾಗುತ್ತದೆ. ಕ್ರಮವಾಗಿ ಇವುಗಳನ್ನು ತಿಳಿಸುತ್ತೇವೆ.

### ಪಾಷಾಣಮಂತ್ರ

ಪಿಪ್ಪಲಾದಸಮುತ್ಪನ್ನೇ ಕೃತ್ಯೇ ಲೋಕಭಯಂಕರಿ |
ಪಾಷಾಣಂ ತೇ ಮಯಾ ದತ್ತಮಾಹಾರಾರ್ಥಂ ಪ್ರಕಲ್ಪಿತಮ್ ||

### ಆವಾಹನಮಂತ್ರ

ವಿಶ್ವಾಚೀ ಚ ಘೃತಾಚೀ ಚ ವಿಶ್ವಯೋನೇ ವಿಶಾಂ ಪತೇ |
ಸಾನ್ನಿಧ್ಯಂ ಕುರು ಮೇ ದೇವ ಸಾಗರೇ ಲವಣಾಂಭಸಿ ||

### ನಮಸ್ಕಾರಮಂತ್ರ

ನಮಸ್ತೇ ವಿಶ್ವಗುಪ್ತಾಯ ನಮೋ ವಿಷ್ಣವಪಾಂ ಪತೇ |
ನಮೋ ಜಲಧಿರೂಪಾಯ ನದೀನಾಂ ಪತಯೇ ನಮಃ ||

### ಅರ್ಘ್ಯಮಂತ್ರ

ಸರ್ವರತ್ನಮಯ ಶ್ರೀಮಾನ್ ಸರ್ವರತ್ನಾಕರಾಕರ |
ಸರ್ವರತ್ನಪ್ರದಾತಸ್ತ್ವಂ ಗೃಹಾಣಾರ್ಘ್ಯಂ ಮಹೋದಧೇ ||

### ಪ್ರಾರ್ಥನಮಂತ್ರ

ಪೃಥಿವ್ಯಾಂ ಯಾನಿ ತೀರ್ಥಾನಿ ಪ್ರಾವಿಶಂಸ್ತ್ವಾಂ ಮಹೋದಧೇ |
ಸ್ನಾತಸ್ಯ ಮೇ ಫಲಂ ದೇಹಿ ಸರ್ವಸ್ಮಾದಪಿ ಚಾಂಭಸಃ ||

### ಅಭ್ಯನುಜ್ಞಾಮಂತ್ರ

ಸಮಸ್ತಜಗದಾಧಾರ ಶಂಖಚಕ್ರಗದಾಧರ |
ಅನುಜ್ಞಾಂ ದೇಹಿ ಮೇ ದೇವ ಯುಷ್ಮತ್ತೀರ್ಥನಿಷೇವಣೇ ||

### ಸ್ನಾನಮಂತ್ರ

ವೇದಾದಯೋ ವೇದವಸಿಷ್ಠಯೋನಿಃ ಸರಿತ್ಪತಿಃ ಸಾಗರರತ್ನಯೋನಿಃ |
ಅಗ್ನಿಶ್ಚ ಮೇ ತೇಜ ಇಲಾ ಚ ತೇಜೋ ರೇತೋಧಾ ಯಜ್ಞಮಮೃತಸ್ಯ ನಾಭಿಃ ||
ಇದಂ ತೇಽನ್ಯಾಭಿರಸಮಾನಮದ್ಭಿರ್ಯಾಃ ಕಾಶ್ಚ ಸಿಂಧುಂ ಪ್ರವಿಶಂತ್ಯಾಪಃ |
ಸರ್ಪೋ ಜೀರ್ಣಾಮಿವ ತ್ವಚಂ ಜಹಾತೇ ಪಾಪಂ ಶರೀರಾತ್ಸಶಿರಸ್ಕೋಽಭ್ಯುಪೇತ್ಯ ||

### ತರ್ಪಣಮಂತ್ರ

ಪಿಪ್ಪಲಾದಂ ಕವಿಂ ಕಣ್ವಂ ಕೃತಾಂತಂ ಜೀವಿಕೇಶ್ವರಮ್ |
ಮನ್ಯುಂ ಚ ಕಾಲರಾತ್ರಿಂ ಚ ವಿದ್ಯಾಂ ಚಾಹರ್ಗಣೇಶ್ವರಮ್ ||

(1) ಪಿಪ್ಪಲಾದಂ ತರ್ಪಯಾಮಿ (2) ಕವಿಂ ತರ್ಪಯಾಮಿ (3) ಕಣ್ವಂ ತರ್ಪಯಾಮಿ (4) ಕೃತಾಂತಂ ತರ್ಪಯಾಮಿ (5) ಜೀವಿಕೇಶ್ವರಂ ತರ್ಪಯಾಮಿ (6) ಮನ್ಯುಂ ತರ್ಪಯಾಮಿ (7) ಕಾಲರಾತ್ರಿಂ ತರ್ಪಯಾಮಿ (8) ವಿದ್ಯಾಂ ತರ್ಪಯಾಮಿ (9) ಅಹರ್ಗಣೇಶ್ವರಂ ತರ್ಪಯಾಮಿ (10) ಸಮುದ್ರಂ ತರ್ಪಯಾಮಿ ಎಂದು ಹತ್ತು ತರ್ಪಣಗಳನ್ನು ಮೊದಲು ಕೊಡಬೇಕು. ಅನಂತರದಲ್ಲಿ ದೇವತರ್ಪಣ ಋಷಿತರ್ಪಣಗಳನ್ನು ಮಾಡಿ ಪಿತೃತರ್ಪಣವನ್ನು ಮಾಡಬೇಕು. ಇದರಿಂದ ಸಮುದ್ರಸ್ನಾನವು ಪೂರ್ಣವಾಗುತ್ತದೆ.

### ಸಮುದ್ರಜಲದಿಂದ ಆಚಮನನಿಷೇಧ

ಉದಕಾಂತರೇಣಾಚಮನಂ, ನ ಸಮುದ್ರೋದಕೇನ 'ನ ಸಮುದ್ರಾದ್ಭಿರಾಚಾಮೇತ್' ಇತಿ ಸ್ಮರಣಾತ್. ನ ಚ 'ಯೇನ ಸ್ನಾನಂ ತೇನೈವಾಚಾಮೇತ್' ಇತಿ ನಿಯಮೋಽಸ್ತಿ. ಉಕ್ತಂ ಚ ತೈತ್ತಿರೀಯಶ್ರುತೌ 'ತಸ್ಮಾತ್ಸಮುದ್ರಸ್ಯ ನ ಪಿಬಂತಿ' ಇತಿ (ಸ್ಮೃತಿಮುಕ್ತಾವಲೀಕಾರರ ವಚನ)

"ಸಮುದ್ರಸ್ನಾನಕಾಲದಲ್ಲಾಗಲೀ, ಇತರ ಸಂದರ್ಭಗಳಲ್ಲಾಗಲೀ, ಸಮುದ್ರದ ನೀರನಿಂದ ಆಚಮನವನ್ನು ಮಾಡಕೂಡದು. ಮನೆಯಿಂದ ತೆಗೆದುಕೊಂಡು ಹೋದ ನೀರು ಅಥವಾ ಬೇರೆ ನೀರಿನಿಂದಲೇ ಆಚಮನವನ್ನು ಮಾಡಬೇಕು.

ಯಾವ ನೀರಿನಿಂದ ಸ್ನಾನವನ್ನು ಮಾಡುತ್ತೇವೆಯೋ ಅದೇ ನೀರಿನಿಂದ ಆಚಮನವನ್ನು ಮಾಡಬೇಕೆಂಬ ನಿಯಮವಿಲ್ಲ. ಆದ್ದರಿಂದಲೇ ಸ್ಮೃತಿಯಲ್ಲಿಯೂ, ತೈತ್ತಿರೀಯಶ್ರುತಿಯಲ್ಲಿಯೂ, ಸಮುದ್ರದ ಜಲದಿಂದ ಆಚಮನವನ್ನು ಮಾಡಕೂಡದೆಂದು ಹೇಳಿರುತ್ತದೆ.

### ತರ್ಪಣಾದಿಗಳನ್ನು ಸಮುದ್ರಜಲದಿಂದಲೇ ಮಾಡಬೇಕು

'ತರ್ಪಣಾದಿಕಂ ತು ತೇನೈವ ಕಾರ್ಯಂ' ನಿಷೇಧಾಭಾವಾತ್ (ಸ್ಮೃತಿಮುಕ್ತಾವಲೀಕಾರರ ವಚನ) "ತರ್ಪಣ ಮುಂತಾದ ಎಲ್ಲಾ ಕಾರ್ಯಗಳನ್ನೂ, ಸಮುದ್ರಜಲದಿಂದ ಮಾಡಕೂಡದೆಂದು ಎಲ್ಲಿಯೂ ನಿಷೇಧಿಸಲ್ಪಟ್ಟಿಲ್ಲ. ಆದ್ದರಿಂದ ತರ್ಪಣಾದಿಗಳನ್ನು ಸಮುದ್ರದ ನೀರಿನಿಂದಲೇ ಮಾಡಬೇಕು.

### ಬಿಸಿನೀರಿನಿಂದ ಆಚಮನ ಮಾಡಬಾರದು

'ಏವಮುಷ್ಣೋದಕಸ್ನಾನೇಽಪಿ ದ್ರಷ್ಟವ್ಯಮ್' (ಸ್ಮೃತಿಮುಕ್ತಾವಲೀಕಾರರ ವಚನ) ಬಿಸಿನೀರಿನಿಂದ ಸ್ನಾನ ಮಾಡುವಾಗಲೂ ಸಮುದ್ರಸ್ನಾನದಂತೆಯೇ ತಿಳಿಯಬೇಕು. ಅಂದರೆ ಆಚಮನವನ್ನು ಬಿಸಿನೀರಿನಿಂದ ಮಾಡಕೂಡದು. ತರ್ಪಣಾದಿಗಳನ್ನು ಮಾಡಬಹುದು.

### ಮಂಗಳವಾರ ಮುಂತಾದ ದಿನಗಳಲ್ಲಿ ಅಶ್ವತ್ಥಸೇವೆಯನ್ನು ಮಾಡಕೂಡದು

ಭೌಮೇ ಶುಕ್ರೇ ತಥಾ ಭಾನೌ ಮಧ್ಯಾಹ್ನೇ ನಿಶಿ ಸಂಧ್ಯಯೋಃ |
ನಾಶ್ವತ್ಥಸೇವನಂ ಕುರ್ಯಾತ್ಕುಲಕ್ಷಯಕರಂ ಹಿ ತತ್ || (ಸ್ಮೃತಿರತ್ನ)

"ಮಂಗಳವಾರ, ಶುಕ್ರವಾರ, ಸೂರ್ಯವಾರ, ಮಧ್ಯಾಹ್ನಕಾಲ, ಅರ್ಧರಾತ್ರಕಾಲ ಮತ್ತು ಸಂಧ್ಯಾಕಾಲಗಳಲ್ಲಿ ಅಶ್ವತ್ಥವನ್ನು ಸೇವಿಸಕೂಡದು. ಹಾಗೆ ಸೇವಿಸಿದರೆ ಕುಲಕ್ಷಯವಾಗುವುದು.

### ಜಲಾಶಯಗಳ ಪ್ರಭೇದಗಳು

ಮಹಾನದೀನದಸ್ರೋತಃ ಸರಸ್ತ್ರಿದಶಖಾತಕಾಃ |
ನಾಲಸ್ತಟಾಕಃ ಕುಂಡಂ ಚ ಧಾರಾ ಕೂಪಸ್ತ್ವಮೀ ದಶ ||
ಬಿಲಂ ತಥಾ ಪ್ರಸ್ರವಣಮುಪದಾನಂ ತು ಕೋಟರಃ |
ಏತೇ ಜಲಾಶಯಾಃ ಖ್ಯಾತಾ ಉತ್ತಮಾದಿವಿಭೇದತಃ ||
ಸ್ನಾನಮೇತೇಷು ಕರ್ತವ್ಯಂ ನಿತ್ಯನೈಮಿತ್ತಿಕಾದಿಕಮ್ | (ಭರದ್ವಾಜವಚನ)

(1) ಮಹಾನದೀ (2) ನದ (3) ಸ್ರೋತಃ (4) ಸರೋವರ (5) ದೇವಖಾತಗಳು (6) ನಾಲ (7) ತಟಾಕ (8) ಕುಂಡ (9) ಧಾರಾ (10) ಕೂಪ (11) ಬಿಲ (12) ಪ್ರಸ್ರವಣ (13) ಉದಪಾನ (14) ಕೋಟರ ಎಂದು ಜಲಾಶಯಗಳು ಅಂದರೆ ಸ್ನಾನಯೋಗ್ಯವಾದ ನೀರಿನ ಆಶ್ರಯಗಳು ಹದಿನಾಲ್ಕು ವಿಧವಾಗಿವೆ. ಇವುಗಳಲ್ಲಿ 1 ರಿಂದ 5ರವರೆಗಿನ ಜಲಾಶಯಗಳು ಉತ್ತಮವಾಗಿವೆ. 6 ರಿಂದ 10 ರವರೆಗಿನ ಜಲಾಶಯಗಳು ಮಧ್ಯಮವಾಗಿವೆ. 11 ರಿಂದ 14ರವರೆಗಿನ ಜಲಾಶಯಗಳು ಅಧಮವಾಗಿವೆ. ಈ ಜಲಾಶಯಗಳಲ್ಲಿಯೇ ನಿತ್ಯಸ್ನಾನ ಕಾಮ್ಯಸ್ನಾನ ನೈಮಿತ್ತಿಕಸ್ನಾನ ಮುಂತಾದ ಎಲ್ಲಾ ಸ್ನಾನಗಳನ್ನೂ ಮಾಡಬೇಕು.

### ಮಹಾನದೀ ಮುಂತಾದವುಗಳ ಲಕ್ಷಣಗಳು

ಉದ್ಧೃಯ ಭೂಧರಾದಬ್ಧಿಂ ಪ್ರವಿಶತ್ಯಂಬುಸಂತತಿಃ |
ಯಾ ಸಾ ಮಹಾನದೀ ಜ್ಞೇಯಾ ಸರ್ವಪಾಪಪ್ರಣಾಶಿನೀ ||

ಶತಯೋಜನಮಾಗತ್ಯ ಶೈಲಾದ್ವಿಶತಿ ಸಾಗರಮ್ |
ಯಾಂಽಬುಸಂತತಿರೇಕೇ ತಾಂ ಪ್ರವದಂತಿ ಮಹಾನದೀಮ್ ||

"(1) ಮೂರು ಕಾಲಗಳಲ್ಲಿಯೂ ನಿಲ್ಲದೆ ಹರಿಯುತ್ತಿರುವ ನೀರಿನ ಪ್ರವಾಹವು ಜಲಪ್ರವಾಹ ಅಥವಾ ಜಲ ಸಂತತಿಯೆನಿಸುತ್ತದೆ. ಈ ಜಲಸಂತತಿಯು ಯಾವುದಾದರೊಂದು ಪರ್ವತದಿಂದ ಹೊರಡಬೇಕು. ಸಮುದ್ರದಲ್ಲಿ ಸೇರಬೇಕು. ಈ ಜಲಸಂತತಿಯು ಮಹಾನದಿಯೆನಿಸುತ್ತದೆ. ಈ ಮಹಾನದಿಯು ಸರ್ವಪಾಪಗಳನ್ನೂ ಪರಿಹರಿಸುತ್ತದೆ. (2) ಪರ್ವತದಿಂದ ಹೊರಟ ಜಲಸಂತತಿಯು ಒಂದು ನೂರು ಯೋಜನದವರೆಗೆ ಭೂಮಿಯಲ್ಲಿ ಪ್ರವಹಿಸುತ್ತಾ ಸಮುದ್ರದಲ್ಲಿ ಪ್ರವೇಶಿಸಬೇಕು. ಈ ಜಲಸಂತತಿಯನ್ನು ಮಹಾನದಿಯೆಂದು ಮತ್ತೆ ಕೆಲವರು ಹೇಳುತ್ತಿರುವರು. ಈ ಎರಡು ಪಕ್ಷಗಳಲ್ಲಿ ಮೊದಲನೆಯ ಪಕ್ಷದಲ್ಲಿ ಜಲಸಂತತಿಯು ಭೂಮಿಯಲ್ಲಿ ಒಂದು ನೂರು ಯೋಜನಗಳವರೆಗೆ ಪ್ರವಹಿಸಬೇಕೆಂಬ ನಿಯಮವಿಲ್ಲ. ಎರಡನೆಯ ಪಕ್ಷದಲ್ಲಿ ಇರುತ್ತದೆ."

### ನದಲಕ್ಷಣ

ಉದ್ಭೂತಾ ಪೂರ್ವದಿಗ್ಭಾಗೇ ಶೈಲೇ ಸಲಿಲಸಂತತಿಃ |
ಯಾ ಪ್ರತ್ಯಕ್ಸಾಗರಂ ಯಾತಿ ಸಾ ನದಸ್ತ್ವಿತಿ ಕಥ್ಯತೇ ||

"ಪೂರ್ವದಿಕ್ಕಿನಲ್ಲಿರುವ ಪರ್ವತದಲ್ಲಿ ಜನಿಸಿದ ಜಲಸಂತತಿಯು ಪಶ್ಚಿಮಸಮುದ್ರದಲ್ಲಿ ಸೇರಿದರೆ ಆ ಜಲಸಂತತಿಯು ನದ ಎಂದು ಹೇಳಲ್ಪಡುತ್ತದೆ."

### ಸ್ರೋತಸ್ಸಿನ ಲಕ್ಷಣ

ಭೂಧರಾದ್ಭೂಮಿಭಾಗೋತ್ಥಾ ಯಾ ಚೈವ ಜಲಸಂತತಿಃ |
ನದೀಂ ವಿಶತಿ ಸಾ ಸ್ರೋತಃ ಸ್ವಯಂ ವಾ ಯತ್ರ ಲೀಯತೇ ||

"ಪರ್ವತ ಪ್ರದೇಶದಲ್ಲಿ ಹುಟ್ಟಿದ ಜಲಸಂತತಿಯು ಯಾವುದಾದರೊಂದು ನದಿಯಲ್ಲಿ ಸೇರಬೇಕು. ಅಥವಾ ಬೇರೆ ಎಲ್ಲಿಯೂ ಸೇರದೆ ಒಂದೇ ಸ್ಥಳದಲ್ಲಿರಬೇಕು. ಅಲ್ಲಿಯೇ ಭೂಮಿಯಲ್ಲಿ ಲಯವನ್ನು ಹೊಂದಬೇಕು. ಈ ರೀತಿಯಾದ ಜಲಸಂತತಿಯನ್ನು ಸ್ರೋತಃ ಎಂದು ಕರೆಯುವರು."

### ಸರೋವರ ಲಕ್ಷಣ

ಪರ್ವತಸ್ಯ ತಟೇ ವಾಽಗ್ರೇ ವೃತ್ತಾಕಾರಜಲಾಸ್ಪದಮ್ |
ಅಶೋಷ್ಯಂ ಯತ್ತತ್ಸರಃ ಸ್ಯಾತ್ಸುವಿಶಾಲಂ ಸಪಂಕಜಮ್ ||

"ಪರ್ವತದ ತುದಿಯಲ್ಲಾಗಲೀ ಬುಡದಲ್ಲಾಗಲೀ ಇರುವ ವರ್ತುಲಾಕಾರವಾದ ಎಂದೆಂದಿಗೂ ಒಣಗದಿರುವ ಜಲಾಶಯವು ಸರೋವರವೆನಿಸುತ್ತದೆ. ಈ ಜಲಾಶಯವು ತುಂಬಾ ಅಗಲವಾಗಿಯೂ ಕಮಲವುಳ್ಳದ್ದಾಗಿಯೂ ಇರುತ್ತದೆ."

### ದೇವಖಾತ ಲಕ್ಷಣ

ಭುವ್ಯದ್ರೌ ವಾ ತಟಸ್ಪರ್ಶಮಶೋಷ್ಯಂ ಯಜ್ಜಲಾಶಯಮ್ |
ವಿಶಾಲಂ ವಾಽವಿಶಾಲಂ ತದ್ದೇವಖಾತಮ್ ಇತಿ ಸ್ಮೃತಮ್ ||

"ಭೂಮಿಯಲ್ಲಾಗಲೀ ಬೆಟ್ಟದಲ್ಲಾಗಲೀ ಇರಬೇಕು. ದೇವನಿರ್ಮಿತವಾದ ತೀರಗಳಿಂದ ಯುಕ್ತವಾಗಿರಬೇಕು. ಯಾವಾಗಲೂ ನೀರು ಒಣಗಬಾರದು. ಈ ಜಲಾಶಯವು ವಿಶಾಲವಾಗಿದ್ದರೂ, ಅವಿಶಾಲವಾಗಿದ್ದರೂ ಇರಬಹುದು. ಈ ಜಲಾಶಯವು ದೇವಖಾತವೆನಿಸುವುದು.

## ನಾಲ ಲಕ್ಷಣ

ಗ್ರಾಮಾರ್ಥಂ ವಾಽಥ ಸಸ್ಯಾರ್ಥಂ ನೃಭಿಃ ಸೃಷ್ಟಾಂಬುಪದ್ಧತಿಃ |
ಯಾ ನದ್ಯಾದ್ಯಂಬುಧಾಮಭ್ಯಸ್ತಾಂ ನಾಲಾಖ್ಯಾಂ ಪ್ರಚಕ್ಷತೇ ||

"ಗ್ರಾಮದ ಅಥವಾ ಸಸ್ಯಗಳ ಉಪಯೋಗಕ್ಕಾಗಿ ನದೀ ಮುಂತಾದ ಜಲಾಶಯಗಳ ದೆಸೆಯಿಂದ ಮನುಷ್ಯರಿಂದ ಸೃಷ್ಟಿಸಲ್ಪಟ್ಟ ಕೃತಕವಾದ ಕಾಲುವೆಗಳನ್ನು ನಾಲ ಎಂದು ಹಿರಿಯರು ಹೇಳುತ್ತಾರೆ."

## ತಟಾಕ ಲಕ್ಷಣ

ಅರ್ಧಚಂದ್ರಾಽಕೃತಿರ್ಯಸ್ಯ ಸಂಸ್ಥಾನಸ್ಯ ತು ವಾರಿಣಃ |
ಗ್ರಾಮೇ ವನೇಽಪಿ ಶೈಲೇ ವಾ ತತ್ತಟಾಕ ಇತಿ ಸ್ಮೃತಂ ||

"ಗ್ರಾಮದಲ್ಲಾಗಲೀ, ವನದಲ್ಲಾಗಲೀ, ಬೆಟ್ಟದಲ್ಲಾಗಲೀ ಅರ್ಧಚಂದ್ರಾಕಾರವಾಗಿರುವ ಪ್ರದೇಶದಲ್ಲಿ ತುಂಬಿರುವ ನೀರು ತಟಾಕ ಎಂದು ಹೇಳಲ್ಪಡುತ್ತದೆ."

## ಕುಂಡ ಲಕ್ಷಣ

ಚತುರಸ್ರಂ ಶಿಲಾಬದ್ಧಂ ನ ಸೋಪಾನಮಥೋ ಜಲಮ್ |
ವಿಶಾಲಮವಿಶಾಲಂ ವಾ ಯತ್ತತ್ಕುಂಡಮಿತಿ ಸ್ಮೃತಮ್ ||

"ನಾಲ್ಕು ಮೂಲೆಗಳಿಂದ ಯುಕ್ತವಾಗಿರಬೇಕು. ಕಲ್ಲು ಕಟ್ಟಡದಿಂದ ಯುಕ್ತವಾಗಿರಬೇಕು. ಮೆಟ್ಟಲುಗಳು ಇರಬಾರದು. ನೀರು ತುಂಬಿರಬೇಕು. ವಿಶಾಲವಾದರೂ ಸರಿ. ಅಥವಾ ವಿಶಾಲವಲ್ಲದಿದ್ದರೂ ಸರಿ. ಇಂತಹ ಜಲಾಶಯವು ಕುಂಡ ಎಂದು ಹೇಳಲ್ಪಡುತ್ತದೆ."

## ಧಾರಾ ಲಕ್ಷಣ

ಗಿರಿರಂಧ್ರಾದ್ವಿನಿಃಸೃತ್ಯ ಯಾ ಪತತ್ಯಂಬುಸಂತತಿಃ |
ಅನಾಧಾರಮಥೋ ಭೂಮೌ ಸಾ ಧಾರೇತ್ಯಭಿಧೀಯತೇ ||

"ಪರ್ವತದಲ್ಲಿರುವ ಯಾವುದಾದರೊಂದು ರಂಧ್ರದಿಂದ ಹೊರಟಿರಬೇಕು. ಎತ್ತರದಿಂದ ಕೆಳಗೆ ಬೀಳಬೇಕು. ಭೂಮಿಯಲ್ಲಿ ಒಂದೆಡೆಯಲ್ಲಿ ನಿಲ್ಲದಂತೆ ಓಡುತ್ತಿರಬೇಕು. ಇಂತಹ ಜಲಸಂತತಿಯು ಧಾರಾ ಎಂದು ಹೇಳಲ್ಪಡುತ್ತದೆ."

## ಕೂಪ ಲಕ್ಷಣ

ಪಂಚಹಸ್ತವಿಶಾಲಂ ಯತ್ಖಾತಂ ವೃತ್ತಮಥೋ ಜಲಮ್ |
ದಾರ್ವಿಷ್ಟಕಾದಿಘಟಿತಂ ಯತ್ತತ್ಕೂಪಮಿತಿ ಸ್ಮೃತಮ್ ||

"ಐದು ಮೊಳ ಅಗಲವಾಗಿರಬೇಕು. ವರ್ತುಲಾಕಾರವಾಗಿರಬೇಕು. ಮರ ಇಟ್ಟಿಗೆ ಮುಂತಾದವುಗಳಿಂದ ಕಟ್ಟಲ್ಪಡಬೇಕು. ಮನುಷ್ಯರಿಂದ ಅಗೆದು ತಯಾರಿಸಲ್ಪಟ್ಟಿರಬೇಕು. ನೀರು ತುಂಬಿರಬೇಕು. ಈ ಜಲಾಶಯವು ಕೂಪ ಎಂದು ಹೇಳಲ್ಪಡುತ್ತದೆ.

## ಬಿಲ ಲಕ್ಷಣ

ಮುಖಂ ತ್ರಿತಾಲವಿಸ್ತಾರಮರ್ವಾಕ್ಸ್ಥಲಮರುಸ್ಥಲಮ್ |
ಅಶೋಷ್ಯಂ ಯಜ್ಜಲಾವಾಸಂ ತದ್ಬಿಲಂ ಪ್ರಾಹುರುತ್ತಮಾಃ ||

"ಮೇಲಿನ ಭಾಗವು ಮೂರು ಪುರುಷ ಪ್ರಮಾಣದಷ್ಟು ಅಗಲವಾಗಿರಬೇಕು. ಕೆಳಗಿನ ಮತ್ತು ಸುತ್ತಮುತ್ತಲಿನ ಎಲ್ಲಾ ಭಾಗವೂ ಉಸುಗಿನ ಭೂಮಿಯಾಗಿರಬೇಕು. ಯಾವಾಗಲೂ ನೀರು ಒಣಗಬಾರದು. ಇಂತಹ ಜಲಾಶಯವನ್ನು ಜ್ಞಾನಿಗಳು ಬಿಲ ಎಂದು ಹೇಳುತ್ತಾರೆ.

### ಕೋಟರ ಲಕ್ಷಣ

ಗಿರೌ ತರೌ ವಾಽಥ ದೀರ್ಘಂ ಭೂಮೌ ವಾ ಸ್ವಲ್ಪಮಾನಸಮ್ |
ಜಲಸ್ಥಾನಮಶೋಷ್ಯಂ ಯತ್ತತ್ಕೋಟರ ಇತಿ ಸ್ಮೃತಮ್ ||

"ಬೆಟ್ಟದಲ್ಲಾಗಲೀ, ಮರದಲ್ಲಾಗಲೀ, ಭೂಮಿಯಲ್ಲಾಗಲೀ ಉದ್ದವಾದ ಪ್ರದೇಶದಲ್ಲಿ ನೀರು ತುಂಬಿರಬೇಕು. ಈ ನೀರು ಯಾವಾಗಲೂ ಒಣಗಬಾರದು. ಹೆಚ್ಚು ನೀರು ಇರಬಾರದು. ಇಂತಹ ಜಲಾಶಯವು ಕೋಟರ ಎಂದು ಹೇಳಲ್ಪಡುತ್ತದೆ."

### ಪ್ರಸ್ರವಣ ಲಕ್ಷಣ

ಭೂಮೌ ಗಿರೌ ವಾ ಪಾನೀಯಮಲ್ಪಮಲ್ಪಂ ಮುಹುರ್ಮುಹುಃ |
ಯನ್ನಿರ್ಗಚ್ಛತ್ಸ್ರವತಿ ತತ್ತು ಪ್ರಸ್ರವಣಾಹ್ವಯಮ್ ||

"ಭೂಮಿಯಲ್ಲಾಗಲೀ, ಪರ್ವತದಲ್ಲಾಗಲೀ, ಸ್ವಲ್ಪ ಸ್ವಲ್ಪವಾಗಿ ಆಗ್ಗಾಗ್ಗೆ ನೀರು ಬರುತ್ತಿರಬೇಕು. ಆ ನೀರು ಒಟ್ಟುಗೂಡಿ ಕಾಲುವೆಯಂತೆ ಹರಿಯಬೇಕು. ಈ ಜಲಾಶಯವು ಪ್ರಸ್ರವಣ ಎಂದು ಹೇಳಲ್ಪಡುತ್ತದೆ.

### ಉದಪಾನ ಲಕ್ಷಣ

ದೃಷದ್ಭಿರಿಷ್ಟಕಾಭಿರ್ವಾ ಗೋಪಾನಾರ್ಥಂ ಜಲಾಶಯಮ್ |
ನೃಭಿಃ ಕೃತಂ ತೂದಪಾನಮಾರಾಮೇ ಯತ್ರ ವಾ ತಥಾ ||

"ಉದ್ಯಾನವನವಾಗಲೀ ಬೇರೆ ಗೋವುಗಳ ಸಂಚಾರಪ್ರದೇಶಗಳಲ್ಲಾಗಲೀ ಕಲ್ಲುಗಳಿಂದ ಅಥವಾ ಇಟ್ಟಿಗೆಗಳಿಂದ ದನಗಳು ನೀರನ್ನು ಕುಡಿಯುವುದಕ್ಕಾಗಿ ಜನರಿಂದ ಮಾಡಿರುವ ಜಲಾಶಯವು ಉದಪಾನ ಎಂದು ಹೇಳಲ್ಪಡುತ್ತದೆ."

### ಸಮುದ್ರ ಲಕ್ಷಣ

ಅಲಂಘ್ಯಮತಲಸ್ಪರ್ಶಂ ಸಹವೀಚಿಯುತಂ ಜಲಮ್ |
ದ್ವೀಪಾದ್ಯಹಿರ್ವಲಯಿತಂ ಯತ್ಸಮುದ್ರಸ್ತದುಚ್ಯತೇ ||

"ದಾಟುವುದಕ್ಕೆ ಸಾಧ್ಯವಾಗಿರಬಾರದು. ಆಳವನ್ನು ಕಂಡು ಹಿಡಿಯಲು ಸಾಧ್ಯವಾಗಿರಬಾರದು. ಯಾವಾಗಲೂ ಸಹಜವಾದ ಅಲೆಗಳಿಂದ ಯುಕ್ತವಾಗಿರಬೇಕು. ತನ್ನ ಸುತ್ತಲೂ ಪುಷ್ಕರದ್ವೀಪ ಮುಂತಾದ ಯಾವುದಾದರೊಂದು ದ್ವೀಪದಿಂದ ಸುತ್ತಲ್ಪಟ್ಟಿರಬೇಕು. ಇಂತಹ ಜಲಾಶಯವು ಸಮುದ್ರ ಎಂದು ಹೇಳಲ್ಪಡುತ್ತದೆ."

## ನದೀ ಮುಂತಾದವುಗಳಲ್ಲಿ ಮಾಡುವ ಸ್ನಾನದ ಫಲ

### ಗಂಗಾ ಗೋದಾವರೀ ಸ್ನಾನದ ಫಲ

ಅಬ್ದೋಪವಾಸಫಲದಾ ಸ್ಮೃತಾ ಸುರತರಂಗಿಣೀ |
ಮಂದಾಕಿನ್ಯರ್ಧಫಲದಾ ಸ್ಮೃತಾ ಗೋದಾವರೀ ಶುಭಾ ||

"ಒಂದು ವರ್ಷಕಾಲದವರೆಗೆ ಉಪವಾಸವನ್ನು ಮಾಡಿದ್ದರಿಂದ ಬರುವ ಫಲವು ಗಂಗಾಸ್ನಾನದಿಂದ ಬರುತ್ತದೆ. ಗಂಗಾಸ್ನಾನಫಲಕ್ಕಿಂತ ಅರ್ಧಫಲವು ಗೋದಾವರೀಸ್ನಾನದಿಂದ ಬರುತ್ತದೆ."

### ಮಹಾನದೀ ಸ್ನಾನ ಫಲ

ಶಶಿವ್ರತಂ ತ್ರಯಃ ಕೃಚ್ಛ್ರಾ ಗಾಯತ್ರ್ಯಾಶ್ಚಾಯುತಂ ಜಪಃ |
ಆಪ್ಲಾವನಂ ಮಹಾನದ್ಯಾಂ ತುಲ್ಯಮೇತಚ್ಚತುಷ್ಟಯಂ ||

"(1) ಚಾಂದ್ರಾಯಣವ್ರತ, (2) ಮೂರು ಕೃಛ್ರವ್ರತಗಳನ್ನು ಅನುಷ್ಠಿಸುವುದು, (3) ಹತ್ತು ಸಹಸ್ರ ಸಂಖ್ಯೆಯಷ್ಟು ಗಾಯತ್ರೀಮಂತ್ರವನ್ನು ಜಪಿಸುವುದು, (4) ಮಹಾನದಿಯಲ್ಲಿ ಸ್ನಾನ ಮಾಡುವುದು ಈ ನಾಲ್ಕು ಸಮವೆನಿಸುತ್ತವೆ."

## ಮಹಾನದೀ ತಾರತಮ್ಯ

ಸರಸ್ವತೀ ಸೂರ್ಯಸುತಾ ಜಹ್ನುಕನ್ಯಾ ಚ ನರ್ಮದಾ |
ಏತಾಶ್ಚ ತು ಮಹಾನದ್ಯೋ ಮಹಾನದ್ಯುತ್ತಮೋತ್ತಮಾಃ ||

"(1) ಸರಸ್ವತೀ ನದೀ (2) ಯಮುನಾ ನದೀ (3) ಗಂಗೆ (4) ನರ್ಮದೆ ಈ ನಾಲ್ಕು ನದಿಗಳು ಮಹಾನದಿಗಳಲ್ಲಿ ಅತ್ಯುತ್ತಮವೆನಿಸುತ್ತವೆ."

ಸದ್ಯಃ ಪುನಾತಿ ಗಂಗಾಂಭಸ್ತ್ರಿಭಿಃ ಸಾರಸ್ವತಂ ಜಲಮ್ |
ಸ್ಪರ್ಶನಾನ್ನರ್ಮದಾತೋಯಂ ಯಾಮುನಂ ಪಂಚಭಿರ್ದಿನೈಃ ||
ಸ್ನಾನಾತ್ಸರ್ವಸುತೀರ್ಥೇಷು ಸರ್ವದೇವದ್ವಿಜನ್ಮನಾಮ್ |
ನದೀಮಹಾನದೀಷೂಕ್ತಂ ಫಲಂ ಸ್ಯಾನ್ನಾತ್ರ ಸಂಶಯಃ ||

"ಗಂಗಾಜಲವು ಸ್ನಾನ ಮಾಡಿದ ಕೂಡಲೇ ಪಾಪವನ್ನು ಪರಿಹರಿಸುತ್ತದೆ. ಸರಸ್ವತೀನದಿಯ ಜಲವು ಮೂರು ದಿನಗಳಲ್ಲಿ ಸ್ನಾನ ಮಾಡಿದ್ದರಿಂದ ಪಾಪವನ್ನು ಪರಿಹರಿಸುತ್ತದೆ. ನರ್ಮದಾನದಿಯ ಜಲ ಮತ್ತು ಯಮುನಾನದಿಯ ಜಲವು ಐದು ದಿನಗಳಲ್ಲಿ ಸ್ನಾನ ಮಾಡಿದ್ದರಿಂದ ಪಾಪವನ್ನು ಪರಿಹರಿಸುತ್ತದೆ. ಎಲ್ಲ ದೇವತೆಗಳಿಂದಲೂ, ಎಲ್ಲಾ ಬ್ರಾಹ್ಮಣರಿಂದಲೂ, ರಚಿತವಾದ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದರೆ ನದಿಯಲ್ಲಿಯೂ, ಮಹಾನದಿಯಲ್ಲಿಯೂ ಸ್ನಾನ ಮಾಡಿದ್ದರಿಂದ ಬರುವ ಫಲ ಬರುತ್ತದೆ."

ತ್ರಿರಾತ್ರಫಲದಾ ನದ್ಯೋ ಯಾಃ ಕಾಶ್ಚಿದಸಮುದ್ರಗಾಃ |
ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ||

"ಸಮುದ್ರದಲ್ಲಿ ಸೇರದಿರುವ ನದಿಗಳಲ್ಲಿ ಸ್ನಾನ ಮಾಡಿದರೆ, ಒಂದು ಸ್ನಾನವು ಮೂರು ದಿನಗಳಲ್ಲಿ ಮಾಡಿದ ಸ್ನಾನದ ಫಲವನ್ನು ಕೊಡುತ್ತದೆ. ಸಮುದ್ರದಲ್ಲಿ ಸೇರುವ ನದಿಗಳಲ್ಲಿ ಸ್ನಾನ ಮಾಡಿದರೆ, ಒಂದು ಸ್ನಾನವು ಹದಿನೈದು ದಿನಗಳಲ್ಲಿ ಮಾಡಿದ ಸ್ನಾನದ ಫಲವನ್ನು ಕೊಡುತ್ತದೆ. ಸಮುದ್ರದಲ್ಲಿ ಸ್ನಾನವನ್ನು ಮಾಡಿದರೆ ಒಂದು ಸ್ನಾನವು ಒಂದು ತಿಂಗಳಿನವರೆಗೆ ಮಾಡಿದ ಸ್ನಾನದ ಫಲವನ್ನು ಕೊಡುತ್ತದೆ.

## ತೀರ್ಥಾದಿತಾರತಮ್ಯ

ಭೂಮಿಷ್ಠಮುದ್ಧೃತಾತ್ಪುಣ್ಯಂ ತತಃ ಪ್ರಸ್ರವಣೋದಕಮ್ |
ತತೋಽಪಿ ಸಾರಸಂ ಪುಣ್ಯಂ ತಸ್ಮಾನ್ನಾದೇಯಮುಚ್ಯತೇ ||
ತೀರ್ಥತೋಯಂ ತತಃ ಪುಣ್ಯಂ ಗೋದಾವರ್ಯಾಸ್ತು ಸರ್ವತಃ |

"ಸೇದಿದ ನೀರಿಗಿಂತ, ಭೂಮಿಯಲ್ಲಿರುವ ಜಲವು ಪುಣ್ಯಕರವಾಗಿದೆ. ಭೂಮಿಯಲ್ಲಿರುವ ನೀರಿಗಿಂತ, ಪ್ರಸ್ರವಣ ಜಲವು ಪುಣ್ಯಕರವಾಗಿದೆ. ಪ್ರಸ್ರವಣಜಲಕ್ಕಿಂತ, ಸರೋವರದ ಜಲವು ಪುಣ್ಯಕರವಾಗಿದೆ. ಸರೋವರಜಲಕ್ಕಿಂತ, ನದೀಜಲವು ಪುಣ್ಯಕರವಾಗಿದೆ. ನದೀಜಲಕ್ಕಿಂತ, ತೀರ್ಥಜಲವು ಪುಣ್ಯಕರವಾಗಿದೆ. ಎಲ್ಲಾ ತೀರ್ಥಜಲಗಳಿಗಿಂತಲೂ ಗೋದಾವರೀಜಲವು ಪುಣ್ಯಕರವಾಗಿದೆ."

## ಸಮುದ್ರಸ್ನಾನ ಕಾಲ

ಪರ್ವಣಿ ಸ್ನಪನಂ ಶ್ರೇಷ್ಠಂ ಸರ್ವೇಷಾಂ ಲವಣಾಂಬುಧೌ |
ಸಾಗರೇಷು ತಥಾಽನ್ಯೇಷು ಶುಭಮಾಪ್ಲವನಂ ಸ್ಮೃತಮ್ ||

ಕೃಷ್ಣಾಂಗಾರಚತುರ್ದಶ್ಯಾಂ ಯೋಽಬ್ಧೌ ಸ್ನಾನಂ ಸಮಾಚರೇತ್ |
ತಸ್ಯ ಜನ್ಮಸಹಸ್ರಸ್ಯ ಸರ್ವಂ ಪಾಪಂ ಪ್ರಣಶ್ಯತಿ ||
ಸೌರಾರವಾರಯೋರಬ್ಧೌ ಪರ್ವಣೋರುಭಯೋರಪಿ |
ಸಂತಾನಕಾಮೀ ನ ಸ್ನಾಯಾತ್ಕುರ್ಯಾತ್ತು ಗ್ರಹಣೇ ತಯೋಃ ||
ಕ್ಷೌರಂ ಚ ಸಾಗರಸ್ನಾನಂ ನ ಕುರ್ಯಾದ್ಗರ್ಭಿಣೀಪತಿಃ |
ಕೃತವಾನ್ನ ಭವೇತ್ತಸ್ಯಾಃ ಪ್ರಜಾ ನ ಭವತಿ ಧ್ರುವಮ್ ||

"ಅಮಾವಾಸ್ಯಾ, ಹುಣ್ಣಿಮೆ ಮುಂತಾದ ಪರ್ವಕಾಲಗಳಲ್ಲಿ, ಉಪ್ಪುನೀರಿನ ಸಮುದ್ರ ಮತ್ತು ಇತರ ಸಮುದ್ರಗಳಲ್ಲಿ ಸ್ನಾನ ಮಾಡುವುದು ಶುಭಕರವೆನಿಸುತ್ತದೆ. ಕೃಷ್ಣಪಕ್ಷದ ಚತುರ್ದಶೀ ದಿನದಲ್ಲಿ ಮಂಗಳವಾರವು ಬಂದಾಗ ಸಮುದ್ರದಲ್ಲಿ ಸ್ನಾನವನ್ನು ಮಾಡುವವರಿಗೆ ಸಹಸ್ರಜನ್ಮಗಳಲ್ಲಿ ಮಾಡಿದ ಪಾಪವು ಪರಿಹೃತವಾಗುತ್ತದೆ. ಮಕ್ಕಳನ್ನು ಬಯಸುವವರು, ಶನಿವಾರ ಮತ್ತು ಮಂಗಳವಾರಗಳಲ್ಲಿಯೂ, ಹುಣ್ಣಿಮೆ ಮತ್ತು ಅಮಾವಾಸ್ಯಾದಿನಗಳಲ್ಲಿಯೂ, ಸಮುದ್ರದಲ್ಲಿ ಸ್ನಾನವನ್ನು ಮಾಡಕೂಡದು. ಸೂರ್ಯಗ್ರಹಣ ಮತ್ತು ಚಂದ್ರಗ್ರಹಣದಿನಗಳಲ್ಲಿ ಸಮುದ್ರಸ್ನಾನವನ್ನು ಎಲ್ಲರೂ ಮಾಡಬೇಕು. ಗರ್ಭಿಣಿಯ ಗಂಡನು ಕ್ಷೌರ ಮತ್ತು ಸಮುದ್ರಸ್ನಾನವನ್ನು ಮಾಡಕೂಡದು. ಹಾಗೆ ಮಾಡಿದರೆ ಆ ಗರ್ಭಿಣಿಗೆ ಮಗುವು ಹುಟ್ಟುವುದಿಲ್ಲ. ಹುಟ್ಟಿದರೂ ನಶಿಸುತ್ತದೆ."

### ಪರಕೀಯ ವಾಪೀ ಮುಂತಾದವುಗಳಲ್ಲಿ ಸ್ನಾನದ ಫಲ

ತೀರ್ಥಾಭಿದಾನಾನ್ಯಸ್ನಾನಿ ದೇವರ್ಷಿವಿಹಿತಾನಿ ಚ |
ಸ್ನಪನೇ ತಾನಿ ಮುಖ್ಯಾನಿ ಪ್ರವದಂತಿ ಮಹರ್ಷಯಃ ||
ಬಿಲಾದಿವಾರಿಸ್ಥಾನೇಷು ಚತುರ್ಷೂದ್ಧೃತವಾರಿಣಾ |
ಸ್ನಾಯಾದ್ದ್ವಿಜೋತ್ತಮೋಽತ್ಯಂತಂ ಸಂಕಟೇ ವಾಪಿ ನಿರ್ಜಲೇ ||
ಅನ್ಯೇಷು ವಾರಿಸ್ಥಾನೇಷು ಸ್ನಪನಾದಗ್ರಜನ್ಮನಾಮ್ |
ಕೇವಲಂ ಕರ್ಮಯೋಗ್ಯತ್ವಂ ಭವತ್ಯೇವಂ ನ ಹೀತರತ್ ||

"ದೇವತೆಗಳೂ, ಋಷಿಗಳೂ ನಿರ್ಮಿಸಿರುವ ಸುಪ್ರಸಿದ್ಧವಾದ ತೀರ್ಥಗಳು ಎಷ್ಟೋ ಇವೆ. ಆ ತೀರ್ಥಗಳು ಸ್ನಾನಕ್ಕೆ ಮುಖ್ಯವೆಂದು ಜ್ಞಾನಿಗಳು ಹೇಳುತ್ತಿರುವರು. ಹಿಂದೆ ಹೇಳಿರುವ ಬಿಲ, ಪ್ರಸ್ರವಣ, ಕೋಟರ, ಉದಪಾನ ಈ ನಾಲ್ಕು ಜಲಾಶಯಗಳಲ್ಲಿರುವ ನೀರನ್ನು ಬೇರೆ ಪಾತ್ರೆಯಿಂದ ತುಂಬಿ ಆ ನೀರಿನಿಂದ ಸ್ನಾನ ಮಾಡಬೇಕು. ಇತರ ಜಲಾಶಯಗಳಲ್ಲಿ ತುಂಬಾ ಆಪತ್ಕಾಲಗಳಲ್ಲಿಯೂ, ಅಧಿಕ ನೀರು ಇಲ್ಲದಿರುವ ಕಾಲದಲ್ಲಿಯೂ, ಬೇರೆ ಪಾತ್ರೆಯಿಂದ ನೀರನ್ನು ತುಂಬಿ ಆ ನೀರಿನಿಂದ ಸ್ನಾನ ಮಾಡಬೇಕು. ನೀರು ಸಮೃದ್ಧಿಯಾಗಿರುವಾಗಲೂ, ತುಂಬಿದ ನೀರಿನಿಂದ ಸ್ನಾನವನ್ನು ಮಾಡಿದರೆ ಆ ಸ್ನಾನವು ಸಂಧ್ಯಾವಂದನ ಮುಂತಾದ ಕರ್ಮಗಳಲ್ಲಿ ಅರ್ಹತೆಯನ್ನು ಮಾತ್ರ ಉಂಟುಮಾಡುತ್ತದೆ. ಪುಣ್ಯಕರವಲ್ಲ." ಇದು ಭರದ್ವಾಜರ ವಚನ.

ಪುರಾಣಾನಾಂ ನರೇಂದ್ರಾಣಾಮೃಷೀಣಾಂ ಚ ಮಹಾತ್ಮನಾಮ್ |
ಸ್ನಾನಂ ಕೂಪತಟಾಕೇಷು ದೇವತಾನಾಂ ಸಮಾಚರೇತ್ || (ಮಾರ್ಕಂಡೇಯವಚನ)

"ಪುರಾಣಪ್ರಸಿದ್ಧರಾದ ರಾಜರುಗಳು ಮಹಾತ್ಮರಾದ ಮುನಿಗಳು ದೇವತೆಗಳು ಇವರುಗಳಿಂದ ರಚಿತವಾದ ಕೂಪ ತಟಾಕ ಮುಂತಾದವುಗಳಲ್ಲಿ ಸ್ನಾನವನ್ನು ಮಾಡಬೇಕು." (ಇದು ಮಾರ್ಕಂಡೇಯವಚನ)

**ಪತಿತ ಮುಂತಾದವರಿಂದ ಕಟ್ಟಲ್ಪಟ್ಟ ಕೆರೆ ಮುಂತಾದವುಗಳಲ್ಲಿ ಸ್ನಾನವು ನಿಷಿದ್ಧ**

ಅನ್ಯಾಯೋಪಾತ್ತವಿತ್ತಸ್ಯ ಪತಿತಸ್ಯ ಚ ವಾರ್ಧುಷೇಃ |
ನ ಸ್ನಾಯಾದುದಪಾನೇಷು ಸ್ನಾತ್ವಾ ಕೃಚ್ಛ್ರಂ ಸಮಾಚರೇತ್ || (ಮನುವಚನ)

"(1) ತನ್ನ ಜಾತಿ ಮತ್ತು ಆಶ್ರಮಗಳಿಗೆ ವಿಹಿತವಲ್ಲದಿರುವ ಅಮಾರ್ಗದಿಂದ ದ್ರವ್ಯವನ್ನು ಸಂಪಾದಿಸಿದವನು (2) ನೀಚಕೃತ್ಯಗಳನ್ನು ಮಾಡಿ ಜಾತಿ ಮತ್ತು ಆಶ್ರಮಗಳಿಂದ ಭ್ರಷ್ಟನಾದವನು (3) ಲೇವಾದೇವಿಯಿಂದ ಜೀವಿಸುವವನು ಈ ಮೂವರಿಂದ ಕಟ್ಟಲ್ಪಟ್ಟ ಕೆರೆ ಮುಂತಾದ ಜಲಾಶಯಗಳಲ್ಲಿ ಸ್ನಾನವನ್ನು ಮಾಡಕೂಡದು. ಹಾಗೆ ಸ್ನಾನ ಮಾಡಿದರೆ ಪ್ರಾಯಶ್ಚಿತ್ತ ರೂಪವಾಗಿ ಕೃಚ್ಛ್ರವ್ರತವನ್ನು ಮಾಡಬೇಕು."

ಅನುತ್ಸೃಷ್ಟೇಷು ನ ಸ್ನಾಯಾತ್ತಥೈವಾಸಂಸ್ಕೃತೇಷು ಚ |
ಆತ್ಮೀಯೇಷ್ವಪಿ ನ ಸ್ನಾಯಾತ್ತಥೈವಾಲ್ಪಜಲೇಷ್ವಿತಿ || (ವ್ಯಾಸವಚನ)

"ಕೆರೆ, ಬಾವಿ ಮುಂತಾದವುಗಳನ್ನು ಸಾರ್ವಜನಿಕವಾಗಿ ಉಪಯೋಗಿಸುವುದಕ್ಕಾಗಿ ತೋಡಿಸಿದರೆ ಅವುಗಳಿಗೆ ಎರಡು ವಿಧವಾದ ಸಂಸ್ಕಾರಗಳನ್ನು ಮಾಡಬೇಕು. (1) ಶಾಸ್ತ್ರೋಕ್ತವಿಧಿಯಿಂದ ಪ್ರತಿಷ್ಠೆಯನ್ನು ಮಾಡಬೇಕು (2) ಸಾರ್ವಜನಿಕ ಉಪಯೋಗಕ್ಕಾಗಿ ದಾನ ಮಾಡಬೇಕು. ಈ ಎರಡು ವಿಧವಾದ ಸಂಸ್ಕಾರಗಳನ್ನು ಮಾಡಿದ ಮೇಲೆಯೇ ಆ ಜಲಾಶಯಗಳನ್ನು ಸರ್ವರೂ ಉಪಯೋಗಿಸಬೇಕು. ಪರಾರ್ಥವಾಗಿ ನಿರ್ಮಿತವಾದ ಜಲಾಶಯಗಳಲ್ಲಿ ಮೇಲ್ಕಂಡ ಎರಡು ವಿಧವಾದ ಸಂಸ್ಕಾರಗಳನ್ನು ಮಾಡದಿದ್ದರೆ ಆ ಜಲಾಶಯಗಳನ್ನು ಕಟ್ಟಿಸಿದ ಯಜಮಾನನೂ ಸಹ ಅವುಗಳಲ್ಲಿ ಸ್ನಾನ ಮಾಡಬಾರದು. ಮುಳುಗುವುದಕ್ಕೆ ಬೇಕಾದಷ್ಟು ನೀರು ಇಲ್ಲದಿರುವ ಜಲಾಶಯಗಳಲ್ಲಿಯೂ ಸ್ನಾನವನ್ನು ಮಾಡಬಾರದು."

**ಪತಿತಾದಿಕೃತಜಲಾಶಯಗಳಲ್ಲಿ ಸ್ನಾನ ಮಾಡಿದರೆ ಅನಿಷ್ಟಫಲ**

ಪರಕೀಯನಿಪಾನೇಷು ನ ಸ್ನಾಯೀತ ಕದಾಚನ |
ನಿಪಾನಕರ್ತುಃ ಸ್ನಾತಸ್ತು ದುಷ್ಕೃತಾಂಶೇನ ಜೀವತಿ || (ಮನುವಿನ ವಚನ)

"ಪತಿತ ಮುಂತಾದವರಿಂದ ಕಟ್ಟಿಸಲ್ಪಟ್ಟು ಸಾರ್ವಜನಿಕ ಉಪಯೋಗಕ್ಕಾಗಿ ಬಿಡಲ್ಪಟ್ಟ ಸರೋವರ ಮುಂತಾದವುಗಳಲ್ಲಿ ಯಾವ ಕಾರಣದಿಂದಲೂ ಎಂದೆಂದಿಗೂ ಸ್ನಾನ ಮಾಡಬಾರದು. ಹಾಗೆ ಸ್ನಾನ ಮಾಡಿದರೆ ಜಲಾಶಯವನ್ನು ತೋಡಿಸಿದವನು ಮಾಡಿದ ಪಾಪದಲ್ಲಿ ಭಾಗವನ್ನು ಸ್ನಾನ ಮಾಡಿದವನು ಪಡೆಯುವನು."

**ಇತರರಿಂದ ಕಟ್ಟಲ್ಪಟ್ಟ ಕೆರೆ ಮುಂತಾದವುಗಳಲ್ಲಿ ಸ್ನಾನ ಮಾಡುವ ಕ್ರಮ**

ವಾಪೀಕೂಪತಟಾಕೇಷು ಯದಿ ಸ್ನಾಯಾತ್ಕದಾಚನ |
ಉದ್ಧೃತ್ಯ ಮೃತ್ತಿಕಾಪಿಂಡಾನ್ ದಶ ಪಂಚಾಥವಾ ಕ್ಷಿಪೇತ್ || (ಶೌನಕವಚನ)

ತತ್ಪರಕೀಯನಿಪಾನವಿಷಯಮ್, ಅತ ಏವ ಯೋಗಿಯಾಜ್ಞವಲ್ಕ್ಯಃ -

ಪರಕೀಯನಿಪಾನೇಷು ಯದಿ ಸ್ನಾಯಾತ್ಕಥಂಚನ |
ಸಪ್ತ ಪಿಂಡಾನ್ಸಮುದ್ಧೃತ್ಯ ತತ್ರ ಸ್ನಾನಂ ಸಮಾಚರೇತ್ ||

"ವಾಪೀ ಕೂಪತಟಾಕಗಳಲ್ಲಿ ಸ್ನಾನವನ್ನು ಮಾಡುವವರು ಅವುಗಳಲ್ಲಿರುವ ಮಣ್ಣಿನ ಹತ್ತು ಮುದ್ದೆಗಳನ್ನಾಗಲೀ, ಕನಿಷ್ಠ ಪಕ್ಷ ಐದು ಮುದ್ದೆಗಳನ್ನಾಗಲೀ, ತೆಗೆದು ಹೊರಗೆ ಬಿಸುಟ ಮೇಲೆಯೇ ಸ್ನಾನವನ್ನು ಮಾಡಬೇಕು." ಇದು ಶೌನಕರ ವಚನ.

"ಈ ವಚನದಲ್ಲಿ ಮೇಲ್ಕಂಡ ವಾಪೀಕೂಪತಟಾಕಗಳು ಸ್ನಾನ ಮಾಡುವ ಪುರುಷರಿಂದ ನಿರ್ಮಿತವಾದವುಗಳೋ ಅಥವಾ

ಇತರರಿಂದ ನಿರ್ಮಿತವಾದವುಗಳೋ ಎಂದು ಸ್ಪಷ್ಟವಾಗಿ ಹೇಳಿಲ್ಲ. ಯೋಗಿಯಾಜ್ಞವಲ್ಕ್ಯರ ವಚನದಲ್ಲಿ ಇತರರಿಂದ ನಿರ್ಮಿತವಾದ ವಾಪೀ ಕೂಪ ತಟಾಕಗಳಲ್ಲಿ ಸ್ನಾನವನ್ನು ಮಾಡುವವರು ಮಾತ್ರ ಈ ವಾಪೀ ಕೂಪ ತಟಾಕಗಳಲ್ಲಿರುವ ಏಳು ಮಣ್ಣಿನ ಮುದ್ದೆಗಳನ್ನು ತೆಗೆದು ಬಿಸುಟ ಮೇಲೆ ಈ ವಾಪೀ ಕೂಪ ತಟಾಕಗಳಲ್ಲಿ ಸ್ನಾನ ಮಾಡಬೇಕೆಂದು ಹೇಳಿದೆ. ಇದರಿಂದ ಸ್ವಂತವಾಗಿ ಕಟ್ಟಿಸಿರುವ ವಾಪೀ ಕೂಪತಟಾಕಗಳಲ್ಲಿ ಮಣ್ಣಿನ ಮುದ್ದೆಯನ್ನು ತೆಗೆದು ಬಿಸಾಡಬೇಕಾಗಿಲ್ಲವೆಂದು ಹೇಳಿದಂತಾಯಿತು. ಸ್ಪಷ್ಟಾರ್ಥವುಳ್ಳ ಈ ಯೋಗಿಯಾಜ್ಞವಲ್ಕ್ಯರ ವಚನವನ್ನು ಅನುಸರಿಸಿ ಅಸ್ಪಷ್ಟಾರ್ಥವುಳ್ಳ ಶೌನಕರ ವಚನಕ್ಕೂ ಅರ್ಥವನ್ನು ಹೇಳಬೇಕು. ಆದ್ದರಿಂದ ಇತರರಿಂದ ನಿರ್ಮಿತವಾದ ವಾಪೀಕೂಪತಟಾಕಗಳಲ್ಲಿ ಸ್ನಾನವನ್ನು ಮಾಡುವವರು ಮಾತ್ರ ವಾಪೀಕೂಪತಟಾಗಳಲ್ಲಿರುವ ಮಣ್ಣಿನ ಮುದ್ದೆಯನ್ನು ತೆಗೆದು ಬಿಸಾಡಿ ಸ್ನಾನವನ್ನು ಮಾಡಬೇಕೆಂದೂ ಸ್ವಂತ ವಾಪೀಕೂಟತಟಾಕಗಳಲ್ಲಿ ಸ್ನಾನ ಮಾಡುವವರು ಮಣ್ಣಿನ ಮುದ್ದೆಯನ್ನು ಬಿಸಾಡಬೇಕಾಗಿಲ್ಲವೆಂದೂ ಶೌನಕರ ವಚನದ ಅಭಿಪ್ರಾಯವೆಂದು ತಿಳಿಯಬೇಕು." ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

ಅಲಾಭೇ ದೇವಖಾತಾನಾಂ ಸರಸಾಂ ಸರಿತಾಮಪಿ |
ಉದ್ಧೃತ್ಯ ಚತುರಃ ಪಿಂಡಾನ್ ಪಾರಕ್ಯೇ ಸ್ನಾನಮಾಚರೇತ್ ||
ತ್ರೀನ್ ಪಿಂಡಾನಥ ವೋದ್ಧೃತ್ಯ ಸ್ನಾಯಾದಾಪತ್ಸು ನೋ ಸದಾ | (ಮನುವಚನ)

"ದೇವಖಾತಗಳು, ಸರೋವರಗಳು, ಸರಸ್ಸುಗಳು, ಮಹಾನದಿಗಳು, ನದಗಳು ಇವುಗಳು ಸಿಕ್ಕಿದಾಗ ಇವುಗಳಲ್ಲಿಯೇ ಸ್ನಾನವನ್ನು ಮಾಡಬೇಕು. ಇವುಗಳು ಸಿಗದಿದ್ದಾಗ ತನ್ನಿಂದ ನಿರ್ಮಿತವಾದ ವಾಪೀಕೂಪತಟಾಕಗಳಲ್ಲಿಯೇ ಸ್ನಾನವನ್ನು ಮಾಡಬೇಕು. ತನ್ನಿಂದ ನಿರ್ಮಿತವಾದ ವಾಪೀಕೂಪತಟಾಕಗಳು ಸಿಗದಿದ್ದಾಗ ಪರರಿಂದ ನಿರ್ಮಿತವಾದ ವಾಪೀ ಕೂಪತಟಾಕಗಳಲ್ಲಿ ಸ್ನಾನವನ್ನು ಮಾಡಬೇಕು. ಪರರಿಂದ ನಿರ್ಮಿತವಾದ ವಾಪೀ ಕೂಟತಟಾಕಗಳಲ್ಲಿ ಸ್ನಾನವನ್ನು ಮಾಡುವಾಗ ಅವುಗಳಲ್ಲಿರುವ ನಾಲ್ಕು ಮಣ್ಣಿನ ಮುದ್ದೆಗಳನ್ನು ಅಥವಾ ಕನಿಷ್ಠಪಕ್ಷದಲ್ಲಿ ಮೂರು ಮಣ್ಣಿನ ಮುದ್ದೆಗಳನ್ನು ತೆಗೆದು ಬಿಸಾಡಿದ ಮೇಲೆಯೇ ಸ್ನಾನವನ್ನು ಮಾಡಬೇಕು. ದೇವಖಾತ ಮುಂತಾದವುಗಳೂ, ತನ್ನಿಂದ ನಿರ್ಮಿತವಾದ ವಾಪೀಕೂಪತಟಾಕಗಳೂ ಸಿಗದಿರುವ ಕಾಲವು ಆಪತ್ಕಾಲವೆನಿಸುತ್ತದೆ. ಈ ಆಪತ್ಕಾಲದಲ್ಲಿ ಮಾತ್ರ ಹಿಂದೆ ಹೇಳಿದಂತೆ ಪರರಿಂದ ನಿರ್ಮಿತವಾದ ವಾಪೀಕೂಪತಟಾಕಗಳಲ್ಲಿ ಮಣ್ಣಿನ ಮುದ್ದೆಯನ್ನು ತೆಗೆದು ಬಿಸಾಡಿ ಸ್ನಾನ ಮಾಡಬೇಕು. ಆಪತ್ಕಾಲವು ಹೋದ ಮೇಲೆ ಪರರಿಂದ ನಿರ್ಮಿತವಾದ ವಾಪೀಕೂಪತಟಾಕಗಳಲ್ಲಿ ಸ್ನಾನವನ್ನು ಸರ್ವಥಾ ಮಾಡಬಾರದು." ಇದು ಮನುವಿನ ವಚನ.

ಈ ವಚನದಲ್ಲಿಯೂ "ಪರರಿಂದ ನಿರ್ಮಿತವಾದ ವಾಪೀಕೂಪತಟಾಕಗಳಲ್ಲಿ ಸ್ನಾನವನ್ನು ಮಾಡುವವರು ಮಾತ್ರ ವಾಪೀಕೂಪತಟಾಕಗಳಲ್ಲಿರುವ ಮಣ್ಣಿನ ಮುದ್ದೆಗಳನ್ನು ತೆಗೆದು ಬಿಸುಟ ಮೇಲೆ ಆ ವಾಪೀಕೂಪತಟಾಕಗಳಲ್ಲಿ ಸ್ನಾನವನ್ನು ಮಾಡಬೇಕೆಂದು ಹೇಳಿದೆ. ಸ್ವಂತವಾದ ವಾಪೀಕೂಪತಟಾಕಗಳಲ್ಲಿ ಸ್ನಾನ ಮಾಡುವವರಿಗೆ ಆ ನಿಯಮವು ಹೇಳಲ್ಪಟ್ಟಿಲ್ಲ. ಸ್ಪಷ್ಟವಾದ ಈ ಮನುವಿನ ವಾಕ್ಯದಂತೆ ಹಿಂದೆ ಹೇಳಿದ ಶೌನಕರ ಅಸ್ಪಷ್ಟವಾದ ವಾಕ್ಯದಲ್ಲಿಯೂ ಪರರಿಂದ ನಿರ್ಮಿತವಾದ ವಾಪೀಕೂಪತಟಾಕಗಳಲ್ಲಿ ಸ್ನಾನ ಮಾಡುವವರು ಮಾತ್ರ ಮಣ್ಣಿನ ಮುದ್ದೆಗಳನ್ನು ತೆಗೆದು ಹೊರಗೆ ಬಿಸಾಡಬೇಕೆಂದೂ, ಸ್ವಂತವಾದ ವಾಪೀಕೂಪತಟಾಕಗಳಲ್ಲಿ ಸ್ನಾನ ಮಾಡುವವರು ಹಾಗೆ ಮಾಡಬೇಕಾಗಿಲ್ಲವೆಂದೂ ಅರ್ಥವನ್ನು ಹೇಳಬೇಕು." ಇದು ಸ್ಮೃತಿಮುಕ್ತಾವಲೀಕಾರರು ಮಾಡಿರುವ ನಿರ್ಣಯ.

"ಶೌನಕವಾಕ್ಯದಲ್ಲಿ ಮಣ್ಣಿನ ಹತ್ತು ಮುದ್ದೆಗಳನ್ನೂ ಕನಿಷ್ಠಪಕ್ಷದಲ್ಲಿ ಐದು ಮುದ್ದೆಗಳನ್ನೂ, ಯೋಗಿಯಾಜ್ಞವಲ್ಕ್ಯರ ವಾಕ್ಯದಲ್ಲಿ ಏಳು ಮುದ್ದೆಗಳನ್ನೂ, ಮನುವಿನ ವಾಕ್ಯದಲ್ಲಿ ನಾಲ್ಕು ಅಥವಾ ಮೂರು ಮುದ್ದೆಗಳನ್ನೂ ಬಿಸಾಡಬೇಕೆಂದು

ಹೇಳಿರುತ್ತದೆ. ಮಣ್ಣಿನ ಮುದ್ದೆಗಳ ಸಂಖ್ಯೆಗಳಲ್ಲಿ ಅಭಿಪ್ರಾಯಭೇದವಿದ್ದರೂ ಪರರಿಂದ ನಿರ್ಮಿತವಾದ ವಾಪೀಕೂಪತಟಾಕಗಳಲ್ಲಿ ಮಣ್ಣಿನ ಮುದ್ದೆಗಳನ್ನು ತೆಗೆದು ಬಿಸಾಡಬೇಕೆಂಬ ವಿಷಯದಲ್ಲಿ ಅಭಿಪ್ರಾಯಭೇದವಿಲ್ಲ. ಆದ್ದರಿಂದ ಆ ಅಂಶವನ್ನು ನಿಸ್ಸಂಕೋಚವಾಗಿ ಅಂಗೀಕರಿಸಬಹುದು. ಮಣ್ಣಿನ ಮುದ್ದೆಯ ಸಂಖ್ಯೆಯನ್ನು ಮಾತ್ರ ಈ ಮೂರು ವಾಕ್ಯಗಳಲ್ಲಿ ಯಾವುದಾದರೂ ಒಂದು ವಾಕ್ಯದಲ್ಲಿ ಹೇಳಿದಂತೆ ಸ್ವೀಕರಿಸಬೇಕು. ಒಂದು ವಾಕ್ಯವನ್ನು ಸ್ವೀಕರಿಸಿದ ಮೇಲೆ ಯಾವಾಗಲೂ ಆ ವಾಕ್ಯದಲ್ಲಿ ಹೇಳಿದಂತೆಯೇ ಅನುಷ್ಠಾನ ಮಾಡಬೇಕು. ಮಧ್ಯದಲ್ಲಿ ಬದಲಾವಣೆ ಮಾಡಬಾರದು."

**ಮಣ್ಣಿನ ಮುದ್ದೆಯನ್ನು ತೆಗೆದು ಬಿಸಾಡದಂತೆ ಸ್ನಾನವನ್ನು ಮಾಡಿದರೆ ದೋಷ**

ಅನುದ್ಧೃತ್ಯ ತು ಯಃ ಸ್ನಾಯಾತ್ಪರಕೀಯಜಲಾಶಯೇ |
ವೃಥಾ ಭವತಿ ತತ್ಸ್ನಾನಂ ಕರ್ತುಃ ಪಾಪೇನ ಲಿಪ್ಯತೇ || (ಶೌನಕವಚನ)

"ಪರರಿಂದ ನಿರ್ಮಿತವಾದ ಜಲಾಶಯದಲ್ಲಿ ಮಣ್ಣನ್ನು ತೆಗೆದು ಬಿಸಾಡದೆ ಮಾಡುವ ಸ್ನಾನವು ನಿಷ್ಫಲವಾಗುತ್ತದೆ. ಅಂದರೆ ಆ ರೀತಿಯಲ್ಲಿ ಸ್ನಾನವನ್ನು ಮಾಡಿದವನು ಪೂಜಾದಿಗಳಿಗೆ ಅನರ್ಹನಾಗುವನು. ಅದು ಮಾತ್ರವಲ್ಲ. ಆ ಜಲಾಶಯಗಳನ್ನು ಕಟ್ಟಿಸಿದವನ ಪಾಪವು ಸ್ನಾನ ಮಾಡುವವನಿಗೆ ಬರುತ್ತದೆ." ಇದು ಶೌನಕರ ವಚನ.

**ಮಣ್ಣಿನ ಮುದ್ದೆಯನ್ನು ತೆಗೆದು ಬಿಸಾಡದೆ ಸ್ನಾನವನ್ನು ಮಾಡಿದರೂ ದೋಷವಿಲ್ಲದಿರುವ ಸ್ಥಳ**

ಉತ್ಸೃಷ್ಟೇಷು ಸರ್ವಾರ್ಥತ್ವೇನ ಕೃತತ್ವಾತ್ಪಿಂಡಾನುದ್ಧರಣೇಽಪಿ ನ ದೋಷ ಇತ್ಯುಕ್ತಮ್ |
(ಸ್ಮೃತಿಮುಕ್ತಾವಲೀಕಾರರ ವಚನ)

"ಸರ್ವರ ಉಪಯೋಗಕ್ಕಾಗಿ ನಿರ್ಮಿತವಾದ ಜಲಾಶಯವನ್ನು ದಾನ ಮಾಡಿದ ಮೇಲೆ ಆ ಜಲಾಶಯದಲ್ಲಿ ಅದನ್ನು ಕಟ್ಟಿಸಿದವನ ಅಧಿಕಾರವು ಹೋಗುತ್ತದೆ. ದಾನ ಮಾಡಿದ ದಿನದಿಂದ ಆ ಜಲಾಶಯಗಳಿಗೆ ಸರ್ವರೂ ಯಜಮಾನರೆನಿಸುವರು. ಆದ್ದರಿಂದ ಆ ಜಲಾಶಯಗಳಲ್ಲಿ ಸ್ನಾನ ಮಾಡುವವರೆಲ್ಲರೂ ಆ ಜಲಾಶಯಕ್ಕೆ ಯಜಮಾನರಾಗಿರುವುದರಿಂದ ಆ ಜಲಾಶಯವು ಪರಕೀಯವೆನಿಸುವುದಿಲ್ಲ. ಆ ಜಲಾಶಯವು ಪರಕೀಯವಲ್ಲದುದರಿಂದ ಅಲ್ಲಿ ಸ್ನಾನವನ್ನು ಮಾಡುವಾಗ ಮಣ್ಣಿನ ಮುದ್ದೆಗಳನ್ನು ತೆಗೆದು ಹೊರಗೆ ಬಿಸಾಡಬೇಕಾಗಿಲ್ಲ" ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

**ಮೇಲ್ಕಂಡ ವಾಕ್ಯಗಳಿಗೆ ಶಾತಾತಪವಚನವಿರೋಧಪರಿಹಾರ**

ಯತ್ತು ಶಾತಾತಪವಚನಂ

'ಅನ್ಯೈರಪಿ ಕೃತೇ ಕೂಪೇ ಸರೋವಾಪ್ಯಾದಿಕೇ ತಥಾ |
ತತ್ರ ಸ್ನಾತ್ವಾ ಚ ಪೀತ್ವಾ ಚ ಪ್ರಾಯಶ್ಚಿತ್ತಂ ನ ವಿದ್ಯತೇ' ಇದಮತ್ಯಂತಾಪದ್ವಿಷಯಮ್ ||

"ಪರರಿಂದ ನಿರ್ಮಿತವಾದ ಕೂಪ ಸರೋವರ ವಾಪೀ ಮುಂತಾದವುಗಳಲ್ಲಿ ಸ್ನಾನವನ್ನು ಮಾಡುವುದರಿಂದಲೂ, ಅವುಗಳ ಜಲವನ್ನು ಪಾನ ಮಾಡುವುದರಿಂದಲೂ ಯಾವ ದೋಷವೂ ಇಲ್ಲ. ಆ ದೋಷದ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಬೇಕಾಗಿಲ್ಲ" ಇದು ಶಾತಾತಪರ ವಚನ. ಈ ವಚನವು ಪರರಿಂದ ನಿರ್ಮಿತವಾದ ಜಲಾಶಯಗಳಲ್ಲಿ ಸ್ನಾನ ಮುಂತಾದವುಗಳನ್ನು ಮಾಡುವವರಿಗೆ ದೋಷವನ್ನು ಹೇಳುತ್ತಿರುವ ಮೇಲ್ಕಂಡ ಶೌನಕ ಮುಂತಾದವರುಗಳ ವಾಕ್ಯಗಳಿಗೆ ವಿರುದ್ಧವಾಗಿದೆ. ಈ ವಿರೋಧವನ್ನು ಪರಿಹರಿಸಲೇಬೇಕು. ಸಾಧಾರಣ ಆಪತ್ಕಾಲಗಳಲ್ಲಿ ಪರರಿಂದ ನಿರ್ಮಿತವಾದ ಜಲಾಶಯಗಳಲ್ಲಿ ಮಣ್ಣಿನ ಮುದ್ದೆಯನ್ನು ತೆಗೆದು ಬಿಸಾಡಿ ಸ್ನಾನವನ್ನು ಮಾಡಬೇಕೆಂದು ಶೌನಕ ಮುಂತಾದವರ ವಾಕ್ಯದಲ್ಲಿ ಹೇಳಿದೆಯೆಂದೂ ಅತ್ಯಂತಾಪತ್ಕಾಲದಲ್ಲಿ ಪ್ರಾಯಶ್ಚಿತ್ತವನ್ನು ಮಾಡಬೇಕಾಗಿಲ್ಲವೆಂದು ಶಾತಾತಪರ ವಚನದಲ್ಲಿ ಹೇಳಿದೆಯೆಂದೂ ಹೇಳಿದರೆ ಎರಡು ವಾಕ್ಯಗಳಿಗೂ ವಿರೋಧವಿಲ್ಲ." ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

ಅನಾಪದಿ ವಿಜ್ಞಾನೇಶ್ವರೈರುಕ್ತಂ -

'ಅಂತ್ಯಜೈಃ ಖಾನಿತಾಃ ಕೂಪಾಸ್ತಟಾಕಾ ವಾಪ್ಯ ಏವ ಚ |
ಏಷು ಸ್ನಾತ್ವಾ ಚ ಪೀತ್ವಾ ಚ ಪ್ರಾಜಾಪತ್ಯೇನ ಶುದ್ಧ್ಯತಿ ||
ಅಕಾಮಾದ್ವ್ಯಾಹ್ನಾಣಃ ಶುದ್ಧ್ಯೇದ್ಬ್ರಹ್ಮಕೂರ್ಚೋಪವಾಸತಃ ||' ಇತಿ.

ಆಪತ್ತು ಇಲ್ಲದಿರುವಾಗ ಪತಿತ ಮುಂತಾದವರಿಂದ ನಿರ್ಮಿತವಾದ ವಾಪೀ ಕೂಪ ತಟಾಕ ಮುಂತಾದವುಗಳಲ್ಲಿ ಸ್ನಾನ ಮಾಡಿದರೂ, ಅವುಗಳ ಜಲವನ್ನು ಪಾನ ಮಾಡಿದರೂ, ಪ್ರಾಜಾಪತ್ಯಕೃಚ್ಛ್ರಪ್ರಾಯಶ್ಚಿತ್ತವನ್ನು ಮಾಡಬೇಕು. ಇದರಿಂದ ಶುದ್ಧಿಯು ಏರ್ಪಡುತ್ತದೆ. ಇದು ತಿಳಿದು ಮಾಡಿದ ದೋಷಕ್ಕೆ ಪ್ರಾಯಶ್ಚಿತ್ತ. ತಿಳಿಯದೆ ಮಾಡಿದರೆ ಒಂದು ದಿನ ಉಪವಾಸವಾಗಿದ್ದು ಮರುದಿನದಲ್ಲಿ ಬ್ರಹ್ಮಕೂರ್ಚ ಎಂಬ ಪಂಚಗವ್ಯವನ್ನು ಪ್ರಾಶನ ಮಾಡಿದರೆ ಶುದ್ಧಿಯು ಏರ್ಪಡುತ್ತದೆ. ಪ್ರಾಜಾಪತ್ಯಕೃಚ್ಛ್ರವನ್ನು ಮಾಡಬೇಕಾಗಿಲ್ಲ." ಇದು ವಿಜ್ಞಾನೇಶ್ವರರು ಹೇಳಿರುವುದು.

## ತೀರ್ಥಸ್ನಾನಮಂತ್ರಗಳು

### ಗಂಗಾಸ್ನಾನಮಂತ್ರ

ವಿಷ್ಣುಪಾದಾಬ್ಜಸಂಭೂತೇ ಗಂಗೇ ತ್ರಿಪಥಗಾಮಿನಿ |
ಧರ್ಮದ್ರವೇತಿ ವಿಖ್ಯಾತೇ ಪಾಪಂ ಮೇ ಹರ ಜಾಹ್ನವಿ ||
ಶ್ರದ್ಧಯಾ ಧರ್ಮಸಂಪನ್ನೇ ಶ್ರೀಮಾತರ್ದೇವಿ ಜಾಹ್ನವಿ |
ಅಮೃತೇನಾಂಬುನಾ ದೇವಿ ಭಾಗೀರಥಿ ಪುನೀಹಿ ಮಾಮ್ || (ಚಂದ್ರಿಕಾವಚನ)

"ಓ ಗಂಗಾದೇವಿ, ನೀನು ನಾರಾಯಣನ ಪಾದಕಮಲಗಳಿಂದ ಅವತರಿಸಿದವಳು. ಆದ್ದರಿಂದ 'ವಿಷ್ಣುಪಾದಾಬ್ಜಸಂಭೂತಾ' ಎಂಬ ಬಿರುದನ್ನು ಪಡೆದಿರುವಿ. ದೇವಲೋಕ ಭೂಲೋಕ ಪಾತಾಳಲೋಕ ಎಂಬ ಮೂರು ಲೋಕಗಳ ಮಾರ್ಗಗಳಲ್ಲಿಯೂ ಯಾವಾಗಲೂ ಸಂಚರಿಸುತ್ತಿರುವವಳು. ಆದ್ದರಿಂದ 'ತ್ರಿಪಥಗಾಮಿನೀ' ಎಂಬ ಬಿರುದನ್ನು ಪಡೆದಿರುವಿ. ನಿನ್ನಲ್ಲಿರುವ ದ್ರವರೂಪವಾದ ನೀರಿನಿಂದ ಸರ್ವರಿಗೂ ಧರ್ಮವನ್ನು ಕೊಡುತ್ತಿರುವವಳು. ಆದ್ದರಿಂದ 'ಧರ್ಮದ್ರವಾ' ಎಂದು ಪ್ರಸಿದ್ಧಳಾಗಿರುವಿ. ನೀನು ಜಹ್ನು ಎಂಬ ರಾಜನಿಂದ ಕುಡಿಯಲ್ಪಟ್ಟು ಅವನ ಕಿವಿಯಿಂದ ಪುನಃ ಅವತರಿಸಿದವಳು. ಆದ್ದರಿಂದ ಜಾಹ್ನವೀ ಎಂದು ಪ್ರಸಿದ್ಧಳಾಗಿರುವಿ. ಧರ್ಮರೂಪಿಯಾದ ಶ್ರೀಹರಿ ಪೂರ್ಣಾನುಗ್ರಹದಿಂದ ಮಹಾಪುಣ್ಯವನ್ನು ಸಂಪಾದಿಸಿದವಳು. ಆದ್ದರಿಂದ 'ಧರ್ಮಸಂಪನ್ನಾ' ಎಂಬ ಬಿರುದನ್ನು ಪಡೆದಿರುವಿ. ನೀನು ಸರ್ವರಿಗೂ ಸಕಲಸಂಪತ್ತುಗಳನ್ನೂ ಕೊಡುವ ತಾಯಿಯಾಗಿರುವವಳು. ಆದ್ದರಿಂದ 'ಶ್ರೀಮಾತಾ' ಎಂಬ ಬಿರುದನ್ನು ಪಡೆದಿರುವಿ. ಓ ಜಾಹ್ನವೀ ದೇವಿಯೇ, ನಾನು ನಿನ್ನನ್ನು ನಂಬಿರುವೆನು. ಅಮೃತದಂತೆ ರುಚಿಯಾಗಿಯೂ ಮುಕ್ತಿಕರವಾಗಿಯೂ ಇರುವ ನಿನ್ನ ಜಲವನ್ನು ಶ್ರದ್ಧೆಯಿಂದ ಸೇವಿಸುವೆನು. ನನ್ನ ಪಾಪಗಳೆಲ್ಲವನ್ನೂ ಪರಿಹರಿಸು. ನನ್ನನ್ನು ಅತ್ಯಂತ ಪರಿಶುದ್ಧನಾಗುವಂತೆ ಮಾಡು."

### ಕರತೋಯಾನದೀ ಸ್ನಾನಮಂತ್ರ

ಕರತೋಯೇ ಸದಾನೀರೇ ಸರಿಚ್ಛ್ರೇಷ್ಠೇ ಸರಿದ್ವರೇ |
ಆಪ್ಲಾವಯಸಿ ಪಾತ್ರಾಣಾಂ ಪಾಪಂ ಹರ ಕರೋದ್ಭವೇ || (ಚಂದ್ರಿಕಾವಚನ)

"ಓ ಕರತೋಯಾನದಿಯೇ, ನೀನು ನಾರಾಯಣನ ಕೈಗಳಿಂದ ಅವತರಿಸಿದವಳು. ಆದ್ದರಿಂದ 'ಕರತೋಯಾ' ಅಥವಾ 'ಕರೋದ್ಭವಾ' ಎಂದು ಪ್ರಸಿದ್ಧಳಾಗಿರುವಿ. ನಿನ್ನಲ್ಲಿ ಯಾವಾಗಲೂ ನೀರು ತುಂಬಿರುತ್ತದೆ. ಆದ್ದರಿಂದ 'ಸದಾನೀರಾ' ಎಂದು ಪ್ರಸಿದ್ಧಳಾಗಿರುವಿ. ನೀನು ಎಲ್ಲಾ ನದಿಗಳ ಮಧ್ಯದಲ್ಲಿ ಉತ್ತಮಳಾಗಿರುವವಳು. ಆದ್ದರಿಂದ 'ಸರಿಚ್ಛ್ರೇಷ್ಠಾ' ಅಥವಾ 'ಸರಿದ್ವರಾ'

ಎಂದು ಪ್ರಸಿದ್ಧಳಾಗಿರುವಿ. ನಿನ್ನಲ್ಲಿ ಸ್ನಾನ ಮಾಡಿದವರನ್ನು ಮಾತ್ರವಲ್ಲದೆ ಅವರ ಮೊಮ್ಮಕ್ಕಳನ್ನೂ ಉದ್ಧಾರ ಮಾಡುತ್ತಿರುವಿ. ನೀನು ನನ್ನ ಪಾಪಗಳನ್ನೆಲ್ಲವನ್ನೂ ಪರಿಹರಿಸು."

### ಕೌಶಿಕೀನದೀ ಸ್ನಾನಮಂತ್ರ

ಗಾಧಿರಾಜಸುತೇ ದೇವಿ ವಿಶ್ವಾಮಿತ್ರಮುನೇಃ ಸ್ವಸಃ |
ಋಚೀಕಭಾರ್ಯೇ ಸತ್ಯಾಖ್ಯೇ ಪಾಪಂ ಮೇ ಹರ ಕೌಶಿಕಿ || (ಚಂದ್ರಿಕಾವಚನ)

"ಕುಶಿಕರಾಜನ ವಂಶದಲ್ಲಿ ಅವತರಿಸಿರುವ ಕೌಶಿಕೀನದಿಯೇ, ನೀನು ಗಾಧಿರಾಜನ ಮಗಳು. ವಿಶ್ವಾಮಿತ್ರಮುನಿಯ ಸಹೋದರೀ. ಋಚೀಕ ಎಂಬ ಮುನಿಯ ಪತ್ನೀ, ಸತ್ಯವತೀ ಎಂದು ಪ್ರಸಿದ್ಧಳಾಗಿರುವಿ. ನೀನು ನನ್ನ ಪಾಪಗಳನ್ನೆಲ್ಲವನ್ನೂ ಪರಿಹರಿಸು."

### ಕೃಷ್ಣವೇಣೀನದೀ ಸ್ನಾನಮಂತ್ರ

ಸಹ್ಯಪಾದೋದ್ಭವೇ ದೇವಿ ಶ್ರೀಶೈಲೋತ್ಸಂಗಗಾಮಿನಿ |
ಕೃಷ್ಣವೇಣೀತಿ ವಿಖ್ಯಾತೇ ಸರ್ವಪಾಪಪ್ರಣಾಶಿನಿ ||
ಸಹ್ಯಪಾದೋದ್ಭವೇ ದೇವಿ ಕೃಷ್ಣವೇಣೀತಿ ವಿಶ್ರುತೇ |
ಸರ್ವಪಾಪವಿಶುದ್ಧ್ಯರ್ಥಂ ಸ್ನಾಸ್ಯೇ ದೇವಿ ತವಾಂಭಸಿ ||
ಪ್ರಸೀದ ಮೇ ದೇವಿ ಸದಾ ರಸೇನ ದೇವೇಶಸೃಷ್ಟಾ ಜಗತೋಽಸಿ ಮುಕ್ತ್ಯೈ |
ಸ್ನಾನೇನ ಯಸ್ಯಾಮವಧೂತಪಾಪಃ ಪ್ರಾಪ್ನೋತಿ ವಿಷ್ಣೋಃ ಪದಮೇವ ಮರ್ತ್ಯಃ ||
ಬ್ರಹ್ಮಾಮೃತಾನಂದರಸೇನ ಪೂರ್ಣಾಂ ಜಲೇನ ಪೂರ್ಣಾಮಿತಿ ಮೇನಿರೇ ಪ್ರಜಾಃ |
ತಾಂ ತ್ವಾವಗಾಹಾಮಿ ಪಿಬಾಮಿ ಕೃಷ್ಣೇ ದೇವಾನೃಷೀಂಸ್ತರ್ಪಯಿಷ್ಯೇ ಪಿತೄಂಶ್ಚ || (ಚಂದ್ರಿಕಾವಚನ)

"ಓ ಕೃಷ್ಣವೇಣೀ ಎಂದು ಪ್ರಸಿದ್ಧಳಾದ ನದಿಯೇ, ನೀನು 'ಸಹ್ಯ' ಎಂಬ ಪರ್ವತದ ಶಿಖರದಲ್ಲಿ ಅವತರಿಸಿರುವಿ. ಆದ್ದರಿಂದ 'ಸಹ್ಯಪಾದೋದ್ಭವಾ' ಎಂದು ಪ್ರಸಿದ್ಧಳಾಗಿರುವಿ. 'ಶ್ರೀಶೈಲ' ಎಂಬ ಪರ್ವತದ ಶಿಖರದಲ್ಲಿ ಸಂಚರಿಸುವಿ. ಆದ್ದರಿಂದ 'ಶ್ರೀಶೈಲೋತ್ಸಂಗಗಾಮಿನೀ' ಎಂದು ಪ್ರಸಿದ್ಧಳಾಗಿರುವಿ. ಸರ್ವರ ಸಕಲಪಾಪಗಳನ್ನೂ ಪರಿಹರಿಸುತ್ತಿರುವಿ. ನಾನೂ ನನ್ನ ಸಕಲಪಾಪಗಳನ್ನು ಪರಿಹರಿಸಿ ಕೊಳ್ಳುವುದಕ್ಕಾಗಿ ನಿನ್ನ ಜಲದಲ್ಲಿ ಸ್ನಾನ ಮಾಡುವೆನು. 'ಓ ದೇವಿಯೇ ಸಕಲದೇವತಾ ಸಾರ್ವಭೌಮನಾದ ನಾರಾಯಣನು ಸಕಲಸಜ್ಜನರ ಮುಕ್ತಿಗಾಗಿ ನಿನ್ನನ್ನು ಸೃಷ್ಟಿಸಿರುವನು. ನನ್ನಲ್ಲಿ ಪ್ರಸನ್ನಳಾಗು. ನಿನ್ನಲ್ಲಿ ಯಾವಾಗಲೂ ತುಂಬಿರುವ ಜಲದಲ್ಲಿ ಸ್ನಾನ ಮಾಡುವವನು ಪಾಪಗಳನ್ನೆಲ್ಲವನ್ನೂ ಕಳೆದುಕೊಳ್ಳುವನು. ಶ್ರೀಹರಿಯ ಪಾದಗಳನ್ನು ಪಡೆಯುವನು. ಓ ದೇವಿಯೇ, ನೀನು ಶ್ರೀಹರಿಯನ್ನು ಯಾವಾಗಲೂ ಧ್ಯಾನಿಸುತ್ತಿರುವಿ. ಅವನ ಧ್ಯಾನದಿಂದ ಬಂದಿರುವ ಆನಂದರಸದಿಂದ ಯಾವಾಗಲೂ ತುಂಬಿರುವಿ. ಆದ್ದರಿಂದ 'ಬ್ರಹ್ಮಾಮೃತಾನಂದರಸದಿಂದ ತುಂಬಿರುವವಳು' ಎಂದು ಪ್ರಸಿದ್ಧಳಾಗಿರುವಿ. ಇಂತಹ ನಿನ್ನನ್ನು ಸಾಮಾನ್ಯ ಜನರು ಬರೇ ನೀರಿನಿಂದ ತುಂಬಿದವಳೆಂದು ನಂಬಿರುವರು. ಓ ಕೃಷ್ಣವೇಣಿಯೇ, ನಿನ್ನಲ್ಲಿ ನಾನು ಸ್ನಾನ ಮಾಡುವೆನು. ನಿನ್ನ ಜಲದಿಂದ ದೇವತೆಗಳಿಗೂ ಋಷಿಗಳಿಗೂ ಪಿತೃಗಳಿಗೂ ತರ್ಪಣವನ್ನು ಕೊಡುವೆನು. ನಿನ್ನ ಜಲವನ್ನು ಕುಡಿಯುವೆನು."

### ಭೀಮರಥೀನದೀ ಸ್ನಾನಮಂತ್ರ

ಭೀಮಸ್ವೇದಸಮುದ್ಭೂತೇ ರಥನೇಮಿವಿನಿಸ್ಸೃತೇ |
ಸರ್ವಪಾಪಪ್ರಣಾಶಾರ್ಥಂ ಸ್ನಾಸ್ಯೇ ದೇವಿ ತವಾಂಭಸಿ || (ಚಂದ್ರಿಕಾವಚನ)

"ಓ ಭೀಮರಥೀ ದೇವಿಯೇ, ಭಯಂಕರವಾದ ರೂಪವುಳ್ಳವನಾದುದರಿಂದ 'ಭೀಮ' ಎಂದು ಪ್ರಸಿದ್ಧನೂ, ವಿಷ್ಣುಭಕ್ತಾಗ್ರೇಸರನೂ ಆಗಿರುವ ರುದ್ರದೇವನ ಬೆವರಿನಿಂದ ಅವತರಿಸಿರುವಿ. ಆದ್ದರಿಂದ 'ಭೀಮಸ್ವೇದಸಮುದ್ಭೂತಾ' ಎಂದು ಪ್ರಸಿದ್ಧಳಾಗಿರುವಿ. ರುದ್ರದೇವನ ರಥದ ಚಕ್ರದಿಂದ ಚೆನ್ನಾಗಿ ಪ್ರಕಟಳಾಗಿರುವಿ. ಆದ್ದರಿಂದ 'ರಥನೇಮಿವಿನಿಸ್ಸೃತಾ' ಎಂದು ಪ್ರಸಿದ್ಧಳಾಗಿರುವಿ. ಇಂತಹ ನಿನ್ನ ಜಲದಲ್ಲಿ ನನ್ನ ಎಲ್ಲಾ ಪಾಪಗಳೂ ಸಂಪೂರ್ಣವಾಗಿ ಪರಿಹರಿಸಲ್ಪಡುವುದಕ್ಕಾಗಿ ಸ್ನಾನ ಮಾಡುವೆನು."

### ನರ್ಮದಾ ಸ್ನಾನಮಂತ್ರ

ಆದ್ಯೇ ನಮಃ ಪುಣ್ಯಜಲೇ ನಮಃ ಸಾಗರಗಾಮಿನಿ |
ನರ್ಮದೇ ಪಾಪನಿರ್ಮೋಚೇ ನಮೋ ದೇವಿ ವರಾನನೇ ||
ನಮೋಽಸ್ತು ತೇ ಮುನಿಗಣಸಿದ್ಧಸೇವಿತೇ ನಮೋಽಸ್ತು ತೇ ಶಂಕರದೇಹನಿಸ್ಸೃತೇ |
ನಮೋಽಸ್ತು ಧರ್ಮಭೃತಾಂ ವರಪ್ರದೇ ನಮೋಽಸ್ತು ತೇ ಸರ್ವಪವಿತ್ರಪಾವನಿ ||

"ಓ ನರ್ಮದಾ ನದಿಯೇ, ನೀನು ನದಿಗಳಲ್ಲಿ ಅತ್ಯಂತ ಶ್ರೇಷ್ಠಳು. ಆದ್ದರಿಂದ 'ಆದ್ಯಾ' ಎಂದು ಪ್ರಸಿದ್ಧಳಾಗಿರುವಿ. ನೀನು ಸಮುದ್ರದಲ್ಲಿ ಸಾಕ್ಷಾತ್ತಾಗಿ ಸಂಬಂಧವನ್ನು ಪಡೆಯುತ್ತಿರುವಿ. ಆದ್ದರಿಂದ 'ಸಾಗರಗಾಮಿನೀ' ಎಂದು ಪ್ರಸಿದ್ಧಳಾಗಿರುವಿ. ಸರ್ವರ ಸಕಲಪಾಪಗಳನ್ನೂ ಪರಿಹರಿಸುತ್ತಿರುವಿ. ಆದ್ದರಿಂದ 'ಪಾಪನಿರ್ಮೋಚಾ' ಎಂದು ಪ್ರಸಿದ್ಧಳಾಗಿರುವಿ. ಸುಂದರವಾದ ಮುಖದಿಂದ ಯುಕ್ತಳಾಗಿರುವ ಓ ದೇವಿಯೇ, ನಿನ್ನನ್ನು ಭಕ್ತಿಯಿಂದ ನಮಸ್ಕರಿಸುವೆನು. ಎಲ್ಲಾ ಮುನಿಗಳೂ, ತಪಃಸಿದ್ಧಿಯನ್ನು ಪಡೆದಿರುವ ಸಿದ್ಧರೂ ನಿನ್ನನ್ನು ಯಾವಾಗಲೂ ಸೇವಿಸುತ್ತಿರುವರು. ಆದ್ದರಿಂದ 'ಮುನಿಗಣಸಿದ್ಧಸೇವಿತಾ' ಎಂದು ಪ್ರಸಿದ್ಧಳಾಗಿರುವಿ. ರುದ್ರದೇವನ ದೇಹದಿಂದ ಆವಿರ್ಭವಿಸಿರುವಿ. ಆದ್ದರಿಂದ 'ಶಂಕರದೇಹನಿಸ್ಸೃತಾ' ಎಂದು ಪ್ರಸಿದ್ಧಳಾಗಿರುವಿ. ಧರ್ಮವನ್ನು ಚೆನ್ನಾಗಿ ಅನುಷ್ಠಿಸುವವರಿಗೆ ಎಲ್ಲಾ ವರಗಳನ್ನೂ ಕೊಡುತ್ತಿರುವಿ. ಆದ್ದರಿಂದ 'ಧರ್ಮಭೃತಾಂ ವರಪ್ರದಾ' ಎಂದು ಪ್ರಸಿದ್ಧಳಾಗಿರುವಿ. ಲೋಕದಲ್ಲಿ ಪವಿತ್ರವಾದ ಎಲ್ಲಾ ವಸ್ತುಗಳಿಗಿಂತಲೂ ನೀನು ಪರಿಶುದ್ಧಳಾಗಿರುವಿ. ಆದ್ದರಿಂದ 'ಸರ್ವಪವಿತ್ರಪಾವನೀ' ಎಂದು ಲೋಕದಲ್ಲಿ ಪ್ರಸಿದ್ಧಳಾಗಿರುವಿ. ಇಂತಹ ನಿನ್ನನ್ನು ಅಡಿಗಡಿಗೆ ನಮಸ್ಕರಿಸುತ್ತಿರುವೆನು."

### ಗಂಗಾಸಾಗರಸಂಗಮ ಸ್ನಾನಮಂತ್ರ

ತ್ವಂ ದೇವ ಸರಿತಾಂ ನಾಥ ತ್ವಂ ದೇವಿ ಸರಿತಾಂ ವರೇ |
ಉಭಯೋಃ ಸಂಗಮೇ ಸ್ನಾತ್ವಾ ಮುಂಚಾಮಿ ದುರಿತಾನಿ ವೈ || (ಚಂದ್ರಿಕಾವಚನ)

"ಓ ಸಮುದ್ರರಾಜ, ನೀನು ಎಲ್ಲಾ ನದಿಗಳಿಗೂ ಗಂಡನಾಗಿರುವಿ. ಓ ಗಂಗಾದೇವಿಯೇ, ನೀನು ಎಲ್ಲಾ ನದಿಗಳ ಮಧ್ಯದಲ್ಲಿ ಉತ್ತಮಳಾಗಿರುವಿ. ನಿಮ್ಮಿಬ್ಬರ ಸಂಗಮದಲ್ಲಿ ಮಿಂದು ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುವೆನು."

### ಲೌಹಿತ್ಯ ಸ್ನಾನಮಂತ್ರ

ಬ್ರಹ್ಮಪುತ್ರ ಮಹಾಭಾಗ ಶಂತನೋಃ ಕುಲವರ್ಧನ |
ಅಮೋಘಗರ್ಭಸಂಭೂತ ಪಾಪಂ ಲೌಹಿತ್ಯ ಮೇ ಹರ || (ಚಂದ್ರಿಕಾ ವಚನ)

"ಓ ಲೌಹಿತ್ಯತೀರ್ಥದೇವತೆಯೇ, ನೀನು ಬ್ರಹ್ಮದೇವನ ಮಗನಾಗಿ ಅವತರಿಸಿದವನು. ಮಹಾಭಾಗ್ಯಶಾಲಿಯಾದವನು. ಶಂತನು ರಾಜನ ವಂಶದಲ್ಲಿ ಅವತರಿಸಿ ಅವನ ಕುಲವನ್ನು ವೃದ್ಧಿಪಡಿಸಿದವನು. ಯಾವ ಕಾರಣದಿಂದಲೂ ವ್ಯರ್ಥವಾಗದಿರುವ ಗರ್ಭದಿಂದ ಅವತರಿಸಿದವನು. ಅಂತಹ ಸುಂದರನಾದ ಲೌಹಿತ್ಯದೇವನೇ, ನನ್ನ ಪಾಪಗಳನ್ನೆಲ್ಲವನ್ನೂ ಪರಿಹರಿಸು."

## ಸಮುದ್ರ ಸ್ನಾನಮಂತ್ರ

ಅಗ್ನಿಶ್ಚ ಯೋನಿರನಿಲಶ್ಚ ದೇಹೇ ರೇತೋಧಾ ವಿಷ್ಣುರಮೃತಸ್ಯ ನಾಭಿಃ |
ಏತದ್ಬ್ರುವನ್ ಪಾಂಡವ ಸತ್ಯವಾಕ್ಯಂ ತತೋಽವಗಾಹೇತ ಪತಿಂ ನದೀನಾಮ್ || (ಮಹಾಭಾರತ ವಚನ)

"ಅಗ್ನಿದೇವನೂ ವಾಯುದೇವನೂ ದೇಹದಲ್ಲಿದ್ದು ಎಲ್ಲಾ ಕಾರ್ಯಗಳನ್ನೂ ಮಾಡಿಸುತ್ತಿರುವರು. 'ಮುಕ್ತಿಗೆ ಮೂಲಕಾರಣನಾಗಿರುವ ನಾರಾಯಣನು ಸರ್ವರಿಗೂ ಜನಕನು' ಎಂಬ ತತ್ತ್ವವು ಸತ್ಯವಾದುದು. ಓ ಧರ್ಮರಾಜ, ಈ ತತ್ತ್ವವನ್ನು ಹೇಳುತ್ತಾ ವಿಷ್ಣು ಸರ್ವೋತ್ತಮತ್ವವಾಯುಜೀವೋತ್ತಮತ್ವತತ್ತ್ವವನ್ನು ಅನುಸಂಧಾನ ಮಾಡುತ್ತಾ ಸಮುದ್ರದಲ್ಲಿ ಸ್ನಾನವನ್ನು ಮಾಡಬೇಕು."

ಆಜನ್ಮಶತಸಾಹಸ್ರೈರ್ಯತ್ಪಾಪಂ ಕುರುತೇ ಕ್ವಚಿತ್ |
ಮುಚ್ಯತೇ ಸರ್ವಪಾಪೇಭ್ಯಃ ಸ್ನಾತ್ವಾ ವೈ ಲವಣಾಂಭಸಿ || (ಚಂದ್ರಿಕಾವಚನ)

"ಅನೇಕ ಸಹಸ್ರಜನ್ಮಗಳಲ್ಲಿ ಮಾಡುತ್ತಿರುವ ಎಲ್ಲಾ ಪಾಪಗಳೂ, ಉಪ್ಪು ನೀರಿನ ಸಮುದ್ರದಲ್ಲಿ ಸ್ನಾನವನ್ನು ಮಾಡುವುದರಿಂದ ದೂರವಾಗುತ್ತವೆ."

### ಅಶ್ವತ್ಥ ಮತ್ತು ಸಮುದ್ರವನ್ನು ಸೇವಿಸುವುದಕ್ಕೆ ಯೋಗ್ಯವಾದ ದಿನ

ಅಶ್ವತ್ಥಃ ಸಾಗರಶ್ಚೈವ ನ ಸ್ಪೃಷ್ಟವ್ಯೌ ಕದಾಚನ |
ಅಶ್ವತ್ಥಂ ಮಂದವಾರೇ ತು ಸಾಗರಂ ಪರ್ವಣಿ ಸ್ಪೃಶೇತ್ ||
ಅನ್ಯಥಾ ತು ಕುರುಶ್ರೇಷ್ಠ ದೇವಯೋನಿರಪಾಂ ಪತಿಃ |
ಕುಶಾಗ್ರೇಣಾಪಿ ಕೌಂತೇಯ ನ ಸ್ಪ್ರಷ್ಟವ್ಯೋ ಮಹೋದಧಿಃ || (ಮಹಾಭಾರತವಚನ)

"ಶನಿವಾರ ದಿನದಲ್ಲಿ ಅಶ್ವತ್ಥವೃಕ್ಷವನ್ನೂ, ಅಮಾವಾಸ್ಯಾ ಮತ್ತು ಪೂರ್ಣಿಮಾ ಮುಂತಾದ ಪರ್ವದಿನಗಳಲ್ಲಿ ಸಮುದ್ರವನ್ನೂ ಮುಟ್ಟಬೇಕು. ಬೇರೆ ದಿನಗಳಲ್ಲಿ ಮುಟ್ಟಕೂಡದು. ಸಮುದ್ರರಾಜನು ಮಹಾಲಕ್ಷ್ಮೀ ಮುಂತಾದ ದೇವತೆಗಳಿಗೆ ಜನಕನು. ಅತಿ ಪರಿಶುದ್ಧನಾದ ಎಲ್ಲಾ ತೀರ್ಥಗಳಿಗೂ ಅಧಿಪತಿ. ಇಂತಹ ಮಹನೀಯನಾದ ಸಮುದ್ರರಾಜನನ್ನು ಬೇರೆ ದಿನಗಳಲ್ಲಿ ದರ್ಭೆಯ ತುದಿಯಿಂದಲೂ ಕೂಡ ಮುಟ್ಟಬಾರದು."

### ಬಂಧು ಮುಂತಾದವರಿಗಾಗಿ ಮಾಡುವ ತೀರ್ಥಸ್ನಾನಕ್ರಮ

ಷೋಡಶಾಂಶಂ ನ ಲಭತೇ ಯಃ ಪರಾರ್ಥೇನ ಗಚ್ಛತಿ |
ಅರ್ಧಂ ತೀರ್ಥಫಲಂ ತಸ್ಯ ಯಃ ಪ್ರಸಂಗೇನ ಗಚ್ಛತಿ || (ಪೈಠೀನಸಿವಚನ)

"ಇನ್ನೊಬ್ಬರಿಗಾಗಿ ತೀರ್ಥಯಾತ್ರೆಯನ್ನು ಮಾಡುವವನಿಗೆ ಆ ತೀರ್ಥಯಾತ್ರೆಯಿಂದ ಬರುವ ಪುಣ್ಯದ ಹದಿನಾರನೆಯ ಒಂದು ಭಾಗವೂ ಸಿಗುವುದಿಲ್ಲ. ತೀರ್ಥಯಾತ್ರೆಯನ್ನು ಮಾಡುವವರು ತೀರ್ಥಯಾತ್ರೆಗಾಗಿಯೇ ಹೊರಡಬೇಕು. ಹಾಗೆ ಹೊರಡದೆ ಯಾವುದೋ ಒಂದು ನಿಮಿತ್ತದಿಂದ ಹೋದರೆ ಆ ತೀರ್ಥಯಾತ್ರೆಯ ಫಲದಲ್ಲಿ ಅರ್ಧಫಲವನ್ನು ಪಡೆಯುವರು. ಉದಾಹರಣೆ ಬೇರೆ ಕೆಲಸಕ್ಕಾಗಿ ದಿಲ್ಲಿಗೆ ಹೋದವನು ಯಮುನಾ ಸ್ನಾನವನ್ನು ಮಾಡಿದರೆ ಅವನಿಗೆ ಅರ್ಧ ಫಲವು ಬರುತ್ತದೆ."

ತೀರ್ಥಂ ಪ್ರಾಪ್ಯಾನುಷಂಗೇಣ ಯಸ್ತತ್ರ ಸ್ನಾನಮಾಚರೇತ್ |
ಸ್ನಾನಜಂ ಫಲಮಾಪ್ನೋತಿ ತೀರ್ಥಯಾತ್ರಾಫಲಂ ನ ತು || (ಶಂಖವಚನ)

"ಯಾವುದೋ ಒಂದು ನಿಮಿತ್ತದಿಂದ ತೀರ್ಥಕ್ಷೇತ್ರಗಳಿಗೆ ಹೋಗುವವನು ತೀರ್ಥಯಾತ್ರೆಯ ಉದ್ದೇಶದಿಂದ ಹೋಗುವುದಿಲ್ಲ. ಇಂತಹ ಸಂದರ್ಭದಲ್ಲಿ ತೀರ್ಥಸ್ನಾನದ ಫಲವು ಮಾತ್ರ ಬರುತ್ತದೆ. ತೀರ್ಥಯಾತ್ರೆಯ ಫಲವು ಬರುವುದಿಲ್ಲ."

### ಇತರರನ್ನು ಉದ್ದೇಶಿಸಿ ಮಾಡುವ ಸ್ನಾನದಿಂದ ಅವರಿಗೆ ಬರುವ ಫಲ

ಪಿತರಂ ಮಾತರಂ ವಾಪಿ ಭ್ರಾತರಂ ಶ್ವಶುರಂ ಗುರುಮ್ |
ಯಮುದ್ದಿಶ್ಯ ನಿಮಜ್ಜೇತ ಅಷ್ಟಮಾಂಶಂ ಲಭೇತ ಸಃ || (ವೃದ್ಧಮನುವಚನ)
ಉದ್ದೇಶಸ್ನಾನಂ ಜೀವವದ್ವಿಷಯಮಿತಿ ಸ್ಮೃತಿರತ್ನೇ ಪ್ರತಿಪಾದಿತಮ್ || (ಸ್ಮೃತಿಮುಕ್ತಾವಲೀಕಾರರ ವಚನ)

"ತಂದೆ ತಾಯಿ ಸಹೋದರರು ಮಾವ ಗುರು ಮುಂತಾದವರಲ್ಲಿ ಯಾರನ್ನು ಉದ್ದೇಶಿಸಿ ಸ್ನಾನ ಮಾಡುತ್ತೇವೆಯೋ ಅವರು ನಾವು ಮಾಡುವ ಸ್ನಾನದಿಂದ ಬರುವ ಪುಣ್ಯದಲ್ಲಿ ಎಂಟರಲ್ಲಿ ಒಂದು ಭಾಗವನ್ನು ಪಡೆಯುವರು." ಇದು ವೃದ್ಧಮನುವಚನ" ಈ ವಚನದಲ್ಲಿ ಹೇಳಿರುವ ಬಂಧುಗಳನ್ನು ಉದ್ದೇಶಿಸಿ ಮಾಡುವ ಸ್ನಾನವು ಅವರು ಬದುಕಿರುವಾಗಲೇ ಮಾಡತಕ್ಕದ್ದೆಂದೂ ಅವರು ಸತ್ತ ಮೇಲೆ ಮಾಡತಕ್ಕದ್ದಲ್ಲವೆಂದೂ ಸ್ಮೃತಿರತ್ನ ಎಂಬ ಗ್ರಂಥದಲ್ಲಿ ಹೇಳಿರುವುದಾಗಿ ಸ್ಮೃತಿಮುಕ್ತಾವಲೀಕಾರರು ನಿರ್ಣಯವನ್ನು ಬರೆದಿರುತ್ತಾರೆ.

### ಇತರರನ್ನು ಉದ್ದೇಶಿಸಿ ಮಾಡುವ ಸ್ನಾನದ ಕ್ರಮ

ತೀರ್ಥೋದಕೇ ಪ್ರತಿಕೃತಿಂ ಕೃತ್ವಾ ಕುಶಮಯೀಂ ನರಃ |
ಮಜ್ಜಯೇತ್ತು ಸಮುದ್ದಿಶ್ಯ ಹ್ಯಷ್ಟಭಾಗಂ ಲಭೇತ ಸಃ || (ಪೈಠೀನಸಿವಚನ)

"ಯಾರನ್ನು ಉದ್ದೇಶಿಸಿ ಸ್ನಾನ ಮಾಡುತ್ತೇವೆಯೋ, ದರ್ಭೆಯಿಂದ ಅವರ ಹೆಸರಿನ ಕೂರ್ಚವನ್ನು ತಯಾರಿಸಬೇಕು. ಆ ಕೂರ್ಚವನ್ನು ಕೈಯಲ್ಲಿಟ್ಟುಕೊಂಡು ಸ್ನಾನವನ್ನು ಮಾಡಬೇಕು. ಹಾಗೆ ಮಾಡಿದರೆ ಆ ಮನುಷ್ಯರು ಸ್ನಾನದಿಂದ ಬರುವ ಪುಣ್ಯದಲ್ಲಿ ಎಂಟರಲ್ಲಿ ಒಂದು ಭಾಗವನ್ನು ಪಡೆಯುವರು."

### ಇತರರನ್ನು ಉದ್ದೇಶಿಸಿ ಮಾಡುವ ಸ್ನಾನದಲ್ಲಿ ಸ್ನಾನಕ್ರಮ

ಕುಶೋಽಸಿ ತ್ವಂ ಪವಿತ್ರೋಽಸಿ ಬ್ರಹ್ಮಣಾ ನಿರ್ಮಿತಃ ಪುರಾ |
ತ್ವಯಿ ಸ್ನಾತೇ ಸ ಚ ಸ್ನಾತೋ ಯಸ್ಯೈವ ಗ್ರಂಥಿಸಂಯುತಃ || (ಪೈಠೀನಸಿ ವಚನ)

"ಎಲೈ ಕೂರ್ಚವೇ, ನೀನು ದರ್ಭೆಯಿಂದ ನಿರ್ಮಿಸಲ್ಪಟ್ಟಿರುವಿ. ಬ್ರಹ್ಮದೇವನಿಂದ ಹಿಂದೆ ನಿರ್ಮಿಸಲ್ಪಟ್ಟಿರುವಿ. ಆದ್ದರಿಂದ ತುಂಬಾ ಪರಿಶುದ್ಧನಾಗಿರುವಿ. ನೀನು ಯಾರ ಹೆಸರಿನ ಪವಿತ್ರ ಗಂಟಿನಿಂದ ಯುಕ್ತನಾಗಿರುವಿಯೋ ಅವರು ನೀನು ಸ್ನಾನ ಮಾಡಿದ್ದರಿಂದ ಸ್ನಾನವನ್ನು ಮಾಡಿದ ಫಲವನ್ನು ಪಡೆಯುವರು."

### ಮಲಾಪಕರ್ಷಣಸ್ನಾನ

ಇಂದೋರ್ಬುಧಸ್ಯ ಸೌರೇಶ್ಚ ವಾರೇಽಭ್ಯಂಗಂ ಪ್ರಶಸ್ಯತೇ |
ಕಾಂತಿಂ ಮಮಾಪಿಲಾಂ ದದ್ಯುರ್ಭೋಗಾನ್ ವಾರಾಧಿಪಾಃ ಕ್ರಮಾತ್ ||
ದ್ವಿತೀಯಾದ್ಯಾಶ್ಚತಸ್ರಶ್ಚ ಪ್ರಶಸ್ತಾಃ ಸಪ್ತಮೀ ತಥಾ |
ದಶಮೀ ದ್ವಾದಶೀ ಚೈವ ತ್ರಯೋದಶ್ಯಪಿ ಚ ಸ್ಮೃತಾ ||
ಭಾನುಭೌಮಾಮರಾಚಾರ್ಯಶುಕ್ರವಾರೇಷು ಸಂಕ್ರಮೇ |
ವ್ಯತೀಪಾತೇ ಚ ಜನ್ಮರ್ಕ್ಷೇ ನಾಭ್ಯಂಗಸ್ನಾನಮಾಚರೇತ್ ||
ಏಕಾದಶ್ಯಾಂ ಚತುರ್ದಶ್ಯಾಮಷ್ಟಮ್ಯಾಂ ಪ್ರತಿಪದ್ಯಪಿ |
ಷಷ್ಠ್ಯಾಂ ಪರ್ವಣಿ ಚಾಭ್ಯಂಗಸ್ನಾನಂ ನೈವ ಸಮಾಚರೇತ್ ||
ಉತ್ತರಾಫಲ್ಗುನೀ ಜ್ಯೇಷ್ಠಾ ಶ್ರವಣಾರ್ದ್ರಾಸು ರಾತ್ರಿಷು |
ಅಭ್ಯಂಗಸ್ನಪನಂ ಧೀಮಾನ್ ಸುಖಾರ್ಥೀ ವರ್ಜಯೇತ್ಸದಾ || (ಭರದ್ವಾಜ ವಚನ)

"ದೇಹದಲ್ಲಿರುವ ಕೊಳೆ ಮುಂತಾದ ದೋಷಗಳನ್ನು ಪರಿಹರಿಸುವ ಸ್ನಾನವು ಮಲಾಪಕರ್ಷಣಸ್ನಾನವೆನಿಸುತ್ತದೆ. ಅಭ್ಯಂಗಸ್ನಾನ ಮುಂತಾದ ಸ್ನಾನಗಳು ಈ ಮಲಾಪಕರ್ಷಣಸ್ನಾನದಲ್ಲಿ ಸೇರಿಯುತ್ತವೆ. ಅಭ್ಯಂಗಸ್ನಾನಕ್ಕೆ ವಿಹಿತವಾದ ದಿನಗಳನ್ನೂ ನಿಷಿದ್ಧವಾದ ದಿನಗಳನ್ನೂ ಈಗ ಹೇಳುತ್ತೇನೆ. (1) ಸೋಮವಾರ. (2) ಬುಧವಾರ. (3) ಶನಿವಾರ. ಈ ಮೂರು ವಾರಗಳೂ (1) ಪಾಡ್ಯ. (2) ಬಿದಿಗೆ. (3) ತದಿಗೆ. (3) ಚೌತಿ. (4) ಪಂಚಮೀ. (5) ಸಪ್ತಮೀ. (6) ತ್ರಯೋದಶೀ. ಈ ಆರು ತಿಥಿಗಳೂ ಅಭ್ಯಂಗಕ್ಕೆ ಪ್ರಶಸ್ತವಾಗಿವೆ. (1) ದಶಮೀ. (2) ದ್ವಾದಶೀ. ಈ ಎರಡು ತಿಥಿಗಳು ಚಿಕ್ಕಮಕ್ಕಳ ಅಭ್ಯಂಜನಕ್ಕೆ ಪ್ರಶಸ್ತವಾಗಿವೆ. ಈ ದಿನಗಳಲ್ಲಿ ಅಭ್ಯಂಗವನ್ನು ಮಾಡಿದರೆ ದೇಹದಲ್ಲಿ ಎಲ್ಲಾ ವಿಧವಾದ ಕಾಂತಿಯೂ ಸುಖವೂ ಬರುತ್ತವೆ. (1) ರವಿವಾರ. (2) ಮಂಗಳವಾರ. (3) ಗುರುವಾರ. (4) ಶುಕ್ರವಾರ ಈ ನಾಲ್ಕು ವಾರಗಳಲ್ಲಿಯೂ (1) ಸಂಕ್ರಾಂತಿದಿನ. (2) ವ್ಯತೀಪಾತಯೋಗ. (3) ಜನ್ಮನಕ್ಷತ್ರ. (4) ಏಕಾದಶೀತಿಥಿ. (5) ಚತುರ್ದಶೀ. (6) ಅಷ್ಟಮೀ. (7) ಪಾಡ್ಯ. (8) ಷಷ್ಠೀ. (9) ಪರ್ವದಿನಗಳು. (10) ಉತ್ತರಾನಕ್ಷತ್ರ. (11) ಜ್ಯೇಷ್ಠಾನಕ್ಷತ್ರ. (12) ಶ್ರವಣನಕ್ಷತ್ರ. (13) ಆರ್ದ್ರಾನಕ್ಷತ್ರ. (14) ರಾತ್ರಿಕಾಲ ಇವುಗಳಲ್ಲಿಯೂ ಯಾವ ಕಾರಣಗಳಿಂದಲೂ ಅಭ್ಯಂಗವನ್ನು ಮಾಡಬಾರದು." (ಇದು ಭರದ್ವಾಜರ ವಚನ)

### ನಿಷಿದ್ಧದಿನಗಳಲ್ಲಿಯೂ ಅಭ್ಯಂಗವನ್ನು ಮಾಡಿದರೆ ದೋಷವಿಲ್ಲ

ಶಿಶುರೋಗಾರ್ತವೃದ್ಧಾನಾಂ ಯಥಾಕಾಲಂ ಶರೀರಿಣಾಮ್ |
ಅಭ್ಯಂಗೋಷ್ಣೋದಕಸ್ನಾನಂ ನೈವ ದೋಷಾವಹಂ ಸ್ಮೃತಮ್ ||

"ಚಿಕ್ಕಮಕ್ಕಳು ರೋಗಿಗಳು ಮುದುಕರು ಇವರುಗಳು ನಿಷಿದ್ಧವಾದ ದಿನಗಳಲ್ಲಿಯೂ ಅಭ್ಯಂಗವನ್ನು ಮಾಡಬಹುದು. ಬಿಸಿನೀರಿನಲ್ಲಿ ಸ್ನಾನವನ್ನೂ ಮಾಡಬಹುದು. ಇದರಿಂದ ದೋಷವಿಲ್ಲ."

### ಎಣ್ಣೆಯ ಶುದ್ಧಿ

ಅದ್ಭಿರ್ವಾಽಜ್ಯೇನ ವಾ ಯುಕ್ತಂ ನ ತೈಲಂ ದೋಷಕೃದ್ಭವೇತ್ |
ತಿಥಿನಕ್ಷತ್ರವಾರೇಷು ನಿಷಿದ್ಧೇಷ್ವಪಿ ರಾತ್ರಿಷು ||
ತೈಲಮಾಜ್ಯೇನ ಸಂಸ್ಪೃಷ್ಟಮದ್ಭಿರ್ವಾ ಶುದ್ಧಿಮಾಪ್ನುಯಾತ್ || (ಪರಾಶರರ ವಚನ)

"ನಿಷಿದ್ಧ ದಿನಗಳಲ್ಲಿ ಅಭ್ಯಂಗವನ್ನು ಮಾಡಲೇ ಬೇಕಾದ ನಿರ್ಬಂಧವು ಏರ್ಪಟ್ಟರೆ ನೀರು ಅಥವಾ ತುಪ್ಪವನ್ನು ಎಣ್ಣೆಯಲ್ಲಿ ಸೇರಿಸಿ ಅಭ್ಯಂಗವನ್ನು ಮಾಡಬೇಕು. ಇದರಿಂದ ಎಣ್ಣೆ ಶುದ್ಧವಾಗುತ್ತದೆ. ದೋಷವಿಲ್ಲ."

ರವೌ ಪುಷ್ಪಂ ಗುರೌ ದೂರ್ವಾ ಶುಕ್ರೇ ಗೋಮಯಮೇವ ಚ |
ಭೌಮೇ ಭೂಮಿಂ ಚ ನಿಕ್ಷಿಪ್ಯ ತೈಲಾಭ್ಯಂಗಂ ಸಮಾಚರೇತ್ ||
ದ್ರವ್ಯಾಂತರಯುತಂ ತೈಲಂ ನ ದುಷ್ಯೇದ್ಗ್ರಹಣಂ ವಿನಾ |
ತುಲಸೀದಲಸಂಮಿಶ್ರಂ ಗ್ರಹಣೇಽಪಿ ನ ದುಷ್ಯತಿ || (ಸ್ಮೃತ್ಯಂತರ ವಚನ)

"ರವಿವಾರದಲ್ಲಿ ಪುಷ್ಪವನ್ನೂ, ಗುರುವಾರದಲ್ಲಿ ಗರಿಕೆಹುಲ್ಲನ್ನೂ, ಶುಕ್ರವಾರದಲ್ಲಿ ಗೋಮಯವನ್ನೂ, ಮಂಗಳವಾರದಲ್ಲಿ ಮಣ್ಣನ್ನೂ, ಎಣ್ಣೆಯಲ್ಲಿ ಹಾಕಿ ಅಭ್ಯಂಗವನ್ನು ಮಾಡಬೇಕು. ಗ್ರಹಣಕಾಲವನ್ನು ಬಿಟ್ಟು ಉಳಿದ ಕಾಲದಲ್ಲಿ ಯಾವುದಾದರೊಂದು ಬೇರೆ ವಸ್ತುವನ್ನು ಎಣ್ಣೆಯೊಡನೆ ಸೇರಿಸಿ ಸ್ನಾನ ಮಾಡಿದರೆ ದೋಷವಿಲ್ಲ. ಗ್ರಹಣದಿನದಲ್ಲಿಯೂ ತುಳಸಿಯನ್ನು ಎಣ್ಣೆಯೊಡನೆ ಸೇರಿಸಿ ಸ್ನಾನ ಮಾಡಿದರೆ ದೋಷವಿಲ್ಲ." (ಇದು ಸ್ಮೃತ್ಯಂತರ ವಚನ)

ಶಿರೋಽಭ್ಯಕ್ತೇನ ತೈಲೇನ ನಾಂಗಂ ಕಿಂಚಿದುಪಸ್ಪೃಶೇತ್ |
ತಿಲಪಿಷ್ಟಂ ಚ ನಾಶ್ನೀಯಾತ್ ತಸ್ಯ ಚಾಯುರ್ನ ರಿಷ್ಯತಿ || (ಉಮಾಮಹೇಶ್ವರ ಸಂವಾದ)

"ತಲೆಗೆ ಹಚ್ಚಿದ ಎಣ್ಣೆಯನ್ನು ತಲೆಯಿಂದ ತೆಗೆದು ಉಳಿದ ಅವಯವಗಳಲ್ಲಿ ಯಾವುದರಲ್ಲಿಯೂ ಹಚ್ಚಬಾರದು. ಎಳ್ಳಿನ ಹಿಟ್ಟನ್ನೂ ಹಚ್ಚಬಾರದು. ಹೀಗಿರುವವನಿಗೆ ಆಯುಸ್ಸು ಕಡಿಮೆಯಾಗುವುದಿಲ್ಲ." (ಇದು ಉಮಾಮಹೇಶ್ವರ ಸಂವಾದ ವಚನ)

### ಬ್ರಾಹ್ಮಣ ಮುಂತಾದವರಿಗೆ ಅಭ್ಯಂಗಕ್ಕೆ ನಿಷಿದ್ಧವಾದ ದಿನ

ತ್ರಯೋದಶ್ಯಾಂ ತೃತೀಯಾಯಾಂ ದಶಮ್ಯಾಂ ಚೈವ ಸರ್ವದಾ |
ಶೂದ್ರವಿಟ್ ಕ್ಷತ್ರಿಯಾಃ ಸ್ನಾನಂ ನ ಕುರ್ಯುಸ್ತೈಲಸಂಸ್ಪೃತಮ್ || (ಕಪಿಲ ವಚನ)
ದಶಮೀ ಪುತ್ರನಾಶಾಯ ಸ್ವನಾಶಾಯ ತ್ರಯೋದಶೀ |
ತೃತೀಯೋಭಯನಾಶಾಯ ತೈಲಾಭ್ಯಂಗೇ ವಿವರ್ಜಯೇತ್ ||

"ತ್ರಯೋದಶೀದಿನದಲ್ಲಿ ಶೂದ್ರನು, ತದಿಗೆ ದಿನದಲ್ಲಿ ವೈಶ್ಯನೂ, ದಶಮೀ ದಿನದಲ್ಲಿ ಕ್ಷತ್ರಿಯನೂ, ಯಾವಾಗಲೂ ಅಭ್ಯಂಗ ಮಾಡಕೂಡದು. ಹಾಗೆ ಮಾಡಿದರೆ ಅತಿಪ್ರಬಲವಾದ ದೋಷವುಂಟು. ದಶಮೀದಿನದಲ್ಲಿ ಅಭ್ಯಂಗ ಮಾಡಿದ ಕ್ಷತ್ರಿಯನಿಗೆ ಪುತ್ರನೂ, ತ್ರಯೋದಶೀ ದಿನದಲ್ಲಿ ಶೂದ್ರನು ಅಭ್ಯಂಗ ಮಾಡಿದರೆ ಅವನೂ, ತದಿಗೆ ದಿನದಲ್ಲಿ ವೈಶ್ಯನು ಅಭ್ಯಂಗ ಮಾಡಿದರೆ ಇಬ್ಬರೂ ಮರಣವನ್ನು ಪಡೆಯುವರು. ಆದ್ದರಿಂದ ಈ ದಿನಗಳಲ್ಲಿ ತೈಲಾಭ್ಯಂಗವನ್ನು ಮಾಡಬಾರದು." (ಇದು ಕಪಿಲರ ವಚನ)

### ಅಭ್ಯಂಗಕ್ಕೆ ನಿಷಿದ್ಧವಾದ ಇತರ ದಿನಗಳು

ಶ್ರಾದ್ಧಾಹೇ ಜನ್ಮದಿವಸೇ ವಿವಾಹೇ ಸುಖದುಃಖಯೋಃ |
ವ್ರತೇ ಚೈವೋಪವಾಸೇ ಚ ತೈಲಾಭ್ಯಂಗಂ ವಿವರ್ಜಯೇತ್ || (ಸಂಗ್ರಹವಚನ)

"ಶ್ರಾದ್ಧದಿನ, ಹುಟ್ಟಿದ ದಿನ, ಮದುವೆಯ ದಿನ, ಸುಖ ಮತ್ತು ದುಃಖವು ಅಧಿಕವಾಗಿ ಬಂದ ದಿನ, ವ್ರತಗಳನ್ನು ಅನುಷ್ಠಿಸುತ್ತಿರುವ ದಿನ, ಉಪವಾಸದಿನ ಇವುಗಳಲ್ಲಿ ತೈಲಾಭ್ಯಂಗವನ್ನು ಮಾಡಬಾರದು." (ಇದು ಸಂಗ್ರಹ ವಚನ)

ಸುರಯಾ ಲಿಪ್ತದೇಹೋಽಪಿ ಪ್ರಾಯಶ್ಚಿತ್ತೀಯತೇ ದ್ವಿಜಃ |
ಪ್ರಾತರಭ್ಯಕ್ತದೇಹಸ್ಯ ನಿಷ್ಕೃತಿರ್ನೈವ ವಿದ್ಯತೇ || (ಶೌನಕರ ವಚನ)

"ಹೆಂಡದಿಂದ ಇಡೀ ದೇಹಕ್ಕೆ ಲೇಪನ ಮಾಡಿದವನಿಗೂ ಪ್ರಾಯಶ್ಚಿತ್ತವಿದೆ. ಆದರೆ ಸೂರ್ಯೋದಯದಿಂದ ಆರಂಭಿಸಿ ಆರು ಗಳಿಗೆವರೆಗೂ ಅದಕ್ಕಿಂತ ಪೂರ್ವದಲ್ಲಿಯೂ ಅಭ್ಯಂಗ ಮಾಡಿದವನಿಗೆ ಪ್ರಾಯಶ್ಚಿತ್ತವೇ ಇಲ್ಲ." (ಇದು ಶೌನಕರ ವಚನ)

### ಪಾಪಹರವಾದ ಅಭ್ಯಂಗ

ಅಯಂ ನಿಷೇಧಃ ನರಕಚತುರ್ದಶೀವ್ಯತಿರಿಕ್ತವಿಷಯಃ | (ಸ್ಮೃತಿಮುಕ್ತಾವಲೀಕಾರರ ವಚನ)
ಆಶ್ವಯುಜ್ ಕೃಷ್ಣಪಕ್ಷಸ್ಯ ಚತುರ್ದಶ್ಯಾಂ ವಿಧೂದಯೇ |
ಸ್ನಾನಮಭ್ಯಜ್ಯ ಕರ್ತವ್ಯಂ ನರೈರ್ನರಕಭೀರುಭಿಃ || (ಇತಿ ಸ್ಮರಣಾತ್)

"ಆಶ್ವೀಜ ಬಹುಳ ಚತುರ್ದಶೀ ದಿನದಲ್ಲಿ ಚಂದ್ರೋದಯಕಾಲದಲ್ಲಿ ಎಲ್ಲಾ ಜನರೂ ಅಭ್ಯಂಗವನ್ನು ಮಾಡಬೇಕು. ಮಾಡದಿರುವವನಿಗೆ ನರಕಭಯವಿದೆ" ಎಂದು ಸ್ಮೃತಿಯಲ್ಲಿ ಹೇಳಿರುವುದರಿಂದ ನರಕಚತುರ್ದಶೀದಿನದಲ್ಲಿ ಚಂದ್ರೋದಯಕಾಲವು ಅಭ್ಯಂಗಕ್ಕೆ ವಿಹಿತವಾಗಿದೆ. ಆದ್ದರಿಂದ ಮೇಲ್ಕಂಡ ಶೌನಕರ ವಚನವು ನರಕಚತುರ್ದಶಿಯನ್ನು ಬಿಟ್ಟು ಉಳಿದ ದಿನಗಳಲ್ಲಿ ಬೆಳಗ್ಗೆ ಅಭ್ಯಂಗವನ್ನು ಮಾಡುವವನಿಗೆ ದೋಷವನ್ನು ತಿಳಿಸುತ್ತದೆ. (ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.)

### ಪಾದಾಭ್ಯಂಗ ಮುಂತಾದವುಗಳ ಫಲ

ಪಾದಾಭ್ಯಂಗಂ ಶಿರೋಭ್ಯಂಗಂ ದ್ವಿಜಸ್ಯೋಚ್ಛಿಷ್ಟಮಾರ್ಜನಮ್ |
ಏಕೈಕಂ ಪಾಂಡವಶ್ರೇಷ್ಠ ರಾಜಸೂಯಾದ್ವಿಶಿಷ್ಯತೇ || (ಮಹಾಭಾರತ ವಚನ)

"(1) ಕಾಲಿಗೆ ಎಣ್ಣೆಯನ್ನು ಹಾಕಿ ಉಜ್ಜುವುದು. (2) ತಲೆಗೆ ಎಣ್ಣೆಯನ್ನು ಹಾಕಿ ತಿಕ್ಕುವುದು. (3) ಬ್ರಾಹ್ಮಣರ ಎಂಜಲನ್ನು ಸಾರಿಸುವುದು ಈ ಮೂರರಲ್ಲಿ ಒಂದೊಂದೂ ರಾಜಸೂಯಯಾಗಕ್ಕಿಂತಲೂ ಶ್ರೇಷ್ಠವೆನಿಸುತ್ತದೆ."

### ಪ್ರಾತಃಸ್ನಾನ ಪ್ರಕಾರ

"(1) ಅಥ ನಿತ್ಯಸ್ನಾನೇ ಪ್ರಥಮಂ ಮಲಾಪಕರ್ಷಣಾರ್ಥಂ ತ್ರಿರ್ನಿಮಜ್ಜ್ಯ. (2) ತೀರಂ ಗತ್ವಾ. (3) ತತ್ಪ್ರಕ್ಷಾಲ್ಯ. (4) ಉಪವಿಶ್ಯ. (5) ದೇವಸ್ಯ ಸಂಪುಟೋದ್ಘಾಟನಂ ಕೃತ್ವಾ. (6) ನಿರ್ಮಾಲ್ಯಂ ವಿಸೃಜ್ಯ. (7) ಸ್ನಾನಪಾತ್ರೇ ಶಾಲಗ್ರಾಮಾದೀನ್ನಿಧಾಯ. (8) ಪೂರ್ವಮಾನೀತಮೃತ್ತಿಕಾಂ ವ್ಯಾಸಪತ್ರಮೂಲಮೃತ್ತಿಕಾಂ ವಾ ಭೂಮೌ ನಿಧಾಯ. (9) ತಿಥಿವಾರಾನುಕ್ತ್ವಾ ಶ್ರೀವಿಷ್ಣುಪ್ರೇರಣಯೇತ್ಯಾದಿನಾ ಸಂಕಲ್ಪ್ಯ. (10) ತಾಂ ಪ್ರಣವೇನ ಪ್ರೋಕ್ಷ್ಯ. (11) ಗಾಯತ್ರ್ಯಾಭಿಮಂತ್ರ್ಯ. (12) ಪೂರ್ವೋಕ್ತಾಂ ಮೃದಂ ತ್ರೇಧಾ ವಿಧಾಯ. (13) ಪ್ರಥಮ ಭಾಗಂ ಗೃಹೀತ್ವಾ. (14) ಹಸ್ತಾಭ್ಯಾಂ ರವೇರ್ದರ್ಶಯಿತ್ವಾ. (15) 'ಸ್ಯೋನಾ ಪೃಥಿವೀ' ಇತಿ ಪದದ್ವಯಮಧೋಮುಖೇ ನಿಮೃಜ್ಯ. (16) ಹಸ್ತೌ ಪ್ರಕ್ಷಾಳ್ಯ. (17) ಏವಂ ಪುನರ್ದ್ವಿವಾರಂ. (18) ತತೋ ದ್ವಿತೀಯಭಾಗಂ ಗೃಹೀತ್ವಾ. (19) ಪೂರ್ವವದ್ರವೇಃ ಸಂದರ್ಶ್ಯ. (20) 'ಗಂಧದ್ವಾರಾಂ' ಇತಿ 'ಉದ್ಧೃತಾ' ಇತಿ ತ್ರ್ಯೃಚೇನ ಫಾಲೇ ಬಾಹ್ವೋಃ ಪಾರ್ಶ್ವಯೋಃ ಪಾದಾಂತಂ ನಿಮೃಜ್ಯ. (21) ಕರೌ ಪ್ರಕ್ಷಾಲ್ಯ. (22) ಏವಂ ಪುನರ್ದ್ವಿವಾರಂ ದ್ವಿತೀಯಭಾಗಂ ಕೃತ್ವಾ. (23) "ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ | ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ" ಇತಿ ಅರ್ಘ್ಯತ್ರಯಂ ದತ್ವಾ. (24) "ಅತಿತೀಕ್ಷ್ಣ ಮಹಾಕಾಯ ಕಲ್ಪಾಂತದಹನೋಪಮ | ಭೈರವಾಯ ನಮಸ್ತುಭ್ಯಮನುಜ್ಞಾಂ ದಾತುಮರ್ಹಸಿ" ಇತಿ ತೀರ್ಥರಕ್ಷಕಂ ಕ್ಷೇತ್ರಪಾಲಮನುಜ್ಞಾಪ್ಯ. (25) "ಸಮಸ್ತಜಗದಾಧಾರ ಶಂಖಚಕ್ರಗದಾಧರ | ದೇವ ದೇಹಿ ಮಮಾನುಜ್ಞಾಂ ಯುಷ್ಮತ್ತೀರ್ಥನಿಷೇವಣೇ" ಇತಿ ತೀರ್ಥಾಂತಃ ಸ್ಥಿತದೇವಮನುಜ್ಞಾಪ್ಯ. (26) ತೃತೀಯಮೃದಂ ದಕ್ಷಿಣಹಸ್ತೇ ದೃಢಂ ಗೃಹಿತ್ವಾ. (27) ಇತರಹಸ್ತೇನ ತತ್ಸ್ಥಲಂ ಪ್ರಕ್ಷಾಲ್ಯ. (28) ದೇವಾ ಗುರ್ವಾದೀಂಶ್ಚ ನಮಸ್ಕೃತ್ಯ. (29) ಜಲಂ ಪ್ರವಿಶ್ಯ. (30) ನಾಭಿಮಾತ್ರೋದಕೇ ವಾ ಜಾನುಮಾತ್ರೇ ವಾ ನದ್ಯಾಂ ನದ್ಯಭಿಮುಖೇ ಅನ್ಯತ್ರ ರವ್ಯಭಿಮುಖಂ ತ್ರಿರ್ನಿಮಜ್ಜ್ಯ. (31) ಮೃತ್ತಿಕಾಂ ಕಕುದಿ ನಿಧಾಯ. (32) ತ್ರಿರಾಚಮ್ಯ. (33) ತ್ರೀನ್ ಪ್ರಾಣಾಯಾಮ್ಯ. (34) ಕಿಂಚಿನ್ಮೃದಂ ವಿಲೋಡ್ಯ. (35) ಶೇಷಂ ಗೃಹೀತ್ವಾ. (36) ಶಿರ ಆದಿಸರ್ವಾಂಗೇಷು ತಾರೇಣ ನಿಮೃಜ್ಯ. (37) ದ್ವಿಷಡಷ್ಟ-ಷಡಕ್ಷರೈಃ ಪ್ರತ್ಯೇಕಂ ತ್ರಿರ್ನಿಮಜ್ಜ್ಯ. (38) ತತ್ಕಾಲೇ ಜಲಶಾಯಿನಂ ನಾರಾಯಣಂ ಧ್ಯಾತ್ವಾ. (39) ತ್ರೈರ್ಮಂತ್ರೈರ್ಯಾವಚ್ಛಕ್ಯಂ ಜಪ್ತ್ವಾ. (40) ಪ್ರಣವೇನೋತ್ಥಾಯ. (41) ಅಬ್ಲಿಂಗೈರ್ಮಂತ್ರೈಃ ಶಿರೋ ಹೃದ್ಯಂಸಯೋಃ ಸರ್ವಾಂಗಂ ಶಂಖಮುದ್ರಯಾ ಸಂಪ್ರೋಕ್ಷ್ಯ. (42) "ಋತಂ ಚ ಸತ್ಯಂ ಚ" ಇತ್ಯೃಚಂ ತ್ರಿಃ ಪಠಿತ್ವಾ, ಯಾವಚ್ಛ್ವಾಸನಿರೋಧಂ ವಾಽಘಮರ್ಷಣಂ ಕೃತ್ವಾ. (43) ಪೂರ್ವವದ್ಧ್ಯಾತ್ವಾ. (44) ಉತ್ಥಾಯ. (45) ಪ್ರಾಗುಕ್ತಮುದ್ರಯಾ ಪುಂಸೂಕ್ತೇನ ಪ್ರತಿಪಾದೇನ ಸ್ವದೇಹಸ್ಥಂ ಹರಿಂ ಸ್ಮರನ್ ಸ್ವಶಿರಸಿ ಅಭಿಷಿಚ್ಯ. (46) ಆಚಮ್ಯ. (47) ಉದಕೇನೋರ್ಧ್ವಪುಂಡ್ರಂ ಕೃತ್ವಾ. (48) ತೀರಂ ಗತ್ವಾ. (49) ತತ್ಸ್ಥಲಂ ತ್ರಿಃ ಪ್ರಕ್ಷಾಲ್ಯ. (50) "ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ | ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಮ್" ಇತಿ ಪರಿಧಾನವಸ್ತ್ರಂ ಪಿತೃತೀರ್ಥೇನ ನಿಪೀಡ್ಯ. (51) ದ್ವಿರಾಚಮ್ಯ. (52) ತತೋ ದೇವಂ ವಿಧಿವದಭಿಷಿಚ್ಯ. (53) ತತ್ತೀರ್ಥಂ ಸನಕಾದಿಭ್ಯೋ ದತ್ವಾ. (54) ಸ್ವಯಂ ಚ ಸ್ನಾತ್ವಾ ಪೀತ್ವಾ. (55) ದೇವರ್ಷಿಪಿತೄನ್ ತರ್ಪಯಿತ್ವಾ. (56) ಆಚಮ್ಯ. (57) ಯಾವಚ್ಛಿರಸ್ಥೋದಕಸ್ರಾವಂ ಲಂಬಿತಕರೋ ಭೂತ್ವಾ, ಹರಿಸ್ಮರಣೇನ ಸ್ಥಿತ್ವಾ.

(58) ಶುದ್ಧವಸ್ತ್ರಂ "ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ | ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ" ಇತಿ ಸಂಪ್ರೋಕ್ಷ್ಯ. (59) ಪೂರ್ವಮುತ್ತರೀಯಮಿತರಚ್ಚೋರ್ಧ್ವಕಚ್ಛಪೂರ್ವಕಂ ಧೃತ್ವಾ. (60) ಉಪವಿಶ್ಯ. (61) ಪಾದೌ ಪ್ರಕ್ಷಾಲ್ಯ. (62) ಗಂಡೂಷಂ ಕೃತ್ವಾ (63) ದ್ವಿರಾಚಮ್ಯ. (64) ಪ್ರಾಗುಕ್ತಕ್ರಮೇಣ ಊರ್ಧ್ವಪುಂಡ್ರಾನ್ ಧೃತ್ವಾ. (65) ಆಚಮ್ಯ. (66) ಸ್ವಸೂತ್ರೋಕ್ತಪ್ರಕಾರೇಣ ಸಂಧ್ಯಾವಂದನಂ ಕೃತ್ವಾ. (67) ವಸ್ತ್ರಂ ಚತುರ್ಗುಣೀಕೃತ್ಯ ಪೀಡಯೇತ್ತು ಜಲಾದ್ಬಹಿಃ | ವಾಮಪ್ರಕೋಷ್ಠೇ ನಿಕ್ಷಿಪ್ಯ ದ್ವಿರಾಚಮ್ಯ ಶುಚಿರ್ಭವೇತ್ || ನಿಷ್ಪೀಡಿತಂ ಧೌತವಸ್ತ್ರಂ ಯದಾ ಸ್ಕಂಧೇನ ನಿಕ್ಷಿಪೇತ್| ತದಾಸುರಂ ಭವೇತ್ಕರ್ಮ ಪುನಃ ಸ್ನಾನೇನ ಶುದ್ಧ್ಯತಿ ||" (ಪಂಚಸಂಸ್ಕಾರ ಸಂಗ್ರಹ ವಚನ)

ಈಗ ನಿತ್ಯಸ್ನಾನದ ವಿಧಿಯನ್ನು ತಿಳಿಸುತ್ತೇವೆ. ನಿತ್ಯಸ್ನಾನಗಳಲ್ಲಿ ಪ್ರಾತಃಸ್ನಾನವು ಅತಿಮುಖ್ಯವಾಗಿದೆ. ಅದರ ವಿಧಿಯನ್ನು ಮೊದಲು ತಿಳಿಸುತ್ತೇವೆ. ಪಂಚಸಂಸ್ಕಾರ ಸಂಗ್ರಹಗ್ರಂಥದಲ್ಲಿ ವಾಕ್ಯರೂಪದಿಂದ ಹೇಳಲ್ಪಟ್ಟ ವಿಷಯಗಳ ಹಿಂದೆ ಅಂಕೆಗಳನ್ನು ಕೊಟ್ಟಿರುತ್ತೇವೆ. ಆ ಅಂಕೆಗೆ ಸಂಬಂಧಿಸಿದ ವಾಕ್ಯಗಳ ವ್ಯಾಖ್ಯಾನವನ್ನು ಕ್ರಮವಾಗಿ ಅದೇ ಅಂಕೆಗಳ ಮುಂದಿರುವ ವಾಕ್ಯಗಳಿಂದ ಮಾಡಿರುತ್ತೇನೆ.

(1) ನಿತ್ಯಸ್ನಾನವನ್ನು ಮಾಡುವವರು ಮೊದಲು ನದೀತೀರ ಮುಂತಾದ ಸ್ನಾನಸ್ಥಳಗಳಿಗೆ ಹೋಗಬೇಕು. ಹೋಗುವಾಗ ಶಾಲಿಗ್ರಾಮ ಅಥವಾ ಸುದರ್ಶನವನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಕೊಂಡು ಹೋಗಬೇಕು. ಅಭಿಷೇಕವನ್ನು ಮಾಡುವುದಕ್ಕಾಗಿ ಚಿಕ್ಕ ಹರಿವಾಣ ಮುಂತಾದವುಗಳನ್ನು ತೆಗೆದುಕೊಂಡು ಹೋಗಬೇಕು. ಮೃತ್ತಿಕಾಸ್ನಾನಕ್ಕಾಗಿ ಶುದ್ಧ ಪ್ರದೇಶದಲ್ಲಿರುವ ಮಣ್ಣನ್ನಾಗಲೀ ತುಳಸೀದಳ ಸಹಿತವಾದ ತುಳಸೀಮೃತ್ತಿಕೆಯನ್ನಾಗಲೀ ತೆಗೆದುಕೊಂಡು ಹೋಗಬೇಕು. ಆರಂಭದಲ್ಲಿ ಮಲಾಪಕರ್ಷಣ ಅಂದರೆ ದೇಹದಲ್ಲಿರುವ ಕೊಳೆಯನ್ನು ತೊಳೆಯುವುದಕ್ಕಾಗಿ ಮೂರು ಸಲ ನೀರಿನಲ್ಲಿ ಮುಳುಗಬೇಕು. (2) ತೀರಕ್ಕೆ ಬರಬೇಕು. (3) ದೇಹವನ್ನು ಚೆನ್ನಾಗಿ ಉಜ್ಜಿತೊಳೆದುಕೊಂಡು ಪುನಃ ನೀರಿನಲ್ಲಿ ಮುಳುಗಬೇಕು. (4)ತೀರಕ್ಕೆ ಬಂದು ಕುಳಿತುಕೊಳ್ಳಬೇಕು. (5) ದೇವರ ಸಂಪುಟವನ್ನು ತೆರೆಯಬೇಕು. (6) ದೇವರ ಮೇಲಿರುವ ನಿರ್ಮಾಲ್ಯ ತುಳಸೀ ಪುಷ್ಪ ಮುಂತಾದವುಗಳನ್ನು ವಿಸರ್ಜನೆ ಅಂದರೆ ತೆಗೆಯಬೇಕು. (7) ಅಭಿಷೇಕಕ್ಕಾಗಿ ತೆಗೆದುಕೊಂಡು ಹೋಗಿರುವ ಹರಿವಾಣ ಮುಂತಾದವುಗಳಲ್ಲಿ ಶಾಲಿಗ್ರಾಮ ಮುಂತಾದ ದೇವರ ಪ್ರತಿಮೆಗಳು ಅಥವಾ ಸುದರ್ಶನವನ್ನು ಇಡಬೇಕು. (8) ಹಿಂದೆ ತಂದಿರುವ ಶುದ್ಧ ಪ್ರದೇಶದಲ್ಲಿರುವ ಮಣ್ಣನ್ನಾಗಲೀ ತುಳಸೀದಳ ಯುಕ್ತವಾಗಿರುವ ತುಳಸೀ ಮೃತ್ತಿಕೆಯನ್ನಾಗಲೀ ದೇವರ ಮುಂದೆ ಭೂಮಿಯಲ್ಲಿಡಬೇಕು. (9) ತಿಥಿ ವಾರ ಮುಂತಾದವುಗಳನ್ನು ಹೇಳಿ 'ವಿಷ್ಣುಪ್ರೇರಣಯಾ ವಿಷ್ಣುಪ್ರೀತ್ಯರ್ಥಂ' ಮುಂತಾದವುಗಳನ್ನು ಹೇಳಿ ಸ್ನಾನ ಸಂಕಲ್ಪವನ್ನು ಮಾಡಬೇಕು. (10) ಮೃತ್ತಿಕೆಯನ್ನು "ಓಂ" ಎಂಬ ಪ್ರಣವ ಮಂತ್ರದಿಂದ ಪ್ರೋಕ್ಷಣೆ ಮಾಡಬೇಕು. (11) ಗಾಯತ್ರೀಮಂತ್ರದಿಂದ ಮೂರು ಸಲ ಜಪಿಸಬೇಕು. (12) ಆ ಮೃತ್ತಿಕೆಯನ್ನು ಮೂರು ವಿಭಾಗ ಮಾಡಬೇಕು. (13) ಅವುಗಳಲ್ಲಿ ಮೊದಲನೆಯ ಭಾಗವನ್ನು ತೆಗೆದುಕೊಳ್ಳಬೇಕು. (14) ಎರಡು ಕೈಗಳಿಂದ ಸೂರ್ಯನಿಗೆ ತೋರಿಸಬೇಕು. (ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಪ್ರಾತಃಸ್ನಾನವನ್ನು ಮಾಡುವುದಾದರೆ ಸೂರ್ಯದೇವನನ್ನು ಸ್ಮರಿಸಿ ಅವನಿಗೆ ಸಮರ್ಪಿಸಿದಂತೆ ಭಾವಿಸಬೇಕು.) (15) "ಸ್ಯೋನಾ ಪೃಥಿವೀ" ಎಂಬ ಮಂತ್ರದಿಂದ ಎರಡು ಕಾಲುಗಳನ್ನೂ ಮೇಲಿನಿಂದ ಕೆಳಗೆ ಉಜ್ಜಬೇಕು. (16) ಎರಡು ಕೈಗಳನ್ನು ತೊಳೆದು ಕೊಳ್ಳಬೇಕು. (17) ಇದೇ ರೀತಿಯಲ್ಲಿ ಪುನಃ ಎರಡಾವರ್ತಿ ಮಾಡಬೇಕು. (18) ಮೃತ್ತಿಕೆಯ ಎರಡನೆಯ ಭಾಗವನ್ನು ತೆಗೆದು ಕೊಳ್ಳಬೇಕು. (19) ಅದನ್ನು ಹಿಂದಿನಂತೆ ಸೂರ್ಯದೇವನಿಗೆ ತೋರಿಸಬೇಕು. (20) ಹಣೆಯಲ್ಲಿಯೂ ಎರಡು ಕೈಗಳಲ್ಲಿಯೂ ಅಲ್ಲಿಂದ ಆರಂಭಿಸಿ ಕಾಲಿನವರೆಗೂ "ಗಂಧದ್ವಾರಾಂ" ಎಂಬ ಮಂತ್ರದಿಂದ ಹಚ್ಚಬೇಕು. ದೇಹದ ಎರಡು ಪಕ್ಕಗಳಲ್ಲಿಯೂ ಅಲ್ಲಿಂದ ಆರಂಭಿಸಿ ಕಾಲಿನವರೆಗೂ "ಉದ್ಧೃತಾಸಿ ವರಾಹೇಣ" ಎಂಬ ಮಂತ್ರದಿಂದ ಹಚ್ಚಬೇಕು. (21) ಎರಡು ಕೈಗಳನ್ನು ತೊಳೆದು ಕೊಳ್ಳಬೇಕು. (22) ಇದೇ ರೀತಿಯಲ್ಲಿ ಎರಡು ಸಲ ಮೃತ್ತಿಕೆಯ ಎರಡನೆಯ ಬಾಗವನ್ನು ಹಚ್ಚಬೇಕು.

(23) ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ |
ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ||

ಈ ಮಂತ್ರದಿಂದ ಮೂರು ಸಲ ಅರ್ಘ್ಯವನ್ನು ಕೊಡಬೇಕು.

(24) ಅತಿತೀಕ್ಷ್ಣ ಮಹಾಕಾಯ ಕಲ್ಪಾಂತದಹನೋಪಮ |
ಭೈರವಾಯ ನಮಸ್ತುಭ್ಯಮನುಜ್ಞಾಂ ದಾತುಮರ್ಹಸಿ ||

ಈ ಮಂತ್ರದಿಂದ ತೀರ್ಥವನ್ನು ರಕ್ಷಿಸುವವನೂ ಕ್ಷೇತ್ರದ ಅಧಿಪತಿಯೂ ಆಗಿರುವ ಭೈರವನ ಅನುಮತಿಯನ್ನು ಪಡೆಯಬೇಕು.

(25) ಸಮಸ್ತಜಗದಾಧಾರ ಶಂಖಚಕ್ರಗದಾಧರ |
ದೇವ ದೇಹಿ ಮಮಾನುಜ್ಞಾಂ ಯುಷ್ಮತ್ತೀರ್ಥನಿಷೇವಣೇ ||

ಈ ಮಂತ್ರದಿಂದ ತೀರ್ಥಾಂತರ್ಯಾಮಿಯಾಗಿರುವ ಶ್ರೀಹರಿಯ ಅನುಮತಿಯನ್ನು ಪಡೆಯಬೇಕು. (26) ಮೃತ್ತಿಕೆಯ ಮೂರನೆಯ ಭಾಗವನ್ನು ಬಲಗೈಯಿಂದ ಗಟ್ಟಿಯಾಗಿ ಧರಿಸಬೇಕು. (27) ಎಡಗೈಯಿಂದ ಮೃತ್ತಿಕೆಯನ್ನು ಇಟ್ಟಿರುವ ಸ್ಥಳವನ್ನು ತೊಳೆಯಬೇಕು. (28) ದೇವರನ್ನೂ, ಗುರು ಮುಂತಾದ ಹಿರಿಯರನ್ನೂ ನಮಸ್ಕರಿಸಬೇಕು. (29) ನೀರಿನಲ್ಲಿ ಇಳಿಯಬೇಕು. (30) ಹೊಕ್ಕಳಿಗೆ ಸಮವಾಗಿರುವ ಅಥವಾ ಮೊಣಕಾಲುಗಳಿಗೆ ಸಮವಾಗಿರುವ ನೀರಿನಲ್ಲಿ ನಿಲ್ಲಬೇಕು. ನದಿಯಲ್ಲಿ ನದಿಯ ಪ್ರವಾಹಕ್ಕೆ ಅಭಿಮುಖವಾಗಿಯೂ, ನದಿಯನ್ನು ಬಿಟ್ಟು ಉಳಿದ ಕೆರೆ ಮುಂತಾದ ಜಲಾಶಯಗಳಲ್ಲಿ, ಸೂರ್ಯನಿಗೆ ಅಭಿಮುಖವಾಗಿಯೂ ಮೂರು ಸಲ ಮುಳುಗಬೇಕು. (31) ಬಲಗೈಯಲ್ಲಿರುವ ಮೃತ್ತಿಕೆಯನ್ನು ಹೆಗಲಿನಲ್ಲಿಟ್ಟು ಕೊಳ್ಳಬೇಕು. (32) ಮೂರು ಸಲ ಆಚಮನ ಮಾಡಬೇಕು. (33) ಮೂರು ಸಲ ಪ್ರಾಣಾಯಾಮ ಮಾಡಬೇಕು. (34) ಹೆಗಲಿನಲ್ಲಿಟ್ಟಿರುವ ಮೃತ್ತಿಕೆಯಲ್ಲಿ ಸ್ವಲ್ಪ ಭಾಗವನ್ನು ತೆಗೆದು ನೀರಿನಲ್ಲಿ ಕಲಸಿಡಬೇಕು. (35) ಉಳಿದ ಭಾಗವನ್ನು ಕೈಯಲ್ಲಿ ಧರಿಸಬೇಕು. (36) ತಲೆಯಿಂದ ಆರಂಭಿಸಿ ಎಲ್ಲಾ ಅವಯವಗಳಲ್ಲಿಯೂ ಓಂಕಾರದಿಂದ ಉಜ್ಜಬೇಕು. (37) "ಓಂ ನಮೋ ಭಗವತೇ ವಾಸುದೇವಾಯ" ಎಂಬ ದ್ವಾದಶಾಕ್ಷರಮಂತ್ರದಿಂದ ಮೂರು ಸಲ ಮುಳುಗಬೇಕು. "ಓಂ ನಮೋ ನಾರಾಯಣಾಯ" ಎಂಬ ನಾರಾಯಣಾಷ್ಟಾಕ್ಷರಮಂತ್ರದಿಂದ ಮೂರು ಸಲ ಮುಳುಗಬೇಕು. "ಓಂ ವಿಷ್ಣವೇ ನಮಃ" ಎಂಬ ವಿಷ್ಣುಷಡಕ್ಷರಮಂತ್ರದಿಂದ ಮೂರು ಸಲ ಮುಳುಗಬೇಕು. (38) ಹಿಂದೆ ಹೇಳಿದಂತೆ ಮುಳುಗುವಾಗ ನೀರಿನಲ್ಲಿ ಮಲಗಿರುವ ನಾರಾಯಣನನ್ನು ಸ್ಮರಿಸಬೇಕು. (39) ಅದೇ ಮೂರು ಮಂತ್ರಗಳನ್ನು ಶಕ್ತಿಯಿದ್ದಷ್ಟು ಸಲ ಜಪಿಸಬೇಕು. (40) "ಓಂ" ಎಂಬ ಮಂತ್ರವನ್ನು ಹೇಳುತ್ತಾ ನೀರಿನಿಂದ ಮೇಲೆ ಬರಬೇಕು. (41) ಎಡಗೈಯ ಬೆರಳುಗಳನ್ನು ಮುಚ್ಚಿ ಮುಷ್ಟಿಯಂತೆ ಮಾಡಿಕೊಳ್ಳಬೇಕು. ಆ ಮುಷ್ಟಿಯೊಳಗೆ ಬಲಗೈಯ ಹೆಬ್ಬೆರಳನ್ನು ಇಟ್ಟು ಉಳಿದ ನಾಲ್ಕು ಬೆರಳುಗಳನ್ನು ಇಟ್ಟು, ಉಳಿದ ನಾಲ್ಕು ಬೆರಳುಗಳನ್ನು ಎಡಗೈಯ ಮುಷ್ಟಿಗೆ ತಗಲುವಂತೆ ಇಟ್ಟು ಕೊಳ್ಳಬೇಕು. ಇದು ಶಂಖಮುದ್ರೆಯೆನಿಸುತ್ತದೆ. "ಆಪೋ ಹಿ ಷ್ಠಾ ಮಯೋಭುವಃ" ಮುಂತಾದ ಮಂತ್ರಗಳು "ಅಪ್" ಎಂಬ ಭಗವದ್ರೂಪಗಳನ್ನು ಹೊಗಳುತ್ತಿರುವುದರಿಂದ ಅಬ್ಲಿಂಗಮಂತ್ರಗಳೆನಿಸುತ್ತವೆ. ಈ ಮಂತ್ರಗಳನ್ನು ಹೇಳುತ್ತಾ ಶಂಖಮುದ್ರೆಯಿಂದ ಯುಕ್ತವಾದ ಕೈಗಳನ್ನು ನೀರಿನಲ್ಲಿ ಮುಳುಗಿಸುತ್ತಾ ಕ್ರಮವಾಗಿ ತಲೆಯನ್ನೂ ಎದೆಯನ್ನೂ ಎರಡು ಹೆಗಲುಗಳನ್ನೂ ಸರ್ವಾಂಗಗಳನ್ನೂ ಪ್ರೋಕ್ಷಿಸಿ ಕೊಳ್ಳಬೇಕು. (42) "ಋತಂ ಚ ಸತ್ಯಂ ಚ" ಎಂಬ ಮಂತ್ರವನ್ನು ಮೂರು ಸಲ ಪಠನ ಮಾಡಬೇಕು. ಅಥವಾ ಶ್ವಾಸವನ್ನು ಬಿಗಿ ಹಿಡಿದು ಅಘಮರ್ಷಣ ಸೂಕ್ತವನ್ನು ಜಪಿಸಬೇಕು. (43) ಹಿಂದೆ ಹೇಳಿದಂತೆ ಶ್ರೀಹರಿಯ ಧ್ಯಾನ ಮಾಡಬೇಕು. (44) ನೀರಿನಿಂದ ಮೇಲೆ ಬರಬೇಕು. (45) ಶಂಖಮುದ್ರೆಯಿಂದ ಪುರುಷಸೂಕ್ತದ ಒಂದೊಂದು ಪಾದಗಳನ್ನು ಕ್ರಮವಾಗಿ ಪಠಿಸುತ್ತಾ ತಲೆಯ

ಮೇಲೆ ಅಭಿಷೇಕವನ್ನು ಮಾಡಬೇಕು. ಈ ಸಮಯದಲ್ಲಿ ತನ್ನ ದೇಹದಲ್ಲಿರುವ ಶ್ರೀಹರಿಯನ್ನು ಸ್ಮರಿಸುತ್ತಾ ಶ್ರೀಹರಿಗೆ ಅಭಿಷೇಕ ಮಾಡುತ್ತಿರುವುದಾಗಿ ಭಾವಿಸಬೇಕು. (46) ಆಚಮನ ಮಾಡಬೇಕು. (47) ನೀರಿನಿಂದ ಮೇಲ್ಮುಖವಾಗಿ ನಾಮವನ್ನು ಹಚ್ಚಿಕೊಳ್ಳಬೇಕು. (48) ನದೀತೀರಕ್ಕೆ ಅಥವಾ ಸರೋವರ ಮುಂತಾದ ಜಲಾಶಯಗಳ ತೀರಕ್ಕೆ ಏರಿ ಬರಬೇಕು. (49) ತೀರದಲ್ಲಿ ತಾನು ನಿಂತಿರುವ ಸ್ಥಳವನ್ನು ಮೂರು ಸಲ ತೊಳೆಯಬೇಕು. (50) ಅಪಸವ್ಯವಾಗಿ ಯಜ್ಞೋಪವೀತವನ್ನು ಧರಿಸಬೇಕು.

ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ |
ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಮ್ ||

ಎಂಬ ಮಂತ್ರದಿಂದ ಹೊದ್ದು ಕೊಂಡಿರುವ ವಸ್ತ್ರವನ್ನು ಹಿಂಡಬೇಕು. ವಸ್ತ್ರವನ್ನು ಹಿಂಡುವಾಗ "ಪಿತೃತೀರ್ಥ" ಎಂದರೆ ಬಲಗೈಯ ಹೆಬ್ಬೆರಳನ್ನು ತಗ್ಗಿಸಿ ಉಳಿದ ಭಾಗವನ್ನು ಮೇಲ್ಮುಖವಾಗಿ ಮಾಡಿಕೊಳ್ಳಬೇಕು. (ಈ ತರ್ಪಣವನ್ನು ಪಿತೃ ತರ್ಪಣದ ಅಧಿಕಾರವುಳ್ಳವರು ಮಾತ್ರ ಮಾಡಬೇಕು.) (51) ಎರಡಾವರ್ತಿ ಆಚಮನ ಮಾಡಬೇಕು. (52) ದೇವನನ್ನು ವಿಧಿಪೂರ್ವಕವಾಗಿ ಅಭಿಷೇಕ ಮಾಡಬೇಕು. (53) ಆ ತೀರ್ಥವನ್ನು ಸನಕಾದಿಮುನಿಗಳಿಗೂ, ಇತರ ದೇವತೆಗಳಿಗೂ ಕೊಡಬೇಕು. (54) ತಾನೂ ತಲೆಯ ಮೇಲೆ ಧರಿಸಿ ಕುಡಿಯಬೇಕು. (56) ದೇವತರ್ಪಣ ಮತ್ತು ಋಷಿತರ್ಪಣಗಳನ್ನು ಮಾಡಬೇಕು. ಪಿತೃತರ್ಪಣಾಧಿಕಾರವುಳ್ಳವರು ಪಿತೃತರ್ಪಣವನ್ನು ಮಾಡಬೇಕು. (56) ಆಚಮನ ಮಾಡಬೇಕು. (57) ತಲೆಯಲ್ಲಿರುವ ನೀರು ಕೆಳಗೆ ಧಾರೆಯಾಗಿ ಸುರಿಯುತ್ತಿರುವುದು ನಿಲ್ಲುವವರೆಗೆ ಕೈಗಳನ್ನು ಜೋಲಾಡಿಸಿಕೊಂಡು ನಿಲ್ಲಬೇಕು. ಆ ಸಮಯದಲ್ಲಿ ಶ್ರೀಹರಿಯನ್ನು ಸ್ಮರಿಸುತ್ತಿರಬೇಕು.

(58) ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ |
ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ||

ಎಂಬ ಮಂತ್ರದಿಂದ ಶುದ್ಧವಾದ ವಸ್ತ್ರವನ್ನು ಪ್ರೋಕ್ಷಿಸಬೇಕು. (59) ಮೊದಲು ಹೊದ್ದು ಕೊಳ್ಳುವ ವಸ್ತ್ರವನ್ನು ತಲೆಯ ಮೇಲೆ ಧರಿಸಬೇಕು. ಅನಂತರದಲ್ಲಿ ಉಟ್ಟು ಕೊಳ್ಳುವ ವಸ್ತ್ರವನ್ನು ಉಟ್ಟುಕೊಳ್ಳಬೇಕು. ಕಚ್ಚೆಯನ್ನು ಮೇಲ್ಮುಖವಾಗಿ ಧರಿಸಬೇಕು. (60) ಕುಳಿತು ಕೊಳ್ಳಬೇಕು. (61) ಕಾಲುಗಳನ್ನು ತೊಳೆದುಕೊಳ್ಳಬೇಕು. ಅಥವಾ ಪ್ರೋಕ್ಷಿಸಿಕೊಳ್ಳಬೇಕು. (62) ಬಾಯಿಯೊಳಗೆ ಸ್ವಲ್ಪ ನೀರನ್ನು ಹಾಕಿ ಹೊರಗೆ ಹೋಗಿ ಉಗುಳಬೇಕು. (63) ಎರಡಾವರ್ತಿ ಆಚಮನ ಮಾಡಬೇಕು. (64) ಹಿಂದೆ ಹೇಳಿದಂತೆ ಮೇಲ್ಮುಖವಾಗಿ ನಾಮಗಳನ್ನು ಧರಿಸಬೇಕು. (65) ಆಚಮನ ಮಾಡಬೇಕು. (66) ತಮ್ಮ ತಮ್ಮ ಸೂತ್ರಗಳಲ್ಲಿ ಹೇಳಿದಂತೆ ಸಂಧ್ಯಾವಂದನವನ್ನು ಮಾಡಬೇಕು. (67) ವಸ್ತ್ರದ ಎರಡು ತುದಿಗಳನ್ನೂ ಒಟ್ಟುಗೂಡಿಸಬೇಕು. ಹೀಗೆ ಮಾಡಿದರೆ ದ್ವಿಗುಣವೆನಿಸುತ್ತದೆ. ಈ ದ್ವಿಗುಣವಾದ ವಸ್ತ್ರದ ಎರಡು ತುದಿಗಳನ್ನೂ ಒಟ್ಟುಗೂಡಿಸಬೇಕು ಇದು ಚತುರ್ಗುಣವೆನಿಸುತ್ತದೆ. ಈ ಚತುರ್ಗುಣವಾದ ವಸ್ತ್ರವನ್ನು ನೀರಿನಿಂದ ಮೇಲೆ ಬಂದು ಹಿಂಡಬೇಕು. ಹಿಂಡಿದ ವಸ್ತ್ರವನ್ನು ಎಡಗೈಯ ಮಣಿಗಂಟಿನಲ್ಲಿ ಇಟ್ಟುಕೊಳ್ಳಬಾರದು. ಹಾಗೆ ಇಟ್ಟುಕೊಂಡರೆ ಮೈಲಿಗೆಯಾಗುತ್ತದೆ. ಶುದ್ಧಿಗಾಗಿ ಎರಡು ಸಲ ಆಚಮನ ಮಾಡಬೇಕು. ಹಿಂಡಿದ ವಸ್ತ್ರವನ್ನು ಹೆಗಲಿನ ಮೇಲೆ ಇಟ್ಟುಕೊಳ್ಳಬಾರದು. ಹಾಗೆ ಇಟ್ಟುಕೊಳ್ಳುವುದು ರಾಕ್ಷಸರ ಕರ್ಮವೆನಿಸುತ್ತದೆ. ಶುದ್ಧಿಗಾಗಿ ಪುನಃ ಸ್ನಾನವನ್ನು ಮಾಡಬೇಕು. ಇದು ಸನ್ಯಾಸಿಗಳಲ್ಲದವರು ಮಾಡುವ ಸ್ನಾನವೆನಿಸುತ್ತದೆ." (ಇದು ಪಂಚಸಂಸ್ಕಾರ ಸಂಗ್ರಹ ವಾಕ್ಯ)

### ಸನ್ಯಾಸಿಗಳ ಸ್ನಾನದ ಕ್ರಮ

(1) ಯತಿಸ್ತು ಉಕ್ತಕ್ರಮೇಣೋತ್ಥಾಯ (2) ಆಗತ್ಯ (3) ಜಲೇ ಅಂತರಿಕ್ಷೇ ವಾ ದಂಡಂ ನಿಧಾಯ (4) ವಸ್ತ್ರೇಣ

ಶೋಧಯಿತ್ವಾ (5) ಉತ್ತರೀಯೇಣ ಶಿರಃ, ಇತರೇಣ ಗಾತ್ರಾದೀನ್ ಆಚ್ಛಾದ್ಯ (6) ಉಕ್ತಕ್ರಮೇಣ ಮಲಮೂತ್ರೇ ವಿಸೃಜ್ಯ (7) ಉತ್ಥಾಯ (8) ತತ್ಸಮಯೇ ಯದೃಚ್ಛಯಾ ಸಮೀಪೇ ಜ್ಯೇಷ್ಠಾದೀನ್ ದೃಷ್ಟ್ವಾ, ಶಿರೋವೇಷ್ಟಿತ-ವಸ್ತ್ರಮುತ್ಸಾರ್ಯ, ಕುಂಚಿತಗಾತ್ರಃ ಸನ್ (9) ವಾಗ್ಯತೋ ಭೂತ್ವಾ (10) ಯಥಾವಚ್ಛೌಚಂ ಕೃತ್ವಾ (11) ಶಿಷ್ಯಾದಿದೀಯಮಾನಕಾಷ್ಠೇನ ಪರ್ವದ್ವಯಮೇಕಾದಶೀಂ ದ್ವಾದಶೀಂ ಚೈವ ಪ್ರಾತಃಕಾಲೇ ವರ್ಜಯಿತ್ವಾ ದಂತಾನ್ ಸಂಶೋಧ್ಯ (12) ತತ ಉಪಸ್ಪೃಶ್ಯ, ಮಯಾ ಕೃತಸನ್ಯಾಸಪದ್ಧತ್ಯಾಮುಕ್ತಪ್ರಕಾರೇಣ ಸ್ನಾಯಾದಿತಿ ವಿಶೇಷೋ ದರ್ಶಿತಃ (ಸ್ಮೃತಿಮುಕ್ತಾವಲೀಕಾರರ ವಾಕ್ಯ)

"(1) ಸನ್ಯಾಸಿಗಳು ಹಿಂದೆ ಹೇಳಿದ ರೀತಿಯಿಂದ ಏಳಬೇಕು. (2) ನದೀ ಮುಂತಾದ ಜಲಾಶಯದ ಸಮೀಪಕ್ಕೆ ಬರಬೇಕು. (3) ನೀರನಲ್ಲಿ ಊರಿ ದಂಡವನ್ನಿಡಬೇಕು. ಭೂಮಿಯಲ್ಲಿ ದಂಡವನ್ನಿಡುವುದಾದರೆ ದಂಡವು ನೆಲವನ್ನು ಮುಟ್ಟದಂತೆ ಮಣೆ ಮುಂತಾದವುಗಳ ಮೇಲೆ ಇಡಬೇಕು. (4) ವಸ್ತ್ರದಿಂದ ದಂಡವನ್ನು ಒರೆಸಬೇಕು. (5) ಹೊದ್ದುಕೊಳ್ಳುವ ಬಟ್ಟೆಯಿಂದ ತಲೆಯನ್ನೂ ಇನ್ನೊಂದು ಬಟ್ಟೆಯಿಂದ ದೇಹ ಮುಂತಾದವುಗಳನ್ನೂ ಮುಚ್ಚಬೇಕು. (6) ಹಿಂದೆ ಹೇಳಿದಂತೆ ಮಲ ಮತ್ತು ಮೂತ್ರವನ್ನು ವಿಸರ್ಜನ ಮಾಡಬೇಕು. (7) ಏಳಬೇಕು. (8) ಮಲಮೂತ್ರ ವಿಸರ್ಜನಕಾಲದಲ್ಲಿ ಆಕಸ್ಮಿಕವಾಗಿ ತಮಗಿಂತ ದೊಡ್ಡವರೇ ಮೊದಲಾದವರನ್ನು ನೋಡಿದರೆ ತಲೆಯಲ್ಲಿ ಧರಿಸಿರುವ ವಸ್ತ್ರವನ್ನು ತೆಗೆದು ದೇಹವನ್ನು ಬಗ್ಗಿಸಿ ಕೊಳ್ಳಬೇಕು. (9) ಮೌನವನ್ನು ಧರಿಸಬೇಕು. (10) ವಿಧಿ ಪ್ರಕಾರವಾಗಿ ಮೃತ್ತಿಕಾಶೌಚವನ್ನು ಮಾಡಬೇಕು. (11) ಶಿಷ್ಯರೇ ಮೊದಲಾದವರಿಂದ ಕೊಡಲ್ಪಟ್ಟ ದಂತಕಾಷ್ಠದಿಂದ ಹಲ್ಲುಗಳನ್ನು ಶುದ್ಧಪಡಿಸಬೇಕು. ಏಕಾದಶೀ ದ್ವಾದಶೀ ಹುಣ್ಣಿಮೆ ಅಮಾವಾಸ್ಯೆ ಈ ದಿನಗಳಲ್ಲಿ ದಂತಕಾಷ್ಠದಿಂದ ಹಲ್ಲುಗಳನ್ನು ಉಜ್ಜಬಾರದು. (12) ಆಚಮನ ಮಾಡಬೇಕು. ಕ್ರಮದಿಂದ ಇಷ್ಟು ಕಾರ್ಯಗಳನ್ನು ಮಾಡಿ ಮುಗಿಸಿದ ಮೇಲೆ ಸನ್ಯಾಸಿಗಳು ಸ್ನಾನವನ್ನು ಮಾಡಬೇಕು. ಸನ್ಯಾಸಿಗಳ ಸ್ನಾನದ ಕ್ರಮವು ತನ್ನಿಂದ ಬರೆಯಲ್ಪಟ್ಟ ಸನ್ಯಾಸಪದ್ಧತಿಗ್ರಂಥದಲ್ಲಿ ಹೇಳಲ್ಪಟ್ಟದೆಯೆಂದೂ ಅಲ್ಲಿ ಹೇಳಿದಂತೆ ಸನ್ಯಾಸಿಗಳೂ ಸ್ನಾನ ಮಾಡಬೇಕೆಂದೂ ಸ್ಮೃತಿಮುಕ್ತಾವಲೀಕಾರರು ಹೇಳಿರುತ್ತಾರೆ.

ಮೃದಂ ನಿರ್ಮಾರ್ಜ್ಯ ಕಕ್ಷೇಷು ಲಿಪ್ಯ ಪ್ರಕ್ಷಾಲಯೇತ್ ತ್ರಿಶಃ |
ಮೃದಂ ತು ಶಿರ ಆರಭ್ಯ ಲಿಂಪೇತ್ಸರ್ವಶರೀರಕೇ || 1 ||
ಮೃದಂ ಗೃಹ್ಯ ಗುರೂನ್ನತ್ವಾ ಹರಿಂ ಚ ತದನುಜ್ಞಯಾ
ಅವತೀರ್ಯ ಜಲಂ ನತ್ವಾ ಆಭಿಮುಖ್ಯಂ ಭವೇದಥ || 2 ||
ಅನ್ಯತ್ರ ಚ ರವೇರೀಷನ್ಮೃದಂ ತತ್ರ ವಿಲೋಡಯೇತ್ |
ಸ್ಮೃತ್ವಾ ನಾರಾಯಣಂ ದೇವಂ ಪ್ರಣವೇನ ನಿಮಜ್ಜತಿ || 3 ||
ತ್ರಿಸ್ತ್ರಿರಾಚಮ್ಯ ಚ ಹರಿಂ ಸ್ಮೃತ್ವಾ ಪ್ರಾಣಾಂಸ್ತ್ರಿಶೋ ಜಪೇತ್ |
ಮೃದಂ ಲಿಪ್ಯ ತ್ರಿಶೋ ವಿಷ್ಣುಂ ಸ್ಮರನ್ನಂಭಸಿ ಸಂಜಪೇತ್ || 4 ||
ತಾರಮಷ್ಟೋತ್ತರಶತಂ ಚತ್ವಾರಿಂಶದಥಾಪಿ ವಾ |
ಅಷ್ಟಾವಿಂಶತಿರೇವಾಪಿ ನವಕೃತ್ವೋ ನಿಮಜ್ಜ್ಯ ಚ || 5 ||
ಪ್ರತಿ ಪ್ರತಿ ಜಪಂಸ್ತಾರಂ ಪುನರಾಚಮ್ಯ ಪೂರ್ವವತ್ |
ಮಜ್ಜನಾದಿ ಪುನಸ್ತದ್ವತ್ಕುರ್ಯಾದ್ವಿಷ್ಣುಂ ಹೃದಿ ಸ್ಥಿತಂ || 6 ||
ಅಭಿಷಿಂಚೇಚ್ಚ ತೇನೈವ ಮನುನಾಽಷ್ಟೋತ್ತರಂ ಶತಮ್ |
ಅಷ್ಟಾವಿಂಶತಿರೇವಾಥ ಶಿರಸಿ ತ್ರಿಸ್ತ್ರಿಶಸ್ತಥಾ || 7 ||

ಅಸಂಗೋ ಮುಖ ಏವಾಥ ಕುರ್ಯಾತ್ತುಂಡ್ರಂ ಮೃದೈವ ತು |
ಉತ್ತೀರ್ಯಾಽಚಮನಂ ಕುರ್ಯಾದ್ವಸ್ತ್ರೇಣಾಽಸ್ಯಾದಿ ಶೋಧಯೇತ್ || 8 ||
ಅಭ್ಯುಕ್ಷ್ಯ ತೇನ ಚಾಭ್ಯುಕ್ಷ್ಯ ಕೌಪೀನಂ ಚೈವ ವಾಸಯೇತ್ |
ಆಚಮ್ಯಾಽಯಮ್ಯ ಚ ಪ್ರಾಣಾನ್ ಪುನರಾಚಮನಂ ಚರೇತ್ || 9 ||
ಹಂಸಾದೀನಾಂ ಯತೀನಾಂ ಚ ಬ್ರಹ್ಮಚರ್ಯಾದಿಕೇಷ್ವಪಿ |
ಪೂರ್ವೋಕ್ತೇನೈವ ಮಾರ್ಗೇಣ ಭವೇತ್ಸ್ನಾನವಿಧಿಃ ಪರಃ || 10 || (ವಿಷ್ಣುತೀರ್ಥೀಯ ವಚನ)

"ಹಂಸ, ಪರಮಹಂಸ, ಕುಟೀಚಕ, ಬಹೂದಕ ಎಂದು ಸನ್ಯಾಸಿಗಳು ನಾಲ್ಕು ವಿಧವಾಗಿರುವರು. ಅವರ ಸ್ನಾನ ವಿಧಿಯನ್ನು ತಿಳಿಸುತ್ತೇವೆ. ಇದೇ ಸ್ನಾನದ ಕ್ರಮವನ್ನು ಬ್ರಹ್ಮಚಾರಿ ಗೃಹಸ್ಥ ಮತ್ತು ವಾನಪ್ರಸ್ಥರೂ ಅನುಸರಿಸಬಹುದು. ಬ್ರಹ್ಮಚಾರಿ ಗೃಹಸ್ಥ, ವಾನಪ್ರಸ್ಥರಿಗೆ ಮಾತ್ರ ಸಂಬಂಧಿಸಿದ ಸ್ನಾನಕ್ರಮವನ್ನು ಹಿಂದೆ ತಿಳಿಸಿದ್ದೇವೆ. ಅಲ್ಲಿ ಹೇಳಿದಂತೆ ಸನ್ಯಾಸಿಗಳೂ ಸಹ ಮೃತ್ತಿಕೆಯನ್ನು ಸ್ನಾನಕ್ಕೆ ಹೊರಡುವಾಗ ಸ್ನಾನ ಮಾಡುವ ಪ್ರದೇಶಕ್ಕೆ ತೆಗೆದುಕೊಂಡು ಹೋಗಬೇಕು.

ಆ ಮೃತ್ತಿಕೆಯಲ್ಲಿ ಸ್ವಲ್ಪಭಾಗವನ್ನು ಕೈಯಲ್ಲಿ ತೆಗೆದುಕೊಳ್ಳಬೇಕು. ಅದನ್ನು ಕೈಗಳಿಂದ ಮಥನ ಮಾಡಿ ಕಂಕುಳಪ್ರದೇಶದಲ್ಲಿ ಹಚ್ಚಬೇಕು. ನೀರಿನಿಂದ ಕಂಕುಳ ಪ್ರದೇಶವನ್ನು ತೊಳೆಯಬೇಕು. ಹೀಗೆ ಮೂರು ಸಲ ಮಾಡಬೇಕು. ಪುನಃ ಸ್ವಲ್ಪ ಮೃತ್ತಿಕೆಯನ್ನು ಕೈಯಿಂದ ತೆಗೆದುಕೊಳ್ಳಬೇಕು. ಅದನ್ನು ತಲೆಯಿಂದ ಆರಂಭಿಸಿ ಇಡೀ ದೇಹದಲ್ಲಿ ಹಚ್ಚಬೇಕು." || 1 ||

"ಇನ್ನೊಮ್ಮೆ ಸ್ವಲ್ಪ ಮೃತ್ತಿಕೆಯನ್ನು ಕೈಯಲ್ಲಿ ತೆಗೆದುಕೊಳ್ಳಬೇಕು. ಗುರುಗಳನ್ನೂ ಶ್ರೀಹರಿಯನ್ನೂ ನಮಸ್ಕರಿಸಿ ಅವರಿಂದ ಸ್ನಾನಕ್ಕೆ ಅನುಮತಿಯನ್ನು ಪಡೆಯಬೇಕು. ನದೀ ಮುಂತಾದ ತೀರ್ಥಗಳಲ್ಲಿ ಸ್ನಾನ ಮಾಡುವುದಾದರೆ ಆ ತೀರ್ಥಗಳನ್ನು ನಮಸ್ಕರಿಸಬೇಕು. ತೀರ್ಥದಲ್ಲಿ ಇಳಿಯಬೇಕು. ತೀರ್ಥಕ್ಕೆ ಅಭಿಮುಖನಾಗಿ ನಿಲ್ಲಬೇಕು." || 2 ||

"ನದೀ ಮುಂತಾದ ತೀರ್ಥಗಳಲ್ಲದೆ ಬಾವಿ ಮುಂತಾದವುಗಳಲ್ಲಿ ಸ್ನಾನ ಮಾಡುವುದಾಗಿದ್ದರೆ ಸೂರ್ಯನಿಗೆ ಅಭಿಮುಖನಾಗಿ ನಿಲ್ಲಬೇಕು. ಸ್ವಲ್ಪ ಮೃತ್ತಿಕೆಯನ್ನು ತಾನು ಸ್ನಾನ ಮಾಡುವ ನೀರಿನಲ್ಲಿ ಕಲಡಿಸಬೇಕು. ನಾರಾಯಣನನ್ನು ಸ್ಮರಿಸುತ್ತಾ "ಓಂ" ಎಂದು ಪ್ರಣವ ಮಂತ್ರವನ್ನು ಜಪಿಸುತ್ತಾ ಮೂರು ಸಲ ಮುಳುಗಬೇಕು." || 3 ||

ಮೂರು ಸಲ ಆಚಮನ ಮಾಡಬೇಕು. ಮೂರು ಸಲ ಪ್ರಾಣಾಯಾಮಮಂತ್ರವನ್ನು ಜಪಿಸಬೇಕು. ಮೃತ್ತಿಕೆಯನ್ನು ಮೂರು ಸಲ ಪುನಃ ದೇಹದಲ್ಲಿ ಲೇಪನ ಮಾಡಿಕೊಂಡು ನೀರಿನಲ್ಲಿ ನಿಂತುಕೊಂಡು ವಿಷ್ಣುವನ್ನು ಸ್ಮರಿಸುತ್ತಾ 108 ಅಥವಾ 40 ಅಥವಾ 28 ಸಲ ಪ್ರಣವ ಮಂತ್ರವನ್ನು ಜಪಿಸಬೇಕು. ನೀರಿನಲ್ಲಿ ಮುಳುಗಬೇಕು. ಆಚಮನ ಮಾಡಬೇಕು. ಇದೇ ರೀತಿಯಲ್ಲಿ ಪ್ರಣವ ಮಂತ್ರ ಜಪ ಸ್ನಾನಗಳನ್ನು ಒಂಭತ್ತು ಸಲ ಮಾಡಬೇಕು." || 4-6 ||

"ಒಂದೊಂದು ಸ್ನಾನದ ಅನಂತರದಲ್ಲಿಯೂ ಹೃದಯದಲ್ಲಿರುವ ಶ್ರೀಹರಿಯನ್ನು ಸ್ಮರಿಸುತ್ತಾ 108 ಅಥವಾ 28 ಪ್ರಣವ ಮಂತ್ರಗಳಿಂದ ಅವನಿಗೆ ಅಭಿಷೇಕವನ್ನು ಮಾಡಬೇಕು. ಅದೇ ಮಂತ್ರದಿಂದ ಮೂರು ಮೂರು ಸಲ ತಲೆಯಲ್ಲಿ ಪ್ರೋಕ್ಷಣೆ ಮಾಡಬೇಕು." || 7 ||

"ಮೃತ್ತಿಕೆಯಿಂದ ಮುಖದಲ್ಲಿ ನಾಮವನ್ನು ಹಚ್ಚಿಕೊಳ್ಳಬೇಕು. ಮೃತ್ತಿಕೆಯಿಂದ ಹಚ್ಚಿಕೊಳ್ಳುವ ನಾಮವನ್ನು ಮುಖದಲ್ಲಿ ಮಾತ್ರ ಹಚ್ಚಿಕೊಳ್ಳಬೇಕು. ಇತರ ಅವಯವಗಳಲ್ಲಿ ಹಚ್ಚಿಕೊಳಬಾರದು. ಸ್ನಾನಕಾಲದಲ್ಲಿ ಹಚ್ಚಿಕೊಳ್ಳುವ ನಾಮವನ್ನು ಮೃತ್ತಿಕೆಯಿಂದಲೇ ಹಚ್ಚಿಕೊಳ್ಳಬೇಕು. ನೀರು ಮುಂತಾದವುಗಳಿಂದ ಹಚ್ಚಿಕೊಳ್ಳಬಾರದು. ನೀರಿನಿಂದ ಮೇಲೆ ಬಂದು ಆಚಮನ ಮಾಡಬೇಕು. ವಸ್ತ್ರವನ್ನು ಪ್ರೋಕ್ಷಣೆ ಮಾಡಿ ಆ ವಸ್ತ್ರದಿಂದ ಮುಖವನ್ನು ಮೊದಲು ಒರೆಸಿಕೊಂಡು ಉಳಿದ ಎಲ್ಲಾ ಅವಯವಗಳನ್ನು ಒರೆಸಿಕೊಳ್ಳಬೇಕು." || 8 ||

"ಕೌಪೀನವನ್ನು ಪ್ರೋಕ್ಷಣೆ ಮಾಡಿ ಅದನ್ನು ಧರಿಸಬೇಕು. ಆಚಮನ ಮಾಡಬೇಕು. ಪ್ರಾಣಾಯಾಮ ಮಾಡಬೇಕು. ಇನ್ನೊಮ್ಮೆ ಆಚಮನವನ್ನು ಮಾಡಬೇಕು. ಇದು ಸನ್ಯಾಸಿಗಳು ಮಾಡಬೇಕಾದ ಸ್ನಾನ." ||9-10||

**ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನ ಮಾಡಬೇಕೇ?**

ಪ್ರಾತಃಸ್ನಾನಪ್ರಕರಣದಲ್ಲಿ ಶ್ರೀಮಧ್ವಾಚಾರ್ಯರು "ಮೃದಾಲಿಪ್ಯ ನಿಮಜ್ಜ್ಯ ಚ" ಎಂಬ ವಾಕ್ಯದಲ್ಲಿಯೂ "ಉದ್ಧೃತೇತಿ ಮೃದಾಲಿಪ್ಯ" ಎಂಬ ವಾಕ್ಯದಲ್ಲಿಯೂ ಮೃತ್ತಿಕಾಸ್ನಾನವನ್ನು ಮಾಡಬೇಕೆಂದು ಹೇಳಿರುವರು. ಇದಕ್ಕೆ ವಿರುದ್ಧವಾದ ವಚನಗಳೂ ಇವೆ. ಅವುಗಳನ್ನು ಮೊದಲು ಉದಾಹರಿಸಿ ಅವುಗಳ ಭಾವವನ್ನು ಶ್ರೀಸ್ಮೃತಿಮುಕ್ತಾವಲೀಕಾರರು ತಿಳಿಸಿರುತ್ತಾರೆ. ಅದನ್ನು ಈಗ ವಿವರಿಸುತ್ತೇವೆ.

ನ ಪ್ರಾತರ್ಮೃತ್ತಿಕಾಸ್ನಾನಂ ನ ಚ ಮಧ್ಯಂ ಗತೇ ರವೌ |
ನ ರಾತ್ರೌ ಮೃತ್ತಿಕಾಸ್ನಾನಂ ನ ಚ ಭೌಮಾರ್ಕವಾರಯೋಃ ||

"ಬೆಳಿಗ್ಗೆ ಮಧ್ಯಾಹ್ನ ರಾತ್ರಿಗಳಲ್ಲಿಯೂ ರವಿವಾರ ಮತ್ತು ಕುಜವಾರಗಳಲ್ಲಿಯೂ ಮೃತ್ತಿಕಾಸ್ನಾನವನ್ನು ಮಾಡಕೂಡದು."

ನ ಪ್ರಾತರ್ಮೃತ್ತಿಕಾಸ್ನಾನಂ ನ ಚ ಭೌಮಾರ್ಕವಾರಯೋಃ |
ಮಧ್ಯಂದಿನೇ ಚ ಕರ್ತವ್ಯಂ ನಾತಿಮಧ್ಯಂಗತೇ ರವೌ ||

"ಬೆಳಿಗ್ಗೆ ಮತ್ತು ನಡುನೆತ್ತಿಗೆ ಸೂರ್ಯನು ಬರುವ ಸಮಯಗಳಲ್ಲಿಯೂ, ಕುಜವಾರ ಮತ್ತು ರವಿವಾರಗಳಲ್ಲಿಯೂ, ಮೃತ್ತಿಕಾಸ್ನಾನವನ್ನು ಮಾಡಬಾರದು. ಸೂರ್ಯನು ನಡುನೆತ್ತಿಗೆ ಬರುವ ಕಾಲವನ್ನು ಬಿಟ್ಟು ಉಳಿದ ಮಧ್ಯಾಹ್ನಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಬೇಕು."

ಮೇಲ್ಕಂಡ ಎರಡು ವಾಕ್ಯಗಳ ಮಧ್ಯದಲ್ಲಿ ಮೊದಲನೆಯ ವಾಕ್ಯದಲ್ಲಿ ತ್ರಿಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಕೂಡದು ಎಂದು ಹೇಳಿರುತ್ತದೆ. ಎರಡನೆಯ ವಾಕ್ಯದಲ್ಲಿ ಬೆಳಿಗ್ಗೆ ಮತ್ತು ಸೂರ್ಯನು ನಡುನೆತ್ತಿಗೆ ಬರುವ ಕಾಲ ಈ ಎರಡು ಕಾಲಗಳಲ್ಲಿ ಮಾತ್ರ ಮೃತ್ತಿಕಾಸ್ನಾನವನ್ನು ಮಾಡಕೂಡದೆಂದು ಹೇಳಿರುತ್ತದೆ. ಆದರೆ ಈ ಎರಡು ವಾಕ್ಯಗಳಲ್ಲಿಯೂ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಸರ್ವಥಾ ಮಾಡಕೂಡದು ಎಂದು ಸಂಶಯಕ್ಕೆ ಅವಕಾಶವಿಲ್ಲದಂತೆ ಅತಿಸ್ಪಷ್ಟವಾಗಿ ಹೇಳಿರುವುದರಿಂದ ಬೆಳಿಗ್ಗೆ ಮತ್ತಿಕಾಸ್ನಾನವನ್ನು ಮಾಡಲೇಕೂಡದು ಎಂದು ಸಿದ್ಧವಾಗುತ್ತದೆ. ಹೀಗಿರುವಾಗ ಪ್ರಾತಃಸ್ನಾನಪ್ರಕರಣದಲ್ಲಿ ಮೃತ್ತಿಕಾಸ್ನಾನವನ್ನು ಮಾಡಬೇಕೆಂದು ಶ್ರೀಮಧ್ವಾಚಾರ್ಯರು ಹೇಳಿರುವುದು ಯುಕ್ತವಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿದೆ.

ಸ್ನಾನಮಬ್ದೈವತೈರ್ಮಂತ್ರೈರ್ವಾರುಣೈಶ್ಚ ಮೃದಾ ಸಹ |
ಕುರ್ಯಾದ್ವ್ಯಾಹೃತಿಭಿರ್ವಾಽಥ ......................... ||

ಇತ್ಯಾದಿ ಸ್ಮೃತಿವಚನಗಳಲ್ಲಿ "ಅಪ್" ಎಂಬ ಹೆಸರುಳ್ಳ ನಾರಾಯಣನ ಮಹಿಮೆಯನ್ನು ತಿಳಿಸುವ ಮಂತ್ರಗಳನ್ನೂ, ವರುಣ ದೇವನ ಮಹಿಮೆಯನ್ನು ತಿಳಿಸುವ ವರುಣಸೂಕ್ತ ಮುಂತಾದ ಮಂತ್ರಗಳನ್ನೂ ಅಥವಾ "ಓಂ ಭೂರ್ಭುವಃ ಸ್ವಃ" ಎಂಬ ವ್ಯಾಹೃತಿಮಂತ್ರವನ್ನೂ ಪಠಿಸುತ್ತಾ ಮೃತ್ತಿಕಾಸ್ನಾನವನ್ನು ಮಾಡಬೇಕು." ಎಂದು ಹೇಳಿರುತ್ತದೆ.

ಆದರೆ ಈ ಸ್ಮೃತಿವಾಕ್ಯದಲ್ಲಿ ಪ್ರಾತಃಕಾಲ ಮುಂತಾದ ಕಾಲಗಳಲ್ಲಿ ಯಾವ ಕಾಲವನ್ನೂ ಹೇಳದಿರುವುದರಿಂದ ಈ ವಾಕ್ಯವು ಸಾಮಾನ್ಯವಾಕ್ಯವಾಗಿರುತ್ತದೆ. ಹಿಂದೆ ಹೇಳಿದ ಎರಡು ವಾಕ್ಯಗಳಲ್ಲಿ ಪ್ರಾತಃಕಾಲ ಮುಂತಾದ ಕಾಲವನ್ನು ನಿರ್ದೇಶ ಮಾಡಿರುವುದರಿಂದ ಆ ವಾಕ್ಯಗಳು ವಿಶೇಷವಾಕ್ಯಗಳೆನಿಸುತ್ತವೆ. ಆದ್ದರಿಂದ ಈ ಸಾಮಾನ್ಯವಾಕ್ಯವು ಹಿಂದೆ ಹೇಳಿರುವ ವಿಶೇಷವಾಕ್ಯಗಳಲ್ಲಿ ಹೇಳಿದ ರವಿವಾರ ಮತ್ತು ಮಂಗಳವಾರಗಳನ್ನು ಬಿಟ್ಟು ಇತರ ದಿನಗಳಲ್ಲಿ ಪ್ರಾತಃಕಾಲ ನಡುನೆತ್ತಿಗೆ ಸೂರ್ಯನು ಬರುವ ಕಾಲ, ಸಾಯಂಕಾಲ ಇವುಗಳನ್ನು ಬಿಟ್ಟು ಉಳಿದಿರುವ ಸಾಮಾನ್ಯ ಮಧ್ಯಾಹ್ನ ಕಾಲದಲ್ಲಿ,

ಮೃತ್ತಿಕಾಸ್ನಾನವನ್ನು ಮಾಡಬೇಕು ಎಂಬ ಅರ್ಥವನ್ನು ತಿಳಿಸುತ್ತದೆ ಎಂದು ಹೇಳಬೇಕು. ಹೀಗೆ ಹೇಳಿದರೆ ಎಲ್ಲಾ ವಾಕ್ಯಗಳಿಗೂ ವಿರೋಧವು ಪರಿಹರಿಸಿದಂತಾಗುತ್ತದೆ. ಆದ್ದರಿಂದ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಕೂಡದೆಂದು ಮೇಲ್ಕಂಡ ಎಲ್ಲಾ ವಾಕ್ಯಗಳಲ್ಲಿಯೂ ತಿಳಿಸಿದಂತಾಯಿತು. ಹೀಗಿರುವಾಗ ಪ್ರಾತಃಸ್ನಾನ ಪ್ರಕರಣದಲ್ಲಿ ಮೃತ್ತಿಕಾಸ್ನಾನವನ್ನು ಮಾಡಬೇಕೆಂದು ಶ್ರೀಮಧ್ವಾಚಾರ್ಯರು ಹೇಳಿರುವುದು ಅಯುಕ್ತ ಎಂಬ ಆಕ್ಷೇಪಣೆಗೆ ಸಮಾಧಾನವು ಬಂದಂತಾಗಲಿಲ್ಲ. ಇದು ಪ್ರಬಲವಾದ ಆಕ್ಷೇಪ. ಈ ಆಕ್ಷೇಪಕ್ಕೆ ಈಗ ಸಮಾಧಾನವನ್ನು ಹೇಳುತ್ತೇವೆ.

ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಬೇಕೆಂದು ಶ್ರೀಮಧ್ವಾಚಾರ್ಯರು ನಿರಾಧಾರವಾಗಿ ಹೇಳಿಲ್ಲ. ಯೋಗದೀಪಿಕಾ ಮುಂತಾದ ಪ್ರಮಾಣಗಳಲ್ಲಿ ಹೇಳಿರುವ ವಿಷಯವನ್ನೇ ಅವರು ಹೇಳಿರುತ್ತಾರೆ. ಆದ್ದರಿಂದ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಲೇಬೇಕು. ಆ ಪ್ರಮಾಣ ವಚನಗಳನ್ನು ಉದಾಹರಿಸಿ ಅವುಗಳ ಅರ್ಥವನ್ನು ಈಗ ತಿಳಿಸುತ್ತೇವೆ.

........................ ಸ್ನಾನಪರ್ಯಾಪ್ತಿಸಿದ್ಧಯೇ |
(1) ಉದ್ವೃತೇತಿ ಮೃದಾ ಲಿಂಪೇದ್ದೇಹೇ ಕಕ್ಷಾದಿಕೇಷ್ವಥ ||
ಅಂಸಜಾನುಷು ಪೃಷ್ಠೇ ಚ ನಮೇತ್ಕೃಷ್ಣರಮಾಗುರೂನ್ |
ತೀರ್ಥಾನ್ಯಾವಾಹಯೇಚ್ಚೈವ ನಿತ್ಯಂ ನಾಭಿಜಲೇ ಸ್ಥಿತಃ || (ಯೋಗದೀಪಿಕಾ)

"ದೇಹದಲ್ಲಿ ಎಲ್ಲಾ ಭಾಗಗಳು, ಕಂಕುಳಪ್ರದೇಶ ಹೆಗಲು ಮೊಣಕಾಲುಗಳು, ಬೆನ್ನು ಮುಂತಾದ ಪ್ರದೇಶಗಳಲ್ಲಿ ಮೃತ್ತಿಕೆಯಿಂದ ಲೇಪನ ಮಾಡಬೇಕು. ಹೊಕ್ಕಳಿನವರೆಗಿನ ನೀರನಲ್ಲಿ ನಿಂತು ಶ್ರೀಕೃಷ್ಣದೇವನನ್ನೂ, ರಮಾದೇವಿಯರನ್ನೂ, ಗುರುಗಳನ್ನೂ ನಮಸ್ಕರಿಸಬೇಕು. ಸ್ನಾನ ಮಾಡುವ ನೀರಿನಲ್ಲಿ ಎಲ್ಲಾ ತೀರ್ಥಾಭಿಮಾನಿದೇವತೆಗಳನ್ನೂ ಆವಾಹನೆ ಮಾಡಿ ಅವರ ಅನುಮತಿಯನ್ನು ಪಡೆದು ಸ್ನಾನ ಮಾಡಬೇಕು. ಹೀಗೆ ಮಾಡಿದರೆ ಸ್ನಾನದ ಪೂರ್ಣ ಫಲವು ಬರುತ್ತದೆ." ಈ ಯೋಗದೀಪಿಕಾವಚನವು ಪ್ರಾತಃಕಾಲಸ್ನಾನದ ಪ್ರಕರಣದಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಈ ವಚನದಿಂದ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವು ಇದೆಯೆಂದು ಸಿದ್ಧವಾಗುತ್ತದೆ.

(2) ಉನ್ಮೃಜ್ಯಾಂಗಾನಿ ಚಾಚಾಂತ ಅಪ್ಯಮಂತ್ರೈಶ್ಚ ಪ್ರೋಕ್ಷಿತಃ |
ಪೂರ್ವವನ್ಮೃದ ಆಲಿಪ್ಯ ತಥಾ ಮಜ್ಜೇದೃತಂ ಜಪನ್ || (ಭರದ್ವಾಜಸ್ಮೃತಿ)

"ದೇಹವನ್ನು ಚೆನ್ನಾಗಿ ಮಣ್ಣಿನಿಂದ ತೊಳೆದುಕೊಳ್ಳಬೇಕು. ಆಚಮನವನ್ನು ಮಾಡಬೇಕು. "ಆಪೋ ಹಿ ಷ್ಠಾ ಮಯೋಭುವಃ" ಮುಂತಾದ ಅಪ್ ಎಂಬ ಹೆಸರುಳ್ಳ ನಾರಾಯಣನ ಮಹಿಮೆಯನ್ನು ಹೇಳುವ ಮಂತ್ರಗಳಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಹಿಂದಿನಂತೆ ಮಣ್ಣನ್ನು ದೇಹದಲ್ಲಿ ಲೇಪನ ಮಾಡಿಕೊಳ್ಳಬೇಕು. "ಋತಂ ಚ ಸತ್ಯಂ ಚ" ಎಂಬ ಮಂತ್ರವನ್ನು ಹೇಳುತ್ತಾ ಮುಳುಗಬೇಕು." ಈ ಭರದ್ವಾಜಸ್ಮೃತಿಯಲ್ಲಿಯೂ ಪ್ರಾತಃಸ್ನಾನ ಪ್ರಕರಣದಲ್ಲಿ ಮೃತ್ತಿಕಾಸ್ನಾನವನ್ನು ಮಾಡಬೇಕೆಂದು ಹೇಳಲ್ಪಟ್ಟಿದೆ.

(3) ಮೃದಂ ನಿಮೃಜ್ಯ ಕಕ್ಷೇ ತು ಲಿಪ್ಯ ಪ್ರಕ್ಷಾಲಯೇತ್ತ್ರಿಶಃ |
ಮೃದಂ ತು ಶಿರಸಾಽರಭ್ಯ ಲಿಂಪೇತ್ಸರ್ವಶರೀರಕೇ ||
ಮೃದಂ ಗೃಹ್ಯ ಗುರೂನ್ನತ್ವಾ ಹರಿಂ ಚ ತದನುಜ್ಞಯಾ |
ಅವತೀರ್ಯ ಜಲಂ ದತ್ವಾ ಅಭಿಮುಖ್ಯಂ ಭಗೋದಯೇ || (ವಿಷ್ಣುತೀರ್ಥೀಯ)

"ಕಂಕುಳಿನಲ್ಲಿ ಮೃತ್ತಿಕೆಯನ್ನು ಲೇಪನ ಮಾಡಿ ಮೂರು ಸಲ ತೊಳೆಯಬೇಕು. ತಲೆಯನ್ನು ಆರಂಭಿಸಿ ಶರೀರದ ಎಲ್ಲಾ ಅವಯವಗಳಲ್ಲಿಯೂ ಮೃತ್ತಿಕೆಯನ್ನು ಲೇಪನ ಮಾಡಬೇಕು. ಮೃತ್ತಿಕೆಯನ್ನು ಕೈಯಲ್ಲಿ ತೆಗೆದುಕೊಂಡು ಶ್ರೀಹರಿಯನ್ನೂ,

ಗುರುಗಳನ್ನೂ ನಮಸ್ಕರಿಸಿ ಅವರಿಂದ ಅನುಮತಿಯನ್ನು ಪಡೆಯಬೇಕು. ನೀರಿನಲ್ಲಿ ಇಳಿದು ನೀರಿಗೂ, ಸೂರ್ಯನಿಗೂ, ಅಭಿಮುಖನಾಗಿ ನಿಂತು ಸೂರ್ಯೋದಯಕಾಲದಲ್ಲಿ ಈ ಮೃತ್ತಿಕಾಸ್ನಾನವನ್ನು ಮಾಡಬೇಕು."ಈ ವಿಷ್ಣುತೀರ್ಥಿಯವಚನದಲ್ಲಿ "ಭಗೋದಯೇ" ಅಂದರೆ ಸೂರ್ಯೋದಯಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಬೇಕೆಂದು ಹೇಳಿಯುತ್ತದೆ.

(4) ಉತ್ತೀರ್ಯ ಸಲಿಲಾತ್ತಸ್ಮಾದುಪವಿಶ್ಯ ತಟೇ ಶುಭೇ |
ತುಲಸೀಮೃದಮಾದಾಯ ಅಥವಾ ಶುದ್ಧಮೃತ್ತಿಕಾಮ್ ||
ದಕ್ಷಿಣೋರೌ ನಿವೇಶ್ಯಾಥ ತ್ರಿಭಾಗಾಂ ತಾಂ ತು ಕಾರಯೇತ್ |
ಮೂಲಮಂತ್ರೇಣ ಸಂಪ್ರೋಕ್ಷ್ಯ ಗಾಯತ್ರ್ಯಾ ಚಾಭಿಮಂತ್ರಯೇತ್ || (ಬ್ರಹ್ಮಾಂಡಪುರಾಣ)

"ನೀರಿನಿಂದ ಮೇಲೆ ಬರಬೇಕು. ನೀರಿನ ತೀರದಲ್ಲಿ ಪರಿಶುದ್ಧವಾದ ಪ್ರದೇಶದಲ್ಲಿ ಕುಳಿತುಕೊಳ್ಳಬೇಕು. ತುಳಸೀ ಮೃತ್ತಿಕೆ ಅಥವಾ ಶುದ್ಧವಾದ ಪ್ರದೇಶದಲ್ಲಿರುವ ಮಣ್ಣನ್ನು ತೆಗೆದುಕೊಳ್ಳಬೇಕು. ಬಲತೊಡೆಯಲ್ಲಿಟ್ಟುಕೊಂಡು ಆ ಮಣ್ಣನ್ನು ಮೂರು ಭಾಗ ಮಾಡಬೇಕು. "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ಆ ಮೃತ್ತಿಕೆಯನ್ನು ಪ್ರೋಕ್ಷಿಸಬೇಕು. "ಗಾಯತ್ರೀ" ಮಂತ್ರದಿಂದ ಶಕ್ತ್ಯನುಸಾರವಾಗಿ ಜಪಿಸಬೇಕು. ಆ ಮೇಲೆ ಆ ಮೃತ್ತಿಕೆಯನ್ನು ಲೇಪನ ಮಾಡಿಕೊಂಡು ಸ್ನಾನ ಮಾಡಬೇಕು." ಇದು ಬ್ರಹ್ಮಾಂಡಪುರಾಣದಲ್ಲಿ ಪಿನಾಕಿನೀಮಾಹಾತ್ಮ್ಯದಲ್ಲಿ ಪ್ರಾತಃಸ್ನಾನಪ್ರಕರಣದಲ್ಲಿ ಎಂಟನೆಯ ಅಧ್ಯಾಯದಲ್ಲಿ ಹೇಳಿರುವುದು. ಆದ್ದರಿಂದ ಈ ವಾಕ್ಯವೂ ಪ್ರಾತಃಕಾಲದಲ್ಲಿ ಮೃತ್ತಿಕಾ ಸ್ನಾನವನ್ನು ಮಾಡಬೇಕೆಂದೂ ಹೇಳುತ್ತದೆ.

(5) ತೃತೀಯಾಂಶಂ ಸಮಾದಾಯ ಸಲಿಲೇ ಸ್ನಾನಮಾಚರೇತ್ |
ಗಲೇ ತಾಂ ಮೃತ್ತಿಕಾಂ ನ್ಯಸ್ಯ ತ್ರಿಭಾಗಾಂ ತಾಂ ತು ಕಾರಯೇತ್ ||
ಅಂಶೇನೈಕೇನ ಪುಂಡ್ರಾಣಿ ................................ | (ಬ್ರಹ್ಮಾಂಡಪುರಾಣ)

"ಸ್ನಾನಕ್ಕಾಗಿ ತೆಗೆದುಕೊಂಡು ಹೋಗಿರುವ ಮೃತ್ತಿಕೆಯನ್ನು ಕುತ್ತಿಗೆಯಲ್ಲಿಟ್ಟು ಮೂರು ಭಾಗವಾಗಿ ವಿಂಗಡಿಸಬೇಕು. ಅದರಲ್ಲಿ ಒಂದು ಭಾಗವನ್ನು ತೆಗೆದುಕೊಂಡು ನೀರಿನಲ್ಲಿ ಮುಳುಗಬೇಕು. ಎರಡನೆಯ ಭಾಗವನ್ನು ದೇಹದಲ್ಲಿ ಹಚ್ಚಿಕೊಂಡು ಸ್ನಾನ ಮಾಡಬೇಕು. ಮೂರನೆಯ ಭಾಗದಿಂದ ಊರ್ಧ್ವಪುಂಡ್ರ ಅಂದರೆ ನಾಮವನ್ನು ಧರಿಸಬೇಕು." ಈ ವಾಕ್ಯವೂ ಬ್ರಹ್ಮಾಂಡಪುರಾಣದಲ್ಲಿ ಇನ್ನೊಂದು ಸಂದರ್ಭದಲ್ಲಿ ಪ್ರಾತಃಸ್ನಾನಪ್ರಕರಣದಲ್ಲಿ ಹೇಳಲ್ಪಟ್ಟಿದೆ.

(6) ಸ್ನಾನಂ ಕುರ್ಯಾದ್ವಿಧಾನೇನ ಧಾತ್ರೀಶ್ರೀತುಲಸೀಮೃದಾ |
ನಾರಾಯಣಾನುವಾಕೇನ ಕೃತ್ವಾ ತತ್ರಾಘಮರ್ಷಣಮ್ || (ಹಾರೀತವಚನ)

"ನೆಲ್ಲಿ ಅಥವಾ ತುಳಸೀಮೃತ್ತಿಕೆಯನ್ನು ವಿಧಿಪ್ರಕಾರದಿಂದ ದೇಹದಲ್ಲಿ ಲೇಪನ ಮಾಡಿಕೊಂಡು ನಾರಾಯಣೋಪನಿಷತ್ತಿನ ಪಾರಾಯಣದಿಂದಲೂ, ಅಘಮರ್ಷಣಸೂಕ್ತ ಪಠನದಿಂದಲೂ, ತನ್ನ ಪಾಪಗಳನ್ನು ಪರಿಹರಿಸುತ್ತಾ ಸ್ನಾನವನ್ನು ಮಾಡಬೇಕು." ಈ ಹಾರೀತವಚನವೂ ಪ್ರಾತಃಸ್ನಾನಪ್ರಕರಣದಲ್ಲಿ ಹೇಳಲ್ಪಟ್ಟಿದೆ.

(7) ತ್ರಿರ್ನಿಮಜ್ಜ್ಯ ಚ ಪಶ್ಚಾತ್ತು ಮೃತ್ತಿಕಾಸ್ನಾನಮಾಚರೇತ್ |
ತಥಾಽಽಮಲಕಪಿಷ್ಟೇನ ಗೋಮಯೇನ ಸಮಾಚರೇತ್ ||
ಪಿತ್ರ್ನ್ ಗುರೂನ್ ಸಮುದ್ದಿಶ್ಯ ಪ್ರತ್ಯೇಕಂ ಸ್ನಾನಮಾಚರೇತ್ |
ತತೋಽಘಮರ್ಷಣಂ ಸ್ನಾನಂ ಕುರ್ಯಾನ್ಮಂತ್ರಾದತಂದ್ರಿತಃ ||
ಶಾಲಗ್ರಾಮಶಿಲಾವಾರಿ ಶಿರಸಾ ಧಾರಯೇತ್ತತಃ | (ವಾಯುಪುರಾಣ)

"ಮೂರು ಸಲ ಮುಳುಗಿ ಸ್ನಾನವನ್ನು ಮಾಡಬೇಕು. ಅನಂತರದಲ್ಲಿ ಮೃತ್ತಿಕಾಸ್ನಾನವನ್ನು ಮಾಡಬೇಕು. ಅನಂತರದಲ್ಲಿ ನೆಲ್ಲಿಯನ್ನು ಅರೆದು ಪುಡಿ ಮಾಡಿ ಅದನ್ನು ದೇಹದಲ್ಲಿ ಲೇಪನ ಮಾಡಿಕೊಂಡು ಸ್ನಾನ ಮಾಡಬೇಕು. ಅನಂತರದಲ್ಲಿ ಗೋಮಯವನ್ನು ದೇಹದಲ್ಲಿ ಹಚ್ಚಿಕೊಂಡು ಸ್ನಾನ ಮಾಡಬೇಕು. ಪಿತೃಗಳನ್ನೂ, ಗುರುಗಳನ್ನೂ ಉದ್ದೇಶ ಮಾಡಿಕೊಂಡು ಅವರಿಗಾಗಿ ಒಬ್ಬೊಬ್ಬರಿಗೆ ಒಂದೊಂದರಂತೆ ಮುಳುಗಬೇಕು. ಆ ಮೇಲೆ ಅಘಮರ್ಷಣಸೂಕ್ತವನ್ನು ಜಪಿಸುತ್ತಾ ಸ್ನಾನ ಮಾಡಬೇಕು. ಆ ಮೇಲೆ ಶಾಲಿಗ್ರಾಮಕ್ಕೆ ಅಭಿಷೇಕ ಮಾಡಿದ ತೀರ್ಥವನ್ನು ತಲೆಯಲ್ಲಿ ಧರಿಸಬೇಕು." ಇದು ವಾಯುಪುರಾಣ ಮಾಘಮಾಸಮಾಹಾತ್ಮ್ಯ ಎರಡನೆಯ ಅಧ್ಯಾಯ ಪ್ರಾತಃಸ್ನಾನ ಪ್ರಕರಣದಲ್ಲಿ ಹೇಳಿರುವುದು.

(8) ನಾಭಿಮಾತ್ರೇ ಜಲೇ ಗತ್ವಾ ಸಚೈಲಂ ಸ್ನಾನಮಾಚರೇತ್ |
ತತಸ್ತೀರಂ ಸಮಾಸಾದ್ಯ ದೇಶಂ ಕಾಲಂ ಚ ಕೀರ್ತಯೇತ್ ||
ಗಾಯತ್ರ್ಯಾ ಮೃದಮಭ್ಯುಕ್ಷ್ಯ ಮಂತ್ರೈರೇಭಿಸ್ತು ಮಂತ್ರಯೇತ್ |
ಮಂತ್ರೇಣಾನೇನ ವಿಭಜೇತ್ತತ್ಸೂರ್ಯಂ ರೋದಸೀ ಇತಿ ||
ಏಕಂ ಭಾಗಂ ಕ್ಷಿಪೇತ್ತೀರ್ಥೇ ದಶದಿಕ್ಷು ದ್ವಿತೀಯಕಮ್ |
ತೃತೀಯಭಾಗಮಾದದ್ಯಾದಿದಂ ವಿಷ್ಣುರ್ವಿಚಕ್ರಮೇ ||
ಮಂತ್ರೈರೇಭಿಸ್ತು ಸರ್ವಾಂಗೇಷ್ವನುಲಿಂಪೇತ್ತದಾ ಮೃದಮ್ |
ಆದೌ ಮೂರ್ಧ್ನಿ ಮೃದಂ ಲಿಂಪೇತ್ಕ್ರಮೇಣಾಂತೇ ಚ ಪಾದಯೋಃ || (ವರಾಹಪುರಾಣ)

"ಹೊಕ್ಕಳಿನವರೆಗಿರುವ ನೀರಿನಲ್ಲಿ ನಿಲ್ಲಬೇಕು. ಉಟ್ಟ ಬಟ್ಟೆಯೊಡನೆ ಸ್ನಾನ ಮಾಡಬೇಕು. ನೀರಿನ ದಡಕ್ಕೆ ಬರಬೇಕು. ದೇಶಕಾಲ ಮುಂತಾದವುಗಳನ್ನು ಹೇಳಿ ಸಂಕಲ್ಪ ಮಾಡಬೇಕು. ಮೃತ್ತಿಕಾಸ್ನಾನಕ್ಕಾಗಿ ತಂದಿರುವ ಮಣ್ಣನ್ನು ಗಾಯತ್ರೀಮಂತ್ರದಿಂದ ಪ್ರೋಕ್ಷಣೆ ಮಾಡಬೇಕು. ಮುಂದೆ ಹೇಳತಕ್ಕ "ಸೂರ್ಯಶ್ಚ ಮಾ ಮನ್ಯುಶ್ಚ" "ದ್ಯಾವಾ ಪೃಥಿವೀ ಅಂತರಿಕ್ಷಂ" ಮುಂತಾದ ಮಂತ್ರಗಳಿಂದಲೂ "ಇದಂ ವಿಷ್ಣುರ್ವಿಚಕ್ರಮೇ" ಎಂಬ ಮಂತ್ರದಿಂದಲೂ ಮೃತ್ತಿಕೆಯನ್ನು ಜಪಿಸಬೇಕು. ಮೃತ್ತಿಕೆಯನ್ನು ಮೂರು ಭಾಗವಾಗಿ ವಿಂಗಡಿಸಬೇಕು. "ಸೂರ್ಯಶ್ಚ" "ದ್ಯಾವಾಪೃಥಿವೀ" ಎಂಬ ಎರಡು ಮಂತ್ರಗಳಿಂದ ಒಂದು ಭಾಗವನ್ನು ನೀರಿನಲ್ಲಿ ಹಾಕಬೇಕು. ಹತ್ತು ದಿಕ್ಕುಗಳಲ್ಲಿ ಎರಡನೆಯ ಭಾಗವನ್ನು ಹಾಕಬೇಕು. ಮೂರನೆಯ ಭಾಗವನ್ನು ಸ್ನಾನಕ್ಕಾಗಿ ಸ್ವೀಕರಿಸಬೇಕು. ಆ ಭಾಗವನ್ನು "ಇದಂ ವಿಷ್ಣುಃ" ಎಂಬ ಮಂತ್ರದಿಂದ ತಲೆಯನ್ನು ಆರಂಭಿಸಿ ಕಾಲಿನವರೆಗಿನ ದೇಹದ ಎಲ್ಲಾ ಭಾಗಗಳಿಗೂ ಹಚ್ಚಿ ಸ್ನಾನ ಮಾಡಬೇಕು." ಇದು ವರಾಹಪುರಾಣದಲ್ಲಿ ಚಾತುರ್ಮಾಸಮಾಹಾತ್ಮ್ಯದಲ್ಲಿ ಪ್ರಾತಸ್ನಾನ ಪ್ರಕರಣದಲ್ಲಿರುವ ವಾಕ್ಯ.

ಮೇಲ್ಕಂಡ ಎಲ್ಲಾ ವಾಕ್ಯಗಳಲ್ಲಿಯೂ, ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನ ವನ್ನು ಮಾಡಬೇಕೆಂದು ಅರ್ಥಾಂತರಕ್ಕೆ ಅವಕಾಶವಿಲ್ಲದಂತೆ ಅತಿಸ್ಪಷ್ಟವಾಗಿ ಹೇಳಿರುವುದರಿಂದ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಲೇಬೇಕೆಂದು ಸಿದ್ಧವಾಗುತ್ತದೆ. ಆದ್ದರಿಂದ ಶ್ರೀಮಧ್ವಾಚಾರ್ಯರು ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನ ಮಾಡಬೇಕೆಂದು ಹೇಳಿರುವುದು ಅತ್ಯಂತ ಯುಕ್ತವಾಗಿದೆ.

### ಮೃತ್ತಿಕಾಸ್ನಾನವನ್ನು ತುಳಸೀಮೃತ್ತಿಕೆಯಿಂದಲೇ ಮಾಡಬೇಕು

ಲಲಾಟೇ ಧಾರಯೇದ್ಯಸ್ತು ತುಳಸೀಮೂಲಮೃತ್ತಿಕಾಮ್ |
ದಶಾಶ್ವಮೇಧಮಾಪ್ನೋತಿ ಸ್ನಾನಕಾಲೇ ಶತಾಧಿಕಮ್ || (ವಿಷ್ಣುಧರ್ಮೋತ್ತರವಚನ)

"ಹಣೆಯಲ್ಲಿ ತುಳಸಿಯ ಮೂಲಮೃತ್ತಿಕೆಯನ್ನು ಧರಿಸಿದವನು ಹತ್ತು ಅಶ್ವಮೇಧಯಾಗಗಳ ಫಲವನ್ನೂ, ಸ್ನಾನಕಾಲದಲ್ಲಿ

ಮೃತ್ತಿಕಾಸ್ನಾನಕ್ಕಾಗಿ ಉಪಯೋಗಿಸುವವನು ನೂರಕ್ಕಿಂತಲೂ ಅಧಿಕವಾದ ಅಶ್ವಮೇಧಯಾಗಗಳ ಫಲವನ್ನೂ ಪಡೆಯುವನು." ಇದು ವಿಷ್ಣುಧರ್ಮೋತ್ತರ ಪುರಾಣದ ವಚನ.

ನದ್ಯಾಂ ತಟಾಕೇ ಖಾತೇ ವಾ ತಥಾ ಪ್ರಸ್ರವಣೇ ಜಲೇ |
ತುಲಸೀಮೃತ್ತಿಕಾಂ ಗೃಹ್ಯ ಸ್ನಾಯಾನ್ಮಂತ್ರೇಣ ಸಂಯುತಃ || (ಹಾರೀತವಚನ)

"ನದೀ, ತಟಾಕ, ಖಾತ, ಪ್ರಸ್ರವಣ ಮುಂತಾದವುಗಳ ಲಕ್ಷಣವನ್ನು ಹಿಂದೆ ಹೇಳಿರುತ್ತೇವೆ. ಅವುಗಳ ನೀರನಲ್ಲಿ ಸ್ನಾನವನ್ನು ಮಾಡುವಾಗ ತುಳಸೀಮೃತ್ತಿಕೆಯನ್ನು "ಉದ್ಧೃತಾಸಿ ವರಾಹೇಣ" ಮುಂತಾದ ಮಂತ್ರಗಳಿಂದ ಉಪಯೋಗಿಸಬೇಕು." ಇದು ಹಾರೀತರ ವಚನ.

ನದ್ಯಾಂ ತು ವಿಮಲೇ ತೋಯೇ ಸಕೃದುನ್ಮಜ್ಜ್ಯ ವಾಗ್ಯತಃ |
ಆದಾಯ ತುಲಸೀಮೂಲಮೃತ್ತಿಕಾಂ ಮಂತ್ರಸಂಯುತಾಮ್ ||
ಮಂತ್ರೇಣೈವಾಭಿಮಂತ್ರ್ಯಾಥ ಸರ್ವಾಂಗೇಷ್ವಭಿಲೇಪನಮ್ |
ಕೃತ್ವಾಽಪ್ಸು ಸಕೃದುನ್ಮಜ್ಜ್ಯ ಪಶ್ಚಾದಾಚಮನಂ ಚರೇತ್ ||
ಮಂತ್ರೇಣಾಽವಾಹಯೇತ್ತತ್ರ ಪುರುಷಂ ಜಲಶಾಯಿನಮ್ |
ಪ್ರಾಣಾಯಾಮತ್ರಯಂ ಕೃತ್ವಾ ಪಶ್ಚಾದಪ್ಸು ನಿಮಜ್ಜಯೇತ್ || (ಅತ್ರಿವಚನ)

"ನದೀತೀರಕ್ಕೆ ಹೋಗಬೇಕು. ನಿರ್ಮಲವಾದ ನದೀಜಲದಲ್ಲಿ ಒಮ್ಮೆ ಮುಳುಗಬೇಕು. ಮೌನದಿಂದ ಮೇಲೆ ಬರಬೇಕು. ನಾರಾಯಣಾಷ್ಟಾಕ್ಷರ ಮುಂತಾದ ಮಂತ್ರಗಳನ್ನು ಜಪಿಸುತ್ತಾ ತುಳಸಿಯ ಮೂಲಮೃತ್ತಿಕೆಯನ್ನು ಕೈಯಲ್ಲಿ ಧರಿಸಬೇಕು. "ಉದ್ಧೃತಾಸಿ ವರಾಹೇಣ" ಮುಂತಾದ ಮಂತ್ರಗಳಿಂದ ಮೃತ್ತಿಕೆಯನ್ನು ಜಪಿಸಬೇಕು. ಶರೀರದ ಎಲ್ಲಾ ಭಾಗಗಳಲ್ಲಿಯೂ ಹಚ್ಚಿಕೊಳ್ಳಬೇಕು. ನೀರಿನಲ್ಲಿ ಇನ್ನೊಮ್ಮೆ ಮುಳುಗಬೇಕು. ಆಚಮನವನ್ನು ಮಾಡಬೇಕು. ನೀರಿನಲ್ಲಿ ವಾಸಿಸುತ್ತಿರುವ ಪುರುಷ ಎಂಬ ಹೆಸರುಳ್ಳ ಶ್ರೀಹರಿಯನ್ನು ಪುರುಷಸೂಕ್ತ ಮುಂತಾದ ಮಂತ್ರಗಳಿಂದ ನೀರಿನಲ್ಲಿ ಆವಾಹನೆ ಮಾಡಬೇಕು. ಮೂರು ಸಲ ಪ್ರಾಣಾಯಮವನ್ನು ಮಾಡಬೇಕು. ಆಮೇಲೆ ಸ್ನಾನವನ್ನು ಮಾಡಬೇಕು." ಇದು ಅತ್ರಿವಚನ.

ತುಲಸೀಮೃತ್ತಿಕಾಂ ಧಾತ್ರೀಮುಪಲಿಪ್ಯ ಕಲೇವರೇ |
ಅಭಿಮಂತ್ರ್ಯ ಜಲಂ ಪಶ್ಚಾನ್ಮೂಲಮಂತ್ರೇಣ ವೈಷ್ಣವಃ ||

"ತುಳಸಿಯ ಮೂಲಮೃತ್ತಿಕೆ ಅಥವಾ ನೆಲ್ಲಿಗಿಡದ ಮೂಲಮೃತ್ತಿಕೆ ಇವುಗಳನ್ನು ಶರೀರದಲ್ಲಿ ಲೇಪನ ಮಾಡಿಕೊಳ್ಳಬೇಕು. ಮೂಲಮಂತ್ರ ಅಂದರೆ ನಾರಾಯಣಾಷ್ಟಕ್ಷರ ಮಂತ್ರದಿಂದ ನೀರನ್ನು ಅಭಿಮಂತ್ರಣ ಮಾಡಬೇಕು. ಆ ಮೇಲೆ ವಿಷ್ಣುಭಕ್ತನು ಸ್ನಾನ ಮಾಡಬೇಕು. ಹೀಗೆ ಮಾಡುವವನು ವಿಷ್ಣುಭಕ್ತಿಯನ್ನು ಹೆಚ್ಚಿಸಿಕೊಳ್ಳುವನು."

## ತ್ಯಾಜ್ಯವಾದ ಮೃತ್ತಿಕೆ

ಮೃತ್ತಿಕಾಃ ಸಪ್ತ ನ ಗ್ರಾಹ್ಯಾ ವಲ್ಮೀಕೇ ಮೂಷಕಸ್ಥಲೇ |
ಅಂತರ್ಜಲೇಷು ಸ್ನಾನೇ ಚ ವೃಕ್ಷಮೂಲೇ ಸುರಾಲಯೇ ||
ಪರಸ್ನಾನಾವಶಿಷ್ಟೇ ಚ ಶ್ರೇಯಸ್ಕಾಮೈಃ ಸದಾ ಬುಧೈಃ || (ದಕ್ಷರ ವಚನ)

"(1) ಹುತ್ತ (2) ಇಲಿಯ ವಾಸಸ್ಥಳ (3) ನೀರಿನ ಮಧ್ಯ (4) ಜನರು ವಾಸಿಸುವ ಮನೆ (5) ಮರದ ಬುಡ (6) ದೇವಾಲಯ ಇವುಗಳಲ್ಲಿರುವ ಮೃತ್ತಿಕೆಯನ್ನೂ (7) ಇನ್ನೊಬ್ಬರು ಸ್ನಾನ ಮಾಡಿ ಉಳಿದಿಯವ ಮೃತ್ತಿಕೆಯನ್ನೂ ಶ್ರೇಯಸ್ಸನ್ನು ಬಯಸುವವನು ಮೃತ್ತಿಕಾಸ್ನಾನಕ್ಕೆ ಉಪಯೋಗಿಸಬಾರದು." ಇದು ದಕ್ಷರ ವಚನ.

## ಗ್ರಾಹ್ಯವಾದ ಮೃತ್ತಿಕೆ

ನದೀತೀರೇ ಶುಚೌ ದೇಶೇ ಆಹರೇನ್ಮೃತ್ತಿಕಾಂ ಕುಶಾನ್ ॥ (ಶೌನಕರ ವಚನ)

"ನದೀತೀರ ಮುಂತಾದ ಪರಿಶುದ್ಧವಾದ ಪ್ರದೇಶಗಳಿಂದ ಮೃತ್ತಿಕೆಯನ್ನೂ, ದರ್ಭೆಯನ್ನೂ ಸಂಗ್ರಹಿಸಬೇಕು." ಇದು ಶೌನಕರ ವಚನ.

## ಪ್ರಾತಃಸ್ನಾನಕಾಲ

ಸತತಂ ಪ್ರಾತರುತ್ಥಾಯ ದಂತಧಾವನಪೂರ್ವಕಮ್ ।
ಆಚರೇದುಷಸಿ ಸ್ನಾನಂ ತರ್ಪಯೇದ್ದೇವಮಾನುಷಾನ್ ॥ (ಜಾಬಾಲಿ ವಚನ)

"ಒಂದೊಂದು ದಿನದಲ್ಲಿಯೂ ಅರುಣೋದಯಕಾಲದಲ್ಲಿ ಏಳಬೇಕು. ಹಲ್ಲುಗಳನ್ನು ಉಜ್ಜಿಕೊಳ್ಳಬೇಕು. ಅರುಣೋದಯಕಾಲದಲ್ಲಿಯೇ ಸ್ನಾನ ಮಾಡಬೇಕು. ದೇವತರ್ಪಣ ಪಿತೃತರ್ಪಣಗಳನ್ನು ಮಾಡಬೇಕು." ಇದು ಜಾಬಾಲಿಯ ವಚನ.

ಉಷಸ್ಯುಷಸಿ ಯಃ ಸ್ನಾನಂ ಸಂಧ್ಯಾಯಾಮುದಿತೇಽಪಿ ವಾ ।
ಪ್ರಾಜಾಪತ್ಯೇನ ತತ್ತುಲ್ಯಂ ಸರ್ವಪಾಪಪ್ರಣಾಶನಮ್ ॥

"ಒಂದೊಂದು ದಿನದಲ್ಲಿಯೂ (1) ಅರುಣೋದಯಕಾಲ ಅಥವಾ (2) ಪ್ರಾತಃಸಂಧ್ಯಾಕಾಲ ಅಥವಾ (3) ಸೂರ್ಯೋದಯಾನಂತರಕಾಲ ಈ ಮೂರು ಕಾಲಗಳಲ್ಲಿ ಮಾಡುವ ಸ್ನಾನಗಳಿಂದ ಪ್ರಾಜಾಪತ್ಯಕೃಚ್ಛ್ರದ ಫಲವು ಬರುವುದಲ್ಲದೆ ಎಲ್ಲಾ ಪಾಪವೂ ದೂರವಾಗುತ್ತದೆ."

ಪ್ರಾತಃಸ್ನಾಯ್ಯರುಣಕರಗ್ರಸ್ತಾಂ ಪ್ರಾಚೀಮವಲೋಕ್ಯ ಸ್ನಾಯಾತ್ ॥ (ವಿಷ್ಣು ವಚನ)

"ಪ್ರಾತಃಸ್ನಾನವನ್ನು ಮಾಡುವವನು ಅರುಣನ ಕಿರಣಗಳಿಂದ ವ್ಯಾಪ್ತವಾದ ಪೂರ್ವದಿಕ್ಕನ್ನು ನೋಡುತ್ತಾ ಸ್ನಾನ ಮಾಡಬೇಕು." ಇದು ವಿಷ್ಣುವಿನ ವಚನ. ಮೇಲ್ಕಂಡ ಜಾಬಾಲಿವಚನ ಮುಂತಾದವುಗಳಲ್ಲಿ ಉಷಃಕಾಲದಲ್ಲಿ ಸ್ನಾನವನ್ನು ಮಾಡಬೇಕೆಂದು ಹೇಳಿರುತ್ತದೆ. ವಿಷ್ಣುವಚನದಲ್ಲಿ ಅರುಣೋದಯಕಾಲದಲ್ಲಿ ಪ್ರಾತಃಸ್ನಾನ ಮಾಡಬೇಕೆಂದು ಹೇಳಿರುತ್ತದೆ. ಈ ಎರಡು ವಿಧವಾದ ವಾಕ್ಯಗಳಿಗೂ ಒಂದೇ ವಿಧವಾದ ಅರ್ಥವನ್ನು ಹೇಳಬೇಕು. ಅದಕ್ಕಾಗಿ ಉಷಃಕಾಲವೂ ಅರುಣೋದಯಕಾಲವೂ ಒಂದೇ ಎಂದು ಹೇಳಬೇಕು.

ಅದು ಮಾತ್ರವಲ್ಲ. "ಆಸೂರ್ಯದರ್ಶನಾತ್ತಿಷ್ಠೇತ್" ಎಂಬ ವಾಕ್ಯದಲ್ಲಿ ಸೂರ್ಯದರ್ಶನವು ಏರ್ಪಡುವವರೆಗೆ ನಿಂತುಕೊಂಡು ಗಾಯತ್ರೀಮಂತ್ರವನ್ನು ಜಪಿಸಬೇಕೆಂದು ಹೇಳಿದೆ. "ಪೂರ್ವಾಂ ಸಂಧ್ಯಾಂ ಸನಕ್ಷತ್ರಾಂ" ಎಂಬ ವಚನದಲ್ಲಿ ನಕ್ಷತ್ರ ಇರುವಾಗಲೇ ಪ್ರಾತಃಕಾಲದ ಸಂಧ್ಯಾವಂದನವನ್ನು ಮಾಡಬೇಕೆಂದು ಹೇಳಿರುತ್ತದೆ. ಈ ಗಾಯತ್ರೀಜಪ ಮತ್ತು ಸಂಧ್ಯಾವಂದನವನ್ನು ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿದ ಮೇಲೆಯೇ ಮಾಡಬೇಕು. ಆದ್ದರಿಂದ ಗಾಯತ್ರೀಜಪ ಮತ್ತು ಸಂಧ್ಯಾವಂದನಗಳಿಗೆ ವಿಹಿತವಾದ ಕಾಲಕ್ಕಿಂತ ಪೂರ್ವದಲ್ಲಿಯೇ ಅರುಣೋದಯ ಕಾಲದಲ್ಲಿ ಪ್ರಾತಃಸ್ನಾನವನ್ನು ಮಾಡಬೇಕೆಂದು ಸಿದ್ಧವಾಗುತ್ತದೆ." ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

ಚತಸ್ರೋ ಘಟಿಕಾಃ ಪ್ರಾತರರುಣೋದಯ ಉಚ್ಯತೇ ।
ಯತೀನಾಂ ಸ್ನಾನಕಾಲೋಽಯಂ ಗಂಗಾಂಭಃ ಸದೃಶಃ ಸ್ಮೃತಃ ॥ (ಶ್ರೀಮಧ್ವಾಚಾರ್ಯರ ವಚನ)

"ಸೂರ್ಯೋದಯಕ್ಕಿಂತ ಹಿಂದಿನ ನಾಲ್ಕು ಗಳಿಗೆಗಳು ಅರುಣೋದಯ ಕಾಲವೆನಿಸುತ್ತವೆ. ಈ ಅರುಣೋದಯ ಕಾಲವು ಯತಿಗಳ ಸ್ನಾನಕಾಲವೆನಿಸುತ್ತದೆ. ಈ ಸಮಯದಲ್ಲಿ ಎಲ್ಲಾ ಜಲವೂ ಗಂಗಾಜಲಕ್ಕೆ ಸಮವಾಗಿರುತ್ತದೆ." ಇದು ಶ್ರೀಮಧ್ವಾಚಾರ್ಯರ ವಚನ.

## ಪ್ರಾತಃಸ್ನಾನದಲ್ಲಿ ಕೆಲವರ ಅಭಿಪ್ರಾಯ

ಉತ್ತಮಾ ತು ಸನಕ್ಷತ್ರಾ ಮಧ್ಯಮಾ ಲುಪ್ತತಾರಕಾ |
ಅಧಮಾ ಸೂರ್ಯಸಹಿತಾ ಪ್ರಾತಃಸಂಧ್ಯಾ ತ್ರಿಧಾ ಮತಾ ||
ನ ಪ್ರಾತರ್ನ ಪ್ರದೋಷಾಚ್ಚ ಸಂಧ್ಯಾಕಾಲೋಽವಪದ್ಯತೇ |
ಮುಖ್ಯಕಲ್ಪೋಽನುಕಲ್ಪಃ ಸ್ಯಾತ್ಸರ್ವಸ್ಮಿನ್ಕರ್ಮಣಿ ಸ್ಮೃತಃ ||

ಈ ಎರಡು ಶ್ಲೋಕಗಳು ಪ್ರತ್ಯೇಕ ಪ್ರಮಾಣಗಳಾಗಿವೆ. "ನಕ್ಷತ್ರ ಸಹಿತವಾದ ಕಾಲದಲ್ಲಿ ಮಾಡುವ ಸಂಧ್ಯಾವಂದನವು ಉತ್ತಮವೆನಿಸುತ್ತದೆ. ನಕ್ಷತ್ರಗಳು ಹೋದ ಮೇಲೆ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಮಾತುವ ಸಂಧ್ಯಾವಂದನವು ಮಧ್ಯಮವೆನಿಸುತ್ತದೆ. ಸೂರ್ಯೋದಯವಾದ ಮೇಲೆ ಮಾಡುವ ಸಂಧ್ಯಾವಂದನವು ಅಧಮವೆನಿಸುತ್ತದೆ." ಇದು ಮೊದಲನೆಯ ಪ್ರಮಾಣದ ಅರ್ಥವಾಗಿದೆ. "ಬೆಳಿಗ್ಗೆ ಸೂರ್ಯೋದಯಾನಂತರದಲ್ಲಿ ಆರು ಗಳಿಗೆಗಳವರೆಗೂ ಸಾಯಂಕಾಲದಲ್ಲಿ ಸೂಯಾಸ್ತಮಾನವಾದ ಮೇಲೆ ಆರು ಗಳಿಗೆಗಳವರೆಗೂ ಸಂಧ್ಯಾವಂದನವನ್ನು ಮಾಡಬಹುದು. ಇದರಿಂದ ಸರಿಯಾದ ಕಾಲದಲ್ಲಿ ಸಂಧ್ಯಾವಂದನವನ್ನು ಮಾಡದಿರುವುದರಿಂದ ದೋಷವು ಬರುವುದಿಲ್ಲ. ಅರುಣೋದಯಕಾಲ ಮುಂತಾದ ಕಾಲಗಳು ಉತ್ತಮವಾಗಿವೆ. ಪ್ರಾತಃಕಾಲ ಮುಂತಾದ ಕಾಲಗಳು ಮಧ್ಯಮವೆನಿಸುತ್ತವೆ." ಇದು ಎರಡನೆಯ ಪ್ರಮಾಣದ ಅರ್ಥ.

ಈ ಎರಡು ವಚನಗಳಿಂದ ಸೂರ್ಯೋದಯಾನಂತರದಲ್ಲಿಯೂ ಪ್ರಾತಃಸ್ನಾನ ಮತ್ತು ಪ್ರಾತಃಸಂಧ್ಯಾವಂದನ ಮುಂತಾದವುಗಳನ್ನು ಮಾಡಬಹುದೆಂದು ಕೆಲವರು ಹೇಳುತ್ತಾರೆ. ಆದರೆ ಇದು ಸರಿಯಲ್ಲ ಎಂದು ತೋರುತ್ತಿದೆ ಎಂದು ಹೇಳಿ ಸ್ಮೃತಿಮುಕ್ತಾವಲೀಕಾರರು ಅದಕ್ಕೆ ಕಾರಣವನ್ನು ಹೇಳಿರುತ್ತಾರೆ. ಅದನ್ನು ಈಗ ಸ್ಪಷ್ಟಪಡಿಸುತ್ತೇನೆ.

ಅಹೋರಾತ್ರಸ್ಯ ಯಾ ಸಂಧಿಃ ಸೂರ್ಯನಕ್ಷತ್ರವರ್ಜಿತಾ |
ಸಾ ತು ಸಂಧ್ಯಾ ಸಮಾಖ್ಯಾತಾ ಮುನಿಭಿಸ್ತತ್ತ್ವದರ್ಶಿಭಿಃ ||
ಸಂಧೌ ಸಂಧ್ಯಾಮುಪಾಸೀತ ನಾಸ್ತಗೇ ನೋದಿತೇ ರವೌ |
ಉದಯಾತ್ಪ್ರಾಕ್ತನೀ ಸಂಧ್ಯಾ ಘಟಿಕಾತ್ರಯಮಿಷ್ಯತೇ ||
ರಾತ್ರೌ ತು ಯಾಮನಾಡೀ ದ್ವೇ ಸಂಧ್ಯಾಯಾಃ ಕಾಲ ಉಚ್ಯತೇ |
ದರ್ಶನಾದ್ರವಿರೇಖಾಯಾಸ್ತದಂತೋ ಮುನಿಭಿಃ ಸ್ಮೃತಃ ||
ಸಂಧ್ಯಾ ಮುಹೂರ್ತಮಾತ್ರಾ ಚೇತ್ ಕ್ಷಯವೃದ್ಧೀ ನ ಕಾರಣಮ್ |

"ಹಗಲು ಮತ್ತು ರಾತ್ರಿಗಳ ಸಂಧಿಕಾಲವೇ ಸಂಧ್ಯಾಕಾಲವೆನಿಸುತ್ತದೆ. ಈ ಸಂಧ್ಯಾಕಾಲವು ಪ್ರಾತಃಸಂಧ್ಯಾಕಾಲ ಮತ್ತು ಸಾಯಂಸಂಧ್ಯಾಕಾಲ ಎಂದು ಎರಡು ವಿಧವಾಗಿದೆ. ಇವುಗಳಲ್ಲಿ ಪ್ರಾತಃಕಾಲದಲ್ಲಿ ಸೂರ್ಯೋದಯಕ್ಕಿಂತ ಪೂರ್ವಕಾಲವೂ ಸಾಯಂಕಾಲದಲ್ಲಿ ನಕ್ಷತ್ರೋದಯಕ್ಕಿಂತ ಪೂರ್ವಕಾಲವೂ ಸಂಧ್ಯಾಕಾಲವೆಂದು ತತ್ತ್ವಜ್ಞಾನಿಗಳಾದ ಮುನಿಗಳು ಹೇಳಿರುವರು. ಈ ಸಂಧ್ಯಾಕಾಲದಲ್ಲಿಯೂ ಸೂರ್ಯೋದಯಕ್ಕಿಂತ ಹಿಂದಿನ ಮೂರು ಗಳಿಗೆಗಳು ಪ್ರಾತಃಸಂಧ್ಯಾವಂದನೆಯನ್ನು ಮಾಡುವುದಕ್ಕೆ ಯೋಗ್ಯಕಾಲವೆಂದು ಹೇಳಲ್ಪಡುತ್ತದೆ. ರಾತ್ರಿಯಲ್ಲಿ ಸೂರ್ಯಾಸ್ತಮಾನವು ಮುಗಿದ ಮೇಲೆ ಎರಡು ಗಳಿಗೆಗಳವರೆಗೆ ಸಾಯಂಸಂಧ್ಯಾಕಾಲವೆನಿಸುತ್ತದೆ. ಈ ಸಂಧ್ಯಾಕಾಲದಲ್ಲಿಯೇ ಸಂಧ್ಯಾವಂದನವನ್ನು ಮಾಡಬೇಕು. ಸೂರ್ಯೋದಯಾನಂತರದಲ್ಲಿ ಪ್ರಾತಃಸಂಧ್ಯಾವಂದನವನ್ನೂ, ಸೂರ್ಯಾಸ್ತಮಯವಾದ ಮೇಲೆ ಎರಡು ಗಳಿಗೆಗಳನ್ನು ಬಿಟ್ಟು ಅನಂತರಕಾಲದಲ್ಲಿ ಸಾಯಂಸಂಧ್ಯಾವಂದನವನ್ನೂ ಮಾಡಕೂಡದು. ಸೂರ್ಯಬಿಂಬದರ್ಶನಕ್ಕಿಂತ ಪೂರ್ವದಲ್ಲಿಯೇ ಮುಗಿಸಬೇಕು. ಇದು ಉತ್ತಮಕಲ್ಪ. ಸೂರ್ಯಾಸ್ತಮಾನವಾದ ಮೇಲೆ ಎರಡು ಗಳಿಗೆಗಳೊಳಗೆ ಸಾಯಂಕಾಲಿಕಸಂಧ್ಯಾವಂದನವನ್ನು ಮಾಡುವುದು ಮಧ್ಯಮಕಲ್ಪವೆನಿಸುತ್ತದೆ.

ಆದರೆ ಕೆಲವರು ಸೂರ್ಯೋದಯಾನಂತರದಲ್ಲಿಯೇ ಸೂರ್ಯಾರ್ಘ್ಯಪ್ರದಾನವನ್ನು ಮಾಡಬೇಕೆಂದು ಹೇಳುವರು. ಅದು ಸರಿಯಲ್ಲ. "ಗಾಯತ್ರ್ಯಾ ಚಾಂಜಲಿಂ ದತ್ವಾ" ಎಂದರೆ ಗಾಯತ್ರೀಮಂತ್ರದಿಂದ ಸೂರ್ಯಾರ್ಘ್ಯವನ್ನು ಕೊಟ್ಟು "ಆಸೂರ್ಯದರ್ಶನಾತ್ತಿಷ್ಠೇತ್" ಎಂದರೆ ಸೂರ್ಯದರ್ಶನವಾಗುವವರೆಗೆ ನಿಂತುಕೊಂಡೇ ಜಪವನ್ನು ಮಾಡಬೇಕೆಂದು ಶ್ರೀಮಧ್ವಾಚಾರ್ಯರು ಹೇಳಿರುತ್ತಾರೆ. ಇದರಿಂದ ಸೂರ್ಯೋದಯಕ್ಕಿಂತ ಪೂರ್ವದಲ್ಲಿಯೇ ಸೂರ್ಯಾರ್ಘ್ಯವನ್ನು ಕೊಡಬೇಕೆಂದು ಹೇಳಿದಂತಾಯಿತು. ಆದ್ದರಿಂದ ಸೂರ್ಯೋದಯಾನಂತರದಲ್ಲಿ ಸೂರ್ಯಾರ್ಘ್ಯವನ್ನು ಕೊಡಬೇಕೆಂಬ ಅಭಿಪ್ರಾಯವು ಆಚಾರ್ಯರಿಗೆ ಸಮ್ಮತವಲ್ಲ. ಆಚಾರ್ಯರಿಗೆ ಸಮ್ಮತವಲ್ಲದಿರುವ ಈ ಪಕ್ಷವು ಗ್ರಾಹ್ಯವಲ್ಲ.

ಸೂರ್ಯೋದಯಾನಂತರದಲ್ಲಿಯೂ ಪ್ರಾತಃಸಂಧ್ಯಾವಂದನವನ್ನು ಮಾಡಬಹುದು ಎಂದು ಹೇಳುವ ಕೆಲವು ಸ್ಮೃತಿವಚನಗಳಿವೆ. ಅವುಗಳಿಗೆ ಸೂರ್ಯೋದಯಾನಂತರದಲ್ಲಿ ಸೂರ್ಯಾರ್ಘ್ಯವನ್ನು ಕೊಡಬೇಕೆಂದು ಅಭಿಪ್ರಾಯವಲ್ಲ. ಸಂಧ್ಯಾವಂದನದಲ್ಲಿ ಗೌಣಕಾಲವನ್ನು ಆ ಸ್ಮೃತಿವಚನಗಳು ತಿಳಿಸುತ್ತವೆ. ಈ ಗೌಣಕಾಲವು ಸೂರ್ಯೋಪಸ್ಥಾನಕ್ಕಾಗಿ ಹೇಳಲ್ಪಟ್ಟಿದೆ. ಗಾಯತ್ರೀಮಂತ್ರವನ್ನು ಒಂದು ಸಾವಿರ ಸಂಖ್ಯೆವರೆಗೆ ಜಪ ಮಾಡುವವರು ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಈ ಸಂಖ್ಯೆಯಷ್ಟು ಜಪವನ್ನು ಮುಗಿಸಿ ಸೂರ್ಯೋಪಸ್ಥಾನವನ್ನು ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸಹಸ್ರ ಸಂಖ್ಯಾಜಪವನ್ನು ಮುಗಿಸಿ ಸೂರ್ಯೋದಯಾನಂತರದಲ್ಲಿ ಸೂರ್ಯೋಪಸ್ಥಾನವನ್ನು ಮಾಡುವುದಕ್ಕಾಗಿ ಅವರಿಗಾಗಿ ಈ ಗೌಣಕಾಲವು ಹೇಳಲ್ಪಟ್ಟಿದೆ. ಇದೇ ವಿಷಯದಲ್ಲಿ ಕೆಳಗಿನ ವಾಕ್ಯಗಳು ಆಧಾರವಾಗಿವೆ.

"ಉದ್ಯಂತಮಸ್ತಂ ಯಂತಮಾದಿತ್ಯಮಭಿಧ್ಯಾಯನ್ಕುರ್ವನ್ ಬ್ರಾಹ್ಮಣೋ ವಿದ್ವಾನ್ ಸಕಲಂ ಭದ್ರಮಶ್ನುತೇ |"

ಅಥೋಪತಿಷ್ಠೇದಾದಿತ್ಯಮುದಯಂತಂ ದಿವಾಕರಮ್ ||

"ಸೂರ್ಯನು ಉದಯಿಸುತ್ತಿರುವ ಕಾಲದಲ್ಲಿಯೂ, ಸೂರ್ಯಾಸ್ತಮಾನವಾಗುತ್ತಿರುವ ಕಾಲದಲ್ಲಿಯೂ, ಸೂರ್ಯಾಂತರ್ಯಾಮಿಯಾದ ನಾರಾಯಣನನ್ನು ಧ್ಯಾನಿಸುತ್ತಾ ಜಪಿಸುತ್ತಿರುವ ಬ್ರಾಹ್ಮಣನು ಎಲ್ಲಾ ವಿಧವಾದ ಮಂಗಲವನ್ನೂ ಪಡೆಯುವನು." ಇದು ಮೊದಲನೆಯ ವಾಕ್ಯದ ಅಭಿಪ್ರಾಯವಾಗಿದೆ. ಈ ಎರಡು ವಾಕ್ಯಗಳಲ್ಲಿ ಸೂರ್ಯೋದಯಕಾಲದಲ್ಲಿ ಮತ್ತು ಅಷ್ಟರವರೆಗೆ ಜಪವನ್ನೂ, ಅನಂತರದಲ್ಲಿ ಸೂರ್ಯೋಪಸ್ಥಾನವನ್ನೂ, ಮಾಡಬೇಕೆಂದು ಹೇಳಿರುತ್ತದೆ. ಆದ್ದರಿಂದ ಮೇಲ್ಕಂಡ ಅಭಿಪ್ರಾಯವು ಸಿದ್ಧವಾಗುತ್ತದೆ.

## ಈ ವಿಷಯದಲ್ಲಿ ಅಭಿಪ್ರಾಯಾಂತರ

ಆಪತ್ಕಾಲದಲ್ಲಿ ಸಂಧ್ಯಾವಂದನವನ್ನು ಮುಖ್ಯ ಕಾಲದಲ್ಲಿ ಮಾಡಲು ಸಾಧ್ಯವಾಗದಿರುವಾಗ, ಸೂರ್ಯೋದಯ ಮತ್ತು ಸೂರ್ಯಾಸ್ತಮಾನಕ್ಕೆ ಅನಂತರದಲ್ಲಿರುವ ಗೌಣಕಾಲವು ಹೇಳಲ್ಪಟ್ಟಿದೆ. ಈ ಗೌಣಕಾಲದಲ್ಲಿ ರಾಷ್ಟ್ರಕ್ಷೋಭ ಮುಂತಾದ ಆಪತ್ಕಾಲಗಳಲ್ಲಿಯೇ ಮಾಡಬೇಕು. ಈ ಆಪತ್ತುಗಳು ಮುಗಿದ ಮೇಲೆ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಪ್ರಾತಃ ಸಂಧ್ಯಾವಂದನವನ್ನೂ, ಸೂರ್ಯಾಸ್ತಮಾನಕ್ಕಿಂತ ಪೂರ್ವದಲ್ಲಿ ಸಾಯಂಕಾಲಿಕ ಸಂಧ್ಯಾವಂದನವನ್ನೂ, ಮುಖ್ಯಕಾಲದಲ್ಲಿಯೇ ಮಾಡಬೇಕು. ಆಪತ್ತಿಲ್ಲದಿರುವಾಗ ಮುಖ್ಯಕಾಲದಲ್ಲಿ ಮಾಡದಿರುವವನು ಮುಖ್ಯಕಾಲದಲ್ಲಿ ಮಾಡದಿರುವುದರಿಂದ ಬರುವ ದೋಷದ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಬೇಕು. ಆ ಪ್ರಾಯಶ್ಚಿತ್ತವು ಕೆಳಗೆ ಹೇಳಲ್ಪಟ್ಟಿದೆ.

## ಮುಖ್ಯಕಾಲದಲ್ಲಿ ಸಂಧ್ಯಾವಂದನವನ್ನು ಮಾಡದಿದ್ದರೆ ಬರುವ ದೋಷಕ್ಕೆ ಪ್ರಾಯಶ್ಚಿತ್ತ

ಪ್ರಾಣಾಯಾಮತ್ರಯಂ ಕೃತ್ವಾ ಕಾಲಾತೀತೋ ಯದಾ ಭವೇತ್ |
ಚತುರರ್ಘ್ಯಂ ತು ಗಾಯತ್ರ್ಯಾ ಶಿರೋವ್ಯಾಹೃತಿಸಂಪುಟಮ್ ||
ಗೋಶೃಂಗಮಾತ್ರಮುದ್ಧೃತ್ಯ ರವಿಂ ವೀಕ್ಷ್ಯ ಜಲಾಂಜಲಿಮ್ |

"ಸಂಧ್ಯಾವಂದನವನ್ನು ಮುಖ್ಯಕಾಲದಲ್ಲಿ ಮಾಡಲು ಸಾಧ್ಯವಾಗದಿದ್ದರೆ ಪ್ರಾಯಶ್ಚಿತ್ತವನ್ನು ಹೇಳುತ್ತೇವೆ. (1) ಮೂರು ಸಲ ಪ್ರಾಣಾಯಾಮವನ್ನು ಮಾಡಬೇಕು. (2) ಆರಂಭದಲ್ಲಿ ವ್ಯಾಹೃತಿಮಂತ್ರವನ್ನೂ, ಕೊನೆಗೆ ಶಿರೋಮಂತ್ರವನ್ನೂ, ಹೇಳುತ್ತಾ ಗಾಯತ್ರೀಮಂತ್ರದಿಂದ ನಾಲ್ಕು ಅರ್ಘ್ಯಗಳನ್ನು ಕೊಡಬೇಕು. (3) ಬೊಗಸೆಯಲ್ಲಿ ನೀರನ್ನು ತುಂಬಿಸಿ ಗೋವಿನ ಕೊಂಬಿನಷ್ಟು ಎತ್ತರದವರೆಗೆ ಆ ಬೊಗಸೆಯನ್ನು ಎತ್ತಿ ಸೂರ್ಯನನ್ನು ನೋಡುತ್ತಾ ಈ ಅರ್ಘ್ಯವನ್ನು ಕೊಡಬೇಕು."

ಈ ಮೇಲ್ಕಂಡ ಎಲ್ಲಾ ವಾಕ್ಯಗಳಿಂದ (1) ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಮೂರುಗಳಿಗೆ ಕಾಲವು ಪ್ರಾತಃ ಸಂಧ್ಯಾವಂದನಕ್ಕೆ ಮುಖ್ಯಕಾಲವೆಂದೂ, ಸೂರ್ಯೋದಯಾನಂತರದಲ್ಲಿ ಆರು ಗಳಿಗೆ ಕಾಲವು ಗೌಣಕಾಲವೆಂದೂ (2) ಸಾಯಂಕಾಲದಲ್ಲಿ ಸಂಧ್ಯಾವಂದನಕ್ಕೆ ಸೂರ್ಯಾಸ್ತಮಾನಕ್ಕಿಂತ ಪೂರ್ವಕಾಲವು ಮುಖ್ಯಕಾಲವೆಂದೂ, ಸೂರ್ಯಾಸ್ತಮಾನಾನಂತರದಲ್ಲಿ ಎರಡು ಅಥವಾ ಆರುಗಳಿಗೆ ಕಾಲವು ಅಮುಖ್ಯಕಾಲವೆಂದೂ (3) ಆಪತ್ಕಾಲದಲ್ಲಿ ಅಮುಖ್ಯಕಾಲದಲ್ಲಿಯೂ, ಆಪತ್ತಿಲ್ಲದ ಕಾಲದಲ್ಲಿ ಮುಖ್ಯಕಾಲದಲ್ಲಿಯೂ ಮಾಡಬೇಕೆಂದೂ (4) ಅಮುಖ್ಯಕಾಲದಲ್ಲಿ ಮಾಡಿದಾಗ ಪ್ರಾಯಶ್ಚಿತ್ತವನ್ನು ಮಾಡಬೇಕೆಂದೂ ಸಿದ್ಧವಾಯಿತು. ಇದರಿಂದ ಬೆಳಿಗ್ಗೆ ಸೂರ್ಯೋದಯಕ್ಕಿಂತ ಹಿಂದೆ ಪ್ರಾತಃ ಸಂಧ್ಯಾಕಾಲವಾಗಿರುವ ಮೂರು ಗಳಿಗೆಗಳಿಗಿಂತ ಪೂರ್ವದಲ್ಲಿಯೇ ಅಂದರೆ ರಾತ್ರೆ 56 ಗಳಿಗೆಗಳು ದಾಟಿದ ಮೇಲೆ 57ನೆಯ ಗಳಿಗೆಯು ಮುಗಿಯುವುದರೊಳಗೆ ಪ್ರಾತಃಸ್ನಾನವನ್ನು ಮಾಡಬೇಕೆಂದು ಸಿದ್ಧವಾಯಿತು.

ಮೇಲ್ಕಂಡ ಅನೇಕ ವಾಕ್ಯಗಳಲ್ಲಿ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಲೇಬೇಕೆಂದು ಸಂಶಯಕ್ಕೆ ಅವಕಾಶವಿಲ್ಲದಂತೆ ಅತಿಸ್ಪಷ್ಟವಾಗಿ ಹೇಳಿರುತ್ತದೆ. ಆದ್ದರಿಂದ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಲೇಬೇಕೆಂದು ಸಿದ್ಧವಾಯಿತು. ಮೃತ್ತಿಕಾಸ್ನಾನವನ್ನು ಪ್ರಾತಃಕಾಲದಲ್ಲಿ ಮಾಡಕೂಡದು ಎಂದು ಹೇಳುತ್ತಿರುವ ವಾಕ್ಯಗಳು ಈ ವಾಕ್ಯಗಳಿಗೆ ವಿರುದ್ಧವಲ್ಲ. ಅದನ್ನು ಈಗ ವಿಶದಪಡಿಸುತ್ತೇನೆ.

ಹಿಂದೆ ಹೇಳಿರುವ "ನ ಪ್ರಾತರ್ಮೃತ್ತಿಕಾಸ್ನಾನಂ" ಎಂಬ ಎರಡು ವಾಕ್ಯಗಳಲ್ಲಿಯೂ ಮೊದಲನೆಯ ಪಾದದಲ್ಲಿ "ಪ್ರಾತಃ ಮೃತ್ತಿಕಾಸ್ನಾನಂ ನ ಕುರ್ಯಾತ್" ಅಂದರೆ "ಬೆಳಿಗ್ಗೆ ಮೃತ್ತಿಕಾಸ್ನಾನವನ್ನು ಮಾಡಕೂಡದು" ಎಂದು ಹೇಳಿರುತ್ತದೆ. ಎಲ್ಲಾ ದಿನಗಳಲ್ಲಿಯೂ ಮೃತ್ತಿಕಾಸ್ನಾನವನ್ನು ಮಾಡಲೇ ಕೂಡದು ಎಂಬ ಅಭಿಪ್ರಾಯವು ಈ ವಾಕ್ಯಗಳಿಗೆ ಸಮ್ಮತವಾಗಿದ್ದರೆ ಆದಿತ್ಯವಾರ ಮತ್ತು ಮಂಗಳವಾರಗಳಲ್ಲಿ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಕೂಡದು ಎಂಬ ಅಂಶವು ಆ ಮೊದಲನೆಯ ಪಾದದಿಂದಲೇ ಸಿದ್ಧವಾಗುತ್ತದೆ. ಆದ್ದರಿಂದ "ನ ಚ ಭೌಮಾರ್ಕವಾರಯೋಃ" ಅಂದರೆ "ಕುಜವಾರ ಮತ್ತು ಭಾನುವಾರಗಳಲ್ಲಿ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನ ಮಾಡಬಾರದು" ಎಂದು ಹೇಳುವ ಪಾದವು ವ್ಯರ್ಥವಾಗುತ್ತದೆ. ಆದ್ದರಿಂದ ಮೊದಲನೆಯ ಪಾದಕ್ಕೆ ಈ ರೀತಿಯಾದ ಅರ್ಥವು ಆ ವಾಕ್ಯಗಳಿಗೆ ಸಮ್ಮತವಲ್ಲ ಎಂದು ಸ್ಪಷ್ಟವಾಗುತ್ತದೆ.

ಅದಕ್ಕಾಗಿ ಈ ವಾಕ್ಯದಲ್ಲಿ ಮೊದಲನೆಯ ಪಾದದಲ್ಲಿ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಕೂಡದೆಂದು ಸಾಮಾನ್ಯವಾಗಿ ಹೇಳಿದ ವಿಷಯವನ್ನು ಸಂಕೋಚ ಮಾಡುವುದಕ್ಕಾಗಿ "ನ ಚ ಭೌಮಾರ್ಕವಾರಯೋಃ" ಎಂಬ ಪಾದವು ಹೊರಟಿದೆ ಎಂದು ಹೇಳಬೇಕು. ಹಾಗೆ ಹೇಳಿದರೆ "ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಕೂಡದು" ಎಂದು ನಾವು ಹೇಳಿರುವುದು ಎಲ್ಲಾ ದಿನಗಳಲ್ಲಿಯೂ ಅನ್ವಯಿಸುವುದಿಲ್ಲ. ರವಿವಾರ, ಮಂಗಳವಾರ ಮುಂತಾದ ಕೆಲವು ದಿನಗಳಿಗೆ ಮಾತ್ರ ಅನ್ವಯಿಸುತ್ತದೆ. ಆ ದಿನಗಳಲ್ಲಿ ಎರಡನ್ನು ಇಲ್ಲಿ ತಿಳಿಸಿರುವೆವು. ಇದರಂತೆ ಇತರ ಪ್ರಮಾಣ ವಚನಗಳಲ್ಲಿ "ಪ್ರಾತಃ ಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಕೂಡದು" ಎಂದು ನಿಷೇಧಿಸಲ್ಪಟ್ಟಿರುವ ದಿನಗಳಲ್ಲಿಯೂ ಮೃತ್ತಿಕಾಸ್ನಾನವನ್ನು ಮಾಡಕೂಡದು ಎಂಬುದೇ "ನ ಪ್ರಾತರ್ಮೃತ್ತಿಕಾಸ್ನಾನಂ" ಎಂಬ ಎರಡು ವಾಕ್ಯಗಳ ಸಾರಾಂಶ ಎಂದು ಸಿದ್ಧವಾಯಿತು. ಆದ್ದರಿಂದ ಆ ಎರಡು ವಾಕ್ಯಗಳೂ ಎಲ್ಲಾ ದಿನಗಳಲ್ಲಿಯೂ ಮೃತ್ತಿಕಾಸ್ನಾನವನ್ನು ಮಾಡಕೂಡದು ಎಂದು ತಿಳಿಸುವುದಿಲ್ಲ ಎಂದು ಸಿದ್ಧವಾಯಿತು. ಇದೇ ವಿಷಯವನ್ನು ಕೆಳಗಣ ಪ್ರಮಾಣಗಳು ಸ್ಪಷ್ಟಪಡಿಸುತ್ತವೆ.

ಭಾನುವಾರೇ ಭೌಮವಾರೇ ನಂದಾಭೃಗುಮಘಾಸು ಚ |
ತ್ರಯೋದಶ್ಯಾಂ ಚ ಸಪ್ತಮ್ಯಾಂ ಭರಣ್ಯಾಂ ಕೃತ್ತಿಕಾಸು ಚ ||
ಮೃದಾ ಸ್ನಾನಂ ಪಿಂಡದಾನಂ ನ ಕುರ್ಯಾತ್ತಿಲತರ್ಪಣಮ್ || 1 ||
ನಂದಾಯಾಂ ಭಾರ್ಗವದಿನೇ ಕೃತ್ತಿಕಾಸು ಮಘಾಸು ಚ |
ಭರಣ್ಯಾಂ ಭಾನುವಾರೇ ಚ ಗಜಛಾಯಾದ್ವಯೇ ತಥಾ ||
ಅಯನದ್ವಿತಯೇ ಚೈವ ಮನ್ವಾದಿಷು ಯುಗಾದಿಷು |
ಮೃದಾ ಸ್ನಾನಂ ಪಿಂಡದಾನಂ ನ ಕುರ್ಯಾತ್ತಿಲತರ್ಪಣಮ್ || 2 ||
ಪ್ರಾತಃಕಾಲೇ ಚ ಸಾಯಾಹ್ನೇ ರಾತ್ರೌ ಚೋಭಯಸಂಧ್ಯಯೋಃ |
ಮೃದಾ ಸ್ನಾನಂ ಪಿಂಡದಾನಂ ನ ಕುರ್ಯಾತ್ತಿಲತರ್ಪಣಮ್ || 3 ||

"ಆದಿತ್ಯವಾರ, ಮಂಗಳವಾರ, ನಂದಾ ಅಂದರೆ ಪಾಡ್ಯ, ಷಷ್ಠೀ, ಏಕಾದಶೀ ತಿಥಿಗಳು, ಶುಕ್ರವಾರ, ಮಘಾನಕ್ಷತ್ರ, ತ್ರಯೋದಶೀ, ಸಪ್ತಮೀ, ಭರಣೀನಕ್ಷತ್ರ, ಕೃತ್ತಿಕಾನಕ್ಷತ್ರ ಈ ದಿನಗಳಲ್ಲಿ ಮೃತ್ತಿಕಾಸ್ನಾನವನ್ನೂ ಪಿಂಡದಾನವನ್ನೂ ತಿಲತರ್ಪಣವನ್ನೂ ಮಾಡಬಾರದು." || 1 ||

"ನಂದಾತಿಥಿ, ಶುಕ್ರವಾರ, ಕೃತ್ತಿಕಾನಕ್ಷತ್ರ, ಮಘಾನಕ್ಷತ್ರ, ಭರಣೀನಕ್ಷತ್ರ, ರವಿವಾರ, ಗಜಛಾಯಾ ಎಂಬ ಎರಡು ಯೋಗಗಳು, ದಕ್ಷಿಣಾಯನಕಾಲ, ಉತ್ತರಾಯಣಕಾಲ, ಹದಿನಾಲ್ಕು ಮನ್ವಾದಿಗಳು ನಾಲ್ಕು ಯುಗಾದಿಗಳು ಇವುಗಳಲ್ಲಿ ಮೃತ್ತಿಕಾಸ್ನಾನವನ್ನೂ, ಪಿಂಡದಾನವನ್ನೂ, ತಿಲತರ್ಪಣವನ್ನೂ ಮಾಡಬಾರದು." || 2 ||

"ಪ್ರಾತಃಕಾಲ, ಸಾಯಂಕಾಲ, ಪ್ರಾತಃಸಂಧ್ಯಾಕಾಲ, ಸಾಯಂಸಂಧ್ಯಾಕಾಲ, ರಾತ್ರಿ ಇವುಗಳಲ್ಲಿ ಮೃತ್ತಿಕಾಸ್ನಾನವನ್ನೂ, ಪಿಂಡದಾನವನ್ನೂ, ತಿಲತರ್ಪಣವನ್ನೂ ಮಾಡಬಾರದು." || 3 ||

ಈ ಮೇಲ್ಕಂಡ ವಾಕ್ಯಗಳಲ್ಲಿ ಭರಣೀ ಮುಂತಾದ ವಿಶೇಷನಕ್ಷತ್ರಗಳಲ್ಲಿಯೂ, ನಂದಾ ಮುಂತಾದ ವಿಶೇಷ ತಿಥಿಗಳಲ್ಲಿಯೂ, ರವಿವಾರ ಮುಂತಾದ ಕೆಲವು ವಾರಗಳಲ್ಲಿಯೂ ಗಜಛಾಯಾ ಮುಂತಾದ ವಿಶೇಷಯೋಗಕಾಲಗಳಲ್ಲಿಯೂ, ಮನ್ವಾದಿ ಯುಗಾದಿ ಮುಂತಾದ ವಿಶೇಷ ದಿನಗಳಲ್ಲಿಯೂ, ಮೃತ್ತಿಕಾಸ್ನಾನವನ್ನೂ, ಪಿಂಡದಾನವನ್ನೂ. ತಿಲತರ್ಪಣವನ್ನೂ ಮಾಡಕೂಡದೆಂದು ಹೇಳಿರುತ್ತದೆ. ಆದ್ದರಿಂದ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಕೂಡದು ಎಂದು ತಿಳಿಸುತ್ತಿರುವ ಎಲ್ಲಾ ವಾಕ್ಯಗಳು ಮೇಲ್ಕಂಡ ದಿನಗಳಲ್ಲಿಯೂ ಇದರಂತೆ ಇತರ ಪ್ರಮಾಣಗಳಲ್ಲಿ ಹೇಳಲ್ಪಟ್ಟ ದಿನಗಳಲ್ಲಿಯೂ, ಮೃತ್ತಿಕೆಯಿಂದ ಪ್ರಾತಃಸ್ನಾನವನ್ನು ಮಾಡಕೂಡದು ಎಂದು ಹೇಳುತ್ತವೆ. ಆದ್ದರಿಂದ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಕೂಡದು ಎಂದು ಹೇಳುತ್ತಿರುವ ಎಲ್ಲಾ ವಾಕ್ಯಗಳೂ, ಎಲ್ಲಾ ದಿನಗಳಲ್ಲಿಯೂ ಪ್ರಾತಃಕಾಲದಲ್ಲಿ ಮೃತ್ತಿಕಾಸ್ನಾನವನ್ನು ಮಾಡಕೂಡದು ಎಂದು ಹೇಳುತ್ತಿಲ್ಲ ಎಂದು ಸಿದ್ಧವಾಯಿತು.

ಈ ವಾಕ್ಯದಲ್ಲಿಯೂ ದಕ್ಷಿಣಾಯನಪರ್ವಕಾಲ ಮುಂತಾದ ಸಮಯಗಳಲ್ಲಿ ಪಿಂಡದಾನವನ್ನೂ, ತಿಲತರ್ಪಣವನ್ನೂ, ಮಾಡಬಾರದು ಎಂದು ಹೇಳುತ್ತಿದೆ. ಆದರೆ ಇತರ ಪ್ರಮಾಣವಚನಗಳಲ್ಲಿ ಆ ದಿನಗಳಲ್ಲಿ ತಿಲತರ್ಪಣವನ್ನು ಕೊಡಬೇಕೆಂದು ವಿಧಿಸಿರುವುದರಿಂದ ಈ ವಾಕ್ಯಗಳಿಗೂ ಆ ವಾಕ್ಯಗಳಿಗೂ ವಿರೋಧವು ಬರುತ್ತದೆ. ಇದನ್ನು ಪರಿಹರಿಸಲೇಬೇಕು. ಅದನ್ನು ಈಗ ಪರಿಹರಿಸುತ್ತಿದ್ದೇವೆ.

ಪಿಂಡದಾನ ಮತ್ತು ತರ್ಪಣವು ನಿತ್ಯ, ನೈಮಿತ್ತಿಕ, ಕಾಮ್ಯ ಎಂದು ಮೂರು ವಿಧವಾಗಿದೆ. ಅವುಗಳಲ್ಲಿ ಅಮಾವಾಸ್ಯಾ ಮುಂತಾದ ಕಾಲಗಳಲ್ಲಿ ಮಾಡುವ ತರ್ಪಣವು ನಿತ್ಯತರ್ಪಣವೆನಿಸುತ್ತದೆ. ತೀರ್ಥಯಾತ್ರಾದಿಕಾಲಗಳಲ್ಲಿ ಮಾಡುವ ತರ್ಪಣ

ಮತ್ತು ಪಿಂಡದಾನವು ನೈಮಿತ್ತಿಕವೆನಿಸುತ್ತದೆ. ಪುತ್ರಲಾಭ ಮುಂತಾದ ವಿಶೇಷ ಫಲಗಳನ್ನು ಅಪೇಕ್ಷಿಸಿ ಮಾಡುವ ಶ್ರಾದ್ಧ ಮತ್ತು ಅದಕ್ಕೆ ಅಂಗವಾದ ತಿಲತರ್ಪಣಗಳು ಕಾಮ್ಯವೆನಿಸುತ್ತವೆ. ಇವುಗಳಲ್ಲಿ ಕಾಮ್ಯ ಮತ್ತು ನೈಮಿತ್ತಿಕವಾದ ಪಿಂಡದಾನ ಮತ್ತು ತಿಲತರ್ಪಣಗಳನ್ನು ಮೇಲ್ಕಂಡ ದಿನಗಳಲ್ಲಿ ಮಾಡಕೂಡದು ಎಂದು ಈ ವಾಕ್ಯದಲ್ಲಿ ನಿಷೇಧಿಸಲ್ಪಟ್ಟಿದೆ. ನಿತ್ಯಪಿಂಡದಾನ ಮತ್ತು ತಿಲತರ್ಪಣಗಳು ನಿಷೇಧಿಸಲ್ಪಟ್ಟಿಲ್ಲ.

ಇದರಂತೆ ಸ್ನಾನವೂ ನಿತ್ಯ, ನೈಮಿತ್ತಿಕ, ಕಾಮ್ಯ ಎಂದು ಮೂರು ವಿಧವೆಂದು ಹಿಂದೆ ವಿಸ್ತಾರವಾಗಿ ಹೇಳಿರುವೆವು. ಜಾತಾಶೌಚ, ಮೃತಾಶೌಚ ಮುಂತಾದ ಅಶುಚಿತ್ವವು ಮುಗಿಯುವಾಗ ಮಾಡುವ ಪ್ರಾತಃಸ್ನಾನವನ್ನು ಮೇಲ್ಕಂಡ ದಿನಗಳಲ್ಲಿ ಮಾಡುವಾಗ ಮೃತ್ತಿಕಾಸ್ನಾನವನ್ನು ಮಾಡಕೂಡದೆಂಬುದೇ ಮೇಲ್ಕಂಡವಾಕ್ಯಗಳ ಸಾರಾಂಶ. ಆದ್ದರಿಂದ ಭಾನುವಾರ ಮುಂತಾದ ದಿನಗಳಲ್ಲಿ ಪ್ರಾತಃಕಾಲದಲ್ಲಿ ನಿತ್ಯಸ್ನಾನವನ್ನು ಮಾಡುವಾಗ ಮೃತ್ತಿಕಾಸ್ನಾನವನ್ನು ಮಾಡಲೇಬೇಕೆಂದು ಸಿದ್ಧವಾಯಿತು. ಅದು ಮಾತ್ರವಲ್ಲ. ದೇಹದ ಶುದ್ಧಿಗಾಗಿ ಮಾಡುವ ಪ್ರಾತಃಸ್ನಾನಕಾಲದಲ್ಲಿಯೂ ಮೃತ್ತಿಕಾಸ್ನಾನವನ್ನು ಮಾಡಕೂಡದು ಎಂದೂ ಈ ವಾಕ್ಯದ ಅಭಿಪ್ರಾಯವಾಗಿದೆ. ಈ ವಿಷಯವನ್ನು ಸ್ಮೃತಿಮುಕ್ತಾವಲೀಕಾರರು ಅತಿಸ್ಪಷ್ಟವಾಗಿ ತಿಳಿಸಿರುತ್ತಾರೆ.

ಜಾತಾಶೌಚ, ಮೃತಾಶೌಚ ಮುಗಿಯುವ ದಿನದಲ್ಲಿ ಮಾಡುವ ಪ್ರಾತಃಸ್ನಾನದಲ್ಲಿ ದರ್ಭೆ, ದೂರ್ವಾ ಅಂದರೆ ಗರಿಕೆ, ಹುಲ್ಲು, ಅಕ್ಷತ ಮುಂತಾದವುಗಳ ಮತ್ತು ಅವುಗಳಿಗೆ ಸಂಬಂಧಿಸಿದ ಮಂತ್ರಗಳ ಅವಶ್ಯಕತೆಯಿದೆ. ನಿತ್ಯಸ್ನಾನದಲ್ಲಿ ಬರೇ ಮೃತ್ತಿಕೆಯ ಮತ್ತು ಅದಕ್ಕೆ ಸಂಬಂಧಿಸಿದ ಮಂತ್ರದ ಅವಶ್ಯಕತೆ ಇದೆ. ದರ್ಭೆ ಮುಂತಾದವುಗಳ ಅವಶ್ಯಕತೆಯಿಲ್ಲ. ಶ್ರೀಮಧ್ವಾಚಾರ್ಯರು ಪ್ರಾತಃಸ್ನಾನವನ್ನು ತಿಳಿಸುವಾಗ "ಉದ್ಧೃತೇತಿ ಮೃದಾಲಿಪ್ಯ" ಎಂಬ ವಾಕ್ಯದಲ್ಲಿ ಮೃತ್ತಿಕೆಯನ್ನೂ ಅದಕ್ಕೆ ಸಂಬಂಧಿಸಿದ "ಉದ್ಧೃತಾಸಿ ವರಾಹೇಣ" ಮುಂತಾದ ಮಂತ್ರಗಳನ್ನೂ ಪ್ರಾತಃಸ್ನಾನಕಾಲದಲ್ಲಿ ಉಪಯೋಗಿಸಬೇಕೆಂದು ಹೇಳಿರುವರು. ದರ್ಭೆ ಮುಂತಾದವುಗಳನ್ನು ಉಪಯೋಗಿಸಬೇಕೆಂದು ಹೇಳಿಲ್ಲ. ಆದ್ದರಿಂದ ಸದಾಚಾರಸ್ಮೃತಿಯಲ್ಲಿ ಹೇಳಿರುವ ಮೃತ್ತಿಕಾಸ್ನಾನವು ನಿತ್ಯಸ್ನಾನಕ್ಕೆ ಮಾತ್ರ ಸಂಬಂಧಿಸಿದೆಯೇ ಹೊರತು ಜಾತಾಶೌಚ ಮೃತಾಶೌಚಾದಿಗಳು ಮುಗಿಯುವಾಗ ಮಾಡುವ ಸ್ನಾನಕ್ಕೆ ಸಂಬಂಧಿಸಿಲ್ಲವೆಂದು ಅತಿಸ್ಪಷ್ಟವಾಗಿ ತಿಳಿಸಿದಂತಾಯಿತು. ಆದ್ದರಿಂದ ಮೇಲ್ಕಂಡ ಸ್ಮೃತಿಮುಕ್ತಾವಲೀಕಾರರ ನಿರ್ಣಯವು ಆಚಾರ್ಯರಿಗೆ ಅತ್ಯಂತ ಸಮ್ಮತವೆಂದು ಸಿದ್ಧವಾಯಿತು.

### ತೀರ್ಥಭೇದದಿಂದ ಸ್ನಾನಕಾಲದಲ್ಲಿ ಸ್ಮರಿಸಬೇಕಾದ ಶ್ರೀಹರಿಯ ಮೂರ್ತಿಗಳು

ಸ್ನಾನಕಾಲದಲ್ಲಿ ನಾವು ಸ್ನಾನ ಮಾಡುವ ನೀರನ್ನು ಬರೇ ನೀರೆಂದು ಭಾವಿಸಬಾರದು. ಹಾಗೆ ಭಾವಿಸಿದರೆ ಕಾಗೆಯು ಮುಳುಗಿದಷ್ಟೇ ಫಲವು ಬರುತ್ತದೆ. ಎಲ್ಲಾ ನೀರುಗಳಲ್ಲಿ ಪರಮಮಂಗಲಮೂರ್ತಿಯಾಗಿರುವ ಶ್ರೀಹರಿಯು ಬೇರೆ ಬೇರೆ ಹೆಸರಿನಿಂದಲೂ, ಬೇರೆ ಬೇರೆ ರೂಪಗಳಿಂದಲೂ, ಸನ್ನಿಹಿತನಾಗಿದ್ದು ಆ ಜಲಗಳನ್ನು ತನ್ನ ಸನ್ನಿಧಾನಬಲದಿಂದ ಅತ್ಯಂತ ಪರಿಶುದ್ಧವಾಗುವಂತೆ ಮಾಡುತ್ತಿರುವನು. ಆ ನೀರಿನಲ್ಲಿ ಮುಳುಗುತ್ತಿರುವ ನಮ್ಮನ್ನು ತನ್ನ ಸನ್ನಿಧಾನದಿಂದ ಅತ್ಯಂತ ಪರಿಶುದ್ಧವಾಗಿರುವ ಆ ಜಲದಿಂದ ಪರಿಶುದ್ಧರಾಗುವಂತೆ ಮಾಡುತ್ತಿರುವನು. ಈ ರಹಸ್ಯವನ್ನು ಮನಸ್ಸಿನಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. ಒಂದೊಂದು ನೀರಿನಲ್ಲಿಯೂ ಸನ್ನಿಹಿತನಾಗಿರುವ ಶ್ರೀಹರಿಯ ಮೂರ್ತಿಯ ಆಕಾರವನ್ನೂ, ಹೆಸರನ್ನೂ ತಿಳಿದುಕೊಳ್ಳಬೇಕು. ಆ ಮೂರ್ತಿಯನ್ನು ಸ್ಮರಿಸುತ್ತಾ ಮುಳುಗಬೇಕು. ಹೀಗೆ ಮಾಡಿದರೆ ನಾವು ಪರಿಶುದ್ಧರಾಗಿ ದೇವಕಾರ್ಯ, ಪಿತೃಕಾರ್ಯ ಮುಂತಾದ ಕಾರ್ಯಗಳನ್ನು ಮಾಡುವುದಕ್ಕೆ ಅರ್ಹರಾಗುವುದು ಮಾತ್ರವಲ್ಲದೆ ಆ ಎಲ್ಲಾ ಕಾರ್ಯಗಳ ಪೂರ್ಣಫಲಗಳನ್ನು ಪಡೆಯುತ್ತೇವೆ. ಇಲ್ಲದಿದ್ದರೆ ನಾವು ಯಾವ ಕಾರ್ಯಗಳನ್ನು ಮಾಡುವುದಕ್ಕೂ ಅರ್ಹರಾಗುವುದಿಲ್ಲ. ಅದಕ್ಕಾಗಿ ಬ್ರಹ್ಮಾಂಡಪುರಾಣದಲ್ಲಿ ಬೇರೆ ಬೇರೆ ತೀರ್ಥಗಳಲ್ಲಿ ಸನ್ನಿಹಿತವಾದ ಶ್ರೀಹರಿಯ ಮೂರ್ತಿಗಳನ್ನು ವಿಸ್ತಾರವಾಗಿ ಹೇಳಿರುತ್ತಾರೆ. ಅವುಗಳಲ್ಲಿ ಕೆಲವು ವಾಕ್ಯಗಳನ್ನು ಶ್ರೀಸ್ಮೃತಿಮುಕ್ತಾವಲೀಕಾರರು ಸಂಗ್ರಹಿಸಿರುತ್ತಾರೆ. ಅವುಗಳನ್ನು ಈಗ ಕೆಳಗೆ ಕೊಟ್ಟು ಆ ವಾಕ್ಯಗಳ ಸಾರಾಂಶವನ್ನು ಕೊಟ್ಟಿರುತ್ತೇನೆ.

ಶ್ರೀಹರಿಯು ಸರ್ವತ್ರ ವ್ಯಾಪ್ತನಾಗಿರುವನು. ಆದ್ದರಿಂದಲೇ ಅವನಿಗೆ "ವಿಭು" ಎಂಬ ಹೆಸರು ಬಂದಿರುತ್ತದೆ. ಸರ್ವತ್ರ ವ್ಯಾಪ್ತನಾದ ಶ್ರೀಹರಿಯ ಎಲ್ಲಾ ರೂಪಗಳಲ್ಲಿಯೂ, ಯಾವ ವಿಧವಾದ ವ್ಯತ್ಯಾಸವೂ ಇಲ್ಲ. ಆದ್ದರಿಂದ ಶ್ರೀಹರಿಯ ಒಂದೇ ರೂಪವನ್ನು ಎಲ್ಲಾ ತೀರ್ಥಗಳಲ್ಲಿಯೂ ಸ್ಮರಿಸಿದರೂ ನಮಗೆ ಫಲವು ಬಂದೇ ಬರಬೇಕು. ಹೀಗಿರುವಾಗ ಒಂದೊಂದು ತೀರ್ಥಗಳಲ್ಲಿ ಶ್ರೀಹರಿಯ ಬೇರೆ ಬೇರೆ ರೂಪಗಳನ್ನು ಸ್ಮರಿಸುವ ಅವಶ್ಯಕತೆ ಏನು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಎಲ್ಲಾ ನೀರಿನಲ್ಲಿಯೂ ವ್ಯಾಪಿಸಿರುವ ಶ್ರೀಹರಿಯು ಒಂದೊಂದು ತೀರ್ಥಗಳಲ್ಲಿ ಬೇರೆ ಬೇರೆ ಹೆಸರುಗಳಿಂದಲೂ, ಬೇರೆ ಬೇರೆ ರೂಪಗಳಿಂದಲೂ, ವಿಶೇಷ ಸನ್ನಿಹಿತನಾಗಿದ್ದು ಭಕ್ತರಿಗೆ ಅನುಗ್ರಹವನ್ನು ಮಾಡುವುದಾಗಿ ಸಂಕಲ್ಪಿಸಿರುವನು. ಆದ್ದರಿಂದ ಶ್ರೀಹರಿಯ ಆ ಮೂರ್ತಿಯನ್ನು ಸ್ಮರಿಸಿ ಸ್ನಾನ ಮಾಡುವವರಿಗೆ ಶೀಘ್ರದಲ್ಲಿ ಫಲವು ಸಿಗುತ್ತದೆ. ಅದಕ್ಕಾಗಿ ಆ ಮೂರ್ತಿಗಳನ್ನೂ, ಅವುಗಳ ಲಕ್ಷಣಗಳನ್ನೂ ಕೆಳಗಿನ ಶ್ಲೋಕಗಳಿಂದ ಪುರಾಣಕಾರರು ಹೇಳಿರುತ್ತಾರೆ.

ಗಂಗಾಯಾಂ ಮಾಧವೋ ದೇವಃ ಶಂಖಚಕ್ರಗದಾಧರಃ |
ಲಸತ್ಪದ್ಮಧರೋ ದೇವಸ್ತತ್ರ ಸ್ನಾಯೀ ನರೇಶ್ವರಃ || 1 ||
ಗೋದಾವರ್ಯಾಂ ಮಹಾನದ್ಯಾಂ ವೀರನಾರಾಯಣೋ ನೃಪ |
ಶಂಖಚಕ್ರಗದಾಪದ್ಮೈಃ ಶೋಭಿತೋ ಧ್ಯೇಯ ಏವ ಹಿ || 2 ||
ಕೃಷ್ಣವೇಣ್ಯಾಂ ನೃಪಶ್ರೇಷ್ಠ ಕೃಷ್ಣಃ ಸಾಕ್ಷಾಜ್ಜನಾರ್ದನಃ |
ಚತುರ್ಬಾಹುರ್ಮಹಾತೇಜಾಃ ಶಂಕಚಕ್ರಾಸಿಶಾರ್ಙ್ಗಧೃಕ್ || 3 ||
ಕಾಲಿಂದ್ಯಾಂ ಯಮಪುತ್ರಶ್ಚ ಕೃಷ್ಣನಾಮಾ ಹರಿರ್ನೃಪ |
ಚತುರ್ಬಾಹುಃ ಸದಾ ಧ್ಯೇಯೋ ದಂಡಶಂಖಾಸಿಶಾರ್ಙ್ಗಧೃಕ್ || 4 ||
ಸರಸ್ವತ್ಯಾಂ ಮಹಾಭಾಗ ಪದ್ಮನಾಭೋ ಹರಿರ್ನೃಪ |
ಕಾವೇರ್ಯಾಂ ರಂಗನಾಥಂ ತು ಸರಯ್ವಾಂ ರಾಮಮೇವ ಚ || 5 ||
ನರ್ಮದಾಯಾಂ ಮಹಾವಿಷ್ಣುಂ ಚತುರ್ಬಾಹುಂ ನೃಪೋತ್ತಮ |
ವರಾಹಂ ತುಂಗಭದ್ರಾಯಾಂ ಸಿಂಧೌ ಕ್ಷೀರಾಬ್ಧಿಶಾಯಿನಮ್ || 6 ||
ನೃಸಿಂಹಂ ಭವನಾಶಿನ್ಯಾಂ ಕುಮುದ್ವತ್ಯಾಂ ತ್ರಿವಿಕ್ರಮಮ್ |
ವಂಜುಲಾಯಾಂ ಹಯಗ್ರೀವಂ ಭೀಮರಥ್ಯಾಂ ತು ಶ್ರೀಧರಮ್ || 7 ||
ಅನಂತಂ ತಾಮ್ರಪರ್ಣ್ಯಾಂ ತು ಮಲಹಾರ್ಯಾಂ ಜನಾರ್ದನಮ್ |
ಪಿನಾಕಿನ್ಯಾಂ ಮಹಾಭಾಗ ಕೇಶವಂ ಕೇಶಿನಾಶನಮ್ || 8 ||
ಪದ್ಮಶಂಖಾರಿಯುಕ್ತಂ ಚ ಗದಯಾ ಪರಿಶೋಭಿತಮ್ |
ಪೃಥಕ್ ಸಾಗರಗಾಮಿನ್ಯೋ ಯಾ ನದ್ಯಃ ಸಂತಿ ಭೂತಲೇ || 9 ||
ತಾಸು ಸರ್ವಾಸು ರಾಜೇಂದ್ರ ಕೇಶವಾದೀಂಶ್ಚ ಸಂಸ್ಮರೇತ್ |
ಸರೋವರೇಷು ರಾಜೇಂದ್ರ ದತ್ತಾತ್ರೇಯಂ ಸ್ಮರೇತ್ಸದಾ || 10 ||
ಸ್ವಾಮಿಪುಷ್ಕರಿಣೀತೀರ್ಥೇ ಶ್ರೀಭೂಮಿಸಹಿತಂ ವಿಭುಮ್ |
ಕಟಿಸ್ಥವಾಮಬಾಹುಂ ತಂ ವರದೇನ ಕರೇಣ ಚ || 11 ||

ಯುಕ್ತಂ ಶಂಖಾರಿಯುಕ್ತಂ ಚ ಪ್ರಸನ್ನಾದೋಕ್ಷಜಂ ಸ್ಮರೇತ್ |
ವಾಮನಂ ಸಂಸ್ಮರೇದ್ರಾಜನ್ ಚಂದ್ರಪುಷ್ಕರಿಣೀಜಲೇ || 12 ||
ಸಂಸ್ಮರೇನ್ನೃಪತಿಶ್ರೇಷ್ಠ ಮಾನಸೇ ಮಧುಸೂದನಮ್ |
ದೇವಖಾತೇ ಚ ರಾಜೇಂದ್ರ ಸಂಸ್ಮರೇತ್ತು ಗದಾಧರಮ್ || 13 ||
ಕ್ಷುದ್ರಾಪಗಾಸು ರಾಜೇಂದ್ರ ಲಕ್ಷ್ಮೀನಾರಾಯಣಂ ಸ್ಮರೇತ್ |
ತಟಾಕೇ ಸಂಸ್ಮರೇದ್ರಾಜನ್ ಶೇಷಶಾಯಿನಮಚ್ಯುತಮ್ || 14 ||
ವಾಪೀಷು ಸಂಸ್ಮರೇನ್ನಿತ್ಯಂ ಚಕ್ರಪಾಣಿಂ ಮಹಾವಿಭುಮ್ |
ಏವಮಾದಿಹರೇರ್ಮೂರ್ತಿಸ್ತೀರ್ಥಸ್ನಾನಫಲೇಽಪ್ಸುಭಿಃ ||
ಸ್ಮರ್ತವ್ಯಾ ಸತತಂ ಭೂಪ ನಾತ್ರ ಕಾರ್ಯಾ ವಿಚಾರಣಾ || 15 || (ಬ್ರಹ್ಮಾಂಡಪುರಾಣ)

ಗಂಗಾನದಿಯಲ್ಲಿ ಶಂಖ ಚಕ್ರ ಗದಾ ಪದ್ಮಗಳನ್ನು ನಾಲ್ಕು ಕೈಗಳಿಂದ ಧರಿಸಿರುವ ಮಾಧವ ಎಂಬ ಮೂರ್ತಿಯನ್ನು ತೀರ್ಥದ ಮಧ್ಯದಲ್ಲಿಯೂ, ತನ್ನ ಹೃದಯದಲ್ಲಿಯೂ ಸ್ಮರಿಸುತ್ತಾ ಸ್ನಾನ ಮಾಡಬೇಕು. ಗೋದಾವರೀನದಿಯಲ್ಲಿ ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿರುವ ವೀರನಾರಾಯಣ ಎಂಬ ಮೂರ್ತಿಯನ್ನೂ, ಕೃಷ್ಣವೇಣೀ ನದಿಯಲ್ಲಿ ಶಂಖ ಚಕ್ರ ಖಡ್ಗ ಶಾರ್ಙ್ಗಧನುಸ್ಸುಗಳನ್ನು ಧರಿಸಿರುವ ಕೃಷ್ಣ ಎಂಬ ಮೂರ್ತಿಯನ್ನೂ, ಯಮುನಾನದಿಯಲ್ಲಿ ಯಮದೇವನ ಮಗನಾಗಿ ಅವತರಿಸಿರುವ ದಂಡ ಶಂಖ ಖಡ್ಗ ಶಾರ್ಙ್ಗಧನುಸ್ಸುಗಳನ್ನು ಧರಿಸಿರುವ ಕೃಷ್ಣ ಎಂಬ ಹೆಸರುಳ್ಳ ಶ್ರೀಹರಿಯನ್ನೂ, ಸರಸ್ವತೀನದಿಯಲ್ಲಿ ಪದ್ಮನಾಭ ಎಂಬ ಮೂರ್ತಿಯನ್ನೂ, ಕಾವೇರಿನದಿಯಲ್ಲಿ ರಂಗನಾಥ ಎಂಬ ಮೂರ್ತಿಯನ್ನೂ, ಸರಯೂ ನದಿಯಲ್ಲಿ ರಾಮ ಎಂಬ ಮೂರ್ತಿಯನ್ನೂ ನರ್ಮದಾನದಿಯಲ್ಲಿ ನಾಲ್ಕು ಕೈಗಳುಳ್ಳ ಮಹಾವಿಷ್ಣು ಎಂಬ ಮೂರ್ತಿಯನ್ನೂ, ತುಂಗಭದ್ರಾನದಿಯಲ್ಲಿ ವರಾಹಮೂರ್ತಿಯನ್ನೂ, ಕ್ಷೀರಸಮುದ್ರದಲ್ಲಿ ಅಲ್ಲಿ ಮಲಗಿರುವುದರಿಂದ ಕ್ಷೀರಾಬ್ಧಿಶಾಯಿ ಎಂಬ ಮೂರ್ತಿಯನ್ನೂ, ಭವನಾಶಿನೀನದಿಯಲ್ಲಿ ನರಸಿಂಹಮೂರ್ತಿಯನ್ನೂ, ಕುಮುದ್ವತೀನದಿಯಲ್ಲಿ ತ್ರಿವಿಕ್ರಮ ಎಂಬ ಮೂರ್ತಿಯನ್ನೂ, ವಂಜುಲಾನದಿಯಲ್ಲಿ ಹಯಗ್ರೀವಮೂರ್ತಿಯನ್ನೂ, ಭೀಮರಥೀನದಿಯಲ್ಲಿ ಶ್ರೀಧರ ಎಂಬ ಮೂರ್ತಿಯನ್ನೂ, ಪಿನಾಕಿನೀನದಿಯಲ್ಲಿ ಕೇಶಿ ಎಂಬ ದೈತ್ಯನನ್ನು ಸಂಹರಿಸಿದವನೂ ನಾಲ್ಕು ಕೈಗಳಲ್ಲಿ ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿರುವವನೂ ಆಗಿರುವ ಕೇಶವನನ್ನೂ ಸ್ಮರಿಸಬೇಕು.

ಸಮುದ್ರದಲ್ಲಿ ಸಾಕ್ಷಾತ್ತಾಗಿ ಬಂದು ಸೇರುವ ಎಲ್ಲಾ ನದಿಗಳೂ ಮಹಾನದಿಗಳೆನಿಸುತ್ತವೆ. ಈ ಮಹಾನದಿಗಳಲ್ಲಿ ಹಿಂದೆ ಹೇಳಿದ ಮಹಾನದಿಗಳನ್ನು ಬಿಟ್ಟು ಉಳಿದ ಎಲ್ಲಾ ಮಹಾನದಿಗಳಲ್ಲಿಯೂ ಸನ್ನಿಹಿತನಾಗಿರುವ ಕೇಶವ ಮುಂತಾದ ಶ್ರೀಹರಿಯ ಮೂರ್ತಿಗಳನ್ನು ಇತರ ಪ್ರಮಾಣಗಳಿಂದ ತಿಳಿದು ಆ ಮೂರ್ತಿಗಳನ್ನು ಸ್ಮರಿಸುತ್ತಾ ಆ ಮಹಾನದಿಗಳಲ್ಲಿ ಸ್ನಾನ ಮಾಡಬೇಕು.

ಎಲ್ಲಾ ಸರೋವರಗಳಲ್ಲಿಯೂ ದತ್ತಾತ್ರೇಯಮೂರ್ತಿಯನ್ನು ಸ್ಮರಿಸುತ್ತಾ ಸ್ನಾನ ಮಾಡಬೇಕು. ಸ್ವಾಮಿ ಪುಷ್ಕರಿಣೀತೀರ್ಥದಲ್ಲಿ ಶ್ರೀದೇವಿ ಮತ್ತು ಭೂದೇವಿಯಿಂದ ಸಹಿತನಾಗಿರುವ ಅಧೋಕ್ಷಜಮೂರ್ತಿಯನ್ನು ಸ್ಮರಿಸಬೇಕು. ಆ ಅಧೋಕ್ಷಜಮೂರ್ತಿಯು ಸೊಂಟದಲ್ಲಿ ಎಡಗೈಯನ್ನೂ, ಬಲಗೈಯಲ್ಲಿ ವರಮುದ್ರೆಯನ್ನೂ ಉಳಿದ ಎರಡು ಕೈಗಳಲ್ಲಿ ಶಂಖ ಮತ್ತು ಚಕ್ರಗಳನ್ನೂ, ಧರಿಸುತ್ತಾ ತನ್ನಲ್ಲಿ ವಿಶೇಷಾನುಗ್ರಹವನ್ನು ಮಾಡುತ್ತಿರುವಂತೆ ಸ್ಮರಿಸಬೇಕು. ಚಂದ್ರಪುಷ್ಕರಿಣೀಸರೋವರದಲ್ಲಿ ವಾಮನನನ್ನೂ ಮಾನಸ ಸರೋವರದಲ್ಲಿ ಮಧುಸೂದನನನ್ನೂ, ದೇವಖಾತ ಅಂದರೆ ಮನುಷ್ಯರಿಂದ ನಿರ್ಮಿಸಲ್ಪಡದಿರುವ ಸರೋವರಗಳಲ್ಲಿ ಗದಾಧರನನ್ನೂ, ಕೆರೆಗಳಲ್ಲಿ ಶೇಷಶಾಯಿಯಾದ ಶ್ರೀಹರಿಯನ್ನೂ ಬಾವಿಗಳಲ್ಲಿ ಚಕ್ರಪಾಣಿ ಎಂಬ ಹೆಸರುಳ್ಳ ಶ್ರೀಹರಿಯನ್ನೂ ಸ್ಮರಿಸಬೇಕು.

## ಸ್ನಾನ ನಿಯಮಗಳು

ಸ್ನಾಸ್ಯತೋ ವರುಣಃ ಶೋಭಾಂ ಜುಹ್ವತೋಽಗ್ನಿಃ ಶ್ರಿಯಂ ಹರೇತ್ |
ಭುಂಜತೋ ಮೃತ್ಯುರಾಯುಷ್ಯಂ ತಸ್ಮಾನ್ಮೌನೀ ಭವೇತ್ತ್ರಿಷು || (ಗೋಭಿಲರ ವಚನ)

"ಸ್ನಾನ, ಹೋಮ, ಊಟ ಈ ಮೂರು ಕಾರ್ಯಗಳನ್ನು ಮಾಡುತ್ತಿರುವಾಗ ಅವುಗಳಿಗೆ ಸಂಬಂಧಿಸಿದ ಮಂತ್ರ ಮುಂತಾದವುಗಳನ್ನು ಬಿಟ್ಟು ಇತರ ಮಾತುಗಳನ್ನಾಡಬಾರದು. ಸ್ನಾನ ಮಾಡುತ್ತಿರುವಾಗ ಮಾತಾಡಿದವನ ದೇಹದ ಕಾಂತಿಯನ್ನು ವರುಣನೂ, ಹೋಮ ಮಾಡುತ್ತಿರುವಾಗ ಮಾತಾಡಿದವನ ಸಂಪತ್ತನ್ನು ಅಗ್ನಿಯೂ, ಊಟ ಮಾಡುತ್ತಿರುವಾಗ ಮಾತಾಡಿದವನ ಆಯುಷ್ಯವನ್ನು ಮೃತ್ಯುದೇವತೆಯೂ ಅಪಹರಿಸುವರು." ಇದು ಗೋಭಿಲರ ವಚನ.

ಅಂಬು ನ ಕ್ಷೋಭಯೇದಂಗೈಃ ಪಾದೇನೋತ್ಪಾದಯೇನ್ನ ತು |
ಚಲನಪ್ಲವನಕ್ರೀಡಾಂ ನ ಗಂಡೂಷಜಲಂ ಪಿಬೇತ್ || (ಶಾಂಡಿಲ್ಯರ ವಚನ)

"ಸ್ನಾನಕಾಲದಲ್ಲಿ ತನ್ನ ಅವಯವಗಳಿಂದ ನೀರು ಕಲದುವಂತೆ ಅಥವಾ ಹೆಚ್ಚಾಗಿ ಚಲಿಸುವಂತೆ ಮಾಡಬಾರದು. ಕಾಲಿನಿಂದ ನೀರನ್ನು ಈ ಕಡೆಗೂ ಆ ಕಡೆಗೂ ತಳ್ಳಬಾರದು. ನೀರಿನಲ್ಲಿ ಈ ಕಡೆಗೂ ಆ ಕಡೆಗೂ ಓಡಬಾರದು. ಈಸಬಾರದು. ಬಾಯಿಯಿಂದ ನೀರನ್ನು ನುಂಗಬಾರದು." ಇದು ಶಾಂಡಿಲ್ಯರ ವಚನ.

ಅನ್ಯೋನ್ಯಂ ನಾಕ್ಷಿಪೇತ್ತೋಯಂ ನ ದೇಹಮಲಮುತ್ಸೃಜೇತ್ |
ನ ಕುತ್ಸಯೇದಂಬುತೀರಮನ್ಯತ್ತತ್ರ ನ ಕೀರ್ತಯೇತ್ || (ಶಾಂಡಿಲ್ಯರ ವಚನ)

"ಅನ್ಯೋನ್ಯವಾಗಿ ನೀರನ್ನು ಚೆಲ್ಲಿಕೊಳ್ಳಬಾರದು. ನೀರಿನಲ್ಲಿ ಮಲ ಮೂತ್ರ ಮುಂತಾದ ದೇಹದ ಮಲಗಳನ್ನು ಬಿಡಬಾರದು. ನೀರನ್ನೂ ನೀರಿನ ತೀರವನ್ನೂ ನಿಂದಿಸಬಾರದು. ಬೇರೆ ಯಾವ ಮಾತುಗಳನ್ನೂ ಆಡಬಾರದು." ಇದು ಶಾಂಡಿಲ್ಯರ ವಚನ.

ಪೃಥಕ್ಸಾಗರಗಾಮಿನ್ಯಾಂ ನದ್ಯಾಂ ಸ್ನಾನಪರೋ ನರಃ |
ವಿನಾ ಗೋದಾಂ ಚ ಗಂಗಾಂ ಚ ನದೀಮನ್ಯಾಂ ನ ಕೀರ್ತಯೇತ್ || (ವಾಯುಪುರಾಣ)

"ಮಹಾನದಿಗಳಲ್ಲಿ ಸ್ನಾನ ಮಾಡುವಾಗ ಗಂಗೆಯನ್ನೂ, ಗೋದಾವರೀನದಿಯನ್ನೂ, ಬಿಟ್ಟು ಉಳಿದಿರುವ ಬೇರೆ ಯಾವ ನದಿಯನ್ನೂ ಹೊಗಳಬಾರದು."

## ಸ್ನಾನ ಮಾಡುವಾಗ ಪ್ರೋಕ್ಷಣ ಮಾಡಿಕೊಳ್ಳುವ ರೀತಿ

ಶಂಖಮುದ್ರಾಂ ತತಃ ಕೃತ್ವಾ ಪ್ರೋಕ್ಷಯೇದ್ವಾರಿಣಾಽತ್ಮನಿ |
ಪೌರುಷೇಣೈವ ಸೂಕ್ತೇನ ಸ್ಮರನ್ನಾರಾಯಣಂ ಸ್ಮರನ್ ||

"ಎಡಗೈಯ ಎಲ್ಲಾ ಬೆರಳುಗಳ ಮಧ್ಯದಲ್ಲಿ ಬಲಗೈಯ ಅಂಗುಷ್ಠವನ್ನು ಮೇಲ್ಮುಖವಾಗಿಟ್ಟುಕೊಂಡು ಅದನ್ನು ಗಟ್ಟಿಯಾಗಿ ಹಿಡಿದುಕೊಳ್ಳಬೇಕು. ಬಲಗೈಯ ಉಳಿದ ಎಲ್ಲಾ ಬೆರಳುಗಳಿಂದ ಎಡಗೈಯನ್ನು ಒತ್ತಿ ಹಿಡಿಯಬೇಕು. ಇದು ಶಂಖಮುದ್ರೆಯೆನಿಸುತ್ತದೆ. ಈ ಶಂಖಮುದ್ರೆಯಿಂದ ಪುರುಷಸೂಕ್ತವನ್ನು ಹೇಳುತ್ತಾ ತನ್ನ ದೇಹದಲ್ಲಿ ನೀರನ್ನು ಚಿಮುಕಿಸಬೇಕು. ಆಗ ತನ್ನ ಹೃದಯದಲ್ಲಿ ನಾರಾಯಣನನ್ನು ಸ್ಮರಿಸುತ್ತಿರಬೇಕು. ಶಂಖಮುದ್ರೆಯಿಂದ ತನ್ನ ಎಲ್ಲಾ ಅವಯವಗಳಿಗೂ ಮಾಡುತ್ತಿರುವ ಪ್ರೋಕ್ಷಣವು ತನ್ನ ಅಂತರ್ಯಾಮಿಯಾದ ಶ್ರೀಹರಿಗೆ ತಾನು ಪುರುಷಸೂಕ್ತದಿಂದ ಶಂಖದ ಮೂಲಕವಾಗಿ ಮಾಡುತ್ತಿರುವ ಅಭಿಷೇಕ ಎಂದು ಭಾವಿಸಬೇಕು.

## ಸ್ನಾನಕಾಲದಲ್ಲಿ ತರ್ಪಣ ಕೊಡುವ ರೀತಿ

ತತಃ ಶಿಖಾಂ ದ್ವಿಧಾ ಕೃತ್ವಾ ನ್ಯಸೇತ್ತಾಂ ಗಲಪಾರ್ಶ್ವಯೋಃ |
ಜಲಪುಂಡ್ರಂ ತಥಾ ಧೃತ್ವಾ ಕುರ್ಯಾದ್ವೈ ಜಲತರ್ಪಣಮ್ ||
ಜಲಾನ್ನಿರ್ಗತ್ಯ ರಾಜೇಂದ್ರ ತೀರ್ಥಸ್ನಾನಂ ಸಮಾಚರೇತ್ |

"ಸ್ನಾನದ ಕೊನೆಯಲ್ಲಿ ತಲೆಯ ಕೂದಲನ್ನು ಎರಡಾಗಿ ವಿಭಾಗಿಸಬೇಕು. ಕುತ್ತಿಗೆಯ ಎರಡು ಭಾಗಗಳಲ್ಲಿ ಹಾಕಿಕೊಳ್ಳಬೇಕು. ನೀರಿನಿಂದ ದ್ವಾದಶ ನಾಮಗಳನ್ನು ಹಚ್ಚಿಕೊಳ್ಳಬೇಕು. ಆ ಮೇಲೆ ನೀರಿನಿಂದ ಪಿತೃತರ್ಪಣ ಮಾಡಬೇಕು. ಆಮೇಲೆ ನೀರಿನಿಂದ ಮೇಲೆ ಬಂದು ತೀರ್ಥಸ್ನಾನ ಅಂದರೆ ತೀರ್ಥಪ್ರೋಕ್ಷಣ ಮಾಡಬೇಕು.

## ಸ್ನಾನದ ಅಂಗಗಳು

ಸಂಕಲ್ಪಂ ಸೂಕ್ತಪಠನಂ ಮಾರ್ಜನಂ ಚಾಘಮರ್ಷಣಮ್ |
ದೇವಾದಿತರ್ಪಣಂ ಪ್ರೋಕ್ತಂ ಸ್ನಾನಂ ಪಂಚಾಂಗಮುತ್ತಮಮ್ ||

"ಎಲ್ಲಾ ಸ್ನಾನಗಳಲ್ಲಿಯೂ ಐದು ಅಂಗಗಳಿವೆ. (1) ಸಂಕಲ್ಪ (2) ಸ್ನಾನಕಾಲದಲ್ಲಿ ಹೇಳಬೇಕಾದ ಪುರುಷಸೂಕ್ತ ಮುಂತಾದ ಮಂತ್ರಗಳ ಪಠನ (3) "ಆಪೋ ಹಿ ಷ್ಠಾ ಮಯೋಭುವಃ" ಮುಂತಾದ ಮಾರ್ಜನ ಮಂತ್ರಗಳಿಂದ ತನ್ನ ಶರೀರವನ್ನು ಪ್ರೋಕ್ಷಿಸಿಕೊಳ್ಳುವುದು (4) ತನ್ನ ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುವುದಕ್ಕಾಗಿ ಅಘಮರ್ಷಣಸೂಕ್ತ ಮುಂತಾದ ಪಾಪಪರಿಹಾರಕವಾದ ಮಂತ್ರಗಳನ್ನು ಪಠಿಸುವುದು. ಇದರಿಂದ ದೇಹಶುದ್ಧಿಯಂತೆ ಆತ್ಮಶುದ್ಧಿಯೂ ಏರ್ಪಡುತ್ತದೆ. (5) ದೇವತೆಗಳು ಋಷಿಗಳು ಮತ್ತು ಪಿತೃಗಳು ಇವರಿಗೆ ತರ್ಪಣ ಕೊಡುವುದು. ಈ ಐದು ಅಂಗಗಳಿಂದ ಯುಕ್ತವಾದ ಸ್ನಾನವು ಉತ್ತಮ ಸ್ನಾನವೆನಿಸುತ್ತದೆ."

## ಸಂಕಲ್ಪ

(1) ತಾನು ಮಾಡಲಿರುವ ಕಾರ್ಯ (2) ಆ ಕಾರ್ಯದಿಂದ ತಾನು ಬಯಸುವ ಫಲ (3) ಕಾರ್ಯವನ್ನು ಮಾಡುವ ಸ್ಥಳ ಮತ್ತು ಕಾಲ ಇವುಗಳನ್ನು ಮನಸ್ಸಿನಲ್ಲಿ ತೀರ್ಮಾನಿಸಿ ಈ ವಿಷಯವನ್ನು ಹೊರಗೆ ಎಲ್ಲರಿಗೂ ತಿಳಿಯುವಂತೆ ಉದ್ಘೋಷಿಸಬೇಕು. ಇದೇ ಸಂಕಲ್ಪವೆನಿಸುತ್ತದೆ. ಈ ಸಂಕಲ್ಪವು ಆಚಮನ ಮತ್ತು ಸ್ನಾನಗಳಂತೆ ಎಲ್ಲಾ ಕಾರ್ಯಗಳಿಗೂ ಅಂಗವೆನಿಸುತ್ತದೆ. ಈ ಸಂಕಲ್ಪವಿಲ್ಲದೆ ಮಾಡಿದ ಕಾರ್ಯವು ನಿಷ್ಫಲವಾಗುತ್ತದೆ. ಸಂಕಲ್ಪ ಕಾಲದಲ್ಲಿ ನಾವು ಹೇಳುವ ಕಾಲವು ಎರಡು ವಿಧವಾಗಿದೆ. (1) ತಾನು ಜನಿಸಿದ ಮೇಲೆ ಸಾಯುವವರೆಗೆ ಮಾಡುತ್ತಿರುವ ಎಲ್ಲಾ ಕಾರ್ಯಗಳಿಗೂ ಸಾಧಾರಣವಾದ ಕಾಲವು ಮೊದಲನೆಯ ದರ್ಜೆಯಲ್ಲಿ ಸೇರಿರುತ್ತದೆ. ಆ ಮೊದಲನೆಯ ದರ್ಜೆಯಲ್ಲಿ ಸೇರಿದ ಕಾಲವನ್ನು ಸಂಕಲ್ಪದಲ್ಲಿ "ಆದ್ಯ ಬ್ರಹ್ಮಣಃ" ಎಂಬ ಮಾತಿನಿಂದ ಆರಂಭಿಸಿ "ಕಲಿಯುಗೇ ಪ್ರಥಮ ಪಾದೇ" ಎಂಬ ಮಾತಿನವರೆಗೆ ಹೇಳುತ್ತೇವೆ. (2) ಆಯಾ ದಿನಗಳಲ್ಲಿ ಮಾಡುವ ಕಾರ್ಯಗಳಿಗೆ ಮಾತ್ರ ಸಂಬಂಧಿಸಿದ ಕಾಲವು ಎರಡನೆಯ ದರ್ಜೆಗೆ ಸೇರಿರುತ್ತದೆ. ಆ ಕಾಲವನ್ನು "ಶಾಲಿವಾಹನಶಕೇ ಪ್ರಮಾದಿ ಸಂವತ್ಸರೇ" ಮುಂತಾದ ಮಾತುಗಳಿಂದ ಹೇಳುತ್ತೇವೆ.

ಇದೇ ರೀತಿಯಲ್ಲಿ ಸಂಕಲ್ಪಕಾಲದಲ್ಲಿ ಹೇಳುವ ದೇಶವೂ ಎರಡು ವಿಧವಾಗಿದೆ. (1) ನಾವು ಹುಟ್ಟಿ ಸಾಯುವವರೆಗೆ ಮಾಡುವ ಎಲ್ಲಾ ಕಾರ್ಯಗಳಿಗೆ ಸಂಬಂಧಿಸಿದ ದೇಶವು ಮೊದಲನೆಯ ದರ್ಜೆಯಲ್ಲಿ ಸೇರುತ್ತದೆ. ಆ ಮೊದಲನೆಯ ದರ್ಜೆಗೆ ಸೇರಿದ ದೇಶವನ್ನು "ಜಂಬೂದ್ವೀಪೇ" ಎಂಬ ಪದದಿಂದ ಆರಂಭಿಸಿ "ಭರತಖಂಡೇ" ಎಂಬ ಪದದವರೆಗಿರುವ ಪದಗಳಿಂದ ಹೇಳುತ್ತೇವೆ. (2) ಆಯಾ ಕಾಲದಲ್ಲಿ ನಾವು ಮಾಡುತ್ತಿರುವ ಕರ್ಮಗಳಿಗೆ ಮಾತ್ರ ಸಂಬಂಧಿಸಿದ ದೇಶವು ಎರಡನೆಯ ದರ್ಜೆಗೆ ಸೇರಿರುತ್ತದೆ. ಅದನ್ನು "ಮೇರೋಃ ದಕ್ಷಿಣಪಾರ್ಶ್ವೇ" ಮುಂತಾದ ಪದಗಳಿಂದ ಹೇಳುತ್ತೇವೆ.

ನಾವು ಸಂಕಲ್ಪ ಮಾಡುತ್ತಿರುವ ಸಮಯದಲ್ಲಿ ಸಮೀಪಕಾಲದಲ್ಲಿ ನಮ್ಮನ್ನು ಅನುಗ್ರಹಿಸುವುದಕ್ಕಾಗಿ ಅವತರಿಸಿದ ಶ್ರೀಹರಿಯ ಅವತಾರದ ಹೆಸರನ್ನೂ ಹೇಳಬೇಕು. ಅದನ್ನು "ಬುದ್ಧಾವತಾರೇ" ಎಂಬ ಪದದಿಂದ ಹೇಳುತ್ತೇವೆ.

ನಮ್ಮನ್ನು ರಕ್ಷಿಸುವುದಕ್ಕಾಗಿ ಶ್ರೀಹರಿಯ ವಿಭೂತಿರೂಪದಿಂದ ಯುಕ್ತರಾಗಿರುವ ಅನೇಕ ಭಗವದ್ಭಕ್ತರು ಆಗಾಗ್ಗೆ ಅವತರಿಸುವುದುಂಟು. ಅವರಲ್ಲಿ ನಮಗೆ ಸಮೀಪದಲ್ಲಿ ಅವತರಿಸಿದ್ದು ನಮ್ಮನ್ನು ರಕ್ಷಿಸಿರುವ ಪುಣ್ಯಪುರುಷರ ಹೆಸರನ್ನೂ ಹೇಳಬೇಕು. ಅದನ್ನು "ಶಾಲಿವಾಹನಶಕೇ" ಎಂಬ ಪದದಿಂದ ಹೇಳುತ್ತೇವೆ.

"ನಾವು ಮಾಡುತ್ತಿರುವ ಈ ಪುಣ್ಯಕಾರ್ಯವನ್ನು ನಮ್ಮ ಶಕ್ತಿಯಿಂದ ಮಾಡುತ್ತಿಲ್ಲ. ನಮ್ಮ ಪ್ರಯೋಜನಕ್ಕಾಗಿಯೂ ಮಾಡುತ್ತಿಲ್ಲ. ಶ್ರೀಹರಿಯ ಪ್ರೇರಣೆಯಿಂದಲೇ ಅವನ ಪ್ರೀತಿಗಾಗಿಯೇ ಮಾಡುತ್ತಿದ್ದೇವೆ." ಎಂಬ ಅನುಸಂಧಾನವು ಒಬ್ಬೊಬ್ಬನಿಗೂ ಅಗತ್ಯವಾಗಿರಬೇಕು. ಇಲ್ಲದಿದ್ದರೆ ಈ ಕಾರ್ಯವು ಫಲವನ್ನು ಕೊಡಲಾರದು. ಅದು ಮಾತ್ರವಲ್ಲ. ಈ ಕಾರ್ಯವು ಅಸುರಕಾರ್ಯವೆನಿಸುತ್ತದೆ. ಅದಕ್ಕಾಗಿ ಈ ಅನುಸಂಧಾನವನ್ನು ತಿಳಿಸುವ ಶಬ್ದಗಳನ್ನೂ ಈ ಸಂದರ್ಭದಲ್ಲಿ ಅವಶ್ಯವಾಗಿ ಹೇಳಲೇಬೇಕು. ಅದಕ್ಕಾಗಿ "ಶ್ರೀಹರಿಪ್ರೇರಣಯಾ ಶ್ರೀಹರಿಪ್ರೀತ್ಯರ್ಥಂ" ಮುಂತಾದ ಶಬ್ದಗಳನ್ನು ಹೇಳುತ್ತೇವೆ.

ನಾವು ಮಾಡುವ ಒಂದೊಂದು ಪುಣ್ಯಕಾರ್ಯಗಳನ್ನು ಕೆಡಿಸುವುದಕ್ಕೂ, ಅದರಿಂದ ಬರುವ ಪುಣ್ಯವನ್ನು ಅಪಹರಿಸುವುದಕ್ಕೂ ದೈತ್ಯರು ಕಾದಿರುತ್ತಾರೆ. ಆ ದೈತ್ಯರು ಈ ದ್ರೋಹವನ್ನು ನಮಗೆ ಮಾಡದಿರಬೇಕಾದರೆ ಅವರನ್ನು ನಿಗ್ರಹಿಸುವ ಶಕ್ತಿಯುಳ್ಳ ಮಹಾಪುರುಷನ ದಯವು ನಮಗೆ ಬೇಕು. ಆ ಮಹಾಪುರುಷನು ನಾರಾಯಣನೊಬ್ಬನೇ ಆಗಿರುವನು. ಅವನ ಅನಂತರದಲ್ಲಿ ಅವನ ವಿಶೇಷಾನುಗ್ರಹವನ್ನು ಪಡೆದಿರುವ ಮಹಾಲಕ್ಷ್ಮೀದೇವಿಯರು ಬ್ರಹ್ಮದೇವರ ಪದವಿಗೆ ಅರ್ಹರಾದ ಋಜುಗಣಸ್ಥಜೀವರು ಮತ್ತು ಅವರ ಪತ್ನಿಯರು ಇಷ್ಟು ಜನರು ಮಾತ್ರ ಕಲಿ ಮುಂತಾದ ದೈತ್ಯರನ್ನು ನಿಗ್ರಹಿಸುವ ಶಕ್ತಿಯುಳ್ಳವರು. ಇವರನ್ನು ಬಿಟ್ಟು ಉಳಿದಿರುವ ರುದ್ರದೇವರೇ ಮೊದಲಾದ ಯಾರೂ ದೈತ್ಯರನ್ನು ಜಯಿಸುವ ಶಕ್ತಿಯುಳ್ಳವರಲ್ಲ.

ಕಲಿಯನ್ನು ನಿಗ್ರಹಿಸುವ ಶಕ್ತಿಯುಳ್ಳ ಶ್ರೀಹರಿಯು ತನ್ನನ್ನು ಭಕ್ತಿಯಿಂದ ಸೇವಿಸುವವನನ್ನು ಅನುಗ್ರಹಿಸುವುದಕ್ಕಾಗಿ ಒಂದು ವ್ಯವಸ್ಥೆಯನ್ನು ಮಾಡಿಕೊಂಡಿರುವನು. "ತನ್ನ ಅನುಗ್ರಹದಿಂದ ಕಲಿಯನ್ನು ನಿಗ್ರಹಿಸುವ ಶಕ್ತಿಯುಳ್ಳ ಋಜುಗಣಸ್ಥರೂ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಗೆ ಬರುವವರೂ ಆದ ವಾಯುದೇವರ ಅಂತರ್ಯಾಮಿಯಾಗಿ ತನ್ನನ್ನು ಅನುಸಂಧಾನ ಮಾಡಿಕೊಂಡೇ ಒಬ್ಬೊಬ್ಬನೂ ಪುಣ್ಯಕಾರ್ಯಗಳನ್ನು ಆರಂಭಿಸಬೇಕು. ತನ್ನನ್ನು ಮಾತ್ರ ಸ್ಮರಿಸಲೂ ಕೂಡದು. ವಾಯುದೇವರನ್ನು ಮಾತ್ರ ಸ್ಮರಿಸಲೂ ಕೂಡದು. ವಾಯುದೇವರ ಅಂತರ್ಯಾಮಿಯಾಗಿಯೇ ತನ್ನನ್ನು ಸ್ಮರಿಸುವವರಿಗೆ ಕಲಿ ಮುಂತಾದ ದೈತ್ಯರು ಪುಣ್ಯವನ್ನು ಅಪಹರಿಸದಂತೆ ಮಾಡುವೆನು." ಇದೇ ಶ್ರೀಹರಿಯ ವ್ಯವಸ್ಥೆ. ಈ ವ್ಯವಸ್ಥೆಯಂತೆ ನಾವು ಮಾಡುತ್ತಿರುವ ಪುಣ್ಯ ಕರ್ಮಗಳನ್ನು ದೈತ್ಯರು ಕೆಡಿಸಬಾರದೆಂದೂ, ಆ ಪುಣ್ಯದ ಫಲವನ್ನು ಅಪಹರಿಸಬಾರದೆಂದೂ ಆಶಿಸುವವರು ಆರಂಭಕಾಲದಲ್ಲೂ ಕೊನೆಯಲ್ಲೂ ಶ್ರೀವಾಯುದೇವನ ಅಂತರ್ಯಾಮಿಯಾಗಿರುವ ಶ್ರೀಹರಿಯನ್ನು ಸ್ಮರಿಸಲೇಬೇಕು. ಅದಕ್ಕಾಗಿ ಸಂಕಲ್ಪಕಾಲದಲ್ಲಿ "ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀಹರಿಪ್ರೇರಣಯಾ" ಮುಂತಾದ ವಾಕ್ಯಗಳನ್ನು ಹೇಳುತ್ತೇವೆ. ಹೀಗೆ ಸಂಕಲ್ಪ ಕಾಲದಲ್ಲಿ ಹೇಳುವ ಎಲ್ಲಾ ಪದಗಳಿಗೂ ಪ್ರಯೋಜನವನ್ನು ತಿಳಿದುಕೊಂಡು ಸಂಕಲ್ಪವನ್ನು ಹೇಳಬೇಕು. ಈ ಸಂಕಲ್ಪವನ್ನು ಮನಸ್ಸಿನಲ್ಲಿಯೇ ಹೇಳಬಾರದು. ಸ್ಪಷ್ಟ ಶಬ್ದಗಳಿಂದ ಇತರರಿಗೆ ತಿಳಿಯುವಂತೆ ಶುದ್ಧವಾಗಿ ತುಂಬಾ ಮೆಲ್ಲಗೆಯೂ ಇಲ್ಲದೆ, ಅವಸರವೂ ಇಲ್ಲದೆ, ಗಂಭೀರ ಧ್ವನಿಯಿಂದ ಅಪಶಬ್ದಗಳಿಲ್ಲದೆ ಸಂಸ್ಕೃತಭಾಷೆಯಿಂದಲೇ ಹೇಳಬೇಕು.

ಈ ಸಮಯದಲ್ಲಿ ಒಂದು ವಿಷಯವನ್ನು ಹೇಳಲೇ ಬೇಕಾಗಿದೆ. "ಮಂತ್ರಗಳನ್ನೆಲ್ಲವನ್ನೂ ಆಯಾ ದೇಶದ ಭಾಷೆಗಳಲ್ಲಿ

ಭಾಷಾಂತರ ಮಾಡಿ ಅವುಗಳನ್ನೇ ಪುಣ್ಯಕಾರ್ಯಗಳನ್ನು ಮಾಡುವಾಗ ಹೇಳಬೇಕು. ಹಾಗೆ ಮಾಡಿದರೆ ಪುಣ್ಯಕಾರ್ಯಗಳನ್ನು ಮಾಡುವವನಿಗೂ ಅರ್ಥವು ಚೆನ್ನಾಗಿ ತಿಳಿದು ಅನುಷ್ಠಾನಕ್ಕೆ ತುಂಬಾ ಅನುಕೂಲವಾಗುತ್ತದೆ. ಹಾಗೆ ಮಾಡದೆ ಸಂಸ್ಕೃತಭಾಷೆಯಲ್ಲಿರುವ ಮಂತ್ರಗಳನ್ನು ಉಚ್ಚರಿಸಿದರೆ ಭಾಷೆಯನ್ನು ತಿಳಿಯದಿರುವವರಿಗೆ ಅದರಿಂದ ಫಲವು ಏರ್ಪಡುವುದಿಲ್ಲ. ಅರ್ಥವನ್ನು ತಿಳಿದು ಜಪಿಸುವ ಮಂತ್ರವೇ ಫಲದಾಯಕವಲ್ಲವೇ?" ಎಂಬ ಆಕ್ಷೇಪಣೆಯು ಈಗ ಎಲ್ಲೆಡೆಗಳಲ್ಲಿಯೂ ಬರುತ್ತಿದೆ. ಕೆಲವು ರಾಜ್ಯಗಳಲ್ಲಿ ಸಂಸ್ಕೃತಭಾಷೆಯಲ್ಲಿರುವ ಶಬ್ದಗಳಿಗೆ ದೇಶಭಾಷೆಯಲ್ಲಿ ಭಾಷಾಂತರ ಮಾಡಿ ಆ ದೇಶಭಾಷೆಯ ಮಂತ್ರಗಳಿಂದಲೇ ದೇವಾಲಯಗಳಲ್ಲಿ ಅರ್ಚನೆಯನ್ನು ಮಾಡಬೇಕೆಂಬ ಶಾಸನಗಳೂ ಹೊರಡುತ್ತಿವೆ. ಆದ್ದರಿಂದ ಜನರಿಗೆ ಉಪಕಾರಕರವಾಗಿಯೂ, ಶಾಸನಸಭೆಯಿಂದ ಆದರಿಸಲ್ಪಟ್ಟಿರುವುದೂ ಆಗಿರುವ ದೇಶಭಾಷೆಯ ಮಂತ್ರಗಳನ್ನೇಕೆ ಉಪಯೋಗಿಸಕೂಡದು? ಎಂಬ ಪ್ರಶ್ನೆಯು ಬರುತ್ತದೆ. ಅದನ್ನು ಈಗ ಪರಿಹರಿಸುತ್ತಿದ್ದೇವೆ.

"ಅನಾದಿನಿತ್ಯಯಾ ವಾಚಾ" ಮುಂತಾದ ವೇದಗಳೂ, ಪುರಾಣ ಮುಂತಾದ ಅಸಂಖ್ಯ ಪ್ರಮಾಣಗಳೂ, ಅನಾದಿಯಾದ ಒಂದು ಭಾಷೆಯು ಇರುವುದಾಗಿ ತಿಳಿಸುತ್ತಿವೆ. ವೇದದಿಂದ ಹೊಗಳಲ್ಪಟ್ಟ ಆ ಅನಾದಿನಿತ್ಯವಾದ ಭಾಷೆಯೇ ಸರ್ವೋತ್ತಮವೆಂದೂ, ಇತರ ಯಾವ ಭಾಷೆಯೂ ಆ ಭಾಷೆಗೆ ಸಮಾನವಾಗಲಾರದೆಂದೂ, ಪ್ರಾಮಾಣಿಕರು ಸರ್ವರೂ ಅಂಗೀಕರಿಸಲೇಬೇಕು. ಆ ಅನಾದಿಯಾದ ಭಾಷೆಯು ಯಾವುದು? ಎಂಬ ವಿಷಯವನ್ನು ಈಗ ನಿರ್ಧರಿಸೋಣ.

ಪ್ರಪಂಚದಲ್ಲಿರುವ ಎಲ್ಲಾ ಗ್ರಂಥಗಳಿಗೂ ಗ್ರಂಥಕರ್ತನ ಹೆಸರು ಪ್ರಸಿದ್ಧವಾಗಿದೆ. ಆದ್ದರಿಂದ ಆ ಗ್ರಂಥಗಳೆಲ್ಲವೂ ಒಬ್ಬ ಪುರುಷನಿಂದ ಬರೆಯಲ್ಪಟ್ಟವುಗಳೆಂದು ನಂಬಬಹುದು. "ಅನಂತಾ ವೈ ವೇದಾಃ" ಮುಂತಾದ ವೇದವಾಕ್ಯಗಳಿಂದಲೂ ಸ್ಮೃತಿ ಪುರಾಣ ಮುಂತಾದ ಪ್ರಮಾಣಗ್ರಂಥಗಳಿಂದಲೂ, ವೇದದಲ್ಲಿರುವ ವಾಕ್ಯಗಳು "ಅನಂತ" ಅಂದರೆ "ಲೆಕ್ಕವೇ ಇಲ್ಲದಿರತಕ್ಕದ್ದು" ಎಂದು ಹೊಗಳಲ್ಪಟ್ಟಿದೆ. ಈ ಅನಂತವೇದಗಳಿಗೆ ಯಾರಾದರೂ ಒಬ್ಬ ಕರ್ತನಿದ್ದರೆ ಅವನ ಹೆಸರು ಲೋಕದಲ್ಲಿ ಪ್ರಸಿದ್ಧವಾಗಿರುತ್ತಿತ್ತು.

ಭಾರವಿ ಎಂಬ ಕವಿಯು "ಕಿರಾತಾರ್ಜುನೀಯ"ಎಂಬ ಒಂದೇ ಒಂದು ಕಾವ್ಯವನ್ನು ಬರೆದಿರುವನು. ಆ ಗ್ರಂಥದಲ್ಲಿಯೂ ಸುಮಾರು ಎರಡು ಸಾವಿರ ಶ್ಲೋಕಗಳನ್ನು ಬರೆದಿರುವನು. ಮಾಘ ಎಂಬ ಕವಿಯು "ಶಿಶುಪಾಲವಧ" ಎಂಬ ಒಂದು ಕಾವ್ಯವನ್ನು ಬರೆದಿರುವನು. ಆ ಗ್ರಂಥದಲ್ಲಿಯೂ ಸುಮಾರು ಎರಡು ಸಾವಿರ ಶ್ಲೋಕಗಳಿವೆ. ಕಾಳಿದಾಸನು ನಾಲ್ಕೈದು ಗ್ರಂಥಗಳನ್ನು ಬರೆದಿರುವನು. ಅವುಗಳಲ್ಲಿಯೂ ಇರುವ ಶ್ಲೋಕಗಳೂ, ಬಿಡಿ ವಾಕ್ಯಗಳೂ ಪರಿಮಿತವಾಗಿಯೇ ಇವೆ. ಒಂದೆರಡು ಗ್ರಂಥಗಳನ್ನೂ, ಆ ಗ್ರಂಥಗಳಲ್ಲಿಯೂ ಪರಿಮಿತವಾದ ಶ್ಲೋಕಗಳನ್ನೂ, ಬರೆದಿರುವ ಭಾರವಿ, ಮಾಘ, ಕಾಳಿದಾಸ ಮುಂತಾದ ಕವಿಗಳ ಹೆಸರು ಪ್ರಪಂಚದಲ್ಲಿ ಮೂಲೆ ಮೂಲೆಗಳಲ್ಲಿಯೂ ಎಲ್ಲರಿಗೂ ಸಾಧಾರಣವಾಗಿ ಗೊತ್ತಿದೆ. ಹೀಗಿದ್ದ ಮೇಲೆ ಅನಂತ ವೇದರಾಶಿಗಳಿಗೆ ಕರ್ತನೊಬ್ಬನಿದ್ದಿದ್ದರೆ ಅವನ ಹೆಸರು ಕಾಳಿದಾಸ ಮುಂತಾದವರ ಹೆಸರಿಗಿಂತ ಅತ್ಯಂತ ಪ್ರಸಿದ್ಧವಾಗಿರುತ್ತಿತ್ತು. ಆದರೆ "ವೇದಕರ್ತನು ಯಾರು?" ಎಂಬ ಪ್ರಶ್ನೆಗೆ ಇವತ್ತಿನವರೆಗೆ ಸಮಂಜಸವಾದ ಉತ್ತರವು ಯಾರಿಗೂ ತಿಳಿದಿಲ್ಲ.

ಒಬ್ಬೊಬ್ಬನು ತನ್ನ ಮನಸ್ಸಿಗೆ ಬಂದಂತೆ ಊಹಿಸುತ್ತಿರುವನು. ಅವರೆಲ್ಲರ ಊಹೆಯೂ ಆಭಾಸವೆಂದು ಅವರವರ ಮಾತುಗಳಿಂದಲೇ ಸ್ಪಷ್ಟವಾಗುತ್ತದೆ. (ಈ ವಿಷಯವನ್ನು ಇನ್ನೊಂದು ಪ್ರತ್ಯೇಕ ಲೇಖನದಲ್ಲಿ ಸ್ಪಷ್ಟಪಡಿಸುತ್ತೇನೆ.) ಆದ್ದರಿಂದ ವೇದಕರ್ತನು ಯಾರು? ಎಂಬ ಪ್ರಶ್ನೆಗೆ ಸಮಂಜಸವಾದ ಉತ್ತರವೇ ಸಿಗದಿರುವುದರಿಂದ ವೇದಕರ್ತನ ಹೆಸರು ಯಾರಿಗೂ ಗೊತ್ತಿಲ್ಲವೆಂದು ಹೇಳಿದಂತಾಯಿತು. ವೇದಕರ್ತನ ಹೆಸರು ಯಾರಿಗೂ ತಿಳಿಯದಿರುವುದರಿಂದ ವೇದಕರ್ತನೇ ಇಲ್ಲವೆಂದು ಹೇಳಿದಂತಾಯಿತು. ಈ ಕಾರಣದಿಂದಲೇ ವೇದವು ಅನಾದಿ ಎಂದು ಹೇಳಿದಂತಾಯಿತು.

ಈ ಅನಾದಿಯಾದ ವೇದವು ಸಂಸ್ಕೃತಭಾಷಾಮಯವಾಗಿದೆ. ವೇದವು ಅನಾದಿಯಾದ ಮೇಲೆ ವೇದಭಾಷೆಯಾದ ಸಂಸ್ಕೃತ ಭಾಷೆಯೂ ಅನಾದಿ ಎಂಬ ಅಂಶವನ್ನು ಅಂಗೀಕರಿಸಲೇಬೇಕು. ಇತರ ಎಲ್ಲಾ ಭಾಷೆಗಳಲ್ಲಿರುವ ಗ್ರಂಥಗಳೆಲ್ಲವೂ ಅನಾದಿಯಲ್ಲ. ಆದ್ದರಿಂದಲೇ ಆ ಭಾಷೆಗಳು ಅನಾದಿಯೆಂದು ಹೇಳುವುದಕ್ಕೆ ಯಾವ ಆಧಾರವೂ ಇಲ್ಲ. ಆದ್ದರಿಂದಲೇ ಇತರ ಎಲ್ಲಾ ಭಾಷೆಗಳೂ ಅನಾದಿಯಲ್ಲವೆಂದೂ ಹೇಳಲೇಬೇಕು. ಈ ಅನಾದಿಯಲ್ಲದಿರುವ ಎಲ್ಲಾ ಭಾಷೆಗಳಿಗಿಂತಲೂ ಅನಾದಿಯಾದ ಸಂಸ್ಕೃತಭಾಷೆಯು ಉತ್ತಮವೆಂದೂ ಹೇಳಲೇಬೇಕು.

ಮಂತ್ರಗಳೆಲ್ಲವೂ ಸರ್ವೋತ್ತಮವಾದ ಸಂಸ್ಕೃತ ಭಾಷೆಯಲ್ಲಿದೆ. ಸಂಸ್ಕೃತಭಾಷೆಯಲ್ಲಿರುವಾಗ ಅವುಗಳಿಗೆ ಇರುವ ಮಹತ್ವವು ದೇಶಭಾಷೆಗಳಲ್ಲಿ ಅವುಗಳನ್ನು ಭಾಷಾಂತರ ಮಾಡುವಾಗ ಬರುವುದಿಲ್ಲ. ಆದ್ದರಿಂದ ಯಾವ ಮಂತ್ರಗಳನ್ನೂ ಸಂಸ್ಕೃತ ಭಾಷೆಯಿಂದ ಇತರ ಭಾಷೆಗಳಲ್ಲಿ ಭಾಷಾಂತರ ಮಾಡಿ ಜಪಿಸಬಾರದು. ಸಂಕಲ್ಪ ಮುಂತಾದ ಆ ಮಂತ್ರಗಳ ಅಂಗಗಳನ್ನೂ ಸಂಸ್ಕೃತಭಾಷೆಯಿಂದಲೇ ಹೇಳಬೇಕು.

ಅದು ಮಾತ್ರವಲ್ಲ. ದೇವತೆಗಳನ್ನು ಸಂತೋಷಪಡಿಸುವುದಕ್ಕಾಗಿ ಈ ಮಂತ್ರಗಳನ್ನು ಜಪಿಸುತ್ತೇವೆ. ಸಂಸ್ಕೃತ ಭಾಷೆಯು ದೇವಭಾಷೆಯಾಗಿದೆ. ಅವರನ್ನು ಸಂತೋಷಪಡಿಸುವುದಕ್ಕೆ ಅವರ ಭಾಷೆಯಾಗಿರುವ ಸಂಸ್ಕೃತಭಾಷೆಯಿಂದಲೇ ಮಂತ್ರ ಮುಂತಾದವುಗಳನ್ನು ಹೇಳಬೇಕು. ಅಧಿಕಾರಿಯನ್ನು ನೋಡಿ ಮಾತಾಡುವಾಗ ಅವನಿಗೆ ಪ್ರಿಯವಾಗಿರುವ ಭಾಷೆಯಿಂದ ಮಾತಾಡಿದರೆ ಅವನಿಗಾಗುವ ಪ್ರೀತಿಯು ಇತರ ಭಾಷೆಗಳಿಂದ ಮಾತಾಡಿದರೆ ಏರ್ಪಡುವುದೇ? ಈಗ ಸಂಕಲ್ಪವನ್ನು ಕೆಳಗೆ ಕೊಟ್ಟಿದ್ದೇನೆ.

ಸಮಸ್ತಜಗದಾಧಾರ ಶಂಖಚಕ್ರಗದಾಧರ |
ದೇವ ದೇಹಿ ಮಮಾನುಜ್ಞಾಂ ಯುಷ್ಮತ್ತೀರ್ಥನಿಷೇವಣೇ ||

"ಓ ದೇವ, ನೀನು ಎಲ್ಲ ಲೋಕಗಳಿಗೂ ಆಧಾರನಾಗಿರುವಿ. ಶಂಖ ಚಕ್ರ ಗದೆ ಮುಂತಾದ ಆಯುಧಗಳನ್ನು ಧರಿಸಿ ನನ್ನ ಅನಿಷ್ಟಗಳನ್ನೆಲ್ಲಾ ಪರಿಹರಿಸುತ್ತಿರುವಿ. ಪ್ರಪಂಚದಲ್ಲಿರುವ ಎಲ್ಲಾ ತೀರ್ಥಗಳೂ ನಿನ್ನ ಪಾದಗಳನ್ನು ತೊಳೆದ ತೀರ್ಥವೆನಿಸುತ್ತಿವೆ. ಈಗ ನಾನು ಸ್ನಾನ ಮಾಡುವುದಕ್ಕಾಗಿ ಉದ್ದೇಶಿಸಿರುವ ಜಲವೂ ನಿನ್ನ ಪಾದೋದಕವಾಗಿದೆ. ಈ ನೀರಿನಲ್ಲಿ ಸ್ನಾನ ಮಾಡಬೇಕೆಂದು ಸಂಕಲ್ಪಿಸಿರುವೆನು. ನೀನು ನನಗೆ ಅನುಮತಿಯನ್ನು ನೀಡು." ಈ ಮಂತ್ರದಿಂದ ಶ್ರೀಹರಿಯನ್ನು ಪ್ರಾರ್ಥಿಸಬೇಕು.

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ |
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ||

"ಓ ಗಂಗಾದೇವಿಯೇ, ಓ ಗೋದಾವರೀದೇವಿಯೇ, ಓ ಯಮುನಾದೇವಿಯೇ, ಓ ಸರಸ್ವತೀದೇವಿಯೇ, ಓ ನರ್ಮದಾದೇವಿಯೇ, ಓ ಸಿಂಧುದೇವಿಯೇ, ಓ ಕಾವೇರೀದೇವಿಯೇ, ಶ್ರೀಹರಿಯ ಪಾದಸ್ಪರ್ಶದಿಂದ ಪರಮಪಾವನರಾಗಿರುವ ನೀವೆಲ್ಲರೂ ಈಗ ನಾನು ಸ್ನಾನ ಮಾಡಬೇಕೆಂದು ಉದ್ದೇಶಿಸಿರುವ ಈ ನೀರಿನಲ್ಲಿ ಸನ್ನಿಹಿತರಾಗಿ ಈ ನೀರು ಪರಿಶುದ್ಧವಾಗುವಂತೆ ಮಾಡಿರಿ." ಈ ಮಂತ್ರದಿಂದ ಗಂಗೆ ಮುಂತಾದ ಎಲ್ಲಾ ತೀರ್ಥಾಭಿಮಾನಿದೇವತೆಗಳನ್ನೂ ಪ್ರಾರ್ಥಿಸಬೇಕು.

ಗಂಗಾ ಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೈರಪಿ |
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ||

"ಓ ಗಂಗಾದೇವಿಯೇ, ಓ ಗಂಗಾದೇವಿಯೇ, ಎಂದು ಸ್ನಾನಕಾಲದಲ್ಲಿ ಗಟ್ಟಿಯಾಗಿ ಕೂಗಬೇಕು. ಆ ಕೂಗುವವನು ಗಂಗಾನದಿಯು ಇರುವ ಸ್ಥಳಕ್ಕಿಂತ ಅನೇಕ ನೂರು ಯೋಜನ ದೂರದಲ್ಲಿದ್ದರೂ ಅವನ ಎಲ್ಲಾ ಪಾಪವೂ ದೂರವಾಗುವುದು."

ತಾನು ಸ್ನಾನ ಮಾಡುವುದಕ್ಕಾಗಿ ಉದ್ದೇಶಿಸಿದ ನೀರಿನಲ್ಲಿ ಸನ್ನಿಹಿತಳಾದ ಗಂಗಾದೇವಿಯ ಪ್ರಭಾವವನ್ನು ಈ ಮಂತ್ರದಿಂದ ಹೇಳಿ ಅವಳನ್ನೂ ಅವಳ ಜನಕನಾದ ಶ್ರೀ ತ್ರಿವಿಕ್ರಮರೂಪಿಯಾದ ಶ್ರೀಹರಿಯನ್ನೂ ಸಂತೋಷಪಡಿಸಬೇಕು. ಅನಂತರ ಗಂಗಾದೇವಿಯ ಮಹಿಮೆಯನ್ನು ಮನಸ್ಸಿನಲ್ಲಿ ತಂದುಕೊಳ್ಳುವುದಕ್ಕಾಗಿ ಭಾಗೀರಥೀಗದ್ಯವನ್ನು ಪಠಿಸಬೇಕು. ವಾಚಕರಿಗಾಗಿ ಭಾಗೀರಥೀಗದ್ಯವನ್ನು ಕೆಳಗೆ ಕೊಟ್ಟಿದ್ದೇನೆ.

## ಭಾಗೀರಥೀಗದ್ಯಂ

(1) ತತ್ರ ಭಗವತಃ ಸಾಕ್ಷಾದ್ಯಜ್ಞಲಿಂಗಸ್ಯ ವಿಷ್ಣೋರ್ವಿಕ್ರಮತೋ ವಾಮಪಾದಾಂಗುಷ್ಠನಖನಿರ್ಭಿನ್ನೋರ್ಧ್ವಾಂಡಕಟಾಹವಿವರೇಣಾಂತಃಪ್ರವಿಷ್ಟಾ ಯಾ ಬಾಹ್ಯಜಲಧಾರಾ ತಚ್ಚರಣಪಂಕಜಾವನೇ ಜನಾರುಣಕಿಂಜಲ್ಕೋಽಪರಂಜಿತಾಽಖಿಲಜಗದಘಮಲಾಪಹೋಪಸ್ಪರ್ಶನಾಽಮಲಾ ಸಾಕ್ಷಾದ್ಭಗವತ್ಪದೀತ್ಯನುಪಲಕ್ಷಿತವಚೋಭಿರಭಿಧೀಯಮಾನಾಽತಿಮಹತಾ ಕಾಲೇನ ಯುಗಸಹಸ್ರೋಪಲಕ್ಷಣೇನ ದಿವೋ ಮೂರ್ಧನ್ಯವತತಾರ. ಯತ್ತದ್ವಿಷ್ಣುಪದಮಾಹುಃ

(1) "ಐಶ್ವರ್ಯ ಮುಂತಾದ ಗುಣಗಳಿಂದ ಪೂರ್ಣನಾದುದರಿಂದ ಶ್ರೀನಾರಾಯಣನು ಭಗವಾನ್ ಎಂದು ಪ್ರಸಿದ್ಧನಾಗಿರುವನು. ಎಲ್ಲಾ ಯಜ್ಞಗಳಿಂದಲೂ ಸೇವ್ಯನಾದುದರಿಂದ ಯಜ್ಞಲಿಂಗ ಎಂದು ಪ್ರಸಿದ್ಧನಾಗಿರುವನು. ಅಂತಹ ವಾಮನರೂಪಿಯಾದ ಶ್ರೀಮಹಾವಿಷ್ಣುವು ಬಲಿಚಕ್ರವರ್ತಿಯಿಂದ ದಾನವಾಗಿ ಪಡೆದಿರುವ ಮೂರು ಹೆಜ್ಜೆಗಳನ್ನು ಅಳೆಯುವುದಕ್ಕಾಗಿ ಶ್ರೀತ್ರಿವಿಕ್ರಮರೂಪವನ್ನು ಸ್ವೀಕರಿಸಿದನು. ಒಂದು ಹೆಜ್ಜೆಯಿಂದ ಕೆಳಗಿನ ಎಲ್ಲಾ ಲೋಕಗಳನ್ನೂ ಅಳೆದನು. ಮೇಲಿನ ಎಲ್ಲಾ ಲೋಕಗಳನ್ನು ಅಳೆಯುವುದಕ್ಕಾಗಿ ಎಡಗಾಲನ್ನು ಮೇಲೆ ಎತ್ತಿದನು. ಆ ಕಾಲು ಬೆಳೆಯುತ್ತಾ ಐವತ್ತು ಕೋಟಿ ಯೋಜನ ವಿಸ್ತೀರ್ಣವಾದ ಬ್ರಹ್ಮಾಂಡದ ಮೇಲ್ಭಾಗದ ಕೊನೆಯನ್ನು ಸಮೀಪಿಸಿತು. ಬ್ರಹ್ಮಾಂಡದ ಸುತ್ತಲೂ ಇರುವ ನೂರು ಕೋಟಿ ಯೋಜನ ದಪ್ಪವೂ, ಸುವರ್ಣಮಯವೂ ಆಗಿರುವ ಬ್ರಹ್ಮಾಂಡ ಕಟಾಹಕ್ಕೆ, ಶ್ರೀಹರಿಯ ಎಡಗಾಲಿನ ಉಗುರು ತಗಲಿತು. ಅದರ ಸ್ಪರ್ಶವನ್ನು ಸಹಿಸಲಾರದ ಆ ಆವರಣದಲ್ಲಿ ಬಿರುಕು ಏರ್ಪಟ್ಟಿತು. ಬ್ರಹ್ಮಾಂಡಕಟಾಹದ ಮೇಲ್ಭಾಗದಲ್ಲಿರುವ ಒಂದು ಸಾವಿರ ಕೋಟಿ ಯೋಜನ ದಪ್ಪವೂ ಜಲಮಯವೂ ಆಗಿರುವ ಜಲಾವರಣದಲ್ಲಿದ್ದ ಶುದ್ಧವಾದ ಜಲವು, ಆ ಬಿರುಕಿನ ದ್ವಾರದಿಂದ ಬ್ರಹ್ಮಾಂಡದ ಒಳಗೆ ಪ್ರವೇಶಿಸಿತು. ಆ ಜಲವು ಧಾರೆಧಾರೆಯಾಗಿ ಸುರಿಯುತ್ತಾ ಶ್ರೀಹರಿಯ ಪಾದಕಮಲದಲ್ಲಿರುವ ಕೆಂಪು ಧೂಳಿಗಳೆಂಬ ಕೇಸರುಗಳಿಂದ ಮಿಶ್ರಿತವಾಗಿ ಅವುಗಳಿಂದ ಅಲಂಕರಿಸಲ್ಪಟ್ಟಿತು. ಆ ಜಲಧಾರೆಯ ಸ್ಪರ್ಶಮಾತ್ರದಿಂದ ಜಗತ್ತಿನಲ್ಲಿರುವ ಸರ್ವರ ಸಕಲ ಪಾಪಗಳೂ ದೂರವಾಗುತ್ತಿವೆ. ಅತಿ ನಿರ್ಮಲವಾದ ಆ ಜಲವು ಶ್ರೀಹರಿಯ ಪಾದವನ್ನು ತೊಳೆದಿರುವುದರಿಂದ ಭಗವತ್ಪದೀ ಅಂದರೆ ಶ್ರೀಹರಿಯ ಪಾದೋದಕ ಎಂದು ಮಹಾಜ್ಞಾನಿಗಳಾದ ಬ್ರಹ್ಮಾದಿ ದೇವತೆಗಳಿಂದ ಹೊಗಳಲ್ಪಟ್ಟಿತು. ಈ ಜಲವೇ ಗಂಗಾದೇವಿಯೆನಿಸಿತು. ಈ ಗಂಗಾದೇವಿಯು ಆಕಾಶಮಾರ್ಗದಿಂದ ಅತಿವೇಗದಿಂದ ಕೆಳಗೆ ಇಳಿಯುತ್ತಾ ಬ್ರಹ್ಮದೇವರ ಒಂದು ಹಗಲು ಮುಗಿಯುವಾಗ ದೇವಲೋಕವನ್ನು ಸಮೀಪಿಸಿದಳು. ಮೇಲಿನ ಎಲ್ಲಾ ಲೋಕಗಳಲ್ಲಿಯೂ ಶ್ರೀಹರಿಯ ಪಾದವು ವ್ಯಾಪಿಸಿದುದರಿಂದ ಆ ಲೋಕಗಳೂ, ಅವುಗಳಿಗೆ ಆಧಾರವಾದ ಆಕಾಶವೂ, ವಿಷ್ಣುಪದ ಎಂದು ಜ್ಞಾನಿಗಳಿಂದ ಹೊಗಳಲ್ಪಟ್ಟಿವೆ. ಅಲ್ಲಿ ಶ್ರೀಗಂಗೆಯು ಸಂಚರಿಸುತ್ತಾ ಬಂದಳು."

(2) ಯತ್ರ ಹ ವಾವ ವೀರವ್ರತ ಔತ್ತಾನಪಾದಿಃ ಪರಮಭಾಗವತೋಽಸ್ಮತ್ಕುಲದೇವತಾಚರಣಾರವಿಂದೋದಕಮಿತಿ ಯಾಮನುಸವನಮುತ್ಕೃಷ್ಯಮಾಣಭಗವದ್ಭಕ್ತಿಯೋಗೇನ ದೃಢಂ ಕ್ಲಿದ್ಯಮಾನಾಂತರ್ಹೃದಯ ಔತ್ಕಂಠ್ಯಾದ್ವಿವಶಾಮೀಲಿತಲೋಚನಯುಗಲಕುಡ್ಮಲವಿಗಲಿತಾಮಲಬಾಷ್ಪಕಲಯಾಽಭಿವ್ಯಜ್ಯ ಮಾನರೋಮಪುಲಕಕುಲಕೋಽಧುನಾಪಿ ಪರಮಾದರೇಣ ಶಿರಸಾ ಬಿಭರ್ತಿ.

(2) "ವಿಷ್ಣುಪದವೆಂದು ಪ್ರಸಿದ್ಧವಾದ ಈ ಆಕಾಶದಲ್ಲಿರುವ ಶಿಂಶುಮಾರಲೋಕದಲ್ಲಿ ಮಹಾಭಗವದ್ಭಕ್ತನೂ

ವೀರ್ಯವತ್ತರವಾದ ತನ್ನ ವ್ರತಗಳ ಬಲದಿಂದ ಶ್ರೀಹರಿಯನ್ನು ಐದನೆಯ ವಯಸ್ಸಿನಲ್ಲಿ ಪ್ರತ್ಯಕ್ಷವಾಗಿ ನೋಡಿದವನೂ, ಉತ್ತಾನಪಾದರಾಜಕುಮಾರನೂ ಆಗಿರುವ ಧ್ರುವನು ವಾಸಿಸುತ್ತಿರುವನು. ಅವನು ಈ ಗಂಗೆಯನ್ನು ನನ್ನ ಕುಲದೇವತೆಯಾದ ನಾರಾಯಣನ ಪಾದೋದಕ ಎಂದು ಹೇಳುತ್ತಾ ಶಿರಸ್ಸಿನಲ್ಲಿ ಈಗಲೂ ಧರಿಸುತ್ತಿರುವನು. ಈ ಗಂಗೆಯನ್ನು ಧರಿಸುತ್ತಿರುವಾಗ ಒಂದೊಂದು ಕ್ಷಣದಲ್ಲಿಯೂ ಅವನ ಭಕ್ತಿಯು ಉಕ್ಕಿ ಉಕ್ಕಿ ಬರುತ್ತಿದೆ. ಈ ಭಕ್ತಿಯಿಂದ ಮನಸ್ಸು ನೀರಾಗಿ ಹರಿಯುತ್ತಿದೆ. ಭಕ್ತಿಯ ಉದ್ರೇಕದಿಂದ ಕಣ್ಣುಗಳು ಪರವಶವಾಗಿ ಅರ್ಧಮುಚ್ಚಲ್ಪಟ್ಟಿವೆ. ಆ ಕಣ್ಣುಗಳೆಂಬ ಕಮಲಗಳ ಮೊಗ್ಗುಗಳಿಂದ ನಿರ್ಮಲ ಆನಂದಬಾಷ್ಪಜಲವು ಸುರಿಯುತ್ತಿದೆ. ಆ ನೀರು ಸುರಿಯುತ್ತಿರುವಾಗ ಮೈಯಲ್ಲಿ ರೋಮಗಳೂ ಸಾಲುಸಾಲಾಗಿ ಎದ್ದು ನಿಂತಿರುತ್ತವೆ. ಹೀಗೆ ಪಾರವಶ್ಯದಿಂದ ಧ್ರುವನು ಇಂದೂ ಧರಿಸುತ್ತಿರುವನು."

(3) ತತ ಋಷಯಸ್ತತ್ಪ್ರಭಾವಜ್ಞಾ ಋಷಿಲೋಕೇ ಇಯಂ ತಪಸ್ಸಾತ್ಯಂತಿಕೀ ಸಿದ್ಧಿರೇತಾವತೀತಿ ಭಗವತಿ ಸರ್ವಾತ್ಮನಿ ವಾಸುದೇವೇನವರತಭಕ್ತಿಯೋಗಲಾಭೇನೈವೋಪೇಕ್ಷಿತಾನ್ಯಾರ್ಥಾತ್ಮಗತಯೋ ಮುಕ್ತಿಮಿವಾಗತಾಂ ಮುಮುಕ್ಷವಃ ಸಬಹುಮಾನಮೇವಾದ್ಯಾಪಿ ಜಟಾಜೂಟೈರುದ್ವಹಂತಿ.

(3) "ಶಿಂಶುಮಾರಲೋಕದಿಂದ ಕೆಳಗೆ ಇಳಿಯುತ್ತಾ ಋಷಿಲೋಕಕ್ಕೆ ಬಂದಾಗ ಅಲ್ಲಿರುವ ಋಷಿಗಳೆಲ್ಲರೂ ಆ ಗಂಗೆಯನ್ನು ಸ್ವಾಗತಿಸುತ್ತಿರುವರು. ಸರ್ವಾಂತರ್ಯಾಮಿಯಾಗಿರುವ ಶ್ರೀಹರಿಯಲ್ಲಿ ಯಾವಾಗಲೂ ಮಾಡುತ್ತಿರುವ ಅಖಂಡ ಭಕ್ತಿಯಿಂದ ಅವರೆಲ್ಲರೂ ಇತರ ಎಲ್ಲಾ ವಸ್ತುಗಳನ್ನೂ ಲೋಕಗಳನ್ನೂ ತಿರಸ್ಕರಿಸಿದವರು. ಹೀಗಿದ್ದರೂ ಮೋಕ್ಷವನ್ನು ಅಪೇಕ್ಷಿಸುತ್ತಿರುವವರು ತಮಗೆ ಸಿಕ್ಕಿದ ಮೋಕ್ಷವನ್ನು ಸ್ವಾಗತಿಸುವಂತೆ ಆ ಎಲ್ಲಾ ಮುನಿಗಳೂ ನಮ್ಮ ತಪಸ್ಸಿನ ಪುಣ್ಯಫಲವು ಇಂದು ಪೂರ್ಣವಾಯಿತೆಂದು ಹೇಳುತ್ತಾ ಗಂಗೆಯನ್ನು ತುಂಬಾ ಭಕ್ತಿಯಿಂದ ಇಂದೂ ತಮ್ಮ ಜಡೆಗಳಲ್ಲಿ ಧರಿಸುತ್ತಿರುವರು."

(4) ತತೋಽನೇಕಸಹಸ್ರಕೋಟಿವಿಮಾನಾನೀಕಸಂಕುಲದೇವಯಾನೇನಾವತರಂತೀಂದುಮಂಡಲಮಾಪ್ಲಾವ್ಯ ಬ್ರಹ್ಮಸದನೇ ನಿಪತತಿ.

(4) ಅನೇಕ ಸಹಸ್ರ ಕೋಟಿ ವಿಮಾನಗಳಿಂದ ಬಂದ ದೇವತೆಗಳು, ದೇವಮಾರ್ಗದಲ್ಲಿ ಸಾಲುಸಾಲಾಗಿ ನಿಂತು ಇವಳನ್ನು ಸೇವಿಸುತ್ತಿರುವರು. ಅವರನ್ನು ಅನುಗ್ರಹಿಸುತ್ತಾ ಈ ಗಂಗೆಯು ಚಂದ್ರಬಿಂಬದ ಮೇಲೆ ಬಿದ್ದು ಚಂದ್ರನನ್ನು ತೊಳೆದು ಮೇರುಪರ್ವತದ ಮೇಲಿರುವ ಬ್ರಹ್ಮದೇವರ ಶತಕೋಟಿ ಎಂಬ ಪಟ್ಟಣಕ್ಕೆ ಬಂದಿರುವಳು.

(5) ತತ್ರ ಚತುರ್ಧಾ ಭಿದ್ಯಮಾನಾ ಚತುರ್ಭಿರ್ನಾಮಭಿಶ್ಚ ಚತುರ್ದಿಶಮಭಿಸ್ಯಂದಂತೀ ನದನದೀಪತಿಮೇವಾಭಿನಿವಿಶತಿ ಸೀತಾಽಲಕನಂದಾ ಚಕ್ಷುರ್ಭದ್ರೇತಿ.

(5) "ಶತಕೋಟಿನಗರದಲ್ಲಿ ಬಂದಿಳಿದ ಗಂಗೆಯು ಸೀತಾ, ಅಲಕಾನಂದಾ, ಚಕ್ಷುಃಭದ್ರಾ, ಎಂಬ ನಾಲ್ಕು ಹೆಸರುಗಳಿಂದ ನಾಲ್ಕು ರೂಪಗಳನ್ನು ಸ್ವೀಕರಿಸಿದಳು. ಒಂದೊಂದು ರೂಪದಿಂದ ಒಂದೊಂದು ದಿಕ್ಕಿಗೆ ಹೊರಟು ಹೊಳೆಗಳಿಗೂ ನದಿಗಳಿಗೂ ಅಧಿಪತಿಯಾದ ಸಮುದ್ರರಾಜನಲ್ಲಿ ಹೋಗಿ ಸೇರಿದಳು."

(6) ಸೀತಾ ತು ಬ್ರಹ್ಮಸದನಾತ್ಕೇಸರಾದ್ರಿಶಿಖರೇಭ್ಯೋಽಧೋಽಧಃ ಪತಂತೀ ಗಂಧಮಾದನಮೂರ್ಧ್ನಿ ಪತಿತ್ವಾಂತರೇಣ ಭದ್ರಾಶ್ವವರ್ಷಂ ಪ್ರಾಚ್ಯಾಂ ದಿಶಿ ಕ್ಷಾರಸಮುದ್ರಂ ಪ್ರವಿಶತಿ.

(6) "ಸೀತಾ ಎಂಬ ಹೆಸರಿನ ಗಂಗೆಯು ಬ್ರಹ್ಮದೇವರ ಶತಕೋಟಿ ಪಟ್ಟಣದಿಂದ ಪೂರ್ವಾಭಿಮುಖವಾಗಿ ಹೊರಟು ಮೇರುಪರ್ವತದಿಂದ ಕೆಳಗೆ ಇಳಿದಳು. ಭೂಮಿ ಎಂಬ ಕಮಲದ ಮಧ್ಯದಲ್ಲಿ ಮೇರುಪರ್ವತವು ಕರ್ಣಿಕೆಯಂತಿದೆ. ಆ ಮೇರುವಿನ ಸುತ್ತಲೂ ಕಮಲದ ಕೇಸರದಂತೆ ಅನೇಕ ಪರ್ವತಗಳಿವೆ. ಆ ಕೇಸರ ಪರ್ವತಗಳ ಮೇಲೆ ಇಳಿದ ಗಂಗೆಯು ಮೇರುಪರ್ವತದ ಪೂರ್ವದಲ್ಲಿರುವ ಗಂಧಮಾದನಪರ್ವತದ ಮೇಲೆ ಇಳಿದು ಆ ಪರ್ವತಕ್ಕಿಂತ ಪೂರ್ವ ದಿಕ್ಕಿನಲ್ಲಿರುವ ಭದ್ರಾಶ್ವ ಎಂಬ ವರ್ಷದಲ್ಲಿ ಸಂಚರಿಸುತ್ತಾ ಪೂರ್ವದಿಕ್ಕಿನಲ್ಲಿರುವ ಉಪ್ಪುನೀರಿನ ಸಮುದ್ರದಲ್ಲಿ ಸೇರಿದಳು."

(7) ಏವಂ ಮಾಲ್ಯವಚ್ಛಿಖರಾನ್ನಿಷ್ಪತಂತ್ಯನುಪರತವೇಗಾ ಕೇತುಮಾಲಮಭಿಚಕ್ಷುಃ ಪ್ರತೀಚ್ಯಾಂ ದಿಶಿ ಸರಿತ್ಪತಿಂ ಪ್ರವಿಶತಿ.

(7) "ಹಿಂದಿನಂತೆಯೇ ಚಕ್ಷುಃ ಎಂಬ ಹೆಸರಿನ ಗಂಗೆಯು ಮೇರುಪರ್ವತದಿಂದ ಪಶ್ಚಿಮಾಭಿಮುಖವಾಗಿ ಹೊರಟು ಪಶ್ಚಿಮದಿಕ್ಕಿನಲ್ಲಿರುವ ಮಾಲ್ಯವಾನ್ ಎಂಬ ಪರ್ವತದಲ್ಲಿ ಇಳಿದು, ಕೇತುಮಾಲ ಎಂಬ ವರ್ಷದಲ್ಲಿ ಅತಿ ವೇಗದಿಂದ ಸಂಚರಿಸುತ್ತಾ ಪಶ್ಚಿಮದಿಕ್ಕಿನಲ್ಲಿ ಉಪ್ಪುನೀರಿನ ಸಮುದ್ರದಲ್ಲಿ ಸೇರಿದಳು."

(8) ಭದ್ರಾ ಚೋತ್ತರತೋ ಮೇರುಶಿರಸೋ ನಿಪತಂತೀ ಗಿರಿಶಿಖರಾದ್ಗಿರಿಶಿಖರಮತಿಹಾಯ ಶೃಂಗವತಃ ಶೃಂಗಾದಭಿಸ್ಯಂದಮಾನಾ ಉತ್ತರಾಂಸ್ತು ಕುರೂನತಿಕ್ರಮ್ಯೋದೀಚ್ಯಾಂ ದಿಶಿ ಜಲನಿಧಿಂ ಪ್ರವಿಶತಿ.

(8) "ಹೀಗೆಯೇ ಭದ್ರಾ ಎಂಬ ಹೆಸರಿನ ಗಂಗೆಯು ಮೇರುಪರ್ವತದಿಂದ ಉತ್ತರದಿಕ್ಕಿನಲ್ಲಿ ಇಳಿದು, ಅತಿವೇಗದಿಂದ ಉತ್ತರದಿಕ್ಕಿನಲ್ಲಿರುವ ಮೂರು ಪರ್ವತಗಳ ಮೇಲೆ ಬಿದ್ದು, ಕೊನೆಯಲ್ಲಿನ ಶೃಂಗವಾನ್ ಎಂಬ ಪರ್ವತಕ್ಕಿಂತ ಉತ್ತರದಲ್ಲಿರುವ ಕುರುವರ್ಷದಲ್ಲಿ ಸಂಚರಿಸುತ್ತಾ ಉತ್ತರಸಮುದ್ರದಲ್ಲಿ ಸೇರಿರುವಳು."

(9) ತಥೈವಾಲಕನಂದಾ ದಕ್ಷಿಣೇನ ಬ್ರಹ್ಮಸದನಾದ್ಬಹೂನಿ ಗಿರಿಕೂಟಾನ್ಯತಿಕ್ರಮ್ಯ ಹೇಮಕೂಟ ಹಿಮಕೂಟಾನ್ಯತಿರಭಸತರರಂಹಸಾ ಲುಠಂತೀ ಭಾರತಮೇವ ವರ್ಷಂ ದಕ್ಷಿಣಸ್ಯಾಂ ದಿಶಿ ಜಲನಿಧಿಂ ಪ್ರವಿಶತಿ.

(9) "ಅಲಕನಂದಾ ಎಂಬ ಹೆಸರಿನ ಗಂಗೆಯು ಮೇರುಪರ್ವತದಿಂದ ದಕ್ಷಿಣದಿಕ್ಕಿನಲ್ಲಿರುವ ಅನೇಕ ಪರ್ವತಗಳ ಶಿಖರವನ್ನು ದಾಟಿ ಪ್ರಧಾನವಾದ ಮೂರು ಪರ್ವತಗಳನ್ನು ಅತಿವೇಗದಿಂದ ದಾಟಿ ಭಾರತವರ್ಷದಲ್ಲಿಳಿದು ಅತಿವೇಗದಿಂದ ಕುಣಿಯುತ್ತಾ ದಕ್ಷಿಣದಿಕ್ಕಿನ ಸಮುದ್ರದಲ್ಲಿ ಹೋಗಿ ಸೇರಿರುವಳು."

ಮೇಲ್ಕಂಡ ಭಾಗೀರಥೀಗದ್ಯವನ್ನು ಅರ್ಥಾನುಸಂಧಾನಪೂರ್ವಕವಾಗಿ ಪಠನ ಮಾಡಬೇಕು. ಎರಡು ಸಲ ಆಚಮನ ಮಾಡಬೇಕು. ತೀರ್ಥರಾಜಾಯ ನಮಃ ಎಂದು ತೀರ್ಥರಾಜನಾದ ವರುಣನನ್ನು ನಮಸ್ಕರಿಸಬೇಕು. ಅನಂತರದಲ್ಲಿ ಶುಭಸಂಕಲ್ಪವನ್ನು ಮಾಡಬೇಕು.

ಶುಭೇ ಶೋಭನೇ ಮುಹೂರ್ತೇ (ಕೃಷ್ಣ ಕೃಷ್ಣ ಗೋವಿಂದ ಗೋವಿಂದ ಎಂದು ಉಡುಪಿಯವರು ಆರಂಭದಲ್ಲಿ ಹೇಳುವುದು ಸಂಪ್ರದಾಯ ಸಿದ್ಧವಾಗಿದೆ.) (1) ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ (2) ದ್ವಿತೀಯಪರಾರ್ಧೇ (3) ಶ್ವೇತವರಾಹಕಲ್ಪೇ (4) ವೈವಸ್ವತಮನ್ವಂತರೇ (5) ಅಷ್ಟಾವಿಂಶತಿತಮೇ ಕಲಿಯುಗೇ (6) ಪ್ರಥಮಪಾದೇ (7) ಜಂಬೂದ್ವೀಪೇ ಭಾರತವರ್ಷೇ ಭರತಖಂಡೇ (8) ಮೇರೋರ್ದಕ್ಷಿಣಪಾರ್ಶ್ವೇ ದಂಡಕಾರಣ್ಯೇ ಗೋದಾವರ್ಯಾ ದಕ್ಷಿಣಕೂಲೇ (9) ಶಾಲಿವಾಹನಶಕೇ ಬುದ್ಧಾವತಾರೇ (10) ರಾಮಕ್ಷೇತ್ರೇ (ಪರಶುರಾಮಕ್ಷೇತ್ರೇ ಎಂದು ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೇರಳದಲ್ಲಿರುವಾಗ ಹೇಳಬೇಕು.) ಅಸ್ಮಿನ್ ವರ್ಷೇ ವರ್ತಮಾನೇ (11) .....ವತ್ಸರೇ ..... ಅಯನೇ .....ಋತೌ .....ಮಾಸೇ .....ಪಕ್ಷೇ ......ತಿಥೌ ಶುಭವಾಸರ ಶುಭನಕ್ಷತ್ರ ಶುಭಯೋಗ ಶುಭಕರಣ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭಪುಣ್ಯತಿಥೌ ಅಸ್ಮದಾದಿಗುರೂಣಾಂ ಶ್ರೀಮನ್ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿವಾಸುದೇವಸಂಕರ್ಷಣ-ಪ್ರದ್ಯುಮ್ನಾನಿರುದ್ಧಚತುರ್ಮೂರ್ತ್ಯಾದ್ಯನಂತಾವತಾರಾತ್ಮಕ ಗಂಗಾಜನಕ ಶ್ರೀತ್ರಿವಿಕ್ರಮಪ್ರೇರಣಯಾ ಶ್ರೀತ್ರಿವಿಕ್ರಮಪ್ರೀತ್ಯರ್ಥಂ ಶ್ರೀವಿಷ್ಣುವೈಷ್ಣವಸನ್ನಿಧೌ ಶಾಲಗ್ರಾಮಚಕ್ರಾಂಕಿತಸನ್ನಿಧೌ ಶ್ರೀತುಲಸ್ಯಶ್ವತ್ಥಸನ್ನಿಧೌ ಪ್ರಾತಃಸ್ನಾನಮಹಂ ಕರಿಷ್ಯೇ.

ಇದು ಪ್ರಾತಃಸ್ನಾನಕಾಲದಲ್ಲಿ ಹೇಳಬೇಕಾದ ಸಂಕಲ್ಪ. ಈ ಸಂಕಲ್ಪದಲ್ಲಿ ಹೇಳುವ ಕೆಲವು ಪದಗಳಿಗೆ ಈಗ ಅರ್ಥವನ್ನು ಆ ಪದಗಳ ಪಕ್ಕದಲ್ಲಿ ಗುರ್ತಿಸಿರುವ ಅಂಕಗಳ ಕ್ರಮದಿಂದ ಹೇಳುತ್ತೇನೆ. (1) ಬ್ರಹ್ಮದೇವರೇ ಮೊದಲಾದ ಸರ್ವರೂ ಶ್ರೀಹರಿಯ ಆಜ್ಞೆಯಿಂದಲೇ ಯಾವಾಗಲೂ ಎಲ್ಲಾ ಕಾರ್ಯಗಳನ್ನೂ ಮಾಡುತ್ತಾರೆ. ಅದೇ ಪ್ರಕಾರವಾಗಿ ಈಗ ಪದವಿಯಲ್ಲಿರುವ ಬ್ರಹ್ಮದೇವರೂ ಎಲ್ಲಾ ಕಾರ್ಯಗಳನ್ನು ಶ್ರೀಹರಿಯ ಆಜ್ಞೆಯಿಂದಲೇ ಮಾಡುತ್ತಿರುವವರು ಎಂಬ ವಿಷಯವನ್ನು "ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ" ಎಂಬ ಪದದಿಂದ ತಿಳಿಸುವೆವು.

"ಸರ್ವರೂ ಶ್ರೀಹರಿಯ ಅಧೀನರು" ಎಂಬ ಅನುಸಂಧಾನವು ಸರ್ವರಿಗೂ ಸರ್ವಕಾಲದಲ್ಲಿಯೂ ಅತ್ಯವಶ್ಯ. ಆದ್ದರಿಂದ ಸಂಕಲ್ಪಾರಂಭದಲ್ಲಿಯೂ ಈ ಅನುಸಂಧಾನವು ಬರುವುದಕ್ಕಾಗಿಯೇ ಈ ವಾಕ್ಯವನ್ನು ಅವಶ್ಯವಾಗಿ ಹೇಳಲೇಬೇಕು. ಪ್ರಜೆಗಳ ವೃದ್ಧಿಗೆ ಕಾರಣವಾಗಿರುವ ದಕ್ಷಪ್ರಜೇಶ್ವರ ಮುಂತಾದವರ ಮಧ್ಯದಲ್ಲಿ ಬ್ರಹ್ಮದೇವರು ಮೊದಲನೆಯವರು. ಆದರೂ ಅವರೂ ಸಹ ಶ್ರೀವಿಷ್ಣುವಿನ ಅಧೀನರು. ಹೀಗಿರುವಾಗ ಉಳಿದವರೆಲ್ಲರೂ ಶ್ರೀವಿಷ್ಣುವಿನ ಅಧೀನರೆಂದು ಹೇಳಬೇಕಾದ್ದಿಲ್ಲ ಎಂದು ತಿಳಿಸುವುದಕ್ಕಾಗಿ ಆದ್ಯಬ್ರಹ್ಮಣಃ ಅಂದರೆ ಪ್ರಜೆಗಳ ವೃದ್ಧಿಗೆ ಕಾರಣರಾಗಿರುವವರ ಮಧ್ಯದಲ್ಲಿ ಮೊದಲಿಗರು ಬ್ರಹ್ಮದೇವರು ಎಂದು ಸಂಕಲ್ಪದಲ್ಲಿ ಹೇಳುತ್ತೇವೆ.

(2) 43,20,000 ವರ್ಷಗಳಿಗೆ ಒಂದು ಮಹಾಯುಗ. ಇಂತಹ 2000 ಮಹಾಯುಗಗಳು ಬ್ರಹ್ಮದೇವರ 1 ದಿನ. ಇಂತಹ 360 ದಿನಗಳಿಗೆ ಬ್ರಹ್ಮದೇವರ 1 ವರ್ಷ. ಇಂತಹ 100 ವರ್ಷಗಳು ಬ್ರಹ್ಮದೇವರ ಆಯುಷ್ಕಾಲವೆನಿಸುತ್ತದೆ. ಈ ಬ್ರಹ್ಮದೇವರ ಆಯುಷ್ಕಾಲವು ಪರ ಎಂದು ಹೇಳಲ್ಪಡುತ್ತದೆ. ಈ ಪರ ಎಂಬ ಕಾಲದಲ್ಲಿ ಶ್ರೀಹರಿಯು ಒಮ್ಮೆ ಆಟಕ್ಕಾಗಿ ಕಣ್ಣು ಮುಚ್ಚಿ ತೆರೆಯುವನು. ಪರ ಎಂಬ ಕಾಲದ ಅರ್ಧವು ಪರಾರ್ಧವೆನಿಸುತ್ತದೆ. ಈಗಿನ ಬ್ರಹ್ಮದೇವರ ಪರದಲ್ಲಿ ಈಗ ಮೊದಲನೆಯ ಪರಾರ್ಧವು ಮುಗಿದಿದೆ. ಎರಡನೆಯ ಪರಾರ್ಧವು ಈಗ ನಡೆಯುತ್ತಿದೆ. ಈ ವಿಷಯವನ್ನು ದ್ವಿತೀಯಪರಾರ್ಧೇ ಅಂದರೆ ಎರಡನೆಯ ಪರಾರ್ಧವು ಈಗ ನಡೆಯುತ್ತಿದೆ ಎಂದು ಸಂಕಲ್ಪ ಕಾಲದಲ್ಲಿ ತಿಳಿಸುತ್ತಿದ್ದೇವೆ.

(3) ಈ ದ್ವಿತೀಯಪರಾರ್ಧದಲ್ಲಿಯೂ ಮೊದಲನೆಯ ಅಂದರೆ ಐವತ್ತ ಒಂದನೆಯ ವರ್ಷದ ಮೊದಲನೆಯ ದಿನದಲ್ಲಿ ಆರಂಭದಲ್ಲಿ ಶ್ರೀಹರಿಯ ಬಿಳಿಬಣ್ಣದ ಹಂದಿಯ ರೂಪದಿಂದ ಅವತರಿಸಿದನು. ಆದ್ದರಿಂದ ಈ ದಿನಕ್ಕೆ ಶ್ವೇತವರಾಹಕಲ್ಪ ಎಂದು ಹೆಸರು. ಶ್ವೇತವರಾಹರೂಪದಿಂದ ಶ್ರೀಹರಿಯು ಅವತರಿಸಿದ ಕಲ್ಪ ಅಂದರೆ ಬ್ರಹ್ಮದೇವರ ದಿನ ಎಂದು ಆ ಪದದ ಅರ್ಥವಾಗಿರುತ್ತದೆ. (4) ಬ್ರಹ್ಮದೇವರ ಒಂದು ಹಗಲಿನಲ್ಲಿ ಹದಿನಾಲ್ಕು ಮನುಗಳು ಮತ್ತು ಅವರ ವಂಶದ ರಾಜರುಗಳು ಕ್ರಮವಾಗಿ ಭೂಮಿಯನ್ನು ರಕ್ಷಿಸುತ್ತಾರೆ. ಈ ಒಂದೊಂದು ಮನುಗಳೂ 71 ಮಹಾಯುಗಗಳವರೆಗೆ ತಮ್ಮ ಅಧಿಕಾರವನ್ನು ನಿರ್ವಹಿಸುತ್ತಾರೆ. ಈ ಮನುಗಳಲ್ಲಿ ಇಂದಿನವರೆಗೆ 6 ಮನುಗಳು ಅಧಿಕಾರವನ್ನು ನಡೆಯಿಸಿದ್ದಾಯಿತು. ಈಗ ಏಳನೆಯ ಮನುವು ಅಧಿಕಾರವನ್ನು ನಡೆಯಿಸುತ್ತಿದ್ದಾನೆ. ವೈವಸ್ವತಮನು ಎಂದು ಅವನ ಹೆಸರು. ವಿವಸ್ವಾನ್ ಅಂದರೆ ಸೂರ್ಯನ ಮಗನಾಗಿರುವುದರಿಂದಲೇ ಈ ಮನುವಿಗೆ ವೈವಸ್ವತಮನು ಎಂಬ ಹೆಸರು ಬಂದಿರುತ್ತದೆ. ಈ ವೈವಸ್ವತಮನುವಿನ ಅಧಿಕಾರಕಾಲವಾಗಿರುವುದರಿಂದ ಈ ಕಾಲವು ವೈವಸ್ವತಮನ್ವಂತರ ಎಂದು ಹೇಳಲ್ಪಡುತ್ತದೆ. ಅದನ್ನು ವೈವಸ್ವತಮನ್ವಂತರೇ ಎಂಬ ಪದದಿಂದ ಸಂಕಲ್ಪದಲ್ಲಿ ಹೇಳುತ್ತೇವೆ.

(5) ಈ ವೈವಸ್ವತಮನುವಿನ ಅಧಿಕಾರ ಕಾಲವಾಗಿರುವಾಗ 71 ಮಹಾಯುಗಗಳಲ್ಲಿ 27 ಮಹಾಯುಗಗಳು ಮುಗಿದು ಹೋದವು. 28ನೆಯ ಮಹಾಯುಗವು ಈಗ ನಡಿಯತ್ತಿದೆ. ಒಂದು ಮಹಾಯುಗದಲ್ಲಿ ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ ಎಂಬ ನಾಲ್ಕು ಯುಗಗಳು ಕ್ರಮವಾಗಿ ಏರ್ಪಡುತ್ತವೆ. ಈ ನಾಲ್ಕು ಯುಗಗಳಲ್ಲಿ ಕೃತಯುಗ ತ್ರೇತಾಯುಗ ದ್ವಾಪರಯುಗ ಎಂಬ ಮೂರು ಯುಗಗಳು ಈಗ ಮುಗಿದವು. ಕಲಿಯುಗವು ಈಗ ನಡೆಯುತ್ತಿದೆ. ಇದನ್ನು "ಅಷ್ಟಾವಿಂಶತಿತಮೇ ಕಲಿಯುಗೇ" ಅಂದರೆ ಇಪ್ಪತ್ತೆಂಟನೆಯ ಕಲಿಯುಗವು ಈಗ ನಡೆಯುತ್ತಿದೆ ಎಂದು ಸಂಕಲ್ಪದಲ್ಲಿ ತಿಳಿಸುತ್ತಿದ್ದೇವೆ. (6) ಈ ಕಲಿಯುಗದಲ್ಲಿಯೂ 4 ಪಾದಗಳಿವೆ. ಅವುಗಳಲ್ಲಿ ಈಗ ಮೊದಲನೆಯ ಪಾದವು ನಡೆಯುತ್ತಿದೆ. ಈ ವಿಷಯವನ್ನು ಪ್ರಥಮ ಪಾದೇ ಎಂಬ ಪದದಿಂದ ತಿಳಿಸುತ್ತಿದ್ದೇವೆ.

ಇಷ್ಟರವರೆಗೆ ಈಗಿನ ಬ್ರಹ್ಮದೇವರ ಆಯುಸ್ಸಿನ ಕಳೆದ ಕಾಲ ಮತ್ತು ಈಗ ಭೂಮಂಡಲದ ಅಧಿಕಾರಿವರ್ಗ ಮುಂತಾದವುಗಳನ್ನು ಹೇಳಿದ್ದಾಯಿತು. ಇನ್ನು ಮುಂದೆ ಭೂಮಂಡಲದಲ್ಲಿ ನಾವು ಇರುವ ಸ್ಥಳದ ಪರಿಚಯವನ್ನು ಸಂಕಲ್ಪದಲ್ಲಿ ತಿಳಿಸಬೇಕಾಗಿದೆ. ಅದನ್ನು ಈಗ ತಿಳಿಸುತ್ತಿದ್ದೇವೆ.

(7) ಭೂಮಿಯಲ್ಲಿ ಏಳು ದ್ವೀಪಗಳು ಮತ್ತು ಏಳು ಸಮುದ್ರಗಳಿವೆ. ಈ ಎಲ್ಲಾ ದ್ವೀಪಗಳ ಮತ್ತು ಸಮುದ್ರಗಳ ಮಧ್ಯದಲ್ಲಿ ಜಂಬೂದ್ವೀಪವು ಇರುತ್ತದೆ. ಈ ಜಂಬೂದ್ವೀಪದಲ್ಲಿ ನಾವು ವಾಸಿಸುತ್ತಿದ್ದೇವೆ. ಈ ವಿಷಯವನ್ನು "ಜಂಬೂದ್ವೀಪೇ" ಎಂಬ ಪದದಿಂದ ತಿಳಿಸುತ್ತಿದ್ದೇವೆ. ಈ ಜಂಬೂದ್ವೀಪದಲ್ಲಿಯೂ ಒಂಭತ್ತು ಭಾಗಗಳಿವೆ. ಆ ಒಂದೊಂದು ಭಾಗಗಳಿಗೂ ವರ್ಷ ಎಂದು ಹೆಸರು. ಆ ಒಂಭತ್ತು ವರ್ಷಗಳ ಮಧ್ಯದಲ್ಲಿ ನಾವು ಭಾರತವರ್ಷ ಎಂಬ ವರ್ಷದಲ್ಲಿ ವಾಸಿಸುತ್ತಿದ್ದೇವೆ. ಈ ವಿಷಯವನ್ನು "ಭಾರತವರ್ಷೇ" ಎಂಬ ಪದದಿಂದ ತಿಳಿಸುತ್ತಿದ್ದೇವೆ. ಈ ಭಾರತವರ್ಷದಲ್ಲಿಯೂ ಒಂಭತ್ತು ಭೂಭಾಗಳಿವೆ. ಅವುಗಳಿಗೆ ಖಂಡ ಎಂದು ಹೆಸರು. ಆ ಒಂಭತ್ತು ಖಂಡಗಳಲ್ಲಿ ಭರತಖಂಡ ಎಂಬ ಖಂಡದಲ್ಲಿ ನಾವು ಈಗ ವಾಸಿಸುತ್ತಿರುವೆವು. ಈ ವಿಷಯವನ್ನು "ಭರತಖಂಡೇ" ಎಂಬ ಪದದಿಂದ ತಿಳಿಸುತ್ತಿರುವೆವು. (8) ಜಂಬೂದ್ವೀಪದ ಮಧ್ಯದಲ್ಲಿ ಮೇರು ಪರ್ವತವು ಇರುತ್ತದೆ. ಈ ಮೇರುಪರ್ವತದ ದಕ್ಷಿಣದಿಕ್ಕಿನಲ್ಲಿ ನಮ್ಮ ಊರು ಇರುತ್ತದೆ. ಈ ವಿಷಯವನ್ನು "ಮೇರೋರ್ದಕ್ಷಿಣಪಾರ್ಶ್ವೇ" ಎಂಬ ಪದದಿಂದ ತಿಳಿಸುತ್ತಿರುವೆವು. ಮೇರುಪರ್ವತದ ದಕ್ಷಿಣದಲ್ಲಿಯೂ ನಾವು ವಾಸಿಸುತ್ತಿರುವ ಸ್ಥಳವು ದಂಡಕಾರಣ್ಯವೆನಿಸುತ್ತದೆ. ಈ ಅಂಶವನ್ನು "ದಂಡಕಾರಣ್ಯೇ" ಎಂಬ ಪದದಿಂದ ತಿಳಿಸುತ್ತಿದ್ದೇವೆ. ದಂಡಕಾರಣ್ಯದಲ್ಲಿಯೂ ಅನೇಕ ಮಹಾನದಿಗಳಿವೆ. ಆ ನದಿಗಳ ಮಧ್ಯದಲ್ಲಿ ಗೋದಾವರೀ ಎಂಬ ನದಿಯ ದಕ್ಷಿಣದಿಕ್ಕಿನಲ್ಲಿ ನಾವು ವಾಸಿಸುತ್ತಿರುವೆವು. ಈ ಅಂಶವನ್ನು "ಗೋದಾವರ್ಯಾ ದಕ್ಷಿಣಕೂಲೇ" ಎಂಬ ಪದದಿಂದ ತಿಳಿಸುತ್ತಿರುವೆವು. (9) ಈ ಕಲಿಯುಗದಲ್ಲಿಯೂ ಆರು ಶಕಪುರುಷರು ಅವತರಿಸಿ ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ಪಾಲಿಸುತ್ತಾರೆ. ಆ ಆರು ಶಕಪುರುಷರಲ್ಲಿ ಈಗ ಮೂರನೆಯವನಾಗಿ ಶಾಲಿವಾಹನನು ಅವತರಿಸಿರುವನು. ಅವನ ಶಕವರ್ಷವು ಈಗ ನಡೆಯುತ್ತಿದೆ. ಈ ವಿಷಯವನ್ನು "ಶಾಲಿವಾಹನಶಕೇ" ಎಂಬ ಪದದಿಂದ ತಿಳಿಸುತ್ತಿರುವೆವು. ಬ್ರಹ್ಮದೇವರ ಒಂದೊಂದು ದಿನದಲ್ಲಿಯೂ ಶ್ರೀಹರಿಯು ಹತ್ತು ಅವತಾರಗಳನ್ನು ಸ್ವೀಕರಿಸುವನು. ಆ ಹತ್ತು ಅವತಾರಗಳಲ್ಲಿ ಈಗ ಸಮೀಪಕಾಲದಲ್ಲಿ ಬುದ್ಧಾವತಾರವನ್ನು ಸ್ವೀಕರಿಸಿರುವನು. ಈ ವಿಷಯವನ್ನು "ಬುದ್ಧಾವತಾರೇ" ಎಂಬ ಪದದಿಂದ ತಿಳಿಸುತ್ತೇನೆ. (10) ಭೂಮಿಯಲ್ಲಿ ಗೋಕರ್ಣದಿಂದ ರಾಮೇಶ್ವರದವರೆಗೆ ಕಣಿವೆ ಕೆಳಗಿರುವ ಭಾಗವು ಪರಶುರಾಮಕ್ಷೇತ್ರವೆನಿಸುತ್ತದೆ. ಉಳಿದ ಭಾಗವೆಲ್ಲವೂ ರಾಮಕ್ಷೇತ್ರವೆನಿಸುತ್ತದೆ. ಆದ್ದರಿಂದ ಉಡುಪಿ ಮುಂತಾದ ಕಣಿವೆ ಕೆಳಗಣ ಭೂಮಿಯಲ್ಲಿರುವಾಗ "ಪರಶುರಾಮಕ್ಷೇತ್ರೇ" ಎಂದೂ ಕಣಿವೆ ಮೇಲಿರುವಾಗ "ರಾಮಕ್ಷೇತ್ರೇ" ಎಂದೂ ಸಂಕಲ್ಪ ಕಾಲದಲ್ಲಿ ಹೇಳಬೇಕು.

ಈ ಸಂಕಲ್ಪದಲ್ಲಿ ವರ್ಷ ಮಾಸ ಮುಂತಾದ ಪದಗಳ ಹಿಂದೆ....ಈ ಚಿಹ್ನೆಯು ಕೊಡಲ್ಪಟ್ಟಿದೆ ಆ ಸ್ಥಳಗಳಲ್ಲಿ ಕ್ರಮವಾಗಿ ತಾನು ಸ್ನಾನ ಮಾಡುವ ದಿನಕ್ಕೆ ಸಂಬಂಧಿಸಿದ ವರ್ಷ, ಅಯನ, ಋತು, ಮಾಸ, ಪಕ್ಷ, ತಿಥಿಗಳ ಹೆಸರುಗಳನ್ನು ಸೇರಿಸಿಕೊಳ್ಳಬೇಕು.

ಸಂಕಲ್ಪದಲ್ಲಿ ಹೇಳಬೇಕಾದ ಎಲ್ಲಾ ಮುಖ್ಯವಾದ ಪದಗಳನ್ನೂ, ಅವುಗಳ ಅರ್ಥವನ್ನೂ ಈಗ ಹೇಳಿದ್ದಾಯಿತು. ಕೆಲವು ಪದಗಳು ಕೆಲವು ಸಂಪ್ರದಾಯದವರಿಗೆ ಹೆಚ್ಚು ಕಡಿಮೆ ಇರಬಹುದು. ಅವುಗಳನ್ನು ಅವರವರು ತಮ್ಮ ಹಿರಿಯರಿಂದ ಕೇಳಿ ತಿಳಿದುಕೊಂಡು ಅವರ ಹೇಳಿಕೆಯಂತೆ ಸ್ವಲ್ಪ ಬದಲಾವಣೆ ಮಾಡಿಕೊಳ್ಳಬಹುದು. ಹೀಗೆ ಸಂಕಲ್ಪ ಮಾಡಿದ ಮೇಲೆ ತೀರ್ಥರಾಜನನ್ನು ಸ್ಮರಿಸಿ ಗಂಗಾದೇವಿಯ ಹನ್ನೆರಡು ನಾಮಗಳನ್ನು ಸ್ಮರಿಸಬೇಕು.

### ತೀರ್ಥರಾಜಸ್ಮರಣೆ

ತ್ವಂ ರಾಜಾ ಸರ್ವತೀರ್ಥಾನಾಂ ತ್ವಮೇವ ಜಗತಃ ಪಿತಾ |
ದೇಹಿ ಮೇ ಯಾಚಿತಸ್ತೀರ್ಥಂ ಸರ್ವಪಾಪಪ್ರಣಾಶನಮ್ ||

"ಓ ಹರಿಯೇ, ನೀನು ಎಲ್ಲಾ ತೀರ್ಥಗಳಿಗೂ ರಾಜನಾಗಿರುವಿ. ನೀನೇ ಜಗತ್ತಿಗೆ ತಂದೆಯಾಗಿರುವಿ. ನಿನ್ನ ಪುತ್ರನಾದ

ನಾನು ನಿನ್ನಿಂದ ತೀರ್ಥವನ್ನು ಬೇಡುವೆನು. ನೀನು ಸಕಲಪಾಪಗಳನ್ನೂ ಪೂರ್ಣವಾಗಿ ಪರಿಹರಿಸುವ ಶಕ್ತಿಯುಳ್ಳ ತೀರ್ಥವನ್ನು ನನಗೆ ಕೊಡು."

### ಗಂಗಾಸ್ಮರಣೆ

ನಂದಿನೀ ನಲಿನೀ ಸೀತಾ ಮಾಲಿನೀ ಚ ಮಲಾಪಹಾ |
ವಿಷ್ಣುಪಾದಾಬ್ಜಸಂಭೂತಾ ಗಂಗಾ ತ್ರಿಪಥಗಾಮಿನೀ ||
ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ |
ದ್ವಾದಶೈತಾನಿ ನಾಮಾನಿ ಯತ್ರ ಯತ್ರ ಜಲಾಶಯೇ ||
ಸ್ನಾನಕಾಲೇ ಪಠೇನ್ನಿತ್ಯಂ ತತ್ರ ತತ್ರ ವಸಾಮ್ಯಹಮ್ |

"ನಂದಿನೀ, ನಲಿನೀ, ಸೀತಾ, ಮಾಲಿನೀ, ಮಲಾಪಹಾ, ವಿಷ್ಣುಪಾದಾಬ್ಜಸಂಭೂತಾ, ಗಂಗಾ, ತ್ರಿಪಥಗಾಮಿನೀ, ಭಾಗೀರಥೀ, ಭೋಗವತೀ, ಜಾಹ್ನವೀ, ತ್ರಿದಶೇಶ್ವರೀ ಎಂದು ನನಗೆ ಹನ್ನೆರಡು ಹೆಸರುಗಳಿವೆ. ಯಾವ ಜಲಾಶಯದಲ್ಲಿ ಸ್ನಾನ ಮಾಡುವಾಗಲೂ ನನ್ನ ಈ ಹನ್ನೆರಡು ನಾಮಗಳನ್ನು ಪಠಿಸಿದರೆ ಆ ಜಲಾಶಯದಲ್ಲಿ ನಾನು ಯಾವಾಗಲೂ ಸನ್ನಿಹಿತಳಾಗಿದ್ದು ಭಕ್ತರು ಅಪೇಕ್ಷಿಸಿದ ಎಲ್ಲಾ ಇಷ್ಟಾರ್ಥಗಳನ್ನೂ ಪೂರೈಸುವೆನು." ಇದು ಗಂಗಾದೇವಿಯ ಮಾತು.

### ಸಕಲತೀರ್ಥಾಭಿಮಾನಿಗಳ ಸ್ಮರಣೆ

ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ |
ಆಗಚ್ಛಂತು ಪವಿತ್ರಾಣಿ ಸ್ನಾನಕಾಲೇ ಸದಾ ಮಮ ||

"ಪುಷ್ಕರ ಮುಂತಾದ ಎಲ್ಲಾ ತೀರ್ಥಗಳೂ, ಗಂಗೆ ಮುಂತಾದ ಎಲ್ಲಾ ನದಿಗಳೂ ಪರಿಶುದ್ಧವಾದ ಎಲ್ಲಾ ವಸ್ತುಗಳೂ ನಾನು ಸ್ನಾನ ಮಾಡುತ್ತಿರುವಾಗ ಈ ನೀರಿನಲ್ಲಿ ಸನ್ನಿಹಿತರಾಗಿದ್ದು ನನ್ನನ್ನು ಅನುಗ್ರಹಿಸಲಿ."

### ಸೂಕ್ತಪಠನ

ಹಿರಣ್ಯಶೃಂಗಂ ವರುಣಂ ಪ್ರಪದ್ಯೇ ತೀರ್ಥಂ ಮೇ ದೇಹಿ ಯಾಚಿತಃ |
ಯನ್ಮಯಾ ಭುಕ್ತಮಸಾಧೂನಾಂ ಪಾಪೇಭ್ಯಶ್ಚ ಪ್ರತಿಗ್ರಹಾತ್ ||
ಯನ್ಮೇ ಮನಸಾ ವಾಚಾ ಕರ್ಮಣಾ ವಾ ದುಷ್ಕೃತಂ ಕೃತಮ್ |
ತನ್ನ ಇಂದ್ರೋ ವರುಣೋ ಬೃಹಸ್ಪತಿಃ ಸವಿತಾ ಚ ಪುನಂತು ಪುನಃ ಪುನಃ ||

"ಸುವರ್ಣದಂತೆ ಅತ್ಯಂತ ಪ್ರಕಾಶವುಳ್ಳ ಶರೀರವನ್ನು ಧರಿಸಿರುವ ವರುಣದೇವ, ನಿನ್ನನ್ನು ಶರಣು ಹೊಂದಿರುವೆನು. ನಾನು ಅಪೇಕ್ಷಿಸಿದ ತೀರ್ಥವನ್ನು ಕೊಡು. ನಾನು ವಿಷ್ಣು ವೈಷ್ಣವದ್ವೇಷಿಗಳ ಮತ್ತು ಇತರ ಮಹಾಪಾಪಿಗಳ ಮನೆಗಳಲ್ಲಿ ಭೋಜನವನ್ನು ಮಾಡಿರುವೆನು. ಅದೇ ಪಾಪಿಗಳು ಕೊಟ್ಟ ವಸ್ತುಗಳನ್ನೂ ಸ್ವೀಕರಿಸಿರುವೆನು. ಮನಸ್ಸಿನಿಂದ ಪಾಪಕಾರ್ಯಗಳ ಸಂಕಲ್ಪ ಮುಂತಾದವುಗಳಿಂದಲೂ, ವಾಗಿಂದ್ರಿಯದಿಂದ ವಿಷ್ಣುವೈಷ್ಣವರ ನಿಂದಾದಿಗಳಿಂದಲೂ, ದೇಹದಿಂದ ವಿಷ್ಣುವೈಷ್ಣವದ್ವೇಷಿಗಳ ಸತ್ಕಾರ ಮುಂತಾದವುಗಳಿಂದಲೂ, ಅಸಂಖ್ಯವಾದ ಪಾಪಗಳನ್ನು ಮಾಡಿರುವೆನು. ಈ ಎಲ್ಲಾ ಪಾಪಗಳನ್ನೂ ಇಂದ್ರ ವರುಣ ಬೃಹಸ್ಪತಿ ಸೂರ್ಯ ಮುಂತಾದವರು ಪರಿಹರಿಸಲಿ." ಎಂದು ಹೇಳುತ್ತಾ ವರುಣ ಮುಂತಾದ ದೇವತೆಗಳನ್ನು ನಮ್ಮ ಪಾಪಪರಿಹಾರಾರ್ಥವಾಗಿ ಪ್ರಾರ್ಥಿಸಬೇಕು.

### ಅಪರಾಧಕ್ಷಮಾಪಣೆ

"ಓ ತೀರ್ಥಾಭಿಮಾನಿದೇವತೆಗಳೇ, ನಾನು ನಿಮ್ಮಲ್ಲಿ ಉಗುಳುತ್ತಿರುವೆನು. ಕಾಲುಗಳಿಂದ ನಿಮ್ಮನ್ನು ತುಳಿಯುತ್ತಿರುವೆನು.

ಮಲಿನವಾದ ನನ್ನ ದೇಹವನ್ನು ತೊಳೆದು ದೇಹದ ಕೊಳೆಯನ್ನು ನಿಮ್ಮಲ್ಲಿ ಬಿಡುತ್ತಿರುವೆನು. ನಿಮ್ಮ ಪವಿತ್ರವಾದ ಜಲವನ್ನು ಮೇಲೆ ಮತ್ತು ಸುತ್ತಮುತ್ತಲೂ ಚೆಲ್ಲುತ್ತಿರುವೆನು. ಈ ಅಪರಾಧಗಳನ್ನು ಕ್ಷಮಿಸಿರಿ. ನನ್ನನ್ನು ರಕ್ಷಿಸಿರಿ." ಎಂದು ಬೇಡಬೇಕು. ಮೈ ಒರೆಸುವ ಬಟ್ಟೆಯನ್ನು ಒಗೆಯಬೇಕು. ನದಿಯಲ್ಲಿ ಪ್ರವಾಹಕ್ಕೆ ಅಭಿಮುಖವಾಗಿಯೂ, ಹಗಲಿನಲ್ಲಿ ಪೂರ್ವಾಭಿಮುಖವಾಗಿಯೂ, ರಾತ್ರಿಯಲ್ಲಿ ಉತ್ತರಾಭಿಮುಖವಾಗಿಯೂ, ಮನೆಯಲ್ಲಿ ಮನೆಗೆ ಅಭಿಮುಖವಾಗಿಯೂ, ಹೊಕ್ಕಳಿನವರೆಗಿನ ನೀರಿನಲ್ಲಿ ನಿಲ್ಲಬೇಕು. ಮೈ ಒರೆಸುವ ವಸ್ತ್ರವನ್ನು ಯಜುರ್ವೇದಿಗಳಾಗಿದ್ದರೆ ಸೊಂಟಕ್ಕೆ ಕಟ್ಟಿಕೊಳ್ಳಬೇಕು. ಇತರ ಶಾಖೆಯವರು ಎಡಗೈಯಲ್ಲಿ ಧರಿಸಬೇಕು. ಮೂರು ಸಲ ಮುಳುಗಿ ಮೈಯನ್ನು ತೊಳೆಯಬೇಕು. ಆಚಮನ ಮಾಡಬೇಕು. ನೀರಿನಿಂದ ಹನ್ನೆರಡು ನಾಮಗಳನ್ನು ಧರಿಸಬೇಕು. ಮುಂದೆ ಹೇಳುವ ಮಂತ್ರಗಳಿಂದ ಅರ್ಘ್ಯವನ್ನು ಕೊಡಬೇಕು.

ಸ್ನಾನಾರ್ಘ್ಯಮಂತ್ರ

ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ |
ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ||
ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ |
ಅನುಕಂಪಾಯ ಮಾಂ ಭಕ್ತಂ ಗೃಹಾಣಾರ್ಘ್ಯಂ ನಮೋಽಸ್ತು ತೇ ||
ವಿಷ್ಣುಪಾದಾಬ್ಜಸಂಭೂತೇ ಗಂಗೇ ತ್ರಿಪಥಗಾಮಿನಿ |
ಗೃಹಾಣಾರ್ಘ್ಯಂ ಮಯಾ ದತ್ತಂ ಜಲೇ ಸನ್ನಿಹಿತಾ ಭವ ||
ವೃದ್ಧಗಂಗೇ ಮಹಾಪುಣ್ಯೇ ಗೌತಮಸ್ಯಾಘನಾಶಿನಿ |
ಗೋದಾವರಿ ಗೃಹಾಣಾರ್ಘ್ಯಂ ತ್ರ್ಯಂಬಕಸ್ಯ ಜಟೋದ್ಭವೇ ||

ಈ ಮಂತ್ರಗಳಿಂದ ಶ್ರೀಹರಿ, ಸೂರ್ಯ, ಗಂಗೆ ಮತ್ತು ಗೋದಾವರಿ ಇವರಿಗೆ ಅರ್ಘ್ಯವನ್ನು ಕೊಡಬೇಕು. ಗಂಗೆಯಲ್ಲಿ ಸ್ನಾನ ಮಾಡುವಾಗ ಇತರ ನದಿಗಳ ಹೆಸರನ್ನೂ ಹೇಳಬಾರದು. ಅರ್ಘ್ಯವನ್ನೂ ಅವರಿಗೆ ಕೊಡಬಾರದು. ಗೋದಾವರೀನದಿಯಲ್ಲಿ ಸ್ನಾನ ಮಾಡುವಾಗ ಗಂಗೆಗೂ, ಗೋದಾವರಿಗೂ ಅರ್ಘ್ಯವನ್ನು ಕೊಡಬೇಕು. ಇತರ ನದಿಗಳಲ್ಲಿ ಸ್ನಾನ ಮಾಡುವಾಗ ಗಂಗೆ ಮತ್ತು ಗೋದಾವರಿಗೆ ಅರ್ಘ್ಯವನ್ನು ಕೊಟ್ಟು ಕೊನೆಗೆ ಆ ನದಿಗೂ ಅರ್ಘ್ಯವನ್ನೂ ಕೊಡಬೇಕು.

ಶರೀರೇ ಝರ್ಝರೀಭೂತೇ ವ್ಯಾಧಿಗ್ರಸ್ತೇ ಕಲೇವರೇ |
ಔಷಧಂ ಜಾಹ್ನವೀತೋಯಂ ವೈದ್ಯೋ ನಾರಾಯಣೋ ಹರಿಃ ||

ಎಂಬ ಮಂತ್ರದಿಂದ ಪ್ರಾರ್ಥಿಸಬೇಕು. ತಾನು ಸ್ನಾನ ಮಾಡುವ ನೀರಿನಲ್ಲಿ ಉಂಗುರದ ಬೆರಳಿನಿಂದ ವರ್ತುಲಾಕಾರವಾದ ರೇಖೆಯನ್ನು ಬರೆದು ಅದರ ಮಧ್ಯದಲ್ಲಿಯೂ ನಾಲ್ಕು ದಿಕ್ಕುಗಳಲ್ಲಿಯೂ ಓಂಕಾರವನ್ನು ಬರೆಯಬೇಕು. ಆ ಸ್ಥಳದಲ್ಲಿ ಎಳ್ಳು, ದರ್ಭೆ, ನಿರ್ಮಾಲ್ಯ, ತುಳಸಿ ತೀರ್ಥಗಳನ್ನು ಹಾಕಬೇಕು. ಪುನಃ ಸಂಕಲ್ಪ ಮಾಡಿ ಮೃತ್ತಿಕಾಸ್ನಾನವನ್ನು ಮಾಡಬೇಕು.

ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ |
ಮೃತ್ತಿಕೇ ಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಮ್ ||
ಸಂಲೇಪಯತಿ ಯೋ ದೇಹೇ ತುಳಸೀಮೂಲಮೃತ್ತಿಕಾಮ್ |
ಸರ್ವತೀರ್ಥಮಯೋ ದೇಹಸ್ತತ್ಕ್ಷಣಾದೇವ ಜಾಯತೇ ||
ತನ್ಮೂಲಮೃತ್ತಿಕಾಭ್ಯಂಗಂ ಕೃತ್ವಾ ಸ್ನಾನಂ ದಿನೇ ದಿನೇ |
ದಶಾಶ್ವಮೇಧಾವಭೃಥಸ್ನಾನಜಂ ಲಭತೇ ಫಲಮ್ ||

ಈ ಮಂತ್ರದಿಂದ ತುಳಸೀಮೂಲಮೃತ್ತಿಕೆಯನ್ನು ದೇಹದಲ್ಲಿ ಎಲ್ಲಾ ಭಾಗಗಳಲ್ಲಿಯೂ ಹಚ್ಚಿಕೊಳ್ಳಬೇಕು. ಪ್ರಯಾಗಃ ಪ್ರಯಾಗಃ ಪ್ರಯಾಗಃ ಎಂದು ಗಟ್ಟಿಯಾಗಿ ಹೇಳಬೇಕು. ಸಮೀಪದಲ್ಲಿರುವ ಬ್ರಾಹ್ಮಣರಿಂದ ಸ್ನಾನಕ್ಕೆ ಅನುಜ್ಞೆಯನ್ನು ಕೇಳಬೇಕು. ಅವರೂ "ಭಾಗೀರಥೀಸ್ನಾನಫಲಮಸ್ತು" ಎಂದು ಹೇಳಬೇಕು.

ಜಲೇ ತೇಜೋಮಯೀಂ ಮೂರ್ತಿಂ ತಸ್ಯಾಂ ಪ್ರಾಣಂ ದ್ರವಾತ್ಮಕಮ್ |
ಜಲರೂಪಂ ತತ್ರ ವಿಷ್ಣುಂ ಧ್ಯಾಯೇದ್ಗಂಗಾದಿತೀರ್ಥಕೇ ||
ದ್ವಾದಶಾಕ್ಷರಮಂತ್ರಂ ಚ ತಥೈವಾಷ್ಟಾಕ್ಷರಂ ಮುನಿಃ |
ವಿಷ್ಣುಮಂತ್ರಂ ಸಮುಚ್ಚಾರ್ಯ ತ್ರಿವಾರಂ ತು ನಿಮಜ್ಜಯೇತ್ |
ಪಾದೇನ ಪಾಣಿನಾ ನೈವ ಹ್ಯಭಿಹನ್ಯಾಜ್ಜಲಂ ದ್ವಿಜಃ ||

"ತಾನು ಸ್ನಾನ ಮಾಡುವ ಗಂಗಾದಿತೀರ್ಥಗಳಲ್ಲಿ ತೇಜೋಮಯವಾದ ಜಲಾತ್ಮಕವಾದ ಶರೀರದಿಂದ ತೀರ್ಥಾಭಿಮಾನಿದೇವತೆಯು ಸನ್ನಿಹಿತರಾದಂತೆ ಸ್ಮರಿಸಬೇಕು. ಆ ದೇವತೆಯೊಳಗೆ ಜಲರೂಪದಿಂದ ವಾಯುದೇವರೂ, ಅವರೊಳಗೆ ಜಲರೂಪದಿಂದ ಶ್ರೀಹರಿಯೂ ವಾಸಿಸುತ್ತಿರುವಂತೆ ಸ್ಮರಿಸಬೇಕು. ವಾಸುದೇವದ್ವಾದಶಾಕ್ಷರ, ನಾರಾಯಣಾಷ್ಟಾಕ್ಷರ ಮತ್ತು ವಿಷ್ಣುಷಡಕ್ಷರಮಂತ್ರಗಳಿಂದ ಕ್ರಮವಾಗಿ ಮೂರು ಸಲ ಮುಳುಗಿ ಸ್ನಾನ ಮಾಡಬೇಕು. ಮುಳುಗುವಾಗ ಕೈಗಳಿಂದಲಾಗಲೀ ಕಾಲುಗಳಿಂದಾಗಲೀ ನೀರನ್ನು ಹೊಡೆಯಬಾರದು."

### ಅಘಮರ್ಷಣ

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣಿಯಾ |
ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾರ್ಜೀಕಿಯೇ ಶೃಣುಹ್ಯಾಸುಷೋಮಯಾ ||

ಈ ಮಂತ್ರದಿಂದ ಅಂಗುಷ್ಠದಿಂದ ನೀರನ್ನು ಕಲಡಿಸಬೇಕು. ಪುನಃ ಆಚಮನ ಮಾಡಬೇಕು. ಪ್ರಾಣಾಯಾಮವನ್ನು ಮಾಡಬೇಕು. ತೀರದ ಮೇಲೆ ಬರಬೇಕು. ನಿರ್ಮಾಲ್ಯವನ್ನು ತಲೆಯಲ್ಲಿಟ್ಟುಕೊಳ್ಳಬೇಕು. ತೀರ್ಥದಿಂದ ಪ್ರೋಕ್ಷಿಸಿಕೊಳ್ಳಬೇಕು.

ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ ನರೋ ಯತ್ರ ದೇವಯವೋ ಮದಂತಿ |
ಉರುಕ್ರಮಸ್ಯ ಸ ಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ||

ಎಂಬ ಮಂತ್ರದಿಂದ ತೀರ್ಥವನ್ನು ಕೈಯಲ್ಲಿ ತೆಗೆದುಕೊಳ್ಳಬೇಕು. (1) ಓಂ ರಾಮಾಯ ನಮಃ (2) ಓಂ ಕೃಷ್ಣಾಯ ನಮಃ (3) ಓಂ ವಾಸುದೇವಾಯ ನಮಃ ಎಂಬ ಮೂರು ಮಂತ್ರಗಳನ್ನು ಕ್ರಮವಾಗಿ ಹೇಳುತ್ತಾ ಮೂರು ಸಲ ತೀರ್ಥವನ್ನು ತೆಗೆದುಕೊಳ್ಳಬೇಕು.

ತ್ರಿರಾತ್ರಫಲದಾ ನದ್ಯೋ ಯಾಃ ಕಾಶ್ಚಿದಸಮುದ್ರಗಾಃ |
ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ||
ಷಣ್ಮಾಸಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ |
ವಿಷ್ಣುಪಾದೋದಕಸ್ಯೈತಾಃ ಕಲಾಂ ನಾರ್ಹಂತಿ ಷೋಡಶೀಮ್ ||

"ಸಾಕ್ಷಾತ್ತಾಗಿ ಸಮುದ್ರದಲ್ಲಿ ಸೇರದಿರುವ ಸಾಮಾನ್ಯ ನದಿಗಳಲ್ಲಿ ಮಾಡುವ ಸ್ನಾನವು ಮೂರು ಸ್ನಾನಗಳ ಫಲವನ್ನು ಕೊಡುತ್ತವೆ. ಸಮುದ್ರದಲ್ಲಿ ಸಾಕ್ಷಾತ್ತಾಗಿ ಸೇರುವ ನದಿಗಳು ಹದಿನೈದು ಸ್ನಾನಗಳ ಫಲವನ್ನೂ, ಸಮುದ್ರದಲ್ಲಿ ಮಾಡುವ ಸ್ನಾನವು ಮೂವತ್ತು ಸ್ನಾನಗಳ ಫಲವನ್ನೂ, ಗೋದಾವರೀನದಿಯಲ್ಲಿ ಮಾಡುವ ಸ್ನಾನವು ಆರು ತಿಂಗಳುಗಳಲ್ಲಿ ಮಾಡಿದ ಸ್ನಾನದ ಫಲವನ್ನೂ, ಗಂಗೆಯಲ್ಲಿ ಮಾಡಿದ ಸ್ನಾನವು ಒಂದು ವರ್ಷದಲ್ಲಿ ಮಾಡಿದ ಸ್ನಾನದ ಫಲವನ್ನೂ ಕೊಡುತ್ತವೆ. ಆದರೆ ಇವೆಲ್ಲವೂ ವಿಷ್ಣುಪಾದೋದಕದ 16ನೆಯ ಒಂದು ಭಾಗದ ಅರ್ಹತೆಯನ್ನೂ ಪಡೆದಿಲ್ಲ."

## ಸ್ನಾನಾಂಗತರ್ಪಣ

(1) ದೇವತರ್ಪಣ - (1) ಬ್ರಹ್ಮಾದಯೋ ಯೇ ದೇವಾಸ್ತಾನ್ ದೇವಾಂಸ್ತರ್ಪಯಾಮಿ. (2) ಭೂಃ ದೇವಾಂಸ್ತರ್ಪಯಾಮಿ. (3) ಭುವಃ ದೇವಾಂಸ್ತರ್ಪಯಾಮಿ. (4) ಸ್ವಃ ದೇವಾಂಸ್ತರ್ಪಯಾಮಿ. ಈ ನಾಲ್ಕು ಮಂತ್ರಗಳಿಂದ ದೇವತೀರ್ಥ ಅಂದರೆ ಬಲಗೈಯ ಎಲ್ಲಾ ಬೆರಳುಗಳ ತುದಿಯ ಭಾಗದಿಂದ ದೇವತೆಗಳನ್ನು ಉದ್ದೇಶಿಸಿ ತರ್ಪಣವನ್ನು ಕೊಡಬೇಕು.

(2) ಋಷಿತರ್ಪಣ - (1) ಕೃಷ್ಣದ್ವೈಪಾಯನಾದಯೋ ಯೋ ಋಷಯಸ್ತಾನ್ ಋಷೀಂಸ್ತರ್ಪಯಾಮಿ. (2) ಭೂಃ ಋಷೀಂಸ್ತರ್ಪಯಾಮಿ. (3) ಭುವಃ ಋಷೀಂಸ್ತರ್ಪಯಾಮಿ. (4) ಸ್ವಃ ಋಷೀಂಸ್ತರ್ಪಯಾಮಿ. (5) ಭೂರ್ಭುವಃ ಸ್ವಃ ಋಷೀಂಸ್ತರ್ಪಯಾಮಿ ಎಂಬ ಐದು ಮಂತ್ರಗಳಿಂದ ಋಷಿತರ್ಪಣವನ್ನು ಕೊಡಬೇಕು. ಈ ತರ್ಪಣವನ್ನು ಯಜ್ಞೋಪವೀತವನ್ನು ಮಾಲಾಕಾರವಾಗಿ ಹಾಕಿಕೊಂಡು ಋಷಿತೀರ್ಥ ಅಂದರೆ ಬಲ ಅಂಗೈಯ ಎಡಭಾಗದಿಂದ ಎರಡೆರಡು ಸಲ ಕೊಡಬೇಕು.

(3) ಪಿತೃತರ್ಪಣ - ಯಜ್ಞೋಪವೀತವನ್ನು ಎಡಕ್ಕೆ ಹಾಕಿ ಕೊಳ್ಳಬೇಕು. (1) ಸೋಮಃ ಪಿತೃಮಾನ್ ಯಮೋಽಂಗಿರಸ್ವಾನ್ ಅಗ್ನಿಷ್ವಾತ್ತಾಃ ಕವ್ಯವಾಹನಾದಯೋ ಯೇ ಪಿತರಸ್ತಾನ್ ಪಿತೄಂಸ್ತರ್ಪಯಾಮಿ. (2) ಭೂಃ ಪಿತೄಂಸ್ತರ್ಪಯಾಮಿ. (3) ಭುವಃ ಪಿತೄಂಸ್ತರ್ಪಯಾಮಿ. (4) ಸ್ವಃ ಪಿತೄಂಸ್ತರ್ಪಯಾಮಿ. (5) ಭೂರ್ಭುವಃ ಸ್ವಃ ಪಿತೄಂಸ್ತರ್ಪಯಾಮಿ ಎಂಬ ಐದು ಮಂತ್ರಗಳಿಂದ ಪಿತೃತೀರ್ಥ ಅಂದರೆ ಬಲಗೈಯ ಅಂಗುಷ್ಠದ ಬುಡದಿಂದ ಪಿತೃತರ್ಪಣವನ್ನು ಕೊಡಬೇಕು. ತಂದೆಯು ಸತ್ತವರು ಮಾತ್ರ ಮೇಲ್ಕಂಡ ಪಿತೃತರ್ಪಣವನ್ನು ಕೊಡಬೇಕು.

ಅಗ್ನಿದಗ್ಧಾಶ್ಚ ಯೇ ಜೀವಾ ಯೇಽಪಿ ಜಾತಾಃ ಕುಲೇ ಮಮ |
ಭೂಮೌ ದತ್ತೇನ ತೋಯೇನ ತೃಪ್ತಾ ಯಾಂತು ಪರಾಂ ಗತಿಮ್ ||

ಈ ಮಂತ್ರದಿಂದ ನದಿಯ ದಂಡೆಯ ಮೇಲೆ ಒಂದು ತರ್ಪಣವನ್ನು ಕೊಡಬೇಕು. ಈ ತರ್ಪಣವು ಬೆಂಕಿಯ ಅಪಘಾತ ಮುಂತಾದ ಕಾರಣಗಳಿಂದ ದುರ್ಮರಣಗಳನ್ನು ಪಡೆದವರು ಸದ್ಗತಿಯನ್ನು ಪಡೆಯುವುದಕ್ಕಾಗಿ ಕೊಡಬೇಕು.

## ಶಿಖೋದಕತರ್ಪಣ

ಶಿಖೋದಕಂ ಭೂಪತಿತಂ ಪಿಬಂತಿ ಪಿತರೋಽಖಿಲಾಃ |
ತಸ್ಮಾಚ್ಛಿಖೋದಕಂ ದದ್ಯಾತ್ಪಿತೄಣಾಂ ತೃಪ್ತಿಹೇತವೇ ||

ಈ ಮಂತ್ರದಿಂದ ತನ್ನ ಬಲ ಹೆಗಲಿನಲ್ಲಿ ಬಿದ್ದಿರುವ ತಲೆಗೂದಲನ್ನು ಹಿಂಡಿ ತರ್ಪಣವನ್ನು ಕೊಡಬೇಕು.

## ವಸ್ತ್ರನಿಷ್ಪೀಡನೋದಕತರ್ಪಣ

ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ |
ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಮ್ ||

ಮೈ ಒರೆಸಿ ಕೊಳ್ಳುವುದಕ್ಕಾಗಿ ಇಟ್ಟುಕೊಂಡಿರುವ ವಸ್ತ್ರವನ್ನು ನಾಲ್ಕಾಗಿ ಮಡಿಸಿ ಕೊಳ್ಳಬೇಕು. ವಸ್ತ್ರದ ತುದಿಭಾಗವು ಮೇಲ್ಮುಖವಾಗಿರುವಂತೆ ಕೈಯಲ್ಲಿ ಹಿಡಿದುಕೊಳ್ಳಬೇಕು. ಆ ವಸ್ತ್ರವನ್ನು ಮೇಲ್ಕಂಡ ಮಂತ್ರದಿಂದ ಹಿಂಡಿ ತರ್ಪಣ ಕೊಡಬೇಕು. ಈ ತರ್ಪಣವನ್ನು ಕೊಟ್ಟ ಮೇಲೆ ಯಜ್ಞೋಪವೀತವನ್ನು ಬಲಕ್ಕೆ ಹಾಕಿಕೊಳ್ಳಬೇಕು. ಆ ಬಟ್ಟೆಯನ್ನು ತಲೆಯ ಮೇಲೆ ಹಾಕಿಕೊಳ್ಳಬೇಕು. ಎಡಗೈಯ ಮಣಿಗಂಟಿನಲ್ಲಿ ಹಾಕಿಕೊಳ್ಳಬಾರದು. ಹಾಗೆ ಹಾಕಿಕೊಂಡರೆ ಮೈಲಿಗೆಯಾಗುತ್ತದೆ. ಎರಡು ಸಲ ಆಚಮನ ಮಾಡಿಕೊಂಡರೆ ಶುದ್ಧಿಯಾಗುತ್ತದೆ. ಈ ತರ್ಪಣವನ್ನೂ ಸಹ ತಂದೆಯಿಲ್ಲದವರು ಮಾತ್ರ ಕೊಡಬೇಕು. ತಂದೆಯಿದ್ದವರು ಸ್ನಾನಕಾಲದಲ್ಲಿ ಮಾಡುವ ತರ್ಪಣವನ್ನು ಈಗ ಹೇಳುತ್ತೇವೆ.

## ತಂದೆಯಿದ್ದವರು ಮಾಡುವ ತರ್ಪಣ

ಅರ್ಯಮಾದ್ಯಾಃ ಪಿತೃಗಣಾಃ ಪಕ್ಷಿರಾಜಕೃಪಾಲಯಾಃ |
ತೇ ಗೃಹ್ಣಂತು ಮಯಾ ದತ್ತಂ ಶಿಖಾಸ್ಥಮಮೃತೋದಕಮ್ ||

ಈ ಮಂತ್ರದಿಂದ ವಸ್ತ್ರವನ್ನು ಹಿಂಡಿದ ನೀರನ್ನು ಯಜ್ಞೋಪವೀತವನ್ನು ಬಲಕ್ಕೆ ಹಾಕಿಕೊಂಡೇ ಕೊಡಬೇಕು. ಹೀಗೆ ತಂದೆಯಿಲ್ಲದವರು ಮೊದಲು ಹೇಳಿದಂತೆಯೂ, ತಂದೆಯಿದ್ದವರು ಎರಡನೇ ಸಲ ಹೇಳಿದಂತೆಯೂ, ತರ್ಪಣವನ್ನು ಕೊಟ್ಟ ಮೇಲೆ ತಂದೆಯಿದ್ದವರೂ, ಇಲ್ಲದವರೂ, ಯಜ್ಞೋಪವೀತವನ್ನು ಮಾಲಾಕಾರವಾಗಿ ಹಾಕಿಕೊಂಡು ಮುಂದೆ ಹೇಳುವ ತರ್ಪಣವನ್ನು ಕೊಡಬೇಕು.

## ಯಕ್ಷ್ಮತರ್ಪಣ

ಯನ್ಮಯಾ ದೂಷಿತಂ ತೋಯಂ ಶಾರೀರಮಲಸಂಚಯಾತ್ |
ತಸ್ಯ ಪಾಪಸ್ಯ ಶುದ್ಧ್ಯರ್ಥಂ ಯಕ್ಷ್ಮಾಣಂ ತರ್ಪಯಾಮ್ಯಹಮ್ ||

"ಓ ಯಕ್ಷ್ಮ ಎಂಬ ಜಲಾಭಿಮಾನಿದೇವತೆಯೇ, ನಾನು ಈಗ ಸ್ನಾನ ಮಾಡುವ ನೆಪದಿಂದ ನನ್ನ ದೇಹದಲ್ಲಿರುವ ಬೆವರು ಮುಂತಾದ ಎಲ್ಲಾ ಕೊಳೆಗಳನ್ನೂ ಈ ತೀರ್ಥದಲ್ಲಿ ಬಿಟ್ಟಿರುವೆನು. ಇದರಿಂದ ಈ ತೀರ್ಥವನ್ನು ಅಶುದ್ಧವಾಗುವಂತೆ ಮಾಡಿರುವೆನು. ಈ ಪಾಪವನ್ನು ಪರಿಹರಿಸುವುದಕ್ಕಾಗಿ ಈಗ ನಿನ್ನನ್ನು ತರ್ಪಣದಿಂದ ಸಂತೋಷಪಡಿಸುವೆನು."

ಈ ಮಂತ್ರದಿಂದ ಯಕ್ಷ್ಮ ಎಂಬ ದೇವತೆಗಾಗಿ ತರ್ಪಣವನ್ನು ಮಾಡಬೇಕು. ತರ್ಪಣವನ್ನು ಕೊಟ್ಟು ಯಜ್ಞೋಪವೀತವನ್ನು ಸವ್ಯವಾಗಿ ಹಾಕಿಕೊಳ್ಳಬೇಕು.

## ಮಾರ್ಜನಂ

ಮೇಲ್ಕಂಡ ರೀತಿಯಿಂದ ತರ್ಪಣವನ್ನು ಕೊಟ್ಟು ಮುಗಿದ ಮೇಲೆ "ಆಪೋ ಹಿ ಷ್ಠಾ" ಮುಂತಾದ ಮಂತ್ರಗಳಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಇದು ಮಾರ್ಜನವೆನಿಸುತ್ತದೆ.

ಸಂಕಲ್ಪಂ ಸೂಕ್ತಪಠನಂ ಮಾರ್ಜನಂ ಚಾಘಮರ್ಷಣಮ್ |
ದೇವಾದಿತರ್ಪಣಂ ಪ್ರೋಕ್ತಂ ಸ್ನಾನಂ ಪಂಚಾಂಗಮುತ್ತಮಮ್ ||

"ಸ್ನಾನಕ್ಕೆ (1) ಸಂಕಲ್ಪ (2) ವರುಣಸೂಕ್ತ ಮುಂತಾದ ಸೂಕ್ತಗಳ ಪಠನ (3) ಮಾರ್ಜನ (4) ಅಘಮರ್ಷಣ ಮಂತ್ರಪಠನ (5) ದೇವ ಋಷಿ ಮತ್ತು ಪಿತೃಗಳ ತರ್ಪಣ, ಇವುಗಳು ಐದು ಅಂಗಗಳು. ಇವುಗಳಿಂದ ಯುಕ್ತವಾದ ಸ್ನಾನವೇ ಉತ್ತಮಸ್ನಾನವೆನಿಸುತ್ತದೆ. ಈಗ ಬ್ರಹ್ಮಕರ್ಮಸಮುಚ್ಚಯಗ್ರಂಥದ ಆಧಾರದಿಂದ ನದೀ ಮುಂತಾದ ಹೊರಗಿನ ಜಲದಲ್ಲಿ ಮಾಡುವ ಸ್ನಾನದ ವಿಧಿಯನ್ನು ಹೇಳಿದ್ದೇವೆ. ಈಗ ಮನೆಯಲ್ಲಿ ಮಾಡುವ ಉಷ್ಣೋದಕ ಸ್ನಾನದ ವಿಧಿಯನ್ನು ಹೇಳುತ್ತೇವೆ.

## ಉಷ್ಣೋದಕಸ್ನಾನ

ಸ್ನಾನಕ್ಕಾಗಿ ನೀರನ್ನು ತುಂಬುವ ಪಾತ್ರೆಯಲ್ಲಿ ಮೊದಲು ತಣ್ಣೀರನ್ನು ಹಾಕಬೇಕು. ಆದರ ಮೇಲೆ ಬಿಸಿ ನೀರನ್ನು ತುಂಬಬೇಕು.

ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ | ಶಂ ಯೋರಭಿಸ್ರವಂತು ನಃ |
ಆಪೋ ಹಿ ಷ್ಠಾ ಮಯೋ ಭುವಸ್ತಾ ನ ಊರ್ಜೇ ದಧಾತನ | ಮಹೇ ರಣಾಯ ಚಕ್ಷಸೇ ||
ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇಹ ನಃ | ಉಶತೀರಿವ ಮಾತರಃ |
ತಸ್ಮಾ ಅರಂ ಗಮಾಮ ವೋ ಯಸ್ಯ ಕ್ಷಯಾಯ ಜಿನ್ವಥ | ಆಪೋ ಜನಯಥಾ ಚ ನಃ ||

ಮುಂತಾದ ಮಂತ್ರಗಳಿಂದ ಬಿಸಿ ನೀರನ್ನು ಮುಟ್ಟಿ ಜಪಿಸಬೇಕು.

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣಿಯಾ |
ಅಸಿಕ್ನಿಯಾ ಮರುದ್ವೃದೇ ವಿತಸ್ತಯಾರ್ಜೀಕಿಯೇ ಶೃಣುಹ್ಯಾಸುಷೋಮಯಾ ||

ಎಂಬ ಮಂತ್ರವನ್ನು ಹೇಳುತ್ತಾ ಎಲ್ಲಾ ತೀರ್ಥಾಭಿಮಾನಿದೇವತೆಗಳನ್ನು ಸ್ಮರಿಸುತ್ತಾ ಸ್ನಾನ ಮಾಡಬೇಕು. ಸ್ನಾನ ಮಾಡಿದ ಮೇಲೆ ಆಚಮನ ಮಾಡಿಕೊಂಡು "ಆಪೋ ಹಿ ಷ್ಠಾ" ಎಂಬ ಮಂತ್ರದಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು.

**ವೈಶಾಖಸ್ನಾನ**

ವೈಶಾಖೇ ಮೇಷಗೇ ಭಾನೌ ಪ್ರಾತಃಸ್ನಾನಂ ಕರೋಮ್ಯಹಮ್ |
ತೀರ್ಥೇ ಜಲಮಯೇ ಪುಣ್ಯೇ ಪುನೀಹಿ ಮಧುಸೂದನ ||

**ಕಾರ್ತಿಕಸ್ನಾನ**

ಕಾರ್ತಿಕೇಽಹಂ ಕರಿಷ್ಯಾಮಿ ಪ್ರಾತಸ್ಸ್ನಾನಂ ಜನಾರ್ದನ |
ಪ್ರೀತ್ಯರ್ಥಂ ತವ ದೇವೇಶ ದಾಮೋದರ ಮಯಾ ಸಹ ||

**ಮಾಘಸ್ನಾನ**

ಮಾಘಸ್ನಾನಂ ಕರಿಷ್ಯಾಮಿ ಮಕರಸ್ಥೇ ದಿವಾಕರೇ |
ಆಸಮಾಪ್ತಿ ಮಹಾದೇವ ನಿರ್ವಿಘ್ನಂ ಕುರು ಮಾಧವ ||

ಈ ಮಂತ್ರಗಳನ್ನು ಹೇಳಿ ಆಯಾ ಮಾಸದಲ್ಲಿ ಮೇಲ್ಕಂಡ ಕ್ರಮದಿಂದ ಸ್ನಾನ ಮಾಡಬೇಕು.

ಶ್ರೀಮಧ್ವಾಚಾರ್ಯರು ಸದಾಚಾರಸ್ಮೃತಿಯಲ್ಲಿ "ಸ್ನಾನಂ ಕುರ್ಯಾದ್ಯಥಾವಿಧಿ" ಎಂದು ಸೂತ್ರಪ್ರಾಯವಾಗಿ ಹೇಳಿದರು. ಅಲ್ಲಿರುವ "ಸ್ನಾನಂ" ಎಂಬ ಪದವು ನಿತ್ಯಸ್ನಾನ, ನೈಮಿತ್ತಿಕಸ್ನಾನ, ಕಾಮ್ಯಸ್ನಾನ, ಪ್ರಾತಃಸ್ನಾನ, ಮೃತ್ತಿಕಾಸ್ನಾನ ಆಶೌಚಪರಿಹಾರಕ್ಕಾಗಿ ಮಾಡುವ ಸ್ನಾನ, ರಜಸ್ವಲಾಸ್ನಾನ, ಮಲಾಪಕರ್ಷಣಸ್ನಾನ ಮುಂತಾದ ಸಕಲ ವಿಧವಾದ ಸ್ನಾನಗಳನ್ನೂ ತಿಳಿಸುತ್ತದೆ. ಸ್ನಾನಂ ಎಂಬ ಪದದಲ್ಲಿರುವ ಏಕವಚನವು ಮೇಲ್ಕಂಡ ಎಲ್ಲಾ ಸ್ನಾನಗಳ ಮಧ್ಯದಲ್ಲಿ ಒಂದೇ ಸ್ನಾನವು ಉತ್ತಮವೆಂದೂ ಅದೂ ಸರ್ವಕರ್ಮಾಂಗವೂ ನಿತ್ಯವೂ ಆಗಿರುವ ಪ್ರಾತಃ ಸ್ನಾನವೇ ಆಗಿರುವುದೆಂದೂ ತಿಳಿಸಿರುತ್ತದೆ. "ವಿಧಾನತಃ " ಎಂಬ ಪದವು ಮೇಲ್ಕಂಡ ಎಲ್ಲಾ ಸ್ನಾನಗಳಿಗೂ ಬೇರೆ ಬೇರೆ ವಿಧವಾದ ಕ್ರಮಗಳಿರುವುದಾಗಿಯೂ, ಆ ಕ್ರಮಗಳಿಂದಲೇ ಸ್ನಾನವನ್ನು ಮಾಡಬೇಕೆಂದೂ, ಆ ಕ್ರಮವನ್ನು ಯಾವ ಕಾರಣದಿಂದಲೂ ಮೀರಬಾರದೆಂದೂ ತಿಳಿಸುತ್ತದೆ. "ಕುರ್ಯಾತ್" ಎಂಬ ಪದವು ಈ ಸ್ನಾನವನ್ನು ಮಾಡಲೇಬೇಕು. ಇಲ್ಲದಿದ್ದರೆ ಅನರ್ಥವು ಏರ್ಪಡುತ್ತದೆಯೆಂದು ವಿಧಿಪ್ರತ್ಯಯವಾಗಿರುವ ವಿಧಿಲಿಙ್ ಪ್ರತ್ಯಯದಿಂದ ತಿಳಿಸುತ್ತದೆ.

ಆದ್ದರಿಂದ "ಸ್ನಾನಂ ಕುರ್ಯಾದ್ವಿಧಾನತಃ" ಎಂಬ ಎಂಟು ಅಕ್ಷರಗಳಿಂದ ಅನಂತಾರ್ಥಗಳನ್ನು ಸಂಗ್ರಹಿಸಿರುವ ಶ್ರೀಮಧ್ವಾಚಾರ್ಯರು ಸರ್ವಜ್ಞಶಿರೋಮಣಿಗಳೆಂದು ಹೇಳಿರುವುದು ಅತ್ಯಂತಯುಕ್ತವಾಗಿದೆ. ಈ ವಾಕ್ಯದಿಂದ ತಿಳಿಸಲ್ಪಟ್ಟ ಅನಂತಾರ್ಥಗಳಲ್ಲಿ ಕೆಲವು ಅರ್ಥಗಳನ್ನು ಮಾತ್ರ ಶ್ರೀಕೃಷ್ಣಾಚಾರ್ಯರು ಸ್ಮೃತಿಮುಕ್ತಾವಲೀ ಗ್ರಂಥದಲ್ಲಿ ಉದಾಹರಿಸಿರುವರು. ಅವುಗಳಲ್ಲಿ ಕೆಲವನ್ನು ಮಾತ್ರ ನಾನು ಈ ವ್ಯಾಖ್ಯಾನದಲ್ಲಿ ಸಂಗ್ರಹಿಸಿರುವೆನು. ನಾನು ಮಾಡಿದ ಈ ಸಂಗ್ರಹದಿಂದ ಆಚಾರ್ಯರು ಪ್ರಸನ್ನರಾಗಲಿ. || 2 ||

ಉದ್ಧೃತೇತಿ ಮೃದಾಽಽಲಿಪ್ಯ ದ್ವಿಪಡಷ್ಟಪಡಕ್ಷರೈಃ |
ತ್ರಿರ್ನಿಮಜ್ಜ್ಯಾಪ್ಯಸೂಕ್ತೇನ ಪ್ರೋಕ್ಷಯಿತ್ವಾ ಪುನಸ್ತಥಾ ||
ಮೃದಾಽಽಲಿಪ್ಯ ನಿಮಜ್ಜ್ಯ ತ್ರಿಸ್ತ್ರಿರ್ಜಪೇದಘಮರ್ಷಣಮ್ || 3 ||

**ಪದಚ್ಛೇದ** - ಉದ್ಧೃತಾ ಇತಿ ಮೃದಾ ಆಲಿಪ್ಯ ದ್ವಿಷಡಷ್ಟಷಡಕ್ಷರೈಃ ತ್ರಿಃ ನಿಮಜ್ಜ್ಯ ಆಪ್ಯಸೂಕ್ತೇನ ಪ್ರೋಕ್ಷಯಿತ್ವಾ ಪುನಃ ತಥಾ ಮೃದಾ ಆಲಿಪ್ಯ ನಿಮಜ್ಜ್ಯ ತ್ರಿಃ ತ್ರಿಃ ಜಪೇತ್ ಅಘಮರ್ಷಣಮ್.

**ಅನ್ವಯ** - ಉದ್ಧೃತಾ ಇತಿ ಮೃದಾ (ಶರೀರಂ) ಆಲಿಪ್ಯ (ತ್ರಿವಾರಂ ಸ್ನಾತ್ವಾ) ದ್ವಿಷಡಷ್ಟಷಡಕ್ಷರೈಃ ತ್ರಿಃ ನಿಮಜ್ಜ್ಯ (ಆಚಮ್ಯ) ಆಪ್ಯಸೂಕ್ತೇನ ಪ್ರೋಕ್ಷಯಿತ್ವಾ ಪುನಃ ತಥಾ ಮೃದಾ (ಶರೀರಂ) ಆಲಿಪ್ಯ (ಪುನಃ) ತ್ರಿಃ ನಿಮಜ್ಜ್ಯ ಅಘಮರ್ಷಣಂ ತ್ರಿಃ ಜಪೇತ್.

**ಅರ್ಥ** - "ಉದ್ಧೃತಾ ಇತಿ" ಉದ್ಧೃತಾಸಿ ವರಾಹೇಣ ಎಂಬ ಮೂರು ಋಕ್ಕುಗಳಿಂದ ಯುಕ್ತವಾದ ಮಂತ್ರದಿಂದ "ಮೃದಾ" ತುಳಸೀಮೃತ್ತಿಕೆ ಮುಂತಾದ ಮಣ್ಣುಗಳಿಂದ (ಶರೀರಂ) ದೇಹವನ್ನು "ಆಲಿಪ್ಯ" ಲೇಪನ ಮಾಡಿ (ತ್ರಿವಾರಂ ಸ್ನಾತ್ವಾ) ಮೂರು ಸಲ ನೀರಿನಲ್ಲಿ ಮುಳುಗಿ, ದ್ವಿಷಡಷ್ಟಷಡಕ್ಷರೈಃ "ದ್ವಿಷಟ್" ಹನ್ನೆರಡು "ಅಷ್ಟ" ಎಂಟು "ಷಟ್" ಆರು "ಅಕ್ಷರೈಃ" ಅಕ್ಷರಗಳಿಂದ ಯುಕ್ತವಾಗಿರುವ ಮೂರು ಮಂತ್ರಗಳಿಂದ (ವಾಸುದೇವದ್ವಾದಶಾಕ್ಷರಮಂತ್ರ, ನಾರಾಯಣಾಷ್ಟಾಕ್ಷರಮಂತ್ರ ಮತ್ತು ವಿಷ್ಣುಷಡಕ್ಷರಮಂತ್ರ ಅಥವಾ ಕೃಷ್ಣಷಡಕ್ಷರಮಂತ್ರಗಳಿಂದ) "ತ್ರಿಃ" ಮೂರು ಸಲ "ನಿಮಜ್ಜ್ಯ" ಮುಳುಗಿ (ಆಚಮ್ಯ) ಆಚಮನ ಮಾಡಿಕೊಂಡು "ಆಪ್ಯಸೂಕ್ತೇನ" "ಆಪೋ ಹಿ ಷ್ಠಾ ಮಯೋ ಭುವಃ" ಎಂಬ ಮೂರು ಋಕ್ಕುಗಳಿಂದ ಯುಕ್ತವಾದ ಆಪ್ಯಸೂಕ್ತದಿಂದಲೂ ಇತರ ಆಪ್ಯಸೂಕ್ತಗಳಿಂದಲೂ "ಪ್ರೋಕ್ಷಯಿತ್ವಾ" ಶರೀರವನ್ನು ಪ್ರೋಕ್ಷಣೆ ಮಾಡಿ "ಪುನಃ" ಇನ್ನೊಮ್ಮೆ "ತಥಾ" ಹಿಂದಿನಂತೆಯೇ "ಮೃದಾ" ಮೃತ್ತಿಕೆಯಿಂದ (ಶರೀರಂ) ದೇಹವನ್ನು "ಆಲಿಪ್ಯ" ಉದ್ಧೃತಾಸಿ ಎಂಬ ಮಂತ್ರದಿಂದ ಲೇಪನ ಮಾಡಿ (ಪುನಃ) ಇನ್ನೊಮ್ಮೆ "ತ್ರಿಃ" ಮೂರು ಸಲ "ನಿಮಜ್ಜ್ಯ" ಸ್ನಾನ ಮಾಡಿ "ಅಘಮರ್ಷಣಂ" "ಋತಂ ಚ ಸತ್ಯಂ ಚ" ಎಂಬ ಮೂರು ಋಕ್ಕುಗಳುಳ್ಳ ಅಘಮರ್ಷಣಸೂಕ್ತವನ್ನು "ತ್ರಿಃ" ಮೂರು ಸಲ "ಜಪೇತ್" ಜಪಿಸಬೇಕು.

**ತಾತ್ಪರ್ಯ** - ಮೊದಲು ಮೃತ್ತಿಕಾಸ್ನಾನವನ್ನು ಮಾಡಬೇಕು. ಅದರ ಕ್ರಮವನ್ನು ಹಿಂದೆ ಅನೇಕ ಪ್ರಮಾಣಗಳನ್ನು ಉದಾಹರಿಸಿ ಬಹಳ ವಿಸ್ತಾರವಾಗಿ ಹೇಳಿದ್ದೇವೆ. ಈಗ ಸಂಕ್ಷೇಪವಾಗಿ ಹೇಳುತ್ತೇವೆ. "ಶರೀರಶುದ್ಧ್ಯರ್ಥಂ ತುಳಸೀಮೃತ್ತಿಕಾಸ್ನಾನಮಹಂ ಕರಿಷ್ಯೇ" ಎಂದು ಸಂಕಲ್ಪ ಮಾಡಬೇಕು. ತುಳಸೀಮೃತ್ತಿಕೆಯನ್ನು ತೆಗೆದುಕೊಳ್ಳಬೇಕು. ನೆಲದಲ್ಲಾಗಲೀ ಬಲಮೊಣಕಾಲಿನಲ್ಲಾಗಲೀ ಇಟ್ಟುಕೊಳ್ಳಬೇಕು. ನಾರಾಯಣಾಷ್ಟಾಕ್ಷರ ಮಂತ್ರದಿಂದ ಪ್ರೋಕ್ಷಿಸಬೇಕು. ಗಾಯತ್ರೀಮಂತ್ರದಿಂದ ಜಪಿಸಬೇಕು. ಮೂರು ವಿಧವಾಗಿ ವಿಂಗಡಿಸಬೇಕು. ಮೊದಲನೆಯ ಭಾಗವನ್ನು ತೆಗೆದುಕೊಳ್ಳಬೇಕು. ಅದನ್ನು ಮೂರು ಭಾಗವಾಗಿ ವಿಂಗಡಿಸಬೇಕು. ಮೊದಲನೆಯ ಭಾಗವನ್ನು ಕಪೋಲಗಳಿಗೆ ಹಚ್ಚಬೇಕು. ಎರಡನೆಯ ಭಾಗವನ್ನು ಕಪೋಲಗಳಿಗೂ ಕಂಕುಳಪ್ರದೇಶಕ್ಕೂ ಹಚ್ಚಬೇಕು. ಮೂರನೆಯ ಭಾಗವನ್ನು ಸಂಪೂರ್ಣದೇಹದಲ್ಲಿ ಹಚ್ಚಬೇಕು. ಎರಡನೆಯ ಭಾಗವನ್ನೂ ಮೂರು ವಿಧವಾಗಿ ವಿಂಗಡಿಸಬೇಕು. ಮೊದಲನೆಯ ಭಾಗದಿಂದ ಸಂಪೂರ್ಣದೇಹವನ್ನು ಲೇಪಿಸಬೇಕು. ಎರಡನೆಯ ಭಾಗದಿಂದ ಕಪೋಲಗಳಲ್ಲಿ ಲೇಪಿಸಬೇಕು. ಮೂರನೆಯ ಭಾಗದಿಂದ ತಲೆ ಕಾಲು ಮತ್ತು ಎದೆಗಳನ್ನು ಲೇಪಿಸಬೇಕು. ಉಳಿದ ಮೂರನೆಯ ಭಾಗವನ್ನು ಕೈಯಲ್ಲಿಟ್ಟುಕೊಂಡು ಸ್ನಾನ ಮಾಡಬೇಕು. ಮೃತ್ತಿಕೆಯನ್ನು ದೇಹದ ಅವಯವಗಳಲ್ಲಿ ಲೇಪಿಸುವಾಗ ಕೆಳಗಿನ ಮಂತ್ರಗಳನ್ನು ಹೇಳಬೇಕು.

ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ |
ಮೃತ್ತಿಕೇ ಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಮ್ ||
ಮೃತ್ತಿಕೇ ಬ್ರಹ್ಮದತ್ತಾಸಿ ಕಾಶ್ಯಪೇನಾಭಿಮಂತ್ರಿತಾ |
ಮೃತ್ತಿಕೇ ದೇಹಿ ಮೇ ಪುಷ್ಟಿಂ ತ್ವಯಿ ಸರ್ವಂ ಪ್ರತಿಷ್ಠಿತಮ್ ||
ಮೃತ್ತಿಕೇ ಪ್ರತಿಷ್ಠಿತಂ ಸರ್ವಂ ತನ್ಮೇ ನಿರ್ಣುದ ಮೃತ್ತಿಕೇ |
ತ್ವಯಾ ಹತೇನ ಪಾಪೇನ ಗಚ್ಛಾಮಿ ಪರಮಾಂ ಗತಿಮ್ ||

ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ |
ಶಿರಸಾ ಧಾರಯಿಷ್ಯಾಮಿ ರಕ್ಷಸ್ವ ಮಾಂ ಪದೇ ಪದೇ ||
ಭೂಮಿರ್ಧೇನುರ್ಧರಣೀ ಲೋಕಧಾರಿಣೀ |
ಸಂಲೇಪಯತಿ ಯೋ ದೇಹೇ ತುಳಸೀಮೂಲಮೃತ್ತಿಕಾಮ್ ||
ಸರ್ವತೀರ್ಥಮಯೋ ದೇಹಸ್ತತ್ಕ್ಷಣಾದೇವ ಜಾಯತೇ |
ತನ್ಮೂಲಮೃತ್ತಿಕಾಭ್ಯಂಗಂ ಕೃತ್ವಾ ಸ್ನಾನಂ ದಿನೇ ದಿನೇ ||
ದಶಾಶ್ವಮೇಧಾವಭೃಥಸ್ನಾನಜಂ ಲಭತೇ ಫಲಮ್ |
ಯಕ್ಷ್ಮಂ ಸರ್ವಸ್ಮಾದಾತ್ಮನಸ್ತಮಿಮಂ ವಿವೃಹಾಮಿ ತೇ ||
ಅಕ್ಷಿಭ್ಯಾಂ ತೇ ನಾಸಿಕಾಭ್ಯಾಂ ಕರ್ಣಾಭ್ಯಾಂ ಚುಬುಕಾವಧಿ |
ಯಕ್ಷ್ಮಂ ಶೀರ್ಷಮಸ್ತಿಷ್ಕಾಜ್ಜಿಹ್ವಾಯಾ ವಿವೃಹಾಮಿ ತೇ ||

ಈ ಮಂತ್ರಗಳನ್ನು ಹೇಳುತ್ತಾ ಮೇಲೆ ಹೇಳಿದ ವಿಧದಿಂದ ಮೃತ್ತಿಕೆಯನ್ನು ದೇಹದಲ್ಲಿ ಲೇಪನ ಮಾಡಿ ವರಾಹರೂಪಿಯಾದ ಶ್ರೀಹರಿಯನ್ನು ಸ್ಮರಿಸಿ ಮೂರು ಸಲ ಸ್ನಾನ ಮಾಡಬೇಕು. ಒಮ್ಮೊಮ್ಮೆ ಮುಳುಗುವಾಗಲೂ "ಓಂ ನಮೋ ಭಗವತೇ ವಾಸುದೇವಾಯ" ಎಂಬ ವಾಸುದೇವದ್ವಾದಶಾಕ್ಷರಮಂತ್ರವನ್ನೂ, "ಓಂ ನಮೋ ನಾರಾಯಣಾಯ" ಎಂಬ ನಾರಾಯಣಾಷ್ಟಾಕ್ಷರ ಮಂತ್ರವನ್ನೂ "ಓಂ ವಿಷ್ಣವೇ ನಮಃ" ಎಂಬ ವಿಷ್ಣುಷಡಕ್ಷರಮಂತ್ರ ಅಥವಾ "ಓಂ ಕ್ಲೀಂ ಕೃಷ್ಣಾಯ ನಮಃ" ಎಂಬ ಕೃಷ್ಣಷಡಕ್ಷಕರ ಮಂತ್ರವನ್ನೂ ಜಪಿಸುತ್ತಾ ಮುಳುಗಬೇಕು. (ವಾಸುದೇವದ್ವಾದಶಾಕ್ಷರದಿಂದ ಮೊದಲು ಮುಳುಗಬೇಕು. ನಾರಾಯಣಾಷ್ಟಾಕ್ಷರಮಂತ್ರದಿಂದ ಎರಡನೇ ಸಲ ಮುಳುಗಬೇಕು. ಷಡಕ್ಷರ ಮಂತ್ರದಿಂದ ಮೂರನೇ ಸಲ ಮುಳುಗಬೇಕು. ಈ ಸಂಪ್ರದಾಯವೂ ಇದೆ. ಸಂಪ್ರದಾಯದಂತೆ ಮಾಡಬೇಕು.)

ಹೀಗೆ ಮೂರು ಸಲ ಮುಳುಗಿ ಮೇಲೆ ಬರಬೇಕು. ತಲೆಯ ಜುಟ್ಟುಗಳನ್ನು ಗಂಟು ಹಾಕಿಕೊಳ್ಳಬೇಕು. ಆಚಮನ ಮಾಡಬೇಕು. ಕೆಳಗೆ ಕೊಟ್ಟಿರುವ ಆಪ್ಯಸೂಕ್ತವನ್ನು ಪಠಿಸುತ್ತಾ ತನ್ನ ದೇಹವನ್ನು ಪ್ರೋಕ್ಷಿಸಬೇಕು.

### ಆಪ್ಯಸೂಕ್ತ

"ಆಪೋ ವಾ ಇದಂ ಸರ್ವಂ, ವಿಶ್ವಾಭೂತಾನ್ಯಾಪಃ, ಪ್ರಾಣಾ ವಾ ಆಪಃ, ಪಶವ ಆಪೋಽನ್ನಮಾಪಃ ಸಮ್ರಾಡಾಪೋ ವಿರಾಡಾಪಃ ಸ್ವರಾಡಾಪಃ ಛಂದಾಂಸ್ಯಾಪೋ ಜ್ಯೋತೀಂಷ್ಯಾಪೋ ಯಜೂಂಷ್ಯಾಪಃ ಸತ್ಯಮಾಪಃ ಸರ್ವದೇವತಾ ಆಪೋ ಭೂರ್ಭುವಸ್ಸುವರಾಪ ಓಂ | ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ | ಸುರಭಿನೋ ಮುಖಾ ಕರತ್ಪ್ರಣ ಆಯೂಂಷಿ ತಾರಿಷತ್ | ಆಪೋ ಹಿ ಷ್ಠಾ ಮಯೋ ಭುವಸ್ತಾನ ಊರ್ಜೇ ದಧಾತನ | ಮಹೇ ರಣಾಯ ಚಕ್ಷಸೇ | ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇಹ ನಃ | ಉಶತೀರಿವ ಮಾತರಃ | ತಸ್ಮಾ ಅರಂ ಗಮಾಮ ವೋ ಯಸ್ಯ ಕ್ಷಯಾಯ ಜಿನ್ವಥ | ಆಪೋ ಜನಯಥಾ ಚ ನಃ |"

ಶ್ರೀಹರಿಯು ಸರ್ವಜೀವರನ್ನೂ ಸರ್ವಕಾಲದಲ್ಲಿಯೂ ಚೆನ್ನಾಗಿ ಪಾಲಿಸುತ್ತಾನೆ. ಆದ್ದರಿಂದ ಅವನಿಗೆ "ಆ" ಅಂದರೆ ಚೆನ್ನಾಗಿ "ಪ" ಎಂದರೆ ಪಾಲಿಸುವವನು ಎಂಬ ಕಾರಣದಿಂದ "ಆಪ" ಎಂಬ ಹೆಸರು ಬಂದಿರುತ್ತದೆ. ಇಂತಹ ಶ್ರೀಹರಿಯ ಮಹಿಮೆಯನ್ನು ಹೇಳುವುದರಿಂದ ಮೇಲ್ಕಂಡ ಸೂಕ್ತಗಳೆಲ್ಲವೂ ಆಪ್ಯಸೂಕ್ತಗಳೆನಿಸುತ್ತವೆ. ಈ ಆಪ್ಯಸೂಕ್ತಗಳಿಂದ ದೇಹವನ್ನು ಪ್ರೋಕ್ಷಣೆ ಮಾಡಿಕೊಳ್ಳಬೇಕು. ಇದಕ್ಕೆ ಮಾರ್ಜನ ಎಂದು ಹೆಸರು. ಈ ಮಾರ್ಜನವನ್ನು ಮಾಡಿ ಮುಗಿದ ಮೇಲೆ ಮಾರ್ಜನ ಶೇಷ ಜಲವನ್ನು ಮೂಸಿ ಕೆಳಗೆ ಬಿಡಬೇಕು. ಹರಿಗುರುಗಳನ್ನು ಸ್ಮರಿಸುತ್ತಾ ಪುನಃ ಮುಳುಗಬೇಕು. ತಂದೆಯಿಲ್ಲದವರು

ಪಿತೃಗಳನ್ನು ಉದ್ದೇಶಿಸಿ ಅವರವರ ಹೆಸರನ್ನು ಹೇಳುತ್ತಾ ಸ್ನಾನ ಮಾಡಬೇಕು. ಗುರುಗಳನ್ನು ಸ್ಮರಿಸಿ ಸ್ನಾನ ಮಾಡಬೇಕು. ಕೆಳಗಣ ಮಂತ್ರವನ್ನು ಹೇಳುತ್ತಾ ಅಂಗುಷ್ಠದಿಂದ ಮೂರು ಸಲ ನೀರನ್ನು ಕಲಗಿಸಬೇಕು.

ಇಮಂ ಮೇ ಗಂಗೇ ಯಮುನೇ ಸರಸ್ವತೀ ಶುತುದ್ರಿ ಸ್ತೋಮಂ ಸಚತಾಪರುಷ್ಣ್ಯಾ |
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ||

ಈ ಮಂತ್ರದಿಂದ ನೀರನ್ನು ಮೂರು ಸಲ ಕಲಗಿಸಿ ಬಿಟ್ಟು ಹಿಂದೆ ಹೇಳಿದಂತೆ ಪುನಃ ಮೃತ್ತಿಕಾಸ್ನಾನವನ್ನು ಮಾಡಬೇಕು. ಹಿಂದೆ ಕೈಯಲ್ಲಿ ಧರಿಸಿದ್ದ ಮೃತ್ತಿಕೆಯನ್ನು ಮೂರು ಭಾಗವಾಗಿ ವಿಂಗಡಿಸಬೇಕು. ಒಂದು ಭಾಗದಿಂದ ದ್ವಾದಶನಾಮಗಳನ್ನು ದೇಹದಲ್ಲಿ ಧರಿಸಬೇಕು. ಎರಡನೇ ಭಾಗವನ್ನು ಕಂಕುಳಪ್ರದೇಶದಲ್ಲಿ ಹಚ್ಚಬೇಕು. ಮೂರನೆಯ ಭಾಗವನ್ನು ಪೂರ್ಣದೇಹಕ್ಕೆ ಹಚ್ಚಬೇಕು. "ಉದ್ಧೃತಾಸಿ ವರಾಹೇಣ" ಎಂಬ ಹಿಂದೆ ಹೇಳಿದ ಮಂತ್ರವನ್ನು ಪಠಿಸುತ್ತಾ ಮೂರು ಸಲ ಮುಳುಗಬೇಕು. ಆ ಮೇಲೆ ಕೆಳಗೆ ಬರೆದಿರುವ ಅಘಮರ್ಷಣಸೂಕ್ತವನ್ನು ಮೂರು ಸಲ ಜಪಿಸಬೇಕು.

## ಅಘಮರ್ಷಣಸೂಕ್ತ

**ಓಂ ಋತಂ ಚ ಸತ್ಯಂ ಚಾಭೀದ್ಧಾತ್ತಪಸೋಽಧ್ಯಜಾಯತ | ತತೋ ರಾತ್ರಿರಜಾಯತ | ತತಸ್ಸಮುದ್ರೋ ಅರ್ಣವಃ | ಸಮುದ್ರಾದರ್ಣವಾದಧಿ ಸಂವತ್ಸರೋ ಅಜಾಯತ | ಅಹೋರಾತ್ರಾಣಿ ವಿದಧದ್ವಿಶ್ವಸ್ಯ ಮಿಷತೋ ವಶೀ | ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ | ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸುವಃ |**

ಇದು ಅಘಮರ್ಷಣಸೂಕ್ತವೆನಿಸುತ್ತದೆ. ಈ ಅಘಮರ್ಷಣಸೂಕ್ತವನ್ನು ಮೂರು ಸಲ ಜಪಿಸಬೇಕು. || 3 ||

**ಸ್ರಷ್ಟಾರಂ ಸರ್ವಲೋಕಾನಾಂ ಸ್ಮೃತ್ವಾ ನಾರಾಯಣಂ ಪರಮ್ || 4 ||**
**ಯತಶ್ವಾಸೋ ನಿಮಜ್ಜ್ಯಾಽಪ್ಸು ಪ್ರಣವೇನೋತ್ಥಿತಸ್ತತಃ |**
**ಸಿಂಚೇತ್ಪುರುಷಸೂಕ್ತೇನ ಸ್ವದೇಹಸ್ಥಂ ಹರಿಂ ಸ್ಮರನ್ || 5 ||**

**ಪದಚ್ಛೇದ** - ಸ್ರಷ್ಟಾರಂ, ಸರ್ವಲೋಕಾನಾಂ, ಸ್ಮೃತ್ವಾ, ನಾರಾಯಣಂ, ಪರಂ, ಯತಶ್ವಾಸಃ ನಿಮಜ್ಜ್ಯ, ಅಪ್ಸು ಪ್ರಣವೇನ ಉತ್ಥಿತಃ ತತಃ ಸಿಂಚೇತ್ ಪುರುಷಸೂಕ್ತೇನ ಸ್ವದೇಹಸ್ಥಂ, ಹರಿಂ ಸ್ಮರನ್.

**ಅನ್ವಯ** - ಯತಶ್ವಾಸಃ ಸರ್ವಲೋಕಾನಾಂ ಸ್ರಷ್ಟಾರಂ ಪರಂ ನಾರಾಯಣಂ ಸ್ಮೃತ್ವಾ ಅಪ್ಸು ನಿಮಜ್ಜ್ಯ (ಅಘಮರ್ಷಣಂ ತ್ರಿಃ ಜಪೇತ್) ತತಃ ಪ್ರಣವೇನ ಉತ್ಥಿತಃ ಸ್ವದೇಹಸ್ಥಂ ಹರಿಂ ಸ್ಮರನ್ ಪುರುಷಸೂಕ್ತೇನ ಸಿಂಚೇತ್.

**ಅರ್ಥ** - "ಯತಶ್ವಾಸಃ" ವಾಯುವನ್ನು ಬಿಗಿ ಹಿಡಿದು ಪ್ರಾಣಾಯಾಮವನ್ನು ಮಾಡುತ್ತಿರುವವನಾಗಿ, "ಸರ್ವಲೋಕಾನಾಂ" ಎಲ್ಲಾ ಲೋಕಗಳಿಗೂ ಆ ಲೋಕಗಳಲ್ಲಿರುವ ಸರ್ವವಸ್ತುಗಳಿಗೂ "ಸ್ರಷ್ಟಾರಂ" ಸೃಷ್ಟಿಕರ್ತನಾದ, "ಪರಂ" ಸರ್ವಲೋಕವಿಲಕ್ಷಣನೂ ಸರ್ವೋತ್ತಮನೂ ಆಗಿರುವ, "ನಾರಾಯಣಂ" ನಾರಾಯಣದೇವನನ್ನು, "ಸ್ಮೃತ್ವಾ" ಸ್ಮರಿಸಿ, "ಅಪ್ಸು" ನೀರನಲ್ಲಿ, "ನಿಮಜ್ಜ್ಯ" ಮುಳುಗಿದವನಾಗಿ, (ಅಘಮರ್ಷಣಂ ತ್ರಿಃ ಜಪೇತ್) ಅಘಮರ್ಷಣಸೂಕ್ತವನ್ನು ಮೂರು ಸಲ ಜಪಿಸಬೇಕು. "ತತಃ" ಆಮೇಲೆ "ಪ್ರಣವೇನ" ಓಂಕಾರವನ್ನು ಉಚ್ಚರಿಸುತ್ತಾ, "ಉತ್ಥಿತಃ" ನೀರಿನಿಂದ ಮೇಲೆ ಬಂದವನಾಗಿ "ಸ್ವದೇಹಸ್ಥಂ" ತನ್ನ ದೇಹದಲ್ಲಿರುವ, "ಹರಿಂ" ಶ್ರೀಹರಿಯನ್ನು, "ಸ್ಮರನ್" ಸ್ಮರಿಸುತ್ತಿರುವವನಾಗಿ "ಪುರುಷಸೂಕ್ತೇನ" ಪುರುಷಸೂಕ್ತದಿಂದ, "ಸಿಂಚೇತ್" ಪ್ರೋಕ್ಷಣೆ ಮಾಡಬೇಕು.

**ತಾತ್ಪರ್ಯ** - ಅಘಮರ್ಷಣಾಸೂಕ್ತವನ್ನು ಜಪಿಸಬೇಕೆಂದು ಹಿಂದಿನ ಶ್ಲೋಕದಲ್ಲಿ ಶ್ರೀಮಧ್ವಾಚಾರ್ಯರು ಆಜ್ಞಾಪಿಸಿದರು. ಈಗ ಅಘಮರ್ಷಣಸೂಕ್ತವನ್ನು ಜಪಿಸುವ ವಿಧಾನವನ್ನು ತಿಳಿಸುತ್ತಿದ್ದಾರೆ. ಶ್ರೀಹರಿಯು ಎಲ್ಲಾ ಲೋಕಗಳನ್ನೂ ಆ ಲೋಕಗಳಲ್ಲಿರುವ ಎಲ್ಲಾ ಜಡ ಮತ್ತು ಚೇತನರನ್ನೂ ಸೃಷ್ಟಿಸಿರುವನು. ಅವನ ಸೃಷ್ಟಿಗೆ ಒಳಪಡದಿರುವ ವಸ್ತುವು ಯಾವುದೂ

ಇಲ್ಲ. ಆದ್ದರಿಂದಲೇ ಅವನು ಸರ್ವವಿಲಕ್ಷಣನೂ ಸರ್ವೋತ್ತಮನೂ ಆಗಿರುವನು. ಪ್ರಾಣಾಯಾಮವನ್ನು ಮಾಡಿ ಮನಸ್ಸನ್ನು ಶ್ರೀಹರಿಯಲ್ಲಿಯೇ ನೆಲೆಗೊಳ್ಳುವಂತೆ ಮಾಡಬೇಕು. ಅವನನ್ನೇ ಏಕಾಗ್ರಚಿತ್ತದಿಂದ ಸ್ಮರಿಸುತ್ತಾ ನೀರಿನಲ್ಲಿ ಮುಳುಗಿ ಅಘಮರ್ಷಣಸೂಕ್ತವನ್ನು ಮೂರು ಸಲ ಆವೃತ್ತಿ ಮಾಡಬೇಕು. "ಅಘ" ಅಂದರೆ ಪಾಪಗಳು. ಅವುಗಳನ್ನು "ಮರ್ಷಣ" ಅಂದರೆ ಚೆನ್ನಾಗಿ ತೊಳೆಯುವವನಾದ್ದರಿಂದ ಶ್ರೀಹರಿಗೆ "ಅಘಮರ್ಷಣ" ಎಂದು ಹೆಸರು. ಅವನ ಮಹಿಮೆಯನ್ನು ಹೊಗಳುತ್ತಿರುವ ಮಂತ್ರಗಳೂ, ಎಲ್ಲಾ ಪಾಪಗಳನ್ನೂ ಪರಿಹರಿಸುತ್ತಿರುವುದರಿಂದ "ಅಘಮರ್ಷಣ" ಎಂದು ಹೇಳಲ್ಪಡುತ್ತವೆ. ಹೀಗೆ ಅಘಮರ್ಷಣನಾಮಕ ಶ್ರೀಹರಿಯನ್ನು ಅಘಮರ್ಷಣ ಸೂಕ್ತದಿಂದ ಜಪಿಸಿದ್ದರಿಂದ ಜಪಿಸುವವರ ಪಾಪಗಳೆಲ್ಲವೂ ಅವರನ್ನು ಬಿಟ್ಟು ತೊಲಗುತ್ತವೆ. ಅದಕ್ಕಾಗಿ ಮೇಲ್ಕಂಡ ರೀತಿಯಿಂದ ಅಘಮರ್ಷಣಸೂಕ್ತವನ್ನು ಜಪಿಸಬೇಕು. ನೀರಿನಲ್ಲಿ ಮುಳುಗಿದ್ದು ಮನಸ್ಸಿನಿಂದಲೇ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಕೊನೆವರೆಗೂ ನೀರಿನಲ್ಲಿ ಮುಳುಗಿದ್ದು ಜಪಿಸಲು ಶಕ್ತಿಯಿಲ್ಲದವರು ನೀರಿನ ಮೇಲೆಯೇ ನೀರಿನಿಂದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಈ ಮಂತ್ರದಿಂದ ಸ್ತುತಿಸಿ ಮೇಲೆ ಬರಬೇಕು. ಮೇಲೆ ಬರುವಾಗ ಓಂ ಎಂದು ಉಚ್ಚರಿಸುತ್ತಾ ಬರಬೇಕು. ತನ್ನ ದೇಹದಲ್ಲಿ ಸರ್ವಾವಯವಗಳಲ್ಲಿಯೂ ಪುರುಷನಾಮಕನಾದ ಶ್ರೀಹರಿಯು ವ್ಯಾಪಿಸಿರುವುದಾಗಿ ಭಾವಿಸಬೇಕು. ಆ ಪುರುಷನಾಮಕನಾದ ಪರಮಾತ್ಮನಿಗೆ ಅಭಿಷೇಕವನ್ನು ಮಾಡುತ್ತಿರುವುದಾಗಿ ಭಾವಿಸಿ ಪುರುಷಸೂಕ್ತಮಂತ್ರವನ್ನು ಪಠಿಸುತ್ತಾ ಶಂಖಮುದ್ರೆಯಿಂದ ನೀರನ್ನು ತಲೆಯ ಮೇಲೆ ಪ್ರೋಕ್ಷಿಸಬೇಕು. ಶಂಖಮುದ್ರೆಯ ಲಕ್ಷಣವು ಹಿಂದೆ ಹೇಳಲ್ಪಟ್ಟಿದೆ. ಇದರಿಂದ ಶರೀರವ್ಯಾಪಿಯಾದ ಶ್ರೀಹರಿಗೆ ಅಭಿಷೇಕವನ್ನು ಮಾಡಿದಂತೆಯೂ ಅವನ ವಿಶೇಷ ಸನ್ನಿಧಾನದಿಂದ ತನ್ನ ಶರೀರವನ್ನು ಅತಿಶುದ್ಧವಾಗುವಂತೆ ಮಾಡಿದಂತೆಯೂ ಆಗುತ್ತದೆ. ||5||

ಈ ಗ್ರಂಥವು ಆಚಾರ್ಯರಿಂದ ರಚಿತವಾಗಿದೆ. ಈ ಗ್ರಂಥದಲ್ಲಿ ಅವಶ್ಯವಾಗಿ ಮಾಡಲೇಬೇಕಾದ ವಿಷಯವು ಮಾತ್ರ ಹೇಳಲ್ಪಟ್ಟಿದೆ. ಇದಕ್ಕೆ ವಿರುದ್ಧವಾದ ಭಾಗವು ಯಾವ ಗ್ರಂಥದಲ್ಲಿದ್ದರೂ ಗ್ರಾಹ್ಯವಲ್ಲ. ಇದಕ್ಕೆ ಅವಿರುದ್ಧವಾದ ಭಾಗವು ಇತರ ಪ್ರಮಾಣಗಳಲ್ಲಿದ್ದರೆ ಅವುಗಳನ್ನು ಅವಶ್ಯವಾಗಿ ಸ್ವೀಕರಿಸಲೇಬೇಕು. ಆ ಕ್ರಮಗಳನ್ನು ಬೇರೆ ಬೇರೆ ಋಷಿಗಳ ಮತದಿಂದ ಹಿಂದೆ ತಿಳಿಸಿದ್ದೇವೆ.

## ದೇವತರ್ಪಣ ಋಷಿತರ್ಪಣ ಪಿತೃತರ್ಪಣ

(1) ಪಿತೃಗಳ ಸದ್ಗತಿಗಾಗಿ ಅವರವರ ಹೆಸರನ್ನು ಹೇಳಿ ಸ್ನಾನವನ್ನು ಮಾಡಬೇಕು. (2) ತನಗೆ ಇಷ್ಟವಾದ ಶ್ರೀಹರಿಯ ಮೂರ್ತಿಗಳ ವಿಶೇಷ ಪ್ರೀತಿಗಾಗಿ ಆಯಾ ಮೂರ್ತಿಗಳನ್ನು ಸ್ಮರಿಸುತ್ತಾ ಸ್ನಾನವನ್ನು ಮಾಡಬೇಕು. ಇವುಗಳನ್ನು ಅಘಮರ್ಷಣಸೂಕ್ತಜಪಕ್ಕಿಂತ ಹಿಂದಾಗಲೀ ಮುಂದಾಗಲೀ ಮಾಡಬೇಕು. (3) ಅಘಮರ್ಷಣಸೂಕ್ತಜಪವು ಮುಗಿದ ಮೇಲೆ ದೇವತರ್ಪಣ, ಋಷಿತರ್ಪಣ, ಪಿತೃತರ್ಪಣಗಳನ್ನು ಮಾಡಬೇಕು. (4) ಶಿಖೋದಕವನ್ನು ತೀರದಲ್ಲಿ ಕೊಡಬೇಕು. (5) ಸ್ವಲ್ಪಹೊತ್ತಿನವರೆಗೆ ಇದ್ದು ಒಣಗಿದ ಮಡಿ ಬಟ್ಟೆಯಿಂದಾಗಲೀ ಒದ್ದೆ ಬಟ್ಟೆಯಾಗಿದ್ದರೆ 7 ಸಲ ಗಾಳಿಯಲ್ಲಿ ಝಾಡಿಸಿದ ಆ ಬಟ್ಟೆಯಿಂದಾಗಲೀ ಮೈಯನ್ನು ಒರೆಸಿಕೊಳ್ಳಬೇಕು. ಇವೇ ಮೊದಲಾದ ಅನೇಕ ವಿಷಯಗಳು ಇತರ ಗ್ರಂಥಗಳಲ್ಲಿ ಹೇಳಲ್ಪಟ್ಟಿವೆ. ಅವುಗಳೆಲ್ಲವೂ ಈ ಗ್ರಂಥಕ್ಕೆ ವಿರುದ್ಧವಲ್ಲ. ಆದ್ದರಿಂದ ಅವುಗಳನ್ನು ಇತರ ಗ್ರಂಥಗಳ ಆಧಾರದಿಂದ ತಿಳಿದುಕೊಂಡು ಅಲ್ಲಿ ಹೇಳಿದಂತೆ ಮಾಡಬೇಕು.

ಈ ಗ್ರಂಥದಲ್ಲಿ ಹೇಳದಿರುವ ಮತ್ತು ಇತರ ಗ್ರಂಥಗಳಲ್ಲಿ ಹೇಳಿರುವ ಈ ಗ್ರಂಥಕ್ಕೆ ಅವಿರುದ್ಧವಾದ ಮತ್ತು ಸ್ನಾನಕಾಲದಲ್ಲಿ ಅವಶ್ಯವಾಗಿ ಮಾಡಬೇಕಾದ ಕೆಲವು ವಿಷಯಗಳನ್ನು ಈಗ ಸ್ಪಷ್ಟಪಡಿಸುವೆನು.

## ವಿಷ್ಣುಪಾದೋದಕವನ್ನು ತಲೆಯಲ್ಲಿ ಧರಿಸಬೇಕು

ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ |
ಯೋ ವಹೇಚ್ಛಿರಸಾ ನಿತ್ಯಂ ಸಾಲಗ್ರಾಮಶಿಲಾಜಲಮ್ || (ಸಂಗ್ರಹ ವಚನ)

"ಯಾರು ಯಾವಾಗಲೂ ಶಾಲಿಗ್ರಾಮಶಿಲೆಯನ್ನು ಅಭಿಷೇಕ ಮಾಡಿರುವ ತೀರ್ಥವನ್ನು ತಲೆಯಿಂದ ಧರಿಸುವನೋ, ಅವನು ಎಲ್ಲಾ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲವನ್ನೂ ಎಲ್ಲಾ ಯಜ್ಞಗಳನ್ನು ಮಾಡಿದ ಫಲವನ್ನೂ ಪಡೆಯುವನು."

ಪೃಥಿವ್ಯಾಂ ಯಾನಿ ತೀರ್ಥಾನಿ ತೇಷು ಸ್ನಾನಸ್ಯ ಯತ್ಫಲಮ್ |
ವಿಷ್ಣೋಃ ಪಾದೋದಕಂ ಮೂರ್ಧ್ನಿ ಧಾರಯನ್ನಿದಮಾಪ್ನುಯಾತ್ || (ಪಾದ್ಮಪುರಾಣವಚನ)

"ಭೂಮಿಯಲ್ಲಿರುವ ಎಲ್ಲಾ ತೀರ್ಥಗಳಲ್ಲಿ ಸ್ನಾನ ಮಾಡುವುದರಿಂದ ಬರುವ ಫಲವು ವಿಷ್ಣುಪಾದೋದಕವನ್ನು ತಲೆಯಲ್ಲಿ ಧರಿಸುವುದರಿಂದ ಬರುತ್ತದೆ."

ತತ್ಪಾದತೀರ್ಥಮಾದಾಯ ಭಕ್ತೋ ವಿಷ್ಣುಮನುಸ್ಮರನ್ |
ಆತ್ಮಾನಂ ಪ್ರೋಕ್ಷಯೇದ್ಯಸ್ತು ಸರ್ವಪಾಪೈಃ ಪ್ರಮುಚ್ಯತೇ || (ವೈಖಾನಸವಚನ)

"ಶ್ರೀಹರಿಯ ಭಕ್ತನು ಶ್ರೀಹರಿಯನ್ನು ಸ್ಮರಿಸುತ್ತಾ ಶ್ರೀಹರಿಪಾದೋದಕದಿಂದ ತನ್ನನ್ನು ಪ್ರೋಕ್ಷಿಸಿಕೊಳ್ಳಬೇಕು. ಅವನ ಎಲ್ಲಾ ಪಾಪವೂ ದೂರವಾಗುತ್ತದೆ.

ವಿಷ್ಣುಂ ಸದಾ ಸಮಭ್ಯರ್ಚ್ಯ ತಸ್ಯ ಪಾದೋದಕಂ ಪರಮ್ |
ಧಾರಯೇಚ್ಛಿರಸಾ ಭಕ್ತ್ಯಾ ತತ್ತು ಗಂಗೋದಕೈಃ ಸಮಮ್ ||
ನ ಹಿ ತತ್ಸರ್ವತೀರ್ಥೇಷು ಸರಿತ್ಸು ಚ ನಿಮಜ್ಜನಾತ್ |
ಫಲಂ ಭವತಿ ವೈ ಪುತ್ರ ಯಾದೃಕ್ಪಾದಾಂಬುಧಾರಣಾತ್ || (ವಿಷ್ಣುಧರ್ಮೋತ್ತರ ವಚನ)

"ವಿಷ್ಣುಪಾದೋದಕವು ಸರ್ವೋತ್ತಮವಾದುದು. ಗಂಗಾಜಲಕ್ಕೆ ಸಮವಾದುದು. ವಿಷ್ಣುವನ್ನು ಪೂಜಿಸಿ ವಿಷ್ಣುಪಾದೋದಕವನ್ನು ತಲೆಯಲ್ಲಿ ಧರಿಸಬೇಕು. ಇದರಿಂದ ಬರುವ ಫಲವು ಎಲ್ಲಾ ತೀರ್ಥಗಳಲ್ಲಿಯೂ ಎಲ್ಲಾ ನದಿಗಳಲ್ಲಿಯೂ ಸ್ನಾನ ಮಾಡಿದ್ದರಿಂದ ಬರುವುದಿಲ್ಲ."

ವಿಷ್ಣುಪಾದೋದಕಂ ದೇವಿ ಶಿರಸಾ ಧಾರಯನ್ ಪಿಬೇತ್ |
ಯೋ ನರೋ ವಸುಧೇ ನಿತ್ಯಂ ಸ ಯಾತಿ ಪರಮಾಂ ಗತಿಮ್ ||
ಶಾಲಿಗ್ರಾಮೋದ್ಭವೋ ದೇವೋ ದೇವೋ ದ್ವಾರಾವತೀಭವಃ |
ತುಲಸೀಶಂಖತೋಯಂ ಚ ಪುಂಸೂಕ್ತೇನ ಚ ಮಂತ್ರತಃ ||
ಏತಾನಿ ಪಂಚತೀರ್ಥಾನಿ ಪಂಚಪಾತಕನಾಶನಂ | (ವರಾಹಪುರಾಣ ವಚನ)

"ಪತ್ನಿಯೇ, ವಿಷ್ಣುಪಾದೋದಕವನ್ನು ಯಾವಾಗಲೂ ತಲೆಯಲ್ಲಿ ಧರಿಸುತ್ತಾ ಪಾನ ಮಾಡಬೇಕು. ಹೀಗೆ ಮಾಡುವವನು ಉತ್ತಮಗತಿಯನ್ನು ಪಡೆಯುವನು. (1) ಶಾಲಿಗ್ರಾಮ ಶಿಲೆಯಲ್ಲಿ ಸನ್ನಿಹಿತನಾದ ಶ್ರೀಹರಿ ಮತ್ತು, (2) ದ್ವಾರಕೆಯಲ್ಲಿ ಆವಿರ್ಭವಿಸಿದ ಚಕ್ರಾಂಕಿತದಲ್ಲಿ ಸನ್ನಿಹಿತವಾದ ಶ್ರೀಹರಿಯ ಅಭಿಷೇಕಜಲ, (3) ತುಳಸೀಜಲ, (4) ಶಂಖೋದಕ, (5) ಪುರುಷಸೂಕ್ತದಿಂದ ಅಭಿಮಂತ್ರಿಸಿದ ಜಲ, ಹೀಗೆ ಐದು ವಿಧವಾದ ಜಲವು ಐದು ವಿಧವಾದ ಮಹಾಪಾಪಗಳನ್ನು ಪರಿಹರಿಸುತ್ತವೆ." ಇದು ವರಾಹರೂಪಿಯಾದ ಶ್ರೀಹರಿಯು ತನ್ನ ಪತ್ನಿಯಾದ ಭೂದೇವಿಗೆ ಮಾಡಿದ ಉಪದೇಶ. ಶಾಲಿಗ್ರಾಮ ಮತ್ತು ಚಕ್ರಾಂಕಿತಗಳನ್ನು ಇಟ್ಟುಕೊಂಡು ತುಳಸೀಮಿಶ್ರಿತವಾದ ಜಲವನ್ನು ಶಂಖದಲ್ಲಿ ತುಂಬಿ ಪುರುಷಸೂಕ್ತವನ್ನು ಹೇಳುತ್ತಾ

ಅಭಿಷೇಕ ಮಾಡಿದರೆ ಅದರಿಂದ ಬರುವ ತೀರ್ಥವು ಶಾಲಿಗ್ರಾಮ ಜಲ ಮುಂತಾದ ಹಿಂದೆ ಹೇಳಿದ ಐದು ವಿಧವಾದ ಜಲವಾಗುತ್ತದೆ. ಆದ್ದರಿಂದಲೇ ಅಭಿಷೇಕಕಾಲದಲ್ಲಿ ಪುರುಷಸೂಕ್ತವನ್ನೇ ಪಠಿಸಬೇಕು. ಶಂಖದಿಂದಲೇ ಅಭಿಷೇಕ ಮಾಡಬೇಕು. ತುಳಸೀಮಿಶ್ರಿತವಾದ ಜಲವನ್ನೇ ಅಭಿಷೇಕ ಮಾಡಬೇಕು. ಶಾಲಿಗ್ರಾಮದ ಜೊತೆಯಲ್ಲಿ ಚಕ್ರಾಂಕಿತವನ್ನೂ ಇಟ್ಟುಕೊಂಡು ಅಭಿಷೇಕ ಮಾಡಬೇಕು.

ಯದ್ಯೈವ ಪತಿತಂ ಮೂರ್ಧ್ನಿ ವಿಷ್ಣೋಃ ಪಾದೋದಕಂ ನೃಣಾಮ್ |
ತದ್ಯೈವ ಪಿತರಸ್ತೇಷಾಂ ನೃತ್ಯಂತಿ ಚ ಪಿತಾಮಹಾಃ ||
ಬ್ರಹ್ಮಾವರ್ತೇ ಚ ಕೇದಾರೇ ಕುರುಕ್ಷೇತ್ರೇ ತಥೈವ ಚ |
ಗಂಗಾದ್ವಾರೇ ಕುಶಾವರ್ತೇ ಬಿಲ್ವಕೇ ನೀಲಪರ್ವತೇ |
ದಶಾಶ್ವಮೇಧೇ ಯಃ ಸ್ನಾಯಾತ್ತಥಾ ಕುಶಶರೇಷು ಚ ||
ಗಂಗಾಸಾಗರಯೋರ್ಮಧ್ಯೇ ತಥೈವೋತ್ತರಮಾನಸೇ |
ಸ್ನಾನಾತ್ಫಲಂ ಯದ್ಭವತಿ ತದ್ವೈ ಪಾದಾಂಬುಧಾರಣಾತ್ ||
ಅಗ್ನಿಷ್ಟೋಮಾದ್ರಾಜಸೂಯಾತ್ಪೌಂಡರೀಕಾನ್ಮಹಾಮುನೇ |
ತಥಾ ಬಹುಸುವರ್ಣಾನಾಂ ಯತ್ಫಲಂ ಲಭ್ಯತೇ ನರೈಃ ||
ತತ್ಫಲಂ ಲಭತೇ ಸದ್ಯೋ ವಿಷ್ಣುಪಾದಾಂಬುಧಾರಣಾತ್ |
ಅಪೇಯಂ ಪೀಯತೇ ಯೈಸ್ತು ಭುಂಕ್ತೇ ಯಶ್ಚಾಪ್ಯಭೋಜನಮ್ ||
ಅಗಮ್ಯಾಗಮನೋ ಯೋ ವೈ ಪಾಪಾಚಾರಾಶ್ಚ ಯೇ ನರಾಃ |
ತೇಽಪಿ ಭೂತಾ ಭವಂತ್ಯಾಶು ಯೇಷಾಂ ಪಾದಾಂಬು ಮೂರ್ಧನಿ ||
ತಪ್ತಕೃಚ್ಛ್ರಾನ್ಮಹಾಕೃಚ್ಛ್ರಾತ್ಪಂಚಗವ್ಯಾದ್ವಿಶಿಷ್ಯತೇ |
ಚಾಂದ್ರಾಯಣಾತ್ಸರ್ವಕೃಚ್ಛ್ರಾತ್ಪರಾಕಾದಪಿ ಸುವ್ರತೇ || (ನಾರದೀಯ ವಚನ)

"ವಿಷ್ಣುಪಾದೋದಕವು ಜನರ ತಲೆಯಲ್ಲಿ ಬಿದ್ದ ಕೂಡಲೇ ಅವರ ಪಿತಾಮಹ ಮುಂತಾದ ಎಲ್ಲಾ ಪಿತೃವರ್ಗದವರೂ ಸಂತೋಷದಿಂದ ಕುಣಿಯುತ್ತಾರೆ. ಬ್ರಹ್ಮಾವರ್ತ, ಕೇದಾರ, ಕುರುಕ್ಷೇತ್ರ, ಗಂಗಾದ್ವಾರ, ಕುಶಾವರ್ತ, ಬಿಲ್ವಕ, ನೀಲಪರ್ವತ ದಶಾಶ್ವಮೇಧ, ಕುಶಶರ ಮುಂತಾದ ಕ್ಷೇತ್ರಗಳಲ್ಲಿಯೂ ಗಂಗಾಸಾಗರಸಂಗಮಸ್ಥಳದಲ್ಲಿಯೂ ಉತ್ತರ ಮಾನಸಸರೋವರದಲ್ಲಿಯೂ ಸ್ನಾನವನ್ನು ಮಾಡಿದರೆ ಬರುವ ಫಲವು ವಿಷ್ಣುಪಾದೋದಕಧಾರಣದಿಂದ ಬರುತ್ತದೆ. ಅಗ್ನಿಷ್ಟೋಮ, ರಾಜಸೂಯ, ಪೌಂಡರೀಕ ಮುಂತಾದ ಎಲ್ಲಾ ಯಜ್ಞಗಳಿಂದ ಬರುವ ಫಲವೂ ವಿಷ್ಣುಪಾದೋದಕದಿಂದ ಬರುತ್ತದೆ. ಅಸಂಖ್ಯಸುವರ್ಣದಾನದಿಂದ ಬರುವ ಫಲವೂ ವಿಷ್ಣುಪಾದೋದಕಧಾರಣದಿಂದ ಬರುತ್ತದೆ. ಕುಡಿಯುವುದಕ್ಕೆ ಯೋಗ್ಯವಲ್ಲದ ಹೆಂಡ ಮುಂತಾದವುಗಳನ್ನು ಕುಡಿಯುವವನೂ, ತಿನ್ನುವುದಕ್ಕೆ ಯೋಗ್ಯವಲ್ಲದ ಮಾಂಸ ಮುಂತಾದವುಗಳನ್ನು ತಿನ್ನುವವನೂ, ಸಂಗವನ್ನು ಮಾಡುವುದಕ್ಕೆ ಅನರ್ಹರಾಗಿರುವ ಗುರುಪತ್ನೀ ಮುಂತಾದ ಪರಸ್ತ್ರೀಯರ ಸಂಗವನ್ನು ಮಾಡಿದವನೂ, ಪಾಪಕರವಾಗಿರುವ ದುರಾಚಾರದಿಂದ ಯುಕ್ತನಾಗಿರುವವನೂ, ಇಂತಹ ಕೆಟ್ಟ ಕೆಲಸಗಳನ್ನು ಮಾಡುತ್ತಿರುವ ಒಬ್ಬೊಬ್ಬನೂ ವಿಷ್ಣುಪಾದೋದಕವನ್ನು ತಲೆಯಲ್ಲಿ ಧರಿಸುವುದರಿಂದ ಶುದ್ಧರಾಗುವರು. ತಪ್ತಕೃಚ್ಛ್ರ, ಮಹಾಕೃಚ್ಛ್ರ, ಪಂಚಗವ್ಯ ಚಾಂದ್ರಾಯಣವ್ರತ, ಸರ್ವಕೃಚ್ಛ್ರ, ಪರಾಕ ಮುಂತಾದ ಎಲ್ಲಾ ಪ್ರಾಯಶ್ಚಿತ್ತಗಳಿಗಿಂತಲೂ ವಿಷ್ಣುಪಾದೋದಕವನ್ನು ತಲೆಯಲ್ಲಿ ಧರಿಸುವುದು ಉತ್ತಮವಾದ ಪ್ರಾಯಶ್ಚಿತ್ತವೆನಿಸುತ್ತದೆ.

ತ್ರಿರಾತ್ರಫಲದಾ ನದ್ಯೋ ಯಾಃ ಕಾಶ್ಚಿದಸಮುದ್ರಗಾಃ ।
ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ॥
ಷಣ್ಮಾಸಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ ।
ವಿಷ್ಣುಪಾದೋದಕಸ್ಯೈತಾಃ ಕಲಾಂ ನಾರ್ಹಂತಿ ಷೋಡಶೀಮ್ ॥ 1 ॥
ಗಂಗಾಪ್ರಯಾಗಗಯಪುಷ್ಕರನೈಮಿಷಾನಿ ಸಂಸೇವಿತಾನಿ ಬಹುಶಃ ಕುರುಜಾಂಗಲಾನಿ ।
ಕಾಲೇನ ತೀರ್ಥಸಲಿಲಾನಿ ಪುನಂತಿ ಪಾಪಂ ಪಾದೋದಕಂ ಭಗವತಃ ಪ್ರಪುನಾತಿ ಸದ್ಯಃ ॥2॥
ಯಾನಿ ಕಾನಿ ಚ ತೀರ್ಥಾನಿ ಬ್ರಹ್ಮಾಂಡಾಂತರ್ಗತಾನಿ ಚ ।
ವಿಷ್ಣುಪಾದೋದಕಸ್ಯೈತೇ ಕಲಾಂ ನಾರ್ಹಂತಿ ಷೋಡಶೀಮ್ ॥ 3 ॥ (ಕೃಷ್ಣಾಮೃತಮಹಾರ್ಣವ)

"ಸಾಕ್ಷಾತ್ತಾಗಿ ಸಮುದ್ರದಲ್ಲಿ ಸೇರದಿರುವ ನದಿಗಳಲ್ಲಿ ಮಾಡುವ ಒಂದು ಸ್ನಾನವು ಮೂರು ಸ್ನಾನಗಳ ಫಲವನ್ನೂ, ಸಮುದ್ರದಲ್ಲಿ ಸಾಕ್ಷಾತ್ತಾಗಿ ಸೇರುವ ನದಿಗಳಲ್ಲಿ ಮಾಡುವ ಒಂದು ಸ್ನಾನವು ಹದಿನೈದು ದಿನಗಳಲ್ಲಿ ಮಾಡಿದ ಸ್ನಾನಗಳ ಫಲವನ್ನೂ, ಸಮುದ್ರದಲ್ಲಿ ಮಾಡುವ ಒಂದು ಸ್ನಾನವು ಒಂದು ತಿಂಗಳಿನಲ್ಲಿ ಮಾಡಿದ ಸ್ನಾನಗಳ ಫಲವನ್ನೂ ಕೊಡುತ್ತವೆ. ಗೋದಾವರೀನದಿಯಲ್ಲಿ ಮಾಡುವ ಒಂದು ಸ್ನಾನವು ಆರು ತಿಂಗಳುಗಳಲ್ಲಿಯೂ, ಗಂಗೆಯಲ್ಲಿ ಮಾಡುವ ಒಂದು ಸ್ನಾನವು ಒಂದು ವರ್ಷದಲ್ಲಿಯೂ ಮಾಡಿದ ಸ್ನಾನದ ಫಲವನ್ನು ಕೊಡುತ್ತವೆ. ಆದರೆ ಇವೆಲ್ಲವೂ ವಿಷ್ಣುಪಾದೋದಕದ ಹದಿನಾರನೆಯ ಒಂದು ಭಾಗದ ಅರ್ಹತೆಯನ್ನು ಪಡೆದಿಲ್ಲ." ॥ 1 ॥

"ಗಂಗೆ, ಪ್ರಯಾಗ, ಪುಷ್ಕರ, ನೈಮಿಷಾರಣ್ಯ, ಕುರುಕ್ಷೇತ್ರ ಮುಂತಾದ ತೀರ್ಥಗಳೂ ತೀರ್ಥಕ್ಷೇತ್ರಗಳೂ ಪುನಃ ಪುನಃ ಸೇವಿಸಲ್ಪಟ್ಟಾಗ ಬಹುಕಾಲದ ಮೇಲೆ ಸೇವಕನ ಪಾಪವನ್ನು ಪರಿಹರಿಸುತ್ತವೆ. ಸೇವಿಸಿದ ಮರುಕ್ಷಣದಲ್ಲಿಯೇ ಎಲ್ಲಾ ಪಾಪಗಳನ್ನೂ ಪರಿಹರಿಸುವ ಶಕ್ತಿಯು ವಿಷ್ಣುಪಾದೋದಕಕ್ಕೆ ಮಾತ್ರ ಇರುತ್ತದೆ." ॥ 2 ॥

"ಬ್ರಹ್ಮಾಂಡದ ಒಳಗೆ ಇರುವ ಎಲ್ಲಾ ತೀರ್ಥಗಳೂ ವಿಷ್ಣುಪಾದೋದಕದ ಹದಿನಾರನೆಯ ಒಂದು ಅಂಶದ ಅರ್ಹತೆಯನ್ನು ಪಡೆದಿಲ್ಲ." ॥ 3 ॥ ಇದು ಕೃಷ್ಣಾಮೃತಮಹಾರ್ಣವದಲ್ಲಿರುವ ಶ್ರೀಮದಾಚಾರ್ಯರ ಉಪದೇಶ.

ಸಾಲಗ್ರಾಮಶಿಲಾತೀರ್ಥಂ ಯಃ ಪಿಬೇದ್ಬಿಂದುಮಾತ್ರಕಮ್ ।
ಮಾತುಃ ಸ್ತನ್ಯಂ ಪುನರ್ನಾಸೌ ನ ಪಿಬೇನ್ಮುಕ್ತಿಮಾಪ್ನುಯಾತ್ ॥ 1 ॥
ಯೇ ಪಿಬಂತಿ ನರಾ ನಿತ್ಯಂ ಸಾಲಗ್ರಾಮಶಿಲಾಜಲಮ್ ।
ಪಂಚಗವ್ಯಸಹಸ್ರೈಸ್ತು ಪ್ರಾಶಿತೈಃ ಕಿಂ ಪ್ರಯೋಜನಮ್ ॥ 2 ॥
ಬಹುಚಕ್ರಸಮಾಯುಕ್ತಂ ದ್ವಾರಕಾಪುರವಾಸಿನಮ್ ।
ಸ್ನಾಪಯಿತ್ವಾ ತು ತತ್ತೋಯಂ ಪಿಬೇಜ್ಜ್ಞಾನಮವಾಪ್ನುಯಾತ್ ॥ 3 ॥
ವಿಷ್ಣುಪಾದೋದಕಂ ಪುಣ್ಯಂ ಪೀತ್ವಾ ಯಸ್ತು ಸ್ವಮಸ್ತಕೇ ।
[illegible] ಪ್ರಕುರ್ವೀತ ಬ್ರಹ್ಮಹತ್ಯಾಂ ವ್ಯಪೋಹತಿ ॥ 4 ॥
ವಿಷ್ಣೋಃ ಪಾದೋದಕಂ ಪುಣ್ಯಂ ಪ್ರಾಶಯೇದ್ಯೋ ದಿನೇ ದಿನೇ ।
ದ್ವಾದಶಾಬ್ದೋಪವಾಸಸ್ಯ ಫಲಮಾಪ್ನೋತ್ಯಸಂಶಯಮ್ ॥ 5 ॥
ಅಪೇಯಪಾನಂ ಹಿಂಸಾಮಭಕ್ಷ್ಯಾಣಾಂ ಚ ಭಕ್ಷಣಮ್ ।
ಸಾಲಗ್ರಾಮಜಲಂ ಪೀತಂ ಸರ್ವಂ ದಹತಿ ತತ್ಕ್ಷಣಾತ್ ॥ 6 ॥ (ಪಾದ್ಮಪುರಾಣ ವಚನ)

"ಪರಮಾಣುವಿನಷ್ಟು ಸೂಕ್ಷ್ಮವಾದ ತೀರ್ಥದ ಬಿಂದುವೂ ಸಹ ನೆಲದಲ್ಲಿ ಬೀಳಬಾರದು. ಹಾಗೆ ಬಿದ್ದರೆ ಬ್ರಹ್ಮಹತ್ಯೆಗೆ ಸಮವಾದ ಪಾಪವು ಬರುವುದಾಗಿ ಜ್ಞಾನಿಗಳು ಹೇಳುತ್ತಾರೆ."

ಸಾಲಗ್ರಾಮಶಿಲಾತೀರ್ಥಂ ಕೋಟಿಜನ್ಮಾಘನಾಶನಮ್ |
ತತಃ ಕೋಟಿಗುಣಂ ಪಾಪಂ ಭೂಮೌ ಬಿಂದುನಿಪಾತನಾತ್ ||

"ಶಾಲಿಗ್ರಾಮತೀರ್ಥವು ಕೋಟಿಜನ್ಮಗಳ ಪಾಪಗಳನ್ನು ಪರಿಹರಿಸುತ್ತದೆ. ಆದರೆ ಅದೇ ತೀರ್ಥವು ಕೆಳಗೆ ಬಿದ್ದರೆ ಆ ಪುಣ್ಯಕ್ಕಿಂತ ಕೋಟಿಪಾಲು ಅಧಿಕವಾದ ಪಾಪವನ್ನು ಕೊಡುತ್ತದೆ."

**ಸ್ನಾನಕಾಲದಲ್ಲಿಯೂ ತೀರ್ಥವನ್ನು ಕುಡಿದು ತಲೆಯಲ್ಲಿ ಧರಿಸಬೇಕು**

ಸ್ನಾನೇ ಚಾಚಮನೇ ಚೈವ ಭೋಜನಾದೌ ಯಥಾವಿಧಿ |
ತಥೈವ ಭೋಜನಸ್ಯಾಂತೇ ಸಾಲಗ್ರಾಮಜಲಂ ಪಿಬೇತ್ || (ವಿಜ್ಞಾನೇಶ್ವರ)

"ಸ್ನಾನ ಆಚಮನ ಊಟಕ್ಕಿಂತ ಮುಂಚೆ ಮತ್ತು ಊಟ ಮುಗಿದ ಮೇಲೆ ತೀರ್ಥವನ್ನು ಕುಡಿಯಬೇಕು. ಮತ್ತು ತಲೆಯಲ್ಲಿ ಪ್ರೋಕ್ಷಿಸಿಕೊಳ್ಳಬೇಕು. ಈ ಪ್ರೋಕ್ಷಣೆಯೇ ತೀರ್ಥಸ್ನಾನವೆನಿಸುತ್ತದೆ."

**ಸ್ನಾನಕಾಲದಲ್ಲಿ ತೀರ್ಥಸ್ನಾನದ ಕಾಲ**

ಸಾಲಗ್ರಾಮಶಿಲಾವಾರಿ ಶಿರಸಾ ಧಾರಯೇತ್ತತಃ |
ಜಲಾತ್ತಸ್ಮಾತ್ಸಮುತ್ತೀರ್ಯ ತರ್ಪಯೇದ್ದೇವತಾ ಋಷೀನ್ || (ವಾಯುಪುರಾಣ)

"ಸ್ನಾನವು ಮುಗಿದ ಕೂಡಲೇ ತೀರ್ಥವನ್ನು ತಲೆಯಲ್ಲಿ ಧರಿಸಬೇಕು. ಈ ತೀರ್ಥಸ್ನಾನವನ್ನು ಮಾಡಿದ ಮೇಲೆ ನೀರಿನಿಂದ ಮೇಲೆ ಬಂದು ದೇವತೆಗಳಿಗೂ ಋಷಿಗಳಿಗೂ ತರ್ಪಣವನ್ನು ಕೊಡಬೇಕು." ಈ ವಚನದಿಂದ ಸ್ನಾನವು ಮುಗಿದ ಮೇಲೆ ಸ್ನಾನಾಂಗತರ್ಪಣಕ್ಕಿಂತ ಪೂರ್ವದಲ್ಲಿ ತೀರ್ಥಸ್ನಾನವನ್ನು ಮಾಡಬೇಕೆಂದು ಹೇಳಿದಂತಾಯಿತು.

**ಶಾಲಿಗ್ರಾಮತೀರ್ಥದ ಮಹತ್ತ್ವ**

ಸಾಲಗ್ರಾಮೋದ್ಭವೋ ದೇವೋ ದೇವೋ ದ್ವಾರವತೀಭವಃ |
ಉಭಯೋಃ ಸಂಗಮೋ ಯತ್ರ ತತ್ರ ಮುಕ್ತಿರ್ನ ಸಂಶಯಃ ||

"(1) ಶಾಲಗ್ರಾಮಶಿಲೆಯಲ್ಲಿ ಸನ್ನಿಹಿತನಾದ ಶ್ರೀಹರಿ. (2) ದ್ವಾರವತಿಯಲ್ಲಿ ಆವಿರ್ಭವಿಸಿದ ಚಕ್ರಾಂಕಿತದಲ್ಲಿ ಸನ್ನಿಹಿತನಾದ ಶ್ರೀಹರಿ. ಈ ಎರಡು ಮೂರ್ತಿಗಳ ಸಮಾಗಮವು ಏರ್ಪಟ್ಟ ಸ್ಥಳವನ್ನು ಆಶ್ರಯಿಸಿದವನಿಗೆ ಮುಕ್ತಿಯು ಸಿಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ.

ಗಂಗಾಪುಷ್ಕರನರ್ಮದಾಶ್ಚ ಯಮುನಾ ಗೋದಾವರೀ ಗೌತಮೀ
ತುಂಗಾ ದ್ವಾರವತೀ ಪ್ರಯಾಗಬದರೀವಾರಾಣಸೀಸಿಂಧವಃ |
ಕನ್ಯಾಸೇತುಸರಸ್ವತೀಪ್ರಭೃತಯೋ ಬ್ರಹ್ಮಾಂಡಮಧ್ಯೇ ಜಲಾ
ತೀರ್ಥಸ್ನಾನಸಹಸ್ರಮೇಕಸಫಲಂ ಶ್ರೀರಂಗಪಾದೋದಕಮ್ ||

"ಗಂಗೆ, ಪುಷ್ಕರ, ನರ್ಮದೆ, ಯಮುನೆ, ಗೋದಾವರೀ, ಗೌತಮೀ, ತುಂಗಭದ್ರ, ದ್ವಾರಕೆ, ಪ್ರಯಾಗ, ಬದರೀ, ಕಾಶೀ, ಸಿಂಧು, ಕನ್ಯಾಕುಮಾರೀ, ಶ್ರೀರಾಮಸೇತು, ಸರಸ್ವತೀ ಮುಂತಾದ ಬ್ರಹ್ಮಾಂಡದೊಳಗಿರುವ ಎಲ್ಲಾ ನದಿಗಳಲ್ಲಿಯೂ ತೀರ್ಥಕ್ಷೇತ್ರಗಳಲ್ಲಿಯೂ ಸಾವಿರ ಸಲ ಸ್ನಾನ ಮಾಡುವುದೂ, ಶ್ರೀರಂಗನಾಥನ ಪಾದೋದಕವನ್ನು ಒಮ್ಮೆ ಸೇವಿಸುವುದೂ ಸಮವೆನಿಸುತ್ತದೆ."

ಶ್ರೀವೇದವ್ಯಾಸ ಉವಾಚ :-

ಚಂದ್ರಸೂರ್ಯಗ್ರಹೇ ಪ್ರಾಪ್ತೇ ಯತ್ಕಿಂಚಿತ್ಕ್ರಿಯತೇ ಗೃಹೇ |
ತೀರ್ಥಕೋಟಿಗುಣಂ ಪ್ರೋಕ್ತಂ ಶಾಲಿಗ್ರಾಮಶಿಲಾಗ್ರತಃ ||
ನಿತ್ಯಂ ಪುಷ್ಕರಮೇವಂ ಚ ಪ್ರಯಾಗಂ ಚ ಪೃಥೂದಕಮ್ |
ಪ್ರಭಾಸಂ ಚ ಕುರುಕ್ಷೇತ್ರಂ ನಿತ್ಯಂ ರುದ್ರಮಹಾಲಯಮ್ ||
ಕೋಟಿತೀರ್ಥಂ ಶೂಲಭೇದಂ ಶುಷ್ಕತೀರ್ಥಂ ತಥೈವ ಚ |
ವಾರಾಣಸೀ ಗಯಾ ಚೈವ ಮಥುರಾ ನೈಮಿಷಂ ತಥಾ ||
ಪಿಂಡಾರಕಂ ಕುರುಕ್ಷೇತ್ರಂ ಗುಹ್ಯಮಾನಂದಮೇವ ಚ |
ಗಂಗಾದ್ವಾರಂ ಸೌಕರಂ ಚ ಗಂಗಾಂ ಸಾಗರಮೇವ ಚ ||
ಓಂಕಾರಂ ನರ್ಮದಾಂ ಚೈವ ಕೇದಾರಂ ಚಾವಿಮುಕ್ತಕಮ್ |
ಅವಂತೀ ದ್ವಾರಕಾ ಕಾಂಚೀ ಯಮುನಾ ಚ ಸರಸ್ವತೀ ||
ಗೋದಾವರೀ ತುಂಗಭದ್ರಾ ಗಂಗಾ ರೇವಾ ಚ ನಂದಿನೀ |
ಶಿಪ್ರಾ ಪ್ರಾಚೀ ಪಯೋಷ್ಣೀ ಚ ಚಂದ್ರಭಾಗಾ ಮಹಾನದೀ ||
ವಿತಸ್ತಾ ಚೈವ ಕಾವೇರೀ ಸರಯೂ ಗಂಡಕೀ ನದೀ |
ಗೋಮತೀ ದೇವಿಕಾ ಚೈವ ನದೀ ಜಾಂಬವತೀ ತಥಾ ||
ರೌದ್ರಂ ಮಹಾಲಯಂ ಚೈವ ತಥಾ ಚ ಶಶಿಶೇಖರಮ್ |
ಭೈರವಂ ಭೃಗುಭಂಗಂ ಚ ಭೀಮಾನಂದಂ ತಥೈವ ಚ ||
ಭೂತೇಶ್ವರಂ ಭಸ್ಮಗಾತ್ರಂ ಯಾನಿ ಲಿಂಗಾನಿ ಭೂತಲೇ |
ಸ್ವರ್ಗೇ ಚ ಯಾನಿ ಪಾತಾಲೇ ಗಂಗಾ ಫಲ್ಗುನಿ ಭಾರತ ||
ಸಾಲಗ್ರಾಮಶಿಲಾಯಾಂ ತು ಪ್ರತ್ಯಕ್ಷಂ ನಿವಸಂತಿ ಚ |
ಬ್ರಹ್ಮತೀರ್ಥಾನಿ ಸರ್ವಾಣಿ ಸೂರ್ಯತೀರ್ಥಾನಿ ಯಾನಿ ಚ ||
ಸುರಸಿದ್ಧಮುನೀಂದ್ರಾಣಾಂ ತ್ರಿಷು ಲೋಕೇಷು ಯಾನಿ ಚ |
ವಸಂತಿ ತತ್ರ ರಾಜೇಂದ್ರ ಯೇ ಚಾನ್ಯೇ ಪಾಂಡುನಂದನ ||
ಸಾಲಗ್ರಾಮಶಿಲಾಯಾಂ ತು ಸಮೀಪೇ ಕೇಶವಸ್ಯ ಹಿ |
ವೇದಾಸ್ತ್ರಯೋ ಮಖಾಃ ಸರ್ವೇ ಅಶ್ವಮೇಧಾದಯಶ್ಚ ಯೇ ||
ಬ್ರಹ್ಮದಾನಾನ್ಯನೇಕಾನಿ ಪುರಾಣಾನಿ ತಥಾಽಗಮಾಃ |
ತಪಾಂಸಿ ನಿಯಮಾಃ ಸರ್ವೇ ಧರ್ಮೇಂದ್ರಾಣಾಂ ದಶಾಷ್ಟ ಚ ||
ಶಾಲಗ್ರಾಮಶಿಲಾಯಾಂ ತು ತತ್ರ ತಿಷ್ಠಂತಿ ಪ್ರತ್ಯಹಮ್ |
ತೀರ್ಥಾಪೇಕ್ಷಾ ನ ತತ್ರಾಸ್ತಿ ಯತ್ರ ದ್ವಾರವತೀ ಶಿಲಾ ||
ಶಾಲಗ್ರಾಮಶಿಲಾಮುದ್ರಾ ಯತ್ರ ಚಕ್ರಾಂಕಿತಂ ಭವೇತ್ |
ಕುರುಕ್ಷೇತ್ರೇಣ ಕಿಂ ತಸ್ಯ ಸಂಪ್ರಾಪ್ತೇ ಗ್ರಹಣೇ ರವೇಃ ||

ಸಾಲಗ್ರಾಮಶಿಲಾ ಯತ್ರ ತದರ್ಥಂ ಚಕ್ರಲಾಂಛಿತಮ್ |
ಪ್ರಭಾಸೇ ಯತ್ಫಲಂ ಪ್ರೋಕ್ತಂ ಗ್ರಸ್ತೇ ರಾಹೌ ದಿವಾಕರೇ |
ಯಸ್ಯ ಸ್ಪರ್ಶನಮಾತ್ರೇಣ ಪೂತೋ ಭವತಿ ಮಾನವಃ ||

ಮೇಲ್ಕಂಡ ಎಲ್ಲಾ ವಾಕ್ಯಗಳಲ್ಲಿಯೂ ಶಾಲಿಗ್ರಾಮ ಮತ್ತು ಚಕ್ರಾಂಕಿತಗಳಲ್ಲಿ ಭೂಲೋಕ, ಸ್ವರ್ಗಲೋಕ ಮತ್ತು ಪಾತಾಳಲೋಕಗಳಲ್ಲಿರುವ ಸಕಲತೀರ್ಥಾಭಿಮಾನಿದೇವತೆಗಳೂ, ವೇದಾದಿಸಕಲಶಾಸ್ತ್ರಾಭಿಮಾನಿದೇವತೆಗಳೂ, ತಪಸ್ಸು ನಿಯಮ ಮುಂತಾದವುಗಳಿಗೆ ಅಭಿಮಾನಿಗಳಾಗಿರುವ ಎಲ್ಲಾ ದೇವತೆಗಳೂ, ವಾಸಿಸುತ್ತಿರುವುದಾಗಿ ಹೇಳಿರುತ್ತದೆ. ಆದ್ದರಿಂದ ಶಾಲಿಗ್ರಾಮತೀರ್ಥವು ಸರ್ವತೀರ್ಥಗಳಿಗಿಂತ ಉತ್ತಮವೆಂದು ಸಿದ್ಧವಾಯಿತು.

### ಸ್ನಾನಾಂಗತರ್ಪಣದ ಕ್ರಮ

ನಿತ್ಯಂ ನೈಮಿತ್ತಿಕಂ ಕಾಮ್ಯಂ ತ್ರಿವಿಧಂ ಸ್ನಾನಮಿಷ್ಯತೇ |
ತರ್ಪಣಂ ತು ಭವೇತ್ತಸ್ಯ ಹ್ಯಂಗತ್ವೇನ ಪ್ರಕೀರ್ತಿತಮ್ || (ಬ್ರಹ್ಮಾಂಡಪುರಾಣ)

"ನಿತ್ಯಸ್ನಾನ, ನೈಮಿತ್ತಿಕಸ್ನಾನ, ಕಾಮ್ಯಸ್ನಾನ ಎಂದು ಸ್ನಾನವು ತ್ರಿವಿಧವಾಗಿದೆ. ಈ ತ್ರಿವಿಧವಾದ ಸ್ನಾನಕ್ಕೆ ತರ್ಪಣವು ಅಂಗವೆಂದು ಜ್ಞಾನಿಗಳಿಂದ ಹೇಳಲ್ಪಟ್ಟಿದೆ."

ತರ್ಪಣಸ್ಯ ಪ್ರಕಾರಂ ತು ಸಮ್ಯಗ್ ನಾರಾಯಣೋಽಬ್ರವೀತ್ |
ಉಪವೀತೀ ಬದ್ಧಶಿಖಃ ಸಮಾಚಮ್ಯ ಯಥಾವಿಧಿ ||
ದೇವರ್ಷೀಂಸ್ತರ್ಪಯೇದಪ್ಸು ಪಿತ್ನ್ಂಶ್ಚೈವ ಸಮಾಹಿತಃ |
ಸ್ಮೃತ್ವೋಂಕಾರಂ ಚ ಗಾಯತ್ರೀಂ ನಿಬಧ್ನೀಯಾಚ್ಛಿಖಾಂ ತತಃ |
ದ್ವಿರಾಚಮ್ಯ ಸ್ವಗೃಹ್ಯೋಕ್ತವಿಧಿನಾ ತರ್ಪಯೇತ್ತತಃ ||

"ತರ್ಪಣವನ್ನು ಮಾಡುವ ಪ್ರಕಾರವನ್ನು ನಾರಾಯಣನು ಸರಿಯಾಗಿ ಹೇಳಿರುವನು. ಅದನ್ನು ಈಗ ತಿಳಿಸುತ್ತಿದ್ದೇವೆ. ಯಜ್ಞೋಪವೀತವನ್ನು ಬಲಕ್ಕೆ ಹಾಕಿಕೊಂಡು ಓಂಕಾರವನ್ನೂ, ಗಾಯತ್ರೀಮಂತ್ರವನ್ನೂ, ಉಚ್ಚರಿಸುತ್ತಾ ಮನಸ್ಸಿನಲ್ಲಿ ಓಂಕಾರಪ್ರತಿಪಾದ್ಯನಾದ ಶ್ರೀಹರಿಯನ್ನು ಸ್ಮರಿಸುತ್ತಾ, ತಲೆಯ ಕೂದಲನ್ನು ಗಂಟು ಹಾಕಿಕೊಳ್ಳಬೇಕು. ವಿಧಿಪ್ರಕಾರವಾಗಿ ಎರಡು ಸಲ ಆಚಮನ ಮಾಡಬೇಕು. ತಮ್ಮ ತಮ್ಮ ಗೃಹ್ಯಸೂಕ್ತದಲ್ಲಿ ಹೇಳಿದ ಕ್ರಮವನ್ನು ಅನುಸರಿಸಿ ದೇವತೆಗಳಿಗೂ ಋಷಿಗಳಿಗೂ ಪಿತೃಗಳಿಗೂ ತರ್ಪಣವನ್ನು ಕೊಡಬೇಕು." (ಇದು ನಾರಾಯಣನ ವಚನದ ಸಾರ)

ದೇವಾನ್ ದೇವಗಣಾಂಶ್ಚೈವಮೃಷೀನ್ ಋಷಿಗಣಾನಪಿ |
ಪಿತ್ನ್ನ್ ಪಿತೃಗಣಾಂಶ್ಚೈವ ನಿತ್ಯಂ ಸಂತರ್ಪಯೇದ್ಬುಧಃ ||
ಯಜ್ಞೋಪವೀತೀ ದೇವಾನಾಂ ನಿವೀತೀ ಋಷಿತರ್ಪಣೇ |
ಪ್ರಾಚೀನಾವೀತೀ ಪಿತ್ರ್ಯೇ ಚ ಸ್ವೇನ ತೀರ್ಥೇನ ಭಾವಿತಃ || (ವ್ಯಾಸ ವಚನ)

"ಪ್ರತಿದಿನದಲ್ಲಿಯೂ ಸ್ನಾನವು ಮುಗಿದ ಕೂಡಲೇ ಸ್ನಾನಾಂಗತರ್ಪಣವನ್ನು ಕೊಡಬೇಕು. (1) ದೇವತೆಗಳು ಮತ್ತು ಅವರ ಗಣದಲ್ಲಿರುವವರು (2) ಋಷಿಗಳು ಮತ್ತು ಅವರ ಗಣದಲ್ಲಿರುವವರು (3) ಪಿತೃಗಳು ಮತ್ತು ಅವರ ಗಣದಲ್ಲಿರುವವರು. ಹೀಗೆ ಮೂರು ಪಂಗಡದವರಿಗೂ ತರ್ಪಣವನ್ನು ಕೊಡಬೇಕು. ಯಜ್ಞೋಪವೀತವನ್ನು ಬಲಕ್ಕೆ ಹಾಕಿಕೊಂಡು ದೇವತೆಗಳಿಗೂ, ಮಾಲಾಕಾರವಾಗಿ ಹಾಕಿಕೊಂಡು ಋಷಿಗಳಿಗೂ, ಎಡಕ್ಕೆ ಹಾಕಿಕೊಂಡು ಪಿತೃಗಳಿಗೂ ತರ್ಪಣವನ್ನು ಕೊಡಬೇಕು. ದೇವತೀರ್ಥದಿಂದ ಅಂದರೆ ಎಲ್ಲಾ ಬೆರಳುಗಳ ತುದಿಯಿಂದ ಎಲ್ಲಾ ದೇವತೆಗಳಿಗೂ, ಋಷಿ ತೀರ್ಥದಿಂದ ಅಂದರೆ ಕಿರು

ಬೆರಳುಗಳ ಭಾಗದಿಂದ ಋಷಿಗಳಿಗೂ, ಪಿತೃತೀರ್ಥದಿಂದ ಅಂದರೆ ಅಂಗುಷ್ಠದ ಬುಡದಿಂದ ಪಿತೃಗಳಿಗೂ ತರ್ಪಣವನ್ನು ಕೊಡಬೇಕು." ಇದು ವ್ಯಾಸರ ವಚನ.

ವಿಶೇಷಮುಶನಾಃ ಪ್ರಾಹ ಸ್ನಾನಾಂಗೇ ತರ್ಪಣೇ ಮುನಿಃ |
ದ್ವೌ ಹಸ್ತೌ ಯುಗ್ಮತಃ ಕೃತ್ವಾ ಪೂರಯೇದುದಕಾಂಜಲಿಮ್ ||
ಗೋಶೃಂಗಮಾತ್ರಮುದ್ಧೃತ್ಯ ಜಲಮಧ್ಯೇ ಜಲಂ ಕ್ಷಿಪೇತ್ | (ಉಶನರ ವಚನ)

"ಸ್ನಾನಾಂಗತರ್ಪಣದ ವಿಷಯದಲ್ಲಿ ಉಶನಾ ಎಂಬ ಮುನಿಯು ಹೇಳಿರುವ ವಿಶೇಷವನ್ನು ಈಗ ಹೇಳುವೆವು. ಎರಡು ಅಂಗೈಗಳನ್ನೂ ಒಟ್ಟುಗೂಡಿಸಬೇಕು. ಅದನ್ನು ನೀರಿನಲ್ಲಿ ಮುಳುಗಿಸಿ ನೀರನ್ನು ತುಂಬಿಸಬೇಕು. ತನ್ನ ಹುಬ್ಬುಗಳವರೆಗೆ ಎತ್ತಬೇಕು. ಆ ನೀರನ್ನು ನೀರಿನಲ್ಲಿ ಸುರಿಯಬೇಕು." ಇದು ತರ್ಪಣವನ್ನು ಕೊಡುವ ರೀತಿ.

### ತರ್ಪಣಜಲವನ್ನು ನೆಲದಲ್ಲಿ ಹಾಕಬಾರದು

ಜಲೇ ಚೈವ ತು ಕರ್ತವ್ಯಂ ಸ್ನಾನಾಂಗಂ ಪಿತೃತರ್ಪಣಮ್ |
ಸ್ಥಲೇ ಕೃತಂ ವೃಥಾ ತತ್ಸ್ಯಾದಿತಿ ವಿಷ್ಣುಃ ಸಮಬ್ರವೀತ್ ||
ಭೂಮ್ಯಾಂ ಯದಾಪೋ ದೀಯಂತೇ ದಾತಾ ಚೈವ ಜಲೇ ಸ್ಥಿತಃ |
ವೃಥಾ ತದ್ದೀಯತೇ ತೋಯಂ ಪಿತೄಣಾಂ ತು ನಿರರ್ಥಕಮ್ || (ವಿಷ್ಣುವಚನ)

"ಸ್ನಾನಾಂಗವಾದ ಪಿತೃತರ್ಪಣವನ್ನು ನೀರಿನಲ್ಲಿಯೇ ನಿಂತು ಮಾಡಬೇಕು. ನೆಲದಲ್ಲಿ ನಿಂತು ಮಾಡಿದರೆ ವ್ಯರ್ಥವಾಗುತ್ತದೆ. ನೀರಿನಲ್ಲಿ ನಿಂತಿದ್ದು ತರ್ಪಣಜಲವನ್ನು ನೆಲದಲ್ಲಿ ಹಾಕಬಾರದು. ಹಾಗೆ ಹಾಕಿದರೆ ಆ ತರ್ಪಣದಿಂದ ಅವನಿಗಾಗಲೀ ಅವನ ಪಿತೃಗಳಿಗಾಗಲೀ ಪ್ರಯೋಜನವಿಲ್ಲ." ಇದು ವಿಷ್ಣುವಿನ ವಚನ.

### ಸತ್ತವರಿಗೆ ಸಂಸ್ಕಾರವನ್ನು ಮಾಡದಿದ್ದರೆ ತರ್ಪಣ

ಅಸಂಸ್ಕೃತಪ್ರಮೀತಾನಾಂ ಸ್ಥಲೇ ತು ಸ್ಯಾಜ್ಜಲಾಂಜಲಿಃ |

"ಎಷ್ಟೋ ಜನರಿಗೆ ಮರಣಕಾಲದ ಅಜ್ಞಾನ ಮುಂತಾದ ಕಾರಣಗಳಿಂದ ಹನ್ನೆರಡು ದಿನಗಳಲ್ಲಿ ಮಾಡುವ ಏಕೋದ್ದಿಷ್ಟಶ್ರಾದ್ಧ, ಸಪಿಂಡೀಕರಣ ಮುಂತಾದ ಸಂಸ್ಕಾರವು ಮಾಡಲ್ಪಟ್ಟಿರುವುದಿಲ್ಲ. ಅವರಿಗೆ ಅಸಂಸ್ಕೃತಪ್ರಮೀತರು ಎಂದು ಹೆಸರು. ಅವರಿಗೂ ಸ್ನಾನಕಾಲದಲ್ಲಿ ತರ್ಪಣವನ್ನು ಕೊಡಬೇಕು. ಆ ತರ್ಪಣದ ನೀರನ್ನು ನೀರಿನಲ್ಲಿ ಹಾಕಬಾರದು. ನೆಲದಲ್ಲಿಯೇ ಹಾಕಬೇಕು."

ದೇವತಾನಾಂ ಪಿತೄಣಾಂ ಚ ಜಲೇ ದದ್ಯಾಜ್ಜಲಾಂಜಲಿಮ್ |
ಅಸಂಸ್ಕೃತಪ್ರಮೀತಾನಾಂ ಸ್ಥಲೇ ಕುರ್ಯಾಜ್ಜಲಂ ಪುನಃ || (ಕಾರ್ಷ್ಣಾಜನಿ ವಚನ)

"ದೇವತೆಗಳಿಗೂ, ಸಪಿಂಡೀಕರಣ ಮುಂತಾದ ಸಂಸ್ಕಾರವು ಮಾಡಲ್ಪಟ್ಟು ಪಿತೃವರ್ಗದಲ್ಲಿ ಸೇರಿರುವ ಪಿತೃಗಳಿಗೂ, ನೀರಿನಲ್ಲಿ ನಿಂತು ತರ್ಪಣಜಲವನ್ನು ನೀರಿನಲ್ಲಿ ಹಾಕಬೇಕು. ಅಸಂಸ್ಕೃತಪ್ರಮೀತರಿಗಾಗಿ ಮಾಡಿದ ತರ್ಪಣದ ಜಲವನ್ನು ನೆಲದಲ್ಲಿ ಬಿಡಬೇಕು."

### ತರ್ಪಣಕಾಲದಲ್ಲಿ ಹೇಳಬೇಕಾದ ಶಬ್ದಗಳು

ನಾಭಿಮಾತ್ರೇ ಜಲೇ ಸ್ಥಿತ್ವಾ ಚಿಂತಯನ್ನೂರ್ಧ್ವಮಾನಸಃ |
ಆಗಚ್ಛಂತು ಮೇ ಪಿತರೋ ಗೃಹ್ಣಂತ್ವೇತಾನಪೋಽಂಜಲೀನ್ || (ಕಾರ್ಷ್ಣಾಜನಿ ವಚನ)

"ಹೊಕ್ಕಳು ಮುಳುಗುವಷ್ಟು ನೀರಿನಲ್ಲಿ ನಿಲ್ಲಬೇಕು. ಪಿತೃಗಳನ್ನೂ, ಅವರ ಅಂತರ್ಯಾಮಿಯಾಗಿರುವ

ಜನಾರ್ದನಾಮಕನಾದ ಶ್ರೀಹರಿಯನ್ನೂ ಸ್ಮರಿಸಬೇಕು. ನನ್ನ ಪಿತೃಗಳೆಲ್ಲರೂ ನಾನು ಸಮರ್ಪಿಸುತ್ತಿರುವ ಈ ತರ್ಪಣ ಜಲವನ್ನು ಸ್ವೀಕರಿಸಿರಿ ಎಂದು ಹೇಳುತ್ತಾ ತರ್ಪಣವನ್ನು ಕೊಡಬೇಕು."

### ತರ್ಪಣದಲ್ಲಿ ದಿಕ್ಕುಗಳು

ತರ್ಪಣೇ ದಿಗ್ವಿಶೇಷಾಂಸ್ತು ಸುಮಂತುರ್ಮುನಿರಬ್ರವೀತ್ |
ಆಕಾಶೇ ತು ಕ್ಷಿಪೇದ್ವಾರಿ ಜಲಸ್ಥೋ ದಕ್ಷಿಣಾಮುಖಃ ||
ಪಿತೄಣಾಂ ಸ್ಥಾನಮಾಕಾಶಂ ದಕ್ಷಿಣಾದಿಕ್ತಥೈವ ಚ |
ಪ್ರಾಙ್ಮುಖಸ್ತರ್ಪಯೇದ್ದೇವಾನೃಷೀಂಶ್ಚೋದಙ್ಮುಖಸ್ತಥಾ || (ಸುಮಂತು ವಚನ)

"ಪಿತೃಗಳಿಗೆ ದಕ್ಷಿಣದಿಕ್ಕು ಆಕಾಶ ಇವೆರಡು ಪ್ರಿಯವಾಗಿವೆ. ಆದ್ದರಿಂದ ನೀರಿನಲ್ಲಿ ದಕ್ಷಿಣದಿಕ್ಕನ್ನು ನೋಡುತ್ತಾ ನಿಲ್ಲಬೇಕು. ತರ್ಪಣಜಲವನ್ನು ಆಕಾಶಕ್ಕೆ ಅಭಿಮುಖವಾಗಿ ಬಿಡಬೇಕು. ದೇವತೆಗಳಿಗೆ ಕೊಡುವ ತರ್ಪಣವನ್ನು ಪೂರ್ವಾಭಿಮುಖವಾಗಿಯೂ ಋಷಿತರ್ಪಣವನ್ನು ಉತ್ತರಾಭಿಮುಖವಾಗಿಯೂ ನಿಂತು ಕೊಡಬೇಕು." ಇದು ಸುಮಂತು ಋಷಿಯ ವಚನ.

### ತರ್ಪಣ ಸಂಖ್ಯೆ

ದೇವಾನಾಮೇಕಮಂಜಲಿಂ ದದ್ಯಾದೃಷೀಣಾಂ ದ್ವೌ ದ್ವೌ ಪಿತೄಣಾಂ ತ್ರೀಂಸ್ತ್ರೀನ್ ದದ್ಯಾತ್ಸ್ವಶಾಖೋಕ್ತಮಂತ್ರೈಃ (ಸ್ಮೃತ್ಯರ್ಥಸಾರ)

"ದೇವತೆಗಳಿಗೆ ಒಂದೊಂದು ಸಲ, ಋಷಿಗಳಿಗೆ ಎರಡೆರಡು ಸಲ, ಪಿತೃಗಳಿಗೆ ಮೂರು ಮೂರು ಸಲ ಒಂದೊಂದು ತರ್ಪಣವನ್ನು ತಮ್ಮ ತಮ್ಮ ಶಾಖೆಯಲ್ಲಿ ಹೇಳಿದ ಮಂತ್ರಗಳಿಂದ ಕೊಡಬೇಕು.

### ತರ್ಪಣವನ್ನು ಕೊಡಬೇಕಾದ ತೀರ್ಥಗಳು

ತರ್ಪಣಂ ದೇವತಾದಿಭ್ಯಃ ಸ್ವಸ್ವತೀರ್ಥೇನ ತರ್ಪಯೇತ್ |
ಯೇನ ತೀರ್ಥೇನ ಗೃಹ್ಣೀಯಾತ್ತೇನ ದದ್ಯಾಜ್ಜಲಾಂಜಲಿಮ್ ||
ಅನ್ಯತೀರ್ಥೇನ ಗೃಹ್ಣೀಯಾತ್ತತ್ತೋಯಂ ರುಧಿರಂ ಭವೇತ್ | (ಭಾರದ್ವಾಜರ ವಚನ)

"ಎಲ್ಲಾ ಬೆರಳುಗಳ ತುದಿಯು ದೇವತೀರ್ಥವೆನಿಸುತ್ತದೆ. ಅಂಗೈಯಲ್ಲಿ ಕಿರುಬೆರಳಿನ ಭಾಗವು ಋಷಿತೀರ್ಥವೆನಿಸುತ್ತದೆ. ಅಂಗುಷ್ಠಗಳ ಮೂಲಪ್ರದೇಶವು ಪಿತೃತೀರ್ಥವೆನಿಸುತ್ತದೆ. ದೇವತೆಗಳಿಗೆ ತರ್ಪಣವನ್ನು ಕೊಡುವಾಗ ದೇವತೀರ್ಥವೆನಿಸುವ ಬೆರಳುಗಳ ತುದಿಯಿಂದಲೇ ನೀರನ್ನು ಬೊಗಸೆಯಲ್ಲಿ ತುಂಬಿಸಬೇಕು. ಮತ್ತು ಕೆಳಗೆ ಬಿಡಬೇಕು. ಪಿತೃತೀರ್ಥ ಮತ್ತು ಋಷಿತೀರ್ಥದಿಂದ ನೀರನ್ನು ತುಂಬಿಸಲೂ ಕೂಡದು. ಬಿಡಲೂ ಕೂಡದು. ಇದೇ ರೀತಿಯಿಂದ ಪಿತೃತರ್ಪಣವನ್ನು ಕೊಡುವಾಗ ಪಿತೃತೀರ್ಥವೆನಿಸುವ ಅಂಗುಷ್ಠಗಳ ಬುಡದಿಂದಲೂ ಋಷಿತರ್ಪಣವನ್ನು ಕೊಡುವಾಗ ಋಷಿತೀರ್ಥವೆನಿಸುವ ಕಿರುಬೆರಳಿನ ಪ್ರದೇಶದಿಂದಲೂ ನೀರನ್ನು ತುಂಬಿಸಿ ಕೆಳಗೆ ಬಿಡಬೇಕು. ಇದಕ್ಕೆ ವ್ಯತ್ಯಾಸವಾಗಿ ನಡೆದುಕೊಂಡರೆ ಆ ನೀರು ರಕ್ತಕ್ಕೆ ಸಮವೆಂದು ತಿಳಿಯಬೇಕು."

### ಒದ್ದೆ ಬಟ್ಟೆಯನ್ನು ಉಟ್ಟುಕೊಂಡೇ ಸ್ನಾನಾಂಗತರ್ಪಣವನ್ನು ಕೊಡಬೇಕು

ಸ್ನಾತಶ್ಚಾರ್ದ್ರವಸ್ತ್ರಾಂಗಸ್ತಥೈವ ದೇವರ್ಷಿಪಿತೃತರ್ಪಣಂ ಕುರ್ಯಾತ್ | (ವಿಷ್ಣುವಚನ)

"ಸ್ನಾನವನ್ನು ಮಾಡಿದವನು ಒದ್ದೆ ಬಟ್ಟೆಯನ್ನು ಉಟ್ಟುಕೊಂಡೇ ದೇವತರ್ಪಣ, ಋಷಿತರ್ಪಣ ಮತ್ತು ಪಿತೃತರ್ಪಣಗಳನ್ನು ಕೊಡಬೇಕು."

## ಅಶಕ್ತರು ಒಣಗಿದ ವಸ್ತ್ರವನ್ನು ಉಟ್ಟುಕೊಂಡು ತರ್ಪಣವನ್ನು ಮಾಡಬಹುದು

ಯತ್ತು "ಶುಚಿರ್ವಸ್ತ್ರಧರಃ ಸ್ನಾತಃ ಪರಿಧಾಯಾಂಬರಂ ಶುಚಿಃ |

ತೇಷಾಮೇವ ಹಿ ತೀರ್ಥೇನ ಕುರ್ಯಾದುದಕತರ್ಪಣಮ್ ||" ಇತಿ ತದಶಕ್ತವಿಷಯಂ ಗೃಹಸ್ಥಸ್ನಾನವಿಷಯಂ ವಾ.

"ಆಚಮನ ಮುಂತಾದವುಗಳನ್ನು ಮಾಡಿ ಶುದ್ಧನಾಗಬೇಕು. ವಸ್ತ್ರವನ್ನು ಉಟ್ಟುಕೊಂಡು ಸ್ನಾನ ಮಾಡಬೇಕು. ಶುದ್ಧವಾದ ಬಟ್ಟೆಯನ್ನು ಉಟ್ಟುಕೊಳ್ಳಬೇಕು. ದೇವತೆಗಳಿಗೂ, ಪಿತೃಗಳಿಗೂ, ಋಷಿಗಳಿಗೂ ಅವರವರ ತೀರ್ಥಗಳಿಂದ ತರ್ಪಣವನ್ನು ಕೊಡಬೇಕು."

(ಈ ವಾಕ್ಯದಲ್ಲಿ ಒಣಗಿದ ಮಡಿವಸ್ತ್ರವನ್ನೂ ಸಹ ಉಟ್ಟುಕೊಂಡು ತರ್ಪಣವನ್ನು ಕೊಡಬಹುದೆಂದು ಹೇಳಿದೆ. ಆದರೆ ಈ ವಿಷಯವು ಇದಕ್ಕಿಂತ ಹಿಂದೆ ಉದಾಹರಿಸಿರುವ ವಿಷ್ಣುವಚನಕ್ಕೆ ವಿರುದ್ಧವಾಗಿದೆ. ಈ ಎರಡು ವಾಕ್ಯಗಳಿಗೆ ವಿರೋಧವನ್ನು ಪರಿಹರಿಸಬೇಕು. ಸ್ಮೃತಿಮುಕ್ತಾವಲೀಕಾರರು ಈ ವಿರೋಧವನ್ನು ಎರಡು ವಿಧವಾಗಿ ಪರಿಹರಿಸುತ್ತಾರೆ. (1) ಅಶಕ್ತರಾದವರು ಒಣಗಿದ ಬಟ್ಟೆಯನ್ನೂ ಸಹ ಉಟ್ಟುಕೊಂಡು ತರ್ಪಣವನ್ನು ಕೊಡಬಹುದು. ಶಕ್ತರಾದವರು ಒದ್ದೆ ಬಟ್ಟೆಯನ್ನು ಉಟ್ಟುಕೊಂಡೇ ತರ್ಪಣವನ್ನು ಕೊಡಬೇಕು. ವಿಷ್ಣುವಿನ ವಾಕ್ಯವು ಶಕ್ತರನ್ನೂ ಈ ವಾಕ್ಯವು ಅಶಕ್ತರನ್ನೂ ಉದ್ದೇಶಿಸಿ ಹೊರಟಿದೆ. ಆದ್ದರಿಂದ ಎರಡು ವಾಕ್ಯಗಳಿಗೂ ವಿರೋಧವಿಲ್ಲ. (2) ಗೃಹಸ್ಥರು ಒಣಗಿದ ವಸ್ತ್ರವನ್ನೂ ಸಹ ಉಟ್ಟುಕೊಂಡು ತರ್ಪಣವನ್ನು ಕೊಡಬಹುದು. ಗೃಹಸ್ಥರಲ್ಲದವರು ಒದ್ದೆ ಬಟ್ಟೆಯನ್ನು ಉಟ್ಟುಕೊಂಡೇ ತರ್ಪಣವನ್ನು ಕೊಡಬೇಕು. ಈ ವಾಕ್ಯವು ಗೃಹಸ್ಥರನ್ನೂ ವಿಷ್ಣುವಿನ ವಾಕ್ಯವು ಗೃಹಸ್ಥರಲ್ಲದವರನ್ನೂ ಕುರಿತು ಹೊರಟಿದೆ. ಆದ್ದರಿಂದ ಎರಡು ವಾಕ್ಯಗಳಿಗೂ ವಿರೋಧವಿಲ್ಲ. ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.)

## ಪ್ರಾತಃಸ್ನಾನಾಂಗತರ್ಪಣದಲ್ಲಿ ಎಳ್ಳನ್ನು ಉಪಯೋಗಿಸಕೂಡದು

(1) ಪ್ರಾತಃಸ್ನಾನೇ ವಿಶೇಷೋಽಯಂ ಯದ್ವಿನೈವ ತಿಲೈರ್ಯುತಮ್ |

ನೈಮಿತ್ತಿಕಂ ಚ ಕಾಮ್ಯಂ ಚ ತಿಲೈರೇವ ವಿಧೀಯತೇ || (ಕೌಶಿಕ ವಚನ)

"ನೈಮಿತ್ತಿಕಸ್ನಾನ ಮತ್ತು ಕಾಮ್ಯಪಿತೃತರ್ಪಣಗಳನ್ನು ಎಳ್ಳಿನಿಂದಲೇ ಮಾಡಬೇಕು. ಪ್ರಾತಃಸ್ನಾನವನ್ನು ಮಾಡುವಾಗ ಮಾಡುವ ಪಿತೃತರ್ಪಣವನ್ನು ಎಳ್ಳಿನಿಂದ ಮಾಡಬಾರದು." ಇದು ಕೌಶಿಕರ ವಚನ. ಈ ವಾಕ್ಯದಲ್ಲಿ ಪ್ರಾತಃ ಸ್ನಾನಾಂಗಪಿತೃತರ್ಪಣವನ್ನು ಎಳ್ಳಿನಿಂದ ಕೊಡಬಾರದೆಂದು ಹೇಳಿದೆ.

(2) ಬಾಹುಂ ಪೂರ್ಣಂ ತಿಲೈಃ ಕೃತ್ವಾ ಜಲಸ್ಥಸ್ತರ್ಪಯೇತ್ಪಿತೄನ್ | (ವಸಿಷ್ಠವಚನ)

"ಕೈಯಲ್ಲಿ ಎಳ್ಳನ್ನು ತುಂಬಿ ಕೊಳ್ಳಬೇಕು. ನೀರಿನಲ್ಲಿ ನಿಂತು ಪಿತೃಗಳಿಗೆ ತರ್ಪಣವನ್ನು ಕೊಡಬೇಕು." ಇದು ವಸಿಷ್ಠರ ವಚನ.

(3) ವಾಮಹಸ್ತೇ ತಿಲಾನ್ ಕ್ಷಿಪ್ತ್ವಾ ಜಲಮಧ್ಯೇ ತು ತರ್ಪಯೇತ್ | (ಯೋಗಿಯಾಜ್ಞವಲ್ಕ್ಯರ ವಚನ)

"ಎಡಗೈಯಲ್ಲಿ ಎಳ್ಳನ್ನಿಟ್ಟುಕೊಂಡು ನೀರಿನಲ್ಲಿ ನಿಂತು ತರ್ಪಣವನ್ನು ಕೊಡಬೇಕು." ಇದು ಯೋಗಿಯಾಜ್ಞವಲ್ಕ್ಯರ ವಚನ. ಈ ವಾಕ್ಯದಲ್ಲಿಯೂ, ಹಿಂದಿನ ವಸಿಷ್ಠರ ವಾಕ್ಯದಲ್ಲಿಯೂ, ಪಿತೃತರ್ಪಣವನ್ನು ಎಳ್ಳಿನಿಂದಲೇ ಕೊಡಬೇಕೆಂದು ಹೇಳಿದೆ. ಇದು ಕೌಶಿಕರ ವಾಕ್ಯಕ್ಕೆ ವಿರುದ್ಧವಾಗಿದೆ.

"ಈ ಮೂರು ವಾಕ್ಯಗಳಲ್ಲಿ ಮೊದಲನೆಯ ವಾಕ್ಯದಲ್ಲಿ ಎಳ್ಳಿನಿಂದ ಪ್ರಾತಃಸ್ನಾನದಲ್ಲಿ ಪಿತೃತರ್ಪಣವನ್ನು ಕೊಡಬಾರದೆಂದು ಹೇಳಿರುತ್ತದೆ. ಉಳಿದ ಎರಡು ವಾಕ್ಯಗಳಲ್ಲಿ ಪ್ರಾತಃಸ್ನಾನವನ್ನು ಬಿಟ್ಟು ಉಳಿದ ಕಾಲದಲ್ಲಿ ಮಾಡುವ ನೈಮಿತ್ತಿಕ ಮತ್ತು ಕಾಮ್ಯ ತರ್ಪಣಗಳನ್ನು ಎಳ್ಳಿನಿಂದ ಕೊಡಬೇಕೆಂದು ಹೇಳುತ್ತದೆ. ಆದ್ದರಿಂದ ಮೊದಲನೆಯ ವಾಕ್ಯಕ್ಕೂ, ಉಳಿದ ಎರಡು ವಾಕ್ಯಗಳಿಗೂ ವಿರೋಧವಿಲ್ಲ." ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

## ತರ್ಪಣವನ್ನು ಕೊಡುವಾಗ ಎಳ್ಳು ರೋಮಕ್ಕೆ ತಗಲಬಾರದು

(1) ರೋಮಸಂಸ್ಥಾನ್ ತಿಲಾನ್ ಕೃತ್ವಾ ಯಸ್ತು ತರ್ಪಯೇತ್ ಪಿತೄನ್ |
ಪಿತರಸ್ತರ್ಪಿತಾಸ್ತೇನ ರುಧಿರೇಣ ಮಲೇನ ವಾ || (ಗೋಭಿಲರ ವಚನ)

"ರೋಮದ ಮೇಲೆ ಎಳ್ಳನ್ನಿಟ್ಟು ಪಿತೃತರ್ಪಣವನ್ನು ಮಾಡಿದರೆ ರಕ್ತ ಅಥವಾ ಮಲದಿಂದ ಪಿತೃಗಳನ್ನು ತೃಪ್ತಿಪಡಿಸಿದಂತಾಗುತ್ತದೆ." ಇದು ಗೋಭಿಲರ ವಚನ. ಈ ವಾಕ್ಯದಲ್ಲಿ ತರ್ಪಣವನ್ನು ಕೊಡುವಾಗ ಎಳ್ಳು ರೋಮಕ್ಕೆ ತಗಲಬಾರದೆಂದು ಸ್ಪಷ್ಟವಾಗಿ ಹೇಳಿದೆ.

(2) ಬಾಹುಂ ಪೂರ್ಣಂ ತಿಲೈಃ ಕೃತ್ವಾ ಜಲಸ್ಥಸ್ತರ್ಪಯೇತ್ಪಿತೄನ್ |
ಸ್ಥಲಸ್ಥೇನ ನ ಕರ್ತವ್ಯಂ ಪಿತೄಣಾಂ ಭೂತಿಮಿಚ್ಛತಾ || (ವಸಿಷ್ಠರ ವಚನ)

"ಕೈಯಲ್ಲಿ ಎಳ್ಳನ್ನು ತುಂಬಿಸಬೇಕು. ನೀರಿನಲ್ಲಿ ನಿಂತು ಪಿತೃತರ್ಪಣವನ್ನು ಕೊಡಬೇಕು. ನೆಲದಲ್ಲಿ ಕುಳಿತು ಅಮಾವಾಸ್ಯಾತರ್ಪಣ ಮುಂತಾದ ತರ್ಪಣವನ್ನು ಕೊಡುವಾಗ ಎಳ್ಳನ್ನು ಕೈಯಲ್ಲಿ ತುಂಬಿಸಿ ಕೊಡಬಾರದು. ಇದಕ್ಕೆ ವ್ಯತ್ಯಾಸವಾಗಿ ನಡೆದುಕೊಂಡರೆ ಈ ತರ್ಪಣದಿಂದ ಪಿತೃಗಳಿಗೆ ಸದ್ಗತಿಯಾಗಲಾರದು." ಇದು ವಸಿಷ್ಠರ ವಚನ.

ಈ ವಾಕ್ಯದಲ್ಲಿ ಕೈಯಲ್ಲಿ ಎಳ್ಳನ್ನು ತುಂಬಿಸಿಕೊಂಡು ತರ್ಪಣವನ್ನು ಕೊಡಬೇಕೆಂದು ಹೇಳಿದೆ. ಕೈಯಲ್ಲಿ ಎಳ್ಳನ್ನು ತುಂಬಿಸಿಕೊಂಡು ತರ್ಪಣವನ್ನು ಕೊಡುವಾಗ ಎಳ್ಳಿಗೂ ರೋಮಗಳಿಗೂ ಸ್ಪರ್ಶವು ಏರ್ಪಟ್ಟೇ ಏರ್ಪಡುತ್ತದೆ. ಇದರಿಂದ ತರ್ಪಣವನ್ನು ಕೊಡುವಾಗ ಎಳ್ಳಿಗೂ, ರೋಮಕ್ಕೂ, ಸ್ಪರ್ಶವು ಏರ್ಪಟ್ಟದ್ದರಿಂದ ದೋಷವಿಲ್ಲವೆಂದು ತಿಳಿಯುತ್ತದೆ. ಇದರಿಂದ ಗೋಭಿಲರ ವಚನ ಮತ್ತು ವಸಿಷ್ಠರ ವಚನಗಳಿಗೆ ಪರಸ್ಪರ ವಿರೋಧವಿದ್ದಂತೆ ತಿಳಿಯುತ್ತದೆ. ಆದರೆ ಚಂದ್ರಿಕಾ ಎಂಬ ಗ್ರಂಥಕಾರರು, ಭೂಮಿಯಲ್ಲಿ ಕುಳಿತು ತರ್ಪಣವನ್ನು ಕೊಡುವಾಗ ಎಳ್ಳಿಗೂ ರೋಮಗಳಿಗೂ ಸ್ಪರ್ಶವಾಗಕೂಡದೆಂದೂ, ನೀರಿನಲ್ಲಿ ತರ್ಪಣವನ್ನು ಕೊಡುವಾಗ ಸ್ಪರ್ಶವು ಏರ್ಪಟ್ಟರೂ ದೋಷವಿಲ್ಲವೆಂದೂ ಹೇಳಿದ್ದಾರೆ. "ವಸಿಷ್ಠರ ವಚನವು ನೀರಿನಲ್ಲಿ ತರ್ಪಣವನ್ನು ಕೊಡುವಾಗ ಎಳ್ಳಿಗೂ ರೋಮಕ್ಕೂ ಸ್ಪರ್ಶವು ಏರ್ಪಡಬಹುದೆಂದೂ, ಗೋಭಿಲರ ವಚನವು ನೆಲದಲ್ಲಿ ಕುಳಿತು ತರ್ಪಣವನ್ನು ಕೊಡುವಾಗ ಎಳ್ಳಿಗೂ ರೋಮಕ್ಕೂ ಸ್ಪರ್ಶವು ಏರ್ಪಡಕೂಡದೆಂದೂ ಹೇಳುತ್ತದೆ. ಆದ್ದರಿಂದ ಎರಡು ವಾಕ್ಯಗಳಿಗೂ ವಿರೋಧವಿಲ್ಲ. ಇದು ಚಂದ್ರಿಕಾಗ್ರಂಥಕಾರರ ನಿರ್ಣಯ. ಇದೇ ನಿರ್ಣಯವನ್ನು ಸ್ಮೃತಿಮುಕ್ತಾವಲೀಕಾರರು ಅನುಮೋದಿಸಿದ್ದಾರೆ.

"ಅಂಗುಷ್ಠದ ಬುಡದಲ್ಲಿ ಎಳ್ಳನ್ನು ಇಟ್ಟುಕೊಂಡು ತರ್ಪಣವನ್ನು ಕೊಡಬೇಕು. ಅಂಗುಷ್ಠಬುಡದಲ್ಲಿ ಒಳಭಾಗದಲ್ಲಿ ರೋಮವಿಲ್ಲ. ಹೊರಭಾಗದಲ್ಲಿ ರೋಮವಿರುತ್ತದೆ. ರೋಮವುಳ್ಳ ಅಂಗುಷ್ಠದ ಬುಡದಲ್ಲಿ ಎಳ್ಳು ತಗಲದಂತೆ ತರ್ಪಣವನ್ನು ಕೊಡಬೇಕು. ಅಂದರೆ ಅಂಗೈಯಲ್ಲಿ ಅಂಗುಷ್ಠದ ಬುಡದಲ್ಲಿ ಎಳ್ಳನ್ನು ಇಟ್ಟು ಪಿತೃತರ್ಪಣವನ್ನು ಕೊಡಬೇಕು. ವಿಷಯವನ್ನು "ರೋಮಸಂಸ್ಥಾನ್ ಎಂಬ ಗೋಭಿಲರ ವಚನವು ತಿಳಿಸುತ್ತದೆ." ಇದು ಅಪರಾರ್ಕ ಎಂಬ ಗ್ರಂಥಕಾರರು ಹೇಳಿರುವುದು. ಈ ಅಂಶವನ್ನೂ ಸ್ಮೃತಿಮುಕ್ತಾವಲೀಕಾರರು ಅನುಮೋದಿಸಿದ್ದಾರೆ.

ನಿಧಾಯಾಂಗುಷ್ಠಮೂಲೇ ತು ತಿಲಾನ್ಸ್ತು ತರ್ಪಯೇತ್ಪಿತೄನ್ | (ಸ್ಮೃತಿಸಂಗ್ರಹವಚನ)

"ಅಂಗುಷ್ಠದ ಬುಡದಲ್ಲಿ ಎಳ್ಳನ್ನಿಟ್ಟು ಪಿತೃಗಳಿಗೆ ತರ್ಪಣವನ್ನು ಕೊಡಬೇಕು." ಈ ವಚನದಲ್ಲಿ ಅಂಗುಷ್ಠ ಮೂಲವು ರೋಮವಿಲ್ಲದಿರುವ ಅಂಗೈ ಭಾಗವೇ ಹೊರತು ರೋಮವುಳ್ಳ ಹಿಂಗೈ ಭಾಗವಲ್ಲ ಎಂದು ತಿಳಿಸುವುದಕ್ಕಾಗಿಯೇ "ರೋಮಸಂಸ್ಥಾನ್" ಎಂಬ ಗೋಭಿಲರ ವಚನವು ಹೊರಟಿದೆ. ಆದ್ದರಿಂದ ನೀರಿನಲ್ಲಿ ನಿಂತು ತರ್ಪಣ ಕೊಡುವಾಗಲೂ, ನೆಲದಲ್ಲಿ ಕುಳಿತು ತರ್ಪಣ ಕೊಡುವಾಗಲೂ, ಅಂಗೈಯಲ್ಲಿ ಅಂಗುಷ್ಠದ ಬುಡದಲ್ಲಿ ಅಥವಾ ಅಂಗೈ ತುಂಬುವಂತೆ

ಎಳ್ಳನ್ನಿಟ್ಟುಕೊಂಡು ತರ್ಪಣವನ್ನು ಕೊಟ್ಟರೆ ರೋಮವುಳ್ಳ ಭಾಗದ ಸ್ಪರ್ಶವೇ ಎಳ್ಳಿಗೆ ಆಗುವುದಿಲ್ಲ. ಆದ್ದರಿಂದ "ರೋಮಸಂಸ್ಥಾನ್" ಎಂಬ ವಾಕ್ಯದ ವಿರೋಧವು ನೀರಿನಲ್ಲಿ ನಿಂತಾಗಲೀ, ನೆಲದಲ್ಲಿ ಕುಳಿತಾಗಲೀ, ತರ್ಪಣವನ್ನು ಕೊಡುವವರಿಗೆ ಬರುವುದಿಲ್ಲ." ಇದು ಸ್ಮೃತಿಸಂಗ್ರಹಕಾರರು ಹೇಳಿರುವ ಸಮಾಧಾನ.

**ತರ್ಪಣವನ್ನು ಯಾವುದರಿಂದ ಕೊಡಬೇಕು?**

ಪಾತ್ರೇಣಾಂಜಲಿನಾ ವಾಪಿ ಸೂರ್ಯಾಯಾರ್ಘ್ಯಂ ಪ್ರದಾಪಯೇತ್ |
ತರ್ಪಣಂ ದಕ್ಷಹಸ್ತೇನ ಪಿತ್ರ್ಯಂ ವಾಮೇನ ವಾ ಭವೇತ್ || (ಯಮವಚನ)

"ಸಂಧ್ಯಾವಂದನಕಾಲದಲ್ಲಿ ಸೂರ್ಯನಿಗೆ ಕೊಡುವ ಅರ್ಘ್ಯವನ್ನು ಬೆಳ್ಳಿ ತಾಮ್ರ ಮುಂತಾದ ಲೋಹದಿಂದ ನಿರ್ಮಿತವಾದ ಪಾತ್ರದಲ್ಲಿ ತುಂಬಿದ ನೀರಿನಿಂದ ಕೊಡಬೇಕು. ಅಥವಾ ಬೊಗಸೆಯಲ್ಲಿ ನೀರನ್ನು ತುಂಬಿಸಿ ಕೊಡಬೇಕು. ಪಿತೃಗಳಿಗೆ ಕೊಡುವ ತರ್ಪಣವನ್ನು ಎಡಗೈಯಿಂದಾಗಲೀ ಬಲಗೈಯಿಂದಾಗಲೀ ಕೊಡಬೇಕು." ಈ ವಾಕ್ಯದಲ್ಲಿ ಎಡಗೈಯಿಂದ ತರ್ಪಣವನ್ನು ಕೊಡಬೇಕೆಂದು ಹೇಳಿದೆ. ಅದರ ಅಭಿಪ್ರಾಯವನ್ನು ಮನುವು ಕೆಳಗಣ ವಾಕ್ಯದಿಂದ ತಿಳಿಸಿದ್ದಾನೆ.

ಅನ್ವಾರಬ್ಧೇ ತು ಸವ್ಯೇನ ದಕ್ಷಿಣೇನ ತು ಪಾಣಿನಾ |
ಸವ್ಯೋತ್ತರಾಭ್ಯಾಂ ಪಾಣಿಭ್ಯಾಮಥವಾ ತರ್ಪಣಂ ಭವೇತ್ || (ಮನುವಚನ)

"ಸಾಧಾರಣವಾಗಿ ಸರ್ವರೂ ಬಲಗೈಯಿಂದಲೇ ಎಲ್ಲಾ ಕಾರ್ಯಗಳನ್ನೂ ಮಾಡಬೇಕು. ಆದರೆ ವ್ಯಾಧಿ ಮುಂತಾದ ನಿಮಿತ್ತಗಳಿಂದ ಬಲಗೈಯಿಂದ ಮಾಡಲು ಸಾಧ್ಯವಿಲ್ಲದವರು ಎಡಗೈಯಿಂದಲಾದರೂ ಮಾಡಬೇಕು. ಎಲ್ಲಾ ಕೆಲಸಗಳನ್ನು ಎಡಗೈಯಿಂದ ಮಾಡುತ್ತಿರುವವರು ಎಡಗೈಯಿಂದ ತರ್ಪಣವನ್ನು ಕೊಡಬೇಕು. ಹಾಗಿಲ್ಲದವರು ಬಲಗೈಯಿಂದಲಾಗಲೀ ಎರಡು ಕೈಗಳನ್ನು ಒಟ್ಟುಗೂಡಿಸಿ ಬೊಗಸೆಯಿಂದಲಾಗಲೀ ಕೊಡಬೇಕು.

**ಶ್ರಾದ್ಧದಲ್ಲಿ ಎರಡು ಕೈಗಳಿಂದ ತರ್ಪಣವನ್ನು ಕೊಡಬಾರದು**

ಉಭಾಭ್ಯಾಮಥ ಹಸ್ತಾಭ್ಯಾಮುದಕಂ ಯಃ ಪ್ರಯಚ್ಛತಿ |
ಸ ಮೂಢೋ ನರಕಂ ಯಾತಿ ಕಾಲಸೂತ್ರಮವಾಕ್ಶಿರಾಃ || (ವ್ಯಾಘ್ರ ವಚನ)

"ಎರಡು ಕೈಗಳಿಂದ ತರ್ಪಣವನ್ನು ಕೊಡುವವನು ಮೂಢನು. ಅವನು ತಲೆಕೆಳಗಾಗಿ ಕಟ್ಟಲ್ಪಟ್ಟು ಕಾಲಸೂತ್ರ ಎಂಬ ನರಕದಲ್ಲಿ ತಳ್ಳಲ್ಪಡುವನು." ಈ ವಾಕ್ಯದಲ್ಲಿ ಎರಡು ಕೈಗಳಿಂದ ತರ್ಪಣವನ್ನು ಕೊಡುವುದು ಅನರ್ಥಕರವೆಂದು ತಿಳಿಯುತ್ತದೆ. ಹಿಂದಿನ ವಾಕ್ಯದಲ್ಲಿ ಎರಡು ಕೈಗಳಿಂದ ತರ್ಪಣವನ್ನು ಕೊಡುವುದು ವಿಹಿತವೆಂದು ತಿಳಿಯುತ್ತದೆ. ಈ ಎರಡು ವಾಕ್ಯಗಳಿಗೂ ವಿರೋಧವನ್ನು ಕಾರ್ಷ್ಣಾಜನಿಯು ಕೆಳಗಿನ ವಾಕ್ಯದಿಂದ ಪರಿಹರಿಸಿದ್ದಾರೆ.

ಶ್ರಾದ್ಧೇ ವಿವಾಹಕಾಲೇ ಚ ಪಾಣಿನೈಕೇನ ದೀಯತೇ |
ತರ್ಪಣಂ ತೂಭಯೇನೈವ ವಿಧಿರೇಷಃ ಸನಾತನಃ || (ಕಾರ್ಷ್ಣಾಜನಿವಚನ)

"ಶ್ರಾದ್ಧ ಮತ್ತು ವಿವಾಹಕಾಲದಲ್ಲಿ ಒಂದೇ ಕೈಯಿಂದ ತರ್ಪಣವನ್ನು ಕೊಡಬೇಕು. ಇತರ ಕಾಲದಲ್ಲಿ ಮಾಡುವ ತರ್ಪಣವನ್ನು ಎರಡು ಕೈಗಳಿಂದಲೇ ಕೊಡಬೇಕು. ಇದು ಅನಾದಿಕಾಲದಿಂದ ಬಂದಿರುವ ಶಾಸ್ತ್ರದ ಆಜ್ಞೆಯಾಗಿರುತ್ತದೆ."

ಈ ವಾಕ್ಯದಲ್ಲಿ ಒಂದೇ ಕೈಯಿಂದ ಪಿತೃತರ್ಪಣವನ್ನು ಮಾಡಬೇಕಾದ ಸಂದರ್ಭ ಮತ್ತು ಎರಡು ಕೈಗಳಿಂದ ತರ್ಪಣವನ್ನು ಮಾಡಬೇಕಾದ ಸಂದರ್ಭಗಳು ವಿಂಗಡಿಸಿ ಸ್ಪಷ್ಟವಾಗಿ ಹೇಳಲ್ಪಟ್ಟಿವೆ. ವ್ಯಾಘ್ರವಚನವು ಶ್ರಾದ್ಧ ಮತ್ತು ವಿವಾಹಗಳಲ್ಲಿ ಎರಡು ಕೈಗಳಿಂದ ತರ್ಪಣವನ್ನು ಕೊಡಲು ಸಾಧ್ಯವಿಲ್ಲದಿದ್ದಾಗ ಬಲಗೈಯಿಂದ ಕೊಡಬೇಕೆಂದೂ, ಅದೂ ಸಾಧ್ಯವಿಲ್ಲದಿದ್ದಾಗ ಎಡಗೈಯಿಂದ ಕೊಡಬೇಕೆಂದೂ ತಿಳಿಸುತ್ತದೆ. ಆದ್ದರಿಂದ ಎರಡು ವಚನಗಳಿಗೂ ವಿರೋಧವಿಲ್ಲ. ಇದು ಕಾರ್ಷ್ಣಾಜನಿಯ ಮಾತಿನ ಸಾರ.

### ಸ್ನಾನಾಂಗತರ್ಪಣವನ್ನು ಮಾಡದವನಿಗೆ ದೋಷ

ನಾಸ್ತಿಕ್ಯಭಾವಾದ್ಯ: ಸ್ನಾತ್ವಾ ನ ತರ್ಪಯತಿ ವೈ ಪಿತೃನ್ |
ಪಿಬಂತಿ ದೇಹವಿಸ್ರಾವಂ ಪಿತರೋಽಸ್ಯ ಜಲೇ ಸ್ಥಿತಾ: || (ವಸಿಷ್ಠರ ವಚನ)

"ಪಿತೃಗಳೂ ಇಲ್ಲ. ಪರಲೋಕವೂ ಇಲ್ಲ. ಅವರಿಗೆ ತರ್ಪಣವನ್ನು ಕೊಡುವುದೂ ವ್ಯರ್ಥ ಮುಂತಾದ ನಾಸ್ತಿಕ್ಯ ಬುದ್ಧಿಯಿಂದ ಕೆಲವರು ಸ್ನಾನಾಂಗಪಿತೃತರ್ಪಣವನ್ನು ಕೊಡುವುದಿಲ್ಲ. ಅವರ ಪಿತೃಗಳು ತರ್ಪಣಜಲದ ಆಸೆಯಿಂದ ನೀರಿನಲ್ಲಿ ಕಾದಿರುತ್ತಾರೆ. ಅವರು ಪಿತೃತರ್ಪಣವನ್ನು ಕೊಡದಿದ್ದರೆ ಅವರ ದೇಹದ ರಕ್ತವನ್ನು ಪಿತೃಗಳು ಕುಡಿಯುತ್ತಾರೆ."

### ತರ್ಪಣವು ಮುಗಿದ ಮೇಲೆ ಮಾಡಬೇಕಾದ ಕರ್ತವ್ಯ

ತರ್ಪಣಾಂತೇ ಸರ್ವತ್ರ ಬ್ರಹ್ಮಾರ್ಪಣಮಿತಿ ಬ್ರುವನ್ |
ಆಕಾಶೇ ನಿಕ್ಷಿಪೇತ್ತೋಯಂ ತತ್ಕರ್ಮ ಸಫಲಂ ಭವೇತ್ ||

"ಒಂದೊಂದು ಸಂದರ್ಭದಲ್ಲಿಯೂ ತರ್ಪಣವು ಮುಗಿದ ಕೂಡಲೇ "ಬ್ರಹ್ಮಾರ್ಪಣಮಸ್ತು" ಎಂದು ಹೇಳುತ್ತಾ ನೀರನ್ನು ಆಕಾಶದಲ್ಲಿ ಚೆಲ್ಲಬೇಕು. ಇದರಿಂದ ಆ ತರ್ಪಣವು ಸಫಲವಾಗುತ್ತದೆ."

### ತರ್ಪಣವನ್ನು ನಿರ್ಮಾಲ್ಯಸಹಿತವಾದ ಕೈಯಿಂದಲೇ ಮಾಡಬೇಕು

ವಿಷ್ಣುನಿರ್ಮಾಲ್ಯಶೇಷೇಣ ತರ್ಪಯೇತ್ಪಿತೃದೇವತಾ: |

"ವಿಷ್ಣುವಿಗೆ ಸಮರ್ಪಿಸಿದ ನಿರ್ಮಾಲ್ಯವನ್ನು ಕೈಯಲ್ಲಿ ಧರಿಸಿ ಪಿತೃಗಳಿಗೂ, ದೇವತೆಗಳಿಗೂ ತರ್ಪಣವನ್ನು ಕೊಡಬೇಕು."

### ಸ್ನಾನಾನಂತರದಲ್ಲಿ ಮಾಡಬೇಕಾದ ನಿಯಮಗಳು

### ಸ್ನಾನಾನಂತರದಲ್ಲಿ ಕೈಗಳಿಂದಲೂ ಸ್ನಾನವಸ್ತ್ರದಿಂದಲೂ ಮೈಯನ್ನು ಒರೆಸಕೂಡದು

ಅವಮೃಜ್ಯಾನ್ನ ಚ ಸ್ನಾತೋ ಗಾತ್ರಾಣ್ಯಂಬರಪಾಣಿಭಿ: |
ನ ಚ ನಿರ್ಧೂನಯೇತ್ಕೇಶಾನ್ವಾಸಶ್ಚೈವ ನ ನಿರ್ಧುನೇತ್ || (ಮಾರ್ಕಂಡೇಯಪುರಾಣ)

"(1) ಸ್ನಾನ ಮಾಡಿದ ಮೇಲೆ ದೇಹವನ್ನು ಬಟ್ಟೆಯಿಂದಲೂ ಕೈಗಳಿಂದಲೂ ಒರೆಸಬಾರದು. (2) ತಲೆಯ ಕೂದಲನ್ನು ಕೊಡವಬಾರದು. (3) ವಸ್ತ್ರವನ್ನೂ ಕೊಡವಬಾರದು." ಈ ಶ್ಲೋಕದಲ್ಲಿ ಸ್ನಾನಾನಂತರದಲ್ಲಿ ಮಾಡಬೇಕಾದ ಮೂರು ನಿಯಮಗಳು ಹೇಳಲ್ಪಟ್ಟಿವೆ. ಈ ಮೂರು ನಿಯಮಗಳನ್ನು ಸ್ವೀಕರಿಸುವುದಕ್ಕೆ ಕಾರಣವನ್ನು ಗೋಭಿಲರು ಕೆಳಗಿನ ಶ್ಲೋಕದಲ್ಲಿ ಹೇಳಿರುತ್ತಾರೆ.

ಪಿಬಂತಿ ಶಿರಸೋ ದೇವಾ: ಪಿಬಂತಿ ಪಿತರೋ ಮುಖಾತ್ |
ಮಧ್ಯಮಾದ್ಯಕ್ಷಗಂಧರ್ವಾ ಹ್ಯಧಸ್ತಾತ್ಸರ್ವಜಂತವ: |
ತಸ್ಮಾತ್ಸ್ನಾತೋ ನಾಮಮೃಜ್ಯಾತ್ಸ್ನಾನಶಾಟ್ಯಾ ನ ಪಾಣಿನಾ || (ಗೋಭಿಲರ ವಚನ)

"ತಲೆಯಲ್ಲಿರುವ ಸ್ನಾನಜಲವನ್ನು ದೇವತೆಗಳೂ ಮುಖದಲ್ಲಿರುವ ಜಲವನ್ನು ಪಿತೃಗಳೂ ಮುಖದ ಕೆಳಗೆ ಮತ್ತು ಹೊಕ್ಕಳಿನ ಮೇಲ್ಭಾಗದಲ್ಲಿರುವ ಜಲವನ್ನು ಯಕ್ಷರೂ ಮತ್ತು ಗಂಧರ್ವರೂ, ಹೊಕ್ಕಳಿನ ಕೆಳಭಾಗದಲ್ಲಿರುವ ಸ್ನಾನ ಜಲವನ್ನು ಸರ್ವಜಂತುಗಳೂ ಕುಡಿಯುತ್ತಾರೆ. ಆದ್ದರಿಂದ ಸ್ನಾನಾನಂತರದಲ್ಲಿ ದೇಹದಲ್ಲಿರುವ ಜಲವನ್ನು ಸ್ನಾನ ಕಾಲದಲ್ಲಿ ಧರಿಸಿರುವ ವಸ್ತ್ರದಿಂದಾಗಲೀ, ಬರೇ ಕೈಗಳಿಂದಾಗಲೀ ಒರೆಸಕೂಡದು." ಇದು ಗೋಭಿಲರ ವಚನ.

ತಿಸ್ರ: ಕೋಟ್ಯೋಽರ್ಧಕೋಟೀ ಚ ಯಾವಂತ್ಯಂಗರುಹಾಣಿ ವೈ |
ಸ್ರವಂತಿ ಸರ್ವತೀರ್ಥಾನಿ ತಸ್ಮಾನ್ನ ಪರಿಮಾರ್ಜಯೇತ್ || (ವ್ಯಾಸವಚನ)

"ಒಬ್ಬೊಬ್ಬನ ದೇಹದಲ್ಲಿಯೂ ಮೂರುವರೆ ಕೋಟಿ ರೋಮಗಳಿವೆ. ಸ್ನಾನಾನಂತರದಲ್ಲಿ ಆ ರೋಮಗಳಲ್ಲಿ ಒಂದೊಂದು ರೋಮದಿಂದ ಒಂದೊಂದು ತೀರ್ಥದಂತೆ ಎಲ್ಲಾ ತೀರ್ಥಗಳೂ ಹರಿಯುತ್ತಿರುತ್ತವೆ. ಆದ್ದರಿಂದ ಮೈಯನ್ನು ಒರೆಸಕೂಡದು." ಇದು ವ್ಯಾಸರ ವಚನ.

ಅನಂಗೇಭ್ಯಸ್ತೋಯಮುದ್ಧರೇತ್ | (ಅಪರಾರ್ಕವಚನ)

"ಕೈ ಮುಂತಾದ ಅಂಗಗಳಿಂದ ನೀರನ್ನು ಒರೆಸಕೂಡದು. ಅಂಗಗಳಲ್ಲದಿರುವ ವಸ್ತ್ರ ಮುಂತಾದವುಗಳಿಂದ ಮೈಯಲ್ಲಿರುವ ನೀರನ್ನು ಒರೆಸಬೇಕು." ಇದು ಅಪರಾರ್ಕ ಎಂಬ ಗ್ರಂಥದಲ್ಲಿ ಹೇಳಿದ ವಚನ.

(ಈ ಅಪರಾರ್ಕ ಎಂಬ ಗ್ರಂಥದ ವಚನದಲ್ಲಿ "ಕೈ ಮುಂತಾದ ಅಂಗಗಳಿಂದ ಮೈಯನ್ನು ಒರೆಸಕೂಡದು" ಎಂದು ಹೇಳಿದೆ. "ವಸ್ತ್ರ ಮುಂತಾದವುಗಳಿಂದ ಒರೆಸಕೂಡದು" ಎಂದು ಹೇಳಿಲ್ಲ. "ಸ್ನಾನಶಾಟ್ಯಾ ನ ಪಾಣಿನಾ" ಎಂಬ ಗೋಭಿಲರ ವಚನದಲ್ಲಿ "ಸ್ನಾನಕಾಲದಲ್ಲಿ ಉಟ್ಟುಕೊಂಡಿರುವ ವಸ್ತ್ರದಿಂದಲೂ ಕೈಯಿಂದಲೂ ಒರೆಸಕೂಡದು" ಎಂದು ಹೇಳಿದೆಯೇ ಹೊರತು ಯಾವ ವಸ್ತ್ರದಿಂದಲೂ ಒರೆಸಿಕೊಳ್ಳಕೂಡದು" ಎಂದು ಹೇಳಿಲ್ಲ. ಆದ್ದರಿಂದ "ಸ್ನಾನಾನಂತರದಲ್ಲಿ ಮೈಯನ್ನು ಒರೆಸಿಕೊಳ್ಳಕೂಡದು" ಎಂದು ಹೇಳುತ್ತಿರುವ ಮತ್ತು ಹಿಂದೆ ಉದಾಹರಿಸಿರುವ ಮಾರ್ಕಂಡೇಯಪುರಾಣವಚನ ಮತ್ತು ವ್ಯಾಸವಚನಗಳಿಗೆ "ಸ್ನಾನಕಾಲದಲ್ಲಿ ಉಟ್ಟುಕೊಂಡಿರುವ ವಸ್ತ್ರದಿಂದಲೂ, ಕೈಗಳಿಂದಲೂ ಮೈಯನ್ನು ಒರೆಸಿಕೊಳ್ಳಕೂಡದು. ಇತರ ವಸ್ತ್ರದಿಂದ ಒರೆಸಿಕೊಂಡರೆ ದೋಷವಿಲ್ಲ" ಎಂಬ ಅರ್ಥವನ್ನೇ ಹೇಳಬೇಕು. ಹೀಗೆ ಹೇಳಿದರೆ ಎಲ್ಲಾ ವಾಕ್ಯಗಳಿಗೂ ಒಂದೇ ಅರ್ಥವನ್ನು ಹೇಳಿದಂತಾಗುತ್ತದೆ. ವಿರೋಧವಿಲ್ಲ.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ. ಈ ವಿಷಯವು ಕೆಳಗಿನ ಶಾಂಡಿಲ್ಯವಚನದಿಂದ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

**ಮೈಯನ್ನು ಒರೆಸುವುದಕ್ಕೆ ಎರಡು ತುಂಡುಗಳು ಬೇಕು**

ಚತುರ್ನಿಮಜ್ಜ್ಯ ವಿಧಿವದಾಚಮ್ಯಾದಾಯ ವಾಸಸಃ |
ಖಂಡದ್ವಯಂ ಶಿರೋಂsಗಂ ಚ ಪ್ರತ್ಯೇಕಂ ಪರಿಮಾರ್ಜಯೇತ್ || (ಶಾಂಡಿಲ್ಯವಚನ)

"ವಿಧಿಪೂರ್ವಕವಾಗಿ ನಾಲ್ಕು ಸಲ ಮುಳುಗಬೇಕು. ಆಚಮನವನ್ನು ಮಾಡಬೇಕು. ವಸ್ತ್ರದ ಎರಡು ತುಂಡುಗಳನ್ನು ಕೈಯಲ್ಲಿ ತೆಗೆದುಕೊಳ್ಳಬೇಕು. ಒಂದು ತುಂಡಿನಿಂದ ತಲೆಯನ್ನೂ, ಇನ್ನೊಂದು ತುಂಡಿನಿಂದ ಮೈಯನ್ನೂ ಒರೆಸಬೇಕು." ಇದು ಶಾಂಡಿಲ್ಯರ ವಚನ. ಈ ಶಾಂಡಿಲ್ಯರ ವಚನದಿಂದ ಸ್ನಾನಕಾಲದಲ್ಲಿ (1) ಉಟ್ಟುಕೊಳ್ಳುವ ಬಟ್ಟೆ (2) ಹೊದ್ದುಕೊಳ್ಳುವ ಬಟ್ಟೆ (3) ತಲೆಯನ್ನು ಒರೆಸುವ ತುಂಡು (4) ಇತರ ಅವಯವಗಳನ್ನು ಒರೆಸುವ ತುಂಡು ಹೀಗೆ ನಾಲ್ಕು ಬಟ್ಟೆಗಳು ಪ್ರತ್ಯೇಕವಾಗಿರಬೇಕು ಎಂದು ಹೇಳಿದಂತಾಯಿತು.

**ಹೊದ್ದುಕೊಳ್ಳುವ ಬಟ್ಟೆಯಿಂದ ಮತ್ತು ಹರಿದ ವಸ್ತ್ರದಿಂದ ಮೈಯನ್ನು ಒರೆಸಕೂಡದು**

ಮಾರ್ಜಯೇದ್ವಸ್ತ್ರಶೇಷೇಣ ನೋತ್ತರೀಯೇಣ ವಾ ಶಿರಃ |
ನ ಚ ನಿರ್ಧುನುಯಾತ್ಕೇಶಾನ್ನ ತಿಷ್ಠನ್ಪರಿಮಾರ್ಜಯೇತ್ ||
ಮಾರ್ಜಯೇದ್ವಸ್ತ್ರಖಂಡೇನ ನಾನ್ಯಥಾ ಪರಿಮಾರ್ಜಯೇತ್ |
ಯದಿ ಪ್ರಮಾದಾನ್ಮೃಜ್ಯೇತ ನರಕಂ ಸ ವ್ರಜತ್ಯಧಃ || (ಭರದ್ವಾಜರ ವಚನ)

"ಒಂದು ವಸ್ತ್ರವನ್ನು ಎರಡಾಗಿ ತುಂಡು ಮಾಡಿದರೆ ಆ ಎರಡು ತುಂಡುಗಳೂ ವಸ್ತ್ರಶೇಷವೆನಿಸುತ್ತವೆ. ಆ ವಸ್ತ್ರಶೇಷದಿಂದಲಾಗಲೀ, ಹೊದ್ದುಕೊಳ್ಳುವ ಬಟ್ಟೆಯಿಂದಾಗಲೀ ತಲೆಯನ್ನು ಒರೆಸಬಾರದು. ತಲೆಯ ಕೂದಲನ್ನು ಝಾಡಿಸಬಾರದು. ನಿಂತುಕೊಂಡು ಒರೆಸಬಾರದು. ವಸ್ತ್ರದ ತುಂಡಿನಿಂದ ಅಂದರೆ ಚಿಕ್ಕವಸ್ತ್ರದಿಂದ ಒರೆಸಬೇಕು. ಈ ನಿಯಮಕ್ಕೆ

ವಿರುದ್ಧವಾಗಿ ಒರೆಸಕೂಡದು. ಹಾಗೆ ಒರೆಸಿದರೆ ನರಕ ಮತ್ತು ನೀಚಯೋನಿಗಳನ್ನು ಪಡೆಯುವನು." ಇದು ಭರದ್ವಾಜರ ವಚನ.

### ಸ್ನಾನಾನಂತರದಲ್ಲಿ ಮಾಡಬೇಕಾದ ಇತರ ನಿಯಮಗಳು

ನಾನ್ಯೋನ್ಯಂ ಪೃಷ್ಠತೋ ಮೃಜ್ಯಾನ್ನ ಲಿಂಪೇತ್ಪೃಷ್ಠತೋ ಮಿಥಃ |
ಸ್ನಾತ್ವಾ ನ ಧಾವಯೇದ್ದಂತಾನ್ ನ ಮೃಜ್ಯಾದ್ವಾಸಸಾ ಮುಖಮ್ ||
ನ ಕುರ್ಯಾದ್ದಂತಸಂಘರ್ಷಂ ನಾತ್ಮನೋ ದೇಹತಾಡನಮ್ |
ನ ಚ ಪೂರ್ವಧೃತಂ ವಾಸೋ ನ ಚ ತೈಲಮುಪಸ್ಪೃಶೇತ್ ||
ಸ್ನಾತ್ವಾ ಚ ನಾನುಲಿಪ್ಯೇತ ವಾಸಶ್ಚೈವ ನ ನಿರ್ಧುನೇತ್ |
ಅನಾರ್ದ್ರಾಣಿ ತು ವಾಸಾಂಸಿ ಸ್ನಾತ್ವಾ ಸೇವೇತ ಮಾನವಃ || (ಯಮವಚನ)

"(1) ಇಬ್ಬರು ಅನ್ಯೋನ್ಯವಾಗಿ ಒಬ್ಬನ ಬೆನ್ನನ್ನು ಇನ್ನೊಬ್ಬನು ಒರೆಸಕೂಡದು. (2) ಇಬ್ಬರು ಅನ್ಯೋನ್ಯವಾಗಿ ಒಬ್ಬನ ಬೆನ್ನಿಗೆ ಇನ್ನೊಬ್ಬನು ಎಣ್ಣೆ ಮುಂತಾದ ವಸ್ತುಗಳನ್ನು ಹಚ್ಚಬಾರದು. (3) ಸ್ನಾನಾನಂತರದಲ್ಲಿ ಹಲ್ಲುಗಳನ್ನು ಉಜ್ಜಬಾರದು. (4) ವಸ್ತ್ರದಿಂದ ಮುಖವನ್ನು ಒರೆಸಬಾರದು. (5) ಮೇಲಿನ ಹಲ್ಲುಗಳಿಂದ ಕೆಳಗಣ ಹಲ್ಲುಗಳನ್ನು ತಿಕ್ಕಬಾರದು. (6) ತೊಡೆ ಭುಜ ಮುಂತಾದ ಯಾವ ಅವಯವಗಳನ್ನೂ ಕೈಗಳಿಂದ ತಟ್ಟಿಕೊಳ್ಳಬಾರದು. (7) ಸ್ನಾನಕಾಲದಲ್ಲಿ ಉಟ್ಟುಕೊಂಡಿದ್ದ ವಸ್ತ್ರವನ್ನೇ ಸ್ನಾನಾನಂತರದಲ್ಲಿಯೂ ಉಟ್ಟುಕೊಂಡಿರಬಾರದು. (8) ಸ್ನಾನಾನಂತರದಲ್ಲಿ ಎಣ್ಣೆಯನ್ನು ಹಚ್ಚಿಕೊಳ್ಳಬಾರದು. (9) ವಸ್ತ್ರವನ್ನು ಝಾಡಿಸಬಾರದು. (10) ಸ್ನಾನಾನಂತರದಲ್ಲಿ ಒದ್ದೆಯಾಗದಿರುವ ವಸ್ತ್ರವನ್ನು ಉಟ್ಟುಕೊಳ್ಳಬೇಕು." ಇದು ಯಮವಚನ.

### ತಲೆಯ ಕೂದಲನ್ನು ಕುತ್ತಿಗೆಯ ಎರಡು ಪಾರ್ಶ್ವಗಳಲ್ಲಿಟ್ಟುಕೊಂಡು ಜಲತರ್ಪಣವನ್ನು ಕೊಡಬೇಕು

ತತಃ ಶಿಖಾಂ ದ್ವಿಧಾ ಕೃತ್ವಾ ನ್ಯಸೇತ್ತಾಂ ಗಲಪಾರ್ಶ್ವಯೋಃ |
ಜಲಪುಂಡ್ರಂ ತತೋ ಧೃತ್ವಾ ಕುರ್ಯಾದ್ವೈ ಜಲತರ್ಪಣಮ್ || (ಬ್ರಹ್ಮಾಂಡಪುರಾಣ ವಚನ)

"ಸ್ನಾನಾನಂತರದಲ್ಲಿ ಮೈ ಒರೆಸಿಕೊಳ್ಳುವುದಕ್ಕಿಂತ ಪೂರ್ವದಲ್ಲಿ ತಲೆಯ ಕೂದಲುಗಳನ್ನು ಎರಡಾಗಿ ವಿಂಗಡಿಸಬೇಕು. ಒಂದು ಭಾಗವನ್ನು ಕುತ್ತಿಗೆಯ ಬಲಭಾಗದಲ್ಲಿಯೂ, ಇನ್ನೊಂದು ಭಾಗವನ್ನು ಎಡಭಾಗದಲ್ಲಿಯೂ, ಹೆಗಲಿನ ಮೇಲೆ ಹಾಕಿಕೊಂಡು ಕೂದಲಿನ ತುದಿಯು ನಮ್ಮ ಮುಂಭಾಗದಲ್ಲಿರುವಂತೆ ಮಾಡಿಕೊಂಡು ಜಲತರ್ಪಣವನ್ನು ಕೊಡಬೇಕು." ಇದು ಬ್ರಹ್ಮಾಂಡಪುರಾಣದ ವಚನ.

### ತಲೆಯ ಕೂದಲಿನ ನೀರು ಬೆನ್ನಿನ ಭಾಗದಲ್ಲಿ ಬೀಳಬಾರದು

ಸುರಾಬಿಂದುಸಮಾಃ ಪ್ರೋಕ್ತಾಃ ಪೃಷ್ಠತಃ ಕೇಶಬಿಂದವಃ |
ತ ಏವ ಪುರತಃ ಪ್ರೋಕ್ತಾ ಸರ್ವತೀರ್ಥೋಪಮಾ ಬುಧೈಃ || (ಸ್ಮೃತಿಸಾರವಚನ)

"ದೇಹದ ಹಿಂಭಾಗದಲ್ಲಿ ತಲೆಯ ಕೂದಲಿನ ನೀರು ಬಿದ್ದರೆ ಅದು ಹೆಂಡದ ಬಿಂದುವಿಗೆ ಸಮವೆನಿಸುತ್ತದೆ. ಅದೇ ಬಿಂದುಗಳು ದೇಹದ ಮುಂಭಾಗದಲ್ಲಿ ಬಿದ್ದರೆ ಸಕಲತೀರ್ಥಗಳಿಗೆ ಸಮವೆಂದು ಜ್ಞಾನಿಗಳು ಹೇಳುತ್ತಾರೆ." ಇದು ಸ್ಮೃತಿಸಾರದ ವಚನ.

## ಸ್ನಾನವನ್ನು ಮಾಡಿದ ಮೇಲೆ ಒದ್ದೆ ಬಟ್ಟೆಯನ್ನು ಉಟ್ಟುಕೊಂಡು ಮಲಮೂತ್ರವನ್ನು ವಿಸರ್ಜನೆ ಮಾಡಿದರೆ

ಸ್ನಾನಂ ಕೃತ್ವಾಽರ್ದ್ರವಾಸಾಸ್ತು ವಿಣ್ಮೂತ್ರಂ ಕುರುತೇ ಯದಿ |
ಪ್ರಾಣಾಯಾಮತ್ರಯಂ ಕೃತ್ವಾ ಪುನಃ ಸ್ನಾನೇನ ಶುದ್ಧ್ಯತಿ || (ಜಾಬಾಲಿವಚನ)

"ಸ್ನಾನ ಮಾಡಿದ ಮೇಲೆ ಒದ್ದೆ ಬಟ್ಟೆಯನ್ನು ಉಟ್ಟುಕೊಂಡು ಮಲ ಮತ್ತು ಮೂತ್ರಗಳನ್ನು ವಿಸರ್ಜನೆ ಮಾಡಿದರೆ ಮೂರು ಸಲ ಪ್ರಾಣಾಯಾಮವನ್ನು ಮಾಡಿ ಇನ್ನೊಮ್ಮೆ ಸ್ನಾನವನ್ನು ಮಾಡಬೇಕು. ಇದರಿಂದ ಶುದ್ಧಿಯು ಏರ್ಪಡುತ್ತದೆ." ಇದು ಜಾಬಾಲಿಯ ವಚನ.

## ಸ್ನಾನಾನಂತರದಲ್ಲಿ ಬತ್ತಲೆಯಾಗಿರಬಾರದು. ಬಟ್ಟೆಯನ್ನೂ ಒಗೆಯಬಾರದು

ಅವಗಾಹ್ಯ ಜಲೇ ನಗ್ನೋ ವಸ್ತ್ರಂ ಯಃ ಪರಿಶೋಧಯೇತ್ |
ಕ್ರುದ್ಧಾಸ್ತತ್ರ ನಿವರ್ತಂತೇ ದೇವತಾಃ ಪಿತೃಭಿಃ ಸಹ || (ಸಪ್ತರ್ಷಿಧರ್ಮವಚನ)

"ಸ್ನಾನಾನಂತರದಲ್ಲಿ ಬೆತ್ತಲೆಯಾಗಿರಬಾರದು. ಬಟ್ಟೆಯನ್ನೂ ಒಗೆಯಬಾರದು. ಹಾಗೆ ಮಾಡುವವನ ಮೇಲೆ ಪಿತೃಗಳಿಗೂ, ದೇವತೆಗಳಿಗೂ ಕೋಪವು ಏರ್ಪಟ್ಟು, ಸರ್ವರೂ ಹಿಂದಿರುಗಿ ಹೋಗುವರು. ಆದ್ದರಿಂದ ದೇವತರ್ಪಣ ಪಿತೃತರ್ಪಣಗಳನ್ನು ಮಾಡಿದರೂ ಅವರು ತೃಪ್ತರಾಗುವುದಿಲ್ಲ."

## ಹಿಂಡಿದ ಬಟ್ಟೆಯನ್ನು ಹೆಗಲಿನ ಮೇಲೆ ಇಟ್ಟುಕೊಳ್ಳಬಾರದು

ನಿಪೀಡಿತಂ ಧೌತವಸ್ತ್ರಂ ಯದಾ ಸ್ಕಂಧೇ ವಿನಿಕ್ಷಿಪೇತ್ |
ತದಾಸುರಂ ಭವೇತ್ಕರ್ಮ ಪುನಃ ಸ್ನಾನಂ ವಿಶೋಧನಮ್ || (ಭೃಗುಋಷಿಯ ವಚನ)

"ಒಗೆದ ಬಟ್ಟೆಯನ್ನು ಹಿಂಡಿದ ಮೇಲೆ ಹೆಗಲಿನ ಮೇಲೆ ಇಟ್ಟುಕೊಳ್ಳಬಾರದು. ಹೀಗೆ ಮಾಡಿದರೆ ಅಸುರರಿಗೆ ತೃಪ್ತಿಯಾಗುತ್ತದೆ. ಮತ್ತು ಮೈಲಿಗೆಯಾಗುತ್ತದೆ. ಪುನಃ ಸ್ನಾನವನ್ನು ಮಾಡಿದರೆ ಶುದ್ಧಿಯಾಗುತ್ತದೆ." ಇದು ಭೃಗುಋಷಿಯ ವಚನ.

## ವಸ್ತ್ರವನ್ನು ಹಿಂಡುವ ಕಾಲ

ಸ್ನಾನಾದನಂತರಂ ತಾವತ್ತರ್ಪಯೇತ್ಪಿತೃದೇವತಾಃ |
ಉತ್ತೀರ್ಯ ಪೀಡಯೇದ್ವಸ್ತ್ರಂ ಸಂಧ್ಯಾಕರ್ಮ ತತಃ ಪರಮ್ || (ಚತುರ್ವಿಂಶತಿಮತವಚನ)

"ಸ್ನಾನವು ಮುಗಿದ ಕೂಡಲೇ ಮೇಲೆ ಹೇಳಿದ ಪಿತೃಗಳು ಮತ್ತು ದೇವತೆಗಳಿಗೆ ತರ್ಪಣವನ್ನು ಕೊಡಬೇಕು. ನೀರಿನಿಂದ ಮೇಲೆ ಬರಬೇಕು. ವಸ್ತ್ರವನ್ನು ಹಿಂಡಬೇಕು. ಇಲ್ಲಿ ಹೇಳಿದ ಕ್ರಮದಿಂದ ಈ ಕಾರ್ಯಗಳನ್ನು ಮಾಡಬೇಕು."

## ಪ್ರಾತಃಸ್ನಾನದಲ್ಲಿ ತರ್ಪಣ ಕೊಡುವುದಕ್ಕಿಂತ ಪೂರ್ವದಲ್ಲಿ ವಸ್ತ್ರವನ್ನು ಹಿಂಡಬಾರದು

ನಿಷ್ಪೀಡಯತಿ ಯೋ ವಸ್ತ್ರಂ ಸ್ನಾನವಸ್ತ್ರಮತರ್ಪಿತಮ್ |
ನಿರಾಶಾಃ ಪಿತರೋ ಯಾಂತಿ ಶಾಪಂ ದತ್ವಾ ಸುದಾರುಣಮ್ || (ಯಾಜ್ಞವಲ್ಕ್ಯರ ವಚನ)

"ಸ್ನಾನ ಮಾಡಿದ ಮೇಲೆ ತರ್ಪಣ ಮಾಡುವುದಕ್ಕಿಂತ ಪೂರ್ವದಲ್ಲಿ, ಸ್ನಾನಕಾಲದಲ್ಲಿ ಧರಿಸಿದ ವಸ್ತ್ರವನ್ನು ಹಿಂಡಬಾರದು. ಹಾಗೆ ಹಿಂಡಿದರೆ ಅವನು ಕೊಡುವ ತರ್ಪಣವು ಪಿತೃಗಳಿಗೆ ತೃಪ್ತಿಕರವಾಗುವುದಿಲ್ಲ. ಆದ್ದರಿಂದ ತರ್ಪಣ ಜಲದ ಆಸೆಯಿಂದ ಬಂದಿರುವ ಅವನ ಪಿತೃಗಳು ಆಶಾಭಂಗವನ್ನು ಪಡೆದು ಹಿಂದಿರುಗುವರು." ಈ ವಾಕ್ಯದಿಂದ ಪ್ರಾತಃಸ್ನಾನಕಾಲದಲ್ಲಿ ಸ್ನಾನಾಂಗತರ್ಪಣವನ್ನು ಮಾಡಿದ ಮೇಲೆಯೇ ದೇವತರ್ಪಣ ಮುಂತಾದ ತರ್ಪಣಗಳನ್ನು ಮಾಡಬೇಕು ಎಂದು ಸಿದ್ಧವಾಗುತ್ತದೆ.

### ಮಧ್ಯಾಹ್ನಸ್ನಾನದಲ್ಲಿ ಬ್ರಹ್ಮಯಜ್ಞತರ್ಪಣಾನಂತರದಲ್ಲಿ ವಸ್ತ್ರವನ್ನು ಹಿಂಡಬೇಕು

ವಸ್ತ್ರನಿಷ್ಪೀಡನಂ ಕಾರ್ಯಂ ಪ್ರಾತಃಸ್ನಾನಾದನಂತರಮ್ ।
ಮಧ್ಯಾಹ್ನೇ ತರ್ಪಣಾದೂರ್ಧ್ವಂ ಪಿತೃತೀರ್ಥೇನ ಪೀಡಯೇತ್ ॥ (ಸಂಗ್ರಹವಚನ)

"ಪ್ರಾತಃಸ್ನಾನಾನಂತರದಲ್ಲಿ ಪ್ರಾತಃಸ್ನಾನಾಂಗತರ್ಪಣವನ್ನು ಮಾಡಿ ಮುಗಿಸಿದ ಮೇಲೆ ವಸ್ತ್ರವನ್ನು ಹಿಂಡಬೇಕು. ಮಧ್ಯಾಹ್ನದಲ್ಲಿ ಬ್ರಹ್ಮಯಜ್ಞಾಂಗತರ್ಪಣಾನಂತರದಲ್ಲಿ ವಸ್ತ್ರವನ್ನು ಹಿಂಡಬೇಕು."

### ನೆಲದಲ್ಲಿಯೇ ವಸ್ತ್ರವನ್ನು ಹಿಂಡಬೇಕು

ವಸ್ತ್ರನಿಷ್ಪೀಡಿತಂ ತೋಯಂ ಶ್ರಾದ್ಧೇ ಚೋಚ್ಛಿಷ್ಟಭೋಜನಮ್ ।
ಭಾಗಧೇಯಂ ಶ್ರುತಿಃ ಪ್ರಾಹ ತಸ್ಮಾನ್ನಿಷ್ಪೀಡಯೇತ್ಸ್ಥಲೇ ॥ (ವ್ಯಾಸರ ವಚನ)

"(1) ವಸ್ತ್ರವನ್ನು ಹಿಂಡಿದ ನೀರು (2) ಶ್ರಾದ್ಧದಲ್ಲಿ ಉಚ್ಛಿಷ್ಟಭೋಜನ ಇವೆರಡೂ ಪಿತೃಗಳಿಗೆ ಆಹಾರವೆನಿಸುತ್ತವೆ. ಆದ್ದರಿಂದ ನೆಲದಲ್ಲಿಯೇ ವಸ್ತ್ರವನ್ನು ಹಿಂಡಬೇಕು. ಉಚ್ಛಿಷ್ಟಪಿಂಡವನ್ನೂ ನೆಲದಲ್ಲಿಯೇ ಇಡಬೇಕು."

### ವಸ್ತ್ರವನ್ನು ಹಿಂಡುವ ವಿಷಯದಲ್ಲಿ ಇತರ ನಿಯಮಗಳು

ನ ಜಲೇ ಪೀಡಯೇದ್ವಸ್ತ್ರಂ ನ ಚೈವ ತ್ರಿಗುಣೀಕೃತಮ್ ।
ಪ್ರಸಾರಯೇನ್ನ ಯಾಮ್ಯಾಗ್ರಂ ಪ್ರಾಗಗ್ರಂ ತು ಪ್ರಸಾರಯೇತ್ ॥ (ವ್ಯಾಸರ ವಚನ)

"(1) ನೀರಿನಲ್ಲಿ ವಸ್ತ್ರವನ್ನು ಹಿಂಡಿದ ನೀರನ್ನು ಬಿಡಬಾರದು. (2) ವಸ್ತ್ರದ ಎರಡು ತುದಿಗಳೂ ಬೇರೆ ಬೇರೆ ದಿಕ್ಕಿಗೆ ಬರುವಂತೆ ಮೂರಾಗಿ ಮಡಿಚಿ ಹಿಂಡಬಾರದು. (3) ವಸ್ತ್ರವನ್ನು ಹಿಂಡುವಾಗ ವಸ್ತ್ರದ ತುದಿಯು ದಕ್ಷಿಣದಿಕ್ಕಿಗೆ ಬರುವಂತೆ ವಸ್ತ್ರವನ್ನು ಹಿಡಿದುಕೊಂಡು ಹಿಂಡಬಾರದು. (4) ಅದೇ ತುದಿಯು ಪೂರ್ವದಿಕ್ಕಿಗೆ ಬರುವಂತೆ ವಸ್ತ್ರವನ್ನು ಹಿಡಿದುಕೊಂಡು ಹಿಂಡಬೇಕು.

### ವಸ್ತ್ರವನ್ನು ಹಿಂಡುವ ಮಂತ್ರ

ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ ।
ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಮ್ ॥ (ಕಾರ್ಷ್ಣಾಜಿನಿ ವಚನ)

"ನಮ್ಮ ಕುಲದಲ್ಲಿಯೂ, ಗೋತ್ರದಲ್ಲಿಯೂ, ಹುಟ್ಟಿರುವ ಎಷ್ಟೋ ಜನರಿಗೆ ಮಕ್ಕಳಿಲ್ಲ. ಆದ್ದರಿಂದ ಅವರ ತೃಪ್ತಿಗಾಗಿ ತರ್ಪಣವನ್ನು ಕೊಡುವವನು ಯಾರೂ ಇಲ್ಲ. ಅವರ ತೃಪ್ತಿಗಾಗಿ ವಸ್ತ್ರವನ್ನು ಹಿಂಡಿದ ಈ ನೀರನ್ನು ಕೊಡುತ್ತಿರುವೆನು. ಅವರೆಲ್ಲರೂ ಅದನ್ನು ಸ್ವೀಕರಿಸಲಿ."

### ವಸ್ತ್ರವನ್ನು ಹಿಂಡಿದ ಮೇಲೆ ಆಚಮನವನ್ನು ಮಾಡಬೇಕು

ಸ್ನಾನವಸ್ತ್ರಂ ತತಃ ಪೀಡ್ಯ ಪುನರಾಚಮನಂ ಚರೇತ್ । (ಕಾರ್ಷ್ಣಾಜಿನಿ ವಚನ)

"ಸ್ನಾನವಸ್ತ್ರವನ್ನು ಹಿಂಡಿದ ಮೇಲೆ ಎರಡು ಸಲ ಆಚಮನವನ್ನು ಮಾಡಬೇಕು."

### ಸ್ನಾನವಸ್ತ್ರವನ್ನು ಅಪಸವ್ಯವಾಗಿ ಹಿಂಡಬೇಕು

ಉತ್ತೀರ್ಯ ಪೀಡಯೇದ್ವಸ್ತ್ರಮಪಸವ್ಯಂ ತಥಾ ವಿಧಿಃ ॥ (ಉಶನರ ವಚನ)

"ಸ್ನಾನಾನಂತರದಲ್ಲಿ ನೀರಿನಿಂದ ಮೇಲೆ ಬರಬೇಕು. ಅಪಸವ್ಯವಾಗಿ ಅಂದರೆ ಎಡದಿಂದ ಬಲಕ್ಕೆ ವಸ್ತ್ರವನ್ನು ಹಿಂಡಬೇಕು. ನೀರಿನಿಂದ ಮೇಲೆ ಬಂದ ಕೂಡಲೇ ವಸ್ತ್ರವನ್ನು ಹಿಂಡಬಾರದು. ಸ್ವಲ್ಪ ಹೊತ್ತಾದ ಮೇಲೆ ಹಿಂಡಬೇಕು." ಇದು ಚಂದ್ರಿಕಾ ಎಂಬ ಗ್ರಂಥದಲ್ಲಿ ಹೇಳಿರುವುದು. "ಸ್ನಾನವಸ್ತ್ರವನ್ನು ಬಿಟ್ಟು ಬೇರೆ ವಸ್ತ್ರಗಳಿದ್ದರೆ ಅವುಗಳನ್ನು ಮೊದಲು ಹಿಂಡಬೇಕು.

ಆಚಮನವನ್ನು ಮಾಡಬೇಕು. ಬೇರೆ ವಸ್ತ್ರವನ್ನು ಉಟ್ಟುಕೊಳ್ಳಬೇಕು. ಉತ್ತರೀಯ ಅಂದರೆ ಹೊದ್ದುಕೊಳ್ಳುವ ವಸ್ತ್ರವನ್ನು ಹೊದ್ದುಕೊಳ್ಳಬೇಕು. ಅನಂತರದಲ್ಲಿ ಸ್ನಾನವಸ್ತ್ರವನ್ನು ಹಿಂಡಬೇಕು. ಇದು ಮುಗಿದ ಮೇಲೆ ಆಚಮನವನ್ನು ಮಾಡಿ ಸಂಧ್ಯಾವಂದನವನ್ನು ಮಾಡಬೇಕು." ಇದು ಸ್ಮೃತ್ಯರ್ಥಸಾರದಲ್ಲಿ ಹೇಳಿರುವುದು.

**ವಸ್ತ್ರವನ್ನು ಹಿಂಡುವಾಗ ಯಜ್ಞೋಪವೀತವನ್ನು ಅಪಸವ್ಯ ಮಾಡಿಕೊಳ್ಳಬೇಕು**

ಮುನಿರ್ವೃದ್ಧಮನುಃ ಪ್ರಾಹ ವಿಶೇಷಂ ವಸ್ತ್ರಪೀಡನೇ |
ಮನುಷ್ಯತರ್ಪಣೇ ಚೈವ ಸ್ನಾನವಸ್ತ್ರನಿಪೀಡನೇ |
ನಿವೀತೀ ತು ಭವೇದ್ವಿಪ್ರಸ್ತಥಾ ಮೂತ್ರಪುರೀಷಯೋಃ || (ವೃದ್ಧಮನುಮತ)

"(1) ಸಾಮಾನ್ಯವಾಗಿ ಸ್ನಾನವಸ್ತ್ರಾತಿರಿಕ್ತವಾದ ವಸ್ತ್ರವನ್ನು ಹಿಂಡುವುದು. (2) ಮನುಷ್ಯರಾದ ಪಿತೃಗಳಿಗೆ ತರ್ಪಣವನ್ನು ಕೊಡುವುದು. (3) ಸ್ನಾನವಸ್ತ್ರವನ್ನು ಹಿಂಡುವುದು. (4) ಮಲಮೂತ್ರಗಳ ವಿಸರ್ಜನವನ್ನು ಮಾಡುವುದು. ಈ ನಾಲ್ಕು ಕಾರ್ಯಗಳನ್ನು ಮಾಡುವಾಗ ಯಜ್ಞೋಪವೀತವನ್ನು ಮಾಲಾಕಾರವಾಗಿ ಹಾಕಿಕೊಳ್ಳಬೇಕು. ಇದು ವೃದ್ಧಮನು ಎಂಬ ಮುನಿಯು ಹೇಳಿದ್ದು."

**ಹಿಂಡಿದ ವಸ್ತ್ರವನ್ನು ಎಡಗೈಯ ಮಣಿಗಂಟಿನಲ್ಲಿಡಬಾರದು**

ವಸ್ತ್ರಂ ಚತುರ್ಗುಣೀಕೃತ್ಯ ಪೀಡಯೇತ್ತು ಜಲಾದ್ಬಹಿಃ |
ವಾಮಪ್ರಕೋಷ್ಠೇ ನಿಕ್ಷಿಪ್ಯ ದ್ವಿರಾಚಮ್ಯ ವಿಶುಧ್ಯತಿ ||

"(1) ವಸ್ತ್ರವನ್ನು ನಾಲ್ಕಾಗಿ ಮಡಿಸಿ ನೀರಿಲ್ಲದಿರುವ ಹೊರಗಿನ ಪ್ರದೇಶದಲ್ಲಿ ಹಿಂಡಬೇಕು. (2) ಹಿಂಡಿದ ವಸ್ತ್ರವನ್ನು ಎಡಗೈಯ ಮಣಿಗಂಟಿನ ಕೆಳಭಾಗದಲ್ಲಿ ಇಡಬಾರದು. (3) ಹಾಗೆ ಇಟ್ಟರೆ ಎರಡು ಸಲ ಆಚಮನವನ್ನು ಮಾಡಬೇಕು. ಇದರಿಂದ ಶುದ್ಧಿಯು ಏರ್ಪಡುತ್ತದೆ."

**ವಸ್ತ್ರವನ್ನು ಹಿಂಡಿಯೇ ಪ್ರಾತಃಸಂಧ್ಯಾವಂದನವನ್ನು ಮಾಡಬೇಕು**

ಪ್ರಾತಃಸಂಧ್ಯಾಮುಪಾಸೀತ ವಸ್ತ್ರಶೋಧನಪೂರ್ವಕಮ್ |
ಉಪಾಸ್ಯ ಮಧ್ಯಮಾಂ ಸಂಧ್ಯಾಂ ವಸ್ತ್ರನಿಷ್ಪೀಡನಂ ಚರೇತ್ ||
ಅನಿಷ್ಪೀಡ್ಯ ಸ್ನಾನವಸ್ತ್ರಂ ಸಂಧ್ಯಾಕರ್ಮ ನ ಚಾಚರೇತ್ |
ಅನ್ಯಥಾ ಕುರುತೇ ಮೋಹಾತ್ಸ್ಯತಮಪ್ಯಕೃತಂ ಭವೇತ್ ||

"(1) ವಸ್ತ್ರವನ್ನು ಒಗೆದು ಹಿಂಡಿದ ಮೇಲೆಯೇ ಪ್ರಾತಃಸಂಧ್ಯಾವಂದನವನ್ನು ಮಾಡಬೇಕು. (2) ಮಾಧ್ಯಾಹ್ನಿಕ ಸಂಧ್ಯಾವಂದನವನ್ನು ಮಾಡಿ ವಸ್ತ್ರವನ್ನು ಹಿಂಡಬೇಕು. (3) ವಸ್ತ್ರವನ್ನು ಹಿಂಡದೆ ಪ್ರಾತಸಂಧ್ಯಾವಂದನವನ್ನು ಮಾಡಬಾರದು. ಹಾಗೆ ಮಾಡಿದರೆ ಮಾಡಿದ ಎಲ್ಲಾ ಕಾರ್ಯಗಳೂ ನಿಷ್ಫಲವಾಗುವುವು."

* * *

(ಮೂಲ) ವಸಿತ್ವಾ ವಾಸ ಆಚಮ್ಯ ಪ್ರೋಕ್ಷ್ಯಾಽಚಮ್ಯ ಚ ಮಂತ್ರತಃ |
ಗಾಯತ್ರ್ಯಾ ಚಾಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಮ್ || 6 ||
ಮಂತ್ರತಃ ಪರಿವೃತ್ಯಾಽಥ ಸಮಾಚಮ್ಯ ಸುರಾದಿಕಾನ್ |
ತರ್ಪಯಿತ್ವಾ ನಿಪೀಡ್ಯಾಥ ವಾಸೋ ವಿಸೃತ್ಯ ಚಾಂಜಸಾ || 7 ||
ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವೈವ ತ್ರಿಪದೀಂ ಜಪೇತ್ |
ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಮ್ || 8 ||

ಪದಚ್ಛೇದ - ವಸಿತ್ವಾ ವಾಸಃ ಆಚಮ್ಯ ಪ್ರೋಕ್ಷ್ಯ ಆಚಮ್ಯ ಚ ಮಂತ್ರತಃ ಗಾಯತ್ರ್ಯಾ ಚ ಅಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಂ ಮಂತ್ರತಃ ಪರಿವೃತ್ತ್ಯ ಅಥ ಸಮಾಚಮ್ಯ ಸುರಾದಿಕಾನ್ ತರ್ಪಯಿತ್ವಾ ನಿಪೀಡ್ಯ ಅಥ ವಾಸಃ ವಿಸೃತ್ಯ ಚ ಅಂಜಸಾ ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವಾ ಏವ ತ್ರಿಪದೀಂ ಜಪೇತ್ ಸಹಸ್ರಪರಮಾಂ. ದೇವೀಂ ಶತಮಧ್ಯಾಂ ದಶಾವರಾಂ.

ಅನ್ವಯ - ವಾಸಃ ವಸಿತ್ವಾ, ಆಚಮ್ಯ, (ವಾಸಃ) ಪ್ರೋಕ್ಷ್ಯ, ಆಚಮ್ಯ, ಮಂತ್ರತಃ ಪ್ರೋಕ್ಷ್ಯ, (ಮಂತ್ರತಃ ಆಚಮ್ಯ) (ಮಂತ್ರತಃ ಪ್ರೋಕ್ಷ್ಯ) (ಮಂತ್ರತಃ ಆಚಮ್ಯ) ಸೂರ್ಯಗತಂ ಹರಿಂ ಧ್ಯಾತ್ವಾ ಗಾಯತ್ರ್ಯಾ ಅಂಜಲಿಂ ದತ್ವಾ (ಗಾಯತ್ರ್ಯಾ ಅಂಜಲಿಂ ಚ ದತ್ವಾ) ಮಂತ್ರತಃ (ಧ್ಯಾತ್ವಾ), (ಮಂತ್ರತಃ) ಪರಿವೃತ್ತ್ಯ, ಅಥ ಸಮಾಚಮ್ಯ, ಸುರಾದಿಕಾನ್ ತರ್ಪಯಿತ್ವಾ, ಸಮಾಚಮ್ಯ, ವಾಸಃ ನಿಪೀಡ್ಯ, ವಿಸೃತ್ಯ, ವಿಷ್ಣುಂ ಧ್ಯಾತ್ವಾ ಏವ ಸಹಸ್ರಪರಮಾಂ ಶತಮಧ್ಯಾಂ ದಶಾವರಾಂ ತ್ರಿಪದೀಂ ಜಪೇತ್.

ಅರ್ಥ - "ವಾಸಃ" ವಸ್ತ್ರವನ್ನು "ವಸಿತ್ವಾ" ಶಾಸ್ತ್ರೋಕ್ತರೀತಿಯಿಂದ ಧರಿಸಿ "ಆಚಮ್ಯ" ಆಚಮನ ಮಾಡಿ "(ವಾಸಃ)" ಮೊದಲು ಉಟ್ಟುಕೊಂಡಿದ್ದ ವಸ್ತ್ರವನ್ನು ಪಕ್ಕದಲ್ಲಿಟ್ಟುಕೊಂಡು "ಪ್ರೋಕ್ಷ್ಯ" ಪ್ರೋಕ್ಷಣೆ ಮಾಡಿ "ಆಚಮ್ಯ" ಊರ್ಧ್ವಪುಂಡ್ರ ಮುಂತಾದವುಗಳನ್ನು ಧರಿಸಿ ಪುನಃ ಆಚಮನ ಮಾಡಿ "ಮಂತ್ರತಃ" ಆಪೋ ಹಿ ಷ್ಠಾ ಎಂಬ ಮಂತ್ರದಿಂದ "ಪ್ರೋಕ್ಷ್ಯ" ಮಾರ್ಜನವನ್ನು ಮಾಡಿ (ಮಂತ್ರತಃ ಆಚಮ್ಯ) ಸೂರ್ಯಶ್ಚ ಎಂಬ ಮಂತ್ರದಿಂದ ಆಚಮನ ಮಾಡಿ (ಮಂತ್ರತಃ ಪ್ರೋಕ್ಷ್ಯ) ತಮ್ಮ ತಮ್ಮ ಶಾಖೆಯಲ್ಲಿ ಹೇಳಿದಂತೆ ಪುನಃ ಮಾರ್ಜನವನ್ನು ಮಾಡಿ (ಮಂತ್ರತಃ ಪ್ರೋಕ್ಷ್ಯ) ಪಾಪವಿಸರ್ಜನಮಂತ್ರದಿಂದ ಪಾಪಪುರುಷರನ್ನು ದೇಹದಿಂದ ಹೊರಡಿಸಿ (ಮಂತ್ರತಃ ಆಚಮ್ಯ) ಗಾಯತ್ರೀಮಂತ್ರ, ಆಪೋ ಹಿ ಷ್ಠಾ ಎಂಬ ಮಂತ್ರ ಮತ್ತು ಓಂ ಭೂಃ ಇತ್ಯಾದಿ ಮಂತ್ರಗಳಿಂದ ತನ್ನ ದೇಹವನ್ನು ಅಭಿಮಂತ್ರಿಸಿ ಆಚಮನವನ್ನು ಮಾಡಿ "ಸೂರ್ಯಗತಂ ಹರಿಂ ಧ್ಯಾತ್ವಾ" ಸೂರ್ಯಾಂತರ್ಯಾಮಿಯಾಗಿರುವ ಶ್ರೀಹರಿಯನ್ನು ಧ್ಯಾನ ಮಾಡಿ "ಗಾಯತ್ರ್ಯಾ ಅಂಜಲಿಂ ದತ್ವಾ" ಗಾಯತ್ರೀ ಮಂತ್ರದಿಂದ ವೇದದಲ್ಲಿ ಹೇಳಿದಂತೆ ಒಮ್ಮೆ ಅರ್ಘ್ಯವನ್ನು ಕೊಟ್ಟು (ಗಾಯತ್ರ್ಯಾ ಅಂಜಲಿಂ ಚ ದತ್ವಾ) ಅದೇ ಗಾಯತ್ರೀಮಂತ್ರದಿಂದ ಸ್ಮೃತಿಗಳಲ್ಲಿ ಹೇಳಿದಂತೆ ಇನ್ನು ಎರಡು ಅರ್ಘ್ಯಗಳನ್ನೂ ಕೊಟ್ಟು "ಮಂತ್ರತಃ ಧ್ಯಾತ್ವಾ" ಗಾಯತ್ರೀಮಂತ್ರದಿಂದ ಶ್ರೀಹರಿಯನ್ನು ಧ್ಯಾನ ಮಾಡಿ "(ಮಂತ್ರತಃ) ಪರಿವೃತ್ತ್ಯ" ನಿಂತಲ್ಲಿಯೇ ಉದ್ಯಂತಮಸ್ತಂ ಯಂತಂ ಎಂಬ ಮಂತ್ರದಿಂದ ಪ್ರದಕ್ಷಿಣವನ್ನು ಮಾಡಿ "ಅಥ ಸಮಾಚಮ್ಯ" ಆ ಮೇಲೆ ಆಚಮನ ಮಾಡಿ "ಸುರಾದಿಕಾನ್ ತರ್ಪಯಿತ್ವಾ" ಕೇಶವಾದಿಮಂತ್ರಗಳಿಂದ ಶುಕ್ಲಪಕ್ಷದಲ್ಲಿಯೂ, ಸಂಕರ್ಷಣಾದಿಮಂತ್ರಗಳಿಂದ ಕೃಷ್ಣಪಕ್ಷದಲ್ಲಿಯೂ, ದೇವತೆಗಳೇ ಮೊದಲಾದವರ ಪ್ರೀತಿಗಾಗಿ ಬ್ರಹ್ಮಯಜ್ಞವನ್ನೂ, ತರ್ಪಣವನ್ನು ಮಾಡಿ "ಸಮಾಚಮ್ಯ ವಾಸಃ ನಿಪೀಡ್ಯ" ಸಮೀಪದಲ್ಲಿಟ್ಟಿರುವ ಹಿಂದೆ ಉಟ್ಟುಕೊಂಡಿದ್ದ ಬಟ್ಟೆಯನ್ನು ಹಿಂಡಿ "ವಿಸೃತ್ಯ" ನೀರಿನಲ್ಲಿ ಮುಳುಗಿಸಿ ಬಿಸಿಲಿನಲ್ಲಿ ಪೂರ್ವಾಭಿಮುಖವಾಗಿ ಹರಡಿ "ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವಾ ಏವ" ಸೂರ್ಯಮಂಡಲದಲ್ಲಿರುವ ಶ್ರೀಹರಿಯನ್ನು ಧ್ಯಾನಿಸುತ್ತಲೇ "ಸಹಸ್ರಪರಮಾಂ" ಉತ್ತಮಪಕ್ಷದಲ್ಲಿ ಒಂದು ಸಾವಿರ ಸಂಖ್ಯೆಯುಳ್ಳ, "ಶತಮಧ್ಯಾಂ" ಮಧ್ಯಮಕಲ್ಪದಲ್ಲಿ ನೂರುಸಂಖ್ಯೆಯುಳ್ಳ, "ದಶಾವರಾಂ" ಕನಿಷ್ಠಪಕ್ಷದಲ್ಲಿ ಹತ್ತು ಸಂಖ್ಯೆಯುಳ್ಳ "ತ್ರಿಪದೀಂ" ಗಾಯತ್ರಿಯನ್ನು "ಜಪೇತ್" ಜಪಿಸಬೇಕು.

ತಾತ್ಪರ್ಯ - (1) ಸ್ನಾನಾನಂತರದಲ್ಲಿ ಶುದ್ಧವಾದ ವಸ್ತ್ರವನ್ನು ಶಾಸ್ತ್ರೋಕ್ತರೀತಿಯಿಂದ ಉಟ್ಟುಕೊಳ್ಳಬೇಕು. (2) ಆಚಮನ ಮಾಡಬೇಕು. (3) ಮೊದಲು ಉಟ್ಟುಕೊಂಡಿದ್ದ ವಸ್ತ್ರವನ್ನು ಹಿಂಡಿ ಪಕ್ಕದಲ್ಲಿಟ್ಟುಕೊಂಡು ಪ್ರೋಕ್ಷಿಸಬೇಕು. (4) ಊರ್ಧ್ವ ಪುಂಡ್ರವನ್ನು ಧರಿಸಬೇಕು. (5) ಪುನಃ ಆಚಮನ ಮಾಡಬೇಕು. (6) ಪ್ರಾಣಾಯಾಮವನ್ನು ಮಾಡಬೇಕು. (7) ಸಂಧ್ಯಾವಂದನಾಂಗವಾದ ಸಂಕಲ್ಪವನ್ನು ಮಾಡಬೇಕು. (8) "ಆಪೋ ಹಿ ಷ್ಠಾ" ಎಂಬ ಮಂತ್ರದಿಂದ ತನ್ನನ್ನು ಪ್ರೋಕ್ಷಣೆ ಮಾಡಿಕೊಳ್ಳಬೇಕು. ಇದೇ ಮಾರ್ಜನವೆನಿಸುತ್ತದೆ. (9, 10) "ಸೂರ್ಯಶ್ಚ ಮಾ ಮನ್ಯುಶ್ಚ" ಎಂಬ ಮಂತ್ರದಿಂದ ಹಗಲಿನಲ್ಲಿಯೂ "ಅಗ್ನಿಶ್ಚ ಮಾ

ಮನ್ಯುಶ್ಚ" ಎಂಬ ಮಂತ್ರದಿಂದ ಸಂಜೆಯೂ ನೀರನ್ನು ಜಪಿಸಿ ಕುಡಿಯಬೇಕು. (11) ಪುನಃ ಆಚಮನವನ್ನು ಮಾಡಬೇಕು. (12) ಪುನಃ ತಮ್ಮ ತಮ್ಮ ಶಾಖೆಯಲ್ಲಿ ಹೇಳಿದ ಮಂತ್ರಗಳಿಂದ ಮಾರ್ಜನ ಮಾಡೇಕು. (13) ಪಾಪಪುರುಷವಿಸರ್ಜನ ಮಂತ್ರದಿಂದ ಪಾಪಪುರುಷನನ್ನು ದೇಹದಿಂದ ಹೊರಪಡಿಸಿ ದೇಹವು ಶುದ್ಧವಾಗುವಂತೆ ಮಾಡಬೇಕು. (14) ಪುನಃ ಆಚಮನ ಮಾಡಬೇಕು. (15) "ಗಾಯತ್ರೀ", "ಆಪೋ ಹಿ ಷ್ಠಾ", "ಓಂ ಭೂಃ", ಇತ್ಯಾದಿ ಮಂತ್ರಗಳಿಂದ ಹನ್ನೆರಡು ಸಲ ಅಭಿಮಂತ್ರಿಸಲ್ಪಟ್ಟ ಜಲದಿಂದ ಪುನಃ ಆಚಮನ ಮಾಡಬೇಕು. (16) ಸೂರ್ಯಾಂತರ್ಗತನಾದ ನಾರಾಯಣನನ್ನು ಧ್ಯಾನಿಸುತ್ತಾ, ಅವನನ್ನು ಉದ್ದೇಶಿಸಿ ಗಾಯತ್ರೀಮಂತ್ರದಿಂದ ವೇದೋಕ್ತವಾದ ಅರ್ಘ್ಯವನ್ನು ಒಮ್ಮೆ ಕೊಡಬೇಕು. (17) ಅದೇ ಗಾಯತ್ರೀ ಮಂತ್ರದಿಂದ ಸ್ಮೃತ್ಯುಕ್ತವಾದ ಎರಡು ಅರ್ಘ್ಯಗಳನ್ನು ಹಿಂದಿನಂತೆ ಕೊಡಬೇಕು. (18) ಗಾಯತ್ರೀ ಮಂತ್ರದ ಅರ್ಥವಾಗಿರುವ ಶ್ರೀಹರಿಯನ್ನು ಸ್ಮರಿಸುತ್ತಾ "ಉದ್ಯಂತಮಸ್ತಂ ಯಂತಂ" ಎಂಬ ಮಂತ್ರದಿಂದ ನಿಂತಲ್ಲೇ ಪ್ರದಕ್ಷಿಣ ಮಾಡಬೇಕು. (19) ಶುಕ್ಲಪಕ್ಷದಲ್ಲಿ ಕೇಶವಾದಿದ್ವಾದಶಮೂರ್ತಿಗಳಿಗೂ, ಕೃಷ್ಣಪಕ್ಷದಲ್ಲಿ ಸಂಕರ್ಷಣಾದಿ ದ್ವಾದಶಮೂರ್ತಿಗಳಿಗೂ ಅರ್ಘ್ಯವನ್ನು ಕೊಡಬೇಕು. (20) ಪುನಃ ನಾರಾಯಣಾಷ್ಟಾಕ್ಷರ ಮುಂತಾದ ಮಂತ್ರಗಳಿಂದ ತರ್ಪಣಗಳನ್ನು ಕೊಡಬೇಕು. (21) ಎರಡು ಸಲ ಆಚಮನ ಮಾಡಬೇಕು. (22) ಬ್ರಹ್ಮಯಜ್ಞ ಮತ್ತು ಬ್ರಹ್ಮಯಜ್ಞಾಂಗತರ್ಪಣವನ್ನು ಮಾಡುವುದಾಗಿ ಸಂಕಲ್ಪವನ್ನು ಮಾಡಬೇಕು. (23) "ವಿದ್ಯುದಸಿ" ಎಂಬ ಮಂತ್ರದಿಂದ ನೀರನ್ನು ಮುಟ್ಟಬೇಕು. (24) ಆಚಮನವನ್ನು ಮಾಡಬೇಕು. (25) ಕೈಗಳನ್ನು ತೊಳೆಯಬೇಕು. (26) ಪುನಃ ಮೂರು ಸಲ ಆಚಮನವನ್ನು ಮಾಡಬೇಕು. (27) ಎರಡು ಸಲ ಕೈಗಳನ್ನು ತೊಳೆದುಕೊಳ್ಳಬೇಕು. (28) ಒಮ್ಮೆ ನೀರನ್ನು ಮುಟ್ಟಬೇಕು. (29) ತಲೆಯನ್ನೂ, ಎರಡು ಕಣ್ಣುಗಳನ್ನೂ, ಎರಡು ಮೂಗಿನ ರಂಧ್ರಗಳನ್ನೂ, ಎರಡು ಕಿವಿಗಳನ್ನೂ, ಎದೆಯನ್ನೂ ಕ್ರಮವಾಗಿ ಪ್ರೋಕ್ಷಿಸಬೇಕು. (30) ವ್ಯಾಹೃತಿ ಮಂತ್ರವನ್ನು ಉಚ್ಚರಿಸುತ್ತಾ ತಮ್ಮ ತಮ್ಮ ಶಾಖೆಯಲ್ಲಿ ಹೇಳಿದಂತೆ ಗಾಯತ್ರೀಮಂತ್ರವನ್ನು ಒಂದೊಂದು ಪಾದವಾಗಿಯೂ ಎರಡೆರಡು ಪಾದಗಳಾಗಿಯೂ ಪೂರ್ಣವಾಗಿಯೂ ಒಮ್ಮೊಮ್ಮೆ ಜಪಿಸಬೇಕು. (31) ಶಕ್ತ್ಯನುಸಾರವಾಗಿ ನಾಲ್ಕು ವೇದಗಳು ಮುಂತಾದ ವಿಶಿಷ್ಟಮಂತ್ರಗಳ ಅನುವಾಕಗಳನ್ನೂ, ಆರು ವೇದಾಂಗಗಳನ್ನೂ, ಕಲ್ಪಸೂತ್ರ ಮುಂತಾದ ವಿಶಿಷ್ಟಮಂತ್ರಗಳನ್ನೂ ಜಪಿಸಬೇಕು. (32) "ಋಚೋ ಅಕ್ಷರೇ" "ನಮೋ ಬ್ರಹ್ಮಣೇ" ಎಂಬ ಮಂತ್ರಗಳನ್ನು ಮೂರು ಸಲ ಜಪಿಸಬೇಕು. (33) ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ ತರ್ಪಣವನ್ನು ಕೊಡಬೇಕು. (34) "ಯೇ ಕೇ ಚಾಸ್ಮತ್ಕುಲೇ ಜಾತಾಃ" ಎಂಬ ಮಂತ್ರದಿಂದ ಹಿಂದೆ ಉಟ್ಟುಕೊಂಡಿದ್ದ ಮತ್ತು ಸಮೀಪದಲ್ಲಿ ಇಟ್ಟುಕೊಂಡಿದ್ದ ವಸ್ತ್ರವನ್ನು ನೆಲದ ಮೇಲೆ ಹಿಂಡಬೇಕು. (35) ಅದೇ ವಸ್ತ್ರವನ್ನು ನೀರಿನಲ್ಲಿ ಮುಳುಗಿಸಿ ಪುನಃ ಹಿಂಡಬೇಕು. (36) ಬಿಡಿಸಿ ಬಿಸಿಲಿನಲ್ಲಿ ಪೂರ್ವಾಭಿಮುಖವಾಗಿ ಒಣಗಿಸಬೇಕು. (37) "ಧ್ಯೇಯಃ ಸದಾ" ಎಂಬ ಗಾಯತ್ರೀಧ್ಯಾನಶ್ಲೋಕದಲ್ಲಿ ಹೇಳಿದಂತೆ ನಾರಾಯಣನನ್ನು ಸ್ಮರಿಸುತ್ತಾ ಗಾಯತ್ರೀಮಂತ್ರವನ್ನು ಸಾವಿರ ಸಲ ಜಪಿಸಬೇಕು. ಇದು ಉತ್ತಮ ಪಕ್ಷ. (38) ನೂರು ಸಲ ಜಪಿಸಬೇಕು. ಇದು ಮಧ್ಯಮ ಪಕ್ಷ. (39) ಹತ್ತು ಸಲ ಜಪಿಸಬೇಕು. ಇದು ಅಧಮಪಕ್ಷ. (40) ಹತ್ತಕ್ಕಿಂತ ಕಡಿಮೆ ಜಪಿಸಬಾರದು. ಈ ಗಾಯತ್ರೀ ಮಂತ್ರವನ್ನು ಜಪಿಸುವಾಗ ಮೆಲ್ಲನೆ ತನಗೆ ಮಾತ್ರ ಕೇಳುವಂತೆ ಜಪಿಸಬೇಕು. ಮೇಲೆ ಹೇಳಿದ ಕ್ರಮದಿಂದ ಎಲ್ಲಾ ಕಾರ್ಯಗಳನ್ನೂ ಕ್ರಮವಾಗಿ ಮಾಡಬೇಕು. ಕ್ರಮದಿಂದ ಹೇಳಿದ ಈ ಎಲ್ಲಾ ವಿಷಯಗಳನ್ನೂ ಸ್ಮೃತಿಮುಕ್ತಾವಲೀಗ್ರಂಥದಲ್ಲಿ ಉದಾಹರಿಸಿರುವ ಪ್ರಮಾಣಗಳ ಆಧಾರದಿಂದ ಕ್ರಮವಾಗಿ ಸ್ಪಷ್ಟಪಡಿಸುತ್ತೇನೆ.

### ವಸ್ತ್ರವನ್ನು ಹಿಂಡುವ ಕ್ರಮ

ಪಶ್ಚಾದ್ವಸ್ತ್ರಂ ಪರೀಧಾಯ ಪೀಡಯಿತ್ವಾಽಽರ್ದ್ರವಸ್ತ್ರಕಮ್ ।
ವಾಮಪ್ರಕೋಷ್ಠೇ ನಿಕ್ಷಿಪ್ಯ ಸಮ್ಯಗಾಚಮ್ಯ ವಾರಿಣಾ ॥
ಭೂಮೌ ನಿಕ್ಷಿಪ್ಯ ತದ್ವಸ್ತ್ರಂ ಮಂತ್ರರತ್ನೇನ ಪ್ರೋಕ್ಷಯೇತ್ ॥ (ವಾಯುಪುರಾಣ)

"ಶುದ್ಧವಾದ ಒಣಗಿದ ವಸ್ತ್ರವನ್ನು ಉಟ್ಟುಕೊಳ್ಳಬೇಕು. ಒದ್ದೆ ಬಟ್ಟೆಯನ್ನು ಹಿಂಡಬೇಕು. ಹಿಂಡಿದ ಬಟ್ಟೆಯನ್ನು ಎಡಗೈಯ ಮಣಿಗಂಟಿನ ಕೆಳಭಾಗದಲ್ಲಿ ಇಟ್ಟುಕೊಳ್ಳಬಾರದು. ಹಾಗೆ ಮಾಡಿದರೆ ಚೆನ್ನಾಗಿ ಎರಡು ಸಲ ಆಚಮನವನ್ನು ಮಾಡಬೇಕು. ಆ ವಸ್ತ್ರವನ್ನು ನೆಲದಲ್ಲಿ ತನ್ನ ಸಮೀಪದಲ್ಲಿ ಇಡಬೇಕು. ಓಂಕಾರವನ್ನು ಉಚ್ಚರಿಸುತ್ತಾ ಪ್ರೋಕ್ಷಣವನ್ನು ಮಾಡಬೇಕು."

## ಸ್ನಾನವಸ್ತ್ರವನ್ನು ಹಿಂಡುವ ಸಮಯ

ತತೋ ವಸ್ತ್ರಾಂತರಂ ನಿಷ್ಪೀಡ್ಯಾಚಮ್ಯ ತತೋ ವಸ್ತ್ರಾಂತರಂ ಪರಿಧಾಯೋತ್ತರೀಯಂ ಧೃತ್ವಾ ಸ್ನಾನವಸ್ತ್ರಂ ನಿಷ್ಪೀಡ್ಯಾಚಮ್ಯ ಸಂಧ್ಯಾಮುಪಾಸೀತ (ಸ್ಮೃತ್ಯರ್ಥಸಾರ)

"ಸ್ನಾನವನ್ನು ಮುಗಿಸಿದ ಮೇಲೆ (1) ಸ್ನಾನವಸ್ತ್ರವನ್ನು ಬಿಟ್ಟು ಉಳಿದ ವಸ್ತ್ರಗಳನ್ನು ಹಿಂಡಬೇಕು. (2) ಆಚಮನವನ್ನು ಮಾಡಬೇಕು. (3) ಬೇರೆ ವಸ್ತ್ರವನ್ನು ಉಟ್ಟುಕೊಳ್ಳಬೇಕು. (4) ಉತ್ತರೀಯ (ಹೊದ್ದುಕೊಳ್ಳುವ ಬಟ್ಟೆ)ವನ್ನು ಹೊದ್ದುಕೊಳ್ಳಬೇಕು. (5) ಸ್ನಾನವಸ್ತ್ರವನ್ನು ಹಿಂಡಬೇಕು. (6) ಆಚಮನವನ್ನು ಮಾಡಬೇಕು. (7) ಪ್ರಾತಃಸಂಧ್ಯಾವಂದನವನ್ನು ಮಾಡಬೇಕು. ಈ ಕ್ರಮವನ್ನು ಅನುಸರಿಬೇಕು."

## ಅಂಚು ಇಲ್ಲದಿರುವ ವಸ್ತ್ರವನ್ನು ಹಿಂಡಬಾರದು

ವೃಥಾ ಸ್ನಾನಂ ಭವೇತ್ತಸ್ಯ ಯಚ್ಚ ಪಾಂಡಶಮಂಬುನಿ | (ವೃದ್ಧಮನುವಿನ ವಚನ)

"(1) ಅಂಚು ಇಲ್ಲದಿರುವ ವಸ್ತ್ರವನ್ನು ಹಿಂಡುವುದು. (2) ನೀರಿನಲ್ಲಿ ವಸ್ತ್ರವನ್ನು ಹಿಂಡುವುದು ಇವೆರಡರಿಂದ ಅವನು ಮಾಡಿದ ಸ್ನಾನವು ನಿಷ್ಫಲವಾಗುವುದು."

## ತರ್ಪಣಕ್ಕಿಂತ ಪೂರ್ವದಲ್ಲಿ ಮಂತ್ರವಿಲ್ಲದೆ ವಸ್ತ್ರವನ್ನು ಹಿಂಡಬೇಕು

ನ ಪ್ರಹೃತ್ಯ ತು ಪಾಣಿಭ್ಯಾಂ ವಸ್ತ್ರಂ ನಿಷ್ಪೀಡಯೇತ್ಸ್ಥಲೇ |

ಚತುಃ ಸಂವೇಷ್ಟ್ಯ ವಾಸೋಂತಂ ತರ್ಪಣಾಂತೇ ಸಮಂತ್ರಕಮ್ || (ಅಖಂಡಾದರ್ಶವಚನ)

"ವಸ್ತ್ರವನ್ನು ಎರಡು ಕೈಗಳಿಂದ ಹೊಡೆದು ಹಿಂಡಬಾರದು. ಶುದ್ಧವಸ್ತ್ರವನ್ನು ಉಟ್ಟುಕೊಂಡು ತರ್ಪಣ ಮಾಡಿದ ಮೇಲೆ ಸ್ನಾನವಸ್ತ್ರವನ್ನು ಮಂತ್ರಸಹಿತವಾಗಿ ಹಿಂಡಬೇಕು. ಅದಕ್ಕಿಂತ ಪೂರ್ವದಲ್ಲಿ ಮಂತ್ರಸಹಿತವಾಗಿ ಹಿಂಡಬಾರದು. ವಸ್ತ್ರದ ಎರಡು ತುದಿಗಳೂ ಒಂದೇ ದಿಕ್ಕಿನಲ್ಲಿರುವಂತೆ ನಾಲ್ಕು ಮಡಿಕೆಯಾಗಿ ಮಡಿಸಿ ಹಿಂಡಬೇಕು."

## ಒಣಗಿದ ಬಟ್ಟೆಯನ್ನು ಉಟ್ಟುಕೊಂಡು ನೀರಿನ ಮಧ್ಯದಲ್ಲಿ ತರ್ಪಣ ಮಾಡಬಾರದು

ಧೃತ್ವಾ ತು ಶುಷ್ಕವಸ್ತ್ರಂ ತು ಜಲಮಧ್ಯೇ ನ ತರ್ಪಯೇತ್ | (ಅಖಂಡಾದರ್ಶ)

"ಒಣಗಿದ ಬಟ್ಟೆಯನ್ನು ಉಟ್ಟುಕೊಂಡು ನೀರಿನ ಮಧ್ಯದಲ್ಲಿ ತರ್ಪಣವನ್ನು ಮಾಡಬಾರದು."

ಬ್ರಾಹ್ಮಂ ಸ್ನಾನಂ ತಥಾ ದಾನಂ ದೇವತಾಪಿತೃತರ್ಪಣಮ್ |

ಜಲಮಧ್ಯೇಽಪಿ ಕುರ್ವಾಣಃ ಶುಷ್ಕವಸ್ತ್ರೇ ವಿದುಷ್ಯತಿ || (ವಿಷ್ಣುವಚನ)

"ಪ್ರಾತಸ್ನಾನವು ಬ್ರಾಹ್ಮಮುಹೂರ್ತ ಎಂದು ಹೇಳುವ ಉಷಃಕಾಲದಲ್ಲಿ ಮಾಡುವುದರಿಂದ ಬ್ರಾಹ್ಮಸ್ನಾನವೆನಿಸುತ್ತದೆ. ಈ ಬ್ರಾಹ್ಮಸ್ನಾನ, ದಾನ, ದೇವತಾತರ್ಪಣ ಮತ್ತು ಪಿತೃತರ್ಪಣ ಇವುಗಳನ್ನು ನೀರಿನ ಮಧ್ಯದಲ್ಲಿಯೇ ಮಾಡಬೇಕು. ಅಲ್ಲಿಯೂ ಒಣಗಿದ ವಸ್ತ್ರವನ್ನು ಉಟ್ಟುಕೊಂಡು ಮಾಡವವನು ದೋಷಿಯಾಗುವನು."

ಆರ್ದ್ರವಾಸಾ ಜಲೇ ಕುರ್ಯಾತ್ |

"ನೀರಿನಲ್ಲಿ ಮಾಡುವ ಎಲ್ಲಾ ಕಾರ್ಯಗಳನ್ನೂ ಒದ್ದೆಬಟ್ಟೆಯನ್ನು ಉಟ್ಟುಕೊಂಡು ಮಾಡಬೇಕು."

### ಸ್ನಾನವಸ್ತ್ರವನ್ನು ಹಿಂಡುವಾಗ ವಿಶೇಷ

ಆರ್ದ್ರಶಾಟ್ಯಾಂ ತು ದಾತವ್ಯಂ ಮೃದಸ್ತಿಸ್ರೋ ವಿಧೀಯತೇ |
ಉತ್ತರೀಯಂ ತು ನಿಷ್ಪೀಡ್ಯ ತತಃ ಶೇಷಂ ಸಮಾಪಯೇತ್ || (ವಸಿಷ್ಠರ ವಚನ)

"ಒದ್ದೆಯಾದ ಸ್ನಾನಬಟ್ಟೆಯಲ್ಲಿ ಮೂರು ವಿಧವಾದ ಮಣ್ಣುಗಳನ್ನು ಸೇರಿಸಬೇಕು. ಆ ಮೇಲೆ ಉಟ್ಟಬಟ್ಟೆಯನ್ನೂ, ಹೊದ್ದುಕೊಳ್ಳುವ ಬಟ್ಟೆಯನ್ನೂ ಹಿಂಡಬೇಕು. ಆ ಮೇಲೆ ಉಳಿದ ಎಲ್ಲಾ ಕಾರ್ಯಗಳನ್ನೂ ಮುಗಿಸಬೇಕು." ವಸ್ತ್ರದಲ್ಲಿ ಮೂರು ವಿಧವಾದ ಮಣ್ಣುಗಳನ್ನು ಸೇರಿಸಿ ಹಿಂಡುವುದು ಸನ್ಯಾಸಿಗಳಿಗೆ ಮಾತ್ರ ಸಂಬಂಧಿಸಿದೆ ಎಂದು ಸ್ಮೃತಿರತ್ನಕಾರರು ಹೇಳಿರುತ್ತಾರೆ.

### ಒಣಗಿದ ವಸ್ತ್ರವನ್ನು ಉಟ್ಟುಕೊಳ್ಳುವುದು

ಏವಂ ಕೃತ್ವಾ ತತಃ ಪಶ್ಚಾದಾಚಮ್ಯ ಚ ವಿಧಾನತಃ |
ಉತ್ಥಾಯ ವಾಸಸೀ ಶುದ್ಧೇ ಶುಕ್ಲೇ ತು ಪರಿಧಾರಯೇತ್ ||
ಧೃತ್ವಾ ವಸ್ತ್ರಂ ದ್ವಿರಾಚಾಮೇದಿತಿ ವ್ಯಾಘ್ರೋಽಬ್ರವೀನ್ಮುನಿಃ || (ಮತ್ಸ್ಯಪುರಾಣ)

"ಹಿಂದೆ ಹೇಳಿದಂತೆ ಸ್ನಾನವನ್ನು ಮಾಡಿ ಆಚಮನವನ್ನು ಮಾಡಬೇಕು. ಎದ್ದು ನಿಂತು ಬಿಳಿ ಬಣ್ಣದ ಶುದ್ಧ ವಸ್ತ್ರವನ್ನು ಉಟ್ಟುಕೊಳ್ಳಬೇಕು. ವಸ್ತ್ರವನ್ನು ಉಟ್ಟುಕೊಂಡ ಮೇಲೆ ಎರಡು ಸಲ ಆಚಮನವನ್ನು ಮಾಡಬೇಕು. ಇದು ವ್ಯಾಘ್ರ ಎಂಬ ಮುನಿಯು ಹೇಳಿರುವುದು.

ಸ್ನಾತೋ ವಸ್ತ್ರದ್ವಯಂ ಶುದ್ಧಂ ಗೃಹೀತ್ವಾ ದ್ವಿರುಪಸ್ಪೃಶೇತ್ |
ಸಂಪ್ರಾಹ ನಿಯಮಂ ವ್ಯಾಸೋ ಮುನಿರ್ವಸ್ತ್ರಸ್ಯ ಧಾರಣೇ ||
ನೋತ್ತರೀಯಮಧಃ ಕುರ್ಯಾನ್ನೋಪರ್ಯಾಧಸ್ಥಮಂಬರಮ್ |
ನಾಂತರ್ವಾಸೋ ವಿನಾ ಜಾತು ನಿವಸೇದ್ವಸನಂ ಬುಧಃ || (ವ್ಯಾಸವಚನ)

"ಶ್ರೀವ್ಯಾಸರು ವಸ್ತ್ರವನ್ನು ಧರಿಸುವ ವಿಷಯದಲ್ಲಿ ಕೆಳಗಿನ ನಿಯಮಗಳನ್ನು ಹೇಳಿರುವರು. (1) ಸ್ನಾನಾನಂತರದಲ್ಲಿ ಶುದ್ಧವಾದ ಎರಡು ವಸ್ತ್ರಗಳನ್ನು ತೆಗೆದುಕೊಂಡು ಎರಡು ಸಲ ಆಚಮನ ಮಾಡಬೇಕು. (2) ಹೊದ್ದುಕೊಳ್ಳುವ ಬಟ್ಟೆಯನ್ನು ಯಾವ ಕಾರಣದಿಂದಲೂ ಯಾವಾಗಲೂ ಉಟ್ಟುಕೊಳ್ಳಬಾರದು. (3) ಉಟ್ಟುಕೊಳ್ಳುವ ಬಟ್ಟೆಯನ್ನು ಯಾವ ಕಾರಣದಿಂದಲೂ ಯಾವಾಗಲೂ ಹೊದ್ದು ಕೊಳ್ಳಬಾರದು. (4) ದೇಹದಲ್ಲಿ ಧರಿಸಿದ್ದ ಬಟ್ಟೆಯನ್ನು ಮೊದಲೇ ಬಿಚ್ಚಿ ಬೆತ್ತಲೆಯಾಗಿ ಇನ್ನೊಂದು ಬಟ್ಟೆಯನ್ನು ಉಟ್ಟುಕೊಳ್ಳಬಾರದು."

ತತೋ ಮೃದಂಭಸಾ ಜಂಘೇ ಶೋಧಯೇಚ್ಚಾಪವಿತ್ರಿತೇ |
ಸ್ನಾತ್ವಾ ನಿರಸ್ಯ ವಸ್ತ್ರಂ ತು ಜಂಘೇ ಶೋಧ್ಯೇ ಮೃದಂಭಸಾ |
ಅಪವಿತ್ರೀಕೃತೇ ತೇ ಹಿ ಕೌಪೀನಾಸ್ರಾವವಾರಿಣಾ || (ಜಾಬಾಲಿವಚನ)

"ಸ್ನಾನಕಾಲದಲ್ಲಿ ಕೌಪೀನದಿಂದ ಬಂದಿರುವ ನೀರಿನಿಂದ ತೊಡೆ ಮೊಣಕಾಲು ಮತ್ತು ಅದರ ಕೆಳಗಿನ ಭಾಗಗಳು ಅಶುದ್ಧವಾಗಿರುತ್ತವೆ. ಸ್ನಾನ ಮಾಡಿದ ಮೇಲೆ ಶುದ್ಧವಾದ ವಸ್ತ್ರವನ್ನು ಉಟ್ಟುಕೊಂಡು ಸ್ನಾನವಸ್ತ್ರವನ್ನು ಬಿಡಬೇಕು. ತೊಡೆ, ಮೊಣಕಾಲು ಮುಂತಾದವುಗಳನ್ನು ಮಣ್ಣಿನಿಂದಲೂ ನೀರಿನಿಂದಲೂ ತೊಳೆಯಬೇಕು. ಹೀಗೆ ತೊಳೆದರೆ ಕೌಪೀನಜಲದಿಂದ ಅಶುದ್ಧವಾಗಿರುವ ಮೊಣಕಾಲಿನ ಕೆಳಭಾಗವು ಶುದ್ಧವಾಗುತ್ತದೆ.

(ಈ ವಾಕ್ಯದಲ್ಲಿ ಮೊಣಕಾಲುಗಳು ಕೌಪೀನಜಲದಿಂದ ಅಶುದ್ಧವಾಗಿರುವುದರಿಂದ ಅವುಗಳ ಶುದ್ಧಿಗಾಗಿ ಮಣ್ಣು

ಮತ್ತು ನೀರಿನಿಂದ ತೊಳೆಯಬೇಕೆಂದು ಜಾಬಾಲಿ ಋಷಿಯು ಹೇಳಿರುವರು. ಇದರಿಂದ ಯಾವುದಾದರೂ ಒಂದು ಕಾರಣದಿಂದ ಅಪರಿಶುದ್ಧವಾದ ಒಂದೊಂದು ಅವಯವಗಳನ್ನೂ ಹೀಗೆಯೇ ತೊಳೆಯಬೇಕೆಂದು ಹೇಳಿದಂತಾಗುವುದು) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

ಸ್ನಾತ್ವೈವ ವಾಸಸೀ ಧೌತೇ ಅಚ್ಛಿನ್ನೇ ಪರಿಧಾಯ ಚ |
ಪ್ರಕ್ಷಾಲ್ಯೋರೂ ಮೃದಾದ್ಭಿಶ್ಚ ಹಸ್ತೌ ಪ್ರಕ್ಷಾಲಯೇತ್ತತಃ || (ಯೋಗಿಯಾಜ್ಞವಲ್ಕ್ಯರ ವಚನ)

"(1) ಸ್ನಾನಾನಂತರದಲ್ಲಿ ಎರಡು ವಸ್ತ್ರಗಳನ್ನು ಧರಿಸಬೇಕು. (2) ಆ ವಸ್ತ್ರಗಳು ಹರಿದಿರಬಾರದು. (3) ಈ ವಸ್ತ್ರಗಳನ್ನು ಧರಿಸಿದ ಮೇಲೆ ತೊಡೆಗಳನ್ನು ಮಣ್ಣಿನಿಂದಲೂ ನೀರಿನಿಂದಲೂ ತೊಳೆಯಬೇಕು. (4) ಕೈಗಳನ್ನು ತೊಳೆದುಕೊಳ್ಳಬೇಕು." (ಈ ಪ್ರಮಾಣದಲ್ಲಿ ವಸ್ತ್ರಗಳು ಹರಿದಿರಬಾರದು ಎಂದು ಹೇಳಿದೆ. ಇದು ಬಡವರಿಗೆ ಅನ್ವಯಿಸುವುದಿಲ್ಲ. ಶ್ರೀಮಂತರಿಗೆ ಮಾತ್ರ ಅನ್ವಯಿಸುತ್ತದೆ. ಈ ವಿಷಯವು ಬೇರೆ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ. ಆ ಸ್ಮೃತಿಯ ವಚನವನ್ನು ಕೆಳಗೆ ಕೊಟ್ಟಿದ್ದೇನೆ.)

ನ ಜೀರ್ಣಮಲವದ್ವಾಸಾ ಭವೇಚ್ಚ ವಿಭವೇ ಸತಿ |

"ಸಂಪತ್ತಿನಿಂದ ಯುಕ್ತನಾದವನು ಹರಿದು ಹೋದ ಮತ್ತು ಕೊಳೆಯುಳ್ಳ ಬಟ್ಟೆಯನ್ನು ಉಟ್ಟುಕೊಳ್ಳಬಾರದು."

(ಮೇಲ್ಕಂಡ ಪ್ರಮಾಣಗಳಿಂದ ಹೇಳಿರುವ ಕೌಪೀನ ಎಂಬ ಪದವು ಗುಹ್ಯೇಂದ್ರಿಯವನ್ನು ಆಚ್ಛಾದನ ಮಾಡುವುದಕ್ಕಾಗಿ ಉಡುದಾರದಲ್ಲಿ ಕಟ್ಟಿಕೊಳ್ಳುವ ತುಂಡುವಸ್ತ್ರ ಎಂದು ಕೆಲವರು ಅರ್ಥವನ್ನು ಹೇಳುತ್ತಾರೆ. ಹಾಗೆ ಅರ್ಥವನ್ನು ಹೇಳಿ ಕೌಪೀನಜಲದಿಂದ ಅಶುದ್ಧವಾದ ತೊಡೆ ಮುಂತಾದ ಅವಯವಗಳನ್ನು ಸನ್ಯಾಸಿಗಳು ಮಾತ್ರ ಮಣ್ಣಿನಿಂದಲೂ, ನೀರಿನಿಂದಲೂ ತೊಳೆಯಬೇಕು. ಗೃಹಸ್ಥರು ಬ್ರಹ್ಮಚಾರಿಗಳು ಮತ್ತು ವಾನಪ್ರಸ್ಥರು ತೊಳೆಯಬೇಕಾಗಿಲ್ಲ ಎಂದು ಸ್ಮೃತಿರತ್ನಕಾರರು ಹೇಳಿರುವರು. ಆದರೆ ಇಲ್ಲಿರುವ ಕೌಪೀನ ಎಂಬ ಪದವು ಅವರು ಹೇಳಿದಂತೆ ತುಂಡು ಬಟ್ಟೆಯನ್ನು ತಿಳಿಸುವುದಿಲ್ಲ. ಗುಹ್ಯೇಂದ್ರಿಯವನ್ನು ತಿಳಿಸುತ್ತದೆ. ಆದ್ದರಿಂದ ಗುಹ್ಯೇಂದ್ರಿಯದಿಂದ ಸುರಿದ ನೀರಿನಿಂದ ಅಶುದ್ಧವಾದ ತೊಡೆ ಮುಂತಾದ ಅವಯವಗಳ ಶುದ್ಧಿಗಾಗಿ ಮಣ್ಣಿನಿಂದಲೂ, ನೀರಿನಿಂದಲೂ ತೊಳೆಯಬೇಕು ಎಂಬ ಅರ್ಥವನ್ನೇ ಹೇಳಬೇಕು. ಗುಹ್ಯೇಂದ್ರಿಯದಿಂದ ಸುರಿಯುವ ನೀರಿನಿಂದ ತೊಡೆ ಮುಂತಾದ ಅವಯವಗಳ ಅಶುದ್ಧಿಯು ಸರ್ವರಿಗೂ ಏರ್ಪಡುವ ಸಂಭವವಿರುವುದರಿಂದ, ಬ್ರಹ್ಮಚಾರಿ ಮುಂತಾದ ಎಲ್ಲಾ ಆಶ್ರಮದವರೂ, ಗುಹ್ಯೇಂದ್ರಿಯಗಳಿಂದ ಸುರಿದಿರುವ ನೀರಿನಿಂದ ಅಶುದ್ಧವಾದ ತೊಡೆ ಮುಂತಾದ ಅವಯವಗಳನ್ನು ತೊಳೆದುಕೊಳ್ಳಲೇಬೇಕು. ಸನ್ಯಾಸಿಗಳು ಮಾತ್ರ ಅಲ್ಲ ಎಂದು ಸ್ಮೃತಿಮುಕ್ತಾವಲೀಕಾರರು ಸಮರ್ಥಿಸಿರುವರು.)

ಕೌಪೀನ ಎಂಬ ಪದವು ಗುಹ್ಯೇಂದ್ರಿಯವನ್ನು ಮುಚ್ಚುವ ತುಂಡುಬಟ್ಟೆ ಎಂಬ ಅರ್ಥವನ್ನಿಟ್ಟುಕೊಂಡು, ಸ್ನಾನಕಾಲದಲ್ಲಿ ಗುಹ್ಯೇಂದ್ರಿಯವನ್ನು ಆಚ್ಛಾದನೆ ಮಾಡಿಕೊಂಡಿದ್ದ ತುಂಡುಬಟ್ಟೆಯಿಂದ ಸುರಿದ ನೀರಿನಿಂದ ಅಶುದ್ಧವಾದ ತೊಡೆ ಮುಂತಾದ ಅವಯವಗಳನ್ನು ತೊಳೆದುಕೊಳ್ಳಬೇಕು ಎಂಬ ಅರ್ಥವನ್ನು ಹೇಳುವುದೂ ಯುಕ್ತವಲ್ಲ. "ಯಾವ ಕಾರ್ಯವನ್ನು ಮಾಡುವಾಗಲೂ ಗುಹ್ಯೇಂದ್ರಿಯವನ್ನು ತುಂಡುಬಟ್ಟೆಯಿಂದ ಮುಚ್ಚಿಕೊಳ್ಳಕೂಡದು. ಹಾಗೆ ಮುಚ್ಚಿಕೊಂಡಿದ್ದರೆ ಅವನು ಶೂದ್ರನಿಗೆ ಸಮನಾಗುವನು." ಎಂದು ಪ್ರಮಾಣಗಳಲ್ಲಿ ತಿಳಿಸಿರುವುದರಿಂದ ಸ್ನಾನ ಕಾಲದಲ್ಲಿ ಕೌಪೀನವಸ್ತ್ರವನ್ನೇ ಧರಿಸಬಾರದು. ಹಾಗಾದ ಮೇಲೆ ಕೌಪೀನವಸ್ತ್ರದಿಂದ ತೊಡೆ ಮುಂತಾದ ಅವಯವಗಳು ಅಶುದ್ಧವಾಗುವ ಸಂಭವವೇ ಇಲ್ಲ. ಆದ್ದರಿಂದ ಹಿಂದೆ ಹೇಳಿದ ಪ್ರಮಾಣವಚನಗಳಲ್ಲಿರುವ ಕೌಪೀನ ಎಂಬ ಪದವು ಗುಹ್ಯೇಂದ್ರಿಯವನ್ನೇ ತಿಳಿಸುತ್ತದೆ. ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

### ಕರ್ಮಗಳನ್ನು ಮಾಡುವಾಗ ಕೌಪೀನ ಮತ್ತು ಉಡುದಾರವಿರಬಾರದು

ಕೌಪೀನಂ ಕಟಿಸೂತ್ರಂ ಚ ಕರ್ಮಕಾಲೇ ತು ವರ್ಜಯೇತ್ |
ಅಕಚ್ಛಃ ಪುಚ್ಛಕಚ್ಛೋ ವಾ ದ್ವಿಕಚ್ಛಃ ಕಟಿಸೂತ್ರಕಃ |
ದ್ವಿಶಿಖೋ ವಿಶಿಖಶ್ಚೈ ಶೂದ್ರ ಏವ ನ ಸಂಶಯಃ ||

(1) ಕೌಪೀನ ಮತ್ತು ಉಡುದಾರ ಇವೆರಡನ್ನು ಶಾಸ್ತ್ರೋಕ್ತಸ್ನಾನಾದಿಕರ್ಮಗಳನ್ನು ಮಾಡುವಾಗ ಧರಿಸಬಾರದು. (2) ಕಚ್ಚೆಗಳಿಲ್ಲದೆ ವಸ್ತ್ರವನ್ನು ಧರಿಸಬಾರದು. (3) ಕಚ್ಚೆಯ ಒಂದು ಕೊನೆಯನ್ನು ಮಾತ್ರ ಮೇಲೆ ಸಿಕ್ಕಿಸಿಕೊಂಡು ಇನ್ನೊಂದು ಭಾಗವು ಕೆಲಗೆ ಜೋಲಾಡುವಂತೆ ಕಚ್ಚೆಯನ್ನು ಧರಿಸುವವನು ಪುಚ್ಛಕಚ್ಛನೆನಿಸುವನು. ಪುಚ್ಛಕಚ್ಛನಾಗಬಾರದು. (4) ಕಚ್ಚೆಯ ನಡುಭಾಗವನ್ನು ಮೇಲೆ ಸಿಕ್ಕಿಸಿಕೊಂಡು ಆ ಕಚ್ಚೆಯ ಎರಡು ಭಾಗಗಳು ಕೆಳಗೆ ಜೋಲಾಡುತ್ತಿರುವಂತೆ ಕಚ್ಚೆಯನ್ನು ಧರಿಸುವವನು ದ್ವಿಕಚ್ಛನೆನಿಸುವನು. ದ್ವಿಕಚ್ಛನಾಗಬಾರದು. (5) ಉಡುದಾರವನ್ನು ಧರಿಸಬಾರದು. (6) ತಲೆಯಲ್ಲಿ ಮಧ್ಯದಲ್ಲಿ ಕ್ಷೌರವನ್ನು ಮಾಡಿಕೊಂಡು ಎರಡು ಪಕ್ಕಗಳಲ್ಲಿ ಬೇರೆ ಬೇರೆ ಜುಟ್ಟನ್ನು ಇಟ್ಟುಕೊಳ್ಳುವವನು ದ್ವಿಶಿಖನೆನಿಸುವನು. ದ್ವಿಶಿಖನಾಗಬಾರದು. (7) ಜುಟ್ಟೇ ಇಲ್ಲದವನು ವಿಶಿಖನೆನಿಸುವನು. ವಿಶಿಖನಾಗಬಾರದು. ಶಾಸ್ತ್ರೋಕ್ತ ಕರ್ಮಗಳನ್ನು ಮಾಡುವಾಗ ಹಿಂದೆ ಹೇಳಿದಂತೆ ನಡೆದು ಕೊಳ್ಳದವನು ಅಂದರೆ ಪುಚ್ಛಕಚ್ಛ ಮುಂತಾದವನು ಶೂದ್ರನೆಂದು ತಿಳಿಯಬೇಕು. ಈ ವಿಷಯದಲ್ಲಿ ಸಂಶಯವಿಲ್ಲ."

### ಒದ್ದೆ ಬಟ್ಟೆಯನ್ನು ಮೇಲ್ಮುಖವಾಗಿ ತೆಗೆಯಬೇಕು

ಸ್ನಾನಂ ಕೃತ್ವಾऽऽರ್ದ್ರವಸ್ತ್ರಂ ತು ಊರ್ಧ್ವಮುತ್ಥಾಪಯೇದ್ದ್ವಿಜಃ |
ಸ್ನಾನವಸ್ತ್ರಮಧಸ್ತ್ಯಕ್ತ್ವೇತ್ಪುನಃ ಸ್ನಾನೇನ ಶುದ್ಧ್ಯತಿ ||

"ಒಣಗಿದ ಬಟ್ಟೆಯನ್ನು ಧರಿಸುತ್ತಿರುವಾಗ ಸ್ನಾನಕಾಲದಲ್ಲಿ ಉಟ್ಟುಕೊಂಡಿದ್ದ ಬಟ್ಟೆಯನ್ನು ಮೇಲ್ಭಾಗದಿಂದ ತೆಗೆಯಬೇಕು. ಕಾಲಿನ ಭಾಗದಲ್ಲಿ ಬಿಡಬಾರದು. ಹಾಗೆ ಕಾಲಿನ ಭಾಗದಲ್ಲಿ ಬಿಟ್ಟರೆ ಅಶುದ್ಧನಾಗುವನು. ಪುನಃ ಸ್ನಾನದಿಂದ ಶುದ್ಧನಾಗುವನು."

### ಹೊದ್ದುಕೊಳ್ಳುವ ಬಟ್ಟೆಯಿಲ್ಲದೆ ಯಾವ ಕಾರ್ಯವನ್ನೂ ಮಾಡಬಾರದು

ಅವಶ್ಯಂ ಚೋತ್ತರೀಯಮಿತಿ ಬೋಧಾಯನೋऽಬ್ರವೀತ್ |
ಉತ್ತರಂ ವಾಸಃ ಕರ್ತವ್ಯಂ ಪಂಚಸ್ವೇತೇಷು ಕರ್ಮಸು |
ಸ್ವಾಧ್ಯಾಯೋತ್ಸರ್ಗದಾನೇಷು ಭುಕ್ತ್ಯಾಚಮನಯೋಸ್ತಥಾ || (ಬೋಧಾಯನರ ವಚನ)

"(1) ವೇದಾದಿಶಾಸ್ತ್ರಗಳನ್ನು ಅಧ್ಯಯನ ಮಾಡುವುದು ಮತ್ತು ಇನ್ನೊಬ್ಬರಿಗೆ ಉಪದೇಶಿಸುವುದು. (2) ಮಲಮೂತ್ರಗಳ ವಿಸರ್ಜನ ಮಾಡುವುದು. (3) ದಾನ ಕೊಡುವುದು ಮತ್ತು ತೆಗೆದುಕೊಳ್ಳುವುದು. (4) ಊಟ ಮಾಡುವುದು. (5) ಆಚಮನ ಮಾಡುವುದು. ಈ ಐದು ಕಾರ್ಯಗಳಲ್ಲಿ ಉತ್ತರೀಯ ಅಂದರೆ ಹೊದ್ದುಕೊಳ್ಳುವ ಬಟ್ಟೆ ಇದ್ದೇ ಇರಬೇಕು."

ಏಕವಸ್ತ್ರೋ ನ ಭುಂಜೀತ ನ ಕುರ್ಯಾದ್ದೇವತಾರ್ಚನಮ್ | (ದೇವಲರ ವಚನ)

"ಒಂದೇ ಬಟ್ಟೆಯನ್ನು ಉಟ್ಟುಕೊಂಡು ಊಟ ಮಾಡಬಾರದು. ದೇವತಾರ್ಚನವನ್ನೂ ಮಾಡಬಾರದು."

ವಿಕಚ್ಛೋऽನುತ್ತರೀಯಶ್ಚ ನಗ್ನಶ್ಚಾವಸ್ತ್ರ ಏವ ಚ |
ಶ್ರೌತಂ ಸ್ಮಾರ್ತಂ ತಥಾ ಕರ್ಮ ನ ನಗ್ನಶ್ಚಿಂತಯೇದ್ಬುಧಃ ||

"(1) ಕಚ್ಚೆಯಿಲ್ಲದವನು. (2) ಉತ್ತರೀಯವಸ್ತ್ರವಿಲ್ಲದವನು. (3) ಬೆತ್ತಲೆಯಾಗಿರುವವನು. (4) ವಸ್ತ್ರವನ್ನು ಉಟ್ಟುಕೊಳ್ಳದವನು. ಈ ನಾಲ್ವರು ವೇದ ಮತ್ತು ಸ್ಮೃತಿಗಳಲ್ಲಿ ಹೇಳಿರುವ ಯಾವ ಕಾರ್ಯವನ್ನೂ ಮಾಡಬಾರದು. ಬೆತ್ತಲೆಯಾದವನು ಧ್ಯಾನ ಮುಂತಾದ ಯಾವ ಮಾನಸವ್ಯಾಪಾರವನ್ನೂ ಸಹ ಮಾಡಬಾರದು."

(ಈ ಶ್ಲೋಕದಲ್ಲಿ ಉತ್ತರೀಯವಸ್ತ್ರವಿಲ್ಲದವನು ಯಾವ ಕಾರ್ಯವನ್ನೂ ಮಾಡ ಕೂಡದು ಎಂದು ಹೇಳಿದೆ. ಆದ್ದರಿಂದ ಮೇಲ್ಕಂಡ ಬೋಧಾಯನರ ವಚನದಲ್ಲಿಯ ಐದು ಕಾರ್ಯಗಳಲ್ಲಿ ಉತ್ತರೀಯವಸ್ತ್ರವಿದ್ದೇ ಇರಬೇಕೆಂದು ದೇವಲವಚನದಲ್ಲಿ ಒಂದೆರಡು ಕಾರ್ಯಗಳಲ್ಲಿ ಉತ್ತರೀಯವಸ್ತ್ರವಿರಬೇಕೆಂದೂ ಹೇಳಿದ್ದರೂ ಆ ಕಾರ್ಯಗಳಂತಿರುವ ಸಕಲಶಾಸ್ತ್ರ ವಿಹಿತಕರ್ಮಗಳಲ್ಲಿಯೂ ಉತ್ತರೀಯವಸ್ತ್ರವಿದ್ದೇ ಇರಬೇಕೆಂಬ ಅಭಿಪ್ರಾಯವನ್ನು ಆ ಎರಡು ವಚನಗಳಿಗೆ ಹೇಳಲೇಬೇಕು. ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.)

## ಏಕವಸ್ತ್ರಲಕ್ಷಣ

ಸವ್ಯಾದಿಷಟ್ಪರಿಭ್ರಷ್ಟಃ ಕಟಿದೇಶಧೃತಾಂಬರಃ |
ಏಕವಸ್ತ್ರಂ ತು ತಂ ವಿದ್ಯಾದ್ದೈವೇ ಪಿತ್ರ್ಯೇ ಚ ಕರ್ಮಣಿ || (ಗೋಭಿಲರ ವಚನ)

"ಹೊದ್ದುಕೊಳ್ಳುವ ಉತ್ತರೀಯದಲ್ಲಿ ಆರು ಲಕ್ಷಣಗಳಿರಬೇಕು. (1) ಎಡ ಹೆಗಲ ಮೇಲೆ ಆ ವಸ್ತ್ರದ ಹಿಂದಿನ ಭಾಗವನ್ನು ತನ್ನ ಮುಂದೆ ಹಾಕಿಕೊಳ್ಳಬೇಕು. (2) ಅದೇ ಹೆಗಲಿನ ಮೇಲೆ ಆ ವಸ್ತ್ರದ ಮುಂದಿನ ಭಾಗವನ್ನು ತನ್ನ ಹಿಂದೆ ಹಾಕಿಕೊಳ್ಳಬೇಕು. (3) ಆ ವಸ್ತ್ರದ ಮಧ್ಯಭಾಗವು ಬಲಕಂಕುಳಿನ ಕೆಳಭಾಗದಲ್ಲಿ ಹೊಕ್ಕಳಿಗೆ ಸಮವಾಗಿರಬೇಕು. (4) ಆ ವಸ್ತ್ರದ ಉಳಿದ ಭಾಗವು ತನ್ನ ಎದೆ ಮತ್ತು ಬೆನ್ನುಗಳಿಗೆ ತಗಲಿದಂತಿರಬೇಕು. (5) ಆ ವಸ್ತ್ರದಲ್ಲಿ ಕಪ್ಪುಬಣ್ಣದ ಅಂಚನ್ನು ಬಿಟ್ಟು ಇತರ ಬಣ್ಣದ ಅಂಚು ಇರಬೇಕು. (6) ಆ ವಸ್ತ್ರವು ಶುಭ್ರವಾಗಿರಬೇಕು. ಈ ಆರು ಲಕ್ಷಣಗಳಲ್ಲಿ ಒಂದು ಲಕ್ಷಣವು ಕಡಿಮೆಯಾದರೂ ಆ ಉತ್ತರೀಯವನ್ನು ಅವನು ಧರಿಸಿದ್ದರೂ ಧರಿಸಿದಂತಾಗುವುದಿಲ್ಲ. ಆದ್ದರಿಂದ ಅವನು ಉಟ್ಟುಕೊಳ್ಳುವ ಮತ್ತು ಹೊದ್ದುಕೊಳ್ಳುವ ಎರಡು ವಸ್ತ್ರಗಳನ್ನು ಧರಿಸಿದ್ದರೂ ಏಕವಸ್ತ್ರನೆನಿಸುವನು."

"ಇದೇ ರೀತಿಯಲ್ಲಿ ಉಟ್ಟುಕೊಳ್ಳುವ ಬಟ್ಟೆಯಲ್ಲಿಯೂ, ಕಪ್ಪುಬಣ್ಣವನ್ನು ಬಿಟ್ಟು ಇತರ ಬಣ್ಣದ ಅಂಚು ಇರಬೇಕು. ಆ ವಸ್ತ್ರವನ್ನು ಹೊಕ್ಕಳಿಗಿಂತ ಮೇಲ್ಭಾಗದಲ್ಲಿ ವರ್ತುಲಾಕಾರವಾಗಿ ಉಟ್ಟುಕೊಳ್ಳಬೇಕು. ಹೊಕ್ಕಳಿಗಿಂತ ಕೆಳಗೆ ಉಟ್ಟುಕೊಂಡರೆ ಆ ವಸ್ತ್ರವನ್ನು ಉಟ್ಟುಕೊಂಡಿದ್ದರೂ ಉಟ್ಟುಕೊಂಡಂತಾಗುವುದಿಲ್ಲ. ಆದ್ದರಿಂದ ಅವನು ಉಟ್ಟುಕೊಳ್ಳುವ ಮತ್ತು ಹೊದ್ದುಕೊಳ್ಳುವ ಎರಡು ವಸ್ತ್ರಗಳನ್ನು ಧರಿಸಿದ್ದರೂ ಏಕವಸ್ತ್ರನೆನಿಸುವನು."

"ಉಡುವ ಮತ್ತು ಹೊದ್ದುಕೊಳ್ಳುವ ಎರಡು ವಸ್ತ್ರಗಳನ್ನು ಧರಿಸಿದ್ದರೂ ಅವುಗಳ ಮಧ್ಯದಲ್ಲಿ ಯಾವುದಾದರೊಂದು ವಸ್ತ್ರದಲ್ಲಿ ಮಾತ್ರ ಮೇಲ್ಕಂಡ ಲಕ್ಷಣಗಳಿದ್ದಾಗ ಏಕವಸ್ತ್ರನೆಂದೂ, ಎರಡು ವಸ್ತ್ರಗಳಲ್ಲಿಯೂ ಇಲ್ಲದಿರುವಾಗ ದಿಗಂಬರನೆಂದೂ ಹೇಳಲ್ಪಡುವನು."

"ಹೀಗೆ ಎರಡು ವಸ್ತ್ರಗಳನ್ನು ಧರಿಸಿದ್ದರೂ ಏಕವಸ್ತ್ರನೆಂದೂ, ದಿಗಂಬರನೆಂದೂ, ಹೇಳಲ್ಪಡುತ್ತಿರುವಾಗ ಒಂದೇ ಬಟ್ಟೆಯನ್ನು ಧರಿಸುತ್ತಿರುವಾಗ ಏಕವಸ್ತ್ರನೆಂದೂ, ಎರಡು ವಸ್ತ್ರಗಳನ್ನೂ ಧರಿಸದಿರುವಾಗ ದಿಗಂಬರನೆಂದೂ, ಹೇಳಲ್ಪಡುವುದರಲ್ಲಿ ಸಂಶಯವಿಲ್ಲ. ಮೇಲೆ ಹೇಳಿದ ಏಕವಸ್ತ್ರಲಕ್ಷಣವುಳ್ಳವನು ದೇವತಾಕಾರ್ಯವನ್ನೂ, ಪಿತೃಕಾರ್ಯವನ್ನೂ ಮಾಡಕೂಡದು."

## ಜಾತಿಭೇದದಿಂದ ವಸ್ತ್ರಭೇದ

ಬ್ರಾಹ್ಮಣಸ್ಯ ಸಿತಂ ವಸ್ತ್ರಂ ನೃಪತೇ ರಕ್ತಮುಲ್ಬಣಮ್ |
ಪೀತಂ ವೈಶ್ಯಸ್ಯ ಶೂದ್ರಸ್ಯ ನೀಲಂ ಮಲವದಿಷ್ಯತೇ || (ಭೃಗುವಚನ)

"ಬ್ರಾಹ್ಮಣನಿಗೆ ಬಿಳಿ ಬಣ್ಣದ ಬಟ್ಟೆ, ಕ್ಷತ್ರಿಯನಿಗೆ ಕೆಂಪು ಬಣ್ಣದ ಬಟ್ಟೆ, ವೈಶ್ಯನಿಗೆ ಹಳದಿ ಬಣ್ಣದ ಬಟ್ಟೆ, ಶೂದ್ರನಿಗೆ ನೀಲವರ್ಣದ ಮತ್ತು ಮಲಿನವಾದ ಬಟ್ಟೆಯು ವಿಹಿತವಾಗಿದೆ."

(ಈ ಶ್ಲೋಕದಲ್ಲಿ ಕ್ಷತ್ರಿಯಾದಿಗಳಿಗೆ ಬೇರೆ ಬೇರೆ ಬಣ್ಣಗಳ ಬಟ್ಟೆಗಳು ಹೇಳಲ್ಪಟ್ಟಿವೆ. ಈ ಬೇರೆ ಬೇರೆ ಬಣ್ಣಗಳು ಪರ್ವತಗಳಲ್ಲಿರುವ ಗೈರಿಕ ಮುಂತಾದ ಧಾತುಗಳ ಸಂಪರ್ಕದಿಂದ ಏರ್ಪಟ್ಟಿರಬೇಕು. ಸಾಮಾನ್ಯವಾದ ಬಣ್ಣದ ಪುಡಿಗಳಿಂದ ಏರ್ಪಟ್ಟಿರಬಾರದು. ಈ ವಿಷಯದಲ್ಲಿ ಪ್ರಮಾಣವನ್ನು ಕೆಳಗೆ ಕೊಟ್ಟಿರುತ್ತೇವೆ.)

ಅಹತಂ ಧಾತುರಕ್ತಂ ಚ ತತ್ಪವಿತ್ರಮಿತೀರಿತಮ್ |

"ಅಹತವಸ್ತ್ರ ಅಂದರೆ ಹರಿಯದಿರುವ ಬಟ್ಟೆ ಮತ್ತು ಗೈರಿಕಾದಿಧಾತುಗಳ ಸಂಪರ್ಕದಿಂದ ಕೆಂಪು ಮುಂತಾದ ಬಣ್ಣಗಳನ್ನು ಪಡೆದ ವಸ್ತ್ರಗಳು ಪವಿತ್ರವಸ್ತ್ರಗಳೆನಿಸುತ್ತವೆ."

ನ ವೇಷ್ಟಿತಶಿರಾಃ ಕೃಷ್ಣಕಾಷಾಯವಾಸಸಾ ವಾ ದೇವಪಿತೃಕಾರ್ಯಾಣಿ ಕುರ್ಯಾತ್ |

(ಭೃಗುಋಷಿಯ ವಚನ)

"ತಲೆಯನ್ನು ಮುಚ್ಚಿಕೊಂಡು ಮತ್ತು ಕಪ್ಪುಬಣ್ಣ, ಕೆಂಪುಬಣ್ಣ ಮುಂತಾದ ಬಣ್ಣಗಳಿಂದ ಬೇರೆ ಬಣ್ಣಗಳನ್ನು ಪಡೆದಿರುವ ವಸ್ತ್ರಗಳನ್ನು ಉಟ್ಟುಕೊಂಡು ದೇವಕಾರ್ಯ ಮತ್ತು ಪಿತೃಕಾರ್ಯಗಳನ್ನು ಮಾಡಬಾರದು."

**ಅಹತವಾದ ಬಟ್ಟೆಯ ಲಕ್ಷಣ**

ಈಷದ್ಧೌತಂ ನವಂ ಶ್ವೇತಂ ಸದಶಂ ಯನ್ನ ಧಾರಿತಮ್ |
ಅಹತಂ ತದ್ವಿಜಾನೀಯಾತ್ಸರ್ವಕರ್ಮಸು ಪಾವನಮ್ || (ಪುಲಸ್ತ್ಯರವಚನ)

"(1) ನೀರಿನಲ್ಲಿ ಒಮ್ಮೆ ಮುಳುಗಿಸಿ ತೆಗೆದಿರುವ ಬಟ್ಟೆಯಾಗಿರಬೇಕು. (2) ಹೊಸಬಟ್ಟೆಯಾಗಿರಬೇಕು. (3) ಬಿಳಿ ಬಣ್ಣವುಳ್ಳದ್ದಾಗಿರಬೇಕು. (4) ಅಂಚಿನಿಂದ ಯುಕ್ತವಾಗಿರಬೇಕು. (5) ಹಿಂದೆ ತನ್ನಿಂದಲಾಗಲೀ, ಇತರರಿಂದಾಗಲೀ ಉಡಲ್ಪಟ್ಟಿರಬಾರದು. ಈ ಐದು ಲಕ್ಷಣಗಳಿಂದ ಯುಕ್ತವಾದ ಬಟ್ಟೆಯು ಅಹತ ಅಂದರೆ ಹರಿಯದ ಬಟ್ಟೆಯೆನಿಸುತ್ತದೆ. ಈ ಅಹತಬಟ್ಟೆಯು ಎಲ್ಲಾ ಕರ್ಮಗಳಲ್ಲಿಯೂ ಪಾವನವಾದುದು.

**ವಸ್ತ್ರವನ್ನು ತಾನೇ ಒಗೆಯಬೇಕು**

"ತಾನೇ ಒಗೆದು ಒಣಗಿಸಿದ ಬಟ್ಟೆಯನ್ನು ಉಟ್ಟುಕೊಂಡು ದೇವಕಾರ್ಯ, ಪಿತೃಕಾರ್ಯ ಮುಂತಾದ ಕಾರ್ಯಗಳನ್ನು ಮಾಡಬೇಕು. ಅಗಸನಿಂದ ಒಗೆಯಲ್ಪಟ್ಟ ಅಥವಾ ಇತರರಿಂದ ಒಗೆಯಲ್ಪಟ್ಟ ವಸ್ತ್ರವನ್ನು ಉಟ್ಟುಕೊಂಡಾಗಲೀ ಹಂದ ವಸ್ತ್ರವನ್ನು ಉಟ್ಟುಕೊಂಡಾಗಲೀ ಯಾವ ಕಾರಣದಿಂದಲೂ ಮಾಡಬಾರದು.

**ಅಹತವಸ್ತ್ರವು ಕೆಲವು ಸಂದರ್ಭಗಳಲ್ಲಿ ಮಂಗಲಕರ**

ಅಹತಂ ಯತ್ತು ನಿರ್ಮುಕ್ತಂ ಮುಕ್ತಂ ವಾಸಃ ಸ್ವಯಂ ಭುವಾ |
ಶಸ್ತಂ ತನ್ಮಂಗಲಾಖ್ಯೇಷು ತಾವತ್ಕಾಲಂ ನ ಸರ್ವದಾ || (ಸ್ಮೃತ್ಯಂತರವಚನ)

"ಹೊಸಬಟ್ಟೆಯನ್ನು ಒಮ್ಮೆ ಉಟ್ಟಿದ್ದರೂ ನೆಲಕ್ಕೆ ತಗಲಿಸದಿದ್ದರೆ ಅದನ್ನು ಉಟ್ಟುಕೊಂಡು ವಿವಾಹಾದಿ ಮಂಗಲಕಾರ್ಯಗಳನ್ನು ಮಾಡಬಹುದು. ಬೇರೆ ಕಾರ್ಯಗಳನ್ನು ಮಾಡಕೂಡದು."

**ಶಯನ ಮುಂತಾದವುಗಳಿಗೆ ಬೇರೆ ಬೇರೆ ಬಟ್ಟೆಗಳನ್ನು ಉಪಯೋಗಿಸಬೇಕು**

ಶಯನಾದೌ ವಸ್ತ್ರಭೇದಃ ಪುರಾಣೇಷು ಪ್ರಕೀರ್ತಿತಃ |
ಅನ್ಯದೇವ ಭವೇದ್ವಾಸಃ ಶಯನಾಯ ನರಾಧಿಪ ||
ಅನ್ಯತ್ಪಥ್ಯಾಸು ದೇವಾನಾಮರ್ಚಾಯಾಮನ್ಯದೇವ ಹಿ |
ಅನ್ಯಚ್ಚ ಲೋಕಯಾತ್ರಾಯಾಮನ್ಯದೀಶ್ವರದರ್ಶನೇ ||

"ಶಯನ ಮಾಡುವ ಕಾಲ, ದೇವರನ್ನು ಧ್ಯಾನಿಸುವ ಕಾಲ, ದೇವರ ಪೂಜೆಯ ಕಾಲ, ಲೌಕಿಕ ವ್ಯವಹಾರಕಾಲ, ದೇವರನ್ನು ನೋಡುವ ಕಾಲ ಮುಂತಾದ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ವಿಧವಾದ ವಸ್ತ್ರವನ್ನು ಉಟ್ಟುಕೊಳ್ಳಬೇಕೆಂದು ಪುರಾಣ ಸ್ಮೃತಿ ಮುಂತಾದ ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ."

**ಉಟ್ಟುಕೊಳ್ಳುವ ವಸ್ತ್ರವನ್ನು ಧರಿಸುವ ಮಂತ್ರ**

ಪರಿಧಾಸ್ಯೇ ಯತೋ ಧಾಸ್ಯೇ ದೀರ್ಘಾಯುತ್ವಾಯ ಜರದಷ್ಟಿರಸ್ಮಿ |
ಶತಂ ಜೀವೇಮ ಶರದಃ ಸುವೀರಾಃ ಸಪೋಷಮಭಿಸಂವ್ಯತಿಷ್ಯ || (ಪಾರಸ್ಕರರ ವಚನ)

**ಹೊದ್ದುಕೊಳ್ಳುವ ಬಟ್ಟೆಯನ್ನು ಧರಿಸುವ ಮಂತ್ರ**

ವ್ಯಾಸೇ ಮೇ ದ್ಯಾವಾಪೃಥಿವೀ ಯಸ್ಯ ಸೇಂದ್ರಾ ಬೃಹಸ್ಪತೀ |
ಯಶೋಭಂಗಶ್ಚ ಮಾ ವಿದ್ಯಾ ಯಶೋ ಮಾ ಪ್ರತಿಪಾದ್ಯತಾಮ್ || (ಪಾರಸ್ಕರರ ವಚನ)

ಈ ಎರಡು ಮಂತ್ರಗಳಿಂದ ಹೊಸಬಟ್ಟೆಯನ್ನು ಧರಿಸಬೇಕು. ಹಳೆಯ ಬಟ್ಟೆಯನ್ನು ಧರಿಸುವಾಗ ಮಂತ್ರದ ಅವಶ್ಯಕತೆಯಿಲ್ಲ. ಈ ವಿಷಯವನ್ನು ಪಾರಸ್ಕರರು "ವಾಸಶ್ಛತ್ರೋಪಾನಹಶ್ಚಾಪೂರ್ವಾಶ್ಚೇನ್ಮಂತ್ರತಃ" ಎಂದರೆ "ವಸ್ತ್ರ ಕೊಡೆ ಚಪ್ಪಲಿ ಇವುಗಳು ಹೊಸದಾಗಿದ್ದರೆ ಮಾತ್ರ ಮಂತ್ರದಿಂದ ಧರಿಸಬೇಕು." ಎಂದು ಹೇಳಿದ್ದಾರೆ.

**ತ್ಯಾಜ್ಯವಾದ ವಸ್ತುಗಳು**

ನ ರಕ್ತಮುಲ್ಬಣಂ ವಾಸೋ ನ ನೀಲಂ ಚ ಪ್ರಶಸ್ಯತೇ |
ದಶಾಹೀನಂ ಜಲಾರ್ದ್ರಂ ಚ ವರ್ಜಯೇದಂಬರಂ ಬುಧಃ || (ಭೃಗುಋಷಿಯ ವಚನ)

"(1) ಕೆಂಪು ಬಟ್ಟೆ. (2) ಕಣ್ಣುಗಳನ್ನು ಕುಕ್ಕುವಂತಿರುವ ಉಗ್ರವಾದ ಬಟ್ಟೆ. (3) ನೀಲ ಬಣ್ಣದ ಬಟ್ಟೆ. (4) ಅಂಚು ಇಲ್ಲದಿರುವ ಬಟ್ಟೆ. (5) ನೀರಿನಿಂದ ಒದ್ದೆಯಾಗಿರುವ ಬಟ್ಟೆ ಇವುಗಳನ್ನು ಧರಿಸಬಾರದು."

ಕಾಷಾಯಂ ಕೃಷ್ಣವಸ್ತ್ರಂ ಚ ಮಲಿನಂ ಕೇಶದೂಷಿತಮ್ |
ಛಿನ್ನಾಗ್ರಂ ಚೋಪವಸ್ತ್ರಂ ಚ ಕುತ್ಸಿತಂ ಧರ್ಮತೋ ವಿದುಃ || (ಜಾತೂಕರ್ಣ್ಯರ ವಚನ)

"(1) ಕಾವಿಶಾಟಿ (2) ಕಪ್ಪುಬಟ್ಟೆ (3) ಕೊಳೆಯಿಂದ ಯುಕ್ತವಾದ ಬಟ್ಟೆ (4) ತಲೆಗೂದಲಿನಿಂದ ಮಿಶ್ರಿತವಾದ ಬಟ್ಟೆ (5) ತುದಿಭಾಗವು ಹರಿದು ಹೋದ ಬಟ್ಟೆ (6) ಇನ್ನೊಂದು ಬಟ್ಟೆಯಿಂದ ಸಹಿತವಾದ ಬಟ್ಟೆ ಎಂದರೆ ಹೊಲಿದ ಬಟ್ಟೆ. ಈ ಆರು ವಿಧವಾದ ಬಟ್ಟೆಗಳು ನಿಂದ್ಯವಾಗಿವೆ."

ನಗ್ನೋ ಮಲಿನವಸ್ತ್ರಃ ಸ್ಯಾನ್ನಗ್ನಶ್ಚಾರ್ದ್ರಪಟಃ ಸ್ಮೃತಃ |
ನಗ್ನಃ ಸುದಗ್ಧವಸ್ತ್ರಃ ಸ್ಯಾನ್ನಗ್ನಃ ಸ್ಯೂತಪಟಸ್ತಥಾ ||
ವಿಕಚ್ಛೋಽನುತ್ತರೀಯಶ್ಚ ನಗ್ನಶ್ಚಾವಸ್ತ್ರ ಏವ ಚ |
ಶ್ರೌತಂ ಸ್ಮಾರ್ತಂ ತಥಾ ಕರ್ಮ ನ ಕುರ್ಯಾಚ್ಚಿಂತಯೇದಪಿ ||
ಮೋಹಾತ್ಕುರ್ವನ್ನಧೋ ಗಚ್ಛೇತ್ತದ್ಧ್ವವೇದಾಸುರಂ ಕೃತಮ್ ||

"(1) ಮಲಿನವಾದ ಬಟ್ಟೆಯುಳ್ಳವನು. (2) ಒದ್ದೆ ಬಟ್ಟೆಯನ್ನು ಉಟ್ಟುಕೊಂಡವನು. (3) ಚೆನ್ನಾಗಿ ಸುಟ್ಟ ಬಟ್ಟೆಯನ್ನು ಉಟ್ಟುಕೊಂಡವನು. (4) ಹೊಲಿದ ಬಟ್ಟೆಯನ್ನು ಉಟ್ಟುಕೊಂಡವನು. (5) ಕಚ್ಚೆಯಿಲ್ಲದವನು. (6) ಹೊದ್ದುಕೊಳ್ಳುವ ಉತ್ತರೀಯ ಬಟ್ಟೆಯನ್ನು ಧರಿಸದವನು. (7) ಬಟ್ಟೆಯನ್ನು ಉಟ್ಟುಕೊಳ್ಳದವನು. ಈ ಏಳು ವಿಧರಾದ ಜನರು ಬತ್ತಲೆಯಾಗಿರುವವರೆನಿಸುವರು. ಇವರು ಶ್ರುತಿಯಲ್ಲಿಯೂ, ಸ್ಮೃತಿಗಳಲ್ಲಿಯೂ, ಹೇಳಿರುವ ಯಾವ ಕರ್ಮಗಳನ್ನೂ

ಮಾತಲೂ ಬಾರದು. ಆ ಕರ್ಮಗಳನ್ನು ಯೋಚಿಸಲೂಬಾರದು. ಇವರು ಮಾಡುವ ಕರ್ಮಗಳು ಅಸುರಕರ್ಮಗಳೆನಿಸುತ್ತವೆ. ಇವರು ಮಾಡುವ ಈ ಕರ್ಮಗಳಿಂದ ದೇವತೆಗಳೂ, ಪಿತೃಗಳೂ ತೃಪ್ತರಾಗುವುದಿಲ್ಲ. ಅಸುರರು ತೃಪ್ತರಾಗುತ್ತಾರೆ. ಈ ಕರ್ಮಗಳಿಂದ ಅವರಿಗೆ ನರಕಪ್ರಾಪ್ತಿಯಾಗುತ್ತದೆ."

ಸತಿ ವಿಭವೇ ನ ಜೀರ್ಣಮಲವದ್ವಾಸಾಃ ಸ್ಯಾತ್ | (ಗೌತಮರ ವಚನ)

"ಸಂಪನ್ನನಾಗಿದ್ದರೆ ಮಲಿನವಾದ ವಸ್ತ್ರವನ್ನೂ, ಜೀರ್ಣವಸ್ತ್ರವನ್ನೂ ಧರಿಸಬಾರದು."

(ಈ ಗೌತಮರ ವಚನದಲ್ಲಿ ಸಂಪತ್ತಿನಿಂದ ಯುಕ್ತರಾದವರಿಗೆ ಮಾತ್ರ ಮಲಿನವಸ್ತ್ರ ಮತ್ತು ಜೀರ್ಣವಸ್ತ್ರಗಳ ಧಾರಣೆಯು ನಿಷಿದ್ಧವಾಗಿದೆ. ಆದ್ದರಿಂದ ಅಶಕ್ತರಾದ ಬಡವರು ಮಲಿನವಸ್ತ್ರ ಮತ್ತು ಜೀರ್ಣವಸ್ತ್ರಗಳನ್ನು ಧರಿಸಿದರೂ ದೋಷವಿಲ್ಲವೆಂದು ಹೇಳಿದಂತಾಗುತ್ತದೆ.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

## ಮಡಿವಸ್ತ್ರಕ್ಕೆ ಪ್ರತಿನಿಧಿ

ಅಭಾವೇ ಧೌತವಸ್ತ್ರಸ್ಯ ಶಾಣಕ್ಷೌಮಾವಿಕಾನಿ ಚ |
ಕುತಪಂ ಯೋಗಪಟ್ಟಂ ವಾ ದ್ವಿವಾಸಾ ನ ಭವೇದಿತಿ || (ವಸಿಷ್ಠರ ವಚನ)

"ತಾನೇ ಒಗೆದು ಒಣಗಿಸಿದ ಮಡಿವಸ್ತ್ರವು ಇಲ್ಲದಿದ್ದರೆ ಅದಕ್ಕೆ ಪ್ರತಿನಿಧಿಯಾಗಿ (1) ಗೋಣಿನೂಲಿನಿಂದ ನಿರ್ಮಿತವಾದ ವಸ್ತ್ರ. (2) ರೇಶ್ಮೆ ಮಡಿ. (3) ಕಂಬಳಿನೂಲಿನಿಂದ ರಚಿತವಾದ ದಾವಣಿ. (4) ಕಾಡಿನಲ್ಲಿ ಹುಟ್ಟಿ ಬೆಳೆದಿರುವ ಆಡಿನ ರೋಮದಿಂದ ರಚಿತವಾದ ವಸ್ತ್ರ. (5) ಯೋಗಪಟ್ಟ. ಈ ಐದರಲ್ಲಿ ಯಾವುದಾದರೊಂದನ್ನು ಧರಿಸಿಕೊಂಡು ಕರ್ಮಗಳನ್ನು ಮಾಡಬೇಕು. ಬೆತ್ತಲೆಯಾಗಿ ಮಾಡಬಾರದು."

## ಯೋಗಪಟ್ಟದ ಲಕ್ಷಣ

ವಸ್ತ್ರೋತ್ತರೀಯಾಭಾವೇ ದ್ವ್ಯಂಗುಲಂ ತ್ರ್ಯಂಗುಲಂ ಚತುರಂಗುಲಂ ವಾ |
ಸೂತ್ರೈರ್ವಸ್ತ್ರಾಕೃತಿ ಪರಿಮಂಡಲಂ ತದುತ್ತರೀಯಂ ಕುರ್ಯಾತ್ || (ಜಾತೂಕರ್ಣ್ಯರ ವಚನ)

"ಉಟ್ಟುಕೊಳ್ಳುವ ಮತ್ತು ಹೊದ್ದುಕೊಳ್ಳುವ ಬಟ್ಟೆಗಳು ಹಿಂದೆ ಹೇಳಿದ ಲಕ್ಷಣಗಳಿಂದ ಯುಕ್ತವಾಗದಿರುವಾಗ ಯಾವುದಾದರೊಂದು ಸಾಮಾನ್ಯಬಟ್ಟೆಯನ್ನು ಉಟ್ಟುಕೊಂಡು ಯೋಗಪಟ್ಟವನ್ನು ಯಜ್ಞೋಪವೀತದಂತೆ ಧರಿಸಬೇಕು. ಯೋಗಪಟ್ಟದ ಲಕ್ಷಣವನ್ನು ಈಗ ಹೇಳುತ್ತೇವೆ. ನೂಲಿನಿಂದ ಎರಡು ಅಂಗುಲ ಅಥವಾ ಮೂರು ಅಂಗುಲ ಅಥವಾ ನಾಲ್ಕು ಅಂಗುಲ ಅಗಲವಾಗಿರುವ ವಸ್ತ್ರವನ್ನು ತಯಾರಿಸಬೇಕು. ಆ ವಸ್ತ್ರವು ಯಜ್ಞೋಪವೀತದಂತೆ ವರ್ತುಲಾಕಾರವಾಗಿಯೂ ಯಜ್ಞೋಪವೀತದಷ್ಟೇ ಉದ್ದವಾಗಿಯೂ ಇರಬೇಕು. ಇದು ಯೋಗಪಟ್ಟವೆನಿಸುತ್ತದೆ. ಈ ಯೋಗಪಟ್ಟವನ್ನು ರೇಶ್ಮೆನೂಲಿನಿಂದ ತಯಾರಿಸಿದರೆ ಯೋಗಪಟ್ಟವೆಂದೂ ಹತ್ತಿಯ ನೂಲಿನಿಂದ ತಯಾರಿಸಿದರೆ ಯೋಗವಸ್ತ್ರವೆಂದೂ ಹೇಳುವುದುಂಟು. ಶಕ್ತ್ಯನುಸಾರವಾಗಿ ಯೋಗಪಟ್ಟ ಅಥವಾ ಯೋಗವಸ್ತ್ರವನ್ನು ತಯಾರಿಸಿ ಉತ್ತರೀಯಸ್ಥಾನದಲ್ಲಿ ಧರಿಸಿದರೆ ಹೊದ್ದುಕೊಳ್ಳುವ ವಸ್ತ್ರವಿಲ್ಲದಿದ್ದರೂ ದೋಷವಿಲ್ಲ."

## ಉತ್ತರೀಯ ಪ್ರತಿನಿಧಿಕೆ

ಯಜ್ಞೋಪವೀತೇ ದ್ವೇ ಧಾರ್ಯೇ ಶ್ರೌತೇ ಸ್ಮಾರ್ತೇ ಚ ಕರ್ಮಣಿ |
ತೃತೀಯಮುತ್ತರೀಯಂ ಚ ವಸ್ತ್ರಾಭಾವೇ ತದಿಷ್ಯತೇ ||

"ಶ್ರುತ್ಯುಕ್ತಕರ್ಮಗಳನ್ನೂ, ಸ್ಮೃತ್ಯುಕ್ತಕರ್ಮಗಳನ್ನೂ, ಮಾಡುವಾಗ ಎರಡು ಯಜ್ಞೋಪವೀತಗಳನ್ನು ಧರಿಸಬೇಕು. ಉತ್ತರೀಯವಸ್ತ್ರವಿಲ್ಲದಿದ್ದರೆ ಅದಕ್ಕೆ ಬದಲಾಗಿ ಮೂರನೆಯ ಯಜ್ಞೋಪವೀತವನ್ನು ಧರಿಸಬೇಕು."

## ವಸ್ತ್ರಧಾರಣಕ್ರಮ

ಶುಚೀ ನೋ ಹವ್ಯಮರುತ ಇತಿ ಗೃಹ್ಯಾಂಬರಂ ಶುಚಿ |
ಸಂಪ್ರೋಕ್ಷ್ಯ ದೇವಸ್ಯ ತ್ವೇತಿ ವ್ಯಾಹೃತ್ಯಾಽಽದಾಯ ಭಾಸ್ವರಮ್ ||
ಉದುತ್ಯಂ ಜಾತವೇದಸಮಿತ್ಯಾದಿತ್ಯಂ ದರ್ಶಯೇತ್ತತಃ |
ಆವಹಂತೀತ್ಯುದಾಹೃತ್ಯ ಪರಿಧಾಯ ದ್ವಿರಾಚಮೇತ್ || (ಬ್ರಹ್ಮಾಂಡಪುರಾಣ)

"ಶುಚೀ ವೋ ಹವ್ಯಮರುತಃ" ಎಂಬ ಮಂತರದಿಂದ ಮಡಿವಸ್ತ್ರವನ್ನು ತೆಗೆದುಕೊಳ್ಳಬೇಕು. "ದೇವಸ್ಯತ್ವಾಸವಿತುಃ ಪ್ರಸವೇ" ಎಂಬ ಮಂತ್ರದಿಂದ ಆ ವಸ್ತ್ರವನ್ನು ಪ್ರೋಕ್ಷಿಸಬೇಕು. ವ್ಯಾಹೃತಿಮಂತ್ರದಿಂದ ಆ ವಸ್ತ್ರವನ್ನು ಉಡುವುದಕ್ಕಾಗಿ ಕೈಯಲ್ಲಿ ಧರಿಸಬೇಕು. "ಉದುತ್ಯಂ ಜಾತವೇದಸಂ" ಎಂಬ ಮಂತ್ರದಿಂದ ಆ ವಸ್ತ್ರವನ್ನು ಸೂರ್ಯನಿಗೆ ತೋರಿಸಬೇಕು. "ಆವಹಂತೀ ವಿತನ್ವಾನಾ" ಎಂಬ ಮಂತ್ರದಿಂದ ಉಟ್ಟುಕೊಳ್ಳಬೇಕು. ಕೊನೆಗೆ ಎರಡು ಸಲ ಆಚಮನ ಮಾಡಬೇಕು."

## ವಸ್ತ್ರಧಾರಣದಲ್ಲಿ ಗಮನಿಸಬೇಕಾದ ವಿಷಯ

ಪೂರ್ವಕಚ್ಛಮನುದ್ಧೃತ್ಯ ಪಶ್ಚಾತ್ಕಚ್ಛಂ ನ ಧಾರಯೇತ್ |
ಪೂರ್ವಕಚ್ಛಂ ಸುರಾವಾಸಂ ಪಶ್ಚಾತ್ಕಚ್ಛಂ ತದಾಸುರಮ್ ||
ಅಕಚ್ಛಃ ಪುಚ್ಛಕಚ್ಛಶ್ಚ ಕಟಿಸೂತ್ರವಿವರ್ಜಿತಃ |
ಅದರ್ಭಪಾಣಿರ್ಯತ್ಕರ್ಮ ಕುರುತೇ ತದ್ವೃಥಾ ಭವೇತ್ ||
ಲಂಬಮಾನೌ ಕರೌ ಕೃತ್ವಾ ಪ್ರಾಙ್ಮುಖೋದಙ್ಮುಖೋಽಪಿ ವಾ |
ನಾಮತ್ರಯಶತಂ ಜಪ್ತ್ವಾ ವಾಸಸೀ ಪರಿಧಾರಯೇತ್ ||

"ವಸ್ತ್ರದ ಎರಡು ಪಕ್ಕಗಳ ತುದಿಯನ್ನು ಮೇಲೆ ಎತ್ತಿ ಸಿಕ್ಕಿಸುವುದೇ ಕಚ್ಚೆಯೆನಿಸುತ್ತದೆ. ಈ ಕಚ್ಚೆಯು ಎರಡು. ತನ್ನ ಮುಂಭಾಗದಲ್ಲಿ ಒಂದು. ಹಿಂಭಾಗದಲ್ಲಿ ಒಂದು. ಮುಂಭಾಗದ ಕಚ್ಚೆಯು ಪೂರ್ವಕಚ್ಛವೆಂದೂ ಹಿಂಭಾಗದ ಕಚ್ಚೆಯು ಪಶ್ಚಾತ್ಕಚ್ಛವೆಂದೂ ಹೇಳಲ್ಪಡುತ್ತದೆ. ಪೂರ್ವಕಚ್ಛದಲ್ಲಿ ದೇವತೆಗಳು ಸನ್ನಿಹಿತರಾಗಿರುವರು. ಪಶ್ಚಾತ್ಕಚ್ಛದಲ್ಲಿ ದೈತ್ಯರು ಸನ್ನಿಹಿತರಾಗಿರುವರು. ಪೂರ್ವಕಚ್ಛವನ್ನು ಮೊದಲು ಎತ್ತಿ ಸಿಕ್ಕಿಸಿಕೊಳ್ಳಬೇಕು. ಅನಂತರದಲ್ಲಿ ಪಶ್ಚಾತ್ಕಚ್ಛವನ್ನು ಎತ್ತಿ ಸಿಕ್ಕಿಸಿಕೊಳ್ಳಬೇಕು. ಪೂರ್ವಕಚ್ಛವನ್ನು ಎತ್ತಿ ಸಿಕ್ಕಿಸಿಕೊಳ್ಳದೆ ಪಶ್ಚಾತ್ಕಚ್ಛವನ್ನು ಎತ್ತಿ ಸಿಕ್ಕಿಸಿಕೊಳ್ಳಬಾರದು."

"ಪೂರ್ವಕಚ್ಛ ಮತ್ತು ಪಶ್ಚಾತ್ಕಚ್ಛಗಳಲ್ಲಿ ಯಾವ ಕಚ್ಚೆಯನ್ನೂ ಧರಿಸದೆ ವಸ್ತ್ರವನ್ನು ಲುಂಗಿಯಂತೆ ಸುತ್ತಿಕೊಳ್ಳುವವನು ಅಕಚ್ಛನೆನಿಸುವನು. ಪೂರ್ವಕಚ್ಛ ಮತ್ತು ಪಶ್ಚಾತ್ಕಚ್ಛಗಳನ್ನು ಧರಿಸಿದರೂ ವಸ್ತ್ರದ ಒಂದೊಂದು ತುದಿಗಳಲ್ಲಿರುವ ಎರಡು ಕೊನೆಗಳಲ್ಲಿ ಒಂದು ಕೊನೆಯನ್ನು ಮಾತ್ರ ಮೇಲೆ ಸಿಕ್ಕಿಸಿಕೊಂಡು ಇನ್ನೊಂದು ಕೊನೆಯನ್ನು ಜೋಲಾಡುತ್ತಿರುವಂತೆ ಕಚ್ಚೆಯನ್ನು ಕಟ್ಟಿಕೊಳ್ಳುವವನು ಪುಚ್ಛಕಚ್ಛನೆನಿಸುವನು. ಪೂರ್ವಕಚ್ಛ ಮತ್ತು ಪಶ್ಚಾತ್ಕಚ್ಛಗಳನ್ನು ಧರಿಸಿದರೂ ಪುಚ್ಛಕಚ್ಛನಾಗಬಾರದು."

"ಉಡುದಾರವನ್ನು ಧರಿಸುವವನು ಕಟಿಸೂತ್ರಕನೆಂದೂ, ಧರಿಸದವನು ಕಟಿಸೂತ್ರವಿವರ್ಜಿತನೆಂದೂ ಹೇಳಲ್ಪಡುವನು. ಕಟಿಸೂರ್ತವಿವರ್ಜಿತನಾಗಬಾರದು."

(ಹಿಂದೆ ಕಟಿಸೂತ್ರಯುಕ್ತನಾಗಿರಬಾರದು ಎಂದು ಹೇಳಿದೆ. ಈಗ ಕಟಿಸೂತ್ರವಿವರ್ಜಿತನಾಗಬಾರದು ಎಂದು ಹೇಳುತ್ತಿದೆ. ಆದ್ದರಿಂದ ಈ ಎರಡು ವಾಕ್ಯಗಳಿಗೂ ಪರಸ್ಪರ ವಿರೋಧವು ಬಂತು. ಈ ಎರಡು ವಾಕ್ಯಗಳೂ ಸಮವಾಗಿವೆ. ಪರಸ್ಪರ ವಿರುದ್ಧವಾದ ಈ ಎರಡು ವಾಕ್ಯಗಳೂ ಮಾನ್ಯವೆಂಬ ವಿಷಯವನ್ನು ಸರ್ವರೂ ಅಂಗೀಕರಿಸಲೇಬೇಕು. ಆದ್ದರಿಂದ ಚಿಕ್ಕವಯಸ್ಸಿನಿಂದ ಉಡುದಾರವನ್ನು ಧರಿಸುತ್ತಲೇ ಬಂದವರು ಕಟಿಸೂತ್ರ ವಿವರ್ಜಿತರಾಗಬಾರದೆಂದೂ, ಚಿಕ್ಕವಯಸ್ಸಿನಿಂದ

ಉಡುದಾರವಿಲ್ಲದೆ ಬೆಳೆದವರು ಉಡುದಾರವನ್ನು ಧರಿಸಲೇಬಾರದೆಂದೂ ಅಂಗೀಕರಿಸಬೇಕು. ಹೀಗೆ ಮಾಡಿದರೆ ಎರಡು ವಾಕ್ಯಗಳಿಗೂ ಪ್ರಾಮಾಣ್ಯವನ್ನು ರಕ್ಷಿಸಿದಂತಾಗುವುದು.)

"ದರ್ಭೆಯನ್ನು ಪವಿತ್ರರೂಪವಾಗಿ ಮಾಡಿಕೊಂಡು ಕೈಯಲ್ಲಿ ಧರಿಸಿಕೊಂಡೇ ಎಲ್ಲಾ ಕರ್ಮಗಳನ್ನು ಮಾಡಬೇಕು. ದರ್ಭೆಯ ಪವಿತ್ರವಿಲ್ಲದೆ ಯಾವ ಕಾರ್ಯವನ್ನೂ ಮಾಡಬಾರದು."

"ಅಕಚ್ಛನಾಗಿಯೂ, ಪುಚ್ಛಕಚ್ಛನಾಗಿಯೂ, ಚಿಕ್ಕವಯಸ್ಸಿನಿಂದ ಉಡುದಾರವನ್ನು ಧರಿಸುತ್ತಿದ್ದವನು ಕಟಿಸೂತ್ರವಿವರ್ಜಿತನಾಗಿಯೂ, ದರ್ಭೆಯಿಂದ ನಿರ್ಮಿತವಾದ ಪವಿತ್ರವನ್ನು ಧರಿಸದವನಾಗಿಯೂ, ಕರ್ಮವನ್ನು ಮಾಡಿದರೆ ಅವನು ಮಾಡಿದ ಆ ಕರ್ಮವು ನಿಷ್ಫಲವಾಗುತ್ತದೆ."

"ವಸ್ತ್ರವನ್ನು ಧರಿಸುವವನು ಪೂರ್ವಾಭಿಮುಖವಾಗಿಯಾಗಲೀ, ಉತ್ತರಾಭಿಮುಖ ವಾಗಿಯಾಗಲೀ ನಿಲ್ಲಬೇಕು. ಎರಡು ಕೈಗಳನ್ನೂ ಧಾರಾಳವಾಗಿ ಚಾಚಿಕೊಂಡು ವಸ್ತ್ರವನ್ನು ಎತ್ತಿ ಉಡುವುದಕ್ಕೆ ಆರಂಭಿಸಬೇಕು. ಅಚ್ಯುತಾಯ ನಮಃ, ಅನಂತಾಯ ನಮಃ, ಗೋವಿಂದಾಯ ನಮಃ ಎಂಬ ಈ ಮೂರು ಮಂತ್ರಗಳನ್ನು ನೂರು ಸಲ ಜಪಿಸುತ್ತಾ ವಸ್ತ್ರವನ್ನು ಉಟ್ಟು ಮುಗಿಸಬೇಕು." ಇದು ವಸ್ತ್ರವನ್ನು ಧರಿಸುವ ಕ್ರಮ.

ಊರ್ಧ್ವಕಚ್ಛಪೂರ್ವಕಂ ಧೃತ್ವಾ ಉಪವಿಶ್ಯ ದ್ವಿರಾಚಮ್ಯ ಶುಚಿರ್ಭವೇತ್ । (ಪಂಚಸಂಸ್ಕಾರಸಂಗ್ರಹ)

"ಹಿಂದೆ ಹೇಳಿದ ಪೂರ್ವಕಚ್ಛವೇ ಊರ್ಧ್ವಕಚ್ಛವೆನಿಸುತ್ತದೆ. ಈ ಊರ್ಧ್ವಕಚ್ಛವನ್ನು ಮೊದಲು ಧರಿಸಬೇಕು. ಅನಂತರದಲ್ಲಿ ವಸ್ತ್ರವನ್ನು ಸಂಪೂರ್ಣವಾಗಿ ಉಟ್ಟು ಮುಗಿಸಿ ಕುಳಿತುಕೊಳ್ಳಬೇಕು. ಎರಡು ಸಲ ಆಚಮನ ಮಾಡಬೇಕು. ಹೀಗೆ ಮಾಡಿದರೆ ಶುದ್ಧನಾಗುವನು."

## ಊರ್ಧ್ವಪುಂಡ್ರಧಾರಣ

ಈ ಊರ್ಧ್ವಪುಂಡ್ರಧಾರಣವು ಸದಾಚಾರಸ್ಮೃತಿಯಲ್ಲಿರುವ "ವಸಿತ್ವಾ ವಾಸ ಆಚಮ್ಯ ಪ್ರೋಕ್ಷ್ಯಾಚಮ್ಯ ಚ ಮಂತ್ರತಃ" ಎಂಬ ವಾಕ್ಯದಿಂದ ತಿಳಿಸಲ್ಪಟ್ಟಿತು. "ವಾಸಃ ಪ್ರೋಕ್ಷ್ಯ" ವಸ್ತ್ರವನ್ನು ಪ್ರೋಕ್ಷಣೆ ಮಾಡಬೇಕು. ಅನಂತರದಲ್ಲಿ "ವಸಿತ್ವಾ" ಹಿಂದೆ ಹೇಳಿದ ಮಂತ್ರಗಳಿಂದ ವಸ್ತ್ರವನ್ನು ತೆಗೆದುಕೊಂಡು ಉಟ್ಟುಕೊಳ್ಳಬೇಕು. ಅನಂತರದಲ್ಲಿ "ಆಚಮ್ಯ" ಪ್ರಾತಃ ಕಾಲವಾಗಿದ್ದರೆ ಒದ್ದೆ ಬಟ್ಟೆಯನ್ನು ಹಿಂಡಿ ಆಚಮನ ಮಾಡಬೇಕು. ಅನಂತರದಲ್ಲಿ "ಆಚಮ್ಯ" ಆ ವಸ್ತ್ರವನ್ನು ಪ್ರೋಕ್ಷಣೆ ಮಾಡಿ ನಾಮಗಳನ್ನೂ ಮುದ್ರೆಗಳನ್ನೂ ಧರಿಸಿ ಪುನಃ ಆಚಮನ ಮಾಡಬೇಕು. ಇದು ಆ ವಾಕ್ಯದ ಅರ್ಥವಾಗಿದೆ.

## ಊರ್ಧ್ವಪುಂಡ್ರವನ್ನು ಧರಿಸದಿದ್ದರೆ ದೋಷ

ಊರ್ಧ್ವಪುಂಡ್ರವಿಹೀನಂ ಯತ್ಸಂಧ್ಯಾಕರ್ಮಾದಿಕಂ ಚರೇತ್ ।
ತತ್ಸರ್ವಂ ರಾಕ್ಷಸೈರ್ನೀತಂ ಜಪಹೋಮಾದಿಕಂ ತಥಾ ॥ (ಪರಾಶರರ ವಚನ)

"ಮೇಲ್ಮುಖವಾಗಿ ಹಾಕುವ ನಾಮವೇ ಊರ್ಧ್ವಪುಂಡ್ರವೆನಿಸುತ್ತದೆ. ಈ ಊರ್ಧ್ವಪುಂಡ್ರವನ್ನು ಧರಿಸಿಕೊಂಡೇ ಸಂಧ್ಯಾವಂದನ, ಜಪ, ಹೋಮ ಮುಂತಾದ ಎಲ್ಲಾ ವೇದೋಕ್ತಕರ್ಮಗಳನ್ನೂ, ಸ್ಮೃತಿಗಳಲ್ಲಿ ಹೇಳಿರುವ ಕರ್ಮಗಳನ್ನೂ ಮಾಡಬೇಕು. ಊರ್ಧ್ವಪುಂಡ್ರವಿಲ್ಲದೆ ಯಾವ ಕರ್ಮಗಳನ್ನೂ ಮಾಡಬಾರದು. ಹಾಗೆ ಮಾಡಿದರೆ ಇವನು ಮಾಡುತ್ತಿರುವ ಎಲ್ಲಾ ಶಾಸ್ತ್ರೋಕ್ತಕರ್ಮಗಳನ್ನೂ ರಾಕ್ಷಸರು ಅಪಹರಿಸುವರು.

ಊರ್ಧ್ವಪುಂಡ್ರವಿಹೀನಸ್ತು ಕರ್ಮ ಯತ್ಕಿಂಚಿದಾಚರೇತ್ ।
ತತ್ಸರ್ವಂ ರಾಕ್ಷಸೈರ್ನೀತಂ ಜಪಹೋಮಾದಿಕಂ ತಥಾ ॥ (ಪರಾಶರರ ವಚನ)

"ಊರ್ಧ್ವಪುಂಡ್ರವಿಲ್ಲದವನು ಮಾಡಿರುವ ಜಪ ಹೋಮ ಮುಂತಾದ ಎಲ್ಲಾ ಶಾಸ್ತ್ರೋಕ್ತಕರ್ಮಗಳನ್ನೂ ರಾಕ್ಷಸರು ಅಪಹರಿಸುವರು."

ಊರ್ಧ್ವಪುಂಡ್ರವಿಹೀನಸ್ತು ಕರ್ಮ ಯತ್ಕಿಂಚಿದಾಚರೇತ್ |

ತತ್ಸರ್ವಂ ನಿಷ್ಫಲಂ ಯಾತಿ ಇಷ್ಟಾಪೂರ್ತಾ ಅಪಿ ದ್ವಿಜಾಃ || (ಪರಾಶರರ ವಚನ)

"ಊರ್ಧ್ವಪುಂಡ್ರವಿಲ್ಲದವನು ಮಾಡಿರುವ ಇಷ್ಟ ಅಂದರೆ ಯಜ್ಞ ಮುಂತಾದ ಮಂತ್ರಸಹಿತವಾದ ಕರ್ಮಗಳೂ ಪೂರ್ತ ಅಂದರೆ ಮಂತ್ರರಹಿತವಾದ ಕೆರೆ ಮುಂತಾದವುಗಳ ನಿರ್ಮಾಣ ಮುಂತಾದ ಕಾರ್ಯಗಳೂ ನಿಷ್ಫಲವಾಗುತ್ತವೆ."

ಉಪವೀತಂ ಶಿಖಾಬಂಧಮೂರ್ಧ್ವಪುಂಡ್ರವಿನಾಕೃತಮ್ |

ಅಪವಿತ್ರಕೃತಂ ಕರ್ಮ ವಿಪ್ರಸ್ಯ ವಿಫಲಂ ಭವೇತ್ || (ವಿಷ್ಣುಸ್ಮೃತಿ)

"ಯಜ್ಞೋಪವೀತಧಾರಣ ಮತ್ತು ಜುಟ್ಟು ಗಂಟು ಹಾಕುವಿಕೆ ಮುಂತಾದ ಎಲ್ಲಾ ಕರ್ಮಗಳನ್ನೂ ಊರ್ಧ್ವಪುಂಡ್ರವಿಲ್ಲದೆ ಮಾಡಬಾರದು. ಹಾಗೆ ಮಾಡಿದರೆ ಮೈಲಿಗೆಯಿಂದ ಮಾಡಿದಂತಾಗುತ್ತದೆ. ಮತ್ತು ನಿಷ್ಫಲವೂ ಆಗುತ್ತದೆ."

ಯಜ್ಞೋ ದಾನಂ ತಪೋ ಹೋಮೋ ಭೋಜನಂ ಪಿತೃತರ್ಪಣಮ್ |

ಸರ್ವೇ ಭವಂತಿ ವಿಫಲಾ ಊರ್ಧ್ವಪುಂಡ್ರವಿನಾಕೃತಾಃ ||

ದ್ರಷ್ಟವ್ಯಂ ನಾಸ್ಯ ಗಾತ್ರಂ ತತ್ಶ್ಮಶಾನಸದೃಶಂ ಸ್ಮೃತಮ್ || (ಭಾರ್ಗವರ ವಚನ)

"ಯಜ್ಞ, ದಾನ, ತಪಸ್ಸು, ಹೋಮ, ಭೋಜನ, ಪಿತೃತರ್ಪಣ ಮುಂತಾದ ಎಲ್ಲಾ ಶಾಸ್ತ್ರೋಕ್ತಕರ್ಮಗಳನ್ನೂ ಊರ್ಧ್ವಪುಂಡ್ರವನ್ನು ಧರಿಸಿದ ಮೇಲೆಯೇ ಮಾಡಬೇಕು. ಊರ್ಧ್ವಪುಂಡ್ರವನ್ನು ಧರಿಸದೆ ಮಾಡಿದರೆ ನಿಷ್ಫಲವಾಗುತ್ತವೆ. ಊರ್ಧ್ವಪುಂಡ್ರವನ್ನು ಧರಿಸದವನ ದೇಹವು ಸ್ಮಶಾನಕ್ಕೆ ಸಮವಾದುದು. ಅದನ್ನು ನೋಡಬಾರದು."

ಊರ್ಧ್ವಪುಂಡ್ರವಿಹೀನಸ್ತು ಕಿಂಚಿತ್ಕರ್ಮ ಕರೋತಿ ಯಃ |

ಇಷ್ಟಾಪೂರ್ತಾದಿಕಂ ಸರ್ವಂ ನಿಷ್ಫಲಂ ಸ್ಯಾನ್ನ ಸಂಶಯಃ || (ಪದ್ಮಪುರಾಣವಚನ)

"ಊರ್ಧ್ವಪುಂಡ್ರವನ್ನು ಧರಿಸದವನು ಮಾಡುತ್ತಿರುವ ಇಷ್ಟ, ಪೂರ್ತ ಮುಂತಾದ ಎಲ್ಲಾ ಕರ್ಮಗಳೂ ನಿಷ್ಫಲವಾಗುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ."

ಊರ್ಧ್ವಪುಂಡ್ರವಿಹೀನಸ್ತು ಸಂಧ್ಯಾಕರ್ಮಾದಿಕಂ ಚರೇತ್ |

ತತ್ಸರ್ವಂ ರಾಕ್ಷಸೈರ್ನೀತಂ ನರಕಂ ಚಾಧಿಗಚ್ಛತಿ || (ಪದ್ಮಪುರಾಣವಚನ)

"ಊರ್ಧ್ವಪುಂಡ್ರವಿಲ್ಲದವನು ಮಾಡುತ್ತಿರುವ ಸಂಧ್ಯಾವಂದನ ಮುಂತಾದ ಎಲ್ಲಾ ಕರ್ಮಗಳನ್ನೂ ರಾಕ್ಷಸರು ಅಪಹರಿಸುವರು. ಅವನಿಗೆ ನರಕಪ್ರಾಪ್ತಿಯೂ ಆಗುತ್ತದೆ."

ನ ತಜ್ಜ್ಞಾನಂ ನ ತದ್ಧೋಮೋ ನ ತದ್ದಾನಂ ನ ತತ್ಪರಮ್ |

ವಿನಾ ಚೈವೋರ್ಧ್ವಪುಂಡ್ರೇಣ ವಿಪ್ರೇಣ ಯದನುಷ್ಠಿತಮ್ || (ಪದ್ಮಪುರಾಣವಚನ)

"ಊರ್ಧ್ವಪುಂಡ್ರಧಾರಣವಿಲ್ಲದೆ ಸಂಪಾದಿಸಿದ ಜ್ಞಾನವು ಜ್ಞಾನವಲ್ಲ. ಮಾಡಿದ ಹೋಮವು ಹೋಮವಲ್ಲ. ದಾನವು ದಾನವಲ್ಲ. ಇವುಗಳೂ ಇತರ ಕಾರ್ಯಗಳೂ ಫಲವನ್ನು ಕೊಡಲಾರವು."

ಶ್ರಾದ್ಧಂ ದಾನಂ ತಥಾ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಮ್ |

ವ್ಯರ್ಥಂ ಭವತಿ ತತ್ಸರ್ವಮೂರ್ಧ್ವಪುಂಡ್ರವಿನಾಕೃತಮ್ || (ಹಾರೀತರ ವಚನ)

"ಊರ್ಧ್ವಪುಂಡ್ರವನ್ನು ಧರಿಸದೆ ಮಾಡಿರುವ ಶ್ರಾದ್ಧ, ಹೋಮ, ದಾನ, ವೇದಾಧ್ಯಯನ, ಪಿತೃತರ್ಪಣ ಮುಂತಾದ ಎಲ್ಲಾ ಕಾರ್ಯಗಳೂ ನಿಷ್ಫಲವಾಗುತ್ತವೆ."

ಸಂಧ್ಯಾ ಜಪಸ್ತರ್ಪಣಂ ಚ ಹೋಮೋ ದಾನಂ ಸುರಾರ್ಚನಮ್ |
ಶ್ರಾದ್ಧಮಧ್ಯಯನಂ ಯಜ್ಞೋ ಜ್ಞಾನಂ ಯೋಗಸ್ತಪಃ ಕ್ರಿಯಾ ||
ಭಸ್ಮೀಭವತಿ ತತ್ಸರ್ವಮೂರ್ಧ್ವಪುಂಡ್ರಂ ವಿನಾಕೃತಮ್ | (ಆತ್ರೇಯರ ವಚನ)

"ಊರ್ಧ್ವಪುಂಡ್ರವನ್ನು ಧರಿಸದವನು ಮಾಡುತ್ತಿರುವ ಸಂಧ್ಯಾವಂದನ, ಜಪ, ತರ್ಪಣ, ಹೋಮ, ದಾನ, ದೇವತಾರ್ಚನೆ, ಶ್ರಾದ್ಧ, ಅಧ್ಯಯನ, ಯಜ್ಞ, ಯೋಗಾಭ್ಯಾಸ, ತಪಸ್ಸು ಮುಂತಾದ ಎಲ್ಲಾ ಕರ್ಮಗಳೂ ಬೂದಿಯಾಗುತ್ತವೆ. ಊರ್ಧ್ವಪುಂಡ್ರವನ್ನು ಧರಿಸದವನನ್ನು ಪತಿತನನ್ನು ತ್ಯಜಿಸಿದಂತೆ ತ್ಯಜಿಸಬೇಕು."

## ಊರ್ಧ್ವಪುಂಡ್ರಧಾರಣವಿಧಿ

ತದಾರಭ್ಯ ಧರೇನ್ನಿತ್ಯಮೂರ್ಧ್ವಪುಂಡ್ರಂ ವಿಧಾನತಃ |
ತ್ರಿಸಂಧ್ಯಾಸು ಮೃದಾ ವಿಪ್ರೋ ಯಾಗಕಾಲೇ ವಿಶೇಷತಃ || (ಹಾರೀತರ ವಚನ)

"ಶಾಸ್ತ್ರೋಕ್ತಕರ್ಮಗಳನ್ನು ಮಾಡಲು ಆರಂಭಿಸಿದ ದಿನದಿಂದ ಆರಂಭಿಸಿ ಪ್ರತಿದಿನವೂ ಪ್ರಾತಃಕಾಲದಲ್ಲಿಯೂ, ಮಧ್ಯಾಹ್ನಕಾಲದಲ್ಲಿಯೂ, ಸಾಯಂಕಾಲದಲ್ಲಿಯೂ, ಯಾವಾಗಲೂ ಮೃತ್ತಿಕೆಯಿಂದ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಯಜ್ಞ ಮುಂತಾದ ದೇವತಾಕಾರ್ಯಗಳನ್ನು ಮಾಡುತ್ತಿರುವಾಗ ವಿಶೇಷವಾಗಿ ಧರಿಸಬೇಕು."

ಊರ್ಧ್ವಪುಂಡ್ರಂ ತು ವಿಪ್ರಾಣಾಂ ಸತತಂ ಸ್ಮೃತಿಚೋದಿತಮ್ |
ಮುಮುಕ್ಷುಭಿರ್ವೀತರಾಗೈರಪ್ರಮತ್ತೈಃ ಸಮಾಹಿತೈಃ |
ಊರ್ಧ್ವಪುಂಡ್ರಂ ಹರೇಃ ಪೂಜಾ ಕ್ಷತ್ರಿಯಾದ್ಯೈರನುಷ್ಠಿತಮ್ || (ವಸಿಷ್ಠ ಸ್ಮೃತಿ)

"ಊರ್ಧ್ವಪುಂಡ್ರಧಾರಣವನ್ನು ಯಾವಾಗಲೂ ಬ್ರಾಹ್ಮಣನು ಮಾಡಬೇಕೆಂದು ಸ್ಮೃತಿಗಳಲ್ಲಿ ಹೇಳಿದೆ. ಮೋಕ್ಷವನ್ನು ಅಪೇಕ್ಷಿಸುವವರೂ, ಎಲ್ಲಾ ಆಸೆಯನ್ನು ತೊರೆದವರೂ, ಕರ್ತವ್ಯಕರ್ಮಗಳನ್ನು ಆಲಸ್ಯವಿಲ್ಲದೆ ಮಾಡುತ್ತಿರುವವರೂ, ಸಾವಧಾನದಿಂದ ಎಲ್ಲಾ ಕಾರ್ಯಗಳನ್ನು ಬಿಡದಂತೆ ಮಾಡುತ್ತಿರುವವರೂ, ಆಗಿರುವ ಕ್ಷತ್ರಿಯರೇ ಮೊದಲಾದ ಬ್ರಾಹ್ಮಣೇತರರೂ ಸಹ ಶ್ರೀಹರಿಯ ಪೂಜೆಯೆಂದು ಭಾವಿಸಿ ಈ ಊರ್ಧ್ವಪುಂಡ್ರವನ್ನು ಧರಿಸುತ್ತಿರುವರು."

ತಸ್ಮಾದ್ದ್ವಿಜಾತಿಭಿರ್ಧಾರ್ಯಮೂರ್ಧ್ವಪುಂಡ್ರಂ ವಿಧಾನತಃ |
ಮೃದಾ ಶುಭ್ರೇಣ ಸತತಂ ಸಾಂತರಾಲಂ ಮನೋಹರಮ್ || (ಹಾರೀತರ ವಚನ)

"ಶಾಸ್ತ್ರೋಕ್ತವಿಧಿಯಿಂದ ಎಲ್ಲಾ ಬ್ರಾಹ್ಮಣರೂ ಶುಭ್ರವಾದ ಮಣ್ಣಿನಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಸುಂದರವಾದ ಈ ಊರ್ಧ್ವಪುಂಡ್ರದ ಮಧ್ಯದಲ್ಲಿ ಸ್ವಲ್ಪ ಸ್ಥಳವನ್ನು ಖಾಲಿಯಾಗಿ ಬಿಟ್ಟು ಧರಿಸಬೇಕು."

ಶುಭ್ರೇಣೈವ ಮೃದಾ ಪಶ್ಚಾದ್ಬಿಭೃಯಾತ್ಸುಸಮಾಹಿತಃ |
ತದಾರಾಧ್ಯೋ ಹರಿರ್ನಿತ್ಯಮೂರ್ಧ್ವಪುಂಡ್ರಂ ವಿಧಾನತಃ ||

"ಶುಭ್ರವಾದ ಮಣ್ಣಿನಿಂದಲೇ ಊರ್ಧ್ವಪುಂಡ್ರವನ್ನು ಧರಿಸಬೇಕು. ಈ ಊರ್ಧ್ವಪುಂಡ್ರವನ್ನು ಧರಿಸಿದ ಮೇಲೆಯೇ ಶ್ರೀಹರಿಯನ್ನು ಆರಾಧಿಸಬೇಕು."

ಮೃದಾ ಶುಭ್ರೇಣ ವಿಧಿವದೂರ್ಧ್ವಪುಂಡ್ರಂ ಪ್ರಧಾರಯೇತ್ || (ಆತ್ರೇಯರ ವಚನ)

"ಶುಭ್ರವಾದ ಮಣ್ಣಿನಿಂದ ವಿಧಿಪ್ರಕಾರವಾಗಿ ಊರ್ಧ್ವಪುಂಡ್ರವನ್ನು ಧರಿಸಬೇಕು."

ಏಕಾಂತಿನೋ ಮಹಾಭಾಗಾಃ ಸರ್ವಭೂತಹಿತೇ ರತಾಃ |
ಸಾಂತರಾಲಂ ಪ್ರಕುರ್ವೀರನ್ ಪುಂಡ್ರಂ ಹರಿಪದಾಕೃತಿಮ್ || (ಪಾದ್ಮ ವಚನ)

"ಮಹಾಭಾಗ್ಯಶಾಲಿಗಳೂ ಸರ್ವಪ್ರಾಣಿಗಳ ಹಿತದಲ್ಲಿ ನಿರತರೂ ಆಗಿರುವ ಏಕಾಂತ ಭಕ್ತರೂ ಸಹ ಶ್ರೀಹರಿಯ ಪಾದದ ಆಕಾರದಿಂದಲೂ, ಮಧ್ಯದಲ್ಲಿ ಖಾಲಿಯಾಗಿಯೂ ಇರುವ ಊರ್ಧ್ವಪುಂಡ್ರಗಳನ್ನು ಧರಿಸುತ್ತಿರುವರು."

ಪಾದಾಕಾರಂ ಹರೇರ್ಧಾರ್ಯಮೂರ್ಧ್ವಪುಂಡ್ರಂ ಮನೋಹರಮ್ |
ದಂಡಾಕಾರಂ ತು ಶೋಭಾಢ್ಯಂ ಮಧ್ಯೇ ಛಿದ್ರಂ ಪ್ರಕಲ್ಪಯೇತ್ ||
ತಸ್ಮಾಚ್ಛಿದ್ರಾನ್ವಿತಂ ಪುಂಡ್ರಂ ದಂಡಾಕಾರಂ ವಿಧೀಯತೇ || (ಪಾದ್ಮ ಪುರಾಣ)

"ಊರ್ಧ್ವಪುಂಡ್ರವು ಶ್ರೀಹರಿಯ ಪಾದದ ಆಕಾರಕ್ಕೆ ಸಮವಾದ ಆಕಾರದಿಂದ ಯುಕ್ತವಾಗಿರಬೇಕು. ಅದರ ಮಧ್ಯದಲ್ಲಿ ಕೋಲಿನಂತೆ ಉದ್ದವೂ, ಕೃಶವೂ ಆಗಿರುವ ಮೇಲ್ಮುಖವಾದ ಖಾಲಿಜಾಗವನ್ನು ಬಿಡಬೇಕು. ಆದ್ದರಿಂದಲೇ ಛಿದ್ರಯುಕ್ತವಾಗಿರುವ ಊರ್ಧ್ವಪುಂಡ್ರವು ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿದೆ.

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥವಾ ಯತಿಃ |
ಅವಶ್ಯಂ ಧಾರಯೇತ್ಪುಣ್ಯಮೂರ್ಧ್ವಪುಂಡ್ರಂ ಸುಶೋಭನಮ್ ||
ಸರ್ವವರ್ಣೇಷು ಮದ್ಭಕ್ತಾಃ ಕುರ್ವೀರನ್ನೂರ್ಧ್ವಪುಂಡ್ರಕಮ್ |
ಬ್ರಾಹ್ಮಣಶ್ಚ ವಿಶೇಷೇಣ ಜಪಹೋಮಪರಾಯಣಃ || (ಬ್ರಹ್ಮಾಂಡಪುರಾಣ)

"ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ನಾಲ್ಕು ಆಶ್ರಮದವರೂ, ಎಲ್ಲಾ ಜಾತಿಯಲ್ಲಿ ಹುಟ್ಟಿರುವ ನನ್ನ ಭಕ್ತರೂ, ಊರ್ಧ್ವಪುಂಡ್ರವನ್ನು ಧರಿಸಬೇಕು. ಅದರಲ್ಲಿಯೂ ಜಪ ಮತ್ತು ಹೋಮಗಳನ್ನು ಬಿಡದೆ ಯಾವಾಗಲೂ ಮಾಡುತ್ತಿರುವ ಬ್ರಾಹ್ಮಣನು ಅವಶ್ಯವಾಗಿ ಧರಿಸಲೇಬೇಕು."

### ಊರ್ಧ್ವಪುಂಡ್ರಧಾರಣಕ್ಕೆ ನಿಮಿತ್ತಗಳು

ಮೇಽತಿಪ್ರಿಯಾರ್ಥಂ ಶುಭ್ರಾರ್ಥಂ ರಕ್ಷಾರ್ಥಂ ಚತುರಾನನ |
ಮದ್ಭಕ್ತೋ ಧಾರಯೇನ್ನಿತ್ಯಮೂರ್ಧ್ವಪುಂಡ್ರಮತಂದ್ರಿತಃ || (ಬ್ರಹ್ಮಾಂಡಪುರಾಣ)

"ಊರ್ಧ್ವಪುಂಡ್ರಧಾರಣೆಗೆ ಮೂರು ಪ್ರಯೋಜನಗಳಿವೆ. (1) ನನ್ನ ವಿಶೇಷ ಪ್ರೀತಿ. (2) ಪಾಪಪರಿಹಾರ ಮತ್ತು ಶುದ್ಧಿ. (3) ರಕ್ಷೆ, ನನ್ನ ಭಕ್ತನು ಈ ಮೂರು ವಿಧವಾದ ಪ್ರಯೋಜನಗಳಿಗಾಗಿ ಬೇಸರ ಪಡದೆ ಊರ್ಧ್ವಪುಂಡ್ರವನ್ನು ಯಾವಾಗಲೂ ಧರಿಸಬೇಕು."

ಸ್ವಾಧ್ಯಾಯೇ ಭೋಜನೇ ಚೈವ ಹೋಮೇ ಮಂಗಲಕರ್ಮಣಿ |
ಊರ್ಧ್ವಪುಂಡ್ರಧರೋ ಭೂತ್ವಾ ರಕ್ಷಸಾಂ ಚಾಪನುತ್ತಯೇ || (ಸಂಗ್ರಹ ವಚನ)

"ಶಾಸ್ತ್ರಾಧ್ಯಯನ, ಭೋಜನ, ಹೋಮ ಮತ್ತು ವಿವಾಹ ಮುಂತಾದ ಮಂಗಳ ಕಾರ್ಯಗಳಲ್ಲಿ ಶ್ರೇಯೋಭಿವೃದ್ಧಿಗಾಗಿಯೂ, ಸತ್ಕಾರ್ಯಗಳಿಗೂ, ಮಂಗಲಕಾರ್ಯಗಳಿಗೂ ವಿಘ್ನವನ್ನು ಮಾಡುತ್ತಿರುವ ರಾಕ್ಷಸರ ನಾಶಕ್ಕಾಗಿಯೂ, ಊರ್ಧ್ವಪುಂಡ್ರವನ್ನು ಧರಿಸಬೇಕು."

ಹೋಮಪೂಜಾದಿಸಮಯೇ ಸಾಯಂ ಪ್ರಾತಃ ಸಮಾಹಿತಃ |
ಊರ್ಧ್ವಪುಂಡ್ರಧರೋ ವಿಪ್ರೋ ಭವೇಚ್ಛುದ್ಧೋ ನ ಚಾನ್ಯಥಾ || (ಬೋಧಾಯನವಚನ)

"ಬೆಳಿಗ್ಗೆ ಮತ್ತು ಸಾಯಂಕಾಲಗಳಲ್ಲಿ ಹೋಮ, ಪೂಜಾ ಮುಂತಾದ ಶಾಸ್ತ್ರೀಯ ಕರ್ಮಗಳನ್ನು ಮಾಡುತ್ತಿರುವಾಗ ಊರ್ಧ್ವಪುಂಡ್ರವನ್ನು ಧರಿಸುವ ಬ್ರಾಹ್ಮಣನು ಕರ್ಮಗಳನ್ನು ಮಾಡುವುದಕ್ಕೆ ಉಪಯುಕ್ತವಾದ ಶುದ್ಧಿಯನ್ನು ಪಡೆಯುವನು. ಇಲ್ಲದಿದ್ದರೆ ಇಲ್ಲ."

ನಿತ್ಯಂ ನೈಮಿತ್ತಿಕಂ ಚೈವ ಲೌಕಿಕಂ ಕರ್ಮ ವೈದಿಕಮ್ |
ಊರ್ಧ್ವಪುಂಡ್ರಾಂಕಿತಂ ಕುರ್ಯಾತ್ತತ್ತತ್ಫಲಮವಾಪ್ನುಯಾತ್ || (ನಾರದೀಯಪುರಾಣ)

"ಸಂಧ್ಯಾವಂದನ ಮುಂತಾದ ನಿತ್ಯಕರ್ಮ, ಗ್ರಹಣಸ್ನಾನ ಮುಂತಾದ ನೈಮಿತ್ತಿಕಕರ್ಮ, ಸ್ಮೃತಿಗಳಲ್ಲಿ ಹೇಳಿದ ಕರ್ಮ, ವೇದದಲ್ಲಿ ಹೇಳಿದ ಕರ್ಮ ಮುಂತಾದ ಎಲ್ಲಾ ಕರ್ಮಗಳನ್ನು ಮಾಡುತ್ತಿರುವಾಗಲೂ ಊರ್ಧ್ವಪುಂಡ್ರವನ್ನು ಧರಿಸುವವನು ಅವುಗಳಿಗೆ ಯೋಗ್ಯವಾದ ಫಲವನ್ನು ಪಡೆಯುವನು."

ಮದಾರಾಧನಕಾಲೇ ಚ ಸದಾ ಯಜ್ಞಾದಿಕರ್ಮಣಿ |
ಅವಶ್ಯಂ ಧಾರಯೇದೇವ ಊರ್ಧ್ವಪುಂಡ್ರಂ ದ್ವಿಜೋತ್ತಮಃ ||
ಯಜ್ಞದಾನತಪೋಹೋಮಜಪಸ್ವಾಧ್ಯಾಯಕರ್ಮಸು |
ತತ್ಫಲಪ್ರಾಪ್ತಯೇಽವಶ್ಯಂ ಧಾರಯೇದೂರ್ಧ್ವಪುಂಡ್ರಕಮ್ || (ಬ್ರಹ್ಮಾಂಡಪುರಾಣ)

"ಇದು ಶ್ರೀಹರಿಯು ಹೇಳಿದ ಮಾತು. ನನ್ನನ್ನು ಪೂಜಿಸುವಾಗಲೂ, ಯಜ್ಞ, ದಾನ, ತಪಸ್ಸು, ಹೋಮ, ಜಪ ವೇದಾಧ್ಯಯನ ಮುಂತಾದ ಎಲ್ಲಾ ಕರ್ಮಗಳನ್ನು ಮಾಡುತ್ತಿರುವಾಗಲೂ, ಊರ್ಧ್ವಪುಂಡ್ರವನ್ನು ಅವಶ್ಯವಾಗಿ ಧರಿಸಬೇಕು. ಇದರಿಂದ ಆ ಕರ್ಮಗಳ ಫಲವು ಬರುತ್ತದೆ."

ಯಜ್ಞೋ ದಾನಂ ತಪಶ್ಚೈವ ಜಪಹೋಮಾದಿಕಂ ಚ ಯತ್ |
ಊರ್ಧ್ವಪುಂಡ್ರಧರಃ ಕುರ್ಯಾತ್ತಸ್ಯ ಪುಣ್ಯಮನಂತಕಮ್ || (ಪಾದ್ಮಪುರಾಣ)

"ಯಜ್ಞ, ದಾನ, ತಪಸ್ಸು, ಹೋಮ ಮುಂತಾದ ಎಲ್ಲಾ ಕರ್ಮಗಳನ್ನೂ ಊರ್ಧ್ವಪುಂಡ್ರವನ್ನು ಧರಿಸಿಯೇ ಮಾಡಬೇಕು. ಇದರಿಂದ ಅನಂತ ಪುಣ್ಯಪ್ರಾಪ್ತಿಯಾಗುತ್ತದೆ."

ಊರ್ಧ್ವಪುಂಡ್ರಧರೋ ವಿದ್ವಾನ್ ಸರ್ವಕೃತ್ಯೇಷು ಸರ್ವದಾ |
ಧಾರಯೇದೂರ್ಧ್ವಪುಂಡ್ರಾಣಿ ಕುಮಾರಸ್ಯಾಸ್ಯ ದೇಶಿಕಃ || (ಆತ್ರೇಯರ ವಚನ)

"ಜ್ಞಾನಿಯು ಎಲ್ಲಾ ಕಾರ್ಯಗಳನ್ನೂ ಯಾವಾಗಲೂ ಊರ್ಧ್ವಪುಂಡ್ರವನ್ನು ಧರಿಸಿಯೇ ಮಾಡಬೇಕು. ತನ್ನ ಮಗನ ಮೂಲಕವಾಗಿಯೂ, ಊರ್ಧ್ವಪುಂಡ್ರವನ್ನು ಧರಿಸುವಂತೆ ಮಾಡಿ ಅವನಿಂದ ಎಲ್ಲಾ ಕಾರ್ಯಗಳನ್ನೂ ಮಾಡಿಸಬೇಕು."

ಧಾರಯೇತ್ಪ್ರಯತಃ ಸಮ್ಯಗೂರ್ಧ್ವಪುಂಡ್ರಂ ಪ್ರಯತ್ನತಃ |

"ಪ್ರಯತ್ನ ಮಾಡಿ ಊರ್ಧ್ವಪುಂಡ್ರವನ್ನು ಚೆನ್ನಾಗಿ ಧರಿಸಬೇಕು. ಮಡಿಯಿಂದ ಧರಿಸಬೇಕು. ಧರಿಸಿದ್ದರಿಂದ ಮಡಿಯು ಅಧಿಕವಾಗುತ್ತದೆ."

ತ್ರಿಸಂಧ್ಯಾಸು ಮೃದಾ ವಿಪ್ರೋ ಯಾಗಕಾಲೇ ವಿಶೇಷತಃ |
ಶ್ರಾದ್ಧೇ ದಾನೇ ತಥಾ ಹೋಮೇ ಸ್ವಾಧ್ಯಾಯೇ ಪಿತೃತರ್ಪಣೇ ||
ಶ್ರದ್ಧಾಲುರೂರ್ಧ್ವಪುಂಡ್ರಂ ತು ಬಿಭ್ರಯಾದ್ದ್ವಿಜಸತ್ತಮಃ || (ಹಾರೀತವಚನ)

"ಮೂರು ಸಂಧ್ಯಾಕಾಲಗಳಲ್ಲಿಯೂ, ಶ್ರಾದ್ಧ ದಾನ ಹೋಮ ವೇದಾಧ್ಯಯನ ಪಿತೃ ತರ್ಪಣ ಮುಂತಾದ ಪಿತೃಯಾಗಾದಿ ಯಾಗಕಾಲಗಳಲ್ಲಿಯೂ, ಶ್ರದ್ಧೆಯಿಂದ ಊರ್ಧ್ವ ಪುಂಡ್ರವನ್ನು ಧರಿಸುವವನು ಬ್ರಾಹ್ಮಣಶ್ರೇಷ್ಠನೆನಿಸುವನು."

(ಮೇಲ್ಕಂಡ ವಾಕ್ಯಗಳಲ್ಲಿ ಕೆಲವು ವಾಕ್ಯಗಳು ಊರ್ಧ್ವಪುಂಡ್ರಧಾರಣಪೂರ್ವಕವಾಗಿ ಕರ್ಮಗಳನ್ನು ಮಾಡಿದ್ದರಿಂದ ದೋಷಪರಿಹಾರವಿರುವುದಾಗಿಯೂ, ಪುಣ್ಯವು ಬರುವುದಾಗಿಯೂ ತಿಳಿಸುತ್ತವೆ. ಮತ್ತೆ ಕೆಲವು ವಾಕ್ಯಗಳು ಊರ್ಧ್ವಪುಂಡ್ರಧಾರಣವನ್ನು ಮಾಡದೆ ಕಾರ್ಯಗಳನ್ನು ಮಾಡುವುದರಿಂದ ಬರುವ ದೋಷಗಳನ್ನು ತಿಳಿಸುತ್ತವೆ. ಇದರಿಂದ ಎಲ್ಲಾ ಜಾತಿ ಮತ್ತು ಆಶ್ರಮಗಳಿಗೆ ಸೇರಿದ ಸರ್ವರೂ ಊರ್ಧ್ವಪುಂಡ್ರವನ್ನು ಧರಿಸಲೇಬೇಕೆಂದು ನಿರ್ಣಯಿಸಿದಂತಾಯಿತು.)

## ಊರ್ಧ್ವಪುಂಡ್ರಧಾರಣಕ್ಕೆ ಯೋಗ್ಯವಾದ ಮೃತ್ತಿಕೆ

ತತಃ ಪ್ರಭೃತಿ ಶುಭ್ರಾಣಿ ಮೃದಾ ಧಾರ್ಯಾಣಿ ನಿತ್ಯಶಃ |
ಆದಾಯ ವೈಷ್ಣವಕ್ಷೇತ್ರೇ ಮೃತ್ತಿಕಾಂ ವಿಮಲಾಂ ಶುಭಾಮ್ ||
ಯತ್ತದ್ದಿವ್ಯಂ ಹರಿಕ್ಷೇತ್ರಂ ಮೃದಮಾದಾಯ ಯತ್ನತಃ |
ಧಾರಯೇದೂರ್ಧ್ವಪುಂಡ್ರಾಣಿ ತ್ರಿಸಂಧ್ಯಾಸು ದ್ವಿಜೋತ್ತಮಃ || (ಪರಾಶರರ ವಚನ)

"ಅತಿ ಪ್ರಸಿದ್ಧವಾದ ವಿಷ್ಣುಕ್ಷೇತ್ರದಲ್ಲಿರುವ ಮೃತ್ತಿಕೆಯನ್ನು ಮಹಾಪ್ರಯತ್ನದಿಂದಲಾದರೂ ಸಂಗ್ರಹಿಸಬೇಕು. ಆ ಮೃತ್ತಿಕೆಯಿಂದ ಶುಭ್ರವಾದ ಊರ್ಧ್ವಪುಂಡ್ರಗಳನ್ನು ಪ್ರಾತಃಕಾಲ, ಮಧ್ಯಾಹ್ನಕಾಲ, ಸಾಯಂಕಾಲ ಎಂಬ ಮೂರು ಸಂಧ್ಯಾ ಕಾಲಗಳಲ್ಲಿಯೂ ಬ್ರಾಹ್ಮಣಶ್ರೇಷ್ಠರೇ ಮೊದಲಾದ ಸರ್ವವೈದಿಕರೂ ಧರಿಸಬೇಕು."

ಯತ್ತು ದಿವ್ಯಂ ಹರಿಕ್ಷೇತ್ರಂ ತತ್ರೈವ ಮೃದಮಾಹರೇತ್ |
ಸೈವ ಶ್ರೇಯೋರ್ಥಿಭಿರ್ಗ್ರಾಹ್ಯಾ ಚೋರ್ಧ್ವಪುಂಡ್ರಸ್ಯ ಧಾರಣೇ || (ಆತ್ರೇಯರ ವಚನ)

"ದಿವ್ಯವಾದ ಹರಿಕ್ಷೇತ್ರದಿಂದಲೇ ಮೃತ್ತಿಕೆಯನ್ನು ಸಂಗ್ರಹಿಸಬೇಕು. ಆ ಮೃತ್ತಿಕೆಯನ್ನೇ ಶ್ರೇಯಸ್ಸನ್ನು ಬಯಸುವ ಸರ್ವರೂ ಊರ್ಧ್ವಪುಂಡ್ರವನ್ನು ಧರಿಸುವುದಕ್ಕಾಗಿ ಉಪಯೋಗಿಸಬೇಕು."

ಪುಣ್ಯಕ್ಷೇತ್ರಸಮುದ್ಭೂತಾಂ ಮೃದಮಾದಾಯ ವೈಷ್ಣವೀಮ್ |
ಪ್ರಣವಾದ್ಯೇನ ಮೂಲೇನ ಕರ್ಮಾರಂಭೇ ಪುನರ್ಜಪೇತ್ || (ಶಾಂಡಿಲ್ಯರ ವಚನ)

"ಪರಮಪುಣ್ಯಕ್ಷೇತ್ರದಲ್ಲಿರುವ ಮೃತ್ತಿಕೆಯಲ್ಲಿ ವಿಷ್ಣುವಿನ ವಿಶೇಷ ಸನ್ನಿಧಾನವಿದೆ. ಆ ಮೃತ್ತಿಕೆಯನ್ನು ಸಂಗ್ರಹಿಸಬೇಕು. ಆ ಮೃತ್ತಿಕೆಯನ್ನು ವೈದಿಕಕರ್ಮಗಳನ್ನು ಆರಂಭಿಸುವುದಕ್ಕೆ ಪೂರ್ವದಲ್ಲಿ ಪ್ರಣವಮಂತ್ರ, ನಾರಾಯಣಾಷ್ಟಾಕ್ಷರಮಂತ್ರ ಮುಂತಾದ ಮೂಲಮಂತ್ರಗಳಿಂದ ಜಪಿಸಬೇಕು. ಅನಂತರದಲ್ಲಿ ಅದರಿಂದ ಊರ್ಧ್ವಪುಂಡ್ರಗಳನ್ನು ಧರಿಸಬೇಕು."

ಆದಾಯ ಪರಯಾ ಭಕ್ತ್ಯಾ ವಿಷ್ಣೋರಾಯತನಾನ್ಮೃದಮ್ |
ಬಿಭೃಯಾದೂರ್ಧ್ವಪುಂಡ್ರಾಣಿ ಲಲಾಟಾದಿಷು ಚ ಕ್ರಮಾತ್ || (ಶಾಂಡಿಲ್ಯರ ವಚನ)

"ವಿಷ್ಣುಕ್ಷೇತ್ರದಿಂದ ಅತ್ಯಂತ ಭಕ್ತಿಯಿಂದ ಮೃತ್ತಿಕೆಯನ್ನು ಸಂಗ್ರಹಿಸಬೇಕು. ಹಣೆ ಮುಂತಾದ ಅವಯವಗಳಲ್ಲಿ ಆ ಮೃತ್ತಿಕೆಯಿಂದ ಕ್ರಮವಾಗಿ ಊರ್ಧ್ವಪುಂಡ್ರಗಳನ್ನು ಧರಿಸಬೇಕು."

ದ್ವಾರವತ್ಯಾಂ ಪ್ರಯಾಗೇ ಚ ಸಾಲಗ್ರಾಮಾಚಲೇ ತಥಾ |
ನೈಮಿಷೇ ಸರಯೂತೀರೇ ಕೌರ್ಮೇ ವೇದಾಚಲೇ ತಥಾ ||
ವೇಂಕಟಾದ್ರೌ ಚ ಸಿಂಹಾ(ಸಹ್ಯಾ)ದ್ರೌ ತಥಾ ನಾರಾಯಣಾಚಲೇ |
ಗೃಹೀತ್ವಾ ಮೃತ್ತಿಕಾಂ ರಮ್ಯಾಂ ಲಲಾಟೇ ಧಾರಯೇತ್ತಥಾ || (ಪಾದ್ಮಪುರಾಣ)

"ದ್ವಾರಕೆ, ಪ್ರಯಾಗ, ಶಾಲಿಗ್ರಾಮಪರ್ವತ, ನೈಮಿಷಾರಣ್ಯ, ಸರಯೂನದೀತೀರ, ಕೂರ್ಮಕ್ಷೇತ್ರ, ವೇದಾಚಲ, ವೇಂಕಟಾಚಲ, ಸಹ್ಯಾದ್ರಿ, ಸಿಂಹಾಚಲ, ನಾರಾಯಣಾಚಲ ಮುಂತಾದ ವೈಷ್ಣವಕ್ಷೇತ್ರಗಳಲ್ಲಿರುವ ರಮ್ಯ ಮೃತ್ತಿಕೆಯನ್ನು ಸಂಗ್ರಹಿಸಬೇಕು. ಆ ಮೃತ್ತಿಕೆಯಿಂದ ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸಬೇಕು."

ದ್ವಾರವತ್ಯಾಂ ಸಮುದ್ಭೂತಚಂದನೇನಾಂಕನಂ ದ್ವಿಜಃ |
ಸಾಂತರಾಲಂ ಪ್ರಕುರ್ವೀತ ಪುಂಡ್ರಂ ಹರಿಪದಾಕೃತಿ || (ಹಾರೀತರ ವಚನ)

"ದ್ವಾರಕೆಯಲ್ಲಿ ಹುಟ್ಟಿದ ಗೋಪೀಚಂದನವೆಂಬ ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಆ ಊರ್ಧ್ವಪುಂಡ್ರದ

ಮಧ್ಯದಲ್ಲಿ ಖಾಲಿಯಾದ ಸ್ಥಳವಿರಬೇಕು. ಆ ಪುಂಡ್ರವು ಶ್ರೀಹರಿಯ ಪಾದದ ಆಕಾರಕ್ಕೆ ಸಮವಾದ ಆಕಾರದಿಂದ ಯುಕ್ತವಾಗಿರಬೇಕು."

ಅನ್ಯಸ್ಮಿನ್ವೈಷ್ಣವಕ್ಷೇತ್ರೇ ಮೃದಮಾದಾಯ ಬುದ್ಧಿಮಾನ್ ।
ಸಾಂತರಾಲೋರ್ಧ್ವಪುಂಡ್ರಂ ತು ದಂಡಾಕಾರಂ ಧರೇದ್ದ್ವಿಜಃ ॥ (ಹಾರೀತರ ವಚನ)

"ದ್ವಾರಕೆಯನ್ನು ಬಿಟ್ಟು ಉಳಿದ ವೈಷ್ಣವಕ್ಷೇತ್ರಗಳಲ್ಲಿಯೂ ಇರುವ ಮಣ್ಣನ್ನು ಸಂಗ್ರಹಿಸಬೇಕು. ಬುದ್ಧಿವಂತರಾದ ಬ್ರಾಹ್ಮಣರು ಈ ಮೃತ್ತಿಕೆಯಿಂದ ನಡುವಿನಲ್ಲಿ ರಂಧ್ರದಿಂದ ಯುಕ್ತವಾಗಿರುವ ಊರ್ಧ್ವಪುಂಡ್ರಗಳನ್ನು ಧರಿಸಬೇಕು."

ದ್ವಾರವತ್ಯಾಂ ಶುಭೇ ರಮ್ಯೇ ವಾಸುದೇವಗೃಹೇ ತಥಾ ।
ತತ್ರೋದ್ಭವಾಂ ಮೃದಂ ಶುಭ್ರಾಮಾದಾಯ ದ್ವಿಜಸತ್ತಮಃ ॥
ಧಾರಯೇದೂರ್ಧ್ವಪುಂಡ್ರಾಣಿ ಸರ್ವಕರ್ಮಫಲಾಪ್ತಯೇ ।
ಆದಾಯ ಪರಯಾ ಭಕ್ತ್ಯಾ ಗಂಗಾತೀರೋದ್ಭವಾಂ ಮೃದಮ್ ॥
ತಯಾ ಧೃತ್ವೋರ್ಧ್ವಪುಂಡ್ರಾಣಿ ಸರ್ವಯಜ್ಞಫಲಂ ಲಭೇತ್ ।
ಯತ್ರ ದಿವ್ಯಂ ಹರೇಃ ಕ್ಷೇತ್ರಂ ತತ್ರೈವ ಮೃದಮಾಹರೇತ್ ॥
ಸೈವ ಶ್ರೇಯೋರ್ಥಿಭಿರ್ಗ್ರಾಹ್ಯಾ ಊರ್ಧ್ವಪುಂಡ್ರಸ್ಯ ಧಾರಣೇ ।
ಪರ್ವತಾಗ್ರೇ ನದೀತೀರೇ ಬಿಲ್ವಮೂಲೇ ಜಲಾಶಯೇ ॥
ಸಿಂಧುತೀರೇ ಚ ವಲ್ಮೀಕೇ ಹರಿಕ್ಷೇತ್ರೇ ವಿಶೇಷತಃ ।
ವಿಷ್ಣೋಃ ಸ್ನಾನೋದಕಂ ಯತ್ರ ಪ್ರವಹೇತ ದಿನೇ ದಿನೇ ॥
ಪುಂಡ್ರಾಣಾಂ ಧಾರಣಾರ್ಥಾಯ ಗೃಹ್ಣೀಯಾತ್ತತ್ರ ಮೃತ್ತಿಕಾಮ್ ।
ಶ್ರೀರಂಗೇ ವೇಂಕಟಾದ್ರೌ ಚ ಶ್ರೀಕೂರ್ಮೇ ದ್ವಾರಕೇ ಶುಭೇ ॥
ಪ್ರಯಾಗೇ ನಾರಸಿಂಹಾದ್ರೌ ವಾರಾಹೇ ತುಲಸೀವನೇ ।
ಗೃಹೀತ್ವಾ ಮೃತ್ತಿಕಾಂ ಭಕ್ತ್ಯಾ ವಿಷ್ಣುಪಾದಜಲೈಃ ಸಹ ॥
ಧೃತ್ವಾ ಪುಂಡ್ರಾಣಿ ಚಾಂಗೇಷು ವಿಷ್ಣುಸಾಯುಜ್ಯಮಾಪ್ನುಯಾತ್ । (ಪಾದ್ಮಪುರಾಣ)

"ಪರಮಪಾವನವಾದ ದ್ವಾರಕೆಯಲ್ಲಿ ಶ್ರೀಕೃಷ್ಣದೇವನ ಮನೆಯಲ್ಲಿರುವ ಶುಭ್ರವಾದ ಮೃತ್ತಿಕೆಯನ್ನು ಸಂಗ್ರಹಿಸಬೇಕು. ಆ ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಅನಂತರದಲ್ಲಿ ಮಾಡುವ ಎಲ್ಲಾ ಕರ್ಮಗಳ ಫಲಗಳೂ ಸಿಗುತ್ತವೆ. ಗಂಗಾತೀರದಲ್ಲಿ ಹುಟ್ಟಿದ ಮೃತ್ತಿಕೆಯನ್ನು ಅತ್ಯಂತ ಭಕ್ತಿಯಿಂದ ಸಂಗ್ರಹಿಸಬೇಕು. ಆ ಮೃತ್ತಿಕೆಯಿಂದ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಇದರಿಂದ ಎಲ್ಲಾ ಯಜ್ಞಗಳ ಫಲವೂ ಸಿಗುತ್ತದೆ. ಯಾವ ಸ್ಥಳದಲ್ಲಿ ವಿಷ್ಣುವಿನ ದಿವ್ಯಕ್ಷೇತ್ರವಿದೆಯೋ ಆ ವಿಷ್ಣುಕ್ಷೇತ್ರದಿಂದಲೇ ಮೃತ್ತಿಕೆಯನ್ನು ಸಂಗ್ರಹಿಸಬೇಕು. ಆ ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನು ಧರಿಸಿದರೆ ಎಲ್ಲಾ ಶ್ರೇಯಸ್ಸುಗಳೂ ಸಿಗುತ್ತವೆ. ಪರ್ವತದ ಮೇಲ್ಭಾಗ, ನದೀತೀರ, ಬಿಲ್ವವೃಕ್ಷದ ಬುಡ, ಸರೋವರ, ಸಮುದ್ರತೀರ, ಹುತ್ತ, ವಿಷ್ಣುಕ್ಷೇತ್ರಗಳು, ವಿಷ್ಣುವಿಗೆ ಅಭಿಷೇಕ ಮಾಡಿದ ಜಲವು ಪ್ರತಿದಿನದಲ್ಲಿಯೂ ಹರಿಯುತ್ತಿರುವ ಸ್ಥಳ, ಇವುಗಳಿಂದ ಊರ್ಧ್ವಪುಂಡ್ರಧಾರಣಕ್ಕೆ ಬೇಕಾದ ಮೃತ್ತಿಕೆಯನ್ನು ಸಂಗ್ರಹಿಸಬೇಕು. ಶ್ರೀರಂಗ, ವೇಂಕಟಾಚಲ, ಕೂರ್ಮಕ್ಷೇತ್ರ, ಪಾವನವಾದ ದ್ವಾರಕಾಕ್ಷೇತ್ರ, ಪ್ರಯಾಗ, ನರಸಿಂಹಾಚಲ, ವರಾಹಪರ್ವತ, ತುಲಸೀವನ ಮುಂತಾದ ಸ್ಥಳಗಳಿಂದ ಅತ್ಯಂತ ಭಕ್ತಿಯಿಂದ ಮೃತ್ತಿಕೆಯನ್ನು ಸಂಗ್ರಹಿಸಬೇಕು. ಆ ಮೃತ್ತಿಕೆಯಿಂದ ಅಂಗಗಳಲ್ಲಿ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಇದರಿಂದ ವಿಷ್ಣುಸಾಯುಜ್ಯಮುಕ್ತಿಯು ಸಿಗುತ್ತದೆ."

## ಮೃತ್ತಿಕೆಯ ಬಣ್ಣ ವಿಶೇಷದಿಂದ ಬರುವ ಫಲ

ಶ್ಯಾಮಂ ಶಾಂತಿಕರಂ ಪ್ರೋಕ್ತಂ ರಕ್ತಂ ವಶ್ಯಕರಂ ತಥಾ |
ಶ್ರೀಕರಂ ಪೀತಮಿತ್ಯಾಹುಃ ಶ್ವೇತಂ ಮೋಕ್ಷಪ್ರದಂ ಶುಭಮ್ || (ಪಾದ್ಮಪುರಾಣ)

"ನೀಲಮೃತ್ತಿಕೆಯು ಶಾಂತಿಯನ್ನು ಕೊಡುತ್ತದೆ. ರಕ್ತವರ್ಣದ ಮೃತ್ತಿಕೆಯು ವಶೀಕರಣವನ್ನು ಮಾಡುತ್ತದೆ. ಹಳದಿಮೃತ್ತಿಕೆಯು ಸಂಪತ್ಕರವಾಗುತ್ತದೆ. ಬಿಳಿಬಣ್ಣದ ಮೃತ್ತಿಕೆಯು ಮೋಕ್ಷಪ್ರದವಾಗುತ್ತದೆ."

ಶ್ಯಾಮಂ ಶಾಂತಿಕರಂ ಪ್ರೋಕ್ತಂ ರಕ್ತಂ ವಶ್ಯಕರಂ ಭವೇತ್ |
ಶ್ರೀಕರಂ ಪೀತಮಿತ್ಯಾಹುರ್ಮುಕ್ತಿದಂ ಶ್ವೇತಮುಚ್ಯತೇ || (ಬ್ರಹ್ಮಾಂಡಪುರಾಣ)

"ನೀಲಮೃತ್ತಿಕೆಯು ಶಾಂತಿಕರ. ರಕ್ತಮೃತ್ತಿಕೆಯು ವಶ್ಯಕರ. ಹಳದಿಮೃತ್ತಿಕೆಯು ಸಂಪತ್ಕರ. ಶ್ವೇತಮೃತ್ತಿಕೆಯು ಮೋಕ್ಷಕರವಾಗುತ್ತದೆ."

ನ ಚ ಭಾಗವತಃ ಕುರ್ಯಾದೂರ್ಧ್ವಪುಂಡ್ರಮಮೃತ್ತಿಕಮ್ |
ಧಾರಣಾದೇವ ಮೃತ್ಸ್ನಾಯಾಃ ಪ್ರೀಯತೇ ಧರಣೀಧರಃ ||
ಅಸಂಕಲ್ಪಿತಯಾ ಸ್ನಿಗ್ಧಯಾ ತಯಾ ಶ್ಲಕ್ಷ್ಣಯಾ ಮೃದಾ |
ಊರ್ಧ್ವಪುಂಡ್ರಾಣಿ ಸೌಮ್ಯಾನಿ ಕುರ್ಯಾತ್ಸುರಭಿಗಂಧಯಾ || (ಭರದ್ವಾಜವಚನ)

"ಭಗವದ್ಭಕ್ತನು ಮೃತ್ತಿಕೆಯಿಲ್ಲದೆ ಭಸ್ಮ ಮುಂತಾದವುಗಳಿಂದ ಊರ್ಧ್ವಪುಂಡ್ರವನ್ನು ಧರಿಸಲೇಬಾರದು. ಮೃತ್ತಿಕೆಯನ್ನು ಧರಿಸಿದ ಮಾತ್ರದಿಂದ ಮೃತ್ತಿಕಾರೂಪವಾದ ಭೂಮಿಯನ್ನು ಧರಿಸಿದ ಶ್ರೀಹರಿಯು ಪ್ರೀತನಾಗವನು. ಈ ಮೃತ್ತಿಕೆಯು ಸುಗಂಧದಿಂದ ಯುಕ್ತವಾಗಿರಬೇಕು. ಮೃದುವಾಗಿರಬೇಕು. ಸುಂದರವಾಗಿರಬೇಕು. ಫಳ ಫಳ ಹೊಳೆಯುತ್ತಿರಬೇಕು. ಇದೇ ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನು ಧರಿಸುತ್ತೇನೆ ಎಂದು ಯಾರೂ ಸಂಕಲ್ಪಿಸಿರಬಾರದು. ಅಂದರೆ ಹಿಂದೆ ಹೇಳಿದ ಲಕ್ಷಣಗಳಿಂದ ಯುಕ್ತವಾಗಿರುವ ಯಾವುದಾದರೊಂದು ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಈ ಮೃತ್ತಿಕೆಯಿಂದ ಸುಂದರವಾದ ಊರ್ಧ್ವಪುಂಡ್ರಗಳನ್ನು ಧರಿಸಬೇಕು."

(ಹಿಂದೆ ಹೇಳಿದ ಎಲ್ಲಾ ಲಕ್ಷಣಗಳೂ ಗೋಪೀಚಂದನದಲ್ಲಿರುವುದರಿಂದ ಗೋಪೀಚಂದನವು ಊರ್ಧ್ವಪುಂಡ್ರಧಾರಣಕ್ಕೆ ಶ್ರೇಷ್ಠವಾದುದು.) ಇದು ಸ್ಮೃತಿಮುಕ್ತಾವಲೀಕಾರರ ವಚನ.

ಮೃದಮಾದಾಯ ಕೃಷ್ಣಾಯಾಸ್ತುಲಸ್ಯಾ ಮೂಲಸಂಭವಾಮ್ |
ಧಾರಯೇದೂರ್ಧ್ವಪುಂಡ್ರಾಣಿ ತ್ರಿಸಂಧ್ಯಾಸು ದ್ವಿಜೋತ್ತಮಃ || (ಪರಾಶರರ ವಚನ)

"ಕೃಷ್ಣತುಳಸೀಗಿಡದ ಬುಡದಲ್ಲಿರುವ ಮೃತ್ತಿಕೆಯಿಂದ ಮೂರು ಸಂಧ್ಯಾಕಾಲಗಳಲ್ಲಿಯೂ ಊರ್ಧ್ವಪುಂಡ್ರಗಳನ್ನು ಧರಿಸಬೇಕು."

ಹರಿಕ್ಷೇತ್ರೇ ಸಮುದ್ಭೂತಮೃದಾ ವಾ ತುಲಸೀಮೃದಾ |
ದ್ವಾದಶೈವ ತು ಪುಂಡ್ರಾಣಿ ಧಾರಯೇದ್ದ್ವಿಜಸತ್ತಮಃ || (ಆತ್ರೇಯರ ವಚನ)

"ವಿಷ್ಣುಕ್ಷೇತ್ರಗಳಲ್ಲಿ ಹುಟ್ಟಿರುವ ಮೃತ್ತಿಕೆ ಅಥವಾ ತುಳಸೀಮೃತ್ತಿಕೆ ಇವುಗಳಿಂದಲೇ ಬ್ರಾಹ್ಮಣಶ್ರೇಷ್ಠರೇ ಮೊದಲಾದ ವಿಷ್ಣುಭಕ್ತರು ಹನ್ನೆರಡು ಊರ್ಧ್ವಪುಂಡ್ರಗಳನ್ನು ಧರಿಸಬೇಕು."

ಶ್ರೀಕೃಷ್ಣತುಳಸೀಮೂಲೇ ಮೃದಮಾದಾಯ ಭಕ್ತಿಮಾನ್ |
ಧಾರಯೇದೂರ್ಧ್ವಪುಂಡ್ರಾಣಿ ಸರ್ವಕಾಮಫಲಾಪ್ತಯೇ || (ಪದ್ಮಪುರಾಣ ವಚನ)

"ವಿಷ್ಣುಭಕ್ತನು ಕೃಷ್ಣತುಳಸೀಗಿಡದ ಬುಡದಿಂದ ಮೃತ್ತಿಕೆಯನ್ನು ಸಂಗ್ರಹಿಸಿ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಇದರಿಂದ ಅವನು ಅಪೇಕ್ಷಿಸಿದ ಫಲಗಳು ಸಿಗುತ್ತವೆ."

ಅಥವಾ ತುಲಸೀಮೂಲೇ ಬಿಲ್ವಮೂಲೇಽಪಿ ವಾ ದ್ವಿಜಃ |
ಭಕ್ತ್ಯಾ ವೈ ಮೃದಮಾದಾಯ ಬಿಭೃಯಾತ್ಪುಂಡ್ರಮುತ್ತಮಮ್ || (ಆತ್ರೇಯರ ವಚನ)

"ತುಳಸೀಗಿಡದ ಬುಡ ಅಥವಾ ಬಿಲ್ವಮರದ ಬುಡ ಇವುಗಳಿಂದ ಮೃತ್ತಿಕೆಯನ್ನು ಸಂಗ್ರಹಿಸಬೇಕು. ಆ ಮೃತ್ತಿಕೆಯಿಂದ ಭಕ್ತಿಯಿಂದ ಉತ್ತಮವಾದ ಊರ್ಧ್ವಪುಂಡ್ರಗಳನ್ನು ಧರಿಸಬೇಕು."

ಆದಾಯ ಪರಯಾ ಭಕ್ತ್ಯಾ ತುಳಸೀಮೂಲಮೃತ್ತಿಕಾಮ್ |
ಧಾರಯೇದೂರ್ಧ್ವಪುಂಡ್ರಾಣಿ ಸರ್ವಕಾಮಫಲಾಪ್ತಯೇ || (ಹಾರೀತರ ವಚನ)

"ತುಂಬಾ ಭಕ್ತಿಯಿಂದ ತುಳಸೀಗಿಡದ ಬುಡದಲ್ಲಿರುವ ಮೃತ್ತಿಕೆಯನ್ನು ಸ್ವೀಕರಿಸಬೇಕು. ಅದರಿಂದ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಇದರಿಂದ ಅಪೇಕ್ಷಿಸಿದ ಫಲಗಳು ಸಿಗುತ್ತವೆ.

ಯಸ್ಮಿನ್ ಕಸ್ಮಿನ್ ಮಹಾಭಾಗಾ ವೈಷ್ಣವಾ ಧಾರಯಂತಿ ವೈ |
ತಸ್ಮಿನ್ ವೈ ಮೃತ್ತಿಕಾ ಗ್ರಾಹ್ಯಾ ಶುಭ್ರಾ ರಮ್ಯಾ ಸುನಿರ್ಮಲಾ || (ಪದ್ಮಪುರಾಣ ವಚನ)

"ಮಹಾಭಾಗ್ಯಶಾಲಿಗಳಾದ ವಿಷ್ಣುಭಕ್ತರು ಯಾವ ದೇಶದಲ್ಲಿರುವ ಮೃತ್ತಿಕೆಯನ್ನು ಸಂಗ್ರಹಿಸಿ ಧರಿಸುತ್ತಿರುವರೋ ಆ ದೇಶದಲ್ಲಿರುವ ಶುಭ್ರವೂ, ಅತಿನಿರ್ಮಲವೂ, ರಮ್ಯವೂ ಆಗಿರುವ ಮೃತ್ತಿಕೆಯನ್ನು ಸ್ವೀಕರಿಸಬೇಕು."

ನ ಚಂದನಾದಿಭಿರ್ಗಂಧೈಃ ಕರ್ತವ್ಯಂ ನ ಚ ಭಸ್ಮನಾ |
ನ ಮೃದ್ಭಿಶ್ಚಾಪ್ರಶಸ್ತಾಭಿರೂರ್ಧ್ವಪುಂಡ್ರಂ ಕದಾಚನ ||
ತಮಸೋ ಭಸ್ಮ ರಜಸೋ ಗಂಧಃ ಸತ್ವಸ್ಯ ಮೃತ್ತಿಕಾ |
ತಸ್ಮಾದ್ಭಸ್ಮಾದಿಭಿರ್ನೇಚ್ಛೇದೇಕಾಂತೀ ಸಿದ್ಧಿಮಾತ್ಮನಃ || (ಭರದ್ವಾಜಸಂಹಿತಾ)

"(1) ಚಂದನ ಮುಂತಾದ ಸುಗಂಧದ್ರವ್ಯಗಳು (2) ಭಸ್ಮ (3) ಅಪ್ರಶಸ್ತವಾದ ಮೃತ್ತಿಕೆ ಇವುಗಳಿಂದ ಊರ್ಧ್ವಪುಂಡ್ರವನ್ನು ಧರಿಸಬಾರದು. ಭಸ್ಮವು ತಮೋಗುಣದಿಂದಲೂ, ಗಂಧವಸ್ತುಗಳು ರಜೋಗುಣದಿಂದಲೂ, ಗೋಪೀಚಂದನ ಮುಂತಾದ ಮೃತ್ತಿಕೆಗಳು ಸತ್ವಗುಣದಿಂದಲೂ ಯುಕ್ತವಾಗಿವೆ. ಆದ್ದರಿಂದ ಶ್ರೀಹರಿಯಲ್ಲಿ ದೃಢಭಕ್ತಿಯುಳ್ಳವನು ತಾನು ಮಾಡುವ ಕಾರ್ಯದಿಂದ ಸಿದ್ಧಿಯನ್ನು ಬಯಸುವುದಾಗಿದ್ದರೆ ಭಸ್ಮ ಮುಂತಾದವುಗಳಿಂದ ಊರ್ಧ್ವಪುಂಡ್ರವನ್ನು ಧರಿಸಬಾರದು."

ಚಂದನಂ ಚ ಹರಿದ್ರಾಂ ತಥಾ ಭಸ್ಮಾಗ್ನಿಹೋತ್ರಜಮ್ |
ಸರ್ವಂ ವಶ್ಯಕರಂ ಪ್ರೋಕ್ತಮೂರ್ಧ್ವಪುಂಡ್ರಸ್ಯ ಧಾರಣಾತ್ || (ಪದ್ಮಪುರಾಣ ವಚನ)

ಹಿಂದೆ ಗೋಪೀಚಂದನ ಮುಂತಾದವುಗಳಿಂದ ಊರ್ಧ್ವಪುಂಡ್ರವನ್ನು ಧರಿಸಬೇಕೆಂದು ತಿಳಿಸಿದೆವು. ಅವುಗಳು ಪ್ರಯತ್ನಿಸಿ ಸಿಗದಿದ್ದಾಗ ಊರ್ಧ್ವಪುಂಡ್ರಗಳನ್ನು ಧರಿಸುವುದಕ್ಕೆ ಉಪಯುಕ್ತವಾಗುವ ವಸ್ತುಗಳನ್ನು ಈಗ ತಿಳಿಸುತ್ತಿರುವೆವು. "(1) ಗಂಧ. (2) ಅರಿಶಿನ. (3) ಅಗ್ನಿಹೋತ್ರ ಹೋಮದ ಕುಂಡದಲ್ಲಿರುವ ಭಸ್ಮ ಇವುಗಳಿಂದ ಊರ್ಧ್ವಪುಂಡ್ರವನ್ನು ಧರಿಸಿದರೆ ವಶ್ಯವು ಏರ್ಪಡುತ್ತದೆ."

ಚಂದನೇನ ಮೃದಾ ವಾಪಿ ಮಂತ್ರಪೂತೇನ ಭಸ್ಮನಾ |
ಧಾರಯೇದೂರ್ಧ್ವಪುಂಡ್ರಾಣಿ ನಾಮಭಿಃ ಕೇಶವಾದಿಭಿಃ ||

"(1) ಗಂಧ (2) ಮೃತ್ತಿಕೆ (3) ಮಂತ್ರಿಸಲ್ಪಟ್ಟ ಭಸ್ಮ ಈ ಮೂರರಲ್ಲಿ ಯಾವುದಾದರೂ ಒಂದರಿಂದ ಊರ್ಧ್ವಪುಂಡ್ರಗಳನ್ನು

ಧರಿಸಬೇಕು. ಕೇಶವ ಮುಂತಾದ ಹನ್ನೆರಡು ಹೆಸರುಗಳಲ್ಲಿ ಒಂದೊಂದು ಹೆಸರನ್ನು ಉಚ್ಚರಿಸುತ್ತಾ ಒಂದೊಂದು ಊರ್ಧ್ವಪುಂಡ್ರವನ್ನು ಧರಿಸಬೇಕು."

ಊರ್ಧ್ವಪುಂಡ್ರಂ ದ್ವಿಜಃ ಕುರ್ಯಾದ್ಭಸ್ಮಮೃದ್ಗೋಪೀಚಂದನೈಃ |
ಕರ್ಮಾಂಗಮಿದಮೇವ ಸ್ಯಾನ್ನಾನ್ಯಥಾ ತು ಕಥಂಚನ ||

ಭಸ್ಮಚಂದನೇನ ಅಗ್ನಿಹೋತ್ರವಿಷ್ಣ್ವರ್ಪಿತೇನ ಧೃತ್ವಾ ಕರ್ಮ ಕುರ್ಯಾತ್, ಏತದ್ಭಸ್ಮೋರ್ಧ್ವಪುಂಡ್ರಧಾರಣಂ ನ ವೈಷ್ಣವಾನಾಂ "ತಸ್ಮಾದ್ಭಸ್ಮಾದಿನಾ ನೇಚ್ಛೇತ್" ಇತ್ಯಾದ್ಯುಕ್ತವಚನೇಭ್ಯಃ. (ಸ್ಮೃತಿಮುಕ್ತಾವಲೀಕಾರರ ನಿರ್ಣಯ).

"(1) ಅಗ್ನಿಹೋತ್ರದಲ್ಲಿ ಏರ್ಪಟ್ಟಿರುವ ಭಸ್ಮ. (2) ಗೋಪೀಚಂದನ ಮುಂತಾದ ಮತ್ತಿಕೆಗಳು. (3) ಶ್ರೀಹರಿಗೆ ಸಮರ್ಪಿಸಿದ ಗಂಧ ಇವುಗಳಿಂದ ಬ್ರಾಹ್ಮಣರೇ ಮೊದಲಾದ ವಿಷ್ಣುಭಕ್ತರು ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಈ ಊರ್ಧ್ವಪುಂಡ್ರಗಳೇ ಕರ್ಮಾಂಗವೆನಿಸುತ್ತವೆ. ಆದ್ದರಿಂದ ಮೇಲ್ಕಂಡಂತೆ ಊರ್ಧ್ವಪುಂಡ್ರಗಳನ್ನು ಧರಿಸಿದ ಮೇಲೆಯೇ ಕರ್ಮಗಳನ್ನು ಮಾಡಬೇಕು. ಇವುಗಳನ್ನು ಧರಿಸದೆ ಯಾವ ಕಾರಣದಿಂದಲೂ ಕರ್ಮಗಳನ್ನು ಮಾಡಬಾರದು."

(ಈ ಶ್ಲೋಕದಲ್ಲಿ ಭಸ್ಮದಿಂದ ಊರ್ಧ್ವಪುಂಡ್ರಗಳನ್ನು ಧರಿಸಬೇಕೆಂದು ಹೇಳಿದೆ. ಆದರೆ "ತಸ್ಮಾದ್ಭಸ್ಮಾದಿಭಿರ್ನೇಚ್ಛೇತ್ ಮುಂತಾದ ಅನೇಕ ವಚನಗಳಿಂದ ಭಸ್ಮಧಾರಣವು ನಿಷಿದ್ಧವಾಗಿದೆ. ಆದ್ದರಿಂದ ವಿಷ್ಣುಭಕ್ತರು ಭಸ್ಮದಿಂದ ಊರ್ಧ್ವಪುಂಡ್ರಗಳನ್ನು ಧರಿಸಕೂಡದೆಂದೂ, ಶಿವಭಕ್ತರು ಭಸ್ಮಧಾರಣವನ್ನು ಮಾಡಬಹುದೆಂದೂ ಹೇಳಬೇಕು. ಹಾಗೆ ಹೇಳಿದರೆ ಎರಡು ವಾಕ್ಯಗಳಿಗೂ ವಿರೋಧವಿಲ್ಲ.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

ಹಿಂದೆ ಹೇಳಿದಂತೆ ತುಳಸೀಮೃತ್ತಿಕೆ ಮುಂತಾದ ಮೃತ್ತಿಕೆಗಳಿಂದ ಊರ್ಧ್ವಪುಂಡ್ರವನ್ನು ಧರಿಸುವುದು ಶಾಸ್ತ್ರಸಂಮತವಾಗಿದ್ದರೂ, ಗೋಪೀಚಂದನವು ಈ ಎಲ್ಲಾ ಮೃತ್ತಿಕೆಗಳ ಮಧ್ಯದಲ್ಲಿಯೂ ಶ್ರೇಷ್ಠವಾಗಿರುವುದರಿಂದ ಅದರಿಂದಲೇ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಇದಕ್ಕಾಗಿ ಗೋಪೀಚಂದನದ ಮಹಿಮೆಯನ್ನು ಕೆಳಗಿನ ಪ್ರಮಾಣಗಳಿಂದ ತಿಳಿಸುತ್ತಿದ್ದೇವೆ.

## ಗೋಪೀಚಂದನ ಮಹಿಮೆ

ಅಂಗೇ ಯಸ್ಯ ಸದಾ ತಿಷ್ಠೇದ್ಗೋಪೀಚಂದನಮೃತ್ತಿಕಾ |
ದ್ವಾರಕಾ ತಿಷ್ಠತೇ ತತ್ರ ಕೃಷ್ಣೇನ ಸಹಿತಾ ಕಲೌ || 1 ||
ಯಸ್ಮಿನ್ ಗೃಹೇ ತಿಷ್ಠತಿ ಗೋಪೀಚಂದನಂ ಭಕ್ತ್ಯಾ ಲಲಾಟೇ ಮನುಜೋ ಬಿಭರ್ತಿ |
ತಸ್ಮಿನ್ ಗೃಹೇ ತಿಷ್ಠತಿ ಸರ್ವದಾ ಪ್ರಭುಃ ಶ್ರಿಯಾನ್ವಿತಃ ಕಂಸನಿಷೂದನೋ ಹರಿಃ || 2 ||
ಯೋ ಮೃತ್ತಿಕಾಂ ದ್ವಾರವತೀಸಮುದ್ಭವಾಂ ಕರೇ ಸಮಾದಾಯ ಲಲಾಟಪಟ್ಟಕೇ |
ಕರೋತಿ ನಿತ್ಯಂ ತನುಶುದ್ಧಿಹೇತೋಃ ಕ್ರಿಯಾಫಲಂ ಕೋಟಿಗುಣಂ ಸದಾ ಭವೇತ್ || 3 ||
ಕ್ರಿಯಾವಿಹೀನಂ ಯದಿ ಮಂತ್ರಹೀನಂ ಶ್ರದ್ಧಾವಿಹೀನಂ ಯದಿ ಭಕ್ತಿವರ್ಜಿತಮ್ |
ಕೃತಂ ಲಲಾಟೇ ಯದಿ ಗೋಪೀಚಂದನಂ ಪ್ರಾಪ್ನೋತಿ ಯತ್ಪುಣ್ಯಫಲಂ ಸದಾಽಕ್ಷಯಮ್ || 4 ||
ಯಸ್ಯಾಂತಕಾಲೇ ಖಗ ಗೋಪೀಚಂದನಂ ಬಾಹ್ವೋರ್ಲಲಾಟೇ ಹೃದಿ ಮಸ್ತಕೇ ವಾ |
ಪ್ರಯಾತಿ ಲೋಕಂ ಕಮಲಾಸನಸ್ಯ ಗೋಬಾಲಘಾತೀ ಯದಿ ಬ್ರಹ್ಮಹಾ ಭವೇತ್ || 5 ||
ಕೃತಘ್ನೋ ವಾಽಥ ಗೋಘ್ನೋ ವಾ ಹೈತುಕಃ ಸರ್ವಪಾಪಕೃತ್ |
ಗೋಪೀಚಂದನಸಂಪರ್ಕಾತ್ಪೂತೋ ಭವತಿ ಮಾನವಃ || 6 ||
ಅಸ್ನಾತೋ ಯಃ ಕ್ರಿಯಾಂ ಕುರ್ಯಾದಶುಚಿಃ ಪಾಪಶಂಕಿತಃ |
ಪೂತಃ ಸದ್ಯೋ ಭವೇನ್ನಿತ್ಯಂ ಗೋಪೀಚಂದನಧಾರಣಾತ್ || 7 ||

ಕೃತ್ವಾ ಲಲಾಟೇ ತಿಲಕಂ ತು ವೈಷ್ಣವಃ ಕರೋತು ಕಾರ್ಯಂ ಪಿತೃದೇವತಾನಾಮ್ |
ತುಷ್ಯಂತಿ ಸರ್ವೇ ಪಿತೃದೇವತಾಶ್ಚ ಖಗೇಂದ್ರಕಲ್ಪಾವಧಿ ಸರ್ವತಶ್ಚ || 8 ||
ಯೋ ಧಾರಯೇತ್ಕೃಷ್ಣಪುರೀಸಮುದ್ಭವಾಂ ಮೃದಂ ಪವಿತ್ರಾಂ ಕಲಿಕಲ್ಮಷಾಪಹಾಮ್ |
ನಿತ್ಯಂ ಲಲಾಟೇ ಹರಿಮಂತ್ರಸಂಯುತಾಂ ಯಮಂ ನ ಪಶ್ಯೇದ್ಯದಿ ಪಾಪಸಂಯುತಃ || 9 ||
ಗ್ರಹಾ ನ ಪೀಡಂತಿ ಚ ರಕ್ಷಸಾಂ ಗಣಾ ರಕ್ಷಃಪಿಶಾಚೋರಗಭೂತದಾನವಾಃ |
ಲಲಾಟಪಟ್ಟೇ ಯದಿ ಗೋಪಿಚಂದನಮ್ಮೃಜುಂ ಸುಸೌಮ್ಯಂ ತಿಲಕಂ ಯದಾ ಭವೇತ್ || 10||
ಆಚಾರಹೀನೋ ಯದಿ ಬಾಲಘಾತಕೋ ವಿಶ್ವಾಸಘಾತೀ ಗುರುದಾರಧರ್ಷಕಃ |
ಸರ್ವಾಣಿ ಪಾಪಾನಿ ಕರೋತಿ ಯಸ್ತು ಧುನೋತಿ ಗೋಪೀಜನಚಂದನೇನ || 11 ||
ಶ್ಮಶಾನದೇಶೇಷ್ವಥ ಮ್ಲೇಚ್ಛಸನ್ನಿಧೌ ಪ್ರಾಪ್ನೋತಿ ಮೃತ್ಯುಂ ಯದಿ ಮೂತ್ರಸಂಯುತೇ |
ಪ್ರಯಾತಿ ಗೋಪೀಜನಚಂದನಾನ್ವಿತಃ ಪದಂ ಮುರಾರೇರ್ಯದಿ ಪಾಪಸಂಯುತಃ || 12 ||
ಕೃತಂ ಹಿ ಕಾಲೇ ಶುಭಗೋಪೀಚಂದನಂ ದದಾತಿ ಪಿಂಡೇಷ್ವಪಿ ಭಕ್ತಿಸಂಯುತಃ |
ದ್ವಿಜೇಷು ಚಾರ್ಚಾಂ ವಿಧಿವತ್ಕರೋತಿ ನಿರ್ಯಾಂತಿ ಲೋಕಂ ಪಿತರಃ ಸುರಾಣಾಮ್ || 13 ||
ಗೋಪೀಚಂದನಸೇವನಂ ಸುವಿವರಂ ಪುಂಡ್ರಂ ಲಲಾಟೇ ಶುಭೇ
ನಿತ್ಯಂ ಯೋ ಧ್ರಿಯತೇ ದ್ವಿಜೋ ವರಮಹೋ ರಾತ್ರೌ ದಿವಾ ಸರ್ವದಾ |
ಯತ್ಪುಣ್ಯಂ ಕುರುಜಾಂಗಲೇಽಚಲಮತೇ ಮಾಘೇ ಪ್ರಯಾಗೇ ತಥಾ
ತತ್ಪ್ರಾಪ್ನೋತಿ ಖಗೇಂದ್ರ ವಿಷ್ಣುಸದನೇ ಸಂತಿಷ್ಠತೇ ದೇವವತ್ || 14 ||

ಇತಿ ಶ್ರೀಪಾದ್ಮಪುರಾಣೇ ಹರಿಬ್ರಹ್ಮರುದ್ರಗರುಡಸಂವಾದೇ ಗೋಪೀಚಂದನಮಾಹಾತ್ಮ್ಯಂ. ಇತ್ಯಾದಿ ವಚನೇಷು ಗೋಪೀಚಂದನಸ್ಯ ಸರ್ವಮೃದಪೇಕ್ಷಯೋತ್ತಮತ್ವಾಭಿಧಾನಾದ್ಗೋಪೀಚಂದನೇನೈವೋರ್ಧ್ವಪುಂಡ್ರಧಾರಣಂ ಮುಖ್ಯಮ್. ತದಲಾಭೇ ಮೃದಂತರೇಣೇತ್ಯಮುಖ್ಯಮ್.

ಪದ್ಮಪುರಾಣದಲ್ಲಿ ಹರಿ, ಬ್ರಹ್ಮ, ಗರುಡ, ರುದ್ರ ಈ ನಾಲ್ಕುಜನರ ಅನ್ಯೋನ್ಯ ಸಂವಾದದಲ್ಲಿ ಮೇಲ್ಕಂಡ ಶ್ಲೋಕಗಳು ಗೋಪೀಚಂದನಮಾಹಾತ್ಮ್ಯವನ್ನು ತಿಳಿಸುತ್ತಿವೆ. ಇದೇ ರೀತಿಯಲ್ಲಿ ಅನೇಕ ಪ್ರಮಾಣವಚನಗಳಲ್ಲಿ ಇದೇ ವಿಷಯವು ಸ್ಪಷ್ಟಪಡಿಸಲ್ಪಟ್ಟಿದೆ. ಆದ್ದರಿಂದ ಗೋಪೀಚಂದನವೇ ಎಲ್ಲಾ ಮೃತ್ತಿಕೆಗಳ ಮಧ್ಯದಲ್ಲಿ ಉತ್ತಮವೆಂದೂ, ಈ ಕಾರಣದಿಂದ ಗೋಪೀಚಂದನದಿಂದಲೇ ಊರ್ಧ್ವಪುಂಡ್ರಗಳನ್ನು ಧರಿಸುವುದು ಮುಖ್ಯವೆಂದೂ, ಗೋಪೀಚಂದನವು ಸಿಗದಿದ್ದಾಗ ಇತರ ಮೃತ್ತಿಕೆಗಳನ್ನು ಉಪಯೋಗಿಸಬೇಕೆಂದೂ ಸ್ಪಷ್ಟವಾಗುತ್ತದೆ. ಮೇಲ್ಕಂಡ ಶ್ಲೋಕಗಳ ಅರ್ಥವನ್ನು ಕ್ರಮವಾಗಿ ಕೆಳಗೆ ಕೊಟ್ಟಿದ್ದೇನೆ.

"ಯಾರ ಶರೀರದಲ್ಲಿ ಗೋಪೀಚಂದನಮೃತ್ತಿಕೆಯ ಊರ್ಧ್ವಪುಂಡ್ರವಿದೆಯೋ ಅವರ ದೇಹದಲ್ಲಿ ಶ್ರೀಕೃಷ್ಣನಿಂದ ಸಹಿತವಾದ ದ್ವಾರಕೆಯು ವಾಸಿಸುತ್ತದೆ." || 1 ||

"ಯಾವ ಮನೆಯಲ್ಲಿ ಮನುಷ್ಯನು ಹಣೆಯಲ್ಲಿ ಗೋಪೀಚಂದನವನ್ನು ಧರಿಸುವನೋ, ಅವನ ಮನೆಯಲ್ಲಿ ಕಂಸನನ್ನು ಸಂಹರಿಸಿರುವ ಶ್ರೀಕೃಷ್ಣನು ಲಕ್ಷ್ಮೀಸಮೇತನಾಗಿ ಯಾವಾಗಲೂ ವಾಸಿಸುವನು." || 2 ||

"ಯಾವಾತನು ದ್ವಾರಕೆಯಲ್ಲಿರುವ ಗೋಪೀಚಂದನವನ್ನು ತನ್ನ ಶರೀರದ ಶುದ್ಧಿಗಾಗಿ ಹಣೆಯಲ್ಲಿ ಧರಿಸುವನೋ, ಅವನು ಮಾಡುವ ಎಲ್ಲಾ ಕಾರ್ಯಗಳೂ ಕೋಟಿಪಾಲು ಅಧಿಕವಾದ ಫಲಗಳನ್ನು ಯಾವಾಗಲೂ ಕೊಡುತ್ತವೆ." || 3 ||

"ಮಾಡುವ ಕರ್ಮಗಳಲ್ಲಿ ಕ್ರಿಯಾಲೋಪ, ಮಂತ್ರಲೋಪ, ಶ್ರದ್ಧಾಲೋಪ, ಭಕ್ತಿಲೋಪ ಮುಂತಾದ ಎಲ್ಲಾ ವಿಧವಾದ ಲೋಪಗಳಿದ್ದರೂ ಗೋಪೀಚಂದನವನ್ನು ಹಣೆಯಲ್ಲಿ ಧರಿಸಿ ಆ ಕಾರ್ಯಗಳನ್ನು ಮಾಡಿದರೆ ಆ ಕಾರ್ಯಗಳು ಅಕ್ಷಯಫಲವನ್ನು ಕೊಡುತ್ತವೆ." ||4||

"ಗೋಹತ್ಯಾ, ಬ್ರಹ್ಮಹತ್ಯಾ, ಬಾಲಹತ್ಯಾ ಮುಂತಾದ ಮಹಾಪಾಪಗಳನ್ನು ಮಾಡಿದವನೂ ಸಹ ಸಾಯುವ ಕಾಲದಲ್ಲಿ ಎರಡು ಭುಜಗಳಲ್ಲಾಗಲೀ, ಹಣೆಯಲ್ಲಾಗಲೀ, ಎದೆಯಲ್ಲಾಗಲೀ, ತಲೆಯಲ್ಲಾಗಲೀ, ಗೋಪೀಚಂದನವನ್ನು ಧರಿಸಿದ್ದರೆ ಅವನು ಬ್ರಹ್ಮಲೋಕವನ್ನು ಹೊಂದುವನು." ||5||

"ಮಾಡಿದ ಉಪಕಾರವನ್ನು ಮರೆತು ಅಪಕಾರವನ್ನು ಮಾಡುವವನು ಕೃತಘ್ನನೆನಿಸುವನು. ದನವನ್ನು ಕೊಂದವನು ಗೋಘ್ನನೆನಿಸುವನು. ಶಾಸ್ತ್ರಗಳಲ್ಲಿ ಹೇಳಿರುವ ವಿಷಯವನ್ನು ಕುಯುಕ್ತಿಯಿಂದ ನಿರಾಕರಿಸುವವನು ಹೈತುಕನೆನಿಸುವನು. ಇವರೆಲ್ಲರೂ ಮಹಾಪಾಪಿಗಳು. ಈ ಪಾಪಗಳನ್ನೂ, ಉಳಿದ ಸಕಲ ಪಾಪಗಳನ್ನೂ ಮಾಡಿದ್ದರೂ ಗೋಪೀಚಂದನದ ಸಂಪರ್ಕದಿಂದ ಪರಿಶುದ್ಧನಾಗುವನು." ||6||

"ಸ್ನಾನ ಮಾಡದಂತೆ ಸಂಧ್ಯಾವಂದನ ಮುಂತಾದ ಶಾಸ್ತ್ರೋಕ್ತಕರ್ಮಗಳನ್ನು ಮಾಡುತ್ತಿರುವವನೂ ಅತ್ಯಂತ ಅಶುದ್ಧನಾಗಿರುವವನೂ, ಪಾಪಕಾರ್ಯವನ್ನು ತಾನು ಮಾಡಿರುವುದಾಗಿ ಸಂಶಯವನ್ನು ಪಡೆದಿರುವವನೂ ಗೋಪೀಚಂದನವನ್ನು ಧರಿಸಿದ ಮಾತ್ರದಿಂದಲೇ ಯಾವಾಗಲೂ ಶುದ್ಧನಾಗುವನು." ||7||

"ವಿಷ್ಣುಭಕ್ತನು ಹಣೆಯಲ್ಲಿ ಗೋಪೀಚಂದನವನ್ನು ಧರಿಸಿ, ಪಿತೃಕಾರ್ಯಗಳನ್ನೂ, ದೇವತಾಕಾರ್ಯಗಳನ್ನೂ ಮಾಡಲಿ. ಈ ಬ್ರಹ್ಮದೇವನ ಕಲ್ಪವು ಮುಗಿಯುವವರೆಗೂ ಪಿತೃಗಳೂ, ದೇವತೆಗಳೂ ಎಲ್ಲಾ ವಿಧದಿಂದಲೂ ಇವನಲ್ಲಿ ತೃಪ್ತರಾಗುವರು." ||8||

"ಈ ಗೋಪೀಚಂದನವು ಶ್ರೀಕೃಷ್ಣದೇವನ ನಿತ್ಯಸನ್ನಿಧಾನವುಳ್ಳ ದ್ವಾರಕೆಯಲ್ಲಿ ಹುಟ್ಟಿರುತ್ತದೆ. ಕಲಿಯ ಸನ್ನಿಧಾನದಿಂದ ಬರಬಹುದಾದ ಎಲ್ಲಾ ದೋಷಗಳನ್ನೂ ಪರಿಹರಿಸುತ್ತದೆ. ಪರಮಪರಿಶುದ್ಧವಾಗಿರುತ್ತದೆ. ಈ ಗೋಪೀಚಂದನವನ್ನು ಶ್ರೀಹರಿಯ ಕೇಶವಾದಿದ್ವಾದಶಮಂತ್ರಗಳಿಂದ ಜಪಿಸುತ್ತಾ ಧರಿಸಬೇಕು. ಹೀಗೆ ಧರಿಸಿದವನು ಎಷ್ಟು ಪಾಪಗಳನ್ನು ಮಾಡಿದ್ದರೂ ಅವನನ್ನು ಯಮನು ನೋಡಲು ಶಕ್ತನಾಗಲಾರನು." ||9||

"ಈ ಗೋಪೀಚಂದನದಿಂದ ಹಣೆಯಲ್ಲಿ ತಿಲಕವನ್ನು ಧರಿಸಬೇಕು. ಈ ತಿಲಕವು ಋಜುವಾಗಿಯೂ, ಸೌಮ್ಯವಾಗಿಯೂ ಇರಬೇಕು. ಈ ತಿಲಕವನ್ನು ಧರಿಸಿದವನನ್ನು ನವಗ್ರಹಗಳು, ರಾಕ್ಷಸರು, ಪಿಶಾಚಗಳು, ಸರ್ಪಗಳು, ಭೂತಗಳು ಮುಂತಾದ ಪ್ರಾಣಿಗಳು ಪೀಡಿಸುವುದಿಲ್ಲ." ||10||

"ಆಚಾರವಿಲ್ಲದವನು, ಮಕ್ಕಳನ್ನು ಕೊಂದವನು, ನಂಬಿಕೆ ದ್ರೋಹವನ್ನು ಮಾಡಿದವನು, ಗುರುಪತ್ನಿಯ ಸಂಗವನ್ನು ಮಾಡಿದವನು ಮುಂತಾದ ಸಕಲ ಪಾಪಗಳನ್ನು ಮಾಡಿದವರೂ ಸಹ, ಗೋಪೀಚಂದನದಿಂದ ತಮ್ಮ ಎಲ್ಲಾ ಪಾಪಗಳನ್ನು ಕಳೆದುಕೊಳ್ಳುವರು." ||11||

"ಶ್ಮಶಾನಪ್ರದೇಶ, ಮ್ಲೇಚ್ಛರ ವಾಸಸ್ಥಳ, ಮೂತ್ರ ಮುಂತಾದ ಅಶುಚಿಪದಾರ್ಥಗಳ ಮಧ್ಯಪ್ರದೇಶ ಮುಂತಾದ ಅಶುಚಿ ಪ್ರದೇಶಗಳಲ್ಲಿ ಸತ್ತರೂ, ಮಹಾಪಾಪಗಳನ್ನು ಮಾಡಿದರೂ, ಗೋಪೀಚಂದನದಿಂದ ಯುಕ್ತನಾದವನು ಶ್ರೀಹರಿಯ ಸನ್ನಿಧಾನವನ್ನು ಪಡೆಯುವನು." ||12||

"ಶುಭ್ರವಾದ ಗೋಪೀಚಂದನವನ್ನು ಧರಿಸಿ ಪಿತೃಗಳಿಗೆ ಪಿಂಡದಾನವನ್ನು ಮಾಡಬೇಕು. ಭಕ್ತಿಯಿಂದ ಬ್ರಾಹ್ಮಣರನ್ನು ಪೂಜಿಸಬೇಕು. ಪಿಂಡದಾನಕಾಲದಲ್ಲಿಯೂ, ಬ್ರಾಹ್ಮಣಪೂಜಾ ಕಾಲದಲ್ಲಿಯೂ, ಗೋಪೀಚಂದನದಾನವನ್ನು ಕೊಡಬೇಕು. ಇದರಿಂದ ಪಿತೃಗಳು ದೇವತೆಗಳ ಲೋಕಗಳಿಗೆ ಹೋಗುವರು." ||13||

"ಗೋಪೀಚಂದನದಿಂದ ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸಬೇಕು. ಆ ಊರ್ಧ್ವ ಪುಂಡ್ರದ ಮಧ್ಯದಲ್ಲಿ ರಂಧ್ರವಿರಬೇಕು. ಹಗಲಿನಲ್ಲಿಯೂ, ರಾತ್ರಿಯಲ್ಲಿಯೂ ಯಾವಾಗಲೂ ಧರಿಸಬೇಕು. ಕುರುಕ್ಷೇತ್ರದಲ್ಲಿಯೂ, ಮಾಘಮಾಸದಲ್ಲಿ ಪ್ರಯಾಗಕ್ಷೇತ್ರದಲ್ಲಿಯೂ, ಸ್ನಾನ ಮುಂತಾದ ಸಕಲಪುಣ್ಯಕಾರ್ಯಗಳನ್ನು ಮಾಡಿದ್ದರಿಂದ ಬರುವ ಪುಣ್ಯವು ಇದರಿಂದ ಬರುತ್ತದೆ. ವಿಷ್ಣುಲೋಕದಲ್ಲಿ ದೇವತೆಗಳಂತೆ ಸುಖವಾಗಿ ವಾಸಿಸುವನು." || 14 ||

ಮೃದಾ ಗೋಪಿಕಯಾ ಚೋರ್ಧ್ವಪುಂಡ್ರಂ ಕುರ್ಯಾತ್ಸಮಾಹಿತಃ |
ಕೇ ಲಲಾಟೇ ಚ ಬಾಹೌ ಚ ಹೃದಯೇ ಕಂಠ ಏವ ಚ || (ವಿಷ್ಣುತೀರ್ಥೀಯ)

"ತಲೆ, ಹಣೆ, ಎರಡು ತೋಳುಗಳು, ಎದೆ, ಕುತ್ತಿಗೆ ಈ ಪ್ರದೇಶಗಳಲ್ಲಿ ಸಾವಧಾನ ಮನಸ್ಸಿನಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು."

ಗೋಪೀಚಂದನಲಿಪ್ತಾಂಗೋ ಯಂ ಯಂ ದೇಶಂ ಪ್ರಪಶ್ಯತಿ |
ತಂ ತಂ ಶುದ್ಧಂ ವಿಜಾನೀಯಾನ್ನಾತ್ರ ಕಾರ್ಯಾ ವಿಚಾರಣಾ ||
ಆಚಮ್ಯ ಪುನರಾಚಮ್ಯ ಗೋಪ್ಯಾ ಪುಂಡ್ರಾಣಿ ಧಾರಯೇತ್ |

"ಎರಡಾವರ್ತಿ ಆಚಮನ ಮಾಡಬೇಕು. ಗೋಪೀಚಂದನದಿಂದ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಗೋಪೀಚಂದನದಿಂದ ಊರ್ಧ್ವಪುಂಡ್ರಗಳನ್ನು ಧರಿಸಿದವನು ಯಾರು ಯಾರನ್ನು ನೋಡುವನೋ, ಅವರೆಲ್ಲರೂ ಪರಿಶುದ್ಧರಾಗುವರು. ಈ ವಿಷಯದಲ್ಲಿ ಸಂಶಯವೇ ಇಲ್ಲ."

ಬ್ರಹ್ಮನ್ ವೃತ್ರಯಾತ್ಸರ್ವೇ ವಯಂ ತ್ವಾಂ ಶರಣಂ ಗತಾಃ |
ವಧಾಯ ತಸ್ಯ ವೃತ್ರಸ್ಯ ಪೃಚ್ಛಾಮೋಽತ್ರ ವಿಧಿಂ ಪರಮ್ ||
ಇತ್ಯುಕ್ತಃ ಸೋಽವದದ್ಬ್ರಹ್ಮಾ ಸರ್ವಲೋಕಪಿತಾಮಹಃ |
ವಧೋಪಾಯಂ ತು ದೇವೇಭ್ಯೋ ವೃತ್ರಸ್ಯಾದ್ಭುತಕರ್ಮಣಃ ||
ದೇವಾಃ ಶೃಣುತ ಭದ್ರಂ ವೋ ವಧೋಪಾಯಂ ರಿಪೋಃ ಪರಮ್ |
ಪ್ರೋಕ್ತಂ ತು ವಿಷ್ಣುನಾ ಪೂರ್ವಂ ಸರ್ವದಾ ಧೃತಮೇವ ಮೇ ||
ಮಧುಘ್ನನಾಮಭಿರ್ದೇಹೇ ಧೃತ್ವಾ ತದ್ಭೃತಚಂದನಮ್ |
ಚಕ್ರಶಂಖೌ ತಥಾಂಸೇ ತು ಕಂಠೇ ಪದ್ಮಾಕ್ಷಮೇವ ಚ ||
ಹರೇರ್ನಾಮಾನಿ ಸುಮುಖೇ ತತೋ ವೃತ್ರಂ ಹನಿಷ್ಯಥ |
ಏವಮುಕ್ತಾಸ್ತು ತೇ ದೇವಾಸ್ತಥಾ ಕೃತ್ವಾ ಮಹೌಜಸಃ ||
ತತ್ರ ತತ್ರ ಸ್ಥಿತಂ ವೃತ್ರಂ ನಿಜಘ್ನುರ್ಭುವಿ ದೇವತಾಃ || (ವಿಷ್ಣುತೀರ್ಥೀಯ)

"ವೃತ್ರಾಸುರನು ಕತ್ತಲೆಯ ರೂಪವನ್ನು ಧರಿಸಿ ಎಲ್ಲಾ ಲೋಕಗಳನ್ನೂ ವ್ಯಾಪಿಸಿದನು. ಅವನ ಅಸಂಖ್ಯ ರೂಪಗಳನ್ನು ಸಂಹರಿಸಲು ದೇವತೆಗಳಿಂದ ಸಾಧ್ಯವಾಗಲಿಲ್ಲ. ಅವರೆಲ್ಲರೂ ಒಟ್ಟುಗೂಡಿ ಬ್ರಹ್ಮದೇವರಲ್ಲಿಗೆ ಬಂದರು. ತಾವೆಲ್ಲರೂ ವೃತ್ರನ ಭಯದಿಂದ ಪೀಡಿತರಾದಂತೆಯೂ, ಅವನನ್ನು ಸಂಹರಿಸುವ ಉಪಾಯವನ್ನು ತಿಳಿಸುವಂತೆಯೂ ಪ್ರಾರ್ಥಿಸಿದರು. ಆಗ ಬ್ರಹ್ಮದೇವರು ಉತ್ತರವನ್ನು ಕೊಟ್ಟರು. "ಎಲೈ ದೇವತೆಗಳಿರಾ, ವೃತ್ರನ ಸಾಮರ್ಥ್ಯವು ಅತ್ಯದ್ಭುತವಾದದ್ದು. ಅವನನ್ನು ಸಂಹರಿಸುವ ಉಪಾಯವನ್ನು ಶ್ರೀಹರಿಯೇ ಹಿಂದೆ ನನಗೆ ತಿಳಿಸಿರುವನು. ಆ ವಿಷಯವನ್ನು ಇಷ್ಟರವರೆಗೆ ಯಾರಿಗೂ ತಿಳಿಸದೆ ನನ್ನ ಮನಸ್ಸಿನಲ್ಲಿಯೇ ಇಟ್ಟುಕೊಂಡಿರುವೆನು. ಅದನ್ನು ಈಗ ನಿಮ್ಮ ಮೇಲಿನ ಕರುಣೆಯಿಂದ ತಿಳಿಸುವೆನು. ಶ್ರೀಹರಿಯು

ಗೋಪಿಕಾಸ್ತ್ರೀಯರಿಂದ ಲೇಪಿಸಲ್ಪಟ್ಟ ಗಂಧವನ್ನು ತನ್ನ ದೇಹದಲ್ಲಿ ಧರಿಸಿದನು. ಆ ಗಂಧವೇ ಗೋಪೀಚಂದನವೆಂದು ಪ್ರಸಿದ್ಧವಾಯಿತು. ಈ ಗೋಪೀಚಂದನವನ್ನು ಕೇಶವಾದಿದ್ವಾದಶನಾಮಗಳಿಂದ ಶರೀರದಲ್ಲಿ ಧರಿಸಬೇಕು. ಎರಡು ಭುಜಗಳಲ್ಲಿ ಶಂಖ ಮತ್ತು ಚಕ್ರಗಳನ್ನು ಧರಿಸಬೇಕು. ಕಂಠದಲ್ಲಿ ಪದ್ಮಾಕ್ಷಮಾಲೆಯನ್ನು ಧರಿಸಬೇಕು. ನಾಲಿಗೆಯಿಂದ ಶ್ರೀಹರಿಯ ನಾಮಗಳನ್ನು ಉಚ್ಚರಿಸಬೇಕು. ಹೀಗೆ ಮಾಡಿದರೆ ವೃತ್ರಾಸುರನನ್ನು ನೀವು ಸಂಹರಿಸುವಿರಿ. ಇದು ಬ್ರಹ್ಮದೇವರು ಹೇಳಿದ್ದು. ಈ ಮಾತುಗಳನ್ನು ಕೇಳಿದ ದೇವತೆಗಳೂ ಹಾಗೆಯೇ ಮಾಡಿದರು. ಅಪಾರವಾದ ತೇಜಸ್ಸನ್ನೂ ಶಕ್ತಿಯನ್ನೂ ಪಡೆದರು. ಎಲ್ಲಾ ಕಡೆಗಳಲ್ಲಿಯೂ ಅಸಂಖ್ಯ ರೂಪಗಳಿಂದ ವ್ಯಾಪಿಸಿರುವ ವೃತ್ರಾಸುರನನ್ನು ಸಂಹರಿಸಿದರು."

ದೇವಾದ್ಯಾಚಾರದರ್ಶನಾದೂರ್ಧ್ವಪುಂಡ್ರಂ ಗೋಪೀಚಂದನೇನೈವ ಧಾರ್ಯಮ್ |

(ಸ್ಮೃತಿಮುಕ್ತಾವಲೀಕಾರರ ನಿರ್ಣಯ)

ಮೇಲ್ಕಂಡ ವಿಷ್ಣುತೀರ್ಥೀಯವಚನಗಳಿಂದ ದೇವತೆಗಳೇ ಮೊದಲಾದ ಉತ್ತಮಾಧಿಕಾರಿಗಳೂ ಸಹ ಗೋಪೀಚಂದನವನ್ನು ಧರಿಸಿರುವುದಾಗಿ ತಿಳಿಯುತ್ತದೆ. ಆದ್ದರಿಂದ ಗೋಪೀಚಂದನದಿಂದಲೇ ಊರ್ಧ್ವಪುಂಡ್ರಗಳನ್ನು ಧರಿಸಬೇಕೆಂದೂ ಅದು ಸಿಗದಿದ್ದಾಗ ಇತರ ಮೃತ್ತಿಕೆಗಳಿಂದ ಧರಿಸಬೇಕೆಂದೂ ಸ್ಮೃತಿಮುಕ್ತಾವಲೀಕಾರರು ನಿರ್ಣಯಿಸಿರುತ್ತಾರೆ.

## ಮೃತ್ತಿಕೆಯ ಜಪ

ಮೂಲಮಂತ್ರೇಣಾಭಿಮಂತ್ರ್ಯ ಚೋರ್ಧ್ವಪುಂಡ್ರಾಣಿ ಧಾರಯೇತ್ |
ಲಲಾಟಾದಿಷು ಚಾಂಗೇಷು ಧರೇತ್ಪುಂಡ್ರಂ ಶುಭಾವಹಮ್ || (ಪರಾಶರರ ವಚನ)

"ಗೋಪೀಚಂದನವನ್ನು ನಾರಾಯಣಾಷ್ಟಾಕ್ಷರ ಮುಂತಾದ ಮೂಲಮಂತ್ರಗಳಿಂದ ಜಪಿಸಬೇಕು. ಹಣೆ ಮುಂತಾದ ಅಂಗಗಳಲ್ಲಿ ಧರಿಸಬೇಕು. ಇದರಿಂದ ಎಲ್ಲಾ ಶುಭವೂ ಏರ್ಪಡುತ್ತದೆ."

ಆದೌ ಚ ಲಕ್ಷಣೋಪೇತಾಂ ಸುಗಂಧಾಂ ಸಾತ್ವಿಕಾಂ ಶುಭಾಮ್ |
ವಾಮೇ ತು ಶೋಧಿತೇ ಹಸ್ತೇ ವಾಗ್ಯತಃ ಪ್ರಣವೇನ ತು ||
ನಿಧಾಯ ಜಲಮಾದಾಯ ಗಂಧದ್ವಾರೇತಿ ಸಿಂಚಯೇತ್ |
ಅಸ್ತ್ರಮಂತ್ರೇಣ ರಕ್ಷಾಂ ಚ ಕೃತ್ವಾ ದಶಸು ದಿಕ್ಷ್ವಪಿ ||
ತಾರಮಂತ್ರೇಣ ಸಂಮಿಶ್ರಂ ಮೂಲಮಂತ್ರೇಣ ಮಂತ್ರಯೇತ್ |
ನೃಸಿಂಹಬೀಜಂ ವಿಲಿಖೇದ್ರಕ್ಷಾರ್ಥಂ ದೋಷಶಾಂತಯೇ ||
ಶತಧಾರೇಣ ಮಂತ್ರೇಣ ತೀರ್ಥತೋಯಂ ಚ ನಿಕ್ಷಿಪೇತ್ |
ತಮೇಕೀಕೃತ್ಯ ತನ್ಮಧ್ಯೇ ಸ್ಮೃತ್ವಾ ಮಧುಪದದ್ವಯಮ್ ||
ವಿಷ್ಣೋರ್ನು ಕೇತಿ ಮಂತ್ರೇಣ ಮಂತ್ರಯಿತ್ವಾ ಯಥಾಕ್ರಮಮ್ |
ಪಂಚೋಪನಿಷದ್ಯೈರ್ಮಂತ್ರೈರ್ಮೂಲಮಂತ್ರೇಣ ಮಂತ್ರಯೇತ್ ||
ದ್ವಾದಶಾಕ್ಷರಮುಚ್ಚಾರ್ಯ ಪ್ರಾರ್ಥಯೇದಿಷ್ಟಸಿದ್ಧಯೇ |
ಸಪ್ತಭಿರ್ವೈಷ್ಣವೈರ್ಮಂತ್ರೈರ್ಮಂತ್ರಜ್ಞೋ ಮನಸಾ ಜಪೇತ್ ||
ಮೃದಂ ಮಂತ್ರೈಃ ಸುಸಂಪ್ರೋಕ್ಷ್ಯ ತರ್ಜನ್ಯಾ ಮೂರ್ಧ್ನಿ ವಿನ್ಯಸೇತ್ |

"ಆರಂಭದಲ್ಲಿ ಸುಗಂಧವುಳ್ಳದ್ದಾಗಿಯೂ ಸಾತ್ವಿಕಲಕ್ಷಣಗಳಿಂದ ಅಂದರೆ ಶುಭ್ರವರ್ಣ, ಮೃದುತ್ವ ಮುಂತಾದ ಲಕ್ಷಣಗಳಿಂದ ಯುಕ್ತವಾಗಿಯೂ ಇರುವ ಶುಭ್ರವಾದ ಗೋಪೀಚಂದನವನ್ನು ಸಿದ್ಧಪಡಿಸಿಕೊಳ್ಳಬೇಕು. ಎಡಗೈಯನ್ನು ಚೆನ್ನಾಗಿ

ತೊಳೆದುಕೊಳ್ಳಬೇಕು. ಮೌನವನ್ನು ಧರಿಸಬೇಕು. "ಓಂ" ಎಂಬ ಪ್ರಣವಮಂತ್ರದಿಂದ ಎಡಗೈಯಲ್ಲಿ ಗೋಪೀಚಂದನವನ್ನು ಇಡಬೇಕು. "ಸಹಸ್ರಾರ ಹುಂ ಫಟ್" ಎಂಬ ಅಸ್ತ್ರ ಮಂತ್ರದಿಂದ ಹತ್ತು ದಿಕ್ಕುಗಳಲ್ಲಿ ದಿಗ್ಬಂಧನವನ್ನು ಮಾಡಬೇಕು. (ಬಲಗೈಯ ತೋರ್ಬೆರಳು ಮತ್ತು ನಡುಬೆರಳುಗಳನ್ನು ಹತ್ತು ದಿಕ್ಕುಗಳಿಗೂ ತೋರಿಸಬೇಕು. ಇದರಿಂದ ಎಲ್ಲಾ ದೈತ್ಯರೂ ದೂರದಲ್ಲಿ ನಿಲ್ಲುವಂತೆ ಮಾಡಬೇಕು.) "ಗಂಧದ್ವಾರಾಂ" ಎಂಬ ಮಂತ್ರದಿಂದ ಎಡಗೈಯಲ್ಲಿ ನೀರನ್ನು ಹಾಕಬೇಕು. "ಓಂ" ಎಂಬ ತಾರಮಂತ್ರದಿಂದಲೂ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದಲೂ ಆ ನೀರನ್ನು ಜಪಿಸಬೇಕು. ಆ ನೀರಿನ ಮಧ್ಯದಲ್ಲಿ "ಕ್ಷ್ರಂ" ಎಂಬ ನರಸಿಂಹಬೀಜಾಕ್ಷರವನ್ನು ಬರೆಯಬೇಕು. ಹೀಗೆ ಬರೆದ ಜಲದಲ್ಲಿ ಗೋಪೀಚಂದನವನ್ನು ಕರಗಿಸಿ ಊರ್ಧ್ವಪುಂಡ್ರವನ್ನು ಧರಿಸಿದರೆ ನಮ್ಮ ಶರೀರವನ್ನು ನೋಡಿದ ಕೂಡಲೇ ರಾಕ್ಷಸರು ದಿಕ್ಕುದಿಕ್ಕುಗಳಿಗೆ ಓಡುತ್ತಾರೆ. ಇದರಿಂದ ಅವರ ಬಾಧೆಯು ನಮಗೆ ದೂರವಾಗುತ್ತದೆ. ಯಾವ ವಿಧವಾದ ಅಶುದ್ಧಿ ಮುಂತಾದ ದೋಷಗಳು ಏರ್ಪಡುವುದಿಲ್ಲ.

"ಓಂ ಸಹಸ್ರಾರ ಹುಂ ಫಟ್" ಎಂಬ ಶತಧಾರಮಂತ್ರದಿಂದ ತೀರ್ಥಜಲವನ್ನು ಎಡಗೈಯಲ್ಲಿರುವ ನೀರಿನೊಡನೆ ಸೇರಿಸಬೇಕು. ಆ ಜಲದಲ್ಲಿ ಶ್ರೀಹರಿಯ ಎರಡು ಪಾದಗಳು ಸನ್ನಿಹಿತವಾದಂತೆ ಧ್ಯಾನಿಸಬೇಕು. "ವಿಷ್ಣೋರ್ನುಕಂ ವೀರ್ಯಾಣಿ" ಎಂಬ ಮಂತ್ರದಿಂದಲೂ, ಪಂಚೋಪನಿಷತ್ತುಗಳಿಂದಲೂ, ಮೂಲಮಂತ್ರದಿಂದಲೂ ಪುನಃ ಉಚ್ಚರಿಸಬೇಕು. ಏಳು ವಿಷ್ಣುಮಂತ್ರಗಳಿಂದ ಗೋಪೀಚಂದನವನ್ನು ಜಪಿಸಬೇಕು. ಗೋಪೀಚಂದನವನ್ನು ಮೇಲ್ಕಂಡ ಮಂತ್ರಗಳಿಂದ ಪ್ರೋಕ್ಷಿಸಬೇಕು. ಬಲಗೈಯ ಅಂಗುಷ್ಠದ ಪಕ್ಕದಲ್ಲಿರುವ ತರ್ಜನೀಬೆರಳಿನಿಂದ ಗೋಪೀಚಂದನವನ್ನು ತೆಗೆಯಬೇಕು. ಮೊದಲು ತಲೆಯಲ್ಲಿ ಊರ್ಧ್ವಪುಂಡ್ರವನ್ನು ಬರೆಯಬೇಕು.

ಆಹೃತ್ಯಾಂಬುಪವಿತ್ರೇಣ ಕೃತ್ವಾ ಸವ್ಯಕರೋದರೇ |
ಕರ್ಮಾರಂಭೇ ತು ಮಂತ್ರೇಣ ಮೃದಮಾಲೋಡಯೇದ್ವಶೀ ||
ಬ್ರಾಹ್ಮಣಸ್ತತ್ಸಮೀಕೃತ್ಯ ಧ್ಯಾಯೇದ್ದೇವಂ ಸನಾತನಮ್ |
ಪ್ರದೇಶಿನ್ಯಾಂ ಸಮಾದಾಯ ಕಿಂಚಿಚ್ಛಿರಸಿ ಧಾರಯೇತ್ ||
ಲಲಾಟಬಾಹ್ವೋರ್ಹೃದಯೇ ಚಾರ್ಜವೇನ ಪ್ರದಾಪಯೇತ್ |
ಕೃತೋರ್ಧ್ವಪುಂಡ್ರೋ ನಾಮಾನಿ ಚತುರ್ಥ್ಯಂತಾನ್ಯುದಾಹರೇತ್ ||
ತತ್ರ ಚಾಚಮ್ಯ ವಿಧಿವದದ್ಭಿರ್ದೇವಾಂಶ್ಚ ತರ್ಪಯೇತ್ || (ಶಾಂಡಿಲ್ಯರ ವಚನ)

ಒಂದೊಂದು ಕರ್ಮವನ್ನು ಆರಂಭಿಸುವಾಗಲೂ "ಓಂ ಸಹಸ್ರಾರ ಹುಂ ಫಟ್" ಎಂಬ ಪವಿತ್ರ ಮಂತ್ರದಿಂದ ಜಲವನ್ನು ಎಡಗೈಯಲ್ಲಿ ಹಾಕಿಕೊಳ್ಳಬೇಕು. ಆ ಜಲದ ಮೇಲೆ ಗೋಪೀಚಂದನವನ್ನು ಇಟ್ಟುಕೊಂಡು ಕರಗಿಸಬೇಕು. ಬ್ರಾಹ್ಮಣನು ಶುದ್ಧವಾದ ಮನಸ್ಸಿನಿಂದ ಕರಗಿಸಿದ ಗೋಪೀಚಂದನವನ್ನು ಎಲ್ಲಾ ಭಾಗದಲ್ಲಿಯೂ ಸಮವಾಗುವಂತೆ ಒಟ್ಟುಗೂಡಿಸಬೇಕು. ಅದನ್ನು ಮುಟ್ಟಿಕೊಂಡು ಶ್ರೀಹರಿಯನ್ನು ಸ್ಮರಿಸಬೇಕು. ಬಲಗೈಯ ಅಂಗುಷ್ಠದ ಪಾರ್ಶ್ವದಲ್ಲಿರುವ ತರ್ಜನೀಬೆರಳಿನಿಂದ ಸ್ವಲ್ಪ ಗೋಪೀಚಂದನವನ್ನು ತೆಗೆದು ತಲೆಯಲ್ಲಿ ಧರಿಸಬೇಕು. ಅನಂತರದಲ್ಲಿ ಹಣೆಯಲ್ಲಿಯೂ, ಭುಜಗಳಲ್ಲಿಯೂ, ಎದೆಯಲ್ಲಿಯೂ ಕ್ರಮವಾಗಿ ಧರಿಸಬೇಕು. ಊರ್ಧ್ವಪುಂಡ್ರಗಳನ್ನು ಮೇಲ್ಮುಖವಾಗಿ ಧರಿಸಬೇಕು. ಅವುಗಳು ವಕ್ರವಾಗಿರಬಾರದು. ಆ ಊರ್ಧ್ವಪುಂಡ್ರಗಳನ್ನು ಧರಿಸುವಾಗ ಹೇಳಬೇಕಾದ ಕೇಶವ ಮುಂತಾದ ಹನ್ನೆರಡು ಹೆಸರುಗಳನ್ನು ಚತುರ್ಥೀವಿಭಕ್ತ್ಯಂತವಾಗಿ "ಕೇಶವಾಯ ನಮಃ" ಮುಂತಾದ ರೀತಿಯಿಂದ ಉಚ್ಚರಿಸಬೇಕು. ಊರ್ಧ್ವಪುಂಡ್ರಗಳನ್ನು ವಿಧಿಪ್ರಕಾರವಾಗಿ ಧರಿಸಿದ ಮೇಲೆ ದೇವತೆಗಳಿಗೆ ತರ್ಪಣವನ್ನು ಕೊಡಬೇಕು.

## ಊರ್ಧ್ವಪುಂಡ್ರಧಾರಣಪ್ರಕಾರ

ಆಚಮ್ಯ ಧಾರಯೇತ್ಪುಂಡ್ರಾನ್ ಮೃದಾ ಶುಭ್ರೇಣ ಪೂರ್ವವತ್ |
ನಾಸಿಕಾಮೂಲಮಾರಭ್ಯ ಆಕೇಶಾಂತಂ ಪ್ರಕಲ್ಪಯೇತ್ || (ವಾಸಿಷ್ಠವಚನ)

"ಆಚಮನವನ್ನು ಮಾಡಬೇಕು. ಶುಭ್ರವಾದ ಗೋಪೀಚಂದನದಿಂದ ಮೂಗಿನ ಬುಡದಿಂದ ಆರಂಭಿಸಿ ತಲೆಗೂದಲಿನವರೆಗೆ ಮೇಲ್ಮುಖವಾಗಿ ಊರ್ಧ್ವಪುಂಡ್ರವನ್ನು ಧರಿಸಬೇಕು."

ನಾಸಿಕಾಮೂಲಮಾರಭ್ಯ ಆಕೇಶಾಂತಂ ಪ್ರಕಲ್ಪಯೇತ್ |
ಏವಂ ಸರ್ವಾಣಿ ಪುಂಡ್ರಾಣಿ ಸಚ್ಛಿದ್ರಾಣ್ಯೇವ ಕಾರಯೇತ್ || (ಪರಾಶರರ ವಚನ)

"ಮೂಗಿನ ಬುಡದಿಂದ ಆರಂಭಿಸಿ ತಲೆಗೂದಲಿನವರೆಗೆ ಮೊದಲನೆಯ ಊರ್ಧ್ವಪುಂಡ್ರವನ್ನು ಧರಿಸಬೇಕು. ಎಲ್ಲಾ ಊರ್ಧ್ವಪುಂಡ್ರಗಳ ಮಧ್ಯದಲ್ಲಿಯೂ ರಂಧ್ರವನ್ನು ಮಾಡಬೇಕು."

ಊರ್ಧ್ವಪುಂಡ್ರಂ ವಿಧಾನೇನ ಮೃದಾ ಶುಭ್ರಂ ಚ ಧಾರಯೇತ್ |
ಲಲಾಟಾದಿಷು ಚಾಂಗೇಷು ಕೇಶವಾದೀನನುಕ್ರಮಾತ್ || (ಅತ್ರಿ ವಚನ)
ನಾಸಿಕಾಮೂಲಮಾರಭ್ಯ ಲಲಾಟಾಂತಂ ಚ ವಿನ್ಯಸೇತ್ |
ದಂಡಾಕಾರಂ ದ್ವ್ಯಂಗುಲಂ ಚ ಸಚ್ಛಿದ್ರಂ ಶ್ರೀಪದಾಕೃತಿಮ್ ||

"ಶಾಸ್ತ್ರೋಕ್ತವಿಧಿಯಿಂದ ಊರ್ಧ್ವಪುಂಡ್ರವನ್ನು ಹಣೆಯಲ್ಲಿ ಆರಂಭಿಸಿ ಧರಿಸಬೇಕು. ಮೊದಲನೆಯ ಊರ್ಧ್ವಪುಂಡ್ರವನ್ನು ಕೇಶವ ಎಂಬ ಹೆಸರನ್ನೂ, ಉಳಿದ ಹನ್ನೊಂದು ಊರ್ಧ್ವಪುಂಡ್ರಗಳನ್ನು ನಾರಾಯಣ ಮುಂತಾದ ಹನ್ನೊಂದು ಹೆಸರುಗಳನ್ನೂ ಕ್ರಮವಾಗಿ ಹೇಳುತ್ತಾ ಧರಿಸಬೇಕು. ಮೂಗಿನ ಬುಡದಿಂದ ಆರಂಭಿಸಿ ಹಣೆಯ ಮೇಲ್ಭಾಗದವರೆಗೆ ಮೊದಲನೆಯ ಊರ್ಧ್ವಪುಂಡ್ರವನ್ನು ಧರಿಸಬೇಕು. ಅದು ಕೋಲಿನಂತೆ ಉದ್ದವಾಗಿಯೂ ಎರಡು ಅಂಗುಲದಷ್ಟು ಅಗಲವಾಗಿಯೂ ಮೇಲ್ಮುಖವಾಗಿಯೂ ಇರಬೇಕು. ಅದರ ಮಧ್ಯದಲ್ಲಿ ರಂಧ್ರವಿರಬೇಕು. ಶ್ರೀಹರಿಯ ಪಾದದ ಆಕಾರವುಳ್ಳದ್ದಾಗಿರಬೇಕು."

## ನಾಸಿಕಾಮೂಲಶಬ್ದದ ಅರ್ಥ

ನಾಸಿಕಾಯಾಸ್ತ್ರಿಭಾಗಂ ತು ನಾಸಾಮೂಲಮುದಾಹೃತಮ್ |
ತದಾದಿ ಕೇಶಪರ್ಯಂತಮೂರ್ಧ್ವಪುಂಡ್ರಂ ತು ಧಾರಯೇತ್ || (ವಾಸಿಷ್ಠ ವಚನ)

"ಮೂಗಿನ ತುದಿಯಿಂದ ಕೊನೆಯವರೆಗಿನ ಭಾಗದ ಅಳತೆಯನ್ನು ಮೂರು ಭಾಗವಾಗಿ ವಿಂಗಡಿಸಬೇಕು. ಆ ಮೂರು ಭಾಗಗಳಲ್ಲಿ ಮೇಲಿನ ಭಾಗವು ನಾಸಿಕಾಮೂಲವೆನಿಸುತ್ತದೆ. ಅಲ್ಲಿಂದ ಆರಂಭಿಸಿ ತಲೆಗೂದಲಿನವರೆಗೆ ಊರ್ಧ್ವಪುಂಡ್ರವನ್ನು ಧರಿಸಬೇಕು."

ಭ್ರುವೋರಧಸ್ತಾತ್ಕೇಶಾದಿಸ್ತದಾರಭ್ಯೋರ್ಧ್ವಪುಂಡ್ರಕಮ್ |
ಧರೇನ್ನಿತ್ಯಂ ಮಹೀಪಾಲ ಕೇಶಾಂತಂ ವಿಷ್ಣುತತ್ಪರಃ ||

"ಎರಡು ಹುಬ್ಬುಗಳ ಕೆಳಭಾಗವು ಕೇಶಾದಿ ಎನಿಸುತ್ತದೆ. ಅಲ್ಲಿಂದ ಆರಂಭಿಸಿ ತಲೆಗೂದಲಿನವರೆಗೆ ಊರ್ಧ್ವಪುಂಡ್ರವನ್ನು ಧರಿಸಬೇಕು."

ಮೋಕ್ಷಾರ್ಥೀ ಸ್ವರ್ಗಕಾಮೀ ಚ ಧರೇದಂಗೇಷು ನಿತ್ಯಶಃ |
ತಸ್ಮಾಚ್ಛಿದ್ರಾನ್ವಿತಂ ಪುಂಡ್ರಂ ದಂಡಾಕಾರಂ ತು ವಿನ್ಯಸೇತ್ ||
ನಿರಂತರಾಲಂ ಯತ್ಕುರ್ಯಾದೂರ್ಧ್ವಪುಂಡ್ರಂ ದ್ವಿಜಾಧಮಃ |
ಸ ತು ತತ್ರ ಸ್ಥಿತಂ ವಿಷ್ಣುಂ ಶ್ರಿಯಂ ಚೈವ ವ್ಯಪೋಹತಿ ||

"ಮೋಕ್ಷವನ್ನು ಅಪೇಕ್ಷಿಸುವವನೂ, ಸ್ವರ್ಗ ಮುಂತಾದ ನಶ್ವರ ಫಲಗಳನ್ನು ಅಪೇಕ್ಷಿಸುವವನೂ ದೇಹದಲ್ಲಿ ಊರ್ಧ್ವಪುಂಡ್ರಗಳನ್ನು ಧರಿಸಲೇಬೇಕು. ಅವುಗಳು ಮಧ್ಯದಲ್ಲಿ ರಂಧ್ರ ಮತ್ತು ಕೋಲಿನಂತೆ ಉದ್ದವಾದ ಆಕಾರಗಳಿಂದ ಯುಕ್ತವಾಗಿರಬೇಕು. ಆ ಊರ್ಧ್ವಪುಂಡ್ರಗಳ ಮಧ್ಯದಲ್ಲಿ ಶ್ರೀಹರಿಯೂ, ಲಕ್ಷ್ಮೀದೇವಿಯವರೂ ಸನ್ನಿಹಿತರಾಗಿರುವರು. ಈ ಊರ್ಧ್ವಪುಂಡ್ರಗಳ ಮಧ್ಯದಲ್ಲಿ ರಂಧ್ರವನ್ನು ಮಾಡದೆ ಧರಿಸಿದರೆ ಶ್ರೀಹರಿಯನ್ನೂ, ಲಕ್ಷ್ಮೀದೇವಿಯರನ್ನೂ ಮುಚ್ಚಿದಂತಾಗುವುದು. ಇದರಿಂದ ಇವರಿಬ್ಬರ ಸನ್ನಿಧಾನವು ಅವನ ಊರ್ಧ್ವಪುಂಡ್ರಗಳಲ್ಲಿ ಇಲ್ಲದಂತಾಗುವುದು."

**ಹನ್ನೆರಡು ಊರ್ಧ್ವಪುಂಡ್ರಗಳ ಅಳತೆ ಮತ್ತು ಆಕಾರ**

ಆರಭ್ಯ ನಾಸಿಕಾಮೂಲಂ ಲಲಾಟಾಂತಂ ಲಿಖೇನ್ಮೃದಮ್ |
ಸಮಾರಭ್ಯ ಭ್ರುವೋರ್ಮಧ್ಯೇ ದಂಡಾಕಾರಂ ಪ್ರಕಲ್ಪಯೇತ್ ||
ವರ್ತಿದೀಪಾಕೃತಿಂ ವಾಪಿ ವೇಣುಪತ್ರಾಕೃತಿಂ ತಥಾ |
ಪದ್ಮಸ್ಯ ಮುಕುಲಾಕಾರಂ ಕುಮುದಸ್ಯಾಥ ವಾಕೃತಿಮ್ ||
ಮತ್ಸ್ಯಕೂರ್ಮಾಕೃತಿಂ ವಾಪಿ ಶಂಖಾಕಾರಮತಃ ಪರಮ್ || (ಪಾದ್ಮವಚನ)

"ಮೂಗಿನ ಬುಡದಿಂದ ಆರಂಭಿಸಿ ಹಣೆಯ ಮೇಲ್ಭಾಗದವರೆಗೆ ಎರಡು ಹುಬ್ಬುಗಳ ಮಧ್ಯದಲ್ಲಿ ಕೋಲಿನ ಆಕಾರದಿಂದ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಉಳಿದ ಊರ್ಧ್ವಪುಂಡ್ರಗಳನ್ನು ಬತ್ತಿಯಲ್ಲಿ ಹಚ್ಚಿದ ದೀಪದಂತೆಯೂ, ಬಿದಿರಿನ ಎಲೆಯಂತೆಯೂ, ಪದ್ಮದ ಅಥವಾ ಕನ್ನೈದಿಲೆಯ ಮೊಗ್ಗಿನಂತೆಯೂ, ಮತ್ಸ್ಯಕೂರ್ಮಾದಿರೂಪಗಳಂತೆಯೂ, ಆಕಾರಗಳಿಂದ ಧರಿಸಬೇಕು. ಕೆಲವು ಊರ್ಧ್ವಪುಂಡ್ರಗಳನ್ನು ಶಂಖದ ಆಕಾರದಿಂದ ಧರಿಸಬೇಕು."

ದಂಡಾಕಾರಂ ಲಲಾಟೇ ತು ಹೃದಯೇ ಪದ್ಮಕುಡ್ಮಲಮ್ |
ವೇಣುಪತ್ರಾಕೃತಿಂ ಬಾಹ್ವೋರನ್ಯಾನ್ ದೀಪಾಕೃತೀನ್ ನ್ಯಸೇತ್ ||
ದಂಡಾಕಾರಂ ದ್ವ್ಯಂಗುಲಂ ಸ್ಯಾದೇಕಾಂಗುಲಮಥಾಪಿ ವಾ |
ಮಧ್ಯೇ ಛಿದ್ರೇಣ ಸಂಯುಕ್ತಂ ತರ್ಜನ್ಯಗ್ರಪ್ರಮಾಣಕಮ್ || (ಪಾದ್ಮವಚನ)

"ಹಣೆಯಲ್ಲಿ ಕೋಲಿನಂತೆ ಉದ್ದವಾಗಿಯೂ, ಎರಡು ಅಂಗುಲ ಅಥವಾ ಒಂದು ಅಂಗುಲದಷ್ಟು, ಅಥವಾ ತರ್ಜನೀ ಬೆರಳಿನ ತುದಿಯಷ್ಟು ಅಗಲವಾಗಿಯೂ, ಇರುವ ಊರ್ಧ್ವಪುಂಡ್ರವನ್ನು ಧರಿಸಬೇಕು. ಆ ಊರ್ಧ್ವಪುಂಡ್ರದ ಮಧ್ಯದಲ್ಲಿ ರಂಧ್ರ ಇರಬೇಕು. ಎರಡು ತೋಳುಗಳಲ್ಲಿ ಬಿದಿರಿನ ಎಲೆಯ ಆಕಾರದಿಂದಲೂ, ಎದೆಯಲ್ಲಿ ಕಮಲದ ಮೊಗ್ಗಿನ ಆಕಾರದಿಂದಲೂ ಉಳಿದ ಅವಯವಗಳಲ್ಲಿ ದೀಪದ ಆಕಾರದಿಂದಲೂ, ಯುಕ್ತವಾಗಿರುವ ಊರ್ಧ್ವಪುಂಡ್ರಗಳನ್ನು ಧರಿಸಬೇಕು."

ಹೃದಯೇ ಮತ್ಸ್ಯಕೂರ್ಮಾದಿವದ್ವಾ ಧಾರಯೇತ್ | (ಸ್ಮೃತಿಮುಕ್ತಾವಲೀಕಾರರ ವಚನ)

"ಎದೆಯಲ್ಲಿ ಹಿಂದೆ ಹೇಳಿದಂತೆ ಪದ್ಮದ ಮೊಗ್ಗಿನ ಆಕಾರದಿಂದಾಗಲೀ, ಮತ್ಸ್ಯ, ಕೂರ್ಮ ಮುಂತಾದ ಶ್ರೀಹರಿಯ ಅವತಾರ ರೂಪಗಳ ಆಕಾರಗಳಿಗೆ ಸಮವಾದ ಆಕಾರಗಳಿಂದಲಾಗಲೀ ಯುಕ್ತವಾಗಿರುವ ಊರ್ಧ್ವಪುಂಡ್ರಗಳನ್ನು ಧರಿಸಬೇಕು."

**ಊರ್ಧ್ವಪುಂಡ್ರಗಳನ್ನು ಧರಿಸುವಾಗ ಹೇಳುವ ಮಂತ್ರಗಳು**

ಲಲಾಟೇ ಕೇಶವಂ ವಿದ್ಯಾತ್ಕುಕ್ಷೌ ನಾರಾಯಣಂ ನ್ಯಸೇತ್ |
ವಕ್ಷಃಸ್ಥಲೇ ಮಾಧವಂ ಚ ಗೋವಿಂದಂ ಕಂಠಕೂಬರೇ ||
ವಿಷ್ಣುಂ ಚ ದಕ್ಷಿಣೇ ಪಾರ್ಶ್ವೇ ಬಾಹೌ ಚ ಮಧುಸೂದನಮ್ |
ತ್ರಿವಿಕ್ರಮಂ ಕಂಠದೇಶೇ ವಾಮನಂ ವಾಮಪಾರ್ಶ್ವತಃ ||

ಶ್ರೀಧರಂ ವಾಮಬಾಹೌ ತು ಹೃಷೀಕೇಶಂ ತು ಕಂಧರೇ |
ಪೃಷ್ಠೇ ಚ ಪದ್ಮನಾಭಂ ತು ಗಲೇ ದಾಮೋದರಂ ತಥಾ ||
ತತ್ಪ್ರಕ್ಷಾಲಿತತೋಯೇನ ವಾಸುದೇವೇತಿ ಮೂರ್ಧನಿ | (ಹಾರೀತರ ವಚನ)

"ಹಣೆ ಮುಂತಾದ ಹದಿಮೂರು ಸ್ಥಳಗಳಲ್ಲಿರುವ ಊರ್ಧ್ವಪುಂಡ್ರಗಳಲ್ಲಿ ಶ್ರೀಹರಿಯ ಬೇರೆ ಬೇರೆ ಮೂರ್ತಿಗಳು ವಾಸಿಸುತ್ತಿರುವರು. ಹಣೆಯಲ್ಲಿ ಕೇಶವನೂ, ಹೊಟ್ಟೆಯ ಮಧ್ಯದಲ್ಲಿ ನಾರಾಯಣನೂ, ಎದೆಯ ಮಧ್ಯದಲ್ಲಿ ಮಾಧವನೂ, ಕುತ್ತಿಗೆಯ ಎದುರುಭಾಗದಲ್ಲಿ ಗೋವಿಂದನೂ, ಬಲಹೊಟ್ಟೆಯಲ್ಲಿ ವಿಷ್ಣುವೂ, ಬಲತೋಳಿನಲ್ಲಿ ಮಧುಸೂದನನೂ, ಕಂಠದ ಬಲಭಾಗದಲ್ಲಿ ತ್ರಿವಿಕ್ರಮನೂ, ಎಡಹೊಟ್ಟೆಯಲ್ಲಿ ವಾಮನನೂ, ಎಡಭುಜದಲ್ಲಿ ಶ್ರೀಧರನೂ, ಕುತ್ತಿಗೆಯ ಎಡಭಾಗದಲ್ಲಿ ಹೃಷೀಕೇಶನೂ, ಬೆನ್ನಿನಲ್ಲಿ ಪದ್ಮನಾಭನೂ, ಕುತ್ತಿಗೆಯ ಹಿಂದಿನ ಭಾಗದಲ್ಲಿ ದಾಮೋದರನೂ ವಾಸಿಸುತ್ತಿರುವರು. ಆಯಾಯಾ ಭಾಗಗಳಲ್ಲಿರುವ ಶ್ರೀಹರಿಯ ಮೂರ್ತಿಗಳನ್ನು ಸ್ಮರಿಸುತ್ತಾ ಆಯಾಯಾ ಭಾಗಗಳಲ್ಲಿ ಕೇಶವಾದಿ ಮೂರ್ತಿಗಳ ಕ್ರಮವನ್ನು ಅನುಸರಿಸಿ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಹನ್ನೆರಡು ನಾಮಗಳನ್ನು ಧರಿಸಿದ ಮೇಲೆ ಎಡಗೈಯನ್ನು ನೀರಿನಿಂದ ತೊಳೆಯಬೇಕು. ತೊಳೆದ ನೀರಿನಿಂದ ವಾಸುದೇವಮೂರ್ತಿಯನ್ನು ಸ್ಮರಿಸುತ್ತಾ ತಲೆಯಲ್ಲಿ ಊರ್ಧ್ವಪುಂಡ್ರವೊಂದನ್ನು ಧರಿಸಬೇಕು."

### ಸ್ಥಾನಭೇದದಿಂದ ಊರ್ಧ್ವಪುಂಡ್ರದ ಆಳತೆಭೇದ ಮತ್ತು ಮೂರ್ತಿಧ್ಯಾನಭೇದ

ಲಲಾಟೇ ಕೇಶವಾಯೇತಿ ಚತುರಂಗುಲಮಾಯತಮ್ |
ಚತುಶ್ಚಕ್ರಧರಂ ದೇವಂ ಶುದ್ಧಜಾಂಬೂನದಪ್ರಭಮ್ ||
ಕುಕ್ಷೌ ನಾರಾಯಣಾಯೇತಿ ಧಾರಯೇತ ದಶಾಂಗುಲಮ್ |
ಚತುಃಶಂಖಧರಂ ದೇವಂ ಶುದ್ಧಜಾಂಬೂನದಪ್ರಭಮ್ ||
ವಕ್ಷಃಸ್ಥಲೇ ಮಾಧವೇತಿ ನ್ಯಸೇದಷ್ಟಾಂಗುಲಂ ತಥಾ |
ಚತುರ್ಗದಾಧರಂ ದೇವಂ ಪದ್ಮಕಿಂಜಲ್ಕಸನ್ನಿಭಮ್ ||
ಗೋವಿಂದಾಯೇತಿ ಚ ಚತುರಂಗುಲಂ ಕಂಠಕೂಬರೇ |
ನಮೋ ವಿಷ್ಣವ ಇತ್ಯುಕ್ತ್ವಾ ಕುಕ್ಷೌ ದಕ್ಷಿಣಪಾರ್ಶ್ವಕೇ ||
ಅಷ್ಟಾಂಗುಲಪ್ರಮಾಣೇನ ಧಾರಯೇದೂರ್ಧ್ವಪುಂಡ್ರಕಮ್ |
ಮಧುಸೂದನಂ ಬಾಹುಮಧ್ಯೇ ನ್ಯಸೇದಷ್ಟಾಂಗುಲಂ ತಥಾ ||
ಚತುರ್ಮುಸಲಿನಂ ದೇವಮರವಿಂದಾಭಮೇವ ಚ |
ತ್ರಿವಿಕ್ರಮಾಯೇತಿ ಭುಜೇ ಧಾರಯೇಚ್ಚತುರಂಗುಲಮ್ ||
ಚತುಶ್ಶಾರ್ಙ್ಗಧರಂ ದೇವಂ ಜ್ವಲನಾಗ್ನಿಸಮಪ್ರಭಮ್ |
ವಾಮನಂ ವಾಮಕುಕ್ಷೌ ತು ಧಾರಯೇತ್ತು ದಶಾಂಗುಲಮ್ ||
ಚತುರ್ವಜ್ರಧರಂ ದೇವಂ ತರುಣಾದಿತ್ಯಸನ್ನಿಭಮ್ |
ಶ್ರೀಧರಂ ಬಾಹುಮಧ್ಯೇ ತು ನ್ಯಸೇದಷ್ಟಾಂಗುಲಂ ತಥಾ ||
ಪಟ್ಟಿಶಾಯುಧಹಸ್ತಂ ಚ ಪುಂಡರೀಕಾಭಮೇವ ಚ |
ಹೃಷೀಕೇಶೇತಿ ವಾಮಾಂಸೇ ಧಾರಯೇಚ್ಚತುರಂಗುಲಮ್ ||

ಚತುರ್ಮೂರ್ಧ್ನರಿಣಂ ದೇವಂ ವಿದ್ಯುದ್ವರ್ಣಸಮಪ್ರಭಮ್ |
ಅಪರೇ ಪದ್ಮನಾಭೇತಿ ಧಾರಯೇಚ್ಚತುರಂಗುಲಮ್ ||
ಸರ್ವಾಯುಧಧರಂ ದೇವಂ ಸಹಸ್ರಾರ್ಕಸಮಪ್ರಭಮ್ |
ಕಕುದ್ದಾಮೋದರಾಯೇತಿ ಧಾರಯೇಚ್ಚತುರಂಗುಲಮ್ ||
ಚತುಃಪಾಶಧರಂ ದೇವಮಿಂದ್ರೋಪಲಕಸನ್ನಿಭಮ್ |
ವಾಸುದೇವಾಯೇತಿ ನಮೋ ಮೂರ್ಧ್ನಿ ಚೈವಂ ತ್ರಯೋದಶಮ್ ||
ಧಾರಣಾದೂರ್ಧ್ವಪುಂಡ್ರಸ್ಯ ಶರೀರಂ ಮಂದಿರಂ ಹರೇಃ |
ತಸ್ಮಾಚ್ಚ ಸತತಂ ಧಾರ್ಯಮೂರ್ಧ್ವಪುಂಡ್ರಂ ದ್ವಿಜೋತ್ತಮೈಃ || (ಪರಾಶರರ ವಚನ)

"ಶರೀರದಲ್ಲಿ ಹದಿಮೂರು ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಹಾಗೆ ಧರಿಸಿದ್ದರಿಂದ ಶರೀರವು ಶ್ರೀಹರಿಯ ಮಂದಿರಕ್ಕೆ ಸಮಾನವಾಗುತ್ತದೆ. ಇದರಿಂದ ಶರೀರವು ಶ್ರೀಹರಿಯ ವಿಶೇಷ ಸನ್ನಿಧಾನವುಳ್ಳದ್ದಾಗುತ್ತದೆ. ಆದ್ದರಿಂದಲೇ ಬ್ರಾಹ್ಮಣಶ್ರೇಷ್ಠರಿಂದ ಯಾವಾಗಲೂ ಊರ್ಧ್ವಪುಂಡ್ರವು ಧರಿಸಲ್ಪಡಲೇಬೇಕು. (1) ಹಣೆಯಲ್ಲಿ 4 ಅಂಗುಲದಷ್ಟು ಎತ್ತರವಾದ ಆಕಾರವುಳ್ಳವನಾಗಿಯೂ, ನಾಲ್ಕು ಕೈಗಳಲ್ಲಿ ನಾಲ್ಕು ಚಕ್ರಗಳನ್ನು ಧರಿಸಿದವನಾಗಿಯೂ, ಶುದ್ಧ ಬಂಗಾರದಂತೆ ಹೊಳೆಯುತ್ತಿರುವವನಾಗಿಯೂ, ಇರುವ ಕೇಶವನನ್ನು ಸ್ಮರಿಸುತ್ತಾ "ಕೇಶವಾಯ ನಮಃ" ಎಂಬ ಮಂತ್ರವನ್ನು ಹೇಳುತ್ತಾ ಊರ್ಧ್ವಪುಂಡ್ರವನ್ನು ಧರಿಸಬೇಕು. (2) ಹೊಟ್ಟೆಯ ಮಧ್ಯಭಾಗದಲ್ಲಿ ಹತ್ತು ಅಂಗುಲ ಎತ್ತರವುಳ್ಳವನಾಗಿಯೂ, ನಾಲ್ಕು ಕೈಗಳಲ್ಲಿ ನಾಲ್ಕು ಶಂಖಗಳನ್ನು ಧರಿಸಿದವನಾಗಿಯೂ, ಶುದ್ಧ ಬಂಗಾರದಂತೆ ಹೊಳೆಯುತ್ತಿರುವನಾಗಿಯೂ, ಇರುವ ನಾರಾಯಣನನ್ನು ಸ್ಮರಿಸುತ್ತಾ "ನಾರಾಯಣಾಯ ನಮಃ" ಎಂಬ ಮಂತ್ರವನ್ನು ಹೇಳುತ್ತಾ ಊರ್ಧ್ವಪುಂಡ್ರವನ್ನು ಧರಿಸಬೇಕು. (3) ಎದೆಯ ಮಧ್ಯಭಾಗದಲ್ಲಿ, ಎಂಟು ಅಂಗುಲ ಎತ್ತರವುಳ್ಳವನಾಗಿಯೂ, ನಾಲ್ಕು ಕೈಗಳಲ್ಲಿ ನಾಲ್ಕು ಗದೆಗಳನ್ನು ಧರಿಸಿದವನಾಗಿಯೂ ಪದ್ಮದ ಕೇಸರದಂತೆ ಬಣ್ಣವುಳ್ಳವನಾಗಿಯೂ ಇರುವ ಮಾಧವನನ್ನು ಸ್ಮರಿಸುತ್ತಾ "ಮಾಧವಾಯ ನಮಃ" ಎಂಬ ಮಂತ್ರವನ್ನು ಹೇಳುತ್ತಾ ಧರಿಸಬೇಕು. (4) ನಾಲ್ಕು ಅಂಗುಲ ಎತ್ತರವುಳ್ಳ, ಗೋವಿಂದನನ್ನು ಸ್ಮರಿಸುತ್ತಾ "ಗೋವಿಂದಾಯ ನಮಃ" ಎಂಬ ಮಂತ್ರವನ್ನು ಹೇಳುತ್ತಾ ಕುತ್ತಿಗೆಯ ಮುಂಭಾಗದಲ್ಲಿ ಧರಿಸಬೇಕು. (5) ಹೊಟ್ಟೆಯ ಬಲಭಾಗದಲ್ಲಿ, ಎಂಟು ಅಂಗುಲ ಎತ್ತರವಾದ ಆಕಾರವುಳ್ಳ ವಿಷ್ಣುವನ್ನು ಸ್ಮರಿಸುತ್ತಾ "ವಿಷ್ಣವೇ ನಮಃ" ಎಂಬ ಮಂತ್ರವನ್ನು ಹೇಳುತ್ತಾ ಧರಿಸಬೇಕು. (6) ಬಲತೋಳಿನ ಮಧ್ಯದಲ್ಲಿ, ನಾಲ್ಕು ಕೈಗಳಲ್ಲಿ ಒನಕೆಗಳನ್ನು ಧರಿಸಿದವನೂ, ಎಂಟು ಅಂಗುಲದಷ್ಟು ಎತ್ತರವುಳ್ಳವನೂ, ಕಮಲದಂತೆ ಸುಂದರವಾದ ಶರೀರವುಳ್ಳವನೂ, ಆಗಿರುವ ಮಧುಸೂದನನನ್ನು ಸ್ಮರಿಸುತ್ತಾ "ಮಧುಸೂದನಾಯ ನಮಃ" ಎಂದು ಹೇಳುತ್ತಾ ಧರಿಸಬೇಕು. (7) ಕಂಠದ ಬಲಭಾಗದಲ್ಲಿ ನಾಲ್ಕು ಅಂಗುಲ ಎತ್ತರವುಳ್ಳವನೂ, ನಾಲ್ಕು ಶಾರ್ಙ್ಗ ಎಂಬ ಧನುಸ್ಸುಗಳನ್ನು ಧರಿಸುತ್ತಿರುವವನೂ, ಜ್ವಲಿಸುತ್ತಿರುವ ಬೆಂಕಿಯಂತೆ ಹೊಳೆಯುತ್ತಿರುವವನೂ, ಆಗಿರುವ ತ್ರಿವಿಕ್ರಮನನ್ನು ಸ್ಮರಿಸುತ್ತಾ "ತ್ರಿವಿಕ್ರಮಾಯ ನಮಃ" ಎಂದು ಹೇಳುತ್ತಾ ಧರಿಸಬೇಕು. (8) ಹೊಟ್ಟೆಯ ಎಡಭಾಗದಲ್ಲಿ ಹತ್ತು ಅಂಗುಲ ಎತ್ತರವುಳ್ಳವನೂ, ನಾಲ್ಕು ಕೈಗಳಲ್ಲಿ ನಾಲ್ಕು ವಜ್ರಾಯುಧಗಳನ್ನು ಧರಿಸುತ್ತಿರುವವನೂ, ಎಳೆಯ ಸೂರ್ಯನಂತೆ ಹೊಳೆಯುತ್ತಿರುವವನೂ, ಆಗಿರುವ ವಾಮನನನ್ನು ಸ್ಮರಿಸುತ್ತಾ "ವಾಮನಾಯ ನಮಃ" ಎಂದು ಹೇಳುತ್ತಾ ಧರಿಸಬೇಕು. (9) ಎಡತೋಳಿನ ಮಧ್ಯದಲ್ಲಿ, ಎಂಟು ಅಂಗುಲ ಎತ್ತರವಾಗಿರುವವನೂ, ಪಟ್ಟಿಸ ಎಂಬ ನಾಲ್ಕು ಆಯುಧಗಳನ್ನು ನಾಲ್ಕು ಕೈಗಳಿಂದ ಧರಿಸುತ್ತಿರುವವನೂ, ಕಮಲದಂತೆ ಶೋಭಿಸುತ್ತಿರುವವನೂ, ಆಗಿರುವ ಶ್ರೀಧರನನ್ನು ಸ್ಮರಿಸುತ್ತಾ "ಶ್ರೀಧರಾಯ ನಮಃ" ಎಂದು ಹೇಳುತ್ತಾ ಧರಿಸಬೇಕು. (10) ಕುತ್ತಿಗೆಯ ಎಡಭಾಗದಲ್ಲಿ, ನಾಲ್ಕು ಅಂಗುಲ ಎತ್ತರವುಳ್ಳವನೂ,

ನಾಲ್ಕು ಕೈಗಳಲ್ಲಿ ನಾಲ್ಕು ಮುದ್ಗರ ಎಂಬ ಆಯುಧಗಳನ್ನು ಧರಿಸುತ್ತಿರುವವನೂ, ಮಿಂಚಿನ ಕಾಂತಿಯಂತೆ ಕಾಂತಿಯಿಂದ ಯುಕ್ತನಾಗಿರುವವನೂ, ಆಗಿರುವ ಹೃಷೀಕೇಶನನ್ನು ಸ್ಮರಿಸುತ್ತಾ "ಹೃಷೀಕೇಶಾಯ ನಮಃ" ಎಂಬ ಮಂತ್ರವನ್ನು ಹೇಳುತ್ತಾ ಧರಿಸಬೇಕು. (11) ಬೆನ್ನಿನ ಮಧ್ಯಬಾಗದಲ್ಲಿ, ನಾಲ್ಕು ಅಂಗುಲ ಎತ್ತರವುಳ್ಳವನೂ, ಸಕಲ ಆಯುಧಗಳನ್ನು ಧರಿಸುತ್ತಿರುವವನೂ, ಸಹಸ್ರ ಸೂರ್ಯರಂತೆ ಪ್ರಕಾಶಿಸುತ್ತಿರುವವನೂ, ಆಗಿರುವ ಪದ್ಮನಾಭನನ್ನು ಸ್ಮರಿಸುತ್ತಾ "ಪದ್ಮನಾಭಾಯ ನಮಃ" ಎಂಬ ಮಂತ್ರವನ್ನು ಹೇಳುತ್ತಾ ಧರಿಸಬೇಕು. (12) ಕಂಠದ ಹಿಂಭಾಗದಲ್ಲಿ, ನಾಲ್ಕು ಅಂಗುಲ ಎತ್ತರವುಳ್ಳವನೂ, ನಾಲ್ಕು ಕೈಗಳಲ್ಲಿ ನಾಲ್ಕು ಪಾಶಗಳನ್ನು ಸ್ಮರಿಸುತ್ತಾ "ದಾಮೋದರಾಯ ನಮಃ" ಎಂಬ ಮಂತ್ರವನ್ನು ಜಪಿಸುತ್ತಾ ಧರಿಸಬೇಕು. (13) "ವಾಸುದೇವಾಯ ನಮಃ" ಎಂಬ ಮಂತ್ರವನ್ನು ಹೇಳುತ್ತಾ ತಲೆಯಲ್ಲಿ ಧರಿಸಬೇಕು.

### ಊರ್ಧ್ವಪುಂಡ್ರಗಳನ್ನು ಧರಿಸುವ ಕ್ರಮ

ಲಲಾಟೇ ಪ್ರಥಮಂ ವಿದ್ಯಾದ್ದ್ವಿತೀಯಮುದರೇ ತಥಾ |
ಹೃದಯೇ ತು ತೃತೀಯಂ ಸ್ಯಾತ್ಕಂಠೇ ಚೈವ ಚತುರ್ಥಕಮ್ ||
ಕುಕ್ಷೌ ದಕ್ಷಿಣಪಾರ್ಶ್ವೇ ತು ಪಂಚಮಂ ಸ್ಯಾದ್ವಿಧಾನತಃ |
ಷಷ್ಠಂ ದಕ್ಷಿಣಬಾಹೌ ಸ್ಯಾತ್ಸಪ್ತಮಂ ಕಂಠಪಾರ್ಶ್ವಕೇ ||
ಕುಕ್ಷೌ ವಾಮಪ್ರದೇಶೇ ಸ್ಯಾದಷ್ಟಮಂ ನವಮಂ ಸ್ಮೃತಮ್ |
ವಾಮಬಾಹೌ ತು ತತ್ಪಾರ್ಶ್ವೇ ಕಂಠೇ ತು ದಶಮಂ ಸ್ಮೃತಮ್ ||
ಏಕಾದಶಂ ಪೃಷ್ಠಭಾಗೇ ದ್ವಾದಶಂ ಕಕುದಿ ಸ್ಮೃತಮ್ |
ತ್ರಯೋದಶಮಥೋ ಮೂರ್ಧ್ನಿ ಧಾರಯೇದೂರ್ಧ್ವಪುಂಡ್ರಕಮ್ ||
ಸ್ಥಾನಾನಿ ದ್ವಾದಶಾಷ್ಟೌ ವೇತ್ಯಾಹುಃ ಕೇಚಿನ್ಮನೀಷಿಣಃ |
ದ್ವಾದಶೇತಿ ಚ ಯಃ ಪಕ್ಷಸ್ತಸ್ಮಿನ್ ಶಿರಸಿ ಧಾರಯೇತ್ || (ನಾರದೀಯ ವಚನ)

(1) ಹಣೆ (2) ಹೊಟ್ಟೆಯ ಮಧ್ಯಭಾಗ (3) ಎದೆಯ ಮಧ್ಯಭಾಗ (4) ಕಂಠದಲ್ಲಿ ಮುಂಭಾಗ (5) ಹೊಟ್ಟೆಯ ಬಲಭಾಗ (6) ಬಲತೋಳಿನ ಮಧ್ಯಭಾಗ (7) ಕುತ್ತಿಗೆಯಲ್ಲಿ ಬಲಭಾಗ (8) ಹೊಟ್ಟೆಯ ಎಡಭಾಗ (9) ಎಡತೋಳಿನ ಮಧ್ಯಭಾಗ (10) ಕುತ್ತಿಗೆಯಲ್ಲಿ ಎಡಭಾಗ (11) ಬೆನ್ನಿನ ಮಧ್ಯ (12) ಕುತ್ತಿಗೆಯಲ್ಲಿ ಹಿಂಭಾಗ (13) ತಲೆ. ಹೀಗೆ ಹದಿಮೂರು ಸ್ಥಾನಗಳಲ್ಲಿ ಕ್ರಮದಿಂದ ಊರ್ಧ್ವಪುಂಡ್ರಗಳನ್ನು ಇಡಬೇಕು. ಕೆಲವರು ಹದಿಮೂರು ಊರ್ಧ್ವಪುಂಡ್ರಗಳೆಂದೂ, ಮತ್ತೆ ಕೆಲವರು ಹನ್ನೆರಡು ಊರ್ಧ್ವಪುಂಡ್ರಗಳೆಂದೂ, ಇನ್ನು ಕೆಲವರು ಎಂಟು ಊರ್ಧ್ವಪುಂಡ್ರಗಳೆಂದೂ ಹೇಳುತ್ತಿರುವರು. ಈ ಮೂರು ಮತಗಳಲ್ಲಿ ಹದಿಮೂರು, ಹನ್ನೆರಡು ಎಂಬ ಎರಡು ಪಕ್ಷಗಳು ಬಹುಮತದಿಂದ ಅಂಗೀಕರಿಸಲ್ಪಟ್ಟಿವೆ. ಹನ್ನೆರಡು ಊರ್ಧ್ವಪುಂಡ್ರಗಳು ಎಂಬ ಪಕ್ಷದಲ್ಲಿ, ಕುತ್ತಿಗೆಯ ಹಿಂಭಾಗದಲ್ಲಿ ಊರ್ಧ್ವಪುಂಡ್ರವನ್ನು ಧರಿಸಬೇಕಾಗಿಲ್ಲ. ಬೆನ್ನಿನ ಮಧ್ಯದಲ್ಲಿ ಹನ್ನೊಂದನೆಯ ಊರ್ಧ್ವಪುಂಡ್ರವನ್ನು ಧರಿಸಿ ಕೂಡಲೇ ಹನ್ನೆರಡನೆಯ ಊರ್ಧ್ವಪುಂಡ್ರವನ್ನು ತಲೆಯಲ್ಲಿ ಧರಿಸಬೇಕು.

ಶ್ರೀವತ್ಸಂ ದಕ್ಷಿಣೋರಸ್ಕೇ ವಿನ್ಯಸೇತ್ಪದ್ಮಮೇವ ಚ | (ಬ್ರಹ್ಮಾಂಡ ವಚನ)

"ಎದೆಯ ಬಲಭಾಗದಲ್ಲಿ, ಶ್ರೀವತ್ಸ ಎಂಬ ಚಿಹ್ನವನ್ನು ಧರಿಸಬೇಕು. ಅದು ಪದ್ಮದ ಆಕಾರಕ್ಕೆ ಸಮವಾದ ಆಕಾರವುಳ್ಳದ್ದಾಗಿರಬೇಕು."

ನಮೋಽಸ್ತು ಕೇಶವಾಯೇತಿ ಸವ್ಯಸ್ತನಮುಪ್ಯೈವ ತು | (ವಿಷ್ಣುತೀರ್ಥೀಯ ವಚನ)

"ಎಡಮೊಲೆಯ ಪಕ್ಕದಲ್ಲಿ "ಕೇಶವಾಯ ನಮಃ" ಎಂದು ಹೇಳುತ್ತಾ ಒಂದು ಊರ್ಧ್ವಪುಂಡ್ರವನ್ನು ಧರಿಸಬೇಕು."

ಊರ್ಧ್ವಪುಂಡ್ರಂ ಲಲಾಟೇ ತು ಸರ್ವೇಷಾಂ ಪ್ರಥಮಂ ಸ್ಮೃತಮ್ |
ಲಲಾಟಾದಿಕ್ರಮೇಣೈವ ಧಾರಣಂ ತು ವಿಧೀಯತೇ || (ಪಾದ್ಮವಚನ)

"ಎಲ್ಲಾ ಊರ್ಧ್ವಪುಂಡ್ರಗಳ ಮಧ್ಯದಲ್ಲಿ, ಹಣೆಯಲ್ಲಿ ಧರಿಸುವ ಊರ್ಧ್ವಪುಂಡ್ರವು ಮೊದಲನೆಯ ಊರ್ಧ್ವಪುಂಡ್ರವೆನಿಸುತ್ತದೆ. ಹಣೆಯ ಊರ್ಧ್ವಪುಂಡ್ರದ ಅನಂತರದಲ್ಲಿ ಕ್ರಮದಿಂದ ಎಲ್ಲಾ ಊರ್ಧ್ವಪುಂಡ್ರಗಳನ್ನೂ ಧರಿಸಬೇಕು."

ದಶಾಂಗುಲಪ್ರಮಾಣಂ ತು ಉತ್ತಮಂ ಪರಿಚತೇ |
ನವಾಂಗುಲಂ ಮಧ್ಯಮಂ ಸ್ಯಾದಷ್ಟಾಂಗುಲಮತಃ ಪರಮ್ || (ಪಾದ್ಮವಚನ)

"ಹತ್ತು ಅಂಗುಲ ಎತ್ತರವುಳ್ಳ ಊರ್ಧ್ವಪುಂಡ್ರವು ಉತ್ತಮವೆಂದೂ, ಒಂಭತ್ತು ಅಂಗುಲ ಎತ್ತರವುಳ್ಳವುಗಳು ಮಧ್ಯಮವೆಂದೂ, ಎಂಟು ಅಂಗುಲ ಎತ್ತರವುಳ್ಳವುಗಳು ಅಧಮವೆಂದೂ ತಿಳಿಯಬೇಕು."

(ಹಿಂದೆ ಹದಿಮೂರು ಊರ್ಧ್ವಪುಂಡ್ರಗಳಲ್ಲಿರುವ ಶ್ರೀಹರಿಯ ಕೇಶವಾದಿಮೂರ್ತಿಗಳ ಉದ್ದಳತೆಯು ಹೇಳಲ್ಪಟ್ಟಿತು. ಇದರಿಂದ ಆ ಮೂರ್ತಿಗಳ ಅಳತೆಯೇ ಆಯಾ ಊರ್ಧ್ವಪುಂಡ್ರಗಳ ಅಳತೆಯೆಂದು ಹೇಳಲ್ಪಟ್ಟಂತಾಯಿತು. ಈ ಹದಿಮೂರು ಊರ್ಧ್ವಪುಂಡ್ರಗಳ ಮಧ್ಯದಲ್ಲಿ, ಹಣೆಯಲ್ಲಿರುವ ಊರ್ಧ್ವಪುಂಡ್ರದ ಅಳತೆಯು ಮೂಗಿನ ತುದಿಯಿಂದ ಆರಂಭಿಸಿ ತಲೆಯ ಕೂದಲಿನವರೆಗೆ ಎಂದು "ನಾಸಾದಿಕೇಶಪರ್ಯಂತಂ" ಎಂಬ ವಚನದಿಂದ ಹೇಳಲ್ಪಟ್ಟಿದೆ. ಆ ಅಳತೆಗಿಂತ ಹೆಚ್ಚಾಗಲೀ, ಕಡಿಮೆಯಾಗಲೀ, ಮಾಡಿದರೆ ಈ ಪ್ರಮಾಣದ ವಿರೋಧವು ಬರುತ್ತದೆ. ಆದ್ದರಿಂದ ಹಾಗೆ ಮಾಡುವುದು ಅಸಂಭವ. ಆದ್ದರಿಂದ ಆ ಊರ್ಧ್ವಪುಂಡ್ರದ ಅಳತೆಯಲ್ಲಿ ವ್ಯತ್ಯಾಸವು ಏರ್ಪಡುವ ಸಂಭವವಿಲ್ಲ. ಉಳಿದ ಹನ್ನೆರಡು ಊರ್ಧ್ವಪುಂಡ್ರಗಳ ಅಳತೆಯು ಹಿಂದೆ ಉದಾಹರಿಸಿದ ಪರಾಶರರ ವಚನದಿಂದ ತಿಳಿಸಲ್ಪಟ್ಟಿದೆ. ಈಗ ಆ ವಚನಕ್ಕೆ ವಿರುದ್ಧ ಅಭಿಪ್ರಾಯವುಳ್ಳ ಪಾದ್ಮಪುರಾಣವಚನವು ಮೇಲೆ ಕೊಡಲ್ಪಟ್ಟಿದೆ. ಪರಾಶರರ ವಚನವೂ, ಪಾದ್ಮಪುರಾಣವಚನವೂ, ಸಮಬಲವುಳ್ಳದ್ದಾಗಿರುವುದರಿಂದ ಎರಡು ವಾಕ್ಯಗಳಲ್ಲಿ ಯಾವುದಾದರೊಂದು ವಾಕ್ಯದಂತೆ ನಡೆದುಕೊಳ್ಳಬೇಕು.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

### ಊರ್ಧ್ವಪುಂಡ್ರಗಳ ಮಧ್ಯದಲ್ಲಿ ರಂಧ್ರವಿರಬೇಕೇ?

ಊರ್ಧ್ವಪುಂಡ್ರಂ ದ್ವಿಜಃ ಕುರ್ಯಾದ್ದಂಡಾಕಾರಂ ಸುಶೋಭನಮ್ |
ಮಧ್ಯೇ ಛಿದ್ರಂ ವೈಷ್ಣವಸ್ತು ನಮೋಽಂತೈಃ ಕೇಶವಾದಿಭಿಃ || 1 || (ಸ್ಕಾಂದ ವಚನ)

"ಕೋಲಿನಂತೆ ಉದ್ದವೂ, ನೆಟ್ಟಗೆಯೂ, ಇರುವ ಸುಂದರವಾದ ಊರ್ಧ್ವಪುಂಡ್ರವನ್ನು ಧರಿಸಬೇಕು. ಅದರ ಮಧ್ಯದಲ್ಲಿ ರಂಧ್ರವಿರಬೇಕು. ಶ್ರೀಹರಿಯ ಕೇಶವ ಮುಂತಾದ ಹನ್ನೆರಡು ನಾಮಗಳ ಮುಂದೆ "ನಮಃ" ಎಂಬ ಶಬ್ದವನ್ನು ಜೋಡಿಸಿ "ಕೇಶವಾಯ ನಮಃ" ಮುಂತಾದ ಮಂತ್ರಗಳನ್ನು ತಯಾರಿಸಿ ಆ ಮಂತ್ರಗಳಿಂದ ಧರಿಸಬೇಕು."

ಸಾಂತರಾಲಮೃಜುಂ ಸೌಮ್ಯಂ ಸುಪಾರ್ಶ್ವಂ ಸುಮನೋಹರಮ್ |
ಯಃ ಕರೋತ್ಯೂರ್ಧ್ವಪುಂಡ್ರಂ ತು ಸ ಮಮಾತಿಪ್ರಿಯೋ ಭವೇತ್ || 2 || (ಬ್ರಹ್ಮಾಂಡ ವಚನ)

"ಊರ್ಧ್ವಪುಂಡ್ರದ ಮಧ್ಯದಲ್ಲಿ ರಂಧ್ರವಿರಬೇಕು. ಊರ್ಧ್ವಪುಂಡ್ರಗಳು ವಕ್ರವಾಗಿರಬಾರದು. ಊರ್ಧ್ವಪುಂಡ್ರಗಳ ಎರಡು ಪಕ್ಕಗಳೂ ಸುಂದರವಾಗಿರಬೇಕು. ಮನಸ್ಸನ್ನೂ ಆಕರ್ಷಿಸುವಂತಿರಬೇಕು. ಹೀಗೆ ಯಾರು ಧರಿಸುವನೋ ಅವನಲ್ಲಿ ನನಗೆ ತುಂಬಾ ಪ್ರೀತಿಯು ಏರ್ಪಡುತ್ತದೆ."

ಚತುರಂಗುಲಮೂರ್ಧ್ವಾಗ್ರಂ ದ್ವ್ಯಂಗುಲಂ ಸಂಸ್ಕೃತಂ ಸದಾ |
ದ್ವಿಜಃ ಪುಂಡ್ರಮೃಜುಂ ಸೌಮ್ಯಂ ಸಾಂತರಾಲಂ ತು ಕಾರಯೇತ್ || 3 || (ಮರೀಚಿ ವಚನ)

"ಊರ್ಧ್ವಪುಂಡ್ರವು ನಾಲ್ಕು ಅಂಗುಲ ಉದ್ದವೂ ಎರಡು ಅಂಗುಲ ಅಗಲವಾಗಿಯೂ ಇರಬೇಕು. ನೆಟ್ಟಗಿರಬೇಕು. ಸುಂದರವಾಗಿರಬೇಕು. ಚೆನ್ನಾಗಿ ಬರೆಯಲ್ಪಟ್ಟಿರಬೇಕು. ಮಧ್ಯದಲ್ಲಿ ರಂಧ್ರವುಳ್ಳದ್ದಾಗಿರಬೇಕು."

ತಸ್ಮಾಚ್ಛಿದ್ರಾನ್ವಿತಂ ಪುಂಡ್ರಂ ದಂಡಾಕಾರಂ ತು ವಿನ್ಯಸೇತ್ ॥ 4 ॥ (ಅತ್ರಿ ವಚನ)

"ಕೋಲಿನಂತೆ ಉದ್ದವೂ, ಮಧ್ಯದಲ್ಲಿ ರಂಧ್ರವುಳ್ಳದ್ದೂ, ಆಗಿರುವ ಊರ್ಧ್ವಪುಂಡ್ರವನ್ನು ಧರಿಸಬೇಕು."

ಊರ್ಧ್ವಪುಂಡ್ರಂ ತ್ರಿಪುಂಡ್ರಂ ವಾ ಮಧ್ಯೇ ಛಿದ್ರಂ ಪ್ರಯತ್ನತಃ |
ವಕ್ಷ್ಯಾಮಿ ಸ್ಕಂದ ತನ್ಮಧ್ಯೇ ಉಮಯಾಹಂ ಶ್ರಿಯಾ ಹರಿಃ ॥ 5 ॥ (ಸ್ಕಾಂದವಚನ)

"ಓ ಷಣ್ಮುಖ, ವೈಷ್ಣವರು ಊರ್ಧ್ವಪುಂಡ್ರಗಳನ್ನೂ, ಸ್ಮಾರ್ತರು ಅರ್ಧನಾಮಗಳನ್ನೂ ಧರಿಸುವರು. ಅವುಗಳ ಮಧ್ಯದಲ್ಲಿ ಊರ್ಧ್ವಪುಂಡ್ರಗಳಲ್ಲಿ ಲಕ್ಷ್ಮೀಸಹಿತನಾದ ನಾರಾಯಣನೂ, ಅರ್ಧನಾಮಗಳಲ್ಲಿ ಪಾರ್ವತೀಸಹಿತನಾದ ನಾನೂ ವಾಸಿಸುವೆವು." ಇದು ರುದ್ರದೇವರ ವಚನ.

(ಈ ವಚನದಲ್ಲಿ ಊರ್ಧ್ವಪುಂಡ್ರದ ಮಧ್ಯದಲ್ಲಿ ಲಕ್ಷ್ಮೀಸಹಿತನಾದ ನಾರಾಯಣನು ಇರುವುದಾಗಿ ಹೇಳಿರುವುದರಿಂದ ಆ ಸ್ಥಳವನ್ನು ಮುಚ್ಚಬಾರದು. ಅಂದರೆ ಊರ್ಧ್ವಪುಂಡ್ರದ ಮಧ್ಯದಲ್ಲಿ ರಂಧ್ರವಿರಬೇಕೆಂದು ಹೇಳಿದಂತಾಯಿತು.)

ಅಚ್ಛಿದ್ರಮೂರ್ಧ್ವಪುಂಡ್ರಂ ತು ಯಃ ಕರೋತಿ ದ್ವಿಜಾಧಮಃ |
ತೇನೈವ ವಿಧೃತಃ ಸಮ್ಯಕ್ ಶುನಃ ಪಾದೋ ನ ಸಂಶಯಃ ॥ 6 ॥ (ಮರೀಚಿ ವಚನ)

"ಮಧ್ಯದಲ್ಲಿ ರಂಧ್ರವಿಲ್ಲದಿರುವ ಊರ್ಧ್ವಪುಂಡ್ರವನ್ನು ಧರಿಸಿದವನು ನಾಯಿಯ ಕಾಲನ್ನು ದೇಹದಲ್ಲಿ ಧರಿಸಿರುವನು. ಈ ವಿಷಯದಲ್ಲಿ ಸಂಶಯವಿಲ್ಲ."

ಅಚ್ಛಿದ್ರಮೂರ್ಧ್ವಪುಂಡ್ರಂ ತು ಯಃ ಕರೋತಿ ದ್ವಿಜಾಧಮಃ |
ಕಲ್ಪಕೋಟಿಸಹಸ್ರಾಣಿ ರೌರವಂ ನರಕಂ ವ್ರಜೇತ್ ॥ 7 ॥ (ಹಾರೀತರ ವಚನ)

"ರಂಧ್ರವಿಲ್ಲದಿರುವ ಊರ್ಧ್ವಪುಂಡ್ರವನ್ನು ಧರಿಸುವವನು ಕೋಟಿಸಹಸ್ರಕಲ್ಪಗಳವರೆಗೆ ರೌರವ ನರಕವನ್ನು ಹೊಂದುವನು."

ಅಚ್ಛಿದ್ರಮೂರ್ಧ್ವಪುಂಡ್ರಂ ತು ಯಃ ಕರೋತೀಹ ಮಾನವಃ |
ಸ ಯಾತಿ ನರಕಂ ಘೋರಂ ನ ಗಚ್ಛೇದ್ವಿಷ್ಣುಮಂದಿರಮ್ ॥ 8 ॥ (ಗರುಡ ಪುರಾಣ)

"ರಂಧ್ರವಿಲ್ಲದಿರುವ ಊರ್ಧ್ವಪುಂಡ್ರವನ್ನು ಧರಿಸುವವನು ಘೋರವಾದ ನರಕವನ್ನು ಹೊಂದುವನು. ಶ್ರೀಹರಿಯ ಲೋಕವನ್ನು ಹೊಂದುವುದಿಲ್ಲ."

(ಮೇಲೆ ಎಂಟು ಪ್ರಮಾಣವಚನಗಳು ಕೊಡಲ್ಪಟ್ಟಿವೆ. ಅವುಗಳಲ್ಲಿ ಮೊದಲನೆಯ ಐದು ಪ್ರಮಾಣವಚನಗಳು ಊರ್ಧ್ವಪುಂಡ್ರಗಳ ಮಧ್ಯದಲ್ಲಿ ರಂಧ್ರವು ಇರಬೇಕೆಂಬ ಅಂಶವನ್ನು ತಿಳಿಸುತ್ತವೆ. ಉಳಿದ ಮೂರು ಪ್ರಮಾಣ ವಚನಗಳು ಊರ್ಧ್ವಪುಂಡ್ರಗಳ ಮಧ್ಯದಲ್ಲಿ ರಂಧ್ರವನ್ನು ಮಾಡದಿದ್ದರೆ ಬರುವ ಅನರ್ಥಗಳನ್ನು ತಿಳಿಸುತ್ತವೆ. ಈ ಎಲ್ಲಾ ವಚನಗಳೂ ಹದಿಮೂರು ಊರ್ಧ್ವಪುಂಡ್ರಗಳಲ್ಲಿ ಯಾವುದೋ ಒಂದು ಊರ್ಧ್ವಪುಂಡ್ರವನ್ನು ಉದ್ದೇಶಿಸಿ ಹೊರಟಿಲ್ಲ. ಆದ್ದರಿಂದ "ಹದಿಮೂರು ಊರ್ಧ್ವಪುಂಡ್ರಗಳ ಮಧ್ಯದಲ್ಲಿಯೂ ರಂಧ್ರವನ್ನು ಮಾಡಬೇಕು" ಎಂದು ಈ ಎಂಟು ವಾಕ್ಯಗಳು ತಿಳಿಸುತ್ತವೆಯೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಆದರೆ ಸ್ಮೃತಿಮುಕ್ತಾವಲೀಕಾರರು ಈ ವಿಷಯದಲ್ಲಿ ಹೀಗೆ ವಿಮರ್ಶಿಸಿದ್ದಾರೆ. ಹಣೆಯಲ್ಲಿರುವ ಊರ್ಧ್ವಪುಂಡ್ರದಲ್ಲಿ ಮಾತ್ರ ಮಧ್ಯದಲ್ಲಿ ರಂಧ್ರವನ್ನು ಮಾಡಬೇಕೆಂದೂ ಉಳಿದ ಹನ್ನೆರಡು ಊರ್ಧ್ವಪುಂಡ್ರಗಳ ಮಧ್ಯದಲ್ಲಿ ರಂಧ್ರವನ್ನು ಮಾಡಕೂಡದೆಂದೂ ಸಮರ್ಥಿಸಿದ್ದಾರೆ. ಅವರು ಹೇಳುವ ಕಾರಣಗಳನ್ನು ಕೆಳಗೆ ಕೊಟ್ಟಿದ್ದೇವೆ.

(3) ನಾಸಿಕಾಮೂಲಮಾರಭ್ಯ ಲಲಾಟಾಂತಂ ತು ವಿನ್ಯಸೇತ್ |
ದಂಡಾಕಾರಂ ದ್ವ್ಯಂಗುಲಂ ಚ ಸಚ್ಛಿದ್ರಂ ಶ್ರೀಪದಾಕೃತಿಮ್ || (ಪರಾಶರರ ವಚನ)

(4) ಆರಭ್ಯ ನಾಸಿಕಾಮೂಲಂ ಲಲಾಟಾಂತಂ ಲಿಖೇನ್ಮೃದಮ್ |
ಸಮಾರಭ್ಯ ಭ್ರುವೋರ್ಮಧ್ಯೇ ಸಾಂತರಾಲಂ ಪ್ರಕಲ್ಪಯೇತ್ ||

ಈ ವಾಕ್ಯವೂ ಹಿಂದಿನ ವಾಕ್ಯವೂ ಮೇಲ್ಕಂಡ ವಾಕ್ಯದ ಅರ್ಥವನ್ನೇ ತಿಳಿಸುತ್ತದೆ. (ಮೇಲ್ಕಂಡ ನಾಲ್ಕು ವಾಕ್ಯಗಳಲ್ಲಿ ಮೊದಲನೆಯ ವಾಕ್ಯದಲ್ಲಿ, ಹಣೆಯಲ್ಲಿರುವ ಊರ್ಧ್ವಪುಂಡ್ರವೊಂದೇ ದಂಡಾಕಾರವೆಂದು ಹೇಳುತ್ತದೆ. ಉಳಿದ ಮೂರು ವಾಕ್ಯಗಳಲ್ಲಿ, ದಂಡಾಕಾರದ ಊರ್ಧ್ವಪುಂಡ್ರವು ರಂಧ್ರಯುಕ್ತವಾಗಿರಬೇಕು ಎಂದು ಹೇಳುತ್ತದೆ. ಆದ್ದರಿಂದ ಹಣೆಯಲ್ಲಿರುವ ಊರ್ಧ್ವಪುಂಡ್ರದಲ್ಲಿ ರಂಧ್ರವಿರಬೇಕು ಎಂಬ ಅಂಶವನ್ನು ಈ ಎಲ್ಲಾ ವಾಕ್ಯಗಳೂ ತಿಳಿಸುತ್ತವೆ ಎಂದು ಹೇಳಿದಂತಾಯಿತು. ಇದು ಎರಡನೆಯ ಕಾರಣ)

ದಂಡಾಕಾರಂ ತು ಶೋಭಾಢ್ಯಂ ಮಧ್ಯೇ ಛಿದ್ರಂ ಪ್ರಕಲ್ಪಯೇತ್ |
ತಸ್ಮಾಚ್ಛಿದ್ರಾನ್ವಿತಂ ಪುಂಡ್ರಂ ದಂಡಾಕಾರಂ ವಿಧೀಯತೇ ||

ಈ ವಾಕ್ಯವು ದಂಡಾಕಾರವಾದ ಊರ್ಧ್ವಪುಂಡ್ರವೇ ರಂಧ್ರದಿಂದ ಯುಕ್ತವಾಗಿರಬೇಕು ಎಂದು ಅತಿ ಸ್ಪಷ್ಟವಾಗಿ ಹೇಳುತ್ತದೆ. ಆದ್ದರಿಂದ ಹಣೆಯಲ್ಲಿರುವ ಊರ್ಧ್ವಪುಂಡ್ರವು ರಂಧ್ರಯುಕ್ತವಾಗಿರಬೇಕೆಂದೂ ಇತರ ಊರ್ಧ್ವಪುಂಡ್ರಗಳು ರಂಧ್ರಯುಕ್ತವಾಗಿರಬಾರದೆಂದೂ ಸಿದ್ಧವಾಗುತ್ತದೆ. ಇದು ಮೂರನೆಯ ಕಾರಣ.)

ಊರ್ಧ್ವಪುಂಡ್ರಂ ಲಲಾಟೇ ತು ದಂಡಾಕಾರಂ ಸುಶೋಭನಮ್ |
ಮಧ್ಯೇ ಛಿದ್ರೇಣ ಸಂಯುಕ್ತಂ ತಚ್ಛಿದ್ರಂ ಮಮ ಮಂದಿರಮ್ || (ಕೃಷ್ಣಾಮೃತಮಹಾರ್ಣವ)

"ಹಣೆಯಲ್ಲಿರುವ ಊರ್ಧ್ವಪುಂಡ್ರವು ದಂಡಾಕಾರವುಳ್ಳದ್ದಾಗಿರಬೇಕು ಮತ್ತು ಮಧ್ಯದಲ್ಲಿ ರಂಧ್ರವುಳ್ಳದ್ದಾಗಿರಬೇಕು." (ಇದು ಶ್ರೀಮದಾಚಾರ್ಯರ ವಚನ. ಈ ವಚನದಲ್ಲಿ ಹಣೆಯಲ್ಲಿರುವ ಕೋಲಿನಂತೆ ಉದ್ದವಾಗಿರುವ ಊರ್ಧ್ವಪುಂಡ್ರದಲ್ಲಿ ಮಾತ್ರ ಮಧ್ಯದಲ್ಲಿ ರಂಧ್ರವಿರಬೇಕೆಂದು ಹೇಳಿದೆ. "ಎಲ್ಲಾ ಊರ್ಧ್ವಪುಂಡ್ರಗಳಲ್ಲಿಯೂ ಮಧ್ಯದಲ್ಲಿ ರಂಧ್ರವು ಇದ್ದೇ ಇರಬೇಕು." ಎಂಬ ಅಂಶವು ಶ್ರೀಮದಾಚಾರ್ಯರಿಗೆ ಸಂಮತವಾಗಿದ್ದರೆ ಈ ಶ್ಲೋಕದಲ್ಲಿರುವ "ಲಲಾಟೇ", "ದಂಡಾಕಾರಂ" ಎಂಬ ಎರಡು ಪದಗಳೂ ವ್ಯರ್ಥವಾಗುತ್ತವೆ. ಇದು ನಾಲ್ಕನೆಯ ಕಾರಣ.)

(ಮಾಧ್ವ ಸಕಲ ಮಠಾಧಿಪತಿಗಳ ಸಂಪ್ರದಾಯದಲ್ಲಿಯೂ, ಹಣೆಯಲ್ಲಿರುವ ಊರ್ಧ್ವಪುಂಡ್ರದಲ್ಲಿ ಮಾತ್ರ ರಂಧ್ರವನ್ನು ಮಾಡುವುದೂ, ಇತರ ಊರ್ಧ್ವಪುಂಡ್ರಗಳಲ್ಲಿ ರಂಧ್ರ ಮಾಡದಿರುವುದೂ, ಪರಂಪರೆಯಿಂದ ಬಂದಿರುವ ಆಚಾರವಾಗಿದೆ. ಇದು ಐದನೆಯ ಕಾರಣ.)

ಮೇಲ್ಕಂಡ ಐದು ಕಾರಣಗಳಿಂದ ಹಣೆಯಲ್ಲಿರುವ ಊರ್ಧ್ವಪುಂಡ್ರದಲ್ಲಿ ಮಾತ್ರ ಮಧ್ಯದಲ್ಲಿ ರಂಧ್ರವನ್ನು ಮಾಡಬೇಕೆಂದೂ, ಉಳಿದ ಹನ್ನೆರಡು ಊರ್ಧ್ವಪುಂಡ್ರಗಳ ಮಧ್ಯದಲ್ಲಿ ರಂಧ್ರವನ್ನು ಮಾಡಕೂಡದೆಂದೂ ಸಿದ್ಧವಾಯಿತು. ಆದರೆ ಈ ವಿಷಯದಲ್ಲಿಯೂ ವಿರುದ್ಧವಾದ ವಚನಗಳಿವೆ. ಅವುಗಳಿಗೂ ಸಮಾಧಾನವನ್ನು ಹೇಳಲೇಬೇಕು. ಅದಕ್ಕಾಗಿ ಆ ವಚನಗಳನ್ನು ಕೆಳಗೆ ಕೊಟ್ಟು, ಅವುಗಳಿಗೆ ಸಮಾಧಾನವನ್ನು ಹೇಳುತ್ತೇವೆ.

(1) ನಾಸಿಕಾಮೂಲಮಾರಭ್ಯ ಲಲಾಟಾಂತಾನಿ ವಿನ್ಯಸೇತ್ |
ಏವಂ ಸರ್ವಾಣಿ ಪುಂಡ್ರಾಣಿ ಸಚ್ಛಿದ್ರಾಣ್ಯೇವ ಧಾರಯೇತ್ || (ಪರಾಶರರ ವಚನ)

"ಮೂಗಿನ ಬುಡವನ್ನು ಆರಂಭಿಸಿ ಹಣೆಯವರೆಗೆ ಮೊದಲನೆಯ ಊರ್ಧ್ವಪುಂಡ್ರವನ್ನು ಧರಿಸಬೇಕು. ಈ ಊರ್ಧ್ವಪುಂಡ್ರದಲ್ಲಿಯೂ, ಉಳಿದ ಹನ್ನೆರಡು ಊರ್ಧ್ವಪುಂಡ್ರಗಳಲ್ಲಿಯೂ ಮಧ್ಯದಲ್ಲಿ ರಂಧ್ರವನ್ನು ಮಾಡಲೇಬೇಕು."

(2) ನಾಸಿಕಾಮೂಲಮಾರಭ್ಯ ಲಲಾಟಾಂತಂ ಚ ವಿನ್ಯಸೇತ್ |
ದಂಡಾಕಾರಂ ದ್ವ್ಯಂಗುಲಂ ವಾ ಸಚ್ಛಿದ್ರಂ ಶ್ರೀಪದಾಕೃತಿಮ್ ||
ದಂಡವತ್ಪತ್ರವದ್ಧಾರ್ಯಂ ಮುಮುಕ್ಷೋಃ ಪುಂಡ್ರಮುತ್ತಮಮ್ |
ಮೋಕ್ಷಾರ್ಥೀ ಸ್ವರ್ಗಕಾಮೀ ಚ ಧರೇದಂಗೇಷು ನಿತ್ಯಶಃ ||

"ಹಣೆಯಲ್ಲಿ ರಂಧ್ರಯುಕ್ತವಾದ ಊರ್ಧ್ವಪುಂಡ್ರವನ್ನು ಮೋಕ್ಷಾರ್ಥಿಯಾಗಲೀ ಸ್ವರ್ಗಾರ್ಥಿಯಾಗಲೀ ಧರಿಸಬೇಕು. ಇದರಂತೆ ಎಲ್ಲಾ ಅವಯವಗಳಲ್ಲಿಯೂ ಧರಿಸಬೇಕು."

(ಈ ಎರಡು ವಾಕ್ಯಗಳಲ್ಲಿಯೂ, ಗರುಡಪುರಾಣ ಮುಂತಾದ ಗ್ರಂಥಗಳಲ್ಲಿರುವ ಅಸಂಖ್ಯವಾಕ್ಯಗಳಲ್ಲಿಯೂ, ಎಲ್ಲಾ ಊರ್ಧ್ವಪುಂಡ್ರಗಳ ಮಧ್ಯದಲ್ಲಿಯೂ, ರಂಧ್ರವನ್ನು ಮಾಡಬೇಕು ಎಂದು ಹೇಳಿದೆ. ಹೀಗಿರುವಾಗ ಹಣೆಯಲ್ಲಿರುವ ಊರ್ಧ್ವಪುಂಡ್ರದಲ್ಲಿ ಮಾತ್ರ ಮಧ್ಯದಲ್ಲಿ ರಂಧ್ರವನ್ನು ಮಾಡಬೇಕು ಎಂದು ಹೇಳುವುದು ಹೇಗೆ ಯುಕ್ತವಾಗುತ್ತದೆ? ಇದಕ್ಕೆ ಉತ್ತರವನ್ನು ಕೊಡುತ್ತೇವೆ. ಪಂಚಸಂಸ್ಕಾರಸಂಗ್ರಹ ಮುಂತಾದ ಗ್ರಂಥಗಳಲ್ಲಿ ಹಣೆಯಲ್ಲಿರುವ ಊರ್ಧ್ವಪುಂಡ್ರದಲ್ಲಿ ಮಾತ್ರ ಮಧ್ಯದಲ್ಲಿ ರಂಧ್ರವನ್ನು ಮಾಡಬೇಕೆಂದೂ, ಉಳಿದ ಊರ್ಧ್ವಪುಂಡ್ರಗಳಲ್ಲಿ ಮಾಡಕೂಡದೆಂದೂ ಹೇಳಿದೆ. ಮೇಲ್ಕಂಡ ವಾಕ್ಯಗಳಲ್ಲಿ ಎಲ್ಲಾ ಊರ್ಧ್ವಪುಂಡ್ರಗಳಲ್ಲಿಯೂ ರಂಧ್ರವನ್ನು ಮಾಡಬೇಕೆಂದು ಹೇಳಿದೆ. ಈ ವಾಕ್ಯಗಳೂ ಆ ವಾಕ್ಯಗಳೂ ಸಮಬಲವಾದ್ದರಿಂದ ಎರಡು ಪಕ್ಷಗಳಲ್ಲಿ ಯಾವುದಾದರೊಂದು ಪಕ್ಷವನ್ನು ಅವಲಂಬಿಸಬಹುದು. ಇವುಗಳಲ್ಲಿ ಎಲ್ಲಾ ಊರ್ಧ್ವಪುಂಡ್ರಗಳಲ್ಲಿಯೂ ಮಧ್ಯದಲ್ಲಿ ರಂಧ್ರವನ್ನು ಮಾಡುವ ಸಂಪ್ರದಾಯವನ್ನು ಶ್ರೀವೈಷ್ಣವರು ಅವಲಂಬಿಸಿದ್ದಾರೆ. ಅವರ ಸಂಪ್ರದಾಯಕ್ಕಿಂತ ವಿಲಕ್ಷಣವಾದ ಸಂಪ್ರದಾಯವು ನಮಗೆ ಸಮ್ಮತವೆಂದು ತಿಳಿಸುವುದಕ್ಕೋಸ್ಕರ ಆ ಸಂಪ್ರದಾಯವನ್ನು ಶ್ರೀಮಧ್ವಾಚಾರ್ಯರು ಅವಲಂಬಿಸಲಿಲ್ಲ. ಪಂಚಸಂಸ್ಕಾರಸಂಗ್ರಹದಲ್ಲಿ ಹೇಳಿರುವ ಸಂಪ್ರದಾಯವನ್ನೇ ಸ್ವೀಕರಿಸುವರು. ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.)

### ಊರ್ಧ್ವಪುಂಡ್ರಧಾರಣಕ್ಕೆ ಬೆರಳುಗಳು

(1) ಅಂಗುಷ್ಠಃ ಪುಷ್ಟಿದಃ ಪ್ರೋಕ್ತೋ ಮಧ್ಯಮಾಯುಷ್ಕರೀ ತಥಾ |
ಅನಾಮಿಕಾನ್ನದಾ ನಿತ್ಯಂ ಮುಕ್ತಿದಾ ತರ್ಜನೀ ಸ್ಮೃತಾ || (ಬ್ರಹ್ಮಾಂಡವಚನ)

"ಅಂಗುಷ್ಠವು ಪುಷ್ಟಿಕರ. ನಡುಬೆರಳು ಆಯುಷ್ಕರ, ಉಂಗುರದ ಬೆರಳು ಯಾವಾಗಲೂ ಅನ್ನವನ್ನು ಕೊಡುತ್ತದೆ. ತೋರ್ಬೆರಳು ಮುಕ್ತಿಕರ." ಇದು ಊರ್ಧ್ವಪುಂಡ್ರವನ್ನು ಧರಿಸುವುದಕ್ಕೆ ಉಪಯೋಗಿಸುವ ಬೆರಳುಗಳ ಫಲ.

(2) ಊರ್ಧ್ವಪುಂಡ್ರವಿಧೌ ಮೋಕ್ಷಮಂಗುಷ್ಠಂ ತರ್ಜನೀ ಶ್ರಿಯಮ್ |
ಮಧ್ಯಮಾ ಪಶುಪುತ್ರಾದಿ ಮೋಕ್ಷೈಶ್ವರ್ಯಮನಾಮಿಕಾ ||
ವಶ್ಯಂ ಕನಿಷ್ಠಿಕಾ ಕುರ್ಯಾನ್ನ ಚಾನ್ಯೇನ ವಿಧೀಯತೇ | (ಭರದ್ವಾಜಸಂಹಿತಾ)

"ಅಂಗುಷ್ಠವು ಮೋಕ್ಷಪ್ರದ. ತೋರ್ಬೆರಳು ಸಂಪತ್ಕರ. ನಡುಬೆರಳು ಪಶು ಪುತ್ರ ಮುಂತಾದ ಫಲವನ್ನು ಕೊಡುತ್ತದೆ. ಉಂಗುರದ ಬೆರಳು ಮೋಕ್ಷವನ್ನೂ, ಐಶ್ವರ್ಯವನ್ನೂ ಕೊಡುತ್ತದೆ. ಕಿರುಬೆರಳು ಇತರರು ವಶವಾಗುವಂತೆ ಮಾಡುತ್ತದೆ. ಈ ಐದು ಬೆರಳುಗಳನ್ನು ಬಿಟ್ಟು ಶ್ರೀವೈಷ್ಣವರಂತೆ ಕಡ್ಡಿ ಮುಂತಾದ ಇತರ ಸಾಧನಗಳಿಂದ ಊರ್ಧ್ವಪುಂಡ್ರಗಳನ್ನು ಧರಿಸಬಾರದು."

(3) ಅನಾಮಿಕಾ ಕಾಮದಾಽಥ್ಯಾ ಮುಕ್ತಿದಾ ಚ ಪ್ರದೇಶಿನೀ |
ಕನಿಷ್ಠಾ ಪುಷ್ಟಿದಾ ಪ್ರೋಕ್ತಾ ಹ್ಯಂಗುಷ್ಠಂ ಮುಕ್ತಿದಂ ಭವೇತ್ ||

ನಿಷಿದ್ಧಾ ಮಧ್ಯಮಾ ಪ್ರೋಕ್ತಾ ಹ್ಯೂರ್ಧ್ವಪುಂಡ್ರವಿಧೌ ಮುನೇ |
ದಕ್ಷಿಣಸ್ಯೈವ ಹಸ್ತಸ್ಯ ಹ್ಯಂಗುಲ್ಯಃ ಸಮುದೀರಿತಾಃ || (ಪಾರಮೇಷ್ಠ್ಯ ಸಂಹಿತಾ)

"ಬಲಗೈಯ ಬೆರಳುಗಳಿಂದಲೇ ಊರ್ಧ್ವಪುಂಡ್ರವನ್ನು ಧರಿಸಬೇಕು. ಉಂಗುರದ ಬೆರಳು ಸಂಪತ್ಕರ ಮತ್ತು ಅಪೇಕ್ಷಿಸಿದ ಫಲಗಳನ್ನು ಕೊಡುತ್ತದೆ. ತೋರ್ಬೆರಳು ಮತ್ತು ಅಂಗುಷ್ಠ ಮುಕ್ತಿಕರ. ಕಿರುಬೆರಳು ಪುಷ್ಟಿಕರ. ನಡುಬೆರಳು ನಿಷಿದ್ಧ ಎಂದು ತಿಳಿಯಬೇಕು."

(4) ಊರ್ಧ್ವಪುಂಡ್ರಸ್ಯ ಕರಣೇ ನಿಷಿದ್ಧಾ ಮಧ್ಯಮಾಂಗುಲೀ | (ನಾರದೀಯ ವಚನ)

"ಊರ್ಧ್ವಪುಂಡ್ರಧಾರಣ ವಿಷಯದಲ್ಲಿ ನಡುಬೆರಳು ನಿಷಿದ್ಧವಾಗಿದೆ." (ಮೇಲೆ ನಾಲ್ಕು ಪ್ರಮಾಣಗಳು ಕೊಡಲ್ಪಟ್ಟಿವೆ. ಅವುಗಳಲ್ಲಿ ಬ್ರಹ್ಮಾಂಡವಚನದಲ್ಲಿ ಕಿರುಬೆರಳು ಹೇಳಲ್ಪಡಲಿಲ್ಲ. ಆದ್ದರಿಂದ ಅದು ಊರ್ಧ್ವಪುಂಡ್ರ ಧಾರಣ ವಿಷಯದಲ್ಲಿ ನಿಷಿದ್ಧವೆಂದು ತಿಳಿಯುತ್ತದೆ. ಪಾರಮೇಷ್ಠ್ಯಸಂಹಿತೆಯಲ್ಲಿ ಮತ್ತು ನಾರದೀಯವಚನದಲ್ಲಿ ನಡುಬೆರಳು ನಿಷಿದ್ಧವೆಂದು ಸ್ಪಷ್ಟವಾಗಿ ಹೇಳಿದೆ. ಭರದ್ವಾಜಸಂಹಿತೆಯಲ್ಲಿ ಎಲ್ಲಾ ಬೆರಳುಗಳೂ ಗ್ರಾಹ್ಯವೆಂದು ಹೇಳಿದೆ. ಆದ್ದರಿಂದ ಈ ವಾಕ್ಯವು ಉಳಿದ ಮೂರು ವಾಕ್ಯಗಳಿಗೆ ವಿರುದ್ಧವೆಂದು ತಿಳಿಯುತ್ತದೆ. ಆದರೆ ಈ ಪ್ರಮಾಣದಲ್ಲಿ ಪಶು, ಪುತ್ರ ಮುಂತಾದ ಕೆಲವು ಐಹಿಕಫಲಗಳು ನಡುಬೆರಳಿನಿಂದ ಊರ್ಧ್ವಪುಂಡ್ರವನ್ನು ಧರಿಸುವುದರಿಂದ ಬರುವುದಾಗಿ ತಿಳಿಸಿದೆ. ಅವುಗಳನ್ನು ಬಿಟ್ಟು ಉಳಿದ ಐಹಿಕ ಮತ್ತು ಪಾರತ್ರಿಕ ಫಲಗಳನ್ನು ಬಯಸುವವರು ನಡುಬೆರಳಿನಿಂದ ಊರ್ಧ್ವಪುಂಡ್ರಗಳನ್ನು ಧರಿಸಕೂಡದೆಂದು ಮೂರು ವಾಕ್ಯಗಳಿಗೂ, ಪಶು, ಪುತ್ರ ಮುಂತಾದ ಐಹಿಕ ಫಲಗಳನ್ನು ಬಯಸುವವರು ನಡುಬೆರಳಿನಿಂದ ಧರಿಸಬೇಕೆಂದು ಪಾರಮೇಷ್ಠ್ಯಸಂಹಿತೆಗೂ ಅರ್ಥವನ್ನು ಹೇಳಿದರೆ ವಿರೋಧವಿಲ್ಲ. ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.)

### ಚಕ್ರ ಮುಂತಾದ ವಿಷ್ಣುವಿನ ಆಯುಧಗಳ ಧಾರಣೆ

ಕೃಷ್ಣಾಯುಧಾಂಕಿತೋ ದೇಹೀ ಗೋಪೀಚಂದನಮಿಶ್ರಿತಃ |
ಪ್ರಯಾಗಾದಿಷು ತೀರ್ಥೇಷು ಸ ಗತ್ವಾ ಕಿಂ ಕರಿಷ್ಯತಿ || (ಸ್ಕಾಂದವಚನ)

"ಮನುಷ್ಯನು ಗೋಪೀಚಂದನದಿಂದ ಊರ್ಧ್ವಪುಂಡ್ರಗಳನ್ನು ಧರಿಸಿದ ಮೇಲೆ ಶ್ರೀಹರಿಯ ಆಯುಧಗಳನ್ನೂ ಗೋಪೀಚಂದನದಿಂದ ಧರಿಸಬೇಕು. ಅವನು ಪ್ರಯಾಗಾದಿತೀರ್ಥಕ್ಷೇತ್ರಗಳಿಗೆ ಹೋಗಬೇಕಾದ ಅವಶ್ಯಕತೆಯಿಲ್ಲ."

ನಾರಾಯಣಾಯುಧೈರ್ನಿತ್ಯಂ ಚಿಹ್ನಿತೋ ಯಸ್ಯ ವಿಗ್ರಹಃ |
ಪಾಪಕೋಟಿಶತಂ ತಸ್ಮಿನ್ ದೃಷ್ಟ್ವಾ ಕಿಂ ಕುರುತೇ ಯಮಃ || (ಸ್ಕಾಂದವಚನ)

"ಅನೇಕ ಕೋಟಿ ಪಾಪಗಳನ್ನು ಮಾಡಿರಬಹುದು. ಯಮದೇವನು ಅವನನ್ನು ಶಿಕ್ಷಿಸುವುದಕ್ಕೆ ಕಾದಿರಬಹುದು. ಆದರೆ ಅವನು ನಾರಾಯಣನ ಆಯುಧಗಳನ್ನು ದೇಹದಲ್ಲಿ ಯಾವಾಗಲೂ ಧರಿಸಿದರೆ ಅವನನ್ನು ಶಿಕ್ಷಿಸಲು ಯಮನಿಂದ ಸಾಧ್ಯವಿಲ್ಲ. ಆದ್ದರಿಂದ ಆ ಯಮನು ಏನು ಮಾಡಲು ಶಕ್ತನಾಗುವನು?"

ಗೋಪೀಚಂದನತೋ ನಿತ್ಯಂ ಲಾಂಛಿತೋ ಯಸ್ಯ ವಿಗ್ರಹಃ |
ಶಂಖಚಕ್ರಗದಾಪದ್ಮೈರ್ದೇಹೇ ತಸ್ಯ ಸದಾ ಹರಿಃ || (ಪಾದ್ಮವಚನ)

"ಶಂಖ ಚಕ್ರ ಗದಾ ಪದ್ಮ ಎಂಬ ಶ್ರೀಹರಿಯ ಆಯುಧಗಳನ್ನು ಗೋಪೀಚಂದನದಿಂದ ಧರಿಸುವವನ ಶರೀರದಲ್ಲಿ ಶ್ರೀಹರಿಯು ಯಾವಾಗಲೂ ವಾಸಿಸುವನು."

ಮೃದಾ ವೈ ಧಾರಣಂ ಕುರ್ಯಾತ್ಕೃತ್ಯಕಂ ಸ್ನಾನತಃ ಪರಮ್ |
ಸರ್ವಾಯುಧಾನಿ ಚಾಂಗೇಷು ತಿಲಕಾನಾಂ ತಥೋಪರಿ || (ವಾರಾಹವಚನ)

"ಪ್ರತಿದಿನದಲ್ಲಿಯೂ ಸ್ನಾನವನ್ನು ಮಾಡಿದ ಕೂಡಲೇ ಗೋಪೀಚಂದನದಿಂದ ಎಲ್ಲಾ ಅಂಗಗಳಲ್ಲಿಯೂ ಎಲ್ಲಾ ಊರ್ಧ್ವಪುಂಡ್ರಗಳಲ್ಲಿಯೂ ವಿಷ್ಣುವಿನ ಎಲ್ಲಾ ಆಯುಧಗಳನ್ನು ಧರಿಸಬೇಕು."

ಬ್ರಹ್ಮನ್ ವೃತ್ರಭಯಾತ್ಸರ್ವೇ ವಯಂ ತ್ವಾಂ ಶರಣಂ ಗತಾಃ |
ಮಹತಾ ತಪಸಾ ತ್ವಷ್ಟುರವಧ್ಯಸ್ಯ ಮಹಾತ್ಮನಃ ||
ವಧಾಯ ತಸ್ಯ ವೃತ್ರಸ್ಯ ಪೃಚ್ಛಾಮೋಽತ್ರ ವಿಧಿಂ ಪರಮ್ |
ಇತ್ಯುಕ್ತಃ ಸೋಽವದದ್ಬ್ರಹ್ಮಾ ಸರ್ವಲೋಕಪಿತಾಮಹಃ ||
ವಧೋಪಾಯಂ ಹಿ ದೇವೇಭ್ಯೋ ವೃತ್ರಸ್ಯಾದ್ಭುತಕರ್ಮಣಃ |
ದೇವಾಃ ಶ್ರುಣುತ ಭದ್ರಂ ವೋ ವಧೋಪಾಯಂ ರಿಪೋರ್ವರಮ್ ||
ಪ್ರೋಕ್ತಂ ತು ವಿಷ್ಣುನಾ ಪೂರ್ವಂ ಸರ್ವದಾ ಧೃತಮೇವ ಚ |
ಮಧುಘ್ನೋ ನಾಮಭಿರ್ದೇಹೇ ಧೃತ್ವಾ ತದ್ಭೃತಚಂದನಮ್ ||
ಚಕ್ರಶಂಖೌ ತಥಾಂಸೇ ತು ಕಂಠೇ ಪದ್ಮಾಕ್ಷಮೇವ ಚ |
ಹರೇರ್ನಾಮಾನಿ ಚ ಮುಖೇ ತತೋ ವೃತ್ರಂ ಹನಿಷ್ಯಥ ||
ಏವಮುಕ್ತಾಸ್ತು ತೇ ದೇವಾಸ್ತಥಾ ಕೃತ್ವಾ ಮಹೌಜಸಃ |
ತತ್ರ ತತ್ರ ಸ್ಥಿತಂ ವೃತ್ರಂ ನಿಜಘ್ನುರ್ವಿಷ್ಣುದೇವತಾಃ ||
ತಸ್ಮಾತ್ಸರ್ವೈಸ್ತು ಕಾರ್ಯಾಣಿ ನರೈಸ್ತಾನಿ ಬುಭೂಷುಭಿಃ |
ನ ವಿಶೇಷೋಽತ್ರ ವರ್ಣಾನಾಮಾಶ್ರಮಾಣಾಂ ತಥೈವ ಚ ||
ಅಯಂ ಭಾಗವತೋ ಧರ್ಮಃ ಸಂಕ್ಲಪ್ತೋ ಹರಿಣಾ ಸ್ವಯಮ್ |

"ಎಲ್ಲಾ ದೇವತೆಗಳೂ ಬ್ರಹ್ಮದೇವರಲ್ಲಿ ತಮ್ಮ ಕಷ್ಟಗಳನ್ನು ತಿಳಿಸಿದರು. "ಓ ಬ್ರಹ್ಮದೇವ, ತ್ವಷ್ಟಾ ಎಂಬ ದೇವತೆಯು ತನ್ನ ತಪಸ್ಸಿನ ಬಲದಿಂದ ವೃತ್ರ ಎಂಬ ಮಗನನ್ನು ಪಡೆದಿರುವನು. ಅವನ ತಪಸ್ಸಿನ ಪ್ರಭಾವದಿಂದ ವೃತ್ರಾಸುರನನ್ನು ಸಂಹರಿಸಲು ಯಾರಿಂದಲೂ ಸಾಧ್ಯವಿಲ್ಲ. ದೊಡ್ಡ ಶರೀರದಿಂದ ಎಲ್ಲಾ ಲೋಕಗಳಲ್ಲಿಯೂ ಅನೇಕ ರೂಪಗಳಿಂದ ಸಂಚರಿಸುತ್ತಾ ನಮ್ಮನ್ನೆಲ್ಲರನ್ನೂ ಪೀಡಿಸುತ್ತಿರುವನು. ಅವನ ಹೆದರಿಕೆಯಿಂದ ನಾವೆಲ್ಲರೂ ನಿಮ್ಮಲ್ಲಿಗೆ ಶರಣಾಗತರಾಗಿ ಬಂದಿರುವೆವು. ಅವನನ್ನು ಕೊಲ್ಲುವುದಕ್ಕೆ ಅತ್ಯುತ್ತಮವಾದ ಮಾರ್ಗವನ್ನು ತಿಳಿಸಿರಿ."

"ಇವರ ಪ್ರಾರ್ಥನೆಯನ್ನು ಸರ್ವಲೋಕಗಳಿಗೂ ಪಿತಾಮಹರಾಗಿರುವ ಬ್ರಹ್ಮದೇವರು ಕೇಳಿದರು. ಪ್ರತ್ಯುತ್ತರವನ್ನು ಕೊಟ್ಟರು. ಓ ದೇವತೆಗಳಿರಾ, ನಿಮಗೆ ಕ್ಷೇಮವಾಗಲಿ. ವೃತ್ರಾಸುರನನ್ನು ಸಂಹರಿಸುವುದಕ್ಕೆ ಸುಲಭವಾದ ಮತ್ತು ಶ್ರೇಷ್ಠವಾದ ಉಪಾಯವನ್ನು ತಿಳಿಸುವೆನು. ಈ ಉಪಾಯವನ್ನು ಶ್ರೀಹರಿಯು ನನಗೆ ಹಿಂದೆ ಉಪದೇಶಿಸಿದನು. ನಾನೂ ಸಹ ಈ ರಹಸ್ಯವನ್ನು ಯಾರಿಗೂ ಹೇಳದೆ ಮನಸ್ಸಿನಲ್ಲಿಯೇ ಧರಿಸಿದ್ದೆನು. ಈಗ ಆ ವಿಷಯವನ್ನು ನಿಮಗಾಗಿ ತಿಳಿಸುವೆನು."

"ಶ್ರೀಹರಿಯು ದೇಹದಲ್ಲಿ ಧರಿಸಿದ ಮೃತ್ತಿಕೆಯು ಗೋಪೀಚಂದನವೆನಿಸುತ್ತದೆ. ಆ ಗೋಪೀಚಂದನವನ್ನು ದೇಹದಲ್ಲಿ ಧರಿಸಬೇಕು. ಎರಡು ಭುಜಗಳಲ್ಲಿ ಚಕ್ರ ಮತ್ತು ಶಂಖಗಳನ್ನು ಧರಿಸಬೇಕು. ಕಂಠದಲ್ಲಿ ಕಮಲಾಕ್ಷಮಣಿಗಳ ಮಾಲೆಯನ್ನು ಧರಿಸಬೇಕು. ಬಾಯಿಯಲ್ಲಿ ಶ್ರೀಹರಿಯ ಹೆಸರುಗಳನ್ನು ಉಚ್ಚರಿಸುತ್ತಿರಬೇಕು. ಹೀಗೆ ಮಾಡಿದರೆ ವೃತ್ರನನ್ನು ನೀವು ಸಂಹರಿಸುವಿರಿ."

"ಬ್ರಹ್ಮದೇವರ ಈ ಮಾತುಗಳನ್ನು ಕೇಳಿದ ಎಲ್ಲಾ ದೇವತೆಗಳೂ ಹಾಗೆಯೇ ಮಾಡಿದರು. ಅದರಿಂದ ಅಧಿಕವಾದ ತೇಜಸ್ಸನ್ನು ಪಡೆದರು. ನಾನಾವಿಧವಾದ ರೂಪಗಳಿಂದ ಎಲ್ಲೆಡೆಗಳಲ್ಲಿಯೂ ವ್ಯಾಪಿಸಿದ್ದ ವೃತ್ರಾಸುರನನ್ನು ಸಂಹರಿಸಿದರು."

ಆದ್ದರಿಂದ ಸರ್ವರೂ ಗೋಪೀಚಂದನದಿಂದ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಶಂಖ ಚಕ್ರ ಮುಂತಾದ ಶ್ರೀಹರಿಯ ಆಯುಧಗಳನ್ನೂ ಧರಿಸಬೇಕು. ಎಲ್ಲಾ ಜಾತಿಯವರೂ, ಎಲ್ಲಾ ಆಶ್ರಮಗಳಲ್ಲಿರುವವರೂ ಧರಿಸಬೇಕು. ಇದು ಭಾಗವತಧರ್ಮವೆನಿಸುತ್ತದೆ. ಈ ಭಾಗವತಧರ್ಮವನ್ನು ಅನುಷ್ಠಿಸಲೇ ಬೇಕೆಂದು ಶ್ರೀಹರಿಯು ವ್ಯವಸ್ಥೆಯನ್ನು ಮಾಡಿರುವನು.

ಯೇ ಚಕ್ರಶಂಖಾಂಕಿತಬಾಹುಮೂಲಾಃ ಕಂಠಾವಲಂಬಿಸರಸೀರುಹಬೀಜಮಾಲಾಃ |
ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಸ್ತೇ ವೈಷ್ಣವಾ ಭುವನಮಾಶು ಪವಿತ್ರಯಂತಿ ||

"ತೋಳುಗಳ ಬುಡದಲ್ಲಿ ಶಂಖ ಮತ್ತು ಚಕ್ರಗಳ ಗುರುತುಗಳಿಂದ ಯುಕ್ತರಾಗಿರಬೇಕು. ಕುತ್ತಿಗೆಯಲ್ಲಿ ಕಮಲಾಕ್ಷಮಣಿಗಳ ಮಾಲೆಯನ್ನು ಧರಿಸಿರಬೇಕು. ಹಲಗೆಯಂತೆ ವಿಶಾಲವಾದ ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸಿರಬೇಕು. ಹೀಗೆ ಮಾಡುವವರೇ ಶ್ರೀಹರಿಯ ಉತ್ತಮ ಭಕ್ತರು. ಇವರು ಲೋಕಗಳನ್ನು ಬಹು ಬೇಗನೆ ಪರಿಶುದ್ಧವಾಗುವಂತೆ ಮಾಡುವರು.

## ಚಕ್ರ ಮುಂತಾದ ಆಯುಧಗಳನ್ನು ಧರಿಸುವ ಸ್ಥಳಗಳು

ಕಪೋಲೇ ಶಂಖಚಕ್ರೇ ಚ ಕುಬೇರವರುಣೌ ಯತಃ | (ಸ್ಕಾಂದವಚನ)

"ಎರಡು ಕೆನ್ನೆಗಳಲ್ಲಿ ಶಂಖ ಮತ್ತು ಚಕ್ರಗಳನ್ನು ಧರಿಸಬೇಕು. ಕುಬೇರ ಮತ್ತು ವರುಣ ಎಂಬ ಎರಡು ದೇವತೆಗಳು ಆ ಆಯುಧಗಳಲ್ಲಿ ಸನ್ನಿಹಿತರಾಗಿರುವರು."

ಕಂಠೇ ಕುಕ್ಷೌ ದ್ವಯಂ ಧಾರ್ಯಮೇಕಮೇಕಂ ಕಪೋಲಯೋಃ |
ದಕ್ಷಿಣೇ ತು ಸಹಸ್ರಾರಂ ವಾಮೇ ಶಂಖಂ ಹರೇಃ ಪ್ರಿಯಮ್ || (ನೃಸಿಂಹ ಸಂಹಿತಾ)

"ಕುತ್ತಿಗೆಯ ಮತ್ತು ಹೊಟ್ಟೆಯ ಬಲಭಾಗಗಳಲ್ಲಿ ಎರಡೆರಡು ಚಕ್ರಗಳನ್ನೂ, ಎಡಭಾಗದಲ್ಲಿ ಎರಡೆರಡು ಶಂಖಗಳನ್ನೂ ಧರಿಸಬೇಕು."

ದ್ವೇ ಚಕ್ರೇ ದಕ್ಷಿಣೇ ಬಾಹೌ ಶಂಖಮೇಕಂ ತಥೈವ ಚ |
ಮಧ್ಯೇ ಪದ್ಮದ್ವಯಂ ಧಾರ್ಯಂ ನಾರಾಯಣಚತುಷ್ಟಯಮ್ ||
ಶಂಖದ್ವಯಂ ವಾಮಬಾಹೌ ಚಕ್ರಮೇಕಂ ತಥೈವ ಚ |
ಮಧ್ಯೇ ಗದಾದ್ವಯಂ ಧಾರ್ಯಂ ನಾರಾಯಣಚತುಷ್ಟಯಮ್ ||
ಕಂಠೇ ಕುಕ್ಷೌ ದ್ವಯಂ ಧಾರ್ಯಮೇಕಮೇಕಂ ಕಪೋಲಯೋಃ |
ದಕ್ಷಕುಕ್ಷೌ ಸಹಸ್ರಾರಂ ವಾಮೇ ಶಂಖಂ ಹರೇಃ ಪ್ರಿಯಮ್ |
ಲಲಾಟೇ ಚ ಗದಾ ಧಾರ್ಯಾ ಪಂಚಮುದ್ರಾ ವಿಧಾನತಃ || (ನೃಸಿಂಹಸಂಹಿತಾ)

"ಬಲಗೈಯಲ್ಲಿ ಎರಡು ಚಕ್ರಗಳನ್ನೂ, ಒಂದು ಶಂಖವನ್ನೂ, ಎರಡು ಪದ್ಮಗಳನ್ನೂ, ನಾಲ್ಕು ನಾರಾಯಣ ಮುದ್ರೆಗಳನ್ನೂ ಧರಿಸಬೇಕು. ಎಡಗೈಯಲ್ಲಿ ಎರಡು ಶಂಖಗಳನ್ನೂ, ಒಂದು ಚಕ್ರವನ್ನೂ, ಎರಡು ಗದಾಮುದ್ರೆಗಳನ್ನೂ, ನಾಲ್ಕು ನಾರಾಯಣ ಮುದ್ರೆಗಳನ್ನೂ ಧರಿಸಬೇಕು. ಕುತ್ತಿಗೆ ಮತ್ತು ಹೊಟ್ಟೆಗಳ ಬಲಭಾಗಗಳಲ್ಲಿ ಎರಡೆರಡು ಚಕ್ರಗಳನ್ನೂ, ಎಡಭಾಗದಲ್ಲಿ ಎರಡೆರಡು ಶಂಖಗಳನ್ನೂ ಧರಿಸಬೇಕು. ಬಲಕೆನ್ನೆಯಲ್ಲಿ ಒಂದು ಚಕ್ರವನ್ನೂ, ಎಡಕೆನ್ನೆಯಲ್ಲಿ ಒಂದು ಶಂಖವನ್ನೂ ಧರಿಸಬೇಕು. ಹಣೆಯಲ್ಲಿ ಒಂದು ಗದಾಮುದ್ರೆಯನ್ನು ಧರಿಸಬೇಕು. ಇದು ಪಂಚಮುದ್ರೆಗಳ ಧಾರಣಕ್ರಮ."

ಚಕ್ರಪದ್ಮಂ ತು ದಕ್ಷೇ ತು ಗದಾಶಂಖಂ ತು ವಾಮತಃ |
ಅಷ್ಟಾಕ್ಷರಾಂಕಿತಾಂ ಮುದ್ರಾಂ ಸರ್ವಸ್ಥಾನೇಷು ಧಾರಯೇತ್ ||
ಹೃದಿ ಪದ್ಮಂ ಲಲಾಟೇ ಚ ಗದಾಂ ಶಿರಸಿ ಪಂಚ ಚ | (ಸಾತ್ವತಸಂಹಿತಾ)

"ದೇಹದ ಬಲಭಾಗದಲ್ಲಿರುವ ಅವಯವಗಳಲ್ಲಿ ಚಕ್ರ ಮತ್ತು ಪದ್ಮಗಳನ್ನೂ, ಎಡಭಾಗದಲ್ಲಿರುವ ಅವಯವಗಳಲ್ಲಿ ಗದೆ ಮತ್ತು ಶಂಖಗಳನ್ನೂ ಧರಿಸಬೇಕು. ನಾರಾಯಣಾಷ್ಟಾಕ್ಷರಗಳಿಂದ ಯುಕ್ತವಾದ ಮುದ್ರೆಯನ್ನು ಎಲ್ಲಾ ಅವಯವಗಳಲ್ಲಿಯೂ ಧರಿಸಬೇಕು. ಎದೆಯಲ್ಲಿ ಪದ್ಮಮುದ್ರೆಯನ್ನೂ, ಹಣೆಯಲ್ಲಿ ಗದೆಯನ್ನೂ, ತಲೆಯಲ್ಲಿ ಐದು ಮುದ್ರೆಗಳನ್ನೂ ಧರಿಸಬೇಕು."

ಕುಕ್ಷೌ ಚಕ್ರಾಣಿ ಚತ್ವಾರಿ ಪಾರ್ಶ್ವೇ ದ್ವೇ ದಕ್ಷಿಣೇ ತಥಾ |
ದ್ವೇ ಚಕ್ರೇ ದಕ್ಷಿಣೇ ಬಾಹೌ ಚಕ್ರಮೇಕಂ ಗಲೇ ಪುರಃ ||
ತಥಾ ಪಶ್ಚಾದ್ಧರೇದೇಕಂ ದ್ವೇ ಪಾರ್ಶ್ವೇ ದಕ್ಷಿಣೇ ತಥಾ |
ಪೃಷ್ಠಾದಧಸ್ತಥಾ ಚೈಕಂ ಧಾರ್ಯಮೇವಂ ಸುದರ್ಶನಮ್ ||
ಶಂಖದ್ವಯಂ ವಾಮಪಾರ್ಶ್ವೇ ಸ್ತನೇ ವಾಮೇ ದ್ವಯಂ ತಥಾ |
ವಾಮಬಾಹೌ ದ್ವಯಂ ಧಾರ್ಯಮೇಕಮೇಕಂ ಗಲಸ್ಯ ಚ ||
ಮೂಲೇ ಪಾರ್ಶ್ವೇ ತಥಾ ಧಾರ್ಯಂ ತಥಾ ಪಶ್ಚಾದ್ಗಲಸ್ಯ ಚ |
ಪೃಷ್ಠಮೂಲೇ ತಥಾ ಚೈಕಂ ಹೃದಯೇ ಚೈಕಮೇವ ಚ ||
ಧಾರ್ಯಮೇವಂ ಪಾಂಚಜನ್ಯಂ ಶಂಖಸ್ಥಾನಂ ವಿದೋ ವಿದುಃ |
ಹೃದಿ ಚೈಕಂ ಸ್ತನೇ ಚೈಕಂ ಬಾಹುಮೂಲೇ ದ್ವಯಂ ತಥಾ ||
ಧಾರ್ಯಂ ಪದ್ಮಂ ದಕ್ಷಭಾಗೇ ಗದಾಂ ವಾಮೇ ತು ಪಾರ್ಶ್ವಕೇ |
ಸ್ಥಾನೇಷ್ವೇತೇಷು ಸರ್ವತ್ರ ಧಾರ್ಯಂ ನಾರಾಯಣಾಹ್ವಯಮ್ ||
ಅಧೋಭಾಗೇ ಧರೇದ್ಧೀಮಾನ್ ಕವಚಾಕಾರತಃ ಸುಧೀಃ | (ಪ್ರಕಾಶಸಂಹಿತಾ)

ಮುದ್ರೆಯನ್ನು ಧರಿಸುವ ಸ್ಥಾನಗಳು - "ಹೊಟ್ಟೆಯ ಮಧ್ಯದಲ್ಲಿ 4, ಬಲಹೊಟ್ಟೆಯಲ್ಲಿ 2, ಬಲತೋಳಿನಲ್ಲಿ 2, ಕುತ್ತಿಗೆಯ ಮುಂಭಾಗ ಮತ್ತು ಹಿಂಭಾಗಗಳಲ್ಲಿ ಒಂದೊಂದು, ಬಲಭಾಗದಲ್ಲಿ 2, ಬೆನ್ನಿನ ಕೆಳಭಾಗದಲ್ಲಿ 1, ಹೀಗೆ 13 ಚಕ್ರ ಮುದ್ರೆಗಳನ್ನು ಧರಿಸಬೇಕು. ಎಡಹೊಟ್ಟೆಯಲ್ಲಿ 2, ಎಡಮೊಲೆಯಲ್ಲಿ 2, ಎಡತೋಳಿನಲ್ಲಿ 2 ಕುತ್ತಿಗೆಯ ಎದುರಿನಲ್ಲಿ ಮತ್ತು ಹಿಂಭಾಗದಲ್ಲಿ ಒಂದೊಂದು, ಎಡಭಾಗದಲ್ಲಿ 2, ಬೆನ್ನಿನ ಕೆಳಭಾಗದಲ್ಲಿ 1, ಎದೆಯಲ್ಲಿ 1, ಹೀಗೆ ಹನ್ನೆರಡು ಸ್ಥಾನಗಳಲ್ಲಿ ಶಂಖಮುದ್ರೆಯನ್ನು ಧರಿಸಬೇಕು. ಎದೆಯಲ್ಲಿ 1, ಬಲಸ್ತನದಲ್ಲಿ 1, ಬಲತೋಳಿನಲ್ಲಿ 2, ಹೀಗೆ ನಾಲ್ಕು ಪದ್ಮಮುದ್ರೆಗಳನ್ನು ಧರಿಸಬೇಕು. ಎದೆಯಲ್ಲಿ 1, ಎಡಮೊಲೆಯಲ್ಲಿ 1, ಎಡತೋಳಿನಲ್ಲಿ 2, ಹೀಗೆ ನಾಲ್ಕು ಗದಾಮುದ್ರೆಗಳನ್ನು ಧರಿಸಬೇಕು. ಎಲ್ಲಾ ಮುದ್ರೆಗಳ ಕೆಳಗೂ ಆ ಮುದ್ರೆಗಳಿಗೆ ಕವಚದಂತೆ ಸುತ್ತಲೂ ನಾರಾಯಣಮುದ್ರೆಯನ್ನು ಧರಿಸಬೇಕು."

ದಕ್ಷೇ ಬಾಹೌ ಸ್ತನೇ ಪಾರ್ಶ್ವೇ ದ್ವೇ ದ್ವೇ ಚಕ್ರೇ ತಥಾ ಹೃದಿ |
ಶಂಖಮೇಕಂ ಬಾಹುಮೂಲೇ ಶಂಖಚಕ್ರೇ ಗಲೇ ತಥಾ ||
ಕುಕ್ಷೌ ಚತುಷ್ಟಯಂ ಧಾರ್ಯಮೇಕಂ ಪೃಷ್ಠೇ ಚ ಮೂರ್ಧ್ನಿ ಚ |
ವಾಮಪಾರ್ಶ್ವೇ ಸ್ತನೇ ಬಾಹೌ ಗಲಪಾರ್ಶ್ವೇ ಗಲೇऽಪಿ ಚ ||

ಹೃದಯೇ ಪೃಷ್ಠಮೂಲೇ ಚ ದ್ವೌ ದ್ವೌ ಶಂಖೌ ತು ಧಾರಯೇತ್ |
ಚಕ್ರಮೇಕಂ ಬಾಹುಮೂಲೇ ಹೃದಿ ಪದ್ಮಂ ಚ ಧಾರಯೇತ್ ||
ದಕ್ಷಿಣೇ ಬಾಹುಮೂಲೇ ತು ಧರೇತ್ಪದ್ಮದ್ವಯಂ ತಥಾ |
ಲಲಾಟೇ ತು ಗದಾ ಧಾರ್ಯಾ ವಾಮಬಾಹೌ ಗದಾದ್ವಯಮ್ ||
ಚತುರ್ದಶಸು ಸ್ಥಾನೇಷು ಮುದ್ರಾಂ ನಾರಾಯಣೀಂ ಧರೇತ್ |
ಧಾರ್ಯಾಃ ಪಂಚ ತಥಾ ಮುದ್ರಾ ಬ್ರಹ್ಮಸ್ಥಾನೇ ವಿಶೇಷತಃ || (ಕಪಿಂಜಲಸಂಹಿತಾ)

"ಬಲತೋಳು, ಬಲಮೊಲೆ, ಬಲಹೊಟ್ಟೆ ಮತ್ತು ಎದೆ ಈ ನಾಲ್ಕು ಸ್ಥಳಗಳಲ್ಲಿ ಎರಡೆರಡ ಚಕ್ರಗಳನ್ನು ಧರಿಸಬೇಕು. ಬಲತೋಳಿನ ಕೆಳಗೆ ಒಂದು ಶಂಖವನ್ನು ಧರಿಸಬೇಕು. ಕುತ್ತಿಗೆಯ ಬಲಭಾಗದಲ್ಲಿ ಚಕ್ರವನ್ನೂ, ಎಡಭಾಗದಲ್ಲಿ ಶಂಖವನ್ನೂ ಧರಿಸಬೇಕು. ಹೊಟ್ಟೆಯ ಮಧ್ಯದಲ್ಲಿ ನಾಲ್ಕು, ಬೆನ್ನು ಮತ್ತು ತಲೆಗಳಲ್ಲಿ ಒಂದೊಂದು ಚಕ್ರಗಳನ್ನು ಧರಿಸಬೇಕು. ಎಡಮೊಲೆ, ಎಡತೋಳು, ಕುತ್ತಿಗೆಯ ಎಡಭಾಗ, ಕುತ್ತಿಗೆಯ ಎದುರುಭಾಗ, ಎದೆ, ಬೆನ್ನಿನ ಕೆಳಭಾಗ ಈ ಸ್ಥಳಗಳಲ್ಲಿ ಎರಡೆರಡು ಶಂಖಗಳನ್ನು ಧರಿಸಬೇಕು. ಎಡತೋಳಿನ ಕೆಳಭಾಗದಲ್ಲಿ ಒಂದು ಚಕ್ರವನ್ನು ಧರಿಸಬೇಕು. ಎದೆಯಲ್ಲಿ ಒಂದು ಮತ್ತು ಎಡತೋಳುಗಳ ಕೆಳಭಾಗದಲ್ಲಿ ಎರಡು ಪದ್ಮಗಳನ್ನು ಧರಿಸಬೇಕು. ಹಣೆಯಲ್ಲಿ ಒಂದು ಮತ್ತು ಎಡತೋಳಿನ ಬುಡದಲ್ಲಿ ಎರಡು ಪದ್ಮಗಳನ್ನು ಧರಿಸಬೇಕು. ಮೇಲ್ಕಂಡ ಹದಿನಾಲ್ಕು ಸ್ಥಳಗಳಲ್ಲಿಯೂ ನಾರಾಯಣ ಮುದ್ರೆಯನ್ನು ಧರಿಸಬೇಕು. ತಲೆಯಲ್ಲಿ ಐದು ಮುದ್ರೆಗಳನ್ನು ಧರಿಸಬೇಕು.

ಶಾರ್ಙ್ಗಂ ಚಾಪಂ ನಂದಕಂ ಚ ಶಂಖಚಕ್ರೇ ಮಹಾವಿಭೋಃ |
ಚಿಹ್ನಾನಿ ಹೃದಿ ಧಾರ್ಯಾಣಿ ಜಾತರೂಪಮಯಾನಿ ಚ ||
ಶಂಖಚಕ್ರಗದಾಪದ್ಮಮುದ್ರಾಂ ನಾರಾಯಣೀಂ ತಥಾ | (ಪದ್ಮಸಂಹಿತಾ)

"ಬಂಗಾರದಿಂದ ನಿರ್ಮಿತವಾದ (1) ಶಾರ್ಙ್ಗ ಎಂಬ ಧನುಸ್ಸು (2) ನಂದಕ ಎಂಬ ಖಡ್ಗ (3) ಶಂಖ (4) ಚಕ್ರ ಇವುಗಳನ್ನೂ ಇದೇ ರೀತಿಯಾದ ಶ್ರೀನಾರಾಯಣನ ಇತರ ಚಿಹ್ನೆಗಳನ್ನೂ ಧರಿಸಬೇಕು. ಶಂಖ, ಚಕ್ರ, ಗದಾ, ಪದ್ಮ, ನಾರಾಯಣ ಎಂಬ ಐದು ಮುದ್ರೆಗಳನ್ನೂ ಧರಿಸಬೇಕು."

**ತಥಾಚಾಯಮರ್ಥಃ -** ಕುಕ್ಷೌ ಚತ್ವಾರಿ ಚಕ್ರಾಣಿ ಧಾರ್ಯಾಣಿ. ದಕ್ಷಿಣೇ ಪಾರ್ಶ್ವೇ ದ್ವೇ ಚಕ್ರೇ ಧಾರ್ಯೇ. ದಕ್ಷಿಣಬಾಹೌ ದ್ವೇ ಚಕ್ರೇ ಧಾರ್ಯೇ. ಅತ್ರ ದ್ವಿಚಕ್ರಯೋರಧ ಏಕಂ ಶಂಖಂ ಧಾರಯೇತ್. ದಕ್ಷಿಣಗಲಪಾರ್ಶ್ವೇ ಚಕ್ರದ್ವಯಂ ಹೃದಿ ಚಕ್ರದ್ವಯಂ. ಗಲಸ್ಯ ಪುರೋಭಾಗೇ ಏಕಂ ಚಕ್ರಂ ಧಾರ್ಯಂ. ಪೃಷ್ಠಸ್ಯೋರ್ಧ್ವಭಾಗೇ ಏಕಂ ಚಕ್ರಂ. ಪೃಷ್ಠಸ್ಯಾಧೋಭಾಗೇ ಏಕಂ ಚಕ್ರಂ. ಏತಾನಿ ಚಕ್ರಸ್ಥಾನಾನಿ. ವಾಮಪಾರ್ಶ್ವೇ ಶಂಖದ್ವಯಂ ಧಾರ್ಯಂ. ವಾಮಸ್ತನೇ ಶಂಖದ್ವಯಂ. ವಾಮಬಾಹೌ ಶಂಖದ್ವಯಂ. ವಾಮಬಾಹೌ ಶಂಖದ್ವಯಾದಧಃ ಏಕಂ ಚಕ್ರಂ ಧಾರ್ಯಂ. ವಾಮೇ ಗಲಪಾರ್ಶ್ವೇ ಶಂಖದ್ವಯಂ. ಹೃದಯೇ ಏಕಶಂಖಂ. ಗಲಸ್ಯ ಪುರೋಭಾಗೇ ಏಕಂ ಶಂಖಂ. ಪೃಷ್ಠಸ್ಯೋರ್ಧ್ವಭಾಗೇ ಏಕಂ ಶಂಖಂ. ಹೃದಿ ಚೈಕಂ ಶಂಖಂ ಧಾರ್ಯಂ. ಹೃದಯೇ ಚೈಕಂ ಪದ್ಮಂ ಧಾರ್ಯಂ. ದಕ್ಷಿಣಬಾಹೌ ಪದ್ಮದ್ವಯಂ. ಲಲಾಟೇ ಗದಾ ಧಾರ್ಯಾ. ವಾಮಬಾಹೌ ಗದಾದ್ವಯಂ. ಏತೇಷು ಸರ್ವಸ್ಥಾನೇಷ್ವಧೋ ನಾರಾಯಣಮುದ್ರಾಂ ಧಾರಯೇತ್. ಶಿರಸಿ ಬ್ರಹ್ಮಸ್ಥಾನೇ ಪಂಚಮುದ್ರಾಃ. ದಕ್ಷಿಣಸ್ತನೇ ಚಕ್ರದ್ವಯೋಪರ್ಯೇಕಂ ಪದ್ಮಂ. ವಾಮಸ್ತನೇ ಶಂಖದ್ವಯೋಪರ್ಯೇಕಾಂ ಗದಾಂ. ಚತುರ್ದಶಸು ಸ್ಥಾನೇಷು ಮುದ್ರಾಂ ನಾರಾಯಣೀಂ ನ್ಯಸೇತ್ ಇತಿ.

ಮೇಲ್ಕಂಡ ಪ್ರಮಾಣ ವಚನಗಳಲ್ಲಿ ಹೇಳಿರುವ ವಿಷಯಗಳನ್ನು ಸಂಗ್ರಹಿಸಿ ಸ್ಮೃತಿಮುಕ್ತಾವಲೀಕಾರರು ಬರೆದಿರುವರು.

ಆ ವಿಷಯವನ್ನು ಈಗ ಬರೆಯುತ್ತಿದ್ದೇವೆ. ಹೊಟ್ಟೆಯ ಮಧ್ಯದಲ್ಲಿ ನಾಲ್ಕು, ಹೊಟ್ಟೆಯ ಬಲಭಾಗದಲ್ಲಿ ಎರಡು, ಬಲಗೈಯಲ್ಲಿ ಎರಡು, ಕುತ್ತಿಗೆಯ ಬಲಭಾಗದಲ್ಲಿ ಎರಡು, ಕುತ್ತಿಗೆಯ ಹಿಂಭಾಗದಲ್ಲಿ ಒಂದು, ಎದೆಯಲ್ಲಿ ಎರಡು, ಬೆನ್ನಿನ ಮೇಲ್ಭಾಗದಲ್ಲಿ ಒಂದು, ಬೆನ್ನಿನ ಕೆಳಭಾಗದಲ್ಲಿ ಒಂದು, ಎಡಗೈಯಲ್ಲಿರುವ ಎರಡು ಶಂಖಮುದ್ರೆಗಳ ಕೆಳಗೆ ಒಂದು, ಹೀಗೆ ಹದಿನಾರು ಚಕ್ರ ಮುದ್ರೆಗಳನ್ನು ಧರಿಸಬೇಕು. ಹೊಟ್ಟೆಯ ಎಡಭಾಗದಲ್ಲಿ ಎರಡು, ಎಡಮೊಲೆಯಲ್ಲಿ ಎರಡು, ಎಡಗೈಯಲ್ಲಿ ಎರಡು, ಕುತ್ತಿಗೆಯ ಎಡಭಾಗದಲ್ಲಿ ಎರಡು, ಎದೆಯಲ್ಲಿ ಒಂದು, ಕುತ್ತಿಗೆಯ ಮುಂಭಾಗದಲ್ಲಿ ಒಂದು, ಬೆನ್ನಿನ ಮೇಲ್ಭಾಗ ಮತ್ತು ಕೆಳಭಾಗಗಳಲ್ಲಿ ಒಂದೊಂದು, ಬಲಗೈಯಲ್ಲಿರುವ ಎರಡು ಚಕ್ರಗಳ ಕೆಳಗಡೆ ಒಂದು ಹೀಗೆ ಹದಿಮೂರು ಶಂಖಮುದ್ರೆಗಳನ್ನು ಧರಿಸಬೇಕು. ಎದೆಯಲ್ಲಿ ಒಂದು, ಬಲಗೈಯಲ್ಲಿ ಎರಡು, ಬಲಮೊಲೆಯಲ್ಲಿರುವ ಎರಡು ಚಕ್ರಗಳ ಮೇಲೆ ಒಂದು ಹೀಗೆ ನಾಲ್ಕು ಪದ್ಮಮುದ್ರೆಗಳನ್ನು ಧರಿಸಬೇಕು. ಹಣೆಯಲ್ಲಿ ಒಂದು, ಎಡಗೈಯಲ್ಲಿ ಎರಡು, ಎಡಮೊಲೆಯ ಮೇಲಿರುವ ಎರಡು ಶಂಖಗಳ ಮೇಲೆ ಒಂದು ಹೀಗೆ ನಾಲ್ಕು ಗದಾಮುದ್ರೆಗಳನ್ನು ಧರಿಸಬೇಕು. ತಲೆಯಲ್ಲಿರುವ ಬ್ರಹ್ಮರಂಧ್ರದ ಸುತ್ತಲೂ ಐದು ಮುದ್ರೆಗಳಲ್ಲಿ ಒಂದೊಂದನ್ನು ಧರಿಸಬೇಕು. ಎಲ್ಲಾ ಸ್ಥಾನಗಳಲ್ಲಿ ನಾರಾಯಣ ಮುದ್ರೆಯನ್ನು ಧರಿಸಬೇಕು.

## ಅಂಗಾರಧಾರಣ

ವಿಷ್ಣೋರಂಗಾರಶೇಷೇಣ ಯೋಽಂಗಾನಿ ಪರಿಮಾರ್ಜಯೇತ್ ।
ವಿಷ್ಣೋರಂಗಾರಶೇಷೇಣ ಊರ್ಧ್ವಪುಂಡ್ರಾಂತರೇ ತು ಯಃ ॥
ಕರೋತಿ ತೀರ್ಥತೋ ಭಕ್ತ್ಯಾ ಸ ಯಾತಿ ಹರಿಮಂದಿರಮ್ । (ಸಂಗ್ರಹವಚನ)

"ಶ್ರೀಹರಿಗೆ ಅರ್ಪಿತವಾದ ಅಂಗಾರದ ಶೇಷದಿಂದ ದೇಹವನ್ನು ಲೇಪಿಸಬೇಕು. ಅಥವಾ ತಾನು ಧರಿಸಿರುವ ಊರ್ಧ್ವಪುಂಡ್ರಗಳ ಮಧ್ಯದಲ್ಲಿ ಅಂಗಾರಶೇಷವನ್ನು ತೀರ್ಥಜಲದಿಂದ ಧರಿಸಬೇಕು. ಹಾಗೆ ಧರಿಸುವವನು ಶ್ರೀಹರಿಯ ಮಂದಿರವೆನಿಸುವ ವೈಕುಂಠಲೋಕವನ್ನು ಪಡೆಯುವನು."

ವಿಷ್ಣುದೇವಸ್ಯ ಹೋಮಸ್ಯ ವಿಷ್ಣೋರಂಗಾರಮೇವ ಚ ।
ಊರ್ಧ್ವಪುಂಡ್ರಾಂತರೇ ಕೃತ್ವಾ ಊರ್ಧ್ವಂ ವಿಷ್ಣುಪದಂ ವ್ರಜೇತ್ ।
ಶಾಂತಾಂಗಾರಂ ಲಲಾಟಾಗ್ರೇ ಧಾರಯೇದ್ವಿಷ್ಣುತತ್ಪರಃ ॥

ಶ್ರೀಹರಿಯನ್ನು ಉದ್ದೇಶಿಸಿ ಅವನ ಪ್ರೀತಿಗಾಗಿ ಮಾಡಿದ ಹೋಮಾಗ್ನಿ ಮತ್ತು ಧೂಪಕಾಲದಲ್ಲಿ ಶ್ರೀಹರಿಗೆ ಸಮರ್ಪಿಸಿದ ಅಗ್ನಿ ಇವುಗಳು ತೀರ್ಥಜಲಸ್ಪರ್ಶದಿಂದ ಶಾಂತವಾಗಿ ಅಂಗಾರವೆನಿಸುತ್ತವೆ. ಈ ಅಂಗಾರವನ್ನು ಹಣೆಯ ಮಧ್ಯದಲ್ಲಿರುವ ಊರ್ಧ್ವಪುಂಡ್ರದಲ್ಲಿ ಮೇಲ್ಭಾಗದಲ್ಲಿ ಧರಿಸಬೇಕು. ಹೀಗೆ ಅಂಗಾರವನ್ನು ಧರಿಸುವವನು ಶ್ರೀಹರಿಯ ಲೋಕವನ್ನು ಹೊಂದುವನು. ಇವನೇ ವಿಷ್ಣುಭಕ್ತನೆನಿಸುವನು.

(ಅಂಗಾರಧಾರಣದ ವಿಷಯದಲ್ಲಿ ಎರಡು ಪ್ರಮಾಣವಚನಗಳನ್ನು ಮೇಲೆ ಕೊಟ್ಟಿರುತ್ತೇವೆ. ಇವುಗಳಲ್ಲಿ ಮೊದಲನೆಯ ವಚನವು ಎಲ್ಲಾ ಊರ್ಧ್ವಪುಂಡ್ರಗಳ ಮಧ್ಯದಲ್ಲಿಯೂ ಅಂಗಾರವನ್ನು ಧರಿಸಬೇಕೆಂದು ತಿಳಿಸುತ್ತದೆ. ಎರಡನೆಯ ಪ್ರಮಾಣವು ಹಣೆಯಲ್ಲಿರುವ ಊರ್ಧ್ವಪುಂಡ್ರದಲ್ಲಿ ಮಾತ್ರ ಅಂಗಾರವನ್ನು ಧರಿಸಬೇಕೆಂದು ತಿಳಿಸುತ್ತದೆ. ಪರಸ್ಪರ ವಿರುದ್ಧವಾಗಿರುವ ಈ ಎರಡು ಪ್ರಮಾಣಗಳಿಗೂ ಅವಿರುದ್ಧವಾದ ಬೇರೆ ಅರ್ಥವನ್ನು ಹೇಳುವುದು ಅಶಕ್ಯವಾಗಿದೆ. ಆದ್ದರಿಂದ ಈ ಎರಡು ಪ್ರಮಾಣಗಳಲ್ಲಿ ಯಾವುದಾದರೊಂದು ಪ್ರಮಾಣದಲ್ಲಿ ಹೇಳಿದಂತೆ ಅನುಷ್ಠಾನ ಮಾಡಬೇಕೆಂದು ಹೇಳುವುದು ಈ ಎರಡು ಪ್ರಮಾಣಗಳನ್ನು ಉದಾಹರಿಸಿರುವ ಸ್ಮೃತಿಮುಕ್ತಾವಲೀಕಾರರಿಗೆ ಸಮ್ಮತವೆಂದು ತಿಳಿಯುತ್ತದೆ. ಮೊದಲನೆಯ ಪ್ರಮಾಣದಲ್ಲಿ ಹೇಳಿದಂತೆ ಉಡುಪಿ ಮಠ ಮುಂತಾದ ಮಠದವರು ಎಲ್ಲಾ ಊರ್ಧ್ವಪುಂಡ್ರಗಳಲ್ಲಿಯೂ, ಶ್ರೀರಾಘವೇಂದ್ರ ಮಠದವರು

ಎರಡನೆಯ ಪ್ರಮಾಣದಲ್ಲಿ ಹೇಳಿದಂತೆ ಹಣೆಯಲ್ಲಿರುವ ಊರ್ಧ್ವಪುಂಡ್ರದಲ್ಲಿ ಮಾತ್ರವೂ ಅಂಗಾರವನ್ನು ಧರಿಸುತ್ತಾರೆ. ಎರಡನೆಯ ಪ್ರಮಾಣದಲ್ಲಿ "ಲಲಾಟಾಗ್ರೇ" ಎಂಬ ಪದವು ಹಣೆಯಲ್ಲಿರುವ ಊರ್ಧ್ವಪುಂಡ್ರದಲ್ಲಿಯೂ ಕೆಳಗಿನಿಂದ ಮೇಲ್ಭಾಗದವರೆಗೆ ಅಂಗಾರವನ್ನು ಧರಿಸಕೂಡದೆಂದೂ, ಊರ್ಧ್ವಪುಂಡ್ರದಲ್ಲಿ ಮೇಲ್ಭಾಗದಲ್ಲಿ ಮಾತ್ರ ಅಂಗಾರವನ್ನು ಧರಿಸಬೇಕೆಂದೂ ತಿಳಿಸುತ್ತದೆ. ಆದ್ದರಿಂದಲೇ ಶ್ರೀರಾಘವೇಂದ್ರ ಮಠದವರು ಅಕ್ಷತೆಯನ್ನು ಮೊದಲು ಧರಿಸಿ ಆ ಅಕ್ಷತೆಯ ಮೇಲ್ಭಾಗದಲ್ಲಿ ಅಕ್ಷತೆಯನ್ನು ಮುಟ್ಟದಂತೆ ಅಂಗಾರವನ್ನು ಧರಿಸುತ್ತಾರೆ. ಮೊದಲನೆಯ ಪ್ರಮಾಣವನ್ನು ಅವಲಂಬಿಸಿರುವ ಇತರ ಮಠೀಯರಿಗೆ ಈ ನಿಯಮವಿಲ್ಲ.)

## ಶಂಖಚಕ್ರಾದಿ ಪಂಚಮುದ್ರೆಗಳ ಕರ್ಮಾಂಗವೆನಿಸುತ್ತವೆ

ತಸ್ಮಾತ್ತು ವಿಧಿವದ್ಧಾರ್ಯಂ ಶಂಖಚಕ್ರಗದಾದಿಕಮ್ |
ಪಶ್ಚಾತ್ಸರ್ವಾಣಿ ಕರ್ಮಾಣಿ ಕುರ್ವೀತ ದ್ವಿಜಸತ್ತಮಃ || (ವಾಸಿಷ್ಠಸ್ಮೃತಿವಚನ)

"ಶಾಸ್ತ್ರೋಕ್ತವಿಧಿಯಿಂದ ಶಂಖ ಚಕ್ರ ಮುಂತಾದ ಪಂಚಮುದ್ರೆಗಳನ್ನು ಧರಿಸಬೇಕು. ಅನಂತರದಲ್ಲಿ ಎಲ್ಲಾ ಕಾರ್ಯಗಳನ್ನೂ ಮಾಡಬೇಕು. ಆದ್ದರಿಂದಲೇ ಮುದ್ರಾಧಾರಣವು ಎಲ್ಲಾ ಕರ್ಮಗಳಿಗೂ ಅಂಗವೆನಿಸುತ್ತದೆ."

ಗೋಪೀಚಂದನತೋ ನಿತ್ಯಂ ಶಂಖಚಕ್ರಗದಾದಿಕಮ್ |
ಧೃತ್ವಾ ಕರ್ಮಾಣಿ ಕುರ್ವೀತ ಅನ್ಯಥಾ ನಿಷ್ಫಲಂ ಭವೇತ್ ||

"ಪ್ರತಿದಿನದಲ್ಲಿಯೂ ಗೋಪೀಚಂದನದಿಂದ ಶಂಖ ಚಕ್ರ ಮುಂತಾದ ಪಂಚಮುದ್ರೆಗಳನ್ನು ಧರಿಸಿದ ಮೇಲೆಯೇ ಎಲ್ಲಾ ಕರ್ಮಗಳನ್ನೂ ಮಾಡಬೇಕು. ಹಾಗೆ ಮಾಡದಿದ್ದರೆ ಎಲ್ಲಾ ಕರ್ಮಗಳೂ ನಿಷ್ಫಲವಾಗುತ್ತವೆ."

ಲಕ್ಷಣಂ ದ್ವಿವಿಧಂ ಪ್ರೋಕ್ತಂ ಬಾಹ್ಯಮಾಭ್ಯಂತರಂ ತಥಾ |
ಶಂಖಚಕ್ರಾಂಕನಂ ಬಾಹ್ಯಮನ್ಯದ್ರಾಗಾದಿಹೀನತಾ ||

"ವಿಷ್ಣುಭಕ್ತನಲ್ಲಿ ಎರಡು ವಿಧವಾದ ಲಕ್ಷಣಗಳಿವೆ. (1) ಶಂಖ ಚಕ್ರ ಮುಂತಾದ ಆಯುಧಗಳನ್ನು ಗೋಪೀಚಂದನದಿಂದ ಧರಿಸುವುದು ಹೊರಗೆ ಕಾಣಸುವ ಲಕ್ಷಣ. (2) ವಿಷಯಗಳಲ್ಲಿ ಅಭಿಲಾಷೆಯನ್ನು ಬಿಡುವುದು ಮುಂತಾದ ಮನಸ್ಸಿಗೆ ಸಂಬಂಧಿಸಿದ ಗುಣಗಳು ಒಳಗಿನ ಲಕ್ಷಣವಾಗಿವೆ."

ತಸ್ಮಾತ್ಸುದರ್ಶನಂ ಚಕ್ರಂ ವಿಧಿನಾ ಧಾರಯೇದ್ದ್ವಿಜಃ |
ಕರ್ಮಸಿದ್ಧ್ಯೈ ವಿಶೇಷೇಣ ತದ್ದಾಸ್ಯೈಕಫಲಾಪ್ತಯೇ || (ಅತ್ರಿ ವಚನ)

"ಹಿಂದಿನ ವಚನಗಳಿಂದ ಸುದರ್ಶನಚಕ್ರ ಮುಂತಾದ ವಿಷ್ಣುಚಿಹ್ನಗಳನ್ನು ಧರಿಸಬೇಕೆಂದು ಸಮರ್ಥಿಸಿದೆವು. ಇವುಗಳನ್ನು ಧರಿಸಿ ಮಾಡಿದ ಕರ್ಮವು ವಿಶೇಷವಾಗಿ ಫಲವನ್ನು ಕೊಡುತ್ತದೆ. ಮತ್ತು ಶ್ರೀಹರಿಯ ದಾಸತ್ವ ಎಂಬ ಮುಖ್ಯವಾದ ಫಲವು ಬರುತ್ತದೆ."

ನಾನ್ಯಂ ದೇವಂ ನಮಸ್ಕುರ್ಯಾನ್ನಾನ್ಯಂ ದೇವಂ ನಿರೀಕ್ಷಯೇತ್ |
ಚಕ್ರಾಂಕಿತಃ ಸದಾ ತಿಷ್ಠೇನ್ಮದ್ಭಕ್ತಃ ಪಾಂಡುನಂದನ || (ಭಾರತವಚನ)

"ಶ್ರೀವಿಷ್ಣುವನ್ನು ಬಿಟ್ಟು ಇತರ ದೇವತೆಯನ್ನು ಸರ್ವೋತ್ತಮನೆಂದು ಭಾವಿಸಿ ನಮಸ್ಕರಿಸಬಾರದು. ಮತ್ತು ನೋಡಬಾರದು. ಚಕ್ರ ಮುಂತಾದ ವಿಷ್ಣುವಿನ ಆಯುಧಗಳನ್ನು ಧರಿಸಿದವನಾಗಿಯೇ ಯಾವಾಗಲೂ ಇರಬೇಕು."

ಸರ್ವಾಶ್ರಮೇಷು ವಸತಾಂ ಬ್ರಾಹ್ಮಣಾನಾಂ ವಿಶೇಷತಃ |
ವಿಧಿನಾ ಶಂಖಚಕ್ರಾದಿ ಧಾರ್ಯಂ ಹಿ ಶ್ರುತಿಚೋದನಾತ್ || 1 ||

ಏವಂ ಮಹೋಪನಿಷದಿ ಪ್ರೋಕ್ತಂ ಚಕ್ರಾದಿಧಾರಣಮ್ |
ತಥೈವ ಸಾಮ್ನಿ ಯಜುಷಿ ಋಚಿ ಪ್ರೋಕ್ತಂ ವರಾನನ || 2 ||
ಪ್ರಭೋರ್ವಿಷ್ಣೋರಬ್ಜಚಕ್ರೇ ಪವಿತ್ರೇ ಜನ್ಮಾಂಭೋಧಿಂ ತರ್ತವೇ ಚರ್ಷಣೀಂದ್ರಾಃ |
ಮೂಲೇ ಬಾಹೌ ದಧದನ್ಯೇ ಪುರಾಣಾ ಲಿಂಗಾನ್ಯಂಗೇ ತಾವಕಾನ್ಯರ್ಪಯಂತಿ || 3 || (ಪಾದ್ಮವಚನ)

"ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ ಎಂಬ ನಾಲ್ಕು ಆಶ್ರಮಗಳಲ್ಲಿರುವವರು ಅವರಲ್ಲಿಯೂ ವಿಶೇಷವಾಗಿ ಬ್ರಾಹ್ಮಣರು, ಶಾಸ್ತ್ರೋಕ್ತವಿಧಿಯಿಂದ ಶಂಖ, ಚಕ್ರ ಮುಂತಾದ ವಿಷ್ಣುವಿನ ಆಯುಧಗಳನ್ನು ಧರಿಸಬೇಕು. ಈ ವಿಷಯದಲ್ಲಿ ಶ್ರುತಿಗಳು ಆಧಾರವಾಗಿವೆ." || 1 ||

"ಮಹೋಪನಿಷತ್ತಿನಲ್ಲಿಯೂ, ಸಾಮವೇದದಲ್ಲಿಯೂ, ಯಜುರ್ವೇದದಲ್ಲಿಯೂ, ಋಗ್ವೇದದಲ್ಲಿಯೂ ಚಕ್ರ ಮುಂತಾದ ವಿಷ್ಣುವಿನ ಆಯುಧಗಳ ಧಾರಣವು ವಿಹಿತವಾಗಿದೆ." || 2 ||

"ಮಹಾಪ್ರಭುವಾದ ಶ್ರೀವಿಷ್ಣುವಿನ ಪವಿತ್ರವಾದ ಶಂಖ ಮತ್ತು ಚಕ್ರಗಳನ್ನು ಜ್ಞಾನಿಶ್ರೇಷ್ಠರು ಸಂಸಾರವೆಂಬ ಸಮುದ್ರವನ್ನು ದಾಟುವುದಕ್ಕಾಗಿ ಎರಡು ಕೈಗಳ ಬುಡದಲ್ಲಿ ಧರಿಸುವರು. ಇನ್ನು ಹಲವು ಹಳಬರು ನಿನ್ನ ಅಂದರೆ ರುದ್ರದೇವರ ಆಯುಧಗಳನ್ನು ಧರಿಸುವರು." || 3 || (ಈ ಮೂರು ವಾಕ್ಯಗಳು ರುದ್ರದೇವರಿಗೆ ಬ್ರಹ್ಮದೇವರಿಂದ ಹೇಳಲ್ಪಟ್ಟವುಗಳು.)

ಪಂಚಾಯುಧಾನಿ ಧಾರ್ಯಾಣಿ ಭಕ್ತಿಶ್ರದ್ಧೋಪಬೃಂಹಿತೈಃ |
ಲಲಾಟೇ ಮೂರ್ಧ್ನಿ ಬಾಹುಷ್ವೇಕೈಕಂ ಚ ಪೃಥಕ್ಪೃಥಕ್ || (ಆಗ್ನೇಯವಚನ)

"ಶ್ರೀಹರಿಯಲ್ಲಿ ಭಕ್ತಿಯುಳ್ಳವರು ಶ್ರದ್ಧೆಯಿಂದ ಹಣೆಯಲ್ಲಿಯೂ, ತಲೆಯಲ್ಲಿಯೂ, ಭುಜಗಳಲ್ಲಿಯೂ, ಶ್ರೀಹರಿಯ ಐದು ಆಯುಧಗಳನ್ನು ಒಂದೊಂದು ಸ್ಥಳಗಳಲ್ಲಿ ಒಂದೊಂದರಂತೆ ಪ್ರತ್ಯೇಕವಾಗಿ ಧರಿಸಬೇಕು."

ಉಪವೀತಾದಿವದ್ಧಾರ್ಯಂ ಶಂಖಚಕ್ರಗದಾದಿಕಮ್ | (ವಾಯುಪುರಾಣ)

"ಶಂಖ, ಚಕ್ರ, ಗದೆ ಮುಂತಾದ ಪಂಚಮುದ್ರೆಗಳನ್ನು ಯಜ್ಞೋಪವೀತವನ್ನು ಧರಿಸಿದಂತೆ ಧರಿಸಬೇಕು."

ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋಽಥ ಭಿಕ್ಷುಕಃ |
ಅವಶ್ಯಂ ಧಾರಯೇನ್ನಿತ್ಯಂ ಶಂಖಚಕ್ರಗದಾದಿಕಮ್ || (ಬ್ರಹ್ಮಾಂಡವಚನ)

"ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಿಯು ಅವಶ್ಯವಾಗಿ ಶಂಖ ಚಕ್ರ ಗದೆ ಮುಂತಾದ ಆಯುಧಗಳನ್ನು ಧರಿಸಬೇಕು."

ಉಪವೀತಂ ಶಿಖಾಬಂಧಮೂರ್ಧ್ವಪುಂಡ್ರಂ ತಥೈವ ಚ |
ಚಕ್ರಲಾಂಛನಹೀನಸ್ಯ ವಿಪ್ರಸ್ಯ ವಿಫಲಂ ಭವೇತ್ || (ಪರಾಶರಪುರಾಣ)

"ಚಕ್ರಮುದ್ರೆಯನ್ನು ಧರಿಸಿದವನು ಯಜ್ಞೋಪವೀತವನ್ನೂ, ತಲೆಯಲ್ಲಿ ಜುಟ್ಟನ್ನೂ, ದೇಹದಲ್ಲಿ ಊರ್ಧ್ವಪುಂಡ್ರಗಳನ್ನೂ ಧರಿಸಿ ಫಲವಿಲ್ಲ."

ಅಷ್ಟಾಕ್ಷರವಿದಃ ಸರ್ವೇ ವಿಷ್ಣುಚಕ್ರಾಂಕಿತಾಃ ಸದಾ | (ಲಿಂಗಪುರಾಣ)

"ಎಲ್ಲಾ ವಿಷ್ಣುಭಕ್ತರೂ ನಾರಾಯಣಾಷ್ಟಾಕ್ಷರಮಂತ್ರವನ್ನು ತಿಳಿದಿರಬೇಕು. ವಿಷ್ಣುಚಕ್ರವನ್ನು ಯಾವಾಗಲೂ ಧರಿಸುತ್ತಿರಬೇಕು."

ಭುಜಯುಗಮಪಿ ಚಿಹ್ನೈರಂಕಿತಂ ಯಸ್ಯ ವಿಷ್ಣೋಃ ಪರಮಪುರುಷನಾಮ್ನಃ ಕೀರ್ತನಂ ಯಸ್ಯ ವಾಚಿ |
ಋಜುತರಮಪಿ ಪುಂಡ್ರಂ ಮಸ್ತಕೇ ಯಸ್ಯ ಕಂಠೇ ಸರಸಿಜಮಣಿಮಾಲಾ ಯಸ್ಯ ತಸ್ಯಾಸ್ಮಿ ದಾಸಃ || (ವಿಷ್ಣುಪುರಾಣ)

(1) ಎರಡು ಭುಜಗಳಲ್ಲಿ ಚಕ್ರ ಮುಂತಾದ ವಿಷ್ಣುವಿನ ಚಿಹ್ನಗಳ ಧಾರಣೆ. (2) ನಾಲಿಗೆಯಲ್ಲಿ ಪರಮಪುರುಷನಾದ ಶ್ರೀಹರಿಯ ನಾಮೋಚ್ಚಾರಣೆ. (3) ಹಣೆಯಲ್ಲಿ ಅತ್ಯಂತ ಋಜುವಾದ ಊರ್ಧ್ವಪುಂಡ್ರಗಳ ಧಾರಣೆ. (4) ಕುತ್ತಿಗೆಯಲ್ಲಿ ಕಮಲಮಣಿಗಳ ಮಾಲೆ ಈ ನಾಲ್ಕು ಯಾರಲ್ಲಿವೆಯೋ ಅವನ ದಾಸನು ನಾನು."

ಬಾಹುಮೂಲೇ ಲಲಾಟೇ ಚ ಹೃದಯೇ ವಾಗ್ರಜನ್ಮನಾಂ |
ಚಕ್ರಶಂಖಗದಾಶಾರ್ಙ್ಗಂ ಮಂತ್ರೈರ್ನಿತ್ಯಂ ತು ಧಾರಯೇತ್ || (ಭಾರದ್ವಾಜಸಂಹಿತಾ)

"ತೋಳುಗಳ ಬುಡಗಳಲ್ಲಿಯೂ, ಹಣೆಯಲ್ಲಿಯೂ, ಎದೆಯಲ್ಲಿಯೂ, ಬ್ರಾಹ್ಮಣರು ಶಂಖ ಚಕ್ರ ಗದಾ ಮತ್ತು ಶಾರ್ಙ್ಗಧನುಸ್ಸು ಇವುಗಳನ್ನು ಮಂತ್ರಪೂರ್ವಕವಾಗಿ ಯಾವಾಗಲೂ ಧರಿಸಬೇಕು."

ಊರ್ಧ್ವಪುಂಡ್ರಂ ತಥಾ ಚಕ್ರಂ ನಿತ್ಯಂ ಧಾರಯತೇ ನರಃ |
ತೇನ ತಸ್ಯಾಶುಭಂ ನಶ್ಯೇಚ್ಛುಭಮಸ್ಯ ಪ್ರವರ್ಧತೇ || (ವೃದ್ಧಮನುವಚನ)

"ಊರ್ಧ್ವಪುಂಡ್ರಗಳು ಮತ್ತು ಚಕ್ರ ಇವುಗಳನ್ನು ನಿತ್ಯದಲ್ಲಿಯೂ ಧರಿಸುವವನ ಅಮಂಗಲವೆಲ್ಲವೂ ದೂರವಾಗುತ್ತದೆ. ಅವನಿಗೆ ಮಂಗಲವು ಬೇಗನೆ ಅಧಿಕವಾಗುತ್ತದೆ."

ಉಪವೀತಾದಿವದ್ಧಾರ್ಯಾಃ ಶಂಖಚಕ್ರಗದಾದಯಃ |
ಬ್ರಾಹ್ಮಣಸ್ಯ ವಿಶೇಷೇಣ ವೈಷ್ಣವಸ್ಯ ವಿಶೇಷತಃ || (ಶಂಖವಚನ)

"ಶಂಖ, ಚಕ್ರ, ಗದೆ ಮುಂತಾದ ಶ್ರೀಹರಿಯ ಆಯುಧಗಳನ್ನು ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು ಯಜ್ಞೋಪವೀತವನ್ನು ಧರಿಸಿದಂತೆ ಧರಿಸಬೇಕು. ಈ ಮೂವರಲ್ಲಿಯೂ ಬ್ರಾಹ್ಮಣರು, ಬ್ರಾಹ್ಮಣರಲ್ಲಿ ವೈಷ್ಣವರೂ, ವಿಶೇಷವಾಗಿ ಧರಿಸಬೇಕು."

ಏವಂ ತದೀಯಾ ವಿಪ್ರಾಶ್ಚ ಕ್ಷತ್ರಿಯಾ ವೈಶ್ಯಜಾತಯಃ |
ಸ್ತ್ರಿಯಃ ಶೂದ್ರಾಸ್ತಥೈವಾಽನ್ಯೇ ಚ ತಚ್ಚಿಹ್ನವಿವರ್ಜಿತಾಃ ||
ಭವೇಯುಃ ಸರ್ವದಾ ತಸ್ಮಾಚ್ಛಂಖಚಕ್ರಗದಾಂಬುಜೈಃ |
ಗೋಪೀಚಂದನಸಂಮಿಶ್ರೈರಂಕಿತವ್ಯಂ ದ್ವಿಜೇನ ತು || (ಪರಮೇಶ್ವರಸಂಹಿತಾ)

"ವಿಷ್ಣುಭಕ್ತರಾಗಿರುವ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಸ್ತ್ರೀಯರೂ, ಶೂದ್ರರೂ ಉಳಿದ ವಿಷ್ಣುಭಕ್ತರೂ, ವಿಷ್ಣುಚಿಹ್ನೆಗಳಾಗಿರುವ ಶಂಖ ಚಕ್ರ ಮುಂತಾದವುಗಳನ್ನು ಧರಿಸದಿರಬಾರದು. ಆದ್ದರಿಂದ ಗೋಪೀಚಂದನಮಿಶ್ರಿತವಾದ ಶಂಖ, ಚಕ್ರ, ಗದೆ, ಕಮಲ ಇವುಗಳ ಚಿಹ್ನವನ್ನು ಬ್ರಾಹ್ಮಣನು ಧರಿಸಬೇಕು."

ವಿಧಿನಾ ಶಂಖಚಕ್ರಾದಿಧಾರಣಂ ಚೋರ್ಧ್ವಪುಂಡ್ರಕಮ್ |
ಉಪವೀತಂ ಶಿಖಾಬಂಧಂ ವಿಪ್ರಸ್ಯ ಸತತಂ ಸ್ಮೃತಮ್ || (ಪರಾಶರಸಂಹಿತಾ)

"ಶಾಸ್ತ್ರೋಕ್ತವಿಧಿಯಿಂದ ಶಂಖ, ಚಕ್ರ ಮುಂತಾದ ವಿಷ್ಣುಚಿಹ್ನಗಳನ್ನು ಧರಿಸಬೇಕು. ಅದರಂತೆ ಊರ್ಧ್ವಪುಂಡ್ರಗಳನ್ನೂ, ಜುಟ್ಟನ್ನೂ, ಯಜ್ಞೋಪವೀತವನ್ನೂ ಯಾವಾಗಲೂ ಧರಿಸಬೇಕು."

### ಸ್ತ್ರೀಯರಿಗೆ ಊರ್ಧ್ವಪುಂಡ್ರಧಾರಣ

ಭರ್ತುಃ ಪೂರ್ವಂ ಸಮುತ್ಥಾಯ ಶೌಚಂ ಕುರ್ಯಾದ್ಯಥಾವಿಧಿ |
ದಂತಧಾವನಪೂರ್ವಂ ತು ಕಂಠಸ್ನಾನಂ ಸಮಾಚರೇತ್ ||
ಧೃತ್ವಾ ತು ಧೌತವಸ್ತ್ರಂ ಚ ಸಕೃದಾಚಮ್ಯ ವಾರಿಣಾ |
ಊರ್ಧ್ವಪುಂಡ್ರಂ ಲಲಾಟೇ ಚ ಮೃದಾ ಶುಭ್ರಂ ತು ಧಾರಯೇತ್ ||

ಕಸ್ತೂರ್ಯಾ ಕುಂಕುಮೇನಾಪಿ ಚಂದನೇನಾಥವಾ ಸತೀ |
ರಮ್ಯಂ (ಋಜುತರಂ) ಮಂಜುಕರಂ ಸೌಮ್ಯಮೂರ್ಧ್ವಪುಂಡ್ರಂ ತು ಧಾರಯೇತ್ ||
ಅಲಂಕೃತ್ಯ ತಥಾಽಽತ್ಮಾನಂ ಗೃಹಕೃತ್ಯಂ ತತಶ್ಚರೇತ್ || (ಆತ್ರೇಯಸ್ಮೃತಿ)

"ಗಂಡನು ಏಳುವುದಕ್ಕಿಂತ ಮುಂಚಿತವಾಗಿ ಏಳಬೇಕು. ಶಾಸ್ತ್ರೋಕ್ತವಿಧಿಯಿಂದ ಮಲಮೂತ್ರಗಳ ವಿಸರ್ಜನವನ್ನು ಮಾಡಬೇಕು. ಹಲ್ಲುಗಳನ್ನು ಉಜ್ಜಿಕೊಳ್ಳಬೇಕು. ಕುತ್ತಿಗೆವರೆಗಿನ ಅವಯವಗಳನ್ನು ನೀರಿನಲ್ಲಿ ಮುಳುಗಿಸಿ ಮಾಡುವ ಸ್ನಾನವೇ ಕಂಠಸ್ನಾನವೆನಿಸುತ್ತದೆ. ಈ ಕಂಠಸ್ನಾನವನ್ನು ಮಾಡಬೇಕು. ಒಮ್ಮೆ ನೀರಿನಿಂದ ಆಚಮನ ಮಾಡಬೇಕು. ಒಗೆದು ಒಣಗಿಸಿದ ಶುದ್ಧವಾದ ವಸ್ತ್ರವನ್ನು ಉಟ್ಟುಕೊಳ್ಳಬೇಕು. ಪುನಃ ಒಮ್ಮೆ ಆಚಮನವನ್ನು ಮಾಡಬೇಕು. ಹಣೆಯಲ್ಲಿ ಗೋಪೀಚಂದನದಿಂದ ಶುಭ್ರವಾದ ಒಂದು ಊರ್ಧ್ವಪುಂಡ್ರವನ್ನು ಧರಿಸಬೇಕು. ಅದರ ಮೇಲೆ ಕಸ್ತೂರಿಯಿಂದಲಾಗಲೀ ಕುಂಕುಮದಿಂದಲಾಗಲೀ ಗಂಧದಿಂದಲಾಗಲೀ ಸುಂದರವೂ ಋಜುವೂ ಆಗಿರುವ ಊರ್ಧ್ವಪುಂಡ್ರವನ್ನು ಧರಿಸಬೇಕು. ತನ್ನನ್ನು ಅಲಂಕರಿಸಿಕೊಳ್ಳಬೇಕು. ಇಷ್ಟು ಕಾರ್ಯಗಳನ್ನು ಮಾಡಿಕೊಂಡ ಮೇಲೆ ಮನೆಯ ಕೆಲಸವನ್ನು ಮಾಡಬೇಕು."

ಕುಟುಂಬಿನೋಽಪಿ ಕರ್ತವ್ಯಕರ್ಮ ಕುರ್ಯುರತಂದ್ರಿತಾಃ |
ಉತ್ಥಾಯ ಪೂರ್ವಂ ಗೃಹಿಣೀ ಸುಸ್ನಾತಾ ಯತಮಾನಸಾ ||
ಸ್ನುಷಾಂ ದುಹಿತೃಪುತ್ರಾದ್ಯಾನ್ ಯಥಾರ್ಹಂ ಶುಚಿತಾಂ ನಯೇತ್ |
ಊರ್ಧ್ವಪುಂಡ್ರಧರಾಃ ಶುದ್ಧಾ ವಸ್ತ್ರಾಭರಣಭೂಷಿತಾಃ ||
ಆಚಾಂತಾಃ ಪ್ರಯತಾಃ ಪೂರ್ವಮಭಿಗಚ್ಛೇಯುರಾದೃತಾಃ |
ತ್ರಿಸಂಧ್ಯಂ ಕಾರಯೇದ್ಬಾಲಾನ್ ಪ್ರಣಾಮಂ ದೇವಪಾದಯೋಃ ||
ಪುತ್ರಂ ಪ್ರೇರ್ಯಂ ತಥಾ ಶಿಷ್ಯಮಿತ್ಯೇವಂ ಚ ನಿವೇದಯೇತ್ |
ಗೃಹಿಣೀಪ್ರಮುಖಾಃ ಸರ್ವಾ ಗಾಯಂತ್ಯಃ ಪುರುಷೋತ್ತಮಮ್ ||
ಬಾಲಕ್ರೀಡಾದಿಚರಿತ್ರೈಃ ಕರ್ಮ ಕುರ್ಯುರತಂದ್ರಿತಾಃ |
ಅಪಕ್ವೇಷು ಚ ಸರ್ವೇಷು ಪರಿವೃಜ್ಯಾಂಬುನಾ ತಥಾ ||
ಊರ್ಧ್ವಪುಂಡ್ರೈರಲಂಕೃತ್ಯ ನಯೇದ್ದ್ಯಾಗಾಲಯಂ ಸತೀ || (ಶಾಂಡಿಲ್ಯಸ್ಮೃತಿ)

"ಕುಟುಂಬದಲ್ಲಿ ಸೇರಿರುವವರೆಲ್ಲರೂ, ಸ್ವಲ್ಪವೂ ಆಲಸ್ಯವಿಲ್ಲದೆ ಎಲ್ಲಾ ಕರ್ಮಗಳನ್ನೂ ಅನುಷ್ಠಿಸಬೇಕು. ಮನೆಯ ಯಜಮಾನಿಯು ಎಲ್ಲರಿಗಿಂತ ಮುಂಚಿತವಾಗಿ ಏಳಬೇಕು. ಶಾಸ್ತ್ರೋಕ್ತವಿಧಿಯಿಂದ ಸ್ನಾನ ಮಾಡಬೇಕು. ಮನಸ್ಸನ್ನು ಶುದ್ಧ ಮಾಡಿಕೊಂಡು ಶ್ರೀಹರಿಯನ್ನು ಸ್ಮರಿಸಬೇಕು. ಸೊಸೆ, ಮಗಳು, ಮಗ ಮುಂತಾದವರನ್ನು ಯೋಗ್ಯರೀತಿಯಿಂದ ಶುದ್ಧರಾಗುವಂತೆ ಮಾಡಬೇಕು. ಮನೆಯಲ್ಲಿರುವವರು ಸರ್ವರೂ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಮಡಿಯನ್ನು ಉಟ್ಟುಕೊಳ್ಳಬೇಕು. ಶುದ್ಧ ವಸ್ತ್ರಗಳನ್ನೂ, ಆಭರಣಗಳನ್ನೂ ಧರಿಸಬೇಕು. ಆಚಮನವನ್ನು ಆಗಾಗ್ಗೆ ಮಾಡುತ್ತಿರಬೇಕು. ಶುದ್ಧವಾದ ಮನಸ್ಸುಳ್ಳವರಾಗಿರಬೇಕು. ಮನೆಗೆ ಅತಿಥಿಗಳು ಬಂದಾಗ ತಾವು ಮೊದಲು ಎದ್ದು ನಿಲ್ಲಬೇಕು. ಪ್ರೇಮದಿಂದ ಎದುರುಗೊಳ್ಳಬೇಕು. ಆದರದಿಂದ ಸತ್ಕಾರ ಮಾಡಬೇಕು. ಮನೆಯಲ್ಲಿರುವ ಕಿರಿಯರಿಂದ ಬೆಳಿಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ದೇವರಿಗೆ ನಮಸ್ಕಾರಗಳನ್ನು ಮಾಡಿಸಬೇಕು. ಮಗನನ್ನೂ, ಸೇವಕನನ್ನೂ, ಶಿಷ್ಯನನ್ನೂ, ಆಜ್ಞಾಪಿಸಿ ಹಿಂದೆ ಹೇಳಿದಂತೆ ಅವರಿಂದ ಕೆಲಸಗಳನ್ನು ಮಾಡಿಸಬೇಕು. ಮನೆಯ ಯಜಮಾನಿಯಿಂದ ಆರಂಭಿಸಿ ಮನೆಯಲ್ಲಿರುವ ಸರ್ವ ಸ್ತ್ರೀಯರೂ, ಪುರುಷೋತ್ತಮನಾದ ಶ್ರೀಹರಿಯು ಮಾಡಿರುವ ಬಾಲಕ್ರೀಡಾ ಮುಂತಾದ ಎಲ್ಲಾ ಚರಿತ್ರೆಗಳನ್ನೂ ಭಕ್ತಿಯಿಂದ

ಹಾಡುತ್ತಾ ಮನೆಯ ಕೆಲಸಗಳನ್ನು ಆಲಸ್ಯವಿಲ್ಲದೆ ಮಾಡಬೇಕು. ಪಕ್ವವಾಗದಿರುವ ಕಾಯಿಗಳನ್ನು ನೀರಿನಿಂದ ತೊಳೆದು ಊರ್ಧ್ವಪುಂಡ್ರಗಳಿಂದ ಅಲಂಕರಿಸಿ ಪೂಜಾಗೃಹಕ್ಕೆ ತೆಗೆದುಕೊಂಡು ಹೋಗಬೇಕು."

ಉತ್ಥಾಯ ಪಶ್ಚಿಮೇ ಯಾಮೇ ಭರ್ತುಃ ಪೂರ್ವಮತಂದ್ರಿತಾ |
ಕೃತ್ವಾ ಶೌಚಂ ವಿಧಾನೇನ ದಂತಧಾವನಮಾಚರೇತ್ ||
ಕೃತ್ವಾಽಥ ಮಂಗಲಸ್ನಾನಂ ಧೃತ್ವಾ ಶುಕ್ಲಾಂಬರಂ ತಥಾ |
ಆಚಮ್ಯ ಧಾರಯೇದೇವಮೂರ್ಧ್ವಪುಂಡ್ರಂ ಮೃದೈವ ತು ||
ಚಂದನೇನಾಥ ಕಸ್ತೂರ್ಯಾ ಕುಂಕುಮೇನಾಥವಾ ಸತೀ || (ಹಾರೀತಸ್ಮೃತಿ)

"ಸೂರ್ಯಾಸ್ತಮನಕಾಲದಿಂದ ಆರಂಭಿಸಿ ಸೂರ್ಯೋದಯಕಾಲದವರೆಗಿರುವ ಕಾಲವು ರಾತ್ರಿಕಾಲವೆನಿಸುತ್ತದೆ. ಈ ರಾತ್ರಿಕಾಲವನ್ನು ನಾಲ್ಕು ಭಾಗವಾಗಿ ಸಮವಾಗಿ ವಿಂಗಡಿಸಬೇಕು. ಈ ನಾಲ್ಕು ಭಾಗಗಳಲ್ಲಿ ಕೊನೆಯ ಭಾಗದಲ್ಲಿ ಗಂಡನು ಏಳುವುದಕ್ಕಿಂತ ಮುಂಚಿತವಾಗಿ ಆಲಸ್ಯವಿಲ್ಲದೆ ಏಳಬೇಕು. ಮಲಮೂತ್ರವಿಸರ್ಜನೆಯನ್ನು ಮಾಡಬೇಕು. ಹಲ್ಲುಗಳನ್ನು ಉಜ್ಜಿಕೊಳ್ಳಬೇಕು. ಮಂಗಲಸ್ನಾನವನ್ನು ಮಾಡಬೇಕು. ಶುದ್ಧವಾದ ಬಟ್ಟೆಯನ್ನು ಉಟ್ಟುಕೊಳ್ಳಬೇಕು. ಆಚಮನವನ್ನು ಮಾಡಬೇಕು. ಗೋಪೀಚಂದನ, ಗಂಧ, ಕಸ್ತೂರೀ ಅಥವಾ ಕುಂಕುಮದಿಂದ ಊರ್ಧ್ವಪುಂಡ್ರಗಳನ್ನು ಧರಿಸಬೇಕು."

ತಸ್ಮಾಚ್ಛಿದ್ರಾನ್ವಿತಂ ಪುಂಡ್ರಂ ದಂಡಾಕಾರಂ ಸುಶೋಭನಮ್ |
ವಿಪ್ರಾಣಾಂ ಸತತಂ ಧಾರ್ಯಂ ಸ್ತ್ರೀಣಾಂ ಚ ಶುಭದರ್ಶನಮ್ || (ಹಾರೀತಸ್ಮೃತಿ)

"ಬ್ರಾಹ್ಮಣರು ಹಣೆಯಲ್ಲಿ ಕೋಲಿನ ಹಾಗೆ ಉದ್ದವೂ, ಸುಂದರವೂ, ಮಧ್ಯದಲ್ಲಿ ರಂಧ್ರದಿಂದ ಯುಕ್ತವೂ, ಆಗಿರುವ ಊರ್ಧ್ವಪುಂಡ್ರವನ್ನು ಯಾವಾಗಲೂ ಧರಿಸಬೇಕು. ಸ್ತ್ರೀಯರೂ ತಮ್ಮ ತಮ್ಮ ಗಂಡಂದಿರಂತೆಯೇ ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸಬೇಕು."

ಸಾಂತರಾಲೋರ್ಧ್ವಪುಂಡ್ರಸ್ಯ ಮಧ್ಯೇ ಕೃಷ್ಣಸ್ಯ ಧಾಮನಿ |
ಹರಿದ್ರಾಸಾರಸಂಭೂತಂ ಸ್ತ್ರೀ ಚ ಚೂರ್ಣಂ ಪ್ರಧಾರಯೇತ್ ||
ತೇನೋರ್ಧ್ವರೇಖಾಂ ರಚಯೇತ್ತಾಂ ಶ್ರಿಯಂ ಪರಿಚಿಂತಯೇತ್ | (ವಸಿಷ್ಠಸ್ಮೃತಿ)

"ಹಣೆಯಲ್ಲಿರುವ ಊರ್ಧ್ವಪುಂಡ್ರದ ಮಧ್ಯದಲ್ಲಿ ರಂಧ್ರವಿರಬೇಕು. ಈ ರಂಧ್ರವೇ ಶ್ರೀಕೃಷ್ಣದೇವನ ಮನೆಯೆನಿಸುತ್ತದೆ. ಸ್ತ್ರೀಯರು ಆ ರಂಧ್ರದ ಮಧ್ಯದಲ್ಲಿ ಅರಿಶಿನದ ಬೇರಿನಿಂದ ಮಾಡಿದ ಅರಿಶಿನಪುಡಿಯಿಂದ ಮೇಲ್ಮುಖವಾದ ರೇಖೆಯನ್ನು ಬರೆಯಬೇಕು. ಆ ರೇಖೆಯೇ ಲಕ್ಷ್ಮೀದೇವಿಯರೆಂದು ತಿಳಿಯಬೇಕು."

(ಊರ್ಧ್ವಪುಂಡ್ರವನ್ನು ಗೋಪೀಚಂದನದಿಂದಲೇ ಸ್ತ್ರೀಯರು ಧರಿಸಬೇಕು. ಆ ಊರ್ಧ್ವಪುಂಡ್ರದ ಮಧ್ಯದಲ್ಲಿ ಬ್ರಾಹ್ಮಣಸ್ತ್ರೀಯರು ಅರಿಸಿನಪುಡಿಯನ್ನೂ, ಕ್ಷತ್ರಿಯಸ್ತ್ರೀಯರು ಕಸ್ತೂರಿಯನ್ನೂ, ವೈಶ್ಯಸ್ತ್ರೀಯರು ಗಂಧವನ್ನೂ ಧರಿಸಬೇಕು. ಇದು ಸ್ಮೃತಿಮುಕ್ತಾವಲೀಕಾರರು ಬರೆದಿರುವ ನಿರ್ಣಯ.)

ಯೇಷಾಂ ಯೇಷಾಂ ಯೇ ಯೇ ಧರ್ಮಾಸ್ತತ್ಸ್ತ್ರೀಣಾಮಪಿ ತ ಏವ ಧರ್ಮಾಃ |
(ಸ್ಮೃತಿಮುಕ್ತಾವಲೀಕಾರರು)

"ಯಾರು ಯಾರಿಗೆ ಯಾವುದು ಯಾವುದು ಧರ್ಮವೋ ಅವರವರ ಪತ್ನಿಯರಿಗೆ ಅವರವರ ಧರ್ಮಗಳೇ ಧರ್ಮಗಳು."

ಅಶಿರಸ್ಕಂ ತು ಯತ್ ಸ್ನಾನಂ ತಥಾ ಪರ್ಯುಷಿತಭೋಜನಮ್ |
ದ್ವಾದಶ್ಯುಲ್ಲಂಘನಂ ಸ್ತ್ರೀಣಾಂ ನ ದೋಷೋ ಮನುರಬ್ರವೀತ್ ||

"(1) ತಲೆಯನ್ನು ಬಿಟ್ಟು ಉಳಿದ ಅಂಗಗಳಿಗೆ ಸ್ನಾನವನ್ನು ಮಾಡುವುದು. (2) ತಂಗಳನ್ನವನ್ನು ತಿನ್ನುವುದು. (3) ದ್ವಾದಶೀಪಾರಣಕಾಲವನ್ನು ದಾಟಿ ಊಟವನ್ನು ಮಾಡುವುದು. ಈ ಮೂರು ಸ್ತ್ರೀಯರಿಗೆ ದೋಷವಲ್ಲವೆಂದು ಮನುವು ಹೇಳಿರುವನು."

### ಸ್ತ್ರೀಯರೂ ಚಕ್ರಾದಿಗಳನ್ನು ಧರಿಸಬೇಕು

ಶಂಖಚಕ್ರಾಂಕನಂ ಕುರ್ಯಾದಾತ್ಮನೋ ಬಾಹುಮೂಲಯೋಃ |
ಕಳತ್ರಾಪತ್ಯಭೃತ್ಯೇಷು ಪಶ್ವಾದೀನಾಂ ಚ ಮುಕ್ತಯೇ || (ಪದ್ಮಪುರಾಣ)

"ತನ್ನ ಭುಜಗಳ ಕೆಳಭಾಗದಲ್ಲಿ ಶಂಖ ಮತ್ತು ಚಕ್ರಗಳಿಂದ ಮುದ್ರೆಯನ್ನು ಹಾಕಿಕೊಳ್ಳಬೇಕು. ತನ್ನಂತೆಯೇ ಹೆಂಡತಿ, ಮಕ್ಕಳು, ಸೇವಕರು ಮತ್ತು ಮನೆಯಲ್ಲಿರುವ ಪಶು ಮುಂತಾದವುಗಳಿಗೂ ಮುದ್ರೆಗಳನ್ನು ಹಾಕಬೇಕು. ಇದರಿಂದ ಯಜಮಾನನಿಗೂ ಪತ್ನೀಪುತ್ರಾದಿಗಳಿಗೂ ಮುಕ್ತಿಯು ಏರ್ಪಡುತ್ತದೆ."

ಶಂಖಚಕ್ರಾಂಕನಂ ಕುರ್ಯಾದಾತ್ಮನೋ ಬಾಹುಮೂಲಯೋಃ |
ಕಲತ್ರಾಪತ್ಯಭೃತ್ಯೇಷು ಪಶ್ವಾದಿಷು ಚ ಸಂಪದೇ || (ಆಗ್ನೇಯಪುರಾಣ)
ಪಶುಪುತ್ರಾದಿಕಂ ಸರ್ವಂ ಗೃಹೋಪಕರಣಾನಿ ಚ |
ಅಂಕಯೇಚ್ಛಂಖಚಕ್ರಾಭ್ಯಾಂ ನಾಮ ಕುರ್ಯಾಚ್ಚ ವೈಷ್ಣವಮ್ || (ವೃದ್ಧಮನುವಚನ)

"ಮನೆಯಲ್ಲಿರುವ ಪಶುಗಳು, ಮಕ್ಕಳು, ಪಾತ್ರೆಗಳು ಮುಂತಾದ ಎಲ್ಲಾ ವಸ್ತುಗಳಿಗೂ ಶಂಖ ಮತ್ತು ಚಕ್ರ ಮುದ್ರೆಗಳನ್ನು ಹಾಕಬೇಕು. ಶ್ರೀಹರಿಯ ಹೆಸರನ್ನು ಅವುಗಳಿಗೆ ಇಡಬೇಕು."

## ಸಂಧ್ಯಾವಂದನ ನಿರೂಪಣ

### ಸಂಧ್ಯಾವಂದನಕಾಲ

ಊರ್ಧ್ವಪುಂಡ್ರಂ ದ್ವಿಜೋ ಧೃತ್ವಾ ತಥಾ ಚಕ್ರಾದಿಧಾರಣಮ್ |
ಕೃತ್ವಾ ಸಂಧ್ಯಾಮುಪಾಸೀತ ಯಥಾಕಾಲಮತಂದ್ರಿತಃ ||

"ಬ್ರಾಹ್ಮಣನು ಊರ್ಧ್ವಪುಂಡ್ರವನ್ನು ಧರಿಸಬೇಕು. ಅನಂತರದಲ್ಲಿ ಚಕ್ರ ಶಂಖ ಮುಂತಾದವುಗಳನ್ನು ಧರಿಸಬೇಕು. ಅನಂತರದಲ್ಲಿ ಸರಿಯಾದ ಕಾಲದಲ್ಲಿ ಆಲಸ್ಯವಿಲ್ಲದೆ ಸಂಧ್ಯಾವಂದನವನ್ನು ಮಾಡಬೇಕು."

ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮುತ್ತರಾಂ ಸದಿವಾಕರಾಮ್ | (ಆಚಾರ್ಯರ ವಚನ)

"ಪ್ರಾತಃಕಾಲದಲ್ಲಿ ನಕ್ಷತ್ರಗಳು ಅಸ್ತಮನವಾಗುವುದಕ್ಕಿಂತ ಪೂರ್ವದಲ್ಲಿಯೂ, ಸಾಯಂಕಾಲದಲ್ಲಿ ಸೂರ್ಯಾಸ್ತಮನಕ್ಕಿಂತ ಪೂರ್ವದಲ್ಲಿಯೂ, ಸಂಧ್ಯಾವಂದನವನ್ನು ಮಾಡಬೇಕು."

ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಸಾದಿತ್ಯಾಂ ವೈ ಯಥಾವಿಧಿ |
ಗಾಯತ್ರೀಮಭ್ಯಸೇತ್ತಾವದ್ಯಾವದೃಕ್ಷಾಣಿ ಪಶ್ಯತಿ || (ಪುರಾಣವಚನ)

"ಸಾಯಂಕಾಲದಲ್ಲಿ ಸೂರ್ಯಾಸ್ತಮನಕ್ಕಿಂತ ಪೂರ್ವದಲ್ಲಿ ಸಾಯಂಕಾಲಿಕ ಸಂಧ್ಯಾವಂದನವನ್ನು ಮಾಡಬೇಕು. ನಕ್ಷತ್ರಗಳು ಕಣ್ಣಿಗೆ ಕಾಣಿಸಲು ಆರಂಭಿಸುವವರೆಗೆ ಗಾಯತ್ರೀಮಂತ್ರವನ್ನು ಜಪಿಸಬೇಕು."

ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮುಪಕ್ರಮ್ಯ ಯಥಾವಿಧಿ |
ಗಾಯತ್ರೀಮಭ್ಯಸೇತ್ತಾವದ್ಯಾವದಾದಿತ್ಯದರ್ಶನಮ್ || (ಪುರಾಣವಚನ)

"ಪ್ರಾತಃಕಾಲದಲ್ಲಿ ನಕ್ಷತ್ರ ಇರುವಾಗಲೇ ಸಂಧ್ಯಾವಂದನವನ್ನು ಆರಂಭಿಸಬೇಕು. ಸೂರ್ಯೋದಯಕಾಲದವರೆಗೆ ಗಾಯತ್ರೀಮಂತ್ರವನ್ನು ಜಪಿಸಬೇಕು."

ರಾತ್ರ್ಯಂತಯಾಮನಾಡ್ಯೌ ದ್ವೇ ಸಂಧ್ಯಾದಿಃ ಕಾಲ ಉಚ್ಯತೇ |
ದರ್ಶನಾದ್ರವಿರೇಖಾಯಾಸ್ತದಂತೋ ಮುನಿಭಿಃ ಸ್ಮೃತಃ || (ದಕ್ಷವಚನ)

"ರಾತ್ರಿಯ ಕೊನೆಯ ಜಾಮದಲ್ಲಿ ಕೊನೆಯ ಎರಡು ಘಳಿಗೆಗಳು ಬಾಕಿಯಿರುವಾಗ ಸಂಧ್ಯಾವಂದನವನ್ನು ಆರಂಭಿಸಬೇಕು. ಸೂರ್ಯದೇವನ ಬಿಂಬದ ಅರ್ಧಭಾಗವು ಉದಯಿಸಿದ ಕಾಲದಲ್ಲಿ ಸಂಧ್ಯಾವಂದನೆಯನ್ನು ಮುಗಿಸಬೇಕು."

ಉದಯಾತ್ಪ್ರಾಕ್ತನೀ ಸಂಧ್ಯಾ ಘಟಿಕಾತ್ರಯಮಿಷ್ಯತೇ |
ಸಾಯಂ ಸಂಧ್ಯಾ ತ್ರಿಘಟಿಕಾ ಹ್ಯಸ್ತಾದುಪರಿ ಭಾಸ್ವತಃ || (ಸ್ಮೃತಿಸಂಗ್ರಹ)

"ಸೂರ್ಯೋದಯಕ್ಕಿಂತ ಪೂರ್ವದಲ್ಲಿರುವ ಮೂರು ಗಳಿಗೆಗಳು ಪ್ರಾತಃಸಂಧ್ಯಾಕಾಲವೆನಿಸುತ್ತವೆ. ಸಾಯಂಕಾಲದಲ್ಲಿ ಸೂರ್ಯಾಸ್ತಮಯಾನಂತರದಲ್ಲಿ ಮೂರು ಗಳಿಗೆಗಳು ಸಾಯಂಸಂಧ್ಯಾಕಾಲವೆನಿಸುತ್ತವೆ."

ನಷ್ಟಾರ್ಕೇ ತು ಮುಹೂರ್ತಂ ಸ್ಯಾದ್ದೃಷ್ಟಾರ್ಕೇ ದ್ವಿಮುಹೂರ್ತಕಮ್ |
ಸಂಧ್ಯೇ ಮಾಧ್ಯಾಹ್ನಿಕಂ ಕುರ್ಯಾತ್ತ್ರಿಸಂಧ್ಯಾ ಚ ಯಥಾವಿಧಿ ||

"(1) ಸೂರ್ಯನು ಕಾಣಿಸದಿರುವಾಗ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಒಂದು ಮುಹೂರ್ತ ಅಂದರೆ ಎರಡು ಗಳಿಗೆಗಳೂ (2) ಸೂರ್ಯನು ಕಾಣಿಸುತ್ತಿರುವಾಗ ಸೂರ್ಯಾಸ್ತಮನಕ್ಕಿಂತ ಪೂರ್ವದಲ್ಲಿ ನಾಲ್ಕು ಗಳಿಗೆಗಳೂ (3) ಮಧ್ಯಾಹ್ನ ಕಾಲವೂ ಕ್ರಮವಾಗಿ ಬೆಳಿಗ್ಗೆ, ಸಾಯಂಕಾಲ ಮತ್ತು ಮಧ್ಯಾಹ್ನಕಾಲದಲ್ಲಿ ಸಂಧ್ಯಾಕಾಲವೆನಿಸುತ್ತವೆ."

ಸಂಧ್ಯಾಕಾಲಃ ಪ್ರಾಗುದಯಾದ್ವಿಪ್ರಸ್ಯ ದ್ವಿಮುಹೂರ್ತಕಃ |
ಕ್ಷತ್ರಿಯಸ್ಯ ತದರ್ಧಂ ಸ್ಯಾತ್ತದರ್ಧಂ ಸ್ಯಾದ್ವಿಶೋಽಪಿ ಚ ||
ತಥೈವಾಸ್ತಮಿತೇ ತೇಷಾಂ ವೈಶ್ಯಾದೀನಾಮುಪಕ್ರಮಃ |
ಅಥಾಸ್ತಮಯವೇಲಾದಿ ಸಾಯಂ ನಕ್ಷತ್ರದರ್ಶನಾತ್ ||
ವಿಪ್ರಾದೀನಾಂ ತ್ರಯಾಣಾಂ ತು ಸಾಮಾನ್ಯಮಿತಿ ಕೇಚನ |

"ಬ್ರಾಹ್ಮಣನಿಗೆ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ನಾಲ್ಕು ಗಳಿಗೆ ಕಾಲವೂ, ಕ್ಷತ್ರಿಯನಿಗೆ ಎರಡು ಗಳಿಗೆ ಕಾಲವೂ, ವೈಶ್ಯನಿಗೆ ಒಂದು ಗಳಿಗೆ ಕಾಲವೂ, ಸಂಧ್ಯಾಕಾಲವೆನಿಸುತ್ತದೆ. ಸಾಯಂಕಾಲದಲ್ಲಿ ಸೂರ್ಯಾಸ್ತಮನಕ್ಕಿಂತ ಪೂರ್ವದಲ್ಲಿ ನಾಲ್ಕು ಗಳಿಗೆ ಕಾಲವೂ ಬ್ರಾಹ್ಮಣನಿಗೂ, ಎರಡು ಗಳಿಗೆ ಕಾಲವು ಕ್ಷತ್ರಿಯನಿಗೂ, ಒಂದು ಗಳಿಗೆ ಕಾಲವು ವೈಶ್ಯನಿಗೂ ಸಾಯಂಕಾಲಿಕ ಸಂಧ್ಯಾಕಾಲವೆನಿಸುತ್ತದೆ. ಸಾಯಂಕಾಲದಲ್ಲಿ ಸೂರ್ಯಾಸ್ತಮನಕಾಲದಿಂದ ಆರಂಭಿಸಿ ನಕ್ಷತ್ರವು ಕಾಣಿಸುವವರೆಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಸಾಮಾನ್ಯವಾಗಿ ಸಾಯಂಕಾಲಿಕ ಸಂಧ್ಯಾಕಾಲವೆನಿಸುತ್ತದೆ. ಇದು ಕೆಲವು ಮುನಿಗಳ ಮತ."

(ಈ ಮೇಲ್ಕಂಡ ಪ್ರಮಾಣಗಳಲ್ಲಿ ಪ್ರಾತಃಕಾಲದಲ್ಲಿ ಮಾಡುವ ಸಂಧ್ಯಾವಂದನೆಗಳೆಲ್ಲವೂ ಸೂರ್ಯೋದಯಕಾಲಕ್ಕಿಂತ ಪೂರ್ವದಲ್ಲಿಯೇ ಆರಂಭಿಸಲ್ಪಡಬೇಕೆಂದು ಹೇಳಿದೆ. ಆದ್ದರಿಂದ ಸೂರ್ಯೋದಯಕ್ಕಿಂತ ಪೂರ್ವಕಾಲವೇ ಸಂಧ್ಯಾವಂದನಕ್ಕೆ ಮುಖ್ಯಕಾಲವೆಂದು ಸ್ಪಷ್ಟವಾಗುತ್ತದೆ.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.)

"ಬ್ರಹ್ಮವಾದಿನೋ ವದಂತಿ. ಕಸ್ಮಾದ್ಬ್ರಾಹ್ಮಣಃ ಸಾಯಮುಪಾಸೀನಃ ಸಂಧ್ಯಾಮುಪಾಸ್ತೇ? ಕಸ್ಮಾತ್ಪ್ರಾತಸ್ತಿಷ್ಠನ್? ಕಾ ಚ ಸಂಧ್ಯಾ? ಕಶ್ಚ ಸಂಧ್ಯಾಕಾಲಃ? ಕಿಂಚ ಸಂಧ್ಯಾಯಾಃ ಸಂಧ್ಯಾತ್ವಂ?"

"ದೇವಾಶ್ಚಾಸುರಾಶ್ಚಾಸ್ಪರ್ಧಂತ, ಅಸುರಾ ಆದಿತ್ಯಮಭಿದ್ರವನ್, ಆದಿತ್ಯೋಽಬಿಭೇತ್, ತಸ್ಯ ಹೃದಯಂ ಕೂರ್ಮರೂಪೇಣಾತಿಷ್ಠತ್, ಸ ಪ್ರಜಾಪತಿಮುಪಾಧಾವತ್, ತಸ್ಯ ಪ್ರಜಾಪತಿರೇತದ್ಭೇಷಜಮಪಶ್ಯತ್, ಋತಂ ಚ ಸತ್ಯಂ ಚ, ಬ್ರಹ್ಮ ಚೋಂಕಾರಂ ಚ, ತ್ರಿಪದಾಂ ಗಾಯತ್ರೀಂ ಬ್ರಹ್ಮಣೋ ಮುಖಮಪಶ್ಯತ್, ತಸ್ಮಾದ್ಬ್ರಾಹ್ಮಣೋಽಹೋರಾತ್ರಸ್ಯ

ಸಂಯೋಗೇ ಸಂಧ್ಯಾಮುಪಾಸ್ತೇ, ಜ್ಯೋತಿಷ್ಯಾಜ್ಯೋತಿಷೋ ದರ್ಶನಾತ್, ಸೋಽಸ್ಯ ಕಾಲಃ ಸಂಧ್ಯಾಯಾಃ, ಸಾ ಸಂಧ್ಯಾ, ತತ್ಸಂಧ್ಯಾಯಾಃ ಸಂಧ್ಯಾತ್ವಂ, ಯತ್ಸಾಯಮಾಸೀನಃ ಸಂಧ್ಯಾಮುಪಾಸ್ತೇ ತಯಾ ವೀರಸ್ಥಾನಂ ಜಯತಿ, ಅಥ ಯದಪಃ ಪ್ರಯುಂಕ್ತೇ ತಾ ವಿಪ್ರುಷೋ ವಜ್ರೀಭವಂತಿ, ತಾ ವಿಪ್ರುಷೋ ವಜ್ರೀಭೂತ್ವಾ ಅಸುರಾನುಪಾಘ್ನಂತಿ."

"ಬ್ರಹ್ಮವಾದಿಗಳು ಕೆಳಗಣ ಪ್ರಶ್ನೆಗಳನ್ನೂ ಅವುಗಳಿಗೆ ಯೋಗ್ಯವಾದ ಉತ್ತರಗಳನ್ನೂ ಹೇಳುತ್ತಾರೆ. (1) ಬ್ರಾಹ್ಮಣನು ಸಾಯಂಕಾಲದಲ್ಲಿ ಕುಳಿತು ಸಂಧ್ಯಾವಂದನವನ್ನು ಮಾಡುತ್ತಿರುವನು. ಬೆಳಿಗ್ಗೆ ನಿಂತುಕೊಂಡು ಸಂಧ್ಯಾವಂದನವನ್ನು ಮಾಡುತ್ತಿರುವನು. ಇದಕ್ಕೆ ಕಾರಣವೇನು? ಸಂಧ್ಯಾ ಯಾವುದು? ಸಂಧ್ಯಾಕಾಲ ಯಾವುದು? ಸಂಧ್ಯೆಯಲ್ಲಿರುವ ಸಂಧ್ಯಾತ್ವ ಎಂಬ ಧರ್ಮ ಯಾವುದು? ಇವುಗಳು ಪ್ರಶ್ನೆಗಳು."

"ದೇವತೆಗಳಿಗೂ, ದೈತ್ಯರಿಗೂ ಜಿದ್ದು ಏರ್ಪಟ್ಟಿತು. ದೈತ್ಯರು ಸೂರ್ಯನನ್ನು ಓಡಿಸಿಕೊಂಡು ಬಂದರು. ಸೂರ್ಯನು ಹೆದರಿದನು. ಅವನ ಹೃದಯವು ಆಮೆಯಂತೆ ಸಂಕುಚಿತವಾಯಿತು. ಅವನು ಬ್ರಹ್ಮದೇವನ ಸಮೀಪಕ್ಕೆ ಓಡಿದನು. ಬ್ರಹ್ಮದೇವನು ಋತ, ಸತ್ಯ, ಬ್ರಹ್ಮ, ಓಂಕಾರ ಮತ್ತು ಮೂರುಪಾದಗಳಿಂದ ಯುಕ್ತವಾದ ಗಾಯತ್ರೀ ಈ ಐದುವಸ್ತುಗಳನ್ನು ವೇದದ ಮುಖವೆಂದೂ, ಇವುಗಳೇ ಸೂರ್ಯನ ಭಯವನ್ನು ಪರಿಹರಿಸುವ ಔಷಧವೆಂದೂ ತಿಳಿದನು. ನಕ್ಷತ್ರ ಎಂಬ ತೇಜಸ್ಸು ಇರುವಾಗ ಆರಂಭಿಸಿ, ಸೂರ್ಯನೆಂಬ ತೇಜಸ್ಸಿನ ಉದಯಕಾಲದಲ್ಲಿ ಮುಗಿಸಬೇಕೆಂದು ಶಾಸ್ತ್ರದಲ್ಲಿ ಹೇಳಿರುವುದರಿಂದಲೂ ಸೂರ್ಯನೆಂಬ ತೇಜಸ್ಸು ಇರುವ ಕಾಲದಲ್ಲಿ ಆರಂಭಿಸಿ, ನಕ್ಷತ್ರ ಎಂಬ ತೇಜಸ್ಸಿನ ಉದಯಕಾಲದಲ್ಲಿ ಮುಗಿಸಬೇಕೆಂದು ಶಾಸ್ತ್ರದಲ್ಲಿ ಹೇಳಿರುವುದರಿಂದಲೂ ಹಗಲು ಮತ್ತು ರಾತ್ರಿಯ ಸಂಯೋಗ ಕಾಲದಲ್ಲಿ, ಬ್ರಾಹ್ಮಣನು ಸಂಧ್ಯಾವಂದನವನ್ನು ಮಾಡುತ್ತಿರುವನು. ಮೇಲ್ಕಂಡ ಕಾಲವೇ ಸಂಧ್ಯಾಕಾಲವೆನಿಸುತ್ತದೆ. ಆ ಕಾಲದಲ್ಲಿ ಮಾಡಲ್ಪಡುವ ಕರ್ಮವೇ ಸಂಧ್ಯೆಯೆನಿಸುತ್ತದೆ. ಸಂಧ್ಯೆಗೆ ಆ ಕಾಲದಲ್ಲಿ ಮಾಡುವಿಕೆಯೇ ಸಂಧ್ಯಾತ್ವ ಎನಿಸುತ್ತದೆ. ಸಾಯಂಕಾಲದಲ್ಲಿ ಕುಳಿತು ಸಂಧ್ಯಾವಂದನವನ್ನು ಮಾಡುತ್ತಿರುವುದರಿಂದ ವೀರರು ಹೊಂದುವ ಸ್ಥಾನವನ್ನು ಪಡೆಯುವನು. ಸಂಧ್ಯಾವಂದನಕಾಲದಲ್ಲಿ ಚೆಲ್ಲುವ ನೀರುಗಳು ವಜ್ರದಂತೆ ಅತಿಕಠೋರವಾಗುತ್ತವೆ. ಆ ಬಿಂದುಗಳು ದೈತ್ಯರನ್ನು ಸಂಹರಿಸುತ್ತವೆ." ಇದು ಮೇಲ್ಕಂಡ ಪ್ರಶ್ನೆಗೆ ಉತ್ತರ.

(ಸೂರ್ಯೋದಯಕಾಲಕ್ಕಿಂತ ಪೂರ್ವದಲ್ಲಿ ಎರಡು ಗಳಿಗೆ ಇರುವಾಗ ಆರಂಭಿಸಿ ಸೂರ್ಯೋದಯದವರೆಗಿನ ಕಾಲವು ಪ್ರಾತಃಕಾಲದಲ್ಲಿಯೂ, ಸೂರ್ಯಾಸ್ತಮನಕ್ಕಿಂತ ಪೂರ್ವದಲ್ಲಿ ಎರಡು ಗಳಿಗೆ ಇರುವಾಗ ಆರಂಭಿಸಿ ಸೂರ್ಯಾಸ್ತಮನದವರೆಗಿನ ಕಾಲವು ಸಾಯಂಕಾಲದಲ್ಲಿಯೂ ಸಂಧ್ಯಾವಂದನೆಗೆ ಮುಖ್ಯಕಾಲವೆಂದು ಈ ಶ್ರುತಿಯಿಂದ ಸ್ಪಷ್ಟವಾಗುತ್ತದೆ.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

### ಮುಖ್ಯಕಾಲದಲ್ಲಿ ಸಂಧ್ಯಾವಂದನವನ್ನು ಮಾಡದಿದ್ದರೆ ಪ್ರಾಯಶ್ಚಿತ್ತ

ಪ್ರಾತಃಸಂಧ್ಯಾಂ ಸನಕ್ಷತ್ರಾಂ ನೋಪಾಸ್ತೇ ಯಃ ಪ್ರಮಾದತಃ |
ಗಾಯತ್ರ್ಯಷ್ಟಶತಂ ತಸ್ಯ ಪ್ರಾಯಶ್ಚಿತ್ತಂ ವಿಶುದ್ಧಯೇ || (ಕರ್ಮಪ್ರದೀಪ)

"ಪ್ರಾತಃಕಾಲದಲ್ಲಿ ನಕ್ಷತ್ರಗಳಿರುವಾಗ ಅಜಾಗ್ರತೆಯಿಂದ ಸಂಧ್ಯಾವಂದನವನ್ನು ಮಾಡದವನು ಅಶುದ್ಧನಾಗುವನು. ಆ ಅಶುದ್ಧಿಯ ಪರಿಹಾರಕ್ಕಾಗಿ ಪ್ರಾಯಶ್ಚಿತ್ತರೂಪವಾಗಿ ನೂರೆಂಟು ಸಲ ಗಾಯತ್ರೀಮಂತ್ರವನ್ನು ಜಪಿಸಬೇಕು."

ಆದಿತ್ಯಾದ್ಯುದಯಾದ್ಯಸ್ಯ ಸಂಧ್ಯೋಪಾಸ್ತಿಮಕುರ್ವತಃ |
ಸ್ನಾತ್ವಾ ಪ್ರಾಣಾಂಸ್ತ್ರಿರಾಚಮ್ಯ ಗಾಯತ್ರ್ಯಷ್ಟಶತಂ ಜಪೇತ್ || (ಸ್ಮೃತಿಕಿರಣಾವಲೀ)

"ಪ್ರಾತಃಕಾಲದಲ್ಲಿ ಸೂರ್ಯೋದಯಕ್ಕಿಂತಲೂ ಸಾಯಂಕಾಲದಲ್ಲಿ ಸೂರ್ಯಾಸ್ತಮನಕ್ಕಿಂತಲೂ ಪೂರ್ವದಲ್ಲಿ

ಸಂಧ್ಯಾವಂದನವನ್ನು ಮಾಡದವನು ಸ್ನಾನವನ್ನು ಮಾಡಿ ಮೂರು ಸಲ ಆಚಮನವನ್ನೂ ಪ್ರಾಣಾಯಾಮವನ್ನೂ ಮಾಡಿ ನೂರ ಎಂಟು ಸಲ ಗಾಯತ್ರೀ ಜಪವನ್ನು ಮಾಡಬೇಕು."

ಸಾದಿತ್ಯಾಂ ಪಶ್ಚಿಮಾಂ ಸಂಧ್ಯಾಂ ನೋಪಾಸ್ತೇ ಯಃ ಪ್ರಮಾದತಃ |
ಗಾಯತ್ರ್ಯಷ್ಟಶತಂ ತಸ್ಯ ಪ್ರಾಯಶ್ಚಿತ್ತಂ ವಿಶುದ್ಧಯೇ ||

"ಸಾಯಂಕಾಲದಲ್ಲಿ ಸೂರ್ಯನಿರುವಾಗ ಅಜಾಗ್ರತೆಯಿಂದ ಸಂಧ್ಯಾವಂದನವನ್ನು ಮಾಡದವನು ತನ್ನ ದೇಹದ ಶುದ್ಧಿಗಾಗಿ ನೂರ ಎಂಟು ಸಲ ಗಾಯತ್ರಿಯನ್ನು ಜಪಿಸಬೇಕು."

ಅರ್ಘ್ಯಪ್ರದಾನತಃ ಪೂರ್ವಮುದಯೋಽಸ್ತಮಯೋಽಪಿ ವಾ |
ಗಾಯತ್ರ್ಯಷ್ಟಶತಂ ಜಪ್ಯಂ ಪ್ರಾಯಶ್ಚಿತ್ತಂ ದ್ವಿಜನ್ಮಭಿಃ ||

"ಬ್ರಾಹ್ಮಣನು ಅರ್ಘ್ಯವನ್ನು ಕೊಡುವುದಕ್ಕಿಂತ ಪೂರ್ವದಲ್ಲಿ ಸೂರ್ಯೋದಯ ಅಥವಾ ಸೂರ್ಯಾಸ್ತಮನವು ಏರ್ಪಟ್ಟರೆ ಪ್ರಾಯಶ್ಚಿತ್ತರೂಪವಾಗಿ ನೂರ ಎಂಟು ಸಲ ಗಾಯತ್ರೀಮಂತ್ರವನ್ನು ಜಪಿಸಬೇಕು."

**ಅಶಕ್ತಿ ರಾಷ್ಟ್ರಕ್ಷೋಭ ಮುಂತಾದ ಸಮಯದಲ್ಲಿ ಗೌಣಕಾಲ**

ಉತ್ತಮಾ ತಾರಕೋಪೇತಾ ಮಧ್ಯಮಾ ಲುಪ್ತತಾರಕಾ |
ಅಧಮಾ ಸೂರ್ಯಸಹಿತಾ ಪ್ರಾತಃಸಂಧ್ಯಾ ತ್ರಿಧಾ ಮತಾ ||
ಉತ್ತಮಾ ಸೂರ್ಯಸಹಿತಾ ಮಧ್ಯಮಾ ಲುಪ್ತತಾರಕಾ |
ಅಧಮಾ ತಾರಕೋಪೇತಾ ಸಾಯಂಸಂಧ್ಯಾ ತ್ರಿಧಾ ಮತಾ || (ಧರ್ಮಸಾರಸುಧಾನಿಧಿವಚನ)

"ಪ್ರಾತಃಸಂಧ್ಯಾವಂದನಕ್ಕೆ ನಕ್ಷತ್ರಸಹಿತವಾದ ಕಾಲವು ಉತ್ತಮ. ನಕ್ಷತ್ರಗಳು ಮರೆಯಾದ ಮೇಲೆ ಸೂರ್ಯೋದಯವಾಗುವವರೆಗಿನ ಕಾಲವು ಮಧ್ಯಮ. ಸೂರ್ಯಸಹಿತವಾದ ಕಾಲವು ಅಧಮ. ಹೀಗೆ ಮೂರು ಕಾಲಗಳು ವಿಹಿತವಾಗಿವೆ. ಸಾಯಂಕಾಲಿಕ ಸಂಧ್ಯಾವಂದನಕ್ಕೆ ಸೂರ್ಯಸಹಿತವಾದ ಕಾಲವು ಉತ್ತಮ. ಸೂರ್ಯಾಸ್ತಮನಾನಂತರದಲ್ಲಿ ನಕ್ಷತ್ರೋದಯಕ್ಕಿಂತ ಪೂರ್ವಕಾಲವು ಮಧ್ಯಮ. ನಕ್ಷತ್ರಸಹಿತವಾದ ಕಾಲವು ಅಧಮ. ಹೀಗೆ ಮೂರು ಕಾಲಗಳು ವಿಹಿತವಾಗಿವೆ."

ನ ಪ್ರಾತರ್ನ ಪ್ರದೋಷಾಚ್ಚ ಸಂಧ್ಯಾಕಾಲೋಽತಿವರ್ತತೇ |
ಮುಖ್ಯಕಲ್ಪೋಽನುಕಲ್ಪಶ್ಚ ಸರ್ವಸ್ಮಿನ್ ಕರ್ಮಣಿ ಸ್ಮೃತಃ || (ವೃದ್ಧಮನುವಚನ)

"ಸೂರ್ಯೋದಯಾನಂತರದಲ್ಲಿ ಆರು ಗಳಿಗೆಗಳವರೆಗಿನ ಕಾಲವು ಪ್ರಾತಃಕಾಲವೆಂದೂ, ಸೂರ್ಯಾಸ್ತಮಯಾನಂತರದಲ್ಲಿ ಆರು ಗಳಿಗೆಗಳವರೆಗಿನ ಕಾಲವು ಪ್ರದೋಷಕಾಲವೆಂದೂ ಹೇಳಲ್ಪಡುತ್ತದೆ. ಪ್ರಾತಃಕಾಲ ಮತ್ತು ಪ್ರದೋಷಕಾಲಗಳು ಮುಗಿಯುವವರೆಗೆ ಸಂಧ್ಯಾವಂದನದ ಕಾಲವಿರುತ್ತದೆ. ಹೀಗೆ ಒಂದೊಂದು ಕರ್ಮಗಳಲ್ಲಿಯೂ ಮುಖ್ಯಕಾಲದಲ್ಲಿ ಆ ಕಾರ್ಯಗಳನ್ನು ಮಾಡಲು ಸಾಧ್ಯವಾಗದಿದ್ದಾಗ ಗೌಣಕಾಲದಲ್ಲಿ ಮಾಡಬೇಕು." (ಇಲ್ಲಿ ಸ್ಮೃತಿಮುಕ್ತಾವಲೀಕಾರರು ಸೂರ್ಯೋದಯಾನಂತರದಲ್ಲಿಯೂ, ಸೂರ್ಯಾಸ್ತಮಯಾನಂತರದಲ್ಲಿಯೂ ಮೂರು ಗಳಿಗೆಗಳವರೆಗಿನ ಕಾಲವು ಗೌಣಕಾಲವೆಂದು ತೀರ್ಮಾನಿಸಿರುವರು.)

ಪ್ರಾಣಾಯಾಮತ್ರಯಂ ಕೃತ್ವಾ ಕಾಲಾತೀತೋ ಯದಾ ಭವೇತ್ |
ಚತುರರ್ಘ್ಯಂ ತು ಗಾಯತ್ರ್ಯಾ ಶಿರೋವ್ಯಾಹೃತಿಸಂಪುಟಮ್ ||
ಗೋಶೃಂಗಮಾತ್ರಮುದ್ಧೃತ್ಯ ರವಿಂ ವೀಕ್ಷ್ಯ ಜಲಾಂಜಲಿಮ್ || (ದಕ್ಷವಚನ)

"ಮೇಲೆ ಹೇಳಿದ ಮುಖ್ಯಕಾಲದಲ್ಲಿ ಸಂಧ್ಯಾವಂದನವನ್ನು ಮಾಡಲು ಶಕ್ತನಾಗದವನು ಮೂರು ಸಲ ಪ್ರಾಣಾಯಾಮವನ್ನು ಮಾಡಬೇಕು. "ಓಂ ಭೂರ್ಭುವಃ ಸ್ವಃ" ಎಂಬ ವ್ಯಾಹೃತಿಮಂತ್ರ ಮತ್ತು "ಓಮಾಪೋ ಜ್ಯೋತೀ ರಸೋಽಮೃತಂ ಬ್ರಹ್ಮ ಭೂರ್ಭುವಃ ಸುವರೋಮ್" ಎಂಬ ಶಿರೋಮಂತ್ರ ಇವುಗಳ ಮಧ್ಯದಲ್ಲಿ ಗಾಯತ್ರೀಮಂತ್ರವನ್ನು ಉಚ್ಚರಿಸುತ್ತಾ ನಾಲ್ಕನೆಯ ಅರ್ಘ್ಯವನ್ನು ಕೊಡಬೇಕು. ಈ ಅರ್ಘ್ಯಗಳನ್ನು ಗೋವಿನ ಕೊಂಬಿನಷ್ಟು ಎತ್ತರದವರೆಗೆ ಬೊಗಸೆಯನ್ನು ಎತ್ತಿ ಸೂರ್ಯನನ್ನು ನೋಡುತ್ತಾ ಕೊಡಬೇಕು."

ಪ್ರಾತಃಸಂಧ್ಯಾಮುಪಾಸೀತ ಯಾವತ್ ಪ್ರಾತರ್ನ ಲಂಘಿತಃ |
ಪ್ರಾಯಶ್ಚಿತ್ತಂ ತದೂರ್ಧ್ವಂ ಸ್ಯಾಚ್ಚತುರರ್ಘ್ಯಂ ಚ ಪಂಚಮಮ್ ||
ಪ್ರಾಣಾಯಾಮತ್ರಯಂ ಪ್ರಾತರ್ದ್ವಿಗುಣಂ ಸಂಗವೇ ಸ್ಮೃತಮ್ |
ಮಧ್ಯಾಹ್ನೇ ತ್ರಿಗುಣಂ ಪ್ರೋಕ್ತಮಪರಾಹ್ಣೇ ತು ಷಡ್ಗುಣಮ್ ||
ಸಾಯಾಹ್ನೇ ದ್ವಾದಶಗುಣಂ ಸೂರ್ಯಹತ್ಯಾಂ ತತೋ ವ್ರಜೇತ್ |
ಸಾಯಂಸಂಧ್ಯಾತಿಕ್ರಮೇಽಪಿ ಪ್ರಾಯಶ್ಚಿತ್ತಂ ತಥಾ ನಿಶಿ ||
ಕಾಲಾತಿಕ್ರಮಣೇ ಸ್ವಲ್ಪೇ ತ್ರಿಸಂಧ್ಯಾಮಪಿ ಕರ್ಹಿಚಿತ್ |
ಚತುರರ್ಘ್ಯಂ ಪ್ರಕುರ್ವೀತ ಶಿರೋವ್ಯಾಹೃತಿಪೂರ್ವಕಮ್ || (ವರಾಹಪುರಾಣ)

"ಪ್ರಾತಃಕಾಲವು ಮುಗಿಯುವುದರೊಳಗೆ ಪ್ರಾತಃಕಾಲಿಕ ಸಂಧ್ಯಾವಂದನವನ್ನು ಮಾಡಿ ಮುಗಿಸಬೇಕು. ಪ್ರಾತಃಕಾಲದ ಅನಂತರದಲ್ಲಿ ಮಾಡಿದರೆ ವಿಶೇಷ ಪ್ರಾಯಶ್ಚಿತ್ತವನ್ನು ಮಾಡಬೇಕು. ಪ್ರಾತಃಕಾಲದಲ್ಲಿಯೂ, ಅನಂತರದಲ್ಲಿಯೂ ಮಾಡಿದರೆ ನಾಲ್ಕು ಅರ್ಘ್ಯಗಳನ್ನು ಕೊಡಬೇಕು. ಪ್ರಾತಃಕಾಲದಲ್ಲಿ ಮಾಡಿದರೆ ಮೂರು ಪ್ರಾಣಾಯಾಮಗಳನ್ನೂ, ಸಂಗವ ಕಾಲದಲ್ಲಿ ಮಾಡಿದರೆ ಆರು ಪ್ರಾಣಾಯಾಮಗಳನ್ನೂ, ಮಧ್ಯಾಹ್ನಕಾಲದಲ್ಲಿ ಮಾಡಿದರೆ ಒಂಭತ್ತು ಪ್ರಾಣಾಯಾಮಗಳನ್ನೂ, ಅಪರಾಹ್ಣಕಾಲದಲ್ಲಿ ಮಾಡಿದರೆ ಹದಿನೆಂಟು ಪ್ರಾಣಾಯಾಮಗಳನ್ನೂ, ಸಾಯಂಕಾಲದಲ್ಲಿ ಮಾಡಿದರೆ ಮೂವತ್ತಾರು ಪ್ರಾಣಾಯಾಮಗಳನ್ನೂ, ಹಿಂದೆ ಹೇಳಿದ ನಾಲ್ಕನೆಯ ಅರ್ಘ್ಯದೊಡನೆ ಪ್ರಾಯಶ್ಚಿತ್ತರೂಪವಾಗಿ ಮಾಡಬೇಕು. ಸಾಯಂಕಾಲವು ದಾಟದರೆ ಪ್ರಾತಃಕಾಲಿಕ ಸಂಧ್ಯಾವಂದನವನ್ನು ಮಾಡುವ ಅಧಿಕಾರವಿಲ್ಲ. ಸೂರ್ಯದೇವನನ್ನು ಸಂಹರಿಸಿದ ದೋಷವು ಬರುತ್ತದೆ."

"ಇದೇ ರೀತಿಯಿಂದ ರಾತ್ರಿಯಲ್ಲಿಯೂ ಕಾಲವು ದಾಟದರೆ ನಾಲ್ಕನೆಯ ಅರ್ಘ್ಯವನ್ನೂ ಹಿಂದೆ ಹೇಳಿದ ಕ್ರಮದಿಂದ ಪ್ರಾಣಾಯಾಮಗಳನ್ನೂ ಮಾಡಬೇಕು. ಮೂರು ಸಂಧ್ಯಾವಂದನಗಳನ್ನು ಮಾಡುವಾಗ ಆ ಸಂಧ್ಯಾವಂದನಗಳನ್ನು ಮಾಡುವ ಕಾಲವು ಸ್ವಲ್ಪ ದಾಟದರೆ ನಾಲ್ಕನೆಯ ಅರ್ಘ್ಯವನ್ನು ಕೊಟ್ಟರೆ ಸಾಕು. ಆ ಅರ್ಘ್ಯವನ್ನು ಕೊಡುವಾಗ ಹಿಂದೆ ಹೇಳಿದಂತೆ ವ್ಯಾಹೃತಿಮಂತ್ರವನ್ನು ಆರಂಭದಲ್ಲಿಯೂ, ಶಿರೋಮಂತ್ರವನ್ನು ಕೊನೆಯಲ್ಲಿಯೂ, ಉಚ್ಚರಿಸುತ್ತಾ ಗಾಯತ್ರೀಮಂತ್ರದಿಂದ ಕೊಡಬೇಕು."

### ಶಕ್ತನೂ ಅಶಕ್ತನೂ ಸರ್ವಥಾ ಸಂಧ್ಯಾವಂದನವನ್ನು ಮಾಡದಿದ್ದರೆ ಪ್ರಾಯಶ್ಚಿತ್ತ

ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಃ ಸರ್ವಕರ್ಮಸು |
ಯತ್ಕಿಂಚಿತ್ಕುರುತೇ ಕರ್ಮ ನ ತಸ್ಯ ಫಲಮಶ್ನುತೇ || (ದಕ್ಷವಚನ)

"ಸಂಧ್ಯಾವಂದನವನ್ನು ಮಾಡದವನು ಯಾವಾಗಲೂ ಮೈಲಿಗೆಯಾಗಿರುವನು. ಯಾವ ಕಾರ್ಯವನ್ನು ಮಾಡಲೂ ಅರ್ಹನಲ್ಲ. ಅವನು ಯಾವ ಕಾರ್ಯವನ್ನು ಮಾಡಿದರೂ ಆ ಕರ್ಮದ ಫಲವನ್ನು ಪಡೆಯಲಾರನು."

ಸಂಧ್ಯಾ ಯೇನ ನ ವಿಜ್ಞಾತಾ ಸಂಧ್ಯಾ ನೈವ ಹ್ಯುಪಾಶ್ರಿತಾ |
ಜೀವಮಾನೋ ಭವೇಚ್ಛೂದ್ರೋ ಮೃತಃ ಶ್ವಾಪಿ ಚ ಜಾಯತೇ || (ಗೋಭಿಲರ ವಚನ)

"ಸಂಧ್ಯಾಕಾಲ ಮತ್ತು ಸಂಧ್ಯಾವಂದನವನ್ನು ಮಾಡುವ ಕ್ರಮ ಇವೆರಡನ್ನು ತಿಳಿಯದವನೂ, ಸಂಧ್ಯಾವಂದನವನ್ನು ಮಾಡದವನೂ, ಬದುಕಿರುವವರೆಗೆ ಶೂದ್ರನೆನಿಸುವನು. ಸತ್ತ ಮೇಲೆ ನಾಯಿಯಾಗಿ ಹುಟ್ಟುವನು."

ಯೋಽನ್ಯತ್ರ ಕುರುತೇ ಯತ್ನಂ ಧರ್ಮೇ ಕಾರ್ಯೇ ದ್ವಿಜೋತ್ತಮಃ |
ವಿಹಾಯ ಸಂಧ್ಯಾಪ್ರಣತಿಂ ಸ ಯಾತಿ ನರಕಾಯುತಮ್ || (ಕೂರ್ಮಪುರಾಣ)

"ಉತ್ತಮವಾದ ಬ್ರಾಹ್ಮಣಕುಲದಲ್ಲಿ ಹುಟ್ಟಿರಬಹುದು. ಬ್ರಾಹ್ಮಣಶ್ರೇಷ್ಠನೆಂದು ಹೊಗಳಲ್ಪಡುತ್ತಿರಬಹುದು. ಎಲ್ಲಾ ಧರ್ಮಕಾರ್ಯಗಳನ್ನೂ ಬಿಡದಂತೆ ಅನುಷ್ಠಾನ ಮಾಡುತ್ತಿರಬಹುದು. ಆದರೆ ಸಂಧ್ಯಾವಂದನವನ್ನು ಮಾಡದಿದ್ದರೆ ಅಸಂಖ್ಯ ನರಕಗಳನ್ನು ಪಡೆಯುವನು."

### ಒಂದು ಹೊತ್ತು ಸಂಧ್ಯಾವಂದನವನ್ನು ಮಾಡದಿದ್ದರೆ ಪ್ರಾಯಶ್ಚಿತ್ತ

ಪ್ರಮಾದಾದೇಕಕಾಲೇ ತು ಸಂಧ್ಯಾಲೋಪೋ ಭವೇದ್ಯದಿ |
ಅಷ್ಟೋತ್ತರಸಹಸ್ರಂ ತು ದೇವೀಂ ಜಪ್ತ್ವಾ ತು ಶುದ್ಧ್ಯತಿ || (ಸ್ಮೃತಿಸಂಗ್ರಹವಚನ)

"ಯಾವುದಾದರೂ ಒಂದು ದಿನದಲ್ಲಿ ಬೆಳಿಗ್ಗೆ, ಮಧ್ಯಾಹ್ನ ಅಥವಾ ಸಾಯಂಕಾಲದಲ್ಲಿ ಒಂದು ಹೊತ್ತು ಸಂಧ್ಯಾವಂದನ ಮಾಡುವುದನ್ನು ಮರೆತರೆ ಅದಕ್ಕೆ ಪ್ರಾಯಶ್ಚಿತ್ತವಾಗಿ ಒಂದು ಸಾವಿರ ಸಲ ಗಾಯತ್ರೀಮಂತ್ರವನ್ನು ಜಪಿಸಬೇಕು. ಇದರಿಂದ ಶುದ್ಧನಾಗುವನು. ಇಲ್ಲದಿದ್ದರೆ ಅವನು ಯಾವಾಗಲೂ ಮೈಲಿಗೆಯಾಗಿರುವನು. ಬುದ್ಧಿಪೂರ್ವಕವಾಗಿ ಸಂಧ್ಯಾವಂದನವನ್ನು ಮಾಡದವನು ಯಾವ ಕಾರಣದಿಂದಲೂ ಶುದ್ಧನಾಗುವುದಿಲ್ಲ."

### ಸಂಧ್ಯಾಕಾಲದಲ್ಲಿ ಸಂಧ್ಯಾವಂದನವನ್ನು ಮಾಡಿದರೆ ವಿಶೇಷಫಲ

ಸಂಧ್ಯಾಮುಪಾಸತೇ ಯೇ ತು ಸತತಂ ಶಂಸಿತವ್ರತಾಃ |
ವಿಧೂತಸರ್ವಪಾಪಾಸ್ತೇ ಯಾಂತಿ ಬ್ರಹ್ಮ ಸನಾತನಮ್ || (ವಿಷ್ಣುಧರ್ಮೋತ್ತರವಚನ)

"ಎಲ್ಲಾ ದಿನಗಳಲ್ಲಿಯೂ ತ್ರಿಕಾಲದಲ್ಲಿ ತಪ್ಪದೆ ಸಂಧ್ಯಾವಂದನವನ್ನು ಮಾಡುತ್ತಿರುವವರು ಉತ್ತಮವಾದ ಎಲ್ಲಾ ವ್ರತಗಳನ್ನೂ ಮಾಡಿದವರಿಗೆ ಸಮಾನರಾಗುವರು. ಅವರ ಎಲ್ಲಾ ಪಾಪಗಳೂ ದೂರವಾಗುತ್ತವೆ. ಸಕಲಗುಣಪೂರ್ಣನಾದ ಶ್ರೀಹರಿಯ ಸನ್ನಿಧಿಯನ್ನು ಪಡೆಯುವರು."

### ಕಾಲವನ್ನು ದಾಟಿ ಮಾಡುವ ಸಂಧ್ಯಾವಂದನವು ನಿಷ್ಫಲ

ಅಕಾಲೇ ಚೇತ್ಕೃತಂ ಕರ್ಮ ಕಾಲಂ ಪ್ರಾಪ್ಯ ಪುನಃ ಕ್ರಿಯಾ |
ಕಾಲಾತೀತಂ ತು ಯತ್ಕುರ್ಯಾತ್ಕೃತಂ ತದ್ವಿಫಲಂ ಭವೇತ್ || (ಪುಲಸ್ತ್ಯರ ವಚನ)

"ವಿಹಿತವಾದ ಕಾಲವನ್ನು ಬಿಟ್ಟು ಇತರ ಕಾಲದಲ್ಲಿ ಯಾವ ಕಾರ್ಯವನ್ನು ಮಾಡಿದರೂ, ಆ ಕರ್ಮದಿಂದ ಫಲವು ಬರುವುದಿಲ್ಲ. ಪುನಃ ವಿಹಿತಕಾಲವು ಬಂದಾಗ ಆ ಕರ್ಮವನ್ನು ಮಾಡಿದರೆ ಫಲವು ಬರುತ್ತದೆ. ಸಂಧ್ಯಾವಂದನಕ್ಕೆ ಒಂದೊಂದು ದಿನದಲ್ಲಿಯೂ ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲ ಎಂಬ ಮೂರು ಕಾಲಗಳು ವಿಹಿತವಾಗಿವೆ. ಈ ವಿಹಿತಕಾಲಗಳಲ್ಲಿ ಮಾಡದಿದ್ದರೆ ಅಂದಿನ ಕಾಲಗಳು ಮುಂದೆ ಬರಲಾರವು. ಆದ್ದರಿಂದ ಸಂಧ್ಯಾವಂದನವನ್ನು ಒಂದು ಹೊತ್ತಿನಲ್ಲಿ ಮಾಡದಿದ್ದರೂ ಆ ಹೊತ್ತಿನ ಸಂಧ್ಯಾವಂದನದ ಕಾಲವು ಕಾಲಾಂತರದಲ್ಲಿ ಬಾರದಿರುವುದರಿಂದ ಆ ಹೊತ್ತಿನ ಸಂಧ್ಯಾವಂದನವನ್ನು ವಿಹಿತವಾದ ಕಾಲಾಂತರದಲ್ಲಿ ಮಾಡುವುದಕ್ಕೆ ಅವಕಾಶವೇ ಇಲ್ಲ. ಆದ್ದರಿಂದ ವಿಹಿತವಾದ ಕಾಲದಲ್ಲಿ ಮಾಡದೆ, ಬೇರೆ ಕಾಲದಲ್ಲಿ ಮಾಡಿದರೆ ಆ ಸಂಧ್ಯಾವಂದನವು ನಿಷ್ಫಲವೇ ಆಗುತ್ತದೆ. ಆದ್ದರಿಂದ ವಿಹಿತಕಾಲದಲ್ಲಿ ಸಂಧ್ಯಾವಂದನವನ್ನು ಮಾಡಲೇಬೇಕು. "

ವಿಧಿನಾಽಪಿ ಕೃತಾ ಸಂಧ್ಯಾ ಕಾಲಾತೀತಾ ವೃಥಾ ಭವೇತ್ |
ಅಯಮೇವ ಹಿ ದೃಷ್ಟಾಂತೋ ವಂಧ್ಯಾಸ್ತ್ರೀಮೈಥುನೇ ಯಥಾ ||

"ಸಂಧ್ಯಾವಂದನವನ್ನು ಶಾಸ್ತ್ರೋಕ್ತವಿಧಿಯಿಂದ ಮಾಡಿದರೂ, ಸಂಧ್ಯಾಕಾಲವನ್ನು ದಾಟಿ ಮಾಡಿದರೆ ಆ ಸಂಧ್ಯಾವಂದನವು ವ್ಯರ್ಥವಾಗುತ್ತದೆ. ಮಕ್ಕಳು ಹುಟ್ಟುವ ಅರ್ಹತೆಯಿಲ್ಲದವಳು ವಂಧ್ಯಾ ಅಂದರೆ ಬಂಜೆಯೆನಿಸುವಳು. ಅವಳ ಸಂಭೋಗದಿಂದ ಮಕ್ಕಳು ಹುಟ್ಟುವುದಿಲ್ಲ. ಅದರಂತೆ ಅಕಾಲದಲ್ಲಿ ಮಾಡಿದ ಸಂಧ್ಯಾವಂದನವೆಂದು ತಿಳಿಯಬೇಕು." (ಮುಖ್ಯಕಾಲದಲ್ಲಿಯೇ ಸಂಧ್ಯಾವಂದನವನ್ನು ಮಾಡಬೇಕು. ಮುಖ್ಯಕಾಲದಲ್ಲಿ ಮಾಡಲು ಸಾಧ್ಯವಾಗದಿದ್ದರೆ ಗೌಣಕಾಲದಲ್ಲಿಯಾದರೂ ಮಾಡಬೇಕು. ಗೌಣಕಾಲದಲ್ಲಿಯೂ ಮಾಡದಿದ್ದರೆ ಆ ಸಂಧ್ಯಾವಂದನವು ನಿಷ್ಫಲವೆಂದು ಈ ವಚನವು ತಿಳಿಸುತ್ತದೆ.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

### ಸಂಧ್ಯಾವಂದನವನ್ನು ಮಾಡುವ ದೇಶ ಮುಂತಾದವುಗಳು

ಅನೃತಂ ಮದ್ಯಗಂಧಂ ಚ ದಿವಾಮೈಥುನಮೇವ ಚ |
ಪುನಾತಿ ವೃಷಲಸ್ಯಾನ್ನಂ ಬಹಿಃಸಂಧ್ಯಾ ಹ್ಯುಪಾಸಿತಾ || (ಶಾತಾತಪರ ವಚನ)

"ಸಂಧ್ಯಾವಂದನವನ್ನು ಮನೆಯಲ್ಲಿ ಮಾಡಬಾರದು. ನದೀತೀರ ಮುಂತಾದ ಹೊರಗಿನ ಪ್ರದೇಶದಲ್ಲಿಯೇ ಮಾಡಬೇಕು. ಸುಳ್ಳು ಮಾತುಗಳನ್ನು ಹೇಳುವುದು, ಮದ್ಯ ಮುಂತಾದ ಅಶುದ್ಧ ಪದಾರ್ಥಗಳ ದುರ್ವಾಸನೆಯನ್ನು ಸೇವಿಸುವುದು, ಹಗಲಿನಲ್ಲಿ ಸ್ತ್ರೀಸಂಗವನ್ನು ಮಾಡುವುದು, ಶೂದ್ರನ ಅನ್ನವನ್ನು ತಿನ್ನುವುದು ಮುಂತಾದವುಗಳಿಂದ ಬಂದಿರುವ ದೋಷಗಳು ಹೊರಗೆ ಸಂಧ್ಯಾವಂದನವನ್ನು ಮಾಡಿದ್ದರಿಂದ ದೂರವಾಗುತ್ತವೆ.

### ಅಗ್ನಿಹೋತ್ರಿಗಳಿಗೆ ವಿಶೇಷ

ಸಂಧ್ಯಾತ್ರಯಂ ತು ಕರ್ತವ್ಯಂ ದ್ವಿಜೇನಾತ್ಮವಿದಾ ಸದಾ |
ಉಭೇ ಸಂಧ್ಯೇ ತು ಕರ್ತವ್ಯೇ ಬ್ರಾಹ್ಮಣೈಶ್ಚ ಗೃಹೇಷ್ವಪಿ || (ಅತ್ರಿವಚನ)

"ಬ್ರಾಹ್ಮಣನು ಬ್ರಹ್ಮಜ್ಞಾನಿಯಾಗಿದ್ದರೂ, ಬೆಳಿಗ್ಗೆ ಮಧ್ಯಾಹ್ನಕಾಲ ಮತ್ತು ಸಾಯಂಕಾಲ ಎಂಬ ಮೂರು ಕಾಲಗಳಲ್ಲಿಯೂ ಸಂಧ್ಯಾವಂದನವನ್ನು ಮಾಡಲೇಬೇಕು. ಬೆಳಿಗ್ಗೆ ಮತ್ತು ಸಾಯಂಕಾಲಗಳಲ್ಲಿ ಮನೆಯಲ್ಲಿಯೂ ಮಾಡಬಹುದು."

### ಸೂತಕದಲ್ಲಿ ಸಂಧ್ಯಾವಂದನ

ಸೂತಕೇ ಮೃತಕೇ ಚೈವ ಸಂಧ್ಯಾಕರ್ಮ ವಿಧೀಯತೇ |
ಮನಸೋಚ್ಚಾರಯೇನ್ಮಂತ್ರಾನ್ ಪ್ರಾಣಾಯಾಮಮೃತೇ ದ್ವಿಜಃ ||

"ಜನ್ಮಾಶೌಚ ಮತ್ತು ಮೃತಾಶೌಚಕಾಲಗಳಲ್ಲಿಯೂ ಸಂಧ್ಯಾವಂದನವನ್ನು ಮಾಡಲೇಬೇಕು. ಆದರೆ ಸಂಧ್ಯಾವಂದನಮಂತ್ರಗಳನ್ನು ಬಾಯಿಯಿಂದ ಉಚ್ಚರಿಸಬಾರದು. ಮನಸ್ಸಿನಿಂದಲೇ ಹೇಳಬೇಕು. ಅದರಲ್ಲಿಯೂ ಪ್ರಾಣಾಯಾಮ ಮಂತ್ರಗಳನ್ನು ಮನಸ್ಸಿನಿಂದಲೂ ಹೇಳಬಾರದು. ಮಂತ್ರವಿಲ್ಲದೆ ಶ್ರೀಹರಿಯನ್ನು ಸ್ಮರಿಸುತ್ತಾ ಪ್ರಾಣಾಯಾಮವನ್ನು ಮಾಡಬೇಕು."

### ಪ್ರಬಲಬಾಧಕ ದೇಶಕ್ಷೋಭ ಯುದ್ಧ ಮತ್ತು ಮೃತಾಶೌಚಗಳಲ್ಲಿ ಸಂಧ್ಯಾಲೋಪವು ದೋಷಕರವಲ್ಲ

ರಾಷ್ಟ್ರಕ್ಷೋಭೇ ನೃಪಕ್ಷೋಭೇ ಸಂಗ್ರಾಮೇ ಶಾವಸೂತಕೇ |
ಸಂಧ್ಯಾವಂದನವಿಚ್ಛಿತ್ತಿರ್ನ ದೋಷಾಯ ಕದಾಚನ || (ಸ್ಮೃತಿವಚನ)

"(1) ದೇಶದಲ್ಲಿ ದುರ್ಭಿಕ್ಷ, ಮಹಾರೋಗ ಮುಂತಾದ ಕ್ಷೋಭವು ಏರ್ಪಡುವುದು (2) ರಾಜನಿಗೆ ಆಪತ್ತು (3) ಯುದ್ಧ (4) ಮೃತಾಶೌಚ ಈ ನಾಲ್ಕು ಸಂದರ್ಭಗಳಲ್ಲಿ ಯಾವ ಕಾರಣದಿಂದಲೂ ಸಂಧ್ಯಾವಂದನಲೋಪವು ದೋಷಕರವಲ್ಲ."

### ಅದರಲ್ಲಿಯೂ ವಿಶೇಷ

ದಿವೋದಿತಾನಿ ಕರ್ಮಾಣಿ ಪ್ರಮಾದಾದಕೃತಾನಿ ವೈ |
ಶರ್ವರ್ಯಾಃ ಪ್ರಥಮೇ ಯಾಮೇ ತಾನಿ ಕುರ್ಯಾದತಂದ್ರಿತಃ ||

"ಹಗಲಿನಲ್ಲಿ ವಿಹಿತವಾದ ಕರ್ಮಗಳನ್ನು ಅಜಾಗ್ರತೆಯಿಂದ ಹಗಲಿನಲ್ಲಿ ಮಾಡದಿದ್ದರೆ ರಾತ್ರಿಯಲ್ಲಿ ಮೊದಲನೆಯ ಜಾಮದಲ್ಲಿ ಮಾಡಬೇಕು. ಆಲಸ್ಯದಿಂದ ಮಾಡದಿರಬಾರದು." (ಪ್ರಬಲ ಬಾಧಕವೇನೂ ಇಲ್ಲದಿದ್ದರೆ ಸಂಧ್ಯಾವಂದನವನ್ನು ರಾತ್ರಿಯಲ್ಲಾದರೂ ಮಾಡಲೇಬೇಕು ಎಂದು ಈ ವಾಕ್ಯವು ತಿಳಿಸುತ್ತದೆ.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

ಯಃ ಸಂಧ್ಯಾಕಾಲತಃ ಪ್ರಾಪ್ತಾಮಾಲಸ್ಯಾದತಿವರ್ತತೇ |
ಸ ಜೀವನ್ನೇವ ಚಂಡಾಲಃ ಸರ್ವಕರ್ಮಬಹಿಷ್ಕೃತಃ ||

"ಯಾರು ಸಂಧ್ಯಾವಂದನವನ್ನು ಆಲಸ್ಯದಿಂದ ಸಕಾಲದಲ್ಲಿ ಮಾಡುವುದಿಲ್ಲವೋ ಅವನು ಈ ಜನ್ಮದಲ್ಲಿಯೇ ಚಂಡಾಲನೆನಿಸುವನು. ಎಲ್ಲಾ ಕರ್ಮಗಳಿಗೂ ಅವನು ಅನರ್ಹನು."

### ಶ್ರೀಹರಿಸೇವೆಯನ್ನು ಮಾಡುವ ಕಾಲದಲ್ಲಿ ಸಂಧ್ಯಾಲೋಪವು ದೋಷಕರವಲ್ಲ

ಮತ್ಕರ್ಮ ಕುರ್ವತಾಂ ಪುಂಸಾಂ ಕರ್ಮಲೋಪೋ ನ ವಿದ್ಯತೇ |
ತೇಷಾಂ ಕರ್ಮಾಣಿ ಕುರ್ವಂತಿ ತಿಸ್ರಃ ಕೋಟ್ಯೋ ಮಹರ್ಷಯಃ || 1 ||
ವೃಥಾಕರ್ಮಕರೋ ಯಸ್ತು ನಿತ್ಯಕರ್ಮವಿಲೋಪಕಃ |
ಪ್ರಾಯಶ್ಚಿತ್ತಂ ತು ದ್ವಿಗುಣಂ ತಸ್ಯ ಪುಂಸಃ ಪ್ರಕೀರ್ತಿತಮ್ || 2 || (ವರಾಹಪುರಾಣವಚನ)

"ನನ್ನ ಭಕ್ತರು ನನ್ನ ಪ್ರೀತಿಗಾಗಿ ಭಾಗವತಧರ್ಮಗಳನ್ನು ಯಾವಾಗಲೂ ಅನುಷ್ಠಿಸುತ್ತಿರುವರು. ಅವರಿಗೆ ಪಾಠ ಪ್ರವಚನ ಮುಂತಾದ ಭಾಗವತ ಧರ್ಮಗಳನ್ನು ಅನುಷ್ಠಿಸುತ್ತಿರುವಾಗ ಸಂಧ್ಯಾವಂದನವನ್ನು ಸಕಾಲದಲ್ಲಿ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಇದರಿಂದ ಕರ್ಮಲೋಪವು ಏರ್ಪಡುವ ಸಂಭವವುಂಟು. ಆಗ ಅವರಿಗೆ ಕರ್ಮಲೋಪದೋಷವು ಬರಬಾರದು. ಅದಕ್ಕಾಗಿ ಮೂರು ಕೋಟಿ ಋಷಿಗಳನ್ನು ನಾನು ಏರ್ಪಡಿಸಿದ್ದೇನೆ. ಅವರು ನನ್ನ ಭಕ್ತರಿಗಾಗಿ ಸಂಧ್ಯಾವಂದನ ಮುಂತಾದ ಲುಪ್ತವಾಗುವ ಕರ್ಮಗಳನ್ನು ಮಾಡುತ್ತಿರುವರು. ಭಕ್ತರು ಅವಶ್ಯವಾಗಿ ಮಾಡಬೇಕಾದ ಕಾರ್ಯಗಳನ್ನು ಆ ಮಹರ್ಷಿಗಳು ಮಾಡುತ್ತಿರುವುದರಿಂದ ಆ ಭಕ್ತರಿಗೆ ಕರ್ಮಲೋಪಪ್ರಯುಕ್ತದೋಷವಿಲ್ಲ." || 1 ||

"ಕೆಲವರು ವ್ಯರ್ಥವಾದ ಕೆಲಸಗಳನ್ನೇ ಮಾಡುತ್ತಿರುವರು. ನಿತ್ಯಕರ್ಮಗಳನ್ನು ಮಾಡುತ್ತಿಲ್ಲ. ಅವರು ಶಾಸ್ತ್ರದಲ್ಲಿ ಹೇಳಿರುವ ಪ್ರಾಯಶ್ಚಿತ್ತಗಳನ್ನು ಎರಡರಷ್ಟು ಮಾಡಬೇಕು." (ಈ ಎರಡು ಶ್ಲೋಕಗಳೂ ಶ್ರೀಹರಿಯ ವಚನಗಳು) || 2 ||

ಕರ್ಮಲೋಪೋ ಭವೇದ್ಯಸ್ಯ ತ್ವನ್ಯಾವಶ್ಯಕಕರ್ಮಣಾ |
ಯಥೋಕ್ತಂ ತಸ್ಯ ನಿರ್ದಿಷ್ಟಂ ಪ್ರಾಯಶ್ಚಿತ್ತಂ ಮಹರ್ಷಿಭಿಃ ||

"ಸಂಧ್ಯಾವಂದನವನ್ನು ಬಿಟ್ಟು ಇತರ ಕಾರ್ಯಗಳು ಅವಶ್ಯವಾಗಿ ಮಾಡಬೇಕಾಗಿದ್ದರೆ ಆಗ ಸಂಧ್ಯಾವಂದನವನ್ನು ಬಿಟ್ಟರೂ ಬಿಡಬಹುದು. ಅಂತಹ ಸಂದರ್ಭದಲ್ಲಿ ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತವನ್ನು ಮಾಡಬೇಕೆಂದು ಋಷಿಗಳು ಹೇಳಿದ್ದಾರೆ."

### ಸಂಧ್ಯಾಸ್ವರೂಪ

ಅಹೋರಾತ್ರಸ್ಯ ಯಃ ಸಂಧಿಃ ಸೂರ್ಯನಕ್ಷತ್ರವರ್ಜಿತಃ |
ಸಾ ತು ಸಂಧ್ಯಾ ಸಮಾಖ್ಯಾತಾ ಮುನಿಭಿಸ್ತತ್ತ್ವದರ್ಶಿಭಿಃ || (ದಕ್ಷವಚನ)

"ಸೂರ್ಯನ ಉದಯಕ್ಕಿಂತ ಪೂರ್ವದಲ್ಲಿ ನಕ್ಷತ್ರಗಳೆಲ್ಲವೂ ಮಾಯವಾದ ಕಾಲವು ಪ್ರಾತಸ್ಸಂಧಿಕಾಲವೆಂದೂ ಸೂರ್ಯಾಸ್ತಮನಾನಂತರದಲ್ಲಿ ನಕ್ಷತ್ರೋದಯಕ್ಕಿಂತ ಮುಂಚಿನ ಕಾಲವು ಸಾಯಂಸಂಧಿಕಾಲವೆಂತಲೂ ಹೇಳಲ್ಪಡುತ್ತದೆ. ಈ ಎರಡು ಸಂಧಿಕಾಲಗಳನ್ನೇ ಸಂಧ್ಯೆಯೆಂದು ತತ್ತ್ವಜ್ಞಾನಿಗಳು ಹೇಳುತ್ತಿರುವರು. (ಈ ಶ್ಲೋಕದಲ್ಲಿ ಹೇಳಿರುವ ಸಂಧ್ಯಾ ಎಂಬ ಪದವು ಸಂಧ್ಯಾಕಾಲವನ್ನು ತಿಳಿಸುತ್ತದೆ. ಸಂಧ್ಯಾವಂದನ ಎಂಬ ಪದದಲ್ಲಿರುವ ಸಂಧ್ಯಾ ಎಂಬ ಪದವು ಸಂಧ್ಯಾಕಾಲದಲ್ಲಿ ನಮಸ್ಕರಿಸಲ್ಪಡುವ ಗಾಯತ್ರಿಯನ್ನು ತಿಳಿಸುತ್ತದೆ.) ಈ ಅಂಶವು ಸ್ಮೃತಿಮುಕ್ತಾವಲಿಯಲ್ಲಿ ಸಮರ್ಥಿಸಲ್ಪಟ್ಟಿದೆ.

ಪ್ರಾತಃಕಾಲೇ ತು ಗಾಯತ್ರೀ ಸಾಯಂಕಾಲೇ ಸರಸ್ವತೀ |
ಮಧ್ಯಂದಿನೇ ತು ಸಾವಿತ್ರೀ ಉಪಾಸ್ಯಾ ನಾಮಭೇದತಃ ||

"ಬೆಳಿಗ್ಗೆ ಗಾಯತ್ರಿಯನ್ನೂ, ಸಾಯಂಕಾಲದಲ್ಲಿ ಸರಸ್ವತಿಯನ್ನೂ, ಮಧ್ಯಾಹ್ನಕಾಲದಲ್ಲಿ ಸಾವಿತ್ರಿಯನ್ನೂ, ಉಪಾಸನೆ ಮಾಡಬೇಕು. ಈ ಮೂರು ಹೆಸರುಗಳೂ ಉಪಾಸಿಸಲ್ಪಡುವ ಗಾಯತ್ರೀದೇವತೆಯ ಹೆಸರುಗಳು. ಬೇರೆ ಬೇರೆ ದೇವತೆಗಳ ಹೆಸರುಗಳಲ್ಲ."

ಸವಿತೃದ್ಯೋತನಾಚ್ಚೈವ ಸಾವಿತ್ರೀ ಪರಿಕೀರ್ತಿತಾ |
ಜಗತಃ ಪ್ರಸವಿತ್ರೀ ಸಾ ವಾಗ್ರೂಪತ್ವಾತ್ಸರಸ್ವತೀ || (ವ್ಯಾಸಸ್ಮೃತಿ ವಚನ)

"ಸೂರ್ಯದೇವನಲ್ಲಿ ಸನ್ನಿಹಿತನಾಗಿ ಅವನಲ್ಲಿ ಪ್ರಕಾಶವು ಏರ್ಪಡುವಂತೆ ಮಾಡುತ್ತಿರುವುದರಿಂದ ಗಾಯತ್ರೀ ದೇವತೆಗೆ ಸರಸ್ವತೀ ಎಂದು ಹೆಸರು. ಸಕಲ ಲೋಕಗಳನ್ನೂ ಸೃಷ್ಟಿಸುತ್ತಿರುವುದರಿಂದ ಸಾವಿತ್ರೀ ಎಂದು ಅದೇ ಗಾಯತ್ರೀ ದೇವತೆಗೆ ಹೆಸರು."

(ಈ ಎರಡು ಶ್ಲೋಕಗಳಲ್ಲಿ ಗಾಯತ್ರೀದೇವತೆಗೆ ಮೂರು ಹೆಸರುಗಳೆಂದು ತಿಳಿಸಿದೆ. ಆ ಗಾಯತ್ರೀದೇವತೆಯಲ್ಲಿ ಹೇಳಲ್ಪಟ್ಟಿರುವ ಸೂರ್ಯಪ್ರಕಾಶಕತ್ವ ಮುಂತಾದ ಗುಣಗಳು, ಶ್ರೀಹರಿಯ ಧರ್ಮಗಳೆಂದು ಬ್ರಹ್ಮಸೂತ್ರ, ಗೀತಾ ಮುಂತಾದ ಅನಂತ ಪ್ರಮಾಣಗಳು ತಿಳಿಸುತ್ತವೆ. ಆದ್ದರಿಂದ ಶ್ರೀಹರಿಯೇ ಗಾಯತ್ರೀ ಎಂಬ ಹೆಸರಿನಿಂದ ಹೇಳಲ್ಪಡುತ್ತಿರುವನು.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

(1) ಸಂಧ್ಯಾ ಎಂಬ ಪದವು ಹಿಂದೆ ಹೇಳಿದ ದಕ್ಷವಚನದಿಂದ ಸಂಧ್ಯಾಕಾಲವನ್ನು ತಿಳಿಸುತ್ತದೆ. ಆಗ "ಸಂಧ್ಯಾಕಾಲದಲ್ಲಿ ಗಾಯತ್ರೀ ಎಂದು ಹೇಳಲ್ಪಡುವ ಶ್ರೀಹರಿಯ ವಂದನ" ಎಂಬ ಅರ್ಥವನ್ನು "ಸಂಧ್ಯಾವಂದನ" ಎಂಬ ಪದವು ತಿಳಿಸುತ್ತದೆ. (2) "ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮ್ ಉತ್ತರಾಂ ಸದಿವಾಕರಾಮ್" ಎಂಬ ಶ್ರೀಮಧ್ವಾಚಾರ್ಯರ ವಚನವು "ಸಂಧ್ಯಾ" ಎಂಬ ದೇವತೆಯನ್ನು "ಸಂಧ್ಯಾ" ಎಂಬ ಪದವು ತಿಳಿಸುವುದಾಗಿ ಹೇಳುತ್ತದೆ. ಈ ಆಚಾರ್ಯರ ವಚನದಂತೆ "ಸಂಧ್ಯಾ" ಎಂಬ ದೇವತೆಯನ್ನು "ಸಂಧ್ಯಾ" ಎಂಬ ಪದವು ತಿಳಿಸುವುದಾದರೆ "ಸಂಧ್ಯಾ ಎಂಬ ಹೆಸರುಳ್ಳ ಶ್ರೀಗಾಯತ್ರೀದೇವತೆಯ ವಂದನ" ಎಂಬ ಅರ್ಥವನ್ನು "ಸಂಧ್ಯಾವಂದನ" ಎಂಬ ಪದವು ತಿಳಿಸುತ್ತದೆ. ಈ ಎರಡು ವಿಧವಾದ ವ್ಯಾಖ್ಯಾನಗಳಲ್ಲಿಯೂ ಗಾಯತ್ರೀ ದೇವತೆಯ ವಂದನವೇ "ಸಂಧ್ಯಾವಂದನ" ಎಂಬ ಪದದ ಅರ್ಥವೆಂದು ಸಿದ್ಧವಾಯಿತು.

(ಈ ಗಾಯತ್ರಿಯು ಯಾರು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಉತ್ತರವನ್ನು ಹೇಳುವೆವು. (1) ಬ್ರಹ್ಮಸೂತ್ರಗಳಲ್ಲಿ ಗಾಯತ್ರ್ಯಧಿಕರಣ ಎಂಬ ಅಧಿಕರಣದಲ್ಲಿ "ಗಾಯತ್ರೀ ಎಂಬ ಹೆಸರಿನಿಂದ ಶ್ರೀಹರಿಯೇ ಹೊಗಳಲ್ಪಡುವನು" ಎಂದು ಶ್ರೀವೇದವ್ಯಾಸರು ಸಮರ್ಥಿಸಿದ್ದಾರೆ. (2) "ಸವಿತೃದ್ಯೋತನಾಚ್ಚೈವ" ಎಂದು ಹಿಂದೆ ಉದಾಹರಿಸಿರುವ ಪ್ರಮಾಣದಲ್ಲಿ ಗಾಯತ್ರೀಶಬ್ದದಿಂದ ಸೂರ್ಯಪ್ರಕಾಶಕತ್ವ, ಜಗತ್ಕರ್ತೃತ್ವ ಮುಂತಾದ ಗುಣಗಳು ಗಾಯತ್ರಿಯಲ್ಲಿರುವುದಾಗಿ ತಿಳಿಸಲ್ಪಡುವುದಾಗಿ ಹೇಳಿದೆ. ಈ ಗುಣಗಳೆಲ್ಲವೂ ಶ್ರೀಹರಿಯನ್ನು ಬಿಟ್ಟು ಇತರರಲ್ಲಿ ಯಾರಲ್ಲಿಯೂ ಇಲ್ಲವೆಂದು ಬ್ರಹ್ಮಸೂತ್ರ ಮುಂತಾದ

### ಅದರಲ್ಲಿಯೂ ವಿಶೇಷ

ದಿವೋದಿತಾನಿ ಕರ್ಮಾಣಿ ಪ್ರಮಾದಾದಕೃತಾನಿ ವೈ |
ಶರ್ವರ್ಯಾಃ ಪ್ರಥಮೇ ಯಾಮೇ ತಾನಿ ಕುರ್ಯಾದತಂದ್ರಿತಃ ||

"ಹಗಲಿನಲ್ಲಿ ವಿಹಿತವಾದ ಕರ್ಮಗಳನ್ನು ಅಜಾಗ್ರತೆಯಿಂದ ಹಗಲಿನಲ್ಲಿ ಮಾಡದಿದ್ದರೆ ರಾತ್ರಿಯಲ್ಲಿ ಮೊದಲನೆಯ ಜಾಮದಲ್ಲಿ ಮಾಡಬೇಕು. ಆಲಸ್ಯದಿಂದ ಮಾಡದಿರಬಾರದು." (ಪ್ರಬಲ ಬಾಧಕವೇನೂ ಇಲ್ಲದಿದ್ದರೆ ಸಂಧ್ಯಾವಂದನವನ್ನು ರಾತ್ರಿಯಲ್ಲಾದರೂ ಮಾಡಲೇಬೇಕು ಎಂದು ಈ ವಾಕ್ಯವು ತಿಳಿಸುತ್ತದೆ.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

ಯಃ ಸಂಧ್ಯಾಕಾಲತಃ ಪ್ರಾಪ್ತಾಮಾಲಸ್ಯಾದತಿವರ್ತತೇ |
ಸ ಜೀವನ್ನೇವ ಚಂಡಾಲಃ ಸರ್ವಕರ್ಮಬಹಿಷ್ಕೃತಃ ||

"ಯಾರು ಸಂಧ್ಯಾವಂದನವನ್ನು ಆಲಸ್ಯದಿಂದ ಸಕಾಲದಲ್ಲಿ ಮಾಡುವುದಿಲ್ಲವೋ ಅವನು ಈ ಜನ್ಮದಲ್ಲಿಯೇ ಚಂಡಾಲನೆನಿಸುವನು. ಎಲ್ಲಾ ಕರ್ಮಗಳಿಗೂ ಅವನು ಅನರ್ಹನು."

### ಶ್ರೀಹರಿಸೇವೆಯನ್ನು ಮಾಡುವ ಕಾಲದಲ್ಲಿ ಸಂಧ್ಯಾಲೋಪವು ದೋಷಕರವಲ್ಲ

ಮತ್ಕರ್ಮ ಕುರ್ವತಾಂ ಪುಂಸಾಂ ಕರ್ಮಲೋಪೋ ನ ವಿದ್ಯತೇ |
ತೇಷಾಂ ಕರ್ಮಾಣಿ ಕುರ್ವಂತಿ ತಿಸ್ರಃ ಕೋಟ್ಯೋ ಮಹರ್ಷಯಃ || 1 ||
ವೃಥಾಕರ್ಮಕರೋ ಯಸ್ತು ನಿತ್ಯಕರ್ಮವಿಲೋಪಕಃ |
ಪ್ರಾಯಶ್ಚಿತ್ತಂ ತು ದ್ವಿಗುಣಂ ತಸ್ಯ ಪುಂಸಃ ಪ್ರಕೀರ್ತಿತಮ್ || 2 || (ವರಾಹಪುರಾಣವಚನ)

"ನನ್ನ ಭಕ್ತರು ನನ್ನ ಪ್ರೀತಿಗಾಗಿ ಭಾಗವತಧರ್ಮಗಳನ್ನು ಯಾವಾಗಲೂ ಅನುಷ್ಠಿಸುತ್ತಿರುವರು. ಅವರಿಗೆ ಪಾಠ ಪ್ರವಚನ ಮುಂತಾದ ಭಾಗವತ ಧರ್ಮಗಳನ್ನು ಅನುಷ್ಠಿಸುತ್ತಿರುವಾಗ ಸಂಧ್ಯಾವಂದನವನ್ನು ಸಕಾಲದಲ್ಲಿ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಇದರಿಂದ ಕರ್ಮಲೋಪವು ಏರ್ಪಡುವ ಸಂಭವವುಂಟು. ಆಗ ಅವರಿಗೆ ಕರ್ಮಲೋಪದೋಷವು ಬರಬಾರದು. ಅದಕ್ಕಾಗಿ ಮೂರು ಕೋಟಿ ಋಷಿಗಳನ್ನು ನಾನು ಏರ್ಪಡಿಸಿದ್ದೇನೆ. ಅವರು ನನ್ನ ಭಕ್ತರಿಗಾಗಿ ಸಂಧ್ಯಾವಂದನ ಮುಂತಾದ ಲುಪ್ತವಾಗುವ ಕರ್ಮಗಳನ್ನು ಮಾಡುತ್ತಿರುವರು. ಭಕ್ತರು ಅವಶ್ಯವಾಗಿ ಮಾಡಬೇಕಾದ ಕಾರ್ಯಗಳನ್ನು ಆ ಮಹರ್ಷಿಗಳು ಮಾಡುತ್ತಿರುವುದರಿಂದ ಆ ಭಕ್ತರಿಗೆ ಕರ್ಮಲೋಪಪ್ರಯುಕ್ತದೋಷವಿಲ್ಲ." || 1 ||

"ಕೆಲವರು ವ್ಯರ್ಥವಾದ ಕೆಲಸಗಳನ್ನೇ ಮಾಡುತ್ತಿರುವರು. ನಿತ್ಯಕರ್ಮಗಳನ್ನು ಮಾಡುತ್ತಿಲ್ಲ. ಅವರು ಶಾಸ್ತ್ರದಲ್ಲಿ ಹೇಳಿರುವ ಪ್ರಾಯಶ್ಚಿತ್ತಗಳನ್ನು ಎರಡರಷ್ಟು ಮಾಡಬೇಕು." (ಈ ಎರಡು ಶ್ಲೋಕಗಳೂ ಶ್ರೀಹರಿಯ ವಚನಗಳು) || 2 ||

ಕರ್ಮಲೋಪೋ ಭವೇದ್ಯಸ್ಯ ತ್ವನ್ಯಾವಶ್ಯಕಕರ್ಮಣಾ |
ಯಥೋಕ್ತಂ ತಸ್ಯ ನಿರ್ದಿಷ್ಟಂ ಪ್ರಾಯಶ್ಚಿತ್ತಂ ಮಹರ್ಷಿಭಿಃ ||

"ಸಂಧ್ಯಾವಂದನವನ್ನು ಬಿಟ್ಟು ಇತರ ಕಾರ್ಯಗಳು ಅವಶ್ಯವಾಗಿ ಮಾಡಬೇಕಾಗಿದ್ದರೆ ಆಗ ಸಂಧ್ಯಾವಂದನವನ್ನು ಬಿಟ್ಟರೂ ಬಿಡಬಹುದು. ಅಂತಹ ಸಂದರ್ಭದಲ್ಲಿ ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತವನ್ನು ಮಾಡಬೇಕೆಂದು ಋಷಿಗಳು ಹೇಳಿದ್ದಾರೆ."

### ಸಂಧ್ಯಾಸ್ವರೂಪ

ಅಹೋರಾತ್ರಸ್ಯ ಯಃ ಸಂಧಿಃ ಸೂರ್ಯನಕ್ಷತ್ರವರ್ಜಿತಃ |
ಸಾ ತು ಸಂಧ್ಯಾ ಸಮಾಖ್ಯಾತಾ ಮುನಿಭಿಸ್ತತ್ತ್ವದರ್ಶಿಭಿಃ || (ದಕ್ಷವಚನ)

"ಸೂರ್ಯನ ಉದಯಕ್ಕಿಂತ ಪೂರ್ವದಲ್ಲಿ ನಕ್ಷತ್ರಗಳೆಲ್ಲವೂ ಮಾಯವಾದ ಕಾಲವು ಪ್ರಾತಸ್ಸಂಧಿಕಾಲವೆಂದೂ ಸೂರ್ಯಾಸ್ತಮನಾನಂತರದಲ್ಲಿ ನಕ್ಷತ್ರೋದಯಕ್ಕಿಂತ ಮುಂಚಿನ ಕಾಲವು ಸಾಯಂಸಂಧಿಕಾಲವೆಂತಲೂ ಹೇಳಲ್ಪಡುತ್ತದೆ. ಈ ಎರಡು ಸಂಧಿಕಾಲಗಳನ್ನೇ ಸಂಧ್ಯೆಯೆಂದು ತತ್ತ್ವಜ್ಞಾನಿಗಳು ಹೇಳುತ್ತಿರುವರು. (ಈ ಶ್ಲೋಕದಲ್ಲಿ ಹೇಳಿರುವ ಸಂಧ್ಯಾ ಎಂಬ ಪದವು ಸಂಧ್ಯಾಕಾಲವನ್ನು ತಿಳಿಸುತ್ತದೆ. ಸಂಧ್ಯಾವಂದನ ಎಂಬ ಪದದಲ್ಲಿರುವ ಸಂಧ್ಯಾ ಎಂಬ ಪದವು ಸಂಧ್ಯಾಕಾಲದಲ್ಲಿ ನಮಸ್ಕರಿಸಲ್ಪಡುವ ಗಾಯತ್ರಿಯನ್ನು ತಿಳಿಸುತ್ತದೆ.) ಈ ಅಂಶವು ಸ್ಮೃತಿಮುಕ್ತಾವಲಿಯಲ್ಲಿ ಸಮರ್ಥಿಸಲ್ಪಟ್ಟಿದೆ.

ಪ್ರಾತಃಕಾಲೇ ತು ಗಾಯತ್ರೀ ಸಾಯಂಕಾಲೇ ಸರಸ್ವತೀ |
ಮಧ್ಯಂದಿನೇ ತು ಸಾವಿತ್ರೀ ಉಪಾಸ್ಯಾ ನಾಮಭೇದತಃ ||

"ಬೆಳಿಗ್ಗೆ ಗಾಯತ್ರಿಯನ್ನೂ, ಸಾಯಂಕಾಲದಲ್ಲಿ ಸರಸ್ವತಿಯನ್ನೂ, ಮಧ್ಯಾಹ್ನಕಾಲದಲ್ಲಿ ಸಾವಿತ್ರಿಯನ್ನೂ, ಉಪಾಸನೆ ಮಾಡಬೇಕು. ಈ ಮೂರು ಹೆಸರುಗಳೂ ಉಪಾಸಿಸಲ್ಪಡುವ ಗಾಯತ್ರೀದೇವತೆಯ ಹೆಸರುಗಳು. ಬೇರೆ ಬೇರೆ ದೇವತೆಗಳ ಹೆಸರುಗಳಲ್ಲ."

ಸವಿತೃದ್ಯೋತನಾಚ್ಚೈವ ಸಾವಿತ್ರೀ ಪರಿಕೀರ್ತಿತಾ |
ಜಗತಃ ಪ್ರಸವಿತ್ರೀ ಸಾ ವಾಗ್ರೂಪತ್ವಾತ್ಸರಸ್ವತೀ || (ವ್ಯಾಸಸ್ಮೃತಿ ವಚನ)

"ಸೂರ್ಯದೇವನಲ್ಲಿ ಸನ್ನಿಹಿತನಾಗಿ ಅವನಲ್ಲಿ ಪ್ರಕಾಶವು ಏರ್ಪಡುವಂತೆ ಮಾಡುತ್ತಿರುವುದರಿಂದ ಗಾಯತ್ರೀ ದೇವತೆಗೆ ಸರಸ್ವತೀ ಎಂದು ಹೆಸರು. ಸಕಲ ಲೋಕಗಳನ್ನೂ ಸೃಷ್ಟಿಸುತ್ತಿರುವುದರಿಂದ ಸಾವಿತ್ರೀ ಎಂದು ಅದೇ ಗಾಯತ್ರೀ ದೇವತೆಗೆ ಹೆಸರು."

(ಈ ಎರಡು ಶ್ಲೋಕಗಳಲ್ಲಿ ಗಾಯತ್ರೀದೇವತೆಗೆ ಮೂರು ಹೆಸರುಗಳೆಂದು ತಿಳಿಸಿದೆ. ಆ ಗಾಯತ್ರೀದೇವತೆಯಲ್ಲಿ ಹೇಳಲ್ಪಟ್ಟಿರುವ ಸೂರ್ಯಪ್ರಕಾಶಕತ್ವ ಮುಂತಾದ ಗುಣಗಳು, ಶ್ರೀಹರಿಯ ಧರ್ಮಗಳೆಂದು ಬ್ರಹ್ಮಸೂತ್ರ, ಗೀತಾ ಮುಂತಾದ ಅನಂತ ಪ್ರಮಾಣಗಳು ತಿಳಿಸುತ್ತವೆ. ಆದ್ದರಿಂದ ಶ್ರೀಹರಿಯೇ ಗಾಯತ್ರೀ ಎಂಬ ಹೆಸರಿನಿಂದ ಹೇಳಲ್ಪಡುತ್ತಿರುವನು.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

(1) ಸಂಧ್ಯಾ ಎಂಬ ಪದವು ಹಿಂದೆ ಹೇಳಿದ ದಕ್ಷವಚನದಿಂದ ಸಂಧ್ಯಾಕಾಲವನ್ನು ತಿಳಿಸುತ್ತದೆ. ಆಗ "ಸಂಧ್ಯಾಕಾಲದಲ್ಲಿ ಗಾಯತ್ರೀ ಎಂದು ಹೇಳಲ್ಪಡುವ ಶ್ರೀಹರಿಯ ವಂದನ" ಎಂಬ ಅರ್ಥವನ್ನು "ಸಂಧ್ಯಾವಂದನ" ಎಂಬ ಪದವು ತಿಳಿಸುತ್ತದೆ. (2) "ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮ್ ಉತ್ತರಾಂ ಸದಿವಾಕರಾಮ್" ಎಂಬ ಶ್ರೀಮಧ್ವಾಚಾರ್ಯರ ವಚನವು "ಸಂಧ್ಯಾ" ಎಂಬ ದೇವತೆಯನ್ನು "ಸಂಧ್ಯಾ" ಎಂಬ ಪದವು ತಿಳಿಸುವುದಾಗಿ ಹೇಳುತ್ತದೆ. ಈ ಆಚಾರ್ಯರ ವಚನದಂತೆ "ಸಂಧ್ಯಾ" ಎಂಬ ದೇವತೆಯನ್ನು "ಸಂಧ್ಯಾ" ಎಂಬ ಪದವು ತಿಳಿಸುವುದಾದರೆ "ಸಂಧ್ಯಾ ಎಂಬ ಹೆಸರುಳ್ಳ ಶ್ರೀಗಾಯತ್ರೀದೇವತೆಯ ವಂದನ" ಎಂಬ ಅರ್ಥವನ್ನು "ಸಂಧ್ಯಾವಂದನ" ಎಂಬ ಪದವು ತಿಳಿಸುತ್ತದೆ. ಈ ಎರಡು ವಿಧವಾದ ವ್ಯಾಖ್ಯಾನಗಳಲ್ಲಿಯೂ ಗಾಯತ್ರೀ ದೇವತೆಯ ವಂದನವೇ "ಸಂಧ್ಯಾವಂದನ" ಎಂಬ ಪದದ ಅರ್ಥವೆಂದು ಸಿದ್ಧವಾಯಿತು.

(ಈ ಗಾಯತ್ರಿಯು ಯಾರು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಉತ್ತರವನ್ನು ಹೇಳುವೆವು. (1) ಬ್ರಹ್ಮಸೂತ್ರಗಳಲ್ಲಿ ಗಾಯತ್ರ್ಯಧಿಕರಣ ಎಂಬ ಅಧಿಕರಣದಲ್ಲಿ "ಗಾಯತ್ರೀ ಎಂಬ ಹೆಸರಿನಿಂದ ಶ್ರೀಹರಿಯೇ ಹೊಗಳಲ್ಪಡುವನು" ಎಂದು ಶ್ರೀವೇದವ್ಯಾಸರು ಸಮರ್ಥಿಸಿದ್ದಾರೆ. (2) "ಸವಿತೃದ್ಯೋತನಾಚ್ಚೈವ" ಎಂದು ಹಿಂದೆ ಉದಾಹರಿಸಿರುವ ಪ್ರಮಾಣದಲ್ಲಿ ಗಾಯತ್ರೀಶಬ್ದದಿಂದ ಸೂರ್ಯಪ್ರಕಾಶಕತ್ವ, ಜಗತ್ಕರ್ತೃತ್ವ ಮುಂತಾದ ಗುಣಗಳು ಗಾಯತ್ರಿಯಲ್ಲಿರುವುದಾಗಿ ತಿಳಿಸಲ್ಪಡುವುದಾಗಿ ಹೇಳಿದೆ. ಈ ಗುಣಗಳೆಲ್ಲವೂ ಶ್ರೀಹರಿಯನ್ನು ಬಿಟ್ಟು ಇತರರಲ್ಲಿ ಯಾರಲ್ಲಿಯೂ ಇಲ್ಲವೆಂದು ಬ್ರಹ್ಮಸೂತ್ರ ಮುಂತಾದ

ಅಸಂಖ್ಯ ಪ್ರಮಾಣಗಳು ತಿಳಿಸುತ್ತವೆ. ಆದ್ದರಿಂದ ವಿಷ್ಣುವೇ ಗಾಯತ್ರೀ ಎಂಬ ಪದದಿಂದ ಹೊಗಳಲ್ಪಡುತ್ತಿರುವನು ಎಂದು ಸ್ಪಷ್ಟವಾಗುತ್ತದೆ. (3)"ಸರಸ್ವತೀ ವಿಷ್ಣುರೂಪಾ" ಎಂಬ ವ್ಯಾಸಸ್ಮೃತಿಯಲ್ಲಿ ಸರಸ್ವತೀ ಎಂದು ಪ್ರಮಾಣಗಳಲ್ಲಿ ಹೊಗಳಲ್ಪಡುತ್ತಿರುವ ಗಾಯತ್ರಿಯು ವಿಷ್ಣುವೇ ಹೊರತು ಬೇರೆಯಲ್ಲವೆಂದು ಅತಿಸ್ಪಷ್ಟವಾಗಿ ಹೇಳಿದೆ. (4) "ಧ್ಯೇಯಃ ಸದಾ" ಎಂಬ ಗಾಯತ್ರೀಧ್ಯಾನಶ್ಲೋಕದಲ್ಲಿ ವಿಷ್ಣುವನ್ನು ಧ್ಯಾನಿಸುತ್ತಾ ಗಾಯತ್ರೀಮಂತ್ರವನ್ನು ಜಪಿಸಬೇಕೆಂದು ಹೇಳುತ್ತಿದೆ. ಗಾಯತ್ರಿಯು ವಿಷ್ಣುವಲ್ಲದಿದ್ದರೆ ಗಾಯತ್ರೀಮಂತ್ರಜಪಕಾಲದಲ್ಲಿ ಶ್ರೀವಿಷ್ಣುವನ್ನು ಸ್ಮರಿಸಬೇಕೆಂದು ಹೇಳಿರುವುದು ತಪ್ಪಾಗುತ್ತದೆ. (5) "ಉದ್ಯಂತಮಸ್ತಂ ಯಂತಮಾದಿತ್ಯಮಭಿಧ್ಯಾಯನ್ ಬ್ರಾಹ್ಮಣೋ ವಿದ್ವಾನ್ ಸಕಲಂ ಭದ್ರಮಶ್ನುತೇ" ಎಂಬ ಪ್ರಮಾಣವಚನದಲ್ಲಿ "ಸೂರ್ಯನ ಉದಯ ಮತ್ತು ಅಸ್ತಮನಕಾಲಗಳಲ್ಲಿ ಆದಿತ್ಯದೇವತೆಯನ್ನು ಧ್ಯಾನಿಸುತ್ತಿರುವ ಬ್ರಾಹ್ಮಣನೇ ಜ್ಞಾನಿಯು. ಅವನು ಸಕಲ ಮಂಗಲಗಳನ್ನೂ ಪಡೆಯುವನು" ಎಂದು ಹೇಳಿರುತ್ತದೆ. ಈ ಆದಿತ್ಯನು ಗಾಯತ್ರೀ ಎಂಬ ಸ್ತ್ರೀದೇವತೆಯಲ್ಲ. ಅದಿತಿದೇವಿಯ ಗರ್ಭದಿಂದ ಅವತರಿಸಿರುವ ವಾಮನರೂಪಿಯಾದ ಶ್ರೀಹರಿಯೆಂದು ಬೇರೆ ಪ್ರಮಾಣಗಳಿಂದ ಸಿದ್ಧವಾಗುತ್ತದೆ. (6) "ಬ್ರಹ್ಮವಾದಿನೋ ವದಂತಿ" ಎಂದು ಹಿಂದೆ ಉದಾಹರಿಸಿರುವ ಛಂದೋಗಶ್ರುತಿಯನ್ನು ಆದ್ಯಂತವಾಗಿ ವಿಮರ್ಶಿಸುವಾಗ ಅಸುರರಿಂದ ಅಂಜಿದ ಆದಿತ್ಯನು ಬೇರೆಯೆಂದೂ ಅವನ ಭಯವನ್ನು ಪರಿಹರಿಸಿದ ಗಾಯತ್ರಿಯು ಬೇರೆಯೆಂದೂ ಸ್ಪಷ್ಟವಾಗುತ್ತದೆ. ಆದ್ದರಿಂದ ಗಾಯತ್ರೀಮಂತ್ರವು ಸೂರ್ಯನನ್ನು ಹೊಗಳುವುದಿಲ್ಲ. ಸಕಲ ಭಯಪರಿಹಾರಕನಾದ ಶ್ರೀಹರಿಯನ್ನೇ ಹೊಗಳುತ್ತದೆಯೆಂದು ಸ್ಪಷ್ಟವಾಗುತ್ತದೆ. (7) "ಯತ್ಸ್ಯಂಧ್ಯಾಮುಪಾಸತೇ ಬ್ರಹ್ಮೈವ ತದುಪಾಸತೇ" ಎಂಬ ಶ್ರುತಿಯು ಭಾಷ್ಯದಲ್ಲಿ ಆಚಾರ್ಯರಿಂದ ಉದಾಹರಿಸಲ್ಪಟ್ಟಿದೆ. ಈ ಶ್ರುತಿಯಲ್ಲಿ "ಗಾಯತ್ರಿಯ ಉಪಾಸನೆಯೇ ಸಕಲಗುಣಪೂರ್ಣನಾದ ನಾರಾಯಣನ ಉಪಾಸನೆ" ಎಂದು ಅತಿಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ಮೇಲ್ಕಂಡ ಏಳು ಆಧಾರಗಳಿಂದ "ಗಾಯತ್ರೀ" ಎಂಬ ಪದವು ವಿಷ್ಣುವನ್ನೇ ತಿಳಿಸುತ್ತದೆ.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

### ಸಂಧ್ಯಾವಂದನಕ್ರಮ

ಧೃತೋರ್ಧ್ವಪುಂಡ್ರದೇಹಸ್ತು ಪವಿತ್ರಕರ ಏವ ಚ |
ಉಪಾಸೀತ ತತಃ ಸಂಧ್ಯಾಂ ಪ್ರಾಙ್ಮುಖೋದಙ್ಮುಖೋಽಪಿ ವಾ ||
ಅಂತರ್ಜಾನುಕರೋ ಭೂತ್ವಾ ಪ್ರಾಣಾಯಾಮಂ ಸಮಾಚರೇತ್ || (ವಸಿಷ್ಠರ ವಚನ)

"(1) ಪೂರ್ವಾಭಿಮುಖವಾಗಿಯಾಗಲೀ ಉತ್ತರಾಭಿಮುಖವಾಗಿಯಾಗಲೀ ಕುಳಿತುಕೊಳ್ಳಬೇಕು. (2) ಊರ್ಧ್ವ ಪುಂಡ್ರಗಳನ್ನು ಧರಿಸಬೇಕು. (3) ಪವಿತ್ರವನ್ನು ಧರಿಸಬೇಕು. (4) ಆಮೇಲೆ ಸಂಧ್ಯಾವಂದನವನ್ನು ಮಾಡಬೇಕು. (5) ಎರಡು ಮೊಣಕಾಲುಗಳ ಮಧ್ಯದಲ್ಲಿ ಕೈಗಳನ್ನಿಟ್ಟುಕೊಂಡು ಪ್ರಾಣಾಯಾಮವನ್ನು ಮಾಡಬೇಕು."

ಪ್ರಕ್ಷಾಲ್ಯ ಪಾದೌ ಚಾಚಮ್ಯ ಪ್ರಾಣಾಯಾಮತ್ರಯಾನ್ವಿತಃ |
ಪ್ರಾತಃಸಂಧ್ಯಾಮುಪಾಸಿಷ್ಯ ಇತಿ ಸಂಕಲ್ಪಮೀರಯೇತ್ || (ದಕ್ಷವಚನ)

"(1) ಕೈಗಳನ್ನೂ ಕಾಲುಗಳನ್ನೂ ತೊಳೆದುಕೊಳ್ಳಬೇಕು. (2) ಆಚಮನವನ್ನು ಮಾಡಬೇಕು. (3) ಮೂರು ಸಲ ಪ್ರಾಣಾಯಾಮವನ್ನು ಮಾಡಬೇಕು. (4) "ಪ್ರಾತಃಸಂಧ್ಯಾಮುಪಾಸಿಷ್ಯೇ" ಅಂದರೆ "ಪ್ರಾತಃಕಾಲದ ಸಂಧ್ಯಾವಂದನವನ್ನು ಮಾಡುವೆನು" ಎಂದು ಸಂಕಲ್ಪವನ್ನು ಮಾಡಬೇಕು."

### ಆಚಮನಸಂಖ್ಯಾ

ಪ್ರಾಕ್‌ಸಂಧ್ಯಾಯಾ ದ್ವಿರಾಚಮ್ಯ ಅರ್ಘ್ಯಾಂತೇ ಚ ದ್ವಿರಾಚಮೇತ್ |
ಏಕಂ ಚೈವೋಭಯೋರ್ಮಧ್ಯೇ ಇತಿ ಶಾತಾತಪೋಽಬ್ರವೀತ್ || (ಶಾತಾತಪರ ವಚನ)

(1) ಸಂಧ್ಯಾವಂದನದ ಆರಂಭದಲ್ಲಿ ಎರಡು ಸಲ (2) ಸೂರ್ಯಾರ್ಘ್ಯವನ್ನು ಕೊಟ್ಟು ಮುಗಿಸಿದ ಮೇಲೆ ಎರಡು ಸಲ (3) ಇವೆರಡರ ಮಧ್ಯದಲ್ಲಿ ಒಮ್ಮೆ ಹೀಗೆ ಆಚಮನವನ್ನು ಮಾಡಬೇಕು.

### ಪ್ರಾಣಾಯಾಮಸ್ವರೂಪ

ಸವ್ಯಾಹೃತಿಂ ಸಪ್ರಣವಾಂ ಗಾಯತ್ರೀಂ ಶಿರಸಾ ಸಹ |
ಸಕೃತ್ಸ್ಮರನ್ ಹೃದಂಗುಷ್ಠಾನಾಮಿಕಾಭ್ಯಾಂ ನಿಪೀಡಯೇತ್ ||
ವಾಮನಾಸಾಪುಟೇನೈವ ವಾಯುನಾ ಪೂರಯೇತ್ತತಃ |
ತಥೈವ ಕುಂಭಕಂ ಕೃತ್ವಾ ರೇಚಯೇದ್ದಕ್ಷಿಣೇನ ತು || (ಶಾತಾತಪರ ವಚನ)

"ಓಂ ಭೂಃ. ಓಂ ಭುವಃ. ಓಂ ಸ್ವಃ, ಓಂ ಭೂರ್ಭುವಃ ಸ್ವಃ" ಎಂಬ ಮಂತ್ರವು ವ್ಯಾಹೃತಿಯೆನಿಸುತ್ತದೆ. "ಓಂ" ಎಂಬ ಮಂತ್ರವು ಪ್ರಣವಮಂತ್ರವೆನಿಸುತ್ತದೆ. "ಓಮಾಪೋ ಜ್ಯೋತೀ ರಸೋಽಮೃತಂ ಬ್ರಹ್ಮ ಭೂರ್ಭುವಃ ಸುವರೋಮ್" ಎಂಬ ಮಂತ್ರವು ಶಿರೋಮಂತ್ರವೆನಿಸುತ್ತದೆ.

(1) ಆರಂಭದಲ್ಲಿ ವ್ಯಾಹೃತಿಮಂತ್ರವನ್ನೂ, ಪ್ರಣವಮಂತ್ರವನ್ನೂ ಕ್ರಮವಾಗಿ ಜಪಿಸಬೇಕು. ಅನಂತರದಲ್ಲಿ ಗಾಯತ್ರೀಮಂತ್ರವನ್ನೂ, ಕೊನೆಗೆ ಶಿರೋಮಂತ್ರವನ್ನೂ ಜಪಿಸಬೇಕು. ಹೀಗೆ ಜಪಿಸುತ್ತಾ ಉಂಗುರದ ಬೆರಳು ಮತ್ತು ಅಂಗುಷ್ಠಗಳನ್ನು ಒಟ್ಟುಗೂಡಿಸಿ ಎದೆಯನ್ನು ಒತ್ತಿ ಹಿಡಿಯಬೇಕು. (2) ಎಡಮೂಗಿನ ರಂಧ್ರದಿಂದ ವಾಯುವನ್ನು ಒಳಗೆ ತೆಗೆದುಕೊಳ್ಳಬೇಕು. ಇದು ಪೂರಕಪ್ರಾಣಾಯಾಮವೆನಿಸುತ್ತದೆ. (3) ಸ್ವಲ್ಪಕಾಲದವರೆಗೆ ಶ್ವಾಸವನ್ನು ಬಿಗಿಹಿಡಿಯಬೇಕು. ಇದು ಕುಂಭಕಪ್ರಾಣಾಯಾಮವೆನಿಸುತ್ತದೆ. (4) ಬಲಮೂಗಿನ ರಂಧ್ರದಿಂದ ಶ್ವಾಸವನ್ನು ಹೊರಗೆ ಬಿಡಬೇಕು. ಇದು ರೇಚಕಪ್ರಾಣಾಯಾಮವೆನಿಸುತ್ತದೆ. ಹೀಗೆ ಕ್ರಮವಾಗಿ ಪೂರಕ, ಕುಂಭಕ ಮತ್ತು ರೇಚಕ ಪ್ರಾಣಾಯಾಮಗಳನ್ನು ಒಮ್ಮೊಮ್ಮೆ ಮಾಡಿದರೆ ಒಂದು ಸಲ ಪ್ರಾಣಾಯಾಮವನ್ನು ಮಾಡಿದಂತಾಗುವುದು.

ದಕ್ಷಿಣೇ ರೇಚಕಂ ಕುರ್ಯಾದ್ವಾಮೇನಾಪೂರಿತೋದರಮ್ |
ಕುಂಭಕೇನ ಜಪಂ ಕುರ್ಯಾತ್ಪ್ರಾಣಾಯಾಮಸ್ಯ ಲಕ್ಷಣಮ್ ||

"(1) ಮೂಗಿನ ಬಲರಂಧ್ರದಿಂದ ರೇಚಕ ಪ್ರಾಣಾಯಾಮವನ್ನು ಮಾಡಬೇಕು. (2) ಎಡರಂಧ್ರದಿಂದ ಪೂರಕ ಪ್ರಾಣಾಯಾಮವನ್ನು ಮಾಡಬೇಕು. ಕುಂಭಕಪ್ರಾಣಾಯಾಮಕಾಲದಲ್ಲಿ ಮಂತ್ರಗಳನ್ನು ಜಪಿಸಬೇಕು."

(ಮೇಲ್ಕಂಡ ಎರಡು ಪ್ರಮಾಣಗಳಲ್ಲಿ ಪ್ರಾಣಾಯಾಮದ ವಿಷಯದಲ್ಲಿ ಅಭಿಪ್ರಾಯಭೇದವು ತಿಳಿಯುತ್ತದೆ. (1) ಪೂರಕ (2) ಕುಂಭಕ (3) ರೇಚಕ ಪ್ರಾಣಾಯಾಮಗಳನ್ನು ಕ್ರಮವಾಗಿ ಮಾಡಬೇಕೆಂದೂ, ಮೂಗಿನ ಬಲರಂಧ್ರದಿಂದ ಪೂರಕ ಪ್ರಾಣಾಯಾಮ ಮತ್ತು ಎಡರಂಧ್ರದಿಂದ ರೇಚಕ ಪ್ರಾಣಾಯಾಮವನ್ನು ಮಾಡಬೇಕೆಂದೂ ಮೊದಲನೆಯ ವಾಕ್ಯವು ತಿಳಿಸುತ್ತದೆ. ಎರಡನೆಯ ವಾಕ್ಯವು ರೇಚಕ, ಪೂರಕ, ಕುಂಭಕಪ್ರಾಣಾಯಾಮಗಳನ್ನು ಕ್ರಮವಾಗಿ ಮಾಡಬೇಕೆಂದೂ, ದಕ್ಷಿಣರಂಧ್ರದಿಂದ ರೇಚಕಪ್ರಾಣಾಯಾಮ ಮತ್ತು ಎಡರಂಧ್ರದಿಂದ ಪೂರಕಪ್ರಾಣಾಯಾಮಗಳನ್ನು ಮಾಡಬೇಕೆಂದೂ ತಿಳಿಸುತ್ತದೆ. ಈ ಎರಡು ಕ್ರಮಗಳಲ್ಲಿ ಯಾವುದಾದರೊಂದು ಕ್ರಮವನ್ನು ಸ್ವೀಕರಿಸಬೇಕು. ಒಂದು ಕ್ರಮವನ್ನು ಸ್ವೀಕರಿಸಿದ ಮೇಲೆ ಆ ಕ್ರಮವನ್ನು ಬದಲಾಯಿಸಬಾರದು.)

### ಈ ಪ್ರಾಣಾಯಾಮಗಳನ್ನು ಸಂಧ್ಯಾವಂದನಾದಿಕಾಲಗಳಲ್ಲಿ ಮೂರು ಸಲ ಮಾಡಬೇಕು

ಪ್ರಾಣಾಯಾಮತ್ರಯಂ ಕುರ್ಯಾತ್ಸಂಧ್ಯಾಹೋಮಜಪಾದಿಷು || (ಶಾತಾತಪರ ವಚನ)

"ಸಂಧ್ಯಾವಂದನ, ಹೋಮ, ಜಪ ಮುಂತಾದ ಕಾರ್ಯಗಳಲ್ಲಿ ಮೂರು ಸಲ ಪ್ರಾಣಾಯಾಮವನ್ನು ಮಾಡಬೇಕು."

## ಪ್ರಾಣಾಯಾಮಮಂತ್ರಗಳಲ್ಲಿ ಇನ್ನೊಂದು ಕ್ರಮ

ಭೂರ್ಭುವಃ ಸ್ವರ್ಮಹರ್ಜನಸ್ತಪಃ ಸತ್ಯಂ ತಥೈವ ಚ |
ಪ್ರಣೋಂಕಾರಸಮಾಯುಕ್ತಂ ತಥಾ ತತ್ಸವಿತುಃ ಪರಮ್ ||
ಓಮಾಪೋಜ್ಯೋತಿರಿತ್ಯೇತಚ್ಛಿರಃ ಪಶ್ಚಾತ್ಪ್ರಯೋಜಯೇತ್ |
ತ್ರಿರಾವರ್ತನಯೋಗಾತ್ತು ಪ್ರಾಣಾಯಾಮಸ್ತು ಶಬ್ದಿತಃ ||
ಪೂರಕಃ ಕುಂಭಕೋ ರೇಚಃ ಪ್ರಾಣಾಯಾಮಸ್ತ್ರಿಲಕ್ಷಣಃ || (ಯೋಗಿಯಾಜ್ಞವಲ್ಕ್ಯರ ವಚನ)

"(1) "ಓಂ ಭೂಃ. ಓಂ ಭುವಃ. ಓಂ ಸ್ವಃ. ಓಂ ಮಹಃ. ಓಂ ಜನಃ. ಓಂ ತಪಃ. ಓಂ ಸತ್ಯಂ", ಎಂದು ವ್ಯಾಹೃತಿಮಂತ್ರವನ್ನು ಹೇಳಬೇಕು. (2) "ಓಂ" ಎಂದು ಪ್ರಣವಮಂತ್ರವನ್ನು ಜಪಿಸಬೇಕು. (3) ಗಾಯತ್ರೀಮಂತ್ರವನ್ನು ಜಪಿಸಬೇಕು. (4) ಶಿರೋಮಂತ್ರವನ್ನು ಹೇಳಬೇಕು. ಹೀಗೆ ಮಂತ್ರಗಳನ್ನು ಉಚ್ಚರಿಸುತ್ತಾ ಪೂರಕಪ್ರಾಣಾಯಾಮವನ್ನು ಮಾಡಬೇಕು. ಇದೇ ರೀತಿಯಿಂದ ಮಂತ್ರಗಳನ್ನು ಉಚ್ಚರಿಸುತ್ತಾ ಕುಂಭಕಪ್ರಾಣಾಯಾಮವನ್ನು ಮಾಡಬೇಕು. ಕೊನೆಗೆ ಇದೇ ರೀತಿಯಿಂದ ರೇಚಕಪ್ರಾಣಾಯಾಮವನ್ನು ಮಾಡಬೇಕು. ಇದು ಒಂದು ಪ್ರಾಣಾಯಾಮವೆನಿಸುತ್ತದೆ. ಈ ವಿಧವಾಗಿ ಮೂರು ಸಲ ಪೂರಕ, ಕುಂಭಕ, ರೇಚಕ, ಪ್ರಾಣಾಯಾಮಗಳನ್ನು ಮಾಡಿದರೆ ಒಂದು ಸಲ ಪ್ರಾಣಾಯಾಮವನ್ನು ಮಾಡಿದಂತಾಗುತ್ತದೆ."

## ಪ್ರಾಣಾಯಾಮದಲ್ಲಿ ಬೆರಳುಗಳ ನಿಯಮ

ಪಂಚಾಂಗುಲೀಭಿರ್ನಾಸಾಗ್ರಪೀಡನಂ ಪ್ರಣವಾಭಿಧಾ |
ಮುದ್ರೇಯಂ ಸರ್ವಪಾಪಘ್ನೀ ವಾನಪ್ರಸ್ಥಗೃಹಸ್ಥಯೋಃ ||
ಕನಿಷ್ಠಾನಾಮಿಕಾಂಗುಷ್ಠೈರ್ನಾಸಾಗ್ರಸ್ಯ ಪ್ರಪೀಡನಮ್ |
ಓಂಕಾರಮುದ್ರಿಕಾ ಪ್ರೋಕ್ತಾ ಯತೇಶ್ಚ ಬ್ರಹ್ಮಚಾರಿಣಃ || (ಸಂಗ್ರಹವಚನ)

"ಐದು ಬೆರಳುಗಳಿಂದ ಗೃಹಸ್ಥರೂ, ವಾನಪ್ರಸ್ಥರೂ, ಮೂಗಿನ ರಂಧ್ರವನ್ನು ಒತ್ತಿ ಹಿಡಿಯಬೇಕು. ಇದು ಪ್ರಣವಮುದ್ರೆಯೆನಿಸುತ್ತದೆ. ಅಂಗುಷ್ಠ, ಉಂಗುರದ ಬೆರಳು ಮತ್ತು ಕಿರುಬೆರಳುಗಳಿಂದ ಬ್ರಹ್ಮಚಾರಿ ಮತ್ತು ಸನ್ಯಾಸಿಗಳು ಮೂಗನ್ನು ಒತ್ತಿ ಹಿಡಿಯಬೇಕು. ಈ ಮುದ್ರೆಯು ಓಂಕಾರಮುದ್ರೆಯೆನಿಸುತ್ತದೆ. ಈ ಮುದ್ರೆಗಳು ಎಲ್ಲಾ ಪಾಪಗಳನ್ನೂ ಪರಿಹರಿಸುತ್ತವೆ."

## ಪ್ರಾಣಾಯಾಮವು ಎರಡು ವಿಧ

ಅಗರ್ಭಶ್ಚ ಸಗರ್ಭಶ್ಚ ಪ್ರಾಣಾಯಾಮೋ ದ್ವಿಧಾ ಪುನಃ |
ಅಗರ್ಭೋ ಧ್ಯಾನಹೀನಸ್ತು ಸಗರ್ಭೋ ಧ್ಯಾನಸಂಯುತಃ ||
ಅಗರ್ಭಾತ್ಕೋಟಿಗುಣಕಃ ಪ್ರಾಣಾಯಾಮಃ ಸಗರ್ಭಕಃ | (ವಾಯುಪುರಾಣ ವಚನ)

"ಅಗರ್ಭಪ್ರಾಣಾಯಾಮ, ಸಗರ್ಭಪ್ರಾಣಾಯಾಮ ಎಂದು ಪ್ರಾಣಾಯಾಮವು ಎರಡು ವಿಧವಾಗಿದೆ. (1) ಧ್ಯಾನವಿಲ್ಲದೆ ಬರೀ ಮಂತ್ರಗಳನ್ನು ಉಚ್ಚರಿಸುತ್ತಾ ಮಾಡುತ್ತಿರುವ ಪ್ರಾಣಾಯಾಮವು ಅಗರ್ಭಪ್ರಾಣಾಯಾಮವೆನಿಸುತ್ತದೆ. (2 ಧ್ಯಾನಸಹಿತವಾಗಿ ಮಾಡುವ ಪ್ರಾಣಾಯಾಮವು ಸಗರ್ಭಪ್ರಾಣಾಯಾಮವೆನಿಸುತ್ತದೆ. ಅಗರ್ಭಪ್ರಾಣಾಯಾಮಕ್ಕಿಂತ ಸಗರ್ಭಪ್ರಾಣಾಯಾಮವು ಕೋಟಿಪಾಲು ಉತ್ತಮವೆನಿಸುತ್ತದೆ." (ಮೇಲ್ಕಂಡ ವಿವರಣದಿಂದ (1) ಆಚಮನ (2) ಪ್ರಾಣಾಯಾಮ (3) "ಶ್ರೀಹರಿಪ್ರೀತ್ಯರ್ಥಂ ಸಂಧ್ಯಾಕರ್ಮ ಕರಿಷ್ಯೇ" ಎಂದು ಸಂಕಲ್ಪ ಇವುಗಳನ್ನು ಮಾಡಿ ಮುಂದಿನ ಕಾರ್ಯಗಳನ್ನು ಮಾಡಬೇಕೆಂದು ಸಿದ್ಧವಾಯಿತು.)

ಪ್ರಾಣಾನಾಯಮ್ಯ ವಿಧಿವದ್ವಾಗ್ಯತಃ ಸಂಯತೇಂದ್ರಿಯಃ |
ಅಥ ಸಂಧ್ಯಾಮುಪಾಸಿಷ್ಯ ಇತಿ ಸಂಕಲ್ಪ್ಯ ಮಾರ್ಜಯೇತ್ || (ಶ್ರೀಹರಿಯ ವಚನ)

"(1) ವಿಧಿಪ್ರಕಾರವಾಗಿ ಪ್ರಾಣಾಯಾಮವನ್ನು ಮಾಡಬೇಕು. (2) ಮೌನವನ್ನು ಧರಿಸಬೇಕು. (3) ಇಂದ್ರಿಯಗಳನ್ನು ಹೊರಗಿನ ವಿಷಯಗಳಿಂದ ತಿರುಗಿಸಬೇಕು. (4) "ಸಂಧ್ಯಾಮುಪಾಸಿಷ್ಯೇ" ಎಂದು ಸಂಕಲ್ಪಿಸಬೇಕು. (5) ಮಾರ್ಜನವನ್ನು ಮಾಡಬೇಕು."

### ಮಾರ್ಜನ ಮಂತ್ರಗಳು ಮತ್ತು ಮಾರ್ಜನವನ್ನು ಮಾಡುವ ರೀತಿ

ಆಪೋ ಹಿ ಷ್ಠಾದಿಭಿಃ ಪಾದೈಃ ಶಿರಸ್ಯಷ್ಟೈವ ವಿಪ್ರುಷಃ |
ಯಸ್ಯ ಕ್ಷಯಾತ್ಪರಸ್ತಾತ್ತು ಕ್ಷಿಪ್ತ್ವಾ ತ್ರಿಃ ಪರಿಷೇಚಯೇತ್ |
ಆಪೋ ಹಿ ಷ್ಠಾ ಸುಪ್ರಸಿದ್ಧಾ ನವ ಪಾದಾ ಭವಂತಿ ತೇ |
ಪಾದಂ ಪಾದಂ ಕ್ಷಿಪೇದ್ವಾರಿ ಬ್ರಹ್ಮಹತ್ಯಾಂ ವ್ಯಪೋಹತಿ ||

"ಆಪೋ ಹಿ ಷ್ಠಾ ಮಯೋಭುವಃ" ಎಂಬ ಮಂತ್ರವು ಸಂಧ್ಯಾವಂದನದ ಆರಂಭದಲ್ಲಿ ಮಾರ್ಜನ ಮಂತ್ರವೆಂದು ಸುಪ್ರಸಿದ್ಧವಾಗಿದೆ. ಈ ಮಂತ್ರದಲ್ಲಿ ಎಂಟು ಅಕ್ಷರಗಳಿಗೆ ಒಂದು ಪಾದದಂತೆ ಒಂಭತ್ತು ಪಾದಗಳಿವೆ. ಈ ಒಂಭತ್ತು ಪಾದಗಳ ಮಧ್ಯದಲ್ಲಿ ಮೊದಲನೆಯ ಎಂಟು ಪಾದಗಳಿಂದ ನೀರನ್ನು ತನ್ನ ತಲೆಯ ಮೇಲೆ ಬೀಳುವಂತೆ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಈ ಪ್ರೋಕ್ಷಣೆಯನ್ನು ಮಾಡಿಕೊಳ್ಳುವಾಗ ಒಂದೇ ಜಲ ಬಿಂದುವು ತಲೆಯ ಮೇಲೆ ಬೀಳಬೇಕು. ಅದಕ್ಕಿಂತ ಹೆಚ್ಚಿನ ಬಿಂದುಗಳು ಬೀಳಬಾರದು. ಹೀಗೆ ಎಂಟು ಪಾದಗಳಿಂದ ಎಂಟು ಬಿಂದುಗಳನ್ನು ತಲೆಯ ಮೇಲೆ ಪ್ರೋಕ್ಷಣೆ ಮಾಡಿಕೊಳ್ಳುವಾಗ ಎಂಟು ಪಾದಗಳು ಮುಗಿಯುತ್ತವೆ. "ಯಸ್ಯ ಕ್ಷಯಾಯ ಜಿನ್ವಥ" ಎಂಬ ಒಂಭತ್ತನೆಯ ಪಾದವು ಮಾತ್ರ ಉಳಿಯುತ್ತದೆ. ಅದನ್ನು ಹೇಳುವುದಕ್ಕಿಂತ ಮುಂಚಿತವಾಗಿ ಭೂಮಿಯಲ್ಲಿ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಆ ಮೇಲೆ ಆ ಕೊನೆಯ ಪಾದದಿಂದ ಮೂರು ಸಲ ತಲೆಯ ಮೇಲೆ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಈ ಕ್ರಮದಿಂದ ಮಾಡಿದ ಮಾರ್ಜನ ಅಂದರೆ ಜಲ ಪ್ರೋಕ್ಷಣೆಯು ಬ್ರಹ್ಮಹತ್ಯಾದೋಷವನ್ನು ಪರಿಹರಿಸುತ್ತದೆ."

### ಮಾರ್ಜನದಿಂದ ಬರುವ ಬೇರೆ ಫಲಗಳು

ರಜಸ್ತಮೋಮೋಹಜಾತಾನ್ ಜಾಗ್ರತ್ಸ್ವಪ್ನಸುಷುಪ್ತಿಜಾನ್ |
ವಾಙ್ಮನಃಕಾಯಜಾನ್ ದೋಷಾನ್ ನವೈತಾನ್ ನವಭಿರ್ದಹೇತ್ ||

(1) ವಿಷಯಗಳ ಆಸೆಗೆ ಕಾರಣವಾಗಿರುವ ರಜೋಗುಣ. (2) ವಿಪರೀತಜ್ಞಾನ ಮುಂತಾದ ಎಲ್ಲಾ ಅನರ್ಥಗಳಿಗೂ ಕಾರಣವಾಗಿರುವ ತಮೋಗುಣ. (3) ನಿತ್ಯನರಕ ಮುಂತಾದ ಪ್ರಬಲವಾದ ದುಃಖಗಳಿಗೆ ಕಾರಣವಾಗಿರುವ ವಿಪರೀತಜ್ಞಾನ. (4) ಜಾಗ್ರದವಸ್ಥೆ ಅಂದರೆ ಎಚ್ಚತ್ತಿರುವಾಗ ಮಾಡುತ್ತಿರುವ ಪಾಪಗಳು. (5) ಸ್ವಪ್ನಾವಸ್ಥೆ ಅಂದರೆ ಕನಸು ಕಾಣುತ್ತಿರುವಾಗ ಮಾಡುತ್ತಿರುವ ಪಾಪಗಳು. (6) ಸುಷುಪ್ತಿ ಅಂದರೆ ಗಾಢನಿದ್ರೆಯ ಕಾಲದಲ್ಲಿ ತನಗೆ ತಿಳಿಯದೆ ಮಾಡುತ್ತಿರುವ ಪರಹಿಂಸಾದಿಗಳಿಂದ ಬರುವ ಪಾಪಗಳು. (7) ಬಾಯಿಯಿಂದ ಪರನಿಂದಾದಿಗಳನ್ನು ಮಾಡಿದ್ದರಿಂದ ಸಂಪಾದಿಸಿದ ಪಾಪಗಳು. (8) ಮನಸ್ಸಿನಿಂದ ಅಯೋಗ್ಯವಸ್ತುಗಳ ಸ್ಮರಣಾದಿಗಳಿಂದ ಸಂಪಾದಿಸಿದ ಪಾಪಗಳು. (9) ದೇಹದಿಂದ ಪರರ ಪೀಡಾದಿಗಳಿಂದ ಸಂಪಾದಿಸಿದ ಪಾಪಗಳು. ಹೀಗೆ ಒಂಭತ್ತು ವಿಧವಾದ ಪಾಪ ಮುಂತಾದ ದೋಷಗಳನ್ನು ಪ್ರತಿದಿನದಲ್ಲಿಯೂ ನಾವು ಸಂಪಾದಿಸುತ್ತಿರುವೆವು. ಮಾರ್ಜನ ಮಂತ್ರದ ಒಂದೊಂದು ಪಾದವನ್ನು ಉಚ್ಚರಿಸುತ್ತಾ ಮಾಡುತ್ತಿರುವ ಒಂದೊಂದು ಪ್ರೋಕ್ಷಣದಿಂದ ಮೇಲ್ಕಂಡ ಒಂದೊಂದು ವಿಧವಾದ ಪಾಪವು ನಶಿಸುತ್ತದೆ.

ಚತುರ್ಥಂ ಕಾರಯೇದ್ಯಸ್ತು ಬ್ರಹ್ಮಹತ್ಯಾಂ ಸ ವಿಂದತಿ |

"ಮೇಲ್ಕಂಡ ಶ್ಲೋಕದಲ್ಲಿ ಮಾರ್ಜನಮಂತ್ರದಲ್ಲಿರುವ ಒಂಭತ್ತು ಪಾದಗಳಿಂದ ಒಂಭತ್ತು ಸಲ ಪ್ರೋಕ್ಷಣವನ್ನು ತಲೆಯ ಮೇಲೆ ಮಾಡಬೇಕೆಂದು ಹೇಳಲ್ಪಟ್ಟಿತು. ಇದರಿಂದ ಮಾರ್ಜನ ಮಂತ್ರದಲ್ಲಿರುವ ಮೂರು ಋಕ್ಕುಗಳಲ್ಲಿ ಒಂದೊಂದು ಋಕ್ಕುಗಳಿಂದ ಮೂರು ಮೂರು ಸಲ ಪ್ರೋಕ್ಷಣ ಮಾಡಿಕೊಳ್ಳಬೇಕೆಂದೂ ಹೇಳಿದಂತಾಯಿತು." ಒಂದೊಂದು ಋಕ್ಕುಗಳಿಂದ ಮೂರಕ್ಕಿಂತ ಅಧಿಕವಾಗಲೀ ಕಡಿಮೆಯಾಗಲೀ ಪ್ರೋಕ್ಷಣವನ್ನು ಮಾಡಿಕೊಂಡರೆ ಬ್ರಹ್ಮಹತ್ಯಾದೋಷವು ಬರುತ್ತದೆ. ಆದ್ದರಿಂದ ಅಷ್ಟೇ ಸಲ ಪ್ರೋಕ್ಷಿಸಿಕೊಳ್ಳಬೇಕು." ಎಂದು ಈ ವಾಕ್ಯವು ತಿಳಿಸುತ್ತದೆ.

ಪ್ರಾತರುತ್ಥಾಯ ಸತತಂ ಕುರ್ಯಾನ್ಮಾರ್ಜನಮಾತ್ಮನಃ |
ಸಂವತ್ಸರಕೃತಂ ಪಾಪಂ ಮಾರ್ಜನಾಂತೇ ವಿನಶ್ಯತಿ || (ಋಗ್ವಿಧಾನವಾಕ್ಯ)

"ಯಾವಾಗಲೂ ಬೆಳಿಗ್ಗೆ ಎದ್ದು ಸಂಧ್ಯಾವಂದನವನ್ನು ಆರಂಭಿಸುವಾಗ ಮಾರ್ಜನಮಂತ್ರಗಳಿಂದ ತಲೆಯಲ್ಲಿ ಪ್ರೋಕ್ಷಿಸಿಕೊಳ್ಳಬೇಕು. ಮಾರ್ಜನವನ್ನು ಮಾಡಿ ಮುಗಿಸುವಾಗ ಒಂದು ವರ್ಷದವರೆಗೆ ಮಾಡಿದ ಪಾಪವು ನಶಿಸುತ್ತದೆ."

### ಈ ಮಾರ್ಜನವನ್ನು ತುಳಸೀ ನಿರ್ಮಾಲ್ಯದಿಂದಲೇ ಮಾಡಬೇಕು

ತುಳಸೀಪತ್ರಗಲಿತಂ ಯಸ್ತೋಯಂ ಶಿರಸಾ ವಹೇತ್ |
ಗಂಗಾಪುಣ್ಯಮವಾಪ್ನೋತಿ ಶತಧೇನುಫಲಂ ಲಭೇತ್ || (ಪಂಚಸಂಸ್ಕಾರಸಂಗ್ರಹ)

"ತುಳಸೀ ನಿರ್ಮಾಲ್ಯದಿಂದ ಕೆಳಗೆ ಬೀಳುತ್ತಿರುವ ಜಲಬಿಂದುವನ್ನು ಶಿರಸ್ಸಿನಲ್ಲಿ ಧರಿಸುವವನು, ಗಂಗಾಸ್ನಾನದಿಂದ ಬರುವ ಪುಣ್ಯವನ್ನು ಪಡೆಯುವನು. ನೂರು ಗೋದಾನಗಳಿಂದ ಬರುವ ಪುಣ್ಯವನ್ನೂ ಪಡೆಯುವನು."

ತುಳಸೀಂ ವಿನಾ ತು ಯಃ ಕುರ್ಯಾತ್ಸಂಧ್ಯಾಕಾಲೇ ತು ಮಾರ್ಜನಮ್ |
ತತ್ಸರ್ವಂ ರಾಕ್ಷಸೈರ್ನೀತಂ ನರಕಂ ಸೋಽಧಿಗಚ್ಛತಿ || (ಸಂಗ್ರಹವಚನ)

"ಸಂಧ್ಯಾವಂದನಕಾಲದಲ್ಲಿ ತುಳಸಿಯಿಲ್ಲದೆ ಮಾರ್ಜನವನ್ನು ಮಾಡಬಾರದು. ಹಾಗೆ ಮಾಡಿದರೆ ಅವನು ಮಾಡಿದ ಮಾರ್ಜನದಿಂದ ಬರುವ ಪುಣ್ಯವನ್ನು ರಾಕ್ಷಸರು ಅಪಹರಿಸುವರು. ಅದು ಮಾತ್ರವಲ್ಲ. ಹಾಗೆ ಮಾಡಿದವನು ನರಕವನ್ನು ಪಡೆಯುವನು."

### ಮಾರ್ಜನಕಾಲದಲ್ಲಿ ಮಾಡಬೇಕಾದ ನಿಯಮಗಳು

ಭೂಮೌ ಹಸ್ತೌ ಪ್ರತಿಷ್ಠಾಪ್ಯ ಮಾರ್ಜನಂ ತತ್ರ ಕಾರಯೇತ್ |
ವಿಹಾಯ ತದ್ವಿಮೂಢಾತ್ಮಾ ರೌರವಂ ನರಕಂ ವ್ರಜೇತ್ || (ಸಂಗ್ರಹವಚನ)

"ಎಡಗೈಯಿಂದ ನೆಲವನ್ನು ಮುಟ್ಟಿಕೊಂಡು ಮಾರ್ಜನವನ್ನು ಮಾಡಬೇಕು. ನೆಲವನ್ನು ಮುಟ್ಟದೆ ಮಾಡುವವನು ಮೂರ್ಖನೆನಿಸುವನು. ಅವನು ರೌರವನರಕವನ್ನು ಹೊಂದುವನು."

ಋಗಂತೇ ಮಾರ್ಜನಂ ಕುರ್ಯಾತ್ಪಾದಾಂತೇ ವಾ ಸಮಾಹಿತಃ |
ತ್ರ್ಯರ್ಚಸ್ಯಾಂತೇಽಥವಾ ಕುರ್ಯಾಚ್ಛಿಷ್ಟಾನಾಂ ಮತಮೀದೃಶಮ್ || (ಸ್ಮೃತಿ ವಚನ)

"ಮಾರ್ಜನಮಂತ್ರದಲ್ಲಿ ಮೂರು ಋಕ್ಕುಗಳಿವೆ. ಒಂದೊಂದು ಋಕ್ಕುಗಳಲ್ಲಿ ಮೂರು ಪಾದಗಳಿವೆ. ಆ ಒಂಭತ್ತು ಪಾದಗಳಲ್ಲಿ ಒಂದೊಂದು ಪಾದಗಳನ್ನು ಹೇಳಿ ಮುಗಿಸುವಾಗ ಒಂದೊಂದು ಸಲ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಹೀಗೆ ಒಂಭತ್ತು ಪ್ರೋಕ್ಷಣಗಳನ್ನು ಮಾಡಬೇಕು." ಇದು ಕೆಲವು ಶಿಷ್ಟರ ಮತ.

"ಒಂದೊಂದು ಋಕ್ಕುಗಳು ಮುಗಿಯುವಾಗ ಒಮ್ಮೊಮ್ಮೆ ಪ್ರೋಕ್ಷಣೆ ಮಾಡಿಕೊಳ್ಳಬೇಕು." ಒಂದೊಂದು ಪಾದಗಳು

ಮುಗಿಯುವಾಗ ಮಾಡಬೇಕಾಗಿಲ್ಲ. ಹೀಗೆ ಮೂರು ಸಲ ಪ್ರೋಕ್ಷಣೆ ಮಾಡಿಕೊಳ್ಳಬೇಕು." ಇದು ಮತ್ತೆ ಕೆಲವು ಶಿಷ್ಟರ ಮತ.

"ಮಾರ್ಜನಮಂತ್ರವನ್ನು ಪೂರ್ಣವಾಗಿ ಹೇಳಿ ಮುಗಿಸಿದ ಮೇಲೆ ಒಮ್ಮೆ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಹಿಂದೆ ಹೇಳಿದಂತೆ ಒಂಭತ್ತು ಸಲ ಅಥವಾ ಮೂರು ಸಲ ಪ್ರೋಕ್ಷಣೆ ಮಾಡಿಕೊಳ್ಳಬೇಕಾಗಿಲ್ಲ." ಇದು ಕೆಲವು ಜ್ಞಾನಿಗಳ ಮತ.

"ಈ ಮೂರು ಮತಗಳೂ ಜ್ಞಾನಿಗಳಿಗೆ ಸಂಮತವಾಗಿರುವುದರಿಂದ ಯಾವುದಾದರೊಂದು ಮತವನ್ನು ಚುನಾಯಿಸಿಕೊಳ್ಳಬಹುದು. ಚುನಾಯಿಸುವಾಗ ತಮ್ಮ ಹಿರಿಯರು ಚುನಾಯಿಸಿದ್ದನ್ನೇ ಚುನಾಯಿಸಬೇಕು."

ಕರಾಭ್ಯಾಂ ತು ಕುಶಾನ್ ಧೃತ್ವಾ ಪ್ರಾಕ್ಕೂಲೇಷು ಕುಶೇಷು ಚ |
ಪ್ರಾಙ್ಮುಖೋದಙ್ಮುಖೋ ವಾಪಿ ಸಂಧ್ಯೋಪಾಸ್ತಿಂ ಸಮಾಚರೇತ್ || (ವ್ಯಾಸ ವಚನ)

"ದರ್ಭೆಯ ತುದಿಯು ಪೂರ್ವಾಭಿಮುಖವಾಗಿರುವಂತೆ ದರ್ಭೆಯನ್ನು ಕೆಳಗೆ ಇಡಬೇಕು. ಆ ದರ್ಭೆಯ ಮೇಲೆ ಪೂರ್ವ ಅಥವಾ ಉತ್ತರ ದಿಕ್ಕಿಗೆ ಅಭಿಮುಖವಾಗಿ ಕುಳಿತುಕೊಳ್ಳಬೇಕು. ಕೈಗಳಿಂದ ದರ್ಭೆಯನ್ನು ಧರಿಸಬೇಕು. ಅನಂತರದಲ್ಲಿ ಮಾರ್ಜನವನ್ನು ಮಾಡಬೇಕು."

ಧಾರಾಚ್ಯುತೇನ ತೋಯೇನ ಸಂಧ್ಯೋಪಾಸ್ತಿರ್ವಿಗರ್ಹಿತಾ |
ಪಿತರೋ ನ ಪ್ರಶಂಸಂತಿ ನ ಪ್ರಶಂಸಂತಿ ದೇವತಾಃ ||

"ಮೇಲಿನಿಂದ ಧಾರೆಯಾಗಿ ಸುರಿಯುತ್ತಿರುವ ಕೊಳಾಯಿ ನೀರು ಮುಂತಾದವುಗಳಲ್ಲಿ ಮಾರ್ಜನವನ್ನು ಮಾಡಕೂಡದು. ಈ ವಿಧದಿಂದ ಮಾಡುವ ಮಾರ್ಜನವನ್ನು ದೇವತೆಗಳೂ ಪಿತೃಗಳೂ ಅಂಗೀಕರಿಸುವುದಿಲ್ಲ."

**ಮಾರ್ಜನಜಲವು ತಲೆಯನ್ನು ಬಿಟ್ಟು ಬೇರೆ ಕಡೆ ಬೀಳಬಾರದು**

ಮಂತ್ರಪೂತಜಲಂ ಯಸ್ಮಾದಾಪೋ ಹಿ ಷ್ಠೇತಿ ಮಂತ್ರಿತಮ್ |
ಪತತ್ಯಶುಚಿದೇಶೇಷು ತಸ್ಮಾತ್ತತ್ಪರಿವರ್ಜಯೇತ್ ||

"ಆಪೋ ಹಿ ಷ್ಠಾ ಎಂಬ ಮಂತ್ರದಿಂದ ಜಪಿಸಲ್ಪಟ್ಟ ಜಲವು ಅತ್ಯಂತ ಪರಿಶುದ್ಧವಾದುದು. ಆ ಜಲವು ಅಶುಚಿಯಾದ ಪ್ರದೇಶದಲ್ಲಿ ಬೀಳಕೂಡದು. ತಲೆಯನ್ನು ಬಿಟ್ಟು ಬೇರೆ ಕಡೆಯಲ್ಲಿ ಬಿದ್ದರೆ ಅಶುಚಿಯಾದ ಪ್ರದೇಶದಲ್ಲಿ ಬೀಳುವ ಸಂಭವವಿದೆ. ಆದ್ದರಿಂದ ತಲೆಯಲ್ಲಿಯೇ ಬೀಳಬೇಕು. ಬೇರೆ ಎಲ್ಲಿಯೂ ಬೀಳಕೂಡದು."

**ಮಾರ್ಜನ ಮಾಡುವುದಕ್ಕಾಗಿ ಉಪಯೋಗಿಸುವ ಪಾತ್ರಗಳು**

ನದ್ಯಾಂ ತೀರ್ಥೇ ಹ್ರದೇ ವಾಪಿ ಭಾಜನೇ ಮೃಣ್ಮಯೇಽಪಿ ವಾ |
ಔದುಂಬರೇ ಚ ಸೌವರ್ಣೇ ರಾಜತೇ ದಾರುಸಂಭವೇ ||
ಕೃತ್ವಾ ವಾ ವಾಮಹಸ್ತೇ ತು ಸಂಧ್ಯೋಪಾಸ್ತಿಂ ಸಮಾಚರೇತ್ | (ಸಂಗ್ರಹವಚನ)

"ನದೀ, ತೀರ್ಥ, ಸರೋವರ ಮುಂತಾದ ಜಲಾಶಯಗಳಲ್ಲಿ ಮಾರ್ಜನ ಮಾಡಿ ಕೊಳ್ಳುವುದಾದರೆ ಪಾತ್ರೆಯ ಅವಶ್ಯಕತೆಯಿಲ್ಲ. ಬಲಗೈಯಿಂದ ಆ ಜಲವನ್ನು ಸ್ಪರ್ಶಿಸಿ ಮಾಡಿಕೊಳ್ಳಬಹುದು. ನದೀ ಮುಂತಾದವುಗಳಲ್ಲಿ ಮಾರ್ಜನ ಮಾಡಿಕೊಳ್ಳದೆ ಮನೆಯಲ್ಲಿ ಮಾಡಿಕೊಳ್ಳುವುದಾದರೆ, ಎಡಗೈಯಲ್ಲಿ ಪಾತ್ರೆಗಳನ್ನಿಟ್ಟು ಆ ಪಾತ್ರೆಗಳಲ್ಲಿ ನೀರನ್ನು ತುಂಬಿಸಿ ಆ ನೀರನ್ನು ಬಲಗೈಯಿಂದ ಸ್ಪರ್ಶಿಸುತ್ತಾ ಮಾರ್ಜನ ಮಾಡಿಕೊಳ್ಳಬೇಕು. ಮಣ್ಣಿನ ಪಾತ್ರೆ, ತಾಮ್ರದ ಪಾತ್ರೆ, ಬಂಗಾರದ ಪಾತ್ರೆ, ಬೆಳ್ಳಿಯ ಪಾತ್ರೆ, ಮರದ ಪಾತ್ರೆ ಎಂಬ ಐದು ವಿಧವಾದ ಪಾತ್ರೆಗಳು ಮಾರ್ಜನಕ್ಕಾಗಿ ಜಲವನ್ನು ಇಟ್ಟುಕೊಳ್ಳುವುದಕ್ಕೆ ವಿಹಿತವಾಗಿವೆ. ಯಾವ ಪಾತ್ರೆಯೂ ಸಿಗದಿದ್ದರೆ ಎಡಗೈಯಲ್ಲಿಯೇ ಜಲವನ್ನು ತುಂಬಿಸಿಕೊಂಡು ಬಲಗೈಯಿಂದ ಮಾರ್ಜನವನ್ನು ಮಾಡಿಕೊಳ್ಳಬೇಕು."

ವಾಮಹಸ್ತೇ ಜಲಂ ಕೃತ್ವಾ ಯೇ ತು ಸಂಧ್ಯಾಮುಪಾಸತೇ |
ಸಾ ಸಂಧ್ಯಾ ವೃಷಲೀ ಜ್ಞೇಯಾ ಅಸುರಾಸ್ತೈಸ್ತು ತರ್ಪಿತಾಃ ||

"ಎಡಗೈಯಲ್ಲಿ ನೀರನ್ನು ತುಂಬಿಕೊಂಡು ಮಾರ್ಜನವನ್ನು ಮಾಡುವುದು ತಪ್ಪು. ಆ ರೀತಿಯಿಂದ ಮಾಡುವ ಮಾರ್ಜನವು ಶೂದ್ರಮಾರ್ಜನವೆನಿಸುತ್ತದೆ. ಈ ಶೂದ್ರಮಾರ್ಜನದಿಂದ ದೈತ್ಯರಿಗೆ ತೃಪ್ತಿಯಾಗುತ್ತದೆ." (ಈ ವಾಕ್ಯದಲ್ಲಿ ಮಾರ್ಜನಕ್ಕಾಗಿ ನೀರನ್ನು ಎಡಗೈಯಲ್ಲಿ ತುಂಬಿಕೊಳ್ಳಬಾರದು ಎಂದು ಹೇಳಿದೆ. ಹಿಂದಿನ ವಾಕ್ಯದಲ್ಲಿ ಎಡಗೈಯಲ್ಲಿ ನೀರನ್ನು ಧರಿಸಿಕೊಂಡು ಮಾರ್ಜನವನ್ನು ಮಾಡಬಹುದು ಎಂದು ಹೇಳಿರುತ್ತದೆ. ಈ ಎರಡು ವಾಕ್ಯಗಳಿಗೂ ವಿರೋಧವು ಬಂತು. ಆ ವಿರೋಧವನ್ನು ಪರಿಹರಿಸಲೇಬೇಕು. ಪಾತ್ರೆಗಳು ಸಿಗದಿರುವಾಗ ಎಡಗೈಯಿಂದ ನೀರನ್ನು ಧರಿಸಿಕೊಂಡು ಮಾರ್ಜನವನ್ನು ಮಾಡಬೇಕು ಎಂದು ಮೊದಲನೆಯ ವಾಕ್ಯವು ತಿಳಿಸುತ್ತದೆ. ಪಾತ್ರೆಗಳು ಸಿಕ್ಕಿದಾಗ ಎಡಗೈಯಿಂದ ಜಲವನ್ನು ಧರಿಸಿ ಮಾರ್ಜನವನ್ನು ಮಾಡಕೂಡದು ಎಂದು ಎರಡನೆಯ ವಾಕ್ಯವು ತಿಳಿಸುತ್ತದೆ. ಆದ್ದರಿಂದ ಎರಡು ವಾಕ್ಯಗಳಿಗೂ ವಿರೋಧವಿಲ್ಲ.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ. ಈ ನಿರ್ಣಯಕ್ಕೆ ಆಧಾರವಾಗಿ ಅವರು ಕೊಟ್ಟಿರುವ ಪ್ರಮಾಣವಾಕ್ಯವನ್ನು ಕೆಳಗೆ ಕೊಟ್ಟಿರುತ್ತೇನೆ.

ಪಾತ್ರಾದ್ಯಸಂಭವೇ ಚೈವ ವಾಮಹಸ್ತಸ್ಥಿತೈರ್ಜಲೈಃ |
ಮುಖೇ ಚ ಮಾರ್ಜನಂ ಕುರ್ಯಾತ್ಕರಪಾದೌ ನ ಧಾರಯೇತ್ || (ಸಂಗ್ರಹವಚನ)

"ಪಾತ್ರ, ಉದ್ಧರಣೆ ಮುಂತಾದ ನೀರನ್ನು ಧರಿಸುವ ಪಾತ್ರೆಯಿಲ್ಲದಿರುವಾಗಲೂ ನದೀ, ತೀರ್ಥ, ಕೆರೆ ಮುಂತಾದ ಜಲಾಶಯಗಳಲ್ಲಿ ಮಾರ್ಜನವನ್ನು ಮಾಡದಿರುವಾಗಲೂ, ಎಡಗೈಯಿಂದಲೇ ನೀರನ್ನು ಧರಿಸಿ ಬಲಗೈಯಿಂದ ಮಾರ್ಜನವನ್ನು ಮಾಡಿಕೊಳ್ಳಬೇಕು. ಈ ಮಾರ್ಜನಜಲದ ಬಿಂದುವನ್ನು ತಲೆಯಲ್ಲಿ ಧರಿಸಬೇಕು. ಮುಖದಲ್ಲಿಯೂ ಧರಿಸಬೇಕು. ಕೈಗಳಲ್ಲಿಯೂ, ಕಾಲುಗಳಲ್ಲಿಯೂ ಆ ಜಲದ ಬಿಂದುಗಳು ಬೀಳಬಾರದು."

ನ ಸಂಧ್ಯಾದೀನಿ ಕರ್ಮಾಣಿ ಭಿನ್ನಪಾತ್ರೇ ಮುಖದ್ವಯೇ |
ಮುಖದ್ವಯೇಽಪಿ ಕರ್ತವ್ಯಮುದಪೂರ್ಣೈರ್ಮುಖೈಃ ಕ್ವಚಿತ್ || (ವ್ಯಾಸರ ವಚನ)

"ಒಡೆದು ಹೋದ ಪಾತ್ರೆಯಲ್ಲಿ ಜಲವನ್ನು ತುಂಬಿಸಿ ಸಂಧ್ಯಾವಂದನ ಮುಂತಾದ ಯಾವ ಕಾರ್ಯಗಳನ್ನೂ ಮಾಡಕೂಡದು. ಎರಡು ಮುಖಗಳಿಂದ ಯುಕ್ತವಾಗಿರುವ ಗಿಂಡಿ ಮುಂತಾದವುಗಳಲ್ಲಿ ನೀರನ್ನು ತುಂಬಿಸಿ ಆ ನೀರಿನಿಂದಲೂ ಯಾವ ಕಾರ್ಯವನ್ನೂ ಮಾಡಕೂಡದು. ಬೇರೆ ಪಾತ್ರೆಗಳು ಸಿಗದಿದ್ದಾಗ ಎರಡು ಮುಖಗಳಿಂದಲೂ ಅಥವಾ ಅನೇಕ ಮುಖಗಳಿಂದಲೂ ಯುಕ್ತವಾದ ಪಾತ್ರೆಗಳನ್ನಿಟ್ಟುಕೊಂಡು ಸಂಧ್ಯಾವಂದನ ಮುಂತಾದ ಎಲ್ಲಾ ಕಾರ್ಯಗಳನ್ನು ಮಾಡಬಹುದು."

ಮಾರ್ಜನಾರ್ಚನಬಲಿಕರ್ಮಭೋಜನಾನಿ ದೇವತೀರ್ಥೇನ ಕುರ್ಯಾತ್ || (ಹಾರೀತರವಚನ)

"ಕಿರುಬೆರಳಿನ ಬುಡ ಮತ್ತು ಅಂಗೈ ಇವೆರಡೂ ಒಟ್ಟಿಗೆ ಸೇರುವ ಪ್ರದೇಶವು ದೇವತೀರ್ಥವೆನಿಸುತ್ತದೆ. ಅಂಗುಷ್ಠದ ತುದಿಯಿಂದ ಕಿರುಬೆರಳಿನ ಬುಡ ಅಂದರೆ ದೇವತೀರ್ಥವನ್ನು ಮುಟ್ಟಬೇಕು. ದೇವತೀರ್ಥಕ್ಕೂ, ಅಂಗುಷ್ಠಕ್ಕೂ, ಮಧ್ಯದಲ್ಲಿ ನಿರ್ಮಾಲ್ಯ ತುಳಸೀದಳವನ್ನು ಇಟ್ಟುಕೊಳ್ಳಬೇಕು. ಈ ನಿರ್ಮಾಲ್ಯ ತುಲಸೀದಳವನ್ನು ನೀರಿನಲ್ಲಿ ಮುಳುಗಿಸಿ ಮಾರ್ಜನ ಮಾಡಿಕೊಳ್ಳಬೇಕು. ತುಳಸೀದಳ ಪುಷ್ಪ ಮುಂತಾದವುಗಳನ್ನು ದೇವತೀರ್ಥ ಮತ್ತು ಅಂಗುಷ್ಠಗಳ ಮಧ್ಯದಲ್ಲಿಟ್ಟುಕೊಂಡೇ ಅರ್ಚನೆಯನ್ನು ಮಾಡಬೇಕು. ಅಂಗುಷ್ಠ ಮತ್ತು ದೇವತೀರ್ಥಗಳ ಮಧ್ಯದಲ್ಲಿ ಅನ್ನ ಮುಂತಾದ ಬಲಿಗೆ ಸಂಬಂಧಿಸಿದ ವಸ್ತುಗಳನ್ನಿಟ್ಟುಕೊಂಡೇ ಬಲಿದಾನವನ್ನು ಮಾಡಬೇಕು. ದೇವತೀರ್ಥಪ್ರದೇಶದಿಂದಲೇ ಆಹಾರವನ್ನು ಬಾಯಿಯಲ್ಲಿ ಹಾಕಿಕೊಂಡು ಭೋಜನವನ್ನು ಮಾಡಬೇಕು."

## ಮಾರ್ಜನಾನಂತರದಲ್ಲಿ ಮಾಡಬೇಕಾದ ಕಾರ್ಯ

ಸಾಯಮಗ್ನಿಶ್ಚ ಮೇತ್ಯುಕ್ತ್ವಾ ಪ್ರಾತಃ ಸೂರ್ಯೇತ್ಯಪಃ ಪಿಬೇತ್ |
ಆಪಃ ಪುನಂತು ಮಧ್ಯಾಹ್ನೇ ತತಶ್ಚಾಚಮನಂ ಚರೇತ್ || (ಭರದ್ವಾಜರ ವಚನ)

"ಅಗ್ನಿಶ್ಚ ಮಾ ಮನ್ಯುಶ್ಚ" ಎಂಬ ಮಂತ್ರದಿಂದ ಸಾಯಂಕಾಲದಲ್ಲಿಯೂ "ಸೂರ್ಯಶ್ಚ ಮಾ ಮನ್ಯುಶ್ಚ" ಎಂಬ ಮಂತ್ರದಿಂದ ಪ್ರಾತಃಕಾಲದಲ್ಲಿಯೂ "ಆಪಃ ಪುನಂತು ಪೃಥಿವೀಮ್" ಎಂಬ ಮಂತ್ರದಿಂದ ಮಧ್ಯಾಹ್ನದಲ್ಲಿಯೂ ಮಾರ್ಜನಾನಂತರದಲ್ಲಿ ಜಲವನ್ನು ಮಂತ್ರಿಸಿ ಕುಡಿಯಬೇಕು. ಅನಂತರದಲ್ಲಿ ಆಚಮನವನ್ನು ಮಾಡಬೇಕು."

## ಎರಡನೇ ಸಲ ಮಾರ್ಜನ

ದಧಿಕ್ರಾವ್ಣೇತಿ ದರ್ಭಾಗ್ರೈರಾಪೋ ಹಿ ಷ್ಠಾದಿಭಿಸ್ತ್ರಿಭಿಃ |
ಅನ್ಯೈರ್ಹಿರಣ್ಯವರ್ಣಾಭಿಃ ಪಾವಮಾನೀಭಿರೇವ ಚ ||
ಮಾರ್ಜಯಿತ್ವಾ ತು ಗಾಯತ್ರ್ಯಾ ದ್ರುಪದಾ ನಾಮ ನಾಮತಃ |

ಆಚಮನಾನಂತರದಲ್ಲಿ ಪುನಃ ಮಾರ್ಜನವನ್ನು ಮಾಡಬೇಕು. (1) "ದಧಿಕ್ರಾವ್ಣೋ ಅಕಾರಿಷಂ". (2) "ಆಪೋ ಹಿ ಷ್ಠಾ ಮಯೋಭುವಃ". (3) "ಯೋ ವಃ ಶಿವತಮೋ ರಸಃ". (4) "ತಸ್ಮಾ ಅರಂ ಗಮಾಮವೋ" (5) "ಹಿರಣ್ಯವರ್ಣಾಃ ಶುಚಯಃ". (6) "ಪ್ರಾಜಾಪತ್ಯಂ ಪವಿತ್ರಂ" ಮುಂತಾದ ಮಂತ್ರಗಳು. (7) ಗಾಯತ್ರೀ ಮಂತ್ರ. (8) "ದ್ರುಪದಾ" ಎಂಬ ಮಂತ್ರ ಇವುಗಳು ಎರಡನೆಯ ಸಲ ಮಾರ್ಜನವನ್ನು ಮಾಡುವಾಗ ಹೇಳಲ್ಪಡಬೇಕಾದವುಗಳು.

ಪ್ರೋಕ್ಷ್ಯಾವಶಿಷ್ಟಮುದಕಂ ಕೃತ್ವಾ ದಕ್ಷಕರೋದರೇ |
ನಾಸಾಸಮೀಪಮಾನೀಯ ದ್ರುಪದಾಮಿತ್ಯೃಚಂ ಜಪೇತ್ ||
"ದ್ರುಪದಾ ದಿವೇನ್ಮುಮುಚಾನಃ ಸ್ವಿನ್ನಃ ಸ್ನಾತ್ವಮಲಾದಿವ |
ಪೂತಂ ಪವಿತ್ರೇಣೈವಾಜ್ಯಮಾಪಃ ಶುಂಧಂತು ಮೈನಸಮ್ ||"
ಪೂರಕೇಣೋರ್ಧ್ವಮಾಕೃಷ್ಯ ದಕ್ಷಿಣೇ ತದಪಃ ಕ್ಷಿಪೇತ್ | (ಯಮವಚನ)

"ಎರಡನೆಯ ಸಲ ಮಾರ್ಜನವನ್ನು ಮಾಡಿ ಮುಗಿಸಿದ ಮೇಲೆ, ಮಾರ್ಜನಕ್ಕಾಗಿ ಸ್ವೀಕರಿಸಿದ ಜಲದಲ್ಲಿ ಉಳಿದ ಭಾಗವನ್ನು ಬಲಗೈಯಲ್ಲಿ ಹಾಕಿಕೊಳ್ಳಬೇಕು. ಆ ಕೈಯನ್ನು ಮೂಗಿನವರೆಗೆ ತಂದು "ದ್ರುಪದಾ" ಎಂಬ ಮಂತ್ರವನ್ನು ಜಪಿಸಬೇಕು. ಬಲಮೂಗಿನ ರಂಧ್ರದಿಂದ ಆ ಜಲವನ್ನು ಮೇಲೆ ಸೆರೆದು ಕೆಳಗೆ ಬಿಡಬೇಕು."

ತಜ್ಜಲಂ ನಾವಲೋಕ್ಯಾಥ ವಾಮಭಾಗೇ ಕ್ಷಿತೌ ಕ್ಷಿಪೇತ್ | (ಪಾರಿಜಾತವಚನ)

"ದ್ರುಪದಾ" ಎಂಬ ಮಂತ್ರದಿಂದ ಜಪಿಸಿದ ಜಲವನ್ನು ನೋಡಬಾರದು. ಎಡಭಾಗದಲ್ಲಿ ಭೂಮಿಯಲ್ಲಿ ಚೆಲ್ಲಬೇಕು. ಇದು ಪಾರಿಜಾತ ಎಂಬ ಗ್ರಂಥದಲ್ಲಿ ಹೇಳಿರುವುದು.

ಋತಂ ಚೇತಿ ಪಠಿತ್ವಾ ತು ವಾಮಭಾಗೇ ಕ್ಷಿತೌ ಕ್ಷಿಪೇತ್ || (ಪ್ರಜಾಪತಿವಚನ)

"ಅದೇ ಜಲವನ್ನು "ಋತಂ ಚ ಸತ್ಯಂ ಚ" ಎಂಬ ಮಂತ್ರದಿಂದ ಜಪಿಸಬೇಕು. ಎಡಭಾಗದಲ್ಲಿ ಭೂಮಿಯಲ್ಲಿ ಚೆಲ್ಲಬೇಕು." ಇದು ಪ್ರಜಾಪತಿಯ ವಚನ.

## ದ್ರುಪದಾಂ ಎಂಬ ಮಂತ್ರದಿಂದ ಜಪಿಸಿದ ಫಲ

ಪಾಣಿನಾಪಃ ಸಮಾದಾಯ ತ್ರಿಃ ಪಠೇದ್‌ದ್ರುಪದಾಮೃಚಮ್ |
ತತ್ತೋಯಂ ಭುವಿ ವಿನ್ಯಸ್ಯ ಸರ್ವಪಾಪೈಃ ಪ್ರಮುಚ್ಯತೇ ||

ಯ ಏವಂ ದ್ರುಪದಾಂ ನಿತ್ಯಂ ತ್ರಿರಹ್ನ: ಪ್ರಯತೋ ಜಪೇತ್ |
ನ ಪರ್ಯುಷಂತಿ ಪಾಪಾನಿ ತಸ್ಯ ದೇಹಾದ್ವಿಜನ್ಮನ: || (ಯೋಗಿಯಾಜ್ಞವಲ್ಕ್ಯರ ವಚನ)

"ಮಾರ್ಜನಕ್ಕೆ ಉಪಯೋಗಿಸಿ ಉಳಿದ ಜಲವನ್ನು ಮೂರು ಸಲ "ದ್ರುಪದಾ" ಎಂಬ ಮಂತ್ರದಿಂದ ಬಲಗೈಯಿಂದ ಜಪಿಸಬೇಕು. ಅನಂತರದಲ್ಲಿ ಆ ನೀರನ್ನು ಭೂಮಿಯಲ್ಲಿ ಚೆಲ್ಲಬೇಕು. ಹೀಗೆ ಮಾಡುವವನ ಎಲ್ಲಾ ಪಾಪಗಳೂ ಅವನನ್ನು ಬಿಟ್ಟು ಹೋಗುವವು. ಪ್ರತಿದಿನದಲ್ಲಿಯೂ ಪ್ರಾತ:ಕಾಲದಲ್ಲಿಯೂ, ಮಧ್ಯಾಹ್ನಕಾಲದಲ್ಲಿಯೂ, ಸಾಯಂಕಾಲದಲ್ಲಿಯೂ ಪರಿಶುದ್ಧನಾಗಿ "ದ್ರುಪದಾ" ಎಂಬ ಮಂತ್ರವನ್ನು ಜಪಿಸಬೇಕು. ಹೀಗೆ ಜಪಿಸುವವನ ದೇಹದಿಂದ ಎಲ್ಲಾ ಪಾಪಗಳೂ ಓಡುತ್ತವೆ. ಆ ದೇಹದಲ್ಲಿ ಪುನ: ಪಾಪಗಳು ಹುಟ್ಟಲಾರವು."

(ಕೆಲವು ಸ್ಮೃತಿಕಾರರು "ಋತಂ ಚ ಸತ್ಯಂ ಚ" ಎಂಬ ಮಂತ್ರದಿಂದ ಜಲವನ್ನು ಜಪಿಸಿ ಎಡಭಾಗದಲ್ಲಿ ಚೆಲ್ಲಬೇಕೆಂದು ಹೇಳಿರುವರು. ಮತ್ತೆ ಕೆಲವರು "ದ್ರುಪದಾ" ಎಂಬ ಮಂತ್ರದಿಂದ ಜಪಿಸಿ ಚೆಲ್ಲಬೇಕೆಂದು ಹೇಳಿರುವರು. ಈ ಎರಡು ಸಂಪ್ರದಾಯಗಳಲ್ಲಿ ತಮ್ಮ ಹಿರಿಯರು ಆಶ್ರಯಿಸಿದ ಸಂಪ್ರದಾಯವನ್ನು ಸ್ವೀಕರಿಸಬೇಕು.) ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

## ಅರ್ಘ್ಯಪ್ರದಾನ

ಉತ್ಥಾಯಾರ್ಕಂ ಪ್ರತಿ ಪ್ರೋಕ್ಷೇದ್ಗಾಯತ್ರ್ಯಾ ತ್ರ್ಯಂಜಲೀನ್ ದ್ವಿಜ: |
ಆದಿತ್ಯಮಂಡಲಾಂತ:ಸ್ಥಂ ಧ್ಯಾತ್ವಾ ವಿಷ್ಣುಂ ಸನಾತನಮ್ || (ವಸಿಷ್ಠರ ವಚನ)

"ಎರಡನೇ ಸಲ ಮಾರ್ಜನವನ್ನು ಮಾಡಿ ಮುಗಿಸಿದ ಮೇಲೆ ಎದ್ದು ನಿಲ್ಲಬೇಕು. ಸೂರ್ಯನನ್ನು ನೋಡಬೇಕು. ಅಥವಾ ಸೂರ್ಯನಿರುವ ದಿಕ್ಕನ್ನು ನೋಡಬೇಕು. ಸೂರ್ಯಾಂತರ್ಗತನಾದ ನಾರಾಯಣನನ್ನು ಸ್ಮರಿಸಬೇಕು. ಬೊಗಸೆಯಿಂದ ನೀರನ್ನು ತೆಗೆಯಬೇಕು. ಸೂರ್ಯನಿಗೆ ಅಭಿಮುಖವಾಗಿ ಚೆಲ್ಲಬೇಕು. ಇದು ಸೂರ್ಯಾರ್ಘ್ಯವೆನಿಸುತ್ತದೆ. ಹೀಗೆ ಮೂರು ಸಲ ಸೂರ್ಯಾರ್ಘ್ಯವನ್ನು ಕೊಡಬೇಕು."

ಕರಾಭ್ಯಾಂ ತೋಯಮಾದಾಯ ಗಾಯತ್ರ್ಯಾ ಚಾಭಿಮಂತ್ರಿತಮ್ |
ಆದಿತ್ಯಾಭಿಮುಖಸ್ತಿಷ್ಠನ್ ತ್ರಿರೂರ್ಧ್ವಮಥ ಉತ್ಕ್ಷಿಪೇತ್ || (ವ್ಯಾಸವಚನ)

"ಸೂರ್ಯನಿಗೆ ಅಭಿಮುಖವಾಗಿ ನಿಲ್ಲಬೇಕು. ಎರಡು ಕೈಗಳನ್ನು ಒಟ್ಟುಗೂಡಿಸಿ ನೀರನ್ನು ಎತ್ತಬೇಕು. ಗಾಯತ್ರೀ ಮಂತ್ರದಿಂದ ಆ ನೀರನ್ನು ಜಪಿಸಬೇಕು. ಮೇಲ್ಮುಖವಾಗಿ ಚೆಲ್ಲಬೇಕು. ಹೀಗೆ ಮೂರು ಸಲ ಮಾಡಬೇಕು."

ತ್ರಿಸಂಧ್ಯಾಸು ಚ ಗಾಯತ್ರ್ಯಾ ಪೂರಿತಂ ಚಾಂಜಲಿತ್ರಯಂ |
ಅಪ್ಸುಕ್ಷಿಪೇದರ್ಕಮುಖೋ ಮಧ್ಯಾಹ್ನೇ ಚೋತ್ತರಾಮುಖ: || (ಯಮವಚನ)

"ಗಾಯತ್ರೀಮಂತ್ರದಿಂದ ಬೊಗಸೆಯಲ್ಲಿ ನೀರನ್ನು ತುಂಬಬೇಕು. ಬೆಳಿಗ್ಗೆ ಮತ್ತು ಸಂಜೆಯಲ್ಲಿ ಸೂರ್ಯಾಭಿಮುಖನಾಗಿಯೂ ಮಧ್ಯಾಹ್ನದಲ್ಲಿ ಉತ್ತರದಿಕ್ಕಿಗೆ ಅಭಿಮುಖನಾಗಿಯೂ ಆ ನೀರನ್ನು ನೀರಿನಲ್ಲಿ ಚೆಲ್ಲಬೇಕು."

ಮಧ್ಯಾಹ್ನೇ ಹಂಸಮಂತ್ರತ: | (ಯಮ ವಚನ)

"ಮಧ್ಯಾಹ್ನಸಂಧ್ಯಾವಂದನಕಾಲದಲ್ಲಿ "ಹಂಸ: ಶುಚಿಷದ್ವಸು:" ಎಂಬ ಮಂತ್ರದಿಂದ ನೀರನ್ನು ಚೆಲ್ಲಬೇಕು." ಇದು ಯಮದೇವರು ಹೇಳಿದ್ದು.

ಸೂರ್ಯಾಯೈವ ತು ಗಾಯತ್ರ್ಯಾ ತ್ರಿಸಂಧ್ಯಾಸ್ವಂಜಲಿಂ ಕ್ಷಿಪೇತ್ |
ಪ್ರಾತರ್ಮಧ್ಯಾಹ್ನಯೋಸ್ತಿಷ್ಠನ್ ಸಾಯಮಾಸೀನ ಏವ ಚ || (ಶಂಖರ ವಚನ)

"ಸೂರ್ಯದೇವರಿಗೆ ಮೂರು ಸಂಧ್ಯಾಕಾಲಗಳಲ್ಲಿಯೂ ಅರ್ಘ್ಯವನ್ನು ಕೊಡಲೇಬೇಕು. ಬೆಳಿಗ್ಗೆ ಮತ್ತು ಮಧ್ಯಾಹ್ನಗಳಲ್ಲಿ ನಿಂತು ಕೊಡಬೇಕು. ಸಾಯಂಕಾಲದಲ್ಲಿ ಕುಳಿತು ಕೊಡಬೇಕು."

**ಸಾಯಂಕಾಲದಲ್ಲಿ ನೀರನಲ್ಲಿ ಅರ್ಘ್ಯಜಲವನ್ನು ಚೆಲ್ಲಬಾರದು**

ಉಪವಿಶ್ಯ ತು ಸಾಯಾಹ್ನೇ ಜಲೇ ತ್ವರ್ಘ್ಯಂ ನ ನಿಕ್ಷಿಪೇತ್ |
ನಿಕ್ಷಿಪೇದ್ಯದಿ ಮೂಢಾತ್ಮಾ ರೌರವಂ ನರಕಂ ವ್ರಜೇತ್ || (ಶಂಖರ ವಚನ)

"ಸಾಯಂಕಾಲದಲ್ಲಿ ಕುಳಿತುಕೊಂಡು ಅರ್ಘ್ಯವನ್ನು ಕೊಡುವಾಗ, ನೀರಿನಲ್ಲಿ ಅರ್ಘ್ಯಜಲವನ್ನು ಚೆಲ್ಲಬಾರದು. ಹಾಗೆ ಚೆಲ್ಲುವ ಮೂರ್ಖನು ರೌರವ ನರಕದಲ್ಲಿ ಬೀಳುವನು.

**ಅರ್ಘ್ಯಕಾಲವು ದಾಟಿದರೆ ನಾಲ್ಕನೆಯ ಅರ್ಘ್ಯವನ್ನು ಕೊಡಬೇಕು**

ಚತುರರ್ಘ್ಯಂ ತು ಗಾಯತ್ರ್ಯಾ ಶಿರೋವ್ಯಾಹೃತಿಸಂಪುಟಮ್ |
ಅರ್ಘ್ಯಪ್ರದಾನಮಾತ್ರೇಣ ಕಾಲಾತೀತಂ ನ ದೋಷಭಾಕ್ || (ಶಂಖರ ವಚನ)

"ಶಿರೋಮಂತ್ರವನ್ನು ಕೊನೆಯಲ್ಲಿಯೂ, ವ್ಯಾಹೃತಿಮಂತ್ರವನ್ನು ಆರಂಭದಲ್ಲಿಯೂ, ಅವೆರಡರ ಮಧ್ಯದಲ್ಲಿ ಗಾಯತ್ರಿಯನ್ನೂ, ಜಪಿಸುತ್ತಾ ನಾಲ್ಕನೆಯ ಅರ್ಘ್ಯವನ್ನು ಕೊಡಬೇಕು. ಈ ಅರ್ಘ್ಯವನ್ನು ಕೊಟ್ಟದ್ದರಿಂದ ಸಕಾಲದಲ್ಲಿ ಸೂರ್ಯಾರ್ಘ್ಯವನ್ನು ಕೊಡದಿದ್ದುದರಿಂದ ಬಂದ ದೋಷವು ದೂರವಾಗುತ್ತದೆ."

**ಅರ್ಘ್ಯವನ್ನು ಕೊಡುವ ರೀತಿ**

ಗೋಶೃಂಗಮಾತ್ರಮುದ್ಧೃತ್ಯ ರವಿಂ ವೀಕ್ಷ್ಯ ಜಲಾಂಜಲಿಮ್ |
ದ್ವೌ ಪಾದೌ ಚ ಸಮೌ ಕೃತ್ವಾ ಪಾರ್ಷ್ಣಿಮುದ್ಧೃತ್ಯ ನಿಕ್ಷಿಪೇತ್ ||
ಮುಕ್ತಹಸ್ತೇನ ದಾತವ್ಯಂ ಮುದ್ರಾಂ ತತ್ರ ನ ಕಾರಯೇತ್ |
ತರ್ಜನ್ಯಂಗುಷ್ಠಯೋಗೇನ ಮುದ್ರಿಕಾ ರಾಕ್ಷಸೀ ಸ್ಮೃತಾ ||
ರಾಕ್ಷಸೀಮುದ್ರಿಕಾರ್ಘ್ಯೇನ ತತ್ತೋಯಂ ರುಧಿರಂ ಸ್ಮೃತಮ್ || (ಸಂಗ್ರಹ ವಚನ)

"ಎದ್ದು ನಿಲ್ಲಬೇಕು. ಬೊಗಸೆಯಲ್ಲಿ ನೀರನ್ನು ತುಂಬಬೇಕು. ಎರಡು ಕಾಲುಗಳನ್ನು ಒಟ್ಟುಗೂಡಿಸಬೇಕು. ಸೂರ್ಯನನ್ನು ನೋಡಬೇಕು. ಬೊಗಸೆಯನ್ನು ಗೋವಿನ ಕೊಂಬಿನಷ್ಟು ಎತ್ತರದವರೆಗೆ ಎತ್ತಬೇಕು. ಕಾಲಿನ ಹಿಮ್ಮಡಿಯನ್ನು ಎತ್ತಬೇಕು. ನೀರನ್ನು ಮೇಲ್ಮುಖವಾಗಿ ಚೆಲ್ಲಬೇಕು. ಚೆಲ್ಲುವಾಗ ಬೊಗಸೆಯ ಬೆರಳುಗಳನ್ನೆಲ್ಲಾ ಬಿಡಿಸುತ್ತಾ ಚೆಲ್ಲಬೇಕು. ತರ್ಜನೀ ಅಂದರೆ ತೋರ್ಬೆರಳೂ, ಅಂಗುಷ್ಠಬೆರಳೂ ಒಟ್ಟಿಗೆ ಸೇರಿದರೆ ರಾಕ್ಷಸೀಮುದ್ರಿಕೆಯೆನಿಸುತ್ತದೆ. ಈ ರಾಕ್ಷಸೀಮುದ್ರಿಕೆಯಿಂದ ಚೆಲ್ಲಿದ ನೀರು ರಕ್ತಕ್ಕೆ ಸಮವಾಗುತ್ತದೆ. ಆದ್ದರಿಂದ ಆ ಮುದ್ರೆಯಿಂದ ಅಂದರೆ ಬೆರಳುಗಳನ್ನು ಒಟ್ಟುಗೂಡಿಸಿ ಚೆಲ್ಲಬಾರದು.

ಜಲೇಷ್ವರ್ಘ್ಯಂ ಪ್ರದಾತವ್ಯಂ ಜಲಾಭಾವೇ ಶುಚಿಸ್ಥಲಮ್ |
ಸಂಪ್ರೋಕ್ಷ್ಯ ವಾರಿಣಾ ಸಮ್ಯಕ್ ತತೋಽರ್ಘ್ಯಾಣಿ ಪ್ರದಾಪಯೇತ್ || (ಸಂಗ್ರಹ ವಚನ)

"ನೀರಿನಲ್ಲಿಯೇ ಅರ್ಘ್ಯವನ್ನು ಕೊಡಬೇಕು. ನದೀ ಮುಂತಾದ ಜಲಾಶಯಗಳಿಲ್ಲದಿದ್ದರೆ ಶುದ್ಧವಾದ ಭೂಮಿಯಲ್ಲಿಯೂ ಕೊಡಬಹುದು. ಭೂಮಿಯಲ್ಲಿ ಕೊಡುವುದಾದರೆ ನೀರಿನಿಂದ ಭೂಮಿಯನ್ನು ಚೆನ್ನಾಗಿ ಪ್ರೋಕ್ಷಣೆ ಮಾಡಿಕೊಂಡು ಕೊಡಬೇಕು."

ಯೋ ದದಾತಿ ರವೇರರ್ಘ್ಯಂ ಧರಿತ್ರ್ಯಾಮಪ್ಯನಾಪದಿ |
ತದರ್ಘ್ಯಂ ರುಧಿರಂ ಭೂಯಾತ್ತಂ ಚ ಭೂಮಿಃ ಶಪಿಷ್ಯತಿ || (ಬ್ರಹ್ಮಾಂಡ ಪುರಾಣ)

"ಆಪತ್ತುಗಳು ಯಾವುದೂ ಇಲ್ಲದಿರುವಾಗ ನೀರಿನಲ್ಲಿಯೇ ಅರ್ಘ್ಯಜಲವನ್ನು ಚೆಲ್ಲಬೇಕು. ಹಾಗೆ ಚೆಲ್ಲದ ಭೂಮಿಯಲ್ಲಿಯೇ ಚೆಲ್ಲಿದರೆ ಆ ಅರ್ಘ್ಯಜಲವು ರಕ್ತಕ್ಕೆ ಸಮವಾಗುತ್ತದೆ. ಅವನನ್ನು ಭೂದೇವಿಯು ಶಪಿಸುವಳು."

ವಜ್ರೀಭೂತಂ ರವೇರರ್ಘ್ಯಂ ಬ್ರಾಹ್ಮಣೈರಭಿಮಂತ್ರಿತಮ್ |
ತಸ್ಮಾದಾಪದಿ ವಿಪ್ರೇಂದ್ರ ಸಿಕ್ತಾಽಽಪಸ್ತತ್ಸ್ಥಲೇ ತೃಣೈಃ ||
ಅಂತರೀಕೃತ್ಯ ತತ್ಸ್ಥಾನಾದಗ್ನಿಮೂರ್ಧೇತ್ಯೃಚು ಪಠೇತ್ |

"ಬ್ರಾಹ್ಮಣರು ಗಾಯತ್ರೀಮಂತ್ರದಿಂದ ಜಪಿಸಿದ ಜಲವು ವಜ್ರಾಯುಧದಂತೆ ಅತಿಭಯಂಕರವಾಗಿರುತ್ತದೆ. ಆಪತ್ಕಾಲದಲ್ಲಿ ಹುಲ್ಲಿನಿಂದ ಭೂಮಿಯನ್ನು ಮುಚ್ಚಿ ಆ ಹುಲ್ಲಿನ ಮೇಲೆ ಅರ್ಘ್ಯಜಲವನ್ನು ಚೆಲ್ಲಬೇಕು. ಅರ್ಘ್ಯವನ್ನು ಕೊಟ್ಟ ಮೇಲೆ ಆ ಹುಲ್ಲನ್ನು ಎಸೆದು "ಅಗ್ನಿಮೂರ್ಧಾ ದಿವಃ" ಎಂಬ ಮಂತ್ರವನ್ನು ಜಪಿಸಬೇಕು."

ಜಲೇ ತ್ವರ್ಘ್ಯಂ ಪ್ರದಾತವ್ಯಂ ಜಲಾಭಾವೇ ಶುಚಿಸ್ಥಲೇ |
ಸಂಪ್ರೋಕ್ಷ್ಯ ವಾರಿಣಾ ಸಮ್ಯಕ್ತತೋಽರ್ಘ್ಯಾಣಿ ಪ್ರದಾಪಯೇತ್ || (ದಕ್ಷರ ವಚನ)

"ನೀರಿನಲ್ಲಿಯೇ ಅರ್ಘ್ಯವನ್ನು ಕೊಡಬೇಕು. ನೀರು ಇಲ್ಲದಿದ್ದರೆ ಶುದ್ಧವಾದ ನೆಲವನ್ನು ಶುದ್ಧವಾದ ಜಲದಿಂದ ಚೆನ್ನಾಗಿ ಪ್ರೋಕ್ಷಿಸಿ ಆ ಭೂಮಿಯಲ್ಲಿ ಕೊಡಬೇಕು."

ಅಪೋಂಜಲಿಗೃಹೀತಾಸ್ತು ಸೂರ್ಯಾಭಿಮುಖಮುತ್ಸೃಜೇತ್ |
ತೇಜೋಽಸೀತಿ ಜಪೇನ್ಮಂತ್ರಂ ಮೂರ್ಧ್ನಿ ಬದ್ಧಾಂಜಲಿಸ್ತತಃ || (ಯಮ ವಚನ)

"ಬೊಗಸೆಯಿಂದ ಎತ್ತಲ್ಪಟ್ಟ ನೀರನ್ನು ಸೂರ್ಯಾಭಿಮುಖವಾಗಿ ಬಿಡಬೇಕು. ಎರಡು ಕೈಗಳನ್ನು ತಲೆಯ ಮೇಲೆ ಎತ್ತಬೇಕು. ಬೊಗಸೆಯಂತೆ ಒಟ್ಟುಗೂಡಿಸಬೇಕು. "ತೇಜೋಽಸಿ" ಎಂಬ ಮಂತ್ರವನ್ನು ಜಪಿಸಬೇಕು."

ಯಃ ಸಂಧ್ಯಾಂ ಕಾಲತಃ ಪ್ರಾಪ್ತಾಮಾಲಸ್ಯಾದತಿವರ್ತತೇ |
ಸೂರ್ಯಹತ್ಯಾಮವಾಪ್ನೋತಿ ಉಲೂಕತ್ವಮವಾಪ್ನುಯಾತ್ || (ಸಂವರ್ತರ ವಚನ)

"ಆಲಸ್ಯದಿಂದ ಸಕಾಲದಲ್ಲಿ ಸಂಧ್ಯಾವಂದನವನ್ನು ಮಾಡದವನು ಸೂರ್ಯಹತ್ಯಾದೋಷವನ್ನು ಪಡೆಯುವನು. ಕೊನೆಗೆ ಗೂಬೆಯ ಜನ್ಮವನ್ನು ಪಡೆಯುವನು."

## ಪ್ರದಕ್ಷಿಣ ಮತ್ತು ಆಚಮನ

ಅಸಾವಾದಿತ್ಯೋ ಬ್ರಹ್ಮೇತಿ ಕೃತ್ವಾಽಽತ್ಮಾನಂ ಪ್ರದಕ್ಷಿಣಮ್ |
ದೈತ್ಯಹಿಂಸಾನಿವೃತ್ತ್ಯರ್ಥಮುಪವಿಶ್ಯ ದ್ವಿರಾಚಮೇತ್ || (ವ್ಯಾಸರ ವಚನ)

"ಸೂರ್ಯಾಂತರ್ಯಾಮಿಯೂ, ಗಾಯತ್ರೀಮಂತ್ರದಿಂದ ಹೊಗಳಲ್ಪಡುವವನೂ, ಆಗಿರುವ ಶ್ರೀಹರಿಯನ್ನು ಅರ್ಘ್ಯ ಪ್ರದಾನದಿಂದ ಪೂಜಿಸಿದೆವು. ಇನ್ನು ಅವನ ಪ್ರದಕ್ಷಿಣೆಯನ್ನು ಮಾಡಬೇಕು. ಆಕಾಶದಲ್ಲಿರುವ ಸೂರ್ಯನಿಗೆ ಭೂಮಿಯಲ್ಲಿರುವ ನಾವು ಪ್ರದಕ್ಷಿಣೆ ಮಾಡುವುದು ಅಶಕ್ಯ. ಅದಕ್ಕಾಗಿ ನಾವೇ ಪ್ರದಕ್ಷಿಣಾಕಾರವಾಗಿ ಸುತ್ತಬೇಕು. ಇದೇ ಸೂರ್ಯಾಂತರ್ಯಾಮಿಯಾದ ನಾರಾಯಣನ ಪ್ರದಕ್ಷಿಣೆಯೆಂದು ಭಾವಿಸಬೇಕು."

"ಈ ಪ್ರದಕ್ಷಿಣೆಯನ್ನು ಮಾಡುವಾಗ "ಅಸಾವಾದಿತ್ಯೋ ಬ್ರಹ್ಮ" ಎಂಬ ಮಂತ್ರವನ್ನು ಹೇಳಬೇಕು. ಪ್ರದಕ್ಷಿಣೆಯನ್ನು ಈ ರೀತಿಯಿಂದ ಮಾಡಿ ಮುಗಿಸಬೇಕು. ಆ ಮೇಲೆ ಕುಳಿತುಕೊಳ್ಳಬೇಕು. ಮೇಲ್ಕಂಡ ಸೂರ್ಯಾರ್ಘ್ಯ ಪ್ರದಾನದಿಂದ ಸೂರ್ಯದೇವರ ಶತ್ರುಗಳಾದ "ಮಂದೇಹ" ಎಂಬ ದೈತ್ಯರು ಸಾಯುವರು. ಇದರಿಂದ ದೈತ್ಯವಧ ಎಂಬ ದೋಷವು ನಮಗೆ ಬರುತ್ತದೆ. ಆ ದೋಷವನ್ನು ಕಳೆದುಕೊಳ್ಳುವುದಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಬೇಕು. ಪ್ರದಕ್ಷಿಣೆಯನ್ನೂ ಎರಡು ಸಲ ಆಚಮನವನ್ನೂ ಮಾಡಬೇಕು. ಈ ಪ್ರದಕ್ಷಿಣೆಯಿಂದಲೂ ಆಚಮನಗಳಿಂದಲೂ ದೈತ್ಯವಧದೋಷವು ದೂರವಾಗುತ್ತದೆ

## ಪ್ರದಕ್ಷಿಣೆಯನ್ನು ಮಾಡುವ ಕ್ರಮ

ಪಾಣಿನಾ ಜಲಮಾದಾಯ ಸ್ರವನ್ ಕುರ್ಯಾತ್ಪ್ರದಕ್ಷಿಣಮ್ | (ಪಿತಾಮಹ ವಚನ)

"ಕೈಯಿಂದ ನೀರನ್ನು ತೆಗೆದುಕೊಳ್ಳಬೇಕು. ಆ ನೀರನ್ನು ಧಾರೆಯಾಗಿ ಸುರಿಸುತ್ತಾ ಪ್ರದಕ್ಷಿಣೆಯನ್ನು ಮಾಡಬೇಕು."

## ಅರ್ಘ್ಯ ಮತ್ತು ಆಚಮನಗಳ ಫಲ

ಮಂದೇಹಾನಾಂ ವಧಾರ್ಥಾಯ ಪ್ರಕ್ಷಿಪೇದುದಕಾಂಜಲಿಮ್ |
ಪ್ರಾಯಶ್ಚಿತ್ತಾರ್ಥಮಾಚಮ್ಯ ಮುಚ್ಯತೇ ದೈತ್ಯಹತ್ಯಯಾ || (ಪಿತಾಮಹ ವಚನ)

"ಮಂದೇಹ ಎಂಬ ದೈತ್ಯರನ್ನು ಸಂಹರಿಸುವುದಕ್ಕಾಗಿ ಸೂರ್ಯಾರ್ಘ್ಯವನ್ನು ಕೊಡಬೇಕು. ದೈತ್ಯರ ವಧದಿಂದ ಬಂದಿರುವ ದೋಷದ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಬೇಕು. ಸೂರ್ಯಾರ್ಘ್ಯವನ್ನು ಕೊಟ್ಟ ಮೇಲೆ ಮಾಡುವ ಪ್ರದಕ್ಷಿಣ ಮತ್ತು ಎರಡು ಆಚಮನಗಳೇ ಪ್ರಾಯಶ್ಚಿತ್ತಗಳೆನಿಸುತ್ತವೆ. ಈ ಪ್ರಾಯಶ್ಚಿತ್ತಗಳಿಂದ ದೈತ್ಯವಧ ದೋಷವು ದೂರವಾಗುತ್ತದೆ."

ರಕ್ಷಾಂಸಿ ವಾ ಪುರೋಽನುವಾಕೇ ತಪೋಽಗ್ರಮತಿಷ್ಠಂತೇತಾನ್ ಪ್ರಜಾಪತಿರ್ವರೇಣೋಪಾಮಂತ್ರಯತ, ತಾನಿ ವರಮವೃಣತಾದಿತ್ಯೋ ನೋ ಯೋದ್ಧಾ ಇತಿ, ತಾನ್ ಪ್ರಜಾಪತಿರಬ್ರವೀದ್ಯೋಧಯಧ್ವಮಿತಿ, ತಸ್ಮಾದುತ್ತಿಷ್ಠಂತಂ ಹ ವಾ ತಾನಿ ರಕ್ಷಾಂಸ್ಯಾದಿತ್ಯಂ ಯೋಧಯಂತಿ ಯಾವದಸ್ತಮನ್ವಗಾತ್, ತಾನಿ ಹ ವಾ ರಕ್ಷಾಂಸಿ ಗಾಯತ್ರಿಯಾಭಿಮಂತ್ರಿತೇನಾಂಭಸಾ ಶಾಮ್ಯಂತಿ ತದು ಹ ವಾ ಏತೇ ಬ್ರಹ್ಮವಾದಿನಃ ಸೂರ್ಯಾಭಿಮುಖಾಃ ಸಂಧ್ಯಾಯಾಂ ಗಾಯತ್ರ್ಯಭಿಮಂತ್ರಿತಾ ಅಪ ಊರ್ಧ್ವಂ ವಿಕ್ಷಿಪಂತಿ. ತಾ ಏತಾ ಆಪೋ ವಜ್ರೀಭೂತ್ವಾ ಮಂದೇಹಾರುಣೇ ದ್ವಿಪೇ ಪ್ರಕ್ಷಿಪಂತಿ, ಯತ್ಪ್ರದಕ್ಷಿಣಂ ಪ್ರಕ್ರಮಂತಿ ತೇನ ಪಾಪ್ಮಾನಮವಧೂನ್ವಂತಿ, ಉದ್ಯಂತಮಸ್ತಮಯಂತಮಾದಿತ್ಯಮಭಿಧ್ಯಾಯನ್ ಬ್ರಾಹ್ಮಣೋ ವಿದ್ವಾನ್ ಸಕಲಭದ್ರಮಶ್ನುತೇ, ಅಸಾವಾದಿತ್ಯೋ ಬ್ರಹ್ಮೇತಿ, ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ಯ ಏವಂ ವೇದ. (ಯಜುರ್ವೇದಸ್ವಾಧ್ಯಾಯಬ್ರಾಹ್ಮಣವಾಕ್ಯ)

"ಮಂದೇಹ ಎಂದು ಪ್ರಸಿದ್ಧರಾದ ರಾಕ್ಷಸರು ಆದಿಕಾಲದಲ್ಲಿ ಬ್ರಹ್ಮದೇವರನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದರು. ಬ್ರಹ್ಮದೇವರು ಅವರ ತಪಸ್ಸಿಗೆ ಮೆಚ್ಚಿದರು. ಆ ರಾಕ್ಷಸರು ಬೇಡಿದ ವರಗಳನ್ನು ಕೊಡುವುದಾಗಿ ಹೇಳಿದರು. ಆ ರಾಕ್ಷಸರೂ ಸೂರ್ಯನ ಜೊತೆಯಲ್ಲಿ ಯುದ್ಧವನ್ನು ಯಾವಾಗಲೂ ಮಾಡುತ್ತಿರುವಂತೆ ವರವನ್ನು ಬೇಡಿದರು. ಬ್ರಹ್ಮದೇವರೂ ಆ ವರವನ್ನು ಕೊಟ್ಟರು. ಅಂದಿನಿಂದ ಬ್ರಹ್ಮದೇವರ ವರಬಲದಿಂದ ಕೊಬ್ಬಿದ ಆ ರಾಕ್ಷಸರು ಸೂರ್ಯನು ಉದಯಿಸುತ್ತಿರುವಾಗಲೇ ಸೂರ್ಯನೊಡನೆ ಯುದ್ಧವನ್ನು ಮಾಡಲು ಪ್ರತಿದಿನದಲ್ಲಿಯೂ ಆರಂಭಿಸುತ್ತಿರುವರು. ಸೂರ್ಯಾಸ್ತಮನದವರೆಗೂ ಎಡೆಬಿಡದೆ ಯುದ್ಧವನ್ನು ಮಾಡುತ್ತಿರುವರು."

"ಈ ರಾಕ್ಷಸರು ಗಾಯತ್ರೀಮಂತ್ರದಿಂದ ಜಪಿಸಲ್ಪಟ್ಟ ನೀರಿನಿಂದ ಸಾಯುವರು. ಈ ಜಲವನ್ನು ಬಿಟ್ಟು ಉಳಿದ ಯಾವ ಅಸ್ತ್ರ ಶಸ್ತ್ರ ಮುಂತಾದ ಆಯುಧಗಳಿಂದಲೂ ಸಾಯಲಾರರು. ಇದನ್ನು ತಿಳಿದ ಬ್ರಹ್ಮಜ್ಞಾನಿಗಳು ಪ್ರತಿದಿನದಲ್ಲಿಯೂ ಸಂಧ್ಯಾಕಾಲದಲ್ಲಿ ಗಾಯತ್ರೀಮಂತ್ರದಿಂದ ಜಲವನ್ನು ಜಪಿಸಿ ಮೇಲ್ಮುಖವಾಗಿ ಚೆಲ್ಲುತ್ತಿರುವರು. ಈ ಜಲದ ಒಂದೊಂದು ಬಿಂದುಗಳು ವಜ್ರಾಯುಧಗಳ ರೂಪವನ್ನು ಸ್ವೀಕರಿಸಿ ಆ ದೈತ್ಯರನ್ನು ಸಂಹರಿಸುತ್ತವೆ. ಸತ್ತು ಹೋದ ಆ ರಾಕ್ಷಸರ ಹೆಣಗಳು ಮಂದೇಹಾರುಣ ಎಂಬ ದ್ವೀಪದಲ್ಲಿ ಬೀಳುತ್ತವೆ. ಅರ್ಘ್ಯವನ್ನು ಕೊಟ್ಟ ಮೇಲೆ "ಅಸಾವಾದಿತ್ಯೋ ಬ್ರಹ್ಮ" ಎಂಬ ಮಂತ್ರವನ್ನು ಹೇಳುತ್ತಾ ಅದೇ ಬ್ರಹ್ಮಜ್ಞಾನಿಗಳು ಒಂದು ಸಲ ಪ್ರದಕ್ಷಿಣೆ ಮಾಡುತ್ತಾರೆ. ಈ ಪ್ರದಕ್ಷಿಣೆಯಿಂದ ರಾಕ್ಷಸವಧದಿಂದ ಬಂದಿರುವ ಪಾಪವು ದೂರವಾಗುತ್ತದೆ."

"ಬ್ರಹ್ಮಜ್ಞಾನಿಗಳಲ್ಲಿ ಸನ್ನಿಹಿತನಾಗಿದ್ದು ಅರ್ಘ್ಯವನ್ನು ಕೊಡಿಸಿದವನೂ, ಈ ಅರ್ಘ್ಯದಿಂದ ಸಂತುಷ್ಟನಾಗಿ ದೈತ್ಯರನ್ನು ಸಂಹರಿಸಿದವನೂ, ದೈತ್ಯಸಂಹಾರದಿಂದ ಬಂದಿರುವ ಪಾಪದ ಪರಿಹಾರಕ್ಕಾಗಿ ಮಾಡಿದ ಪ್ರದಕ್ಷಿಣೆಯಿಂದ ಸಂತುಷ್ಟನಾಗಿ

ಪಾಪಗಳನ್ನು ಪರಿಹರಿಸಿದವನೂ, ಸಕಲಗುಣಪರಿಪೂರ್ಣನಾದ್ದರಿಂದ ಬ್ರಹ್ಮ ಎಂಬ ಬಿರುದಿಗೆ ಪಾತ್ರನಾದ ಶ್ರೀಹರಿಯೇ ಆಗಿರುವನು. ಆವನ ಕೃಪೆಯಿಂದ ಅರ್ಘ್ಯಪ್ರದಾನ ಪ್ರದಕ್ಷಿಣ ಮುಂತಾದ ಕಾರ್ಯಗಳನ್ನು ಬ್ರಹ್ಮಜ್ಞಾನಿಗಳು ಮಾಡಿದರು. ಅವುಗಳಿಂದ ತೃಪ್ತನಾದ ಶ್ರೀಹರಿಯ ಅನುಗ್ರಹದಿಂದ ಬ್ರಹ್ಮಜ್ಞಾನಿಗಳು ಮುಕ್ತಿಯನ್ನು ಪಡೆದರು. ಇವರಂತೆ ಉಳಿದವರೂ ಅರ್ಘ್ಯಪ್ರದಾನ ಮುಂತಾದವುಗಳಿಂದ ಮುಕ್ತಿಯನ್ನು ಪಡೆಯುವರು."

ಸಂಧ್ಯಾಕಾಲೇ ತು ಸಂಪ್ರಾಪ್ತೇ ಘೋರೇ ಪರಮದಾರುಣೇ |
ಮಂದೇಹಾ ರಾಕ್ಷಸಾ ಘೋರಾಃ ಸೂರ್ಯಮಿಚ್ಛಂತಿ ಖಾದಿತುಮ್ ||
ಪ್ರಜಾಪತಿಕೃತಃ ಶಾಪಸ್ತೇಷಾಂ ಮೈತ್ರೇಯರಕ್ಷಸಾಮ್ |
ಅಕ್ಷಯತ್ವಂ ಶರೀರಾಣಾಮಮರತ್ವಂ ದಿನೇ ದಿನೇ ||
ತತಃ ಸೂರ್ಯಸ್ಯ ತೈರ್ಯುದ್ಧಂ ಭವತ್ಯೇವ ಸುದಾರುಣಮ್ |
ತತೋ ದ್ವಿಜೋತ್ತಮಾಸ್ತೋಯಂ ಪ್ರಕ್ಷಿಪಂತಿ ಮಹಾಮುನೇ ||
ಓಂಕಾರಬ್ರಹ್ಮಸಂಯುಕ್ತಂ ಗಾಯತ್ರ್ಯಾ ಚಾಭಿಮಂತ್ರಿತಮ್ |
ತೇನ ದಹ್ಯಂತಿ ತೇ ಪಾಪಾ ವಜ್ರೀಭೂತೇನ ವಾರಿಣಾ ||
ಅಗ್ನಿಹೋತ್ರೇ ಹೂಯತೇ ಯಾ ಸಮಂತ್ರಾ ಪ್ರಥಮಾಹುತಿಃ |
ಸೂರ್ಯೋ ಜ್ಯೋತಿಃ ಸಹಸ್ರಾಂಶುಸ್ತಯಾ ದೀಪ್ಯತಿ ಭಾಸ್ಕರಃ ||
ತತಃ ಪ್ರಯಾತಿ ಭಗವಾನ್ ಬ್ರಾಹ್ಮಣೈರಭಿರಕ್ಷಿತಃ |
ವಾಲಖಿಲ್ಯಾದಿಭಿಶ್ಚೈವ ಜಗತಃ ಪಾಲನೋದ್ಯತಃ || (ವಿಷ್ಣುಪುರಾಣ ವಚನ)

"ಸಂಧ್ಯಾಕಾಲವು ಅತಿಘೋರವಾದುದು. ಆ ಸಮಯದಲ್ಲಿ ಮಂದೇಹ ಎಂಬ ರಾಕ್ಷಸರು ಸೂರ್ಯನನ್ನು ನುಂಗುವುದಕ್ಕಾಗಿ ಹೊರಡುವರು. ಆ ರಾಕ್ಷಸರಿಗೆ ಬ್ರಹ್ಮದೇವರು ಒಂದು ಶಾಪವನ್ನು ಕೊಟ್ಟಿರುವರು. ಆ ಶಾಪದಿಂದ ಅವರು ಸತ್ತರೂ ಅವರ ದೇಹವು ಕೊಳೆಯುವುದೂ ಬೇರೆ ಯಾವ ಕಾರಣದಿಂದಲೂ ನಶಿಸುವುದೂ ಇಲ್ಲ. ಸತ್ತು ಕೆಲವು ನಿಮಿಷಗಳಲ್ಲಿಯೇ ಪುನಃ ಬದುಕುವರು. ಆದ್ದರಿಂದ ಪ್ರತಿದಿನವೂ ಅವರು ಸಾಯುವರು. ಪುನಃ ಬದುಕುವರು. ಒಂದೊಂದು ದಿನದಲ್ಲಿಯೂ ಸೂರ್ಯೋದಯಕಾಲದಲ್ಲಿ ಘೋರಯುದ್ಧವನ್ನು ಸೂರ್ಯನೊಡನೆ ಮಾಡುತ್ತಿರುವರು."

"ಅದೇ ಸಮಯದಲ್ಲಿ ಬ್ರಾಹ್ಮಣಶ್ರೇಷ್ಠರು ಓಂಕಾರ, ಮತ್ತು ವ್ಯಾಹೃತಿಮಂತ್ರಗಳಿಂದ ಯುಕ್ತವಾದ ಗಾಯತ್ರೀ ಮಂತ್ರದಿಂದ ಜಪಿಸಲ್ಪಟ್ಟ ಜಲವನ್ನು ಅವರನ್ನು ಸಂಹರಿಸುವುದಕ್ಕಾಗಿ ಮೇಲ್ಮುಖವಾಗಿ ಬಿಸಾಡುವರು. ಆ ನೀರಿನ ಒಂದೊಂದು ಬಿಂದುವೂ ವಜ್ರಾಯುಧದ ರೂಪವನ್ನು ಧರಿಸುತ್ತದೆ. ಅವರೆಲ್ಲರೂ ಸುಡಲ್ಪಡುತ್ತಾ ಕೆಳಗೆ ಬೀಳುವರು."

"ಅದೇ ಸಮಯದಲ್ಲಿ ಬ್ರಾಹ್ಮಣೋತ್ತಮರು ಸೂರ್ಯದೇವನಿಗೆ ಸ್ವಾಭಾವಿಕವಾದ ಅವನ ಶಕ್ತಿಯನ್ನು ಹೆಚ್ಚಿಸುವುದಕ್ಕಾಗಿ ಅಗ್ನಿಹೋತ್ರವನ್ನು ಮಾಡುವರು. ಆ ಅಗ್ನಿಹೋತ್ರದಲ್ಲಿ ಮೊದಲನೆಯ ಆಹುತಿಯನ್ನು ಕೊಡುವರು. ಆ ಆಹುತಿಯನ್ನು ಸೂರ್ಯನು ಸ್ವೀಕರಿಸುವನು. ಅದರಿಂದ ಅವನ ಕಿರಣಗಳು ಪ್ರಕಾಶಿಸುತ್ತವೆ. ಮಂದೇಹರಾಕ್ಷಸರೊಡನೆ ಮಾಡಿದ ಯುದ್ಧದಿಂ ಕುಂದಿದ ತೇಜಸ್ಸು ಪುನಃ ಪೂರ್ಣವಾಗುತ್ತದೆ. ಬ್ರಾಹ್ಮಣರು ಅಗ್ನಿಹೋತ್ರದಲ್ಲಿ ಮೊದಲನೆಯ ಆಹುತಿಯನ್ನು ಕೊಟ್ಟು ಸೂರ್ಯನನ್ನು ರಕ್ಷಿಸುವರು. ಅದೇ ರೀತಿಯಾಗಿ "ವಾಲಖಿಲ್ಯ" ಎಂಬ ಹೆಸರಿನಿಂದ ಯುಕ್ತರಾಗಿರುವರೂ ಅಂಗುಷ್ಠದಷ್ಟೇ ಆಕಾರವುಳ್ಳವರೂ ಆಗಿರುವ 60000 ಮುನಿಗಳು ಸೂರ್ಯನ ರಥದ ಮುಂದೆ ಸೂರ್ಯನನ್ನು ಹೊಗಳುತ್ತಾ ಯಾವಾಗಲೂ ಸಂಚರಿಸುತ್ತಿರುವರು. ಆ ಸ್ತುತಿಯಿಂದಲೂ ಸೂರ್ಯನ ತೇಜಸ್ಸು ಹೆಚ್ಚುತ್ತಾ ಬರುತ್ತದೆ. ಹೀಗೆ ಸಂರಕ್ಷಿಸಲ್ಪಟ್ಟ ಸೂರ್ಯನು ಲೋಕಗಳನ್ನು ರಕ್ಷಿಸುವನು."

## ಗಾಯತ್ರೀಮಂತ್ರೋಪಸಂಹಾರಕ್ರಮ

"ಗಾಯತ್ರೀಮಂತ್ರದಲ್ಲಿರುವ ಒಂದೊಂದು ಅಕ್ಷರಗಳಿಗೂ (1) ಋಷಿ. (2) ಛಂದಸ್ಸು. (3) ದೇವತಾ. (4) ಶಕ್ತಿ. (5) ತತ್ತ್ವ. (6) ಬೀಜ. (7) ಸ್ವರ. (8) ವರ್ಣ. (9) ಧ್ಯಾನ. (10) ಫಲ. (11) ಕೀಲಕ. (12) ಮುದ್ರಾ ಎಂಬ ಹನ್ನೆರಡು ಅಂಗಗಳಿವೆ. ಅವುಗಳನ್ನು ಹೇಳಬೇಕು. ಗಾಯತ್ರೀಮಂತ್ರದಿಂದ ಜಲವನ್ನು ಜಪಿಸಿ ಮೇಲೆ ಸೂರ್ಯನಿಗೆ ಅಭಿಮುಖವಾಗಿ ಚೆಲ್ಲಬೇಕು. ಕರನ್ಯಾಸ, ಅಂಗನ್ಯಾಸಗಳು, ಋಷಿ ಮತ್ತು ಛಂದಸ್ಸು ಮುಂತಾದ ಹನ್ನೆರಡು ಅಂಗಗಳು ಇವುಗಳನ್ನು ಆರಂಭದಲ್ಲಿ ಕ್ರಮವಾಗಿ ಹೇಳುತ್ತಾ ಬರಬೇಕು. ಗಾಯತ್ರೀಮಂತ್ರವನ್ನು ಜಪಿಸಿ ಮುಗಿಸುವಾಗ ಹಿಂದೆ ಮೊದಲು ಹೇಳಿದ ಅಂಗನ್ಯಾಸಾದಿಗಳನ್ನು ಕೊನೆಗೂ, ಕೊನೆಗೆ ಹೇಳಿದವುಗಳನ್ನು ಮೊದಲು ವಿಪರೀತಕ್ರಮದಿಂದ ಹೇಳುತ್ತಾ ಬರಬೇಕು. ಗಾಯತ್ರೀಮಂತ್ರ ಪ್ರತಿಪಾದ್ಯನಾದ ಶ್ರೀಹರಿಗೆ ಅತ್ಯಂತ ಪ್ರಿಯವಾಗಿರುವ ಮಂತ್ರಗಳನ್ನು ಹೇಳುತ್ತಾ ಬರಬೇಕು. ಗಾಯತ್ರೀಮಂತ್ರದಲ್ಲಿರುವ ಮೂರು ಪಾದಗಳನ್ನು ತಲೆ ಕೆಳಗಾಗಿ ಹೇಳಬೇಕು. ಇದು ಬ್ರಹ್ಮಶೀರ್ಷಾಸ್ತ್ರವೆನಿಸುತ್ತದೆ. ಗಾಯತ್ರೀಮಂತ್ರದಲ್ಲಿರುವ ಅಕ್ಷರಗಳಲ್ಲಿ ಮೊದಲನೆಯ ಅಕ್ಷರವಾಗಿರುವ "ತ" ಎಂಬ ಅಕ್ಷರವನ್ನು ಮಾತ್ರ ಹೇಳಬೇಕು. ಇದು ಪಾಶುಪತಾಸ್ತ್ರವೆನಿಸುತ್ತದೆ." ಇದು ಗಾಯತ್ರ್ಯುಪಸಂಹಾರದಲ್ಲಿ ಮೊದಲನೆಯ ಕ್ರಮ.

"ಗಾಯತ್ರೀಮಂತ್ರದಲ್ಲಿ ಮೊದಲನೆಯ ಹದಿನಾರು ಅಕ್ಷರಗಳು ಬ್ರಹ್ಮ ಶಿರೋಮಂತ್ರವೆನಿಸುತ್ತವೆ. ಅವುಗಳನ್ನು ಮಾತ್ರ ಗಾಯತ್ರೀಮಂತ್ರಜಪವು ಮುಗಿಯುವಾಗ ಜಪಿಸಬೇಕು. "ಬ್ರಹ್ಮಶಿರೋಷೋಡಶಾಕ್ಷರಸ್ಯ ಮಂತ್ರಸ್ಯ ಬ್ರಹ್ಮಾ ಋಷಿಃ, ಗಾಯತ್ರೀ ಛಂದಃ, ಪರಮಾತ್ಮಾ ದೇವತಾ, ಅಸ್ತ್ರೋಪಸಂಹಾರೇ ವಿನಿಯೋಗಃ, ಧ್ಯೇಯಃ ಸದೇತಿ ಧ್ಯಾನಂ."

ಉತ್ತಿಷ್ಠ ದೇವಿ ಗಂತವ್ಯಂ ಪುನರಾಗಮನಾಯ ಚ |
ಉತ್ತಿಷ್ಠ ದೇವಿ ಸ್ಥಾತವ್ಯಂ ಪ್ರವಿಶ್ಯ ಹೃದಯಂ ಮಮ ||

ಎಂದು ಹೇಳಬೇಕು." ಇದು ಗಾಯತ್ರ್ಯುಪಸಂಹಾರದಲ್ಲಿ ಎರಡನೆಯ ಕ್ರಮ.

ಆಯಾತು ವರದಾ ದೇವೀ ಅಕ್ಷರಂ ಬ್ರಹ್ಮಸಮ್ಮಿತಮ್ |
ಗಾಯತ್ರೀ ಛಂದಸಾಂ ಮಾತೇದಂ ಬ್ರಹ್ಮ ಜುಷಸ್ವ ಮೇ ||

ಎಂದು ಹೇಳುತ್ತಾ ಗಾಯತ್ರೀಮಂತ್ರಪ್ರತಿಪಾದ್ಯನಾದ ಶ್ರೀಹರಿಯನ್ನು ಪ್ರಾರ್ಥಿಸಬೇಕು." ಇದು ಗಾಯತ್ರ್ಯುಪಸಂಹಾರದಲ್ಲಿ ಮೂರನೆಯ ಕ್ರಮ.

## ದೇವತಾತರ್ಪಣ

ಹಿಂದೆ ಸೂರ್ಯಾರ್ಘ್ಯವನ್ನೂ, ಪ್ರದಕ್ಷಿಣೆಯನ್ನೂ, ಆಚಮನವನ್ನೂ ಮಾಡುವ ರೀತಿಯನ್ನು ತಿಳಿಸಿದ್ದಾಯಿತು. ಇನ್ನು ಮುಂದೆ ತರ್ಪಣವನ್ನು ಮಾಡುವ ರೀತಿಯನ್ನು ತಿಳಿಸುತ್ತೇವೆ.

ಪಾಣಿನಾ ಜಲಮಾದಾಯ ಸ್ರವನ್ ಕುರ್ಯಾತ್ಪ್ರದಕ್ಷಿಣಮ್ |
ಆದಿತ್ಯಾದಿಗ್ರಹಾಂಸ್ತತ್ರ ತರ್ಪಯೇತ್ಸುಸಮಾಹಿತಃ || (ಪಿತಾಮಹ ವಚನ)

"ಬಲಗೈಯಲ್ಲಿ ನೀರನ್ನು ಧರಿಸಬೇಕು. ಆ ನೀರನ್ನು ಧಾರಾಕಾರವಾಗಿ ಸುರಿಸುತ್ತಾ ಪ್ರದಕ್ಷಿಣೆಯನ್ನು ಮಾಡಬೇಕು. ಅನಂತರದಲ್ಲಿ ಸಾವಧಾನ ಮನಸ್ಸಿನಿಂದ ಸೂರ್ಯನಿಂದ ಆರಂಭಿಸಿ ಎಲ್ಲಾ ಗ್ರಹಗಳಿಗೂ ತರ್ಪಣವನ್ನು ಕೊಡಬೇಕು."

ಪರಿಷೇಕಂ ತತಃ ಕುರ್ಯಾತ್ಪ್ರಾದಕ್ಷಿಣ್ಯಂ ಸಮಾಚರೇತ್ |
ಸಂತರ್ಪ್ಯ ಕೇಶವಾದೀಂಸ್ತಾನಾಚಾಮಂ ತು ಸಮಾಚರೇತ್ || (ಕೂರ್ಮಪುರಾಣ ವಚನ)

"ಕೈಯಲ್ಲಿ ನೀರನ್ನು ತೆಗೆದುಕೊಳ್ಳಬೇಕು. ಆ ನೀರನ್ನು ಧಾರೆಯಾಗಿ ಸುರಿಸಬೇಕು. ಸುರಿಸುತ್ತಾ ಪ್ರದಕ್ಷಿಣೆಯನ್ನು

ಮಾಡಬೇಕು. "ಕೇಶವಾಯ ನಮಃ ಕೇಶವಂ ತರ್ಪಯಾಮಿ" ಮುಂತಾದ ಹನ್ನೆರಡು ಮಂತ್ರಗಳಿಂದ ಕೇಶವ, ನಾರಾಯಣ, ಮಾಧವ ಮುಂತಾದ ಹನ್ನೆರಡು ಮೂರ್ತಿಗಳಿಗೆ ಹನ್ನೆರಡು ತರ್ಪಣಗಳನ್ನು ಕೊಡಬೇಕು. ಈ ತರ್ಪಣಗಳನ್ನು ಮುಗಿಸಿದ ಮೇಲೆ ಆಚಮನವನ್ನು ಮಾಡಬೇಕು."

ಗ್ರಹಾನ್ ವಾರಾಧಿಪಾಂಸ್ತತ್ರ ವೇದಾದೀಂಶ್ಚ ಪ್ರತರ್ಪಯೇತ್ |
ತರ್ಪಣಂ ಕೇಶವಾದೀನಾಂ ಸಂಧ್ಯಾರ್ಘ್ಯಾನಂತರಂ ಚರೇತ್ ||
ಶುಕ್ಲೇ ಪಕ್ಷೇ ಕೇಶವಾದೀನ್ ಕೃಷ್ಣೇ ಸಂಕರ್ಷಣಾದಿಕಾನ್ || (ವ್ಯಾಸಸ್ಮೃತಿ ವಚನ)

"ಆಯಾಯ ವಾರದ ಅಧಿಪತಿಗಳಾದ ಗ್ರಹಗಳಿಗೆ ತರ್ಪಣವನ್ನು ಕೊಡಬೇಕು. ವೇದಾದಿಶಾಸ್ತ್ರಾಭಿಮಾನಿಗಳಾದ ದೇವತೆಗಳಿಗೂ ತರ್ಪಣವನ್ನು ಕೊಡಬೇಕು. ಸಂಧ್ಯಾಕಾಲದಲ್ಲಿ ಮಾಡಬೇಕಾದ ಸೂರ್ಯಾರ್ಘ್ಯಾನಂತರದಲ್ಲಿ ಶುಕ್ಲಪಕ್ಷದಲ್ಲಿ ಕೇಶವ ಮುಂತಾದ ಹನ್ನೆರಡು ಮೂರ್ತಿಗಳಿಗೂ ಕೃಷ್ಣಪಕ್ಷದಲ್ಲಿ ಸಂಕರ್ಷಣ ಮುಂತಾದ ಹನ್ನೆರಡು ಮೂರ್ತಿಗಳಿಗೂ ತರ್ಪಣವನ್ನು ಕೊಡಬೇಕು."

ಶುಕ್ಲಪಕ್ಷೇ ಕೇಶವಾದೀನ್ ದಾಮೋದರಾಂತಾನ್ ದ್ವಾದಶ ಕೃಷ್ಣಪಕ್ಷೇ ಸಂಕರ್ಷಣಾದೀನ್ ಇತಿ ಸಂಪ್ರದಾಯಃ. (ಸ್ಮೃತಿಮುಕ್ತಾವಲೀಕಾರರ ವಚನ)

"ಹಿಂದಿನ ಶ್ಲೋಕದಲ್ಲಿ ಶುಕ್ಲಪಕ್ಷದಲ್ಲಿ ಕೇಶವ ಮುಂತಾದ ಮೂರ್ತಿಗಳಿಗೆ ತರ್ಪಣವನ್ನು ಕೊಡಬೇಕೆಂದು ಹೇಳಿದೆ. ಎಷ್ಟು ಮೂರ್ತಿಗಳಿಗೆ? ಯಾವ ಯಾವ ಮೂರ್ತಿಗಳಿಗೆ? ಎಂದು ಹೇಳಿಲ್ಲ. ಆದರೂ ಶುಕ್ಲಪಕ್ಷದಲ್ಲಿ ಕೇಶವಮೂರ್ತಿಯಿಂದ ದಾಮೋದರಮೂರ್ತಿಯವರೆಗೂ, ಕೃಷ್ಣಪಕ್ಷದಲ್ಲಿ ಸಂಕರ್ಷಣಮೂರ್ತಿಯಿಂದ ಶ್ರೀಕೃಷ್ಣಮೂರ್ತಿಯವರೆಗೂ, ಹನ್ನೆರಡು ಹನ್ನೆರಡು ತರ್ಪಣಗಳನ್ನು ಕೊಡುವುದು ಸಂಪ್ರದಾಯಸಿದ್ಧವಾಗಿದೆ. ಸಂಪ್ರದಾಯದಂತೆಯೇ ನಡೆದುಕೊಳ್ಳಬೇಕು." ಇದು ಸ್ಮೃತಿಮುಕ್ತಾವಲೀಕಾರರ ನಿರ್ಣಯ.

ಇಲ್ಲಿ ಕೆಲವು ಆಚಾರ್ಯರು ಸೂರ್ಯಾರ್ಘ್ಯವನ್ನು ಕೊಟ್ಟು ಮುಗಿಸಿದ ಮೇಲೆ ಪ್ರದಕ್ಷಿಣೆಯನ್ನೂ, ಆಚಮನವನ್ನೂ, ಮಾಡಿ ಮುಗಿಸಿದ ಕೂಡಲೇ ಬ್ರಹ್ಮಯಜ್ಞವನ್ನೂ, ಬ್ರಹ್ಮಯಜ್ಞಾಂಗತರ್ಪಣವನ್ನೂ, ಮಾಡಬೇಕೆಂದು ಹೇಳುತ್ತಾರೆ. ಅವರ ಪಕ್ಷವನ್ನು ಮೊದಲು ಹೇಳುತ್ತೇವೆ.

ಮಂತ್ರತಃ ಪರಿವೃತ್ಯಾಽಥ ಸಮಾಚಮ್ಯ ಸುರಾದಿಕಾನ್ |
ತರ್ಪಯಿತ್ವಾ ನಿಪೀಡ್ಯಾಽಥ ವಾಸೋ ವಿಸೃತ್ಯ ಚಾಂಜಸಾ || (ಆಚಾರ್ಯರ ವಚನ)

ಈ ವಚನದಲ್ಲಿ ಸೂರ್ಯಾರ್ಘ್ಯಪ್ರದಾನ, ಪ್ರದಕ್ಷಿಣ, ಆಚಮನಗಳನ್ನು ಕ್ರಮವಾಗಿ ಮಾಡಿ ಮುಗಿಸಿದ ಮೇಲೆ ದೇವತೆಗಳಿಗೆ ತರ್ಪಣವನ್ನು ಕೊಡಬೇಕು ಎಂದು ಹೇಳಿರುತ್ತದೆ. "ದೇವತಾತರ್ಪಣವು ಬ್ರಹ್ಮಯಜ್ಞದಲ್ಲಿಯೂ ಇದೆ. ಆದ್ದರಿಂದ ಬ್ರಹ್ಮಯಜ್ಞವನ್ನೂ, ಅದರ ಅಂಗವಾದ ತರ್ಪಣವನ್ನೂ, ಈಗಲೇ ಮಾಡಬೇಕು." ಇದು ಆಚಾರ್ಯರ ಅಭಿಪ್ರಾಯವೆಂದು ಕೆಲವರ ಅಭಿಪ್ರಾಯ. ಅದನ್ನು ಈಗ ಸ್ಪಷ್ಟಪಡಿಸುತ್ತೇವೆ.

(1) ಪ್ರಾತರ್ಮಧ್ಯಂದಿನೇ ವಾಪಿ ಬ್ರಹ್ಮಯಜ್ಞೋ ವಿಧೀಯತೇ |
ಪ್ರಾತರ್ಯದಿ ತದಾ ಪ್ರಾತರಾಹುತ್ಯಾಃ ಪರತೋ ಭವೇತ್ ||
ಮಧ್ಯಾಹ್ನೇ ತರ್ಪಣಾತ್ಪ್ರಾಗ್ವೈ ವೈಶ್ವದೇವಾತ್ಪರಂ ಭವೇತ್ | (ದಕ್ಷವಚನ)

"ಪ್ರಾತಃಕಾಲದಲ್ಲಾಗಲೀ ಮಧ್ಯಾಹ್ನಕಾಲದಲ್ಲಾಗಲೀ ಬ್ರಹ್ಮಯಜ್ಞವು ವಿಹಿತವಾಗಿದೆ. ಪ್ರಾತಃಕಾಲದಲ್ಲಾದರೆ ಅಗ್ನಿಹೋತ್ರದ ಆಹುತಿಯನ್ನು ಕೊಟ್ಟ ಮೇಲೆ ಮಾಡಬೇಕು. ಮಧ್ಯಾಹ್ನದಲ್ಲಾದರೆ ತರ್ಪಣಕ್ಕಿಂತ ಪೂರ್ವದಲ್ಲಾಗಲೀ ವೈಶ್ವದೇವಕ್ಕೆ ಅನಂತರದಲ್ಲಾಗಲೀ ಮಾಡಬೇಕು."

(ಈ ವಾಕ್ಯದಲ್ಲಿ ಬೆಳಿಗ್ಗೆ ಔಪಾಸನದಲ್ಲಿ ಆಹುತಿಯನ್ನು ಕೊಟ್ಟ ಮೇಲೆಯೇ ಬ್ರಹ್ಮಯಜ್ಞವನ್ನು ಮಾಡಬೇಕೆಂದು ಸ್ಪಷ್ಟವಾಗಿ ಹೇಳಿರುತ್ತದೆ. ಔಪಾಸನವನ್ನು ಸೂರ್ಯೋದಯಾನಂತರದಲ್ಲಿಯೇ ಮಾಡಬೇಕು. ಅದಕ್ಕಿಂತ ಪೂರ್ವದಲ್ಲಿ ಮಾಡುವಂತಿಲ್ಲ. ಆದ್ದರಿಂದ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಬ್ರಹ್ಮಯಜ್ಞವನ್ನು ಮಾಡುವಂತಿಲ್ಲವೆಂದು ಸ್ಪಷ್ಟವಾಗಿ ಹೇಳಿದಂತಾಯಿತು. ಸೂರ್ಯಾರ್ಘ್ಯವನ್ನೂ, ಪ್ರದಕ್ಷಿಣವನ್ನೂ, ಆಚಮನವನ್ನೂ, ಸೂರ್ಯೋದಯಕ್ಕಿಂತ ಪೂರ್ವದಲ್ಲಿಯೇ ಮಾಡಬೇಕೆಂದು ಹಿಂದೆ ಸಮರ್ಥಿಸಿದ್ದೇವೆ. ಆದ್ದರಿಂದ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಮಾಡಬೇಕಾದ ಸೂರ್ಯಾರ್ಘ್ಯದ ಅನಂತರದಲ್ಲಿ ಅದಕ್ಕೆ ಸೇರಿದಂತೆ ಸೂರ್ಯೋದಯಾನಂತರದಲ್ಲಿಯೇ ಮಾಡಬೇಕಾದ ಬ್ರಹ್ಮಯಜ್ಞವನ್ನೂ, ಬ್ರಹ್ಮಯಜ್ಞಾಂಗ ದೇವಾತತರ್ಪಣವನ್ನೂ, ಮಾಡುವುದು ಯಾವ ಸ್ಮೃತಿಕಾರರಿಗೂ ಸಮ್ಮತವಲ್ಲ. ಆಚಾರ್ಯರಿಗೂ ಸಮ್ಮತವಲ್ಲ. ಆದ್ದರಿಂದ "ಮಂತ್ರತಃ" ಎಂಬ ಮೇಲ್ಕಂಡ ಆಚಾರ್ಯರ ವಚನವು ಸೂರ್ಯಾರ್ಘ್ಯವನ್ನು ಕೊಟ್ಟ ಕೂಡಲೇ ಆಗಲೇ ಬ್ರಹ್ಮಯಜ್ಞಾಂಗ ತರ್ಪಣವನ್ನು ಕೊಡಬೇಕೆಂದು ತಿಳಿಸುವುದಿಲ್ಲ.)

(2) ಸ ಚಾರ್ವಾಕ್ತರ್ಪಣಾತ್ಕಾರ್ಯಃ ಪಶ್ಚಾದ್ವಾ ಪ್ರಾತರಾಹುತೇಃ |
ವೈಶ್ವದೇವಾವಸಾನೇ ಚ ನಾನ್ಯತ್ರೇತಿ ಸತಾಂ ಮತಃ || (ಕಾತ್ಯಾಯನರ ವಚನ)

"(1) ಮಧ್ಯಾಹ್ನದಲ್ಲಿ ದೇವತಾತರ್ಪಣವನ್ನು ಮಾಡಿದ ಮೇಲೆ (2) ವೈಶ್ವದೇವವು ಮುಗಿದ ಮೇಲೆ (3) ಬೆಳಿಗ್ಗೆ ಆಹುತಿಯನ್ನು ಕೊಟ್ಟ ಮೇಲೆ ಹೀಗೆ ಮೂರು ಕಾಲಗಳಲ್ಲಿಯೇ ಬ್ರಹ್ಮಯಜ್ಞವನ್ನು ಮಾಡಬೇಕು. ಈ ಮೂರು ಕಾಲಗಳನ್ನು ಬಿಟ್ಟು ಉಳಿದ ಕಾಲಗಳಲ್ಲಿ ಮಾಡಕೂಡದು. ಇದು ಸಜ್ಜನರಿಗೆ ಸಮ್ಮತವಾಗಿದೆ."

(ಈ ವಾಕ್ಯವೂ ಮೇಲ್ಕಂಡ ವಿಷಯವನ್ನೇ ದೃಢಪಡಿಸುತ್ತದೆ. ಇಲ್ಲಿರುವ "ನಾನ್ಯತ್ರ" ಎಂಬ ಪದಗಳು ಇತರ ಕಾಲವನ್ನು ನಿಷೇಧಿಸುತ್ತಾ ಮೂರು ಕಾಲಗಳನ್ನು ವಿಧಿಸುತ್ತವೆ.)

(3) ಉದಿತ ಆದಿತ್ಯೇ (ಶ್ರುತಿವಚನ)

"ಸೂರ್ಯೋದಯಾನಂತರದಲ್ಲಿಯೇ ಬ್ರಹ್ಮಯಜ್ಞವನ್ನು ಮಾಡಬೇಕು."

(4) ಆದಿತ್ಯೋದಯತ ಉಪರ್ಯೇವೋಪವಿಶ್ಯ ಹಸ್ತಾವವನಿಜ್ಯ ತ್ರಿರಾಚಾಮೇತ್ || (ಶ್ರುತಿವಚನ)

"ಸೂರ್ಯೋದಯಾನಂತರದಲ್ಲಿ ಕುಳಿತು ಕೈಗಳನ್ನು ತೊಳೆದುಕೊಂಡು ಮೂರು ಸಲ ಆಚಮನವನ್ನು ಮಾಡಬೇಕು. ಅನಂತರದಲ್ಲಿ ಬ್ರಹ್ಮಯಜ್ಞವನ್ನು ಆರಂಭಿಸಬೇಕು."

(5) ಮಹತಃ ಪಂಚಯಜ್ಞಾಂಶ್ಚ ದಿವೈವೇತ್ಯಾಹ ಗೌತಮಃ || (ಗೌತಮರ ವಚನ)

"ಪಂಚಯಜ್ಞಗಳನ್ನೆಲ್ಲವನ್ನೂ ಹಗಲಿನಲ್ಲಿಯೇ ಮಾಡಬೇಕು." ಇದು ಗೌತಮರು ಹೇಳಿದ್ದು.

(6) ಮಂದಮೇವ ಪಠೇತ್ಪ್ರಾತರುಚ್ಚೈರ್ಮಧ್ಯಂದಿನೇ ಸ್ಥಿತಃ |
ಉಚ್ಚೈರೇವಾಪರಾಹ್ಣೇ ತು ಸಂಧ್ಯಾಕಾಲ ಉಪಾರಮೇತ್ ||

"ಪ್ರಾತಃಕಾಲದಲ್ಲಿ ಸಂಧ್ಯಾವಂದನಮಂತ್ರಗಳನ್ನು ನಿಂತು ಮೆಲ್ಲನೆ ಉಚ್ಚರಿಸಬೇಕು. ಮಧ್ಯಾಹ್ನದಲ್ಲಿಯೂ ಸಾಯಂಕಾಲದಲ್ಲಿಯೂ ಕುಳಿತುಕೊಂಡವನಾಗಿ ಗಟ್ಟಿಯಾಗಿ ಉಚ್ಚರಿಸಬೇಕು. ಸಂಧ್ಯಾಕಾಲವು ಬಂದಾಗ ಸಂಧ್ಯಾವಂದನವನ್ನು ಮುಗಿಸಬೇಕು."

(ಈ ವಾಕ್ಯದಲ್ಲಿ ಸೂರ್ಯೋದಯಕಾಲದಲ್ಲಿ ಸಂಧ್ಯಾವಂದನವನ್ನು ಮುಗಿಸಬೇಕೆಂದು ಹೇಳಿರುತ್ತದೆ. ಸೂರ್ಯೋದಯ ಕಾಲದಲ್ಲಿ ಸಂಧ್ಯಾವಂದನವನ್ನು ಮುಗಿಸುವಾಗ ಸಂಧ್ಯಾವಂದನದ ಮಧ್ಯದಲ್ಲಿಯೇ ಬ್ರಹ್ಮಯಜ್ಞಾಂಗತರ್ಪಣವು ಸೇರಿದ್ದರೆ ಆ ತರ್ಪಣವನ್ನೂ, ಸೂರ್ಯೋದಯಕ್ಕಿಂತ ಪೂರ್ವದಲ್ಲಿಯೇ ಮುಗಿಸಬೇಕೆಂದು ಹೇಳಿದಂತಾಗುತ್ತದೆ. ಅದು ಹಿಂದೆ ಹೇಳಿದ ಪ್ರಮಾಣಗಳಿಗೆ ವಿರುದ್ಧವಾದುದು.)

(7) ಅಗ್ನೇಃ ಪಶ್ಚಿಮತೋ ದೇವಾ ಭೂತಯಜ್ಞಾಂತ ಏವ ಚ | (ವ್ಯಾಸರ ವಚನ)

"ಪ್ರಾತಃಕಾಲದಲ್ಲಿ ಮಾಡಬೇಕಾದ ಔಪಾಸನದ ಅನಂತರದಲ್ಲಿ ಅಥವಾ ಭೂತಯಜ್ಞಾಂತದಲ್ಲಿ ಬ್ರಹ್ಮಯಜ್ಞವನ್ನು ಮಾಡಬೇಕು." (ಈ ವಾಕ್ಯದಲ್ಲಿಯೂ ಹಗಲಿನಲ್ಲಿಯೇ ಬ್ರಹ್ಮಯಜ್ಞವನ್ನು ಮಾಡಬೇಕೆಂದೂ, ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಮಾಡಕೂಡದೆಂದೂ ಸ್ಪಷ್ಟವಾಗಿದೆ.)

(8) ಯದಿ ಸ್ಯಾತ್ತರ್ಪಣಾದರ್ವಾಗ್ಬ್ರಹ್ಮಯಜ್ಞಃ ಕೃತೋ ನ ಹಿ |
ಕೃತ್ವಾ ಮನುಷ್ಯಯಜ್ಞಂ ವೈ ತತಃ ಸ್ವಾಧ್ಯಾಯಮಾರಭೇತ್ ||

"ತರ್ಪಣಕ್ಕಿಂತ ಮೊದಲು ಬ್ರಹ್ಮಯಜ್ಞವನ್ನು ಮಾಡದಿದ್ದರೆ ಮನುಷ್ಯಯಜ್ಞವನ್ನು ಮಾಡಿದ ಮೇಲೆಯೇ ಬ್ರಹ್ಮಯಜ್ಞವನ್ನೂ, ಬ್ರಹ್ಮಯಜ್ಞವು ಮುಗಿದ ಮೇಲೆಯೇ ಬ್ರಹ್ಮಯಜ್ಞಾಂಗತರ್ಪಣವನ್ನೂ ಮಾಡಬೇಕು."

(9) ಅಜಪಿತ್ವಾ ತು ಗಾಯತ್ರೀಂ ಬ್ರಹ್ಮಯಜ್ಞಂ ಕರೋತಿ ಯಃ |
ಸ ಬ್ರಹ್ಮಹಾ ಸಮುದ್ದಿಷ್ಟಃ ಸರ್ವಕರ್ಮಸು ಗರ್ಹಿತಃ ||

"ಗಾಯತ್ರೀಮಂತ್ರವನ್ನು ಜಪಿಸದೆ ಬ್ರಹ್ಮಯಜ್ಞವನ್ನು ಮಾಡುವವನು ಬ್ರಹ್ಮಹತ್ಯಾದೋಷಕ್ಕೆ ಗುರಿಯಾಗುವನು ಮತ್ತು ಯಾವ ಕರ್ಮಗಳನ್ನು ಮಾಡುವುದಕ್ಕೂ ಅನರ್ಹನೆನಿಸುವನು."

(ಈ ವಾಕ್ಯದಲ್ಲಿ ಗಾಯತ್ರೀಜಪಾನಂತರದಲ್ಲಿಯೇ ಬ್ರಹ್ಮಯಜ್ಞವನ್ನು ಮಾಡಬೇಕೆಂದು ಹೇಳಿದೆ. "ಅಸೂರ್ಯದರ್ಶನಾತ್ತಿಷ್ಠೇತ್" ಎಂಬ ಶ್ರೀಆಚಾರ್ಯರ ವಚನದಲ್ಲಿ ಸೂರ್ಯೋದಯವು ಮುಗಿದ ಮೇಲೆಯೇ ಗಾಯತ್ರೀಜಪವನ್ನು ಮುಗಿಸಬೇಕೆಂದು ಹೇಳಿದೆ. ಇದರಿಂದ ಹಗಲಿನಲ್ಲಿಯೇ ಬ್ರಹ್ಮಯಜ್ಞವನ್ನು ಮಾಡಬೇಕೆಂದು ದೃಢಪಡಿಸಿದಂತಾಯಿತು. ಗಾಯತ್ರೀಮಂತ್ರ ಜಪಕ್ಕಿಂತ ಪೂರ್ವದಲ್ಲಿ ಸೂರ್ಯಾರ್ಘ್ಯವನ್ನು ಕೊಟ್ಟ ಕೂಡಲೇ ಬ್ರಹ್ಮಯಜ್ಞವನ್ನು ಮಾಡಕೂಡದೆಂದು ಸ್ಪಷ್ಟಪಡಿಸಿದಂತಾಯಿತು.)

ಅಷ್ಟಪಂಚ ಭವೇತ್ಪ್ರಾತಃ ಶೇಷಃ ಸೂರ್ಯೋದಯಃ ಸ್ಮೃತಃ | (ವರಾಹಪುರಾಣ)

"ಸೂರ್ಯೋದಯದಿಂದ ಐವತ್ತೆಂಟನೇ ಗಳಿಗೆಯು ಪ್ರಾತಃಕಾಲವೆನಿಸುತ್ತದೆ. 59ನೇ ಘಳಿಗೆಯೂ, 60ನೇ ಘಳಿಗೆಯೂ ಸೂರ್ಯೋದಯವೆಂದು ಹೇಳಲ್ಪಡುತ್ತದೆ. ಈ ವಾಕ್ಯದಲ್ಲಿ 58ನೇ ಘಳಿಗೆಯೂ ಪ್ರಾತಃಕಾಲವೆನಿಸುತ್ತದೆ ಎಂದು ಹೇಳಿದೆ. ಆ ಕಾಲವು ಸೂರ್ಯೋದಯಕ್ಕಿಂತ ಪೂರ್ವದಲ್ಲಿಯೇ ಅಂದರೆ ರಾತ್ರಿಯಲ್ಲಿಯೇ ಇದೆಯೆಂದೂ ಹೇಳಿದೆ. ಆದ್ದರಿಂದ ಪ್ರಾತಃ ಕಾಲದಲ್ಲಿ ಬ್ರಹ್ಮಯಜ್ಞವನ್ನು ಮಾಡಬೇಕೆಂದು ನಿರ್ಣಯಿಸುವುದಕ್ಕಾಗಿ ಮೇಲೆ ಉದಾಹರಿಸಿದ ಎಲ್ಲಾ ವಾಕ್ಯಗಳಿಗೂ ರಾತ್ರಿಯಲ್ಲಿ 58ನೇ ಗಳಿಗೆಯಲ್ಲಿ ಬ್ರಹ್ಮಯಜ್ಞವನ್ನು ಮಾಡಬೇಕೆಂದು ಅರ್ಥವನ್ನು ಹೇಳುವುದರಲ್ಲಿ ತಪ್ಪೇನಿದೆ? ಎಂಬ ಆಕ್ಷೇಪವು ಬರುತ್ತದೆ. ಆದರೆ "ಅಷ್ಟಪಂಚ" ಎಂಬ ವಾಕ್ಯವು ವರಾಹಪುರಾಣದಲ್ಲಿದೆ. ಈ ವಾಕ್ಯವು ಎಲ್ಲಾ ತಿಥಿಗಳಲ್ಲಿ ಪ್ರಾತಃಕಾಲವನ್ನು ನಿರ್ಣಯಿಸುವುದಕ್ಕಾಗಿ ಹೊರಟಿಲ್ಲ. ದ್ವಾದಶೀದಿನದಲ್ಲಿ ಪ್ರಾತಃಕಾಲದಲ್ಲಿ ಮಾಡಬೇಕಾದ ಕಾರ್ಯಗಳನ್ನು ಯಾವಾಗ ಮಾಡಬೇಕು? ಎಂಬ ವಿಷಯವನ್ನು ನಿರ್ಣಯಿಸುವುದಕ್ಕೆ ಹೊರಟಿದೆ.

58ನೇ ಗಳಿಗೆಯು ದ್ವಾದಶೀದಿನದಲ್ಲಿ ಪ್ರಾತಃಕಾಲವೆನಿಸುವುದಾಗಿಯೂ, ಆ ಕಾಲದಲ್ಲಿ ಪ್ರಾತಃಕಾಲದಲ್ಲಿ ಮಾಡಬೇಕಾದ ಔಪಾಸನ ಮುಂತಾದ ಎಲ್ಲಾ ಕಾರ್ಯಗಳನ್ನೂ ಮಾಡಿ ಮುಗಿಸಿಬಿಡಬೇಕೆಂದು ಹೇಳಿರುವುದಾಗಿಯೂ ವರಾಹಪುರಾಣವನ್ನು ನೋಡಿದರೆ ಸ್ಪಷ್ಟವಾಗುತ್ತದೆ. ಆದ್ದರಿಂದ ಮೇಲ್ಕಂಡ "ಅಷ್ಟಪಂಚ" ಎಂಬ ವಾಕ್ಯವನ್ನು ಆಧಾರವಾಗಿಟ್ಟುಕೊಂಡು ಮೇಲ್ಕಂಡ ಆಕ್ಷೇಪಣೆಯನ್ನು ಮಾಡುವುದರಲ್ಲಿ ತಿರುಳಿಲ್ಲ.) ಈ ನಿರ್ಣಯವು ಸ್ಮೃತಿಮುಕ್ತಾವಲೀಕಾರರಿಗೆ ಸಮ್ಮತವಾದುದು.

(10) ಅಥಾಽಪ್ಲುತೋಽಂಭಸ್ಯಮಲೇ ಯಥಾವಿಧಿ ಕ್ರಿಯಾಕಲಾಪಂ ಪ್ರವಿಧಾಯ ವಾಸಸೀ |
ಚಕಾರ ಸಂಧ್ಯೋಪಗಮಾದಿ ಸತ್ತಮೋ ಹುತಾನಲೋ ಬ್ರಹ್ಮ ಜಜಾಪ ವಾಗ್ಯತಃ ||
ಉಪಸ್ಥಾಯಾರ್ಕಮುದ್ಯಂತಂ ತರ್ಪಯಿತ್ವಾಽಽತ್ಮನಃ ಕಲಾಃ |
ದೇವಾನ್ ಋಷೀನ್ ಪಿತೄನ್ || (ಭಾಗವತವಾಕ್ಯ)

"ಶ್ರೀಕೃಷ್ಣದೇವನು ನಿರ್ಮಲವಾದ ನೀರಿನಲ್ಲಿ ಸ್ನಾನವನ್ನು ಮಾಡಿದನು. ಸ್ನಾನಾಂಗವಾದ ಎಲ್ಲಾ ಕಾರ್ಯಗಳನ್ನೂ ಮುಗಿಸಿದನು. ಶುದ್ಧವಾದ ವಸ್ತ್ರವನ್ನು ಧರಿಸಿದನು. ಸಂಧ್ಯಾವಂದನ ಮುಂತಾದ ಎಲ್ಲಾ ಕರ್ಮಗಳನ್ನು ಮಾಡಿ ಮುಗಿಸಿದನು. ಔಪಾಸನವನ್ನು ಮಾಡಿದನು. ನಾನಾವಿಧವಾದ ಮಂತ್ರಗಳನ್ನು ಜಪಿಸಿದನು. ಸೂರ್ಯೋಪಸ್ಥಾನವನ್ನು ಮಾಡಿದನು. ಕೊನೆಗೆ ಬ್ರಹ್ಮಯಜ್ಞಾಂಗವಾದ ದೇವತರ್ಪಣ, ಋಷಿತರ್ಪಣ, ಪಿತೃತರ್ಪಣಗಳನ್ನು ಮಾಡಿದನು."

(ಈ ವಾಕ್ಯದಲ್ಲಿ ಔಪಾಸನಾನಂತರದಲ್ಲಿ ಶ್ರೀಕೃಷ್ಣದೇವನು ಬ್ರಹ್ಮಯಜ್ಞವನ್ನೂ, ಬ್ರಹ್ಮಯಜ್ಞಾಂಗತರ್ಪಣವನ್ನೂ ಮಾಡಿರುವುದಾಗಿ ಸ್ಪಷ್ಟವಾಗಿ ಹೇಳಿರುತ್ತದೆ. ಆದ್ದರಿಂದಲೂ ಔಪಾಸನಕ್ಕಿಂತ ಪೂರ್ವದಲ್ಲಿ ಬ್ರಹ್ಮಯಜ್ಞವು ವಿಹಿತವಾಗಿಲ್ಲವೆಂದು ಸ್ಪಷ್ಟವಾಗುತ್ತದೆ.)

(11) ಪೂರ್ವೋಕ್ತವಿಧಿನಾ ಸಮ್ಯಕ್ ಸ್ನಾತ್ವಾ ಸಂಧ್ಯಾಂ ಸಮಾಚರೇತ್ |
ಪ್ರಾತರೌಪಾಸನಂ ಹುತ್ವಾ ಸ್ವಗೃಹ್ಯೋಕ್ತವಿಧಾನತಃ ||
ತೇಭ್ಯಃ ಪ್ರಣಮ್ಯ ಭಕ್ತ್ಯಾಥ ಸಂತರ್ಪ್ಯ ಪಿತೃದೇವತಾಃ || (ಹಾರೀತರ ವಾಕ್ಯ)

"ಹಿಂದೆ ಹೇಳಿದ ಕ್ರಮದಿಂದ ಸ್ನಾನವನ್ನು ಮಾಡಬೇಕು. ಸಂಧ್ಯಾವಂದನವನ್ನು ಮಾಡಬೇಕು. ತಮ್ಮ ತಮ್ಮ ಗೃಹ್ಯಸೂಕ್ತದಲ್ಲಿ ಹೇಳಿದ ವಿಧಾನದಿಂದ ಪಿತೃಗಳನ್ನೂ, ದೇವತೆಗಳನ್ನೂ, ನಮಸ್ಕರಿಸಬೇಕು. ಅವರಲ್ಲಿ ಭಕ್ತಿಯಿಂದ ತರ್ಪಣವನ್ನು ಕೊಡಬೇಕು."

(ಈ ವಾಕ್ಯದಲ್ಲಿಯೂ ಔಪಾಸನವು ಮುಗಿದ ಮೇಲೆ ಬ್ರಹ್ಮಯಜ್ಞಾಂಗತರ್ಪಣವೆಂದು ಹೇಳಿರುತ್ತದೆ.)

(12) ಯತ್ಸಂಧ್ಯಾಮುಪಾಸತೇ ಬ್ರಹ್ಮೈವ ತದುಪಾಸತೇ, ದೇವಾನ್ ನಮೇದ್ವರಾನಾವರ್ತಯೀತ || (ಬ್ರಹ್ಮಸೂತ್ರಭಾಷ್ಯ)

"ಸಂಧ್ಯಾವಂದನವೆಂದರೆ ಪರಬ್ರಹ್ಮನಾದ ಶ್ರೀಹರಿಯ ಉಪಾಸನೆಯೆನಿಸುತ್ತದೆ. ದೇವತೆಗಳನ್ನು ನಮಸ್ಕರಿಸಬೇಕು. ಬ್ರಹ್ಮಯಜ್ಞವನ್ನು ಮಾಡಬೇಕು."

(ಇಲ್ಲಿಯೂ ದೇವತೆಗಳನ್ನು ನಮಸ್ಕರಿಸಿದ ಮೇಲೆ ಅಂದರೆ ಹೋಮವನ್ನು ಮಾಡಿದ ಮೇಲೆ ಬ್ರಹ್ಮಯಜ್ಞವನ್ನು ಮಾಡಬೇಕೆಂದು ಹೇಳಿದೆ.)

(13) ಪ್ರಾತರ್ಹೋಮಂ ತಥಾ ಕುರ್ಯಾದ್ದೇವರ್ಷಿಪಿತೃತರ್ಪಣಮ್ || (ಮಾಘಮಾಹಾತ್ಮ್ಯ)

"ಬೆಳಿಗ್ಗೆ ಮಾಡಬೇಕಾದ ಹೋಮವನ್ನು ಮಾಡಬೇಕು. ದೇವತೆಗಳ ತರ್ಪಣ, ಋಷಿಗಳ ತರ್ಪಣ, ಪಿತೃತರ್ಪಣಗಳನ್ನು ಮಾಡಬೇಕು.)

(ಈ ವಾಕ್ಯದಲ್ಲಿ ಹೋಮಾನಂತರದಲ್ಲಿ ಬ್ರಹ್ಮಯಜ್ಞಾಂಗತರ್ಪಣವು ಹೇಳಲ್ಪಟ್ಟಿದೆ.)

(14) ಉಪಸ್ಥಾಯ ಜಪಂ ಕೃತ್ವಾ ಬ್ರಹ್ಮಯಜ್ಞಂ ಸಮಾರಭೇತ್ |
ಬ್ರಹ್ಮಾಂಜಲಿಃ ಕುಶೈಃ ಸಾರ್ಧಂ ಪ್ರಾಙ್ಮುಖಃ ಸುಸಮಾಹಿತಃ || (ವಸಿಷ್ಠರ ವಚನ)

"ಜಪವನ್ನು ಮುಗಿಸಬೇಕು. ಸೂರ್ಯೋಪಸ್ಥಾನವನ್ನು ಮಾಡಿ ಮುಗಿಸಬೇಕು. ಬ್ರಹ್ಮಯಜ್ಞವನ್ನು ಮಾಡಬೇಕು. ಬ್ರಹ್ಮಯಜ್ಞವನ್ನು ಮಾಡುವಾಗ ದರ್ಭೆಯನ್ನು ಧರಿಸಬೇಕು. ಪೂರ್ವಾಭಿಮುಖವಾಗಿ ಸಾವಧಾನವಾದ ಮನಸ್ಸಿನಿಂದ ಶ್ರೀಹರಿಯನ್ನು ನಮಸ್ಕರಿಸಬೇಕು."

(15) ಅರ್ಘ್ಯಂ ದತ್ವಾ ತೀರ್ಥಜಲೈರ್ಬ್ರಹ್ಮಯಜ್ಞಂ ಚರೇದಿತಿ |
ಭೂಯೋ ಭೂಯೋ ನಮಸ್ಕೃತ್ಯ ಪ್ರದಕ್ಷಿಣಮತಶ್ಚರೇತ್ || (ಭರದ್ವಾಜಸಂಹಿತಾ)

"ತೀರ್ಥಜಲದಿಂದ ಅರ್ಘ್ಯವನ್ನು ಕೊಡುತ್ತಾ ಬ್ರಹ್ಮಯಜ್ಞವನ್ನು ಮಾಡಬೇಕು. ಬ್ರಹ್ಮಯಜ್ಞಕ್ಕಿಂತ ಪೂರ್ವದಲ್ಲಿ ಪುನಃ ಪುನಃ ನಮಸ್ಕಾರಗಳನ್ನೂ, ಪ್ರದಕ್ಷಿಣಗಳನ್ನೂ ಮಾಡಬೇಕು."

(ಈ ವಾಕ್ಯದಲ್ಲಿಯೂ ಸೂರ್ಯಾದಿ ದೇವತೆಗಳ ಉಪಸ್ಥಾನಾನಂತರದಲ್ಲಿಯೇ ಬ್ರಹ್ಮಯಜ್ಞವು ವಿಹಿತವಾಗಿದೆ.)

(16) ಅಶಕ್ತೋऽಪಿ ಪ್ರಕುರ್ವೀತ ಬ್ರಹ್ಮಯಜ್ಞಂ ಚ ನಿತ್ಯದಾ |
ಇಮಂ ತು ವೈಶ್ವದೇವಾತ್ಪ್ರಾಗೂರ್ಧ್ವಂ ವಾಪಿ ಸಮಾಚರೇತ್ ||

"ಅಶಕ್ತನಾಗಿದ್ದರೂ ಕೂಡ ಬ್ರಹ್ಮಯಜ್ಞವನ್ನು ಬಿಡದೆ ಅನುಷ್ಠಾನ ಮಾಡಬೇಕು. ಈ ಬ್ರಹ್ಮಯಜ್ಞವನ್ನು ವೈಶ್ವದೇವಕ್ಕಿಂತ ಮುಂಚೆ ಅಥವಾ ಹಿಂದೆ ಮಾಡಬೇಕು."

(ಈ ವಾಕ್ಯದಲ್ಲಿಯೂ ಮಧ್ಯಾಹ್ನಕಾಲದಲ್ಲಿ ಬ್ರಹ್ಮಯಜ್ಞವನ್ನು ಮಾಡಬೇಕೆಂದು ಹೇಳಿದೆ.)

ಹೀಗೆ "ತರ್ಪಯಿತ್ವಾ ಸುರಾದಿಕಾನ್" ಎಂಬ ವಾಕ್ಯದಲ್ಲಿ ಆಚಾರ್ಯರು ಹೇಳಿರುವ ತರ್ಪಣವು ಬ್ರಹ್ಮಯಜ್ಞಾಂಗ ತರ್ಪಣವಲ್ಲವೆಂದೂ, ಕೇಶವಾದಿದ್ವಾದಶಮೂರ್ತಿಗಳೇ ಮೊದಲಾದವರ ತರ್ಪಣಗಳೆಂದೂ ಸ್ಪಷ್ಟಪಡಿಸಿದ್ದಾಯಿತು. ಇದು ಕೆಲವು ವೃದ್ಧರ ಮತ."

ಈ ವೃದ್ಧರ ಮತದಲ್ಲಿ ಹೇಳಿರುವ ವಿಷಯಗಳಲ್ಲಿ ಬ್ರಹ್ಮಯಜ್ಞವನ್ನೂ, ಬ್ರಹ್ಮಯಜ್ಞಾಂಗತರ್ಪಣವನ್ನೂ, ಮಧ್ಯಾಹ್ನದಲ್ಲಿ ಮಾಡಬೇಕೆಂಬ ಅಂಶವು ಸ್ಮೃತಿಮುಕ್ತಾವಲೀಕಾರರಿಗೆ ಸಮ್ಮತವಾಗಿದೆ. ಬೆಳಿಗ್ಗೆ ಔಪಾಸನ ಹೋಮವು ಮುಗಿದ ಮೇಲೆ ಮಾಡುವುದು ಅವರಿಗೆ ಸಮ್ಮತವಲ್ಲ. ಬೆಳಿಗ್ಗೆ ಯಾವ ಕಾರಣದಿಂದಲೂ ಬ್ರಹ್ಮಯಜ್ಞಾಂಗತರ್ಪಣವನ್ನು ಮಾಡಕೂಡದು. ಪಿತೃಗಳಿಗೆ ತಿಲತರ್ಪಣವನ್ನೂ ಯಾವ ಕಾರಣದಿಂದಲೂ ಬೆಳಿಗ್ಗೆ ಕೊಡಕೂಡದು ಎಂಬುದೂ ಅವರ ಅಭಿಪ್ರಾಯ. ದ್ವಾದಶೀ ಮುಂತಾದ ದಿನಗಳಲ್ಲಿ ಮಾತ್ರ ಮಧ್ಯಾಹ್ನಕಾಲದಲ್ಲಿ ತರ್ಪಣವನ್ನು ಕೊಡುವ ಸಂಭವವಿಲ್ಲ. ಆ ದಿನಗಳಲ್ಲಿ ಮಾತ್ರ ಬೆಳಿಗ್ಗೆ ಬ್ರಹ್ಮಯಜ್ಞವನ್ನೂ, ಬ್ರಹ್ಮಯಜ್ಞಾಂಗವಾದ ತರ್ಪಣವನ್ನೂ ಕೊಡಬೇಕು. ಶ್ರಾದ್ಧಾಂಗವಾದ ಪರೇದ್ಯುಸ್ತಿಲ ತರ್ಪಣವನ್ನು ಮಾತ್ರ ಬೆಳಿಗ್ಗೆ ಮಾಡಬೇಕು. ಬೇರೆ ವಿಧವಾದ ತಿಲತರ್ಪಣವನ್ನು ಬೆಳಿಗ್ಗೆ ಕೊಡಕೂಡದು ಎಂಬ ವಿಷಯವನ್ನು ಸ್ಮೃತಿಮುಕ್ತಾವಲೀಕಾರರು ಬಹಳ ವಿಸ್ತಾರವಾಗಿ ಸಮರ್ಥಿಸಿದ್ದಾರೆ. ಆ ವಿಷಯವನ್ನು ಹೆಚ್ಚು ವಿಮರ್ಶಿಸದೆ ವಿರಮಿಸುವೆವು."

**(ಸದಾಚಾರಸ್ಮೃತಿ ಮೂಲ)**

**ವಸಿತ್ವಾ ವಾಸ ಆಚಮ್ಯ ಪ್ರೋಕ್ಷ್ಯಾಚಮ್ಯ ಚ ಮಂತ್ರತಃ |**
**ಗಾಯತ್ರ್ಯಾ ಚಾಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಮ್ || 6 ||**
**ಮಂತ್ರತಃ ಪರಿವೃತ್ಯಾಥ ಸಮಾಚಮ್ಯ ಸುರಾದಿಕಾನ್ |**
**ತರ್ಪಯಿತ್ವಾ ನಿಪೀಡ್ಯಾಥ ವಾಸೋ ವಿಸೃಜ್ಯ ಚಾಂಜಸಾ || 7 ||**
**ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವೈವ ತ್ರಿಪದೀಂ ಜಪೇತ್ |**
**ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಂ || 8 ||**

**ಪದಚ್ಛೇದ** - ವಸಿತ್ವಾ ವಾಸಃ ಆಚಮ್ಯ ಪ್ರೋಕ್ಷ್ಯ ಚ ಮಂತ್ರತಃ ಗಾಯತ್ರ್ಯಾ ಚ ಅಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಂ ಮಂತ್ರತಃ ಪರಿವೃತ್ಯ ಅಥ ಸಮಾಚಮ್ಯ ಸುರಾದಿಕಾನ್ ತರ್ಪಯಿತ್ವಾ ನಿಪೀಡ್ಯ ಅಥ ವಾಸಃ ವಿಸೃಜ್ಯ ಚ ಅಂಜಸಾ. ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವಾ ಏವ ತ್ರಿಪದೀಂ ಜಪೇತ್, ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಂ.

**ಅನ್ವಯ** - ವಾಸಃ ವಸಿತ್ವಾ, ಆಚಮ್ಯ, ವಾಸಃ ಮಂತ್ರತಃ ಪ್ರೋಕ್ಷ್ಯ, ಆಚಮ್ಯ, ಆಚಮ್ಯ, ಆಚಮ್ಯ ಮಂತ್ರತಃ ಪ್ರೋಕ್ಷ್ಯ, ಮಂತ್ರತಃ ಆಚಮ್ಯ, ಮಂತ್ರತಃ ಪ್ರೋಕ್ಷ್ಯ, ಮಂತ್ರತಃ ಪ್ರೋಕ್ಷ್ಯ, ಮಂತ್ರತಃ ಆಚಮ್ಯ, ಸೂರ್ಯಗತಂ ಹರಿಂ ಧ್ಯಾತ್ವಾ. ಗಾಯತ್ರ್ಯಾ ಅಂಜಲಿಂ ದತ್ವಾ, ಮಂತ್ರತಃ ಹರಿಂ ಧ್ಯಾತ್ವಾ, ಪರಿವೃತ್ಯ, ಸಮಾಚಮ್ಯ, ಅಥ ಸುರಾದಿಕಾನ್ ತರ್ಪಯಿತ್ವಾ, ಸಮಾಚಮ್ಯ, ಅಥ ಮಂತ್ರತಃ ವಾಸಃ ನಿಪೀಡ್ಯ, ಅಥ ವಾಸಃ ಅಂಜಸಾ ವಿಸ್ಸೃತ್ಯ ಚ ಸಹಸ್ರಪರಮಾಂ ಶತಮಧ್ಯಾಂ ದಶಾವರಾಂ ತ್ರಿಪದೀಮ್ ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವೈವ ಜಪೇತ್.

**ಅರ್ಥ** - "ವಾಸಃ" ಮಡಿವಸ್ತ್ರವನ್ನು "ವಸಿತ್ವಾ" ಪಂಚಕಚ್ಛಯುಕ್ತವಾಗಿಯೂ ಗುದ ಮುಂತಾದ ಅಶುಚಿಯಾದ ಪ್ರದೇಶಗಳು ಮುಚ್ಚುವಂತೆಯೂ ಧರಿಸಿ, "ಆಚಮ್ಯ" ಆಚಮನವನ್ನು ಮಾಡಿ, "ವಾಸಃ" ಹಿಂದೆ ಧರಿಸಿದ ಮತ್ತು ಸಮೀಪದಲ್ಲಿ ಇಟ್ಟಿರುವ ವಸ್ತ್ರವನ್ನು, "ಮಂತ್ರತಃ" "ಶುಚೀ ವೋ ಹವ್ಯಾ" ಎಂಬ ಮಂತ್ರದಿಂದ "ಪ್ರೋಕ್ಷ್ಯ" ಪ್ರೋಕ್ಷಣೆ ಮಾಡಿ, "ಆಚಮ್ಯ" ಆಚಮನ ಮಾಡಿ, "ಆಚಮ್ಯ" ಊರ್ಧ್ವಪುಂಡ್ರ ಮತ್ತು ಮುದ್ರೆಗಳನ್ನು ಧರಿಸಿ ಆಚಮನ ಮಾಡಿ, "ಆಚಮ್ಯ" ಪ್ರಾಣಾಯಾಮವನ್ನು ಮಾಡಿ "ಸಂಧ್ಯಾಮುಪಾಸಿಷ್ಯೇ" ಎಂದು ಸಂಕಲ್ಪವನ್ನು ಮಾಡಿ "ಮಂತ್ರತಃ ಪ್ರೋಕ್ಷ್ಯ" "ಆಪೋ ಹಿ ಷ್ಠಾ" ಎಂಬ ಮಂತ್ರದಿಂದ ಮಾರ್ಜನವನ್ನು ಮಾಡಿಕೊಂಡು "ಮಂತ್ರತಃ ಆಚಮ್ಯ" "ಸೂರ್ಯಶ್ಚ ಮಾ ಮನ್ಯುಶ್ಚ" ಎಂಬ ಮಂತ್ರದಿಂದ ನೀರನ್ನು ಒಮ್ಮೆ ಕುಡಿದು "ಮಂತ್ರತಃ ಪ್ರೋಕ್ಷ್ಯ" ತಮ್ಮ ತಮ್ಮ ಶಾಖೆಗಳಲ್ಲಿ ಹೇಳಿದಂತೆ ಪುನಃ ಮಾರ್ಜನಮಂತ್ರಗಳಿಂದ ಮಾರ್ಜನವನ್ನು ಮಾಡಿ, "ಮಂತ್ರತಃ" ಪಾಪಪುರುಷವಿಸರ್ಜನಮಂತ್ರದಿಂದ "ಪ್ರೋಕ್ಷ್ಯ" ಪಾಪಪುರುಷವಿಸರ್ಜನವನ್ನು ಮಾಡಿ, "ಮಂತ್ರತಃ ಆಚಮ್ಯ" ಆಚಮನಮಂತ್ರದಿಂದ ಆಚಮನವನ್ನು ಮಾಡಿ "ಸೂರ್ಯಗತಂ ಹರಿಂ ಧ್ಯಾತ್ವಾ" ಸೂರ್ಯನಲ್ಲಿ ಅಂತರ್ಗತನಾದ ಶ್ರೀಹರಿಯನ್ನು ಧ್ಯಾನ ಮಾಡುತ್ತಾ "ಗಾಯತ್ರ್ಯಾ ಅಂಜಲಿಂ ಚ ದತ್ವಾ" ವೇದೋಕ್ತವಾದ ಒಂದು ಅರ್ಘ್ಯವನ್ನೂ, ಸ್ಮೃತ್ಯುಕ್ತವಾದ ಎರಡು ಅರ್ಘ್ಯಗಳನ್ನೂ, ಗಾಯತ್ರೀಮಂತ್ರದಿಂದ ಕೊಟ್ಟು "ಮಂತ್ರತಃ ಹರಿಂ ಧ್ಯಾತ್ವಾ" ಗಾಯತ್ರೀಮಂತ್ರದಿಂದ ಶ್ರೀಹರಿಯನ್ನು ಧ್ಯಾನಿಸುತ್ತಾ "ಪರಿವೃತ್ಯ" ಪ್ರದಕ್ಷಿಣೆಯನ್ನು ಮಾಡಿ "ಸಮಾಚಮ್ಯ" ಆಚಮನವನ್ನು ಮಾಡಿ, "ಸುರಾದಿಕಾನ್" ಶುಕ್ಲಪಕ್ಷದಲ್ಲಿ ಕೇಶವಾದಿದ್ವಾದಶಮೂರ್ತಿಗಳನ್ನೂ, ಕೃಷ್ಣಪಕ್ಷದಲ್ಲಿ ಸಂಕರ್ಷಣಾದಿದ್ವಾದಶಮೂರ್ತಿಗಳನ್ನೂ, "ತರ್ಪಯಿತ್ವಾ" ತರ್ಪಣದಿಂದ ಸಂತೋಷಪಡಿಸಿ "ಸಮಾಚಮ್ಯ" ಆಚಮನವನ್ನು ಮಾಡಿ. "ಅಥ" ಅನಂತರದಲ್ಲಿ "ಮಂತ್ರತಃ ಯೇ ಕೇ ಚಾಸ್ಮತ್ಕುಲೇ ಜಾತಾಃ" ಎಂಬ ಮಂತ್ರದಿಂದ "ವಾಸಃ" ಪೂರ್ವದಲ್ಲಿ ಉಟ್ಟಿರುವ ಮತ್ತು ಸಮೀಪದಲ್ಲಿ ಇಟ್ಟುಕೊಂಡಿರುವ ವಸ್ತ್ರವನ್ನು "ನಿಪೀಡ್ಯ" ಹಿಂಡಿ ಬಿಟ್ಟು, "ಅಥ" ಅನಂತರದಲ್ಲಿ "ವಾಸಃ " ಅದೇ ವಸ್ತ್ರವನ್ನು "ಅಂಜಸಾ ವಿಸ್ಸೃತ್ಯ" ನೀರಿನಲ್ಲಿ ಬಿಡಿಸಿ ಆ ಮೇಲೆ ಬಿಸಿಲಿನಲ್ಲಿ ಒಣಗುವುದಕ್ಕಾಗಿ ಚೆನ್ನಾಗಿ ಬಿಡಿಸಿ ಹಾಕಿ "ಸಹಸ್ರಪರಮಾಂ" ಸಹಸ್ರಸಂಖ್ಯೆಯು ಉತ್ತಮವಾಗಿರುವುದಾಗಿಯೂ, "ಶತಮಧ್ಯಾಂ" ನೂರು ಸಂಖ್ಯೆಯು ಮಧ್ಯಮವಾಗಿರುವುದಾಗಿಯೂ, "ದಶಾವರಾಂ" ಹತ್ತು ಸಂಖ್ಯೆಯು ಕಡಿಮೆಯುಳ್ಳದ್ದಾಗಿಯೂ, ಇರುವ "ತ್ರಿಪದೀಂ" ಗಾಯತ್ರಿಯನ್ನು "ಅರ್ಕಮಂಡಲಗಂ" ಸೂರ್ಯಮಂಡಲದ ಮಧ್ಯದಲ್ಲಿರುವ "ವಿಷ್ಣುಂ" ಶ್ರೀಹರಿಯನ್ನು "ಧ್ಯಾತ್ವೈವ" ಧ್ಯಾನಿಸುತ್ತಲೇ "ಜಪೇತ್" ಜಪ ಮಾಡಬೇಕು.

**ವಿವರಣೆ** - (1) ಸ್ನಾನ ಮಾಡಿದ ಮೇಲೆ ಶುದ್ಧವಾದ ಮತ್ತು ಹರಿಯದಿರುವ ವಸ್ತ್ರವನ್ನು ಉಟ್ಟುಕೊಳ್ಳಬೇಕು. ಆ ವಸ್ತ್ರವನ್ನು ಪಂಚಕಚ್ಛವಾಗಿ ಧರಿಸಬೇಕು. ಆ ವಸ್ತ್ರಧಾರಣದಿಂದ ಸಂಧ್ಯಾವಂದನಾದಿಕಾಲದಲ್ಲಿ ಅಪರಿಶುದ್ಧವಾದ ಗುಹ್ಯೇಂದ್ರಿಯಾದಿಗಳ ದರ್ಶನಾದಿಗಳು ಏರ್ಪಡದಂತೆ ಮಾಡಿಕೊಳ್ಳಬೇಕು. (2) ಆಚಮನವನ್ನು ಮಾಡಬೇಕು. (3) ಸ್ನಾನ ಮಾಡುವಾಗ ಉಟ್ಟುಕೊಂಡಿದ್ದ ವಸ್ತ್ರವನ್ನು ಪಕ್ಕದಲ್ಲಿ ಇಟ್ಟುಕೊಳ್ಳಬೇಕು. ಆ ವಸ್ತ್ರವನ್ನು "ಶುಚೀ ವೋ ಹವ್ಯಾ" ಎಂಬ ಮಂತ್ರದಿಂದ ಪ್ರೋಕ್ಷಿಸಬೇಕು. (4) ಪುನಃ ಆಚಮನ ಮಾಡಬೇಕು. (5) ಊರ್ಧ್ವಪುಂಡ್ರಗಳನ್ನೂ, ಪಂಚಮುದ್ರೆಗಳನ್ನೂ

ಧರಿಸಬೇಕು. (6) ಆಚಮನ ಮಾಡಬೇಕು. (7) ಪ್ರಾಣಾಯಾಮವನ್ನು ಮಾಡಬೇಕು. (8) ಸಂಕಲ್ಪವನ್ನು ಮಾಡಬೇಕು. (9) "ಆಪೋ ಹಿ ಷ್ಠಾ" ಎಂಬ ಮಂತ್ರದಿಂದ ಮಾರ್ಜನ ಮಾಡಬೇಕು. (10) "ಸೂರ್ಯಶ್ಚ ಮಾ ಮನ್ಯುಶ್ಚ" ಎಂಬ ಮಂತ್ರದಿಂದ ಪ್ರಾತಃಕಾಲದಲ್ಲಿಯೂ, "ಅಗ್ನಿಶ್ಚ ಮಾ ಮನ್ಯುಶ್ಚ" ಎಂಬ ಮಂತ್ರದಿಂದ ಸಾಯಂಕಾಲದಲ್ಲಿಯೂ, "ಆಪಃ ಪುನಂತು" ಎಂಬ ಮಂತ್ರದಿಂದ ಮಧ್ಯಾಹ್ನದಲ್ಲಿಯೂ ಅಭಿಮಂತ್ರಿಸಲ್ಪಟ್ಟ ಜಲವನ್ನು ಕುಡಿಯಬೇಕು. (11) ಪುನಃ ತನ್ನ ಶಾಖೆಗೆ ಹೇಳಿರುವ ಮಂತ್ರಗಳಿಂದಲೂ "ಆಪೋ ಹಿ ಷ್ಠಾ" ಎಂಬ ಮಂತ್ರದಿಂದಲೂ ಪ್ರೋಕ್ಷಣೆ ಮಾಡಿಕೊಳ್ಳಬೇಕು. (12) ಪಾಪಪುರುಷನ ವಿಸರ್ಜನವನ್ನು ಮಾಡಬೇಕು. (13) ಆಚಮನವನ್ನು ಮಾಡಬೇಕು. (14) ಸೂರ್ಯಾಂತರ್ಗತನಾದ ಶ್ರೀಹರಿಯನ್ನು ಸ್ಮರಿಸುತ್ತಾ ಮೂರು ಅರ್ಘ್ಯಗಳನ್ನು ಕೊಡಬೇಕು. (15) ಸೂರ್ಯಮಂಡಲಾಂತರ್ಗತನಾದ ಶ್ರೀಹರಿಯನ್ನು ಸ್ಮರಿಸುತ್ತಾ "ಉದ್ಯಂತಮಸ್ತಂ" ಎಂಬ ಮಂತ್ರದಿಂದ ಪ್ರದಕ್ಷಿಣೆ ಮಾಡಬೇಕು. (16) ಆಚಮನವನ್ನು ಮಾಡಬೇಕು. (17) ಶುಕ್ಲಪಕ್ಷದಲ್ಲಿ ಕೇಶವಾದಿದ್ವಾದಶಮೂರ್ತಿಗಳನ್ನೂ, ಕೃಷ್ಣಪಕ್ಷದಲ್ಲಿ ಸಂಕರ್ಷಣಾದಿದ್ವಾದಶಮೂರ್ತಿಗಳನ್ನೂ, ವಾರಾಧಿಪತಿಗಳನ್ನೂ ತರ್ಪಣದಿಂದ ಸಂತೋಷಪಡಿಸಬೇಕು. (18) ಪಕ್ಕದಲ್ಲಿ ಇಟ್ಟಿರುವ ಮತ್ತು ಸ್ನಾನಕಾಲದಲ್ಲಿ ಉಟ್ಟಿರುವ ವಸ್ತ್ರವನ್ನು "ಯೇ ಕೇ ಚಾಸ್ಮತ್ಕುಲೇ ಜಾತಾಃ" ಎಂಬ ಮಂತ್ರದಿಂದ ಹಿಂಡಬೇಕು. ಹಿಂಡಿದ ಮೇಲೆ ನೀರಿನಲ್ಲಿ ಚೆನ್ನಾಗಿ ಬಿಡಿಸಿ ತೊಳೆಯಬೇಕು. ಆ ಮೇಲೆ ಬಿಸಿಲಿನಲ್ಲಿ ಒಣಗಲಿಕ್ಕೆ ಬಿಡಿಸಬೇಕು. (19) ಗಾಯತ್ರೀಮಂತ್ರ ಪ್ರತಿಪಾದ್ಯನಾದ ಶ್ರೀಹರಿಯನ್ನು ಸ್ಮರಿಸಬೇಕು. ಸ್ಮರಿಸುತ್ತಾ ಗಾಯತ್ರೀಮಂತ್ರವನ್ನು ಜಪಿಸಬೇಕು. ಈ ಗಾಯತ್ರೀಮಂತ್ರವನ್ನು ಸಾವಿರ ಸಲ ಮಾಡುವುದು ಉತ್ತಮ. ನೂರು ಸಲ ಮಾಡುವುದು ಮಧ್ಯಮ. ಹತ್ತು ಸಲ ಮಾಡುವುದು ಅಧಮಕಲ್ಪವೆನಿಸುತ್ತದೆ. ಅದಕ್ಕಿಂತ ಕಡಮೆ ಮಾಡಬಾರದು. ||6-8||

**ಆಸೂರ್ಯದರ್ಶನಾತ್ತಿಷ್ಠೇತ್ತತಸ್ತೂಪವಿಶೇತ ವಾ |**
**ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮುತ್ತರಾಂ ಸದಿವಾಕರಾಮ್ ||**
**ಉತ್ತರಾಮುಪವಿಶ್ಯೈವ ವಾಗ್ಯತಃ ಸರ್ವದಾ ಜಪೇತ್ || 9 ||**

ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ ಸರಸಿಜಾಸನಸನ್ನಿವಿಷ್ಟಃ |
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ||

**ಪದಚ್ಛೇದ** - ಆಸೂರ್ಯದರ್ಶನಾತ್ ತಿಷ್ಠೇತ್ ತತಃ ತು ಉಪವಿಶೇತ ವಾ ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮ್ ಉತ್ತರಾಂ ಸದಿವಾಕರಾಮ್ ಉತ್ತರಾಂ ಉಪವಿಶ್ಯ ಏವ ವಾಗ್ಯತಃ ಸರ್ವದಾ ಜಪೇತ್. ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ ಸರಸಿಜಾಸನಸಂನಿವಿಷ್ಟಃ ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ.

**ಅನ್ವಯ** - ಆಸೂರ್ಯದರ್ಶನಾತ್ ತಿಷ್ಠೇತ್, ತತಃ ತು ಉಪವಿಶೇತ ವಾ, ಪೂರ್ವಾಂ ಸನಕ್ಷತ್ರಾಂ ಸಂಧ್ಯಾಂ ವಾಗ್ಯತಃ ಸನ್ ಜಪೇತ್, ಉತ್ತರಾಮ್ ಉಪವಿಶ್ಯೈವ ಸದಿವಾಕರಾಂ ವಾಗ್ಯತಃ ಸನ್ ಸರ್ವದಾ ಜಪೇತ್, ಸವಿತೃಮಂಡಲಮಧ್ಯವರ್ತೀ ಸರಸಿಜಾಸನಸನ್ನಿವಿಷ್ಟಃ ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ ನಾರಾಯಣಃ ಸದಾ ಧ್ಯೇಯಃ.

**ಅರ್ಥ** - "ಆಸೂರ್ಯದರ್ಶನಾತ್" ಸೂರ್ಯೋದಯದವರೆಗೆ "ತಿಷ್ಠೇತ್" ಗಾಯತ್ರೀಮಂತ್ರವನ್ನು ಜಪಿಸುತ್ತಾ ನಿಂತಿರಬೇಕು. "ತತಸ್ತು" ಆ ಮೇಲೆ "ಉಪವಿಶೇತ ವಾ" ಕೂತರೆ ಕೂಡಬಹುದು. ನಿಂತರೆ ನಿಲ್ಲಬಹುದು, "ಪೂರ್ವಾಂ ಸಂಧ್ಯಾಂ ಸನಕ್ಷತ್ರಾಂ" ಬೆಳಿಗ್ಗೆ ಗಾಯತ್ರೀಮಂತ್ರವನ್ನು ನಕ್ಷತ್ರಗಳು ಇರುವಾಗಲೇ "ವಾಗ್ಯತಃ" ಮೌನವನ್ನು ಧರಿಸಿದವನಾಗಿ "ಜಪೇತ್" ಜಪಿಸಬೇಕು. "ಉತ್ತರಾಂ ಸದಿವಾಕರಾಂ" ಸಾಯಂಕಾಲದಲ್ಲಿ ಗಾಯತ್ರೀಮಂತ್ರವನ್ನು ಸೂರ್ಯನಿರುವಾಗಲೇ

"ವಾಗ್ಯತಃ ಸರ್ವದಾ ಜಪೇತ್" ಮೌನದಿಂದ ಯುಕ್ತನಾಗಿ ಸರ್ವಕಾಲದಲ್ಲಿಯೂ ಜಪಿಸಬೇಕು. "ಉತ್ತರಾಮ್ ಉಪವಿಶ್ಯೈವ" ಸಾಯಂಕಾಲದಲ್ಲಿ ಗಾಯತ್ರಿಯನ್ನು ಕುಳಿತುಕೊಂಡೇ "ವಾಗ್ಯತಃ ಜಪೇತ್" ಮೌನದಿಂದ ಜಪಿಸಬೇಕು. "ಸವಿತೃಮಂಡಲಮಧ್ಯವರ್ತೀ" ಸೂರ್ಯಮಂಡಲದ ಮಧ್ಯದಲ್ಲಿ ಇರುವವನಾಗಿಯೂ, "ಸರಸಿಜಾಸನಸಂನಿವಿಷ್ಟಃ" ಪದ್ಮಾಸನದಲ್ಲಿ ಕುಳಿತುಕೊಂಡವನಾಗಿಯೂ, "ಕೇಯೂರವಾನ್" ಭುಜಕೀರ್ತಿ ಎಂಬ ಆಭರಣದಿಂದ ಯುಕ್ತನಾಗಿಯೂ, "ಮಕರಕುಂಡಲವಾನ್" ಮೊಸಳೆಯ ಆಕಾರದಿಂದ ಯುಕ್ತವಾಗಿರುವ ಕರ್ಣಕುಂಡಲಗಳನ್ನು ಧರಿಸಿದವನಾಗಿಯೂ, "ಕಿರೀಟೀ" ಕಿರೀಟವನ್ನು ಧರಿಸಿದವನಾಗಿಯೂ, "ಹಾರೀ" ಮುತ್ತಿನ ಹಾರವನ್ನು ಧರಿಸಿದವನಾಗಿಯೂ, "ಹಿರಣ್ಮಯವಪುಃ" ಸುವರ್ಣವರ್ಣದಿಂದ ಯುಕ್ತವಾದ ಶರೀರವುಳ್ಳವನಾಗಿಯೂ, "ಧೃತಶಂಖಚಕ್ರಃ" ಶಂಖ ಮತ್ತು ಚಕ್ರಗಳನ್ನು ಧರಿಸಿದವನಾಗಿಯೂ, ಇರುವ "ನಾರಾಯಣಃ" ನಾರಾಯಣನು "ಸದಾ ಧ್ಯೇಯಃ" ಯಾವಾಗಲೂ ಧ್ಯಾನ ಮಾಡಲ್ಪಡಬೇಕು.

ತಾತ್ಪರ್ಯ - ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಗಾಯತ್ರೀಮಂತ್ರವನ್ನು ಜಪಿಸಲು ಆರಂಭಿಸಬೇಕು. ಸೂರ್ಯೋದಯದವರೆಗೆ ನಿಂತುಕೊಂಡೇ ಜಪವನ್ನು ಮಾಡಬೇಕು. ಸೂರ್ಯೋದಯವು ಏರ್ಪಡುವವರೆಗೆ ಸಾವಿರ ಸಂಖ್ಯೆ, ನೂರು ಸಂಖ್ಯೆ, ಹತ್ತು ಸಂಖ್ಯೆ ಮುಂತಾದ ಕ್ಲೃಪ್ತಸಂಖ್ಯೆಯು ಮುಗಿಯದಿದ್ದರೆ ಆ ಮೇಲೆಯೂ ಗಾಯತ್ರೀಮಂತ್ರವನ್ನು ಜಪಿಸಬೇಕು. ಆದರೆ ಸೂರ್ಯೋದಯಾನಂತರದಲ್ಲಿ ನಿಂತುಕೊಂಡೇ ಗಾಯತ್ರೀಮಂತ್ರವನ್ನು ಜಪಿಸಬೇಕೆಂಬ ನಿರ್ಬಂಧವಿಲ್ಲ. ಕುಳಿತುಕೊಂಡೋ, ನಿಂತುಕೊಂಡೋ, ಹೇಗೆ ಬೇಕಾದರೂ ಜಪಿಸಬಹುದು. ಪ್ರಾತಃಕಾಲದಲ್ಲಿ ಗಾಯತ್ರೀಮಂತ್ರವನ್ನು ಜಪಿಸುವಾಗ ನಕ್ಷತ್ರಗಳಿರುವಾಗಲೇ ಜಪಿಸಬೇಕು. ಸಾಯಂಕಾಲದಲ್ಲಿ ಗಾಯತ್ರೀಮಂತ್ರವನ್ನು ಜಪಿಸುವಾಗ ಸೂರ್ಯನು ಇದ್ದೇ ಇರಬೇಕು. ಗಾಯತ್ರೀ ಮಂತ್ರವನ್ನು ಜಪಿಸುವಾಗ ಪ್ರಾತಃಕಾಲದಲ್ಲಿಯೂ, ಸಾಯಂಕಾಲದಲ್ಲಿಯೂ ಮೌನವ್ರತವನ್ನು ಧರಿಸಬೇಕು. ಸಾಯಂಕಾಲದಲ್ಲಿ ಗಾಯತ್ರೀಮಂತ್ರವನ್ನು ಜಪಿಸುವಾಗ ಸೂರ್ಯನಿಗೆ ಅಭಿಮುಖವಾಗಿ ಕುಳಿತುಕೊಂಡೇ ಜಪಿಸಬೇಕು. ನಿಂತುಕೊಂಡು ಜಪಿಸಬಾರದು.

ಸೂರ್ಯಮಂಡಲದಲ್ಲಿ ಸನ್ನಿಹಿತನಾದ ಶ್ರೀನಾರಾಯಣನನ್ನು ಸ್ಮರಿಸಿಕೊಂಡೇ ಗಾಯತ್ರೀಮಂತ್ರವನ್ನು ಜಪಿಸಬೇಕು. ಸೂರ್ಯಾಂತರ್ಗತನಾದ ನಾರಾಯಣನು ಪದ್ಮಾಸನದಲ್ಲಿ ಕುಳಿತಂತೆ ಅವನನ್ನು ಧ್ಯಾನ ಮಾಡಬೇಕು. ಕೇಯೂರ ಅಂದರೆ ಭುಜಕೀರ್ತಿ ಎಂಬ ಆಭರಣದಿಂದಲೂ, ಮಕರಕುಂಡಲ ಅಂದರೆ ಮೊಸಳೆಯ ಆಕಾರವುಳ್ಳ ಕರ್ಣಕುಂಡಲ, ಕಿರೀಟ, ಮುತ್ತಿನ ಹಾರಗಳು ಇವುಗಳಿಂದಲೂ ಯುಕ್ತನಾಗಿರುವ ನಾರಾಯಣನನ್ನು ಸ್ಮರಿಸಬೇಕು. ಅವನ ಬಣ್ಣವು ಬಂಗಾರದಂತೆ ಹೊಳೆಯುತ್ತಿರುವುದಾಗಿ ಭಾವಿಸಬೇಕು. ಬಲಗೈಯಲ್ಲಿ ಚಕ್ರವನ್ನೂ, ಎಡಗೈಯಲ್ಲಿ ಶಂಖವನ್ನೂ ಧರಿಸಿದಂತೆ ಭಾವಿಸಬೇಕು.

### ಜಪಾಂಗವಾದ ಪ್ರಾಣಾಯಾಮ

ಬದ್ಧಾಸನೋ ನಿಯಮ್ಯಾಕ್ಷು ಸ್ಮೃತ್ವಾ ಚಾರ್ಷಾದಿಕಂ ತಥಾ |
ಸನ್ನಿಮೀಲಿತದೃಙ್ಮೌನೀ ಪ್ರಾಣಾಯಾಮಂ ಸಮಭ್ಯಸೇತ್ || (ಬೃಹಸ್ಪತಿ ವಚನ)

ವಿಷಯ ವಿವರಣ - ಸೂರ್ಯಾರ್ಘ್ಯವನ್ನು ಕೊಡಬೇಕು. ಪ್ರದಕ್ಷಿಣವನ್ನು ಮಾಡಬೇಕು. ಆಚಮನವನ್ನು ಮಾಡಬೇಕು. ಅದರ ಅನಂತರದಲ್ಲಿ ಯಾವುದಾದರೊಂದು ಆಸನದಲ್ಲಿ ಕುಳಿತುಕೊಳ್ಳಬೇಕು. ಆ ಆಸನದಲ್ಲಿ ಕುಳಿತವನು ಎಷ್ಟು ಹೊತ್ತಾದರೂ ಏಳದೆ ಅನಾಯಾಸವಾಗಿ ಕುಳಿತುಕೊಳ್ಳುವಷ್ಟು ದಾರ್ಢ್ಯವನ್ನು ಪಡೆಯಬೇಕು. ನಾನಾವಿಧವಾದ ನಿಯಮಗಳನ್ನು ಸ್ವೀಕರಿಸಬೇಕು. ಗಾಯತ್ರೀಮಂತ್ರದ ಋಷಿ ಅಂದರೆ ಆ ಮಂತ್ರವನ್ನು ಮೊಟ್ಟಮೊದಲು ಕಂಡು ಹಿಡಿದು ಪ್ರಪಂಚದಲ್ಲಿ ಪ್ರಚಾರ ಮಾಡಿದವನು, ಛಂದಸ್ಸು ಅಂದರೆ ಆ ಗಾಯತ್ರೀ ಮಂತ್ರದಲ್ಲಿರುವ ಅಕ್ಷರ ಪರಿಮಾಣಗಳು, ದೇವತೆ ಅಂದರೆ ಗಾಯತ್ರೀ ಮಂತ್ರದಿಂದ ಹೊಗಳಲ್ಪಡುವವನು ಮುಂತಾದ ಎಲ್ಲಾ ವಿಷಯಗಳನ್ನೂ ಸ್ಮರಿಸಬೇಕು. ಕಣ್ಣುಗಳನ್ನು ಮುಚ್ಚಬೇಕು. ಮೌನವ್ರತವನ್ನು ಧರಿಸಬೇಕು. ಹೀಗೆ ಮಾಡಿಕೊಂಡು ಪ್ರಾಣಾಯಾಮವನ್ನು ಮಾಡಬೇಕು.

ಯದ್ರಾತ್ರ್ಯಾಂ ಕುರುತೇ ಪಾಪಂ ಕರ್ಮಣಾ ಮನಸಾ ಗಿರಾ |
ತಿಷ್ಠನ್ಪೂರ್ವಸಂಧ್ಯಾಯಾಂ ಪ್ರಾಣಾಯಾಮೈರ್ವ್ಯಪೋಹತಿ ||
ಯದಹ್ನಾ ಕುರುತೇ ಪಾಪಂ ಕರ್ಮಣಾ ಮನಸಾ ಗಿರಾ |
ಆಸೀನಃ ಪಶ್ಚಿಮಾಂ ಸಂಧ್ಯಾಂ ಪ್ರಾಣಾಯಾಮೈರ್ವ್ಯಪೋಹತಿ ||
ತಥಾ ಮಧ್ಯಮಸಂಧ್ಯಾಯಾಂ ತಿಷ್ಠನ್ನಾಸೀನ ಏವ ವಾ ||

"ಜನರು ರಾತ್ರಿಯಲ್ಲಿಯೂ, ಹಗಲಿನಲ್ಲಿಯೂ, ನಾನಾವಿಧವಾದ ಪಾಪಗಳನ್ನು ಮಾಡುವರು. ಕೆಲವು ಪಾಪಗಳನ್ನು ದೇಹದಿಂದ ಮಾಡುವರು. ಕೆಲವು ಪಾಪಗಳನ್ನು ಮನಸ್ಸಿನಿಂದ ಅಯೋಗ್ಯ ವಿಷಯಗಳನ್ನು ಸ್ಮರಿಸುತ್ತಲೇ ಮಾಡುತ್ತಿರುವರು. ಮತ್ತೆ ಕೆಲವು ಪಾಪಗಳನ್ನು ಪರನಿಂದಾದಿಗಳನ್ನು ಮಾಡಿ ಮಾತುಗಳಿಂದ ಮಾಡುತ್ತಿರುವರು. ಈ ತ್ರಿವಿಧವಾದ ಪಾಪಗಳನ್ನು ರಾತ್ರಿಯಲ್ಲಿ ಮಾಡಿದ್ದರೆ ಹಗಲಿನಲ್ಲಿ ಬೆಳಿಗ್ಗೆ ನಿಂತುಕೊಂಡು ಮಾಡಿದ ಪ್ರಾಣಾಯಾಮದಿಂದ ಕಳೆದುಕೊಳ್ಳುವರು. ಹಗಲಿನಲ್ಲಿ ಮಾಡಿದ್ದರೆ ಸಾಯಂಕಾಲದಲ್ಲಿ ಕುಳಿತುಕೊಂಡು ಮಾಡಿದ ಪ್ರಾಣಾಯಾಮಗಳಿಂದ ಆ ಎಲ್ಲಾ ಪಾಪಗಳೂ ನಶಿಸುತ್ತವೆ. ಬೆಳಗಿನಿಂದ ಮಧ್ಯಾಹ್ನದವರೆಗೆ ಆ ಪಾಪಗಳನ್ನು ಮಾಡಿದ್ದರೆ ಕುಳಿತುಕೊಂಡಾಗಲೀ, ನಿಂತುಕೊಂಡಾಗಲೀ ಮಾಡಿದ ಪ್ರಾಣಾಯಾಮದಿಂದ ಆ ಪಾಪವು ನಶಿಸುತ್ತದೆ."

## ಗಾಯತ್ರೀಜಪಕ್ಕೆ ಯೋಗ್ಯವಾದ ದೇಶ

ಗೃಹೇ ತಾವಜ್ಜಪಃ ಪ್ರೋಕ್ತೋ ಗೋಷ್ಠೇ ದಶಗುಣೋ ಭವೇತ್ |
ಸಹಸ್ರಂ ಪುಣ್ಯತೀರ್ಥೇಷು ಅನಂತಂ ದೇವಸನ್ನಿಧೌ || (ಸಂಗ್ರಹ ವಚನ)

"ತನ್ನ ಮನೆಯಲ್ಲಿ ಮಾಡುವ ಜಪವು ಆ ಜಪಕ್ಕೆ ಎಷ್ಟು ಫಲವೋ ಅಷ್ಟೇ ಫಲವನ್ನು ಕೊಡುತ್ತದೆ. ಕೊಟ್ಟಿಗೆಯಲ್ಲಿ ಮಾಡುವ ಜಪವು ಹತ್ತರಷ್ಟು ಅಧಿಕವಾದ ಫಲವನ್ನು ಕೊಡುತ್ತದೆ. ತೀರ್ಥಗಳ ಸನ್ನಿಧಾನದಲ್ಲಿ ಮಾಡುತ್ತಿರುವ ಜಪಗಳು ಸಾವಿರಪಾಲು ಅಧಿಕವಾದ ಫಲವನ್ನುಕೊಡುತ್ತವೆ. ಶ್ರೀಹರಿಯ ಸನ್ನಿಧಾನದಲ್ಲಿ ಮಾಡುವ ಜಪವು ಅನಂತಫಲವನ್ನು ಕೊಡುತ್ತದೆ."

ದೇವಸ್ಯ ಪೂರ್ವದಿಗ್ಭಾಗೇ ಜಪೇದಾಯುಷ್ಯವರ್ಧನಮ್ |
ಪಾವಕೇ ಕಲಹಂ ಕುರ್ಯಾತ್ ದಕ್ಷಿಣೇ ಜ್ಞಾನವೃದ್ಧಿದಃ ||
ರಾಕ್ಷಸೇ ಮರಣಂ ಕುರ್ಯಾತ್ಪಶ್ಚಿಮೇ ಮೋಕ್ಷವರ್ಧನಃ |
ಆಕರ್ಷಣಂ ಸ್ಯಾದ್ವಾಯವ್ಯೇ ಉತ್ತರೇ ಸ್ತ್ರೀಪ್ರದಾಯಕಃ ||
ಉಚ್ಚಾಟನಕರಂ ತ್ರೀಶೇ ಮಧ್ಯಮೇ ಚಾರ್ಥಸಿದ್ಧಿದಮ್ |
ದೇವಾಗ್ರೇ ಸರ್ವಸಿದ್ಧಿಃ ಸ್ಯಾದಿತಿ ಸ್ಥಾನಸ್ಯ ಲಕ್ಷಣಮ್ || (ವ್ಯಾಸರ ವಚನ)

ದೇವರ ಪೂರ್ವದಿಕ್ಕಿನಲ್ಲಿ ಆಯುಷ್ಯವೃದ್ಧಿ, ಆಗ್ನೇಯದಿಕ್ಕಿನಲ್ಲಿ ಕಲಹ, ದಕ್ಷಿಣದಿಕ್ಕಿನಲ್ಲಿ ಜ್ಞಾನವೃದ್ಧಿ, ನೈಋತ್ಯ ದಿಕ್ಕಿನಲ್ಲಿ ಮರಣ, ಪಶ್ಚಿಮದಿಕ್ಕಿನಲ್ಲಿ ಮೋಕ್ಷ, ವಾಯವ್ಯದಿಕ್ಕಿನಲ್ಲಿ ಆಕರ್ಷಣ, ಉತ್ತರ ದಿಕ್ಕಿನಲ್ಲಿ ಸ್ತ್ರೀಪ್ರಾಪ್ತಿ, ಈಶಾನ್ಯದಿಕ್ಕಿನಲ್ಲಿ ಉಚ್ಚಾಟನ, ಮಧ್ಯದೇಶದಲ್ಲಿ ಅರ್ಥಸಿದ್ಧಿ, ದೇವರ ಮುಂದೆ ಸರ್ವಸಿದ್ಧಿ. ಹೀಗೆ ಜಪಿಸುವ ಸ್ಥಾನದ ಫಲವು ಏರ್ಪಡುತ್ತದೆ.

ಅಬ್ಧಿತೀರೇ ಗುರೋರ್ದೇಶೇ ದೇವಾಲಯಗೃಹೇಷು ಚ |
ಪುಣ್ಯಾಶ್ರಮೇಷು ಸರ್ವೇಷು ಜಪಃ ಕೋಟಿಗುಣೋ ಭವೇತ್ || (ಪುರಾಣ ವಾಕ್ಯ)

"ಸಮುದ್ರತೀರ, ಗುರುಗಳ ಸನ್ನಿಧಾನ, ದೇವಾಲಯ, ಪುಣ್ಯಾಶ್ರಮಗಳು ಮುಂತಾದ ಸ್ಥಳಗಳಲ್ಲಿ ಜಪವನ್ನು ಮಾಡಿದರೆ ಕೋಟಿಪಾಲು ಅಧಿಕವಾದ ಫಲವು ಬರುತ್ತದೆ."

### ಆಸನಫಲ

ವಂಶಾಸನೇ ದರಿದ್ರಃ ಸ್ಯಾತ್ಪಾಷಾಣೇ ವ್ಯಾಧಿಸಂಭವಃ |
ಧರಣ್ಯಾಂ ದುಃಖಮಾಪ್ನೋತಿ ದೌರ್ಭಾಗ್ಯಂ ದಾರುಕಾಸನೇ ||
ತೃಣಾಸನೇ ಯಶೋಹಾನಿಃ ಪಲ್ಲವೇ ಚಿತ್ತವಿಭ್ರಮಃ |
ಕುಶಾಸನೇ ಸರ್ವಸಿದ್ಧಿಃ ಕಂಬಲೇ ದುಃಖಮೇವ ಚ ||
ಕೃಷ್ಣಾಜಿನೇ ಜ್ಞಾನಸಿದ್ಧಿರ್ಮೋಕ್ಷಃ ಸ್ಯಾದ್ವ್ಯಾಘ್ರಚರ್ಮಣಿ |

"ಬಿದಿರಿನ ಆಸನದಲ್ಲಿ ಕುಳಿತು ಜಪವನ್ನು ಮಾಡಿದರೆ ದರಿದ್ರನಾಗುವನು. ಕಲ್ಲಿನ ಆಸನದಲ್ಲಿ ವ್ಯಾಧಿಯು ಸಂಭವಿಸುತ್ತದೆ. ಭೂಮಿಯಲ್ಲಿ ದುಃಖವು ಏರ್ಪಡುತ್ತದೆ. ಮರದ ಆಸನದಲ್ಲಿ ಕುಳಿತು ಜಪಿಸಿದರೆ ದೌರ್ಭಾಗ್ಯವು ಏರ್ಪಡುತ್ತದೆ. ಹುಲ್ಲಿನ ಆಸನದಲ್ಲಿ ಕುಳಿತು ಜಪಿಸಿದರೆ ಕೀರ್ತಿನಾಶವು ಏರ್ಪಡುತ್ತದೆ. ಚಿಗುರುಗಳ ಮೇಲೆ ಕುಳಿತು ಜಪಿಸಿದರೆ ಬುದ್ಧಿಯು ಸ್ವಾಧೀನದಲ್ಲಿ ಇಲ್ಲದಂತಾಗುತ್ತದೆ. ದರ್ಭೆಯ ಆಸನವು ಸರ್ವಸಿದ್ಧಿಕರವಾಗುತ್ತದೆ. ಕಂಬಳದ ಆಸನವು ದುಃಖಕರ. ಕೃಷ್ಣಾಜಿನವು ಜ್ಞಾನಸಿದ್ಧಿಯನ್ನು ಕೊಡುತ್ತದೆ. ಹುಲಿಯ ಚರ್ಮದಲ್ಲಿ ಜಪಿಸಿದರೆ ಮೋಕ್ಷಪ್ರಾಪ್ತಿಯಾಗುತ್ತದೆ."

ಅಭಿಚಾರೇ ವಿವರ್ಣಂ ಸ್ಯಾದ್ರಕ್ತಂ ವಶ್ಯಾದಿಕರ್ಮಣಿ |
ಶಾಂತಿಕೇ ಧವಲಃ ಪ್ರೋಕ್ತೋ ಸರ್ವಾರ್ಥಶ್ಚಿತ್ರಕಂಬಳಃ ||

"ಅಭಿಚಾರ ಅಂದರೆ ಇನ್ನೊಬ್ಬರನ್ನು ಕೊಲ್ಲುವುದಕ್ಕಾಗಿ ಮಾಡುವ ಅಭಿಚಾರ ಹೋಮದಲ್ಲಿ ಯಾವ ಸಲ್ಲಕ್ಷಣಗಳೂ ಇಲ್ಲದಿರುವ ವಿಕಾರವಾದ ರೂಪವುಳ್ಳ ಆಸನವು ವಿಹಿತವಾಗಿದೆ. ವಶ್ಯ ಮುಂತಾದ ಕರ್ಮಗಳಲ್ಲಿ ಕೆಂಪುಬಣ್ಣದ ಆಸನವು ವಿಹಿತವಾಗಿದೆ. ಶಾಂತಿಹೋಮ ಮುಂತಾದ ಶಾಂತಿಕರವಾದ ಕರ್ಮಗಳಲ್ಲಿ ಬಿಳಿಬಣ್ಣದ ಆಸನವು ವಿಹಿತವಾಗಿದೆ. ನಾನಾವಿಧವಾದ ಬಣ್ಣಗಳಿಂದ ಯುಕ್ತವಾದ ಚಿತ್ರಕಂಬಳವು ಸರ್ವಕಾರ್ಯಗಳಿಗೂ ಉಪಯುಕ್ತವಾಗಿದೆ."

### ಪದ್ಮಾಸನದ ಲಕ್ಷಣ

ಉತ್ತಾನೌ ಚರಣೌ ಕೃತ್ವಾ ಊರುಸಂಸ್ಥೌ ಪ್ರಯತ್ನತಃ |
ಊರುಮಧ್ಯೇ ತಥೋತ್ತಾನೌ ಪಾಣೀ ಕೃತ್ವಾ ತತೋ ದೃಶೌ ||
ನಾಸಾಗ್ರೇ ವಿನ್ಯಸೇದ್ದೃಷ್ಟಿಮಂತರ್ಮೂಲಕವಿದ್ಯಯಾ |
ಉತ್ತುಂಗಚಿಬುಕಂ ವಕ್ಷಃ ಸಂಸ್ಥಾಪ್ಯ ಪವನಂ ಶನೈಃ ||
ಇದಂ ಪದ್ಮಾಸನಂ ಪ್ರೋಕ್ತಂ ಸರ್ವವ್ಯಾಧಿವಿನಾಶನಮ್ |
ದುರ್ಲಭಂ ಯೋಜಕೇನಾಪಿ ಧೀಮತಾಮಪಿ ಲಭ್ಯತೇ ||

"ಎರಡು ಕಾಲುಗಳನ್ನೂ ತೊಡೆಗಳ ಮೇಲೆ ಇಟ್ಟುಕೊಳ್ಳಬೇಕು. ಎರಡು ಕೈಗಳನ್ನು ತೊಡೆಗಳ ಮೇಲೆ ಮೇಲ್ಮುಖವಾಗಿ ಇಟ್ಟುಕೊಳ್ಳಬೇಕು. ಮೂಗಿನ ತುದಿಯನ್ನು ನೋಡುತ್ತಿರಬೇಕು. ಗಲ್ಲಗಳನ್ನು ಎತ್ತರವಾಗುವಂತೆ ಮಾಡಿಕೊಳ್ಳಬೇಕು. ಶ್ವಾಸವನ್ನು ಎದೆಯಲ್ಲಿ ಬಿಗಿ ಹಿಡಿಯಬೇಕು. ಇದು ಪದ್ಮಾಸನವೆನಿಸುತ್ತದೆ. ಈ ಆಸನವು ಸರ್ವವ್ಯಾಧಿಗಳನ್ನು ಪರಿಹರಿಸುತ್ತದೆ."

### ಸ್ವಸ್ತಿಕಾಸನ

ಜಾನೂರ್ವೋರಂತರೇ ಸಮ್ಯಕ್ಕೃತ್ವಾ ಪಾದತಲೇ ಉಭೇ |
ಋಜುಕಾಯಃ ಸಮಾಸೀನಃ ಸ್ವಸ್ತಿಕಾಸನಮುಚ್ಯತೇ ||

"ಮೊಣಕಾಲುಗಳು ಮತ್ತು ತೊಡೆಗಳು ಇವುಗಳ ಮಧ್ಯದಲ್ಲಿ ಕೆಳಭಾಗದಲ್ಲಿ ಎರಡು ಕಾಲುಗಳನ್ನು ಇಟ್ಟುಕೊಳ್ಳಬೇಕು. ಋಜುವಾದ ದೇಹದಿಂದ ಕುಳಿತುಕೊಳ್ಳಬೇಕು. ಇದು ಸ್ವಸ್ತಿಕಾಸನವೆನಿಸುತ್ತದೆ."

ವೀರಾಸನ

ದಕ್ಷಿಣೋರೋರಧಃ ಪಾದಂ ವಾಮಂ ವಿನ್ಯಸ್ಯ ದಕ್ಷಿಣಮ್ |
ಪಾದಂ ವಾಮೋರ್ಧ್ವಗಂ ಕೃತ್ವಾ ವೀರಾಸನಮಿಹೋಚ್ಯತೇ ||

"ಬಲತೊಡೆಯ ಕೆಳಗೆ ಎಡಪಾದವನ್ನೂ ಎಡತೊಡೆಯ ಮೇಲೆ ಬಲಪಾದವನ್ನೂ ಇಟ್ಟುಕೊಂಡಿರುವುದು ವೀರಾಸನವೆನಿಸುತ್ತದೆ. ಈ ಮೂರು ಆಸನಗಳು ಜಪಕಾಲದಲ್ಲಿ ಸಿದ್ಧಿಕರವಾಗುತ್ತವೆ."

ಭೂತೋಚ್ಚಾಟನ

ಮುಖ್ಯಾಸನೇ ಸಮಾವಿಷ್ಟೋ ರಕ್ಷಿತಾಕ್ಷ ಉದಙ್ಮುಖಃ |
ಪ್ರಾಙ್ಮುಖೋದಙ್ಮುಖೋ ವಾಪಿ ಗುರುದೇವಾಗ್ನಿದಿಙ್ಮುಖಃ ||
ನಾಸಾಗ್ರನ್ಯಸ್ತದೃಙ್ಮೌನೀ ವಿದಧ್ಯಾದಾತ್ಮರಕ್ಷಣಮ್ |
ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ |
ಯೇ ಭೂತಾ ವಿಘ್ನಕರ್ತಾರಸ್ತೇ ನಶ್ಯಂತು ಶಿವಾಜ್ಞಯಾ ||

"ಮುಖ್ಯವಾದ ಮೇಲ್ಕಂಡ ಸ್ವಸ್ತಿಕಾಸನ ಮುಂತಾದ ಮೂರು ಆಸನಗಳಲ್ಲಿ ಉತ್ತರದಿಕ್ಕಿಗೆ ಅಭಿಮುಖವಾಗಿ ಕುಳಿತುಕೊಳ್ಳಬೇಕು. ಅಥವಾ ಉತ್ತರದಿಕ್ಕು ಮತ್ತು ಪೂರ್ವದಿಕ್ಕುಗಳಿಗೆ ಅಭಿಮುಖವಾಗಿ ಕುಳಿತುಕೊಳ್ಳಬೇಕು. ಅಥವಾ ಗುರುಗಳು, ದೇವರು, ಅಗ್ನಿ ಇವುಗಳಲ್ಲಿ ಯಾವುದಾದರೊಂದಕ್ಕೆ ಅಭಿಮುಖವಾಗಿ ಕುಳಿತುಕೊಳ್ಳಬೇಕು. ಮೂಗಿನ ತುದಿಯನ್ನು ನೋಡುತ್ತಿರಬೇಕು. ಮೌನವ್ರತವನ್ನು ಧರಿಸಬೇಕು. ಹೀಗೆ ಮಾಡಿಕೊಂಡು ಆತ್ಮರಕ್ಷಣೆಗಾಗಿ ಹೇಳಲ್ಪಟ್ಟ ಅಂಗನ್ಯಾಸ ಮುಂತಾದವುಗಳನ್ನು ಮಾಡಬೇಕು. "ಅಪಸರ್ಪಂತು" ಮುಂತಾದ ಮಂತ್ರಗಳಿಂದ ಭೂತಗಳನ್ನು ಉಚ್ಚಾಟನೆ ಮಾಡಬೇಕು."

ಆಸನಶುದ್ಧಿಮಂತ್ರ

"ಪೃಥಿವ್ಯಾಃ ಮೇರು ಪೃಷ್ಠ ಋಷಿಃ | ಸುತಲಂ ಛಂದಃ | ಕೂರ್ಮೋ ದೇವತಾ | ಆಸನೇ ವಿನಿಯೋಗಃ |

ಪೃಥ್ವಿ ತ್ವಯಾ ಧೃತಾ ದೇವಿ ದೇವಿ ತ್ವಂ ವಿಷ್ಣುನಾ ಧೃತಾ |
ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ ||

"ಆಸನೇ ಸೋಮಮಂಡಲೇ ಕೂರ್ಮಸ್ಕಂಧೇ ಉಪವಿಷ್ಟೋಽಸ್ಮಿ, ಭೂರ್ಭುವಃಸ್ವರೋಮಿದಮಾಸನಮ್" ಎಂದು ಹೇಳುತ್ತಾ ಆಸನವನ್ನು ಮುಟ್ಟಬೇಕು.

ಮಾಂ ಚ ಪೂತಂ ಕುರು ಧರೇ ನತೋಽಸ್ಮಿ ತ್ವಾಂ ಸುರೇಶ್ವರಿ |

"ಓಂ ಮಂ ಮಂಡೂಕಾಯ ನಮಃ, ಓಂ ಕುಂ ಕೂರ್ಮಾಯ ನಮಃ, ಓಂ ವಂ ವರಾಹಾಯ ನಮಃ, ಓಂ ಶೇಂ ಶೇಷಾಯ ನಮಃ, ಓಂ ಕಂ ಕಾಲಾಗ್ನಿರುದ್ರಾಯ ನಮಃ, ಓಂ ವಂ ವಜ್ರಾಸನಾಯ ನಮಃ" ಎಂದು ಹೇಳುತ್ತಾ ಆಸನವನ್ನು ಮುಟ್ಟಿ ಜಪಿಸಬೇಕು. ಆ ಮೇಲೆ ದಿಗ್ಬಂಧನವನ್ನು ಮಾಡಬೇಕು."

ದಿಗ್ಬಂಧನಮಂತ್ರ

"ಓಂ ಅಸ್ತ್ರಾಯ ಫಟ್ ಓಂ" ಎಂಬ ಸುದರ್ಶನ ಮಂತ್ರವನ್ನು ಹೇಳುತ್ತಾ ಹತ್ತು ದಿಕ್ಕುಗಳಲ್ಲಿ ತೋರ್ಬೆರಳು, ನಡು ಬೆರಳು ಇವುಗಳನ್ನು ತೋರಿಸಬೇಕು. ಈ ಎರಡು ಬೆರಳುಗಳು ಒಟ್ಟುಗೂಡಿದರೆ ನಾರಾಚಮುದ್ರೆಯೆನಿಸುತ್ತದೆ. ಹೀಗೆ

ನಾರಾಚಮುದ್ರೆಯನ್ನು ಹತ್ತು ದಿಕ್ಕುಗಳಿಗೂ ತೋರಿಸುತ್ತಾ ಅಗ್ನಿಯ ಕೋಟೆಯು ತನ್ನ ಸುತ್ತಲೂ ಏರ್ಪಟ್ಟಂತೆಯೂ, ಅದನ್ನು ದಾಟಿ ಯಾವ ದೈತ್ಯರೂ ಒಳಗೆ ಬಾರದಂತೆ ಮಾಡಿದಂತೆಯೂ ಭಾವಿಸಬೇಕು. ಮೇಲ್ಕಂಡ ಸುದರ್ಶನಮಂತ್ರವನ್ನು ಜಪಿಸುತ್ತಾ ರಂ, ರಂ, ಎಂದು ಸುದರ್ಶನ ಬೀಜಾಕ್ಷರವನ್ನು ಜಪಿಸುತ್ತಾ, "ದಿಕ್ಷು ವಿದಿಕ್ಷು ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ" ಎಂದು ಹೇಳುತ್ತಾ ದಿಗ್ಬಂಧನವನ್ನು ಮಾಡಬೇಕು.

ಅಸ್ತ್ರಮಂತ್ರೇಣ ಕಕುಭೋ ಬಧ್ನನ್ ಭೂಮ್ಯೂರ್ಧ್ವಜಂ ಹವಿಃ |
ಪ್ರಾಕಾರಾವಸ್ಥಿತಂ ಧ್ಯಾಯನ್ ತೇಜೋಮಂತ್ರೇಣ ಮಂತ್ರವಿತ್ ||
ಚಕ್ರಮುದ್ರಾಂ ಚ ಖೇ ನ್ಯಸ್ಯ ಚಕ್ರಮಂತ್ರೇಣ ಸಾಧಕಃ |
ಗೋಪಾಯೇನ್ನಿತ್ಯಮಾತ್ಮಾನಂ ಪ್ರಾಣಾಯಾಮೈಸ್ತ್ರಿಭಿಃ ಕ್ರಮಾತ್ || (ಪಾದ್ಮಸಂಹಿತಾ)

"ಅಸ್ತ್ರಮಂತ್ರದಿಂದ ದಿಗ್ಬಂಧನವನ್ನು ಮಾಡಬೇಕು. ಭೂಮಿಯಲ್ಲಿಯೂ, ಆಕಾಶದಲ್ಲಿಯೂ, ಇರುವ ಹವಿಸ್ಸನ್ನೂ, ತೇಜೋಮಯವಾದ ಸುದರ್ಶನಚಕ್ರಮಂತ್ರದಿಂದ ರಕ್ಷಿಸಬೇಕು. ಚಕ್ರಮುದ್ರೆಯನ್ನು ಆಕಾಶಕ್ಕೆ ತೋರಿಸಿ ಆಕಾಶದಲ್ಲಿಯೂ ಸುದರ್ಶನಚಕ್ರವು ತನ್ನನ್ನು ರಕ್ಷಿಸುವಂತೆ ಭಾವಿಸಬೇಕು. ಸುದರ್ಶನಚಕ್ರಮಂತ್ರದಿಂದ ಮೂರು ಸಲ ಪ್ರಾಣಾಯಾಮವನ್ನು ಮಾಡಿ ಆ ಚಕ್ರವು ತನ್ನ ದೇಹದೊಳಗೂ ತನ್ನನ್ನು ರಕ್ಷಿಸುವಂತಿರುವಂತೆ ಭಾವಿಸಬೇಕು."

ಶಂಖಚಕ್ರಗದಾಖಡ್ಗಶಾರ್ಙ್ಗಪದ್ಮಾನನುಕ್ರಮಾತ್ |
ತಾರ್ಕ್ಷ್ಯಂ ಚ ವನಮಾಲಾಂ ಚ ಮುದ್ರಾಮಷ್ಟೌ ಪ್ರಯೋಜಯೇತ್ ||
ಪಶ್ಚಾದ್ಧ್ಯಾಯೇಜ್ಜಗನ್ನಾಥಮಾಸನೇ ಚಾರ್ಚಯೇದ್ವಿಭುಮ್ |

"ಶಂಖ, ಚಕ್ರ, ಗದೆ, ಖಡ್ಗ, ಶಾರ್ಙ್ಗಧನುಸ್ಸು, ಪದ್ಮ, ತಾರ್ಕ್ಷ್ಯ, ವನಮಾಲಾ ಎಂಬ ಎಂಟು ಮುದ್ರೆಗಳನ್ನು ಕ್ರಮವಾಗಿ ತೋರಿಸಬೇಕು. ಹೀಗೆ ದಿಗ್ಬಂಧನವನ್ನು ಮಾಡಿಕೊಂಡು ಶ್ರೀಹರಿಯನ್ನು ಧ್ಯಾನಿಸುತ್ತಾ ಪೂಜಿಸಬೇಕು."

## ಗುರುನಮಸ್ಕಾರ

ಕೃಷ್ಣಾಜಿನೇ ಕುಶೇ ವಾಪಿ ಕಂಬಲೇ ವಾಽಥ ಪೀಠಕೇ |
ಉಪವಿಶ್ಯ ಗುರೂನ್ನತ್ವಾ ಜಪೇತಾಽಥ ಸಮಾಹಿತಃ || (ವಸಿಷ್ಠರ ವಚನ)

"ಕೃಷ್ಣಾಜಿನ, ದರ್ಭೆ, ಕಂಬಳಿ, ಪೀಠ ಮುಂತಾದ ಶುದ್ಧವಾದ ಆಸನದಲ್ಲಿ ಕುಳಿತವನಾಗಿ ಗುರುಗಳನ್ನು ನಮಸ್ಕರಿಸಿ ಸಾವಧಾನವಾದ ಮನಸ್ಸಿನಿಂದ ಜಪಿಸಬೇಕು."

ಸ್ಮೃತ್ವಾ ಗುರುಂ ಪೂರ್ವಗುರುಮಾದಿಮೂಲಗುರೂಂಸ್ತಥಾ |
ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ || (ತಂತ್ರಸಾರ)

"ಸಾಕ್ಷಾತ್ತಾಗಿ ಪಾಠ ಹೇಳಿದ ಗುರುಗಳು, ಅವರ ವಿದ್ಯಾಗುರುಗಳು, ಆದಿಗುರುಗಳಾದ ಮಧ್ವಾಚಾರ್ಯರು, ಮೂಲಗುರುಗಳಾದ ವೇದವ್ಯಾಸದೇವರು, ಜಪಿಸುತ್ತಿರುವ ಮಂತ್ರದಿಂದ ಹೊಗಳಲ್ಪಡುವ ದೇವತೆ, ವಾಸುದೇವ, ಇಷ್ಟು ಜನರನ್ನು ವಿದ್ಯಾಭ್ಯಾಸದ ಆರಂಭದಲ್ಲಿ ಸ್ಮರಿಸಬೇಕು. ಹೀಗೆ ವಿದ್ಯಾಭ್ಯಾಸವನ್ನು ಮಾಡುವವನು ಮೋಕ್ಷ ಮತ್ತು ಜ್ಞಾನಸಿದ್ಧಿಯನ್ನು ಪಡೆಯುವನು. "ಓಂ ಶ್ರೀಗುರುಭ್ಯೋ ನಮಃ, ಓಂ ಪರಮಗುರುಭ್ಯೋ ನಮಃ, ಓಂ ಸರ್ವಗುರುಭ್ಯೋ ನಮಃ, ಓಂ ಸರ್ವದೇವತಾಭ್ಯೋ ನಮಃ, ಓಂ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ, ಓಂ ವೇದವ್ಯಾಸಾಯ ನಮಃ, ಓಂ ಭಾರತ್ಯೈ ನಮಃ, ಓಂ ಸರಸ್ವತ್ಯೈ ನಮಃ, ಓಂ ವಾಯವೇ ನಮಃ, ಓಂ ಬ್ರಹ್ಮಣೇ ನಮಃ, ಓಂ ಮಹಾಲಕ್ಷ್ಮ್ಯೈ ನಮಃ, ಓಂ ಶ್ರೀನಾರಾಯಣಾಯ ನಮಃ, ಓಂ ಶ್ರೀವಾಸುದೇವಾಯ ನಮಃ" ಎಂಬ ಪಂಚಸಂಸ್ಕಾರಸಂಗ್ರಹ ಗ್ರಂಥದಲ್ಲಿ ಈ ಗುರುನಮಸ್ಕಾರವು ವಿಸ್ತಾರವಾಗಿ ಹೇಳಲ್ಪಟ್ಟಿದೆ."

## ಪಾಪಪುರುಷಸ್ವರೂಪ

ಆದಾದೇವ ಜಪೇ ಕುರ್ಯಾಚ್ಛೋಷಣಂ ದಹನಂ ಪ್ಲುತಿಮ್ ।
ವಾಯ್ವಗ್ನಿವಾರುಣೈರ್ಬೀಜೈರ್ಧ್ಯಾತ್ವಾ ತನ್ಮಂಡಲೇ ಹರಿಮ್ ॥ (ಶ್ರೀಮದಾಚಾರ್ಯರ ವಚನ)

"ಜಪದ ಆರಂಭದಲ್ಲಿಯೇ "ಯಂ" ಎಂಬ ವಾಯುಬೀಜಮಂತ್ರದಿಂದ ಪಾಪ ಪುರುಷನನ್ನು ಒಣಗಿಸಬೇಕು. ಅನಂತರದಲ್ಲಿ "ರಂ" ಎಂಬ ಅಗ್ನಿಬೀಜಮಂತ್ರದಿಂದ ಪಾಪ ಪುರುಷನನ್ನು ಸುಡಬೇಕು. ಪುನಃ "ಯಂ" ಎಂಬ ವಾಯುಬೀಜಮಂತ್ರದಿಂದ ಪಾಪಪುರುಷನ ಬೂದಿಯನ್ನು ಮೂಗಿನ ಎಡರಂಧ್ರದಿಂದ ಹೊರಗೆ ಕಳುಹಿಸಬೇಕು. ಕೊನೆಗೆ ದೇಹವು ಶುದ್ಧವಾಗುವುದಕ್ಕಾಗಿ "ವಂ" ಎಂಬ ವರುಣಬೀಜಮಂತ್ರದಿಂದ ಅಮೃತಜಲದಿಂದ ದೇಹವನ್ನು ಅಭಿಷೇಕ ಮಾಡಬೇಕು. ವಾಯುದೇವರಲ್ಲಿ ಸನ್ನಿಹಿತವಾದ ಅನಿರುದ್ಧರೂಪಿಯಾದ ಅದೇ ವಾಯುದೇವರದಲ್ಲಿ ಸನ್ನಿಹಿತನಾದ ಅನಿರುದ್ಧರೂಪಿಯಾದ ಶ್ರೀಹರಿಯು ಪಾಪಪುರುಷನನ್ನು ಒಣಗಿಸುತ್ತಿರುವುದಾಗಿಯೂ, ಅದೇ ವಾಯುದೇವರಲ್ಲಿ ಸನ್ನಿಹಿತನಾದ ಸಂಕರ್ಷಣರೂಪಿಯಾದ ಶ್ರೀಹರಿಯು ಪಾಪಪುರುಷನನ್ನು ಸುಟ್ಟ ಮೇಲೆ ಅವನ ಬೂದಿಯನ್ನು ಹೊರಪಡಿಸುವುದಾಗಿಯೂ ಭಾವಿಸಬೇಕು. ಅಗ್ನ್ಯಂತರ್ಗತನಾದ ಪ್ರದ್ಯುಮ್ನರೂಪಿಯಾದ ಶ್ರೀಹರಿಯು ಪಾಪಪುರುಷನನ್ನು ಸುಡುವುದಾಗಿಯೂ, ವರುಣಾಂತರ್ಗತನಾದ ವಾಸುದೇವನು ಅಮೃತವೃಷ್ಟಿಯಿಂದ ದೇಹವನ್ನು ಶುದ್ಧ ಮಾಡುತ್ತಿರುವುದಾಗಿಯೂ ಭಾವಿಸಬೇಕು."

ಸುಖಪದ್ಮಾಸನೋ ಭೂತ್ವಾ ಭೂತಶುದ್ಧಿಂ ಸಮಾಚರೇತ್ ।
ಆತ್ಮಾನಂ ಶಿರಸಿ ಸ್ಥಾಪ್ಯ ಸುಷುಮ್ನಾನಾಭಿಮಾರ್ಗತಃ ॥
ಸ್ವದೇಹಸ್ಥಮಘಂ ಕೃತ್ಸ್ನಂ ಚಿಂತಯೇದ್ಧದಿ ವೈಷ್ಣವಃ । (ವಾಸಿಷ್ಠಸ್ಮೃತಿವಚನ)

"ಸುಖವಾಗಿ ಪದ್ಮಾಸನದಲ್ಲಿ ಕುಳಿತುಕೊಂಡು ಭೂತಶುದ್ಧಿಯನ್ನು ಮಾಡಬೇಕು. ಶ್ರೀಹರಿಯನ್ನು ಸುಷುಮ್ನಾ ನಾಡಿಮಾರ್ಗದಿಂದ ಕ್ರಮವಾಗಿ ಮೇಲೆ ತರಬೇಕು. ಬ್ರಹ್ಮರಂಧ್ರದಲ್ಲಿ ಕುಳ್ಳಿರಿಸಬೇಕು. ತನ್ನ ದೇಹದಲ್ಲಿರುವ ಎಲ್ಲಾ ಪಾಪಗಳನ್ನೂ ಸ್ಮರಿಸಬೇಕು."

ಸ್ಮೃತ್ವಾ ಪಾತಕಪಂಚಾಂಗಂ ಪಾತಕೋಪಾಂಗಸಂಜ್ಞಿತಮ್ ।
ಉಪಪಾತಕಸರ್ವಾಂಗಂ ಕೃಷ್ಣಂ ಕುಕ್ಷೌ ವಿಚಿಂತಯೇತ್ ॥

"ಮಹಾಪಾತಕಗಳು, ಪಾತಕಗಳು, ಉಪಪಾತಕಗಳು ಮುಂತಾದ ಸಕಲಪಾತಕಗಳೇ ದೇಹವಾಗಿರುವ ಕಪ್ಪುಬಣ್ಣವುಳ್ಳ ಪಾಪಪುರುಷನನ್ನು ಎಡಹೊಟ್ಟೆಯಲ್ಲಿರುವಂತೆ ಸ್ಮರಿಸಬೇಕು."

ಬ್ರಹ್ಮಹತ್ಯಾಶಿರಸ್ಕಂ ಚ ಸ್ವರ್ಣಸ್ತೇಯಭುಜದ್ವಯಮ್ ।
ಸುರಾಪಾನಹೃದಾ ಯುಕ್ತಂ ಗುರುತಲ್ಪಕಟಿದ್ವಯಮ್ ॥
ತತ್ಸಂಯೋಗಪದದ್ವಂದ್ವಮಂಗಪ್ರತ್ಯಂಗಪಾತಕಮ್ ।
ಉಪಪಾತಕರೋಮಾಣಂ ರಕ್ತಶ್ಮಶ್ರುವಿಲೋಚನಮ್ ॥
ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌ ಪಾಪಂ (ವಾಮೇ) ವಿಚಿಂತಯೇತ್ । (ಸಂಗ್ರಹ ವಚನ)

"ಬ್ರಹ್ಮಹತ್ಯೆಯು ತಲೆ, ಸುವರ್ಣದ ಅಪಹಾರವು ಎರಡು ಕೈಗಳು, ಮದ್ಯಪಾನವು ಎದೆ, ಗುರುಪತ್ನಿಯರ ಆಸೆಯು ಸೊಂಟದಲ್ಲಿ ಹಿಂದಿನ ಮತ್ತು ಮುಂದಿನ ಭಾಗ, ಗುರುಪತ್ನೀಸಂಗವು ಎರಡು ಕಾಲುಗಳು, ಪಾತಕಗಳೆಲ್ಲವೂ ಉಳಿದ ಅವಯವಗಳು, ಉಪಪಾತಕಗಳೆಲ್ಲವೂ ರೋಮಗಳು, ಇವುಗಳಿಂದ ಯುಕ್ತನಾಗಿರುವ, ಕೆಂಪುಬಣ್ಣವುಳ್ಳ ಮೀಸೆಗಳಿಂದಲೂ, ಕಣ್ಣುಗಳಿಂದಲೂ ಯುಕ್ತನಾಗಿರುವ ಖಡ್ಗ ಮತ್ತು ಗುರಾಣಿಯನ್ನು ಧರಿಸಿರುವ ಮತ್ತು ಕಪ್ಪುಬಣ್ಣದಿಂದ ಯುಕ್ತನಾಗಿರುವ ಪಾಪಪುರುಷನನ್ನು ಎಡಹೊಟ್ಟೆಯಲ್ಲಿ ಸ್ಮರಿಸಬೇಕು."

"ಸ್ವದೇಹಸ್ಥಮಘಂ ಕೃತ್ಸ್ನಮ್"

"ತನ್ನ ದೇಹದಲ್ಲಿರುವ ಮತ್ತು ಅನೇಕಜನ್ಮಗಳಲ್ಲಿ ಸಂಪಾದಿಸಿದ ಎಲ್ಲಾ ಪಾಪಗಳನ್ನೂ ಸ್ಮರಿಸಬೇಕು."

ನಾಭಿಸ್ಥಾನೇ ಸ್ಥಿತಂ ನಾಲಂ ಚಕ್ರಷಟ್ಕೋಣಸಂಯುತಮ್ |
ಚಿಂತಯಿತ್ವಾಽಥ ಚೋತ್ಪನ್ನವಾಯುನಾ ಶೋಷಯೇದಘಮ್ ||
ಪ್ರಾಣಾಯಾಮವಿಧಾನೇನ ವಾಯುಬೀಜಂ ಜಪೇದ್ಬುಧಃ |
ತ್ರಿಕೋಣಮಗ್ನಿಚಕ್ರಂ ತು ತದ್ಬೀಜಸಹಿತಂ ಹೃದಿ ||
ಚಿಂತಯಿತ್ವಾ ದಕ್ಷಿಣೇನ ಪೂರಯೇದನಿಲಂ ಬುಧಃ |
ತದುತ್ಪನ್ನಾಗ್ನಿನಾ ದಗ್ಧ್ವಾ ವಹ್ನಿಬೀಜಂ ಜಪೇತ್ತಥಾ ||
ಪ್ರಾಣಾಯಾಮವಿಧಾನೇನ ವಾಮತೋ ರೇಚಯೇದ್ಬುಧಃ |
ವಾರುಣಂ ಬೀಜಸಂಯುಕ್ತಂ ಚಂದ್ರಬಿಂಬಮಧೋಮುಖಮ್ ||
ಧ್ಯಾತ್ವಾ ತತ್ಪ್ಲಾಯೇದ್ದೇಹಂ ತದುತ್ಪನ್ನೇನ ವಾರಿಣಾ |
ಪ್ರಕ್ಷಾಳ್ಯ ಸಕಲಂ ದೇಹಂ ದಕ್ಷಿಣೇನೈವ ರೇಚಯೇತ್ ||
ಸ್ವಾತ್ಮಾನಂ ಹೃದಿ ವಿನ್ಯಸ್ಯ ಯೋಗಧ್ಯಾನಂ ಸಮಾಚರೇತ್ | (ಹಾರೀತವಚನ)

"ಹೊಕ್ಕಳಿನ ಪ್ರದೇಶದಲ್ಲಿ ಸುಷುಮ್ನಾನಾಡಿಯಲ್ಲಿ ಆರುಕೋಣಗಳಿಂದ ಯುಕ್ತವಾದ ಚಕ್ರವಿದೆ. ಆ ಚಕ್ರದಲ್ಲಿರುವ ವಾಯುವಿನಲ್ಲಿ ಅನಿರುದ್ಧರೂಪಿಯಾದ ಪರಮಾತ್ಮನಿರುವನು. ಅವನನ್ನು ಸ್ಮರಿಸಬೇಕು. ಅವನಿಂದ ಹುಟ್ಟಿದ ವಾಯುವಿನಿಂದ ಪಾಪಪುರುಷನನ್ನು ಒಣಗಿಸಬೇಕು. "ಓಂ ಯಂ" ಎಂಬ ವಾಯುಬೀಜಮಂತ್ರವನ್ನು ಜಪಿಸಬೇಕು. ಎದೆಯಲ್ಲಿ ಮೂರು ಕೋಣಗಳುಳ್ಳ ಚಕ್ರವಿದೆ. ಆ ಚಕ್ರದಲ್ಲಿರುವ ಅಗ್ನಿಯಲ್ಲಿ ಪ್ರದ್ಯುಮ್ನರೂಪಿಯಾದ ಶ್ರೀಹರಿಯು ಸನ್ನಿಹಿತನಾಗಿರುವನು. ಅವನಿಂದ ಹುಟ್ಟಿದ ಅಗ್ನಿಯಿಂದ ಪಾಪಪುರುಷನನ್ನು ಸುಡಬೇಕು. ಅಗ್ನಿಬೀಜಮಂತ್ರವಾಗಿರುವ "ಓಂ ರಂ" ಎಂಬ ಮಂತ್ರವನ್ನು ಜಪಿಸಬೇಕು. ಮೂಗಿನ ಪ್ರದೇಶದಲ್ಲಿ ಸಂಕರ್ಷಣರೂಪಿಯಾದ ಶ್ರೀಹರಿಯು ವಾಯುವಿನಲ್ಲಿ ಸನ್ನಿಹಿತನಾಗಿರುವನು. ಅವನು ಬೂದಿಯಾದ ಪಾಪಪುರುಷನ ಬೂದಿಯನ್ನು ಎಡಮೂಗಿನ ರಂಧ್ರದಿಂದ ಹೊರತುಪಡಿಸುವಂತೆ ಭಾವಿಸಬೇಕು. ಪುನಃ ವಾಯುಬೀಜಮಂತ್ರವಾಗಿರುವ "ಓಂ ಯಂ" ಎಂಬ ಮಂತ್ರವನ್ನು ಜಪಿಸಬೇಕು. ತಲೆಯ ಮಧ್ಯದಲ್ಲಿ ಚಂದ್ರಬಿಂಬವಿದೆ. ಅದು ಅಧೋಮುಖವಾಗಿದೆ. ಆ ಚಂದ್ರಬಿಂಬದ ಒಳಗೆ ವಾಸುದೇವರೂಪಿಯಾದ ಶ್ರೀಹರಿಯಿರುವನು. ಅವನು ಜಲಧಾರೆಯನ್ನು ಸೃಷ್ಟಿಸುತ್ತಿರುವನು. ಆ ಜಲಧಾರೆಯಿಂದ ಸಂಪೂರ್ಣ ದೇಹವನ್ನು ತೊಳೆದು ದೇಹವು ಶುದ್ಧವಾಗುವಂತೆ ಮಾಡಿಕೊಳ್ಳಬೇಕು. ಆ ಮೇಲೆ ಆ ಗಾಳಿಯನ್ನು ಮೂಗಿನ ಬಲರಂಧ್ರದಿಂದ ಹೊರಗೆ ಬಿಡಬೇಕು. "ಓಂ ವಂ" ಎಂಬ ವರುಣಬೀಜಮಂತ್ರವನ್ನು ಜಪಿಸಬೇಕು. ಇವೆಲ್ಲವನ್ನೂ ಪ್ರಾಣಾಯಾಮದ ಬಲದಿಂದಲೇ ಮಾಡಬೇಕು."

ಯುಕ್ತಃ ಕೃತ್ವಾ ಯೋಗಮುದ್ರಾಂ ನಾಭಿದೇಶೇ ಸ್ಥಿತಂ ತತಃ |
ವೇದ್ಯಾಕಾರಂ ವಾಯುಬೀಜಂ ಧ್ಯಾತ್ವಾ ತಜ್ಜನ್ಯವಾಯುನಾ ||
ಧೂಮ್ರೇಣ ದೇಹಮಾತ್ಮಾನಂ ಶೋಷಯಿತ್ವಾ ನಿರಂಜನಮ್ (ನಿರಂತರಮ್) |
ತ್ರಿಕೋಣಮಗ್ನಿಬೀಜಂ ತದ್ರಕ್ತವರ್ಣಂ ಹೃದಂಬುಜೇ ||
ಧ್ಯಾತ್ವಾ ತದುತ್ಥಸಪ್ತಾರ್ಚಿಃಶಿಖಾಭಿಃ ಕಲ್ಮಷಂ ದಹೇತ್ |
ಮಹೇಂದ್ರಬೀಜಂ ವಿನ್ಯಸ್ಯ ಪೀತಾಬಿಂ ಚತುರಸ್ರಕಮ್ ||

ಕಂಠೇ ಸಹ ಸ್ಪರ್ಶನೇನ ಸ್ತಂಭಯೇದಗ್ನಿಮುತ್ಥಿತಮ್ |
ವಾಯುನಾ ಕುಂಭಕೇನೈವ ವೃತ್ತಸ್ಫಟಿಕಸನ್ನಿಭಮ್ ||
ವಿನ್ಯಸ್ಯ ವಾರುಣಂ ಬೀಜಂ ಮೂರ್ಧ್ನಿ ತಜ್ಜನ್ಮನಾಂಭಸಾ |
ಕ್ಷಾಲಯೇತ್ಸರ್ವತೋ ದೇಹಮಾಪಾದತಲಮಸ್ತಕಮ್ || (ಪಾದ್ಮಸಂಹಿತಾ)

"ಪಾಪಪುರುಷಂ ಧ್ಯಾತ್ವಾ, ನಾಭಿದೇಶಂ ಯೋಗಮುದ್ರಯಾ ಸ್ಪೃಶನ್, ಪ್ರಾಣಾಯಾಮವಿಧಾನೇನ ವೇದ್ಯಾಕಾರವಾಯುಮಂಡಲಷಟ್ಕೋಣಚಕ್ರಸ್ಥಿತೋ ಭಗವಾನ್ ಮದ್ದೇಹಸ್ಥಂ ಪಾಪಪುರುಷಂ ವಾಯುನಾ ಶೋಷಯತು. ಕುಂಭಕೇ (ಪೂರಕೇ) "ಯಂ" ಇತಿ ತ್ರಿವಾರಂ ಷಡ್ವಾರಂ ವಾ ಜಪಿತ್ವಾ ತಮುತ್ಸೃಜೇತ್ | ತನ್ಮುದ್ರಯಾ ಹೃದಯಂ ಸ್ಪೃಷ್ಟ್ವಾ, ಪ್ರಾಣಾಯಾಮವಿಧಾನೇನ ಅಗ್ನಿಮಂಡಲತ್ರಿಕೋಣಚಕ್ರಸ್ಥಿತೋ ಭಗವಾನ್ ರಕ್ತವರ್ಣೋ ಮದ್ದೇಹಸ್ಥಂ ಪಾಪಪುರುಷಮಗ್ನಿನಾ ನಿರ್ದಹತು, ಕುಂಭಕೇ "ರಂ" ಇತಿ ಷಡ್ವಾರಂ ದ್ವಿಷಡ್ವಾರಂ ವಾ ಜಪಿತ್ವಾ, ತಮಗ್ನಿಂ ಕಂಠದೇಶೇ ಸ್ತಂಭಯಿತ್ವಾ, ತನ್ಮುದ್ರಯಾ ಸ್ಪೃಷ್ಟ್ವಾ, ಅಧೋಮುಖವಾರುಣಮಂಡಲಚತುರ್ದಲೇ ಚಕ್ರೇ ವರ್ತುಲಚಕ್ರೇ ವಾ ಸ್ಥಿತೋ ಭಗವಾನ್ ಸ್ಫಟಿಕವರ್ಣಃ ಮದ್ದೇಹಮಾಪಾದಮಸ್ತಕಮಮೃತವೃಷ್ಟ್ಯಾಽಪ್ಲಾವ್ಯ ಪವಿತ್ರೀಕರೋತು. ಕುಂಭಕೇ "ವಂ" ಇತಿ ದ್ವಾದಶವಾರಂ ಚತುರ್ವಿಂಶತಿವಾರಂ ವಾ ಜಪಿತ್ವಾಥ ತಮುತ್ಸೃಜೇತ್ | ತತ ಆತ್ಮಾನಂ ತೇನೈವ ಮಾರ್ಗೇಣ ಹೃತ್ಕಮಲೇ ಪೂರ್ವವನ್ನಿಧಾಯ ಪಶ್ಚಾನ್ನ್ಯಾಸಾದಿಕಂ ಕುರ್ಯಾತ್. (ಪಂಚಸಂಸ್ಕಾರಸಂಗ್ರಹ)

"ಪಾಪಪುರುಷನನ್ನು ಧ್ಯಾನ ಮಾಡಬೇಕು. ಹೊಕ್ಕಳನ್ನು ಮುಟ್ಟಬೇಕು. ನಮಗೆ ಇಷ್ಟವಾದ ಸ್ಥಳದಲ್ಲಿ ಪಾಪಪುರುಷನು ವಾಸಿಸುತ್ತಿರುವಂತೆ ಸ್ಮರಿಸುವುದೇ ಯೋಗಮುದ್ರಿಕೆಯೆನಿಸುತ್ತದೆ. ಈ ಯೋಗಮುದ್ರಿಕೆಯಿಂದ ಹೊಕ್ಕಳಿನ ಪ್ರದೇಶದಲ್ಲಿ ಪಾಪಪುರುಷನಿದ್ದಂತೆ ಸ್ಮರಿಸಬೇಕು. ನಾಭಿಪ್ರದೇಶದಲ್ಲಿ ಜಗಲಿಯಂತೆ ವಿಶಾಲವಾದ ವಾಯುಮಂಡಲವಿದ್ದಂತೆ ಸ್ಮರಿಸಬೇಕು. ಆ ವಾಯುಮಂಡಲದ ಮಧ್ಯದಲ್ಲಿ ಆರುಕೋಣಗಳುಳ್ಳ ಚಕ್ರವಿದೆಯೆಂದು ಸ್ಮರಿಸಬೇಕು. ಆ ಚಕ್ರದಲ್ಲಿ ಶ್ರೀಹರಿಯು ಇದ್ದಾನೆ ಎಂದು ಭಾವಿಸಬೇಕು. ಆ ಹರಿಯು ತನ್ನಿಂದ ಸೃಷ್ಟಿಸಲ್ಪಟ್ಟ ವಾಯುವಿನಿಂದ ನನ್ನ ಶರೀರದಲ್ಲಿರುವ ಪಾಪಪುರುಷನ್ನು ಒಣಗಿಸಲಿ ಎಂದು ಪ್ರಾರ್ಥಿಸಬೇಕು. ಹೀಗೆ ಪ್ರಾರ್ಥಿಸುತ್ತಾ ಕುಂಭಕಪ್ರಾಣಾಯಾಮವನ್ನು ಮಾಡಬೇಕು. "ಓಂ ಯಂ" ಎಂದು ಮೂರು ಸಲ ಅಥವಾ ಆರು ಸಲ ಜಪಿಸಬೇಕು. ಹೊಕ್ಕಳನ್ನು ಬಿಡಬೇಕು."

"ಎದೆಯನ್ನು ಮುಟ್ಟಬೇಕು. ಯೋಗಮುದ್ರಿಕೆಯಿಂದಲೇ ಪ್ರಾಣಾಯಾಮವನ್ನು ಮಾಡುತ್ತಾ ಮುಂದೆ ಹೇಳುವ ರೀತಿಯಿಂದ ಸ್ಮರಿಸಬೇಕು. ನಮ್ಮ ಎದೆಯಲ್ಲಿ ವಿಶಾಲವಾದ ಅಗ್ನಿಮಂಡಲವಿದ್ದಂತೆ ಸ್ಮರಿಸಬೇಕು. ಆ ಅಗ್ನಿಮಂಡಲದಲ್ಲಿ ಮೂರು ಕೋಣಗಳಿಂದ ಯುಕ್ತವಾಗಿರುವ ಚಕ್ರವಿದ್ದಂತೆ ಭಾವಿಸಬೇಕು. ಆ ಚಕ್ರದಲ್ಲಿ ಕೆಂಪು ಬಣ್ಣದಿಂದ ಯುಕ್ತನಾದ ಶ್ರೀಹರಿಯು ಇದ್ದಂತೆ ಭಾವಿಸಬೇಕು. ಆ ಶ್ರೀಹರಿಯು ನನ್ನ ದೇಹದಲ್ಲಿರುವ ಪಾಪಪುರುಷನನ್ನು ಸುಡಲಿ ಎಂದು ಪ್ರಾರ್ಥಿಸಬೇಕು. ಕುಂಭಕಪ್ರಾಣಾಯಾಮವನ್ನು ಮಾಡುತ್ತಾ "ಓಂ ರಂ" ಎಂಬ ಮಂತ್ರವನ್ನು ಆರು ಸಲ ಅಥವಾ ಹನ್ನೆರಡು ಸಲ ಜಪಿಸಬೇಕು. ಆ ಅಗ್ನಿಯನ್ನು ಕಂಠದೇಶದಲ್ಲಿಯೇ ನಿಲ್ಲಿಸಬೇಕು. ಎದೆಯನ್ನು ಬಿಡಬೇಕು."

"ಅದೇ ಯೋಗಮುದ್ರೆಯಿಂದ ತಲೆಯನ್ನು ಮುಟ್ಟಬೇಕು. ಎದೆಯಲ್ಲಿ ಅಧೋಮುಖವಾದ ವರುಣಮಂಡಲವಿದೆಯೆಂದು ಭಾವಿಸಬೇಕು. ಆ ವರುಣಮಂಡಲದ ಮಧ್ಯದಲ್ಲಿ ನಾಲ್ಕು ಮೂಲೆಗಳಿಂದ ಯುಕ್ತವಾದ ಅಥವಾ ವರ್ತುಲಾಕಾರವಾದ ಚಕ್ರವಿದೆಯೆಂದು ಭಾವಿಸಬೇಕು. ಆ ಚಕ್ರದಲ್ಲಿ ಶ್ರೀಹರಿಯಿರುವುದಾಗಿ ಭಾವಿಸಬೇಕು. "ಸ್ಫಟಿಕಮಣಿಯಂತೆ ಸ್ವಚ್ಛ ವರ್ಣದಿಂದ ಯುಕ್ತನಾದ ಆ ಶ್ರೀಹರಿಯು ನನ್ನ ಶರೀರದಲ್ಲಿ ತಲೆಯಿಂದ ಕೆಳಗಿನವರೆಗೆ ಅಮೃತದ ಮಳೆಯನ್ನು ಸುರಿಸಲಿ, ನನ್ನ ಶರೀರವನ್ನು ಪರಿಶುದ್ಧವಾಗುವಂತೆ ಮಾಡಲಿ" ಎಂದು ಪ್ರಾರ್ಥಿಸಬೇಕು. ಕುಂಭಕಪ್ರಾಣಾಯಾಮವನ್ನು ಮಾಡುತ್ತಾ "ಓಂ ವಂ" ಎಂದು ಹನ್ನೆರಡು ಸಲ ಅಥವಾ ಇಪ್ಪತ್ತುನಾಲ್ಕು ಸಲ ಜಪಿಸದೇಕು. ಇಷ್ಟು ಜಪಿಸಿದ ಮೇಲೆ ತಲೆಯನ್ನು ಬಿಡಬೇಕು."

"ಆಮೇಲೆ ಅದೇ ಯೋಗಮುದ್ರೆಯಿಂದ ಹೃದಯಪ್ರದೇಶದಲ್ಲಿ ತನ್ನನ್ನು ತಂದು ನಿಲ್ಲಿಸಬೇಕು." ಇದು ಪಾಪಪುರುಷನ ನಿಗ್ರಹ ಮತ್ತು ದೇಹದ ಶುದ್ಧೀಕರಣವೆನಿಸುತ್ತದೆ. ಹೀಗೆ ಪಾಪಪುರುಷನನ್ನು ಒಣಗಿಸುವುದಕ್ಕೆ ಒಮ್ಮೆಯೂ. ಸುಡುವುದಕ್ಕೆ ಒಮ್ಮೆಯೂ, ದೇಹವನ್ನೂ ಅಮೃತಮಳೆಯಿಂದ ಶುದ್ಧವಾಗುವಂತೆ ಮಾಡುವುದಕ್ಕೆ ಒಮ್ಮೆಯೂ - ಹೀಗೆ ಮೂರು ಸಲ ಪ್ರಾಣಾಯಾಮಗಳನ್ನು ಮಾಡಿದ ಮೇಲೆ ಅಂಗನ್ಯಾಸ ಮುಂತಾದ ನ್ಯಾಸಗಳನ್ನು ಮಾಡಬೇಕು."

**ತತ್ತ್ವನ್ಯಾಸಮಾತೃಕಾನ್ಯಾಸಗಳು**

ಪುರುಷೋಽವ್ಯಕ್ತಂ ಚ ಮಹಾನಹಂಕಾರೋ ಮನಸ್ತಥಾ |
ದಶೇಂದ್ರಿಯಾಣಿ ಶಬ್ದಾದ್ಯಾ ಭೂತೇತಾಃ ಪಂಚವಿಂಶತಿಃ ||
ತತ್ತ್ವಾಖ್ಯಾಃ ಕಾಲಮಾಯೇ ಚ ನಿಯತಿರ್ಮತಿರೇವ ಚ |
ವಿದ್ಯಾ ಕಲಾ ಪ್ರವೃತ್ತಿಶ್ಚ ದ್ವಾತ್ರಿಂಶತ್ತತ್ತ್ವಸಂಗ್ರಹಃ ||
ಸ್ಫೂರ್ತಿಃ ಸಂವಿತ್ಪ್ರತಿಷ್ಠಾ ಚ ಶಕ್ತಿರಿತ್ಯಪರಾಣಿ ಚ |
ಮಹಾಲಕ್ಷ್ಮ್ಯಾಸ್ಸ್ವರೂಪಾಣಿ ಏಕಾದಶ ವಿದೋ ವಿದುಃ ||
ವಿಷ್ಣೋರಪಿ ಸ್ವರೂಪಾಣಿ ತನ್ನಾಮ್ನೈಕಾದಶೈವ ತು |
ಸರ್ವಾಣ್ಯೇತಾನಿ ತತ್ತ್ವಾನಿ ಬ್ರಹ್ಮಾ ತು ಪುರುಷಃ ಸ್ಮೃತಃ ||
ಮಹಾಂಶ್ಚಾವ್ಯಕ್ತನಾಮ್ನೀ ತು ಬ್ರಹ್ಮಾಣೀ ಸಂಪ್ರಕೀರ್ತಿತಾ |
ಏವಂ ವಾಯುರಪಿ ಜ್ಞೇಯೋ ಭಾರತೀ ಚೇತಿ ತತ್ತ್ರಯಮ್ |
ರುದ್ರೋಽಹಂಕಾರ ಉದ್ದಿಷ್ಟಃ ಸ್ಕಂದೇಂದ್ರೌ ಮನ ಉಚ್ಯತೇ ||
ಅಹಂಕಾರಃ ಶೇಷವೀಂದ್ರಾವಪಿ ವಿದ್ವದ್ಭಿರೀರಿತೌ |
ದಿಗ್ವಾಯುಸೂನುಸೂರ್ಯಾಶ್ಚ ವರುಣಶ್ಚಾಶ್ವಿನಾವಪಿ ||
ವಹ್ನಿದಕ್ಷಾವಿಂದ್ರಸೂನುರ್ಮಿತ್ರಶ್ಚೈವ ಮನುಸ್ತಥಾ |
ಇಂದ್ರಿಯಾಖ್ಯಾಃ ಶಬ್ದನಾಮಾ ಬೃಹಸ್ಪತಿರುದಾಹೃತಃ ||
ಅನ್ಯೇ ತು ಸೂನವೋ ವಾಯೋ ರುದ್ರಸ್ಯಾಪಿ ಪ್ರಕೀರ್ತಿತಾಃ |
ಏತೇಷು ಭಗವಾನ್ ವಿಷ್ಣುಃ ಪ್ರಧಾನತನುರೇವ ಚ ||
ಧ್ಯೇಯಃ ಪರಾತ್ಮನೋರ್ಮಧ್ಯೇ ತತ್ತ್ವನಾಮ(ಮಾಽ) ತದರ್ಥಯೋಃ (ತತ್ತನ್ನಾಮತದಂತಯೋಃ) |
ಜಪೇ ನ್ಯಾಸೇ ನಮೋಽಸ್ತು ಸ್ವಾಹಾಂಶೋ ಹೋಮಕರ್ಮಣಿ ||
ತ್ರಿಚತುಃಷಡ್ದಶಾವೃತ್ತಿರೇತೇಷಾಂ ತು ಹುತಾದಿಕೇ |
ನ್ಯಾಸೋಽಂಗುಲೀಷೂರುಬಾಹುಮಧ್ಯೇಷು ವ್ಯುತ್ಕ್ರಮೇ ಸ್ಮೃತಃ ||
ಕ್ರಮೇ ವಿಪರ್ಯಯೇಣಾತ್ರ ಶಕ್ತ್ಯಾದಿತ್ಯಂ ಪ್ರಕೀರ್ತಿತಮ್ |

"ಪುರುಷ, ಅವ್ಯಕ್ತ, ಮಹಾನ್, ಅಹಂಕಾರ, ಮನಸ್ಸು, ಕಿವಿಗಳು, ತ್ವಗಿಂದ್ರಿಯ, ಚಕ್ಷುರಿಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ವಾಗಿಂದ್ರಿಯ, ಪಾಣೀಂದ್ರಿಯ, ಪಾದೇಂದ್ರಿಯ, ಪಾಯು ಇಂದ್ರಿಯ, ಉಪಸ್ಥೇಂದ್ರಿಯ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ತೇಜಸ್ಸು, ಜಲ, ಪೃಥಿವೀ ಎಂದು ಇಪ್ಪತ್ತೈದು ತತ್ತ್ವಗಳೆನಿಸುತ್ತವೆ. ಕಾಲ, ಮಾಯಾ, ನಿಯತಿ, ಮತಿ, ವಿದ್ಯಾ, ಕಲಾ, ಪ್ರವೃತ್ತಿ ಎಂಬ ಏಳು ತತ್ತ್ವಗಳು ಮೇಲ್ಕಂಡ ಇಪ್ಪತ್ತೈದು ತತ್ತ್ವಗಳ ಜೊತೆಯಲ್ಲಿ ಸೇರಿದರೆ

ಮೂವತ್ತೆರಡು ತತ್ತ್ವಗಳೆನಿಸುತ್ತವೆ. ಸ್ಫೂರ್ತಿ, ಸಂವಿತ್, ಪ್ರತಿಷ್ಠಾ, ಶಕ್ತಿ ಎಂಬ ನಾಲ್ಕು ತತ್ತ್ವಗಳು ಮೇಲ್ಕಂಡ ಮೂವತ್ತೆರಡು ತತ್ತ್ವಗಳೊಡನೆ ಸೇರಿದರೆ ಮೂವತ್ತಾರು ತತ್ತ್ವಗಳೆನಿಸುತ್ತವೆ."

"ಈ ಮೂವತ್ತಾರು ತತ್ತ್ವಗಳಿಗೆ ಬೇರೆ ಬೇರೆ ಅಭಿಮಾನಿದೇವತೆಗಳಿರುವರು. ಅವರೂ ತತ್ತ್ವಗಳ ಹೆಸರಿನಿಂದಲೇ ಕರೆಯಲ್ಪಡುವರು. ಈ ಮೂವತ್ತಾರು ತತ್ತ್ವಗಳಲ್ಲಿ "ಕಾಲ" ಎಂಬ ತತ್ತ್ವವನ್ನು ಆರಂಭಿಸಿ "ಶಕ್ತಿ" ಎಂಬ ತತ್ತ್ವದವರೆಗಿರುವ ಹನ್ನೊಂದು ತತ್ತ್ವಗಳು ಪ್ರಧಾನತತ್ತ್ವಗಳೆನಿಸುವುವು. ಆ ಪ್ರಧಾನತತ್ತ್ವಗಳಿಗೆ ಲಕ್ಷ್ಮೀದೇವಿಯರು, ನಾರಾಯಣ ಇವರಿಬ್ಬರು ನಿಯಾಮಕರಾಗಿರುವರು."

"ಉಳಿದ ಇಪ್ಪತ್ತೈದು ತತ್ತ್ವಗಳಲ್ಲಿ ಪುರುಷ, ಮಹಾನ್ ಎಂಬ ಎರಡು ತತ್ತ್ವಗಳು ಉತ್ತಮವೆನಿಸುತ್ತವೆ. ಅವುಗಳಿಗೆ ಬ್ರಹ್ಮದೇವರು ಮತ್ತು ವಾಯುದೇವರು ಅಭಿಮಾನಿಗಳೆನಿಸುವರು. ಉಳಿದ ಇಪ್ಪತ್ತಮೂರು ತತ್ತ್ವಗಳಲ್ಲಿ ಅವ್ಯಕ್ತ ಎಂಬ ತತ್ತ್ವವು ಉತ್ತಮವೆನಿಸುತ್ತದೆ. ಅದಕ್ಕೆ ಸರಸ್ವತೀ ಮತ್ತು ಭಾರತೀದೇವಿಯರು ಅಭಿಮಾನಿನಿಯರಾಗಿರುವರು."

"ಉಳಿದ ಇಪ್ಪತ್ತೆರಡು ತತ್ತ್ವಗಳಲ್ಲಿ ಅಹಂಕಾರತತ್ತ್ವವು ಉತ್ತಮವೆನಿಸುತ್ತದೆ. ಇದಕ್ಕೆ ಶೇಷದೇವರು, ಗರುಡದೇವರು, ರುದ್ರದೇವರು ಎಂಬ ಮೂವರು ಅಭಿಮಾನಿದೇವತೆಗಳು. ಉಳಿದ ಇಪ್ಪತ್ತೊಂದು ತತ್ತ್ವಗಳಲ್ಲಿ ಮನಸ್ಸು ಎಂಬ ತತ್ತ್ವವು ಉತ್ತಮವೆನಿಸುತ್ತದೆ. ಅದಕ್ಕೆ ಸ್ಕಂದ, ಇಂದ್ರ ಇವರಿಬ್ಬರು ಅಭಿಮಾನಿಗಳೆನಿಸುವರು."

"ಉಳಿದ ಇಪ್ಪತ್ತು ತತ್ತ್ವಗಳಲ್ಲಿ ಐದು ಜ್ಞಾನೇಂದ್ರಿಯಗಳು ಪ್ರಧಾನವಾಗಿವೆ. ಅವುಗಳಲ್ಲಿ ದಿಗ್ದೇವತೆಗಳು ಶ್ರೋತ್ರೇಂದ್ರಿಯಕ್ಕೂ, ಮುಖ್ಯಪ್ರಾಣದೇವರ ಪ್ರಧಾನಪುತ್ರನಾಗಿರುವ ಅಹಂಕಾರಿಪ್ರಾಣನು ತ್ವಗಿಂದ್ರಿಯಕ್ಕೂ, ಸೂರ್ಯನು ಚಕ್ಷುರಿಂದ್ರಿಯಕ್ಕೂ, ವರುಣನು ರಸನೇಂದ್ರಿಯಕ್ಕೂ, ಅಶ್ವಿನೀದೇವತೆಗಳಿಬ್ಬರು ಘ್ರಾಣೇಂದ್ರಿಯಕ್ಕೂ ಅಭಿಮಾನಿಗಳಾಗಿರುವರು."

"ಉಳಿದ ಹದಿನೈದು ತತ್ತ್ವಗಳಲ್ಲಿ ಐದು ಕರ್ಮೇಂದ್ರಿಯಗಳು ಪ್ರಧಾನವೆನಿಸುತ್ತವೆ. ಅವುಗಳಲ್ಲಿ ವಾಗಿಂದ್ರಿಯಕ್ಕೆ ಅಗ್ನಿದೇವನೂ, ಪಾಣಿ ಎಂಬ ಇಂದ್ರಿಯಕ್ಕೆ ದಕ್ಷಪ್ರಜಾಪತಿಯೂ, ಪಾದ ಎಂಬ ಇಂದ್ರಿಯಕ್ಕೆ ಇಂದ್ರನ ಮಗನಾದ ಜಯಂತನೂ, ಪಾಯು ಎಂಬ ಇಂದ್ರಿಯಕ್ಕೆ ಸೂರ್ಯನೂ ಉಪಸ್ಥ ಎಂಬ ಇಂದ್ರಿಯಕ್ಕೆ ಸ್ವಾಯಂಭುವಮನುವೂ ಅಧಿಪತಿಯಾಗಿರುವರು."

"ಉಳಿದ ಹತ್ತು ತತ್ತ್ವಗಳಲ್ಲಿ ಐದು ತನ್ಮಾತ್ರೆಗಳು ಪ್ರಧಾನವೆನಿಸುತ್ತವೆ. ಅವುಗಳಲ್ಲಿ ಶಬ್ದಕ್ಕೆ ಬೃಹಸ್ಪತಿಯೂ, ರುದ್ರದೇವನ ಮಗನಾಗಿರುವ ಪ್ರಾಣ ಎಂಬ ದೇವತೆಯೂ ಅಭಿಮಾನಿಯಾಗಿರುವರು. ಸ್ಪರ್ಶ, ರೂಪ, ರಸ, ಗಂಧ ಎಂಬ ನಾಲ್ಕು ತತ್ತ್ವಗಳಿಗೆ ಕ್ರಮವಾಗಿ ಮುಖ್ಯಪ್ರಾಣದೇವರ ಮಕ್ಕಳೂ, ರುದ್ರದೇವರ ಮಕ್ಕಳೂ ಆಗಿರುವ ಎರಡೆರಡು ಅಪಾನ, ವ್ಯಾನ, ಉದಾನ, ಸಮಾನ ಎಂಬ ದೇವತೆಗಳು ಅಭಿಮಾನಿಗಳು."

"ಉಳಿದ ಐದು ತತ್ತ್ವಗಳಲ್ಲಿ ಆಕಾಶಕ್ಕೆ ಗಣೇಶನೂ, ವಾಯುವಿಗೆ ಮರೀಚಿ ಎಂದು ಪ್ರಸಿದ್ಧನಾಗಿರುವ ಮುಖ್ಯಪ್ರಾಣದೇವರ ಮಗನಾಗಿರುವ ಭೂತವಾಯುವೂ, ತೇಜಸ್ಸಿಗೆ ಅಗ್ನಿಯೂ, ಜಲಕ್ಕೆ ವರುಣನೂ, ಪೃಥಿವಿಗೆ ಪೃಥಿವೀ ಎಂಬ ದೇವತೆಯೂ ಅಭಿಮಾನಿಯೆಂದು ತಿಳಿಯಬೇಕು."

"ಶಕ್ತಿ ಮುಂತಾದ ಹನ್ನೊಂದು ತತ್ತ್ವಗಳಲ್ಲಿ ಲಕ್ಷ್ಮೀ ಮತ್ತು ನಾರಾಯಣರು ನಿಯಾಮಕರಾಗಿರುವರೆಂದು ಹಿಂದೆ ತಿಳಿಸಿದ್ದೇವೆ. ಉಳಿದ ಇಪ್ಪತ್ತೈದು ತತ್ತ್ವಗಳಲ್ಲಿಯೂ ಸರ್ವೋತ್ತಮನಾದ ಶ್ರೀಹರಿಯೇ ನಿಯಾಮಕನಾಗಿರುವನು. ಅವನ ಅಧೀನರಾಗಿದ್ದು ಬ್ರಹ್ಮ ಮುಂತಾದ ದೇವತೆಗಳು ಅಭಿಮಾನಿಗಳೆನಿಸುವರು."

"ಒಂದೊಂದು ತತ್ತ್ವಗಳಲ್ಲಿಯೂ "ಪರಾಯ" ಎಂದು ಚತುರ್ಥೀವಿಭಕ್ತ್ಯಂತವಾದ ಪರ ಎಂಬ ಶಬ್ದವನ್ನು ಹೇಳಬೇಕು. ಆತ್ಮನೇ ನಮಃ ಎಂದು ಹೇಳುತ್ತಾ ಅದರ ಹಿಂದೆ ಆಯಾ ತತ್ತ್ವಗಳ ಹೆಸರುಗಳನ್ನು ಹೇಳಬೇಕು. ಉದಾ–ಪರಾಯ ಶಕ್ತ್ಯಾತ್ಮನೇ ನಮಃ, ಹೀಗೆ ಮೂವತ್ತಾರು ತತ್ತ್ವಮಂತ್ರಗಳನ್ನೂ ತಿಳಿಯಬೇಕು."

"ಈ ತತ್ತ್ವಮಂತ್ರಗಳನ್ನು ಹೇಳುತ್ತಿರುವಾಗ ನಮಃ ಎಂಬ ಶಬ್ದದ ಹಿಂದೆ ಆಯಾ ತತ್ತ್ವಗಳ ನಿಯಾಮಕರಾಗಿರುವ ಮತ್ತು ಅಭಿಮಾನಿಗಳಾಗಿರುವ ದೇವತೆಗಳ ಹೆಸರುಗಳನ್ನು ಹೇಳಬೇಕು. ಆದರೆ ಆ ದೇವತೆಗಳ ಹೆಸರುಗಳು ಮಂತ್ರದ ಮಧ್ಯದಲ್ಲಿ ಸೇರುವುದಿಲ್ಲ. ಮಂತ್ರದ ಅಭಿಮಾನಿ ದೇವತೆಗಳನ್ನು ಸ್ಮರಿಸುವುದಕ್ಕೆ ಮಾತ್ರ ಅವುಗಳು ಉಪಯುಕ್ತವಾಗುತ್ತವೆ. ಉದಾ = "ಪರಾಯ ಶಕ್ತ್ಯಾತ್ಮನೇ ನಮಃ" ಇಷ್ಟೇ ಮಂತ್ರವೆನಿಸುತ್ತದೆ. "ಪರಾಯ ಶಕ್ತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ" ಎಂದು ಹೇಳುತ್ತೇವೆ. ಇಲ್ಲಿ "ಲಕ್ಷ್ಮೀನಾರಾಯಣಾಭ್ಯಾಂ" ಎಂಬ ಅಂಶವು ಮಂತ್ರದಲ್ಲಿ ಸೇರಲಿಲ್ಲ. "ಶಕ್ತಿ" ಎಂಬ ತತ್ತ್ವಕ್ಕೆ ನಿಯಾಮಕರಾಗಿರುವವರನ್ನು ಸ್ಮರಿಸುವುದಕ್ಕಾಗಿ ಹೇಳಲ್ಪಡುತ್ತಿದೆ ಎಂದು ತಿಳಿಯಬೇಕು."

"ಈ ತತ್ತ್ವಮಂತ್ರಗಳನ್ನು ಜಪಿಸುವಾಗ ಮತ್ತು ನ್ಯಾಸ ಮಾಡುವಾಗ ಅಂದರೆ ಶರೀರದ ಒಂದೊಂದು ಅವಯವಗಳಲ್ಲಿ ಆ ಮಂತ್ರದಿಂದ ಮುಟ್ಟುವಾಗ "ನಮಃ" ಎಂಬ ಶಬ್ದವನ್ನು ಕೊನೆಯಲ್ಲಿ ಉಚ್ಚರಿಸಬೇಕು. ಉದಾ="ಪರಾಯ ಶಕ್ತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ" ಎಂದು ಹೇಳುತ್ತಾ ಮುಟ್ಟಬೇಕು. ಹೋಮವನ್ನು ಮಾಡುವಾಗ ಈ ಮಂತ್ರದ ಕೊನೆಯಲ್ಲಿ "ಸ್ವಾಹಾ" ಎಂಬ ಶಬ್ದವನ್ನು ಹೇಳಬೇಕು. ಉದಾ="ಪರಾಯ ಶಕ್ತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ಸ್ವಾಹಾ" ಎಂದು ಹೇಳಬೇಕು. ಈ ತತ್ತ್ವಮಂತ್ರಗಳಿಂದ ಮೂರು ಸಲ ಅಥವಾ ನಾಲ್ಕು ಸಲ ಅಥವಾ ಆರು ಸಲ ಅಥವಾ ಹತ್ತು ಸಲ ಜಪ, ನ್ಯಾಸ ಮತ್ತು ಹೋಮಾದಿಗಳನ್ನು ಮಾಡಬೇಕು."

"ಈ ತತ್ತ್ವಮಂತ್ರಗಳಿಂದ ನ್ಯಾಸವು ಎರಡು ವಿಧವಾಗಿದೆ. ವ್ಯುತ್ಕ್ರಮನ್ಯಾಸವು ಮೊದಲನೆಯದು. ಎಡಗಾಲಿನಲ್ಲಿರುವ ಕಿರುಬೆರಳಿನಿಂದ ಆರಂಭಿಸಿ ಅಂಗುಷ್ಠದವರೆಗಿನ ಐದು ಬೆರಳುಗಳಲ್ಲಿ ಪೃಥಿವೀತತ್ತ್ವದಿಂದ ಆರಂಭಿಸಿ, ಆಕಾಶತತ್ತ್ವದವರೆಗೆ ಐದು ತತ್ತ್ವಗಳನ್ನು ಹೇಳುತ್ತಾ "ಓಂ ಪರಾಯ ಪೃಥಿವ್ಯಾತ್ಮನೇ ಪೃಥಿವ್ಯೈ ನಮಃ" ಮುಂತಾದ ಐದು ಮಂತ್ರಗಳಿಂದ ಮುಟ್ಟಬೇಕು. ಆ ಮೇಲೆ ಬಲಗಾಲಿನ ಕಿರಿಬೆರಳಿನಿಂದ ಆರಂಭಿಸಿ ಅಂಗುಷ್ಠದವರೆಗಿನ ಐದು ಬೆರಳುಗಳಲ್ಲಿ ಗಂಧದಿಂದ ಆರಂಭಿಸಿ, ಶಬ್ದದವರೆಗಿನ ಐದು ತತ್ತ್ವಗಳನ್ನು ಹೇಳುತ್ತಾ ಮುಟ್ಟಬೇಕು. ಆ ಮೇಲೆ ಎಡಗೈಯ ಕಿರುಬೆರಳಿನಿಂದ ಆರಂಭಿಸಿ, ಅದೇ ಕೈಯಲ್ಲಿರುವ ಅಂಗುಷ್ಠದವರೆಗೆ ಉಪಸ್ಥೇಂದ್ರಿಯವನ್ನು ಆರಂಭಿಸಿ ವಾಗಿಂದ್ರಿಯದವರೆಗಿನ ಐದು ತತ್ತ್ವಗಳನ್ನು ಹೇಳುತ್ತಾ ಮುಟ್ಟಬೇಕು. ಆ ಮೇಲೆ ಬಲಗೈಯಲ್ಲಿರುವ ಕಿರುಬೆರಳಿನಿಂದ ಆರಂಭಿಸಿ, ಅಂಗುಷ್ಠದವರೆಗಿನ ಐದು ಬೆರಳುಗಳಲ್ಲಿ ಘ್ರಾಣೇಂದ್ರಿಯದಿಂದ ಆರಂಭಿಸಿ, ಶ್ರೋತ್ರೇಂದ್ರಿಯದವರೆಗಿನ ಐದು ತತ್ತ್ವಗಳನ್ನು ಹೇಳುತ್ತಾ ಮುಟ್ಟಬೇಕು. ಆ ಮೇಲೆ ಎಡತೊಡೆಯಲ್ಲಿ ಮನಸ್ತತ್ತ್ವವನ್ನೂ, ಬಲತೊಡೆಯಲ್ಲಿ ಅಹಂಕಾರತತ್ತ್ವವನ್ನೂ, ಎಡಗೈಯಲ್ಲಿ ಮಹತ್ತತ್ತ್ವವನ್ನೂ, ಬಲಗೈಯಲ್ಲಿ ಅವ್ಯಕ್ತತತ್ತ್ವವನ್ನೂ, ಎದೆಯಲ್ಲು ಪುರುಷತತ್ತ್ವವನ್ನೂ ಹೇಳುತ್ತಾ ಮುಟ್ಟಬೇಕು. ಹಾಗೆಯೇ "ಕಾಲ" ಎಂಬ ತತ್ತ್ವವನ್ನು ಆರಂಭಿಸಿ "ಶಕ್ತಿ" ಎಂಬ ತತ್ತ್ವದವರೆಗಿನ ಹನ್ನೊಂದು ತತ್ತ್ವಗಳನ್ನು ಹೇಳುತ್ತಾ ಎದೆಯನ್ನು ಮುಟ್ಟಬೇಕು. ಇವು ವ್ಯುತ್ಕ್ರಮನ್ಯಾಸ ಅಥವಾ ಸಂಹಾರನ್ಯಾಸ ಎನಿಸುತ್ತದೆ."

"ಕ್ರಮನ್ಯಾಸವು ಎರಡನೆಯದು. ಶಕ್ತಿಯಿಂದ ಆರಂಭಿಸಿ ಪುರುಷತತ್ತ್ವದವರೆಗೆ ಹನ್ನೆರಡು ತತ್ತ್ವಗಳನ್ನು ಹೇಳುತ್ತಾ ಎದೆಯನ್ನು ಮುಟ್ಟಬೇಕು. ಅವ್ಯಕ್ತತತ್ತ್ವವನ್ನು ಹೇಳುತ್ತಾ ಬಲಗೈಯನ್ನೂ, ಮಹತ್ತತ್ತ್ವವನ್ನು ಹೇಳುತ್ತಾ ಎಡಗೈಯನ್ನೂ, ಅಹಂಕಾರತತ್ತ್ವವನ್ನು ಹೇಳುತ್ತಾ ಬಲತೊಡೆಯನ್ನೂ, ಮನಸ್ತತ್ತ್ವವನ್ನು ಹೇಳುತ್ತಾ ಎಡತೊಡೆಯನ್ನೂ ಮುಟ್ಟಬೇಕು. ಶ್ರೋತ್ರತತ್ತ್ವದಿಂದ ಆರಂಭಿಸಿ ಘ್ರಾಣತತ್ತ್ವದವರೆಗಿನ ಐದು ತತ್ತ್ವಗಳನ್ನು ಹೇಳುತ್ತಾ ಬಲಗೈಯಲ್ಲಿರುವ ಅಂಗುಷ್ಠದಿಂದ ಆರಂಭಿಸಿ ಕಿರುಬೆರಳಿನವರೆಗೆ ಇರುವ ಐದು ಬೆರಳುಗಳನ್ನು ಮುಟ್ಟಬೇಕು. ವಾಕ್ತತ್ತ್ವದಿಂದ ಆರಂಭಿಸಿ ಉಪಸ್ಥತತ್ತ್ವದವರೆಗಿನ ಐದು ತತ್ತ್ವಗಳನ್ನು ಹೇಳುತ್ತಾ ಎಡಗೈಯಲ್ಲಿರುವ ಅಂಗುಷ್ಠದಿಂದ ಆರಂಭಿಸಿ ಕಿರುಬೆರಳಿನವರೆಗಿರುವ ಐದು ಬೆರಳುಗಳನ್ನು ಮುಟ್ಟಬೇಕು. ಶಬ್ದದಿಂದ ಆರಂಭಿಸಿ ಗಂಧದವರೆಗಿನ ಐದು ತತ್ತ್ವಗಳನ್ನು ಹೇಳುತ್ತಾ, ಬಲಗಾಲಿನಲ್ಲಿರುವ ಅಂಗುಷ್ಠದಿಂದ

ಆರಂಭಿಸಿ ಕಿರುಬೆರಳಿನವರೆಗಿರುವ ಐದು ಬೆರಳುಗಳನ್ನು ಮುಟ್ಟಬೇಕು. ಆಕಾಶತತ್ತ್ವದಿಂದ ಆರಂಭಿಸಿ ಪೃಥಿವೀತತ್ತ್ವದವರೆಗಿನ ಐದು ತತ್ತ್ವಗಳನ್ನು ಹೇಳುತ್ತಾ, ಎಡಗಾಲಿನ ಅಂಗುಷ್ಠದಿಂದ ಆರಂಭಿಸಿ ಕಿರುಬೆರಳಿನವರೆಗಿನ ಐದು ಬೆರಳುಗಳನ್ನು ಮುಟ್ಟಬೇಕು. ಇದು ಕ್ರಮನ್ಯಾಸವೆನಿಸುತ್ತದೆ. ಇದೇ ಸೃಷ್ಟಿನ್ಯಾಸವೆನಿಸುತ್ತದೆ. ಈ ನ್ಯಾಸಗಳಲ್ಲಿ ಸಂಹಾರನ್ಯಾಸವು ಸನ್ಯಾಸಿಗಳಿಗೆ ವಿಹಿತವಾಗಿದೆ. ಸೃಷ್ಟಿನ್ಯಾಸವು ಸನ್ಯಾಸಿಗಳನ್ನು ಬಿಟ್ಟು ಉಳಿದವರಿಗೆ ಸರ್ವರಿಗೂ ವಿಹಿತವಾಗಿದೆ.

### ತತ್ತ್ವಮಂತ್ರಗಳಲ್ಲಿ ಋಷಿ, ಛಂದಸ್ಸು, ದೇವತೆಗಳು, ಅಂಗನ್ಯಾಸ ಮತ್ತು ಧ್ಯಾನ

ಪ್ರಾಣಾಯಾಮವನ್ನು ಮೂರು ಸಲ ಮಾಡಬೇಕು. ಏತೇಷಾಂ ತತ್ತ್ವಮಂತ್ರಾಣಾಮ್ ಅಂತರ್ಯಾಮೀ ಋಷಿಃ. ದೈವೀ ಗಾಯತ್ರೀ ಛಂದಃ, ತತ್ತ್ವಾಂತರ್ಯಾಮೀ ಶ್ರೀವಿಷ್ಣುರ್ದೇವತಾ. ತತ್ತ್ವನ್ಯಾಸಂ ಕರಿಷ್ಯೇ | ಅಂಗನ್ಯಾಸ - ಓಂ ಭೂಃ ಅಗ್ನ್ಯಾತ್ಮನೇ ಹೃದಯಾಯ ನಮಃ, ಓಂ ಭುವಃ ವಾಯ್ವಾತ್ಮನೇ ಶಿರಸೇ ಸ್ವಾಹಾ, ಓಂ ಸ್ವಃ ಸೂರ್ಯಾತ್ಮನೇ ಶಿಖಾಯೈ ವಷಟ್, ಓಂ ಭೂರ್ಭುವಸ್ವಃ ಕವಚಾಯ ಹುಂ, ಓಂ ಸತ್ಯಾತ್ಮನೇ ಅಸ್ತ್ರಾಯ ಫಟ್. ಧ್ಯಾನ.

ಪ್ರಧಾನೋಪಮವರ್ಣಾನಿ ದ್ವಿಭುಜಾನ್ಯಶೇಷತಃ |
ಕೃತಾಂಜಲಿಪುಟಾನ್ಯೇವ ಪ್ರಧಾನಂ ತಂ ಹರಿಂ ಪ್ರತಿ ||

ನ್ಯಾಸಸ್ಥಾನಗಳು - ಎಡಗಾಲಿನ ಕಿರುಬೆರಳನ್ನು ಆರಂಭಿಸಿ ಬಲಗಾಲಿನ ಅಂಗುಷ್ಠದವರೆಗೆ ಹತ್ತು ಸ್ಥಾನಗಳು, ಎಡಗೈಯ ಕಿರುಬೆರಳನ್ನು ಆರಂಭಿಸಿ ಬಲಗೈಯ ಅಂಗುಷ್ಠದವರೆಗೆ ಹತ್ತು ಸ್ಥಾನಗಳು. ಎಡತೊಡೆ, ಬಲತೊಡೆ, ಎಡಗೈ, ಬಲಗೈ ಹೀಗೆ ನಾಲ್ಕು ಸ್ಥಾನಗಳು, ಹನ್ನೆರಡು ಮಂತ್ರಗಳಿಗೆ ಹೃದಯ ಎಂಬ ಒಂದು ಸ್ಥಾನ.

### ಮಂತ್ರಗಳು

(1) ಓಂ ಪರಾಯ ಪೃಥಿವ್ಯಾತ್ಮನೇ ಧರಾಯೈ ನಮಃ. (2) ಓಂ ಪರಾಯ ಅಬಾತ್ಮನೇ ವರುಣಾಯ ನಮಃ. (3) ಓಂ ಪರಾಯ ತೇಜಸಾತ್ಮನೇ ಅಗ್ನಯೇ ನಮಃ (4) ಓಂ ಪರಾಯ ವಾಯ್ವಾತ್ಮನೇ (ವಿಷ್ಣವೇ) ವಾಯವೇ ನಮಃ (5) ಓಂ ಪರಾಯ ಆಕಾಶಾತ್ಮನೇ ವಿನಾಯಕಾಯ ನಮಃ (6) ಓಂ ಪರಾಯ ಗಂಧಾತ್ಮನೇ ಸಮಾನಾಯ ನಮಃ (7) ಓಂ ಪರಾಯ ರಸಾತ್ಮನೇ ಉದಾನಾಯ ನಮಃ (8) ಓಂ ಪರಾಯ ರೂಪಾತ್ಮನೇ ವ್ಯಾನಾಯ ನಮಃ (9) ಓಂ ಪರಾಯ ಸ್ಪರ್ಶಾತ್ಮನೇ ಅಪಾನಾಯ ನಮಃ (10) ಓಂ ಪರಾಯ ಶಬ್ದಾತ್ಮನೇ ಬೃಹಸ್ಪತಿಪ್ರಾಣಾಭ್ಯಾಂ ನಮಃ (11) ಓಂ ಪರಾಯ ಉಪಸ್ಥಾತ್ಮನೇ ಮನವೇ ನಮಃ (12) ಓಂ ಪರಾಯ ಪಾಯ್ವಾತ್ಮನೇ ಮಿತ್ರಾಯ ನಮಃ (13) ಓಂ ಪರಾಯ ಪಾದಾತ್ಮನೇ ಜಯಂತಾಯ ನಮಃ (14) ಓಂ ಪರಾಯ ಪಾಣ್ಯಾತ್ಮನೇ ದಕ್ಷಾಯ ನಮಃ (15) ಓಂ ಪರಾಯ ವಾಗಾತ್ಮನೇ ಅಗ್ನಯೇ ನಮಃ (16) ಓಂ ಪರಾಯ ಘ್ರಾಣಾತ್ಮನೇ ಅಶ್ವಿಭ್ಯಾಂ ನಮಃ (17) ಓಂ ಪರಾಯ ಜಿಹ್ವಾತ್ಮನೇ ವರುಣಾಯ ನಮಃ (18) ಓಂ ಪರಾಯ ಚಕ್ಷುರಾತ್ಮನೇ ಸೂರ್ಯಾಯ ನಮಃ (19) ಓಂ ಪರಾಯ ತ್ವಗಾತ್ಮನೇ ಪ್ರಾಣಾಯ ನಮಃ (20) ಓಂ ಪರಾಯ ಶ್ರೋತ್ರಾತ್ಮನೇ ಸೂರ್ಯಾಯ ನಮಃ (21) ಓಂ ಪರಾಯ ಮನ ಆತ್ಮನೇ ಸ್ಕಂದೇಂದ್ರಾಭ್ಯಾಂ ನಮಃ (22) ಓಂ ಪರಾಯ ಅಹಂಕಾರಾತ್ಮನೇ ಶೇಷವೀಂದ್ರರುದ್ರೇಭ್ಯೋ ನಮಃ (23) ಓಂ ಪರಾಯ ಮಹದಾತ್ಮನೇ ಬ್ರಹ್ಮವಾಯುಭ್ಯಾಂ ನಮಃ (24) ಓಂ ಪರಾಯ ಅವ್ಯಕ್ತಾತ್ಮನೇ ಬ್ರಹ್ಮಾಣೀಭಾರತೀಭ್ಯಾಂ ನಮಃ (25) ಓಂ ಪರಾಯ ಪುರುಷಾತ್ಮನೇ ಬ್ರಹ್ಮವಾಯುಭ್ಯಾಂ ನಮಃ (26) ಓಂ ಪರಾಯ ಕಾಲಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ (27) ಓಂ ಪರಾಯ ಮಾಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ (28) ಓಂ ಪರಾಯ ನಿಯತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ (29) ಓಂ ಪರಾಯ ಮತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ (30) ಓಂ ಪರಾಯ ವಿದ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ (31) ಓಂ ಪರಾಯ ಕಲಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ (32) ಓಂ ಪರಾಯ ಪ್ರವೃತ್ತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ

ನಮಃ (33) ಓಂ ಪರಾಯ ಸೂತ್ರಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ (34) ಓಂ ಪರಾಯ ಸಂವಿದಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ (35) ಓಂ ಪರಾಯ ಪ್ರತಿಷ್ಠಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ (36) ಓಂ ಪರಾಯ ಶಕ್ತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ. ಇದು ಸಂಹಾರಕ್ರಮವೆನಿಸುತ್ತದೆ. ಇದಕ್ಕೆ ವಿಪರೀತಕ್ರಮವು ಸೃಷ್ಟಿಕ್ರಮವೆನಿಸುತ್ತದೆ.

### ಮಾತೃಕಾನ್ಯಾಸ

ಯಸ್ಯ ಕಸ್ಯಾಪಿ ಮಂತ್ರಸ್ಯ ನ್ಯಾಸಃ ಪಂಚಾಶದಕ್ಷರೈಃ |
ವಿನ್ಯಸೇದಃ ಕೇಶಭಿತೋ ವಕ್ತ್ರಮಕ್ಷಿಕರ್ಣೇಷು ನಾಸಯೋಃ ||
ಗಂಡಯೋರೋಷ್ಠಯೋರ್ದಂತಪಂಕ್ತ್ಯೋರ್ಮೂರ್ಧ್ನಿ ಚ ವಾಚಿ ಚ |
ದೋಃಪತ್ಸಂಧಿಷು ಸಾಂಗೇಷು ಪಾರ್ಶ್ವಯೋಃ ಪೃಷ್ಠಗುಹ್ಯಯೋಃ ||
ತುಂದೇ ಚ ಹೃದಿ ಧಾತೂನಾಂ ಸಪ್ತಕೇ ಪ್ರಾಣಜೀವಯೋಃ |
ಸರ್ವಕಾರಾನ್ಯಸೇದ್ವರ್ಣಾನ್ಯಸಿಂಹಃ ಕ್ಷಸ್ಯ ದೇವತಾ || (ತಂತ್ರಸಾರ)

"ಯಾವ ಮಂತ್ರವೇ ಆಗಲಿ. ಆ ಮಂತ್ರವನ್ನು ಜಪಿಸುವುದಕ್ಕಿಂತ ಪೂರ್ವದಲ್ಲಿ ಐವತ್ತೊಂದು ಅಕ್ಷರಗಳಿಂದ ನ್ಯಾಸವನ್ನು ಮಾಡಿಕೊಂಡು ಜಪಿಸಬೇಕು. ಹಾಗೆ ಜಪಿಸಿದರೆ ಆ ಮಂತ್ರಕ್ಕೆ ತುಂಬಾ ಶಕ್ತಿಯು ಬರುತ್ತದೆ. ಅಕಾರದಿಂದ ಆರಂಭಿಸಿ ಕ್ಷಕಾರದವರೆಗಿರುವ 51 ಅಕ್ಷರಗಳನ್ನು ಹೇಳುತ್ತಾ ಮುಟ್ಟಬೇಕಾದ ಸ್ಥಳಗಳನ್ನು ಕ್ರಮವಾಗಿ ಹೇಳುತ್ತೇವೆ."

(1) ತಲೆ (2) ಮುಖದ ಸುತ್ತ (3) ಬಲಗಣ್ಣು (4) ಎಡಗಣ್ಣು (5) ಬಲಗಿವಿ (6) ಎಡಗಿವಿ (7) ಮೂಗಿನ ಬಲರಂಧ್ರ (8) ಮೂಗಿನ ಎಡರಂಧ್ರ (9) ಬಲಕೆನ್ನೆ (10) ಎಡಕೆನ್ನೆ (11) ಮೇಲ್ತುಟಿ (12) ಕೆಳತುಟಿ (13) ಮೇಲಿನ ಹಲ್ಲುಗಳ ಸಾಲು (14) ಕೆಳಗಣ ಹಲ್ಲುಗಳ ಸಾಲು (15) ತಲೆ (16) ವಾಗಿಂದ್ರಿಯ (17-21) ಬಲಗೈಯ ನಾಲ್ಕು ಸಂಧಿಗಳು ಮತ್ತು ಬಲಗೈಯ ತುದಿ (22-26) ಎಡಗೈಯ ನಾಲ್ಕು ಸಂಧಿಗಳು ಮತ್ತು ಎಡಗೈಯ ತುದಿ (27-31) ಬಲಗಾಲಿನ ನಾಲ್ಕು ಸಂಧಿಗಳು ಮತ್ತು ಬಲಗಾಲಿನ ತುದಿ (32-36) ಎಡಗಾಲಿನ ನಾಲ್ಕು ಸಂಧಿಗಳು ಮತ್ತು ಎಡಗಾಲಿನ ತುದಿ (37) ಬಲಪಾರ್ಶ್ವ (38) ಎಡಪಾರ್ಶ್ವ (39) ಬೆನ್ನು (40) ಗುಹ್ಯೇಂದ್ರಿಯ (41) ಹೊಟ್ಟೆ (42) ಎದೆ (43-49) ದೇಹದಲ್ಲಿರುವ ಏಳು ಧಾತುಗಳು (50) ಪ್ರಾಣ (51) ಜೀವ. ಹೀಗೆ 51 ಸ್ಥಾನಗಳಲ್ಲಿ 51 ಅಕ್ಷರಗಳನ್ನು ಇಡಬೇಕು.

### ಅಕ್ಷರಗಳಿಂದ ಪೂಜ್ಯವಾದ ಭಗವನ್ಮೂರ್ತಿಗಳು

ಅಜ ಆನಂದ ಇಂದ್ರೇಶಾವುಗ್ರ ಊರ್ಜ ಋತಂಭರಃ |
ಋಘಲ್ಪಶೌ ಲೃಜಿರೇಕಾತ್ಮೈರ ಓಜೋಭೃದೌರಸಃ ||
ಅಂತೋಽರ್ಧಗರ್ಭಃ ಕಪಿಲಃ ಖಪತಿರ್ಗರುಡಾಸನಃ |
ಘರ್ಮೋ ಙಸಾರಶ್ಚಾರ್ವಂಗಶ್ಛಂದೋಗಮ್ಯೋ ಜನಾರ್ದನಃ ||
ಝಟಿತಾರಿರ್ಞಮಷ್ಟಂಕೀ ಠಕಲೋ ಡರಕೋ ಢರೀ |
ಣಾತ್ಮಾ ತಾರಸ್ಥಘೋ ದಂಡೀ ಧನ್ವೀ ನಮ್ಯಃ ಪರಃ ಫಲೀ ||
ಬಲೀ ಭಗೋ ಮನುರ್ಯಜ್ಞೋ ರಾಮೋ ಲಕ್ಷ್ಮೀಪತಿರ್ವರಃ |
ಶಾಂತಸಂವಿತ್ ಷಡ್ಗುಣಶ್ಚ ಸಾರಾತ್ಮಾ ಹಂಸಳಾಳುಕೌ ||

"ಮುಂದೆ ಹೇಳುವಂತೆ ಮೂರು ಸಲ ಪ್ರಾಣಾಯಾಮವನ್ನು ಮಾಡಬೇಕು. "ಏಷಾಂ ಮಾತೃಕಾಮಂತ್ರಾಣಾಮಂತರ್ಯಾಮೀ

ಋಷಿಃ" ತಲೆಯನ್ನು ಮುಟ್ಟಬೇಕು. "ದೈವೀ ಗಾಯತ್ರೀ ಛಂದಃ" ಬಾಯಿಯನ್ನು ಮುಟ್ಟಬೇಕು. "ಅಜಾದಿರೂಪೀ ಪರಮಾತ್ಮಾ ದೇವತಾ" ಎದೆಯನ್ನು ಮುಟ್ಟಬೇಕು. "ಮಾತೃಕಾನ್ಯಾಸಂ ಕರಿಷ್ಯೇ" ನೀರನ್ನು ಬಿಡಬೇಕು. "ಓಂ ಭೂಃ ಅಗ್ನ್ಯಾತ್ಮನೇ ಹೃದಯಾಯ ನಮಃ" ಮುಂತಾದ ಮಂತ್ರಗಳಿಂದ ಪಂಚಾಂಗನ್ಯಾಸವನ್ನು ತತ್ತನ್ಮಂತ್ರದಲ್ಲಿ ಮಾಡಿದಂತೆ ಮಾಡಬೇಕು. ಕೆಳಗಿನ ಶ್ಲೋಕದಲ್ಲಿ ಹೇಳಿದಂತೆ ಧ್ಯಾನವನ್ನು ಮಾಡಬೇಕು."

ತಾದೃಗ್ರೂಪಾಶ್ಚ ಪಂಚಾಶಜ್ಜ್ಞಾನಮುದ್ರಾಭಯೋದ್ಯತಾಃ |
ಟಂಕೀ ದಂಡೀ ಚ ಧನ್ವೀ ಚ ತತ್ತದ್ಯುಕ್ತಾಸ್ತು ವಾಮತಃ ||

(1) ಓಂ ಅಂ ಅಜಾಯ ನಮಃ (2) ಓಂ ಆಂ ಆನಂದಾಯ ನಮಃ (3) ಓಂ ಇಂ ಇಂದ್ರಾಯ ನಮಃ (4) ಓಂ ಈಂ ಈಶಾಯ ನಮಃ (5) ಓಂ ಉಂ ಉಗ್ರಾಯ ನಮಃ (6) ಓಂ ಊಂ ಊರ್ಜಾಯ ನಮಃ (7) ಓಂ ಋಂ ಋತುಂಭರಾಯ ನಮಃ (8) ಓಂ ೠಂ ೠಘಾಯ ನಮಃ (9) ಓಂ ಌಂ ಌಶಾಯ ನಮಃ (10) ಓಂ ೡಂ ೡಜಯೇ ನಮಃ (11) ಓಂ ಏಂ ಏಕಾತ್ಮನೇ ನಮಃ (12) ಓಂ ಐಂ ಐರಾಯ ನಮಃ (13) ಓಂ ಓಂ ಓಜೋಭೃತೇ ನಮಃ (14) ಓಂ ಔಂ ಔರಸಾಯ ನಮಃ (15) ಓಂ ಅಂ ಅಂತಾಯ ನಮಃ (16) ಓಂ ಅಃ ಅರ್ಧಗರ್ಭಾಯ ನಮಃ (17) ಓಂ ಕಂ ಕಪಿಲಾಯ ನಮಃ (18) ಓಂ ಖಂ ಖಪತಯೇ ನಮಃ (19) ಓಂ ಗಂ ಗರುಡಾಸನಾಯ ನಮಃ (20) ಓಂ ಘಂ ಘರ್ಮಾಯ ನಮಃ (21) ಓಂ ಙಂ ಙಸಾರಾಯ ನಮಃ (22) ಓಂ ಚಂ ಚಾರ್ವಂಗಾಯ ನಮಃ (23) ಓಂ ಛಂ ಛಂದೋಗಮ್ಯಾಯ ನಮಃ (24) ಓಂ ಜಂ ಜನಾರ್ದನಾಯ ನಮಃ (25) ಓಂ ಝಂ ಝಟಿತಾರಯೇ ನಮಃ (26) ಓಂ ಞಂ ಞಮಾಯ ನಮಃ (27) ಓಂ ಟಂ ಟಂಕಿನೇ ನಮಃ (28) ಓಂ ಠಂ ಠಕಲಾಯ ನಮಃ (29) ಓಂ ಡಂ ಡರಕಾಯ ನಮಃ (30) ಓಂ ಢಂ ಢರಿಣೇ ನಮಃ (31) ಓಂ ಣಂ ಣಾತ್ಮನೇ ನಮಃ (32) ಓಂ ತಂ ತಾರಾಯ ನಮಃ (33) ಓಂ ಥಂ ಥಭಾಯ ನಮಃ (34) ಓಂ ದಂ ದಂಡಿನೇ ನಮಃ (35) ಓಂ ಧಂ ಧನ್ವಿನೇ ನಮಃ (36) ಓಂ ನಂ ನಮ್ಯಾಯ ನಮಃ (37) ಓಂ ಪಂ ಪರಾಯ ನಮಃ (38) ಓಂ ಫಲಂ ಫಲಿನೇ ನಮಃ (39) ಓಂ ಬಂ ಬಲಿನೇ ನಮಃ (40) ಓಂ ಭಂ ಭಗಾಯ ನಮಃ (41) ಓಂ ಮಂ ಮನವೇ ನಮಃ (42) ಓಂ ಯಂ ಯಜ್ಞಾಯ ನಮಃ (43) ಓಂ ರಂ ರಾಮಾಯ ನಮಃ (44) ಓಂ ಲಂ ಲಕ್ಷ್ಮೀಪತಯೇ ನಮಃ (45) ಓಂ ವಂ ವರಾಯ ನಮಃ (46) ಓಂ ಶಂ ಶಾಂತಸಂವಿದೇ ನಮಃ (47) ಓಂ ಷಂ ಷಡ್ಗುಣಾಯ ನಮಃ (48) ಓಂ ಸಂ ಸಾರಾತ್ಮನೇ ನಮಃ (49) ಓಂ ಹಂ ಹಂಸಾಯ ನಮಃ (50) ಓಂ ಳಂ ಳಾಳುಕಾಯ ನಮಃ (51) ಓಂ ಕ್ಷಂ ನೃಸಿಂಹಾಯ ನಮಃ ಈ ಐವತ್ತೊಂದು ಮೇಲೆ ಹೇಳಿದ ಸ್ಥಾನಗಳನ್ನು ಮುಟ್ಟಬೇಕು.

ಏವಂ ಮಾತೃಕಾತತ್ತ್ವಾನಾಂ ನ್ಯಾಸಂ ಕೃತ್ವಾ ವಿಧಾನತಃ |
ಆಯಾತ್ವಿತ್ಯನುವಾಕೇನ ಹೃದಯೇ ಚಾರ್ಕಮಂಡಲೇ ||
ದೇವೀಮಾವಾಹ್ಯ ಗಾಯತ್ರೀಂ ತತೋ ಧ್ಯಾಯೇದ್ದ್ವಿಜೋತ್ತಮಃ |
ಸವಿತಾ ದೇವತಾ ಚಾಸ್ಯಾ ಮುಖಮಗ್ನಿಸ್ತ್ರಿಪಾಚ್ಚ ಯಾ ||
ವಿಶ್ವಾಮಿತ್ರ ಋಷಿಶ್ಛಂದೋ ಗಾಯತ್ರ್ಯಾಖ್ಯಾ ವಿಶಿಷ್ಯತೇ |
ಅಗ್ನಿರ್ಮುಖಮಿತಿ ನ್ಯಸ್ಯ ಪ್ರಾಣಾಯಾಮಂ ಸಮಾಚರೇತ್ ||
ಪೂರ್ವೋಕ್ತಲಕ್ಷಣಂ ತಸ್ಯ ಋಷಿರ್ಬ್ರಹ್ಮಾ ಪ್ರಜಾಪತಿಃ |
ದೇವತಾ ಚ ಹರಿಃ ಸಾಕ್ಷಾತ್ಪರಮಾತ್ಮಾ ಉದಾಹೃತಃ ||
ಪ್ರಾಣಸ್ಯ ಯಮನೇ ಚೈವ ವಿನಿಯೋಗಸ್ತಥೈವ ಚ |
ಏವಂ ಸಂಚಿಂತ್ಯ ಮನಸಾ ತತೋ ನ್ಯಾಸಂ ಸಮಾಚರೇತ್ ||

ಭೂರಂಗುಷ್ಠದ್ವಯೇ ನ್ಯಸ್ಯ ಭುವಸ್ತರ್ಜನಿಕಾದ್ವಯೋಃ |
ಜ್ಯೇಷ್ಠಾಂಗುಲಿದ್ವಯೇ ಧೀಮಾನ್ ಸ್ವಃಪದಂ ವಿನಿಯೋಜಯೇತ್ ||
ಅನಾಮಿಕಾದ್ವಯೇ ಧೀಮಾನ್ ನ್ಯಸೇತ್ತತ್ಪದಮಗ್ರತಃ |
ಕನಿಷ್ಠಿಕಾದ್ವಯೇ ಭರ್ಗಃ ಪಾರ್ಷ್ಣ್ಯೋರ್ಮಧ್ಯೇ ಧಿಯಂ ಪದಮ್ ||
ಭೂಃಪದಂ ಹೃದಿ ವಿನ್ಯಸ್ಯ ಭುವಃ ಶಿರಸಿ ವಿನ್ಯಸೇತ್ |
ಉಭಯೋರಂಗುಷ್ಠಯೋಃ ಸ್ಪೃಶ್ಯ ತರ್ಜನ್ಯಾಂ ಪ್ರಣವಂ ನ್ಯಸೇತ್ ||
ಅಷ್ಟಾನಾಮಂಗುಲೀನಾಂ ಚ ಚತುರ್ವಿಂಶತಿ ಪರ್ವಸು |
ವ್ಯಾಹೃತೀನಾಂ ತು ಸಪ್ತಾನಾಂ ನ್ಯಾಸಂ ಬ್ರಹ್ಮಾ ಬ್ರವೀನ್ಮುನಿಃ ||
ಪಾದಯೋಶ್ಚ ತಥಾ ಜಾನ್ವೋರ್ಜಂಘಯೋರ್ಜಠರೇಽಪಿ ಚ |
ಕಂಠೇ ಮುಖೇ ತಥಾ ಮೂರ್ಧ್ನಿ ಕ್ರಮೇಣ ವ್ಯಾಹೃತೀರ್ನ್ಯಸೇತ್ ||
ಏವಂ ಪೂರ್ವೋಕ್ತವಿಧಿನಾ ಪ್ರಾಣಾಯಾಮಮ್ಯ ವಾಗ್ಯತಃ |
ಗಾಯತ್ರ್ಯಾಶ್ಚ ಜಪಂ ಕುರ್ಯಾನ್ಮಹಾಪಾತಕನಾಶನಮ್ ||

ಓಮಿತಿ ಹೃದಯೇ, ಭೂರಿತಿ ಮುಖೇ, ಭುವ ಇತಿ ಶಿರಸಿ, ಸ್ವರಿತಿ ಸರ್ವಾಂಗೇ, ತತೋ ಯಥಾವಿಧಿ ಗಾಯತ್ರೀಮಭ್ಯಸೇತ್.

## ವಿಶ್ವಾಮಿತ್ರಗಾಯತ್ರೀ

"ಹಿಂದೆ ಹೇಳಿದ ಐವತ್ತೊಂದು ಮಾತೃಕಾಮಂತ್ರಗಳಿಂದ ಐವತ್ತೊಂದು ಸ್ಥಾನಗಳನ್ನು ಮುಟ್ಟಬೇಕು. ಒಂದೊಂದು ಸ್ಥಳಗಳಲ್ಲಿಯೂ ಜ್ಞಾನಮುದ್ರಾ ಮತ್ತು ಅಭಯಹಸ್ತಗಳಿಂದ ಯುಕ್ತವಾಗಿರುವ ಅಜ ಮುಂತಾದ ಶ್ರೀಹರಿಯ ರೂಪಗಳನ್ನು ಸ್ಮರಿಸಬೇಕು. ಟಂಕೀ, ದಂಡೀ, ಧನ್ವೀ ಎಂಬ ಮೂರು ಮೂರ್ತಿಗಳನ್ನು ಮಾತ್ರ ಎಡಗೈಯಲ್ಲಿ ಟಂಕ, ದಂಡ, ಧನುಸ್ಸು ಎಂಬ ಮೂರು ವಸ್ತುಗಳನ್ನು ಕ್ರಮವಾಗಿ ಧರಿಸಿರುವಂತೆ ಸ್ಮರಿಸಬೇಕು.

ಹೀಗೆ ಮಾತೃಕಾ ಮಂತ್ರಗಳಿಂದ ಮಾತೃಕಾನ್ಯಾಸವನ್ನು ಮಾಡಿದ ಮೇಲೆ "ಆಯಾತು ವರದಾ ದೇವೀ" ಎಂಬ ಮಂತ್ರದಿಂದ ಹೃದಯದಲ್ಲಿ ಮತ್ತು ಸೂರ್ಯಮಂಡಲದಲ್ಲಿ ಗಾಯತ್ರಿಯನ್ನು ಆವಾಹನ ಮಾಡಿಕೊಳ್ಳಬೇಕು. ಆ ಮೇಲೆ "ಧ್ಯೇಯಃ ಸದಾ" ಎಂಬ ಧ್ಯಾನಶ್ಲೋಕದಲ್ಲಿ ಹೇಳಿದಂತೆ ಗಾಯತ್ರಿಯನ್ನು ಸ್ಮರಿಸಬೇಕು. ಆ ಗಾಯತ್ರೀಮಂತ್ರಕ್ಕೆ ದೇವತೆಯು ಅಂದರೆ ಗಾಯತ್ರೀಮಂತ್ರದಿಂದ ಹೊಗಳಲ್ಪಡುವ ದೇವತೆಯು ಸವಿತಾ ಎಂದು ಹೇಳಲ್ಪಡುವ ಸೂರ್ಯಾಂತರ್ಯಾಮಿಯಾಗಿರುವ ನಾರಾಯಣನು, ಮುಖವು ಅಗ್ನಿದೇವತೆಯು. ಈ ಗಾಯತ್ರಿಯು ಮೂರು ಪಾದಗಳಿಂದ ಯುಕ್ತವಾಗಿದೆ. ವಿಶ್ವಾಮಿತ್ರರು ಈ ಗಾಯತ್ರೀಮಂತ್ರಕ್ಕೆ ಋಷಿಯಾಗಿರುವರು. ಗಾಯತ್ರೀ ಛಂದಸ್ಸು ಆಗಿರುತ್ತದೆ. ಅಗ್ನಿಯು ಮುಖವಾಗಿರುವನು ಎಂದು ಹೇಳುತ್ತಾ ಪ್ರಾಣಾಯಾಮವನ್ನು ಮಾಡಬೇಕು. ಅಸ್ಯ ಶ್ರೀ ವಿಶ್ವಾಮಿತ್ರಗಾಯತ್ರೀಮಂತ್ರಸ್ಯ ವಿಶ್ವಾಮಿತ್ರ ಋಷಿಃ, ದೈವೀ ಗಾಯತ್ರೀ ಛಂದಃ, ಸವಿತಾ ದೇವತಾ, ಪ್ರಾಣಾಯಾಮೇ ವಿನಿಯೋಗಃ ಎಂದು ಹೇಳಿ ಅಂಗನ್ಯಾಸವನ್ನು ಮಾಡಬೇಕು.

ಈ ಗಾಯತ್ರಿಯಲ್ಲಿ ವಿಶ್ವಾಮಿತ್ರಗಾಯತ್ರೀ ಬ್ರಹ್ಮಗಾಯತ್ರೀ ಎಂದು ಎರಡು ವಿಧವಾಗಿದೆ. ವಿಶ್ವಾಮಿತ್ರ ಗಾಯತ್ರಿಯ ವಿಷಯವನ್ನು ಇಷ್ಟರವರೆಗೆ ಹೇಳಿದೆವು. ಬ್ರಹ್ಮಗಾಯತ್ರಿಯಲ್ಲಿಯೂ ಮಂತ್ರವು ಒಂದೇ ಆಗಿರುತ್ತದೆ. ಅಂಗನ್ಯಾಸಾದಿಗಳ ವಿಷಯದಲ್ಲಿ ಸ್ವಲ್ಪ ಬದಲಾವಣೆ ಇದೆ. ಅದನ್ನು ಈಗ ಹೇಳುತ್ತೇವೆ.

ಬ್ರಹ್ಮಗಾಯತ್ರಿಗೆ ಬ್ರಹ್ಮದೇವನು ಋಷಿಯೆನಿಸುವನು. ದೇವತೆಯು ಪರಮಾತ್ಮನು. ಪ್ರಾಣಾಯಾಮವನ್ನು ಮಾಡಬೇಕು. ಬ್ರಹ್ಮಗಾಯತ್ರ್ಯಾ ಬ್ರಹ್ಮಾ ಋಷಿಃ, ಗಾಯತ್ರೀ ಛಂದಃ, ಪರಮಾತ್ಮಾ ದೇವತಾ, ಪ್ರಾಣಾಯಾಮೇ ವಿನಿಯೋಗಃ ಎಂದು ಹೇಳಿ ಕರನ್ಯಾಸವನ್ನು ಮಾಡಬೇಕು.

## ಕರನ್ಯಾಸ

"ಓಂ ಭೂಃ ಅಂಗುಷ್ಠಾಭ್ಯಾಂ ನಮಃ" ಎಂದು ಹೇಳುತ್ತಾ ಎರಡು ಕೈಗಳಲ್ಲಿರುವ ಅಂಗುಷ್ಠಗಳನ್ನು ಮುಟ್ಟಬೇಕು. "ಓಂ ಭುವಃ ತರ್ಜನೀಭ್ಯಾಂ ನಮಃ" ಎಂದು ಹೇಳುತ್ತಾ ತೋರ್ಬೆರಳುಗಳನ್ನು ಮುಟ್ಟಬೇಕು. "ಓಂ ಸ್ವಃ ಮಧ್ಯಮಾಭ್ಯಾಂ ನಮಃ" ಎಂದು ಹೇಳುತ್ತಾ ಎರಡು ನಡುಬೆರಳುಗಳನ್ನು ಮುಟ್ಟಬೇಕು. "ಓಂ ತತ್ಸವಿತುರ್ವರೇಣ್ಯಾಂ ಅನಾಮಿಕಾಭ್ಯಾಂ ನಮಃ " ಎಂದು ಹೇಳುತ್ತಾ ಎರಡು ಉಂಗುರದ ಬೆರಳುಗಳನ್ನು ಮುಟ್ಟಬೇಕು. "ಓಂ ಭರ್ಗೋ ದೇವಸ್ಯ ಧೀಮಹಿ ಕನಿಷ್ಠಿಕಾಭ್ಯಾಂ ನಮಃ" ಎಂದು ಹೇಳುತ್ತಾ ಎರಡು ಕಿರುಭೆರಳುಗಳನ್ನು ಮುಟ್ಟಬೇಕು. "ಓಂ ಧಿಯೋ ಯೋ ನಃ ಪ್ರಚೋದಯಾತ್ ಕರತಲಕರಪೃಷ್ಠಾಭ್ಯಾಂ ನಮಃ" ಎಂದ ಹೇಳುತ್ತಾ ಕೈಗಳ ಮಧ್ಯದಲ್ಲಿ ಹಿಂಭಾಗ ಮತ್ತು ಮುಂಭಾಗವನ್ನು ಮುಟ್ಟಬೇಕು. ಇದು ಕರನ್ಯಾಸವೆನಿಸುತ್ತದೆ.

## ಅಂಗನ್ಯಾಸ

ಇನ್ನು ಅಂಗನ್ಯಾಸವನ್ನು ಹೇಳುತ್ತೇವೆ. "ಓಂ ಭೂಃ ಹೃದಯಾಯ ನಮಃ" ಎಂದು ಹೇಳುತ್ತಾ ಎದೆಯನ್ನು ಮುಟ್ಟಬೇಕು. "ಓಂ ಭುವಃ ಶಿರಸೇ ಸ್ವಾಹಾ" ಎಂದು ಹೇಳುತ್ತಾ ತಲೆಯನ್ನು ಮುಟ್ಟಬೇಕು. "ಓಂ ಸ್ವಃ ಅಂಗುಷ್ಠಾಭ್ಯಾಂ ನಮಃ" ಎಂದು ಹೇಳುತ್ತಾ ಎರಡು ಅಂಗುಷ್ಠಗಳನ್ನು ಮುಟ್ಟಬೇಕು. "ಓಂ ಓಂ ತರ್ಜನೀಭ್ಯಾಂ ನಮಃ" ಎಂದು ಹೇಳುತ್ತಾ ಎರಡು ತೋರ್ಬೆರಳುಗಳನ್ನು ಮುಟ್ಟಬೇಕು.

ಅಂಗುಷ್ಠಗಳನ್ನು ಬಿಟ್ಟು ಉಳಿದ ಎಂಟು ಬೆರಳುಗಳಲ್ಲಿರುವ ಇಪ್ಪತ್ತನಾಲ್ಕು ಗೆಣ್ಣುಗಳಲ್ಲಿ ಗಾಯತ್ರೀ ಮಂತ್ರದಲ್ಲಿರುವ ಇಪ್ಪತ್ತನಾಲ್ಕು ಅಕ್ಷರಗಳನ್ನು ಇಡಬೇಕು.

"ಓಂ ಭೂಃ ಪಾದಾಭ್ಯಾಂ ನಮಃ" ಎಂದು ಹೇಳುತ್ತಾ ಕಾಲುಗಳನ್ನು ಮುಟ್ಟಬೇಕು. "ಓಂ ಭುವಃ ಜಂಘಾಭ್ಯಾಂ ನಮಃ", "ಓಂ ಸ್ವಃ ಜಾನುಭ್ಯಾಂ ನಮಃ" "ಓಂ ಮಹಃ ಜಠರಾಯ ನಮಃ", "ಓಂ ಜನಃ ಕಂಠಾಯ ನಮಃ", "ಓಂ ತಪಃ ಮುಖಾಯ ನಮಃ","ಓಂ ಸತ್ಯಂ ಮೂರ್ಧ್ನೇ ನಮಃ" ಎಂದು ಕ್ರಮವಾಗಿ ಹೇಳುತ್ತಾ ಜಂಘ ಮುಂತಾದ ಆರು ಅವಯವಗಳನ್ನು ಮುಟ್ಟಬೇಕು. ಹೀಗೆ ಅಂಗನ್ಯಾಸವನ್ನು ಮಾಡಿ ಪ್ರಾಣಾಯಾಮವನ್ನು ಮಾಡಬೇಕು. ಅನಂತರದಲ್ಲಿ ಗಾಯತ್ರೀಮಂತ್ರವನ್ನು ಜಪಿಸಬೇಕು. ಹೀಗೆ ಜಪಿಸಿದರೆ ಎಲ್ಲಾ ಮಹಾಪಾಪಗಳೂ ನಶಿಸುತ್ತವೆ.

"ಓಂ ಓಂ ಹೃದಯಾಯ ನಮಃ" ಎಂದು ಹೇಳುತ್ತಾ ಹೃದಯವನ್ನು ಮುಟ್ಟಬೇಕು. "ಓಂ ಭೂಃ ಮುಖಾಯ ನಮಃ" ಎಂದು ಹೇಳುತ್ತಾ ಮುಖವನ್ನು ಮುಟ್ಟಬೇಕು. "ಓಂ ಭುವಃ ಶಿರಸೇ ಸ್ವಾಹಾ" ಎಂದು ಹೇಳುತ್ತಾ ಶಿರಸ್ಸನ್ನು ಮುಟ್ಟಬೇಕು. "ಓಂ ಸ್ವಃ ಸರ್ವಾಂಗೇಭ್ಯೋ ನಮಃ" ಎಂದು ಹೇಳುತ್ತಾ ಸರ್ವಾಂಗಗಳನ್ನು ಮುಟ್ಟಬೇಕು. ಇದು ಅಂಗನ್ಯಾಸದಲ್ಲಿ ಸಂಕ್ಷಿಪ್ತಕ್ರಮ. ಆ ಮೇಲೆ ಶಾಸ್ತ್ರೋಕ್ತವಿಧಿಯನ್ನು ಅನುಸರಿಸಿ ಗಾಯತ್ರೀ ಮಂತ್ರವನ್ನು ಜಪಿಸಬೇಕು.

## ಗಾಯತ್ರೀ ಮಂತ್ರಾರ್ಥ

ದೇವಸ್ಯ ಸವಿತುಸ್ತಸ್ಯ ಧಿಯೋ ಯೋ ನಃ ಪ್ರಚೋದಯಾತ್ |
ಭರ್ಗೋ ವರೇಣ್ಯಂ ತದ್ಬ್ರಹ್ಮ ಧೀಮಹೀತ್ಯರ್ಥ ಉಚ್ಯತೇ ||

"ಶ್ರೀಹರಿಯು ನಮ್ಮ ಎಲ್ಲಾ ಇಂದ್ರಿಯಗಳನ್ನೂ ಪ್ರೇರಿಸುವನು. ಜಗಜ್ಜನ್ಮಾದಿ ಕಾರಣನೂ ತನ್ನಿಂದ ಸೃಷ್ಟಿಸಲ್ಪಟ್ಟ ಪ್ರಪಂಚದಲ್ಲಿ ಪ್ರವೇಶಿಸಿ ನಾನಾವಿಧವಾದ ಕ್ರೀಡೆಗಳನ್ನು ಮಾಡುತ್ತಿರುವವನ ಆಗಿರುವ ಶ್ರೀಹರಿಯ ಸಕಲಜಗತ್ತಿನಲ್ಲಿಯೂ ಅಂತರ್ಯಾಮಿಯಾಗಿದ್ದು ಸರ್ವರನ್ನೂ ಪ್ರೇರಿಸುತ್ತಿರುವ ಸರ್ವರಿಂದಲೂ ಮಾನ್ಯವಾಗಿರುವ ರೂಪವನ್ನು ಧ್ಯಾನ ಮಾಡುವೆವು. ಇದು ಗಾಯತ್ರೀಮಂತ್ರದ ಅರ್ಥ."

"ಸವಿತುಃ=ಜಗತ್ತುಗಳನ್ನು ಸೃಷ್ಟಿಸುತ್ತಿರುವ ಶ್ರೀಹರಿಯ, ವರೇಣ್ಯಂ=ಸರ್ವರಿಂದಲೂ ಸೇವಿಸಲ್ಪಡುತ್ತಿರುವ, ಭರ್ಗಃ =ತೇಜೋಮಯವಾದ ಅಥವಾ ದಿವ್ಯಜ್ಞಾನವನ್ನೂ, ಬೆಳಕನ್ನೂ ಕೊಟ್ಟು ಒಳಗಿರುವ ಅಜ್ಞಾನವೆಂಬ ಕತ್ತಲೆಯನ್ನೂ, ಹೊರಗಿರುವ ಕತ್ತಲೆಯನ್ನೂ ಪರಿಹರಿಸುತ್ತಿರುವ ಅಥವಾ ಎಲ್ಲಾ ಪ್ರಾಣಿಗಳ ಒಳಗೆ ಪ್ರವೇಶಿಸಿ ಸರ್ವರನ್ನೂ ಪೋಷಿಸುತ್ತಿರುವ ದೇವಸ್ಯ=ಪ್ರಕಾಶಮಾನನಾಗಿರುವ ಶ್ರೀಹರಿಯ ತತ್=ಸರ್ವವ್ಯಾಪ್ತವಾದ ಆ ಸ್ವರೂಪವನ್ನು ಧೀಮಹಿ=ಧ್ಯಾನಮಾಡುತ್ತೇವೆ. ಅಂದರೆ ಸೂರ್ಯಮಂಡಲಾಂತರ್ಗತವಾದ ತೇಜೋಮಯವಾದ ರೂಪವನ್ನು ಸ್ಮರಿಸುವೆವು."

"ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸುವರ್ಣಃ" ಎಂಬ ಶ್ರುತಿಯಲ್ಲಿ ಹೇಳಿದಂತೆ ಸರ್ವಾಂಗಗಳೂ ಸುವರ್ಣಮಯವಾಗಿರುವ ಅಂದರೆ ಜ್ಞಾನಾನಂದಾದಿ ಗುಣಾತ್ಮಕವಾಗಿರುವ ಶ್ರೀಹರಿಯನ್ನು ಸ್ಮರಿಸುವೆವು."

ಆದಿತ್ಯಮಂಡಲಾಸೀನಂ ರುಕ್ಮಾಭಂ ಪುರುಷಂ ಪರಮ್ |
ಧ್ಯಾಯನ್ ಜಪೇತ್ತದಿತ್ಯೇತನ್ನಿಷ್ಕಾಮೋ ಮುಚ್ಯತೇ ದ್ವಿಜಃ ||
ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ ಸರಸಿಜಾಸನಸನ್ನಿವಿಷ್ಟಃ |
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ||

"ಮುಂತಾದ ವಾಕ್ಯಗಳಲ್ಲಿ ಹೇಳಿದಂತೆ ಸೂರ್ಯಮಂಡಲಾಂತರ್ಗತವಾದ ನಾರಾಯಣನೇ ಗಾಯತ್ರೀಮಂತ್ರದಿಂದ ಉಪಾಸ್ಯನು. ಬೇರೆ ಅಲ್ಲ."

ಆಯಾಹಿ ವರದಾ ದೇವಿ ಜಪ್ಯೇ ಮೇ ಸನ್ನಿಧೌ ಭವ |
ಗಾಯಂತಂ ತ್ರಾಯಸೇ ಯಸ್ಮಾತ್ ಗಾಯತ್ರೀ ತ್ವಂ ಹರಿಃ ಸ್ಮೃತಃ || (ನಾರದರ ವಚನ)

"ಓ ಗಾಯತ್ರೀದೇವಿಯೇ ಬಾ, ಜಪಕಾಲದಲ್ಲಿ ನನ್ನಲ್ಲಿ ಸನ್ನಿಹಿತಳಾಗು. ನಿನ್ನನ್ನು ಭಕ್ತಿಯಿಂದ ಯಾರು ಹೊಗಳುತ್ತಾರೋ ಅವರನ್ನು ರಕ್ಷಿಸುತ್ತೀ. ಆದ್ದರಿಂದಲೇ ಗಾಯತ್ರೀ ಎಂದು ಹೇಳಲ್ಪಡುವಿ. ನೀನು ಸ್ತ್ರೀಲಿಂಗಶಬ್ದದಿಂದ ವಾಚ್ಯನಾದ ಶ್ರೀಹರಿಯೇ ಆಗಿರುವಿ. ಸ್ತ್ರೀಯಲ್ಲ. ನೀನು ನನ್ನನ್ನು ರಕ್ಷಿಸು."

ಮನುನಾ ಚ ಪುನಃ ಪ್ರೋಕ್ಷ್ಯ ದದ್ಯಾದಂಜಲಿಮಂಜಸಾ |
ಸವ್ಯಾಹೃತ್ಯಾ ತು ಸಾವಿತ್ರ್ಯಾ ಸಪ್ತವ್ಯಾಹೃತಿಪೂರ್ವಯಾ ||

"ಗಾಯತ್ರೀಮಂತ್ರದಿಂದ ಜಲವನ್ನು ಪ್ರೋಕ್ಷಣೆ ಮಾಡಬೇಕು. ಆ ಜಲವನ್ನು ಬೊಗಸೆಯಿಂದ ಎತ್ತಬೇಕು. ಏಳು ವ್ಯಾಹೃತಿಮಂತ್ರಗಳನ್ನು ಮೊದಲು ಜಪಿಸಿ ಗಾಯತ್ರೀಮಂತ್ರದಿಂದ ಮೂರು ಸೂರ್ಯಾರ್ಘ್ಯಗಳನ್ನು ಕೊಡಬೇಕು. ಆ ಮೇಲೆ ಸೂರ್ಯೋದಯದವರೆಗೆ ನಿಂತುಕೊಂಡು ಗಾಯತ್ರೀಮಂತ್ರವನ್ನು ಜಪಿಸಬೇಕು."

ಶುಚಿಃ ಸಂಧ್ಯಾಮುಪಾಸೀತ ಕುರ್ಯಾದ್ದೇವರ್ಷಿತರ್ಪಣಮ್ |
ತಿಷ್ಠನ್ನುದಯಪರ್ಯಂತಂ ಗಾಯತ್ರ್ಯಷ್ಟಶತಂ ಜಪೇತ್ || (ವಿಷ್ಣುಧರ್ಮೋತ್ತರವಚನ)

"ಸ್ನಾನಾದಿಗಳಿಂದ ಶುದ್ಧನಾಗಬೇಕು. ಸೂರ್ಯಾರ್ಘ್ಯವನ್ನು ಕೊಡಬೇಕು. ದೇವತೆಗಳಿಗೂ, ಋಷಿಗಳಿಗೂ, ತರ್ಪಣವನ್ನು ಕೊಡಬೇಕು. ನಿಂತುಕೊಂಡು ನೂರೆಂಟು ಸಲ ಗಾಯತ್ರೀಮಂತ್ರವನ್ನು ಸೂರ್ಯೋದಯದವರೆಗೆ ಜಪಿಸಬೇಕು."

ಪ್ರಣವವ್ಯಾಹೃತೀಯುಕ್ತಾಂ ಗಾಯತ್ರೀಂ ತು ಜಪೇತ್ತತಃ | (ಚಂದ್ರಿಕಾ)

"ಮೊದಲು ಪ್ರಣವಮಂತ್ರವನ್ನು ಅಂದರೆ ಓಂಕಾರವನ್ನು ಹೇಳಬೇಕು. ಅನಂತರದಲ್ಲಿ ವ್ಯಾಹೃತಿಮಂತ್ರವನ್ನು ಹೇಳಬೇಕು. ಆಮೇಲೆ ಗಾಯತ್ರೀಮಂತ್ರವನ್ನು ಹೇಳಬೇಕು. ಹೀಗೆ ಪ್ರಣವ ವ್ಯಾಹೃತಿಮಂತ್ರಯುಕ್ತವಾದ ಗಾಯತ್ರೀ ಮಂತ್ರವನ್ನು ಜಪಿಸಬೇಕು.

ಓಂಕಾರಮುಚ್ಚಾರ್ಯ ತತೋ ಭೂರ್ಭುವಸ್ಸ್ವಸ್ತಥೈವ ಚ |
ಗಾಯತ್ರೀಂ ಪ್ರಣವಂ ಚಾಂತೇ ಜಪ ಏವಮುದಾಹೃತಃ || (ಯೋಗಿಯಾಜ್ಞವಲ್ಕ್ಯರ ವಚನ)

"ಓಂಕಾರವನ್ನು ಉಚ್ಚರಿಸಬೇಕು. ಆ ಮೇಲೆ ಭೂಃ ಭುವಃ ಸ್ವಃ ಎಂದು ಹೇಳಬೇಕು. ಆ ಮೇಲೆ ಗಾಯತ್ರಿಯನ್ನು ಹೇಳಬೇಕು. ಕೊನೆಗೆ ಓಂಕಾರವನ್ನು ಹೇಳಬೇಕು. ಗಾಯತ್ರೀಜಪವನ್ನು ಈ ರೀತಿಯಿಂದ ಮಾಡಬೇಕು."

ಉಭಯತಃ ಸಪ್ರಣವಂ ಸವ್ಯಾಹೃತಿಕಾಂ ಗಾಯತ್ರೀಮಾವರ್ತಯೇತ್ | (ಬೋಧಾಯನರ ವಚನ)

"ಆರಂಭದಲ್ಲಿಯೂ, ಅಂತ್ಯದಲ್ಲಿಯೂ, ಪ್ರಣವಮಂತ್ರವನ್ನು ಹೇಳಬೇಕು. ವ್ಯಾಹೃತಿಯನ್ನು ಹೇಳಬೇಕು. ಅನಂತರದಲ್ಲಿ ಗಾಯತ್ರಿಯನ್ನು ಹೇಳಬೇಕು. ಇದು ಗಾಯತ್ರೀಮಂತ್ರಜಪದ ಕ್ರಮ.

## ಗಾಯತ್ರೀ ಮಹಿಮೆ

ಭಿನ್ನಪಾದಾ ತು ಗಾಯತ್ರೀ ಬ್ರಹ್ಮಹತ್ಯಾಪ್ರಣಾಶಿನೀ |
ಅಭಿನ್ನಪಾದಾ ಗಾಯತ್ರೀ ಬ್ರಹ್ಮಹತ್ಯಾ ಪ್ರಯಚ್ಛತಿ ||

"ಗಾಯತ್ರೀಮಂತ್ರದಲ್ಲಿ "ತತ್ಸವಿತುರ್ವರೇಣ್ಯಂ", "ಭರ್ಗೋದೇವಸ್ಯ ಧೀಮಹಿ", "ಧಿಯೋ ಯೋ ನಃ ಪ್ರಚೋದಯಾತ್" ಎಂಬ ಮೂರು ಪಾದಗಳಿವೆ. ಈ ಮೂರು ಪಾದಗಳನ್ನು ಬೇರೆ ಬೇರೆಯಾಗಿ ವಿಂಗಡಿಸಿ ಹೇಳಬೇಕು. ಹಾಗೆ ಮಾಡಿದರೆ ಬ್ರಹ್ಮಹತ್ಯಾದೋಷವು ಹೋಗುತ್ತದೆ. ಹಾಗೆ ಮಾಡದೆ ಮೂರು ಪಾದಗಳನ್ನೂ ಒಟ್ಟಿಗೆ ಹೇಳಿದರೆ ಬ್ರಹ್ಮಹತ್ಯಾದೋಷವು ಬರುತ್ತದೆ."

ಸೋಂಕಾರಾ ಚತುರಾವೃತ್ತ್ಯಾ ವಿಜ್ಞೇಯಾ ಸಾ ಶತಾಕ್ಷರೀ |
ಶತಾಕ್ಷರೀಂ ಸಮಾವೃತ್ತ್ಯ ಸರ್ವವೇದಫಲಂ ಲಭೇತ್ ||

"ಗಾಯತ್ರೀಮಂತ್ರದಲ್ಲಿ ಇಪ್ಪತ್ತನಾಲ್ಕು ಅಕ್ಷರಗಳಿವೆ. ಗಾಯತ್ರಿಯ ಆರಂಭದಲ್ಲಿ ಓಂಕಾರವನ್ನು ಸೇರಿಸಿದರೆ ಇಪ್ಪತ್ತೈದು ಅಕ್ಷರಗಳಾಗುತ್ತವೆ. ಓಂಕಾರಸಹಿತವಾದ ಗಾಯತ್ರಿಯನ್ನು ನಾಲ್ಕು ಸಲ ಜಪಿಸಿದರೆ ನೂರು ಅಕ್ಷರಗಳಾಗುತ್ತವೆ. ಇದೇ ಶತಾಕ್ಷರಿಯೆನಿಸುತ್ತದೆ. ಈ ಶತಾಕ್ಷರಿಯನ್ನು ಆವೃತ್ತಿ ಮಾಡುತ್ತಾ ಬಂದರೆ ಸಕಲವೇದಗಳ ಅಧ್ಯಯನದಿಂದ ಬರುವ ಫಲವು ಬರುತ್ತದೆ.

ವಿನ್ಯಸ್ಯೈವ ಜಪೇದ್ಯಸ್ತು ಗಾಯತ್ರೀಂ ವೇದಮಾತರಮ್ |
ಬ್ರಹ್ಮಲೋಕಮವಾಪ್ನೋತಿ ವ್ಯಾಸಸ್ಯ ವಚನಂ ಯಥಾ ||
ಸ್ವರೂಪಂ ಯಃ ಪುನಸ್ತಸ್ಯಾ ಜ್ಞಾತ್ವೋಪಾಸ್ತೇ ಯಥಾವಿಧಿ |
ಗೃಹ್ಣನ್ ದೋಷೈರ್ನ ಲಿಪ್ಯೇತ ರತ್ನಪೂರ್ಣವಸುಂಧರಾಮ್ ||
ಯಥಾಕಥಂಚಿಜ್ಜಪ್ತಾ ಸಾ ದೇವೀ ಪರಮಪಾವನೀ |
ಸರ್ವಕಾಮಪ್ರದಾ ಪ್ರೋಕ್ತಾ ಕಿಂ ಪುನರ್ವಿಧಿನಾ ಕೃತಾ || (ವ್ಯಾಸರ ವಚನ)

"ಗಾಯತ್ರಿಯು ವೇದಗಳ ಮಾತೆಯೆನಿಸುತ್ತದೆ. ಈ ಗಾಯತ್ರೀಯನ್ನು ಜಪಿಸುವುದಕ್ಕೆ ಪೂರ್ವದಲ್ಲಿ ತತ್ತ್ವನ್ಯಾಸ, ಮಾತೃಕಾನ್ಯಾಸ, ಅಂಗನ್ಯಾಸ, ಕರನ್ಯಾಸ ಮುಂತಾದ ನ್ಯಾಸಗಳನ್ನು ಮಾಡಿಯೇ ಜಪಿಸಬೇಕು. ಇದರಿಂದ ಬ್ರಹ್ಮಲೋಕವನ್ನು ಹೊಂದುವನು. ಗಾಯತ್ರಿಯ ನಿಜಸ್ವರೂಪವನ್ನು ತಿಳಿದು ಶಾಸ್ತ್ರೋಕ್ತವಿಧಿಯಿಂದ ಜಪಿಸುವವನು ರತ್ನಗಳಿಂದ ಪೂರ್ಣವಾದ ಸಕಲ ಭೂಮಂಡಲವನ್ನು ದಾನ ತೆಗೆದುಕೊಂಡರೂ ಅವನಿಗೆ ದೋಷವು ಬರಲಾರದು. ಅಂಗಲೋಪಾದಿಗಳು ವಿರ್ಪಟ್ಟು ಹೇಗೋ ಹಾಗೆ ಜಪಿಸಿದರೂ ಗಾಯತ್ರಿಯು ಜಪಿಸುವವನ್ನು ಪರಿಶುದ್ಧನಾಗುವಂತೆ ಮಾಡುತ್ತದೆ. ಸಕಲ ಇಷ್ಟಾರ್ಥಗಳನ್ನೂ

ಕೊಡುತ್ತದೆ. ಹೀಗಿರುವಾಗ ವಿಧಿಪೂರ್ವಕವಾಗಿ ಜಪಿಸಿದರೆ ಸರ್ವೇಷ್ಟಗಳನ್ನೂ ಕೊಡುತ್ತದೆ ಎಂದು ಹೇಳಬೇಕಾದ್ದೇನಿದೆ?" ಇದು ವ್ಯಾಸರ ವಚನ.

ದಶಕೃತ್ವಃ ಪ್ರಜಪ್ತಾ ಸಾ ತ್ರ್ಯಬ್ದಾಘಂ ಕೃತಂ ಲಘು |
ತತ್ಪಾಪಂ ಚ ಪ್ರಣುದ್ಯಾತ್ತು ನಾತ್ರ ಕಾರ್ಯಾ ವಿಚಾರಣಾ ||
ಶತಂ ಜಪ್ತಾ ತು ಸಾ ದೇವೀ ಪಾಪೌಘಶಮನೀ ಸ್ಮೃತಾ |
ಸಹಸ್ರಜಪ್ತಾ ಸಾ ದೇವೀ ಉಪಪಾತಕನಾಶಿನೀ ||
ಲಕ್ಷಂ ಜಪ್ಯೇನ ಚ ತಥಾ ಮಹಾಪಾತಕನಾಶಿನೀ |
ಕೋಟಿಜಪ್ಯೇನ ಚ ತಥಾ ಯದಿಚ್ಛತಿ ತದಾಪ್ನುಯಾತ್ ||
ಗಾಯತ್ರ್ಯಾ ನ ಪರಂ ಜಪ್ಯಂ ಗಾಯತ್ರ್ಯಾ ನ ಪರಂ ತಪಃ |
ಗಾಯತ್ರ್ಯಾ ನ ಪರಂ ಧ್ಯಾನಂ ಗಾಯತ್ರ್ಯಾ ನ ಪರಂ ಹುತಮ್ || (ಸಂಗ್ರಹ ವಚನ)

"ಹತ್ತು ಸಲ ಗಾಯತ್ರೀಮಂತ್ರವನ್ನು ಜಪಿಸಿದರೆ ಮೂರು ವರ್ಷಗಳಲ್ಲಿ ಮಾಡಿರುವ ಚಿಲ್ಲರೆ ಪಾಪಗಳು ದೂರವಾಗುತ್ತವೆ. ನೂರು ಸಲ ಜಪಿಸಿದರೆ ಪಾಪಗಳ ಸಮೂಹವು ಪರಿಹರಿಸಲ್ಪಡುತ್ತದೆ. ಸಾವಿರ ಸಲ ಜಪಿಸಿದರೆ ಉಪಪಾತಕಗಳು ಪರಿಹರಿಸಲ್ಪಡುತ್ತವೆ. ಲಕ್ಷ ಸಲ ಜಪಿಸಿದರೆ ಮಹಾಪಾಪಗಳೆಲ್ಲವೂ ದೂರವಾಗುತ್ತದೆ. ಕೋಟಿ ಸಲ ಜಪಿಸಿದರೆ ಯಾವ ಯಾವ ಫಲವನ್ನು ಅಪೇಕ್ಷಿಸುವನೋ ಆ ಆ ಫಲಗಳನ್ನೆಲ್ಲವನ್ನೂ ಪಡೆಯುವನು. ಗಾಯತ್ರೀಮಂತ್ರಜಪಕ್ಕಿಂತ ಉತ್ತಮವಾದ ಜಪವೂ, ತಪಸ್ಸೂ, ಹೋಮವೂ, ಧ್ಯಾನವೂ ಇಲ್ಲ."

ತ್ರಿವಿಧೋ ಜಪಯಜ್ಞಃ ಸ್ಯಾನ್ಮಾನಸೋಪಾಂಶುಭಾಷಣಃ |
ಮಾನಸೋ ಮನಸಾ ಕಾರ್ಯೋ ಮಂತ್ರವಾಕ್ಯಾರ್ಥಚಿಂತಯಾ ||
ಉಪಾಂಶುರೋಷ್ಠಸಂಸ್ಪರ್ಶಮಾತ್ರಃ ಸ್ವಶ್ರುತಿಗೋಚರಃ |
ಮುಕ್ತಿದೋ ಮಾನಸೋ ಜ್ಞೇಯ ಉಪಾಂಶುಃ ಸರ್ವಸಿದ್ಧಿದಃ ||
ಉಚ್ಚಾಟನಾದೌ ಭಾಷಾ ಸ್ಯಾದಭಿಚಾರೇ ತಥೈವ ಚ |
ಕ್ಷುದ್ರಕರ್ಮಣಿ ಭಾಷಾ ಸ್ಯಾದಿತ್ಯುಕ್ತಸ್ತ್ರಿವಿಧೋ ಜಪಃ |
ಅಧಮೋ ಭಾಷಣೋ ಜ್ಞೇಯೋ ಮುನಿಭಿಃ ಸಂಪ್ರಕೀರ್ತಿತಃ ||

"ಜಪವೇ ಯಜ್ಞವೆನಿಸುತ್ತದೆ. ಈ ಜಪಯಜ್ಞವು ಮಾನಸ, ಉಪಾಂಶು, ಭಾಷಣ ಎಂದು ಮೂರು ವಿಧವಾಗಿದೆ. (1) ಮಂತ್ರಗಳ ಅರ್ಥವನ್ನು ಸ್ಮರಿಸುತ್ತಾ ಮನಸ್ಸಿನಲ್ಲೇ ಮಾಡುವ ಜಪವು ಮಾನಸಜಪವೆನಿಸುತ್ತದೆ. ಇದು ಉತ್ತಮ ಮತ್ತು ಮುಕ್ತಿಪ್ರದವಾಗತ್ತದೆ. (2) ತುಟಿಗಳನ್ನು ಅನ್ಯೋನ್ಯ ಸ್ಪರ್ಶಿಸುತ್ತಾ ತನ್ನ ಕಿವಿಗೆ ಮಾತ್ರ ಕೇಳುತ್ತಿರುವಂತೆ ಮಾಡುತ್ತಿರುವ ಜಪವು ಉಪಾಂಶುಜಪವೆನಿಸುತ್ತದೆ. ಈ ಉಪಾಂಶುಜಪವು ಸರ್ವಸಿದ್ಧಿಯನ್ನು ಕೊಡುತ್ತದೆ. ಇದು ಮಧ್ಯಮ. (3) ಎಲ್ಲರಿಗೂ ತಿಳಿಯುವಂತೆ ಅತಿಸ್ಪಷ್ಟವಾಗಿ ಮಂತ್ರವನ್ನು ಹೇಳುವುದು ಭಾಷಣಜಪವೆನಿಸತ್ತದೆ. ಉಚ್ಚಾಟನ, ಅಭಿಚಾರ, ಮುಂತಾದ ಕ್ಷುದ್ರ ಕಾರ್ಯಗಳನ್ನು ಮಾಡುವಾಗ ಈ ಭಾಷಣಜಪವನ್ನು ಮಾಡಬೇಕು. ಇದು ಅಧಮಜಪವೆನಿಸುತ್ತದೆ."

ಧಿಯಾ ಯದಕ್ಷರಶ್ರೇಣ್ಯಾ ವರ್ಣಾದ್ವರ್ಣಂ ಪದಾತ್ಪದಮ್ |
ಶಬ್ದಾರ್ಥಚಿಂತನಾಭ್ಯಾಸೋ ಉಕ್ತೋಽಸೌ ಮಾನಸೋ ಜಪಃ ||

"ಬುದ್ಧಿಯಿಂದ ಅಕ್ಷರಗಳನ್ನೂ, ಪದಗಳನ್ನೂ, ವಿಂಗಡಿಸಿ ಅವುಗಳ ಅರ್ಥವನ್ನು ವಿಮರ್ಶಿಸಿ ತಿಳಿಯುವುದೇ ಮಾನಸ ಜಪವೆನಿಸುತ್ತದೆ."

ಸ್ಮರಣೋಪಾಸನಂ ಚೈವ ಧ್ಯಾನಾತ್ಮಕಮಿತಿ ದ್ವಿಧಾ |
ಸ್ಮರಣಂ ಸರ್ವದಾ ಯೋಗ್ಯಂ ಧ್ಯಾನೋಪಾಸನಮಾಸನೇ ||
ಸ್ಮೈರಂತರ್ಯಂ ಮನೋವೃತ್ತೇರ್ಧ್ಯಾನಮಿತ್ಯುಚ್ಯತೇ ಬುಧೈಃ |
ಆಸೀನಸ್ಯ ಭವೇತ್ತತ್ತು ನ ಶಯಾನಸ್ಯ ನಿದ್ರಯಾ ||
ಸ್ಥಿತಸ್ಯ ಗಚ್ಛತೋ ವಾಪಿ ವಿಕ್ಷೇಪಸ್ಯೈವ ಸಂಭವಾತ್ |
ಸ್ಮರಣಾತ್ಪರಮಂ ಜ್ಞೇಯಂ ಧ್ಯಾನಂ ನಾಸ್ತ್ಯತ್ರ ಸಂಶಯಃ || (ನಾರಾಯಣತಂತ್ರವಚನ)

"ಸ್ಮರಣೋಪಾಸನ, ಧ್ಯಾನೋಪಾಸನ ಎಂದು ಉಪಾಸನವು ದ್ವಿವಿಧವಾಗಿದೆ. ಯಾವಾಗಲೂ ಶ್ರೀಹರಿಯನ್ನು ಸ್ಮರಿಸುತ್ತಿರುವುದು ಸ್ಮರಣೋಪಾಸನವೆನಿಸುತ್ತದೆ. ಈ ಸ್ಮರಣೋಪಾಸನವನ್ನು ಯಾವಾಗಲೂ ಮಾಡಬಹುದು. ಧ್ಯಾನವೆಂದರೆ ಶ್ರೀಹರಿಯನ್ನು ಎಡೆಬಿಡದಂತೆ ಸ್ಮರಿಸುವುದು. ಇದನ್ನು ಮಲಗಿಕೊಂಡು ಮಾಡಿದರೆ ನಿದ್ರೆಯು ಬರುವ ಸಂಭವವಿದೆ. ನಿಂತುಕೊಂಡೂ, ನಡಿಯುತ್ತಲೂ, ಮಾಡಿದರೆ ಮನಸ್ಸು ಬೇರೆ ಕಡೆಗೆ ಹೋಗುವ ಸಂಭವವಿದೆ. ಆದ್ದರಿಂದ ಕುಳಿತುಕೊಂಡೇ ಈ ಧ್ಯಾನೋಪಾಸನೆಯನ್ನು ಮಾಡಬೇಕು. ಸ್ಮರಣೋಪಾಸನಕ್ಕಿಂತ ಧ್ಯಾನೋಪಾಸನವು ಉತ್ತಮವೆಂಬ ವಿಷಯದಲ್ಲಿ ಸಂಶಯವಿಲ್ಲ."

## ಗಾಯತ್ರೀಜಪದಲ್ಲಿ ವಿಶೇಷ

ಕೃತ್ವೋತ್ತಾನೌ ಕರೌ ಪ್ರಾತಃ ಸಾಯಂ ಚಾಧೋಮುಖೌ ಕರೌ |
ಮಧ್ಯೇ ಸ್ಕಂಧಭುಜಾಭ್ಯಾಂ ತು ಜಪ ಏವಮುದಾಹೃತಃ ||

"ಬೆಳಗ್ಗೆ ಗಾಯತ್ರೀಜಪವನ್ನು ಮಾಡುತ್ತಿರುವಾಗ ಅಂಗೈಗಳನ್ನು ಮೇಲ್ಮುಖವಾಗಿ ಇಟ್ಟುಕೊಳ್ಳಬೇಕು. ಸಾಯಂಕಾಲದಲ್ಲಿ ಕೆಳಮುಖವಾಗಿ ಇಟ್ಟುಕೊಳ್ಳಬೇಕು. ಮಧ್ಯಾಹ್ನದಲ್ಲಿ ಎರಡು ಹೆಗಲುಗಳಿಗೆ ಅಭಿಮುಖವಾಗಿ ಕೈಗಳನ್ನು ಇಟ್ಟುಕೊಂಡು ಜಪಿಸಬೇಕು."

ಅಂಗುಲೀರ್ನ ವಿಯುಂಜೀತ ಕಿಂಚಿದಾಕುಂಚಿತೌ ಕರೌ |
ಅಂಗುಲೀನಾಂ ವಿಯೋಗೇ ತು ಛಿದ್ರೇಷು ಸ್ರವತೇ ಜಪಃ ||

"ಬೆರಳುಗಳನ್ನು ಒಟ್ಟಿಗೆ ಸೇರಿಸಿಕೊಂಡು ಎರಡು ಕೈಗಳನ್ನೂ ಸ್ವಲ್ಪ ಬಗ್ಗಿಸಿಕೊಂಡು ಜಪಿಸಬೇಕು. ಬೆರಳುಗಳನ್ನು ಬಿಡಿಸಿಕೊಂಡು ಜಪಿಸಿದರೆ ಬೆರಳುಗಳ ರಂಧ್ರಗಳಲ್ಲಿ ಜಪವು ಸೋರಿ ಕೆಳಗೆ ಬೀಳುತ್ತದೆ."

ಅಧೋಹಸ್ತಂ ತು ಪೈಶಾಚಂ ಮಧ್ಯಹಸ್ತಂ ತು ರಾಕ್ಷಸಮ್ |
ಬದ್ಧಹಸ್ತಂ ತು ಗಾಂಧರ್ವಮೂರ್ಧ್ವಹಸ್ತಂ ತು ದೈವತಮ್ ||

"ಎರಡು ಕೈಗಳನ್ನು ಕೆಳಮುಖವಾಗಿ ಜಪಿಸುವುದು ರಾಕ್ಷಸರಿಗೆ ಪ್ರಿಯವಾಗಿರುತ್ತದೆ. ಕೈಗಳನ್ನು ಕೆಳಮುಖವೂ ಮೇಲ್ಮುಖವೂ ಮಾಡಿಕೊಳ್ಳದೆ ಮಧ್ಯಮವಾಗಿ ಇಟ್ಟುಕೊಂಡು ಜಪಿಸುವುದು ರಾಕ್ಷಸರಿಗೆ ಪ್ರಿಯವಾಗಿರುತ್ತದೆ. ಒಂದು ಕೈಯೊಡನೆ ಇನ್ನೊಂದು ಕೈಯನ್ನು ಜೋಡಿಸಿಕೊಂಡು ಜಪಿಸುವುದು ಗಂಧರ್ವರಿಗೆ ಪ್ರಿಯವಾಗಿರುತ್ತದೆ. ಮೇಲ್ಮುಖವಾಗಿ ಇಟ್ಟುಕೊಂಡು ಜಪಿಸುವುದು ದೇವತೆಗಳಿಗೆ ಪ್ರಿಯವಾಗಿರುತ್ತದೆ."

ಯದಿ ಸ್ಯಾದಾರ್ದ್ರವಾಸಾ ವೈ ವಾರಿಮಧ್ಯಗತೋ ಜಪೇತ್ |
ಅನ್ಯಥಾ ತು ಶುಚೌ ಭೂಮ್ಯಾಂ ದರ್ಭೇಷು ಸುಸಮಾಹಿತಃ ||

"ಒದ್ದೆ ಬಟ್ಟೆಯನ್ನು ಉಟ್ಟುಕೊಂಡಿದ್ದರೆ ನೀರಿನ ಮಧ್ಯದಲ್ಲಿಯೇ ಜಪಿಸಬೇಕು. ಒಣಗಿದ ಬಟ್ಟೆಯನ್ನು ಉಟ್ಟುಕೊಂಡಿದ್ದರೆ ಭೂಮಿಯಲ್ಲಿ ದರ್ಭಾಸನದಲ್ಲಿ ಕುಳಿತು ಸಾವಧಾನಮನಸ್ಸಿನಿಂದ ಜಪಿಸಬೇಕು."

ಅಸಂಖ್ಯಾಯಾಸ್ತು ಸಂಖ್ಯಾತಃ ಸಹಸ್ರಗುಣ ಉಚ್ಯತೇ |
ಸಂಖ್ಯಾತಾದಪಿ ಸಾಹಸ್ರಮೂರ್ಧ್ವಪುಂಡ್ರಾಂಕಿತೋ ಜಪಃ ||

"ಲೆಕ್ಕವನ್ನು ಮಾಡದೆ ಮಾಡುವ ಜಪಕ್ಕಿಂತ ಲೆಕ್ಕವನ್ನು ಮಾಡಿ ಮಾಡುತ್ತಿರುವ ಜಪವು ಸಾವಿರ ಪಾಲು ಉತ್ತಮವೆನಿಸುತ್ತದೆ. ಲೆಕ್ಕವನ್ನು ಮಾಡಿ ಮಾಡುವ ಜಪಕ್ಕಿಂತ ಊರ್ಧ್ವಪುಂಡ್ರಗಳನ್ನು ಧರಿಸಿ ಮಾಡುವ ಜಪವು ಸಾವಿರಪಾಲು ಅಧಿಕವೆನಿಸುತ್ತದೆ."

ಅಂಗುಲೀಜಪಸಂಖ್ಯಾತಮೇಕಮೇಕಂ ವರಾನನೇ |
ಪರ್ವಭಿರ್ದ್ವಿಗುಣಾಂ ಪ್ರೋಕ್ತಂ ಪುತ್ರಜೀವಿಫಲೈರ್ದಶ ||
ಶತಂ ವೈ ಶಂಖಮಣಿಭಿಃ ಪ್ರವಾಲೈಶ್ಚ ಸಹಸ್ರಕಮ್ |
ಮೌಕ್ತಿಕೈರ್ದಶಸಾಹಸ್ರಂ ಸೌವರ್ಣೈರ್ಲಕ್ಷಮೇವ ಚ ||
ಕುಶಗ್ರಂಥ್ಯಾ ಕೋಟಿಗುಣಂ ತುಲಸ್ಯಾನಂತಕಂ ಫಲಮ್ |
ತುಲಸೀಮಣಿನಾ ಚೈವ ಗುಣಿತಂ ಚಾಕ್ಷಯಂ ಫಲಮ್ ||
ತುಲಸೀಕಾಷ್ಠಮಣಿನಾ ನಿರ್ಮಿತೇನ ಪ್ರಯತ್ನತಃ |
ಗಾಯತ್ರ್ಯಾದಿಜಪಂ ಕುರ್ವನ್ನನಂತಫಲಮಶ್ನುತೇ ||

"ಗಾಯತ್ರೀಜಪವನ್ನು ಮಾಡುವಾಗ ಬೆರಳುಗಳಿಂದ ಎಣಿಸಿದರೆ ಒಂದು ಜಪಕ್ಕೆ ಒಂದೇ ಫಲವು ಬರುತ್ತದೆ. ಅದೇ ಫಲವು ಬೆರಳುಗಳಲ್ಲಿರುವ ಪರ್ವಗಳು ಅಂದರೆ ಗೆಣ್ಣುಗಳಿಂದ ಜಪಿಸಿದರೆ ದ್ವಿಗುಣವೂ, ಪುತ್ರಜೀವಿಫಲಗಳಿಂದ ಎಣಿಸಿದರೆ ಹತ್ತರಷ್ಟು ಫಲವೂ, ಶಂಖಮಣಿಗಳಿಂದ ಎಣಿಸಿದರೆ ನೂರರಷ್ಟು ಫಲವೂ, ಹವಳಗಳಿಂದ ಎಣಿಸಿದರೆ ಸಾವಿರದಷ್ಟು ಫಲವೂ, ಮುತ್ತುಗಳಿಂದ ಎಣಿಸಿದರೆ ಹತ್ತುಸಾವಿರದಷ್ಟು ಫಲವೂ, ಸುವರ್ಣಮಣಿಗಳಿಂದ ಎಣಿಸಿದರೆ ಲಕ್ಷದಷ್ಟು ಫಲವೂ, ದರ್ಭೆಯ ಗಂಟುಗಳಿಂದ ಎಣಿಸಿದರೆ ಕೋಟಿಯಷ್ಟು ಫಲವೂ, ತುಳಸಿಯಿಂದ ಎಣಿಸಿದರೆ ಅನಂತಫಲವೂ ಬರುತ್ತದೆ. ತುಳಸೀಮಣಿಯಿಂದ ಎಣಿಸಿದರೆ ಅದರ ಫಲವು ಕಡಿಮೆಯಾಗುವುದೂ ನಶಿಸುವುದೂ ಇಲ್ಲ. ತುಳಸೀಮಣಿಯನ್ನು ತಾನೇ ಪ್ರಯತ್ನದಿಂದ ನಿರ್ಮಾಣ ಮಾಡಬೇಕು. ಆ ಮಣಿಯಿಂದ ಎಣಿಸುವುದು ಅನಂತಫಲದಾಯಕವಾಗುತ್ತದೆ."

ಅರಣ್ಯತುಳಸೀಕಾಷ್ಠಾನ್ಮಣಿಂ ಕೃತ್ವಾ ತು ಕರ್ಣಯೋಃ |
ಬಾಹ್ವೋರ್ಮಧ್ಯೇ ಚ ಕಂಠೇ ಚ ಮಣಿಬಂಧದ್ವಯೇ ತಥಾ ||
ಪ್ರಾತಃಕಾಲೇ ನರೋ ಧೃತ್ವಾ ಗಾಯತ್ರೀಂ ಸಮ್ಯಗಭ್ಯಸೇತ್ |
ಪ್ರಾಪ್ನೋತಿ ಬ್ರಹ್ಮಣೋ ರೂಪಮೇಕೇನಾಪಿ ನ ಸಂಶಯಃ ||
ತಥಾ ಮಧ್ಯಾಹ್ನಸಂಧ್ಯಾಯಾಂ ಮಾಘಸ್ನಾನೇಷು ನಿತ್ಯಶಃ |
ಸಾಯಂಕಾಲೇ ನರೋ ಭಕ್ತ್ಯಾ ದಲಂ ವಾ ತುಲಸೀಮಣಿಮ್ ||
ಸೌರಂ ಪದಮವಾಪ್ನೋತಿ ಗಾಯತ್ರ್ಯಾ ಮುನಿಸತ್ತಮ ||

"ಕಾಡಿನಲ್ಲಿರುವ ತುಳಸೀಗಿಡದ ಕಾಷ್ಠದಿಂದ ತುಳಸೀಮಣಿಯನ್ನು ನಿರ್ಮಿಸಬೇಕು. ಆ ತುಳಸೀಮಣಿಯ ಮಾಲೆಗಳನ್ನು ಕಿವಿಗಳಲ್ಲಿಯೂ, ಭುಜಗಳಲ್ಲಿಯೂ, ಮಣಿಗಂಟುಗಳಲ್ಲಿಯೂ, ಕಂಠದಲ್ಲಿಯೂ ಧರಿಸಿಕೊಂಡು ಬೆಳಿಗ್ಗೆ ಗಾಯತ್ರೀಮಂತ್ರವನ್ನು ಜಪಿಸಬೇಕು. ಮೇಲ್ಕಂಡ ಸ್ಥಳಗಳಲ್ಲಿ ಒಂದೆಡೆಯಲ್ಲಾದರೂ ಧರಿಸುತ್ತಾ ಜಪಿಸುವವನು ಮುಕ್ತಿಯನ್ನು ಪಡೆಯುವನು. ಮಧ್ಯಾಹ್ನಸಂಧ್ಯಾವಂದನಕಾಲದಲ್ಲಿಯೂ, ಮಾಘಸ್ನಾನಕಾಲದಲ್ಲಿಯೂ, ಸಾಯಂಕಾಲಸಂಧ್ಯಾವಂದನ ಕಾಲದಲ್ಲಿಯೂ ತುಲಸೀದಳವನ್ನಾಗಲೀ, ತುಳಸೀಮಣಿಯನ್ನಾಗಲೀ, ಧರಿಸುವವನು ಸೂರ್ಯಲೋಕವನ್ನು ಪಡೆಯುವನು."

ಯೇ ಕಂಠಲಗ್ನತುಳಸೀನಳಿನಾಕ್ಷಮಾಲಾ ಯೇ ಬಾಹುಮೂಲಪರಿಚಿಹ್ನಿತಶಂಖಚಕ್ರಾಃ |
ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಸ್ತೇ ವೈಷ್ಣವಾ ಭುವನಮಾಶು ಪವಿತ್ರಯಂತಿ||

"ಕಂಠದಲ್ಲಿ ತುಳಸೀಮಣಿಯ ಅಥವಾ ಕಮಲಾಕ್ಷಮಣಿಯ ಮಾಲೆಯನ್ನು ಧರಿಸಿದವರೂ, ಭುಜಗಳ ಬುಡದಲ್ಲಿ ಶಂಖಚಕ್ರಗಳ ಚಿಹ್ನೆಗಳಿಂದ ಯುಕ್ತರಾಗಿರುವವರೂ, ಹಲಿಗೆಯಂತಿರುವ ಹಣೆಯಲ್ಲಿ ಊರ್ಧ್ವಪುಂಡ್ರಗಳಿಂದ ಶೋಭಿಸುತ್ತಿರುವವರೂ, ಆಗಿರುವ ವೈಷ್ಣವರು ಭೂಲೋಕವನ್ನು ಶೀಘ್ರವಾಗಿ ಪರಿಶುದ್ಧವಾಗುವಂತೆ ಮಾಡುತ್ತಿರುವರು."

ತಥಾ ಪದ್ಮಾಕ್ಷಮಣಿಭಿಃ ಸಹಸ್ರೈರುಪಶೋಭಿತಾಮ್ |
ಪಂಚಮಾಲಾಂ ತು ಕೃತ್ವಾ ಯೋ ಜಪಕಾಲೇ ಧರೇದ್ದ್ವಿಜಃ ||

"ಸಾವಿರಪದ್ಮಾಕ್ಷಮಣಿಗಳಿಂದ ನಿರ್ಮಿತವಾದ ಐದು ಮಾಲೆಯನ್ನು ಧರಿಸಿಕೊಂಡು ಜಪಿಸುವವನ ಪುಣ್ಯದ ಫಲವನ್ನು ನಾನು ಹೇಳಲು ಶಕ್ತನಲ್ಲ."

ಅಕ್ಷಮಾಲಾಜಪೇ ಸಮ್ಯಕ್ಪ್ರಕಾರೋಽಥ ನಿರೂಪ್ಯತೇ |
ಅಷ್ಟೋತ್ತರಶತಂ ಮಾಲಾ ಉತ್ತಮಾ ಸಾ ಪ್ರಕೀರ್ತಿತಾ ||
ಚತುಃಪಂಚಾಶತಾ ತತ್ರ ಮಧ್ಯಮಾ ಸಾ ಪ್ರಕೀರ್ತಿತಾ |
ಅಧಮಾ ಪ್ರೋಚ್ಯತೇ ಮಾಲಾ ಸಪ್ತವಿಂಶತಿಸಂಭವಾ ||
ಉತ್ತಮೇಷು ಚ ಮಧ್ಯೇಷು ಭೋಗಮೋಕ್ಷಪ್ರದೇಷು ಚ |
ಅಷ್ಟೋತ್ತರಶತಾಯಾಂ ತು ಮಾಲಾಯಾಂ ಜಪಮಾಚರೇತ್ ||
ಚತುಃಪಂಚಾಶತಾಯಾಂ ವಾ ನಾಧಮಾಯಾಂ ಕದಾಚನ | (ಆತ್ರೇಯಸಂಹಿತಾ)

"ಜಪಮಾಲೆಯ ಪ್ರಕಾರವನ್ನು ಚೆನ್ನಾಗಿ ತಿಳಿಸುತ್ತೇವೆ. ನೂರ ಎಂಟು ಮಣಿಗಳಿಂದ ಯುಕ್ತವಾದ ಮಾಲೆಯು ಉತ್ತಮವೆನಿಸುತ್ತದೆ. ಐವತ್ತನಾಲ್ಕು ಮಣಿಗಳಿಂದ ಯುಕ್ತವಾದ ಮಾಲೆಯು ಮಧ್ಯಮವೆನಿಸುತ್ತದೆ. ಇಪ್ಪತ್ತೇಳು ಮಣಿಗಳಿಂದ ಯುಕ್ತವಾದ ಮಾಲೆಯು ಅಧಮವೆನಿಸುತ್ತದೆ. ಉತ್ತಮವಾದ ಮಾಲೆಯು ಮೋಕ್ಷವನ್ನು ಕೊಡುತ್ತದೆ. ಮಧ್ಯಮವಾದ ಮಾಲೆಯು ಪಾರತ್ರಿಕಸುಖವನ್ನು ಕೊಡುತ್ತದೆ. ಉತ್ತಮವಾದ ಮಾಲೆಯನ್ನೂ, ಮಧ್ಯಮವಾದ ಮಾಲೆಯನ್ನೂ, ಧರಿಸಿಕೊಂಡು ಜಪವನ್ನು ಮಾಡಬೇಕು. ಅಧಮವಾದ ಮಾಲೆಯನ್ನು ಧರಿಸಿ ಯಾವಾಗಲೂ ಜಪವನ್ನು ಮಾಡಕೂಡದು."

ಮುಖಮಾರಭ್ಯ ಪೃಷ್ಠಾಂತಂ ಜಪ್ತ್ವಾ ಪಶ್ಚಾತ್ಪ್ರದಕ್ಷಿಣಮ್ |
ಭ್ರಮಯಿತ್ವಾ ಪುನರ್ವಕ್ತ್ರಂ ಪ್ರಾರಭ್ಯ ಜಪಮಾಚರೇತ್ ||
ಅಯಮೇವ ಸಮಾಖ್ಯಾತೋ ಜಪಮಾಲಾಜಪಕ್ರಮಃ |
ವಾಮೇನ ನ ಸ್ಪೃಶೇನ್ಮಾಲಾಂ ಕರೇಣ ಬ್ರಾಹ್ಮಣಃ ಕ್ವಚಿತ್ ||
ಕರೇ ಪೃಷ್ಠೇ ತಥಾಂಗುಷ್ಠೇ ಧಾರಯೇನ್ನ ಕದಾಚನ |
ಅನ್ಯಮಂತ್ರಾಣಿ ನ ಜಪೇದನಯಾ ಜಪಮಾಲಯಾ ||
ಮಧ್ಯಮಾನಾಮಿಕಾಂಗುಷ್ಠೈರ್ಗೃಹೀತ್ವಾ ಜಪಮಾಚರೇತ್ |
ಅಂಗುಷ್ಠತರ್ಜನೀಭ್ಯಾಂ ತು ಮಾಲಾಕರ್ಷಸ್ತು ಮಧ್ಯಮಃ ||
ಕನಿಷ್ಠಾಂಗುಷ್ಠಯೋಗೇನ ಕನಿಷ್ಠಾ ಸಿದ್ಧಿಕಾರಿಣೀ |
ಅಕ್ಷಮಾಲಾ ಪ್ರಗೋಪ್ತವ್ಯಾ ಜಪಕಾಲೇ ತು ಮೇಧಸಾ ||

ಪರದೃಷ್ಟಿಗತಾ ಮಾಲಾ ನಿಷ್ಫಲಾ ಜಪಕರ್ಮಣಿ |
ಜಪಕಾಲೇ ತ್ವಕ್ಷಮಾಲಾಂ ಗುರೋರಪಿ ನ ದರ್ಶಯೇತ್ || (ಆತ್ರೇಯಸಂಹಿತಾ)

ಜಪಸರದಲ್ಲಿ ಒಂದು ಪ್ರದೇಶವನ್ನು ಮುಖವೆಂದು ನಿಶ್ಚೈಸಬೇಕು. ಅಲ್ಲಿಂದಲೇ ಯಾವಾಗಲೂ ಜಪವನ್ನು ಆರಂಭಿಸಬೇಕು. ಮುಖದ ಹಿಂಭಾಗವನ್ನು ಪುಚ್ಛ ಎಂದು ನಿರ್ಧರಿಸಬೇಕು. ಮುಖದಿಂದ ಆರಂಭಿಸಿ ಪುಚ್ಛದವರೆಗೆ ಜಪವನ್ನು ಒಮ್ಮೆ ಮಾಡಬೇಕು. ಆ ಮೇಲೆ ಮುಖದಿಂದ ಪುಚ್ಛದವರೆಗೆ ಒಮ್ಮೆ ತಿರುಗಿಸಬೇಕು. ಪುನಃ ಮುಖದಿಂದ ಜಪವನ್ನು ಆರಂಭಿಸಬೇಕು. ಹೀಗೆ ಒಂದೊಂದು ಸಲ ಜಪವು ಮುಗಿದ ಮೇಲೆಯೂ ಮುಖದಿಂದ ಪುಚ್ಛದವರೆಗೆ ಒಂದೊಂದು ಸಲ ತಿರುಗಿಸಿ ಜಪವನ್ನು ಮುಂದುವರಿಸಬೇಕು. ಇದೇ ಜಪಮಾಲೆಯಿಂದ ಜಪವನ್ನು ಮಾಡುವ ಕ್ರಮವೆನಿಸುತ್ತದೆ.

ಎಡಗೈಯಿಂದ ಜಪಮಾಲೆಯನ್ನು ಮುಟ್ಟಬಾರದು. ಅಂಗೈಯಲ್ಲಿಯೂ, ಹಿಂಗೈಯಲ್ಲಿಯೂ. ಅಂಗುಷ್ಠದಲ್ಲಿಯೂ, ಜಪಮಾಲೆಯನ್ನು ಧರಿಸಬಾರದು. ಈ ಜಪಮಾಲೆಯಿಂದ ಇತರ ಮಂತ್ರಗಳನ್ನು ಜಪಿಸಬಾರದು. ನಡುಬೆರಳು, ಉಂಗುರದ ಬೆರಳು, ಅಂಗುಷ್ಠ ಎಂಬ ಮೂರು ಬೆರಳುಗಳಿಂದ ಜಪಮಾಲೆಯನ್ನು ಧರಿಸಿ ಜಪಿಸಬೇಕು. ಅಂಗುಷ್ಠ ಮತ್ತು ತೋರ್ಬೆರಳುಗಳಿಂದ ಧರಿಸುವುದು ಮಧ್ಯಮವೆನಿಸುತ್ತದೆ. ಕಿರುಬೆರಳು ಅಂಗುಷ್ಠ ಇವುಗಳಿಂದ ಧರಿಸುವುದು ಉತ್ತಮ, ಕಿರುಬೆರಳು ಬೇಗನೆ ಮಂತ್ರಸಿದ್ಧಿಯನ್ನು ಕೊಡುತ್ತದೆ. ಜಪಿಸುವ ಕಾಲದಲ್ಲಿ ಜಪಮಾಲೆಯನ್ನೂ ಯಾರೂ ನೋಡಬಾರದು. ಇನ್ನೊಬ್ಬರು ನೋಡಿದರೆ ಜಪವು ನಿಷ್ಫಲವಾಗುತ್ತದೆ. ಜಪಕಾಲದಲ್ಲಿ ಗುರುಗಳಿಗೂ ಸಹ ಜಪಮಾಲೆಯನ್ನು ತೋರಿಸಬಾರದು.

ಉಲ್ಲಂಘಿತೇ ತಥಾ ಮೇರೌ ಪತಿತೇ ಚಾಕ್ಷಸೂತ್ರಕೇ ||
ಪ್ರಾಣಾಯಾಮತ್ರಯಂ(ಶತಂ) ಕೃತ್ವಾ ಘೃತಂ ಪ್ರಾಶ್ಯ ವಿಶುಧ್ಯತಿ |
ಅಥಾಂಗುಲ್ಯಾ ಜಪೇ ಚೈವ ಪ್ರಕಾರಶ್ಚಾಪಿ ಕಥ್ಯತೇ ||
ಮಧ್ಯಮಾನಾಮಿಕಾಮಧ್ಯಂ ಮೇರುದ್ವಿತಯಕಲ್ಪಿತಮ್ |
ಮೇರುಂ ಪ್ರದಕ್ಷಿಣೇ ಕುರ್ವನ್ನನಾಮಿಮೂಲಪರ್ವ ತು ||
ಆರಭ್ಯ ಮಧ್ಯಮಾಮೂಲಪರ್ವಾಂತಂ ಗಣಯೇತ್ಕ್ರಮಾತ್ |
ಆರಭ್ಯಾನಾಮಿಕಾಮಧ್ಯಂ ಕನಷ್ಠಾದಿಕ್ರಮೇಣ ತು ||
ತರ್ಜನೀಮೂಲಪರ್ಯಂತಂ ಕರಮಾಲಾ ವಿಧೀಯತೇ |
ಪರ್ವದ್ವಯಂ ಮಧ್ಯಮಯೋರ್ಜಪಕಾಲೇ ವಿವರ್ಜಯೇತ್ || (ಆತ್ರೇಯಸಂಹಿತಾ)

ಬೆರಳುಗಳಿಂದ ಜಪಕ್ರಮವನ್ನು ನಾವು ಹೇಳುತ್ತೇವೆ. ಕೈಯಲ್ಲಿರುವ ಬೆರಳುಗಳಲ್ಲಿ ಮೂರು ಸಂಧಿಗಳಿವೆ. (1) ಅಂಗೈಗೂ ಬೆರಳುಗಳಿಗೂ ಇರುವ ಸಂಧಿ. ಇದೇ ಬೆರಳುಗಳ ಮೂಲವೆನಿಸುತ್ತದೆ. (2, 3) ಈ ಬೆರಳುಗಳ ಮೂಲದಿಂದ ಮೇಲೆ ಎರಡು ಸಂಧಿಗಳಿವೆ.

ಉಂಗುರದ ಬೆರಳು ಮತ್ತು ನಡುಬೆರಳುಗಳ ಮೂಲದಿಂದ ಮೇಲಿರುವ ಎರಡೆರಡು ಸಂಧಿಗಳು ಎರಡು ಮೇರು ಪರ್ವತವೆನಿಸುತ್ತವೆ. ಈ ಮೇರುಪರ್ವತಕ್ಕೆ ಪ್ರದಕ್ಷಿಣೆಯನ್ನು ಮಾಡುವ ಹಾಗೆ ಬೆರಳುಗಳಿಂದ ಜಪವನ್ನು ಮಾಡಬೇಕು. ಅದರಲ್ಲಿ ಎರಡು ಕ್ರಮಗಳಿವೆ.

(1) ಉಂಗುರದ ಬೆರಳಿನ ಮೂಲದಿಂದ ಆರಂಭಿಸಬೇಕು. ಕ್ರಮವಾಗಿ ಕಿರುಬೆರಳಿನ ಮೂಲ. ಕಿರುಬೆರಳಿನ ನಡುವಿನಲ್ಲಿರುವ ಎರಡು ಸಂಧಿಗಳು, ಕಿರುಬೆರಳಿನ, ಉಂಗುರದ ಬೆರಳಿನ ಮತ್ತು ನಡುಬೆರಳಿನ ತುದಿಗಳು, ನಡುಬೆರಳಿನ ನಡುವಿನಲ್ಲಿರುವ ಎರಡು ಸಂಧಿಗಳು, ನಡುಬೆರಳಿನ ಬುಡ ಹೀಗೆ ಹತ್ತು ಸ್ಥಾನಗಳಲ್ಲಿ ಎಣಿಸುತ್ತಾ ಜಪ ಮಾಡಬೇಕು. ಹೀಗೆ ಮಾಡುವಾಗ ಉಂಗುರದ ಬೆರಳಿನ ನಡುವಿನಲ್ಲಿರುವ ಮೇರುವನ್ನು ಪ್ರದಕ್ಷಿಣೆ ಮಾಡಿದಂತಾಗುವುದು.

(2) ಉಂಗುರದ ಬೆರಳಿನ ಮೂಲಕ್ಕಿಂತ ಮೇಲಿರುವ ಸಂಧಿಯಿಂದ ಆರಂಭಿಸಬೇಕು. ಅಲ್ಲಿಂದ ಆರಂಭಿಸಿ ಕಿರುಬೆರಳಿನ ಮೂಲಕ್ಕಿಂತ ಮೇಲಿರುವ ಎರಡು ಸಂಧಿಗಳು. ಕಿರುಬೆರಳು, ಉಂಗುರದ ಬೆರಳು, ತೋರ್ಬೆರಳು ಈ ನಾಲ್ಕು ಬೆರಳುಗಳ ತುದಿಭಾಗ, ತೋರ್ಬೆರಳಿನ ಮೂಲದಿಂದ ಮೇಲಿರುವ ಎರಡು ಸಂಧಿಗಳು ಮತ್ತು ತೋರ್ಬೆರಳಿನ ಮೂಲ ಹೀಗೆ ಹತ್ತು ಸ್ಥಾನಗಳಲ್ಲಿ ಎಣಿಸಬೇಕು. ಹೀಗೆ ಮಾಡಿದಾಗ ನಡುಬೆರಳಿನ ಮಧ್ಯದಲ್ಲಿರುವ ಎರಡು ಸಂಧಿಗಳೆಂಬ ಮೇರುಪರ್ವತವನ್ನು ಪ್ರದಕ್ಷಿಣೆ ಮಾಡಿದಂತಾಗುತ್ತದೆ.

ಈ ಮೇರುಪರ್ವತಗಳನ್ನು ಯಾವ ಕಾರಣದಿಂದಲೂ ದಾಟಬಾರದು. ಜಪಸರವು ಕೈಯಿಂದ ಕೆಳಗೆ ಬೀಳಲೂಬಾರದು. ಹಾಗೆ ದಾಟಿದರೆ ಅಥವಾ ಜಪಸರವು ಕೈಯಿಂದ ಬಿದ್ದರೆ, ಮೂರು ಸಲ ಅಥವಾ ನೂರು ಸಲ ಪ್ರಾಣಾಯಾಮವನ್ನು ಮಾಡಿ ತುಪ್ಪವನ್ನು ಕುಡಿಯಬೇಕು. ಹೀಗೆ ಮಾಡಿದರೆ ಶುದ್ಧನಾಗುವನು. ಇಲ್ಲದಿದ್ದರೆ ಅಶುದ್ಧನಾಗುವನು."

ಅಷ್ಟೋತ್ತರಶತಂ ಕುರ್ಯಾಚ್ಚತುಷ್ಪಂಚಾಶತಂ ತಥಾ |
ಸಪ್ತವಿಂಶತಿಕಾರ್ಯಾಣಿ ನ ತತೋ ನ್ಯೂನಮಾಚರೇತ್ ||

"ನೂರ ಎಂಟು ಅಥವಾ ಐವತ್ತನಾಲ್ಕು ಅಥವಾ ಇಪ್ಪತ್ತೇಳು ಸಂಖ್ಯೆಯ ಜಪವನ್ನು ಮಾಡಬೇಕು. ಅದಕ್ಕಿಂತ ಕಡಿಮೆ ಮಾಡಬಾರದು."

ಸಂಖ್ಯಾಹೀನಂ ತು ಯಜ್ಜಪ್ತಂ ತತ್ಸರ್ವಂ ನಿಷ್ಫಲಂ ಭವೇತ್ |

"ಸಂಖ್ಯೆಯಿಲ್ಲದೆ ಮಾಡುವ ಜಪವು ನಿಷ್ಫಲವಾಗುತ್ತದೆ."

ಮನಃಪ್ರಹರ್ಷಣಂ ಶೌಚಂ ಮೌನಂ ಮಂತ್ರಾರ್ಥಚಿಂತನಮ್ |
ಅವ್ಯಗ್ರತ್ವಮನಿರ್ವೇಶೋ ಜಪಸಂಪತ್ತಿಹೇತವಃ ||

"ಮನಸ್ಸಿನ ಸಂತೋಷ, ದೇಹಶುದ್ಧಿ, ಮೌನ, ಮಂತ್ರಗಳ ಅರ್ಥಗಳನ್ನು ಚಿಂತಿಸುವುದು, ಅವಸರವಿಲ್ಲದಿರುವಿಕೆ, ಹೊರಗೆ ಬಹಿರಂಗಪಡಿಸದಿರುವಿಕೆ ಇವುಗಳು ಜಪದ ಫಲಪ್ರಾಪ್ತಿಗೆ ಕಾರಣವಾದವುಗಳು."

ನಿಷ್ಠೀವ ಜೃಂಭಣ ಕ್ರೋಧ ನಿದ್ರಾಲಸ್ಯ ಕ್ಷುಧಾಮದಾಃ |
ಪತಿತಶ್ವಾಂತ್ಯಜಾಲೋಕಾ ದಶೈತೇ ಜಪವೈರಿಣಃ ||

"ತೇಗುವುದು, ಆಕಳಿಸುವುದು, ಕೋಪ, ನಿದ್ರೆ, ಆಲಸ್ಯ, ಹಸಿವು, ಮದ, ಪತಿತರ ದರ್ಶನ, ನಾಯಿಯ ದರ್ಶನ, ಚಂಡಾಲರ ದರ್ಶನ, ಈ ಹತ್ತು ಜಪಕ್ಕೆ ವೈರಿಗಳು. ಅಂದರೆ ಜಪದ ಮಧ್ಯದಲ್ಲಿ ಇವುಗಳು ಏರ್ಪಡಕೂಡದು. ಹಾಗೆ ಏರ್ಪಟ್ಟರೆ ಜಪವು ನಿಷ್ಫಲವಾಗುತ್ತದೆ."

ನ ಪ್ರಕ್ರಮನ್ನ ಚ ಹಸನ್ನ ಪಾರ್ಶ್ವಮವಲೋಕಯೇತ್ |
ನಾಪಾಶ್ರಿತೋ ನ ಜಲ್ಪಂಶ್ಚ ನ ಪ್ರಾವೃತಶಿರಾಸ್ತಥಾ ||
ನ ಪದಾ ಪದಮಾಕ್ರಮ್ಯ ನ ಚೈವ ಹಿ ತಥಾ ಕರೌ |
ನ ಚಾಸನಾಹಿತಮನಾ ನ ಚ ಸಂಶ್ರಾವಯನ್ ಜಪೇತ್ ||

"ನಡೆಯುತ್ತಾ ನಗುತ್ತಾ ಪಕ್ಕವನ್ನು ನೋಡುತ್ತಾ ಇನ್ನೊಬ್ಬನನ್ನು ಮುಟ್ಟುತ್ತಾ ಹರಟೆಯನ್ನು ಹರಟುತ್ತಾ ತಲೆಯ ಮೇಲೆ ಮುಸುಕು ಹಾಕಿಕೊಂಡಿರುತ್ತಾ ಒಂದು ಕಾಲಿನಿಂದ ಇನ್ನೊಂದು ಕಾಲನ್ನು ಹಿಡಿಸುತ್ತಾ ಒಂದು ಕೈಯಿಂದ ಇನ್ನೊಂದು ಕೈಯನ್ನು ಹಿಡಿಸುತ್ತಾ ಆಸನದಲ್ಲಿಯೇ ವಿಶೇಷವಾದ ಗಮನವನ್ನು ಇಟ್ಟುಕೊಳ್ಳುತ್ತಾ ಇನ್ನೊಬ್ಬನಿಗೆ ಕೇಳುವಂತೆ ಉಚ್ಚರಿಸುತ್ತಾ ಮಂತ್ರಜಪವನ್ನು ಜಪಿಸಬಾರದು."

ಹೋಮಃ ಪ್ರತಿಗ್ರಹೋ ದಾನಂ ಭೋಜನಾಚಮನೇ ಜಪಃ |
ಬಹಿರ್ಜಾನು ನ ಕಾರ್ಯಾಣಿ ಸಾಂಗುಷ್ಠಾನಿ ಸಮಾಚರೇತ್ ||

"ಹೋಮ, ದಾನವನ್ನು ತೆಗೆದುಕೊಳ್ಳುವುದು ಮತ್ತು ಮಾಡುವುದು, ಭೋಜನ, ಆಚಮನ ಮತ್ತು ಜಪಗಳನ್ನು ಮೊಣಕಾಲುಗಳ ಹೊರಗೆ ಕೈಗಳನ್ನು ಇಟ್ಟುಕೊಂಡು ಮಾಡಬಾರದು. ಅಂಗುಷ್ಠವನ್ನು ಉಪಯೋಗಿಸಿಯೇ ಮಾಡಬೇಕು."

ಜಪಕಾಲೇ ನ ಭಾಷೇತ ಹೋಮಾದಿಷು ಕದಾಚನ |
ಸಂಖ್ಯೆಯೈವೋಪವೀತೇನ ಜಪಹೋಮಾದಿ ನಿಷ್ಫಲಮ್ ||

"ಜಪಕಾಲದಲ್ಲಿಯೂ ಹೋಮ ಮುಂತಾದ ದೇವತಾಕಾರ್ಯಗಳಲ್ಲಿಯೂ ಯಾವ ಕಾರಣಗಳಿಂದಲೂ ಮಾತಾಡಕೂಡದು. ಸಂಖ್ಯೆಯನ್ನು ಎಣಿಸುವುದಕ್ಕೋಸ್ಕರ ಯಜ್ಞೋಪವೀತವನ್ನು ಉಪಯೋಗಿಸಿ ಜಪ ಹೋಮ ಮುಂತಾದವುಗಳನ್ನು ಮಾಡಕೂಡದು. ಹಾಗೆ ಮಾಡುವ ಜಪಾದಿಗಳು ನಿಷ್ಫಲವಾಗುತ್ತವೆ."

ಮೌನಾದೇರ್ವ್ಯಾಧಿನಾಶಃ ಸ್ಯಾಜ್ಜಪಾದಿಷು ಕಥಂಚನ |
ವ್ಯಾಹರೇದ್ವೈಷ್ಣವಂ ಸೂಕ್ತಂ ಸ್ಮರೇದ್ವಾ ವಿಷ್ಣುಮವ್ಯಯಂ ||

"ಜಪ ಮುಂತಾದ ಕಾರ್ಯಗಳನ್ನು ಮಾಡುತ್ತಿರುವಾಗ ಮೌನ ಮುಂತಾದ ನಿಯಮಗಳನ್ನು ಪಾಲಿಸಿದರೆ ವ್ಯಾಧಿ ಪರಿಹಾರವಾಗುತ್ತದೆ. ವೈಷ್ಣವ ಸೂಕ್ತಗಳನ್ನು ಪಾರಾಯಣ ಮಾಡುತ್ತಿರಬೇಕು. ಅಥವಾ ವಿಷ್ಣುವನ್ನು ಸ್ಮರಿಸುತ್ತಿರಬೇಕು."

ಏತೇಷ್ವೇವಾವಸಕ್ತಸ್ತು ಯಥಾ ಗಚ್ಛೇದ್ದ್ವಿಜೋತ್ತಮಃ |
ಅಭಿವಾದ್ಯ ತತೋ ವಿಪ್ರಂ ಯೋಗಕ್ಷೇಮಂ ಚ ಕೀರ್ತಯೇತ್ ||

"ಹಿಂದೆ ಹೇಳಿದಂತೆ ಎಲ್ಲಾ ಕಾರ್ಯಗಳನ್ನೂ ಮಾಡಬೇಕು. ಕೊನೆಗೆ ಬ್ರಾಹ್ಮಣರಿಗೆ ಅಭಿವಾದನವನ್ನು ಮಾಡಿ ತನ್ನ ಯೋಗಕ್ಷೇಮಗಳನ್ನು ಕುರಿತು ಅವರಲ್ಲಿ ಹೇಳಬೇಕು."

### ಅಭಿವಾದನ

ಜಪಿತ್ವಾ ತ್ರಿರ್ನಿಯಮ್ಯಾಸೂನ್ ಗಾಯತ್ರೀಮಭಿವಾದ್ಯ ಚ |
ಕೃತ್ವಾ ತುರೀಯೋಪಸ್ಥಾನಂ ತಾಮುದ್ವಾಸ್ಯಾವತಿಷ್ಠತೇ ||

"ಗಾಯತ್ರಿಯನ್ನು ಜಪಿಸಬೇಕು. ಮೂರು ಸಲ ಪ್ರಾಣಾಯಾಮವನ್ನು ಮಾಡಬೇಕು. ಸಂಧ್ಯಾವಂದನದಲ್ಲಿ ಮಾರ್ಜನ, ಸೂರ್ಯಾರ್ಘ್ಯಪ್ರದಾನ, ಗಾಯತ್ರೀಜಪ, ಸೂರ್ಯೋಪಸ್ಥಾನ ಎಂಬ ನಾಲ್ಕು ಅಂಗಗಳಿವೆ. ಅವುಗಳಲ್ಲಿ ಮೂರು ಅಂಗಗಳನ್ನು ಮುಗಿಸಿದ್ದಾಯಿತು. ಈಗ ನಾಲ್ಕನೆಯ ಅಂಗವಾದ ಸೂರ್ಯೋಪಸ್ಥಾನವನ್ನು ಮಾಡಬೇಕು. ಗಾಯತ್ರಿಯ ಉದ್ವಾಸವನ್ನು ಮಾಡಬೇಕು."

ಮಿತ್ರಸ್ಯೇತ್ಯಾದಿಯಗ್ಭಾಗ್ಯೈಃ ಸ್ವಸ್ವಶಾಖಾನುಸಾರತಃ |
ತತಃ ಪ್ರಾಚ್ಯಾದಿದಿಗ್ಭಾಗಾನ್ ತತ್ರ ಸಂಸ್ಥಾನ್ ಸುರಾನಪಿ ||
ಅಭಿವಾದ್ಯ ನಮಸ್ಕುರ್ಯಾಚ್ಚತುಃಸಂಧ್ಯಾದಿದೇವತಾಃ |
ಸಂಧ್ಯಾ ಪುರಸ್ತಾತ್ಸಾವಿತ್ರೀ ಗಾಯತ್ರೀ ಚ ಸರಸ್ವತೀ ||
ಏತಾಃ ಸಂಧ್ಯಾದಯಃ ಪ್ರೋಕ್ತಾಶ್ಚತಸ್ರೋ ದೇವತಾಃ ಕ್ರಮಾತ್ |
ಕರ್ಣಯುಗ್ಮಂ ಸ್ವಹಸ್ತಾಭ್ಯಾಂ ಸ್ಪೃಷ್ಟ್ವಾ ಜಾನುದ್ವಯಾದಿಷು ||
ಚರಣಾಂಗುಷ್ಠಪರ್ಯಂತಂ ಸಂಮೃಜ್ಯ ತು ಶನೈಃ ಶನೈಃ |
ಸ್ವಗೋತ್ರನಾಮ ಶರ್ಮಾಹಂಭೋಃಪದೈರಭಿವಾದಯೇತ್ ||

ಅಭಿವಾದನಮಂತ್ರೇಣ ಲೋಕಸಾಕ್ಷಿಣಮೀಶ್ವರಮ್ |
ಇತಿ ಮಂತ್ರೈರ್ನಮಸ್ಕೃತ್ಯ ತಥಾ ದೇವಾನೃಷೀನಪಿ ||
ಪಿತೄನ್ಗುರ್ವಾದಿಕಾಂಶ್ಚೈವ ಕಾಮೋಽಕಾರ್ಷಾದಿಕಾನಪಿ |
ಉತ್ತಮೇ ಶಿಖರೇ ಜಾತೇ ದೇವೀಮುದ್ವಾಸಯೇದಿತಿ ||

"ಮಿತ್ರಸ್ಯ ಚರ್ಷಣೀ ಧೃತಶ್ರವಃ" ಮುಂತಾದ ಋಕ್ಕುಗಳಿಂದ ತಮ್ಮ ತಮ್ಮ ಶಾಖೆಗಳಿಗೆ ಅನುಸಾರವಾಗಿ ಪೂರ್ವ ಮುಂತಾದ ನಾಲ್ಕು ದಿಕ್ಕುಗಳನ್ನೂ ಆ ದಿಕ್ಕುಗಳಲ್ಲಿರುವ ಎಲ್ಲಾ ದೇವತೆಗಳನ್ನೂ ಅಭಿವಾದನ ಮಾಡಬೇಕು. ಸಂಧ್ಯಾದೇವಿಯನ್ನು ಪೂರ್ವದಿಕ್ಕಿನಲ್ಲಿಯೂ ಗಾಯತ್ರೀ ಸಾವಿತ್ರೀ ಸರಸ್ವತೀ ಎಂಬ ಮೂರೂ ದೇವತೆಗಳನ್ನು ದಕ್ಷಿಣ ಮುಂತಾದ ಮೂರು ದಿಕ್ಕುಗಳಲ್ಲಿಯೂ ಅಭಿವಾದನ ಮಾಡಬೇಕು.

ಎರಡು ಕಿವಿಗಳನ್ನು ಎರಡು ಕೈಗಳಿಂದ ಹಿಡಿಯಬೇಕು. ಮೊಣಕಾಲುಗಳಿಂದ ಆರಂಭಿಸಿ ಪಾದಗಳ ಅಂಗುಷ್ಠಗಳವರೆಗೆ ಮೆಲ್ಲಮೆಲ್ಲಗೆ ಒತ್ತಬೇಕು. ತನ್ನ ಗೋತ್ರವನ್ನೂ ಹೆಸರನ್ನೂ ಹೇಳಬೇಕು. ".... ಶರ್ಮಾ ಅಹಂ ಭೋಃ ಅಭಿವಾದಯೇ" ಎಂದು ತನ್ನ ಹೆಸರನ್ನು ಹೇಳುತ್ತಾ ನಮಸ್ಕರಿಸಬೇಕು. ಇದೇ ಅಭಿವಾದನವೆನಿಸುತ್ತದೆ.

ಈ ಅಭಿವಾದನಮಂತ್ರದಿಂದ ಸಕಲಲೋಕಸಾಕ್ಷಿಯಾಗಿರುವ ಶ್ರೀಹರಿಯನ್ನೂ ದೇವತೆಗಳನ್ನೂ ಋಷಿಗಳನ್ನೂ ಪಿತೃಗಳನ್ನೂ ಗುರುಗಳೇ ಮೊದಲಾದ ಸ್ತೋತ್ರಮರನ್ನೂ "ಕಾಮೋಽಕಾರ್ಷೀನ್ನಮೋ ನಮಃ" ಎಂಬ ಮಂತ್ರದಲ್ಲಿ ಹೇಳಿರುವ ಕಾಮ, ಮನ್ಯು ಮುಂತಾದ ದೇವತೆಗಳನ್ನೂ ನಮಸ್ಕರಿಸಬೇಕು. ಕೊನೆಗೆ "ಉತ್ತಮೇ ಶಿಖರೇ ಜಾತೇ" ಎಂಬ ಮಂತ್ರದಿಂದ ಗಾಯತ್ರಿಯನ್ನು ಉದ್ವಾಸನೆ ಮಾಡಬೇಕು."

ತತೋ ನಾರಾಯಣಂ ದೇವಂ ನಮೇತ್ಸಂಸ್ತುತಿಮಂತ್ರಕೈಃ |
ನಮೋ ಬ್ರಹ್ಮಣ್ಯದೇವೇತಿ ನಮೋಽಸ್ತ್ವಿತ್ಯಾದಿಭಿಃ ಸದಾ ||
ತತೋ ನಮೇದ್ವೈಷ್ಣವಾದೀನ್ ಪಿತರಾವಗ್ರಜಾನ್ ಗುರೂನ್ |
ತ್ರಿವರ್ಷಪೂರ್ವಾನ್ ಶಿಷ್ಟಾಂಶ್ಚ ಪಾರ್ಶ್ವಸ್ಥಾನಭಿವಾದಯೇತ್ |
ಸಮಾಪ್ಯ ಯಸ್ಯ ಸ್ಮೃತ್ಯೇತಿ ಸಂಧ್ಯಾಕರ್ಮ ದ್ವಿರಾಚಮೇತ್ ||

"ಆ ಮೇಲೆ ನಾರಾಯಣದೇವನನ್ನು "ನಮೋ ಬ್ರಹ್ಮಣ್ಯದೇವಾಯ" "ನಮೋಽಸ್ತ್ವನಂತಾಯ" ಮುಂತಾದ ಸ್ತೋತ್ರಪರವಾದ ಮಂತ್ರಗಳಿಂದ ಸ್ತುತಿಸಬೇಕು. ಆ ಮೇಲೆ ವೈಷ್ಣವರನ್ನೂ ತಂದೆತಾಯಿಗಳನ್ನೂ ಅಣ್ಣಂದಿರನ್ನೂ ಗುರುಗಳನ್ನೂ ತನಗಿಂತ ಮೂರು ವರ್ಷ ಹಿರಿಯರಾಗಿರುವ ಪಕ್ಕದಲ್ಲಿರುವ ಸರ್ವರನ್ನೂ ನಮಸ್ಕರಿಸಬೇಕು." "ಯಸ್ಯ ಸ್ಮೃತ್ಯಾ ಚ" ಎಂದು ಹೇಳುತ್ತಾ ಸಂಧ್ಯಾವಂದನವನ್ನು ಮುಗಿಸಿ ಎರಡು ಸಲ ಆಚಮನವನ್ನು ಮಾಡಬೇಕು."

ಏವಂ ಸಮ್ಯಗ್ವಿಧಾನೇನ ಜಪಂ ಸರ್ವಂ ಸಮಾಪ್ಯ ಚ |
ಸಮಾಹಿತೋಽಥ ಸದ್ಭಕ್ತ್ಯಾ ದೇವೀಂ ವಿಪ್ರೋಽಭಿವಾದಯೇತ್ ||
ಕರ್ಣಯುಗ್ಮಂ ಸ್ವಹಸ್ತಾಭ್ಯಾಂ ಸ್ಪೃಷ್ಟ್ವಾ ಜಾನುದ್ವಯಾದಿಕಮ್ |
ಚರಣಾಂಗುಷ್ಠಯುಗ್ಮಾಂತಂ ಸಂಮೃಜ್ಯ ತು ಶನೈಃ ಶನೈಃ ||
ದಕ್ಷಶ್ರೋತ್ರಸಮಂ ಬಾಹುಂ ದಕ್ಷಿಣಂ ತು ಪ್ರಸಾರ್ಯ ಚ |
ಬಾಹೂಪರಿ ಶಿರೋ ನಮ್ರಮುಕ್ತಂ ತದಭಿವಾದನಮ್ ||
ಸ್ವಗೋತ್ರನಾಮಶರ್ಮಾಹಂಭೋಃಪದೈರಭಿವಾದಯೇತ್ |
ಇತ್ಯೇತದ್ಬ್ರಾಹ್ಮಣಂ ಯತ್ತನ್ಮಂತ್ರಃ ಸ್ಯಾದಭಿವಾದನೇ || (ಭರದ್ವಾಜರ ವಚನ)

"ವಿಧಿಪ್ರಕಾರವಾಗಿ ಚೆನ್ನಾಗಿ ಜಪವನ್ನು ಮುಗಿಸಬೇಕು. ಸಾವಧಾನವಾದ ಮನಸ್ಸಿನಿಂದ ಗಾಯತ್ರಿಯನ್ನು ಭಕ್ತಿಯಿಂದ ಅಭಿವಾದನ ಮಾಡಬೇಕು. ಎರಡು ಮೊಣಕಾಲುಗಳನ್ನು ಆರಂಭಿಸಿ ಎರಡು ಕಾಲುಗಳ ಅಂಗುಷ್ಠಗಳವರೆಗೆ ಮೆಲ್ಲಮೆಲ್ಲನೆ ಒತ್ತಬೇಕು. ಎರಡು ಕಿವಿಗಳನ್ನು ಎರಡು ಕೈಗಳಿಂದ ಹಿಡಿದುಕೊಳ್ಳಬೇಕು. ಬಲಗಿವಿಯವರೆಗೆ ಬಲಗೈಯನ್ನು ಎತ್ತಬೇಕು. ಕೈಗಳ ಮೇಲೆ ತಲೆಯನ್ನು ತಗ್ಗಿಸಬೇಕು. ಹೀಗೆ ಮಾಡುವುದು ಅಭಿವಾದನವೆನಿಸುತ್ತದೆ. ತನ್ನ ಗೋತ್ರವನ್ನೂ ಹೆಸರನ್ನೂ ಹೇಳಿ "…. ಶರ್ಮಾಽಹಂ ಭೋಃ ಅಭಿವಾದಯೇ" ಎಂದು ತಮ್ಮ ತಮ್ಮ ಹೆಸರುಗಳನ್ನು ಹೇಳುತ್ತಾ ಅಭಿವಾದನವನ್ನು ಮಾಡಬೇಕು."

ಮಂತ್ರೇಣಾನೇನ ಗಾಯತ್ರೀಂ ಯಥಾವದಭಿವಾದ್ಯ ಚ |
ಉತ್ತಮೇತ್ಯಾದಿಮನುನಾ ದೇವೀಮುದ್ವಾಸಯೇತ್ತತಃ ||
ಅನುವಾಕಸ್ಯ ತಸ್ಯೈವ ವಾಮದೇವಾಹ್ವಯೋ ಮುನಿಃ |
ಛಂದೋಽನುಷ್ಟುಪ್ ಚ ಸಾವಿತ್ರೀ ದೇವತೋದ್ವಾಸನೇ ವಿಧಿಃ ||
ಇತ್ಯುಕ್ತ್ವಾಽನೇನ ಗಾಯತ್ರೀಮನುವಾಕೇನ ವೈ ದ್ವಿಜಃ | (ಭರದ್ವಾಜರ ವಚನ)

"ಮೇಲ್ಕಂಡ ಮಂತ್ರದಿಂದ ಗಾಯತ್ರಿಯನ್ನು ಅಭಿವಾದನ ಮಾಡಿದ ಮೇಲೆ "ಉತ್ತಮೇ ಶಿಖರೇ ಜಾತೇ" ಮುಂತಾದ ಮಂತ್ರಗಳಿಂದ ಗಾಯತ್ರಿಯನ್ನು ಉದ್ವಾಸನೆ ಮಾಡಬೇಕು. ಈ "ಉತ್ತಮೇ" ಎಂಬ ಮಂತ್ರಕ್ಕೆ ಋಷಿಯು ವಾಮದೇವನು. ಗಾಯತ್ರಿಯು ಛಂದಸ್ಸು. ಸಾವಿತ್ರಿಯು ದೇವತೆ. "ಗಾಯತ್ರ್ಯುದ್ವಾಸನೇ ವಿನಿಯೋಗಃ" ಎಂದು ಹೇಳುತ್ತಾ ಈ ಮಂತ್ರದಿಂದ ಗಾಯತ್ರಿಯನ್ನು ಉದ್ವಾಸನೆ ಮಾಡಬೇಕು."

ಉದ್ವಾಸ್ಯಾಥ ನಮಸ್ಕುರ್ಯಾಚ್ಚತುಃಸಂಧ್ಯಾದಿದೇವತಾಃ |
ಸಂಧ್ಯಾ ಪುರಸ್ತಾದ್ಗಾಯತ್ರೀ ಸಾವಿತ್ರೀ ಚ ಸರಸ್ವತೀ ||
ಏತಾಃ ಸಂಧ್ಯಾದಯಃ ಪ್ರೋಕ್ತಾಶ್ಚತಸ್ರೋ ದೇವತಾಃ ಕ್ರಮಾತ್ |
ಸ್ವಸ್ವನಾಮ ಚತುರ್ಥ್ಯಂತಂ ಪ್ರಣವಾದಿ ನಮೋಂತಕಮ್ ||
ಮಂತ್ರಮಾಸಾಮಿಹ ಪ್ರೋಕ್ತಂ ಪ್ರಣಮೇತ್ತ್ವ ಸ್ವಮಂತ್ರತಃ |
ಕೇಚಿದ್ಧಿ ಮುನಯಃ ಪ್ರಾಹುಃ ಪ್ರತಿಮಂತ್ರಂ ಪ್ರದಕ್ಷಿಣಮ್ ||
ಕುರ್ವನ್ ಪ್ರಣಾಮಂ ಕುರ್ವೀತೇತ್ಯೇತಾಭ್ಯೋ ಭಕ್ತಿತೋ ದ್ವಿಜಃ || (ಭರದ್ವಾಜರ ವಚನ)

"ಹೀಗೆ ಗಾಯತ್ರಿಯನ್ನು ಉದ್ವಾಸನೆ ಮಾಡಿ ಸಂಧ್ಯಾ ಮುಂತಾದ ದೇವತೆಗಳನ್ನು ನಮಸ್ಕರಿಸಬೇಕು. ಸಂಧ್ಯಾ, ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂಬ ನಾಲ್ಕು ದೇವತೆಗಳನ್ನು ಪೂರ್ವದಿಂದ ಆರಂಭಿಸಿ ನಾಲ್ಕು ದಿಕ್ಕುಗಳಲ್ಲಿ ನಮಸ್ಕರಿಸಬೇಕು. ಸಂಧ್ಯಾ ಮುಂತಾದ ನಾಲ್ಕು ಹೆಸರುಗಳ ಹಿಂದೆ "ಓಂ" ಎಂಬ ಪ್ರಣವಮಂತ್ರವನ್ನು ಹೇಳಬೇಕು. ಕೊನೆಗೆ "ನಮಃ" ಎಂಬ ಪದವನ್ನು ಹೇಳಬೇಕು. ಸಂಧ್ಯಾ ಮುಂತಾದ ಪದಗಳನ್ನು ಚತುರ್ಥೀ ವಿಭಕ್ತ್ಯಂತವಾಗಿ ಮಾಡಿಕೊಳ್ಳಬೇಕು. ಓಂ ಸಂಧ್ಯಾಯೈ ನಮಃ ಎಂದೂ ಇದರಂತೆ ಗಾಯತ್ರೀ ಮುಂತಾದ ಮೂರು ಹೆಸರುಗಳಲ್ಲಿಯೂ ಮಾಡಿಕೊಳ್ಳಬೇಕು. ಇದೇ ಸಂಧ್ಯಾ ಮುಂತಾದ ನಾಲ್ಕು ದೇವತೆಗಳ ಅಭಿವಾದನಮಂತ್ರಗಳೆನಿಸುತ್ತವೆ. ಹೀಗೆ ಸಂಧ್ಯಾ ಮುಂತಾದ ನಾಲ್ಕು ದೇವತೆಗಳನ್ನು ಅವರವರ ಅಭಿವಾದನಮಂತ್ರಗಳಿಂದ ನಮಸ್ಕರಿಸಬೇಕು."

"ಕೆಲವು ಮುನಿಗಳು ಈ ನಾಲ್ಕು ದೇವತೆಗಳನ್ನು ನಮಸ್ಕರಿಸುವಾಗ ಒಂದೊಂದು ಮಂತ್ರಗಳಿಗೆ ಬೇರೆ ಬೇರೆ ಪ್ರದಕ್ಷಿಣವನ್ನು ಮಾಡಬೇಕೆಂದು ಹೇಳುತ್ತಾರೆ. ಮತ್ತೆ ಕೆಲವರು ನಾಲ್ಕು ಪ್ರದಕ್ಷಿಣೆಗಳನ್ನು ಒಟ್ಟಿಗೆ ಒಂದೇ ಸಲ ಮಾಡಿ ನಾಲ್ಕು ದೇವತೆಗಳನ್ನೂ ಒಂದೇ ಸಲ ನಮಸ್ಕರಿಸಬೇಕೆಂದು ಹೇಳುತ್ತಾರೆ."

ಮಿತ್ರಸ್ಯೇತ್ಯಾದಿಭಿಃ ಋಗ್ಭಿರ್ದೃಷ್ಟ್ವೋದಿತಮಂಡಲಮ್ |
ಆದಿತ್ಯಂ ಶಿಷ್ಟಧರ್ಮೋಪಮುಪತಿಷ್ಠೇತ ವೈ ದ್ವಿಜಃ ||
ಆಸಾಮೃಷಿರ್ವಿಶ್ವಾಮಿತ್ರೋ ದೇವತಾ ವೈ ದಿವಾಕರಮ್ |
ಛಂದೋ ಗಾಯತ್ರ್ಯಮಾದ್ಯಸ್ತ್ರಿಷ್ಟುಭಾವಿತಿ ಸ್ಮೃತಮ್ ||
ಇತ್ಯೇವಮುಕ್ತ್ವೋಪಸ್ಥಾಯ ತತಸ್ತಮಭಿವಾದಯೇತ್ |
ಅಭಿವಾದನಮಂತ್ರೇಣ ಸದ್ವೃತ್ತ್ಯಾ ಲೋಕಸಾಕ್ಷಿಣಮ್ ||
ಸ್ವಗೋತ್ರನಾಮಶರ್ಮಾಂತಂ ಭೋಃ ಶಬ್ದೈರಭಿವಾದಯೇತ್ |
ಇತ್ಯೇವಂ ಭಾಷಣಂ ಯತ್ನಾನ್ಯತ್ರಮಭಿವಾದನೇ || (ಭರದ್ವಾಜರ ವಚನ)

"ಅನಂತರದಲ್ಲಿ "ಮಿತ್ರಸ್ಯ ಚರ್ಷಣೀ" ಎಂಬ ಮೂರು ಋಕ್ಕುಗಳಿಂದ ಸೂರ್ಯಮಂಡಲವು ಚೆನ್ನಾಗಿ ಉದಯಿಸಿದ ಮೇಲೆ ಸೂರ್ಯನನ್ನು ಉಪಸ್ಥಾನ ಅಂದರೆ ಸ್ತೋತ್ರವನ್ನು ಮಾಡಬೇಕು. ಈ ಋಕ್ಕುಗಳಿಗೆ ವಿಶ್ವಾಮಿತ್ರರು ಋಷಿಗಳು. ದಿವಾಕರ ಎಂಬ ಸೂರ್ಯನೇ ದೇವತೆ. ಮೊದಲನೆಯ ಋಕ್ಕು ಗಾಯತ್ರೀ ಛಂದಸ್ಸು, ಉಳಿದ ಎರಡು ಋಕ್ಕುಗಳು ತ್ರಿಷ್ಟುಪ್ ಛಂದಸ್ಸು. ಹೀಗೆ ಈ ಮೂರು ಋಕ್ಕುಗಳನ್ನು ಹೇಳಿ ಸೂರ್ಯೋಪಸ್ಥಾನವನ್ನು ಮಾಡಬೇಕು. ಅನಂತರದಲ್ಲಿ ಸೂರ್ಯನಿಗೆ ಅಭಿವಾದನ ಮಾಡಬೇಕು. ಈ ಅಭಿವಾದನಕಾಲದಲ್ಲಿಯೂ ಹಿಂದೆ ಹೇಳಿದಂತೆ ಗೋತ್ರ, ಹೆಸರು ಮುಂತಾದವುಗಳನ್ನು ಹೇಳಿ ನಮಸ್ಕಾರವನ್ನು ಮಾಡಬೇಕು.

ಸರ್ವಾಭ್ಯೋ ದೇವತಾಭ್ಯಶ್ಚೇತ್ಯೇತತ್ಪ್ರಣವಸಂಪುಟಮ್ |
ಉಕ್ತ್ವಾ ನಮೋ ನಮ ಇತಿ ಪ್ರಣಮೇತ್ಸರ್ವದೇವತಾಃ ||
ಕಾಮೋಕಾರ್ಷೀನ್ಮನ್ಯುರಕಾರ್ಷೀದಿತ್ಯೇತದ್ದ್ವಯಮಂತ್ರಮ್ |
ಉಕ್ತ್ವಾ ಪ್ರದಕ್ಷಿಣೇನೈವ ನಮಸ್ಕುರ್ಯಾತ್ತ್ರಯೋತಮಮ್ || (ಭರದ್ವಾಜರ ವಚನ)

"ಸರ್ವಾಭ್ಯೋ ದೇವತಾಭ್ಯಶ್ಚ" ಎಂಬ ಮಂತ್ರದ ಹಿಂದೆಯೂ ಮುಂದೆಯೂ ಪ್ರಣವಮಂತ್ರವನ್ನು ಹೇಳಬೇಕು. ಕೊನೆಗೆ "ನಮೋ ನಮಃ" ಎಂದು ಹೇಳಬೇಕು. ಹೀಗೆ ಸರ್ವದೇವತೆಗಳನ್ನೂ ನಮಸ್ಕರಿಸಬೇಕು. "ಕಾಮೋಕಾರ್ಷೀತ್" "ಮನ್ಯುರಕಾರ್ಷೀತ್" ಎಂಬ ಮಂತ್ರಗಳನ್ನು ಹೇಳುತ್ತಾ ಪ್ರದಕ್ಷಿಣೆಯನ್ನು ಮಾಡಿ ಕಾಮಾದಿದೇವತೆಗಳನ್ನು ನಮಸ್ಕರಿಸಬೇಕು."

ಪ್ರಾಚೀ ಚ ದಕ್ಷಿಣಾ ಚೈವ ಪ್ರತೀಚೀ ಚೋತ್ತರೋರ್ಧ್ವಗಾ |
ಅಧರಾ ಅಂತರಿಕ್ಷಂ ಚ ಹ್ಯೇತಾಃ ಸಪ್ತೋದಿತಾ ದಿಶಃ ||
ಸಂಧ್ಯಾದೀನಾಂ ಯಥಾ ಪ್ರೋಕ್ತಂ ಮಂತ್ರಮಾಸಾಂ ತಥೈವ ಚ |
ಧ್ಯಾತ್ವಾ ಯಥಾಕ್ರಮೇಣೈತಾಃ ಪ್ರಣಮೇತ್ಸ್ವಸ್ವಮಂತ್ರತಃ ||
ಏವಂ ಸಂಧ್ಯಾಮುಪಾಸ್ಯಾಥ ಪಿತರಾವಗ್ರಜಾನ್ ಗುರೂನ್ |
ತ್ರಿವರ್ಷಪೂರ್ವಾನ್ ಶಿಷ್ಟಾಂಶ್ಚ ಪಾರ್ಶ್ವಸ್ಥಾನಭಿವಾದಯೇತ್ ||
ಏವಂ ಸಂಧ್ಯಾಮುಪಾಸ್ಯಾಥ ದೃಗ್ಭ್ಯಾಂ ಯಂ ಯಂ ಪ್ರಪಶ್ಯತಿ |
ಯಂ ಯಂ ಸ್ಪೃಶತಿ ಹಸ್ತಾಭ್ಯಾಂ ಸ ಸ ಸರ್ವಃ ಶುಚಿರ್ಭವೇತ್ || (ಭರದ್ವಾಜರ ವಚನ)

"ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಮೇಲಿನ ದಿಕ್ಕು, ಕೆಳಗಿನ ದಿಕ್ಕು, ಅಂತರಿಕ್ಷ ಎಂದು ಏಳು ದಿಕ್ಕುಗಳು ಸಂಧ್ಯಾ ಮುಂತಾದ ನಾಲ್ಕು ದೇವತೆಗಳಿಗೆ ಸಂಬಂಧಿಸಿದ ದಿಕ್ಕುಗಳು. ಈ ದಿಕ್ಕುಗಳಲ್ಲಿರುವ ಸಂಧ್ಯಾ ಮುಂತಾದ ನಾಲ್ಕು ದೇವತೆಗಳನ್ನು

ಅವರವರ ಮಂತ್ರಗಳಿಂದ ನಮಸ್ಕರಿಸಬೇಕು. ಹೀಗೆ ಸಂಧ್ಯಾವಂದನವನ್ನು ಮುಗಿಸಿ ತಂದೆತಾಯಿಗಳನ್ನೂ ಅಣ್ಣಂದಿರನ್ನೂ ಗುರುಗಳನ್ನೂ ತಮಗಿಂತ ಮೂರು ವರ್ಷ ದೊಡ್ಡವರಾಗಿರುವ ಪಕ್ಕದಲ್ಲಿರುವ ಸರ್ವರನ್ನೂ ನಮಸ್ಕರಿಸಬೇಕು. ಈ ವಿಧವಾದ ಸಂಧ್ಯಾವಂದನವನ್ನು ಮಾಡುವವನು ಯಾರು ಯಾರನ್ನು ನೋಡುತ್ತಾನೆಯೋ ಯಾರು ಯಾರನ್ನು ಮುಟ್ಟುತ್ತಾನೆಯೋ ಅವರೆಲ್ಲರೂ ಪರಿಶುದ್ಧರಾಗುವರು."

ಲಾಜಹೋಮೇ ಚ ಸೀಮಂತೇ ದೇವತಾವಾಹನೇ ವರೇ |
ಅರ್ಘ್ಯೇ ತಿಷ್ಠೇದುಪಸ್ಥಾನೇ ಪಠೇತೇ ಭೃಗುಚೋದಿತಾಃ || (ಭೃಗು ವಚನ)

"ಲಾಜಹೋಮ, ಸೀಮಂತ, ದೇವತಾವಾಹನ, ವರಪೂಜಾ, ಸೂರ್ಯಾರ್ಘ್ಯಪ್ರದಾನ, ಸೂರ್ಯೋಪಸ್ಥಾನ. ಈ ಆರು ಕಾರ್ಯಗಳನ್ನು ನಿಂತುಕೊಂಡೇ ಮಾಡಬೇಕೆಂದು ಭೃಗುಋಷಿಗಳು ಹೇಳಿರುವರು."

ಉಪಸ್ಥಾನಂ ಸ್ವಕೈರ್ಮಂತ್ರೈರಾದಿತ್ಯಸ್ಯ ತು ಕಾರಯೇತ್ ||

"ತಮ್ಮ ಶಾಖೆಯಲ್ಲಿ ಹೇಳಿರುವ ಮಂತ್ರಗಳಿಂದಲೇ ಸೂರ್ಯೋಪಸ್ಥಾನವನ್ನು ಮಾಡಬೇಕು."

ಸಾವಿತ್ರ್ಯಾದಿಕ್ರಿಯಾಃ ಸರ್ವಾ ಆದಿತ್ಯಾಭಿಮುಖಶ್ಚರೇತ್ |
ದೇವಾಲಯಸಮೀಪೇ ತು ದೇವತಾಭಿಮುಖಶ್ಚರೇತ್ ||
ಜಪಸ್ಥಾನಾನ್ನ ನಿರ್ಗಚ್ಛೇದ್ದೇವತಾಸನ್ನಿಧೌ ಕ್ವಚಿತ್ |
ಪ್ರದಕ್ಷಿಣನಮಸ್ಕಾರಾನ್ನ ಕುರ್ಯಾದ್ದೇವತಾಲಯೇ ||

"ಗಾಯತ್ರೀಮಂತ್ರಜಪ ಮುಂತಾದ ಜಪಗಳನ್ನು ಸೂರ್ಯಾಭಿಮುಖವಾಗಿಯೇ ಮಾಡಬೇಕು. ದೇವಾಲಯದ ಸಮೀಪದಲ್ಲಿ ಸಂಧ್ಯಾವಂದನವನ್ನು ಮಾಡುವುದಾದರೆ ದೇವತೆಗೆ ಅಭಿಮುಖನಾಗಿಯೇ ಮಾಡಬೇಕು. ಜಪವನ್ನು ಮಾಡುತ್ತಿರುವ ಸಮಯದಲ್ಲಿ ಬೇರೆ ಕಡೆಗೆ ಹೋಗಕೂಡದು. ದೇವರ ಸನ್ನಿಧಿಯಲ್ಲಿ ಸಂಧ್ಯಾವಂದನವನ್ನು ಮಾಡುತ್ತಿರುವವನು ಯಾವ ಕಾರಣದಿಂದಲೂ ಹೊರಗೆ ಹೋಗಬಾರದು. ದೇವಾಲಯದಲ್ಲಿ ಯಾರಿಗೂ ಪ್ರದಕ್ಷಿಣೆಯನ್ನೂ ನಮಸ್ಕಾರವನ್ನೂ ಮಾಡಬಾರದು."

## ಸೂತಕಾದಿಗಳಲ್ಲಿ ಜಪವನ್ನು ಮಾಡುವುದು

ಸೂತಕೇ ಮೃತಕೇ ವಾಽಪಿ ಸಾವಿತ್ರ್ಯಾ ಚಾಂಜಲಿಂ ಕ್ಷಿಪೇತ್ |
ನ ಸಾವಿತ್ರೀಂ ಜಪೇದ್ವಿದ್ವಾನ್ ಕುರ್ಯಾತ್ಸೌರೀಮುಪಸ್ಥಿತಿಮ್ ||
ದೇಶಕ್ಷೋಭೇ ಮಹಾಪತ್ಸು ಮಾರ್ಜನಾರ್ಘ್ಯಾದ್ಯಸಂಭವೇ |
ಸಂಧ್ಯಾಗತಂ ಸಹಸ್ರಾಂಶುಮಂತ್ರೈಃ ಕುರ್ಯಾದುಪಸ್ಥಿತಿಮ್ || (ಬೃಹಸ್ಪತಿವಚನ)

"ಜಾತಶೌಚ, ಮೃತಾಶೌಚಗಳಲ್ಲಿ ಗಾಯತ್ರೀಮಂತ್ರದಿಂದ ಸೂರ್ಯಾರ್ಘ್ಯವನ್ನು ಕೊಡಬೇಕು. ಗಾಯತ್ರೀಮಂತ್ರವನ್ನು ಜಪಿಸಬಾರದು. ದೇಶಕ್ಷೋಭ, ಮಹಾವಿಪತ್ತುಗಳು ಮುಂತಾದ ಸಂದರ್ಭಗಳಲ್ಲಿ ಕ್ರಮವಾಗಿ ಮಾರ್ಜನ ಮುಂತಾದವುಗಳನ್ನು ಮಾಡಲು ಸಾಧ್ಯವಾಗದಿರುವಾಗ ಸಂಧ್ಯಾವಂದನಾಂಗವಾದ ಉಪಸ್ಥಾನಮಂತ್ರಗಳನ್ನು ಜಪಿಸಬೇಕು."

ತೇ ತಥೈವ ಮಹಾರಾಜ ದಂಶಿತಾ ರಣಮೂರ್ಧನಿ |
ಸಂಧ್ಯಾಗತಂ ಸಹಸ್ರಾಂಶುಮಾದಿತ್ಯಮುಪತಸ್ಥಿರೇ || (ಮಹಾಭಾರತ ವಚನ)

"ಯುದ್ಧದಲ್ಲಿ ಕವಚವನ್ನು ಧರಿಸಿದವರು ಕವಚಗಳನ್ನು ಕಳಚದಂತೆಯೇ ಸಂಧ್ಯಾಕಾಲದಲ್ಲಿ ಸೂರ್ಯೋಪಸ್ಥಾನ ಮಂತ್ರವನ್ನು ಪಠಿಸಿದರು." (ಇಲ್ಲಿ ದೇಶಕ್ಷೋಭಕಾಲದಲ್ಲಿ ಸೂರ್ಯೋಪಸ್ಥಾನಮಂತ್ರಗಳನ್ನು ಪಠಿಸಿದ್ದರಿಂದಲೇ ಸಂಧ್ಯಾವಂದನವನ್ನು ಮಾಡಿದಂತಾಯಿತು ಎಂದು ಅತಿಸ್ಪಷ್ಟವಾಗಿ ತಿಳಿಸಿದೆ.)

ರಾಷ್ಟ್ರಕ್ಷೋಭೇ ಚ ರೋಗಾರ್ತೇ ಜಾತೇ ಚ ಶಾವಸೂತಕೇ |
ಸಂಧ್ಯಾವಂದನವಿಚ್ಛಿತ್ತಿರ್ನ ದೋಷಾಯ ಕದಾಚನ || (ಸ್ಮೃತಿಭಾಸ್ಕರ ವಚನ)

"ರಾಷ್ಟ್ರಕ್ಷೋಭ, ರೋಗಪೀಡಾ, ಮೃತಾಶೌಚಗಳಲ್ಲಿ ಸಂಧ್ಯಾವಂದನವನ್ನು ಮಾಡದಿರುವುದು ಯಾವ ಕಾರಣದಿಂದಲೂ ದೋಷವಾಗಲಾರದು."

ಸರ್ವಕಾಲಮುಪಸ್ಥಾನಂ ಸಂಧ್ಯಯೋಃ ಪಾರ್ಥಿವೇಽಷ್ಯತೇ |
ಅನ್ಯತ್ರ ಸೂತಕಾಶೌಚವಿಭ್ರಮಾತುರಭೀತಿತಃ || (ಸ್ಮೃತಿಭಾಸ್ಕರ ವಚನ)

"ಎಲ್ಲಾ ಕಾಲಗಳಲ್ಲಿಯೂ ಸೂರ್ಯೋಪಸ್ಥಾನವನ್ನು ಸಂಧ್ಯಾಕಾಲಗಳಲ್ಲಿ ಸರ್ವರೂ ಮಾಡಬೇಕು. ಆದರೆ ಜಾತಾಶೌಚ, ಮೃತಾಶೌಚ, ಹುಚ್ಚುಹಿಡಿದಿರುವಿಕೆ, ರೋಗಪೀಡಾ, ತುಂಬಾ ಭಯದಿಂದ ಯುಕ್ತನಾಗಿರುವುದರಿಂದ ಮುಂತಾದ ಸಂದರ್ಭಗಳಲ್ಲಿ ಮಾಡಬಾರದು."

ಸೂತಕೇ ಮೃತಕೇ ಚೈವ ಸಂಧ್ಯಾಕರ್ಮ ವಿಧೀಯತೇ |
ಮನಸೋಚ್ಚಾರಯೇನ್ಮಂತ್ರಾನ್ ಪ್ರಾಣಾಯಾಮಮೃತೇ ದ್ವಿಜಃ || (ಸ್ಮೃತಿಭಾಸ್ಕರ ವಚನ)

"ಜಾತಶೌಚ, ಮೃತಾಶೌಚ ಕಾಲಗಳಲ್ಲಿಯೂ ಸಂಧ್ಯಾವಂದನವನ್ನು ಮಾಡಲೇ ಬೇಕು. ಆದರೆ ಮಂತ್ರಗಳನ್ನು ಬಾಯಿಯಿಂದ ಹೇಳಕೂಡದು. ಮನಸ್ಸಿನಲ್ಲಿಯೇ ಹೇಳಬೇಕು. ಪ್ರಾಣಾಯಾಮವನ್ನು ಮಾತ್ರ ಮಾಡಬಾರದು."

ಯದ್ವಾಪತ್ಸು ಜಪೇದ್ದೇವೀಮಷ್ಟಾವಿಂಶತಿಮಷ್ಟ ವಾ | (ಸ್ಮೃತಿಭಾಸ್ಕರ ವಚನ)

"ಆಪತ್ಕಾಲದಲ್ಲಿ ಗಾಯತ್ರಿಯನ್ನು ಜಪಿಸುವುದಾದರೆ ಇಪ್ಪತ್ತೆಂಟಾಗಲೀ ಎಂಟಾಗಲೀ ಸಂಖ್ಯೆಯನ್ನು ಜಪಿಸಬೇಕು."

ಸಂಧ್ಯಾದಿನಿತ್ಯಲೋಪೇ ತು ದಿನಮೇಕಮಭೋಜನಮ್ |
ದಿನದ್ವಯೇ ತ್ರಿರಾತ್ರಂ ಸ್ಯಾತ್ಕೃಚ್ಛ್ರಾರ್ಧಂ ತು ದಿನತ್ರಯೇ ||
ದಶಾಹೇ ಕೃಚ್ಛ್ರಮೇಕಂ ಸ್ಯಾದೂರ್ಧ್ವಂ ಚಾಂದ್ರಾಯಣಂ ಚರೇತ್ |
ಚಾಂದ್ರಾಯಣಂ ಪರಾಕಂ ಚ ಮಾಸಾದೂರ್ಧ್ವಂ ವಿಧೀಯತೇ || (ಶಂಖರ ವಚನ)

"ಸಂಧ್ಯಾವಂದನ ಮುಂತಾದ ನಿತ್ಯಕರ್ಮಗಳನ್ನು ಒಂದು ದಿನದಲ್ಲಿ ಮಾಡದಿದ್ದರೆ ಒಂದು ದಿನದಲ್ಲಿ ಉಪವಾಸವನ್ನು ಮಾಡಬೇಕು. ಎರಡು ದಿನಗಳಲ್ಲಿ ಮಾಡದಿದ್ದರೆ ಮೂರು ದಿನಗಳಲ್ಲಿ ಉಪವಾಸವನ್ನು ಮಾಡಬೇಕು. ಮೂರು ದಿನಗಳಲ್ಲಿ ಮಾಡದಿದ್ದರೆ ಅರ್ಧಕೃಚ್ಛ್ರವನ್ನೂ, ಹತ್ತು ದಿನಗಳಲ್ಲಿ ಮಾಡದಿದ್ದರೆ ಒಂದು ಕೃಚ್ಛ್ರವನ್ನೂ, ಹತ್ತು ದಿವಸಗಳ ಮೇಲೆ ತಿಂಗಳಿನವರೆಗೆ ಮಾಡದಿದ್ದರೆ ಚಾಂದ್ರಾಯಣವನ್ನೂ ಮಾಡಬೇಕು. ಒಂದು ತಿಂಗಳಿಗಿಂತ ಹೆಚ್ಚು ದಿನಗಳಲ್ಲಿ ಮಾಡದಿದ್ದರೆ ಚಾಂದ್ರಾಯಣವನ್ನೂ ಪರಾಕ ಎಂಬ ವ್ರತವನ್ನೂ ಮಾಡಬೇಕು."

(ಪಿತ್ತವಿಕಾರ ಮುಂತಾದ ದೋಷಗಳಿಂದ ಬದುಕಿರುವವರೆಗೂ ಬುದ್ಧಿಯು ಕೆಟ್ಟರೆ ಸಂಧ್ಯಾವಂದನಾದಿಗಳನ್ನು ಬಿಟ್ಟರೆ ದೋಷವಿಲ್ಲ) ಇದು ವ್ಯಾಸರ ಮತ.

### ಅಷ್ಟಾಕ್ಷರ ಮುಂತಾದ ಮಂತ್ರಗಳ ಜಪಸಂಖ್ಯೆ

ಪ್ರಾತಃಸಂಧ್ಯಾಮುಪಾಸ್ಯೈವಮಾಸನೇ ಸುಸಮಾಹಿತಃ |
ತತ ಅಷ್ಟಾಕ್ಷರಂ ಮಂತ್ರಂ ಗಾಯತ್ರ್ಯಾಸ್ತ್ರಿಗುಣಂ ಜಪೇತ್ ||

ಪ್ರಾತಃಕಾಲದ ಸಂಧ್ಯಾವಂದನವನ್ನು ಮಾಡಿ ಮುಗಿಸಬೇಕು. ಸಾವಧಾನವಾದ ಮನಸ್ಸಿನಿಂದ ಆಸನದಲ್ಲಿ ಕುಳಿತುಕೊಳ್ಳಬೇಕು. ಗಾಯತ್ರೀಮಂತ್ರಜಪಕ್ಕಿಂತ ತ್ರಿಗುಣವಾಗಿ ನಾರಾಯಣಾಷ್ಟಾಕ್ಷರಮಂತ್ರವನ್ನು ಜಪಿಸಬೇಕು.

## ಸೃಷ್ಟ್ಯಾದಿನ್ಯಾಸಗಳು

ಅಂಗನ್ಯಾಸಂ ಸಮಾರಭ್ಯ ಕರನ್ಯಾಸಾಂತಮೇವ ಹಿ |
ಸೃಷ್ಟಿನ್ಯಾಸಂ ಸ್ಥಿತಿನ್ಯಾಸಂ ಸಂಹಿತಾನ್ಯಾಸಮೇವ ಚ ||
ದ್ವಾದಶಾಷ್ಟಾಕ್ಷರಾದೀನಾಂ ನ್ಯಾಸಮಂತ್ರಾನುದೀರಯೇತ್ |
ಶಿಖಾಮಧ್ಯೇ ತಥಾಕ್ಷ್ಣೋಶ್ಚ ಆಸ್ಯೇ ಚ ಹೃದಿ ಚೋದರೇ ||
ಗುಹ್ಯೇ ಜಾನೌ ಚ ಪಾದೇ ಚ ಸ್ಥಾನಮಷ್ಟಾಕ್ಷರೇಣ ತು |
ಮೂರ್ಧ್ನಿ ಪೂರ್ವೇ ತಥಾ ಯಾಮ್ಯೇ ಪಶ್ಚಿಮೇ ಚೋತ್ತರೇ ತಥಾ ||
ಅನ್ಯಚ್ಚ ಪೂರ್ವವತ್ಕುರ್ಯಾದ್ದ್ವಿಪಟ್ಕರಣಮುಚ್ಯತೇ |
ಶೀರ್ಷತಃ ಪಾದಪರ್ಯಂತಂ ಸೃಷ್ಟಿನ್ಯಾಸಂ ದ್ವಿಜೋತ್ತಮಃ ||
ಸಂಹಾರಂ ತು ತಥಾ ವಿದ್ಧಿ ವಿಪರೀತಮುದಾಹೃತಮ್ |
ಪಾದಾದಿಹೃದಯಾಂತಸ್ತು ಸ್ಥಿತಿರೇವಂ ಪ್ರಕೀರ್ತಿತಃ || (ಕಪಿಂಜಲಸಂಹಿತಾ)

"ಅಂಗನ್ಯಾಸ ಮತ್ತು ಕರನ್ಯಾಸಗಳಲ್ಲಿ ಸೃಷ್ಟಿನ್ಯಾಸ ಸ್ಥಿತಿನ್ಯಾಸ ಸಂಹಾರನ್ಯಾಸ ಎಂಬ ತ್ರಿವಿಧವಾದ ನ್ಯಾಸಗಳಿವೆ. ಅಷ್ಟಾಕ್ಷರಮಂತ್ರ, ದ್ವಾದಶಾಕ್ಷರಮಂತ್ರ ಮುಂತಾದವುಗಳಿಗೆ ಈ ತ್ರಿವಿಧವಾದ ನ್ಯಾಸಗಳಲ್ಲಿ ಯಾವುದಾದರೊಂದು ನ್ಯಾಸವನ್ನು ಮಾಡಬೇಕು. (1) ಜುಟ್ಟುಗಳ ಮಧ್ಯ (2) ಕಣ್ಣುಗಳು (3) ಬಾಯಿ (4) ಎದೆ (5) ಹೊಟ್ಟೆ (6) ಗುಹ್ಯೇಂದ್ರಿಯ (7) ಮೊಣಕಾಲುಗಳು (8) ಪಾದಗಳು ಹೀಗೆ ಎಂಟು ಸ್ಥಾನಗಳಲ್ಲಿ ಅಷ್ಟಾಕ್ಷರಮಂತ್ರದಲ್ಲಿರುವ ಓಂ ಮುಂತಾದ ಎಂಟು ಅಕ್ಷರಗಳನ್ನು ಉಚ್ಚರಿಸುತ್ತಾ ಮುಟ್ಟಬೇಕು.

ಹಿಂದೆ ಹೇಳಿದ ಎಂಟು ಸ್ಥಾನಗಳು, (9) ತಲೆಯಲ್ಲಿ ಪೂರ್ವಭಾಗ (10) ದಕ್ಷಿಣ ಭಾಗ (11) ಪಶ್ಚಿಮ ಭಾಗ (12) ಉತ್ತರ ಭಾಗ ಎಂಬ ನಾಲ್ಕು ಸ್ಥಾನಗಳನ್ನು ಉಳಿದ ನಾಲ್ಕು ಅಕ್ಷರಗಳನ್ನು ಉಚ್ಚರಿಸುತ್ತಾ ಮುಟ್ಟಬೇಕು. ಇದು ದ್ವಾದಶಾಕ್ಷರಮಂತ್ರಕ್ಕೆ ನ್ಯಾಸವೆನಿಸುತ್ತದೆ. ಈ ನ್ಯಾಸಗಳಲ್ಲಿ ತಲೆಯನ್ನು ಆರಂಭಿಸಿ ಪಾದಗಳವರೆಗೆ ಮಾಡುವ ನ್ಯಾಸವು ಸೃಷ್ಟಿನ್ಯಾಸವೆನಿಸುತ್ತದೆ. ಕಾಲಿನಿಂದ ಆರಂಭಿಸಿ ತಲೆಯವರೆಗೆ ಮಾಡುವ ನ್ಯಾಸವು ಸಂಹಾರನ್ಯಾಸವೆನಿಸುತ್ತದೆ. ಪಾದದಿಂದ ಆರಂಭಿಸಿ ಹೊಟ್ಟೆಯವರೆಗೂ ತಲೆಯಿಂದ ಆರಂಭಿಸಿ ಎದೆಯವರೆಗೂ ಮಾಡುವ ನ್ಯಾಸವು ಸ್ಥಿತಿನ್ಯಾಸವೆನಿಸುತ್ತದೆ.

## ಜಪಲಕ್ಷಣ

ತತ್ತ್ವನ್ಯಾಸಂ ಚಾಕ್ಷರಾಣಾಂ ಪ್ರಾಣಾಯಾಮೋ ಭವೇದಥ |
ಪಂಚಾಂಗಮೂಲನ್ಯಾಸೌ ಚ ಧ್ಯಾಯೇದಕ್ಷರಮುತ್ತಮಮ್ ||
ಸಚ್ಚಿದಾನಂದರೂಪಂ ತು ಬ್ರಹ್ಮ ದಿವ್ಯಂ ಸನಾತನಮ್ |
ಯಥೋದಿತಂ ತು ಗುರುಣಾ ಯಥಾಯೋಗ್ಯಂ ಯಥಾಮತಿ ||
ಯಾವತ್ತದ್ದೃಶ್ಯತೇ ರೂಪಂ ತಾವದ್ಧ್ಯಾನಂ ತತಃ ಪರಮ್ |
ಜಪೇದೇಕಾಕ್ಷರಂ ಮಂತ್ರಮನ್ಯಾನ್ ಮಂತ್ರಾನಪಿ ಧ್ರುವಮ್ ||
ವಿಘ್ನಶಾಂತ್ಯೈ ತತೋಽನಂತಕರ್ಮಣೋ ವಿಭವಾಯ ಚ |
ಪ್ರೀತ್ಯೈ ಹರೇರ್ದೇವಗುರೋಸ್ತತ್ಪ್ರಸಾದಾದ್ವಿಮುಚ್ಯತೇ || (ವಿಷ್ಣುತೀರ್ಥೀಯ)

"ಮೊದಲು ತತ್ತ್ವನ್ಯಾಸವನ್ನು ಮಾಡಿಕೊಳ್ಳಬೇಕು. ಅನಂತರದಲ್ಲಿ ಮಾತೃಕಾನ್ಯಾಸವನ್ನು ಮಾಡಿಕೊಳ್ಳಬೇಕು. ಅನಂತರದಲ್ಲಿ ಪ್ರಾಣಾಯಾಮವನ್ನು ಮಾಡಿಕೊಳ್ಳಬೇಕು. ಅನಂತರದಲ್ಲಿ ಪಂಚಾಂಗನ್ಯಾಸವನ್ನು ಮಾಡಿಕೊಳ್ಳಬೇಕು.

ಅನಂತರದಲ್ಲಿ ಮೂಲಮಂತ್ರದಲ್ಲಿರುವ ಅಕ್ಷರಗಳಿಗೆ ನ್ಯಾಸವನ್ನು ಮಾಡಿಕೊಳ್ಳಬೇಕು. ಅನಂತರದಲ್ಲಿ ಧ್ಯಾನಶ್ಲೋಕದಲ್ಲಿ ಹೇಳಿದಂತೆ ಶ್ರೀಹರಿಯ ಧ್ಯಾನವನ್ನು ಮಾಡಬೇಕು. ಆ ಧ್ಯಾನವನ್ನು ಮಾಡುವಾಗ ಶ್ರೀಹರಿಯು ಸಚ್ಚಿದಾನಂದರೂಪದಿಂದ ಯುಕ್ತನಾಗಿರುವುದಾಗಿಯೂ ಅಪ್ರಾಕೃತವಾದ ದಿವ್ಯವಾದ ರೂಪದಿಂದ ಯುಕ್ತನಾಗಿರುವುದಾಗಿಯೂ ಧ್ಯಾನವನ್ನು ಮಾಡಬೇಕು.

ಈ ಧ್ಯಾನಕ್ಕೆ ಇಷ್ಟೇ ಕಾಲ ಎಂಬ ನಿಯಮವಿಲ್ಲ. ಮನಸ್ಸಿನಲ್ಲಿ ಶ್ರೀಹರಿಯ ರೂಪದ ದರ್ಶನವಾಗುತ್ತಿರುವವರೆಗೆ ಧ್ಯಾನವನ್ನು ಮಾಡಬೇಕು. ಅನಂತರದಲ್ಲಿ ಏಕಾಕ್ಷರವಾಗಿರುವ ಪ್ರಣವಮಂತ್ರ ಮೊದಲಾಗಿರುವ ಮಂತ್ರಗಳನ್ನು ಜಪಿಸಬೇಕು. ಅನಂತರದಲ್ಲಿ ಉಳಿದ ಮಂತ್ರಗಳನ್ನು ಜಪಿಸಬೇಕು. ಈ ಜಪವನ್ನು ಮಾಡುವಾಗ ಗುರುಗಳು ಉಪದೇಶಿಸಿದಂತೆ ಮಾಡಬೇಕು. ತನಗೆ ಯೋಗ್ಯವಾದ ಮೂರ್ತಿಯನ್ನು ತನ್ನ ಬುದ್ಧಿಬಲವನ್ನು ಅನುಸರಿಸಿ ಧ್ಯಾನ ಮಾಡಬೇಕು. ಇದರಿಂದ ಎಲ್ಲಾ ವಿಘ್ನಗಳೂ ಹೋಗುತ್ತವೆ. ಅನಂತ ಕರ್ಮಗಳಿಗೂ ಯೋಗ್ಯವಾದ ಫಲವು ಬರುತ್ತದೆ. ಶ್ರೀಹರಿಯ ಪ್ರೀತಿಯೂ ದೇವತೆಗಳ ಮತ್ತು ಗುರುಗಳ ಪ್ರೀತಿಯೂ ಏರ್ಪಡುತ್ತದೆ. ಅವರೆಲ್ಲರ ಪ್ರೀತಿಯಿಂದ ಮುಕ್ತಿಯನ್ನು ಪಡೆಯುವನು."

"ಅಸ್ಯ ಶ್ರೀಮದಷ್ಟಾಕ್ಷರಮಹಾಮಂತ್ರಸ್ಯ ಅಂತರ್ಯಾಮೀ ಋಷಿಃ" ಎಂದು ಹೇಳುತ್ತಾ ತಲೆಯನ್ನು ಮುಟ್ಟಬೇಕು. "ದೈವೀ ಗಾಯತ್ರೀ ಛಂದಃ" ಎಂದು ಹೇಳುತ್ತಾ ಬಾಯಿಯನ್ನು ಮುಟ್ಟಬೇಕು. "ಪರಮಾತ್ಮಾ ಶ್ರೀನಾರಾಯಣೋ ದೇವತಾ" ಎಂದು ಹೇಳುತ್ತಾ ಎದೆಯನ್ನು ಮುಟ್ಟಬೇಕು. "ಶ್ರೀನಾರಾಯಣಪ್ರೇರಣಯಾ ಶ್ರೀನಾರಾಯಣಪ್ರೀತ್ಯರ್ಥಂ ಶ್ರೀಮದಷ್ಟಾಕ್ಷರಜಪಂ ಕರಿಷ್ಯೇ" ಎಂದು ಹೇಳುತ್ತಾ ಕೈಗಳನ್ನು ಜೋಡಿಸಿಕೊಂಡು ಸಂಕಲ್ಪವನ್ನು ಮಾಡಬೇಕು. ಅನಂತರದಲ್ಲಿ ಹಿಂದೆ ಹೇಳಿದಂತೆ ತಮ್ಮ ತಮ್ಮ ಆಶ್ರಮಗಳಿಗೆ ವಿಹಿತವಾದ ಸೃಷ್ಟಿನ್ಯಾಸಾದಿಗಳನ್ನು ಮಾಡಬೇಕು.

### ವರ್ಣನ್ಯಾಸದಲ್ಲಿ ಸಂಹಾರಕ್ರಮ

ಪಜ್ಜಾನುನಾಭಿಹೃದಯವಾಙ್ನಾಸಾನೇತ್ರಕೇಷು ಚ |
ಅಷ್ಟಾಕ್ಷರಾಣಾಂ ನ್ಯಾಸಃ ಸ್ಯಾತ್ ----- || (ತಂತ್ರಸಾರ)

"ಅಷ್ಟಾಕ್ಷರಮಂತ್ರಗಳಿಗೆ ನ್ಯಾಸಕ್ರಮಗಳನ್ನು ಹೇಳುತ್ತೇವೆ. (1) ಪಾದ (2) ಮೊಣಕಾಲು (3) ಹೊಕ್ಕಳು (4) ಎದೆ (5) ಬಾಯಿ (6) ಮೂಗು (7) ಕಣ್ಣುಗಳು (8) ತಲೆ ಹೀಗೆ ಎಂಟು ಸ್ಥಾನಗಳಲ್ಲಿ ನಾರಾಯಣಾಷ್ಟಾಕ್ಷರ ಮುಂತಾದ ಅಷ್ಟಾಕ್ಷರಮಂತ್ರಗಳಲ್ಲಿರುವ ಎಂಟು ಅಕ್ಷರಗಳನ್ನು ಉಚ್ಚರಿಸುತ್ತಾ ಮುಟ್ಟಬೇಕು. ಇದು ಸಂಹಾರಕ್ರಮವೆನಿಸುತ್ತದೆ. ತಲೆಯಿಂದ ಆರಂಭಿಸಿ ಕಾಲಿನವರೆಗೆ ಮುಟ್ಟಿದರೆ ಸೃಷ್ಟಿಕ್ರಮವೆನಿಸುತ್ತದೆ. ಕಾಲಿನಿಂದ ಹೊಕ್ಕಳುಗಳವರೆಗೂ ತಲೆಯಿಂದ ಎದೆಯವರೆಗೂ ಮುಟ್ಟಿದರೆ ಸ್ಥಿತಿಕ್ರಮವೆನಿಸುತ್ತದೆ.

### ವರ್ಣನ್ಯಾಸವನ್ನು ಮಾಡುವಾಗ ಬೆರಳುಗಳ ನಿಯಮ

ಮೂರ್ಧ್ನಿ ಮಧ್ಯಮಯಾಽಂಗುಲ್ಯಾ ತರ್ಜನ್ಯಾ ಚ ಹಿ ಚಕ್ಷುಷೀ |
ನ್ಯಾಸೋ ಮುಖೇಽನಾಮಿಕಯಾ ಚಾಂಗುಷ್ಠೇನ ಚ ಮಂತ್ರವಿತ್ ||
ಅಂಗುಷ್ಠತರ್ಜನೀಭ್ಯಾಂ ತು ಹೃದಯೇಽನ್ಯತ್ಸಮಂ ಭವೇತ್ |
ತಥಾಂಗುಷ್ಠಕನಿಷ್ಠಾಭ್ಯಾಂ ನ್ಯಾಸೋ ನಾಭೌ ಪ್ರದೃಶ್ಯತೇ ||
ವಿನಾಂಗುಷ್ಠೇನ ಶೇಷಾಭಿರ್ಗುಹ್ಯೇ ಜಾನುನಿ ಚೋಭಯೋಃ |
ಸಮಸ್ತಾಭಿಶ್ಚರಣಯೋರಿತ್ಯಷ್ಟಾಕ್ಷರ ಭೂಮಯಃ || (ಪದ್ಮಸಂಹಿತಾ)

"ತಲೆಯನ್ನು ನಡುಬೆರಳಿನಿಂದಲೂ, ಕಣ್ಣುಗಳನ್ನು ತೋರ್ಬೆರಳಿನಿಂದಲೂ, ಮುಖವನ್ನು ಉಂಗುರದ ಬೆರಳಿನಿಂದಲೂ, ಅಂಗುಷ್ಠದಿಂದಲೂ, ಎದೆಯನ್ನು ಅಂಗುಷ್ಠದಿಂದಲೂ, ತೋರ್ಬೆರಳಿನಿಂದಲೂ, ಹೊಕ್ಕಳನ್ನು ಅಂಗುಷ್ಠದಿಂದಲೂ,

ಕಿರಿಬೆರಳಿನಿಂದಲೂ, ಗುಹ್ಯ ಪ್ರದೇಶವನ್ನೂ ಮೊಣಕಾಲುಗಳನ್ನೂ ಅಂಗುಷ್ಠವನ್ನು ಬಿಟ್ಟು ಉಳಿದ ಬೆರಳುಗಳಿಂದಲೂ, ಪಾದಗಳನ್ನು ಎಲ್ಲಾ ಬೆರಳುಗಳಿಂದಲೂ ಮುಟ್ಟಬೇಕು."

### ಅಷ್ಟಾಕ್ಷರದಲ್ಲಿರುವ ವರ್ಣಗಳಿಗೆ ಬಣ್ಣಗಳು

ರೂಪಂ ಕ್ರಮೇಣಾಷ್ಟಾಕ್ಷರಾಣಾಂ ನ್ಯಾಸಕಾಲೇ ವಿಚಿಂತಯೇತ್ |
ಶುಕ್ಲಂ ಹಿರಣ್ಮಯಂ ಕೃಷ್ಣಂ ರಕ್ತಂ ಕುಂಕುಮಸನ್ನಿಭಮ್ ||
ಪದ್ಮಕಿಂಜಲ್ಕಕಂ ನೀಲಂ ಸರ್ವವರ್ಣಕಮಷ್ಟಕಮ್ || (ಪದ್ಮಸಂಹಿತಾ)

"ಅಷ್ಟಾಕ್ಷರಮಂತ್ರಗಳಲ್ಲಿ ಅಕ್ಷರನ್ಯಾಸವನ್ನು ಮಾಡುವಾಗ ಒಂದೊಂದು ಅಕ್ಷರದಿಂದ ಪ್ರತಿಪಾದ್ಯವಾದ ಮೂರ್ತಿಗಳಿಗೆ ಬೇರೆ ಬೇರೆ ಬಣ್ಣವನ್ನು ತಿಳಿಯಬೇಕು. (1) ಬಿಳಿಯ ಬಣ್ಣ (2) ಬಂಗಾರದ ಬಣ್ಣ (3) ಕಪ್ಪು ಬಣ್ಣ (4) ಕೆಂಪು ಬಣ್ಣ (5) ಕುಂಕುಮದ ಬಣ್ಣ (6) ಪದ್ಮದ ಕೇಸರದ ಬಣ್ಣ (7) ನೀಲ ಬಣ್ಣ (8) ಎಲ್ಲಾ ಬಣ್ಣಗಳು. ಹೀಗೆ ಒಂದೊಂದು ಅಕ್ಷರದಿಂದ ಹೇಳಲ್ಪಡುವ ಶ್ರೀಹರಿಯ ಮೂರ್ತಿಗಳ ಬಣ್ಣಗಳನ್ನು ತಿಳಿಯಬೇಕು."

### ದ್ವಾದಶಾಕ್ಷರ ಮಂತ್ರಗಳಲ್ಲಿರುವ ಅಕ್ಷರಗಳಿಗೆ ಬಣ್ಣಗಳು

ಸಿತಂ ಕೃಷ್ಣಂ ಚ ಸೂತ್ರಾಭಂ ಶ್ಯಾಮಂ ತಾರನಿಭಂ ತಥಾ |
ಸ್ಫಟಿಕಾಭಂ ಚ ಶಂಖಾಭಂ ರಕ್ತಂ ಶುಕ್ಲಂ ಚ ಲೋಹಿತಮ್ ||
ತಮೋರೂಪಂ ಪೀತವರ್ಣಂ ಧ್ಯಾತ್ವಾ ಮಂತ್ರದ್ವಯಾಕ್ಷರಮ್ |

ದ್ವಾದಶಾಕ್ಷರಮಂತ್ರಗಳಲ್ಲಿರುವ ಹನ್ನೆರಡು ಅಕ್ಷರಗಳಿಂದ ಹೇಳಲ್ಪಡುವ ಹನ್ನೆರಡು ಮೂರ್ತಿಗಳ ಬಣ್ಣವನ್ನು ಈಗ ಹೇಳುತ್ತಿದ್ದೇವೆ. (1) ಬಿಳಿಯ ಬಣ್ಣ (2) ಕಪ್ಪು ಬಣ್ಣ (3) ದಾರದಂತೆ ಶುಭ್ರವಾದ ಬಣ್ಣ (4) ನೀಲ ಬಣ್ಣ (5) ನಕ್ಷತ್ರದ ಬಣ್ಣ (6) ಸ್ಫಟಿಕದ ಬಣ್ಣ (7) ಶಂಖದ ಬಣ್ಣ (8) ಕೆಂಪು ಬಣ್ಣ (9) ಬಿಳಿಯ ಬಣ್ಣ (10) ರಕ್ತದ ಬಣ್ಣ (11) ಕತ್ತಲೆಯ ಬಣ್ಣ (12) ಹಳದಿ ಬಣ್ಣ ಹೀಗೆ ಬಣ್ಣಗಳಿಂದ ಯುಕ್ತವಾದ ಮೂರ್ತಿಗಳನ್ನು ಸ್ಮರಿಸುತ್ತಾ ಅಕ್ಷರನ್ಯಾಸವನ್ನು ಮಾಡಬೇಕು.

### ಅಕ್ಷರನ್ಯಾಸ ಮಂತ್ರಗಳು

"(1) ಓಂ ಓಂ ವಿಶ್ವಾಯ ನಮಃ (2) ಓಂ ನಂ ತೈಜಸಾಯ ನಮಃ (3) ಓಂ ಮೋಂ ಪ್ರಾಜ್ಞಾಯ ನಮಃ (4) ಓಂ ನಾಂ ತುರೀಯಾಯ ನಮಃ (5) ಓಂ ರಾಂ ಆತ್ಮನೇ ನಮಃ (6) ಓಂ ಯಂ ಅಂತರಾತ್ಮನೇ ನಮಃ (7) ಓಂ ಣಾಂ ಪರಮಾತ್ಮನೇ ನಮಃ (8) ಓಂ ಯಂ ಜ್ಞಾನಾತ್ಮನೇ ನಮಃ" ಇವುಗಳು ಅಷ್ಟಾಕ್ಷರನ್ಯಾಸಗಳಿಗೆ ಮಂತ್ರಗಳು. ಈ ಅಕ್ಷರನ್ಯಾಸಗಳಿಗೆ ಸೃಷ್ಟಿ ಸ್ಥಿತಿ ಸಂಹಾರ ಕ್ರಮವನ್ನು ಹಿಂದೆ ಹೇಳಿದ್ದೇವೆ. ಆ ಕ್ರಮದಿಂದ ಸೃಷ್ಟಿ ಸ್ಥಿತಿ ಸಂಹಾರನ್ಯಾಸಗಳನ್ನು ಮಾಡಬೇಕು.

### ಪಂಚಾಂಗನ್ಯಾಸ

"(1) ಓಂ ಕ್ರುದ್ಧೋಲ್ಕಾಯ ಸ್ವಾಹಾ ಹೃದಯಾಯ ನಮಃ (2) ಓಂ ಮಹೋಲ್ಕಾಯ ಸ್ವಾಹಾ ಶಿರಸೇ ಸ್ವಾಹಾ (3) ಓಂ ವೀರೋಲ್ಕಾಯ ಸ್ವಾಹಾ ಶಿಖಾಯೈ ವೌಷಟ್ (4) ಓಂ ದ್ಯುಲ್ಕಾಯ ಸ್ವಾಹಾ ಕವಚಾಯ ಹುಂ (5) ಓಂ ಸಹಸ್ರೋಲ್ಕಾಯ ಸ್ವಾಹಾ ಅಸ್ತ್ರಾಯ ಫಟ್" ಎಂದು ಹೇಳುತ್ತಾ ಹತ್ತು ದಿಕ್ಕುಗಳಲ್ಲಿ ದಿಗ್ಬಂಧನವನ್ನು ಮಾಡಬೇಕು.

### ಆರು ಮುದ್ರೆಗಳು

ಮುದ್ರಾಣಾಂ ಲಕ್ಷಣಂ ವಕ್ಷ್ಯೇ ಪೂಜಾರ್ಥಂ ಶಾಸ್ತ್ರಚೋದಿತಮ್ |
ಮುದ್ರಯಾ ಪ್ರೀಯತೇ ದೇವಸ್ತಥಾ ಸನ್ನಿಹಿತೋ ಭವೇತ್ ||

ಮುದ್ರಯಾ ಸಿದ್ಧ್ಯತೇ ಜ್ಞಾನಂ ತಥಾ ಕರ್ಮ ಪ್ರಶಸ್ಯತೇ |
ತಸ್ಮಾದ್ಯತ್ನೇನ ಸಂವಕ್ಷ್ಯೇ ಗೋಪ್ಯಂ ಚಾತ್ಮಗತಂ ಭವೇತ್ ||
ಅಂಗುಷ್ಠತರ್ಜನೀಭ್ಯಾಂ ತು ಪ್ರಮೃಶ್ಯ ಹೃದಯೇ ನ್ಯಸೇತ್ |
ಹೃದಯಸ್ಥೇ ತಥಾ ಜ್ಞೇಯಂ ಮುದ್ರಾ ಸರ್ವತ್ರ ಪೂಜಿತಾ ||
ನಿಬಧ್ಯ ಮುಷ್ಟಿನಾ ಹನ್ಯಾದಂಗುಷ್ಠೇನ ತು ತರ್ಜನೀಮ್ |
ಸ್ಥಾಪಯಿತ್ವಾ ಲಲಾಟಾಂತೇ ಶಿರೋಮುದ್ರಾ ಪ್ರಶಸ್ಯತೇ ||
ಏವಂ ಬಧ್ವಾ ದೃಢಂ ಮುಷ್ಟಿಂ ಕುರ್ಯಾದಂಗುಷ್ಠಮೂರ್ಧ್ವಗಮ್ |
ಸ್ಥಾಪಯಿತ್ವಾ ಶಿಖಾದೇಶೇ ಶಿಖಾಮುದ್ರಾ ಪ್ರಕೀರ್ತಿತಾ ||
ಅಂತಃಪ್ರವಿಷ್ಟಂ ಚಾಂಗುಷ್ಠಂ ವೇಷ್ಟಯಿತ್ವಾ ಸಮಂತತಃ |
ಸಂಹಾರೇ ತರ್ಜನೀಂ ಭೂಯಃ ಕವಚಂ ತು ಪ್ರಕೀರ್ತಿತಮ್ ||
ಅಗ್ರಹಸ್ತಂ ಪರಾಮೃಶ್ಯ ಬಧ್ವಾ ನಾರಾಚಮುಷ್ಟಿವತ್ |
ವಿಸೃಜ್ಯ ತಿರ್ಯಗಾಯಮ್ಯೇದಸ್ತ್ರಂ ಸಂಪರಿಕೀರ್ತಿತಮ್ ||
ಸ್ಥಾಪಯಿತ್ವಾ ಶಿಖಾಮಧ್ಯೇ ಶಿಖಾಮುದ್ರಾಮಧೋಮುಖಮ್ |
ನೇತ್ರಮುದ್ರಾ ಸಮುದ್ದಿಷ್ಟಾ ಕಾಶ್ಯಪಾದ್ದ್ವಿಜಸತ್ತಮಾತ್ ||
ಷಡಂಗಾನಾಮಿತಿ ಪ್ರೋಕ್ತಂ ಮುದ್ರಾ ಚೈವ ಯಥಾಕ್ರಮಮ್ || (ಕಪಿಂಜಲಸಂಹಿತಾ)

"ಇನ್ನು ಮುಂದೆ ಮುದ್ರೆಗಳ ಲಕ್ಷಣವನ್ನು ಹೇಳುವೆವು. ಪೂಜೆಗೆ ಈ ಮುದ್ರೆಗಳು ಅಂಗವೆನಿಸುತ್ತವೆ. ಶಾಸ್ತ್ರೋಕ್ತವಾದ ಈ ಮುದ್ರೆಗಳಿಂದ ಶ್ರೀಹರಿಯು ಸಂತುಷ್ಟನಾಗುವನು. ಯಾವಾಗಲೂ ಸನ್ನಿಹಿತನಾಗುವನು. ಈ ಮುದ್ರೆಯಿಂದ ಜ್ಞಾನಸಿದ್ಧಿಯು ಏರ್ಪಡುತ್ತದೆ. ಕರ್ಮಗಳೂ ಪ್ರಶಸ್ತವೆನಿಸುತ್ತವೆ. ಆದ್ದರಿಂದ ಪ್ರಯತ್ನವನ್ನು ಮಾಡಿ ಈ ಮುದ್ರೆಗಳ ವಿಷಯವನ್ನು ಮನಸ್ಸಿನಲ್ಲಿಯೇ ಗುಪ್ತವಾಗಿ ಇಟ್ಟುಕೊಳ್ಳಬೇಕು. (1) ಅಂಗುಷ್ಠ ಮತ್ತು ತೋರ್ಬೆರಳುಗಳನ್ನು ಒಟ್ಟುಗೂಡಿಸಬೇಕು. ಎದೆಯನ್ನು ಮುಟ್ಟಬೇಕು. ಇದು ಹೃದಯಮುದ್ರೆಯೆನಿಸುತ್ತದೆ. ಇದರಿಂದ ಹೃದಯಸ್ಥನಾದ ಶ್ರೀಹರಿಯನ್ನು ಪೂಜಿಸಿದಂತಾಗುತ್ತದೆ. (2) ಮುಷ್ಟಿಯನ್ನು ಮಾಡಿಕೊಳ್ಳಬೇಕು. ಅಂಗುಷ್ಠದಿಂದ ತೋರ್ಬೆರಳನ್ನು ಹೊಡೆಯಬೇಕು. ಹಣೆಯ ಮೇಲ್ಭಾಗದಲ್ಲಿ ಮುಟ್ಟಬೇಕು. ಇದು ಶಿರೋಮುದ್ರೆಯೆನಿಸುತ್ತದೆ. (3) ಶಿರೋಮುದ್ರೆಯಂತೆ ದೃಢವಾದ ಮುಷ್ಟಿಯನ್ನು ಮಾಡಿಕೊಳ್ಳಬೇಕು. ಅಂಗುಷ್ಠವನ್ನು ಆ ಮುಷ್ಟಿಯ ಮೇಲೆ ಇಡಬೇಕು. ಜುಟ್ಟಿನ ಪ್ರದೇಶದಲ್ಲಿ ಕೈಯನ್ನು ಇಡಬೇಕು. ಇದು ಶಿಖಾಮುದ್ರೆಯೆನಿಸುತ್ತದೆ. (4) ಹಿಂದೆ ಹೇಳಿದಂತೆ ಮುಷ್ಟಿಯನ್ನು ಮಾಡಿಕೊಳ್ಳಬೇಕು. ಆ ಮುಷ್ಟಿಯ ಒಳಗೆ ಅಂಗುಷ್ಠವನ್ನು ಪ್ರವೇಶ ಮಾಡಿಸಬೇಕು. ತೋರ್ಬೆರಳನ್ನು ಮುಷ್ಟಿಯಿಂದ ಹೊರಪಡಿಸಬೇಕು. ಇದು ಕವಚಮುದ್ರೆಯೆನಿಸುತ್ತದೆ. (5) ಕೈಯ ತುದಿಯನ್ನು ಒಮ್ಮೆ ಮುಟ್ಟಬೇಕು. ತೋರ್ಬೆರಳನ್ನೂ ಅಂಗುಷ್ಠವನ್ನೂ ಒಟ್ಟುಗೂಡಿಸಬೇಕು. ಇದು ಅಸ್ತ್ರಮುದ್ರೆಯೆನಿಸುತ್ತದೆ. (6) ಹಿಂದೆ ಹೇಳಿದ ಶಿಖಾಮುದ್ರೆಯನ್ನು ತಲೆಕೆಳಗಾಗುವಂತೆ ಇಟ್ಟುಕೊಳ್ಳಬೇಕು. ಇದು ನೇತ್ರಮುದ್ರೆಯೆನಿಸುತ್ತದೆ. ಈ ಮುದ್ರೆಗಳನ್ನು ಬ್ರಾಹ್ಮಣೋತ್ತಮರಾದ ಕಾಶ್ಯಪರು ಹೇಳುತ್ತಾರೆ. ಹೀಗೆ ಷಡಂಗನ್ಯಾಸವನ್ನು ಮಾಡುವಾಗ ಮಾಡಬೇಕಾದ ಮುದ್ರೆಗಳನ್ನು ತಿಳಿಸಿದೆವು."

### ಪ್ರಕಾರಾಂತರದಿಂದ ಅಸ್ತ್ರಮುದ್ರೆ

ತರ್ಜನೀಂ ಸ್ಫೋಟಯೇದ್ದಿಕ್ಷು ದಶಸ್ವಂಗುಲಿನೈವ ತು |
ಧೃತಂ ಕರದ್ವಯೇನೈವ ಚಕ್ಷುಷಾ ಸನ್ನಿರೀಕ್ಷಯೇತ್ ||

ಅಸ್ತ್ರಮುದ್ರೇತಿ ವಿಖ್ಯಾತಾ ತ್ರಾಸಿನೀ ತ್ರಿದಶೇಷ್ವಪಿ ||

"ಎರಡು ಕೈಗಳ ತೋರ್ಬೆರಳು ಮತ್ತು ಅಂಗುಷ್ಠಗಳನ್ನು ಒಟ್ಟುಗೂಡಿಸಬೇಕು. ಎರಡು ಕೈಗಳಿಂದಲೂ ಹತ್ತು ದಿಕ್ಕುಗಳಲ್ಲಿಯೂ ಚಿಟಿಕೆಗಳನ್ನು ಹಾಕಬೇಕು. ಹತ್ತು ದಿಕ್ಕುಗಳನ್ನೂ ಚಿಟಿಕೆ ಹಾಕುತ್ತಾ ನೋಡಬೇಕು. ಈ ಮುದ್ರೆಯು ಅಸ್ತ್ರಮುದ್ರೆಯೆನಿಸುತ್ತದೆ. ಇದು ದೇವತೆಗಳ ಮಧ್ಯದಲ್ಲಿಯೂ ಭಯದಾಯಕವಾಗಿದೆ."

ಮೇಲ್ಕಂಡ ಕ್ರಮದಿಂದ ಆರು ಮುದ್ರೆಗಳನ್ನು ತಿಳಿಯಬೇಕು. ಅಥವಾ ಹಿರಿಯರಿಂದ ಉಪದೇಶ ಮೂಲಕವಾಗಿ ತಿಳಿಯಬೇಕು.

## ನಾರಾಯಣಾಷ್ಟಾಕ್ಷರಧ್ಯಾನ

ಉದ್ಯದ್ಭಾಸ್ವತ್ಸಮಾಭಾಸಶ್ಚಿದಾನಂದೈಕದೇಹವಾನ್ |
ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ||
ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ |
ಬ್ರಹ್ಮವಾಯುಶಿವಾಹೀಶವಿಪೈಶ್ಶಕ್ರಾದಿಕೈರಪಿ ||
ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷಶಕ್ತಿಮಾನ್ |
ಮೂರ್ತಯೋಽಷ್ಟಾವಪಿ ಧ್ಯೇಯಾಶ್ಚಕ್ರಶಂಖವರಾಭಯೈಃ ||
ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿತಾಃ |
ಬಿಂಬೋಽಸಿ ಪ್ರತಿಬಿಂಬೋಽಸ್ಮಿ ತವ ಯದ್ಯಪಿ ಚಾಂತರಮ್ ||
ಸ್ವಾಮಿನ್ನಿರ್ದೋಷ ಮದ್ದೋಷಂ ವಿರೋಚಯ ನಮೋಽಸ್ತು ತೇ |

"ನಾರಾಯಣನೇ ತನ್ನನ್ನು ಧ್ಯಾನಿಸುವ ರೀತಿಯನ್ನು ತಿಳಿಸುತ್ತಿದ್ದಾನೆ. "ನಾನು ಉದಯಿಸುತ್ತಿರುವ ಸೂರ್ಯನಂತೆ ಎಳಕೆಂಪಾದ ರೂಪದಿಂದ ಯುಕ್ತನಾದವನು. ನನ್ನ ದೇಹವು ಜ್ಞಾನ ಆನಂದ ಮುಂತಾದ ಗುಣಗಳಿಂದ ಅಭಿನ್ನವಾದುದು. ಪ್ರಾಕೃತವಲ್ಲ. ನಾಲ್ಕು ಕೈಗಳನ್ನು ತೋರಿಸುತ್ತಿರುವೆನು. ಬಲಭಾಗದಲ್ಲಿರುವ ಮೇಲಿನ ಕೈಯಲ್ಲಿ ಚಕ್ರವನ್ನೂ ಎಡಭಾಗದಲ್ಲಿರುವ ಮೇಲಿನ ಕೈಯಲ್ಲಿ ಶಂಖವನ್ನೂ ಎಡಭಾಗದಲ್ಲಿರುವ ಕೆಳಗಿನ ಕೈಯಲ್ಲಿ ಗದೆಯನ್ನೂ ಬಲಭಾಗದಲ್ಲಿರುವ ಕೆಳಗಿನ ಕೈಯಲ್ಲಿ ಪದ್ಮವನ್ನೂ ಧರಿಸಿರುವೆನು. ನಾನೇ ಸರ್ವರಿಗೂ ಈಶ್ವರನೆನಿಸುವೆನು. ಲಕ್ಷ್ಮೀ ಭೂಮಿ ಎಂಬ ಎರಡು ರೂಪಗಳಿಂದ ಲಕ್ಷ್ಮೀದೇವಿಯು ನನ್ನನ್ನು ತಬ್ಬಿಕೊಂಡಿರುವಳು. ನಾನೇ ಅನಂತರೂಪಗಳನ್ನು ಸ್ವೀಕರಿಸಿ ನನ್ನ ಸುತ್ತಲೂ ನಿಂತು ಕೊಂಡು ನನ್ನನ್ನು ಸೇವಿಸುತ್ತಿರುವೆನು."

"ಇದು ಮಾತ್ರವಲ್ಲ. ನನ್ನ ಭಕ್ತಾಗ್ರೇಸರರಾದ ಬ್ರಹ್ಮ ವಾಯು ಶಿವ ಶೇಷ ಗರುಡ ದೇವೇಂದ್ರ ಮುಂತಾದ ದೇವತೆಗಳೂ ಸಹ ತುಂಬಾ ಭಕ್ತಿಯಿಂದ ನನ್ನನ್ನು ಸೇವಿಸುತ್ತಿರುವರು. ನನ್ನಲ್ಲಿರುವ ಎಲ್ಲಾ ಶಕ್ತಿಗಳೂ ಪೂರ್ಣವೂ ನಿತ್ಯವೂ ಆಗಿವೆ. ನಾರಾಯಣಾಷ್ಟಾಕ್ಷರ ಮಂತ್ರದಲ್ಲಿರುವ ಒಂದೊಂದು ಅಕ್ಷರಗಳಿಂದಲೂ ಪ್ರತಿಪಾದ್ಯವಾದ ಎಂಟು ರೂಪಗಳು ನನಗಿವೆ. ಆ ರೂಪಗಳೆಲ್ಲವೂ ಶಂಖ ಚಕ್ರ ಎಂಬ ಎರಡು ಆಯುಧಗಳಿಂದಲೂ ವರಮುದ್ರೆಯಿಂದಲೂ ಅಭಯಮುದ್ರೆಯಿಂದಲೂ ಯುಕ್ತವಾಗಿವೆ. ನನ್ನ ಈ ಎಂಟು ರೂಪಗಳು ದೀಪದಂತೆ ಪ್ರಕಾಶಿಸುತ್ತಿವೆ. ಸರ್ವಾಭರಣಗಳಿಂದಲೂ ಅಲಂಕೃತವಾಗಿವೆ. ನನ್ನನ್ನು ಧ್ಯಾನಿಸುವುದಕ್ಕಿಂತ ಪೂರ್ವದಲ್ಲಿ ನನ್ನನ್ನು ಮುಂದೆ ತಿಳಿಸುವ ರೀತಿಯಿಂದ ಪ್ರಾರ್ಥಿಸಬೇಕು. "ಮಹಾಸ್ವಾಮಿ, ನೀನು ನನಗೆ ಬಿಂಬರೂಪಿಯಾಗಿರುವಿ. ನಾನು ನಿನಗೆ ಪ್ರತಿಬಿಂಬನಾಗಿರುವೆನು. ನಿನಗೂ ನನಗೂ ಅನಂತಾಂಶಗಳಿಂದ ವ್ಯತ್ಯಾಸವು ಇರುತ್ತದೆ. ಬಿಂಬಪ್ರತಿಬಿಂಬಭಾವದಿಂದ ನನಗೂ ನಿನಗೂ ಸಾಮ್ಯ ಅಥವಾ ಪರಿಮಿತವಾದ ವ್ಯತ್ಯಾಸ ಎಂದು

ತಿಳಿಯಬಾರದು. ನೀನು ನಿರ್ದೋಷನು. ನನ್ನ ದೋಷವನ್ನು ಬಿಡಿಸು. ನಿನಗೆ ನಮಸ್ಕಾರವಿರಲಿ" ಹೀಗೆ ಹೇಳುತ್ತಾ ನಾರಾಯಣಾಷ್ಟಾಕ್ಷರಮಂತ್ರಗಳನ್ನು ಜಪಿಸಬೇಕು."

### ಜಪಕ್ರಮ

ತಮಕ್ಷಮಾಲಯಾ ಶುದ್ಧೋ ಜಪೇನ್ಮಂತ್ರಂ ಸಮಾಹಿತಃ |
ಅಷ್ಟೋತ್ತರಶತಂ ವಾರಮಷ್ಟಾವಿಂಶತಿಮೇವ ವಾ ||
ಅಷ್ಟೌ ವಾ ಮಂತ್ರವಿನ್ಮಂತ್ರಂ ಬೀಜಾದ್ಯಂ ಸಂಪುಟೀಕೃತಮ್ || (ಪಾದ್ಮತಂತ್ರ)

"ಜಪಸರವನ್ನು ಇಟ್ಟುಕೊಂಡು ಜಪವನ್ನು ಮಾಡಬೇಕು. ಶುದ್ಧನಾಗಿ ಮಂತ್ರಾರ್ಥವನ್ನು ತಿಳಿದು ಸಾವಧಾನವಾಗಿ ಮಾಡಬೇಕು. 108 ಸಲ ಅಥವಾ 28 ಸಲ ಅಥವಾ 8 ಸಲ ಜಪವನ್ನು ಮಾಡಬೇಕು. ಬೀಜಾಕ್ಷರವನ್ನು ಆರಂಭದಲ್ಲಿ ಹೇಳಿ ಮಂತ್ರವನ್ನು ಅನಂತರದಲ್ಲಿ ಹೇಳುತ್ತಾ ಜಪವನ್ನು ಮಾಡಬೇಕು."

### ಜಪಮಾಲೆಯನ್ನು ಪ್ರತಿಷ್ಠೆ ಮಾಡುವ ಕ್ರಮ

ಅಕ್ಷಮಾಲಾಪ್ರತಿಷ್ಠಾಂ ಚ ತದ್ಭೇದಶ್ಚ ಯಥಾತಥಮ್ |
ಜಪೇ ಫಲಂ ಚ ತತ್ಸರ್ವಮಧುನಾ ಕಥ್ಯತೇಽಬ್ಜಜ ||
ಸರ್ವಲೋಹೈಶ್ಚ ರತ್ನೈಶ್ಚ ಸ್ಫಟಿಕೈರ್ವಿವಿಧೈರಪಿ |
ಜಲಜೈಃ ಸ್ಥಲಜೈರ್ವಾಽಪಿ ಕಾರಯೇದಕ್ಷಮಾಲಿಕಾಮ್ || (ಪಾದ್ಮಸಂಹಿತೆ)

ಇದು ಶ್ರೀಹರಿಯು ಬ್ರಹ್ಮದೇವರನ್ನು ಕುರಿತು ಹೇಳುತ್ತಿರುವ ಮಾತು. "ಜಪಸರದ ಪ್ರತಿಷ್ಠೆಯ ಕ್ರಮವನ್ನೂ ಜಪಸರದ ಭೇದವನ್ನೂ ಜಪದಿಂದ ಬರುವ ಫಲವನ್ನೂ ಶಾಸ್ತ್ರೋಕ್ತವಿಧಿಯಿಂದ ಹೇಳುತ್ತೇನೆ. ಎಲ್ಲಾ ಲೋಹಗಳಿಂದ ಅಥವಾ ರತ್ನಗಳಿಂದ ಅಥವಾ ನಾನಾವಿಧವಾದ ಸ್ಫಟಿಕಮಣಿಗಳಿಂದ ಅಥವಾ ನೀರಿನಲ್ಲಿ ಹುಟ್ಟಿರುವ ಪದ್ಮಾಕ್ಷಮಣಿ ಮುಂತಾದ ಮಣಿಗಳಿಂದ ಅಥವಾ ಭೂಮಿಯಲ್ಲಿ ಹುಟ್ಟಿರುವ ತುಳಸೀಮಣಿ ಮುಂತಾದವುಗಳಿಂದ ಜಪಸರವನ್ನು ತಯಾರಿಸಬೇಕು."

ಅಕ್ಷಾಸ್ಥಿಮಾತ್ರಮಣಯಃ ಶ್ರೇಷ್ಠಾಃ ಸ್ಯುರ್ಜಪಕರ್ಮಣಿ |
ಧಾತ್ರೀ ಫಲಾಸ್ಥಿಮಾತ್ರಾಸ್ತು ಮಧ್ಯಮಾಃ ಕಮಲಾಸನ ||
ಬದರ್ಯಸ್ಥಿಪ್ರಮಾಣಾಸ್ತು ಕನಿಷ್ಠಾ ಮಣಯಃ ಸ್ಮೃತಾಃ | (ಪಾದ್ಮಸಂಹಿತೆ)

ಈ ಮಣಿಗಳ ಅಳತೆಯನ್ನು ಹೇಳುತ್ತಿದ್ದಾನೆ. "ಬೋರೆ ಹಣ್ಣಿನ ಬೀಜದಷ್ಟು ದೊಡ್ಡ ಮಣಿಯು ಜಪಕ್ಕೆ ಅಧಮವೆನಿಸುತ್ತದೆ. ನೆಲ್ಲಿಯ ಬೀಜದಷ್ಟು ದೊಡ್ಡ ಮಣಿಯು ಮಧ್ಯಮವೆನಿಸುತ್ತದೆ. ಅದಕ್ಕಿಂತ ಅಧಿಕವಾದ ಪ್ರಮಾಣವುಳ್ಳ ಮಣಿಯು ಉತ್ತಮವೆನಿಸುತ್ತದೆ."

ಸ್ವರ್ಗಾಪವರ್ಗದಂ ರತ್ನಂ ಸುವರ್ಣಂ ವಿಭವಪ್ರದಮ್ |
ರಜತಂ ಕೀರ್ತಿಧನದಂ ತಾಮ್ರಂ ಶಾಂತಿಕರಂ ಭವೇತ್ ||

ರತ್ನ ಮುಂತಾದ ಮಣಿಗಳಿಂದ ಬೇರೆ ಬೇರೆ ಫಲವನ್ನು ಹೇಳುತ್ತಾನೆ. "ರತ್ನದಿಂದ ನಿರ್ಮಿತವಾದ ಮಣಿಯು ಸ್ವರ್ಗ ಮತ್ತು ಮೋಕ್ಷವನ್ನು ಕೊಡುತ್ತದೆ. ಸುವರ್ಣದಿಂದ ನಿರ್ಮಿತವಾದ ಮಣಿಯು ನಾನಾವಿಧವಾದ ವೈಭವಗಳನ್ನು ಕೊಡುತ್ತದೆ. ಬೆಳ್ಳಿಯಿಂದ ನಿರ್ಮಿತವಾದ ಮಣಿಯು ಕೀರ್ತಿ ಮತ್ತು ಧನಗಳನ್ನು ಕೊಡುತ್ತದೆ. ತಾಮ್ರದಿಂದ ನಿರ್ಮಿತವಾದ ಮಣಿಯು ಶಾಂತಿಯನ್ನು ಕೊಡುತ್ತದೆ."

ತ್ರಪುಕೈರ್ಮಣಿಭಿರ್ಯಕ್ಷಾನಕ್ಷೈಶ್ಚಾಪಿ ವಶಂ ನಯೇತ್ |
ಸೀಸಾಕ್ಷಮಾಲಯಾ ರಕ್ಷೋ ವಶೀಕುರ್ಯಾಚ್ಚತುರ್ಮುಖ ||
ಪೀಡಯೇಚ್ಚ ತಥಾ ಶತ್ರೂನ್ ಕಾಂಸ್ಯೈಃ ಸರ್ವಾನ್ವಶಂ ನಯೇತ್ |
ಅಯಸ್ಯೈಶ್ಚಾಪಿ ಭೂತಾನಿ ಜಾಪಕಸ್ಯ ವಶಂ ನಯೇತ್ ||
ಸ್ಫಾಟಿಕಂ ಮೋಕ್ಷದಂ ಜಪ್ಯೈಃ ಸರ್ವದಾ ದ್ಯುಮಣೇರ್ಮಣಿಃ |

"ಎವರ್‌ಸಿಲ್ವರ್(ಅರಗು(?) ನಿಂದ ನಿರ್ಮಿತವಾದ ಮಣಿಯಿಂದ ಜಪಿಸುವವನು ಯಕ್ಷರನ್ನು ವಶೀಕರಿಸಿಕೊಳ್ಳುವನು. ಸೀಸದಿಂದ ನಿರ್ಮಿತವಾದ ಮಣಿಯಿಂದ ಜಪಿಸುವವನು ರಾಕ್ಷಸರನ್ನೂ, ಕಂಚಿನಿಂದ ನಿರ್ಮಿತವಾದ ಮಣಿಗಳಿಂದ ಜಪಿಸುವವನು ಶತ್ರುಗಳನ್ನೂ ಉಳಿದ ಸರ್ವರನ್ನೂ ವಶಪಡಿಸಿಕೊಳ್ಳುವನು. ಉಕ್ಕಿನಿಂದ ನಿರ್ಮಿತವಾದ ಮಣಿಯಿಂದ ಜಪಿಸುವವನು ಎಲ್ಲಾ ಭೂತಗಳನ್ನೂ ವಶಪಡಿಸಿಕೊಳ್ಳುವನು. ಸ್ಫಟಿಕಮಣಿಯಿಂದ ನಿರ್ಮಿತವಾದ ಮಣಿಯು ಮೋಕ್ಷಪ್ರದವಾಗುತ್ತದೆ. ಸೂರ್ಯಕಾಂತಮಣಿಯೂ ಅದೇ ಫಲವನ್ನು ಕೊಡುತ್ತದೆ."

ಐಂದ್ರೋ ಮಣಿಸ್ತಥೈವ ಸ್ಯಾದಕ್ಷಾಃ ಸ್ಯುಃ ಸ್ಥಲಜಾಃ ಪುನಃ |
ತ್ರಪುಜೋ ಪುತ್ರದೀಪಃ ಸ್ಯಾದಿಂದ್ರಾಕ್ಷಃ ಸರ್ವಕಾಮದಃ ||
ಬಿಭೀತಕಾನಿ ಚಾಕ್ಷಾಣಿ ರುದ್ರಾಕ್ಷಶ್ಚಾಭಿಚಾರಿತಮ್ |

"ಇಂದ್ರನೀಲಮಣಿ, ಭೂಮಿಯಲ್ಲಿ ಹುಟ್ಟಿರುವ ತುಳಸೀಮಣಿ ಮುಂತಾದ ಮಣಿಗಳು ಮೋಕ್ಷಪ್ರದವಾಗುತ್ತವೆ. ಎವರ್‌ಸಿಲ್ವರ್ ಮಣಿಯು ಪುತ್ರಪ್ರದವಾಗುತ್ತದೆ. ಇಂದ್ರನೀಲಮಣಿಯು ಸಕಲೇಷ್ಟಗಳನ್ನೂ ಕೊಡುತ್ತದೆ. ಬಿಭೀತಕ ಮರದಿಂದ ನಿರ್ಮಿತವಾದ ಮಣಿಯು ಅಭಿಚಾರದಿಂದ ಏರ್ಪಟ್ಟ ದೋಷಗಳನ್ನು ಪರಿಹರಿಸುತ್ತವೆ."

ಬ್ರಹ್ಮವರ್ಚಸಕಾಮಸ್ಯ ಕುಶಗ್ರಂಥಿಃ ಪ್ರಶಸ್ಯತೇ |
ರಾಜ್ಯಕಾಮಸ್ಯ ಪದ್ಮಾಕ್ಷೈರ್ಜಪ್ಯಃ ಸಿದ್ಧ್ಯತಿ ತದ್ಧ್ರುವಮ್ ||
ಸಿತಾಂಭೋಜಾಕ್ಷಮಾಲಾ ತು ಸೂತ್ರೇ ನಿಃಶ್ರೇಯಸಪ್ರದಾ |
ಭುಕ್ತಿಮುಕ್ತಿಪ್ರದಃ ಶಂಖೋ ಮುಕ್ತಾ ಮುಕ್ತಿಫಲಪ್ರದಾ ||
ಜಲಜೈರ್ಮಣಿಭಿರ್ಮಾಲಾ ಜಪ್ಯೈರಿಷ್ಟಫಲಪ್ರದಾ |

"ಬ್ರಹ್ಮವರ್ಚಸ್ಸು ವೃದ್ಧಿಯಾಗಬೇಕೆಂದು ಅಪೇಕ್ಷಿಸುವವನು ದರ್ಭೆಯಿಂದ ನಿರ್ಮಿತವಾದ ಗಂಟುಗಳಿಂದ ಜಪಿಸಬೇಕು. ರಾಜ್ಯವನ್ನು ಅಪೇಕ್ಷಿಸುವವನು ಪದ್ಮಾಕ್ಷಮಣಿಗಳಿಂದ ಜಪಿಸಬೇಕು. ಪಾರಲೌಕಿಕವಾದ ಶ್ರೇಯಸ್ಸುಗಳನ್ನು ಬಯಸುವವನು ಬಿಳಿಕಮಲದ ಮಣಿಗಳಿಂದ ಜಪಿಸಬೇಕು. ಐಹಿಕ ಸುಖವನ್ನೂ ಮುಕ್ತಿಯನ್ನೂ ಬಯಸುವವನು ಶಂಖಮಣಿಯಿಂದ ಜಪಿಸಬೇಕು. ಮುಕ್ತಿಯನ್ನು ಅಪೇಕ್ಷಿಸುವವನು ಮುತ್ತುಗಳಿಂದ ಜಪಿಸಬೇಕು. ಕಮಲಮಣಿಗಳಿಂದ ಜಪಿಸುವವನು ಇಷ್ಟಾರ್ಥಗಳನ್ನು ಪಡೆಯುವನು.

### ಜಪಸರವನ್ನು ರಚಿಸುವ ಕ್ರಮ

ಅಕ್ಷಾನ್ಯಥೋಕ್ತಾನ್ ಸಂಗೃಹ್ಯ ವಿವಿಧಾನ್ ದೋಷವರ್ಜಿತಾನ್ |
ಕ್ಷಾಲಿತಾನ್ ಪಂಚಭಿರ್ಗವ್ಯೈಃ ಪಂಚವೇದಾಂತವಿದ್ಯಯಾ ||
ಆರೋಪಯೇದ್ಧೇಮಸೂತ್ರೇ ದ್ವಿಗುಣೇತ್ರಿಗುಣೀಕೃತೇ |
ಸೂತ್ರೇ ವಾ ರಾಜತೇ ಕ್ಷೌಮೇ ಶಾಣಕೇಶಾದಿವರ್ಜಿತೇ ||

ಕಾರ್ಪಾಸೇ ವಾ ಯಥಾಲಾಭಂ ಕ್ಷಾಲಿತೇ ಪರಿಶೋಧಿತೇ |
ಪೃಷ್ಠೇನ ಪೃಷ್ಠಭಾಗೇನ ಮುಖಭಾಗೇ ಮುಖೇನ ಚ ||
ಪರಸ್ಪರೇಣ ಸಂಬದ್ಧಮಣಯಃ ಸದೃಶಾಃ ಶುಭಾಃ |
ಪ್ರೋತಾಃ ಸೂತ್ರೇಣ ವೈ ಕಲ್ಪ್ಯಾ ಮಾಲಿಕಾ ಪಟ್ಟಿಕಾಕೃತಿಃ ||
ಮಣಿಮಾನ್ಯಂ ನಿಬಧ್ನೀಯಾನ್ಮಾಲಾಗ್ರಂಥೌ ಮಹತ್ತರಮ್ |

"ಹಿಂದೆ ಹೇಳಿದ ಮಣಿಗಳಲ್ಲಿ ತನಗೆ ಬೇಕಾದ ಮಣಿಗಳನ್ನು ಸಂಗ್ರಹಿಸಬೇಕು. ಪಂಚಗವ್ಯದಿಂದ ಪಂಚಸೂಕ್ತಗಳನ್ನು ಪಠಿಸುತ್ತಾ ತೊಳೆಯಬೇಕು. ಬಂಗಾರದ ದಾರದಲ್ಲಿ ದ್ವಿಗುಣ ಅಥವಾ ತ್ರಿಗುಣವಾದ ಎಳೆಗಳಲ್ಲಿ ಪೋಣಿಸಬೇಕು. ಅಥವಾ ಬೆಳ್ಳಿಯ ದಾರ ಅಥವಾ ರೇಶ್ಮೆಯ ದಾರಗಳಲ್ಲಿ ಪೋಣಿಸಬೇಕು. ಗೋಣಿನಾರು ತಲೆಕೂದಲು ಮುಂತಾದ ಅಶುಚಿ ವಸ್ತುಗಳ ಸಂಬಂಧವಿರಬಾರದು. ಹತ್ತಿಯಿಂದ ನಿರ್ಮಿತವಾದ ದಾರದಲ್ಲಿಯೂ ಪೋಣಿಸಬಹುದು. ಮೇಲ್ಕಂಡ ವಸ್ತುಗಳ ಮಧ್ಯದಲ್ಲಿ ತನಗೆ ಸಿಕ್ಕಿದ ವಸ್ತುಗಳನ್ನು ತೊಳೆದು ಪರಿಶೋಧಿಸಿ ಪೋಣಿಸಬೇಕು. ಮಣಿಗಳಲ್ಲಿ ತುದಿಭಾಗವನ್ನು ಮುಂದೆಯೂ ಹಿಂದಿನ ಭಾಗವನ್ನು ಹಿಂದೆಯೂ ಪೋಣಿಸಬೇಕು. ಎಲ್ಲಾ ಮಣಿಗಳೂ ಆಕಾರದಲ್ಲಿ ಸಮವಾಗಿರಬೇಕು. ಒಂದರ ಹಿಂದೆ ಒಂದರಂತೆ ಒಂದು ಮಣಿಯನ್ನು ಇನ್ನೊಂದು ಮಣಿಯು ಮುಟ್ಟುತ್ತಿರುವಂತೆ ಪೋಣಿಸಬೇಕು. ಹಗ್ಗದಿಂದ ಪೋಣಿಸಲ್ಪಟ್ಟ ಮಾಲೆಯು ರೇಶ್ಮೆಪಟ್ಟೆಯಂತೆ ಮೃದುವಾಗಿಯೂ ಶುಭ್ರವಾಗಿಯೂ ಇರಬೇಕು. ಈ ಮಾಲೆಯ ಆರಂಭದಲ್ಲಿ ಒಂದು ಗ್ರಂಥಿಯನ್ನು ಏರ್ಪಡಿಸಬೇಕು. ಈ ಗ್ರಂಥಿಯಲ್ಲಿ ಒಂದು ಉತ್ತಮವಾದ ಮತ್ತು ದೊಡ್ಡದಾದ ಮಣಿಯನ್ನು ಜೋಡಿಸಬೇಕು."

### ಜಪಸರದ ಪ್ರತಿಷ್ಠಾಕ್ರಮ

ಪುಣ್ಯಾಹಂ ವಾಚಯಿತ್ವಾಂಽತೇ ಮಾಲಾಂ ಸ್ಥಾಪ್ಯಾಂಬುಜೇ ದಲೇ |
ವಿಲೇಪ್ಯ ಕುಂಕುಮಾದ್ಯೈಸ್ತಾಮಕ್ಷಮಾಲಾಂ ಚತುರ್ಮುಖ ||
ಶಾಲಿಭಾರಂ ಚ ನಿಕ್ಷಿಪ್ಯ ತಿಲತಂಡುಲಸಂಯುತಂ |
ಲಿಖಿತ್ವಾ ತತ್ರ ಚಕ್ರಾಬ್ಜಮಾಸ್ತೀರ್ಯ ಕುಶವಸ್ತ್ರಕಮ್ ||
ತತ್ರಾಕ್ಷಮಾಲಾಂ ವಿನ್ಯಸ್ಯ ಛಾದಯೇನ್ನವವಾಸಸಾ |
ನ್ಯಸೇಚ್ಚ ಕುಂಭಂ ತನ್ಮಂತ್ರೈರ್ಹೇಮವಸ್ತ್ರಾದಿಸಂಯುತಮ್ ||
ಹೋಮಮೇಕತ್ರ ಕುರ್ವೀತ ಕುಂಡೇ ವಾ ಸ್ಥಂಡಿಲೇಽಪಿ ವಾ |
ಸಮಿಚ್ಚರುಘೃತೇನಾಷ್ಟೌ ಶತಂ ಚ ಸ್ವಸ್ವವಿದ್ಯಯಾ ||
ಧ್ಯಾನೇನ ಶೋಷಣಾದೀನಿ ಕೃತ್ವಾ ಚೈವ ಯಥಾ ಪುರಾ |
ತನ್ಮಧ್ಯೇ ಪುರುಷಂ ಧ್ಯಾಯೇದ್ಬದ್ಧಾಂಜಲಿಮವಸ್ಥಿತಮ್ ||
ಚತುರ್ಭುಜಂ ಚ ರಕ್ತಾಭಂ ವರದಾಭಯಹಸ್ತಕಮ್ |
ಅಕ್ಷಮಾಲಾಂ ಚ ಬಿಭ್ರಾಣಂ ಧ್ಯಾತ್ವಾ ದೇವಂ ಜನಾರ್ದನಮ್ ||
ಇಷ್ಟ್ವಾ ಚ ಯಜಮಾನಸ್ಯ ಹಸ್ತೇ ದದ್ಯಾದ್ಗುರುಃ ಸ್ವಯಮ್ |
ಪ್ರಣಾಮಪ್ರತಿಗೃಹ್ಣೀಯಾಚ್ಛಿರಸಾ ತಾಂ ಸಮಾಹಿತಃ ||
ವಂದ್ಯಾಮಥ ನಮಸ್ಕೃತ್ಯ ದದ್ಯಾಚ್ಚ ಗುರುದಕ್ಷಿಣಾಮ್ |
ಜಪಿತ್ವಾ ಕ್ಷೇಪಿತಾ ಯಾ ಚ ತಯಾ ಚೈವಾಕ್ಷಮಾಲಯಾ ||
ಜಪಂ ಕುರ್ಯಾನ್ನರೋ ಮೋಕ್ಷಂ ಕುರ್ವನ್ನೇವಾಪ್ನುತೇ ಫಲಮ್ || (ಪಾದ್ಮತಂತ್ರ)

"ಮೊದಲು ಪುಣ್ಯಾಹವಾಚನವನ್ನು ಬ್ರಾಹ್ಮಣರಿಂದ ಮಾಡಿಸಬೇಕು. ಭೂಮಿಯನ್ನು ಗೋಮಯದಿಂದ ಶುದ್ಧ ಮಾಡಿಕೊಳ್ಳಬೇಕು. ಅದರ ಮೇಲೆ ಚಕ್ರಾಬ್ಜವನ್ನು ಬರೆಯಬೇಕು. ಅದರ ಮೇಲೆ ನೆಲ್ಲಿನ ರಾಶಿಯನ್ನು ಹಾಕಬೇಕು. ಅದರ ಮೇಲೆ ಅಕ್ಕಿಯನ್ನೂ ಎಳ್ಳನ್ನೂ ರಾಶಿಯಾಗಿ ಹಾಕಬೇಕು. ಅದರ ಮೇಲೆ ದರ್ಭೆಯನ್ನೂ ಹೊಸ ವಸ್ತ್ರವನ್ನೂ ಹರವಬೇಕು. ಅದರ ಮೇಲೆ ಕಲಶವನ್ನು ಇಡಬೇಕು. ಅದರ ಮೇಲೆ ಕುಂಕುಮ ಮುಂತಾದ ಮಂಗಲವಸ್ತುಗಳನ್ನು ಹಚ್ಚಿ ಜಪಸರವನ್ನು ಇಡಬೇಕು. ಅದರ ಮೇಲೆ ಹೊಸ ವಸ್ತ್ರವನ್ನು ಮುಚ್ಚಬೇಕು. ಕಲಶದ ಮೇಲೆಯೂ ವಸ್ತ್ರ ಸುವರ್ಣ ಮುಂತಾದವುಗಳನ್ನು ಇಡಬೇಕು. ಕಲಶಪೂಜಾಮಂತ್ರಗಳಿಂದ ಪೂಜೆಯನ್ನು ಮಾಡಬೇಕು. ಅಲ್ಲೇ ಕಲಶದ ಮುಂದೆ ಶಾಸ್ತ್ರೋಕ್ತವಿಧಿಯಿಂದ ಕುಂಡವನ್ನು ತಯಾರಿಸಬೇಕು. ಆ ಕುಂಡದಲ್ಲಿ ಹೋಮವನ್ನು ಮಾಡಬೇಕು. ಕುಂಡವನ್ನು ನಿರ್ಮಿಸಲು ಸಾಧ್ಯವಿಲ್ಲದಿದ್ದರೆ ನೆಲದಲ್ಲಾದರೂ ಹೋಮವನ್ನು ಮಾಡಬೇಕು. ಸಮಿತ್ ಅನ್ನ ತುಪ್ಪಗಳಿಂದ ಜಪಸರವು ಯಾವ ದೇವತೆಯ ಮಂತ್ರವನ್ನು ಜಪಿಸುವುದಕ್ಕಾಗಿ ಮಾಡಲ್ಪಟ್ಟಿದೆಯೋ ಆ ದೇವತೆಯ ಮಂತ್ರದಿಂದ 108 ಸಲ ಹೋಮವನ್ನು ಮಾಡಬೇಕು.

ಪಾಪಪುರುಷನ ಧ್ಯಾನ, ಶೋಷಣ, ದಹನ, ಪಾಪಪುರುಷಭಸ್ಮನಿಸ್ಸಾರಣ ಮುಂತಾದವುಗಳನ್ನು ಮಾಡಿ ದೇಹವನ್ನು ಶುದ್ಧವಾಗುವಂತೆ ಮಾಡಿಕೊಳ್ಳಬೇಕು. ಪರಿಶುದ್ಧವಾದ ಹೃದಯಕಮಲದಲ್ಲಿ ಮಣಿಸರದ ಅಭಿಮಾನಿದೇವತೆಯನ್ನು ಸ್ಮರಿಸಬೇಕು. ಅವನಲ್ಲಿ ಅಂತರ್ಗತನಾದ ನಾಲ್ಕು ಕೈಗಳಿಂದಲೂ ಕೆಂಪು ಬಣ್ಣದಿಂದಲೂ ಯುಕ್ತನಾಗಿರುವ ಪರಮಪುರುಷನನ್ನು ಧ್ಯಾನ ಮಾಡಬೇಕು. ಒಂದು ಕೈಯಲ್ಲಿ ಅಭಯಮುದ್ರೆಯನ್ನೂ ಇನ್ನೊಂದು ಕೈಯಲ್ಲಿ ವರಮುದ್ರೆಯನ್ನೂ ಧರಿಸುತ್ತಾ ಮೂರನೆಯ ಕೈಯಿಂದ ಜಪಸರವನ್ನು ಧರಿಸುತ್ತಿರುವ ಶ್ರೀಹರಿಯನ್ನು ಸ್ಮರಿಸಬೇಕು. ಹೀಗೆ ಸ್ಮರಿಸುತ್ತಾ ಪೂರ್ಣಾಹುತಿಯನ್ನು ಕೊಟ್ಟು ಮೇಲೆ ಆ ಜಪಸರವನ್ನು ಗುರುವು ಶಿಷ್ಯನಿಗೆ ಕೊಡಬೇಕು. ಶಿಷ್ಯನು "ಓಂ" ಎಂದು ಪ್ರಣವಮಂತ್ರವನ್ನು ಹೇಳುತ್ತಾ ಸ್ವೀಕರಿಸಬೇಕು. ಆ ಮಾಲೆಯನ್ನು ಭಕ್ತಿಯಿಂದ ನಮಸ್ಕರಿಸಬೇಕು. ಯಥಾಶಕ್ತಿ ಗುರುದಕ್ಷಿಣೆಯನ್ನು ಕೊಟ್ಟು ಗುರುಗಳನ್ನು ತೃಪ್ತಿಪಡಿಸಬೇಕು. ಆ ಮೇಲೆ ಆ ಜಪಸರವನ್ನು ಹಿಡಿದುಕೊಂಡು ಜಪಿಸಲು ಆರಂಭಿಸಬೇಕು. ಹೀಗೆ ಜಪಸರವನ್ನು ಪ್ರತಿಷ್ಠೆ ಮಾಡಿ ಜಪಿಸುವವನು ಮೋಕ್ಷವನ್ನು ಪಡೆಯುವನು."

### ಜಪಸರದಲ್ಲಿ ಮಣಿಸಂಖ್ಯೆ ಮತ್ತು ಫಲ

ತ್ರಿಂಶದಕ್ಷೈಃ ಕೃತಾ ಮಾಲಾ ಧನದಾ ಜಪಕರ್ಮಣಿ |
ಅಷ್ಟಾವಿಂಶತಿಸಂಖ್ಯಾಕೈರಕ್ಷೈಃ ಪುಷ್ಟಿಪ್ರದಾ ಭವೇತ್ ||
ಪಂಚವಿಂಶತಿಸಂಖ್ಯಾಕೈಃ ಕೃತಾ ಮುಕ್ತಿಂ ಪ್ರಯಚ್ಛತಿ |
ಅಕ್ಷೈಸ್ತು ಪಂಚದಶಭಿರಾಭಿಚಾರಫಲಪ್ರದಾ ||
ಪಂಚಾಶದ್ಭಿಃ ಕಾಮ್ಯಕರ್ಮಸಿದ್ಧಿಃ ಸ್ಯಾಚ್ಚತುರುತ್ತರೈಃ |
ಅಷ್ಟೋತ್ತರಶತೈಃ ಸರ್ವಸಿದ್ಧಿರಕ್ಷೈಃ ಕೃತಸ್ರಜಾ ||
ಶಂಖಾಕ್ಷಮಣಯಃ ಸೌಖ್ಯಂ ಸ್ಫಾಟಿಕಾ ಮೋಕ್ಷದಾಃ ಫಲೇ |
ಪದ್ಮಾಕ್ಷಾಃ ಪುಷ್ಟಿಲಕ್ಷ್ಮ್ಯೈ ಚ ರುದ್ರಾಕ್ಷಾ ಮುಕ್ತಿದಾಃ ಫಲೇ ||
ಪುತ್ರಜೀವಭವಾಃ ಪುತ್ರಪಶುಧಾನ್ಯಸಮೃದ್ಧಿದಾಃ |
ವಿದ್ರುಮಾ ಧನದಾ ಚ ಸ್ಯಾತ್ಸೌಭಾಗ್ಯಾರ್ಥಾ ಚ ಮೌಕ್ತಿಕಾ ||
ಪಾಪಕ್ಷಯಾ ಕುಶಗ್ರಂಥಿಃ ಕಾಮದಾ ಸ್ವರ್ಣರೂಪ್ಯಕಾ |
ಪ್ರವಾಳಮುಕ್ತಾಸ್ಫಟಿಕೈರ್ಜಪ್ಯಃ ಕೋಟಿಫಲಪ್ರದಾ ||
ತುಳಸೀಮಣಿನಾ ಯೇನ ಗ್ರಥಿತಂ ಚಾಕ್ಷಯಂ ಫಲಮ್ | (ವಸಿಷ್ಠವಿಶ್ವಾಮಿತ್ರಸಂವಾದ)

"ಮೂವತ್ತು ಮಣಿಗಳಿಂದ ರಚಿತವಾದ ಮಾಲೆಯಿಂದ ಜಪಿಸಿದರೆ ಸಂಪತ್ತು ಲಭಿಸುತ್ತದೆ. ಇಪ್ಪತ್ತೆಂಟು ಮಣಿಗಳಿಂದ ರಚಿತವಾದ ಮಾಲೆಯು ಪುಷ್ಟಿಯನ್ನೂ, ಇಪ್ಪತ್ತೈದು ಮಣಿಗಳಿಂದ ರಚಿತವಾದ ಮಾಲೆಯು ಮುಕ್ತಿಯನ್ನೂ ಕೊಡುತ್ತದೆ. ಹದಿನೈದು ಮಣಿಗಳಿಂದ ರಚಿತವಾದ ಮಾಲೆಯು ಅಭಿಚಾರಕಾರ್ಯದಲ್ಲಿ ಉಪಯೋಗಿಸಲ್ಪಟ್ಟರೆ ಆ ಅಭಿಚಾರಕಾರ್ಯವು ಸಫಲವಾಗುತ್ತದೆ. ಐವತ್ತನಾಲ್ಕು ಮಣಿಗಳಿಂದ ರಚಿತವಾದ ಮಾಲೆಯು ಕಾಮ್ಯಕರ್ಮಗಳಲ್ಲಿ ಸಿದ್ಧಿಯನ್ನು ಕೊಡುತ್ತದೆ. ಒಂದುನೂರಎಂಟು ಮಣಿಗಳಿಂದ ನಿರ್ಮಿತವಾದ ಮಾಲೆಯು ಸರ್ವಕಾರ್ಯಗಳಲ್ಲಿಯೂ ಸಿದ್ಧಿಯನ್ನು ಕೊಡುತ್ತದೆ. ಹೀಗೆ ಮಣಿಗಳ ಸಂಖ್ಯೆಯಿಂದ ಫಲವನ್ನು ಹೇಳಿದೆವು. ಇನ್ನು ಮಣಿಗಳು ರಚಿಸಲ್ಪಟ್ಟ ವಸ್ತುಗಳಿಂದ ಫಲವನ್ನು ಹೇಳುತ್ತೇನೆ.

ಶಂಖದಿಂದ ನಿರ್ಮಿತವಾದ ಮಣಿಗಳು ಸೌಖ್ಯಪ್ರದವಾಗುತ್ತವೆ. ಸ್ಫಟಿಕದಿಂದ ನಿರ್ಮಿತವಾದ ಮಣಿಗಳು ಮೋಕ್ಷವನ್ನೂ ಪದ್ಮಬೀಜಗಳಿಂದ ನಿರ್ಮಿತವಾದ ಮಣಿಗಳು ಪುಷ್ಟಿ ಮತ್ತು ಸಂಪತ್ತುಗಳನ್ನೂ ರುದ್ರಾಕ್ಷಮಣಿಗಳು ಮುಕ್ತಿಯನ್ನೂ ಪುತ್ರಜೀವಬೀಜದಿಂದ ನಿರ್ಮಿತವಾದ ಮಣಿಗಳು ಪುತ್ರಪಶುಧಾನ್ಯಗಳ ಸಮೃದ್ಧಿಯನ್ನೂ, ಹವಳದಿಂದ ನಿರ್ಮಿತವಾದ ಮಣಿಗಳು ಧನವನ್ನೂ ಮುತ್ತಿನಿಂದ ನಿರ್ಮಿತವಾದ ಮಣಿಗಳು ಸೌಭಾಗ್ಯವನ್ನೂ, ದರ್ಭೆಯ ಗಂಟಿನಿಂದ ನಿರ್ಮಿತವಾದ ಮಾಲೆಯು ಪಾಪಪರಿಹಾರವನ್ನೂ, ಬಂಗಾರ ಅಥವಾ ಬೆಳ್ಳಿಗಳಿಂದ ನಿರ್ಮಿತವಾದ ಮಣಿಗಳು ಸಕಲಾಭೀಷ್ಟಗಳನ್ನೂ, ಹವಳ ಮುತ್ತು ಸ್ಫಟಿಕ ಮುಂತಾದ ಅನೇಕ ರತ್ನಗಳಿಂದ ರಚಿತವಾದ ಮಾಲೆಗಳು ಒಂದು ಜಪಕ್ಕೆ ಕೋಟಿಜಪದಷ್ಟು ಫಲವನ್ನೂ ತುಳಸೀಮಣಿಗಳಿಂದ ರಚಿತವಾದ ಮಾಲೆಯು ಅಕ್ಷಯಫಲವನ್ನೂ ಕೊಡುತ್ತವೆ."

### ಮಾಲೆಗಳ ಲಕ್ಷಣ

ಗೋಪುರಾವಯವಾಕಾರಮಕ್ಷಮಾಲಾಂ ವಿಧಾಯ ಚ |
ಮೇರ್ವಾಖ್ಯಂ ಯೋಜಯೇದಕ್ಷಮೇಕಂ ಮೂಲಾಗ್ರಸೂತ್ರಕೇ ||
ಗ್ರಂಥಿಂ ಕುರ್ಯಾತ್ತದಗ್ರೇಣ ಕೀರ್ತಿದಾ ಚಾಕ್ಷಮಾಲಿಕಾ |
ಅಕ್ಷಮಾಲಾಂ ತತಃ ಶುದ್ಧಾಂ ಪೂಜಿತಾಂ ಹೃದಯಾಲುನಾ ||

"ಗೋಪುರದಂತೆ ವರ್ತುಲಾಕಾರವಾಗಿಯೂ ಸಮವಾದ ಆಕಾರದಿಂದ ಯುಕ್ತವಾಗಿಯೂ ಇರುವ ಮಣಿಗಳಿಂದ ಜಪಸರವನ್ನು ನಿರ್ಮಿಸಬೇಕು. ಈ ಜಪಸರದ ಎರಡು ಕೊನೆಗಳಲ್ಲಿ ಎರಡು ಗಂಟುಗಳನ್ನು ಮಾಡಬೇಕು. ಆ ಎರಡು ಗಂಟುಗಳನ್ನು ಒಂದು ದೊಡ್ಡ ಮಣಿಯಿಂದ ಒಟ್ಟುಗೂಡಿಸಬೇಕು. ಇದು ಜಪಸರದ ಲಕ್ಷಣ. ಈ ಜಪಸರವು ಕೀರ್ತಿಪ್ರದವಾಗುತ್ತದೆ. ಈ ಜಪಸರವನ್ನು ಭಕ್ತಿಯಿಂದ ಪೂಜಿಸಿ ಶುದ್ಧವಾದ ಈ ಜಪಸರದಿಂದ ಜಪಿಸಬೇಕು."

### ಜಪಮಾಲೆಯು ದೋಷದುಷ್ಟವಾದರೆ ಅದನ್ನು ತ್ಯಜಿಸಬೇಕು

ಶ್ಲೇಷ್ಮರಕ್ತಸುರಾಮಾಂಸವಿಣ್ಮೂತ್ರೋಚ್ಛಿಷ್ಟಕೀಟಕೈಃ |
ಕಪಾಲನಖಕೇಶೈಶ್ಚ ಪತಿತೈರಂತ್ಯಜೈರಪಿ ||
ಉದಕ್ಯಾ ವ್ಯಾಲವಿಟ್ಕ್ರೋಡಖರಪಾದಾಯುಧೈಃ ಶ್ವಭಿಃ |
ಕಾಪಾರಂಡಕಶಿಲ್ಪಜ್ಞದೇವಾಜೀವ್ಯೈರ್ಮಲಾದಿಭಿಃ ||
ಜಪಮಾಲಾ ಯದಿ ಸ್ಪೃಷ್ಟಾ ತಾಂ ತದೈವ ಪರಿತ್ಯಜೇತ್ |
ಅವಿಜ್ಞಾ ಪೂರ್ವಗಣಿಕಾ ಪುಂಶ್ಚಲೀ ಸೂತಿಕಾಽಶುಚೀ ||
ಯಾಪ್ತಾಭಿರಭಿಸಂಸ್ಪೃಷ್ಟಾಂ ತ್ಯಜೇದಕ್ಷಸ್ರಜಂ ಬುಧಃ | (ಗೌತಮರ ವಚನ)

"ಕಫ ರಕ್ತ ಹೆಂಡ ಮಾಂಸ ಮಲ ಮೂತ್ರ ಎಂಜಲು ಹುಳಗಳು ಎಲುಬು ಉಗುರು ತಲೆಗೂದಲು ಇವುಗಳ ಸ್ಪರ್ಶದಿಂದ ಯುಕ್ತವಾದ ಜಪಸರವನ್ನು ಬಿಡಬೇಕು. ಪಾತಿತ್ಯಕ್ಕೆ ಕಾರಣವಾಗಿರುವ ಪಾಪಕಾರ್ಯಗಳನ್ನು ಮಾಡಿದವರು, ಚಂಡಾಲರು, ರಜಸ್ವಲೆಯರು, ಹಾವು ಮುಂತಾದ ಕ್ರೂರಪ್ರಾಣಿಗಳು, ಹೇಲುಹಂದಿ, ಕತ್ತೆ, ಕೋಳಿ, ನಾಯಿ, ಶಿಲ್ಪಿಗಳು, ಸಕೇಶಿಯರಾದ ವಿಧವೆಯರು, ದೇವರ ಪೂಜೆಯನ್ನು ಹಣಕ್ಕಾಗಿ ಮಾಡುತ್ತಿರುವವರು ಮತ್ತು ಅಪರಿಶುದ್ಧವಾದ ಇತರ ವಸ್ತುಗಳ ಸ್ಪರ್ಶವು ಏರ್ಪಟ್ಟರೂ ಜಪಸರವನ್ನು ಬಿಡಬೇಕು. ಹಿಂದೆ ಯಾವಾಗಲೂ ನೋಡದಿರುವ ಮತ್ತು ಕೇಳದಿರುವ ಸ್ತ್ರೀ, ಸೂಳೆ, ಸೂಳೆಯರ ವೃತ್ತಿಯನ್ನು ಬಿಟ್ಟವಳು, ವ್ಯಭಿಚಾರಿಣೀ, ಪ್ರಸವಾಶೌಚವುಳ್ಳವಳು, ಮೈಲಿಗೆಯಾದವಳು ಇವರಿಂದ ಮುಟ್ಟಲ್ಪಟ್ಟ ಜಪಸರವನ್ನು ಬಿಡಬೇಕು."

### ದೋಷದುಷ್ಟವಾದ ಮಾಲೆಯನ್ನು ಬಿಡುವ ಕ್ರಮ

ದೋಷದುಷ್ಟಾಕ್ಷಮಾಲಾಂ ತಾಂ ಮಹಾನದ್ಯಾಂ ಹ್ರದೇಽಥವಾ |
ಪುಣ್ಯತೀರ್ಥೇಽಥವಾ ವಿಪ್ರೋ ಮಂತ್ರೇಣೈವಂ ಪ್ರತಿಕ್ಷಿಪೇತ್ ||

"ಹಿಂದೆ ಹೇಳಿರುವ ದೋಷಗಳಿಂದ ದುಷ್ಟವಾಗಿರುವ ಜಪಸರವನ್ನು ಮಹಾನದಿಯಲ್ಲಾಗಲೀ ಮಡುವಿನಲ್ಲಾಗಲೀ ಪುಣ್ಯತೀರ್ಥದಲ್ಲಾಗಲೀ "ಸಮುದ್ರಂ ಗಚ್ಛ ಸ್ವಾಹಾ" ಎಂಬ ಮಂತ್ರವನ್ನು ಹೇಳುತ್ತಾ ಬಿಡಬೇಕು."

### ಅಷ್ಟಮಹಾಮಂತ್ರಗಳು

ಪ್ರಾತಸಂಧ್ಯಾಮುಪಾಸ್ಯೈವಮಾಸನೇ ಸುಸಮಾಹಿತಃ |
ತತ ಅಷ್ಟಾಕ್ಷರಂ ಮಂತ್ರಂ ಗಾಯತ್ರ್ಯಾಸ್ತ್ರಿಗುಣಂ ಜಪೇತ್ ||
ಗಾಯತ್ರ್ಯಾ ದ್ವಿಗುಣಂ ವಾಸುದೇವಮಂತ್ರಂ ಜಪೇದ್ಬುಧಃ |
ವಾಸುದೇವಾದಿಕಾನಷ್ಟಮಹಾಮಂತ್ರಾನ್ ಜಪೇತ್ತತಃ || (ಸಂಗ್ರಹ ವಚನ)

"ಪ್ರಾತಃಕಾಲದಲ್ಲಿ ಮಾಡಬೇಕಾದ ಸಂಧ್ಯಾವಂದನವನ್ನು ಮುಗಿಸಬೇಕು. ಆಸನದಲ್ಲಿ ಸಾವಧಾನಮನಸ್ಸಿನಿಂದ ಕುಳಿತುಕೊಳ್ಳಬೇಕು. ಗಾಯತ್ರೀಮಂತ್ರವನ್ನು ಎಷ್ಟು ಸಲ ಜಪಿಸಿರುತ್ತಾನೋ ಆ ಸಂಖ್ಯೆಗೆ ತ್ರಿಗುಣವಾದಸಂಖ್ಯೆಯಷ್ಟು ನಾರಾಯಣಾಷ್ಟಾಕ್ಷರ ಮಹಾಮಂತ್ರವನ್ನೂ, ದ್ವಿಗುಣವಾದ ಸಂಖ್ಯೆಯಷ್ಟು ವಾಸುದೇವದ್ವಾದಶಾಕ್ಷರ ಮಹಾಮಂತ್ರವನ್ನೂ ಜಪಿಸಬೇಕು. ಹೀಗೆ ವಾಸುದೇವದ್ವಾದಶಾಕ್ಷರ ಮುಂತಾದ ಅಷ್ಟ ಮಹಾಮಂತ್ರಗಳನ್ನು ಜಪಿಸಬೇಕು."

ತಾರೋಽಷ್ಟವರ್ಣೋ ದ್ವಿಷಡಕ್ಷರೋಽನ್ಯಃ ಷಡಕ್ಷರೋ ವ್ಯಾಹೃತಯಃ ಕ್ರಮೇಣ |
ಪಂಚಾಶದ್ವರ್ಣಾಃ ಸವಿತುಶ್ಚ ಪತ್ನೀ ಪುಂಸೂಕ್ತಮಿತ್ಯೇವ ಹಿ ಮೂಲಮಂತ್ರಾಃ ||
ಏತೇ ಹ್ಯಷ್ಟಮಹಾಮಂತ್ರಾ ಜ್ಞಾನಮೋಕ್ಷಫಲಪ್ರದಾಃ |
ಅನ್ಯೇ ಚ ಕಾಮದಾ ಮಂತ್ರಾಃ ಕೃಷ್ಣಮಂತ್ರಾದಿಕಾಸ್ತಥಾ ||
ನ್ಯಾಸಧ್ಯಾನಸಮಾಯುಕ್ತಾಃ ಸಋಷಿಛಂದದೇವತಾಃ |
ವಿಷ್ಣುಧ್ಯಾನಸಮಾಯುಕ್ತಾ ಜಪ್ಯಾಸ್ತಾಃ ಸರ್ವಸಿದ್ಧಯೇ ||
ಏತೇಷಾಂ ಮಂತ್ರರತ್ನಾನಾಂ ಶ್ರುತಿಸ್ಮೃತ್ಯಾದಿಕೇಷ್ವಪಿ |
ಮಹಿಮಾ ವರ್ಣಿತಃ ಸಮ್ಯಕ್ಪುರಾಣೇಷ್ವಪಿ ಸರ್ವಶಃ ||
ತಸ್ಮಾತ್ಸರ್ವಪ್ರಯತ್ನೇನ ನಿತ್ಯಂ ಜಪ್ಯಾದಿಮಾನ್ ಮನೂನ್ |
ಅಷ್ಟೋತ್ತರಸಹಸ್ರಂ ತು ಹ್ಯಷ್ಟೋತ್ತರಶತಂ ತು ವಾ ||

"(1) ಪ್ರಣವಮಂತ್ರ (2) ನಾರಾಯಣಾಷ್ಟಾಕ್ಷರಮಂತ್ರ (3) ವಾಸುದೇವ ದ್ವಾದಶಾಕ್ಷರಮಂತ್ರ (4) ವಿಷ್ಣುಷಡಕ್ಷರ ಮಂತ್ರ (5) ವ್ಯಾಹೃತಿಮಂತ್ರ (6) ಮಾತೃಕಾಮಾಲಾಮಂತ್ರ (7) ಗಾಯತ್ರೀಮಂತ್ರ (8) ಪುರುಷಸೂಕ್ತಮಂತ್ರ. ಹೀಗೆ ಎಂಟು ಮಹಾಮಂತ್ರಗಳೆನಿಸುತ್ತವೆ. ಇವುಗಳನ್ನು ಈಗ ಹೇಳಿದ ಕ್ರಮದಿಂದ ಜಪಿಸಬೇಕು. ಈ ಎಂಟು ಮಹಾಮಂತ್ರಗಳು ಅಪರೋಕ್ಷಜ್ಞಾನರೂಪವಾದ ಅಪ್ರಧಾನಫಲವನ್ನೂ ಮೋಕ್ಷರೂಪವಾದ ಮಹಾಫಲವನ್ನೂ ಕೊಡುತ್ತವೆ. ಇವುಗಳನ್ನು ಬಿಟ್ಟು ಉಳಿದ ಕೃಷ್ಣಮಂತ್ರ ಮುಂತಾದ ಮಂತ್ರಗಳು ಇವುಗಳಂತೆಯೇ ಜ್ಞಾನರೂಪವಾದ ಫಲವನ್ನೂ ಮೋಕ್ಷರೂಪವಾದ ಫಲವನ್ನೂ ಕೊಡುವುದು ಮಾತ್ರವಲ್ಲದೆ ಅವರವರು ಅಪೇಕ್ಷಿಸಿದ ಐಹಿಕ ಮತ್ತು ಪಾರತ್ರಿಕವಾದ ಫಲಗಳನ್ನೂ ಕೊಡುತ್ತವೆ. ಈ ಎಲ್ಲಾ ಮಂತ್ರಗಳಿಗೂ ಅಂಗನ್ಯಾಸ ಕರನ್ಯಾಸ ಮುಂತಾದ ನ್ಯಾಸಗಳೂ ಧ್ಯಾನಶ್ಲೋಕಗಳೂ ಋಷಿಗಳೂ ಛಂದಸ್ಸುಗಳೂ ದೇವತೆಗಳೂ ಬೇರೆ ಬೇರೆಯಾಗಿವೆ. ಅವುಗಳನ್ನೆಲ್ಲವನ್ನೂ ಮಂತ್ರಜಪಕ್ಕಿಂತ ಹಿಂದೆಯೂ ಮುಂದೆಯೂ ಹೇಳಿಕೊಳ್ಳಬೇಕು. ಮತ್ತು ಮಾಡಿಕೊಳ್ಳಬೇಕು. ವಿಷ್ಣುವಿಗೆ ಸಂಬಂಧಿಸಿದ ಮಂತ್ರಗಳಲ್ಲಿ ವಿಷ್ಣುವನ್ನು ಧ್ಯಾನಿಸಬೇಕು. ಇತರ ದೇವತೆಗಳಿಗೆ ಸಂಬಂಧಿಸಿದ ಮಂತ್ರಗಳಲ್ಲಿ ಆಯಾಯಾ ದೇವತೆಗಳ ಅಂತರ್ಯಾಮಿಯಾಗಿರುವ ಶ್ರೀಹರಿಯನ್ನು ಧ್ಯಾನಿಸಬೇಕು. ಯಾವ ಮಂತ್ರವಾಗಲೀ ವಿಷ್ಣುಧ್ಯಾನವಿಲ್ಲದ ಮಂತ್ರವಿಲ್ಲ. ಈ ಎಲ್ಲಾ ಮಂತ್ರರತ್ನಗಳ ಮಹಿಮೆಗಳು ವೇದಗಳಲ್ಲಿಯೂ ಮನುಸ್ಮೃತಿ ಮುಂತಾದ ಸ್ಮೃತಿ ಗ್ರಂಥಗಳಲ್ಲಿಯೂ ಪುರಾಣ ಮುಂತಾದ ಪ್ರಮಾಣಗ್ರಂಥಗಳಲ್ಲಿಯೂ ಚೆನ್ನಾಗಿ ಹೇಳಲ್ಪಟ್ಟಿವೆ. ಆದ್ದರಿಂದ ಸರ್ವವಿಧವಾದ ಪ್ರಯತ್ನಗಳನ್ನು ಮಾಡಿಯಾದರೂ ಪ್ರತಿದಿನದಲ್ಲಿಯೂ ಈ ಮಂತ್ರಗಳನ್ನು ಒಂದು ಸಾವಿರದ ಎಂಟು ಸಲವಾದರೂ ಒಂದುನೂರಎಂಟು ಸಲವಾದರೂ ಜಪಿಸಲೇಬೇಕು."

## ಅಭ್ಯುಕ್ಷಣ

ತತಃ ಸೂರ್ಯಮುಪಸ್ಥಾಯ ಸಮ್ಯಗಾಚಮ್ಯ ಚ ಸ್ವಯಮ್ ।
ಅಭ್ಯುಕ್ಷಣಂ ಸಮಾದಾಯ ಸಂಯತಾತ್ಮಾ ಗೃಹಂ ವ್ರಜೇತ್ ॥

"ಪ್ರೋಕ್ಷಣಕ್ಕಾಗಿ ಉಪಯೋಗಿಸುವ ನೀರು ಅಭ್ಯುಕ್ಷಣವೆನಿಸುತ್ತದೆ. ಹಿಂದೆ ಹೇಳಿದ ವಿಧಿಯಿಂದ ಸೂರ್ಯೋಪಸ್ಥಾನವನ್ನು ಮಾಡಬೇಕು. ಸೂರ್ಯೋಪಸ್ಥಾನವು ಮುಗಿದ ಕೂಡಲೇ ತಾನು ಚೆನ್ನಾಗಿ ಆಚಮನವನ್ನು ಮಾಡಬೇಕು. ಅಭ್ಯುಕ್ಷಣಜಲವನ್ನು ಕಮಂಡಲು ಮುಂತಾದ ಪಾತ್ರೆಗಳಲ್ಲಿ ಧರಿಸಬೇಕು. ಶ್ರೀಹರಿಯನ್ನು ಸ್ಮರಿಸುತ್ತಾ ಮನೆಗೆ ಬರಬೇಕು."

## ಪ್ರೋಕ್ಷಣವನ್ನು ಮಾಡದಿರುವ ಮನೆಯಲ್ಲಿ ಯಾವ ಕಾರ್ಯವನ್ನೂ ಮಾಡಕೂಡದು

ತತಃ ಸಮ್ಯಗ್ದ್ವಿರಾಚಮ್ಯ ಹ್ಯಭ್ಯುಕ್ಷಣಮಥಾಚರೇತ್ ।
ನ ವಿನಾಽಭ್ಯುಕ್ಷಣಂ ಜಾತು ವಿಧಿಜ್ಞಃ ಕಿಂಚಿದಾಚರೇತ್ ॥

"ಮನೆಗೆ ಬಂದ ಕೂಡಲೇ ಚೆನ್ನಾಗಿ ಪುನಃ ಎರಡು ಸಲ ಆಚಮನ ಮಾಡಬೇಕು. ಅನಂತರದಲ್ಲಿ ಪ್ರೋಕ್ಷಣಕ್ಕಾಗಿ ತಂದಿರುವ ನೀರಿನಿಂದ ಮನೆಯನ್ನು ಪ್ರೋಕ್ಷಿಸಬೇಕು. ವಿಧಿಗಳನ್ನು ತಿಳಿದವನು ಯಾರೇ ಆಗಲಿ ಅವನು ಪ್ರೋಕ್ಷಣವನ್ನು ಮಾಡದಿರುವ ಮನೆಯಲ್ಲಿ ಯಾವ ಕೆಲಸವನ್ನೂ ಮಾಡಕೂಡದು."

ಏವಂ ಸೂರ್ಯಮುಪಸ್ಥಾಯ ಜಪ್ಯಮಂತ್ರಾನ್ಯಥಾವಿಧಿ ।
ಜಪಿತ್ವಾ ತು ತತೋ ಗತ್ವಾ ಸ್ವಗೃಹಂ ನಿಯತಃ ಶುಚಿಃ ॥
ಅಭ್ಯುಕ್ಷಣಂ ಸಮಾದಾಯ ಸ್ವಗೃಹಂ ಪ್ರೋಕ್ಷಯೇತ್ತತಃ ।
ಪ್ರೋಕ್ಷಣಾರ್ಥಂ ಜಲಂ ಯತ್ತದಭ್ಯುಕ್ಷಣಮಿತೀರ್ಯತೇ ॥

ತೇನೈವ ಪ್ರೋಕ್ಷಯೇತ್ಸರ್ವಂ ಗೃಹೋಪಕರಣಾದಿಕಮ್ |
ಅಪ್ರೋಕ್ಷಿತೇ ಗೃಹೇ ಕಿಂಚಿನ್ನ ಕರ್ಮಾದಿಕಮಾಚರೇತ್ ||
ತ್ರಿಸಂಧ್ಯಂ ವಾಗ್ಯತೋ ವಾರಿ ಗುಪ್ತಂ ತ್ವಾಹೃತ್ಯ ಶೋಧಯೇತ್ |
ಶೈವಾಲತೃಣಪರ್ಣಾದ್ಯೈರಸಂಸ್ಕಾರಾಂಬುಭಾಜನೈಃ ||
ಸಿಕತಾವಸ್ತ್ರಲೇಪೈಶ್ಚ ನ ಕುರ್ಯಾತ್ಪ್ರೋಕ್ಷಣಂ ಬುಧಃ |
ನಾಹರೇದೇಕವಸ್ತ್ರಸ್ತು ನಾವೃತೋ ನ ಚ ಕನ್ಯಕಾ ||
ನ ಪಾಣಿನಾ ನ ವಸ್ತ್ರೇಣ ತೋಯಮಭ್ಯುಕ್ಷಣಾಯ ವೈ |
ಸಂಗೃಹ್ಯಾಭ್ಯುಕ್ಷಣಂ ಯಾಯಾತ್ಸೋಪಾನತ್ಕೋ ಗೃಹಂ ಪ್ರತಿ ||
ತೇ ತು ಮುಕ್ತ್ವಾ ಗೃಹಂ ಪ್ರಾಪ್ಯ ಹ್ಯಾಚಾಮೇದನ್ಯವಾರಿಣಾ |
ವೈಶ್ವಾನರೇಣ ಮಂತ್ರೇಣ ಪ್ರೋಕ್ಷಯೇದ್ಗೃಹಮಂತ್ರತಃ ||
ಗಂಗಾತೋಯಸಮಂ ತೋಯಂ ವದಂತಿ ಬ್ರಹ್ಮವಾದಿನಃ |
ಅಭ್ಯುಕ್ಷಯೇತ್ಪ್ರಯತ್ನೇನ ರಾತ್ರೌ ಪರ್ಯುಷಿತಂ ಗೃಹಮ್ ||
ಮಧ್ಯಾಹ್ನೇ ಸರ್ವಸಂಧ್ಯಾಯಾಂ ನ ಚೈವಾಭ್ಯುಕ್ಷಿತೇ ಜಪೇತ್ |
ತೇನ ದ್ರವ್ಯಾಣ್ಯಶೇಷಾಣಿ ಪ್ರೋಕ್ಷ್ಯಾಚಮ್ಯ ಪುನರ್ಗೃಹೇ ||
ತತಃ ಕರ್ಮಾಣಿ ಕುರ್ವೀತ ಸತ್ಕ್ರಿಯಾಶ್ಚ ದ್ವಿಜೋತ್ತಮಾಃ | (ಸಂಗ್ರಹವಚನ)

"ಹಿಂದೆ ಹೇಳಿದಂತೆ ಸೂರ್ಯೋಪಸ್ಥಾನವನ್ನು ಮಾಡಬೇಕು. ಪ್ರತಿದಿನದಲ್ಲಿಯೂ ಜಪಿಸುತ್ತಿರುವ ಮಂತ್ರಗಳನ್ನು ವಿಧಿಪ್ರಕಾರವಾಗಿ ಜಪಿಸಬೇಕು. ಅನಂತರದಲ್ಲಿ ತನ್ನ ಮನೆಗೆ ಬರಬೇಕು. ನಿಯಮಗಳಿಂದಲೂ ಮಡಿಯಿಂದಲೂ ಯುಕ್ತನಾಗಿರಬೇಕು. ಪ್ರೋಕ್ಷಣಕ್ಕಾಗಿ ತಂದಿರುವ ನೀರು ಅಭ್ಯುಕ್ಷಣವೆನಿಸುತ್ತದೆ. ಅದರಿಂದ ತನ್ನ ಮನೆಯನ್ನು ಪ್ರೋಕ್ಷಿಸಬೇಕು. ಅದರಿಂದಲೇ ಮನೆಯಲ್ಲಿರುವ ಎಲ್ಲಾ ವಸ್ತುಗಳನ್ನೂ ಪ್ರೋಕ್ಷಿಸಬೇಕು. ಪ್ರೋಕ್ಷಣವನ್ನು ಮಾಡದಿರುವ ಮನೆಯಲ್ಲಿ ಯಾವ ಕಾರ್ಯವನ್ನೂ ಮಾಡಕೂಡದು. ಪ್ರಾತಃಕಾಲದಲ್ಲಿಯೂ ಮಧ್ಯಾಹ್ನಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಯಾರಿಗೂ ತಿಳಿಯದಂತೆ ಗುಪ್ತವಾಗಿ ತಂದಿರುವ ನೀರನ್ನು ಪ್ರೋಕ್ಷಣೆ ಮಾಡಬೇಕು. ಪಾಚಿಗಳು, ಹುಲ್ಲುಗಳು, ಎಲೆಗಳು, ಸಂಸ್ಕಾರವಿಲ್ಲದ ನೀರು, ಸಂಸ್ಕಾರವಿಲ್ಲದ ಪಾತ್ರೆಗಳು, ಉಸುಗು, ವಸ್ತ್ರಗಳು ಇವುಗಳಿಂದ ಪ್ರೋಕ್ಷಣವನ್ನು ಮಾಡಕೂಡದು. ಒಂದು ವಸ್ತ್ರವನ್ನು ಉಟ್ಟುಕೊಂಡು ಪ್ರೋಕ್ಷಣಜಲವನ್ನು ತರಕೂಡದು. ತಲೆಗೆ ಮುಸುಕು ಹಾಕಿಕೊಂಡು ತರಕೂಡದು. ಕನ್ಯೆಯು ತರಕೂಡದು. ಬೊಗಸೆಗಳಿಂದ ತರಕೂಡದು. ಬಟ್ಟೆಯನ್ನು ಒದ್ದೆ ಮಾಡಿಕೊಂಡು ಆ ವಸ್ತ್ರದಿಂದ ಜಲವನ್ನು ತಂದು ಆ ಜಲದಿಂದ ಪ್ರೋಕ್ಷಣವನ್ನು ಮಾಡಕೂಡದು. ಕಾಲುಗಳಲ್ಲಿ ಪಾದರಕ್ಷೆಯನ್ನು ಧರಿಸಿ ನೀರನ್ನು ತರಕೂಡದು. ಅಭ್ಯುಕ್ಷಣಜಲವನ್ನು ಮನೆಗೆ ತಂದಕೂಡಲೇ ಆ ನೀರನ್ನು ಕೆಳಗಿಡಬೇಕು. ಅಭ್ಯುಕ್ಷಣಜಲವನ್ನು ಬಿಟ್ಟು ಬೇರೆ ನೀರಿನಿಂದ ಆಚಮನವನ್ನು ಮಾಡಬೇಕು. ವೈಶ್ವಾನರಮಂತ್ರದಿಂದಲೂ ಗೃಹಮಂತ್ರದಿಂದಲೂ ಪ್ರೋಕ್ಷಣವನ್ನು ಮಾಡಬೇಕು. ಈ ಅಭ್ಯುಕ್ಷಣಜಲವು ಗಂಗಾಜಲಕ್ಕೆ ಸಮವೆಂದು ಬ್ರಹ್ಮಜ್ಞಾನಿಗಳು ಹೇಳುತ್ತಿರುವರು. ರಾತ್ರಿಕಾಲದಲ್ಲಿ ಮನೆಯು ಅಶುದ್ಧವಾಗುತ್ತದೆ. ಆ ಮನೆಯನ್ನು ಬೆಳಿಗ್ಗೆ ಪ್ರೋಕ್ಷಣೆ ಮಾಡಬೇಕು. ಇದರಿಂದ ಶುದ್ಧವಾಗುತ್ತದೆ. ಹಾಗೆಯೇ ಮಧ್ಯಾಹ್ನಕಾಲದಲ್ಲಿಯೂ ಮೂರು ಸಂಧ್ಯಾಕಾಲಗಳಲ್ಲಿಯೂ ಪ್ರೋಕ್ಷಿಸಬೇಕು. ಪ್ರೋಕ್ಷಣ ಮಾಡದಿರುವ ಮನೆಯಲ್ಲಿ ಜಪಿಸಬಾರದು. ಮನೆಯಲ್ಲಿರುವ ಎಲ್ಲಾ ವಸ್ತುಗಳನ್ನೂ ಪ್ರೋಕ್ಷಿಸಿದ ಮೇಲೆ ಪುನಃ ಆಚಮನವನ್ನು ಮಾಡಬೇಕು. ನಂತರದಲ್ಲಿ ಎಲ್ಲಾ ಸತ್ಕಾರ್ಯಗಳನ್ನೂ ಮಾಡಬೇಕು."

## ಹೋಮವಿಧಿ

ಅಥಾಗಮ್ಯ ಗೃಹಂ ವಿಪ್ರಃ ಸಮಾಚಮ್ಯ ಯಥಾವಿಧಿ |
ಪ್ರಜ್ವಾಲ್ಯ ವಹ್ನಿಂ ವಿಧಿವಜ್ಜುಹುಯಾಜ್ಜಾತವೇದಸಮ್ || (ಕೂರ್ಮಪುರಾಣ)

"ಪ್ರಾತಃಕಾಲಿಕ ಸಂಧ್ಯಾವಂದನವನ್ನು ಮುಗಿಸಿ ಮನೆಗೆ ಬರಬೇಕು. ಹಿಂದೆ ಹೇಳಿದಂತೆ ಪ್ರೋಕ್ಷಣವನ್ನು ಮಾಡಬೇಕು. ವಿಧಿಪ್ರಕಾರವಾಗಿ ಆಚಮನವನ್ನು ಮಾಡಬೇಕು. ಅಗ್ನಿಪ್ರತಿಷ್ಠಾಪನವನ್ನು ಮಾಡಬೇಕು. ಆ ಅಗ್ನಿಯಲ್ಲಿ ಹೋಮವನ್ನು ವಿಧಿಪ್ರಕಾರವಾಗಿ ಮಾಡಬೇಕು."

ಸಂಧ್ಯಾಕರ್ಮಾವಸಾನೇ ತು ಸ್ವಯಂ ಹೋಮೋ ವಿಧೀಯತೇ |
ಸ್ವಯಂ ಹೋಮಫಲಂ ಯತ್ತತ್ತದನ್ಯೇನ ನ ಲಭ್ಯತೇ || (ದಕ್ಷವಚನ)

"ಫಲಾಪೇಕ್ಷೆಯಿಲ್ಲದೆ ಶ್ರೀಹರಿಯ ಪ್ರೀತಿಯನ್ನೇ ಉದ್ದೇಶಿಸಿ ಮಾಡುವ ಔಪಾಸನಾಹೋಮವು ಸ್ವಯಂಹೋಮವೆನಿಸುತ್ತದೆ. ಪ್ರಾತಃಕಾಲಿಕ ಸಂಧ್ಯಾವಂದನವು ಮುಗಿದ ಕೂಡಲೇ ಈ ಸ್ವಯಂಹೋಮವನ್ನು ಮಾಡಬೇಕು. ಈ ಸ್ವಯಂಹೋಮಕ್ಕೆ ಬರುವ ಫಲವು ಬೇರೆ ಯಾವುದರಿಂದಲೂ ಬರುವುದಿಲ್ಲ."

## ಹೋಮವು ಎರಡು ವಿಧ

ಪ್ರಧಾನಂ ವೈದಿಕಂ ಕರ್ಮ ಗುಣಭೂತಂ ತಥೈವ ತತ್ |
ಗುಣನಿಷ್ಠಃ ಪ್ರಧಾನಂ ತು ಹಿತ್ವಾ ಗಚ್ಛತ್ಯಧೋಗತಿಮ್ || (ಗರ್ಗವಚನ)

"ವೇದದಲ್ಲಿ ಹೇಳಿದ ಯಜ್ಞಾದಿಕರ್ಮಗಳು ಪ್ರಧಾನಕರ್ಮಗಳೆನಿಸುತ್ತವೆ. ಸ್ಮೃತಿಗಳಲ್ಲಿ ಹೇಳಿರುವ ಕರ್ಮಗಳು ಅಪ್ರಧಾನವೆನಿಸುತ್ತವೆ. ಅಪ್ರಧಾನಕರ್ಮಗಳನ್ನೇ ಮಾಡುತ್ತಾ ಪ್ರಧಾನಕರ್ಮಗಳನ್ನು ಬಿಟ್ಟವನು ಅಧೋಗತಿಯನ್ನು ಪಡೆಯುವನು."

ಯೋ ವೈದಿಕಮನಾದೃತ್ಯ ಕರ್ಮ ಸ್ಮಾರ್ತೇತಿಹಾಸಕಮ್ |
ಮೋಹಾತ್ಸಮಾಚರೇದ್ವಿಪ್ರೋ ನ ಸ ಪುಣ್ಯೇನ ಯುಜ್ಯತೇ || (ಸ್ಮೃತ್ಯಂತರ ವಚನ)

"ವೈದಿಕವಾದ ಕರ್ಮಗಳನ್ನು ಅನಾದರದಿಂದ ಬಿಟ್ಟು ಸ್ಮೃತಿ ಇತಿಹಾಸ ಮುಂತಾದ ಗ್ರಂಥಗಳಲ್ಲಿ ಹೇಳುವ ಕರ್ಮಗಳನ್ನು ಯಾವನು ಮೋಹದಿಂದ ಮಾಡುತ್ತಿರುವನೋ ಅವನು ಪುಣ್ಯಗಳನ್ನು ಪಡೆಯುವುದಿಲ್ಲ."

## ದುಡ್ಡಿಲ್ಲದವನು ವೈದಿಕಕರ್ಮಗಳನ್ನು ಬಿಟ್ಟು ಸ್ಮಾರ್ತಕರ್ಮಗಳನ್ನು ಮಾಡಿದರೂ ದೋಷವಿಲ್ಲ

ಶ್ರೌತಂ ಕರ್ತುಂ ನ ಚೇಚ್ಛಕ್ತಃ ಕರ್ಮ ಸ್ಮಾರ್ತಂ ಸಮಾಚರೇತ್ |
ತತ್ರಾಪ್ಯಶಕ್ತಃ ಕರಣೇ ಸದಾಚಾರಂ ಲಭೇದ್ಬುಧಃ || (ವ್ಯಾಸ ವಚನ)

"ವೈದಿಕ ಕರ್ಮಗಳನ್ನು ಮಾಡಲು ಶಕ್ತಿಯಿಲ್ಲದವನು ಸ್ಮೃತಿಗಳಲ್ಲಿ ಹೇಳಿರುವ ಕರ್ಮಗಳನ್ನು ಮಾಡಬೇಕು. ಅಲ್ಲಿಯೂ ಶಕ್ತಿಯಿಲ್ಲದವನು ದೊಡ್ಡವರ ಅನುಷ್ಠಾನದಂತೆ ನಡಿಯಬೇಕು."

**ಅವಶ್ಯಂ ಬ್ರಾಹ್ಮಣೋಽಗ್ನೀ ತ್ಯಾದಧೀತ ದರ್ಶಪೂರ್ಣಮಾಸಾವಗ್ನಿಗ್ರಹಣೇ ಚಾತುರ್ಮಾಸ್ಯಪಶುಸೋಮೈಶ್ಚ ಯಜೇತ್** | (ವಸಿಷ್ಠರ ವಚನ)

"ಬ್ರಾಹ್ಮಣನು ಸಾಮರ್ಥ್ಯವಿದ್ದರೆ ಶ್ರೌತಾಗ್ನಿ ಸ್ಮಾರ್ತಾಗ್ನಿ ಎಂಬ ದ್ವಿವಿಧವಾದ ಅಗ್ನಿಯನ್ನೂ ಆಧಾನ ಮಾಡಬೇಕು. ಅಗ್ನಿಯನ್ನು ಆಧಾನ ಮಾಡಿಕೊಂಡ ಮೇಲೆ ದರ್ಶಯಾಗ ಪೂರ್ಣಮಾಸಯಾಗ ಪಶುಯಾಗ ಮತ್ತು ಸೋಮಯಾಗಗಳನ್ನು ಮಾಡಬೇಕು."

### ಸ್ಮಾರ್ತಕರ್ಮಗಳನ್ನು ವಿವಾಹಾಗ್ನಿಯಲ್ಲಿಯೂ ಶ್ರೌತಕರ್ಮಗಳನ್ನು ಗಾರ್ಹಪತ್ಯಾದ್ಯಗ್ನಿಗಳಲ್ಲಿಯೂ ಮಾಡಬೇಕು

ಸ್ಮಾರ್ತಂ ಕರ್ಮ ವಿವಾಹಾಗ್ನೌ ಕುರ್ವೀತ ಪ್ರತ್ಯಹಂ ಗೃಹೀ |
ಕ್ಷಯಕಾಲಾದಿಕೇ ಚಾಪಿ ಶ್ರೌತಂ ವೈತಾನಿಕಾಗ್ನಿಷು || (ಯಾಜ್ಞವಲ್ಕ್ಯರ ವಚನ)

"ವಿವಾಹದಿನದಲ್ಲಿ ಆಧಾನಮಾಡಲ್ಪಟ್ಟ ಅಗ್ನಿಯನ್ನು ನಷ್ಟವಾಗದಂತೆ ಸಾಯುವವರೆಗೂ ಇಟ್ಟಿರಬೇಕು. ಆ ಅಗ್ನಿಯಲ್ಲಿ ಸ್ಮಾರ್ತಕರ್ಮಗಳನ್ನೆಲ್ಲವನ್ನೂ ಮಾಡಬೇಕು. ಸತ್ತ ಮೇಲೆ ಅವನ ದೇಹದ ದಹನವನ್ನೂ ಅದೇ ಅಗ್ನಿಯಲ್ಲಿಯೇ ಮಾಡಬೇಕು. ಶ್ರೌತಕರ್ಮಗಳನ್ನು ಆಹವನೀಯ ಮುಂತಾದ ಅಗ್ನಿಗಳಲ್ಲಿ ಮಾಡಬೇಕು."

### ಹೋಮವನ್ನು ತಾನೇ ಮಾಡಿದಾಗ ಪೂರ್ಣಫಲವು ಬರುತ್ತದೆ

ಹೋಮೇ ಯತ್ಫಲಮುದ್ದಿಷ್ಟಂ ಜುಹ್ವತಃ ಸ್ವಯಮೇವ ತು |
ಹೂಯಮಾನಂ ತದನ್ಯೇನ ಫಲಮರ್ಧಂ ಪ್ರಪದ್ಯತೇ || (ದಕ್ಷವಚನ)

"ಹೋಮದಲ್ಲಿ ಹೇಳಲ್ಪಟ್ಟ ಪೂರ್ಣಫಲವು ತಾನೇ ಹೋಮವನ್ನು ಮಾಡಿದಾಗ ಬರುತ್ತದೆ. ಇತರರು ಹೋಮವನ್ನು ಮಾಡಿದಾಗ ಅರ್ಧ ಫಲವು ಬರುತ್ತದೆ."

### ಯಾಗಕ್ಕೆ ಅಧಿಕಾರಿಗಳು

ಋತ್ವಿಕ್ಪುತ್ರೋಽಥವಾ ಪತ್ನೀ ಶಿಷ್ಯೋ ವಾಽಪಿ ಸಹೋದರಃ |
ಪ್ರಾಪ್ಯಾನುಜ್ಞಾಂ ವಿಶೇಷೇಣ ಜುಹುಯಾದ್ವಾ ಯಥಾವಿಧಿ ||

"ಯಜಮಾನನ ಮಗನಾಗಲೀ ಹೆಂಡತಿಯಾಗಲೀ ಸಹೋದರನಾಗಲೀ ಶಿಷ್ಯನಾಗಲೀ ಪುರೋಹಿತನಾಗಲೀ ಯಜಮಾನನಿಂದ ಅನುಜ್ಞೆಯನ್ನು ಪಡೆದು ಹೋಮವನ್ನು ಮಾಡಬಹುದು. ಆದರೆ ಯಜಮಾನನೇ ಹೋಮವನ್ನು ಮಾಡುವುದು ವಿಶೇಷ ಫಲದಾಯಕವಾಗುತ್ತದೆ."

ಋತ್ವಿಕ್ಪುತ್ರೋ ಗುರುರ್ಭ್ರಾತಾ ಭಾಗಿನೇಯೋಽಥ ವಿಟ್ಪತಿಃ |
ಏತೈರಪಿ ಹುತಂ ಯತ್ಸ್ಯಾತ್ತದ್ಧುತಂ ಸ್ವಯಮೇವ ತು ||

"ಪುರೋಹಿತರು, ಯಜಮಾನನ ಮಗ, ಗುರು, ಸಹೋದರ, ಅಳಿಯ ಇವರಿಂದ ಮಾಡಲ್ಪಟ್ಟ ಹೋಮವು ತಾನೇ ಮಾಡಿದಂತಾಗುತ್ತದೆ."

### ಪುತ್ರಾದಿಗಳಿಂದ ಹೋಮವು ಮಾಡಲ್ಪಟ್ಟಾಗ ತಾರತಮ್ಯ

ಅನ್ಯೈಃ ಶತಹುತಾದ್ಧೋಮಾದೇಕಃ ಶಿಷ್ಯಹುತೋ ವರಃ |
ಶಿಷ್ಯೈಃ ಶತಹುತಾದ್ಧೋಮಾದೇಕಃ ಪುತ್ರಹುತೋ ವರಃ || (ಶ್ರುತಿವಚನ)

"ಪುರೋಹಿತ ಮುಂತಾದವರು ನೂರು ಹೋಮಗಳನ್ನು ಮಾಡಿದಾಗ ಬರುವ ಫಲವು ಶಿಷ್ಯನು ಒಮ್ಮೆ ಹೋಮವನ್ನು ಮಾಡಿದರೆ ಬರುತ್ತದೆ. ಶಿಷ್ಯನು ನೂರು ಹೋಮಗಳನ್ನು ಮಾಡಿದಾಗ ಬರುವ ಫಲವು ಮಗನು ಒಮ್ಮೆ ಮಾಡಿದ್ದರಿಂದ ಬರುತ್ತದೆ."

### ಋತ್ವಿಕ್ ಮುಂತಾದವರು ಹೋಮವನ್ನು ಮಾಡಿದಾಗ ಯಜಮಾನ ದಂಪತಿಗಳು ಸನ್ನಿಹಿತರಾಗಿರಬೇಕು

ಅಸಮಕ್ಷಂ ದಂಪತ್ಯೋರ್ಹೋತವ್ಯಂ ನರ್ತ್ವಿಗಾದಿನಾ |
ದ್ವಯೋರಪ್ಯಸಮಕ್ಷಂ ತು ಭವೇದ್ಧುತಮನರ್ಥಕಮ್ || (ಕಾತ್ಯಾಯನ ವಚನ)

"ಯಜಮಾನದಂಪತಿಗಳ ಅಸಮಕ್ಷದಲ್ಲಿ ಅಂದರೆ ಅವರು ಇಲ್ಲದಿರುವಾಗ ಹೋಮವನ್ನು ಋತ್ವಿಕ್ ಮುಂತಾದವರು ಮಾಡಕೂಡದು. ಹಾಗೆ ಮಾಡಿದ ಹೋಮವು ನಿಷ್ಫಲವಾಗುತ್ತದೆ."

### ಒಬ್ಬರಾದರೂ ಸನ್ನಿಹಿತರಾಗಿರಬೇಕು

ನಿಕ್ಷಿಪ್ಯಾಗ್ನಿಂ ಸ್ವದಾರೇಷು ಪ್ರತಿಕಲ್ಪ್ಯ ದ್ವಿಜಂ ತಥಾ |
ಪ್ರವಸೇತ್ಕಾರ್ಯವಾನ್ವಿಪ್ರೋ ವೃಥೈವ ನ ಚಿರಂ ವಸೇತ್ || (ಕಾತ್ಯಾಯನ ವಚನ)

"ಯಜಮಾನನು ಅವಶ್ಯ ಕಾರ್ಯವಿದ್ದಾಗ ವಿವಾಹಾಗ್ನಿಯನ್ನು ಪತ್ನಿಯಲ್ಲಿ ಕೊಟ್ಟು ಹೋಮವನ್ನು ಮಾಡುವುದಕ್ಕೆ ಪುರೋಹಿತರನ್ನು ಏರ್ಪಡಿಸಬೇಕು. ತಮ್ಮ ಕಾರ್ಯಕ್ಕಾಗಿ ದೇಶಾಂತರಕ್ಕೆ ಹೋಗಬೇಕು. ದೇಶಾಂತರದಲ್ಲಿ ಕಾರ್ಯವು ಮುಗಿದ ಕೂಡಲೇ ಹಿಂದಿರುಗಬೇಕು. ವ್ಯರ್ಥವಾಗಿ ಹೆಚ್ಚುಕಾಲದವರೆಗೆ ನಿಲ್ಲಬಾರದು." (ಈ ವಾಕ್ಯದಲ್ಲಿ ಯಜಮಾನನಿಲ್ಲದಿದ್ದರೂ ಯಜಮಾನನ ಪತ್ನಿಯ ಸನ್ನಿಧಾನದಲ್ಲಿ ಪುರೋಹಿತರು ಹೋಮವನ್ನು ಮಾಡಬೇಕೆಂದು ಹೇಳಿದಂತಾಯಿತು.)

### ಯಜಮಾನನೂ ಪುರೋಹಿತಾದಿಗಳೂ ಇಲ್ಲದಿದ್ದಾಗ
### ಯಜಮಾನನ ಪತ್ನಿಯೇ ಹೋಮವನ್ನು ಮಾಡಬೇಕು

ಕಾಮಂ ಗೃಹ್ಯೇಽಗ್ನೌ ಪತ್ನೀ ಜುಹುಯಾತ್ಸಾಯಂಪ್ರಾತರ್ಹೋಮೌ | (ಗೋಭಿಲರ ವಚನ)

"ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಮಾಡಬೇಕಾದ ಹೋಮಗಳನ್ನು ತಮ್ಮ ಗೃಹ್ಯಾಗ್ನಿಯಲ್ಲಿ ಪತ್ನಿಯೇ ಮಾಡಬಹುದು."

### ಇವರು ಹೋಮವನ್ನು ಮಾಡಬಾರದು

ನ ವೈ ಕನ್ಯಾ ನ ಯುವತಿರ್ನಾಲ್ಪವಿದ್ಯೋ ನ ಬಾಲಿಶಃ |
ಹೋತಾ ಸ್ಯಾದಗ್ನಿಹೋತ್ರಸ್ಯ ನಾರ್ತೋ ನಾಸಂಸ್ಕೃತೋಽಶುಚಿಃ || (ಮನುವಿನ ವಚನ)

"ಕನ್ಯೆಯಾಗಲೀ ತರುಣಿಯಾಗಲೀ ಹೋಮವನ್ನು ಮಾಡಬಾರದು. ಅಲ್ಪವಿದ್ಯೆಯುಳ್ಳವನಾಗಲೀ ಮೂರ್ಖನಾಗಲೀ ದುಃಖಿತನಾಗಲೀ ಉಪನಯವಿಲ್ಲದವನಾಗಲೀ ಮೈಲಿಗೆಯುಳ್ಳವನಾಗಲೀ ಹೋಮವನ್ನು ಮಾಡಕೂಡದು."

### ಸಾಯಂಕಾಲಿಕ ಹೋಮಕಾಲ

ಯಾವತ್ಸಮ್ಯಙ್ನ ಭಾವ್ಯಂತೇ ನಭಸ್ಯೃಕ್ಷಾಣಿ ಸರ್ವಶಃ |
ಲೋಹಿತತ್ವಂ ಚ ನೋಽಪೈತಿ ತಾವತ್ಸಾಯಂ ತು ಹೂಯತೇ || (ಕಾತ್ಯಾಯನರ ಮತ)

"ನಕ್ಷತ್ರಗಳು ಚೆನ್ನಾಗಿ ಕಾಣಿಸುವುದಿಲ್ಲ. ಆಕಾಶದ ಕೆಂಪುಬಣ್ಣವು ಹೋಗುವುದಿಲ್ಲ. ಈ ಕಾಲವು ಸಾಯಂಕಾಲವೆನಿಸುತ್ತದೆ. ಅಂದರೆ ಸೂರ್ಯಾಸ್ತಮಯಾನಂತರದಲ್ಲಿ ಮೇಲ್ಕಂಡ ಲಕ್ಷಣಗಳುಳ್ಳ ಕಾಲವೇ ಸಾಯಂಕಾಲವೆನಿಸುತ್ತದೆ. ಅದೇ ಸಾಯಂಕಾಲವು ಹೋಮಕಾಲವೆನಿಸುತ್ತದೆ."

ನಕ್ಷತ್ರಂ ದೃಷ್ಟ್ವಾ ಪ್ರದೋಷೇ ನಿಶಾಯಾಂ ವಾ ಸಾಯಮ್ || (ಆಪಸ್ತಂಬರ ವಚನ)

"ಆಕಾಶದಲ್ಲಿ ಒಂದು ನಕ್ಷತ್ರವು ಕಾಣಿಸುವ ಕಾಲವು ನಕ್ಷತ್ರದರ್ಶನಕಾಲವೆನಿಸುತ್ತದೆ. ಎಲ್ಲಾ ನಕ್ಷತ್ರಗಳೂ ಕಾಣಿಸುವುದಕ್ಕೆ ಆರಂಭಿಸಿದ ಮೇಲಿನ ಕಾಲವು ಪ್ರದೋಷಕಾಲವೆನಿಸುತ್ತದೆ. ನಿದ್ರಾಕಾಲವು ನಿಶಾಕಾಲವೆನಿಸುತ್ತದೆ. ನಕ್ಷತ್ರದರ್ಶನಕಾಲವಾಗಲೀ ಪ್ರದೋಷಕಾಲವಾಗಲೀ ನಿಶಾಕಾಲವಾಗಲೀ ಸಾಯಂಕಾಲವೆನಿಸುತ್ತದೆ. ಈ ಮೂರು ಕಾಲುಗಳಲ್ಲಿ ಯಾವುದಾದರೊಂದು ಕಾಲದಲ್ಲಿ ಹೋಮವನ್ನು ಮಾಡಬೇಕು. ಇದು ಆಪಸ್ತಂಬರ ಮತ. ಹಿಂದೆ ಹೇಳಿದ ಮತವು ಕಾತ್ಯಾಯನರ ಮತ. ಈ ಎರಡು ಮತಗಳಲ್ಲಿ ಕಾತ್ಯಾಯನರ ಮತವೇ ಪ್ರಧಾನ. ಆಪಸ್ತಂಬರ ಮತವು ಗೌಣ ಎಂದು ತಿಳಿಯಬೇಕು."

ಅಥ ಯದಿ ಗೃಹ್ಯೇಽಗ್ನೌ ಸಾಯಂಪ್ರಾತರ್ಹೋಮಯೋರ್ದರ್ಶಪೂರ್ಣಮಾಸಯೋರ್ವಾ ಹವ್ಯಂ ಹೋತಾರಂ ವಾ ನಾಧಿಗಚ್ಛೇತ್ ಸಾಯಮಾಹುತಿಂ ರಾತ್ರೌ ಕುರ್ವೀತ ಕೃತ್ಸ್ನಾಯಾಂ, ಕೃತ್ಸ್ನೇಽಹ್ನಿ ಪ್ರಾತರಾಹುತಿಂ ಕಥಂ ಕುರ್ಯಾತ್? ಆಸಾಯಮಾಹುತೇಃ ಪ್ರಾತರಾಹುತಿರ್ನಾತ್ಯೇತಿ. ಆಪ್ರಾತರಾಹುತೇಃ ಸಾಯಮಾಹುತಿರ್ನಾತ್ಯೇತಿ. ಅಮಾವಾಸ್ಯಾಯಾಃ ಪೌರ್ಣಮಾಸೀ ನಾತ್ಯೇತಿ. ಆಪೌರ್ಣಮಾಸ್ಯಾಃ ಅಮಾವಾಸ್ಯಾ ನಾತ್ಯೇತಿ. (ಗೋಭಿಲರ ವಚನ)

"ಬ್ರಾಹ್ಮಣ ಮುಂತಾದ ಅಧಿಕಾರಿಗಳು ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಗ್ನಿಹೋತ್ರಹೋಮಗಳನ್ನು ಮಾಡಬೇಕು. ಹುಣ್ಣಿಮೆಯಲ್ಲಿ ಪೌರ್ಣಮಾಸೀ ಹೋಮವನ್ನೂ, ಅಮಾವಾಸ್ಯೆಯಲ್ಲಿ ಅಮಾವಾಸ್ಯಾಹೋಮವನ್ನೂ ಮಾಡಬೇಕು. ಈ ಕಾಲಗಳೇ ಹೋಮಕ್ಕೆ ಮುಖ್ಯಕಾಲಗಳೆನಿಸುತ್ತವೆ. ಈ ಮುಖ್ಯಕಾಲಗಳಲ್ಲಿ ಹೋಮಗಳಿಗೆ ಬೇಕಾದ ವಸ್ತುಗಳೂ ಹೋಮವನ್ನು ಮಾಡುವವರೂ ಸಿಗದಿದ್ದರೆ ಅಮುಖ್ಯಕಾಲಗಳಲ್ಲಿ ಮಾಡಬೇಕು. ಸಾಯಂಕಾಲಿಕಹೋಮದ ಆಹುತಿಯನ್ನು ಕೊಡುವವರೆಗೆ ಪ್ರಾತಃಕಾಲಿಕಹೋಮಕ್ಕೂ ಎಂದರೆ ಅಂದು ಹಗಲು ಮುಗಿಯುವವರೆಗೂ, ಪ್ರಾತಃಕಾಲಿಕ ಹೋಮದ ಆಹುತಿಯನ್ನು ಕೊಡುವವರೆಗೆ ಸಾಯಂಕಾಲಿಕ ಹೋಮಕ್ಕೂ ಎಂದರೆ ಅಂದು ರಾತ್ರಿಯು ಮುಗಿಯುವವರೆಗೂ ಹುಣ್ಣಿಮೆಯಿಂದ ಆರಂಭಿಸಿ ಅಮಾವಾಸ್ಯಾ ಹೋಮದ ಆಹುತಿಯನ್ನು ಕೊಡುವವರೆಗೆ ಎಂದರೆ ಕೃಷ್ಣಪಕ್ಷದ ಹದಿನೈದು ದಿವಸಗಳ ಕಾಲವು ಪೌರ್ಣಮಾಸೀ ಹೋಮಕ್ಕೂ, ಅಮಾವಾಸ್ಯೆಯಿಂದ ಆರಂಭಿಸಿ ಪೌರ್ಣಮಾಸೀ ಹೋಮದ ಆಹುತಿಯನ್ನು ಕೊಡುವವರೆಗೆ ಎಂದರೆ ಶುಕ್ಲಪಕ್ಷದ ಹದಿನೈದು ದಿವಸಗಳವರೆಗಿನ ಕಾಲವು ಅಮಾವಾಸ್ಯಾ ಹೋಮಕ್ಕೂ ಅವಕಾಶವಿದೆ. ಇವುಗಳು ಹೋಮಗಳಿಗೆ ಅಮುಖ್ಯಕಾಲವೆನಿಸುತ್ತವೆ. ಈ ಗೌಣಕಾಲಗಳಲ್ಲಿಯೂ ಹೋಮಗಳನ್ನು ಮಾಡಬಹುದು. ಹೋಮಗಳನ್ನು ಯಾವ ಕಾರಣದಿಂದಲೂ ಬಿಡಬಾರದು." (ಇದು ಗೋಭಿಲರ ಮತ. ಈ ಮತವೂ ಹಿಂದೆ ಹೇಳಿದ ಕಾತ್ಯಾಯನರ ಮತವೂ ಒಂದೇ ಆಗಿದೆ.)

ಆಸಾಯಂ ಕರ್ಮಣಃ ಪ್ರಾತರಾಪ್ರಾತಃ ಸಾಯಂಕರ್ಮಣಃ |
ಆಹುತಿರ್ನಾತಿಪದ್ಯೇತ ಪಾರ್ವಣಂ ಪಾರ್ವಣಾಂತರಾತ್ || (ಬೋಧಾಯನರ ವಚನ)

"ಪ್ರಾತಃಕಾಲದಲ್ಲಿ ಕೊಡಬೇಕಾದ ಆಹುತಿಯನ್ನು ಸಾಯಂಕಾಲದ ಆಹುತಿಯವರೆಗೂ, ಸಾಯಂಕಾಲದಲ್ಲಿ ಕೊಡಬೇಕಾದ ಆಹುತಿಯನ್ನು ಪ್ರಾತಃಕಾಲದ ಆಹುತಿಯವರೆಗೂ ಕೊಡಬಹುದು. ಹುಣ್ಣಿಮೆಯಲ್ಲಿ ಕೊಡಬೇಕಾದ ಆಹುತಿಯನ್ನು ಅಮಾವಾಸ್ಯಾಕಾಲದ ಆಹುತಿಯವರೆಗೂ, ಅಮಾವಾಸ್ಯಾಕಾಲದಲ್ಲಿ ಕೊಡಬೇಕಾದ ಆಹುತಿಯನ್ನು ಹುಣ್ಣಿಮೆಯಲ್ಲಿ ಕೊಡಬೇಕಾದ ಆಹುತಿಯವರೆಗೂ ಕೊಡಬಹುದು. ಹೀಗೆ ಮಾಡುವುದರಿಂದ ಕರ್ಮಲೋಪವು ಏರ್ಪಡುವುದಿಲ್ಲ."

## ಪ್ರಾತಃಕಾಲಿಕಹೋಮಕಾಲ

ರಾತ್ರೇಃ ಷೋಡಶಮೇ ಭಾಗೇ ಗ್ರಹನಕ್ಷತ್ರಭೂಷಿತೇ |
ಕಾಲೇ ತ್ವನುದಿತಂ ಪ್ರಾಹುರ್ಹೋಮಂ ಕುರ್ಯಾದ್ವಿಚಕ್ಷಣಃ ||
ತಥಾ ಪ್ರಭಾತಸಮಯೇ ನಷ್ಟೇ ನಕ್ಷತ್ರಮಂಡಲೇ |
ರವಿರ್ಯಾವನ್ನ ದೃಶ್ಯೇತ ರಶ್ಮಿಭಿಸ್ತು ಸಮನ್ವಿತಃ ||
ಉದಿತಂ ತಂ ವಿಜಾನೀಯಾತ್ತತ್ರ ಹೋಮಂ ಪ್ರಕಲ್ಪಯೇತ್ || (ವ್ಯಾಸರ ವಚನ)

"ರಾತ್ರಿಯ ಪ್ರಮಾಣವನ್ನು ಹದಿನಾರು ವಿಧವಾಗಿ ವಿಂಗಡಿಸಬೇಕು. ಆ ಭಾಗಗಳಲ್ಲಿ ಕೊನೆಯ ಭಾಗದಲ್ಲಿ ಗ್ರಹಗಳೂ ನಕ್ಷತ್ರಗಳೂ ಕಾಣಿಸುವ ಕಾಲವು ಅನುದಿತಕಾಲವೆನಿಸುತ್ತದೆ. ಅದೇ ಹದಿನಾರನೆಯ ಭಾಗದಲ್ಲಿ ನಕ್ಷತ್ರಗಳೆಲ್ಲವೂ ಮರೆಯಾಗುವುದಕ್ಕೆ ಆರಂಭಿಸಿ ಸೂರ್ಯೋದಯದವರೆಗಿನ ಕಾಲವು ಸಮಯಾಧ್ಯುಷಿತಕಾಲ ಅಥವಾ ಪ್ರಭಾತಕಾಲವೆನಿಸುತ್ತದೆ.

ಸೂರ್ಯೋದಯಾನಂತರಕಾಲವು ಉದಿತಕಾಲವೆನಿಸುತ್ತದೆ. ಈ ಮೂರೂ ಕಾಲಗಳೂ ಪ್ರಾತಃಕಾಲಿಕಹೋಮಕ್ಕೆ ಮುಖ್ಯ ಕಾಲವೆನಿಸುತ್ತವೆ. ಈ ಕಾಲಗಳಲ್ಲಿ ಹೋಮವನ್ನು ಮಾಡಬೇಕು."

ಉದಿತೇಽನುದಿತೇ ಚೈವ ಸಮಯಾಧ್ಯುಷಿತೇ ತಥಾ |
ಸರ್ವಥಾ ವರ್ತತೇ ಯಜ್ಞ ಇತೀಯಂ ವೈದಿಕೀ ಶ್ರುತಿಃ || (ಮನುವಚನ)

"ಉದಿತ ಅನುದಿತ ಸಮಯಾಧ್ಯುಷಿತ ಎಂಬ ಮೂರು ಕಾಲಗಳ ಲಕ್ಷಣಗಳನ್ನು ಹಿಂದೆ ಹೇಳಿದ ವ್ಯಾಸರ ವಚನದಿಂದ ತಿಳಿಯಬೇಕು. ಈ ಮೂರುಕಾಲಗಳಲ್ಲಿ ಯಾವುದಾದರೂ ಒಂದು ಕಾಲದಲ್ಲಿ ಖಂಡಿತವಾಗಿಯೂ ಯಜ್ಞವನ್ನು ಮಾಡಬೇಕೆಂದು "ಉದಿತೇ ಹೋತವ್ಯಂ, ಅನುದಿತೇ ಹೋತವ್ಯಂ, ಸಮಯಾಧ್ಯುಷಿತೇ ಹೋತವ್ಯಂ" ಎಂಬ ವೇದವಾಕ್ಯವು ತಿಳಿಸುತ್ತದೆ."

ಉಷಸ್ಯುಷೋದಯಂ ಸಮಯಾಧ್ಯುಷಿತೇ ಉದಿತೇ ವಾ ಪ್ರಾತಃ | (ಆಪಸ್ತಂಬರ ವಚನ)

"ರಾತ್ರಿಯ ಪ್ರಮಾಣವನ್ನು ಹದಿನಾರು ವಿಧವಾಗಿ ವಿಂಗಡಿಸಬೇಕು. (1) ಆ ಭಾಗಗಳಲ್ಲಿ ಹದಿನೈದನೆಯ ಭಾಗವು ಅರುಣೋದಯಕಾಲವೆನಿಸುತ್ತದೆ. (2) ಹದಿನಾರನೆಯ ಭಾಗದಲ್ಲಿ ಗ್ರಹಗಳೂ ನಕ್ಷತ್ರಗಳೂ ಕಾಣಿಸುವ ಕಾಲವು ಅನುದಿತಕಾಲವೆನಿಸುತ್ತದೆ. (3) ಗ್ರಹಗಳೂ ನಕ್ಷತ್ರಗಳೂ ಕಾಣಿಸದೆ ಸೂರ್ಯೋದಯುದವರೆಗಿನ ಕಾಲವು ಸಮಯಾಧ್ಯುಷಿತಕಾಲವೆನಿಸುತ್ತದೆ. (4) ಸೂರ್ಯೋದಯಾನಂತರದ ಕಾಲವು ಉದಿತಕಾಲವೆನಿಸುತ್ತದೆ. ಹೀಗೆ ಪ್ರಾತಃಕಾಲದಲ್ಲಿ ನಾಲ್ಕು ವಿಧವಾದ ಕಾಲವು ಹೋಮಕಾಲವೆನಿಸುತ್ತದೆ." ಇದು ಆಪಸ್ತಂಬರ ಮತ.

ಮೇಲ್ಕಂಡ ಕಾಲಗಳಲ್ಲಿ ಉದಿತಕಾಲದಲ್ಲಿ ಹೋಮವನ್ನು ಮಾಡಲು ಆರಂಭಿಸಿದವರು ಉದಿತಕಾಲದಲ್ಲಿಯೇ ಯಾವಾಗಲೂ ಹೋಮವನ್ನು ಮಾಡಬೇಕು. ಬೇರೆ ಕಾಲಗಳಲ್ಲಿ ಮಾಡಕೂಡದು. ಇದೇ ರೀತಿಯಿಂದ ಅನುದಿತಕಾಲ ಮುಂತಾದ ಕಾಲಗಳಲ್ಲಿ ಹೋಮವನ್ನು ಮಾಡಲು ಆರಂಭಿಸಿದವರೂ ಆಯಾ ಕಾಲಗಳಲ್ಲಿಯೇ ಹೋಮವನ್ನು ಮಾಡಬೇಕು. ಬೇರೆ ಕಾಲಗಳಲ್ಲಿ ಮಾಡಕೂಡದು.

ಅಸಂಗವಾಂತಃ ಪ್ರಾತಃರ್ಹೋಮಕಾಲಃ ಆಪ್ರದೋಷಾಂತಃ ಸಾಯಂಹೋಮಕಾಲಃ |
(ಆಶ್ವಲಾಯನರ ವಚನ)

"ಹಗಲಿನ ಪ್ರಮಾಣವನ್ನು ಐದು ವಿಧವಾಗಿ ವಿಂಗಡಿಸಬೇಕು. ಅದರಲ್ಲಿ ಎರಡನೆಯ ಭಾಗವು ಸಂಗವಕಾಲವೆನಿಸುತ್ತದೆ. ಈ ಸಂಗವಕಾಲವು ಮುಗಿಯುವವರೆಗೆ ಪ್ರಾತಃಕಾಲಿಕಹೋಮಕ್ಕೆ ಮುಖ್ಯಕಾಲವೆನಿಸುತ್ತದೆ. ಹಿಂದೆ ಹೇಳಿದ ಪ್ರದೋಷಕಾಲವು ಮುಗಿಯುವವರೆಗೆ ಸಾಯಂಕಾಲಿಕಹೋಮಕ್ಕೆ ಮುಖ್ಯಕಾಲವೆನಿಸುತ್ತದೆ."

ಮುಖ್ಯಕಾಲದಲ್ಲಿ ಮಾಡಲು ಸಾಧ್ಯವಾಗದಿದ್ದರೆ ಗೌಣಕಾಲದಲ್ಲಿ ಮಾಡಬೇಕು

ಮುಖ್ಯಕಾಲೇ ಯದಾಽವಶ್ಯಂ ಕರ್ಮ ಕರ್ತುಂ ನ ಶಕ್ಯತೇ |
ಗೌಣಕಾಲೇಽಪಿ ಕರ್ತವ್ಯಂ ಗೌಣೋಽಪ್ಯತ್ರೇದೃಶೋ ಭವೇತ್ ||
ರಾತ್ರೌ ಪ್ರಹರಪರ್ಯಂತಂ ದಿವಾ ಕೃತ್ಯಾನಿ ಕಾರಯೇತ್ |
ಬ್ರಹ್ಮಯಜ್ಞಂ ಚ ಸೌರಂ ಚ ವರ್ಜಯಿತ್ವಾ ವಿಶೇಷತಃ || (ಕಾತ್ಯಾಯನರ ವಚನ)

"ಮುಖ್ಯಕಾಲದಲ್ಲಿ ಅವಶ್ಯವಾಗಿ ಮಾಡಬೇಕಾದ ಕರ್ಮಗಳನ್ನು ಮಾಡಲು ಸಾಧ್ಯವಾಗದಿದ್ದಲ್ಲಿ ಗೌಣಕಾಲದಲ್ಲಾದರೂ ಮಾಡಬೇಕು. ಪ್ರಕೃತದಲ್ಲಿ ಗೌಣಕಾಲ ಯಾವುದು ಎಂಬ ವಿಷಯವನ್ನು ವಿವರಿಸುತ್ತೇವೆ. ರಾತ್ರಿಯಲ್ಲಿ ಮೊದಲನೆಯ ಪ್ರಹರಕಾಲವು ಮುಗಿಯುವವರೆಗಿನ ಕಾಲವು ಗೌಣಕಾಲವೆನಿಸುತ್ತದೆ. ಆ ಕಾಲದಲ್ಲಿ ಬ್ರಹ್ಮಯಜ್ಞ ಮುಂತಾದ ಪಂಚಯಜ್ಞಗಳನ್ನೂ ಸೌರವ್ರತವನ್ನೂ ಬಿಟ್ಟು ಹಗಲಿನಲ್ಲಿ ಮಾಡಬೇಕಾದ ಸರ್ವಕಾರ್ಯಗಳನ್ನೂ ಮಾಡಬಹುದು. ಬ್ರಹ್ಮಯಜ್ಞ ಮುಂತಾದ ಪಂಚಯಜ್ಞಗಳನ್ನೂ ಸೌರವ್ರತವನ್ನೂ ಹಗಲಿನಲ್ಲಿಯೇ ಮಾಡಬೇಕು."

### ಪಂಚಯಜ್ಞಗಳಿಗೆ ಕಾಲ

ಮಹತಃ ಪಂಚಯಜ್ಞಾಂಸ್ತು ದಿವ್ಯವೇತ್ಯಾಹ ಗೌತಮಃ |

"ಪಂಚಮಹಾಯಜ್ಞಗಳನ್ನು ಹಗಲಿನಲ್ಲೇ ಮಾಡಬೇಕು." ಇದು ಗೌತಮರ ಮತ.

### ಪಕ್ಷಹೋಮ

ಶರೀರಾಪದ್ಯವೇದ್ಯತ್ರ ಭಯಾದ್ವಾರ್ತಿಃ ಪ್ರಜಾಯತೇ |
ತದನ್ಯಾಸ್ವಪಿ ಚಾಪತ್ಸು ಪಕ್ಷಹೋಮೋ ವಿಧೀಯತೇ || (ಮರೀಚಿ ವಚನ)

"ಹಿಂದೆ ಹೇಳಿದಂತೆ ಪ್ರತಿದಿನದಲ್ಲಿಯೂ ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಹೋಮವನ್ನು ಮಾಡಬೇಕು. ಆದರೆ ಶರೀರಕ್ಕೆ ರೋಗಾದಿಗಳಿಂದ ಪೀಡೆಯು ಏರ್ಪಟ್ಟರೂ ಯಾವುದಾದರೂ ಒಂದು ಹೆದರಿಕೆಯಿಂದ ಪೀಡೆಯು ಏರ್ಪಟ್ಟಾಗಲೂ ಬೇರೆ ವಿಧವಾದ ಆಪತ್ತುಗಳು ಬಂದಾಗಲೂ ಹದಿನೈದು ದಿನಗಳ ಮಧ್ಯದಲ್ಲಿ ಒಂದು ದಿನದಲ್ಲಿ ಮಾತ್ರ ಹೋಮವನ್ನು ಮಾಡಬೇಕು. ಇದೇ ಪಕ್ಷಹೋಮವೆನಿಸುತ್ತದೆ."

### ಪಕ್ಷಹೋಮದ ಪ್ರಕಾರ

"ಪ್ರತಿಪದಂ ಸಾಯಂ ಚತುಶ್ಚತುರ್ಗೃಹೀತ್ವಾ ಹ್ಯೇಕಾ ಸಮಿತ್, ಸಕೃದ್ಧೋಮಃ ಸಕೃತ್ಪಾಣಿಸಂಮಾರ್ಜನಂ, ಸಕೃದುಪಸ್ಥಾನಮಿತಿ, ಏವಂ ಪ್ರಾತರಪಿ."

"ಒಂದೊಂದು ಪಕ್ಷಗಳ ಪ್ರತಿಪತ್ತಿನ ದಿನದಲ್ಲಿ ಸಾಯಂಕಾಲದಲ್ಲಿ ಒಂದು ಸಮಿತ್ತನ್ನು ಒಮ್ಮೆ ಹೋಮ ಮಾಡಬೇಕು. ಒಮ್ಮೆ ಕೈಗಳನ್ನು ತೊಳೆದುಕೊಳ್ಳಬೇಕು. ಒಮ್ಮೆ ಉಪಸ್ಥಾನ ಮಾಡಬೇಕು. ಹೀಗೆ ನಾಲ್ಕು ಸಲ ಮಾಡಬೇಕು. ಇದು ಪಕ್ಷಹೋಮವೆನಿಸುತ್ತದೆ. ಇದೇ ರೀತಿಯಲ್ಲಿ ಅದೇ ದಿನದಲ್ಲಿ ಪ್ರಾತಃಕಾಲದಲ್ಲಿಯೂ ಮಾಡಬೇಕು."

### ಪಕ್ಷಹೋಮಕ್ಕೆ ಅಪವಾದ

ಪಕ್ಷಹೋಮಾನಥೋ ಕೃತ್ವಾ ಗತ್ವಾ ತಸ್ಮಾನ್ನಿವರ್ತಿತಃ |
ಹೋಮಂ ಪುನಃ ಪ್ರಕುರ್ಯಾತ್ತು ನ ಚಾಸೌ ದೋಷಭಾಗ್ಭವೇತ್ ||

"ಯಾವ ಆಪತ್ತಿನಿಂದ ಪಕ್ಷಹೋಮವನ್ನು ಆರಂಭಿಸಿದನೋ ಆ ಆಪತ್ತಿನಿಂದ ಬಿಡುಗಡೆಯಾದರೆ ಅಂದಿನಿಂದ ಪ್ರತಿದಿನದಲ್ಲಿಯೂ ಅಗ್ನಿಹೋತ್ರಹೋಮವನ್ನು ಪುನಃ ಆರಂಭಿಸಬೇಕು. ಹೀಗೆ ಮಾಡುವುದರಿಂದ ಪಕ್ಷಹೋಮವನ್ನು ನಿಲ್ಲಿಸಿದ್ದರಿಂದ ದೋಷಿಯಾಗುವುದಿಲ್ಲ."

### ಪುನರಾಧಾನ

ವಿಹಾಯಾಗ್ನಿಂ ಸಭಾರ್ಯಶ್ಚ ಸೀಮಾಮುಲ್ಲಂಘ್ಯ ಗಚ್ಛತಿ |
ಹೋಮಕಾಲಾತ್ಯಯೇ ತಸ್ಯ ಪುನರಾಧಾನಮಿಷ್ಯತೇ ||

"ಯಜಮಾನನು ಪತ್ನೀಸಹಿತನಾಗಿ ಅಗ್ನಿಯನ್ನು ಬಿಟ್ಟು ತಮ್ಮ ಊರಿನ ಎಲ್ಲೆಯನ್ನು ಬಿಟ್ಟು ಹೋದರೆ ಆಗ ಹೋಮಕಾಲದಲ್ಲಿ ಅಗ್ನಿಹೋತ್ರಹೋಮವನ್ನು ಮಾಡಲು ಸಾಧ್ಯವಿಲ್ಲದಿರುವ ಸಂಭವವು ಬರುವುದುಂಟು. ಇಂತಹ ಸಂದರ್ಭದಲ್ಲಿ ಪುನಃ ಅಗ್ನ್ಯಾಧಾನವನ್ನು ಮಾಡಿ ಅಗ್ನಿಹೋತ್ರಹೋಮವನ್ನು ಮಾಡಬೇಕು."

ಪ್ರೋಷಿತಸ್ಯ ಯದಾ ಪತ್ನೀ ಯದಿ ಗ್ರಾಮಾಂತರಂ ವ್ರಜೇತ್ |
ಹೋಮಕಾಲೇ ತು ಸಂಪ್ರಾಪ್ತೇ ನಾಸೌ ದೋಷೇಣ ಯುಜ್ಯತೇ ||

"ಕಾರ್ಯಾಂತರವಶದಿಂದ ಯಜಮಾನನು ದೇಶಾಂತರಕ್ಕೆ ಹೋಗಿರುವಾಗ ಅವನ ಪತ್ನಿಯೂ ದೇಶಾಂತರಕ್ಕೆ ಹೋಗುವ ಸಂಭವವು ಬಂದರೆ ಹೋಮಕಾಲದಲ್ಲಿ ಹಿಂದಿರುಗಿ ಬರುವುದಾದರೆ ದೋಷವಿಲ್ಲ. ಪುನರಾಧಾನವನ್ನು ಮಾಡಬೇಕಾಗಿಲ್ಲ."

ಅಥ ತತ್ರೈವ ವಸತಿ ಹೋಮಕಾಲವ್ಯತಿಕ್ರಮಃ |
ಲೌಕಿಕಾಗ್ನಿರ್ವಿಧೀಯೇತ ಕಾಠಕಶ್ರುತಿದರ್ಶನಾತ್ || (ಶೌನಕರ ವಚನ)

"ಯಜಮಾನನು ಪರವೂರಿಗೆ ಹೋಗಿರುವಾಗ ಅವನ ಪತ್ನಿಯು ಊರಿನಲ್ಲೇ ಇದ್ದರೂ ಸಕಾಲದಲ್ಲಿ ಹೋಮವನ್ನು ಮಾಡದಿದ್ದರೆ ಪುನರಾಧಾನವನ್ನು ಮಾಡಬೇಕು. ಇದನ್ನು ಕಾಠಕಶ್ರುತಿಯು ಹೇಳಿರುವುದು."

ಅಗ್ನಾವನುಗತೇ ಯತ್ರ ಹೋಮಕಾಲದ್ವಯಂ ವ್ರಜೇತ್ |
ಉಭಯೋರ್ವಿಪ್ರವಾಸೇ ತು ಲೌಕಿಕೋಽಗ್ನಿರ್ವಿಧೀಯತೇ || (ಶೌನಕರ ವಚನ)

"ಯಜಮಾನನೂ ಅವನ ಪತ್ನಿಯೂ ಇಬ್ಬರೂ ಅಗ್ನಿಯನ್ನು ತೆಗೆದುಕೊಂಡು ಪರವೂರಿಗೆ ಹೋಗಿದ್ದರೂ ಆಗ ಪ್ರಾತಃ ಕಾಲ ಮತ್ತು ಸಾಯಂಕಾಲಗಳಲ್ಲಿ ಅಂದರೆ ಎರಡು ಸಲ ಆಹುತಿಯನ್ನು ಕೊಡದಿದ್ದರೆ ಪುನರಾಧಾನವನ್ನು ಮಾಡಬೇಕು." (ಈ ಶ್ಲೋಕದಲ್ಲಿ ಹೇಳಿರುವ ಪುನರಾಧಾನವು ಸಮಿತ್ತಿನಲ್ಲಾಗಲೀ ತನ್ನ ಶರೀರದಲ್ಲಾಗಲೀ ಅಗ್ನಿಯನ್ನು ಸಮಾರೋಪಣ ಮಾಡಿಕೊಂಡು ಹೋದಾಗ ಎಂದು ತಿಳಿಯಬೇಕು.)

ಧಾರ್ಯಮಾಣಶ್ಚತೂರಾತ್ರಮಹೂಯಮಾನೋಽಗ್ನಿರ್ಲೌಕಿಕಃ ಸಂಪದ್ಯತೇ || (ಆಪಸ್ತಂಬರ ವಚನ)

"ನಾಲ್ಕು ರಾತ್ರಿಗಳವರೆಗೆ ಸಮಿತ್ತಿನಲ್ಲಿ ಅಥವಾ ತನ್ನ ದೇಹದಲ್ಲಿ ಸಮಾರೋಪಣ ಮಾಡಿಕೊಂಡು ಹೋಮವನ್ನು ಮಾಡದೆ ಅಗ್ನಿಯನ್ನು ಧರಿಸಿದ್ದರೆ ನಾಲ್ಕು ರಾತ್ರಿಗಳ ಮೇಲೆ ಪುನರಾಧಾನವನ್ನು ಮಾಡಬೇಕು."

ಗೃಹಸ್ಥಿತಾಯಾಂ ಜ್ಯೇಷ್ಠಾಯಾಂ ಭಾರ್ಯಾಯಾಂ ಸಂಧ್ಯಯೋರಪಿ |
ಕನಿಷ್ಠಾನಿರ್ಗಮೋ ಗ್ರಾಮಾದ್ಬಹಿಶ್ಚೇನ್ನಾತ್ರ ದುಷ್ಯತಿ ||

"ಯಜಮಾನನಿಗೆ ಅನೇಕ ಪತ್ನಿಯರಿದ್ದಾಗ ಜ್ಯೇಷ್ಠಪತ್ನಿಯು ಮನೆಯಲ್ಲಿಯೇ ಇದ್ದರೆ ಕನಿಷ್ಠಪತ್ನಿಯು ಗ್ರಾಮಾಂತರಕ್ಕೆ ಹೋದರೂ ಜ್ಯೇಷ್ಠಪತ್ನಿಯೇ ಮನೆಯಲ್ಲಿದ್ದು ಹೋಮಗಳನ್ನು ಅವಿಚ್ಛಿನ್ನವಾಗಿ ನಡೆಯಿಸುತ್ತಿರುವುದರಿಂದ ಕನಿಷ್ಠ ಪತ್ನಿಯು ಮನೆಯಲ್ಲಿ ಇಲ್ಲದಿದ್ದರೂ ದೋಷವಿಲ್ಲ."

ಸ್ವೇದಾರ್ಥೇ ವಾ ಪ್ರತಾಪಾರ್ಥೇ ಪಾದಸ್ಪರ್ಶೇ ಕೃತೇಽನಲೇ |
ಅಸ್ಪೃಶ್ಯಾಮೇಧ್ಯಸಂಸ್ಪರ್ಶೇ ಪುನರಾಧಾನಮಿಷ್ಯತೇ ||

"ಬೆವರು ನೀರು ಅಗ್ನಿಯಲ್ಲಿ ಬಿದ್ದರೂ, ಅಗ್ನಿಯು ಆರಿ ಹೋದರೂ, ಕಾಲು, ಅಸ್ಪೃಶ್ಯ ವ್ಯಕ್ತಿಗಳು, ಅಪರಿಶುದ್ಧವಸ್ತುಗಳು ಮುಂತಾದ ವಸ್ತುಗಳ ಸ್ಪರ್ಶವು ಅಗ್ನಿಗೆ ಏರ್ಪಟ್ಟರೂ ಪುನರಾಧಾನವನ್ನು ಮಾಡಬೇಕು."

### ಔಪಾಸನವು ವಿಚ್ಛಿನ್ನವಾದಾಗ ಪುನಃಸಂಧಾನ

ವಿಚ್ಛಿನ್ನವಹ್ನಿಮಾಧಾಯ ಕರ್ಮಾಂಗಂ ವಿಧಿವದ್ದ್ವಿಜಃ |
ಸಾಯಮಾರಭ್ಯ ಜುಹುಯಾದಾಹುತೀನಾಂ ಚತುಷ್ಟಯಮ್ ||
ಯದಾ ಸಂಧೀಯತೇ ವಹ್ನಿಃ ಪ್ರಾಯಶ್ಚಿತ್ತಪುರಸ್ಸರಃ |
ತದಾ ಸಾಯಂ ವಿಜಾನೀಯಾತ್ಪ್ರಾತರ್ಹೋಮಂ ತತಃ ಪರಮ್ ||

"ಔಪಾಸನವು ನಿಂತು ಹೋದರೆ ಬಿಟ್ಟು ಹೋದ ಅಗ್ನಿಯನ್ನು ಪುನಃ ಸಂಧಾನ ಮಾಡಿಕೊಳ್ಳಬೇಕು. ಆಗ ಆ ಅಗ್ನಿಯು ಯಜ್ಞಕರ್ಮಾಂಗವೆನಿಸುತ್ತದೆ. ಆ ಅಗ್ನಿಯಲ್ಲಿ ಸಾಯಂಕಾಲದಲ್ಲಿ ನಾಲ್ಕು ಆಹುತಿಗಳನ್ನು ಕೊಡಬೇಕು. ಈ ಆಹುತಿಗಳು ಪ್ರಾಯಶ್ಚಿತ್ತಾಹುತಿಗಳೆನಿಸುತ್ತವೆ. ಈ ಪ್ರಾಯಶ್ಚಿತ್ತಾಹುತಿಗಳಿಂದ ಅಗ್ನಿಯನ್ನು ಪುನಃ ಸಂಧಾನ ಮಾಡಿಕೊಂಡು ಸಾಯಂಕಾಲದ ಔಪಾಸನವನ್ನು ಮಾಡಿಕೊಂಡು ಮರುದಿನ ಪ್ರಾತಃಕಾಲದಿಂದ ಕ್ರಮವಾಗಿ ಹೋಮಗಳನ್ನು ಮಾಡಬೇಕು."

## ಪ್ರತಿಪತ್ತಿನಲ್ಲಿ ಅಗ್ನಿಸಂಧಾನವನ್ನು ಮಾಡಕೂಡದು

ಪ್ರತಿಪತ್ಪರ್ವಸಂಧಾನಕರ್ಮ ಕರ್ತುರ್ವಿನಾಶನಂ |
ಸಂಧಾಯ ತ್ರಿದಿನಂ ಹುತ್ವಾ ಸ್ಥಾಲೀಪಾಕಂ ಸಮಾಚರೇತ್ ||

"ಪ್ರತಿಪತ್ತಿನ ದಿನದಲ್ಲಿ ಅಗ್ನಿಸಂಧಾನವನ್ನು ಮಾಡಕೂಡದು. ಹಾಗೆ ಮಾಡಿದರೆ ಯಜಮಾನನಿಗೆ ಹಾನಿಯು ಏರ್ಪಡುತ್ತದೆ. ಅದಕ್ಕಾಗಿ ಬೇರೆ ದಿನಗಳಲ್ಲಿ ಅಗ್ನಿಸಂಧಾನವನ್ನು ಮಾಡಿಕೊಂಡು ಮೂರು ದಿನಗಳಲ್ಲಿ ಹೋಮವನ್ನು ಮಾಡಿ ಸ್ಥಾಲೀಪಾಕವನ್ನು ಮಾಡಬೇಕು. ಇದು ಪ್ರತಿಪತ್ತಿನ ದಿನದಲ್ಲಿ ವಿಚ್ಛಿನ್ನಾಗ್ನಿ ಪುನಃ ಸಂಧಾನವನ್ನು ಮಾಡಿದ್ದಕ್ಕೆ ಪ್ರಾಯಶ್ಚಿತ್ತವೆನಿಸುತ್ತದೆ."

## ಅಗ್ನಿಸಂಧಾನಪ್ರಕಾರ

ನಿತ್ಯೋ ಧಾರ್ಯೋಽನುಗತೋ ಮಂಥ್ಯಃ ಶ್ರೋತ್ರಿಯಾಗಾರಾದ್ವಾಽಗ್ನಿಮಾಹೃತ್ಯೋಪವಾಸಶ್ಚಾನ್ಯತರಸ್ಯ ಭಾರ್ಯಾ ಯಾಃ ಪತ್ಯುರ್ವಾಽನುಗತೇಽಪಿ ವಾ ಉತ್ತರಯಾ ಜುಹುಯಾನ್ನೋಪವಸೇತ್ | (ಆಪಸ್ತಂಬರ ವಚನ)

"ಅರಣಿಕಾಷ್ಠಗಳನ್ನು ಮಥಿಸಿ ಸೃಷ್ಟಿಸಲ್ಪಟ್ಟ ಅಗ್ನಿಯನ್ನು ಯಾವಾಗಲೂ ಜೊತೆಯಲ್ಲಿ ಇಟ್ಟುಕೊಳ್ಳಬೇಕು. ಆ ಅಗ್ನಿಯು ಅಗ್ನಿ ಪುನಃಸಂಧಾನಕ್ಕೆ ಮುಖ್ಯವೆನಿಸುತ್ತದೆ. ಆ ಅಗ್ನಿಯು ಇಲ್ಲದಿದ್ದಲ್ಲಿ ಶ್ರೋತ್ರಿಯರ ಮನೆಯಿಂದ ಅಗ್ನಿಯನ್ನು ತರಬೇಕು. ಆ ಅಗ್ನಿಯಲ್ಲಿ "ಅಯಾಶ್ಚ" ಮುಂತಾದ ಮಂತ್ರಗಳಿಂದ ಪ್ರಾಯಶ್ಚಿತ್ತಾಹುತಿಗಳನ್ನು ಕೊಡಬೇಕು. ಆ ದಿನದಲ್ಲಿ ಯಜಮಾನನಾಗಲೀ ಅವನ ಪತ್ನಿಯಾಗಲೀ ಉಪವಾಸವಾಗಿರಬೇಕು. ಹಗಲಿನಲ್ಲಾಗಲೀ ರಾತ್ರಿಯಲ್ಲಾಗಲೀ ಅಗ್ನಿಯು ತಾನೇ ಶಾಂತವಾದರೂ ಅಮೇಧ್ಯ ಮುಂತಾದ ಅಶುಚಿ ಪದಾರ್ಥಗಳ ಸ್ಪರ್ಶವು ಏರ್ಪಟ್ಟರೂ ಇನ್ನೊಬ್ಬನಿಂದ ಕದಿಯಲ್ಪಟ್ಟರೂ ಈ ಪ್ರಾಯಶ್ಚಿತ್ತವನ್ನು ಮಾಡಬೇಕು. ಕದಿಯಲ್ಪಟ್ಟಾಗ ಅಥವಾ ಅಶುಚಿಪದಾರ್ಥಗಳ ಸ್ಪರ್ಶವು ಅಗ್ನಿಗೆ ಏರ್ಪಟ್ಟಾಗ ಉಪೋಷಣವೇ ಮುಖ್ಯವೆನಿಸುತ್ತದೆ. ತಾನೇ ಶಾಂತವಾದಾಗ ಉಪೋಷಣವನ್ನೂ ಪ್ರಾಯಶ್ಚಿತ್ತಾಹುತಿಪ್ರದಾನವನ್ನೂ ಮಾಡಬೇಕು. ಭೋಜನಕ್ಕಿಂತ ಪೂರ್ವದಲ್ಲಿ ಅಗ್ನಿನಾಶವು ಏರ್ಪಟ್ಟರೆ ಮರುಕ್ಷಣದಲ್ಲಿಯೇ ಅಗ್ನಿಸಂಧಾನವನ್ನು ಮಾಡಿಕೊಂಡು ಹೋಮವನ್ನು ಮಾಡಬೇಕು. ಹೋಮವನ್ನು ಮಾಡಿ ಮುಗಿಸುವವರೆಗೆ ಉಪವಾಸವಾಗಿರಬೇಕು. ಊಟವನ್ನು ಮಾಡಿ ಮುಗಿಸಿದ ಮೇಲೆ ಅಗ್ನಿ ನಾಶವಾದರೆ ಎರಡು ಹೋಮಗಳನ್ನು ಮಾಡಿ ಮುಗಿಸುವವರೆಗೆ ಉಪವಾಸವಾಗಿರಬೇಕು."

## ಅಗ್ನಿಧಾರಣಪಕ್ಷವು ಉತ್ತಮ

ಧೃತೋಽಗ್ನಿರುತ್ತಮಃ ಕುಂಡೇ ಹ್ಯಾರಣ್ಯೋ ಮಧ್ಯಮಃ ಸ್ಮೃತಃ |
ಆತ್ಮನ್ಯಾರೋಪಿತೋ ವಹ್ನಿರಧಮಃ ಪರಿಕೀರ್ತಿತಃ || (ಕಾತ್ಯಾಯನರ ವಚನ)

ಪ್ರತಿದಿನದಲ್ಲಿಯೂ ಔಪಾಸನವನ್ನು ಮಾಡಿದ ಮೇಲೆ ಆ ಅಗ್ನಿಯು ಆರದಂತೆ ಅಗ್ನಿಯನ್ನು ಕುಂಡದಲ್ಲೇ ರಕ್ಷಿಸಬೇಕು. ವಿವಾಹದಿನದಿಂದ ಸಾಯುವವರೆಗೂ ಆ ಅಗ್ನಿಗೆ ಕಾಲಕಾಲದಲ್ಲಿ ಕಟ್ಟಿಗೆಯನ್ನು ಹಾಕುತ್ತಾ ರಕ್ಷಿಸಬೇಕು. ಹೀಗೆ ಮಾಡಿದರೆ ಆ ಅಗ್ನಿಯು ಉತ್ತಮವೆನಿಸುತ್ತದೆ. ಆಕಸ್ಮಾತ್ತಾಗಿ ಆ ಅಗ್ನಿಯು ಆರಿ ಹೋದರೆ ಅರಣಿಕಾಷ್ಠದಿಂದ ಮಥನ ಮಾಡಿ ಅಗ್ನಿಯನ್ನು ಉತ್ಪಾದನೆ ಮಾಡಿ ಆ ಅಗ್ನಿಯನ್ನು ಪುನಃಸಂಧಾನ ಮಾಡಿಕೊಳ್ಳಬೇಕು. ಈ ಅಗ್ನಿಯು ಮಧ್ಯಮವೆನಿಸುತ್ತದೆ. ಪ್ರತಿದಿನದಲ್ಲಿ ಔಪಾಸನವು ಮುಗಿದ ಕೂಡಲೇ ಅಗ್ನಿಯನ್ನು ತನ್ನ ದೇಹದಲ್ಲಿ ಆವಾಹನೆ ಮಾಡಿಕೊಳ್ಳಬೇಕು. ಪುನಃ ಔಪಾಸನವನ್ನು ಮಾಡುವಾಗ ತನ್ನ ದೇಹದಿಂದ ಅಗ್ನಿಯನ್ನು ಕುಂಡದಲ್ಲಿ ಆವಾಹನೆ ಮಾಡಿಕೊಳ್ಳಬೇಕು. ಹೀಗೆ ಮಾಡುತ್ತಿದ್ದರೆ ಕುಂಡದಲ್ಲಿರುವ ಅಗ್ನಿಯು ಆರಿ ಹೋದರೂ ಅಡ್ಡಿಯಿಲ್ಲ. ಹೀಗೆ ತನ್ನ ದೇಹದಲ್ಲಿ ಆವಾಹನೆ ಮಾಡಿಕೊಳ್ಳುವ ಅಗ್ನಿಯು ಅಧಮವೆನಿಸುತ್ತದೆ.

## ಅಗ್ನಿಯ ಆವಾಹನವು ಮೂರು ವಿಧ

ಏಕಾಗ್ನೇಸ್ತ್ರಿವಿಧಂ ಸಮಾರೋಪಣಂ ಆತ್ಮನ್ಯರಣ್ಯೋರ್ವಾ ಸಮಿತ್ಸು ವಾ | (ಬೋಧಾಯನರ ವಚನ)

ಅಗ್ನಿಯನ್ನು ಆವಾಹಿಸಿಕೊಳ್ಳುವುದೇ ಅಗ್ನಿಸಮಾರೋಪಣವೆನಿಸುತ್ತದೆ. (1) ಈ ಅಗ್ನಿಯನ್ನು ತನ್ನ ದೇಹದಲ್ಲಿ ಆವಾಹನೆ ಮಾಡಿಕೊಂಡಾಗ ಆತ್ಮಸಮಾರೋಪಣವೆನಿಸುತ್ತದೆ. (2) ಅರಣಿಕಾಷ್ಠಗಳಲ್ಲಿ ಆವಾಹಿಸಿಕೊಂಡಾಗ ಅರಣಿಸಮಾರೋಪಣವೆನಿಸುತ್ತದೆ. (3) ಸಮಿತ್ತುಗಳಲ್ಲಿ ಆವಾಹಿಸಿಕೊಂಡಾಗ ಸಮಿತ್ಸಮಾರೋಪಣವೆನಿಸುತ್ತದೆ.

## ಸಮಿತ್ತುಗಳು

ಪಲಾಶೌದುಂಬರಾಶ್ವತ್ಥಖದಿರಾದಿಸಮಿತ್ಸು ವಾ |
ವಹ್ನಿಮಾರೋಪಯೇದ್ವಿದ್ವಾನಯಂ ತ ಇತಿ ಮಂತ್ರತಃ ||
ಆಜುಹ್ವಾನೇತಿ ಮಂತ್ರೇಣೋದ್ಬುದ್ಧ್ಯಸ್ವೇತ್ಯನೇನ ಚ |
ಲೌಕಿಕಾಗ್ನೌ ಸಮಾಧಾಯ ಸಮಿಧಂ ಜುಹುಯಾತ್ತತಃ ||

"ಪಲಾಶ, ಅತ್ತಿ, ಅಶ್ವತ್ಥ, ಖದಿರ ಮುಂತಾದ ಸಮಿತ್ತುಗಳಲ್ಲಿ "ಅಯಂ ತೇ ಯೋನಿಃ" ಎಂಬ ಮಂತ್ರದಿಂದ ಅಗ್ನಿಯನ್ನು ಸಮಾರೋಪಣೆ ಮಾಡಿಕೊಳ್ಳಬೇಕು. "ಆಜುಹ್ವಾನಃ" ಎಂಬ ಮಂತ್ರದಿಂದಲೂ "ಉದ್ಬುದ್ಧ್ಯಸ್ವ" ಎಂಬ ಮಂತ್ರದಿಂದಲೂ ಕಟ್ಟಿಗೆಯಲ್ಲಿರುವ ಅಗ್ನಿಯನ್ನು ಕುಂಡದಲ್ಲಿ ಆವಾಹನೆ ಮಾಡಿಕೊಂಡು ಆ ಅಗ್ನಿಯಲ್ಲಿ ಸಮಿತ್ತನ್ನು ಹೋಮ ಮಾಡಬೇಕು."

## ದೇಹದಲ್ಲಿ ಸಮಾರೋಪಣೆ ಮಾಡಿದಾಗ ಅಗ್ನಿನಾಶ

ಆತ್ಮಾರೂಢೋ ನಿಮಜ್ಜೇದ್ವಾ ವದೇದ್ವಾ ಪತಿತಾದಿಭಿಃ |
ಅನೃತೌ ವಾ ಸ್ತ್ರಿಯಂ ಗಚ್ಛೇದಥವಾ ಕಾಮಮೋಹಿತಃ |
ವದಂತ್ಯೇಷ ನಿಮಿತ್ತೇಷು ಕೇಚಿದಗ್ನಿವಿನಾಶನಮ್ |
ಆಪಸ್ತಂಬಸ್ಯ ತನ್ನೇಷ್ಟಮಾತ್ಮಾರೂಢಃ ಸದಾ ಶುಚಿಃ || (ಬೋಧಾಯನರ ವಚನ)

"ಅಗ್ನಿಯನ್ನು ದೇಹದಲ್ಲಿ ಸಮಾರೋಪಣ ಮಾಡಿಕೊಂಡಾಗ ದೇಹವು ಅಶುದ್ಧವಾದರೆ ಆ ದೇಹದಲ್ಲಿ ಸಮಾರೋಪಣ ಮಾಡಿಕೊಂಡ ಅಗ್ನಿಯು ನಷ್ಟವಾಗುತ್ತದೆ. ಆದ್ದರಿಂದ ಅಗ್ನಿಯು ನಷ್ಟವಾದಾಗ ಆ ಅಗ್ನಿಯನ್ನು ಪುನಃ ಸಂಧಾನ ಮಾಡಿಕೊಂಡು ಔಪಾಸನಹೋಮವನ್ನು ಮಾಡಿಕೊಳ್ಳಬೇಕು. ದೇಹದ ಅಶುದ್ಧಿಗೆ ಕಾರಣವನ್ನು ಹೇಳುತ್ತೇವೆ. (1) ಪತಿತ ಮುಂತಾದ ಅಶುದ್ಧವ್ಯಕ್ತಿಗಳೊಡನೆ ಸಂಭಾಷಣೆ ಮಾಡುವುದು. (2) ಋತುಕಾಲವನ್ನು ಬಿಟ್ಟು ಇತರ ಕಾಲದಲ್ಲಿ ಸ್ತ್ರೀಸಂಗವನ್ನು ಮಾಡುತ್ತಿರುವುದು. (3) ಋತುಕಾಲದಲ್ಲಿಯೂ ಕಾಮಪೀಡಿತನಾಗಿ ಯಥೇಷ್ಟಭೋಗವನ್ನು ಮಾಡುವುದು ಈ ಮೂರು ಕಾರಣಗಳು ದೇಹದ ಅಶುದ್ಧಿಗೆ ಕಾರಣವೆನಿಸುತ್ತವೆ. ಇದು ಬೋಧಾಯನರೇ ಮೊದಲಾದ ಕೆಲವರ ಮತ."

"ಆಪಸ್ತಂಬರು ಹೀಗೆ ಹೇಳುವುದಿಲ್ಲ. ಪ್ರತಿದಿನದಲ್ಲಿಯೂ ಔಪಾಸನವನ್ನು ಮಾಡುತ್ತಿರುವವನ ದೇಹವು ಯಾವ ಕಾರಣದಿಂದ ಅಶುದ್ಧವಾದರೂ ಆ ದೇಹದಲ್ಲಿ ಆರೋಪಿಸಲ್ಪಟ್ಟ ಅಗ್ನಿಯು ಅಶುದ್ಧನಾಗುವುದಿಲ್ಲ. ಆದ್ದರಿಂದ ಆ ಅಗ್ನಿಯಲ್ಲಿ ಔಪಾಸನಹೋಮವನ್ನು ಮಾಡಬಹುದು."

ಅಥಾಽಗ್ನೇರ್ವಿಪತ್ತಿಂ ವ್ಯಾಖ್ಯಾಸ್ಯಾಮಃ. ಅಮೇಧ್ಯಾಶುಚಿ-ಚಂಡಾಲ-ಶೂದ್ರ-ವಾಯಸ-ಪತಿತ-ರಜಸ್ವಲಾ-ಶ್ವಭಿಶ್ಚ ಸಂಸ್ಪರ್ಶೇ ಅರಣ್ಯೋರ್ವಿನಾಶೇ (ಆಖಂಡಾದರ್ಶವಚನ)

"ಅಗ್ನಿನಾಶಕ್ಕೆ ಕಾರಣಗಳನ್ನು ಹೇಳುವೆವು. ಅಗ್ನಿಗೆ ಅಮೇಧ್ಯ, ಅಶುಚಿಯಾದ ವಸ್ತುಗಳು, ಚಂಡಾಲ, ಶೂದ್ರ, ಕಾಗೆ, ಪತಿತರು, ಮುಟ್ಟಾದವಳು, ನಾಯಿ ಇವುಗಳ ಸ್ಪರ್ಶವು ಏರ್ಪಟ್ಟರೂ ಅರಣಿಕಾಷ್ಠಗಳು ಕಳೆದು ಹೋದರೂ ಅಗ್ನಿನಾಶವು ಏರ್ಪಡುತ್ತದೆ."

(ಈ ಅಖಂಡಾದರ್ಶವಚನದಲ್ಲಿ ಯಜಮಾನನ ಶರೀರಕ್ಕೆ ಅಶುದ್ಧವಸ್ತುಗಳ ಸ್ಪರ್ಶದಿಂದ ಆ ದೇಹದಲ್ಲಿ ಆವಾಹಿಸಲ್ಪಟ್ಟ ಅಗ್ನಿಯು ನಶಿಸುವುದಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಬೋಧಾಯನರ ಅಭಿಪ್ರಾಯವೇ ಅವರಿಗೆ ಸಂಮತವಾಗಿರುವುದಾಗಿ ತಿಳಿಯುತ್ತದೆ.)

### ಔಪಾಸನಾಗ್ನಿದ್ವಯಸ್ಪರ್ಶಕ್ಕೆ ಪ್ರಾಯಶ್ಚಿತ್ತ

ಔಪಾಸನಾಗ್ನಿದ್ವಯಸಂಗತಿಶ್ಚೇದಗ್ನಿಂ ಸಮಾರೋಪಣತೋ ವಿಭಜ್ಯ |
ಪೂರ್ವಸ್ಯ ಹೋತುರ್ವಿವಿಚಂ ಚ ಹುತ್ವಾ ಪಶ್ಚಾಚ್ಚ ಹೋತುಃ ಪಥಿಕೃಚ್ಚ ಸೋsಪಿ ||

"ಇಬ್ಬರು ಔಪಾಸನವನ್ನು ಮಾಡತಕ್ಕ ಯಜಮಾನರು ಕ್ರಮವಾಗಿ ಔಪಾಸನವನ್ನು ಮಾಡುತ್ತಾರೆ. ಅನಂತರದಲ್ಲಿ ಅವರಿಬ್ಬರ ಔಪಾಸನಾಗ್ನಿಗಳೂ ಯಾವುದೋ ಒಂದು ಕಾರಣದಿಂದ ಅವರವರ ಅಗ್ನಿಗಳನ್ನು ತಮ್ಮ ತಮ್ಮ ದೇಹಗಳಲ್ಲಿ ಸಮಾರೋಪಣ ಮಾಡುವುದಕ್ಕಿಂತ ಪೂರ್ವದಲ್ಲಿಯೇ ಒಟ್ಟುಗೂಡುತ್ತವೆ. ಇದು ಔಪಾಸನಾಗ್ನಿದ್ವಯಸಂಸ್ಪರ್ಶವೆನಿಸುತ್ತದೆ. ಈ ಸಂದರ್ಭದಲ್ಲಿ ಅವರಿಬ್ಬರ ಔಪಾಸನಾಗ್ನಿಗಳೂ ಒಟ್ಟುಗೂಡಿರುವುದರಿಂದ ಅವರವರ ಅಗ್ನಿಗಳನ್ನು ಅವರವರು ತಮ್ಮ ತಮ್ಮ ದೇಹದಲ್ಲಿ ಸಮಾರೋಪಣ ಮಾಡಿಕೊಳ್ಳುವುದು ಹೇಗೆ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ."

ಒಟ್ಟುಗೂಡಿದ ಅಗ್ನಿಯನ್ನು ಎರಡಾಗಿ ವಿಂಗಡಿಸಬೇಕು. ಆ ಎರಡು ಅಗ್ನಿಗಳಲ್ಲಿ ಒಂದು ಅಗ್ನಿಯನ್ನು ಮೊದಲನೆಯವನೂ ಇನ್ನೊಂದು ಅಗ್ನಿಯನ್ನು ಎರಡನೆಯವನೂ ತನ್ನದೆಂದು ತೀರ್ಮಾನಿಸಿಕೊಳ್ಳಬೇಕು. ಮೊದಲನೆಯವನು ತನ್ನ ಅಗ್ನಿಭಾಗದಲ್ಲಿ "ಅಗ್ನಯೇ ವಿವಿಚಯೇ ಸ್ವಾಹಾ" ಎಂದು ಹೇಳುತ್ತಾ ಪ್ರಾಯಶ್ಚಿತ್ತಾಹುತಿಗಳನ್ನು ಕೊಡಬೇಕು. ಎರಡನೆಯವನು "ಅಗ್ನಯೇ ಪಥಿಕೃತೇ ಸ್ವಾಹಾ" "ಅಗ್ನಯೇ ವಿಚಿತಯೇ ಸ್ವಾಹಾ" ಎಂದು ಎರಡು ಆಹುತಿಗಳನ್ನು ಕೊಟ್ಟು ಪ್ರಾಯಶ್ಚಿತ್ತಾಹುತಿಗಳನ್ನು ಕೊಡಬೇಕು. ಹೀಗೆ ಮಾಡಿದರೆ ಅವರವರ ಅಗ್ನಿಗಳಾಗುತ್ತವೆ. ಆ ಮೇಲೆ ತಾವು ತಾವು ತಮ್ಮ ತಮ್ಮ ಅಗ್ನಿಗಳನ್ನು ತಮ್ಮ ತಮ್ಮ ದೇಹಗಳಲ್ಲಿ ಏಕಕಾಲದಲ್ಲಿಯೇ ಸಮಾರೋಪಣ ಮಾಡಿಕೊಳ್ಳಬೇಕು."

### ವೈದಿಕಾಗ್ನಿ ಲೌಕಿಕಾಗ್ನಿಗಳ ಸ್ಪರ್ಶಕ್ಕೆ ಪ್ರಾಯಶ್ಚಿತ್ತ

ಏವಂ ವೈದಿಕಾಗ್ನೌ ಲೌಕಿಕಾಗ್ನಿಸಂಯೋಗೇ ವಿವಿಚಂ ಪಾಹಿ ಪಂಚಕಂ ಚ ಜುಹುಯಾತ್ |

"ಔಪಾಸನದ ಅಗ್ನಿಯು ವೈದಿಕಾಗ್ನಿಯೆನಿಸುತ್ತದೆ. ವೇದೋಕ್ತಸಂಸ್ಕಾರಗಳಿಲ್ಲದಿರುವ ಸಾಮಾನ್ಯವಾದ ಅಗ್ನಿಯು ಲೌಕಿಕಾಗ್ನಿಯೆನಿಸುತ್ತದೆ. ಈ ಎರಡು ಅಗ್ನಿಗಳು ಒಟ್ಟುಗೂಡಿದರೆ "ವಿವಿಚಂ ಪಾಹಿ ಸ್ವಾಹಾ" ಎಂದು ಐದು ಸಲ ಹೋಮವನ್ನು ಮಾಡಿ ಅಗ್ನಿಯನ್ನು ಸಮಾರೋಪಣ ಮಾಡಿಕೊಳ್ಳಬೇಕು."

### ಹೋಮದ್ರವ್ಯಗಳು

ಕೃತಮೋದನಸಕ್ತ್ವಾದಿ ತಂಡುಲಾದಿ ಕೃತಾಕೃತಮ್ |
ವ್ರೀಹ್ಯಾದಿ ಚಾಕೃತಂ ಪ್ರೋಕ್ತಮಿತಿ ಹವ್ಯಂ ತ್ರಿಧಾ ಬುಧೈಃ ||

"ಅನ್ನ ರೊಟ್ಟಿ ಹಿಟ್ಟು ಮುಂತಾದ ತಿನ್ನುವುದಕ್ಕೆ ಸಿದ್ಧವಾದ ವಸ್ತುಗಳು ಕೃತಪದಾರ್ಥವೆನಿಸುತ್ತವೆ. ಅಕ್ಕಿ ಮುಂತಾದ ವಸ್ತುಗಳು ತಿನ್ನುವುದಕ್ಕೆ ಸಿದ್ಧವಾಗಿಲ್ಲ. ಅವುಗಳು ಪಾಕ ಮಾಡುವುದಕ್ಕೆ ಸಿದ್ಧವಾಗಿವೆ. ಆದ್ದರಿಂದ ಕೃತಾಕೃತ ಪದಾರ್ಥಗಳೆನಿಸುತ್ತವೆ. ಭತ್ತ ಮುಂತಾದ ವಸ್ತುಗಳು ತಿನ್ನುವುದಕ್ಕೂ ಸಿದ್ಧವಾಗಿಲ್ಲ. ಪಾಕ ಮಾಡುವುದಕ್ಕೂ ಸಿದ್ಧವಾಗಿಲ್ಲ. ಆದ್ದರಿಂದ ಅಕೃತವೆನಿಸುತ್ತವೆ. ಹೀಗೆ ಹೋಮಕ್ಕೆ ಉಪಯುಕ್ತವಾಗಿರುವ ವಸ್ತುಗಳು ಮೂರು ವಿಧವಾಗಿವೆ.

ತೈಲಂ ದಧಿ ಪಯಸ್ಸೋಮೋ ಯವಾಗೂರೋದನಂ ಘೃತಮ್ |
ತಂಡುಲಾ ಮಾಂಸಮಾಷಶ್ಚ ದಶದ್ರವ್ಯಾಣಿ ಕಾಮತಃ || (ಕಾತ್ಯಾಯನರ ವಚನ)

"ಎಣ್ಣೆ, ಮೊಸರು, ಹಾಲು, ಸೋಮರಸ, ಗಂಜಿ, ಅನ್ನ, ತುಪ್ಪ, ಅಕ್ಕಿ, ಮಾಂಸ, ನೀರು ಈ ಹತ್ತು ವಸ್ತುಗಳು ಹೋಮದ್ರವ್ಯವೆನಿಸುತ್ತವೆ. ಈ ಹತ್ತು ದ್ರವ್ಯಗಳಲ್ಲಿ ಯಾವುದಾದರೂ ಒಂದು ದ್ರವ್ಯ ಅಥವಾ ಅನೇಕ ದ್ರವ್ಯಗಳಿಂದ ಹೋಮವನ್ನು ಮಾಡಬೇಕು. ಆದರೆ ಆ ದ್ರವ್ಯಗಳು ಆಯಾ ಹೋಮದಲ್ಲಿ ವಿಹಿತವಾಗಿರಬೇಕು."

ಹವಿಷ್ಯೇಷು ಯವಾ ಮುಖ್ಯಾಸ್ತದನು ವ್ರೀಹಯಃ ಸ್ಮೃತಾಃ |
ಅಭಾವೇ ವ್ರೀಹಿಯವಯೋರ್ದಧ್ನಾ ವಾ ಪಯಸಾಽಪಿ ವಾ ||
ತದಭಾವೇ ಯವಾಗ್ವಾ ವಾ ಜುಹುಯಾದುದಕೇನ ವಾ |
ಶಾಲಿಶ್ಯಾಮಾಕನೀವಾರಾ ವ್ರೀಹಿಗೋಧೂಮಯಾವಕಾಃ ||
ಏತೇಷಾಂ ತಂಡುಲಾ ಹೋಮ್ಯಾಃ ಸರ್ವರೂಪೇಣ ಹೇತವಃ |
ಪ್ರಿಯಂಗವಶ್ಶಾಲಯಶ್ಚ ಗೋಧೂಮಾ ವ್ರೀಹಯೋ ಯವಾಃ ||
ಸ್ವರೂಪೇಣಾಪಿ ಹೋತವ್ಯಾಃ ಸ್ವರೂಪೇಣೈವ ವೈ ತಿಲಾಃ |
ಯಥೋಕ್ತವಸ್ತ್ವಸಂಪತ್ತೌ ಗ್ರಾಹ್ಯಂ ತದನುಸಾರಿ ಯತ್ ||
ಯವಾನಾಮಿವ ಗೋಧೂಮಾ ವ್ರೀಹೀಣಾಮಿವ ಶಾಲಯಃ | (ಕಾತ್ಯಾಯನರ ವಚನ)

"ಯಜ್ಞದಲ್ಲಿ ಆಹುತಿಯನ್ನು ಕೊಡುವ ವಸ್ತುಗಳಿಗೆ ಹವಿಷ್ಯ ಎಂದು ಹೆಸರು. ಈ ಹವಿಷ್ಯವಸ್ತುಗಳಲ್ಲಿ ಯವಧಾನ್ಯವು ಮುಖ್ಯವಸ್ತುವೆನಿಸುತ್ತದೆ. ಅನಂತರದಲ್ಲಿ ಭತ್ತಗಳು ಮುಖ್ಯವೆನಿಸುತ್ತವೆ. ಈ ಯವಧಾನ್ಯ ಭತ್ತ ಎಂಬ ಎರಡು ವಸ್ತುಗಳು ಸಿಗದಿರುವಾಗ ಮೊಸರು ಅಥವಾ ಹಾಲು ಮುಖ್ಯವೆನಿಸುತ್ತದೆ. ಅದೂ ಸಿಗದಿರುವಾಗ ಗಂಜಿಯಿಂದಲಾಗಲೀ ಬರೀ ನೀರಿನಿಂದಾಗಲೀ ಹೋಮವನ್ನು ಮಾಡಬೇಕು."

"ಅಕ್ಕಿ, ಸಾವೆಅಕ್ಕಿ, ನೀವಾರಧಾನ್ಯ, ಗೋಧಿ, ಯವಧಾನ್ಯ ಇವುಗಳು ಹೋಮಕ್ಕೆ ಯೋಗ್ಯವಾದ ವಸ್ತುಗಳೆನಿಸುತ್ತವೆ. ಇವುಗಳು ಸಕಲಫಲಗಳನ್ನೂ ಕೊಡುತ್ತವೆ. ಪ್ರಿಯಂಗುಧಾನ್ಯ ನೆಲ್ಲು ಮುಂತಾದ ಹಿಂದೆ ಹೇಳಿದ ವಸ್ತುಗಳು ಸ್ವಭಾವದಿಂದಲೇ ಹೋಮಯೋಗ್ಯವಾದ ವಸ್ತುಗಳು. ಎಳ್ಳೂ ಸಹ ಸ್ವಭಾವದಿಂದಲೇ ಹೋಮಯೋಗ್ಯವಾದ ವಸ್ತುವೆನಿಸುತ್ತದೆ. ಹೋಮಕ್ಕೆ ಹೇಳಿರುವ ವಸ್ತುಗಳು ಸಿಗದಿದ್ದಾಗ ಆ ವಸ್ತುವನ್ನು ಅನುಸರಿಸುವ ಅಂದರೆ ಅದೇ ವಸ್ತುವಿನ ಸ್ವಭಾವ ಮತ್ತು ಗುಣಗಳಿಗೆ ಯೋಗ್ಯವಾಗಿರುವ ವಸ್ತುವನ್ನು ಸ್ವೀಕರಿಸಬೇಕು. ಉದಾ :- ಯವವು ಸಿಗದಿರುವಾಗ ಗೋಧಿಯನ್ನು ವ್ರೀಹಿಧಾನ್ಯವು ಸಿಗದಿರುವಾಗ ಶಾಲಿಧಾನ್ಯವನ್ನೂ ಸ್ವೀಕರಿಸಬೇಕು."

## ದ್ರವ್ಯ ಮತ್ತು ದೇವತೆಗಳನ್ನು ಹೇಳದಿರುವ ಹೋಮಗಳಲ್ಲಿ ದ್ರವ್ಯ ಮತ್ತು ದೇವತೆಗಳು

ಆಜ್ಯಂ ಹವ್ಯಯವಾದೇಶೇ ಜುಹೋತಿಷು ವಿಧೀಯತೇ |
ಮಂತ್ರಸ್ಯ ದೇವತಾ ಯಾಸ್ತು ಪ್ರಜಾಪತಿರಿತಿ ಸ್ಥಿತಿಃ || (ಕಾತ್ಯಾಯನರ ವಚನ)

"ಹೋಮಗಳಲ್ಲಿ ದ್ರವ್ಯವನ್ನು ಹೇಳದಿದ್ದರೆ ತುಪ್ಪವನ್ನು ದ್ರವ್ಯ ಎಂದು ತಿಳಿಯಬೇಕು. ದೇವತೆಗಳನ್ನು ಹೇಳದಿರುವಾಗ ಹೋಮಮಂತ್ರಗಳಲ್ಲಿ ಹೇಳಲ್ಪಟ್ಟ ದೇವತೆಯೂ ಪ್ರಜಾಪತಿರ್ದೇವತೆಯೂ ದೇವತೆಯೆಂದು ತಿಳಿಯಬೇಕು."

## ಆಹುತಿ ಪರಿಮಾಣ

ಪ್ರಸ್ಥಧಾನ್ಯಂ ಚತುಷ್ಷಷ್ಟೇರಾಹುತೇಃ ಪರಿಕೀರ್ತಿತಮ್ |
ತಿಲಾನಾಂ ತು ತದರ್ಧಂ ಸ್ಯಾತ್ತದರ್ಧಂ ಸ್ಯಾದ್ಘೃತಸ್ಯ ತು || (ಬೃಹಸ್ಪತಿ ವಚನ)

"ಒಂದು ಪ್ರಸ್ಥ ಅಂದರೆ ಒಂದು ಪಡಿ ಅಕ್ಕಿಯಿಂದ ನಿರ್ಮಿತವಾದ ಅನ್ನದಲ್ಲಿ 64 ಭಾಗವನ್ನು ಮಾಡಬೇಕು. ಹಾಗೆ ಮಾಡಿದಾಗ ಆ ಭಾಗಗಳಲ್ಲಿ ಒಂದು ಭಾಗವನ್ನು ಒಂದು ಆಹುತಿ ಎಂದು ತಿಳಿಯಬೇಕು. ಅದಕ್ಕೆ ಅರ್ಧಭಾಗದಷ್ಟು ಎಳ್ಳಿನ ಆಹುತಿಯೆಂದು ತಿಳಿಯಬೇಕು. ಎಳ್ಳಿನ ಆಹುತಿಯ ಅರ್ಧಭಾಗದಷ್ಟು ತುಪ್ಪದ ಆಹುತಿಯೆಂದು ತಿಳಿಯಬೇಕು."

ವ್ರೀಹೀಣಾಂ ಚ ಯವಾನಾಂ ಚ ಶತಮಾಹುತಿರಿಷ್ಯತೇ |
ಯದ್ವಾ ವ್ರೀಹಿಚತುಷ್ಷಷ್ಟಿರಾಹುತೇಃ ಪರಿಕೀರ್ತಿತಾ ||
ತಿಲಾನಾಂ ತು ತದರ್ಧಂ ಸ್ಯಾತ್ತದರ್ಧಂ ಸ್ಯಾದ್ಘೃತಸ್ಯ ತು || (ಬೋಧಾಯನರ ವಚನ)

"ನೆಲ್ಲು ಮತ್ತು ಯವಧಾನ್ಯಗಳಿಂದ ಆಹುತಿಯನ್ನು ಕೊಡುವುದಾದರೆ ಒಂದು ಪಡಿಗೆ ನೂರು ಆಹುತಿಗಳನ್ನು ಕೊಡಬೇಕು. ಅಥವಾ ನೆಲ್ಲಿನಿಂದ ಆಹುತಿಯನ್ನು ಕೊಡುವುದಾದರೆ ಒಂದು ಪಡಿ ಅನ್ನದಲ್ಲಿ 64ನೇ ಒಂದು ಭಾಗದಷ್ಟು ಆಹುತಿಯನ್ನು ಕೊಡಬೇಕು. ಎಳ್ಳಿನ ಆಹುತಿಯನ್ನು ಅನ್ನದ ಆಹುತಿಗೆ ಅರ್ಧದಷ್ಟು ಪ್ರಮಾಣದಿಂದಲೂ ತುಪ್ಪದ ಆಹುತಿಯನ್ನು ಎಳ್ಳಿನ ಆಹುತಿಯಲ್ಲಿ ಅರ್ಧದಷ್ಟು ಪ್ರಮಾಣದಿಂದಲೂ ಕೊಡಬೇಕು."

### ತುಪ್ಪದ ಆಹುತಿಯಲ್ಲಿ ತಾರತಮ್ಯ

ಯಜ್ಞಾರ್ಥಂ ಗೋಘೃತಂ ಗ್ರಾಹ್ಯಂ ತದಲಾಭೇ ತು ಮಾಹಿಷಮ್ |
ಆಜ್ಯಂ ವಾ ತದಲಾಭೇ ತು ಸಾಕ್ಷಾತ್ತೈಲಂ ಗೃಹ್ಯತೇ || (ಪುರಾಣವಚನ)

"ಹೋಮಕ್ಕಾಗಿ ಗೋವಿನ ತುಪ್ಪವನ್ನು ಸ್ವೀಕರಿಸಬೇಕು. ಅದು ಸಿಗದಿದ್ದರೆ ಎಮ್ಮೆಯ ತುಪ್ಪವನ್ನೂ ಅದೂ ಸಿಗದಿದ್ದರೆ ಆಡಿನ ತುಪ್ಪವನ್ನೂ ಅದೂ ಸಿಗದಿದ್ದರೆ ಎಳ್ಳೆಣ್ಣೆಯನ್ನೂ ಸ್ವೀಕರಿಸಬೇಕು."

### ಆಹುತಿಯನ್ನು ಕೊಡುವ ಸಾಧನ

ದ್ರವಂ ಸ್ರುವೇಣ ಹೋತವ್ಯಂ ಪಾಣಿನಾ ಕಠಿನಂ ಹವಿಃ |
ಅಂಗುಷ್ಠಪರ್ವಮಾತ್ರಂ ಸ್ಯಾದವದಾನಂ ತತೋಽಪಿ ಚ ||
ಜ್ಯಾಯಸ್ಸ್ವಿಷ್ಟಕೃದಾಜ್ಯಂ ತು ಚತುರಂಗುಲಸಂಮಿತಮ್ || (ಕಾತ್ಯಾಯನರ ವಚನ)

"ನೀರಾಗಿರುವ ವಸ್ತುವನ್ನು ಸ್ರುವದಿಂದಲೂ ಗಟ್ಟಿಯಾದ ವಸ್ತುವನ್ನು ಕೈಗಳಿಂದಲೂ ಹೋಮ ಮಾಡಬೇಕು. ಅಂಗುಷ್ಠದ ಗೆಣ್ಣಿನಷ್ಟು ಪರಿಮಾಣವುಳ್ಳ ವಸ್ತುವು ಅವದಾನವೆನಿಸುತ್ತದೆ. ಅದಕ್ಕಿಂತಲೂ ಅಧಿಕವೂ 4 ಅಂಗುಲಗಳಷ್ಟು ಆಕಾರವುಳ್ಳದ್ದೂ ಆಗಿರುವ ತುಪ್ಪದ ಆಹುತಿಯು ಸ್ವಿಷ್ಟಕೃದಾಹುತಿಯೆನಿಸುತ್ತದೆ."

### ಹೋಮವನ್ನು ಅಗ್ನಿಯ ನಾಲಿಗೆಯಲ್ಲಿ ಮಾಡಬೇಕು

ಅಗ್ನಿಕರ್ಣೇ ಭವೇದ್ರೋಗೋ ನಾಸಿಕಾಯಾಂ ಧನಕ್ಷಯಃ |
ಚಕ್ಷುಷೋ ನಿಂದನಂ ಕುರ್ಯಾತ್ಕೇಶೇ ದಾರಿದ್ರ್ಯಕೃದ್ಭವೇತ್ ||
ಹುತಂ ಶಿರಸಿ ಪಾಪಂ ಸ್ಯಾತ್ತಸ್ಮಾಜ್ಜಿಹ್ವಾಸು ಹೋಮಯೇತ್ |
ಯತ್ರ ಕಾಷ್ಠಂ ತು ತಚ್ಛ್ರೋತ್ರೇ ಯತ್ರ ಧೂಮಸ್ತು ನಾಸಿಕಾ ||
ಯತ್ರಾಲ್ಪಜ್ವಲನಂ ನೇತ್ರಂ ಯತ್ರ ಭಸ್ಮಾನಿ ತಚ್ಛಿರಃ |
ಯತ್ರೈವ ಜ್ವಲಿತೋ ವಹ್ನಿರ್ಜಿಹ್ವಾ ತತ್ರೈವ ಕೀರ್ತಿತಾ ||
ಹಿರಣ್ಯಾ ಕನಕಾ ರಕ್ತಾ ಕೃಷ್ಣಾ ಚೈವಾತ್ರ ಸುಪ್ರಭಾ |
ಅತಿರಕ್ತಾ ಬಹುರೂಪಾ ಸಪ್ತಜಿಹ್ವಾಃ ಪ್ರಕೀರ್ತಿತಾಃ ||

ಹಿರಣ್ಯಾ ಪಶ್ಚಿಮೇ ಜಿಹ್ವಾ ಕೃಷ್ಣಾ ದಕ್ಷಿಣದಿಕ್ಸ್ಥಿತಾ |
ಸುಪ್ರಭಾ ಚೈವ ಪೂರ್ವಾಯಾಮತಿರಕ್ತಾಽಗ್ನಿದಿಕ್ಸ್ಥಿತಾ ||
ಬಹುರೂಪಾ ತು ಶಾರ್ವಾಯಾಂ ಜಿಹ್ವಾಸ್ಥಾನಂ ಪ್ರಕೀರ್ತಿತಮ್ |
ವಿವಾಹೇ ಪಶ್ಚಿಮಾ ಜಿಹ್ವಾ ಜಾತಕರ್ಮಣಿ ಮಧ್ಯಮಾ ||
ಉತ್ತರಾ ಚೋಪನಯನೇ ಪಿತೃಕಾರ್ಯೇ ತು ದಕ್ಷಿಣಾ |
ಸರ್ವಕರ್ಮಸು ಪೂರ್ವಾಯಾಮಭಿಚಾರೇಽಗ್ನಿದಿಕ್ಸ್ಥಿತಾ ||
ಶಾಂತಿಕರ್ಮಣಿ ಶಾರ್ವಾಯಾಂ ಸ್ಥಾನಕರ್ಮ ಸಮೀರಿತಮ್ |
ಸಪ್ತಜಿಹ್ವಾ ಅವಿಜ್ಞಾಯ ಯಃ ಕುರ್ಯಾದಗ್ನಿಸನ್ನಿಧೌ ||
ಹೋಮೋ ನಿಷ್ಫಲತಾಂ ಯಾತಿ ಹೋತಾ ತು ನರಕಂ ವ್ರಜೇತ್ | (ಮರೀಚಿವಚನ)

"ಹೋಮಕುಂಡದಲ್ಲಿ ಕಟ್ಟಿಗೆ ಇರುವ ಭಾಗವು ಅಗ್ನಿಯ ಕಿವಿಗಳೆಂದೂ ಹೊಗೆ ಇರುವ ಭಾಗವು ಮೂಗುಗಳೆಂದೂ ಜ್ವಾಲೆಯು ಕಡಿಮೆಯುಳ್ಳ ಪ್ರದೇಶವು ಕಣ್ಣುಗಳೆಂದೂ ಭಸ್ಮವಿರುವ ಪ್ರದೇಶವು ತಲೆ ಎಂದೂ ತಿಳಿಯಬೇಕು. ಯಾವ ಪ್ರದೇಶದಲ್ಲಿ ಅಗ್ನಿಯು ಚೆನ್ನಾಗಿ ಜ್ವಲಿಸುತ್ತಿರೆಯೋ ಆ ಪ್ರದೇಶವು ಅಗ್ನಿಯ ನಾಲಿಗೆಯೆಂದೂ ತಿಳಿಯಬೇಕು."

"ಈ ನಾಲಿಗೆಯು ಹಿರಣ್ಯಾ, ಕನಕಾ, ರಕ್ತಾ, ಕೃಷ್ಣಾ, ಸುಪ್ರಭಾ, ಅತಿರಕ್ತಾ, ಬಹುರೂಪಾ ಎಂದು ಏಳು ವಿಧವಾಗಿದೆ. ಪಶ್ಚಿಮದಿಕ್ಕಿನಲ್ಲಿ ಅಗ್ನಿಯ ಜ್ವಾಲೆ ಇದ್ದರೆ ಹಿರಣ್ಯಾನಾಲಿಗೆಯೆಂದೂ ದಕ್ಷಿಣದಿಕ್ಕಿನಲ್ಲಿದ್ದರೆ ಕೃಷ್ಣಾನಾಲಿಗೆಯೆಂದೂ ಪೂರ್ವದಿಕ್ಕಿನಲ್ಲಿದ್ದರೆ ಸುಪ್ರಭಾನಾಲಿಗೆಯೆಂದೂ ಆಗ್ನೇಯದಿಕ್ಕಿನಲ್ಲಿದ್ದರೆ ಅತಿರಕ್ತಾನಾಲಿಗೆಯೆಂದೂ ಈಶಾನ್ಯದಿಕ್ಕಿನಲ್ಲಿದ್ದರೆ ಬಹುರೂಪಾನಾಲಿಗೆಯೆಂದೂ ಮಧ್ಯದಲ್ಲಿಯೂ ವಾಯವ್ಯದಿಕ್ಕಿನಲ್ಲಿಯೂ ನೈಋತ್ಯದಿಕ್ಕಿನಲ್ಲಿಯೂ ಉತ್ತರದಿಕ್ಕಿನಲ್ಲಿಯೂ ಇದ್ದರೆ ಮಧ್ಯಮಾನಾಲಿಗೆಯೆಂದೂ ಹೇಳಲ್ಪಡುತ್ತದೆ."

"ವಿವಾಹದಲ್ಲಿ ಹಿರಣ್ಯಾನಾಲಿಗೆಯೂ, ಜಾತಕರ್ಮದಲ್ಲಿ ಮಧ್ಯಮಾನಾಲಿಗೆಯೂ, ಉಪನಯನದಲ್ಲಿ ಉತ್ತರದಿಕ್ಕಿನಲ್ಲಿರುವ ನಾಲಿಗೆಯೂ, ಪಿತೃಕಾರ್ಯಗಳಲ್ಲಿ ಅತಿರಕ್ತಾನಾಲಿಗೆಯೂ, ಸಕಲಕಾರ್ಯಗಳಲ್ಲಿ ಸುಪ್ರಭಾನಾಲಿಗೆಯೂ, ಅಭಿಚಾರ ಹೋಮಗಳಲ್ಲಿ ಅತಿರಕ್ತಾನಾಲಿಗೆಯೂ, ಶಾಂತಿಕರ್ಮಗಳಲ್ಲಿ ಬಹುರೂಪಾನಾಲಿಗೆಯೂ ಹೋಮವನ್ನು ಮಾಡುವುದಕ್ಕೆ ಶ್ರೇಷ್ಠವೆನಿಸುತ್ತವೆ."

"ಅಗ್ನಿಯ ಕಿವಿಗಳಲ್ಲಿ ಹೋಮವನ್ನು ಮಾಡಿದರೆ ರೋಗವೂ, ಮೂಗಿನಲ್ಲಿ ಧನನಾಶವೂ, ಕಣ್ಣುಗಳಲ್ಲಿ ನಿಂದೆಯೂ, ತಲೆಗೂದಲುಗಳಲ್ಲಿ ದಾರಿದ್ರ್ಯವೂ, ತಲೆಯಲ್ಲಿ ಪಾಪವೂ ಬರುತ್ತದೆ. ಆದ್ದರಿಂದ ಆ ಸ್ಥಳಗಳಲ್ಲಿ ಹೋಮವನ್ನು ಮಾಡಕೂಡದು. ನಾಲಿಗೆಗಳಲ್ಲಿಯೇ ಮಾಡಬೇಕು."

"ಹಿಂದೆ ಹೇಳಿದಂತೆ ಅಗ್ನಿಯ ಏಳು ನಾಲಿಗೆಗಳನ್ನು ತಿಳಿಯದೆ ಹೋಮವನ್ನು ಮಾಡಿದರೆ ಆ ಹೋಮವು ನಿಷ್ಫಲವಾಗುತ್ತದೆ. ಹೋಮವನ್ನು ಮಾಡುವವನು ನರಕವನ್ನು ಪಡೆಯುವನು."

## ಹೋಮದಲ್ಲಿ ವಿಶೇಷ

ಪ್ರಾಣ್ಯಾಹುತಿರ್ದ್ವಾದಶಪರ್ವಪೂರಿಕಾ ಸ್ರುವಾಹಾತುಶ್ಚೇತ್ತು ವಮಾರ್ತಪೂರಿಕಾ |
ಸ್ವಂಗಾರಿಣೆ ಸ್ವರ್ಚಿಷಿ ಚೈವ ಪಾವಕೇ ದೈವೇನ ತೀರ್ಥೇನ ಚ ಹೂಯತೇ ಹವಿಃ ||

(ಸ್ಮೃತ್ಯಂತರವಚನ)

"ಕೈಯಿಂದ ಕೊಡುವ ಅನ್ನ ಮುಂತಾದ ಚರುಗಳ ಆಹುತಿಯನ್ನು ಕೈಯಲ್ಲಿರುವ ಹನ್ನೆರಡು ಗೆಣ್ಣುಗಳೆಂದಲೂ ತುಂಬಿಸಿ

ಕೊಡಬೇಕು. ಸ್ರುವದಲ್ಲಿ ಕೊಡುವ ತುಪ್ಪ ಮುಂತಾದ ವಸ್ತುಗಳ ಆಹುತಿಯನ್ನು ಸ್ರುವದಲ್ಲಿ ತುಂಬುವಷ್ಟು ತುಂಬಿಸಿ ಕೊಡಬೇಕು. ಅಗ್ನಿಯು ತುಂಬಾ ಜ್ವಾಲೆಯಿಂದ ಯುಕ್ತವಾಗಿರಬೇಕು. ಕೆಂಡಗಳೂ ತುಂಬಾ ಹೆಚ್ಚಾಗಿಯೂ ಶುದ್ಧವಾಗಿಯೂ ಇರಬೇಕು. ಈ ವಿಧವಾದ ಅಗ್ನಿಯಲ್ಲಿ ದೇವತೀರ್ಥದಿಂದ ಅಂದರೆ ಕಿರುಬೆರಳಿನ ಪ್ರದೇಶದಿಂದ ಹೋಮವನ್ನು ಮಾಡಬೇಕು."

### ಇದರಲ್ಲಿ ಪ್ರಕಾರಾಂತರ

ಆಗ್ನೇಯ್ಯಾಂ ತಿಲಹೋಮಃ ಸ್ಯಾದೈಶಾನ್ಯಾಂ ಗೃಹಕರ್ಮ ಚ |
ರಕ್ತಾಯಾಂ ಚರುಹೋಮಃ ಸ್ಯಾತ್ಸುಪ್ರಭಾ ಸಕ್ತುಹೋಮಕೇ ||
ಪುಷ್ಪಂ ಸ್ಯಾದ್ಬಹುರೂಪಾಯಾಂ ಶೇಷಾಸ್ವಾಜ್ಯಾಹುತಿರ್ಭವೇತ್ |
ಪೂರ್ವದಿಕ್ಸರ್ವಹೋಮಾರ್ಥಮಿತಿ ಹೋಮಸ್ಯ ಲಕ್ಷಣಮ್ |
ತತ್ತತ್ಸ್ಥಾನೇಷು ಹೋತವ್ಯಂ ವಿವಾಹಾದಿಷು ಕರ್ಮಸು ||

"ಬಹುರೂಪಾನಾಲಿಗೆಯಲ್ಲಿ ಗೃಹದಲ್ಲಿ ಮಾಡಬೇಕಾದ ಗೃಹ್ಯಹೋಮಗಳನ್ನೂ ಪುಷ್ಪಹೋಮವನ್ನೂ, ಅತಿರಕ್ತಾ ನಾಲಿಗೆಯಲ್ಲಿ ಚರುಹೋಮವನ್ನೂ ತಿಲಹೋಮವನ್ನೂ, ಸುಪ್ರಭಾನಾಲಿಗೆಯಲ್ಲಿ ಸಕ್ತು ಅಂದರೆ ಅರಳು ಮುಂತಾದ ವಸ್ತುಗಳ ಹೋಮವನ್ನೂ ಸರ್ವ ಹೋಮಗಳನ್ನೂ, ಉಳಿದ ನಾಲಿಗೆಗಳಲ್ಲಿ ತುಪ್ಪದ ಹೋಮವನ್ನೂ ಮಾಡಬೇಕು. ವಿವಾಹ ಮುಂತಾದ ಕರ್ಮಗಳಲ್ಲಿ ಅವುಗಳಿಗೆ ಯೋಗ್ಯವಾದ ಸ್ಥಾನಗಳಲ್ಲಿ ಹೋಮವನ್ನು ಮಾಡಬೇಕು."

### ಜ್ವಲಿಸದಿರುವ ಅಗ್ನಿಯಲ್ಲಿ ಹೋಮವನ್ನು ಮಾಡಕೂಡದು

ಅಪ್ರಬುದ್ಧೇ ಸಧೂಮೇ ವಾ ಜುಹುಯಾದ್ಯೋ ಹುತಾಶನೇ |
ಯಜಮಾನೋ ಭವೇದಂಧಃ ಸೋಽಮುತ್ರೇತಿ ಹಿ ನಃ ಶ್ರುತಮ್ ||
ಯೋಽನರ್ಚಿಷಿ ಜುಹೋತ್ಯಗ್ನೌ ವ್ಯಂಗಾರಿಣಿ ಚ ಮಾನವಃ |
ಮಂದಾಗ್ನಿರಾಮಯಾವೀ ಚ ದರಿದ್ರಶ್ಚೋಪಜಾಯತೇ ||
ಬಹುಶುಷ್ಕೇಂಧನೇ ಚಾಗ್ನೌ ಸುಸಮಿದ್ಧೇ ಹುತಾಶನೇ |
ವಿಧೂಮೇ ಲೇಲಿಹಾನೇ ಚ ಹೋತವ್ಯಂ ಕರ್ಮಸಿದ್ಧಯೇ || (ವಿಷ್ಣುವಚನ)

"ಅಗ್ನಿಯು ಅಭಿವೃದ್ಧಿಯನ್ನು ಪಡೆಯದಿರುವಾಗಲೂ, ಹೊಗೆಯಿಂದ ಯುಕ್ತವಾಗಿರುವಾಗಲೂ ಹೋಮವನ್ನು ಮಾಡುವವನು ಜನ್ಮಾಂತರದಲ್ಲಿ ಕುರುಡನಾಗುವನು. ಜ್ವಾಲೆಯೇ ಇಲ್ಲದಿರುವ ಮತ್ತು ಕೆಂಡಗಳಿಲ್ಲದಿರುವ ಅಗ್ನಿಯಲ್ಲಿ ಹೋಮವನ್ನು ಮಾಡುವವನು ಅಗ್ನಿಮಾಂದ್ಯವುಳ್ಳವನೂ ರೋಗಿಷ್ಠನೂ ದರಿದ್ರನೂ ಆಗುವನು. ತುಂಬಾ ಒಣಗಿದ ಕಟ್ಟಿಗೆಗಳಿಂದ ಯುಕ್ತವಾಗಿರಬೇಕು. ಚೆನ್ನಾಗಿ ಜ್ವಲಿಸುತ್ತಿರಬೇಕು. ಹೊಗೆಯೇ ಇಲ್ಲದಿರಬೇಕು. ಅಗ್ನಿಯ ನಾಲಿಗೆಯು ಸ್ಪಷ್ಟವಾಗಿರಬೇಕು. ಈ ವಿಧವಾದ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು. ಇದರಿಂದ ಕರ್ಮಗಳು ಸಿದ್ಧಿಯನ್ನು ಪಡೆಯುತ್ತವೆ."

### ಸ್ಮೃತ್ಯುಕ್ತಕರ್ಮಗಳಿಗಿಂತ ಪೂರ್ವದಲ್ಲಿ ಶ್ರುತ್ಯುಕ್ತಕರ್ಮಗಳನ್ನೇ ಮಾಡಬೇಕು

ಹೋಮಂ ವೈತಾನಿಕಂ ಕೃತ್ವಾ ಸ್ಮಾರ್ತಂ ಕುರ್ಯಾದ್ವಿಚಕ್ಷಣಃ |
ಸ್ಮೃತೀನಾಂ ವೇದಮೂಲತ್ವಾತ್ಸ್ಮಾರ್ತಂ ಕೇಚಿತ್ಪುರಾ ವಿದುಃ || (ಭಾರದ್ವಾಜರ ವಚನ)

"ಸ್ಮೃತಿಗಳೆಲ್ಲವೂ ವೇದದಲ್ಲಿ ಹೇಳಿರುವ ವಿಷಯಗಳನ್ನು ವಿವರಿಸುವುದಕ್ಕಾಗಿ ಹೊರಟಿವೆ. ಸ್ಮೃತಿಗಳಿಗೆ ವೇದವೇ

ಮೂಲವೆನಿಸುತ್ತದೆ. ವೇದಮೂಲಕವಾದ ಸ್ಮೃತಿಗಳು ವೇದಕ್ಕಿಂತ ದುರ್ಬಲವಾಗಿವೆ. ಆದ್ದರಿಂದ ಸ್ಮೃತ್ಯುಕ್ತಕರ್ಮಗಳೂ ವೇದೋಕ್ತಕರ್ಮಗಳಿಗಿಂತ ದುರ್ಬಲವೆನಿಸುತ್ತವೆ. ಪ್ರಬಲವಾದ ವೇದೋಕ್ತಕರ್ಮಗಳನ್ನು ಮೊದಲು ಮಾಡಬೇಕು. ದುರ್ಬಲವಾದ ಸ್ಮೃತ್ಯುಕ್ತಕರ್ಮಗಳನ್ನು ಅನಂತರದಲ್ಲಿ ಮಾಡಬೇಕು. ಕೆಲವರು ಸ್ಮೃತ್ಯುಕ್ತಕರ್ಮಗಳನ್ನು ಮೊದಲು ಮಾಡಿ ಅನಂತರದಲ್ಲಿ ಶ್ರುತ್ಯುಕ್ತಕರ್ಮಗಳನ್ನು ಮಾಡಬೇಕೆಂದು ಹೇಳುತ್ತಾರೆ."

### ವಿವಾಹಕ್ಕಿಂತ ಪೂರ್ವದಲ್ಲಿ ಹೋಮವನ್ನು ಮಾಡುವ ಪ್ರಕಾರ

ಸಮಾವರ್ತನಪ್ರಭೃತ್ಯಾಜ್ಯೇನ ವ್ಯಾಹೃತಿಭಿರೇವ ಹೂಯತೇ. ಆಪಾಣಿಗ್ರಹಣಾತ್, ಪಾಣಿಗ್ರಹಣಪ್ರಭೃತಿ ವ್ರೀಹಿಭಿರ್ಯವೈರ್ವಾ ಹಸ್ತೇನೈತಾ ಆಹುತೀರ್ಜುಹೋತಿ. (ಬೋಧಾಯನರ ವಚನ)

"ಸಮಾವರ್ತನದವರೆಗೆ ಹೋಮದಲ್ಲಿ ಅಧಿಕಾರವಿಲ್ಲ. ಸಮಾವರ್ತನವು ಮುಗಿದ ಮೇಲೆ ಪಾಣಿಗ್ರಹಣವು ಮುಗಿಯುವವರೆಗೆ ತುಪ್ಪದಿಂದ ವ್ಯಾಹೃತಿಮಂತ್ರಗಳನ್ನು ಹೇಳುತ್ತಾ ಆಹುತಿಯನ್ನು ಕೊಡಬೇಕು. ಪಾಣಿಗ್ರಹಣವು ಮುಗಿದ ಮೇಲೆ ಅನ್ನದಿಂದಲಾಗಲೀ ಯವ ಮುಂತಾದ ಧಾನ್ಯಗಳಿಂದಲಾಗಲೀ ಕೈಯಿಂದ ಈ ಆಹುತಿಗಳನ್ನು ಕೊಡಬೇಕು."

### ಅಂಗವೈಕಲ್ಯ ದೋಷಪರಿಹಾರಕ್ಕಾಗಿ ಹೋಮಾಂತದಲ್ಲಿ ವಿಷ್ಣುಸ್ಮರಣವನ್ನು ಮಾಡಬೇಕು

ಪ್ರಮಾದಾತ್ಕುರ್ವತಾಂ ಕರ್ಮ ಪ್ರಚ್ಯವೇತಾಧ್ವರೇಷು ಯತ್ |
ಸ್ಮರಣಾದೇವ ತದ್ವಿಷ್ಣೋಃ ಸಂಪೂರ್ಣಂ ಸ್ಯಾದಿತಿ ಶ್ರುತಿಃ || (ಪ್ರಜಾಪತಿ ವಚನ)

"ಯಜ್ಞವನ್ನು ಆರಂಭಿಸಿದ ಮೇಲೆ ಅಜಾಗ್ರತೆಯಿಂದ ಕರ್ಮಗಳಲ್ಲಿ ವ್ಯತ್ಯಾಸವು ಏರ್ಪಡುವುದುಂಟು. ಅದರಿಂದ ಕರ್ಮವು ಪೂರ್ಣಫಲವನ್ನು ಕೊಡಲಾರದು. ಅದಕ್ಕಾಗಿ ಶ್ರೀಹರಿಯನ್ನು ಸ್ಮರಿಸಬೇಕು. ಶ್ರೀಹರಿಯು ಪ್ರಸನ್ನನಾಗಿ ಲೋಪದೋಷಗಳನ್ನೆಲ್ಲವನ್ನೂ ಪರಿಹರಿಸಿ ಪೂರ್ಣಫಲವನ್ನು ಕೊಡುವನು. ಇದು ವೇದದಲ್ಲಿ ಹೇಳಿರುತ್ತದೆ."

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ |
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ || (ಶ್ರೀಕೃಷ್ಣನ ವಚನ)

"ಅರ್ಜುನ, ಮಾಡುವ ಎಲ್ಲಾ ಕೆಲಸಗಳನ್ನೂ ತಿನ್ನುವ ಸರ್ವ ಆಹಾರವಸ್ತುಗಳನ್ನೂ ಹೋಮದಲ್ಲಿ ಕೊಡುತ್ತಿರುವ ಸಕಲ ಆಹುತಿಗಳನ್ನೂ ಇತರರಿಗೆ ಕೊಡುತ್ತಿರುವ ಸಕಲದಾನಗಳನ್ನೂ ಮಾಡುತ್ತಿರುವ ಸಕಲ ತಪಸ್ಸುಗಳನ್ನೂ ನನಗೆ ಸಮರ್ಪಿಸು."

### ಔಪಾಸನವಿಲ್ಲದಿರುವುದು ಮಹಾದೋಷಕರ

ಕೃತದಾರೋ ನ ವೈ ತಿಷ್ಠೇತ್ಕ್ಷಣಮಪ್ಯಗ್ನಿನಾ ವಿನಾ |
ತಿಷ್ಠೇತ ಚೇದ್ದ್ವಿಜೋ ವ್ರಾತ್ಯಸ್ತ್ಯಕ್ತ್ವಾ ತು ಪತಿತೋ ಭವೇತ್ || (ಗಾರ್ಗ್ಯರ ವಚನ)

"ವಿವಾಹವಾದ ಮೇಲೆ ಅಗ್ನಿಹೋತ್ರಸಂಸ್ಕಾರವಿಲ್ಲದೆ ಒಂದು ಕ್ಷಣವೂ ಇರಕೂಡದು. ಹಾಗೆ ಇದ್ದರೆ ವ್ರಾತ್ಯನೆನಿಸುವನು. ಅಗ್ನಿತ್ಯಾಗದಿಂದ ಪತಿತನಾಗುವನು."

ಅಶ್ರೋತ್ರಿಯಾ ಅನೂಚಾನಾ (ಅನುವ್ರಾತ್ಯಾ) ಅನಗ್ನಯಃ ಶೂದ್ರಕರ್ಮಾಣೋ ಭವಂತಿ |
(ವಸಿಷ್ಠರ ವಚನ)

"ಅಗ್ನಿಯನ್ನು ಬಿಟ್ಟವರು ಅಶ್ರೋತ್ರಿಯರು ಅಂದರೆ ವೇದೋಕ್ತಕರ್ಮಗಳನ್ನು ಬಿಟ್ಟವರು. ಅನೂಚಾನರು ಅಂದರೆ ಉತ್ತಮರಲ್ಲ. ಅನುವ್ರಾತ್ಯರು ಅಂದರೆ ಕರ್ಮಭ್ರಷ್ಟರನ್ನು ಅನುಸರಿಸಿದವರು. ಶೂದ್ರರಂತೆ ಕರ್ಮಗಳನ್ನು ಬಿಟ್ಟವರು ಎಂದೆನಿಸುವರು."

### ಕರ್ಮಗಳನ್ನು ತಿಳಿದು ಮಾಡಬೇಕು

ಸ್ವಾಭಿಪ್ರಾಯಕೃತಂ ಕರ್ಮ ಯತ್ಕಿಂಚಿಜ್ಞಾನವರ್ಜಿತಮ್ |
ಕ್ರೀಡಾಕರ್ಮೇವ ಬಾಲಾನಾಂ ತತ್ಸರ್ವಂ ನಿಷ್ಪ್ರಯೋಜನಮ್ || (ಅಂಗಿರಸರ ವಚನ)

"ಕರ್ಮಗಳನ್ನು ಮಾಡುವಾಗ ಚೆನ್ನಾಗಿ ತಿಳಿದು ಮಾಡಬೇಕು. ಹಾಗೆ ಮಾಡದೆ ತಮ್ಮ ಮನಸ್ಸಿಗೆ ಬಂದಂತೆ ಮಾಡಿದರೆ ಆ ಕರ್ಮಗಳು ಬಾಲಕರ ಆಟಕ್ಕೆ ಸಮವಾಗುತ್ತವೆ. ಅವುಗಳೆಲ್ಲವೂ ನಿಷ್ಫಲವಾಗುತ್ತವೆ."

ಹತಂ ಜ್ಞಾನಂ ಕ್ರಿಯಾಹೀನಂ ಹತಾಸ್ತ್ವಜ್ಞಾನಿನಾಂ ಕ್ರಿಯಾಃ |
ಅಪಶ್ಯನ್ನಂಧಕೋ ದಗ್ಧಃ ಪಶ್ಯನ್ನಪಿ ಚ ಪಂಗುಕಃ || (ಚತುರ್ವಿಂಶತಿಮತವಚನ)

"ಕರ್ಮಾನುಷ್ಠಾನ ಮಾಡದಿರುವವನ ಜ್ಞಾನವು ವ್ಯರ್ಥವೆನಿಸುತ್ತದೆ. ಜ್ಞಾನವಿಲ್ಲದವನ ಕರ್ಮಾನುಷ್ಠಾನವು ವ್ಯರ್ಥವೆನಿಸುತ್ತದೆ. ಕುರುಡನಿಗೆ ಕಣ್ಣಿಲ್ಲ. ಆದ್ದರಿಂದ ಅವನು ಯಾವ ಕೆಲಸಗಳನ್ನೂ ಸರಿಯಾಗಿ ಮಾಡಬಲ್ಲನೇ? ಕಣ್ಣಿದ್ದವನೂ ಕುಂಟನಾದರೆ ಯಾವ ಕೆಲಸಗಳನ್ನೂ ಸರಿಯಾಗಿ ಮಾಡಬಲ್ಲನೇ? ಅವರಂತೆ ಜ್ಞಾನವಿಲ್ಲದವರ ಕರ್ಮಗಳೂ ಕರ್ಮವಿಲ್ಲದವರ ಜ್ಞಾನವೂ ವ್ಯರ್ಥವಾಗುವುದರಲ್ಲಿ ಸಂಶಯವಿಲ್ಲ."

### ಹೋಮ ಪ್ರಶಂಸೆ

ಅಗ್ನಿಹೋತ್ರಸಮೋ ಧರ್ಮೋ ನ ಭೂತೋ ನ ಭವಿಷ್ಯತಿ | (ಪ್ರಜಾಪತಿ ವಚನ)

"ಅಗ್ನಿಹೋತ್ರಕ್ಕೆ ಸಮವಾದ ಧರ್ಮವು ಹಿಂದೆ ಹುಟ್ಟಿಲ್ಲ. ಮುಂದೆ ಹುಟ್ಟುವುದಿಲ್ಲ."

ನಾಗ್ನಿಹೋತ್ರಾತ್ಪರೋ ಧರ್ಮೋ ನಾಗ್ನಿಹೋತ್ರಾತ್ಪರಂ ತಪಃ |
ನಾಗ್ನಿಹೋತ್ರಾತ್ಪರಂ ಶ್ರೇಯೋ ನಾಗ್ನಿಹೋತ್ರಾತ್ಪರಂ ಯಶಃ ||
ನಾಗ್ನಿಹೋತ್ರಾತ್ಪರಾ ಸಿದ್ಧಿರ್ನಾಗ್ನಿಹೋತ್ರಾತ್ಪರಾ ಮತಿಃ |
ನಾಗ್ನಿಹೋತ್ರಾತ್ಪರಂ ಸ್ನಾನಂ ನಾಗ್ನಿಹೋತ್ರಾತ್ಪರಂ ವ್ರತಮ್ || (ಹಾರೀತರ ವಚನ)

"ಅಗ್ನಿಹೋತ್ರಕ್ಕಿಂತ ಉತ್ತಮವಾದ ಧರ್ಮವಾಗಲೀ ತಪಸ್ಸಾಗಲೀ ಶ್ರೇಯಃಸಾಧನವಾಗಲೀ ಕೀರ್ತಿಸಾಧನವಾಗಲೀ ಸಕಲ ಕಾರ್ಯಸಿದ್ಧಿಯಾಗಲೀ ಬುದ್ಧಿಲಾಭವಾಗಲೀ ಸ್ನಾನವಾಗಲೀ ವ್ರತವಾಗಲೀ ಇಲ್ಲ. ಅಗ್ನಿಹೋತ್ರವೇ ಎಲ್ಲಕ್ಕಿಂತಲೂ ಮಿಗಿಲೆನಿಸುತ್ತದೆ.

### ಹೋಮಾಧಿಕಾರ

ಅಲಮಗ್ನ್ಯಾಧೇಯೋ ಅನಾಹಿತಾಗ್ನೇಃ ಸ್ಯಾದಲಂ ವಾ ಸೋಮಯಾಜೀ | (ವಸಿಷ್ಠರ ವಚನ)

"ಅಗ್ನ್ಯಾಧಾನವನ್ನು ಮಾಡದವನಿಗಿಂತ ಅಗ್ನ್ಯಾಧಾನವನ್ನು ಮಾಡಿದವನು ಸಮರ್ಥನೆನಿಸುವನು. ಅಗ್ನ್ಯಾಧಾನವನ್ನು ಮಾಡಿದವನಿಗಿಂತ ಸೋಮಯಾಗವನ್ನು ಮಾಡಿದವನು ಸಮರ್ಥನೆನಿಸುವನು. ಅಂದರೆ ಅವನು ಐಹಿಕ ಮತ್ತು ಪಾರತ್ರಿಕವಾದ ಸಕಲ ಶ್ರೇಯಸ್ಸುಗಳನ್ನೂ ಪಡೆಯಲು ಅರ್ಹನಾಗುವನು."

ತ್ರೈವಾರ್ಷಿಕಾಂತಭಕ್ತೋ ಯಃ ಸ ಹಿ ಸೋಮಂ ಪಿಬೇದ್ದ್ವಿಜಃ | (ಯಾಜ್ಞವಲ್ಕ್ಯರ ವಚನ)

"ಮೂರು ವರ್ಷಗಳವರೆಗೆ ತನ್ನ ಸೇವಕರು ಮುಂತಾದ ಸಕಲ ಪರಿವಾರಗಳನ್ನು ಅನ್ನವಸ್ತ್ರಾದಿಗಳನ್ನು ಕೊಟ್ಟು ರಕ್ಷಿಸಲು ಸಾಮರ್ಥ್ಯವುಳ್ಳವನೂ ಅದಕ್ಕಿಂತ ಅಧಿಕವಾದ ಶಕ್ತಿಯುಳ್ಳವನೂ ಸೋಮಯಾಗವನ್ನು ಮಾಡಲೇಬೇಕು."

ಯಸ್ಯ ತ್ರೈವಾರ್ಷಿಕಂ ಭಕ್ತಂ ಪರ್ಯಾಪ್ತಂ ಭೃತ್ಯವೃತ್ತಯೇ |
ಅಧಿಕಂ ವಾಪಿ ವಿದ್ಯೇತ ಸ ಸೋಮಂ ಪಾತುಮರ್ಹತಿ || (ಮನುವಿನ ವಚನ)

"ಯಾರಿಗೆ ಸೇವಕರನ್ನು ಸಂರಕ್ಷಿಸುವುದಕ್ಕೆ ಮೂರು ವರ್ಷಗಳವರೆಗೆ ಅಥವಾ ಅದಕ್ಕಿಂತ ಅಧಿಕಕಾಲದವರೆಗೆ ಅನ್ನವು ಇದೆಯೋ ಅವನು ಸೋಮಪಾನಕ್ಕೆ ಅರ್ಹನೆನಿಸುವನು."

(ಸೋಮಯಾಗವು ಕಾಮ್ಯ ಅಕಾಮ್ಯ ಎಂದು ಎರಡು ವಿಧವಾಗಿದೆ. ಅವುಗಳಲ್ಲಿ ಕಾಮ್ಯ ಸೋಮಯಾಗದ ಅಧಿಕಾರಿಯ ಲಕ್ಷಣವು ಈ ಶ್ಲೋಕದಿಂದ ಹೇಳಲ್ಪಟ್ಟಿದೆ. ನಿತ್ಯಸೋಮ ಯಾಗವನ್ನು ಸರ್ವರೂ ಮಾಡಲೇಬೇಕು. ಮಾಡದಿದ್ದರೆ ಪಾಪವು ಬರುತ್ತದೆ. ಆ ಪಾಪಕ್ಕೆ ಪ್ರಾಯಶ್ಚಿತ್ತವು ಶ್ರುತಿಯಲ್ಲಿ ಹೇಳಲ್ಪಟ್ಟಿದೆ.)

ಅತಃ ಸ್ವಲ್ಪೀಯಸಿ ದ್ರವ್ಯೇ ಯಃ ಸೋಮಂ ಪಿಬತಿ ದ್ವಿಜಃ |
ಅಪೀತಸೋಮಪೂರ್ವೋಽಪಿ ನ ತಸ್ಯಾಪ್ನೋತಿ ತತ್ಫಲಮ್ || (ಮನುವಿನ ವಚನ)

"ಹಿಂದೆ ಹೇಳಿದ ದ್ರವ್ಯಕ್ಕಿಂತ ಕಡಿಮೆ ದ್ರವ್ಯವುಳ್ಳವನೂ ಸಹ ನಿತ್ಯಸೋಮಯಾಗವನ್ನು ಮಾಡಲೇಬೇಕು. ಹಾಗೆ ನಿತ್ಯಸೋಮಯಾಗವನ್ನು ಮಾಡದವನು ನಿತ್ಯಸೋಮಯಾಗದ ಫಲವನ್ನು ಪಡೆಯಲಾರನು. ಹೀಗಾದ ಮೇಲೆ ಅನಿತ್ಯ ಸೋಮಯಾಗದ ಫಲವನ್ನು ಪಡೆಯುವನೇ? ನಿತ್ಯಸೋಮಯಾಗವನ್ನು ಮಾಡಿದವನೇ ಅನಿತ್ಯಸೋಮಯಾಗವನ್ನು ಮಾಡಿದಾಗ ಫಲವನ್ನು ಪಡೆಯುವನು."

ತ್ರೈವಾರ್ಷಿಕಾಧಿಕೋ ಯಸ್ತು ಪಿಬೇತ್ಸೋಮಮತಂದ್ರಿತಃ |
ಇಷ್ಟಿಂ ವೈಶ್ವಾನರೀಂ ಕುರ್ಯಾತ್ತಥೈವಾಲ್ಪಧನೋ ದ್ವಿಜಃ || (ಶಂಖರ ವಚನ)

"ಮೂರು ವರ್ಷಗಳಿಗಿಂತ ಅಧಿಕ ವರ್ಷಗಳವರೆಗೆ ಭೃತ್ಯರನ್ನು ರಕ್ಷಿಸಲು ಶಕ್ತಿಯುಳ್ಳವನು ಕಾಮ್ಯಸೋಮಯಾಗವನ್ನು ಮಾಡಲೇಬೇಕು. ಹಾಗೆ ಸೋಮಯಾಗವನ್ನು ಮಾಡುವವನು ಸೋಮಯಾಗಕ್ಕಿಂತ ಪೂರ್ವದಲ್ಲಿ ಅಗ್ನಿಹೋತ್ರ, ವೈಶ್ವಾನರೇಷ್ಟಿ ಮುಂತಾದ ಯಾಗಗಳನ್ನು ಮಾಡಲೇಬೇಕು."

ಪ್ರಾಕ್ಸೌಮಿಕೀಃ ಕ್ರಿಯಾಃ ಕುರ್ಯಾದ್ಯಸ್ಯಾನ್ನಂ ವಾರ್ಷಿಕಂ ಭವೇತ್ | (ಯಾಜ್ಞವಲ್ಕ್ಯರ ವಚನ)

"ಕಾಮ್ಯಸೋಮಯಾಗಕ್ಕಿಂತ ಪೂರ್ವದಲ್ಲಿ ಮಾಡುವ ಎಲ್ಲಾ ಕಾರ್ಯಗಳೂ ಪ್ರಾಕ್ಸೋಮಿಕಿಯೆನಿಸುತ್ತವೆ. ಈ ಕಾರ್ಯಗಳನ್ನು ಒಂದು ವರ್ಷದವರೆಗೆ ತನ್ನ ಭೃತ್ಯರನ್ನು ರಕ್ಷಿಸಲು ಶಕ್ತಿಯುಳ್ಳವನು ಮಾಡಲೇಬೇಕು. ಈ ಕಾರ್ಯಗಳನ್ನು ಮಾಡಿ ಮುಗಿಸಿದ ಮೇಲೆ ಕಾಮ್ಯಸೋಮಯಾಗವನ್ನು ಮಾಡಬೇಕು."

ಪುಣ್ಯಾನ್ಯನ್ಯಾನಿ ಕುರ್ವೀತ ಶ್ರದ್ದಧಾನೋ ಜಿತೇಂದ್ರಿಯಃ |
ನ ತ್ವಲ್ಪದಕ್ಷಿಣೈರ್ಯಜ್ಞೈರ್ಯಜೇತೇಹ ಕಥಂಚನ ||
ಇಂದ್ರಿಯಾಣಿ (ಯಶೈಶ್ಚರ್ಯ) ಯಶಃ ಸ್ವರ್ಗಮಾಯುಃ ಕೀರ್ತಿಂ ಪ್ರಜಾಃ ಪಶೂನ್ |
ಹಂತ್ಯಲ್ಪದಕ್ಷಿಣೋ ಯಸ್ತಸ್ಮಾನ್ನಾಲ್ಪಧನೋ ಯಜೇತ್ || (ಮನುವಿನ ವಚನ)

"ಯಜ್ಞವನ್ನು ಮಾಡುವವನು ಇಂದ್ರಿಯಗಳನ್ನು ಜಯಿಸಿರಬೇಕು. ಯಜ್ಞಗಳಿಂದ ಫಲವು ಬಂದೇ ಬರುತ್ತದೆ ಎಂಬ ನಂಬಿಕೆಯುಳ್ಳವನಾಗಿರಬೇಕು. ಅವನು ಕೈಯಲ್ಲಿ ಹಣವಿದ್ದರೆ ಎಲ್ಲಾ ಪುಣ್ಯಕಾರ್ಯಗಳನ್ನೂ ಮಾಡಬೇಕು. ಪುರೋಹಿತರಿಗೆ ಕೈ ತುಂಬಾ ದಕ್ಷಿಣೆಯನ್ನು ಕೊಡಬೇಕು. ಕಡಿಮೆ ದಕ್ಷಿಣೆಯನ್ನು ಕೊಡಕೂಡದು. ಕಡಿಮೆ ದಕ್ಷಿಣೆಯನ್ನು ಕೊಡುವವನ ಇಂದ್ರಿಯಗಳು ದುರ್ಮಾರ್ಗದಲ್ಲಿ ಹೋಗುತ್ತವೆ. ಕೀರ್ತಿಯೂ ಸ್ವರ್ಗ ಮುಂತಾದ ಪಾರಲೌಕಿಕಸುಖವೂ ಐಶ್ವರ್ಯವೂ ಆಯುಸ್ಸೂ ಮಕ್ಕಳೂ ಪಶುಗಳೂ ನಶಿಸುತ್ತವೆ. ಆದ್ದರಿಂದ ದಕ್ಷಿಣೆಯನ್ನು ಕಡಿಮೆಯಾಗಿ ಕೊಡಕೂಡದು."

ಅನ್ನಹೀನೋ ದಹೇದ್ರಾಜ್ಯಂ ಮಂತ್ರಹೀನಸ್ತು ಋತ್ವಿಜಃ |
ಆತ್ಮಾನಂ ದಕ್ಷಿಣಾಹೀನೋ ನಾಸ್ತಿ ಯಜ್ಞಾತ್ಪರೋ ರಿಪುಃ || (ಮತ್ಸ್ಯಪುರಾಣ)

"ಯಜ್ಞವನ್ನು ಮಾಡುವವನು ಅನ್ನದಾನವನ್ನು ಮಾಡದಿದ್ದರೆ ಅವನ ರಾಜ್ಯವು ನಶಿಸುತ್ತದೆ. ಮಂತ್ರವಿಲ್ಲದೆ ಯಾಗವನ್ನು ಮಾಡಿದರೆ ಅವನ ಋತ್ವಿಕ್ಕುಗಳು ನಶಿಸುವರು. ದಕ್ಷಿಣೆಯಿಲ್ಲದೆ ಅಥವಾ ಯೋಗ್ಯವಾದ ದಕ್ಷಿಣೆಯಿಲ್ಲದೆ ಯಾಗವನ್ನು ಮಾಡಿದವನು ತನ್ನನೇ ನಶಿಸುವನು. ಆದ್ದರಿಂದ ಯಜ್ಞವನ್ನು ಮಾಡಿದರೆ ಲೋಪವಿಲ್ಲದೆ ಮಾಡಬೇಕು. ಲೋಪವಿದ್ದು ಮಾಡಕೂಡದು. ಹಾಗೆ ಮಾಡಿದರೆ ಯಾಗವೇ ಸರ್ವಾನರ್ಥಗಳನ್ನು ಕೊಡುತ್ತದೆ. ಆ ಯಾಗಕ್ಕಿಂತ ದೊಡ್ಡ ಶತ್ರುವೇ ಇಲ್ಲ."

### ಅನ್ನದಾನಕ್ಕೆ ಬ್ರಾಹ್ಮಣಸಂಖ್ಯೆ

ಸಹಸ್ರಂ ಭೋಜಯೇತ್ಸೋಮೇ ಬ್ರಾಹ್ಮಣಾನಾಂ ಶತಂ ಶತಮ್ |
ಚಾತುರ್ಮಾಸ್ಯೇಷು ಸರ್ವೇಷು ಶತಂ ಪರ್ವಣಿ ಪರ್ವಣಿ || (ಶಂಖರ ವಚನ)

"ಸೋಮಯಾಗದಲ್ಲಿ ಸಹಸ್ರಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಎಲ್ಲಾ ಚಾತುರ್ಮಾಸ್ಯಯಾಗಗಳಲ್ಲಿಯೂ ಹುಣ್ಣಿಮೆಯಲ್ಲಿ ಮಾಡುವ ಪೌರ್ಣಮಾಸೀಯಾಗದಲ್ಲಿಯೂ ಅಮಾವಾಸ್ಯೆಯಲ್ಲಿ ಮಾಡುತ್ತಿರುವ ಅಮಾವಾಸ್ಯಾ ಯಾಗದಲ್ಲಿಯೂ ನೂರು ನೂರು ಬ್ರಾಹ್ಮಣರನ್ನು ಭೋಜನ ಮಾಡಿಸಬೇಕು."

ದಾತವ್ಯಾ ಚ ಯಜ್ಞೇ ದಕ್ಷಿಣಾ ಭವಿತ್ವಾಽಲ್ಪಿಕಾಽಪಿ | (ಶ್ರುತಿ ವಚನ)

"ಯಜ್ಞದಲ್ಲಿ ಕೊಡಬೇಕಾದ ದಕ್ಷಿಣೆಯು ಕಡಿಮೆಯಾಗಿದ್ದರೂ ತಪ್ಪಿಲ್ಲ." (ಈ ಶ್ರುತಿಯಲ್ಲಿ ಹೇಳಿರುವ ಅಲ್ಪ ದಕ್ಷಿಣೆಯು ನಿತ್ಯಕರ್ಮಗಳಿಗೆ ಸಂಬಂಧಿಸಿದುದು. ಕಾಮ್ಯಕರ್ಮಗಳಿಗೆ ಸಂಬಂಧಿಸಿಲ್ಲ.)

ಪಶ್ಯನ್ನಿತ್ಯಾನಿ ಲುಪ್ತಾನಿ ತಥೈವಾಜಸ್ರಕಾಣಿ ಚ |
ವಿಪತ್ಸ್ಯೋ ಹಿ ನ ಹಿ ಸ್ವರ್ಗಂ ಗಚ್ಛೇತ್ಸ್ತು ಪತಿತೋ ಹಿ ಸಃ ||
ತಸ್ಮಾತ್ಕಂ ಚ ಫಲೈರ್ಮೂಲೈರ್ಮಧುನಾ ಪಯಸಾಽಪಿ ವಾ |
ನಿತ್ಯಂ ನಿತ್ಯಾನಿ ಕುರ್ವೀತ ನ ಚ ನಿತ್ಯಾನಿ ಲೋಪಯೇತ್ || (ಬೋಧಾಯನರ ವಚನ)

"ತನ್ನಲ್ಲಿರುವ ಹಣವೆಲ್ಲವೂ ಖರ್ಚಾದಾಗ ನಿತ್ಯಕರ್ಮಗಳನ್ನು ಬಿಡಬಾರದು. ಹಾಗೆ ಬಿಡುವವನು ಪತಿತನೆನಿಸುವನು. ಪತಿತನಾದವನು ಸ್ವರ್ಗವನ್ನು ಪಡೆಯಲಾರನು. ಆದ್ದರಿಂದ ಹಣ್ಣಿನಿಂದಲಾಗಲೀ ಗೆಡ್ಡೆಗಳಿಂದಲಾಗಲೀ ಜೇನಿನಿಂದ ಇದರಂತೆ ಆಧಾನದಲ್ಲಿಯೂ ನಿತ್ಯಕರ್ಮಗಳನ್ನು ಮಾಡಲೇ ಬೇಕು."

(ಮೇಲ್ಕಂಡ ವಚನಗಳಿಂದ ಅಲ್ಪಧನವುಳ್ಳವನಿಗೂ ಸೋಮಯಾಗದಲ್ಲಿ ಅಧಿಕಾರವಿದೆ ಎಂದು ಸಿದ್ಧವಾಯಿತು. ಇದರಂತೆ ಆಧಾನದಲ್ಲಿಯೂ ಅಲ್ಪಧನವುಳ್ಳವನಿಗೆ ಅಧಿಕಾರವಿದೆಯೆಂದು ತಿಳಿಯಬೇಕು.)

### ಅಲ್ಪಧನವುಳ್ಳವನೂ ಅಗ್ನ್ಯಾಧಾನವನ್ನು ಮಾಡಬೇಕು

ಸರ್ವಸಂಸ್ಥಾಧಿಕಾರೀ ಸ್ಯಾದಾಹಿತಾಗ್ನಿರ್ಧನೇ ಸತಿ |
ಆದಧ್ಯಾನ್ನಿರ್ಧನೋಽಪ್ಯಗ್ನಿಂ ಸ ತು ಪಾಪಭಯಾದ್ದ್ವಿಜಃ ||

"ಬ್ರಾಹ್ಮಣನು ಬಡವನಾದರೂ ಅಗ್ನ್ಯಾಧಾನವನ್ನು ಮಾಡಿಕೊಳ್ಳಲೇಬೇಕು. ಆಧಾನವನ್ನು ಮಾಡಿಕೊಂಡ ಮೇಲೆ ಹಣವಿದ್ದರೆ ಎಲ್ಲಾ ಯಾಗಗಳನ್ನೂ ಮಾಡಲು ಅಧಿಕಾರವುಳ್ಳವನೆನಿಸುವನು." (ಈ ವಾಕ್ಯದಲ್ಲಿ ಆಧಾನವನ್ನು ಬಡವನಾದರೂ ಮಾಡಿಕೊಳ್ಳಲೇಬೇಕು ಎಂದು ಹೇಳಿದೆ. ಆದ್ದರಿಂದ ಆಧಾನವು ನಿತ್ಯವೆಂದು ಹೇಳಿದಂತಾಯಿತು. ಇತರ ಯಾಗಗಳು ಹಣವಿದ್ದಾಗ ಮಾತ್ರ ಮಾಡಬೇಕೆಂದು ಹೇಳಿದೆ. ಆದ್ದರಿಂದ ದಕ್ಷಿಣಾದಿ ಲೋಪಗಳಿಂದ ಪಾಪವು ಬರುತ್ತದೆಯೆಂದು ಹೇಳಿದಂತಾಯಿತು. ಆದ್ದರಿಂದ ಆ ಯಾಗಗಳು ಕಾಮ್ಯವೆಂದು ಹೇಳಿದಂತಾಯಿತು.)

ಪ್ರಾಜಾಪತ್ಯಮದತ್ವಾಽಶ್ವಮಗ್ನ್ಯಾಧೇಯಸ್ಯ ದಕ್ಷಿಣಾಮ್ |
ಅನಾಹಿತಾಗ್ನಿರ್ಭವತಿ ಬ್ರಾಹ್ಮಣೋ ವಿಭವೇ ಸತಿ || (ಮನುವಿನ ವಚನ)

"ಅಗ್ನ್ಯಾಧಾನಕ್ಕೆ ಪ್ರಜಾಪತಿದೇವತಾಕವಾದ ಕುದುರೆಯು ದಕ್ಷಿಣೆಯೆನಿಸುತ್ತದೆ. ಧನಸಂಪತ್ತಿನಿಂದ ಯುಕ್ತನಾದ ಬ್ರಾಹ್ಮಣನು ಕುದುರೆಯನ್ನು ದಕ್ಷಿಣೆಯಾಗಿ ಕೊಡದಿದ್ದರೆ ಅವನು ಅಗ್ನ್ಯಾಧಾನವನ್ನು ಮಾಡಿದರೂ ಫಲವಿಲ್ಲ."

(ಈ ವಚನದಲ್ಲಿ ಸಂಪತ್ತಿಲ್ಲದವನು ಕುದುರೆಯನ್ನು ದಕ್ಷಿಣೆಯಾಗಿ ಕೊಡಬೇಕಾಗಿಲ್ಲ ಎಂದು ಹೇಳಿದಂತಾಯಿತು. ಆದ್ದರಿಂದ ಈ ಆಧಾನವು ನಿತ್ಯವೆಂದು ಹೇಳಿದಂತಾಯಿತು.)

ಯದ್ಯಾಽನಾಢ್ಯೋಽಗ್ನಿನಾದಧೀತ ಕಾಮಮೇವೈಕಾಂ ಗಾಂ ದದ್ಯಾತ್ | (ಆಪಸ್ತಂಬರ ವಚನ)

"ಬಡವನಾದವನು ಅಗ್ನ್ಯಾಧಾನವನ್ನು ಮಾಡುವುದಾಗಿದ್ದರೆ ಒಂದು ಗೋವನ್ನು ಕೊಟ್ಟು ಮಾಡಲಿ."

ಯದಹರೇವೈನಂ ಶ್ರದ್ಧಯಾ ನಮೇತ್ತದಹರೇವಾದಧೀತ | (ವಿಷ್ಣುವಿನ ವಚನ)

"ಯಾವ ದಿನದಲ್ಲಿ ಶ್ರದ್ಧೆಯು ಬರುತ್ತದೋ ಆ ದಿನದಲ್ಲಿಯೇ ಅಗ್ನ್ಯಾಧಾನವನ್ನು ಮಾಡಲಿ."

ಮಂತ್ರಮುತ್ಪಾದ್ಯ ಕರ್ಮೈತತ್ಕುರ್ಯಾದ್ವೈತಾನಿಕಂ ದ್ವಿಜಃ |
ಯಥಾಕಥಂಚಿದಾದಧ್ಯಾತ್ಪ್ರಾಪ್ತಂ ಚೇತ್ಸ್ಯಾತ್ತತೋ ಧನಮ್ || (ಕಾರ್ಷ್ಣಾಜಿನಿ ವಚನ)

"ಮಂತ್ರದಿಂದ ಅಗ್ನಿಯನ್ನು ಆಧಾನವನ್ನು ಮಾಡಿಕೊಳ್ಳಬೇಕು. ಆ ಮೇಲೆ ವೇದೋಕ್ತಯಾಗಗಳನ್ನು ಮಾಡಬೇಕು. ಹಣವಿಲ್ಲದಿದ್ದರೆ ದಕ್ಷಿಣಾಲೋಪಾದಿಗಳು ಏರ್ಪಟ್ಟರೂ ಆಧಾನವನ್ನು ಮಾಡಲೇಬೇಕು. ಹಣವಿದ್ದರೆ ದಕ್ಷಿಣೆಯನ್ನು ಸರಿಯಾಗಿ ಕೊಟ್ಟು ಮಾಡಿಕೊಳ್ಳಬೇಕು."

ಯೇ ಶೂದ್ರಾದಧಿಗಮ್ಯಾರ್ಥಮಗ್ನಿಹೋತ್ರಮುಪಾಸತೇ |
ಋತ್ವಿಜಸ್ತೇ ಹಿ ಶೂದ್ರಾಣಾಂ ಬ್ರಹ್ಮವಾದಿಷು ಗರ್ಹಿತಾಃ ||
ತೇಷಾಂ ಸತತಮಜ್ಞಾನಾದ್ವೃಷಲಾದ್ಯುಪಸೇವನಾತ್ |
ಪದಾ ಮಸ್ತಕಮಾಕ್ರಮ್ಯ ಸದಾ ದುರ್ಗಾಣಿ ಸಂತರೇತ್ || (ಮನುವಿನ ವಚನ)

"ಶೂದ್ರನಿಂದ ಹಣವನ್ನು ಪಡೆದು ಅಗ್ನಿಹೋತ್ರವನ್ನು ಮಾಡುವವರು ಶೂದ್ರರ ಪುರೋಹಿತರೆನಿಸುವರು. ಅವರು ಬ್ರಹ್ಮವಾದಿಗಳಿಂದ ನಿಂದ್ಯರೆನಿಸುವರು. ಅವರು ಅಜ್ಞಾನಿಗಳು. ಆ ಅಜ್ಞಾನಿಗಳು ಯಾವಾಗಲೂ ಶೂದ್ರ ಮುಂತಾದ ನೀಚರನ್ನು ಸೇವಿಸುತ್ತಿರುವರು. ಅವರ ತಲೆಯನ್ನು ಮೆಟ್ಟಿದವನು ಎಲ್ಲಾ ಅನರ್ಥಗಳನ್ನೂ ದಾಟುವನು."

(ಇದರಿಂದ ಅಗ್ನ್ಯಾಧಾನವನ್ನು ಮಾಡಿಕೊಂಡೇ ಅಗ್ನಿಹೋತ್ರವನ್ನು ಮಾಡಿಕೊಳ್ಳಬೇಕು. ಆ ಅಗ್ನ್ಯಾಧಾನವನ್ನು ಯಥಾಶಕ್ತಿ ದ್ರವ್ಯವನ್ನು ಸಂಪಾದಿಸಿ ಮಾಡಿಕೊಳ್ಳಬೇಕು. ಶೂದ್ರಾದಿಗಳಿಂದ ದ್ರವ್ಯವನ್ನು ಸಂಗ್ರಹಿಸಬಾರದು ಎಂದು ಸಿದ್ಧವಾಯಿತು.)

ಉಪಾದಾಯ ಧನಂ ಶೂದ್ರಾದ್ಯೋಽಗ್ನಿಹೋತ್ರಮುಪಾವಹೇತ್ |
ಶೂದ್ರಾಗ್ನಿಹೋತ್ರಸಂಭಾವೇ ಬ್ರಹ್ಮವಾದೇಷು ಗರ್ಹಿತಃ || (ಯಮವಚನ)

"ಶೂದ್ರನಿಂದ ಹಣವನ್ನು ಸ್ವೀಕರಿಸಿ ಅಗ್ನಿಹೋತ್ರವನ್ನು ಮಾಡುವವನ ಅಗ್ನಿಯು ಶೂದ್ರಾಗ್ನಿಯೆನಿಸುತ್ತದೆ. ಇವನು ಬ್ರಹ್ಮವಾದಿಗಳ ಮಧ್ಯದಲ್ಲಿ ನಿಂದ್ಯನೆನಿಸುವನು."

ಯಃ ಶೂದ್ರಾದಧಿಗಮ್ಯಾರ್ಥಮಗ್ನಿಹೋತ್ರಮುಪಾವಹೇತ್ |
ದಾತಾ ತತ್ಫಲಮಾಪ್ನೋತಿ ಕರ್ತಾ ಚ ನರಕಂ ವ್ರಜೇತ್ || (ಭಾಗಧೇಯವಚನ)

"ಯಾರು ಶೂದ್ರನಿಂದ ಹಣವನ್ನು ಸ್ವೀಕರಿಸಿ ಅಗ್ನಿಹೋತ್ರವನ್ನು ಮಾಡುವನೋ ಅವನು ನರಕವನ್ನು ಪಡೆಯುವನು. ಹಣವನ್ನು ಕೊಡುವ ಶೂದ್ರನು ಅಗ್ನಿಹೋತ್ರದ ಫಲವನ್ನು ಪಡೆಯುವನು."

ಧರ್ಮವಿದ್ಬ್ರಾಹ್ಮಣಃ ಶೂದ್ರಾದ್ಯಜ್ಞಾರ್ಥಂ ನಾಹರೇದ್ಧನಮ್ |
ಜಾಯತೇ ಚಾಂತ್ಯಚಂಡಾಲಃ ಶೂದ್ರಾರ್ಥೇನೇಷ್ಟದೈವತಃ || (ಯಮವಚನ)

"ಧರ್ಮವನ್ನು ತಿಳಿದ ಬ್ರಾಹ್ಮಣನು ಯಜ್ಞಕ್ಕಾಗಿ ಶೂದ್ರನಿಂದ ಹಣವನ್ನು ತೆಗೆದುಕೊಳ್ಳಬಾರದು. ಇವನು ಚಂಡಾಲನೆನಿಸುವನು."

**ಯಜ್ಞಕ್ಕಾಗಿ ಸಂಪಾದಿಸಿದ ಹಣವನ್ನು ಪೂರ್ಣವಾಗಿ ದಾನ ಮಾಡಬೇಕು**

ಯಜ್ಞಾರ್ಥಂ ಭಿಕ್ಷಿತಂ ದ್ರವ್ಯಂ ಯತ್ಸರ್ವಂ ನ ಪ್ರಯಚ್ಛತಿ |
ಶ್ವಪಾಕಯೋನೌ ಜಾಯೇತ ಸ ತದ್ಭುಕ್ತ್ವಾ ತು ದುರ್ಮತಿಃ ||

"ಯಜ್ಞಕ್ಕಾಗಿ ಇತರರಿಂದ ಬೇಡಿ ಸಂಗ್ರಹಿಸಿದ ಹಣವನ್ನು ಸಂಪೂರ್ಣವಾಗಿ ದಾನ ಮಾಡಲೇಬೇಕು. ಹಾಗೆ ಮಾಡದೆ ಆ ಹಣವನ್ನು ತಿನ್ನುವವನು ಚಂಡಾಲರ ಜಾತಿಯಲ್ಲಿ ಹುಟ್ಟುವನು."

ಯಜ್ಞಾರ್ಥಮರ್ಥಂ ಭಿಕ್ಷಿತ್ವಾ ಯೋ ನ ಸರ್ವಂ ಪ್ರಯಚ್ಛತಿ |
ಸ ಯಾತಿ ಭಾಸತಾಂ ವಿಪ್ರಃ ಕಾಕತಾಂ ವಾ ಶತಂ ಸಮಾಃ ||

"ಯಜ್ಞಕ್ಕಾಗಿ ಹಣವನ್ನು ಬೇಡಿ ಸಂಗ್ರಹಿಸಿದವನು ಆ ಹಣವನ್ನೆಲ್ಲವನ್ನೂ ದಾನ ಮಾಡದಿದ್ದರೆ ನೂರು ವರ್ಷಗಳವರೆಗೆ ಭಾಸಪಕ್ಷಿಯ ಅಥವಾ ಕಾಗೆಯ ಜನ್ಮವನ್ನು ಪಡೆಯುವನು."

**ಆರಂಭಿಸಿದ ಯಾಗವು ಯಾವುದಾದರೂ ಒಂದು ವಸ್ತುವಿನ ಅಭಾವದಿಂದ**
**ನಿಂತುಹೋದರೆ ಶೂದ್ರಾದಿಗಳಿಂದ ಯಾಗವನ್ನು ಪೂರೈಸಬೇಕು**

ಯಜ್ಞಶ್ಚೇತ್ಪ್ರತಿಷಿದ್ಧಃ ಸ್ಯಾದೇಕೇನಾಂಶೇನ ಯಜ್ವನಃ |
ಬ್ರಾಹ್ಮಣಸ್ಯ ವಿಶೇಷೇಣ ಧಾರ್ಮಿಕೇ ಸತಿ ರಾಜನಿ || (ಮನುವಚನ)

"ರಾಜನು ಧಾರ್ಮಿಕನಾಗಿರಬೇಕು. ಆ ಕಾಲದಲ್ಲಿ ಯಜ್ಞಕ್ಕೆ ಬೇಕಾದ ಪಶು ಮುಂತಾದ ಅಂಗಗಳಿಲ್ಲದೆ ಯಜ್ಞವು ನಿಂತುಹೋಗುವ ಸಂಭವವು ಬಂದಾಗ ಶೂದ್ರಾದಿಗಳಿಂದ ಆ ವಸ್ತುವನ್ನು ಸಂಗ್ರಹಿಸಿ ಯಜ್ಞವನ್ನು ಪೂರೈಸಬೇಕು. ಮಧ್ಯದಲ್ಲಿ ನಿಲ್ಲಿಸಬಾರದು."

**ಮಂಗಲವಸ್ತುಗಳ ದರ್ಶನ**

ದೇವಕಾರ್ಯಂ ತತಃ ಕೃತ್ವಾ ಗುರುಮಂಗಲವೀಕ್ಷಣಮ್ | (ದಕ್ಷವಚನ)

"ಸಂಧ್ಯಾವಂದನವು ಮುಗಿದ ಕೂಡಲೇ ದೇವತೆಗಳ ಕಾರ್ಯ ಅಂದರೆ ಅಗ್ನಿಹೋತ್ರ ಮುಂತಾದ ಕಾರ್ಯಗಳನ್ನು ಮಾಡಬೇಕು. ಅದು ಮುಗಿದ ಕೂಡಲೇ ಗುರುಗಳನ್ನೂ ಮಂಗಲವಸ್ತುಗಳನ್ನೂ ನೋಡಬೇಕು."

ರೋಚನಂ ಚಂದನಂ ಹೇಮ ಮೃದಂಗಂ ದರ್ಪಣಂ ಮಣಿಮ್ |
ಗುರುಮಗ್ನಿಂ ಚ ಸೂರ್ಯಂ ಚ ಪ್ರಾತಃ ಪಶ್ಯೇತ್ಸದಾ ಬುಧಃ || (ಪುರಾಣವಚನ)

"ಪ್ರತಿದಿನದಲ್ಲಿಯೂ ಬೆಳಿಗ್ಗೆ (1) ಗೋರೋಚನ (2) ಚಂದನ (3) ಭಂಗಾರ (4) ಮೃದಂಗ (5) ಕನ್ನಡಿ (6) ಗೋಮೇಧಿಕ ಮುಂತಾದ ಮಣಿಗಳು (7) ಗುರುಗಳು (8) ಅಗ್ನಿ (9) ಸೂರ್ಯ ಎಂಬ 9 ಪದಾರ್ಥಗಳನ್ನು ನೋಡಬೇಕು"

ಲೋಕೇಽಸ್ಮಿನ್ಮಂಗಲಾನ್ಯಷ್ಟೌ ಬ್ರಾಹ್ಮಣೋ ಗೌರ್ಹುತಾಶನಃ |
ಹಿರಣ್ಯಂ ಸರ್ಪಿರಾದಿತ್ಯ ಆಪೋ ರಾಜಾ ತಥಾಽಷ್ಟಮಃ ||
ಏತಾನಿ ಸತತಂ ಪಶ್ಯೇನ್ನಮಸ್ಯೇದರ್ಚಯೇಚ್ಚ ಯಃ |
ಪ್ರದಕ್ಷಿಣಂ ಪ್ರಕುರ್ವೀತ ತದಾಽಸ್ಯಾಯುರ್ನ ಹೀಯತೇ || (ನಾರದೀಯ ವಚನ)

"(1) ಬ್ರಾಹ್ಮಣನು (2) ಗೋವು (3) ಅಗ್ನಿ (4) ಸುವರ್ಣ (5) ತುಪ್ಪ (6) ಸೂರ್ಯ (7) ನೀರು (8) ರಾಜ ಎಂಬ ಎಂಟು

ವಸ್ತುಗಳು ಮಂಗಲವಸ್ತುಗಳೆನಿಸುತ್ತವೆ. ಈ ವಸ್ತುಗಳನ್ನು ಪ್ರತಿದಿನದಲ್ಲಿಯೂ ಪ್ರಾತಃಕಾಲದಲ್ಲಿ ನೋಡಬೇಕು. ನಮಸ್ಕರಿಸಬೇಕು. ಪೂಜಿಸಬೇಕು ಮತ್ತು ಪ್ರದಕ್ಷಿಣೆ ಮಾಡಬೇಕು. ಹೀಗೆ ಮಾಡುವವನಿಗೆ ಆಯುಸ್ಸು ಕ್ಷೀಣಿಸುವದಿಲ್ಲ."

ಅಗ್ನಿಚಿತ್ಕಪಿಲಾ ಸತ್ರೀ ರಾಜಾ ಭಿಕ್ಷುರ್ಮಹೋದಧಿಃ |
ದೃಷ್ಟಮಾತ್ರಾಃ ಪುನಂತ್ಯೇತೇ ತಸ್ಮಾತ್ಪಶ್ಯೇತ ನಿತ್ಯಶಃ || (ಮನುವಿನ ವಚನ)

"(1) ಅಗ್ನಿಚಯನ ಮಾಡಿದವನು ಅಂದರೆ ಅಗ್ನಿಹೋತ್ರವನ್ನು ಮಾಡುತ್ತಿರುವವನು (2) ಕಪಿಲಬಣ್ಣದ ಆಕಳು (3) ಸತ್ರಯಾಗವನ್ನು ಮಾಡಿದವನು (4) ರಾಜನು (5) ಸನ್ಯಾಸಿ (6) ಸಮುದ್ರ ಈ ಆರು ಪದಾರ್ಥಗಳು ಕಣ್ಣಿನಿಂದ ನೋಡಿದ ಕೂಡಲೇ ಪರಿಶುದ್ಧಿಯನ್ನು ಕೊಡುತ್ತವೆ. ಆದ್ದರಿಂದ ಪ್ರತಿದಿನದಲ್ಲಿಯೂ ನೋಡಬೇಕು."

ಶ್ರೋತ್ರಿಯಂ ಸುಭಗಾಮಗ್ನಿಂ ಗಾಮಗ್ನಿಚಿತಮೇವ ಚ |
ಪ್ರಾತರುತ್ಥಾಯ ಯಃ ಪಶ್ಯೇದಾಪದ್ಭಿಃ ಸ ಪ್ರಮುಚ್ಯತೇ ||

"(1) ವೇದಾಧ್ಯಯನ ಸಂಪನ್ನನಾದ ಶ್ರೋತ್ರಿಯನು (2) ಸುಮಂಗಲೀಸ್ತ್ರೀಯರು (3) ಅಗ್ನಿ (4) ಗೋವುಗಳು (5) ಅಗ್ನಿಚಯನವನ್ನು ಮಾಡಿದವನು ಈ ಐದು ಪದಾರ್ಥಗಳನ್ನು ಬೆಳಿಗ್ಗೆ ಎದ್ದ ಕೂಡಲೇ ಯಾವನು ನೋಡುತ್ತಾನೆಯೋ ಅವನು ಸಕಲ ಆಪತ್ತುಗಳಿಂದಲೂ ಬಿಡುಗಡೆಯನ್ನು ಪಡೆಯುತ್ತಾನೆ."

ಹೋಮಂ ಚ ಕೃತ್ವಾಽಽಲಭನಂ ಪಶೂನಾಂ ತತೋ ಬಹಿರ್ನಿರ್ಗಮನಂ ಪ್ರಶಸ್ತಮ್ |
ದೂರ್ವಾಶ್ಚ ಸರ್ಪಿರ್ದಧಿ ಸೋದಕುಂಭಂ ಧೇನುಂ ಸವತ್ಸಾಂ ವೃಷಭಂ ಸುವರ್ಣಮ್ ||
ಮೃದ್ಗೋಮಯಂ ಸ್ವಸ್ತಿಕಮಕ್ಷತಾಂಶ್ಚ ತಿಲಾನ್ಮಧು ಬ್ರಾಹ್ಮಣಕನ್ಯಕಾಂ ಚ |
ಶ್ವೇತಾನಿ ಪುಷ್ಪಾಣಿ ತಥಾ ಶಮೀಂ ಚ ಹುತಾಶನಂ ಚಂದನಮರ್ಕಬಿಂಬಮ್ ||
ಅಶ್ವತ್ಥವೃಕ್ಷಂ ಚ ಸಮಾಲಭೇತ ತತಶ್ಚ ಕುರ್ಯಾನ್ನಿಜಜಾತಿಧರ್ಮಮ್ || (ವಾಮನಪುರಾಣ ವಚನ)

"ಬೆಳಿಗ್ಗೆ ಎದ್ದು ಅಗ್ನಿಹೋತ್ರಹೋಮವನ್ನು ಮುಗಿಸಬೇಕು. ಪಶುಗಳೇ ಮೊದಲಾದ ಮಂಗಲವಸ್ತುಗಳನ್ನು ಮುಟ್ಟಬೇಕು. ಅನಂತರದಲ್ಲಿ ಹೊರಗೆ ಹೊರಡಬೇಕು. (1) ಗರಿಕೆಹುಲ್ಲು (2) ತುಪ್ಪ (3) ಮೊಸರು (4) ನೀರಿನಿಂದ ತುಂಬಲ್ಪಟ್ಟ ಕೊಡ ಮುಂತಾದ ಪಾತ್ರೆಗಳು (5) ಕರುವಿನಿಂದ ಸಹಿತವಾದ ದನ (6) ಎತ್ತು (7) ಭಂಗಾರ (8) ತುಲಸೀ ಮೃತ್ತಿಕೆ ಮುಂತಾದ ಶುಭಮೃತ್ತಿಕೆಗಳು (9) ಗೋಮಯ (10) ರಂಗವಲ್ಲಿಯಿಂದ ನಿರ್ಮಿತವಾದ ಸ್ವಸ್ತಿಕಗಳು (11) ಮಂತ್ರಾಕ್ಷತೆಗಳು (12) ಎಳ್ಳು (13) ಜೇನುತುಪ್ಪ (14) ಬ್ರಾಹ್ಮಣಕನ್ಯೆ (15) ಬಿಳಿಬಣ್ಣದ ಪುಷ್ಪಗಳು (16) ಶಮೀವೃಕ್ಷ (17) ಅಗ್ನಿ (18) ಚಂದನ (19) ಸೂರ್ಯಬಿಂಬ (20) ಅಶ್ವತ್ಥದ ಮರ ಈ ಇಪ್ಪತ್ತು ವಸ್ತುಗಳನ್ನು ಮುಟ್ಟಬೇಕು. ಅನಂತರದಲ್ಲಿ ತನ್ನ ಜಾತಿಗೂ ಆಶ್ರಮಕ್ಕೂ ಯೋಗ್ಯವಾದ ಕರ್ಮವನ್ನು ಮಾಡಬೇಕು.

ಸ್ವಾತ್ಮಾನಂ ಚ ಘೃತೇ ಪಶ್ಯೇದ್ಯದೀಚ್ಛೇಚ್ಚಿರಜೀವಿಕಾಮ್ || (ಬ್ರಹ್ಮಪುರಾಣ ವಚನ)

"ಬಹುಕಾಲದವರೆಗೆ ಬಾಳಬೇಕೆಂದು ಆಶಿಸುವವನು ತುಪ್ಪದಲ್ಲಿ ತನ್ನ ಪ್ರತಿಬಿಂಬವನ್ನು ಪ್ರತಿದಿನದಲ್ಲಿಯೂ ನೋಡಬೇಕು."

ಕಂಡೂಯ ಪೃಷ್ಠತೋ ಗಾಂ ತು ಕೃತ್ವಾ ಚಾಸ್ಯಾಶ್ಚ (ಚಾಶ್ವತ್ಥ) ವಂದನಮ್ |
ಉಪಗಮ್ಯ ಗುರೂನ್ ಸರ್ವಾನ್ ವಿಪ್ರಾಂ (ವೃದ್ಧಾಂ) ಶ್ಚೈವಾಭಿವಾದಯೇತ್ || (ಭರದ್ವಾಜರ ವಚನ)

"ಗೋವುಗಳ ಬೆನ್ನನ್ನು ತುರಿಸಿ ನಮಸ್ಕರಿಸಬೇಕು. ಅಶ್ವತ್ಥಮರವನ್ನು ನಮಸ್ಕರಿಸಬೇಕು. ಎಲ್ಲಾ ಗುರುಗಳೂ ವೃದ್ಧರೂ ಇದ್ದಲ್ಲಿಗೆ ಹೋಗಬೇಕು. ಅವರನ್ನು ನಮಸ್ಕರಿಸಬೇಕು."

## ಎಲ್ಲಾ ಹೋಮಗಳಲ್ಲಿಯೂ ವಿಷ್ಣುವೇ ಪೂಜಿಸಲ್ಪಡುವನು

ಪ್ರಾಣಾನಾಯಮ್ಯ ಸಂಕಲ್ಪ್ಯ ಪರಿಷಿಚ್ಯ ಹುತಾಶನಮ್ |
ಪರಿಸ್ತೀರ್ಯ ಕುಶೈಃ ಸಾಗ್ರೈರ್ಜುಹುಯಾತ್ತದನಂತರಮ್ ||
ಅಗ್ನಿಮಂಡಲಮಧ್ಯಸ್ಥಂ ಧ್ಯಾತ್ವಾ ವಿಷ್ಣುಂ ಸನಾತನಮ್ |
ಪೂಜಯಿತ್ವಾ ಶ್ರಿಯಾ ಯುಕ್ತಂ ಜುಹುಯಾದಾಹುತಿಂ ತತಃ ||
ಸಂಹರ್ತಾ ಸರ್ವದೋಷಾಣಾಮಗ್ನಿಸ್ಥಃ ಸರ್ವದಾಹಕಃ |
ನಿತ್ಯಾನಂದೋಽಗ್ನಿವರ್ಣಶ್ಚ ರಾಮಃ ಪರಶುಭೃತ್ಸದಾ ||
ಕರ್ಮಣ್ಯಧಿಕೃತಾ ಯೇ ಚ ದೇವಾಃ ಸೂರ್ಯಾದಯೋಽಖಿಲಾಃ |
ವಿನಾ ವಿಷ್ಣುಂ ಸ್ವಾಂತರಸ್ಥಂ ಸ್ವಾಂಶ್ಚ ಪೂಜಯತೋ ಜನಾನ್ ||
ತಾನಧಃ ಪಾತಯಂತ್ಯದ್ಧಾ ಸಂಸಾರಾಬ್ಧೌ ಪುನಃ ಪುನಃ |
ದೇವಾನನ್ಯಾನ್ ಪೂಜಯದ್ಭಿಃ ಸ್ವಯಂ ಯದ್ಯಪಿ ಪೂಜಿತಃ ||
ದೇವಾ ವಿಷ್ಣ್ವರ್ಪಿತಾಂ ಕೃತ್ವಾ ಪೂಜಾಂ ಸ್ವೀಯೈರುಪಾರ್ಜಿತಾಮ್ |
ಕಿಂಚಿದ್ದತ್ವಾ ದಂಡಯಂತಿ ಸಂಸಾರಾಬ್ಧೌ ಪುನಃ ಪುನಃ ||
ದೇವಾನ್ಹಿತ್ವಾ ಯಜಂತೋಽಪಿ ವಿಷ್ಣುಂ ದೇವೇಶಮವ್ಯಯಮ್ |
ನಾಧಿಗಚ್ಛಂತಿ ತೇ ವಿಷ್ಣೋಃ ಪ್ರಸಾದಂ ಮೋಕ್ಷಸಾಧನಮ್ ||
ತಸ್ಮಾದಗ್ನ್ಯಾದಿಗಂ ವಿಷ್ಣುಮುದ್ದಿಶ್ಯೈವ ಹುನೇದ್ಬುಧಃ |
ಅಗ್ನಿಸ್ಥಮುಖ್ಯಪ್ರಾಣಸ್ಥವಿಷ್ಣುಮೇವ ಯಜೇತ್ತಥಾ ||
ಪ್ರಾಣ ಏವಾಗ್ನಿಸಂಸ್ಥಃ ಸನ್ ಹೂಯತೇ ಸರ್ವಯಜ್ವಭಿಃ |
ಆದಿತ್ಯಸ್ಥೇನ ರೂಪೇಣ ಜಗದ್ಭಾತಿ ಪ್ರಕಾಶಯನ್ ||
ಅಗ್ನಿಸ್ಥೇನ ತು ರೂಪೇಣ ಹೂಯತೇ ಸರ್ವಯಜ್ವಭಿಃ |
ಇತ್ಯಾದಿಸ್ಮೃತಿವಾಕ್ಯೇನ ಪ್ರಾಣಸ್ಥೋ ವಿಷ್ಣುರೇವ ಹಿ ||
ಹೋತವ್ಯಃ ಸರ್ವದಾ ತಸ್ಮಾದಗ್ನ್ಯಾದೌ ಸರ್ವದಾ ವಿಭುಃ | (ಸ್ಮೃತಿಸಂಗ್ರಹ ವಚನ)

"ಈಗ ಹೋಮದಲ್ಲಿ ವಿಶೇಷವಿಷಯವನ್ನು ತಿಳಿಸುವೆವು. (1) ಪ್ರಾಣಾಯಾಮವನ್ನು ಮಾಡಬೇಕು. (2) ಸಂಕಲ್ಪವನ್ನು ಮಾಡಬೇಕು. (3) ಅಗ್ನಿಯ ಸುತ್ತಲೂ ಪರಿಷೇಚನವನ್ನು ಮಾಡಬೇಕು. (4) ತುದಿಯಿಂದ ಯುಕ್ತವಾದ ದರ್ಭೆಗಳಿಂದ ನಾಲ್ಕು ದಿಕ್ಕುಗಳಲ್ಲಿಯೂ ಪರಿಸ್ತರಣವನ್ನು ಮಾಡಬೇಕು. (5) ಅನಂತರದಲ್ಲಿ ಅಗ್ನಿಮಂಡಲದ ಮಧ್ಯದಲ್ಲಿರುವವನೂ ಲಕ್ಷ್ಮೀಸಹಿತನೂ ಆಗಿರುವ ನಾರಾಯಣನನ್ನು ಧ್ಯಾನಿಸುತ್ತಾ ಹೋಮವನ್ನು ಮಾಡಬೇಕು. ಅಗ್ನಿಯಲ್ಲಿ ವಾಸಿಸುತ್ತಿರುವ ನಾರಾಯಣನು ಎಲ್ಲವನ್ನೂ ಸುಡುತ್ತಿರುವನು. ಅವನು ಜೀವರಲ್ಲಿರುವ ಸಕಲದೋಷಗಳನ್ನೂ ಪರಿಹರಿಸುವನು. ಆ ಶ್ರೀಹರಿಯು ಕೊಡಲಿಯನ್ನು ಕೈಯಲ್ಲಿ ಧರಿಸಿರುವ ಪರಶುರಾಮರೂಪಿಯಾಗಿರುವನು. ಬೆಂಕಿಯ ವರ್ಣದಿಂದ ಯುಕ್ತನಾಗಿರುವನು. ಯಾವಾಗಲೂ ಆನಂದರೂಪಿಯಾದ ಆ ಶ್ರೀಹರಿಗೆ ಹೊಸ ಆನಂದದ ಲಾಭವಿಲ್ಲ."

ಸೂರ್ಯ ಮುಂತಾದ ಎಲ್ಲಾ ದೇವತೆಗಳೂ ಅಗ್ನಿಹೋತ್ರಾದಿಕರ್ಮಗಳಲ್ಲಿ ಅಧಿಕಾರವುಳ್ಳವರು. ಅವರೆಲ್ಲರೂ ತಮ್ಮ ಹೃದಯಕಮಲಗಳಲ್ಲಿ ಶ್ರೀಪರಶುರಾಮರೂಪಿಯಾದ ಶ್ರೀಹರಿಯನ್ನು ಸ್ಮರಿಸುತ್ತಾ ಅಗ್ನಿಯ ಮಧ್ಯದಲ್ಲಿ ಆರಾಧಿಸುತ್ತಿರುವರು.

ಇಂತಹ ದೇವತೆಗಳನ್ನು ಸ್ಮರಿಸುತ್ತಾ ಕೆಲವು ಅಧಿಕಾರಿಗಳು ಅಗ್ನಿಯ ಮಧ್ಯದಲ್ಲಿ ಆ ದೇವತೆಗಳನ್ನು ಆರಾಧಿಸುತ್ತಿರುವರು. ಆದರೆ ಅವರ ಹೃದಯಕಮಲದಲ್ಲಿ ಶ್ರೀಹರಿಯು ವಾಸಿಸುತ್ತಿರುವನೆಂದು ತಿಳಿಯದೆ ಆ ದೇವತೆಗಳನ್ನು ಮಾತ್ರ ತೃಪ್ತಿಪಡಿಸಬೇಕೆಂದು ಭಾವಿಸುವರು. ಅವರು ಮಾಡುತ್ತಿರುವ ಪೂಜೆಯನ್ನು ದೇವತೆಗಳು ಸ್ವೀಕರಿಸುವುದಿಲ್ಲ. ಹಾಗೆ ಪೂಜಿಸುವವರನ್ನು ಕೆಳಗೆ ತಳ್ಳಿ ಸಂಸಾರವೆಂಬ ಸಮುದ್ರದಲ್ಲಿ ಪುನಃ ಪುನಃ ಮುಳುಗಿಸುತ್ತಿರುವರು."

"ಇತರ ದೇವತೆಗಳನ್ನು ಪೂಜಿಸುವಾಗಲೂ ಅವರ ಅಂತರ್ಯಾಮಿಯಾದ ಶ್ರೀಹರಿಯನ್ನೇ ಸರ್ವರೂ ಪೂಜಿಸುತ್ತಿರುವರು. ಆದರೆ ಶ್ರೀಹರಿಯೇ ಪೂಜಿಸಲ್ಪಡುತ್ತಿರುವನು ಎಂದು ತಿಳಿಯದಿರುವುದರಿಂದ ಆ ಪೂಜೆಯ ಫಲವು ಪೂಜಿಸುತ್ತಿರುವವರಿಗೆ ಬರುವುದಿಲ್ಲ. ದೇವತೆಗಳು ಆ ಪೂಜೆಯನ್ನು ಸ್ವೀಕರಿಸಿ ಶ್ರೀಹರಿಗೆ ಸಮರ್ಪಿಸುತ್ತಿರುವರು. ತಮ್ಮನ್ನು ಪೂಜಿಸಿದುದಕ್ಕಾಗಿ ಆ ಪೂಜೆಗೆ ಸ್ವಲ್ಪ ಫಲವನ್ನು ಪೂಜಕರಿಗೆ ಕೊಡುವರು. ಶ್ರೀಹರಿಯನ್ನು ಸ್ಮರಿಸದುದಕ್ಕಾಗಿ ಪೂಜಕರನ್ನು ಸಂಸಾರಸಮುದ್ರದಲ್ಲಿ ಮುಳುಗಿಸುತ್ತಾ ಯಾವಾಗಲೂ ದಂಡಿಸುತ್ತಿರುವರು."

"ಶ್ರೀಹರಿಯನ್ನು ಸ್ಮರಿಸದೆ ದೇವತೆಗಳನ್ನು ಪೂಜಿಸುತ್ತಿರುವವರು ಮೋಕ್ಷಸಾಧನವಾಗಿರುವ ವಿಷ್ಣುವಿನ ಅನುಗ್ರಹವನ್ನು ಪಡೆಯಲಾರರು. ಆದ್ದರಿಂದ ಅಗ್ನಿ ಮುಂತಾದ ದೇವತೆಗಳನ್ನು ಆರಾಧಿಸುವವರು ಅಗ್ನಿ ಮುಂತಾದ ದೇವತೆಗಳಲ್ಲಿ ಅಂತರ್ಯಾಮಿಯಾಗಿರುವ ಶ್ರೀಪರಶುರಾಮರೂಪಿಯಾಗಿರುವ ಶ್ರೀಹರಿಯನ್ನೇ ಆರಾಧಿಸಬೇಕು."

"ಎಲ್ಲಾ ಯಾಗಗಳನ್ನು ಮಾಡುತ್ತಿರುವವರೂ ಅಗ್ನಿಯೊಳಗೆ ಮುಖ್ಯಪ್ರಾಣದೇವರೂ ಆ ಮುಖ್ಯಪ್ರಾಣದೇವರಲ್ಲಿ ಪರಶುರಾಮರೂಪಿಯಾದ ಶ್ರೀಹರಿಯೂ ಪೂಜಿಸಲ್ಪಡುವುದಾಗಿ ತಿಳಿದು ಹೋಮವನ್ನು ಮಾಡುತ್ತಿರಬೇಕು. ಸೂರ್ಯಾಂತರ್ಯಾಮಿಯಾದ ಮುಖ್ಯಪ್ರಾಣದೇವರಲ್ಲಿ ಸನ್ನಿಹಿತನಾಗಿರುವ ಸವಿತಾ ಎಂಬ ಹೆಸರಿನಿಂದ ಯುಕ್ತನಾಗಿರುವ ಶ್ರೀಹರಿಯು ಎಲ್ಲಾ ವಸ್ತುಗಳನ್ನೂ ತನ್ನ ಬೆಳಕಿನಿಂದ ತಿಳಿಸುತ್ತಾ ಸಂಚರಿಸುತ್ತಿರುವನು ಎಂದು ಸ್ಮರಿಸಬೇಕು. ಹೀಗೆ ಎಲ್ಲಾ ಸ್ಮೃತಿಗ್ರಂಥಗಳಲ್ಲಿಯೂ ಹೇಳಲ್ಪಟ್ಟಿದೆ. ಆದ್ದರಿಂದ ಅಗ್ನ್ಯಂತರ್ಗತನಾದ ಮುಖ್ಯಪ್ರಾಣನಲ್ಲಿರುವ ಪರಶುರಾಮರೂಪಿಯಾದ ಶ್ರೀಹರಿಯನ್ನು ತೃಪ್ತಿಪಡಿಸುವುದಕ್ಕಾಗಿಯೇ ಯಾವಾಗಲೂ ಹೋಮವನ್ನು ಮಾಡುತ್ತಿರಬೇಕು."

ಅಶ್ನಾತ್ಯನಂತಃ ಖಲು ತತ್ವಕೋವಿದೈಃ ಶ್ರದ್ಧಾಹುತಂ ಯನ್ಮುಖ ಇಜ್ಯನಾಮಭಿಃ |
ನ ವೈ ತಥಾ ಚೇತನಯಾ ಬಹಿಷ್ಕೃತೇ ಹುತಾಶನೇ ಪಾರಮಹಂಸಪರ್ಯಗುಃ ||
ಇತ್ಯಾದಿವಚನಾದಗ್ನಿಸಂಸ್ಕಾರಶ್ರವಣಾದಪಿ |
ಜಡಾಗ್ನಿರಾಹುತಿಸ್ಥಾನಂ ತತೋಽಗ್ನಿಂ ದೇವಮಾವಹೇತ್ ||
ತತ್ರಸ್ಥಮುಖ್ಯಪ್ರಾಣಸ್ಥವಿಷ್ಣುಮೇವ ಯಜೇದ್ಬುಧಃ |

"ಶ್ರೀಅಗ್ನಿದೇವನು ಶ್ರೀಹರಿಯ ಮುಖವೆನಿಸುವನು. ಅಗ್ನಿದೇವನಲ್ಲಿ ಸನ್ನಿಹಿತನಾದ ಶ್ರೀಹರಿಯನ್ನು ಇಂದ್ರ ಚಂದ್ರ ಮುಂತಾದ ಪರಮಮಂಗಳವಾಗಿರುವ ಹೆಸರುಗಳಿಂದ ಕರೆಯುತ್ತಾ ಆಹುತಿಯನ್ನು ಪೂಜಕರು ಕೊಡುತ್ತಿರುವರು. ಶ್ರದ್ಧೆಯಿಂದ ತತ್ವನಿಪುಣರಿಂದ ಕೊಡಲ್ಪಡುತ್ತಿರುವ ಆಹುತಿಗಳನ್ನು ಶ್ರೀಹರಿಯು ಸಂತೋಷದಿಂದ ಸ್ವೀಕರಿಸುತ್ತಿರುವನು. ಜ್ಞಾನಶೂನ್ಯವಾದ ಜಡವಾದ ಅಗ್ನಿಯಲ್ಲಿ ಕೊಡುತ್ತಿರುವ ಆಹುತಿಯನ್ನು ಶ್ರೀಹರಿಯೂ ಇತರ ದೇವತೆಗಳೂ ಸ್ವೀಕರಿಸುವುದಿಲ್ಲ" ಎಂದು ಭಾಗವತಗ್ರಂಥದಲ್ಲಿ ಶ್ರೀವೇದವ್ಯಾಸರು ಹೇಳಿರುವರು. ಇದರಂತೆ ಅಸಂಖ್ಯಪ್ರಮಾಣಗಳಿವೆ.

ಅದು ಮಾತ್ರವಲ್ಲ. ಅಗ್ನಿಗೆ ಜಾತಕರ್ಮ ಮುಂತಾದ ಸಂಸ್ಕಾರಗಳನ್ನು ಮಾಡಿದ ಮೇಲೆಯೇ ಆಹುತಿಗಳನ್ನು ಕೊಡಬೇಕೆಂದು ಎಲ್ಲಾ ಶಾಸ್ತ್ರಗಳೂ ತಿಳಿಸುತ್ತಿವೆ. ಜಾತಕರ್ಮಾದಿಸಂಸ್ಕಾರಗಳು ಜೀವನಿಗೆ ಹೊರತು ಜಡವಸ್ತುಗಳಿಗಿಲ್ಲ. ಆದ್ದರಿಂದ ಅಗ್ನಿಯಲ್ಲಿ ಆಹುತಿಯನ್ನು ಕೊಡಬೇಕೆಂದು ಹೇಳಿರುವುದೆಲ್ಲವೂ ಜಡವಾದ ಅಗ್ನಿಯನ್ನು ಕುರಿತು ಹೇಳಲಿಲ್ಲವೆಂದೂ

ಜಡವಾದ ಅಗ್ನಿಯಲ್ಲಿ ಸನ್ನಿಹಿತನಾಗಿರುವ ಅಗ್ನಿದೇವನಿಗೆ ಜಾತಕರ್ಮ ಮುಂತಾದ ಸಂಸ್ಕಾರಗಳನ್ನು ಮಾಡಬೇಕೆಂದು ತಿಳಿಸಿರುತ್ತದೆಯೆಂದೂ ಅವಶ್ಯವಾಗಿ ಹೇಳಲೇಬೇಕು."

"ಆದ್ದರಿಂದ ಜಡವಾದ ಅಗ್ನಿಯು ಅಗ್ನಿದೇವನ ಸನ್ನಿಧಾನಪಾತ್ರವಾದ ವಸ್ತುವೆಂದೂ ಆ ಅಗ್ನಿದೇವನಲ್ಲಿ ಮುಖ್ಯ ಪ್ರಾಣದೇವನು ಸನ್ನಿಹಿತನಾಗಿರುವನೆಂದೂ ಆ ಮುಖ್ಯಪ್ರಾಣದೇವನಲ್ಲಿ ಪರಶುರಾಮರೂಪಿಯಾದ ಶ್ರೀಹರಿಯು ಸನ್ನಿಹತನಾಗಿರುವನೆಂದೂ ಆ ಶ್ರೀಹರಿಯನ್ನು ಉದ್ದೇಶಿಸಿ ಆಹುತಿಗಳನ್ನು ಕೊಡಬೇಕೆಂದೂ ಅವಶ್ಯವಾಗಿ ಹೇಳಲೇಬೇಕು."

**ವಿಷ್ಣುವಿಗೆ ಸಮರ್ಪಿತವಾದ ವಸ್ತುಗಳನ್ನೇ ಆಹುತಿ ಕೊಡಬೇಕು**

ವಿಷ್ಣೋರ್ನಿವೇದಿತಂ ದ್ರವ್ಯಮಗ್ನ್ಯೌ ಹೋಮಮಾಚರೇತ್ |
ಅನಿವೇದ್ಯಂ ನ ಗೃಹ್ಣಂತಿ ದೇವಾ ಹವ್ಯಂ ನ ಸಂಶಯಃ ||

"ಹೋಮಕ್ಕೆ ಯೋಗ್ಯವಾದ ವಸ್ತುವು ಹವ್ಯವೆನಿಸುತ್ತದೆ. ವಿಷ್ಣುವಿಗೆ ಸಮರ್ಪಿಸಲ್ಪಡುವ ಹವ್ಯವೇ ಹೋಮಕ್ಕೆ ಯೋಗ್ಯವೆನಿಸುತ್ತದೆ. ಶ್ರೀವಿಷ್ಣುವಿಗೆ ಸಮರ್ಪಣೆ ಮಾಡದಿರುವ ವಸ್ತುವನ್ನು ದೇವತೆಗಳು ಸ್ವೀಕರಿಸುವುದಿಲ್ಲ. ಈ ವಿಷಯದಲ್ಲಿ ಸಂಶಯವು ಬೇಡ."

ವಿಷ್ಣೋರ್ನಿವೇದಿತಾನ್ನೇನ ಯಷ್ಟವ್ಯಂ ದೇವತಾಂತರಮ್ |
ಪಿತೃಭ್ಯಶ್ಚಾಪಿ ತದ್ದೇಯಂ ತದಾನಂತ್ಯಾಯ ಧೀಮತಾ ||
ಇತ್ಯಾದಿ ಪಾದ್ಮೇ ವಾಸಿಷ್ಠೇ ಪಂಚರಾತ್ರೇಽಪ್ಯುದಾಹೃತಮ್ |

"ವಿಷ್ಣುವಿಗೆ ಸಮರ್ಪಿಸಲ್ಪಟ್ಟ ಅನ್ನದಿಂದಲೇ ಬೇರೆ ದೇವತೆಗಳಿಗೆ ಆಹುತಿಯನ್ನು ಕೊಡಬೇಕು. ಅದೇ ವಿಷ್ಣು ನೈವೇದ್ಯವನ್ನೇ ಶ್ರಾದ್ಧಾದಿಗಳಲ್ಲಿ ಪಿತೃಗಳಿಗೂ ಕೊಡಬೇಕು. ಇದರಿಂದ ದೇವತೆಗಳಿಗೂ ಪಿತೃಗಳಿಗೂ ಅನಂತಕಾಲದವರೆಗೆ ತೃಪ್ತಿಯು ಏರ್ಪಡುತ್ತದೆ. ಹೀಗೆ ಪದ್ಮಪುರಾಣದಲ್ಲಿಯೂ ವಸಿಷ್ಠಸ್ಮೃತಿಯಲ್ಲಿಯೂ ಪಂಚರಾತ್ರಾಗಮದಲ್ಲಿಯೂ ಹೇಳಿರುತ್ತದೆ."

ಮೇಲ್ಕಂಡ ಪ್ರಮಾಣಗಳಿಂದ ವಿಷ್ಣುವಿಗೆ ಸಮರ್ಪಿಸಲ್ಪಟ್ಟ ಅನ್ನದಿಂದ ಜಡವಾದ ಅಗ್ನಿಯ ಒಳಗಿರುವ ಚೇತನನಾದ ಅಗ್ನಿದೇವನಲ್ಲಿ ಸನ್ನಿಹಿತನಾಗಿರುವ ಮುಖ್ಯಪ್ರಾಣದೇವನಲ್ಲಿ ಸನ್ನಿಹಿತನಾಗಿರುವ ಶ್ರೀಪರಶುರಾಮನಾಮಕನಾದ ಶ್ರೀಹರಿಯನ್ನು ತೃಪ್ತಿಪಡಿಸಬೇಕೆಂದು ಸಿದ್ಧವಾಯಿತು.

**ಏಕಾದಶೀದಿನದಲ್ಲಿ ಹೋಮವನ್ನೂ ಶ್ರಾದ್ಧಾದಿಗಳನ್ನೂ ಮಾಡಕೂಡದು**

ಏಕಾದಶ್ಯಾಂ ನ ಹೋಮಃ ಸ್ಯಾತ್ಪಕ್ಷಯೋರುಭಯೋರಪಿ |
ನಾಗ್ನಿಹೋತ್ರಂ ನ ಚ ಶ್ರಾದ್ಧಂ ನಿತ್ಯೋಪಾಸನಮೇವ ಚ ||
ನ ತತ್ರ ವಿಧಿಲೋಪಃ ಸ್ಯಾಜ್ಜಯಂತ್ಯಾಂ ಹರಿವಾಸರೇ || (ವರಾಹಪುರಾಣ)

"ಏಕಾದಶೀ ಶ್ರೀಕೃಷ್ಣಜಯಂತೀ ಮುಂತಾದ ದಿನಗಳು ಹರಿವಾಸರಗಳೆನಿಸುತ್ತವೆ. ಶುಕ್ಲಪಕ್ಷದಲ್ಲಿಯೂ ಕೃಷ್ಣಪಕ್ಷದಲ್ಲಿಯೂ ಏಕಾದಶೀದಿನಗಳಲ್ಲಿ ಹೋಮವನ್ನೂ ಅಗ್ನಿಹೋತ್ರವನ್ನೂ ಶ್ರಾದ್ಧವನ್ನೂ ನಿತ್ಯದಲ್ಲಿ ಮಾಡುತ್ತಿರುವ ಔಪಾಸನ ಹೋಮವನ್ನೂ ಮಾಡಕೂಡದು. ಆ ದಿನದಲ್ಲಿ ಅಗ್ನಿಹೋತ್ರಾದಿಗಳನ್ನು ಮಾಡದಿರುವುದರಿಂದ ಶಾಸ್ತ್ರದಲ್ಲಿ ಹೇಳಿರುವ ವಿಧಿಯನ್ನು ಮೀರಿದ್ದರಿಂದ ದೋಷವು ಬರುವುದಿಲ್ಲ."

ಯದ್ಯಾಹಿತಾಗ್ನಿರ್ವಿಪ್ರೋಽಪಿ ನಾಗ್ನೌ ಹೋಮಂ ಸಮಾಚರೇತ್ |
ನ ತಸ್ಯ ವಿಧಿಲೋಪಃ ಸ್ಯಾದ್ವಾಸುದೇವಪ್ರಸಾದತಃ ||
ಪುಣ್ಯಾತ್ಪುಣ್ಯಪ್ರದಂ ಯಸ್ಮಾದ್ವ್ರತಂ ಹರಿದಿನಾತ್ಮಕಮ್ || (ವರಾಹಪುರಾಣ)

"ಬ್ರಾಹ್ಮಣನು ಅಗ್ನ್ಯಾಧಾನವನ್ನು ಮಾಡಿದವನಾಗಿದ್ದರೂ ಏಕಾದಶೀದಿನದಲ್ಲಿ ಹೋಮವನ್ನು ಮಾಡಕೂಡದು. ಶ್ರೀಹರಿಯ ಅನುಗ್ರಹವಿಶೇಷವು ಏಕಾದಶೀದಿನದಲ್ಲಿ ಹೋಮವನ್ನು ಮಾಡದವನಲ್ಲಿ ಏರ್ಪಡುತ್ತದೆ. ಈ ಅನುಗ್ರಹ ವಿಶೇಷದಿಂದ ಅವನಿಗೆ ವಿಧಿಲೋಪದೋಷವು ಬರುವುದಿಲ್ಲ. ಹರಿದಿನಾತ್ಮಕವಾದ ಏಕಾದಶೀವ್ರತವು ಪುಣ್ಯಗಳಿಗಿಂತಲೂ ಅಧಿಕವಾದ ಪುಣ್ಯವನ್ನು ಕೊಡುತ್ತದೆ. ಕಡಿಮೆ ಪುಣ್ಯವನ್ನು ಕೊಡುವ ಅಗ್ನಿಹೋತ್ರಹೋಮಾದಿಗಳಿಗಿಂತ ಅಧಿಕವಾದ ಪುಣ್ಯಗಳನ್ನು ಕೊಡುತ್ತಿರುವ ಏಕಾದಶೀವ್ರತವನ್ನೇ ಮಾಡಬೇಕು."

### ಏಕಾದಶೀದಿನದಲ್ಲಿ ಶ್ರಾದ್ಧವನ್ನು ಮಾಡಕೂಡದು ಎಂಬ ವಿಷಯದಲ್ಲಿ ಪೂರ್ವಪಕ್ಷ

(1) ಅಥ ಸಾಯಂಪ್ರಾತರಗ್ನಿಹೋತ್ರಂ ಜುಹೋತಿ. ಯಜೇತ ದರ್ಶಪೂರ್ಣಮಾಸೌ

(ಯಜುರ್ವೇದ, ದ್ವಿತೀಯಖಂಡ, ಐದನೆಯ ಪ್ರಶ್ನೆ)

"ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕು. ಅಮಾವಾಸ್ಯೆಯಲ್ಲಿ ಅಮಾವಾಸ್ಯಾಹೋಮವನ್ನೂ ಹುಣ್ಣಿಮೆಯಲ್ಲಿ ಪೂರ್ಣಮಾಸ ಹೋಮವನ್ನೂ ಮಾಡಬೇಕು."

(2) ಯಾವಜ್ಜೀವಮಗ್ನಿಹೋತ್ರಂ ಜುಹೋತಿ. ಸಾಯಂಪ್ರಾತರಗ್ನಿಹೋತ್ರಂ | (ಶ್ರುತ್ಯಂತರ)

"ಬದುಕಿರುವವರೆಗೂ ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕು."

(3) ಅಗ್ನಿಹೋತ್ರಂ ಚ ಜುಹುಯಾದಾದ್ಯಂತೇ ದ್ಯುನಿಶೋಃ ಸದಾ |
ದರ್ಶೇನ ಚಾರ್ಧಮಾಸಾಂತೇ ಪೌರ್ಣಮಾಸೇನ ಚೈವ ಹಿ ||
ತಸ್ಯಾಂತೇ ನವಸಸ್ಯೇಷ್ಟ್ಯಾ ತಥರ್ತ್ವಂತೇ ದ್ವಿಜೋಽಧ್ವರೈಃ |
ಪಶುನಾ ತ್ವಯನಸ್ಯಾದೌ ಸಮಾಂತೇ ಸೌಮಿಕೈರ್ಮಖೈಃ || (ಮನುಸ್ಮೃತಿ)

ಒಂದೊಂದು ದಿನದಲ್ಲಿಯೂ ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕು. ಅಮಾವಾಸ್ಯೆಯು ಮುಗಿಯುವಾಗ ಅಮಾವಾಸ್ಯಾಂತಮಾಸವೂ ಹುಣ್ಣಿಮೆಯು ಮುಗಿಯುವಾಗ ಪೂರ್ಣಮಾಸಾಂತಮಾಸವೂ ಮುಗಿಯುತ್ತದೆಂದ ಮೇಲೆ ಪೂರ್ಣಮಾಸಾಂತ ಒಂದು ಪಕ್ಷವು ಮುಗಿಯುವಾಗ ಅಮಾವಾಸ್ಯೆಯು ಬರುತ್ತದೆ. ಆ ದಿನದಲ್ಲಿ ದರ್ಶಹೋಮವನ್ನೂ ಹುಣ್ಣಿಮೆಯ ದಿನದಲ್ಲಿ ಪೂರ್ಣಮಾಸ ಹೋಮವನ್ನೂ ಒಂದೊಂದು ತಿಂಗಳುಗಳಲ್ಲಿಯೂ ಮಾಡಬೇಕು. ಸಸ್ಯಗಳು ಹೊಸದಾಗಿ ಹುಟ್ಟಿದಾಗ ನವಸಸ್ಯೇಷ್ಟಿಯನ್ನು ಒಂದೊಂದು ಸಂದರ್ಭದಲ್ಲಿಯೂ ಮಾಡಬೇಕು. ಎರಡೆರಡು ತಿಂಗಳುಗಳಿಗೆ ಒಂದೊಂದು ಋತುಗಳು ಏರ್ಪಡುತ್ತವೆ. ಈ ಋತುಗಳ ಕೊನೆಯಲ್ಲಿ ನಾನಾವಿಧವಾದ ಯಾಗಗಳನ್ನು ಮಾಡಬೇಕು. ಮೂರು ಮೂರು ಋತುಗಳಿಗೆ ಉತ್ತರಾಯಣ ದಕ್ಷಿಣಾಯನ ಎಂಬ ಎರಡು ಅಯನಗಳು ಏರ್ಪಡುತ್ತವೆ. ಈ ಅಯನಗಳ ಆರಂಭಕಾಲದಲ್ಲಿ ಪಶುಯಾಗಗಳನ್ನು ಮಾಡಬೇಕು. ವರ್ಷಾಂತದಲ್ಲಿ ಸೋಮಯಾಗಗಳನ್ನು ಮಾಡಬೇಕು."

(4) ಕೃತದಾರೋ ನೈವ ತಿಷ್ಠೇತ್ಕ್ಷಣಮಪ್ಯಗ್ನಿನಾ ವಿನಾ |
ತಿಷ್ಠೇತ್ತದಾ ವೇದಬಾಹ್ಯಸ್ತಥಾ ಚ ಪತಿತೋ ಭವೇತ್ || (ಗರ್ಗಸ್ಮೃತಿ)

"ವಿವಾಹವಾದ ಮೇಲೆ ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಅಗ್ನಿಯಿಲ್ಲದೆ ಇರಕೂಡದು. ಹಾಗೆ ಇದ್ದರೆ ಅವನು ವೇದಬಾಹ್ಯನೆನಿಸುವನು. ಪತಿತನೂ ಆಗುವನು."

(5) ಅಥ ಸಾಯಂಪ್ರಾತರಗ್ನಿಹೋತ್ರಂ ಹೋಷ್ಯಾಮಿ |

"ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡುವೆನು" ಎಂದು ಸಂಕಲ್ಪಿಸಬೇಕು.

ಮೇಲ್ಕಂಡ ಪ್ರಮಾಣವಚನಗಳಲ್ಲಿ ಮೊದಲನೆಯ ಮೂರು ವಾಕ್ಯಗಳಲ್ಲಿ ಪ್ರತಿದಿನದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕೆಂದು ಬರೆದಿಲ್ಲ. ಆದರೂ ಬಾಧಕವಾಕ್ಯಗಳಿಲ್ಲದಿದ್ದಾಗ ಸಾಮಾನ್ಯ ವಚನಗಳೂ ಪ್ರತಿದಿನದಲ್ಲಿಯೂ ಹೋಮವನ್ನು ಮಾಡಬೇಕೆಂಬ ಅರ್ಥವನ್ನು ತಿಳಿಸುತ್ತವೆ. ನಾಲ್ಕನೆಯ ವಾಕ್ಯದಲ್ಲಿ ಸ್ಪಷ್ಟವಾಗಿ ಅಗ್ನಿಯಿಲ್ಲದ ಕ್ಷಣಕಾಲವೂ ಇರಕೂಡದು ಎಂದು ಹೇಳಿರುವುದರಿಂದ ಅಗ್ನಿಹೋತ್ರವನ್ನು ಪ್ರತಿದಿನದಲ್ಲಿಯೂ ಮಾಡಬೇಕೆಂಬ ಅಂಶವು ಸಿದ್ಧವಾಗುತ್ತದೆ. ಐದನೆಯ ವಾಕ್ಯದಲ್ಲಿ ಸಂಕಲ್ಪಕ್ರಮವನ್ನು ತಿಳಿಸುತ್ತದೆ. ಆ ಸಂಕಲ್ಪವೂ ಪ್ರತಿದಿನದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕೆಂಬ ಅಂಶವನ್ನು ಊರ್ಜಿತಪಡಿಸುತ್ತದೆ.

ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡದಿದ್ದರೆ ಪ್ರತಿದಿನದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕೆಂದು ಹೇಳುತ್ತಿರುವ ಮೇಲ್ಕಂಡವಾಕ್ಯಗಳಿಗೆ ವಿರುದ್ಧವಾಗುತ್ತದೆ. ಆದ್ದರಿಂದ ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡದಿರುವುದು ಹೇಗೆ ಯುಕ್ತವಾಗುತ್ತದೆ? ಇದು ಪೂರ್ವಪಕ್ಷ. ಈ ಪೂರ್ವಪಕ್ಷಕ್ಕೆ ಉತ್ತರವನ್ನು ಕೊಡುತ್ತೇವೆ.

(1) ವೃದ್ಧಶಾತಾತಪರ ವಚನದಲ್ಲಿ ಏಕಾದಶೀದಿನದಲ್ಲಿ ಅಗ್ನಿಹೋತ್ರ ಹೋಮವನ್ನು ಮಾಡಕೂಡದು ಎಂದು ಹೇಳಿರುತ್ತವೆ.

(2) ಯದ್ಯಾಹಿತಾಗ್ನಿರ್ವಿಪ್ರಃ ಸ್ಯಾನ್ನಾಗ್ನೌ ಹೋಮಂ ಸಮಾಚರೇತ್ ।
ವಿಷ್ಣೋರ್ದಿನೇ ಮುನಿಶ್ರೇಷ್ಠ ಯದಿ ತತ್ಪ್ರೀತಿಮಿಚ್ಛತಿ ॥ (ಗರುಡಪುರಾಣ)

"ಅಗ್ನ್ಯಾಧಾನವನ್ನು ಮಾಡಿರುವವನೂ ಸಹ ಶ್ರೀಹರಿಯ ಪ್ರೀತಿಯನ್ನು ಬಯಸುವವನು ಹರಿದಿನದಲ್ಲಿ ಅಗ್ನಿಯಲ್ಲಿ ಹೋಮವನ್ನು ಮಾಡಕೂಡದು."

(3) ಹೋಮಂ ತಿಲೋದಕಂ ಪಿಂಡಂ ನ ಕುರ್ಯಾದ್ಧರಿವಾಸರೇ । (ವೃದ್ಧಮನುವಿನ ವಚನ)

"ಹರಿದಿನದಲ್ಲಿ ಹೋಮವನ್ನೂ ಪಿಂಡದಾನವನ್ನೂ ತಿಲತರ್ಪಣವನ್ನೂ ಮಾಡಕೂಡದು. (ಈ ಶ್ಲೋಕದಲ್ಲಿ ಹೋಮವನ್ನು ಮಾಡಕೂಡದು ಎಂದು ಹೇಳಿದೆ. ಆ ಹೋಮವು ಯಾವುದು? ಎಂಬ ಪ್ರಶ್ನೆಯು ಬರುತ್ತದೆ. ಸಂಕೋಚ ಮಾಡುವುದಕ್ಕೆ ಬಾಧಕಪ್ರಮಾಣವಿಲ್ಲ. ಆದ್ದರಿಂದ ಅಗ್ನಿಹೋತ್ರ ಮುಂತಾದ ಸಕಲಹೋಮಗಳನ್ನೂ ಮಾಡಕೂಡದು ಎಂದು ಹೇಳಿದಂತಾಗುತ್ತದೆ.)

(4) ವಿಷ್ಣೋರಹನಿ ಸಂಪ್ರಾಪ್ತೇ ಪಕ್ಷಯೋರುಭಯೋರಪಿ ।
ನಾನ್ನಂ ದದ್ಯಾಜ್ಜಲಂ ವಾಪಿ ನ ಹೋತವ್ಯಂ ಸುರಾದಿಷು ।
ಹವಿಷೋ ಗರ್ಹಿತತ್ವಾದ್ಧಿ ನ ಗೃಹ್ಣಂತಿ ದಿವೌಕಸಃ ॥ (ವಿಷ್ಣುಧರ್ಮದಲ್ಲಿ ವಜ್ರಪರಶುರಾಮಸಂವಾದ)

"ಶುಕ್ಲಪಕ್ಷದಲ್ಲಿಯೂ ಕೃಷ್ಣಪಕ್ಷದಲ್ಲಿಯೂ ಹರಿದಿನವು ಬಂದಾಗ ಅನ್ನದಾನವನ್ನೂ ಜಲದಾನವನ್ನೂ ದೇವತೆಗಳ ಪ್ರೀತಿಗಾಗಿ ಹೋಮಗಳನ್ನೂ ಮಾಡಕೂಡದು. ಆ ದಿನದಲ್ಲಿ ಹೋಮ ಮಾಡಬೇಕಾದ ಹವಿಸ್ಸುಗಳು ನಿಂದ್ಯವಾಗಿವೆ. ಆದ್ದರಿಂದ ಆ ಹವಿಸ್ಸುಗಳನ್ನು ದೇವತೆಗಳು ಸ್ವೀಕರಿಸಲಾರರು."

(5) ವೈಶ್ವದೇವಂ ಬಲಿಂ ಚೈವ ನಿತ್ಯಹೋಮಂ ತಥೈವ ಚ ।
ತರ್ಪಣಂ ಪಿತೃದೇವಾನಾಂ ವರ್ಜಯೇದ್ಧರಿವಾಸರೇ ॥ (ಬೋಧಾಯನರ ವಚನ)

"ಹರಿದಿನದಲ್ಲಿ ವೈಶ್ವದೇವವನ್ನೂ ಬಲಿಹರಣವನ್ನೂ ಅಗ್ನಿಹೋತ್ರ ಮುಂತಾದ ನಿತ್ಯಹೋಮಗಳನ್ನೂ ಪಿತೃತರ್ಪಣವನ್ನೂ ದೇವತಾತರ್ಪಣವನ್ನೂ ಮಾಡಕೂಡದು."

"ಬ್ರಾಹ್ಮಣನು ಅಗ್ನ್ಯಾಧಾನವನ್ನು ಮಾಡಿದವನಾಗಿದ್ದರೂ ಏಕಾದಶೀದಿನದಲ್ಲಿ ಹೋಮವನ್ನು ಮಾಡಕೂಡದು. ಶ್ರೀಹರಿಯ ಅನುಗ್ರಹವಿಶೇಷವು ಏಕಾದಶೀದಿನದಲ್ಲಿ ಹೋಮವನ್ನು ಮಾಡದವನಲ್ಲಿ ಏರ್ಪಡುತ್ತದೆ. ಈ ಅನುಗ್ರಹ ವಿಶೇಷದಿಂದ ಅವನಿಗೆ ವಿಧಿಲೋಪದೋಷವು ಬರುವುದಿಲ್ಲ. ಹರಿದಿನಾತ್ಮಕವಾದ ಏಕಾದಶೀವ್ರತವು ಪುಣ್ಯಗಳಿಗಿಂತಲೂ ಅಧಿಕವಾದ ಪುಣ್ಯವನ್ನು ಕೊಡುತ್ತದೆ. ಕಡಿಮೆ ಪುಣ್ಯವನ್ನು ಕೊಡುವ ಅಗ್ನಿಹೋತ್ರಹೋಮಾದಿಗಳಿಗಿಂತ ಅಧಿಕವಾದ ಪುಣ್ಯಗಳನ್ನು ಕೊಡುತ್ತಿರುವ ಏಕಾದಶೀವ್ರತವನ್ನೇ ಮಾಡಬೇಕು."

### ಏಕಾದಶೀದಿನದಲ್ಲಿ ಶ್ರಾದ್ಧವನ್ನು ಮಾಡಕೂಡದು ಎಂಬ ವಿಷಯದಲ್ಲಿ ಪೂರ್ವಪಕ್ಷ

(1) ಅಥ ಸಾಯಂಪ್ರಾತರಗ್ನಿಹೋತ್ರಂ ಜುಹೋತಿ. ಯಜೇತ ದರ್ಶಪೂರ್ಣಮಾಸೌ

(ಯಜುರ್ವೇದ, ದ್ವಿತೀಯಖಂಡ, ಐದನೆಯ ಪ್ರಶ್ನೆ)

"ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕು. ಅಮಾವಾಸ್ಯೆಯಲ್ಲಿ ಅಮಾವಾಸ್ಯಾಹೋಮವನ್ನೂ ಹುಣ್ಣಿಮೆಯಲ್ಲಿ ಪೂರ್ಣಮಾಸ ಹೋಮವನ್ನೂ ಮಾಡಬೇಕು."

(2) ಯಾವಜ್ಜೀವಮಗ್ನಿಹೋತ್ರಂ ಜುಹೋತಿ. ಸಾಯಂಪ್ರಾತರಗ್ನಿಹೋತ್ರಂ | (ಶ್ರುತ್ಯಂತರ)

"ಬದುಕಿರುವವರೆಗೂ ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕು."

(3) ಅಗ್ನಿಹೋತ್ರಂ ಚ ಜುಹುಯಾದಾದ್ಯಂತೇ ದ್ಯುನಿಶೋಃ ಸದಾ |
ದರ್ಶೇನ ಚಾರ್ಧಮಾಸಾಂತೇ ಪೌರ್ಣಮಾಸೇನ ಚೈವ ಹಿ ||
ಸಸ್ಯಾಂತೇ ನವಸಸ್ಯೇಷ್ಟ್ಯಾ ತಥರ್ತ್ವಂತೇ ದ್ವಿಜೋಽಧ್ವರೈಃ |
ಪಶುನಾ ತ್ವಯನಸ್ಯಾದೌ ಸಮಾಂತೇ ಸೌಮಿಕೈರ್ಮಖೈಃ || (ಮನುಸ್ಮೃತಿ)

ಒಂದೊಂದು ದಿನದಲ್ಲಿಯೂ ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕು. ಅಮಾವಾಸ್ಯೆಯು ಮುಗಿಯುವಾಗ ಅಮಾವಾಸ್ಯಾಂತಮಾಸವೂ ಹುಣ್ಣಿಮೆಯು ಮುಗಿಯುವಾಗ ಪೂರ್ಣಮಾಸಾಂತಮಾಸವೂ ಮುಗಿಯುತ್ತದೆಂದ ಮೇಲೆ ಪೂರ್ಣಮಾಸಾಂತ ಒಂದು ಪಕ್ಷವು ಮುಗಿಯುವಾಗ ಅಮಾವಾಸ್ಯೆಯು ಬರುತ್ತದೆ. ಆ ದಿನದಲ್ಲಿ ದರ್ಶಹೋಮವನ್ನೂ ಹುಣ್ಣಿಮೆಯ ದಿನದಲ್ಲಿ ಪೂರ್ಣಮಾಸ ಹೋಮವನ್ನೂ ಒಂದೊಂದು ತಿಂಗಳುಗಳಲ್ಲಿಯೂ ಮಾಡಬೇಕು. ಸಸ್ಯಗಳು ಹೊಸದಾಗಿ ಹುಟ್ಟಿದಾಗ ನವಸಸ್ಯೇಷ್ಟಿಯನ್ನು ಒಂದೊಂದು ಸಂದರ್ಭದಲ್ಲಿಯೂ ಮಾಡಬೇಕು. ಎರಡೆರಡು ತಿಂಗಳುಗಳಿಗೆ ಒಂದೊಂದು ಋತುಗಳು ಏರ್ಪಡುತ್ತವೆ. ಈ ಋತುಗಳ ಕೊನೆಯಲ್ಲಿ ನಾನಾವಿಧವಾದ ಯಾಗಗಳನ್ನು ಮಾಡಬೇಕು. ಮೂರು ಮೂರು ಋತುಗಳಿಗೆ ಉತ್ತರಾಯಣ ದಕ್ಷಿಣಾಯನ ಎಂಬ ಎರಡು ಅಯನಗಳು ಏರ್ಪಡುತ್ತವೆ. ಈ ಅಯನಗಳ ಆರಂಭಕಾಲದಲ್ಲಿ ಪಶುಯಾಗಗಳನ್ನು ಮಾಡಬೇಕು. ವರ್ಷಾಂತದಲ್ಲಿ ಸೋಮಯಾಗಗಳನ್ನು ಮಾಡಬೇಕು."

(4) ಕೃತದಾರೋ ನೈವ ತಿಷ್ಠೇತ್ಕ್ಷಣಮಪ್ಯಗ್ನಿನಾ ವಿನಾ |
ತಿಷ್ಠೇತ್ತದಾ ವೇದಬಾಹ್ಯಸ್ತಥಾ ಚ ಪತಿತೋ ಭವೇತ್ || (ಗರ್ಗಸ್ಮೃತಿ)

"ವಿವಾಹವಾದ ಮೇಲೆ ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಅಗ್ನಿಯಿಲ್ಲದ ಇರಕೂಡದು. ಹಾಗೆ ಇದ್ದರೆ ಅವನು ವೇದಬಾಹ್ಯನೆನಿಸುವನು. ಪತಿತನೂ ಆಗುವನು."

(5) ಅಥ ಸಾಯಂಪ್ರಾತರಗ್ನಿಹೋತ್ರಂ ಹೋಷ್ಯಾಮಿ |

"ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡುವೆನು" ಎಂದು ಸಂಕಲ್ಪಿಸಬೇಕು.

ಮೇಲ್ಕಂಡ ಪ್ರಮಾಣವಚನಗಳಲ್ಲಿ ಮೊದಲನೆಯ ಮೂರು ವಾಕ್ಯಗಳಲ್ಲಿ ಪ್ರತಿದಿನದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕೆಂದು ಬರೆದಿಲ್ಲ. ಆದರೂ ಬಾಧಕವಾಕ್ಯಗಳಿಲ್ಲದಿದ್ದಾಗ ಸಾಮಾನ್ಯ ವಚನಗಳೂ ಪ್ರತಿದಿನದಲ್ಲಿಯೂ ಹೋಮವನ್ನು ಮಾಡಬೇಕೆಂಬ ಅರ್ಥವನ್ನು ತಿಳಿಸುತ್ತವೆ. ನಾಲ್ಕನೆಯ ವಾಕ್ಯದಲ್ಲಿ ಸ್ಪಷ್ಟವಾಗಿ ಅಗ್ನಿಯಿಲ್ಲದ ಕ್ಷಣಕಾಲವೂ ಇರಕೂಡದು ಎಂದು ಹೇಳಿರುವುದರಿಂದ ಅಗ್ನಿಹೋತ್ರವನ್ನು ಪ್ರತಿದಿನದಲ್ಲಿಯೂ ಮಾಡಬೇಕೆಂಬ ಅಂಶವು ಸಿದ್ಧವಾಗುತ್ತದೆ. ಐದನೆಯ ವಾಕ್ಯದಲ್ಲಿ ಸಂಕಲ್ಪಕ್ರಮವನ್ನು ತಿಳಿಸುತ್ತದೆ. ಆ ಸಂಕಲ್ಪವೂ ಪ್ರತಿದಿನದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕೆಂಬ ಅಂಶವನ್ನು ಊರ್ಜಿತಪಡಿಸುತ್ತದೆ.

ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡದಿದ್ದರೆ ಪ್ರತಿದಿನದಲ್ಲಿಯೂ ಅಗ್ನಿಹೋತ್ರಹೋಮವನ್ನು ಮಾಡಬೇಕೆಂದು ಹೇಳುತ್ತಿರುವ ಮೇಲ್ಕಂಡವಾಕ್ಯಗಳಿಗೆ ವಿರುದ್ಧವಾಗುತ್ತದೆ. ಆದ್ದರಿಂದ ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡದಿರುವುದು ಹೇಗೆ ಯುಕ್ತವಾಗುತ್ತದೆ? ಇದು ಪೂರ್ವಪಕ್ಷ. ಈ ಪೂರ್ವಪಕ್ಷಕ್ಕೆ ಉತ್ತರವನ್ನು ಕೊಡುತ್ತೇವೆ.

(1) ವೃದ್ಧಶಾತಾತಪರ ವಚನದಲ್ಲಿ ಏಕಾದಶೀದಿನದಲ್ಲಿ ಅಗ್ನಿಹೋತ್ರ ಹೋಮವನ್ನು ಮಾಡಕೂಡದು ಎಂದು ಹೇಳಿಯುತ್ತವೆ.

(2) ಯದ್ಯಾಹಿತಾಗ್ನಿರ್ವಿಪ್ರಃ ಸ್ಯಾನ್ನಾಗ್ನೌ ಹೋಮಂ ಸಮಾಚರೇತ್ |
ವಿಷ್ಣೋರ್ದಿನೇ ಮುನಿಶ್ರೇಷ್ಠ ಯದಿ ತುಷ್ಟಿಮಿಚ್ಛತಿ || (ಗರುಡಪುರಾಣ)

"ಅಗ್ನ್ಯಾಧಾನವನ್ನು ಮಾಡಿಯುವವನೂ ಸಹ ಶ್ರೀಹರಿಯ ಪ್ರೀತಿಯನ್ನು ಬಯಸುವವನು ಹರಿದಿನದಲ್ಲಿ ಅಗ್ನಿಯಲ್ಲಿ ಹೋಮವನ್ನು ಮಾಡಕೂಡದು."

(3) ಹೋಮಂ ತಿಲೋದಕಂ ಪಿಂಡಂ ನ ಕುರ್ಯಾದ್ಧರಿವಾಸರೇ | (ವೃದ್ಧಮನುವಿನ ವಚನ)

"ಹರಿದಿನದಲ್ಲಿ ಹೋಮವನ್ನೂ ಪಿಂಡದಾನವನ್ನೂ ತಿಲತರ್ಪಣವನ್ನೂ ಮಾಡಕೂಡದು. (ಈ ಶ್ಲೋಕದಲ್ಲಿ ಹೋಮವನ್ನು ಮಾಡಕೂಡದು ಎಂದು ಹೇಳಿದೆ. ಆ ಹೋಮವು ಯಾವುದು? ಎಂಬ ಪ್ರಶ್ನೆಯು ಬರುತ್ತದೆ. ಸಂಕೋಚ ಮಾಡುವುದಕ್ಕೆ ಬಾಧಕಪ್ರಮಾಣವಿಲ್ಲ. ಆದ್ದರಿಂದ ಅಗ್ನಿಹೋತ್ರ ಮುಂತಾದ ಸಕಲಹೋಮಗಳನ್ನೂ ಮಾಡಕೂಡದು ಎಂದು ಹೇಳಿದಂತಾಗುತ್ತದೆ.)

(4) ವಿಷ್ಣೋರಹನಿ ಸಂಪ್ರಾಪ್ತೇ ಪಕ್ಷಯೋರುಭಯೋರಪಿ |
ನಾನ್ನಂ ದದ್ಯಾಜ್ಜಲಂ ವಾಪಿ ನ ಹೋತವ್ಯಂ ಸುರಾದಿಷು |
ಹವಿಷೋ ಗರ್ಹಿತತ್ವಾದ್ಧಿ ನ ಗೃಹ್ಣಂತಿ ದಿವೌಕಸಃ || (ವಿಷ್ಣುಧರ್ಮದಲ್ಲಿ ವಜ್ರಪರಶುರಾಮಸಂವಾದ)

"ಶುಕ್ಲಪಕ್ಷದಲ್ಲಿಯೂ ಕೃಷ್ಣಪಕ್ಷದಲ್ಲಿಯೂ ಹರಿದಿನವು ಬಂದಾಗ ಅನ್ನದಾನವನ್ನೂ ಜಲದಾನವನ್ನೂ ದೇವತೆಗಳ ಪ್ರೀತಿಗಾಗಿ ಹೋಮಗಳನ್ನೂ ಮಾಡಕೂಡದು. ಆ ದಿನದಲ್ಲಿ ಹೋಮ ಮಾಡಬೇಕಾದ ಹವಿಸ್ಸುಗಳು ನಿಂದ್ಯವಾಗಿವೆ. ಆದ್ದರಿಂದ ಆ ಹವಿಸ್ಸುಗಳನ್ನು ದೇವತೆಗಳು ಸ್ವೀಕರಿಸಲಾರರು."

(5) ವೈಶ್ವದೇವಂ ಬಲಿಂ ಚೈವ ನಿತ್ಯಹೋಮಂ ತಥೈವ ಚ |
ತರ್ಪಣಂ ಪಿತೃದೇವಾನಾಂ ವರ್ಜಯೇದ್ಧರಿವಾಸರೇ || (ಬೋಧಾಯನರ ವಚನ)

"ಹರಿದಿನದಲ್ಲಿ ವೈಶ್ವದೇವವನ್ನೂ ಬಲಿಹರಣವನ್ನೂ ಅಗ್ನಿಹೋತ್ರ ಮುಂತಾದ ನಿತ್ಯಹೋಮಗಳನ್ನೂ ಪಿತೃತರ್ಪಣವನ್ನೂ ದೇವತಾತರ್ಪಣವನ್ನೂ ಮಾಡಕೂಡದು."

(6) ನ ಹೋತವ್ಯಂ ನ ಹೋತವ್ಯಮೇಕಾದಶ್ಯಾಂ ಕದಾಚನ |
ಜುಹುಯಾದ್ಯದಿ ಮೂಢಾತ್ಮಾ ಹ್ಯಾಧಾನೋರ್ನರಕಂ ವ್ರಜೇತ್ || (ಬ್ರಹ್ಮವೈವರ್ತವಚನ)

"ಏಕಾದಶೀದಿನದಲ್ಲಿ ಯಾವ ಕಾರಣದಿಂದಲೂ ಹೋಮವನ್ನು ಮಾಡಕೂಡದು. ಮೂಢನಾಗಿ ಹೋಮವನ್ನು ಮಾಡಿದರೆ ಸೂರ್ಯನು ಇರುವವರೆಗೂ ನರಕವನ್ನು ಅನುಭವಿಸುವನು."

(7) ಏಕಾದಶ್ಯಾಂ ತು ಮೂಢೋಽಪಿ ಜುಹುಯಾದ್ಯದಿ ಭೂಸುರಃ |
ನಿಷ್ಫಲಸ್ತು ಭವೇದ್ಧೋಮಃ ಸ್ವಯಂ ಚ ನರಕಂ ವ್ರಜೇತ್ || (ಭವಿಷ್ಯತ್ಪುರಾಣ)

"ಬ್ರಾಹ್ಮಣನು ಮೂಢನಾಗಿದ್ದರೂ ಕೂಡ ಏಕಾದಶೀದಿನದಲ್ಲಿ ಹೋಮವನ್ನು ಮಾಡಕೂಡದು. ಹೋಮವನ್ನು ಮಾಡಿದರೆ ಆ ಹೋಮವು ನಿಷ್ಫಲವಾಗುತ್ತದೆ. ಹೋಮವನ್ನು ಮಾಡಿದವನು ನರಕವನ್ನು ಹೊಂದುವನು. ಮೂಢನಾಗಿಯೂ ಇಷ್ಟು ಅನರ್ಥವು ಏರ್ಪಡುತ್ತದೆ. ತಿಳಿದು ಮಾಡುವವನಿಗೆ ಏರ್ಪಡುವುದರಲ್ಲಿ ಸಂದೇಹವೇನಿದೆ?

(8) ತಿಲೋದಕಂ ಪಿಂಡದಾನಂ ಹೋಮಂ ಶ್ರಾದ್ಧಂ ಚ ತರ್ಪಣಂ |
ಜಲದಾನಂ ಹ್ಯನ್ನದಾನಂ ವರ್ಜಯೇದ್ಧರಿವಾಸರೇ ||
ದೇವಾನಾಂ ಚ ಪಿತೃಣಾಂ ಚ ಋಷೀಣಾಂ ಚ ವಿಶೇಷತಃ |
ಅನ್ನಂ ನ ದದ್ಯಾತ್ಪ್ರಷ್ಟಾ ಹೇ ಭಗವಂತಂ ಹರಿಂ ವಿನಾ || (ಪಾದ್ಮಪುರಾಣ)

"ಸಕಲಗುಣಪರಿಪೂರ್ಣನಾದ ಹರಿಯನ್ನು ಬಿಟ್ಟು ಉಳಿದ ಎಲ್ಲಾ ದೇವತೆಗಳಿಗೂ ಋಷಿಗಳಿಗೂ ಪಿತೃಗಳಿಗೂ ಹರಿವಾಸರದಲ್ಲಿ ತಿಲತರ್ಪಣವನ್ನೂ ಪಿಂಡದಾನವನ್ನೂ ಹೋಮವನ್ನೂ ಶ್ರಾದ್ಧವನ್ನೂ ಸಾಧಾರಣತರ್ಪಣವನ್ನೂ ಜಲದಾನವನ್ನೂ ಅನ್ನದಾನವನ್ನೂ ಮಾಡಬಾರದು."

(9) ಪುರೋಡಾಶೋಽಪಿ ವಾಮೋರು ಸಂಪ್ರಾಪ್ತೇ ಹರಿವಾಸರೇ |
ಅಭಕ್ಷ್ಯೇಣ ಸಮಃ ಪ್ರೋಕ್ತಃ ಪುನಶ್ಚಾನ್ನಸತ್ಕ್ರಿಯಾ || (ಪಾದ್ಮಪುರಾಣ ಉತ್ತರಕಾಂಡ ಉಮಾಮಹೇಶ್ವರ ಸಂವಾದ)

"ಏಕಾದಶೀದಿನದಲ್ಲಿ ಪರಮಪರಿಶುದ್ಧವಾದ ವೇದೋಕ್ತವಾದ ಪುರೋಡಾಶವೂ ಸಹ ಅಭಕ್ಷ್ಯವಾದ ವಸ್ತುಗಳಿಗೆ ಸಮವೆನಿಸುತ್ತದೆ. ಹೀಗಿರುವಾಗ ಅಶುದ್ಧವಾದ ಅನ್ನದಿಂದ ಮಾಡುವ ಅನ್ನಸತ್ಕಾರವು ಅಭಕ್ಷ್ಯವಸ್ತುಗಳಿಗೆ ಸಮವೆಂದು ಹೇಳಬೇಕಾದ್ದೇನಿದೆ?"

(10) ಪುರೋಡಾಶೋಽಪಿ ವಾಮೋರು ಸಂಪ್ರಾಪ್ತೇ ಹರಿವಾಸರೇ |
ಅಭಕ್ಷ್ಯೇಣ ಸಮಃ ಪ್ರೋಕ್ತಃ ಕಿಂ ಪುನಶ್ಚಾನ್ನಸತ್ಕ್ರಿಯಾ || (ನಾರದೀಯಪುರಾಣ)

ಮೇಲ್ಕಂಡ ಪಾದ್ಮಪುರಾಣವಚನದಲ್ಲಿಯೂ, ನಾರದೀಯಪುರಾಣವಚನದಲ್ಲಿಯೂ ಏಕಾದಶೀ ದಿನದಲ್ಲಿ ವೇದೋಕ್ತಪುರೋಡಾಶವು ನಿಂದ್ಯವೆಂದು ಹೇಳಿದೆ. ಆದ್ದರಿಂದ ವೈದಿಕವಾದ ಎಲ್ಲಾ ಆಹುತಿಗಳೂ ನಿಂದ್ಯವೆಂದು ಹೇಳಿದಂತಾಯಿತು.

ಮೇಲ್ಕಂಡ ಪ್ರಮಾಣಗಳೂ ಇತರ ಅಸಂಖ್ಯ ಪ್ರಮಾಣಗಳೂ ಏಕಾದಶೀದಿನದಲ್ಲಿ ಅಗ್ನಿಹೋತ್ರಾದಿಕಾರ್ಯಗಳನ್ನು ಮಾಡಕೂಡದು ಎಂದು ತಿಳಿಸುತ್ತವೆ. ಆದ್ದರಿಂದ ಏಕಾದಶೀದಿನದಲ್ಲಿಯೂ ಅಗ್ನಿಹೋತ್ರಾದಿ ಕಾರ್ಯಗಳನ್ನು ಮಾಡಬೇಕೆಂದು ಹೇಳುವುದಕ್ಕೆ ಸಾಧಕವಾಗಿ ಹಿಂದೆ ಉದಾಹರಿಸಲ್ಪಟ್ಟ ಸಾಮಾನ್ಯವಾಕ್ಯಗಳಿಗೆ ಏಕಾದಶೀದಿನವನ್ನು ಬಿಟ್ಟು ಉಳಿದ ದಿನಗಳಲ್ಲಿ ಅಗ್ನಿಹೋತ್ರಾದಿಕಾರ್ಯಗಳನ್ನು ಮಾಡಬೇಕೆಂದು ಅಭಿಪ್ರಾಯವನ್ನು ಹೇಳಬೇಕು.

ಇಲ್ಲಿ ಒಂದು ಪ್ರಶ್ನೆಯು ಬರುತ್ತದೆ. ಅದನ್ನು ಈಗ ವಿವರಿಸುತ್ತೇವೆ.

ನಾಗ್ನಿಹೋತ್ರಂ ನ ಚ ಶ್ರಾದ್ಧಂ ನ ಚೌಪಾಸನಮೇವ ಚ |
ಏಕಾದಶ್ಯಾಂ ಪ್ರಕರ್ತವ್ಯಂ ದ್ವಾದಶ್ಯಾಮೇವ ಕಾರಯೇತ್ ||
ಕಾಲಾತಿಕ್ರಮದೋಷಸ್ತು ನಾಸ್ತ್ಯತ್ರ ಶಿಖಿವಾಹನ | (ಸ್ಕಾಂದಪುರಾಣ ಮಹೇಶ್ವರಷಣ್ಮುಖಸಂವಾದ)

"ಏಕಾದಶೀದಿನದಲ್ಲಿ ಮಾಡಬೇಕಾದ ಅಗ್ನಿಹೋತ್ರವನ್ನೂ ಶ್ರಾದ್ಧವನ್ನೂ ಔಪಾಸನಹೋಮವನ್ನೂ ದ್ವಾದಶೀ ದಿನದಲ್ಲಿಯೇ ಮಾಡಬೇಕು. ಏಕಾದಶೀದಿನದಲ್ಲಿ ಮಾಡಕೂಡದು. ಏಕಾದಶೀದಿನದಲ್ಲಿ ಮಾಡಬೇಕಾದ ಹೋಮವನ್ನು ಏಕಾದಶೀದಿನದಲ್ಲಿ ಮಾಡದೆ ದ್ವಾದಶೀದಿನದಲ್ಲಿ ಮಾಡಿರುವುದರಿಂದ ಸಕಾಲದಲ್ಲಿ ಹೋಮವನ್ನು ಮಾಡಿದಂತಾಗುವುದಿಲ್ಲ. ಕಾಲವನ್ನು ಮೀರಿ ಮಾಡಿದಂತಾಗುವುದು. ಆದರೂ ಕಾಲಾತಿಕ್ರಮದೋಷವು ಏರ್ಪಡುವುದಿಲ್ಲ."

ಈ ಪ್ರಮಾಣವಾಕ್ಯದಲ್ಲಿ ಹೇಳಿದಂತೆ ಏಕಾದಶಿಯಲ್ಲಿ ಮಾಡಬೇಕಾದ ಅಗ್ನಿಹೋತ್ರಹೋಮವನ್ನೂ ದ್ವಾದಶೀ ದಿನದಲ್ಲಿ ಮಾಡಬೇಕಾದ ಅಗ್ನಿಹೋತ್ರಹೋಮವನ್ನೂ ಹೀಗೆ ಎರಡು ಹೋಮಗಳನ್ನೂ ದ್ವಾದಶೀದಿನದಲ್ಲಿ ಮಾಡಬೇಕಾಗುತ್ತದೆ. ಅದು ಹೇಗೆ ಯುಕ್ತ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಏಕಾದಶೀದಿನದಲ್ಲಿ ಮಾಡಬೇಕಾದ ಕರ್ಮಗಳು ಎರಡು ವಿಧವಾಗಿವೆ. (1) ನಿತ್ಯ ಕರ್ಮಗಳು. ಅಗ್ನಿಹೋತ್ರ, ತಿಲತರ್ಪಣ, ವೈಶ್ವದೇವ, ಬಲಿಹರಣ, ಬ್ರಹ್ಮಯಜ್ಞ, ಮನ್ವಾದಿಶ್ರಾದ್ಧ, ಸಂಕ್ರಮಣಾದಿಶ್ರಾದ್ಧ ಮುಂತಾದವುಗಳು ಈ ದರ್ಜೆಗೆ ಸೇರಿದವುಗಳು. ಈ ನಿತ್ಯಕರ್ಮಗಳು ಏಕಾದಶೀದಿನದಲ್ಲಿ ಬಂದರೆ ಅವುಗಳನ್ನು ಏಕಾದಶೀದಿನದಲ್ಲಾಗಲೀ ದ್ವಾದಶೀದಿನದಲ್ಲಾಗಲೀ ಮಾಡಕೂಡದು. ಅವುಗಳಿಗೆ ಲೋಪವೇ ಏರ್ಪಡುತ್ತದೆ. ಈ ಲೋಪದಿಂದ ದೋಷವು ಏರ್ಪಡುವುದಿಲ್ಲವೆಂದು "ನ ತತ್ರ ವಿಧಿಲೋಪಃ ಸ್ಯಾತ್ " ಎಂಬ ಹಿಂದೆ ಉದಾಹರಿಸಿರುವ ವೃದ್ಧಶಾತಾತಪರ ವಚನವು ತಿಳಿಸುತ್ತದೆ.

(2) ಕಾಲಶ್ರಾದ್ಧ. ಈ ಶ್ರಾದ್ಧವು ಎರಡನೆಯ ದರ್ಜೆಯಲ್ಲಿ ಸೇರಿರುತ್ತದೆ. ತಂದೆ ಮುಂತಾದವರು ಸತ್ತದಿನವನ್ನು ನಿಮಿತ್ತವಾಗಿಟ್ಟುಕೊಂಡು ಮಾಡುವ ಈ ಶ್ರಾದ್ಧವು ನೈಮಿತ್ತಿಕಶ್ರಾದ್ಧ ಅಥವಾ ಕಾಲಶ್ರಾದ್ಧವೆನಿಸುತ್ತದೆ. ಈ ಶ್ರಾದ್ಧವನ್ನು ಏಕಾದಶೀದಿನದಲ್ಲಿ ಮಾಡದೆ ದ್ವಾದಶೀದಿನದಲ್ಲಿ ಮಾಡುವುದರಿಂದ ಈ ನೈಮಿತ್ತಿಕಶ್ರಾದ್ಧವು ಕಾಲಾತಿಕ್ರಮದೋಷದಿಂದ ಯುಕ್ತವಾಗುತ್ತದೆ. ಆದರೂ ಕಾಲಾತಿಕ್ರಮದೋಷವು ಏಕಾದಶೀದಿನದಲ್ಲಿ ಪ್ರಾಪ್ತವಾಗಿರುವ ನೈಮಿತ್ತಿಕಶ್ರಾದ್ಧವನ್ನು ದ್ವಾದಶೀದಿನದಲ್ಲಿ ಮಾಡುವವರಿಗೆ ಏರ್ಪಡುವುದಿಲ್ಲ.

ಮೇಲ್ಕಂಡ "ನಾಗ್ನಿಹೋತ್ರಂ" ಎಂಬ ಸ್ಕಾಂದಪುರಾಣವಾಕ್ಯವು ಏಕಾದಶಿಯಲ್ಲಿ ಮಾಡಬೇಕಾದ ಅಗ್ನಿಹೋತ್ರ ಮತ್ತು ನೈಮಿತ್ತಿಕ ಮುಂತಾದ ಸಕಲಶ್ರಾದ್ಧಗಳು ದ್ವಾದಶಿಯಲ್ಲಿಯೇ ಮಾಡಲ್ಪಡಬೇಕೆಂದು ತಿಳಿಸುತ್ತದೆ. ಹೀಗಿರುವಾಗ ಏಕಾದಶಿಯಲ್ಲಿ ಮಾಡಬೇಕಾದ ನೈಮಿತ್ತಿಕಶ್ರಾದ್ಧವನ್ನು ಮಾತ್ರ ದ್ವಾದಶಿಯಲ್ಲಿ ಮಾಡಬೇಕೆಂದೂ ಅಗ್ನಿಹೋತ್ರಹೋಮವೂ ನಿತ್ಯಶ್ರಾದ್ಧಾದಿಗಳೂ ಲುಪ್ತವಾಗುತ್ತವೆಯೆಂದೂ ಹೇಳುವುದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಅಗ್ನಿಹೋತ್ರಹೋಮವನ್ನೂ ನಿತ್ಯಶ್ರಾದ್ಧ ಮುಂತಾದವುಗಳನ್ನೂ ಏಕಾದಶೀದಿನದಲ್ಲಿ ಮಾಡದಿರುವುದರಿಂದ ವಿಧಿ ಲೋಪವು ಏರ್ಪಡುವುದಿಲ್ಲವೆಂದು ಅಸಂಖ್ಯಪ್ರಮಾಣಗಳು ತಿಳಿಸುತ್ತವೆ. ಏಕಾದಶಿಯಲ್ಲಿ ಮಾಡಬೇಕಾದ ಅಗ್ನಿಹೋತ್ರವನ್ನು ದ್ವಾದಶೀದಿನದಲ್ಲಿ ಮಾಡಬೇಕೆಂದು ಒಂದೇ ಪ್ರಮಾಣವು ತಿಳಿಸುತ್ತಿದೆ. ಇಂತಹ ಸಂದರ್ಭಗಳಲ್ಲಿ ಬಹುವಾಕ್ಯಗಳಿಗೆ ಗೌರವವನ್ನು ಕೊಡಬೇಕು. ಆ ಬಹುವಾಕ್ಯಗಳಲ್ಲಿ ಹೇಳಿರುವ ವಿಷಯಗಳನ್ನು ಬಿಟ್ಟು ಉಳಿದ ವಿಷಯಗಳನ್ನೇ ಒಂದು ವಾಕ್ಯವು ತಿಳಿಸುವುದಾಗಿ ಅಂಗೀಕರಿಸಬೇಕು.

(6) ನ ಹೋತವ್ಯಂ ನ ಹೋತವ್ಯಮೇಕಾದಶ್ಯಾಂ ಕದಾಚನ |
ಜುಹುಯಾದ್ಯದಿ ಮೂಢಾತ್ಮಾ ಹ್ಯಾಭಾನೋರ್ನರಕಂ ವ್ರಜೇತ್ || (ಬ್ರಹ್ಮವೈವರ್ತವಚನ)

"ಏಕಾದಶೀದಿನದಲ್ಲಿ ಯಾವ ಕಾರಣದಿಂದಲೂ ಹೋಮವನ್ನು ಮಾಡಕೂಡದು. ಮೂಢನಾಗಿ ಹೋಮವನ್ನು ಮಾಡಿದರೆ ಸೂರ್ಯನು ಇರುವವರೆಗೂ ನರಕವನ್ನು ಅನುಭವಿಸುವನು."

(7) ಏಕಾದಶ್ಯಾಂ ತು ಮೂಢೋಽಪಿ ಜುಹುಯಾದ್ಯದಿ ಭೂಸುರಃ |
ನಿಷ್ಫಲಸ್ತು ಭವೇದ್ಧೋಮಃ ಸ್ವಯಂ ಚ ನರಕಂ ವ್ರಜೇತ್ || (ಭವಿಷ್ಯತ್ಪುರಾಣ)

"ಬ್ರಾಹ್ಮಣನು ಮೂಢನಾಗಿದ್ದರೂ ಕೂಡ ಏಕಾದಶೀದಿನದಲ್ಲಿ ಹೋಮವನ್ನು ಮಾಡಕೂಡದು. ಹೋಮವನ್ನು ಮಾಡಿದರೆ ಆ ಹೋಮವು ನಿಷ್ಫಲವಾಗುತ್ತದೆ. ಹೋಮವನ್ನು ಮಾಡಿದವನು ನರಕವನ್ನು ಹೊಂದುವನು. ಮೂಢನಿಗೂ ಇಷ್ಟು ಅನರ್ಥವು ಏರ್ಪಡುತ್ತದೆ. ತಿಳಿದು ಮಾಡುವವನಿಗೆ ಏರ್ಪಡುವುದರಲ್ಲಿ ಸಂದೇಹವೇನಿದೆ?

(8) ತಿಲೋದಕಂ ಪಿಂಡದಾನಂ ಹೋಮಂ ಶ್ರಾದ್ಧಂ ಚ ತರ್ಪಣಂ |
ಜಲದಾನಂ ವಾಽನ್ನದಾನಂ ವರ್ಜಯೇದ್ಧರಿವಾಸರೇ ||
ದೇವಾನಾಂ ಚ ಪಿತೄಣಾಂ ಚ ಋಷೀಣಾಂ ಚ ವಿಶೇಷತಃ |
ಅನ್ನಂ ನ ದದ್ಯಾತ್ಪುಷ್ಪಾ ಹೇ ಭಗವಂತಂ ಹರಿಂ ವಿನಾ || (ಪಾದ್ಮಪುರಾಣ)

"ಸಕಲಗುಣಪರಿಪೂರ್ಣನಾದ ಹರಿಯನ್ನು ಬಿಟ್ಟು ಉಳಿದ ಎಲ್ಲಾ ದೇವತೆಗಳಿಗೂ ಋಷಿಗಳಿಗೂ ಪಿತೃಗಳಿಗೂ ಹರಿವಾಸರದಲ್ಲಿ ತಿಲತರ್ಪಣವನ್ನೂ ಪಿಂಡದಾನವನ್ನೂ ಹೋಮವನ್ನೂ ಶ್ರಾದ್ಧವನ್ನೂ ಸಾಧಾರಣತರ್ಪಣವನ್ನೂ ಜಲದಾನವನ್ನೂ ಅನ್ನದಾನವನ್ನೂ ಮಾಡಬಾರದು."

(9) ಪುರೋಡಾಶೋಽಪಿ ವಾಮೋರು ಸಂಪ್ರಾಪ್ತೇ ಹರಿವಾಸರೇ |
ಅಭಕ್ಷ್ಯೇಣ ಸಮಃ ಪ್ರೋಕ್ತಃ ಪುನಶ್ಚಾನ್ನಸತ್ಕ್ರಿಯಾ || (ಪಾದ್ಮಪುರಾಣ ಉತ್ತರಕಾಂಡ ಉಮಾಮಹೇಶ್ವರ ಸಂವಾದ)

"ಏಕಾದಶೀದಿನದಲ್ಲಿ ಪರಮಪರಿಶುದ್ಧವಾದ ವೇದೋಕ್ತವಾದ ಪುರೋಡಾಶವೂ ಸಹ ಅಭಕ್ಷ್ಯವಾದ ವಸ್ತುಗಳಿಗೆ ಸಮವೆನಿಸುತ್ತದೆ. ಹೀಗಿರುವಾಗ ಅಶುದ್ಧವಾದ ಅನ್ನದಿಂದ ಮಾಡುವ ಅನ್ನಸತ್ಕಾರವು ಅಭಕ್ಷ್ಯವಸ್ತುಗಳಿಗೆ ಸಮವೆಂದು ಹೇಳಬೇಕಾದ್ದೇನಿದೆ?"

(10) ಪುರೋಡಾಶೋಽಪಿ ವಾಮೋರು ಸಂಪ್ರಾಪ್ತೇ ಹರಿವಾಸರೇ |
ಅಭಕ್ಷ್ಯೇಣ ಸಮಃ ಪ್ರೋಕ್ತಃ ಕಿಂ ಪುನಶ್ಚಾನ್ನಸತ್ಕ್ರಿಯಾ || (ನಾರದೀಯಪುರಾಣ)

ಮೇಲ್ಕಂಡ ಪಾದ್ಮಪುರಾಣವಚನದಲ್ಲಿಯೂ, ನಾರದೀಯಪುರಾಣವಚನದಲ್ಲಿಯೂ ಏಕಾದಶೀ ದಿನದಲ್ಲಿ ವೇದೋಕ್ತಪುರೋಡಾಶವು ನಿಂದ್ಯವೆಂದು ಹೇಳಿದೆ. ಆದ್ದರಿಂದ ವೈದಿಕವಾದ ಎಲ್ಲಾ ಆಹುತಿಗಳೂ ನಿಂದ್ಯವೆಂದು ಹೇಳಿದಂತಾಯಿತು.

ಮೇಲ್ಕಂಡ ಪ್ರಮಾಣಗಳೂ ಇತರ ಅಸಂಖ್ಯ ಪ್ರಮಾಣಗಳೂ ಏಕಾದಶೀದಿನದಲ್ಲಿ ಅಗ್ನಿಹೋತ್ರಾದಿಕಾರ್ಯಗಳನ್ನು ಮಾಡಕೂಡದು ಎಂದು ತಿಳಿಸುತ್ತವೆ. ಆದ್ದರಿಂದ ಏಕಾದಶೀದಿನದಲ್ಲಿಯೂ ಅಗ್ನಿಹೋತ್ರಾದಿ ಕಾರ್ಯಗಳನ್ನು ಮಾಡಬೇಕೆಂದು ಹೇಳುವುದಕ್ಕೆ ಸಾಧಕವಾಗಿ ಹಿಂದೆ ಉದಾಹರಿಸಲ್ಪಟ್ಟ ಸಾಮಾನ್ಯವಾಕ್ಯಗಳಿಗೆ ಏಕಾದಶೀದಿನವನ್ನು ಬಿಟ್ಟು ಉಳಿದ ದಿನಗಳಲ್ಲಿ ಅಗ್ನಿಹೋತ್ರಾದಿಕಾರ್ಯಗಳನ್ನು ಮಾಡಬೇಕೆಂದು ಅಭಿಪ್ರಾಯವನ್ನು ಹೇಳಬೇಕು.

ಇಲ್ಲಿ ಒಂದು ಪ್ರಶ್ನೆಯು ಬರುತ್ತದೆ. ಅದನ್ನು ಈಗ ವಿವರಿಸುತ್ತೇವೆ.

ನಾಗ್ನಿಹೋತ್ರಂ ನ ಚ ಶ್ರಾದ್ಧಂ ನ ಚೌಪಾಸನಮೇವ ಚ |
ಏಕಾದಶ್ಯಾಂ ಪ್ರಕರ್ತವ್ಯಂ ದ್ವಾದಶ್ಯಾಮೇವ ಕಾರಯೇತ್ ||
ಕಾಲಾತಿಕ್ರಮದೋಷಸ್ತು ನಾಸ್ತ್ಯತ್ರ ಶಿಖಿವಾಹನ | (ಸ್ಕಾಂದಪುರಾಣ ಮಹೇಶ್ವರಷಣ್ಮುಖಸಂವಾದ)

"ಏಕಾದಶೀದಿನದಲ್ಲಿ ಮಾಡಬೇಕಾದ ಅಗ್ನಿಹೋತ್ರವನ್ನೂ ಶ್ರಾದ್ಧವನ್ನೂ ಔಪಾಸನಹೋಮವನ್ನೂ ದ್ವಾದಶೀ ದಿನದಲ್ಲಿಯೇ ಮಾಡಬೇಕು. ಏಕಾದಶೀದಿನದಲ್ಲಿ ಮಾಡಕೂಡದು. ಏಕಾದಶೀದಿನದಲ್ಲಿ ಮಾಡಬೇಕಾದ ಹೋಮವನ್ನು ಏಕಾದಶೀದಿನದಲ್ಲಿ ಮಾಡದೆ ದ್ವಾದಶೀದಿನದಲ್ಲಿ ಮಾಡಿರುವುದರಿಂದ ಸಕಾಲದಲ್ಲಿ ಹೋಮವನ್ನು ಮಾಡಿದಂತಾಗುವುದಿಲ್ಲ. ಕಾಲವನ್ನು ಮೀರಿ ಮಾಡಿದಂತಾಗುವುದು. ಆದರೂ ಕಾಲಾತಿಕ್ರಮದೋಷವು ಏರ್ಪಡುವುದಿಲ್ಲ."

ಈ ಪ್ರಮಾಣವಾಕ್ಯದಲ್ಲಿ ಹೇಳಿದಂತೆ ಏಕಾದಶಿಯಲ್ಲಿ ಮಾಡಬೇಕಾದ ಅಗ್ನಿಹೋತ್ರಹೋಮವನ್ನೂ ದ್ವಾದಶೀ ದಿನದಲ್ಲಿ ಮಾಡಬೇಕಾದ ಅಗ್ನಿಹೋತ್ರಹೋಮವನ್ನೂ ಹೀಗೆ ಎರಡು ಹೋಮಗಳನ್ನೂ ದ್ವಾದಶೀದಿನದಲ್ಲಿ ಮಾಡಬೇಕಾಗುತ್ತದೆ. ಅದು ಹೇಗೆ ಯುಕ್ತ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಏಕಾದಶೀದಿನದಲ್ಲಿ ಮಾಡಬೇಕಾದ ಕರ್ಮಗಳು ಎರಡು ವಿಧವಾಗಿವೆ. (1) ನಿತ್ಯ ಕರ್ಮಗಳು. ಅಗ್ನಿಹೋತ್ರ, ತಿಲತರ್ಪಣ, ವೈಶ್ವದೇವ, ಬಲಿಹರಣ, ಬ್ರಹ್ಮಯಜ್ಞ, ಮನ್ವಾದಿಶ್ರಾದ್ಧ, ಸಂಕ್ರಮಣಾದಿಶ್ರಾದ್ಧ ಮುಂತಾದವುಗಳು ಈ ದರ್ಜೆಗೆ ಸೇರಿದವುಗಳು. ಈ ನಿತ್ಯಕರ್ಮಗಳು ಏಕಾದಶೀದಿನದಲ್ಲಿ ಬಂದರೆ ಅವುಗಳನ್ನು ಏಕಾದಶೀದಿನದಲ್ಲಾಗಲೀ ದ್ವಾದಶೀದಿನದಲ್ಲಾಗಲೀ ಮಾಡಕೂಡದು. ಅವುಗಳಿಗೆ ಲೋಪವೇ ಏರ್ಪಡುತ್ತದೆ. ಈ ಲೋಪದಿಂದ ದೋಷವು ಏರ್ಪಡುವುದಿಲ್ಲವೆಂದು "ನ ತತ್ರ ವಿಧಿಲೋಪಃ ಸ್ಯಾತ್ " ಎಂಬ ಹಿಂದೆ ಉದಾಹರಿಸಿರುವ ವೃದ್ಧಶಾತಾತಪರ ವಚನವು ತಿಳಿಸುತ್ತದೆ.

(2) ಕಾಲಶ್ರಾದ್ಧ. ಈ ಶ್ರಾದ್ಧವು ಎರಡನೆಯ ದರ್ಜೆಯಲ್ಲಿ ಸೇರಿರುತ್ತದೆ. ತಂದೆ ಮುಂತಾದವರು ಸತ್ತದಿನವನ್ನು ನಿಮಿತ್ತವಾಗಿಟ್ಟುಕೊಂಡು ಮಾಡುವ ಈ ಶ್ರಾದ್ಧವು ನೈಮಿತ್ತಿಕಶ್ರಾದ್ಧ ಅಥವಾ ಕಾಲಶ್ರಾದ್ಧವೆನಿಸುತ್ತದೆ. ಈ ಶ್ರಾದ್ಧವನ್ನು ಏಕಾದಶೀದಿನದಲ್ಲಿ ಮಾಡದೆ ದ್ವಾದಶೀದಿನದಲ್ಲಿ ಮಾಡುವುದರಿಂದ ಈ ನೈಮಿತ್ತಿಕಶ್ರಾದ್ಧವು ಕಾಲಾತಿಕ್ರಮದೋಷದಿಂದ ಯುಕ್ತವಾಗುತ್ತದೆ. ಆದರೂ ಕಾಲಾತಿಕ್ರಮದೋಷವು ಏಕಾದಶೀದಿನದಲ್ಲಿ ಪ್ರಾಪ್ತವಾಗಿರುವ ನೈಮಿತ್ತಿಕಶ್ರಾದ್ಧವನ್ನು ದ್ವಾದಶೀದಿನದಲ್ಲಿ ಮಾಡುವವರಿಗೆ ಏರ್ಪಡುವುದಿಲ್ಲ.

ಮೇಲ್ಕಂಡ "ನಾಗ್ನಿಹೋತ್ರಂ" ಎಂಬ ಸ್ಕಾಂದಪುರಾಣವಾಕ್ಯವು ಏಕಾದಶಿಯಲ್ಲಿ ಮಾಡಬೇಕಾದ ಅಗ್ನಿಹೋತ್ರ ಮತ್ತು ನೈಮಿತ್ತಿಕ ಮುಂತಾದ ಸಕಲಶ್ರಾದ್ಧಗಳು ದ್ವಾದಶಿಯಲ್ಲಿಯೇ ಮಾಡಲ್ಪಡಬೇಕೆಂದು ತಿಳಿಸುತ್ತದೆ. ಹೀಗಿರುವಾಗ ಏಕಾದಶಿಯಲ್ಲಿ ಮಾಡಬೇಕಾದ ನೈಮಿತ್ತಿಕಶ್ರಾದ್ಧವನ್ನು ಮಾತ್ರ ದ್ವಾದಶಿಯಲ್ಲಿ ಮಾಡಬೇಕೆಂದೂ ಅಗ್ನಿಹೋತ್ರಹೋಮವೂ ನಿತ್ಯಶ್ರಾದ್ಧಾದಿಗಳೂ ಲುಪ್ತವಾಗುತ್ತವೆಯೆಂದೂ ಹೇಳುವುದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಅಗ್ನಿಹೋತ್ರಹೋಮವನ್ನೂ ನಿತ್ಯಶ್ರಾದ್ಧ ಮುಂತಾದವುಗಳನ್ನೂ ಏಕಾದಶೀದಿನದಲ್ಲಿ ಮಾಡದಿರುವುದರಿಂದ ವಿಧಿ ಲೋಪವು ಏರ್ಪಡುವುದಿಲ್ಲವೆಂದು ಅಸಂಖ್ಯಪ್ರಮಾಣಗಳು ತಿಳಿಸುತ್ತವೆ. ಏಕಾದಶಿಯಲ್ಲಿ ಮಾಡಬೇಕಾದ ಅಗ್ನಿಹೋತ್ರವನ್ನು ದ್ವಾದಶೀದಿನದಲ್ಲಿ ಮಾಡಬೇಕೆಂದು ಒಂದೇ ಪ್ರಮಾಣವು ತಿಳಿಸುತ್ತಿದೆ. ಇಂತಹ ಸಂದರ್ಭಗಳಲ್ಲಿ ಬಹುವಾಕ್ಯಗಳಿಗೆ ಗೌರವವನ್ನು ಕೊಡಬೇಕು. ಆ ಬಹುವಾಕ್ಯಗಳಲ್ಲಿ ಹೇಳಿರುವ ವಿಷಯಗಳನ್ನು ಬಿಟ್ಟು ಉಳಿದ ವಿಷಯಗಳನ್ನೇ ಒಂದು ವಾಕ್ಯವು ತಿಳಿಸುವುದಾಗಿ ಅಂಗೀಕರಿಸಬೇಕು.

ಬಹೂನಾಂ ಸಹ ನಿರ್ದೇಶೇ ಏಕಯಾಽಭಿಧಯೈವ ತು |
ತಯೈವಾಽಭಿಧಯಾ ತೇಷಾಂ ಪರಾಮೃಶ್ಯೈಕಮುಚ್ಯತೇ ||

"ಅಸಂಖ್ಯಪ್ರಮಾಣಗಳಲ್ಲಿ ಹೇಳಿರುವ ವಿಷಯಗಳಿಗೆ ವಿರುದ್ಧವಾದ ಅನೇಕ ವಿಷಯಗಳನ್ನೂ ಅವಿರುದ್ಧವಾದ ಒಂದೇ ವಿಷಯವನ್ನೂ ಒಂದು ವಾಕ್ಯದಲ್ಲಿ ಹೇಳಿದ್ದರೆ ಆ ಒಂದೇ ವಿಷಯವನ್ನು ಮಾತ್ರ ಆ ಪ್ರಮಾಣದಿಂದ ತಿಳಿಯಬೇಕು. ಅಸಂಖ್ಯಪ್ರಮಾಣಗಳಿಗೆ ವಿರುದ್ಧವಾದ ಅನೇಕ ವಿಷಯಗಳನ್ನು ಬಿಡಬೇಕು."

ಈ ಪ್ರಮಾಣವಚನದಲ್ಲಿ ಹೇಳಿದಂತೆ ಮೇಲ್ಕಂಡ ಸ್ಕಾಂದಪುರಾಣವಚನಕ್ಕೆ ಅರ್ಥವನ್ನು ಹೇಳಿದರೆ ಯಾವ ತೊಂದರೆಯೂ ಇಲ್ಲ.

ಆಶೌಚದಲ್ಲಿ ಅಗ್ನಿಹೋತ್ರವನ್ನು ಮಾಡುತ್ತಿರುವಂತೆ ಏಕಾದಶೀದಿನದಲ್ಲಿ ಹೋಮವನ್ನು ಏಕೆ ಮಾಡಬಾರದು?

ಸೂತಕೇ ಮೃತಕೇ ಚೈವ ಕರ್ಮ ವೈತಾನಿಕಂ ಚ ಯತ್ |
ಸ್ವಯಮೇವ ಹಿ ಕರ್ತವ್ಯಂ ಸ್ಮಾರ್ತಮನ್ಯೇನ ಕಾರಯೇತ್ ||
ಅಗ್ನಿಹೋತ್ರಾದಿಹೋಮಾರ್ಥಂ ಶುದ್ಧಿಸ್ತಾತ್ಕಾಲಿಕೀ ಸ್ಮೃತಾ |
ಪಂಚಯಜ್ಞಾನ್ನ ಕುರ್ವೀತ ಅಶುದ್ಧಃ ಪುನರೇವ ಸಃ || (ಮರೀಚಿವಚನ)

"ಜಾತಾಶೌಚವು ಸೂತಕವೆನಿಸುತ್ತದೆ. ಮೃತಾಶೌಚವು ಮೃತಕವೆನಿಸುತ್ತದೆ. ಈ ಎರಡು ಆಶೌಚಕಾಲಗಳಲ್ಲಿ ಪ್ರಾಪ್ತವಾದ ವೇದೋಕ್ತವಾದ ಅಗ್ನಿಹೋತ್ರಕರ್ಮಗಳನ್ನು ತಾನೇ ಮಾಡಬೇಕು. ಆ ಕರ್ಮಗಳನ್ನು ಆರಂಭಿಸಿ ಮುಗಿಸುವವರೆಗೆ ಅಗ್ನಿಹೋತ್ರವನ್ನು ಮಾಡುವ ಅಧಿಕಾರಿಯು ಶುದ್ಧನಾಗುವನು. ಆ ಅಗ್ನಿಹೋತ್ರವನ್ನು ಮುಗಿಸಿದ ಕೂಡಲೇ ಪುನಃ ಅಶುದ್ಧನಾಗುವನು. ಆದ್ದರಿಂದ ಬ್ರಹ್ಮಯಜ್ಞ ಮುಂತಾದ ಸ್ಮೃತ್ಯುಕ್ತಕರ್ಮಗಳನ್ನು ಮಾಡಬಾರದು. ಅಗ್ನಿಹೋತ್ರವನ್ನು ತಾನೇ ಮಾಡಬೇಕು. ಸ್ಮೃತ್ಯುಕ್ತವಾದ ಪಂಚಯಜ್ಞಗಳನ್ನೂ ಇತರಕರ್ಮಗಳನ್ನೂ ತಾನು ಮಾಡದೆ ಬೇರೆ ಜನರಿಂದ ಮಾಡಿಸಬೇಕು."

ಅಗ್ನಿಹೋತ್ರವನ್ನು ಸೂತಕದಲ್ಲಿಯೂ ಮೃತಕದಲ್ಲಿಯೂ ಮಾಡಬೇಕೆಂದು ಈ ವಾಕ್ಯವು ತಿಳಿಸುತ್ತದೆ. ಅದರಂತೆ ಏಕಾದಶೀದಿನದಲ್ಲಿಯೂ ಏಕೆ ಮಾಡಬಾರದೆಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಸೂತಕದಲ್ಲಿಯೂ ಮೃತಕದಲ್ಲಿಯೂ ಮಾಡುತ್ತಿರುವ ಎಲ್ಲಾ ಕಾರ್ಯಗಳನ್ನೂ ಏಕಾದಶೀದಿನದಲ್ಲಿ ಮಾಡಲೇಬೇಕು ಎಂಬ ನಿಯಮವಿಲ್ಲ. ಹಾಗೆ ನಿಯಮವಿದ್ದರೆ ಸೂತಕದಲ್ಲಿ ಜಾತಕರ್ಮವನ್ನು ಮಾಡುವಾಗ ಮಾಡುತ್ತಿರುವ ಫಲೀಕರಣ ಹೋಮ ಮುಂತಾದ ಹೋಮಗಳನ್ನು ಏಕಾದಶಿಯಲ್ಲಿಯೂ ಮಾಡಬೇಕಾದೀತು. ಹಾಗೆ ಯಾರೂ ಮಾಡುವುದಿಲ್ಲ. ಅದು ಮಾತ್ರವಲ್ಲ.

ಮಾತುರಾಶೌಚಮಧ್ಯೇ ತು ಪಿತುರೇಕಾದಶಾಹಿಕಮ್ |
ಪಿತುರಾಶೌಚಮಧ್ಯೇಽಪಿ ಮಾತುರೇಕಾದಶಾಹಿಕಮ್ ||
ಆದ್ಯಶ್ರಾದ್ಧಮಶುದ್ಧೋಽಪಿ ಕುರ್ಯಾದೇಕಾದಶೇಽಹನಿ |
ಕರ್ತುಸ್ತಾತ್ಕಾಲಿಕೀ ಶುದ್ಧಿರಶುದ್ಧಃ ಪುನರೇವ ಸಃ || (ಶಂಖವಚನ)

"ತಾಯಿಯು ಸತ್ತು ನಾಲ್ಕೈದು ದಿನಗಳಲ್ಲಿ ತಂದೆಯು ಸಾಯುವನು ಅಥವಾ ತಂದೆಯು ಸತ್ತು ನಾಲ್ಕೈದು ದಿನಗಳಲ್ಲಿ ತಾಯಿಯು ಸಾಯುವಳು. ಈ ಸಂದರ್ಭದಲ್ಲಿ ತಂದೆ ಅಥವಾ ತಾಯಿಯು ಸತ್ತು ಹನ್ನೊಂದನೆಯ ದಿನದಲ್ಲಿ ಮೃತಾ ಶೌಚವು ಮಕ್ಕಳಿಗೆ ಇರುತ್ತದೆ. ಆದರೂ ಹನ್ನೊಂದನೆಯ ದಿನದಲ್ಲಿ ಮಾಡಬೇಕಾದ ಮೊದಲನೆಯ ಏಕೋದ್ದಿಷ್ಟಶ್ರಾದ್ಧ ಕಾಲದಲ್ಲಿ

ಮಕ್ಕಳಿಗೆ ತಾತ್ಕಾಲಿಕಶುದ್ಧಿಯು ಇರುತ್ತದೆ. ಆದ್ದರಿಂದ ಹನ್ನೊಂದನೆಯ ದಿನದಲ್ಲಿ ಏಕೋದ್ದಿಷ್ಟಶ್ರಾದ್ಧವನ್ನು ಮಕ್ಕಳು ಮಾಡಲೇಬೇಕು, ಈ ಏಕೋದ್ದಿಷ್ಟಶ್ರಾದ್ಧವು ಮುಗಿದ ಕೂಡಲೇ ಮಕ್ಕಳು ಪುನಃ ಅಶುದ್ಧರಾಗುವರು. ಆದ್ದರಿಂದ ಹನ್ನೊಂದನೆಯ ದಿನದಲ್ಲಿ ಏಕೋದ್ದಿಷ್ಟಶ್ರಾದ್ಧವನ್ನು ಮಾಡಿದ ಮೇಲೆ ಮಾಡಬೇಕಾದ ಸಪಿಂಡೀಕರಣ ಮುಂತಾದ ಕಾರ್ಯಗಳನ್ನು ನಿಲ್ಲಿಸಬೇಕು. ಕ್ರಮಪ್ರಕಾರವಾಗಿ ಮಕ್ಕಳಿಗೆ ಆಶೌಚನಿವೃತ್ತಿಯು ಏರ್ಪಟ್ಟ ಮೇಲೆಯೇ ಸಪಿಂಡೀಕರಣ ಮುಂತಾದ ಕಾರ್ಯಗಳನ್ನು ಮಾಡಬೇಕು."

ಮೇಲ್ಕಂಡ ಶಂಖವಚನದಲ್ಲಿ ತಾಯಿ ಸತ್ತದ್ದರಿಂದ ಏರ್ಪಟ್ಟ ಮೃತಾಶೌಚಕಾಲದಲ್ಲಿ ತಂದೆಯ ಏಕೋದ್ದಿಷ್ಟಶ್ರಾದ್ಧವನ್ನೂ ತಂದೆ ಸತ್ತದ್ದರಿಂದ ಏರ್ಪಟ್ಟ ಮೃತಾಶೌಚಕಾಲದಲ್ಲಿ ತಾಯಿಯ ಏಕೋದ್ದಿಷ್ಟಶ್ರಾದ್ಧವನ್ನೂ ಹನ್ನೊಂದನೆಯ ದಿನದಲ್ಲಿ ಮಾಡಬೇಕೆಂದು ಹೇಳಿದಂತಾಯಿತು. ಅದರಂತೆ ಮೇಲ್ಕಂಡ ನಿಯಮವಿದ್ದರೆ ಏಕಾದಶೀದಿನದಲ್ಲಿಯೂ ಏಕೋದ್ದಿಷ್ಟಶ್ರಾದ್ಧವನ್ನು ಮಾಡಬೇಕಾದೀತು. ಆದರೆ ಏಕಾದಶೀಶ್ರಾದ್ಧವು ಹಿಂದೆ ಹೇಳಿದ ಪ್ರಮಾಣಗಳಿಂದಲೂ ಉಳಿದಿರುವ ಅನೇಕ ಪ್ರಮಾಣಗಳಿಂದಲೂ ನಿಷಿದ್ಧವಾಗಿದೆ. ಆದ್ದರಿಂದ ಮೇಲ್ಕಂಡ ನಿಯಮವಿಲ್ಲವೆಂದು ಸಿದ್ಧವಾಯಿತು.

"ಯಾವ ಕಾರ್ಯವು ಯಾವ ಕಾಲದಲ್ಲಿ ವಿಹಿತವಾಗಿದೆಯೋ ಆ ಕಾಲದಲ್ಲಿ ಆ ಕಾರ್ಯವನ್ನು ಮಾಡಬೇಕು. ಯಾವ ಕಾಲದಲ್ಲಿ ನಿಷಿದ್ಧವಾಗಿದೆಯೋ ಆಗ ಮಾಡಕೂಡದು" ಎಂಬ ನಿಯಮವನ್ನೇ ಸ್ವೀಕರಿಸಬೇಕು. ಏಕಾದಶೀದಿನದಲ್ಲಿ ಅಗ್ನಿಹೋತ್ರವು ನಿಷಿದ್ಧವಾಗಿದೆ. ಆದ್ದರಿಂದ ಮೇಲ್ಕಂಡ ನಿಯಮವನ್ನು ಅನುಸರಿಸಿ ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡಕೂಡದು."

ಇನ್ನೊಂದು ಆಕ್ಷೇಪವು ಬರುತ್ತದೆ. ಅದನ್ನು ಈಗ ವಿವರಿಸುತ್ತೇವೆ. ಏಕಾದಶೀದಿನದಲ್ಲಿ ಹೋಮವನ್ನು ಮಾಡಕೂಡದೆಂದು ಹೇಳಿದಿರಿ. ಹಾಗಾದರೆ ಸಂಧ್ಯಾವಂದನವನ್ನೂ ಮಾಡಕೂಡದು. "ಸೂರ್ಯಶ್ಚ ಮಾ ಮನ್ಯುಶ್ಚ" ಮುಂತಾದ ಮಂತ್ರಗಳಿಂದ ನೀರನ್ನು ಜಪಿಸಬೇಕು. "ಸೂರ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ" ಎಂದು ಹೇಳುತ್ತಾ ಕುಡಿಯಬೇಕು. ಇಲ್ಲಿರುವ "ಜುಹೋಮಿ" ಎಂಬ ಪದವು ಹೋಮವನ್ನು ತಿಳಿಸುತ್ತದೆ. ಹೋಮವು ಏಕಾದಶೀದಿನದಲ್ಲಿ ನಿಷಿದ್ಧವಾಗಿದ್ದರೆ ಸಂಧ್ಯಾವಂದನದಲ್ಲಿರುವ ಈ ಹೋಮವೂ ನಿಷಿದ್ಧವಾಗುತ್ತದೆ. ಆದ್ದರಿಂದ ಸಂಧ್ಯಾವಂದನವೂ ಏಕಾದಶೀದಿನದಲ್ಲಿ ನಿಷಿದ್ಧವಾಗಬೇಕು. ಆದ್ದರಿಂದಲೇ ಏಕಾದಶೀದಿನದಲ್ಲಿ ಸಂಧ್ಯಾವಂದನವನ್ನು ಮಾಡುತ್ತಿರುವ ಸರ್ವರೂ ಅಗ್ನಿಹೋತ್ರಹೋಮವನ್ನು ಮಾಡಬೇಕೆಂದು ಹೇಳಲೇಬೇಕು. ಇದು ಆಕ್ಷೇಪ. ಈ ಆಕ್ಷೇಪಕ್ಕೆ ಉತ್ತರವನ್ನು ಕೊಡುವೆವು. ಅದಕ್ಕಾಗಿ ಈಗ "ಸೂರ್ಯಶ್ಚ ಮಾ ಮನ್ಯುಶ್ಚ" ಎಂಬ ಮಂತ್ರದ ಅರ್ಥವನ್ನು ತಿಳಿಸುವೆವು.

"ಸೂರ್ಯಶ್ಚ" ಸೂರ್ಯದೇವನೂ "ಮನ್ಯುಶ್ಚ" ಕೋಪಕ್ಕೆ ಅಭಿಮಾನಿಯಾಗಿರುವ ರುದ್ರದೇವನೂ "ಮನ್ಯುಪತಯಶ್ಚ" ರುದ್ರದೇವನಿಗೆ ಯಜಮಾನನಾಗಿರುವ ಬ್ರಹ್ಮದೇವ, ಮುಖ್ಯಪ್ರಾಣದೇವ ಮತ್ತು ಶ್ರೀನಾರಾಯಣರೂ "ಮನ್ಯುಕೃತೇಭ್ಯಃ" ಕೋಪದಿಂದ ಮಾಡಲ್ಪಟ್ಟ "ಪಾಪೇಭ್ಯಃ" ಬ್ರಹ್ಮಹತ್ಯಾ ಮುಂತಾದ ಪಾಪಗಳಿಂದ "ಮಾ" ನನ್ನನ್ನು "ರಕ್ಷಂತಾಂ" ಕಾಪಾಡಲಿ. "ರಾತ್ರ್ಯಾ" ರಾತ್ರಿಕಾಲದಲ್ಲಿ "ಯತ್ ಪಾಪಂ" ಯಾವ ಪಾಪವನ್ನು "ಅಕಾರಿಷಂ" ಮಾಡಿಯವೆನೋ "ಮನಸಾ" ಮನಸ್ಸಿನಿಂದಲೂ "ವಾಚಾ" ಮಾತಿನಿಂದಲೂ "ಹಸ್ತಾಭ್ಯಾಂ" ಎರಡು ಕೈಗಳಿಂದಲೂ "ಪದ್ಭ್ಯಾಂ" ಎರಡು ಕಾಲುಗಳಿಂದಲೂ "ಉದರೇಣ" ಹೊಟ್ಟೆಯಿಂದಲೂ "ಶಿಶ್ನಾ" ಗುಹ್ಯೇಂದ್ರಿಯದಿಂದಲೂ "ಯತ್ ಕಿಂಚ ದುರಿತಂ" ಯಾವ ವಿಧವಾದ ಪಾಪವು "ಮಯಿ" ನನ್ನಲ್ಲಿ ಸಂಗ್ರಹಿಸಲ್ಪಟ್ಟಿದೆಯೋ, ಅದನ್ನು "ರಾತ್ರಿಃ" ರಾತ್ರಿಯ ನಿಯಾಮಕನಾದ ಶ್ರೀಹರಿಯು "ಅವಲುಂಪತು" ಪರಿಹರಿಸಲಿ. "ಅಹಂ" ನಾನು "ಇದಂ" ನನ್ನ ಈ ಶರೀರ ಇಂದ್ರಿಯ ಮುಂತಾದವುಗಳನ್ನೂ "ಮಾಂ" ನನ್ನನ್ನೂ "ಅಮೃತಯೋನೌ" ಮೋಕ್ಷಕ್ಕೆ ಕಾರಣನಾದ ಅಥವಾ ಮುಕ್ತರಿಗೆ ಆಶ್ರಯನಾದ "ಸೂರ್ಯೇ" ಜ್ಞಾನಿಗಳಿಂದ ಪ್ರಾಪ್ಯನಾದ "ಜ್ಯೋತಿಷಿ"

ಸ್ವಪ್ರಕಾಶರೂಪಿಯಾದ ಶ್ರೀಹರಿಯಲ್ಲಿ "ಜುಹೋಮಿ" ಸಮರ್ಪಿಸುತ್ತೇನೆ ಅಂದರೆ ನಾನೂ ನನ್ನ ಶರೀರ ಮುಂತಾದ ಎಲ್ಲಾ ವಸ್ತುಗಳೂ ಶ್ರೀಹರಿಯ ಅಧೀನವೆಂದು ಸ್ಮರಿಸುವೆನು.

ಈ ಅರ್ಥವನ್ನು ತಿಳಿದಾಗ ಈ ಮಂತ್ರದಲ್ಲಿರುವ "ಜುಹೋಮಿ" ಎಂಬ ಪದವು ಯಜ್ಞದಲ್ಲಿ ಕೊಡುವ ಆಹುತಿಯನ್ನು ತಿಳಿಸುವುದಿಲ್ಲ. "ನಾನು ಮತ್ತು ನನ್ನ ಶರೀರೇಂದ್ರಿಯಗಳು ಶ್ರೀಹರಿಯ ಅಧೀನವೆಂದು ಚಿಂತಿಸುತ್ತೇನೆ" ಎಂಬ ಅರ್ಥವನ್ನೇ ತಿಳಿಸುತ್ತದೆ ಎಂದು ಸ್ಪಷ್ಟವಾಗುತ್ತದೆ. ಹೋಮವು ಈ ಮಂತ್ರದಲ್ಲಿ ಹೇಳಲ್ಪಡದಿರುವುದರಿಂದ ಈ ಹೋಮದಂತೆ ಅಗ್ನಿಹೋತ್ರಹೋಮವನ್ನೂ ಏಕಾದಶೀದಿನದಲ್ಲಿ ಮಾಡಬೇಕೆಂದೂ ಅಗ್ನಿಹೋತ್ರಹೋಮವನ್ನು ಏಕಾದಶೀದಿನದಲ್ಲಿ ಮಾಡದಿದ್ದರೆ ಆ ದಿನದಲ್ಲಿ ಸಂಧ್ಯಾವಂದನವನ್ನೂ ಮಾಡಕೂಡದೆಂದೂ ಹೇಳುವುದು ಸರಿಯಲ್ಲ.

"ಇದಮಹಂ ಮಾಂ ಜುಹೋಮಿ ಸ್ವಾಹಾ" ಎಂಬ ಮಂತ್ರದಲ್ಲಿ "ಜುಹೋಮಿ" ಎಂಬ ಪದಕ್ಕೆ ವಾಸ್ತವವಾದ ಅರ್ಥವನ್ನು ತಿಳಿಸಿದೆವು. ಆ ಅರ್ಥವನ್ನು ಬಿಟ್ಟು "ಹೋಮ" ಎಂಬ ಅರ್ಥವನ್ನು ಹೇಳುವುದಾದರೆ ಬರುವ ಅನರ್ಥಗಳನ್ನು ಈಗ ತಿಳಿಸುವೆವು. "ಅಹಂ" ನಾನು "ಇದಂ" ಈ ಶರೀರೇಂದ್ರಿಯಾದಿಗಳನ್ನೂ "ಮಾಂ" ನನ್ನನ್ನೂ "ಜುಹೋಮಿ" ಹೋಮ ಮಾಡುವೆನು ಎಂದು ಅರ್ಥವನ್ನು ಹೇಳಿದರೆ ಒಂದೊಂದು ದಿನದಲ್ಲಿಯೂ ತನ್ನನ್ನೂ ತನ್ನ ಶರೀರೇಂದ್ರಿಯಾದಿಗಳನ್ನೂ ಭಸ್ಮ ಮಾಡುವುದಾಗಿ ಸಂಕಲ್ಪಿಸಿದಂತಾಗುವುದು. ಅದರಿಂದ ಜೀವನೂ ಜೀವನ ಶರೀರೇಂದ್ರಿಯಾದಿಗಳೂ ಪ್ರತಿದಿನದಲ್ಲಿಯೂ ಭಸ್ಮ ಮಾಡಿದಂತಾಗುವುದು. ಇದು ಅನುಭವವಿರುದ್ಧ. ಮತ್ತು ಸರ್ವಾನಿಷ್ಟಕರವಾಗುತ್ತದೆ.

ಅದು ಮಾತ್ರವಲ್ಲ. ಯಜ್ಞದಲ್ಲಿ ದೀಕ್ಷಿತನಾದ ಮೇಲೆ ಆ ದೀಕ್ಷಾದಿನಗಳಲ್ಲಿ "ದೀಕ್ಷಿತೋ ನ ಜುಹೋತಿ" ಎಂಬ ಶ್ರುತಿಯನ್ನು ಅನುಸರಿಸಿ ಪ್ರಕೃತಹೋಮವನ್ನು ಬಿಟ್ಟು ಇತರ ಯಾವ ಹೋಮಗಳನ್ನೂ ಮಾಡಕೂಡದು. ಆದ್ದರಿಂದ ಸಂಧ್ಯಾವಂದನವೂ ಹೋಮರೂಪವಾಗಿದ್ದರೆ ಸಂಧ್ಯಾವಂದನವನ್ನೂ ಮಾಡಕೂಡದೆಂದು ಹೇಳಿದಂತಾಗುವುದು. ಇದು ಅತ್ಯಂತ ಅಯುಕ್ತವಾಗುತ್ತದೆ. ಆದ್ದರಿಂದ ಈ ಮಂತ್ರದಲ್ಲಿರುವ "ಜುಹೋಮಿ" ಎಂಬ ಪದವು ಹೋಮವನ್ನು ತಿಳಿಸುವುದಿಲ್ಲ.

### ಸುದರ್ಶನ ಹೋಮವನ್ನು ಏಕಾದಶಿಯಲ್ಲಿ ಮಾಡಬೇಕು

ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡಕೂಡದೆಂದು ಸಮರ್ಥಿಸಿದೆವು. ಇಲ್ಲಿ ಒಂದು ಆಕ್ಷೇಪವು ಬರುತ್ತದೆ. ಅಗ್ನಿಹೋತ್ರಹೋಮವನ್ನು ಏಕಾದಶೀದಿನದಲ್ಲಿ ಮಾಡುವುದು ಅಶಾಸ್ತ್ರೀಯವೆಂದು ಹೇಳಿದಿರಿ. ಹಾಗಾದರೆ ಏಕಾದಶೀದಿನದಲ್ಲಿ ಸುದರ್ಶನಹೋಮವನ್ನು ಮಾಡುವುದು ಅಶಾಸ್ತ್ರೀಯವಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುವೆವು.

ಏಕಾದಶ್ಯಾಂ ಯದಾ ಬ್ರಹ್ಮನ್ ಸುದರ್ಶನಮಖೋ ಭವೇತ್ |
ಅನ್ವಾಧಾನಂ ತು ದೇವಾನಾಂ ಮಂತ್ರಾನುಚ್ಚಾರ್ಯ ಕೇವಲಮ್ ||
ತತ್ಸ್ಥಾನೇ ವಿಷ್ಣುಮುದ್ದಿಶ್ಯ ಮೂಲೇನೈವ ಹುನೇತ್ಸುಧೀಃ | (ಪಂಚರಾತ್ರಾಗಮ)

"ಏಕಾದಶೀದಿನದಲ್ಲಿ ಸುದರ್ಶನಹೋಮವನ್ನು ಮಾಡಬಹುದು. ಅದನ್ನು ಮಾಡುವಾಗ ಅನ್ವಾಧಾನವನ್ನೂ ಮಾಡಬೇಕು. ಆ ಅನ್ವಾಧಾನವನ್ನು ಮಾಡುವಾಗ ಅನ್ವಾಧಾನಕ್ಕೆ ಸಂಬಂಧಿಸಿದ ದೇವತೆಗಳ ಹೆಸರುಗಳನ್ನು ಮಾತ್ರ ಹೇಳಬೇಕು. ಆಹುತಿಯನ್ನು ಕೊಡುವಾಗ ಆ ದೇವತೆಗಳ ಹೆಸರುಗಳನ್ನು ಹೇಳಬಾರದು. ಮೂಲಮಂತ್ರದಿಂದ ಅಂದರೆ ನಾರಾಯಣಾಷ್ಟಾಕ್ಷರಮಂತ್ರದಿಂದ ವಿಷ್ಣುವನ್ನು ಉದ್ದೇಶಿಸಿ ಹೋಮವನ್ನು ಮಾಡಬೇಕು. ಆ ದೇವತೆಗಳನ್ನು ಉದ್ದೇಶಿಸಿ ಹೋಮವನ್ನು ಮಾಡಕೂಡದು."

ಈ ಪಂಚರಾತ್ರಾಗಮವಾಕ್ಯದಲ್ಲಿ ಏಕಾದಶೀದಿನದಲ್ಲಿ ಸುದರ್ಶನಹೋಮವು ವಿಹಿತವಾಗಿದೆ. ಆದ್ದರಿಂದ ಏಕಾದಶೀದಿನದಲ್ಲಿ ಸುದರ್ಶನಹೋಮವನ್ನು ಮಾಡಬೇಕು. ಈ ಸುದರ್ಶನಹೋಮದಂತೆ ಅಗ್ನಿಹೋತ್ರ ಮುಂತಾದ ಬೇರೆ ಹೋಮಗಳು ಯಾವ ವಾಕ್ಯಗಳಲ್ಲಿಯೂ ವಿಹಿತವಾಗಿಲ್ಲ. ಆದ್ದರಿಂದ ಅಗ್ನಿಹೋತ್ರಹೋಮವನ್ನು ಮಾಡಕೂಡದು.

ಏಕಾದಶೀದಿನದಲ್ಲಿ ವಿಷ್ಣುವನ್ನು ಉದ್ದೇಶಿಸಿ ಸುದರ್ಶನಹೋಮವನ್ನು ಮಾಡಬಹುದು ಎಂದು ಹೇಳಿದಿರಿ. ವಿಷ್ಣುವೂ ಒಬ್ಬ ದೇವತೆಯೇ ಆಗಿರುವನು. ಅವನನ್ನು ಉದ್ದೇಶಿಸಿ ಹೋಮವನ್ನು ಮಾಡಿದರೆ "ನ ಹೋತವ್ಯಂ ಸುರಾದಿಷು" ಅಂದರೆ ದೇವತೆಗಳನ್ನು ಉದ್ದೇಶಿಸಿ ಹೋಮವನ್ನು ಮಾಡಕೂಡದು ಎಂದು ನಿಷೇಧಿಸಿರುವುದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

"ನ ಹೋತವ್ಯಂ ಸುರಾದಿಷು" ಮುಂತಾದ ಪ್ರಮಾಣವಚನಗಳಲ್ಲಿ ವಿಷ್ಣುವ್ಯತಿರಿಕ್ತ ದೇವತೆಗಳನ್ನು ಉದ್ದೇಶಿಸಿ ಹೋಮವನ್ನು ಏಕಾದಶಿಯಲ್ಲಿ ಮಾಡಕೂಡದು ಎಂದು ನಿಷೇಧಿಸಿರುತ್ತದೆ. ವಿಷ್ಣುವನ್ನು ಉದ್ದೇಶಿಸಿ ಮಾಡಲ್ಪಡುವ ಹೋಮವು ನಿಷೇಧಿಸಲ್ಪಡಲಿಲ್ಲ. ಸುದರ್ಶನಹೋಮ ಅನುಯಾಗ ಮುಂತಾದ ಹೋಮಗಳು ಕೇವಲವಿಷ್ಣುವನ್ನೇ ಉದ್ದೇಶಿಸಿ ಮಾಡಲ್ಪಡುವ ಹೋಮಗಳು. ಆದ್ದರಿಂದ ಏಕಾದಶೀದಿನದಲ್ಲಿ ಸುದರ್ಶನಹೋಮವನ್ನು ಮಾಡುವವರಿಗೆ "ನ ಹೋತವ್ಯಂ ಸುರಾದಿಷು" ಮುಂತಾದ ಪ್ರಮಾಣವಚನಗಳ ವಿರೋಧಗಳು ಬರುವುದಿಲ್ಲ.

ಅಗ್ನಿಹೋತ್ರಹೋಮದಲ್ಲಿ "ಅಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ ಸ್ವಾಹಾ" "ಸೂರ್ಯೋ ಜ್ಯೋತಿರ್ಜ್ಯೋತಿಃ ಸೂರ್ಯಃ ಸ್ವಾಹಾ" ಮುಂತಾದ ಮಂತ್ರಗಳಿಂದ ಹೇಳಿರುವ ಅಗ್ನಿ ಸೂರ್ಯ ಮುಂತಾದ ದೇವತೆಗಳನ್ನೂ ಉದ್ದೇಶಿಸಿ ಆಹುತಿಯು ಕೊಡಲ್ಪಡುತ್ತಿದೆ. ಆದ್ದರಿಂದ ಆ ಅಗ್ನಿಹೋತ್ರಹೋಮವನ್ನು ಏಕಾದಶೀದಿನದಲ್ಲಿ ಮಾಡಕೂಡದು.

ಇಲ್ಲಿ ಇನ್ನೊಂದು ಆಕ್ಷೇಪವು ಬರುತ್ತದೆ. "ನ ಹೋತವ್ಯಂ ಸುರಾದಿಷು" ಮುಂತಾದ ಪ್ರಮಾಣಗಳು ವಿಷ್ಣುವನ್ನು ಬಿಟ್ಟು ಬೇರೆ ದೇವತೆಗಳನ್ನು ಉದ್ದೇಶಿಸಿ ಏಕಾದಶೀದಿನದಲ್ಲಿ ಹೋಮವನ್ನು ಮಾಡಕೂಡದೆಂದು ತಿಳಿಸುತ್ತದೆಯೆಂದು ಹೇಳಿದಿರಿ. ಹಾಗಾದರೆ ಏಕಾದಶೀದಿನದಲ್ಲಿ ವಿಷ್ಣುವನ್ನು ಉದ್ದೇಶಿಸಿ ಅಗ್ನಿಹೋತ್ರಹೋಮವನ್ನು ಯಾಕೆ ಮಾಡಬಾರದು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುವೆವು.

ಏಕಾದಶೀದಿನದಲ್ಲಿ ಸುದರ್ಶನಹೋಮವನ್ನು ಮಾಡಬೇಕೆಂದು ಹೇಳುವ ವಚನಗಳಿವೆ. ಆದ್ದರಿಂದ ಆ ಹೋಮವನ್ನು ಮಾಡಬಹುದು. ಅಗ್ನಿಹೋತ್ರವನ್ನು ಮಾಡಬೇಕೆಂಬ ವಚನವಿಲ್ಲ. ಆದ್ದರಿಂದ ಮಾಡಕೂಡದು.

ಅದು ಮಾತ್ರವಲ್ಲ. ಒಂದು ಯಾಗವನ್ನು ವಿಷ್ಣುವನ್ನು ಉದ್ದೇಶಿಸಿ ಮಾಡಬೇಕಾ? ಬೇರೆ ದೇವತೆಗಳನ್ನು ಉದ್ದೇಶಿಸಿ ಮಾಡಬೇಕಾ? ಎಂಬ ಸಂಶಯವು ಬಂದಾಗ ಆ ಯಾಗದಲ್ಲಿ ಉಪಯೋಗಿಸುವ ಮಂತ್ರಗಳನ್ನು ನೋಡಬೇಕು. ಆ ಮಂತ್ರಗಳು ಯಾರನ್ನು ಹೇಳುತ್ತವೆಯೋ ಆ ದೇವತೆಗಳನ್ನೇ ಉದ್ದೇಶಿಸಿ ಹೋಮವನ್ನು ಮಾಡಬೇಕು. ಅಗ್ನಿಹೋತ್ರಾದಿ ಮಂತ್ರಗಳು ಅಗ್ನಿ ಮುಂತಾದ ದೇವತೆಗಳಲ್ಲಿ ಸನ್ನಿಹಿತನಾದ ಶ್ರೀಹರಿಯನ್ನು ತಿಳಿಸುತ್ತವೆ. ಆದ್ದರಿಂದ ಆ ಮಂತ್ರಗಳು ಬರೇ ವಿಷ್ಣುವನ್ನು ಉದ್ದೇಶಿಸಿ ಮಾಡುವ ಹೋಮದಲ್ಲಿ ಉಪಯುಕ್ತವಾಗಲಾರವು. ಅಗ್ನಿ ಮುಂತಾದ ದೇವತೆಗಳಲ್ಲಿ ಸನ್ನಿಹಿತನಾದ ಶ್ರೀಹರಿಯನ್ನು ಉದ್ದೇಶಿಸಿ ಮಾಡುತ್ತಿರುವ ಹೋಮಗಳಲ್ಲಿಯೇ ಉಪಯುಕ್ತವಾಗುತ್ತವೆ. ಆದ್ದರಿಂದ ಏಕಾದಶೀದಿನದಲ್ಲಿ ಬರೇ ವಿಷ್ಣುವನ್ನೇ ಉದ್ದೇಶಿಸದಿರುವ ಅಗ್ನಿಹೋತ್ರಯಾಗವನ್ನು ಮಾಡಕೂಡದು. ಅಗ್ನಿ ಮುಂತಾದ ಸಕಲಪದಗಳು ಸಮನ್ವಯಾಧ್ಯಾಯದಲ್ಲಿ ಹೇಳಿದ ರೀತಿಯಿಂದ ಪರಮಮುಖ್ಯವೃತ್ತಿಯಿಂದ ಶ್ರೀಹರಿಯನ್ನು ತಿಳಿಸುತ್ತವೆ. ಮುಖ್ಯವೃತ್ತಿಯಿಂದ ಇತರ ದೇವತೆಗಳನ್ನೂ ತಿಳಿಸುತ್ತವೆಯಲ್ಲವೇ?

ಇಲ್ಲಿ ಇನ್ನೊಂದು ಆಕ್ಷೇಪವು ಬರುತ್ತದೆ. ಅಗ್ನಿ ಸುದರ್ಶನ ಮುಂತಾದ ಪದಗಳು ಪರಮಮುಖ್ಯವೃತ್ತಿಯಿಂದ ಶ್ರೀಹರಿಯನ್ನೂ ಮುಖ್ಯವೃತ್ತಿಯಿಂದ ಅಗ್ನಿ, ಸುದರ್ಶನ ಮುಂತಾದ ದೇವತೆಗಳನ್ನೂ ತಿಳಿಸುತ್ತವೆ. ಹೀಗಿದ್ದರೂ ಸುದರ್ಶನ ಹೋಮವನ್ನು ಮಾತ್ರ ಶ್ರೀವಿಷ್ಣುವನ್ನೇ ಉದ್ದೇಶಿಸಿ ಏಕಾದಶೀದಿನದಲ್ಲಿ ಮಾಡುತ್ತೀರಿ. ಅಗ್ನಿಹೋತ್ರವನ್ನು ಅಗ್ನಿ ಮುಂತಾದ ದೇವತೆಗಳನ್ನೇ ಉದ್ದೇಶಿಸಿ ಏಕಾದಶೀವ್ಯತಿರಿಕ್ತದಿನಗಳಲ್ಲಿ ಮಾಡುತ್ತೀರಿ. ಹೀಗೆ ಯಾಕೆ ಮಾಡಬೇಕು? ಅಗ್ನಿಹೋತ್ರದಲ್ಲಿಯೂ

ವಿಷ್ಣುವನ್ನೇ ಉದ್ದೇಶಿಸಿ ಮಾಡಬಹುದಲ್ಲವೇ? ಹಾಗೆ ಮಾಡುವುದಾದರೆ ಏಕಾದಶೀದಿನದಲ್ಲಿ ಸುದರ್ಶನ ಹೋಮವನ್ನು ಮಾಡಿದಂತೆ ಅಗ್ನಿಹೋತ್ರವನ್ನು ಏಕೆ ಮಾಡಬಾರದು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಸುದರ್ಶನಹೋಮದಲ್ಲಿ ಅನ್ವಾಹಿತದೇವತೆಗಳನ್ನು ಉದ್ದೇಶಿಸಿ ಆಹುತಿಯನ್ನು ಕೊಡಬಾರದು. ಮೂಲಮಂತ್ರದಿಂದ ಶ್ರೀಹರಿಗೇ ಕೊಡಬೇಕೆಂದು ಶಾಸ್ತ್ರಗಳು ತಿಳಿಸುತ್ತವೆ. ಆದ್ದರಿಂದ ಸುದರ್ಶನಹೋಮದಲ್ಲಿ ಎಲ್ಲಾ ಆಹುತಿಗಳನ್ನೂ ಶ್ರೀಹರಿಗೇ ಕೊಡುತ್ತಿರುವುದರಿಂದ ಆ ಹೋಮವು ಕೇವಲ ವೈಷ್ಣವಹೋಮವೆನಿಸುತ್ತದೆ. ಇತರಹೋಮಗಳಲ್ಲಿ ಅನ್ವಾಹಿತ ದೇವತೆಗಳಿಗೆ ಆಹುತಿಯುಂಟು. ಆದ್ದರಿಂದ ಕೇವಲ ವೈಷ್ಣವಹೋಮವೆನಿಸುವುದಿಲ್ಲ. ಆದ್ದರಿಂದಲೇ ಏಕಾದಶೀದಿನದಲ್ಲಿ ಅಗ್ನಿಹೋತ್ರವನ್ನೂ ಇತರಹೋಮಗಳನ್ನೂ ಮಾಡಕೂಡದು.

ಇಲ್ಲಿ ಇನ್ನೊಂದು ಆಕ್ಷೇಪವೂ ಬರುತ್ತದೆ. ಸುದರ್ಶನಹೋಮದಲ್ಲಿ ಅನ್ವಾಹಿತದೇವತೆಗಳಿಗೆ ಮೂಲಮಂತ್ರದಿಂದಲೇ ಆಹುತಿಯನ್ನು ಶ್ರೀಹರಿಯನ್ನು ಉದ್ದೇಶಿಸಿ ಕೊಡುತ್ತಿರುವುದರಿಂದಲೂ ಸುದರ್ಶನ ಮುಂತಾದ ದೇವತೆಗಳಿಗೆ ಆಹುತಿಯನ್ನು ಕೊಡದಿರುವುದರಿಂದಲೂ ಸುದರ್ಶನಹೋಮವು ಕೇವಲವೈಷ್ಣವಹೋಮವೆಂದು ಹೇಳಿದಿರಿ. ಅದರಂತೆ ಅಗ್ನಿಹೋತ್ರಹೋಮದಲ್ಲಿಯೂ ಅಗ್ನಿ ಮುಂತಾದವರಿಗೆ ಆಹುತಿಯನ್ನು ಕೊಡದೆ ಮೂಲಮಂತ್ರದಿಂದ ಶ್ರೀಹರಿಯನ್ನೇ ಉದ್ದೇಶಿಸಿ ಆಹುತಿಯನ್ನು ಕೊಟ್ಟರೆ ಅಗ್ನಿಹೋತ್ರ ಹೋಮವೂ ಕೇವಲವೈಷ್ಣವಹೋಮವಾಗುತ್ತದೆ. ಆದ್ದರಿಂದ ಏಕಾದಶೀದಿನದಲ್ಲಿ ಕೇವಲ ವೈಷ್ಣವವಾಗಿರುವ ಸುದರ್ಶನಹೋಮದಂತೆ ಅಗ್ನಿಹೋತ್ರಹೋಮವನ್ನು ಯಾಕೆ ಮಾಡಬಾರದು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಉತ್ತರವನ್ನು ಕೊಡುತ್ತೇವೆ.

ಅಗ್ನಿಹೋತ್ರಹೋಮದಲ್ಲಿ ಅನ್ವಾಹಿತದೇವತೆಗಳಿಗೆ ಆಹುತಿಯನ್ನು ಕೊಡದೆ ಮೂಲಮಂತ್ರದಿಂದ ಕೇವಲ ವಿಷ್ಣುವನ್ನೇ ಉದ್ದೇಶಿಸಿ ಆಹುತಿಯನ್ನು ಕೊಡಬೇಕೆಂದು ಶಾಸ್ತ್ರದಲ್ಲಿ ಹೇಳಿಲ್ಲ. ಆದ್ದರಿಂದ ಮೂಲಮಂತ್ರದಿಂದ ಅನ್ವಾಹಿತ ದೇವತೆಗಳಿಗೆ ಆಹುತಿಯನ್ನು ಕೊಡುವಂತಿಲ್ಲ. ಆದ್ದರಿಂದ ಅಗ್ನಿಹೋತ್ರಹೋಮವು ಕೇವಲ ವೈಷ್ಣವಹೋಮವಾಗಲಾರದು. ಸುದರ್ಶನಹೋಮದಲ್ಲಿ "ಮೂಲೇನೈವ ಹುನೇತ್ಸುಧೀಃ" "ಮುಂತಾದ ಶಾಸ್ತ್ರಗಳಿವೆ. ಆದ್ದರಿಂದ ಮೂಲಮಂತ್ರದಿಂದ ಶ್ರೀಹರಿಯನ್ನೂ ಅನ್ವಾಹಿತದೇವತೆಗಳನ್ನೂ ಉದ್ದೇಶಿಸಿ ಆಹುತಿಯನ್ನು ಕೊಡಬಹುದು. ಆದ್ದರಿಂದಲೇ ಸುದರ್ಶನ ಹೋಮವು ಕೇವಲವೈಷ್ಣವಹೋಮವೆನಿಸುತ್ತದೆ. ಆ ಹೋಮವನ್ನು ಏಕಾದಶೀದಿನದಲ್ಲಿ ಮಾಡಬಹುದು.

## ಶಿಷ್ಟಾಚಾರಪ್ರಾಮಾಣ್ಯ

ಶಿಷ್ಟಾಚಾರಕ್ಕೆ ವಿರುದ್ಧವಾದ ವಾಕ್ಯಗಳು ಅಪ್ರಮಾಣವೆನಿಸುತ್ತವೆ. ಏಕಾದಶೀದಿನದಲ್ಲಿ ಅಗ್ನಿಹೋತ್ರವನ್ನು ಮಾಡುತ್ತಿರುವುದು ಸ್ಮಾರ್ತರೇ ಮೊದಲಾದ ಶಿಷ್ಟರ ಆಚಾರದಿಂದ ಸಿದ್ಧವಾಗಿದೆ. ಆದ್ದರಿಂದ ಶಿಷ್ಟಾಚಾರಕ್ಕೆ ವಿರುದ್ಧವಾಗಿರುವ ಮೇಲ್ಕಂಡ ಎಲ್ಲಾ ವಾಕ್ಯಗಳೂ ಅಪ್ರಮಾಣವೆನಿಸುತ್ತವೆ. ಹೀಗಾದ ಮೇಲೆ ಅಪ್ರಮಾಣವಾದ ಆ ವಾಕ್ಯಗಳಿಂದ "ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡಕೂಡದು" ಎಂಬ ವಿಷಯವು ಹೇಗೆ ಸಿದ್ಧವಾಗುತ್ತದೆ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುವೆವು.

ಸ್ಮಾರ್ತರು ಸಂಪ್ರದಾಯಪ್ರವರ್ತಕರೆಂದು ನೀವು ಹೇಳಿರುವಿರಿ ಇರಲಿ. ವೈದಿಕವೈಷ್ಣವಸಂಪ್ರದಾಯಗಳಿಗೆ ವೈಷ್ಣವಶಿಖಾಮಣಿಗಳಾದ ಶ್ರೀವ್ಯಾಸರಾಜತೀರ್ಥರು ಮುಂತಾದವರು ಪ್ರವರ್ತಕರೆಂದು ಹೇಳಲೇಬೇಕು. ಅವರೆಲ್ಲರೂ ಸನ್ಯಾಸಿಗಳು. ಅವರು ಅಗ್ನಿಹೋತ್ರಾದಿಗಳನ್ನು ಮಾಡುವುದಿಲ್ಲ. ಆದ್ದರಿಂದ ಅವರ ಅನುಷ್ಠಾನದಿಂದ ಅಗ್ನಿಹೋತ್ರವನ್ನು ಏಕಾದಶೀದಿನದಲ್ಲಿ ಮಾಡಬೇಕೇ ಬೇಡವೇ? ಎಂದು ತಿಳಿಯುವಂತಿಲ್ಲ.

ಸನ್ಯಾಸಿಗಳಲ್ಲದ ಗೃಹಸ್ಥರು ಎಷ್ಟೋ ಮಹನೀಯರು ಸಂಪ್ರದಾಯಪ್ರವರ್ತಕರಾಗಿರುವರು. ಆದರೆ ವ್ಯಾಸರಾಜತೀರ್ಥರೇ

ಮೊದಲಾದವರಂತೆ ಸರ್ವಸಂಮತರಾಗಿರುವ ಸಂಪ್ರದಾಯಪ್ರವರ್ತಕರಿಲ್ಲ. ಆದ್ದರಿಂದ ಅವರ ಅನುಷ್ಠಾನದಿಂದಲೂ ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡಬೇಕೇ? ಬೇಡವೇ? ಎಂದು ಸರ್ವರೂ ತಿಳಿಯುವಂತಿಲ್ಲ.

ಅದು ಮಾತ್ರವಲ್ಲ. ಅವರು ಹೀಗೆಯೇ ಅನುಷ್ಠಾನ ಮಾಡಿರುವರು ಎಂಬ ವಿಷಯದಲ್ಲಿ ಸರ್ವಸಂಮತವಾದ ಕಥೆಗಳೂ ಇಲ್ಲ. ಆದ್ದರಿಂದ ಶಿಷ್ಟಾಚಾರವು ಯಾವುದು? ಎಂದು ತಿಳಿಯದಿರುವಾಗ ಆ ಶಿಷ್ಟಾಚಾರಕ್ಕೆ ಅನುಕೂಲವಾದ ಪ್ರಮಾಣವು ಯಾವುದು? ಪ್ರತಿಕೂಲವಾದ ಪ್ರಮಾಣವು ಯಾವುದು? ಎಂದು ತಿಳಿಯಲು ಸಾಧ್ಯವಿಲ್ಲ.

ಆದ್ದರಿಂದ ತಾವು ಶಿಷ್ಟರೆಂದು ಅಂಗೀಕರಿಸಿರುವ ಯಾರಾದರೂ ಒಬ್ಬ ಮಹನೀಯರ ಸಂಪ್ರದಾಯವನ್ನು ಸ್ವೀಕರಿಸಬೇಕು. ಅದರಂತೆ ಅನುಷ್ಠಾನ ಮಾಡಲು ಆರಂಭಿಸಬೇಕು. ಆ ಆಚಾರವು ಶಾಸ್ತ್ರಸಂಮತವಾಗಿದೆಯಾ? ಅಲ್ಲವಾ? ಎಂದು ಶಾಸ್ತ್ರಗಳನ್ನು ಪರಿಶೀಲಿಸಬೇಕು. ಆ ಆಚಾರಕ್ಕೆ ಅನುಕೂಲವಾದ ಪ್ರಮಾಣಗಳು ಸಿಕ್ಕಿದರೆ ಆ ಆಚಾರವು ಶಿಷ್ಟಾಚಾರವೆಂದು ತಿಳಿದು ಆ ಅನುಷ್ಠಾನವನ್ನೇ ಮುಂದುವರಿಸಬೇಕು. ವಿರುದ್ಧವಾದ ಪ್ರಮಾಣಗಳು ಸಿಕ್ಕಿದರೆ ಬಿಡಬೇಕು. ತನ್ನ ಅನುಷ್ಠಾನವೂ ಶಿಷ್ಟಾಚಾರಸಂಮತವಲ್ಲ ಎಂದು ತಿಳಿಯಬೇಕು. ಈ ವಿಷಯದಲ್ಲಿ ಭಾಗವತದಶಮಸ್ಕಂಧ 31ನೇ ಅಧ್ಯಾಯದಲ್ಲಿ ಹೇಳಿರುವ ಶ್ರೀವೇದವ್ಯಾಸದೇವರ ವಾಕ್ಯವನ್ನು ಆಧಾರವಾಗಿ ಹೇಳಬಹುದು. ಆ ವಾಕ್ಯಗಳನ್ನೂ ಅವುಗಳ ಅರ್ಥವನ್ನೂ ಕೆಳಗೆ ಕೊಟ್ಟಿರುತ್ತೇನೆ.

ಈಶ್ವರಾಣಾಂ ವಚಃ ಸತ್ಯಂ ತಥೈವಾಚರಿತಂ ಕ್ವಚಿತ್ |
ತೇಷಾಂ ಯತ್ಸ್ವವಚೋಽಯುಕ್ತಂ ಬುದ್ಧಿಮಾನ್ಸ್ತದಾಚರೇತ್ ||

"ಶಿಷ್ಟರು ಹೇಳಿರುವ ಮಾತುಗಳು ಪ್ರಮಾಣವೆನಿಸುತ್ತವೆ. ಅವರು ಮಾಡಿರುವ ಆಚಾರಗಳು ಕೆಲವು ಸಂದರ್ಭಗಳಲ್ಲಿ ಮಾತ್ರ ಪ್ರಮಾಣವಾಗಿರುತ್ತವೆ. ಅಂದರೆ ಅವರ ಮಾತುಗಳಿಗೆ ಅವರ ಆಚಾರಗಳು ಅನುಕೂಲವಾಗಿದ್ದರೆ ಪ್ರಮಾಣವೆನಿಸುತ್ತವೆ. ಅವರು ಹೇಳಿರುವ ಮಾತುಗಳಿಗೆ ಅವರ ಆಚಾರಗಳು ವಿರುದ್ಧವಾಗಿದ್ದರೆ ಅಪ್ರಮಾಣವೆನಿಸುತ್ತವೆ. ಆಗ ಅವರ ಆಚಾರದಂತೆ ವಿವೇಕಿಯಾದವನು ಮಾಡಕೂಡದು."

ಈ ವಾಕ್ಯದಲ್ಲಿ ಮಹಾತ್ಮರ ಉಪದೇಶವೇ ಪ್ರಮಾಣವೆಂದೂ ಅವರು ಮಾಡುವ ಕಾರ್ಯಗಳಲ್ಲಿ ಕೆಲವು ಕಾರ್ಯಗಳು ಅವರ ಉಪದೇಶಗಳಿಗೆ ವಿರುದ್ಧವಾಗಿವೆಯೆಂದೂ ಆದ್ದರಿಂದಲೇ ಅಪ್ರಮಾಣವೆಂದೂ ಅತಿಸ್ಪಷ್ಟವಾಗಿ ಹೇಳಿರುತ್ತದೆ. ಆದ್ದರಿಂದ ಶಿಷ್ಟಾಚಾರಕ್ಕೆ ವಿರುದ್ಧವಾಗಿರುವ ಸ್ಮೃತಿವಾಕ್ಯಗಳು ಅಪ್ರಮಾಣವೆಂದು ಹೇಳುವಂತಿಲ್ಲ. ಮೇಲ್ಕಂಡ ಸ್ಮೃತಿವಾಕ್ಯಗಳಿಗೆ ವಿರುದ್ಧವಾಗಿರುವ ಸ್ಮಾರ್ತರ ಅನುಷ್ಠಾನವೇ ಅಪ್ರಮಾಣವೆಂದೂ ಅದೇ ಸ್ಮೃತಿವಾಕ್ಯಗಳಿಗೆ ಅನುಕೂಲವಾಗಿರುವ ಮತ್ತು ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡದಿರುವ ಆಚಾರವೇ ಪ್ರಮಾಣವೆಂದೂ ಸಿದ್ಧವಾಯಿತು.

### ಏಕಾದಶೀದಿನದಲ್ಲಿ ಅಗ್ನಿ ಹೋತ್ರವನ್ನು ಮಾಡಿದರೆ ಬರುವ ಅನರ್ಥಗಳು

ಇನ್ನೊಂದು ವಿಷಯವನ್ನು ಮುಖ್ಯವಾಗಿ ಇಲ್ಲಿ ಗಮನಿಸಬೇಕು. ಏಕಾದಶೀದಿನದಲ್ಲಿ ಅಗ್ನಿಹೋತ್ರವನ್ನು ಮಾಡಿದರೆ ಅಂದು ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಮೂರು ಮೂರು ಸಲ ಅಗ್ನಿಹೋತ್ರಹವಿಸ್ಸನ್ನು ಯಜಮಾನನು ತಿನ್ನಲೇಬೇಕು. ಅಗ್ನಿಹೋತ್ರಹೋಮವನ್ನು ಮಾಡುತ್ತಿರುವ ಸಮಯದಲ್ಲಿ ನಾನಾವಿಧವಾದ ಅಸಂಖ್ಯಾಕವಾದ ಪ್ರಾಯಶ್ಚಿತ್ತಗಳನ್ನು ಮಾಡುವ ಸಂಭವವು ಬರುತ್ತದೆ. ಒಂದೊಂದು ಪ್ರಾಯಶ್ಚಿತ್ತಗಳನ್ನು ಮಾಡುತ್ತಿರುವ ಸಮಯದಲ್ಲಿಯೂ ಅಲ್ಲಲ್ಲಿ ವಿಹಿತವಾದ ಚರುಗಳ ಶೇಷವನ್ನೂ ಪುರೋಡಾಶಗಳ ಶೇಷವನ್ನೂ ಯಜಮಾನನೂ ಋತ್ವಿಕ್ಕುಗಳೂ ತಿನ್ನಬೇಕಾದ ಸಂಭವವು ಬರುತ್ತದೆ. ಇಡಾಭಕ್ಷಣವನ್ನೂ ಪ್ರಾಯಶ್ಚಿತ್ತಭಕ್ಷಣವನ್ನೂ ಮಾಡಬೇಕಾದ ಸಂಭವವು ಬರುತ್ತದೆ. ಇದರಿಂದ ಏಕಾದಶೀದಿನದಲ್ಲಿ ಅನೇಕ ಸಲ ಪುರೋಡಾಶವನ್ನು ತಿನ್ನುವ ಸಂಭವವು ಬರುತ್ತದೆ. ಇದರಿಂದ ಏಕಾದಶೀ ವ್ರತಭಂಗವೆಂಬ ಮಹಾಹಾನಿಯು ಏರ್ಪಡುತ್ತದೆ.

ಪುರೋಡಾಶೋಽಪಿ ವಾಮೋರು ಸಂಪ್ರಾಪ್ತೇ ಹರಿವಾಸರೇ |
ಅಭಕ್ಷ್ಯೇಣ ಸಮಃ ಪ್ರೋಕ್ತಃ ಕಿಂ ಪುನಶ್ಚಾನ್ನಸತ್ಕ್ರಿಯಾ ||

ಎಂಬ ಪಾದ್ಮಪುರಾಣವಾಕ್ಯವನ್ನು ಉಲ್ಲಂಘಿಸಿದ ದೋಷವು ಬರುತ್ತದೆ.

## ಏಕಾದಶೀದಿನದಲ್ಲಿ ಹವಿಶ್ಶೇಷವನ್ನೂ ತಿನ್ನಬಾರದು

ಅಷ್ಟೌ ತಾನ್ಯವ್ರತಘ್ನಾನಿ ಆಪೋ ಮೂಲಂ ಘೃತಂ ಪಯಃ |
ಹವಿರ್ಬ್ರಾಹ್ಮಣಕಾಮ್ಯಾ ಚ ಗುರೋರ್ವಚನಮೌಷಧಮ್ || (ಮಹಾಭಾರತವಾಕ್ಯ)

"(1) ನೀರು (2) ಗೆಡ್ಡೆಗಳು (3) ತುಪ್ಪ (4) ಹಾಲು (5) ಯಜ್ಞಶೇಷವಾದ ಹವಿಸ್ಸು (6) ಬ್ರಾಹ್ಮಣರ ಪ್ರಾರ್ಥನೆ (7) ಗುರುಗಳ ಆಜ್ಞೆ (8) ಔಷಧ ಈ ಎಂಟು ಪದಾರ್ಥಗಳು ಯಾವ ವ್ರತಕ್ಕೂ ಲೋಪವನ್ನು ಕೊಡುವುದಿಲ್ಲ."

ಈ ಮಹಾಭಾರತವಾಕ್ಯದಲ್ಲಿ ಯಜ್ಞಶೇಷವಾದ ಹವಿಸ್ಸುಗಳನ್ನು ತಿಂದರೂ ಏಕಾದಶೀವ್ರತ ಮುಂತಾದ ವ್ರತಗಳಿಗೆ ಲೋಪವಿಲ್ಲವೆಂದು ಹೇಳಿದೆ. ಆದ್ದರಿಂದ ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡಿದರೂ ಹೋಮಶೇಷಭಕ್ಷಣ ಮುಂತಾದವುಗಳಿಂದ ದೋಷವು ಏರ್ಪಡುವುದಿಲ್ಲವೆಂದು ಸಿದ್ಧವಾಯಿತು. ಹಾಗಾದ ಮೇಲೆ ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡಿದ್ದರಿಂದ ಬಾಧಕವೇನು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಅಷ್ಟೌ ತಾನ್ಯವ್ರತಘ್ನಾನಿ ತಾನಿ ಘ್ನಂತಿ ಹರೇರ್ದಿನಮ್ |
ಚೂರ್ಣೋದಕೈರಯಃಪಿಂಡೈಃ ಸ್ವಮಾಂಸೈರ್ಮೃದುಲೈಸ್ತಥಾ ||
ಅಹಂ ತಾನ್ ದಂಡಯಿಷ್ಯಾಮಿ ತಾನಾನಯತ ಸೈನಿಕಾಃ || (ಯಮಸ್ಮೃತಿವಚನ)

"ಮೇಲ್ಕಂಡ ಎಂಟು ವಸ್ತುಗಳು ಏಕಾದಶೀವ್ರತವನ್ನು ಬಿಟ್ಟು ಇತರ ವ್ರತಗಳನ್ನು ಕೆಡಿಸುವುದಿಲ್ಲ. ಏಕಾದಶೀವ್ರತವನ್ನು ಕೆಡಿಸುತ್ತವೆ. ಏಕಾದಶೀದಿನದಲ್ಲಿ ಆ ಎಂಟು ವಸ್ತುಗಳು ವ್ರತಲೋಪಕರವಲ್ಲವೆಂದು ಭ್ರಾಂತರಾಗಿ ಅವುಗಳನ್ನು ಯಾರು ಸ್ವೀಕರಿಸುವರೋ ಅವರನ್ನು ನನ್ನ ಬಳಿಗೆ ಕರೆದುಕೊಂಡು ಬನ್ನಿ. ಅವರಿಗೆ ವಿಷಚೂರ್ಣಗಳಿಂದ ಮಿಶ್ರಿತವಾಗಿರುವ ಕುದಿಯುತ್ತಿರುವ ನೀರನ್ನು ಕುಡಿಸುವೆನು. ಕೆಂಡದಂತೆ ಕಾದಿರುವ ಕಬ್ಬಿಣದ ಗುಂಡುಗಳನ್ನು ನುಂಗುವಂತೆ ಮಾಡುವೆನು. ಮೃದುಮೃದುವಾದ ಅವರ ಮಾಂಸವನ್ನೇ ಅವರಿಂದ ತಿನ್ನಿಸುವೆನು. ಈ ವಿಧವಾದ ಅನೇಕಶಿಕ್ಷೆಗಳನ್ನು ಕೊಡುವೆನು." ಇದು ಯಮದೇವರು ರಾಕ್ಷಸರಂತೆ ಅತಿಭಯಂಕರವಾದ ರೂಪಗಳಿಂದ ಯುಕ್ತರಾಗಿರುವ ತಮ್ಮ ದೂತರನ್ನು ನೋಡಿ ಹೇಳಿದ ಮಾತುಗಳು.

ಗುಡೋದಕಂ ಚೇಕ್ಷುದಂಡಮಾಪೋ ಮೂಲಂ ಘೃತಂ ಪಯಃ |
ಮುದ್ಗಶ್ಚ ಕದಲೀ ಚೈವಾವ್ರತಘ್ನಸ್ತ್ವಷ್ಟಕಂ ವಿದುಃ ||
ಅಷ್ಟೌ ತಾನ್ಯವ್ರತಘ್ನಾನಿ ಯಾನಿ ಜಿಘ್ರನ್ ಹರೇರ್ದಿನೇ |
ಮಲಮೂತ್ರಪುರೀಷಾದಿಭಕ್ಷಣಂ ಕೃತವಾನಸೌ || (ವರಾಹಪುರಾಣವಚನ)

(1) "ಬೆಲ್ಲದ ಪಾನಕ (2) ಕಬ್ಬಿನ ಕೋಲು (3) ನೀರು (4) ಗೆಡ್ಡೆಗಳು (5) ತುಪ್ಪ (6) ಹಾಲು (7) ಹೆಸರು (8) ಬಾಳೆಹಣ್ಣು ಈ ಎಂಟು ಪದಾರ್ಥಗಳು ಏಕಾದಶೀವ್ರತವನ್ನು ಬಿಟ್ಟು ಉಳಿದ ಎಲ್ಲಾ ವ್ರತಗಳನ್ನೂ ಕೆಡಿಸುವುದಿಲ್ಲ. ಏಕಾದಶೀ ದಿನದಲ್ಲಿ ಈ ಎಂಟು ಪದಾರ್ಥಗಳ ಮಧ್ಯದಲ್ಲಿ ಒಂದನ್ನು ಮೂಸಿದವನೂ ಸಹ ಮಲವನ್ನೂ ಮೂತ್ರವನ್ನೂ ಅಮೇಧ್ಯ ಮುಂತಾದ ಅಶುದ್ಧಪದಾರ್ಥಗಳನ್ನೂ ಭಕ್ಷಿಸಿದವನಿಗೆ ಸಮಾನನೆನಿಸುವನು."

ಮೇಲ್ಕಂಡ ಯಮವಚನದಲ್ಲಿ ನೀರು ಮುಂತಾದ ವಸ್ತುಗಳನ್ನು ಏಕಾದಶಿಯಲ್ಲಿ ಸ್ವೀಕರಿಸುವವನಿಗೆ ಯಮಶಿಕ್ಷೆಯು ಹೇಳಲ್ಪಟ್ಟಿದೆ. ಈ ವರಾಹಪುರಾಣವಚನದಲ್ಲಿ ಈ ವಸ್ತುಗಳನ್ನು ಮೂಸಿದವನಿಗೂ ಮಲಮೂತ್ರಾದಿಭಕ್ಷಣವನ್ನು ಮಾಡಿದವನ ಸಾಮ್ಯವನ್ನು ಹೇಳುತ್ತಾ ಈ ಪದಾರ್ಥಗಳ ಭಕ್ಷಣವು ಸರ್ವಥಾ ನಿಂದ್ಯವೆಂದು ಕೈಮುತ್ಯನ್ಯಾಯದಿಂದ ತಿಳಿಸಿರುತ್ತದೆ. ಆದ್ದರಿಂದ ಅಗ್ನಿಹೋತ್ರಹೋಮಶೇಷಭಕ್ಷಣವೂ ನಿಂದ್ಯವೆಂದು ಹೇಳಿದಂತಾಯಿತು. ಆದ್ದರಿಂದಲೇ ಏಕಾದಶೀದಿನದಲ್ಲಿ ಅಗ್ನಿಹೋತ್ರ ಹೋಮವನ್ನು ಸರ್ವಥಾ ಮಾಡಬಾರದು.

### ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು, ಅದನ್ನು ಬಿಟ್ಟದ್ದಕ್ಕೆ ಪ್ರಾಯಶ್ಚಿತ್ತವನ್ನೂ ಮಾಡಬೇಕಾಗಿಲ್ಲ

ಇಲ್ಲಿ ಇನ್ನೊಂದು ಆಕ್ಷೇಪವು ಬರುತ್ತದೆ. "ಚತುರಾತ್ರಮಹೂಯಮಾನೋಽಗ್ನಿರ್ಲೌಕಿಕಃ ಸಂಪದ್ಯತೇ" ಮುಂತಾದ ವಾಕ್ಯಗಳಲ್ಲಿ ಅಗ್ನಿಹೋತ್ರವನ್ನು ಬಿಟ್ಟವನಿಗೆ ಪ್ರಾಯಶ್ಚಿತ್ತವು ಹೇಳಲ್ಪಟ್ಟಿದೆ. ನಾವು ಏಕಾದಶೀದಿನದಲ್ಲಿ ಅಗ್ನಿ ಹೋತ್ರಹೋಮವನ್ನು ಮಾಡುವುದಿಲ್ಲ. ಅದನ್ನು ಅಂದು ಮಾಡದಿರುವುದಕ್ಕೆ ಪ್ರಾಯಶ್ಚಿತ್ತವನ್ನೂ ಮಾಡುವುದಿಲ್ಲ. ಇದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ತಸ್ಮಾದ್ಯಸ್ಯೈವಂ ವಿದುಷಃ ಉತ್ಕೈಕಾಹಮುತ ದ್ವ್ಯಹಂ ನ ಜುಹ್ವತಿ ಹುತಮೇವಾಸ್ಯ ಭವತಿ. ಅಸೌ ಹ್ಯಾದಿತ್ಯೋಽಗ್ನಿಹೋತ್ರಮಿತಿ.

"ಆದಿತ್ಯಶಬ್ದವಾಚ್ಯನಾದವನು ನಾರಾಯಣನೆಂದು ತಿಳಿಯುವವನು ಒಂದು ದಿನ ಅಥವಾ ಎರಡು ದಿನಗಳಲ್ಲಿ ಅಗ್ನಿಹೋತ್ರಹೋಮವನ್ನು ಮಾಡದಿದ್ದರೂ ಅಗ್ನಿಹೋತ್ರಹೋಮವನ್ನು ಮಾಡಿದವನಿಗೆ ಸಮಾನನೆನಿಸುವನು."

ಈ ಶ್ರುತಿವಾಕ್ಯದಲ್ಲಿ ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡದಿದ್ದರೂ ನಾರಾಯಣನೇ ಅಗ್ನಿಹೋತ್ರಹೋಮದಲ್ಲಿ ಪೂಜ್ಯನೆಂದು ತಿಳಿದುದರಿಂದಲೇ ಹೋಮದ ಫಲವನ್ನು ಹೊಂದುವನು ಎಂದು ಹೇಳಿರುತ್ತದೆ. ಆದ್ದರಿಂದ ಏಕಾದಶೀದಿನದಲ್ಲಿ ಅಗ್ನಿಹೋತ್ರಹೋಮವನ್ನು ಮಾಡಕೂಡದೆಂದೂ ಅದನ್ನು ಮಾಡದಿದ್ದರೂ ಅದರ ಫಲವು ಬರುತ್ತದೆಯೆಂದೂ ಆದ್ದರಿಂದಲೇ ಅಂದು ಅಗ್ನಿಹೋತ್ರವನ್ನು ಮಾಡದವನು ಪ್ರಾಯಶ್ಚಿತ್ತವನ್ನು ಮಾಡಬೇಕಾಗಿಲ್ಲವೆಂದೂ ಹೇಳಿದಂತಾಯಿತು.

### ವೇದಾಭ್ಯಾಸ

ದ್ವಿತೀಯೇ ಚ ತಥಾ ಭಾಗೇ ವೇದಾಭ್ಯಾಸೋ ವಿಧೀಯತೇ |
ವೇದಸ್ವೀಕರಣಂ ಪೂರ್ವಂ ವಿಚಾರೋಽಭ್ಯಸನಂ ಜಪಃ ||
ತದ್ದಾನಂ ಚೈವ ಶಿಷ್ಯೇಭ್ಯೋ ವೇದಾಭ್ಯಾಸೋ ಹಿ ಪಂಚಧಾ |
ಸಮಿತ್ಪುಷ್ಪಕುಶಾದೀನಾಂ ಸ ಕಾಲಃ ಪರಿಕೀರ್ತಿತಃ ||

"ಸೂರ್ಯೋದಯದಿಂದ ಸೂರ್ಯಾಸ್ತದ ವರೆಗಿರುವ ಕಾಲವು ಹಗಲೆನಿಸುತ್ತದೆ. ಈ ಹಗಲಿನ ಕಾಲವನ್ನು ಎಂಟು ಭಾಗವಾಗಿ ವಿಂಗಡಿಸಬೇಕು. ಆ ಎಂಟು ಭಾಗಗಳಲ್ಲಿ ಎರಡನೆಯ ಭಾಗವು ಅಂದರೆ ಸುಮಾರು ಏಳುವರೆ ಗಂಟೆಗಳಿಂದ ಒಂಭತ್ತು ಗಂಟೆಗಳವರೆಗಿನ ಕಾಲವು ವೇದಾಭ್ಯಾಸಕ್ಕೂ ಸಮಿತ್ತುಗಳು ಪುಷ್ಪಗಳು ದರ್ಭೆ ಮುಂತಾದವುಗಳನ್ನು ಸಂಗ್ರಹಿಸುವುದಕ್ಕೂ ಉಪಯುಕ್ತವಾದ ಕಾಲವೆನಿಸುತ್ತದೆ. (1) ವೇದವನ್ನು ಗುರುಗಳ ಮುಖದಿಂದ ಅಧ್ಯಯನ ಮಾಡುವುದು. (2) ವೇದಾರ್ಥವಿಚಾರವನ್ನು ಮಾಡುವುದು. (3) ಪುನಃ ಪುನಃ ಅಭ್ಯಾಸವನ್ನು ಮಾಡುವುದು. (4) ವೇದೋಕ್ತಮಂತ್ರಗಳನ್ನು ಜಪಿಸುವುದು. (5) ಶಿಷ್ಯರಿಗೆ ವೇದಗಳನ್ನು ಉಪದೇಶಿಸುವುದು ಹೀಗೆ ವೇದಾಭ್ಯಾಸವು ಐದು ವಿಧವಾಗಿದೆ."

वेदाभ्यासं ततः कुर्यात्प्रयत्नाद्भक्तितो द्विजः ।
जपेदध्यापयेच्छिष्यान् धारयेद्वै विचारयेत् ॥
अपेक्षेत च शास्त्राणि धर्मादीनि द्विजोत्तमः । (कूर्मपुराणवचन)

"ಬೆಳಿಗ್ಗೆ ಸ್ನಾನ, ಸಂಧ್ಯಾವಂದನ ಮುಂತಾದ ಎಲ್ಲಾ ಕಾರ್ಯಗಳನ್ನೂ ಮುಗಿಸಬೇಕು. ಶ್ರೀಹರಿಯಲ್ಲಿಯೂ ಗುರುಗಳಲ್ಲಿಯೂ ಭಕ್ತಿಯಿಂದ ಪ್ರಯತ್ನಪೂರ್ವಕವಾಗಿ ವೇದಾಭ್ಯಾಸವನ್ನು ಮಾಡಬೇಕು. (1) ವೇದೋಕ್ತಮಂತ್ರಗಳನ್ನು ಜಪಿಸಬೇಕು. (2) ಶಿಷ್ಯರಿಗೆ ಪಾಠವನ್ನು ಹೇಳಬೇಕು. (3) ಶಾಸ್ತ್ರಾರ್ಥವಿಚಾರವನ್ನು ಮಾಡಬೇಕು. (4) ತಿಳಿದ ವೇದಗಳನ್ನೂ ವೇದಾರ್ಥಗಳನ್ನೂ ಮರೆಯದಂತೆ ಯಾವಾಗಲೂ ಮನಸ್ಸಿನಲ್ಲಿ ನಿಲ್ಲಿಸಬೇಕು. (5) ಧರ್ಮಶಾಸ್ತ್ರ ಮುಂತಾದ ತಾರಕಗಳಾದ ಶಾಸ್ತ್ರಗಳನ್ನೇ ಬಯಸಬೇಕು. ಇತರ ಶಾಸ್ತ್ರಗಳನ್ನು ಬಯಸಬಾರದು."

बुद्धिवृद्धिकराण्याशु धर्म्याणि विहितानि च ।
नित्यं शास्त्राण्यपेक्षेत नियमांश्चैव वैदिकान् ॥ (ಮನುವಿನ ವಚನ)

"ನಿತ್ಯದಲ್ಲಿಯೂ ಶಾಸ್ತ್ರಗಳನ್ನು ಬಯಸಿ ಓದಬೇಕು. ಆ ಶಾಸ್ತ್ರಗಳು ಬುದ್ಧಿಯನ್ನು ಹೆಚ್ಚಿಸುವ ಶಾಸ್ತ್ರಗಳಾಗಬೇಕು. ಧರ್ಮಗಳನ್ನು ತಿಳಿಸುತ್ತಿರಬೇಕು. ತನಗೆ ವಿಹಿತವಾಗಿರಬೇಕು. ಅದರಂತೆಯೇ ವೇದಗಳಲ್ಲಿ ಹೇಳಿರುವ ನಿಯಮಗಳನ್ನೂ ಆಸೆಯಿಂದ ಅನುಷ್ಠಿಸಬೇಕು."

कुर्वीत तत्त्वविद्याया व्याख्यां शृण्वीत वाऽथवा ।
अथवा वेदशिरसां भाष्याणां भारतादिनाम् ॥
वैष्णवानां निर्णयत्वात् पूर्वोक्तानां विशेषतः ।
ब्रह्मचारी ह्यधीयातु वेदादीन् शक्तते यदि ॥
शृण्वीत परविद्यां च नान्यत्किंचित्समभ्यसेत् ।
वीक्ष्य संधिं हरिं चाद्यगुरुं स्वगुरुमेव च ॥
द्विचतुर्विंशदथवा चतुर्विंशत्त्रदर्धकम् ।
नमेदेतान् तदर्धं वा तदर्धार्धं सदा नमेतम् ॥
शिष्यो गुरुश्च भूमौ हि पादौ स्थाप्य समारभेत् ।
जान्वोरन्तस्थबाहुभ्यां स्वं गृह्यग्रंथमंजसा ॥
स्थितं कवलिकादौ हि तथान्तेऽप्येवमेव हि ।
शृण्वीत शास्त्रमेवेत्थमिति शास्त्रानुशासनम् ॥

"ಶ್ರೀಹರಿ ಮುಂತಾದ ಸಕಲತತ್ತ್ವಗಳ ನಿಜಸ್ವರೂಪಗಳನ್ನು ತಿಳಿಸುವ ಶಾಸ್ತ್ರಗಳ ವ್ಯಾಖ್ಯಾನಗಳನ್ನು ಗುರುಗಳ ಮುಖದಿಂದ ಶ್ರವಣಮಾಡಬೇಕು. ಅಥವಾ ಉಪನಿಷತ್ತುಗಳನ್ನೂ ಅವುಗಳ ಮತ್ತು ಬ್ರಹ್ಮಸೂತ್ರಾದಿಗಳ ಭಾಷ್ಯಗಳನ್ನೂ, ಭಾಷ್ಯಾದಿಗಳ ಮತ್ತು ವಿಷ್ಣುಸರ್ವೋತ್ತಮತ್ವವನ್ನು ತಿಳಿಸುವ ಭಾರತ ಮುಂತಾದ ಹಿಂದೆ ಹೇಳಿರುವ ಶಾಸ್ತ್ರಗಳ ನಿರ್ಣಾಯಕವಾದ ವ್ಯಾಖ್ಯಾನಗಳನ್ನೂ ಬ್ರಹ್ಮಚಾರಿಯು ಓದಬೇಕು. ವಿಷ್ಣುಸರ್ವೋತ್ತಮತ್ವ ಜ್ಞಾನಕ್ಕೆ ವಿರುದ್ಧವಾಗಿರುವ ಯಾವ ಶಾಸ್ತ್ರವನ್ನೂ ಓದಕೂಡದು."

"ಅಧ್ಯಯನವನ್ನು ಮಾಡುವ ಸಂದರ್ಭವು ಬಂದಾಗ ಆರಂಭದಲ್ಲಿ ನಾರಾಯಣನನ್ನೂ ಆದಿಗುರುಗಳಾದ

ಶ್ರೀಮಧ್ವಾಚಾರ್ಯರನ್ನೂ ತನ್ನ ವಿದ್ಯಾಗುರುಗಳನ್ನೂ ನಮಸ್ಕರಿಸಬೇಕು. ತನಗಿಂತ ಹಿಂದಿನ 48 ಗುರುಗಳು ಅಥವಾ 24 ಗುರುಗಳು ಅಥವಾ 12 ಗುರುಗಳು ಅಥವಾ 6 ಗುರುಗಳು ಅಥವಾ 3 ಗುರುಗಳು ಅಥವಾ ತನ್ನ ಗುರುಗಳು ಇವರುಗಳನ್ನು ವಿದ್ಯಾರಂಭಕಾಲದಲ್ಲಿ ಯಾವಾಗಲೂ ನಮಸ್ಕರಿಸಬೇಕು. ವಿದ್ಯಾಭ್ಯಾಸವು ಮುಗಿದ ಮೇಲೆಯೂ ನಮಸ್ಕರಿಸಬೇಕು. ಶಿಷ್ಯನೂ ಗುರುವೂ ವಿದ್ಯಾಭ್ಯಾಸಕಾಲದಲ್ಲಿ ನೆಲದಲ್ಲಿ ಪಾದಗಳು ತಗಲುವಂತೆ ಕುಳಿತುಕೊಳ್ಳಬೇಕು. ಎರಡು ಕೈಗಳನ್ನೂ ಮೊಣಕಾಲುಗಳ ಮಧ್ಯದಲ್ಲಿಟ್ಟುಕೊಳ್ಳಬೇಕು. ಓಲೆಗರಿಯ ಪುಸ್ತಕವನ್ನು ತೆಗೆದುಕೊಳ್ಳಬೇಕು. ತಮ್ಮ ತಮ್ಮ ಗೃಹ್ಯಸೂತ್ರಗ್ರಂಥಗಳನ್ನು ಅವಶ್ಯವಾಗಿ ಓದಬೇಕು. ಶಾಸ್ತ್ರಗ್ರಂಥಗಳನ್ನೇ ಓದಬೇಕು. ಇತರಗ್ರಂಥಗಳನ್ನು ಓದಬಾರದು. ಇದು ಶಾಸ್ತ್ರದ ಕಟ್ಟಳೆ."

### ತುಲಸಿ ಮತ್ತು ಪುಷ್ಪಗಳನ್ನು ಕೊಯ್ಯುವುದು

ತತಃ ಶುಕ್ಲಾಂಬರೋ ಮೌನೀ ಪಾಣೀ ಪ್ರಕ್ಷಾಲ್ಯ ವಾರಿಣಾ |
ಪಾತ್ರೇ ಪುಷ್ಪಾಣಿ ಗೃಹ್ಣೀಯಾದ್ವೇತ್ರಜೇ ತೃಣಜೇಽಥವಾ ||
ತದ್ವನಾಭಿಮುಖೋ ಭೂತ್ವಾ ಪ್ರಾರ್ಥಯೇದ್ವನದೇವತಾಃ |
ನಮಸ್ತೇ ಕುಸುಮಾಧಾರೇ ನಮಸ್ತೇ ಕಮಲಾಶಯೇ ||
ಪುಷ್ಪಾಣಿ ವಿಷ್ಣುಪೂಜಾರ್ಥಮಾಹರಿಷ್ಯೇ ತವಾಜ್ಞಯಾ |
ಇತ್ಯುಕ್ತ್ವಾ ತತ್ರ ವಿಶ್ಯಾಥ ಕುಸುಮಾನ್ಯಾಹರೇದ್ಬುಧಃ ||
ಕರವೀರಂ ಜಾತಿಕುಸುಮಂ ಚಂಪಕಾನ್ವಂಗುಲಾನ್ (ವಕುಲಾನ್) ತಥಾ |
ಮಂದಾರಪಾರಿಜಾತಾದೀನ್ಪಾಟಲಾಶೋಕಪೂರ್ವಕಾನ್ ||
ಸಾತ್ವಿಕಂ ಶುಕ್ಲಪುಷ್ಪಾಣಿ ರಾಜಸಂ ರಕ್ತಪುಷ್ಪಕಮ್ |
ತಾಮಸಂ ಕೃಷ್ಣಪುಷ್ಪಾಣಿ ವರ್ಜನೀಯಂ ವಿದೋ ವಿದುಃ ||
ಅಗ್ರಾಹ್ಯಾಣಿ ತಥಾಽಸನ್ನಂ ಮುಕುಲಂ ಪತಿತಂ ತಥಾ |
ವಿವರ್ಣಂ ವಸ್ತ್ರಬದ್ಧಂ ಚ ದುರ್ಜನಸ್ಪೃಷ್ಟಮೇವ ಚ ||
ಆಘ್ರಾತಂ ಚ ಪದಾ ಸ್ಪೃಷ್ಟಂ ವಿಗಂಧಂ ಚ ತಥೈವ ಚ |
ಅತಿಪಕ್ವಮಪಕ್ವಂ ಚ ಸ್ತ್ರೀಶೂದ್ರಾದಿಹೃತಂ ತ್ಯಜೇತ್ ||

"ಪ್ರಾತಃಕಾಲಿಕವಾದ ಸಂಧ್ಯಾವಂದನ ಮುಂತಾದ ಕರ್ಮಗಳನ್ನು ಮಾಡಿ ಮುಗಿಸಬೇಕು. ವೇದಾಭ್ಯಾಸವನ್ನೂ ಮುಗಿಸಬೇಕು. ಆ ಮೇಲೆ ಬಿಳಿಬಣ್ಣದ ಶುಭ್ರವಾದ ಬಟ್ಟೆಗಳನ್ನು ಧರಿಸಬೇಕು. ಮೌನವ್ರತವನ್ನು ಧರಿಸಬೇಕು. ಎರಡು ಕೈಗಳನ್ನೂ ನೀರಿನಿಂದ ತೊಳೆದುಕೊಳ್ಳಬೇಕು. ಬೆತ್ತದಿಂದ ಅಥವಾ ಹುಲ್ಲುಗಳಿಂದ ನಿರ್ಮಿತವಾದ ಪಾತ್ರೆಯನ್ನು ಧರಿಸಬೇಕು. ಪುಷ್ಪವನಕ್ಕೆ ಅಭಿಮುಖವಾಗಿ ನಿಲ್ಲಬೇಕು. ಎರಡು ಕೈಗಳನ್ನೂ ಜೋಡಿಸಿಕೊಂಡು ವನದೇವತೆಗಳನ್ನು ಪ್ರಾರ್ಥಿಸಬೇಕು "ಪುಷ್ಪಗಳಿಗೆ ಆಧಾರಳಾಗಿಯೂ ಕಮಲಪುಷ್ಪಗಳಿಗೆ ಆಧಾರಳಾಗಿಯೂ ಇರುವ ವನದೇವತೆಯೇ ನಿನ್ನನ್ನು ಪುನಃ ಪುನಃ ನಮಸ್ಕರಿಸುವೆನು. ವಿಷ್ಣುಪೂಜೆಗಾಗಿ ಪುಷ್ಪಗಳನ್ನು ಸ್ವೀಕರಿಸುವೆನು" ಎಂದು ಪ್ರಾರ್ಥಿಸಬೇಕು. ವನದೊಳಗೆ ಪ್ರವೇಶಿಸಬೇಕು. ಕರವೀರ, ಜಾಜಿ, ಸಂಪಿಗೆ, ವಂಗುಲ, ವಕುಲ, ಮಂದಾರ, ಪಾರಿಜಾತ, ಪಾಟಲ, ಅಶೋಕ ಮುಂತಾದ ಪುಷ್ಪಗಳನ್ನು ಕೊಯ್ಯಬೇಕು. ಬಿಳಿಯಪುಷ್ಪಗಳು ಸಾತ್ವಿಕಪುಷ್ಪಗಳು, ಕೆಂಪುಪುಷ್ಪಗಳು, ರಾಜಸಪುಷ್ಪಗಳು, ಕಪ್ಪುಪುಷ್ಪಗಳು ತಾಮಸಪುಷ್ಪಗಳು. ಇವುಗಳಲ್ಲಿ ರಾಜಸಪುಷ್ಪಗಳನ್ನೂ ತಾಮಸಪುಷ್ಪಗಳನ್ನೂ ಸ್ವೀಕರಿಸಕೂಡದು. ಸಾತ್ವಿಕಪುಷ್ಪಗಳನ್ನೇ ಸ್ವೀಕರಿಸಬೇಕು. ಮನೆಯ ಸಮೀಪದಲ್ಲಿರುವ ಪುಷ್ಪಗಳನ್ನೂ, ಮೊಗ್ಗಾಗಿರುವ ಪುಷ್ಪಗಳನ್ನೂ, ಮರದಿಂದ ಕೆಳಗೆ ಬಿದ್ದಿರುವ ಪುಷ್ಪಗಳನ್ನೂ, ಬಾಡಿದ

ಪುಷ್ಪಗಳನ್ನೂ, ವಸ್ತ್ರದಿಂದ ಕಟ್ಟಿತಂದಿರುವ ಪುಷ್ಪಗಳನ್ನೂ, ದುರ್ಜನರಿಂದ ಮುಟ್ಟಲ್ಪಟ್ಟ ಪುಷ್ಪಗಳನ್ನೂ, ಮೂಸಿದ ಪುಷ್ಪಗಳನ್ನೂ, ಕಾಲಿನಿಂದ ಮುಟ್ಟಲ್ಪಟ್ಟ ಪುಷ್ಪಗಳನ್ನೂ, ಪರಿಮಳವಿಲ್ಲದಿರುವ ಪುಷ್ಪಗಳನ್ನೂ, ತುಂಬಾ ಅಧಿಕವಾಗಿ ಪಕ್ವವಾಗಿಯುವ ಪುಷ್ಪಗಳನ್ನೂ, ಅಪಕ್ವವಾದ ಪುಷ್ಪಗಳನ್ನೂ, ಸ್ತ್ರೀಯರು ಮತ್ತು ಶೂದ್ರಾದಿಗಳಿಂದ ತರಲ್ಪಟ್ಟ ಪುಷ್ಪಗಳನ್ನೂ ಬಿಡಬೇಕು."

ತುಲಸ್ಯುತ್ಪಲಜಾತಿಶ್ಚ ಕೇತಕೀ ಕರವೀರಕಃ |
ಮಾಲತೀ ಮಾಧವೀ ಚೈವ ಮಲ್ಲಿಕಾ ಚಾಂಬುಜಾನಿ ಚ ||
ತದಾ ಯೋಗ್ಯಾನಿ ಪುಷ್ಪಾಣಿ ವಿಷ್ಣೋರಾರಾಧನಾದಿಕೇ || (ವಿಷ್ಣುತೀರ್ಥೀಯವಚನ)

"ತುಲಸೀ, ಕನ್ನೈದಿಲೆ, ಜಾಜಿ, ಕೇತಕೀ, ಕರವೀರಪುಷ್ಪ, ಮಾಲತೀಪುಷ್ಪ, ಮಾಧವೀಪುಷ್ಪ, ಮಲ್ಲಿಗೆಪುಷ್ಪ, ಕಮಲಪುಷ್ಪ ಇವುಗಳು ಶ್ರೀವಿಷ್ಣುವನ್ನು ಆರಾಧಿಸುವುದಕ್ಕೆ ಯೋಗ್ಯವಾದ ಪುಷ್ಪಗಳು."

ಬ್ರಹ್ಮೋವಾಚ -

ಸಮಾರಾಧ್ಯೋ ಹರಿಃ ಪುಷ್ಪೈಃ ಕೈಃ ಪುಷ್ಪೈರ್ವಾ ಹವಿಷ್ಷು ಚ |
ಫಲಮೂಲಾನಿ ಚಾನ್ಯಾನಿ ಕಾನಿ ಯೋಗ್ಯಾನಿ ಕಥ್ಯತಾಮ್ ||

ಶ್ರೀಭಗವಾನುವಾಚ -

ಪುಷ್ಪಾಣಿ ನಂದನವನಾದಾರಾಮಾದಾತ್ಮನೋಽಪಿ ವಾ |
ಅರಣ್ಯಾದ್ವಾ ಗೃಹಾದ್ವಾಪಿ ವಿಕ್ರೀತಾನ್ಯಾಪಣಸ್ಥಲಾತ್ ||
ಅಯಾಚಿತಾನಿ ಲಬ್ಧಾನಿ ಯದ್ವಾ ಕಮಲಸಂಭವ |
ಪೂರ್ವಪೂರ್ವೋದಿತಾಲಾಭೇ ಗ್ರಾಹ್ಯಮುತ್ತರಮುತ್ತರಮ್ ||
ನ್ಯಾಯೇನ ಸ್ವಾರ್ಜಿತಾನ್ಯಾನಿ ದೇವತಾರ್ಥಾನಿ ವಾ ಪುನಃ | (ಪಾದ್ಮಸಂಹಿತಾ)

"ಶ್ರೀಹರಿಯನ್ನು ಯಾವ ಪುಷ್ಪಗಳಿಂದ ಆರಾಧಿಸಬೇಕು? ನೈವೇದ್ಯವಸ್ತುಗಳಲ್ಲಿಯೂ ಫಲವಸ್ತುಗಳಲ್ಲಿಯೂ ಗೆಡ್ಡೆ ಗೆಣಸುಗಳಲ್ಲಿಯೂ ಇತರವಸ್ತುಗಳಲ್ಲಿಯೂ ಯಾವುವು ಯೋಗ್ಯವಾದವುಗಳು?" ಈ ಪ್ರಶ್ನೆಗೆ ಉತ್ತರವನ್ನು ಕೊಡಬೇಕು. ಎಂದು ಬ್ರಹ್ಮದೇವನು ಪ್ರಶ್ನಿಸಿದರು. ಅದಕ್ಕೆ ಶ್ರೀಹರಿಯು ಉತ್ತರವನ್ನು ಕೊಟ್ಟಿರುವನು. ಅದನ್ನು ಈಗ ತಿಳಿಸುತ್ತೇವೆ. (1) ನಂದನವನ, (2) ತನ್ನ ಉದ್ಯಾನವನ, (3) ಕಾಡು, (4) ತನ್ನ ಮನೆ, (5) ಅಂಗಡಿ, (6) ಬೇಡದೆ ತಾನಾಗಿಯೇ ಬಂದಿರುವುದು. ಈ ಆರು ವಿಧದಿಂದ ಪುಷ್ಪಗಳನ್ನು ಸಂಗ್ರಹಿಸಬೇಕು. ಇವುಗಳಲ್ಲಿ ಮೊದಲನೆಯ ಮೊದಲನೆಯ ರೀತಿಯಿಂದ ಲಬ್ಧವಾಗಿರುವ ಪುಷ್ಪಗಳು ಉತ್ತಮವೆನಿಸುತ್ತವೆ. ನ್ಯಾಯದಿಂದ ತನ್ನಿಂದ ಸಂಪಾದಿಸಲ್ಪಟ್ಟ ಪುಷ್ಪಗಳೂ ದೇವತೆಗಳಿಗಾಗಿಯೇ ಬಿಡಲ್ಪಟ್ಟ ಪುಷ್ಪಗಳೂ ಉತ್ತಮವೆನಿಸುತ್ತವೆ.

ಅಥ ವಕ್ಷ್ಯಾಮಿ ಪುಷ್ಪಾಣಿ ಗ್ರಾಹ್ಯಾಣ್ಯನ್ಯಾನಿ ಚ ದ್ವಿಜ |
ಪಾತ್ರೇ ಪುಷ್ಪಾಣಿ ಗೃಹ್ಣೀಯಾತ್ಪಾಣಿಂ ಪ್ರಕ್ಷಾಲ್ಯ ವಾಗ್ಯತಃ |
ವಿಧಾಯ ಸ್ಥಾಪಯೇದ್ವಿದ್ವಾನ್ ಪಾತ್ರೇ ಪುಷ್ಪಾಣಿ ವೈ ಬುಧಃ || (ಕಪಿಂಜಲಸಂಹಿತಾ)

"ಓ ಬ್ರಾಹ್ಮಣಶ್ರೇಷ್ಠನೇ, ಗ್ರಾಹ್ಯವಾದ ಪುಷ್ಪಗಳನ್ನೂ ಅಗ್ರಾಹ್ಯವಾದ ಪುಷ್ಪಗಳನ್ನೂ ಹೇಳುವೆನು. ಮೌನವನ್ನು ಧರಿಸಿ ಕೈಗಳನ್ನು ತೊಳೆದುಕೊಂಡು ಪಾತ್ರದಲ್ಲಿ ಪುಷ್ಪಗಳನ್ನು ಸಂಗ್ರಹಿಸಬೇಕು. ಆ ಪುಷ್ಪಗಳನ್ನು ಆ ಪಾತ್ರೆಯಲ್ಲಿಯೇ ಇಡಬೇಕು."

ಸ್ವಾರಾಮೇ ಚೋತ್ತಮಂ ವಿದ್ಯಾದಾರಣ್ಯಂ ಮಧ್ಯಮಂ ಭವೇತ್ || (ಕಪಿಂಜಲಸಂಹಿತಾ)

"ತನ್ನ ತೋಟದಲ್ಲಿ ಬೆಳೆದ ಪುಷ್ಪಗಳು ಉತ್ತಮವೆನಿಸುತ್ತವೆ. ಕಾಡಿನಲ್ಲಿ ಬೆಳೆದ ಪುಷ್ಪಗಳು ಮಧ್ಯಮವೆನಿಸುತ್ತವೆ."

ಯುಧಿಷ್ಠಿರ ಉವಾಚ -

ತ್ವತ್ಪ್ರಿಯಾಣಿ ಚ ಪುಷ್ಪಾಣಿ ತ್ವದಧಿಷ್ಠಾನಿ ಕೇಶವ |
ಸರ್ವಾಣ್ಯಾಚಕ್ಷ್ವ ದೇವೇಶ ತ್ವದ್ಭಕ್ತಸ್ಯ ಮಮಾನಘ ||

ಶ್ರೀಭಗವಾನುವಾಚ -

ಶೃಣುಷ್ವಾವಹಿತೋ ರಾಜನ್ ಪುಷ್ಪಾಣಿ ಪ್ರೀತಿದಾನಿ ಮೇ | (ಆಶ್ವಮೇಧಿಕ ಪರ್ವ 101 ಅಧ್ಯಾಯ)

"ಧರ್ಮರಾಜನು ಪ್ರಶ್ನಿಸುತ್ತಾನೆ". "ಹೇ ಕೇಶವನೇ, ನಿನಗೆ ಪ್ರಿಯವಾದ ಮತ್ತು ನಿನ್ನ ವಿಶೇಷಸನ್ನಿಧಾನಕ್ಕೆ ಪಾತ್ರವಾಗಿರುವ ಪುಷ್ಪಗಳನ್ನು ನಿನ್ನ ಭಕ್ತನಾದ ನನಗೆ ಹೇಳು" ಈ ಪ್ರಶ್ನೆಗೆ ಶ್ರೀಕೃಷ್ಣದೇವನು ಆ ಅಧ್ಯಾಯ ಮುಗಿಯುವವರೆಗೂ ಉತ್ತರವನ್ನು ಕೊಟ್ಟಿರುವನು.

ನಾರದ ಉವಾಚ -

ಕಾನ್ಯಭೀಷ್ಟಾನಿ ಪುಷ್ಪಾಣಿ ದೇವದೇವಸ್ಯ ಚಕ್ರಿಣಃ |
ಯೈರರ್ಚಿತೋ ಹರಿರ್ನೄಣಾಂ ದಿವ್ಯಾನ್ ಭೋಗಾನ್ ಪ್ರಯಚ್ಛತಿ ||
ವರ್ಜನೀಯಾನಿ ಕಾನಿ ಸ್ಯುರ್ಯಾನಿ ನಾರ್ಹಂತಿ ಕೇಶವೇ |
ಫಲಾಫಲಮಶೇಷಂ ತು ಪುಷ್ಪಾಣಾಂ ವದ ಸುವ್ರತ ||

ಬ್ರಹ್ಮೋವಾಚ -

ಶೃಣುಷ್ವೈಕಮನಾಃ ಪುತ್ರ ಪುಷ್ಪಾಣಾಂ ಗುಣವಿಸ್ತರಮ್ |
ಯೈರರ್ಚಿತೋ ಹರಿರ್ಭೋಗಾನ್ಮುಕ್ತಿಂ ಚೈವ ಪ್ರಯಚ್ಛತಿ || (ಪಾದ್ಮಪುರಾಣವಚನ)

"ದೇವದೇವನಾದ ಶ್ರೀಹರಿಗೆ ಇಷ್ಟವಾಗಿರುವ ಪುಷ್ಪಗಳು ಯಾವುವು? ಅನಿಷ್ಟವಾದ ಪುಷ್ಪಗಳು ಯಾವುವು? ಅವುಗಳ ಫಲಗಳನ್ನೂ ಅನಿಷ್ಟಫಲಗಳನ್ನೂ ಹೇಳು" ಇದು ನಾರದರ ಪ್ರಶ್ನೆ. "ಪುಷ್ಪಗಳ ಗುಣಗಳನ್ನು ವಿಸ್ತಾರವಾಗಿ ಕೇಳು" ಎಂದು ಹೇಳಿ ಆ ಅಧ್ಯಾಯವು ಮುಗಿಯುವವರೆಗೂ ಪುಷ್ಪಗಳ ಗುಣಗಳನ್ನು ವಿಸ್ತಾರವಾಗಿ ಬ್ರಹ್ಮದೇವರು ಹೇಳಿರುವರು.

ನಾಶುಕ್ಲೈಃ ಪೂಜಯೇದ್ವಿಷ್ಣುಂ ಕುಸುಮೈರಸುಗಂಧಿಭಿಃ |
ನ ವಿಶೀರ್ಣದಲೈರೇವಂ ನಾಶುಭೈರವಿಕಾಸಿಭಿಃ ||
ಏತೈಃ ಪುಷ್ಪೈಸ್ತ್ರಿಲೋಕೇಶಮರ್ಚಯಂತಿ ಜನಾರ್ದನಮ್ |
ತೇಭ್ಯಃ ಪಾಪಭಯಂ ದುಃಖಂ ಕ್ರುದ್ಧೋ ವಿಷ್ಣುಃ ಪ್ರಯಚ್ಛತಿ || (ಪದ್ಮಪುರಾಣ)

"ಬಿಳಿಬಣ್ಣವಿಲ್ಲದ ಪುಷ್ಪಗಳಿಂದಲೂ ಸುಗಂಧವಿಲ್ಲದ ಪುಷ್ಪಗಳಿಂದಲೂ ದಳಗಳು ಶಿಥಿಲವಾದ ಪುಷ್ಪಗಳಿಂದಲೂ ಅರಳದಿರುವ ಪುಷ್ಪಗಳಿಂದಲೂ ಅಶುಭವಾದ ಪುಷ್ಪಗಳಿಂದಲೂ ತ್ರಿಲೋಕಾಧಿಪತಿಯಾದ ನಾರಾಯಣನನ್ನು ಪೂಜಿಸುವವರಿಗೆ ಕುಪಿತನಾದ ಶ್ರೀಹರಿಯು ಪಾಪಗಳ ಭಯವನ್ನೂ ದುಃಖವನ್ನೂ ಕೊಡುವನು."

ನಿರ್ಗಂಧಂ ಛಿನ್ನಪತ್ರಂ ಚ ಕೀಟಾದ್ಯುಪಹತಂ ತಥಾ |
ಆಘ್ರಾತಂ ಶಕುನಾದ್ಯೈಶ್ಚ ಸ್ವಯಂ ಚ ಪತಿತಂ ಭುವಿ ||
ಅನ್ಯಶೇಷಂ ಪರ್ಯುಷಿತಂ ವರ್ಜಯೇದ್ಯಜ್ಞಕರ್ಮಣಿ || (ವಸಿಷ್ಠರ ವಚನ)

"ಪರಿಮಳವಿಲ್ಲದ, ದಳಗಳು ತುಂಡಾಗಿರುವ, ಕ್ರಿಮಿಕೀಟಾದಿಗಳಿಂದ ಯುಕ್ತವಾದ, ಪಕ್ಷಿ ಮುಂತಾದವುಗಳಿಂದ ಕಡಿದು ತಿನ್ನಲ್ಪಟ್ಟ, ತಾನೇ ಗಿಡದಿಂದ ಕೆಳಗೆ ಬಿದ್ದಿರುವ, ನಿರ್ಮಾಲ್ಯವಾದ ಮತ್ತು ಹಳೆಯ ಪುಷ್ಪಗಳನ್ನು ಶ್ರೀಹರಿಯ ಆರಾಧನೆಗೆ ಉಪಯೋಗಿಸಕೂಡದು.

ಗಿರಿಕರ್ಣಿಕಜೈಃ ಪುಷ್ಪೈರರ್ಚಯಂತಿ ಹರಿಂ ನರಾಃ |
ತೇಷಾಂ ಕುಲಕ್ಷಯಂ ಘೋರಂ ಕುರುತೇ ಮಧುಸೂದನಃ || (ಪಾದ್ಮಪುರಾಣ)

"ಗಿರಿಕರ್ಣಿಕಾಪುಷ್ಪದಿಂದ ಶ್ರೀಹರಿಯನ್ನು ಆರಾಧಿಸಿದವರ ಕುಲವನ್ನು ಶ್ರೀಹರಿಯ ನಾಶಮಾಡುವನು."

## ಗ್ರಾಹ್ಯಪುಷ್ಪಗಳು

**ಶ್ರೀಭಗವಾನುವಾಚ -**

ಕಲ್ಪಕದ್ರುಮಸಂಜಾತಂ ಪಾರಿಜಾತಸಮುದ್ಭವಮ್ |
ಹರಿಚಂದನಸಂತಾನಮಂದಾರದ್ರುಮಸಂಭವಮ್ ||
ಸೌಗಂಧಿಕೋದ್ಭವಂ ಪುಷ್ಪಂ ಷಡೇತೇ ಸುಖದಾಯಕಾಃ |
ಪಾಲಾಶಂ ಸಪ್ತಮಂ ಪುಷ್ಪಮುಪಯುಕ್ತಾನಿ ಚಾರ್ಚಯೇತ್ ||
ನ ನಿರ್ಮಾಲ್ಯಾನಿ ದೇಯಾನಿ ಪುನಃ ಪ್ರಕ್ಷಾಲ್ಯ ವಾರಿಭಿಃ |
ಉತ್ತರೋತ್ತರಮೇಕೈಕಂ ಸಹಸ್ರಗುಣಮಿಶ್ರಿತಮ್ || (ಪಾದ್ಮಸಂಹಿತಾ)

"ಕಲ್ಪವೃಕ್ಷ, ಪಾರಿಜಾತವೃಕ್ಷ, ಹರಿಚಂದನವೃಕ್ಷ, ಸಂತಾನವೃಕ್ಷ, ಮಂದಾರವೃಕ್ಷ ಎಂಬ ಐದು ಮರಗಳ ಪುಷ್ಪಗಳೂ ಸೌಗಂಧಿಕ ಎಂಬ ಪುಷ್ಪವೂ ಈ ಆರು ಪುಷ್ಪಗಳು ಸುಖವನ್ನು ಕೊಡುತ್ತವೆ. ಪಾಲಾಶಪುಷ್ಪವು ಏಳನೆಯದು. ಕ್ರಮವಾಗಿ ಈ ಏಳು ಪುಷ್ಪಗಳು ಸಾವಿರದಷ್ಟು ಅಧಿಕವಾದ ಫಲಗಳನ್ನು ಕೊಡುತ್ತವೆ. ಶ್ರೀಹರಿಗೆ ನಿರ್ಮಾಲ್ಯಪುಷ್ಪಗಳನ್ನು ಸಮರ್ಪಿಸಕೂಡದು. ಆದರೆ ಈ ಏಳು ಪುಷ್ಪಗಳನ್ನು ನಿರ್ಮಾಲ್ಯವಾಗಿದ್ದರೂ ಪುನಃ ತೊಳೆದು ಸಮರ್ಪಿಸಬಹುದು."

ಪ್ರಾತಃ ಪದ್ಮದ್ವಯಂ ಶಸ್ತಮುತ್ಪಲತ್ರಯಮೇವ ಚ |
ಪ್ರಾತರ್ಮಧ್ಯಂದಿನೇ ಶ್ವೇತಂ ರಕ್ತಂ ಕೃಷ್ಣಂ ತಥಾ ನಿಶಿ ||
ದಿವಾಪುಷ್ಪೈರ್ದಿವಾ ಪೂಜಾ ನಿಶಾಪುಷ್ಪೈಸ್ತಥಾ ನಿಶಿ |
ಆಪತ್ಕಾಲೇ ಯಥಾಯೋಗ್ಯಮರ್ಚಯೇತ್ಪುರುಷೋತ್ತಮಮ್ ||
ಮಾಲತ್ಯಾ ಪೂಜಯೇತ್ಪ್ರಾತರ್ಮಧ್ಯಾಹ್ನೇ ಕರವೀರಕೈಃ |
ಸಾಯಾಹ್ನೇ ಜಾತಿಪುಷ್ಪೈಸ್ತು ಪ್ರದೋಷೇ ಬಕುಲೈರಪಿ ||
ಮಧ್ಯರಾತ್ರೇ ಮಲ್ಲಿಕಾಭಿರ್ಯಜೇತ ಜಲಜೈಸ್ಸದಾ |
ಪ್ರತ್ಯೂಷೇ ನಂದಿಕಾವರ್ತೈಃ ಕಾಲ ಏವಮುದಾಹೃತಃ || (ಪಾದ್ಮಸಂಹಿತಾ)

"ಪ್ರಾತಃಕಾಲದಲ್ಲಿ ಎರಡು ಕಮಲಗಳನ್ನೂ ಮೂರು ಕನ್ನೈದಿಲೆಗಳನ್ನೂ ಬಿಳಿಯಪುಷ್ಪಗಳನ್ನೂ ಮಾಲತೀಪುಷ್ಪವನ್ನೂ ಮಧ್ಯಾಹ್ನಕಾಲದಲ್ಲಿ ಕೆಂಪುಪುಷ್ಪಗಳನ್ನೂ ಕರವೀರಪುಷ್ಪವನ್ನೂ ಸಾಯಂಕಾಲದಲ್ಲಿ ಜಾಜಿಪುಷ್ಪವನ್ನೂ ಪ್ರದೋಷಕಾಲದಲ್ಲಿ ಬಕುಲಪುಷ್ಪವನ್ನೂ ಕಪ್ಪು ಬಣ್ಣದ ಪುಷ್ಪಗಳನ್ನೂ ಅರ್ಧರಾತ್ರಿಯಲ್ಲಿ ಮಲ್ಲಿಗೆಪುಷ್ಪಗಳನ್ನೂ ಕಮಲಗಳನ್ನೂ ಅರುಣೋದಯಕಾಲದಲ್ಲಿ ನಂದಿಕಾವರ್ತಪುಷ್ಪಗಳನ್ನೂ, ಹಗಲಿನಲ್ಲಿ ಹಗಲಿನಲ್ಲಿ ಹುಟ್ಟಿರುವ ಪುಷ್ಪಗಳನ್ನೂ ರಾತ್ರಿಯಲ್ಲಿ ರಾತ್ರಿಯಲ್ಲಿ ಹುಟ್ಟಿರುವ ಪುಷ್ಪಗಳನ್ನೂ ಸಮರ್ಪಿಸಬೇಕು."

ಪದ್ಮಾನಿ ಪುಷ್ಪಾಣ್ಯಾದಾಯ ಕರ್ತುಃ ಕುರ್ಯಾನ್ಮಹೋತ್ಸವಂ |
ನ ಚ ಪರ್ಯುಷಿತಾ ದೋಷಾ ನೀವಾರಾಣಾಂ ಭವೇತ್ತಥಾ ||
ನೀಪೈಶ್ಚೈವ ತಮಾಲೈಶ್ಚ ತಥಾ ದಮನಕೇಪಿ ವಾ |
ನ ಪರ್ಯುಷಿತಮೇತೈಶ್ಚ ಸದ್ಯೈವಾರಾಧಯೇದ್ಧರಿಂ || (ಪಾದ್ಮಸಂಹಿತಾ)

"ಪದ್ಮಪುಷ್ಪಗಳನ್ನು ತೆಗೆದುಕೊಂಡು ಶ್ರೀಹರಿಗೆ ಮಹೋತ್ಸವವನ್ನು ಮಾಡಿಸಬೇಕು, ನೀವಾರ, ನೀಪ, ತಮಾಲ, ದವನ ಮುಂತಾದ ಪುಷ್ಪಗಳು ಹಳಸಿದರೂ ದೋಷವಿಲ್ಲ. ಇವುಗಳಿಂದ ಯಾವಾಗಲೂ ಪೂಜಿಸಬಹುದು."

ಸರ್ವೇಷಾಮಪಿ ಪುಷ್ಪಾಣಾಂ ಸಹಸ್ರಗುಣಮುತ್ಪಲಮ್ |
ತಸ್ಮಾತ್ಪದ್ಮಂ ತಥಾ ರಾಜನ್ ತಸ್ಮಾತ್ತು ಶತಪತ್ರಕಮ್ ||
ತಸ್ಮಾತ್ಸಹಸ್ರಪತ್ರಂ ತು ಪುಂಡರೀಕಂ ತತಃ ಪರಮ್ |
ಪುಂಡರೀಕಸಹಸ್ರಾತ್ತು ತುಲಸೀ ಗುಣತೋಽಧಿಕಾ ||
ಬಕಪುಷ್ಪಂ ತತಸ್ತಸ್ಯಾಃ ಸೌವರ್ಣಂ ತು ತತೋಽಧಿಕಮ್ |
ಸೌವರ್ಣಾತ್ತು ಪ್ರಸೂನಾತ್ತು ಮತ್ಪ್ರಿಯಂ ನಾಸ್ತಿ ಪಾಂಡವ ||
ಪುಷ್ಪಾಲಾಭೇ ತುಲಸ್ಯಾಸ್ತು ಪತ್ರೈರ್ಮಾಮರ್ಚಯೇದ್ಬುಧಃ |
ಪತ್ರಾಲಾಭೇ ಶಿಫಾಭಿಸ್ತು ಶಿಫಾಲಾಭೇ ಶಿಫಾಲವೈಃ ||
ಲವಾಲಾಭೇ ಮೃದಾ ತತ್ರ ಭಕ್ತಿಮಾನರ್ಚಯೇತ ಮಾಮ್ | (ಭಾರತವಚನ)

"ಎಲ್ಲಾ ಪುಷ್ಪಗಳಿಗಿಂತ ಕನ್ನೈದಿಲೆಯೂ, ಕನ್ನೈದಿಲೆಗಿಂತ ಪದ್ಮವೂ, ಪದ್ಮಕ್ಕಿಂತ ನೂರುದಳಗಳಿಂದ ಯುಕ್ತವಾಗಿರುವ ಕಮಲವೂ, ಅದಕ್ಕಿಂತ ಸಾವಿರದಳಗಳಿಂದ ಯುಕ್ತವಾಗಿರುವ ಕಮಲವೂ, ಅದಕ್ಕಿಂತ ಪುಂಡರೀಕ ಎಂಬ ಹೆಸರಿನಿಂದ ಯುಕ್ತವಾಗಿರುವ ಕಮಲವೂ, ಸಹಸ್ರಪುಂಡರೀಕಗಳಿಗಿಂತ ತುಳಸೀದಳವೂ, ತುಳಸೀದಳಕ್ಕಿಂತ ಬಕಪುಷ್ಪವೂ, ಬಕಪುಷ್ಪಕ್ಕಿಂತ ಭಂಗಾರದಿಂದ ನಿರ್ಮಿತವಾದ ಪುಷ್ಪವೂ ಶ್ರೇಷ್ಠವೆನಿಸುತ್ತದೆ. ಭಂಗಾರದ ಪುಷ್ಪಕ್ಕಿಂತ ನನಗೆ ಪ್ರಿಯವಾದ ವಸ್ತುವು ಯಾವುದೂ ಇಲ್ಲ. ಭಂಗಾರದ ಪುಷ್ಪವು ಸಿಗದಿದ್ದರೆ ತುಳಸೀದಳಗಳಿಂದ ನನ್ನನ್ನು ಪೂಜಿಸಬೇಕು. ತುಳಸೀದಳವು ಸಿಗದಿದ್ದರೆ ಅದರ ಕೊಂಬೆಯೂ, ಅದೂ ಸಿಗದಿದ್ದರೆ ಕೊಂಬೆಯ ತುಂಡೂ, ಅದೂ ಸಿಗದಿದ್ದರೆ ತುಳಸೀಗಿಡದ ಬುಡದಲ್ಲಿರುವ ಮೃತ್ತಿಕೆಯೂ ಪೂಜೆಗೆ ಅರ್ಹವೆನಿಸುತ್ತದೆ."

ವರ್ಣಾನಾಂ ತು ಯಥಾ ವಿಪ್ರಸ್ತೀರ್ಥಾನಾಂ ಜಾಹ್ನವೀ ಯಥಾ |
ಸುರಾಣಾಂ ಚ ಯಥಾ ವಿಷ್ಣುಃ ಪುಷ್ಪಾಣಾಂ ಮಾಲತೀ ತಥಾ ||
ಮಾಲತ್ಯಾನುದಿನಂ ವಿಷ್ಣುಂ ಯೋಽರ್ಚಯೇದ್ಗರುಡಧ್ವಜಮ್ |
ಜನ್ಮದುಃಖಜರಾರೋಗೈರ್ಮುಕ್ತೋಽಸೌ ಮುಕ್ತಿಮಾಪ್ನುಯಾತ್ ||
ದತ್ತಮಾತ್ರಂ ಹರೇಃ ಪುಷ್ಪಂ ನಿರ್ಮಾಲ್ಯಂ ಸ್ಯಾತ್ತದಾ ಕ್ಷಣಾತ್ |
ಉಪಯುಕ್ತಮಹೋರಾತ್ರಂ ಮಾಲತ್ಯಾಃ ಕುಸುಮಂ ನ ಹಿ ||
ಸುಗಂಧೈರ್ಮಲ್ಲಿಕಾಪುಷ್ಪೈರರ್ಚಯಂತಿ ಜನಾರ್ದನಮ್ |
ತೇ ಪ್ರಯಾಂತಿ ತನುಂ ತ್ಯಕ್ತ್ವಾ ವೈಷ್ಣವಂ ಭವನಂ ಮುನೇ ||

ಎಲ್ಲಾ ವರ್ಣಗಳಲ್ಲಿ ಬ್ರಾಹ್ಮಣನೂ, ತೀರ್ಥಗಳಲ್ಲಿ ಗಂಗೆಯೂ, ದೇವತೆಗಳಲ್ಲಿ ಶ್ರೀಹರಿಯೂ, ಹೇಗೆ ಉತ್ತಮರೋ

ಹಾಗೆ ಮಲ್ಲಿಗೆಯು ಪುಷ್ಪಗಳಲ್ಲಿ ಉತ್ತಮವೆನಿಸುತ್ತದೆ. ಮಲ್ಲಿಗೆಯಿಂದ ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಶ್ರೀಹರಿಯನ್ನು ಪೂಜಿಸುವವನು ಈ ಲೋಕದಲ್ಲಿ ಜನ್ಮದಿಂದಲೂ ದುಃಖಗಳಿಂದಲೂ ವಾರ್ಧಕ್ಯಾವಸ್ಥೆಯಿಂದಲೂ ನಾನಾವಿಧವಾದ ರೋಗಗಳಿಂದಲೂ ಬಿಡುಗಡೆಯನ್ನು ಪಡೆದು ಕೊನೆಗೆ ಮುಕ್ತಿಯನ್ನು ಪಡೆಯುವನು. ಎಲ್ಲಾ ಪುಷ್ಪಗಳೂ ಶ್ರೀಹರಿಗೆ ಸಮರ್ಪಿಸಿದ ಕೂಡಲೇ ನಿರ್ಮಾಲ್ಯವೆನಿಸುತ್ತವೆ. ಹಗಲೂ ರಾತ್ರಿಯೂ ಸಮರ್ಪಿಸಲ್ಪಟ್ಟರೂ ಮಲ್ಲಿಗೆಯು ನಿರ್ಮಾಲ್ಯವಾಗುವುದಿಲ್ಲ. ಸುಗಂಧದಿಂದ ಯುಕ್ತವಾಗಿರುವ ಮಲ್ಲಿಗೆ ಪುಷ್ಪಗಳಿಂದ ಶ್ರೀಹರಿಯನ್ನು ಪೂಜಿಸುವವನು ಈ ದೇಹವನ್ನು ಬಿಟ್ಟು ವೈಕುಂಠವನ್ನು ಪಡೆಯುವನು."

### ಶ್ರೀವಿಷ್ಣುಪೂಜೆಗೆ ಗ್ರಾಹ್ಯವಾದ ಚಿಗುರುಗಳು

ದೂರ್ವಾ ಚ ರಕ್ತನಿಷ್ಪಾವಂ ಮುದ್ಗಶ್ಯಾಮಕಹೃತ್ಸ್ತೃಣಾ |
ಇಂದ್ರವಲ್ಲ್ಯಂ ಕುರಂ ಚೈವ ತಥಾ ಗುಲ್ಮಾಷಕಂ ತಥಾ ||
ಏತಾಸಾಮಂಕುರಂ ಶ್ರೇಷ್ಠಂ ಪೂಜಯೇದ್ದ್ವಿಜಸತ್ತಮಃ | (ಕಪಿಂಜಲ ಸಂಹಿತಾ)

"ಗರಿಕೆ ಹುಲ್ಲು, ಕೆಂಪು ಅವರೆ, ಹೆಸರು, ಇಂದ್ರವಲ್ಲಿ, ಗುಲ್ಮಾಷಕ ಮುಂತಾದವುಗಳ ಚಿಗುರುಗಳು ಶ್ರೇಷ್ಠವಾಗಿವೆ. ಅವುಗಳಿಂದ ಶ್ರೀಹರಿಯನ್ನು ಪೂಜಿಸಬಹುದು."

### ಶ್ರೀಹರಿಯನ್ನು ಪೂಜಿಸುವುದಕ್ಕೆ ಪ್ರಶಸ್ತವಾದ ಪತ್ರಗಳು

ತುಲಸೀ ಗಂಧಪರ್ಣಂ ಚ ಧಾತಕೀ ವಿಷ್ಣುವರ್ಣಕಾ |
ಬಿಲ್ವಾಶ್ವತ್ಥತಮಾಲಾಶ್ಚ ಮರುಗಂ ದಮನಂ ತಥಾ ||
ಖದಿರಂ ಸಹದೇವೀ ಚ ಶಮೀ ಬ್ರಹ್ಮಪಲಾಶಕಮ್ |
ಚೂತಪರ್ಣಂ ಬಕಾ ಪದ್ಮಂ ತಥಾ ಕರ್ಪೂರಮಲ್ಲಿಕಾ ||
ಪತ್ರಾಣ್ಯೇತಾನ್ಯುಪಾದಾಯ ಪೂಜಯೇದ್ಗರುಡಧ್ವಜಮ್ | (ಕಪಿಂಜಲಸಂಹಿತಾ)

"ತುಳಸೀ, ಗಂಧವೃಕ್ಷ, ನೆಲ್ಲಿಮರ, ವಿಷ್ಣುಕ್ರಾಂತಿಗಿಡ, ಬಿಲ್ವಮರ, ಅಶ್ವತ್ಥಮರ, ಹೊಂಗೆಮರ, ಮರುಗದ ಗಿಡ, ದಮನ ಗಿಡ, ಖದಿರವೃಕ್ಷ, ಸಹದೇವೀ ವೃಕ್ಷ, ಶಮೀವೃಕ್ಷ, ಬ್ರಹ್ಮಪಲಾಶವೃಕ್ಷ, ಮಾವಿನಮರ, ಬಕವೃಕ್ಷ, ಪದ್ಮದ ಗಿಡ, ಕರ್ಪೂರಮಲ್ಲಿಕಾಲತೆ, ಇವುಗಳ ಎಲೆಗಳಿಂದ ಶ್ರೀಹರಿಯನ್ನು ಪೂಜಿಸಬೇಕು."

ಯೇಽರ್ಚಯಂತಿ ಶಮೀಪತ್ರೈಃ ಪ್ರಮಾದೇನಾಪಿ ಕೇಶವಮ್ |
ಪ್ರಸನ್ನೇ ಚ ಹೃಷೀಕೇಶೇ ನರಾ ಯಾಂತಿ ಪರಾಂ ಗತಿಮ್ ||
ಹರಿಂ ಭೃಂಗಾರಕೈರ್ವಾಪಿ ಯೇಽರ್ಚಯಂತಿ ಸುರೇಶ್ವರಮ್ |
ತೇ ಚ ಮುಕ್ತಾ ಜರಾರೋಗೈರ್ಯಾಂತಿ ತತ್ಪದಮವ್ಯಯಮ್ ||
ಯೇಽರ್ಚಯಂತಿ ತಮಾಲಸ್ಯ ಪತ್ರೈಃ ಪಾಪಹರಂ ಹರಿಮ್ |
ಸಂಸಾರಾರ್ಣವಮುಲ್ಲಂಘ್ಯ ತೇ ಯಾಂತಿ ಭವನಂ ಹರೇಃ | (ಪಾದ್ಮಪುರಾಣ)

"ಶಮೀಪತ್ರ, ಭೃಂಗಾರಕ ಪತ್ರ, ಹೊಂಗೆ ಎಲೆ ಇವುಗಳಿಂದ ಶ್ರೀಹರಿಯನ್ನು ಪೂಜಿಸುವವರು ಶ್ರೀಹರಿಸಾನ್ನಿಧ್ಯವನ್ನು ಪಡೆಯುವರು."

ತುಲಸೀ ಬಿಲ್ವಪತ್ರಂ ಚ ದೂರ್ವಾ ಕೌಶೇಯಮೇವ ಚ |
ವಿಷ್ಣುಕ್ರಾಂತಂ ಮರುವಕಂ ಕೋಶಾಂಬು ದಮನಂ ತಥಾ || (ಹಾರೀತರ ವಚನ)

"ತುಳಸೀದಳ, ಬಿಲ್ವಪತ್ರ, ಗರಿಕೆ ಹುಲ್ಲು, ಪದ್ಮಪತ್ರ, ವಿಷ್ಣುಕ್ರಾಂತಪತ್ರ ಮರುಗಪತ್ರ, ಕೋಶಾಂಬುಪತ್ರ, ದಮನ ಪತ್ರ ಇವುಗಳಿಂದ ಶ್ರೀಹರಿಯನ್ನು ಪೂಜಿಸಬೇಕು."

ತುಲಸೀ ಬಿಲ್ವಪತ್ರಂ ಚ ಕೌಶೇಯಂ ದೂರ್ವಮೇವ ಚ |
ವಿಷ್ಣುಕ್ರಾಂತಾ ಶಮೀಪತ್ರಂ ಖಾದಿರಂ ಕುಟಜಂ ತಥಾ || (ಆತ್ರೇಯರ ವಚನ)

"ತುಳಸೀದಳ, ಬಿಲ್ವಪತ್ರ, ಪದ್ಮಪತ್ರ, ಗರಿಕೆಹುಲ್ಲು, ವಿಷ್ಣುಕ್ರಾಂತಪತ್ರ, ಶಮೀಪತ್ರ, ಖದಿರಪತ್ರ, ಗಿರಿಮಲ್ಲಿಕಾಪತ್ರ ಇವುಗಳು ಶ್ರೀಹರಿಯನ್ನು ಪೂಜಿಸುವುದಕ್ಕೆ ಉತ್ತಮವೆನಿಸುತ್ತವೆ."

### ತುಳಸೀ ಮುಂತಾದವುಗಳಿಗೆ ನಿಷಿದ್ಧವಾದ ಸ್ಥಳಗಳು

ದೇವಾಲಯೇ ನಿಯುಕ್ತಂ ತು ಹಂತಿ ಪುಣ್ಯಂ ಪುರಾತನಮ್ |
ತಸ್ಮಾತ್ಸರ್ವಪ್ರಯತ್ನೇನ ದೇವೋದ್ಯಾನಾನಿ ವರ್ಜಯೇತ್ ||
ಹಸ್ತಾನೀತಂ ಪಟಾನೀತಂ ಸ್ವಯಂ ಪತಿತಮೇವ ವಾ |
ದೇವಾರಾಮೋದ್ಭವಂ ಪುಷ್ಪಂ ಗೃಹದೇವಾಯ ನಾರ್ಚಯೇತ್ || (ಸಂಗ್ರಹ ವಚನ)

"(1) ದೇವಾಲಯ, (2) ದೇವತೆಗಳಿಗಾಗಿ ಏರ್ಪಡಿಸಿರುವ ಉದ್ಯಾನವನ ಇವುಗಳಲ್ಲಿ ಬೆಳೆದ ಪುಷ್ಪಗಳು, ಕೈಗಳಿಂದ ತಂದಿರುವ ಪುಷ್ಪಗಳು, ಬಟ್ಟೆಯಲ್ಲಿ ಕಟ್ಟಿ ತಂದಿರುವ ಪುಷ್ಪಗಳು, ಮರದಿಂದ ತಾನಾಗಿಯೇ ಕೆಳಗೆ ಬಿದ್ದಿರುವ ಪುಷ್ಪಗಳು ಇವುಗಳಿಂದ ಮನೆಯಲ್ಲಿರುವ ದೇವನನ್ನು ಪೂಜಿಸಕೂಡದು."

ಹಸ್ತಾನೀತಂ ಪಟಾನೀತಂ ಏರಂಡೈರರ್ಕಪರ್ಣಕೈಃ |
ಯಃ ಪೂಜಯೇದ್ಧರಿಂ ಭಕ್ತ್ಯಾ ಹ್ಯಬ್ದಪುಣ್ಯಂ ವಿನಶ್ಯತಿ || (ಸಂಗ್ರಹವಚನ)

"ಕೈಗಳಿಂದ ಮತ್ತು ಬಟ್ಟೆಗಳಿಂದ ಕಟ್ಟಿ ತಂದಿರುವ ಪುಷ್ಪಗಳು, ಹರಳಿನ ಎಲೆ ಮತ್ತು ಎಕ್ಕೆಯ ಎಲೆಗಳಿಂದ ಕಟ್ಟಿ ತಂದಿರುವ ಪುಷ್ಪಗಳು ಇವುಗಳಿಂದ ಶ್ರೀಹರಿಯನ್ನು ಪೂಜಿಸುವವನ ಒಂದು ವರ್ಷದಲ್ಲಿ ಸಂಗ್ರಹಿಸಿದ ಪುಣ್ಯವು ನಶಿಸುತ್ತದೆ."

ಸ್ವಾರಾಮ ಉತ್ತಮಾ ಪೂಜಾ ವನಪೂಜಾ ತು ಮಧ್ಯಮಾ |
ವಿಕ್ರೀತಾ ತು ಕನಿಷ್ಠಾ ಸ್ಯಾದ್ಯಾಚಮಾನಂ ತು ನಿಷ್ಫಲಮ್ || (ಸಂಗ್ರಹ ವಚನ)

"ತನ್ನ ತೋಟದಲ್ಲಿ ಬೆಳೆದ ಪುಷ್ಪಗಳಿಂದ ಮಾಡುವ ಪೂಜೆಯು ಉತ್ತಮವೂ, ಕಾಡಿನಲ್ಲಿ ಬೆಳೆದ ಪುಷ್ಪಗಳಿಂದ ಮಾಡುವ ಪೂಜೆಯು ಮಧ್ಯಮವೂ, ಅಂಗಡಿಯಿಂದ ಕ್ರಯಕ್ಕೆ ತಂದ ಪುಷ್ಪಗಳಿಂದ ಮಾಡುವ ಪೂಜೆಯು ಅಧಮವೂ, ಬೇರೆ ಜನರಿಂದ ಬೇಡಿ ತಂದಿರುವ ಪುಷ್ಪಗಳಿಂದ ಮಾಡುವ ಪೂಜೆಯು ನಿಷ್ಫಲವೂ ಆಗುತ್ತದೆ."

### ತುಲಸಿಯನ್ನು ತೆಗೆಯುವುದಕ್ಕೆ ನಿಷಿದ್ಧವಾದ ಕಾಲಗಳು

ಸಂಕ್ರಾಂತೌ ಪಕ್ಷಯೋರಂತೇ ದ್ವಾದಶ್ಯಾಂ ನಿಶಿ ಸಂಧ್ಯಯೋಃ |
ತುಲಸೀಂ ಯೇ ವಿಚಿನ್ವಂತಿ ವಿಚಿನ್ವಂತಿ ಹರೇಃ ಶಿರಃ ||

"ಸಂಕ್ರಾಂತಿ, ಹುಣ್ಣಿಮೆ, ಅಮಾವಾಸ್ಯೆ, ದ್ವಾದಶೀ, ರಾತ್ರಿ, ಸಂಧ್ಯಾಕಾಲಗಳು ಇವುಗಳಲ್ಲಿ ತುಳಸಿಯನ್ನು ಕೊಯ್ಯುವವನು ಶ್ರೀಹರಿಯ ಕೊರಳನ್ನು ಕೊಯ್ಯುವನು."

ದ್ವಾದಶ್ಯಾಮಥ ಸಂಕ್ರಾಂತೌ ನಷ್ಟೇಂದೌ ಗ್ರಹಣೇ ತಥಾ |
ಆಚಿತ್ಯ ತುಲಸೀಪತ್ರಂ ಛೇದಯನ್ನರಕಂ ವ್ರಜೇತ್ || (ಶತಾನಂದರ ವಚನ)

"ದ್ವಾದಶೀ, ಸಂಕ್ರಾಂತಿ, ಅಮಾವಾಸ್ಯಾ ಮತ್ತು ಗ್ರಹಣಕಾಲಗಳಲ್ಲಿ ತುಳಸಿಯನ್ನು ಕೊಯ್ಯುವವನು ನರಕವನ್ನು ಹೊಂದುವನು."

ತುಲಸೀಗ್ರಹಣಂ ಪುಣ್ಯಂ ವಿಷ್ಣೋರರ್ಚನಹೇತವೇ |
ಅಸುರೀಂ ಯೋನಿಮಾಪ್ನೋತಿ ದ್ವಾದಶೀಗ್ರಹಣೇನ ವೈ ||
ಭಾನುಭಾರ್ಗವಭೌಮೇಷು ವ್ಯತೀಪಾತೇ ಚ ವೈಧೃತೌ |
ತುಲಸೀಂ ಯೇ ವಿಚಿನ್ವಂತಿ ವಿಚಿನ್ವಂತಿ ಹರೇಃ ಶಿರಃ || (ಸಂಗ್ರಹ ವಚನ)

"ಶ್ರೀಹರಿಯ ಪೂಜೆಗಾಗಿ ತುಳಸಿಯನ್ನು ಕೊಯ್ಯುವುದು ಪುಣ್ಯಕರವಾಗುತ್ತದೆ. ದ್ವಾದಶೀತಿಥಿಯಲ್ಲಿ ಕೊಯ್ಯುವವನು ಅಸುರಯೋನಿಯನ್ನು ಪಡೆಯುವನು. ಭಾನುವಾರ ಮಂಗಳವಾರ ಶುಕ್ರವಾರಗಳು, ವ್ಯತಿಪಾತಯೋಗ, ವೈಧೃತಿಯೋಗ ಇವುಗಳಲ್ಲಿ ಕೊಯ್ಯುವವನು ಶ್ರೀಹರಿಯ ಕುತ್ತಿಗೆಯನ್ನು ಕೊಯ್ಯುವನು."

### ವೈಷ್ಣವರು ನಿಷಿದ್ಧ ದಿನಗಳಲ್ಲಿಯೂ ತುಳಸಿಯನ್ನು ಕೊಯ್ಯಬಹುದು

ನಿಷಿದ್ಧತಿಥಿವಾರೇಷು ತುಲಸ್ಯಾಹರಣಂ ಮುನೇ |
ವೈಷ್ಣವಾನಾಂ ನ ದೋಷಾಯ ವಿಷ್ಣೋಃ ಪ್ರೀತಿಕರತ್ವತಃ || (ವಿಷ್ಣುರಹಸ್ಯ)

"ನಿಷಿದ್ಧವಾದ ತಿಥಿಗಳಲ್ಲಿಯೂ ವಾರಗಳಲ್ಲಿಯೂ ತುಳಸಿಯನ್ನು ಕೊಯ್ಯುವುದು ವೈಷ್ಣವರಿಗೆ ದೋಷಕರವಾಗಲಾರದು. ಇದು ಶ್ರೀವಿಷ್ಣುವಿಗೆ ಅತ್ಯಂತಪ್ರೀತಿಕರವಲ್ಲವೇ?"

ಪ್ರಭಾತೇ ತುಲಸೀಪತ್ರಂ ಯೇ ಛಿಂದಂತಿ ದ್ವಿಜೋತ್ತಮಾಃ |
ಯಮಲೋಕಂ ನ ಪಶ್ಯಂತಿ ಗಚ್ಛಂತಿ ಪರಮಂ ಪದಮ್ ||

"ಅರುಣೋದಯಕಾಲದಲ್ಲಿ ತುಳಸಿಯನ್ನು ಕೊಯ್ಯುವವರು ಯಮಲೋಕವನ್ನು ನೋಡುವುದಿಲ್ಲ. ಉತ್ತಮವಾದ ಸ್ಥಾನವನ್ನು ಪಡೆಯುವರು."

### ಅಕಾಲದಲ್ಲಿ ತುಳಸಿಯನ್ನು ಕೊಯ್ಯಬಾರದು

ಅಕಾಲೇ ತುಲಸೀಪತ್ರಂ ಛೇದಯನ್ವೈ ನರಾಧಮಃ |
ಬ್ರಹ್ಮಹತ್ಯಾಸಮಂ ಪಾಪಂ ಪ್ರಾಪ್ನುಯಾನ್ನರಕಂ ವ್ರಜೇತ್ || (ಸಂಗ್ರಹ ವಚನ)

"ಅಕಾಲದಲ್ಲಿ ತುಳಸಿಯನ್ನು ಕೊಯ್ಯುವವನು ಬ್ರಹ್ಮಹತ್ಯೆಗೆ ಸಮವಾದ ಪಾಪವನ್ನು ಪಡೆಯುವನು, ನರಕವನ್ನು ಹೊಂದುವನು."

ಅಕಾಲೆ ತುಳಸೀಪತ್ರಂ ಛೇದಯಂತಿ ಸ್ತ್ರಿಯಃ ಪುಮಾನ್ |
ಬ್ರಹ್ಮಹತ್ಯಾಶತಂ ಯಾಂತಿ ನಿವಸೇಯುಸ್ತಮಸ್ಯಪಿ ||

"ಅಕಾಲದಲ್ಲಿ ತುಳಸಿಯನ್ನು ಕೊಯ್ಯುತ್ತಿರುವ ಸ್ತ್ರೀ ಮತ್ತು ಪುರುಷರು ನೂರು ಬ್ರಹ್ಮಹತ್ಯೆಗಳನ್ನು ಪಡೆಯುವರು, ನಿತ್ಯನರಕಗಳನ್ನೂ ಹೊಂದುವರು."

### ಮಧ್ಯಾಹ್ನಾನಂತರದಲ್ಲಿ ತುಳಸಿಯನ್ನು ಕೊಯ್ಯಬಾರದು

ಮಧ್ಯಾಹ್ನಾತ್ಪರತಸ್ತಸ್ಯ ಹರೇಃ ಪೂಜಾರತಾಸ್ತಥಾ |
ಛಿಂದಂತಿ ತುಲಸೀಂ ಮೂಢಾ ಅಧೋ ಗಚ್ಛಂತಿ ಮಾನವಾಃ ||

"ಮಧ್ಯಾಹ್ನದ ಮೇಲೆ ವಿಷ್ಣುಪೂಜೆಯನ್ನು ಮಾಡುವವರೂ ತುಳಸಿಯನ್ನು ಕೊಯ್ಯುವವರೂ ಅಧೋಗತಿಯನ್ನು ಪಡೆಯುವರು."

### ಸ್ನಾನಮಾಡದೆ ತುಳಸಿಯನ್ನು ಕೊಯ್ಯಬಾರದು

ಅಸ್ನಾತ್ವಾ ತುಲಸೀಂ ಛಿತ್ವಾ ದೇವಾರ್ಚಾಪಿತೃಕರ್ಮಣಿ |
ತತ್ಸರ್ವಂ ನಿಷ್ಫಲಂ ಯಾತಿ ಪಂಚಗವ್ಯೇನ ಶುದ್ಧ್ಯತಿ ||

"ದೇವತೆಗಳನ್ನೂ ಪಿತೃಗಳನ್ನೂ ಪೂಜಿಸುವುದಕ್ಕೆ ಸ್ನಾನಮಾಡದಂತೆ ತುಳಸಿಯನ್ನು ಕೊಯ್ಯಬಾರದು. ಹಾಗೆ ಕೊಯ್ದರೆ ಆ ತುಳಸಿಯಿಂದ ಮಾಡುವ ಪೂಜೆಯು ನಿಷ್ಫಲವಾಗುವುದು. ಪಂಚಗವ್ಯವನ್ನು ಮಾಡಿ ಪ್ರೋಕ್ಷಿಸಿದರೆ ಕೊಯ್ಯುವನೂ ಅವನಿಂದ ಕೊಯ್ಯಲ್ಪಟ್ಟ ತುಳಸಿಯೂ ಶುದ್ಧವಾಗುವುದು."

### ತುಳಸಿಯನ್ನು ಕೊಯ್ಯುವ ಕ್ರಮ

"ಸ್ನಾನವನ್ನು ಮಾಡಬೇಕು. ಆಚಮನವನ್ನು ಮಾಡಬೇಕು. ಪಾತ್ರೆಯಿಂದ ನೀರನ್ನು ತುಂಬಿಸಿಕೊಳ್ಳಬೇಕು. ಆ ನೀರನ್ನು ತುಳಸೀಗಿಡದ ಬುಡದಲ್ಲಿ ಸಮರ್ಪಿಸಬೇಕು. ನಮಸ್ಕರಿಸಬೇಕು. ಪ್ರಾರ್ಥಿಸಬೇಕು. ಅನಂತರದಲ್ಲಿ ತುಳಸಿಯನ್ನು ಕೊಯ್ಯಬೇಕು."

### ತುಳಸೀಗಿಡದ ಬುಡದಲ್ಲಿ ನೀರನ್ನು ಹಾಕುವ ಮಂತ್ರ

ಶ್ರಿಯಃ ಪ್ರಿಯೇ ಶ್ರಿಯಾವಾಸೇ ನಿತ್ಯಂ ಶ್ರೀಧರವಲ್ಲಭೇ |
ಭಕ್ತ್ಯಾ ದತ್ತಂ ಮಯಾಽರ್ಘ್ಯಂ ಹಿ ತುಲಸಿ ಪ್ರತಿಗೃಹ್ಯತಾಂ ||

"ಎಲೌ ತುಳಸಿಯೇ, ನೀನು ಲಕ್ಷ್ಮೀದೇವಿಯವರಿಗೆ ತುಂಬಾ ಪ್ರಿಯಳಾಗಿರುವಿ, ನಿನ್ನಲ್ಲಿ ಲಕ್ಷ್ಮೀದೇವಿಯರು ಯಾವಾಗಲೂ ವಾಸಿಸುತ್ತಿರುವರು. ಲಕ್ಷ್ಮೀಪತಿಯಾದ ಶ್ರೀಧರನಿಗೆ ನೀನು ತುಂಬಾ ಪ್ರಿಯಳೂ ಪತ್ನಿಯೂ ಆಗಿರುವಿ. ನಿನಗೆ ಭಕ್ತಿಯಿಂದ ಅರ್ಘ್ಯವನ್ನು ಸಮರ್ಪಿಸುತ್ತಿರುವೆನು. ಈ ಅರ್ಘ್ಯವನ್ನು ಸ್ವೀಕರಿಸು."

### ನಮಸ್ಕಾರಮಂತ್ರ

ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ |
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ||

"ತುಲಸಿಯೇ, ನಿನ್ನನ್ನು ಕಣ್ಣುಗಳಿಂದ ನೋಡುವವರು ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುವರು. ಕೈಗಳಿಂದ ಮುಟ್ಟುವವರ ಶರೀರಗಳು ಪರಿಶುದ್ಧವಾಗುತ್ತವೆ. ನಮಸ್ಕರಿಸುವವರು ಎಲ್ಲಾ ರೋಗಗಳನ್ನೂ ಪರಿಹರಿಸಿಕೊಳ್ಳುವರು. ನಿನ್ನ ಬುಡಕ್ಕೆ ನೀರನ್ನು ಎರೆಯುವವರನ್ನು ನೋಡಿ ಯಮನು ಹೆದರುವನು. ನಿನ್ನ ಗಿಡವನ್ನು ಬೆಳೆಯಿಸುವವರು ಶ್ರೀಹರಿಯ ಸಮೀಪದಲ್ಲಿ ವಾಸಿಸುವರು. ಶ್ರೀಹರಿಯ ಪಾದಗಳಲ್ಲಿ ಸಮರ್ಪಿಸುವವರು ಮುಕ್ತಿಯನ್ನು ಪಡೆಯುವರು. ಇಂತಹ ಮಹಿಮೆಯಿಂದ ಯುಕ್ತಳಾದ ತುಳಸಿಯೇ, ನಿನ್ನನ್ನು ಭಕ್ತಿಯಿಂದ ನಮಸ್ಕರಿಸುವೆನು."

ಮನಃಪ್ರಸಾದಜನನೀ ಸುಖಸೌಭಾಗ್ಯವರ್ಧಿನೀ |
ಆಧಿಂ ವ್ಯಾಧಿಂ ಚ ಹರ ಮೇ ತುಲಸಿ ತ್ವಾಂ ನಮಾಮ್ಯಹಂ || (ಸ್ಕಾಂದಪುರಾಣ ವಚನ)

"ಮನಸ್ಸಿಗೆ ನೈರ್ಮಲ್ಯವನ್ನು ಕೊಡುವವಳೂ ಸುಖ ಮತ್ತು ಸೌಭಾಗ್ಯಗಳನ್ನು ಹೆಚ್ಚಿಸುತ್ತಿರುವವಳೂ ಆಗಿರುವ ತುಳಸಿಯೇ, ನಿನ್ನನ್ನು ನಮಸ್ಕರಿಸುವೆನು. ನನ್ನ ಮನೋವ್ಯಥೆಯನ್ನೂ ರೋಗಗಳನ್ನೂ ಪರಿಹರಿಸು."

## ತುಳಸೀಪ್ರಾರ್ಥನೆ

ಶ್ರಿಯಂ ದೇಹಿ ಯಶೋ ದೇಹಿ ಕೀರ್ತಿಮಾಯುಸ್ತಥಾ ಸುಖಮ್ |
ಬಲಂ ಪುಷ್ಟಿಂ ತಥಾ ಧರ್ಮಂ ತುಲಸಿ ತ್ವಂ ಪ್ರಯಚ್ಛ ಮೇ || (ಸ್ಕಂದಪುರಾಣ ವಚನ)

"ಎಲೌ ತುಳಸಿಯೇ, ನೀನು ಸಂಪತ್ತನ್ನೂ ಯಶಸ್ಸನ್ನೂ ಕೀರ್ತಿಯನ್ನೂ ಸುಖವನ್ನೂ ಬಲವನ್ನೂ ಪುಷ್ಟಿಯನ್ನೂ ಧರ್ಮವನ್ನೂ ಆಯುಸ್ಸನ್ನೂ ಕೊಡು."

## ತುಳಸೀದೇವಿಯಲ್ಲಿ ಕ್ಷಮೆಯನ್ನು ಬೇಡುವುದು

ಮೋಕ್ಷೈಕಹೇತೋರ್ಧರಣೀಧರಸ್ಯ ವಿಷ್ಣೋಃ ಸಮಸ್ತಸ್ಯ ಗುರೋಃ ಪ್ರಿಯೇ ತೇ |
ಆರಾಧನಾರ್ಥಂ ಪುರುಷೋತ್ತಮಸ್ಯ ಲುನಾಮಿ ಪತ್ರಂ ತುಲಸಿ ಕ್ಷಮಸ್ವ || 1 ||
ತುಲಸ್ಯಮೃತಜನ್ಮಾಸಿ ಸದಾ ತ್ವಂ ಕೇಶವಪ್ರಿಯೇ |
ಕೇಶವಾರ್ಥಂ ಲುನಾಮಿ ತ್ವಾಂ ಕ್ಷಮಸ್ವ ಹರಿವಲ್ಲಭೇ || 2 ||
ತ್ವದಂಗಸಂಭವೈರ್ನಿತ್ಯಂ ಪೂಜಯಾಮಿ ಜಗತ್ಪತಿಮ್ |
ತಥಾ ಕುರು ಪವಿತ್ರಾಂಗಿ ಕಲೌ ಪಾಪಪ್ರಣಾಶಿನಿ || 3 ||
ಮಂತ್ರೇಣಾನೇನ ಯಃ ಕುರ್ಯಾದ್ಗೃಹೀತ್ವಾ ತುಲಸೀದಲಮ್ |
ಪೂಜನಂ ವಾಸುದೇವಸ್ಯ ಲಕ್ಷಕೋಟಿಗುಣಂ ಭವೇತ್ || 4 ||

"ಶ್ರೀಹರಿಯೊಬ್ಬನೇ ಮೋಕ್ಷವನ್ನು ಕೊಡುವವನು. ಅವನೇ ಸರ್ವರಿಗೂ ಗುರುವಾಗಿರುವವನು. ಅವನ ಪ್ರಿಯಳಾಗಿರುವ ನಿನ್ನನ್ನು ಅವನ ಪೂಜೆಗಾಗಿ ಕೊಯ್ಯುವೆನು. ನೀನು ಕ್ಷಮಿಸು." || 1 ||

"ಎಲೌ ತುಳಸಿಯೇ, ನೀನು ಮೋಕ್ಷಕ್ಕೆ ಕಾರಣಳಾಗಿರುವಿ. ಶ್ರೀಹರಿಗೆ ಯಾವಾಗಲೂ ಪ್ರಿಯಳಾಗಿರುವಿ. ಶ್ರೀಹರಿಯ ಪತ್ನಿಯಾಗಿರುವಿ. ಶ್ರೀಹರಿಯ ಪೂಜೆಗಾಗಿ ನಿನ್ನನ್ನು ಕೊಯ್ಯುವೆನು. ನನ್ನನ್ನು ಕ್ಷಮಿಸು. ನಿನ್ನ ಅವಯವಗಳಾಗಿರುವ ತುಳಸೀದಳಗಳಿಂದ ಯಾವಾಗಲೂ ಶ್ರೀಹರಿಯನ್ನು ಪೂಜಿಸುವೆನು. ಕಲಿಕಾಲದಲ್ಲಿ ಎಲ್ಲಾ ಪಾಪಗಳನ್ನೂ ಪರಿಹರಿಸುತ್ತಿರುವ ನೀನು ನನ್ನ ಎಲ್ಲಾ ಪಾಪಗಳನ್ನೂ ಪರಿಹರಿಸು. ಪರಮಪರಿಶುದ್ಧವಾದ ದಳಗಳಿಂದ ಯುಕ್ತಳಾಗಿರುವ ನೀನು ನನ್ನನ್ನೂ ಪರಿಶುದ್ಧನಾಗುವಂತೆ ಮಾಡು." || 2, 3 ||

"ಮೇಲ್ಕಂಡ ಮಂತ್ರವು ಕ್ಷಮಾಪಣಮಂತ್ರವೆನಿಸುತ್ತದೆ. ಈ ಮಂತ್ರದಿಂದ ತುಳಸೀಗಿಡವನ್ನು ಪ್ರಾರ್ಥಿಸಿ ತುಳಸಿಯನ್ನು ಕೊಯ್ಯಬೇಕು. ಅನಂತರದಲ್ಲಿ ಆ ತುಳಸಿಯಿಂದ ಶ್ರೀಹರಿಯನ್ನು ಪೂಜಿಸಬೇಕು. ಹೀಗೆ ಮಾಡುವ ಪೂಜೆಯು ಲಕ್ಷ ಪೂಜೆಗಳಿಗೂ ಕೋಟಿ ಪೂಜೆಗಳಿಗೂ ಸಮವಾಗುತ್ತದೆ." || 4 ||

ಅನಂತರದಲ್ಲಿ ಬೆತ್ತದ ಅಥವಾ ಬಿದಿರಿನ ಬುಟ್ಟಿಯಲ್ಲಿ ಒಂದೊಂದು ದಳಗಳನ್ನು ಕೊಯ್ಯುತ್ತಾ ಹಾಕಬೇಕು. ಉಗುರುಗಳಿಂದ ಕೊಯ್ಯಬಾರದು. ತುಳಸಿಯನ್ನು ಕೊಯ್ದು ಮೇಲೆ ಮನೆಗೆ ಬರಬೇಕು.

## ತುಳಸಿಯನ್ನು ಕೊಯ್ದವನು ನೇರವಾಗಿ ಮನೆಗೆ ಬರಬೇಕು

ತುಲಸೀಗ್ರಹಣಂ ಕೃತ್ವಾ ಯತ್ರ ಯತ್ರ ವ್ರಜಂತಿ ಚ |
ತತ್ರ ತತ್ರ ಹರಿರ್ಯಾತಿ ಗೌರ್ಯಥಾ ಸುತವಲ್ಲಭಾ (ವತ್ಸಲಾ) || (ಸ್ಕಾಂದಪುರಾಣ ವಚನ)

ಕರುವು ಹೋಗುವ ಎಲ್ಲಾ ಕಡೆಗಳಲ್ಲಿಯೂ ಕರುವಿನಲ್ಲಿ ವಾತ್ಸಲ್ಯವುಳ್ಳ ದನವು ಹೋಗುವುದಿಲ್ಲವೇ? ಅದರಂತೆ ತುಳಸಿಯನ್ನು ಕೊಯ್ದವನು ಎಲ್ಲೆಲ್ಲಿಗೆ ಹೋಗುತ್ತಿರುವನೋ ಅಲ್ಲಲ್ಲಿಗೆ ಶ್ರೀಹರಿಯು ಹೋಗುವನು.

## ಕೃಷ್ಣತುಲಸೀಪ್ರಭಾವ

ತುಲಸೀಂ ಕೃಷ್ಣನಾಮ್ನೀಂ ತಾಂ ಯೋಽರ್ಚಯೇಚ್ಚ ಜನಾರ್ದನೇ |
ನರೋ ಯಾತಿ ತನುಂ ತ್ಯಕ್ತ್ವಾ ತದ್ವಿಷ್ಣೋಃ ಪರಮಂ ಪದಮ್ || (ಪದ್ಮಪುರಾಣ ವಚನ)

"ಕೃಷ್ಣತುಳಸಿಯನ್ನು ಶ್ರೀಹರಿಗೆ ಸಮರ್ಪಿಸುವವನು ಈ ಶರೀರವನ್ನು ಬಿಟ್ಟು ಶ್ರೀಹರಿಯ ಸನ್ನಿಧಾನವನ್ನು ಪಡೆಯುವನು."

ಗುಹ್ಯಾನಿ ಯಾನಿ ಪಾಪಾನಿ ಹ್ಯನಾಖ್ಯೇಯಾನಿ ಮಾನವೈಃ |
ನಾಶಯೇತ್ತುಲಸೀ ಭಕ್ತ್ಯಾ ದತ್ತಾ ಕೇಶವಮೂರ್ಧನಿ ||

"ಜನರು ಮಾಡುತ್ತಿರುವ ಎಷ್ಟೋ ಪಾಪಗಳು ಯಾರಿಗೂ ತಿಳಿಯುವುದಿಲ್ಲ. ಕೆಲವು ಪಾಪಗಳು ಬೇರೆ ಜನರ ಮುಂದೆ ಹೇಳಲೂ ಅನರ್ಹವಾಗಿವೆ. ಆ ಎಲ್ಲಾ ಪಾಪಗಳನ್ನೂ ಶ್ರೀಹರಿಯಲ್ಲಿ ತುಳಸೀದಳವನ್ನು ಭಕ್ತಿಯಿಂದ ಸಮರ್ಪಿಸುವವನು ಕಳೆದುಕೊಳ್ಳುವನು."

ತುಲಸೀದಲೇನ ದೇವೇಶಃ ಪೂಜಿತೋ ಯೇನ ದುಃಖಹಾ |
ತೀರ್ಥಯಾತ್ರಾಭಿಗಮನೈಃ ಕಲೌ ಕಿನ್ನು ನರೈಃ ಕೃತಮ್ ||
ಯೇಽರ್ಚಯಂತಿ ಹರೇರ್ಬಿಂಬಂ ಕೋಮಲೈಸ್ತುಲಸೀದಲೈಃ |
ಯೇ ಕುರ್ವಂತಿ ಹರೇಃ ಪೂಜಾಂ ತೇ ಕೃತಾರ್ಥಾಃ ಕಲೌ ಯುಗೇ ||
ಸರ್ವಪಾಪವಿನಿರ್ಮುಕ್ತಾಸ್ತೇ ಯಾಂತಿ ಪರಮಾಂ ಗತಿಮ್ |
ತುಲಸೀಪಕ್ವಪತ್ರೈಸ್ತು ಶ್ರೀಹರೇಃ ಪಾದಪಂಕಜೇ ||
ಪೂಜನಂ ಯೇ ಪ್ರಕುರ್ವಂತಿ ತೇ ಕೃತಾರ್ಥಾಃ ಕಲೌ ನರಾಃ |
ತುಲಸೀಪಕ್ವಪತ್ರಾಣಿ ಪ್ರಭಾತೇ ಭೂತಲೇ ಶುಭೇ ||
ವಿಷ್ಣೋರಾರಾಧನಾರ್ಥಾಯ ನೀತ್ವಾ ತಾಂ ಮೋಕ್ಷಕಾರಿಣೀಮ್ |
ಪುಷ್ಪೈರ್ದ್ವಾದಶಲಕ್ಷಂ ತು ಸುವರ್ಣೈಃ ಕೋಟಿರುಚ್ಯತೇ ||
ತತ್ಫಲಂ ಸಮವಾಪ್ನೋತಿ ತುಲಸ್ಯಾಸ್ತು ದಲೇನ ವಾ |

"ತುಲಸೀದಲದಿಂದ ಸಕಲದೇವತೆಗಳಿಗೂ ಸ್ವಾಮಿಯಾದ ಶ್ರೀಹರಿಯನ್ನು ಪೂಜಿಸಬೇಕು. ಈ ಕಾರ್ಯವನ್ನು ಮಾಡದೆ ತೀರ್ಥಯಾತ್ರೆ ಮುಂತಾದ ಯಾವ ಕಾರ್ಯಗಳನ್ನು ಮಾಡಿದರೂ ಫಲವಿಲ್ಲ. ಕಲಿಯುಗದಲ್ಲಿ ಶ್ರೀಹರಿಯ ವಿಗ್ರಹವನ್ನು ತುಳಸೀದಳಗಳಿಂದ ಅರ್ಚಿಸುವವರೇ ಕೃತಕೃತ್ಯರೆನಿಸುವರು. ಅವರೆಲ್ಲರೂ ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಪಡೆಯುವರು ಮತ್ತು ಉತ್ತಮವಾದ ಗತಿಯನ್ನು ಪಡೆಯುವರು. ಹಣ್ಣಾದ ತುಳಸೀಪತ್ರಗಳು ತುಳಸೀಗಿಡದಿಂದ ತಾನಾಗಿಯೇ ಕೆಳಗೆ ಬೀಳಬೇಕು. ಆ ಎಲೆಗಳಿಂದ ಶ್ರೀಹರಿಯ ಪಾದಕಮಲಗಳನ್ನು ಪೂಜಿಸುವವನು ಕೃತಕೃತ್ಯನೆನಿಸುವನು. ಅರುಣೋದಯಕಾಲದಲ್ಲಿ ಕೆಳಗೆ ಉದುರಿ ಬಿದ್ದಿರುವ ತುಳಸೀದಳಗಳು ಮೋಕ್ಷವನ್ನು ಕೊಡುತ್ತವೆ. ಅವುಗಳನ್ನು ಶ್ರೀಹರಿಯ ಆರಾಧನೆಗಾಗಿ ಸಂಗ್ರಹಿಸಬೇಕು. ಒಂದು ಪುಷ್ಪದಿಂದ ಮಾಡುವ ಅರ್ಚನೆಯು ಹನ್ನೆರಡುಲಕ್ಷ ಪುಷ್ಪಗಳಿಂದ ಮಾಡಿದ ಪೂಜೆಯ ಫಲವನ್ನು ಕೊಡುತ್ತದೆ. ಒಂದು ಸುವರ್ಣಪುಷ್ಪದಿಂದ ಮಾಡಿದ ಅರ್ಚನೆಯು ಕೋಟಿಪುಷ್ಪಗಳಿಂದ ಮಾಡಿದ ಅರ್ಚನೆಯ ಫಲವನ್ನು ಕೊಡುತ್ತದೆ. ಅದೇ ಫಲವನ್ನು ಒಂದು ತುಳಸೀ ದಳದಿಂದ ಪೂಜಿಸಿದವನು ಪಡೆಯುವನು."

## ತುಳಸಿಯಿಲ್ಲದೆ ಮಾಡುವ ಪೂಜೆಯು ನಿಷ್ಫಲವಾಗುತ್ತದೆ

ಕಲ್ಹಾರಂ ವಾಽಥ ಪದ್ಮಂ ವಾ ಮಲ್ಲಿಕಾ ವಾಽಥ ಚಂಪಕಮ್ ।
ಉತ್ಪಲಂ ಶತಪತ್ರಂ ವಾ ಪುಷ್ಪೇಷ್ವನ್ಯತರಂ ತು ವಾ ॥
ತ್ವತ್ಪತ್ರರಹಿತಂ ಯತ್ತು ಪತ್ರಂ ವಾ ಪುಷ್ಪಮೇವ ವಾ ।
ಸುವರ್ಣೇನ ಕೃತಂ ಪುಷ್ಪಂ ರಜತಂ ರತ್ನಮೇವ ವಾ ॥
ಮಮ ಪಾದಾಂಬುಜಪೂಜಾಯಾಮನರ್ಹಂ ಭವತಿ ಧ್ರುವಂ । (ತುಲಸಿಯನ್ನು ಕುರಿತು ಭಗವದ್ವಚನ)

"ಎಲೌ ತುಳಸಿಯೇ, ನೈದಿಲೆಪುಷ್ಪ, ಪದ್ಮಪುಷ್ಪ, ಮಲ್ಲಿಗೆ, ಸಂಪಿಗೆ, ಕನ್ನೈದಿಲೆಪುಷ್ಪ, ನೂರು ದಳಗಳಿಂದ ಯುಕ್ತವಾದ ಕಮಲಪುಷ್ಪ, ಭಂಗಾರದಿಂದ ನಿರ್ಮಿತವಾದ ಪುಷ್ಪ, ಮುಂತಾದ ಸಕಲಪುಷ್ಪಗಳೂ ಬೆಳ್ಳಿ, ರತ್ನ ಮುಂತಾದ ವಸ್ತುಗಳೂ ನಿನ್ನ ಪತ್ರಗಳಿಂದ ರಹಿತವಾಗಿದ್ದರೆ ನನ್ನ ಪಾದಕಮಲಗಳ ಪೂಜೆಯಲ್ಲಿ ಅನರ್ಹವೆನಿಸುತ್ತವೆ. ಇದು ನಿಶ್ಚಯ"

ತುಳಸೀರಹಿತಂ ಪುಷ್ಪಂ ಹೃದಿ ಶಲ್ಯಂ ಮಮಾರ್ಪಿತಮ್ ।
ಕೇವಲಂ ಗಂಧಮಾತ್ರೇಣ ಮಹ್ಯಂ ತತ್ಕರತಾಡನಮ್ ॥ (ಭಗವದ್ವಚನ)

"ತುಳಸಿಯಿಂದ ರಹಿತವಾದ ಪುಷ್ಪವು ನನ್ನ ಎದೆಗೆ ಹೊಡೆದಿರುವ ಮೊಳೆಗೆ ಸಮವಾದುದು. ತುಳಸಿಯ ಪರಿಮಳವು ಮಾತ್ರ ಬಂದರೆ ಸಾಕು. ಅಷ್ಟರಲ್ಲಿಯೇ ನಾನು ಸಂತುಷ್ಟನಾಗಿ ಕೈಗಳನ್ನು ತಟ್ಟುವೆನು."

ತುಲಸೀದಲಸಂತ್ಯಕ್ತಂ ಪುಷ್ಪೇಣಾಭ್ಯರ್ಚನಂ ಮಮ ।
ಉತ್ತರಾಷಾಢಮಿಲಿತಶ್ರವಣದ್ವಾದಶೀವ್ರತಮ್ ॥
ಸುರಾಯಾ ಬಿಂದುನಾ ಸ್ಪೃಷ್ಟತೀರ್ಥವಚ್ಚೋಭಯಂ ತ್ಯಜೇತ್ ।

"ತುಲಸೀದಲವಿಲ್ಲದ ಪುಷ್ಪಾರ್ಚನೆ ಮತ್ತು ಉತ್ತರಾಷಾಢಾನಕ್ಷತ್ರದಿಂದ ಸಹಿತವಾಗಿರುವ ಶ್ರವಣದ್ವಾದಶೀ ವ್ರತೋಪೋಷಣೆ ಇವೆರಡೂ ಮದ್ಯಬಿಂದುವಿನಿಂದ ಯುಕ್ತವಾಗಿರುವ ತೀರ್ಥದಂತೆ ಬಿಡಲ್ಪಡಬೇಕಾದ್ದು."

## ತುಲಸಿಯನ್ನು ತೊಳೆಯಬಾರದು

ಮಮ ಪ್ರಿಯಾಂ ತು ತುಲಸೀಂ ಪ್ರಕ್ಷಾಲ್ಯ ತು ಕರೋತಿ ಯಃ ।
ಸ ಪಾಪೀ ಬ್ರಹ್ಮಘಾತೀ ಸ್ಯಾನ್ನಿರಯಂ ಸೋಽಧಿಗಚ್ಛತಿ ॥

"ನನಗೆ ತುಂಬಾ ಪ್ರಿಯಳಾದ ತುಳಸಿಯನ್ನು ತೊಳೆದು ಪೂಜಿಸುವವನು ಮಹಾಪಾಪಿಯೆನಿಸುವನು. ಬ್ರಹ್ಮಹತ್ಯೆಯನ್ನು ಮಾಡಿದವನಿಗೆ ಸಮಾನನೆನಿಸುವನು. ನರಕವನ್ನು ಪಡೆಯುವನು."

## ತುಳಸಿಯನ್ನು ತೊಳೆದು ಪುನಃ ಪುನಃ ಪೂಜಿಸಬಹುದು

ತುಲಸೀಂ ಬಿಲ್ವಪತ್ರಂ ಚ ಹೇಮಪುಷ್ಪಂ ಚ ಮೌಕ್ತಿಕಮ್ ।
ನಿತ್ಯಂ ತು ಧಾರಯೇದೇವಂ ಪ್ರಕ್ಷಾಲ್ಯ ಚ ಪುನಃ ಪುನಃ ॥

"ಹಿಂದೆ ಹೇಳಿದಂತೆ ತುಳಸಿಯನ್ನು ತೊಳೆಯಬಾರದು. ಎರಡನೆಯ ದಿನದಲ್ಲಿ ತುಲಸಿಯು ಸಿಗದಿದ್ದರೆ ಮೊದಲನೆಯ ದಿನದಲ್ಲಿ ಶ್ರೀಹರಿಗೆ ಅರ್ಪಿಸಿದ ತುಳಸಿಯನ್ನೇ ಪುನಃ ತೊಳೆದು ಶ್ರೀಹರಿಗೆ ಸಮರ್ಪಿಸಬಹುದು. ಹೀಗೆ ಪುನಃ ಪುನಃ ತೊಳೆಯುತ್ತಾ ಎಷ್ಟುದಿನಗಳವರೆಗೂ ಸಮರ್ಪಿಸಬಹುದು. ಇದರಂತೆ ಬಿಲ್ವಪತ್ರವನ್ನೂ ಭಂಗಾರ ಮತ್ತು ಮುತ್ತುಗಳಿಂದ ನಿರ್ಮಿತವಾದ ಪುಷ್ಪಗಳನ್ನೂ ಮುತ್ತುಗಳನ್ನೂ ಪುನಃ ಪುನಃ ತೊಳೆದು ಶ್ರೀಹರಿಗೆ ಸಮರ್ಪಿಸಬಹುದು."

### ಸನ್ಯಾಸಿಗಳು ತುಳಸಿಯನ್ನು ಕೊಯ್ಯಬಾರದು

ಇಂದ್ರಿಯಾಣಾಂ ನಿರೋಧೇನ ರಾಗದ್ವೇಷಕ್ಷಯೇಣ ಚ |
ಅಹಿಂಸಯಾ ಚ ಭೂತಾನಾಮಮೃತತ್ವಾಯ ಕಲ್ಪತೇ ||
ರಾಗದ್ವೇಷವಿಮುಕ್ತಾತ್ಮಾ ಸಮಲೋಷ್ಟಾಶ್ಮಕಾಂಚನಃ |
ಪ್ರಾಣಿಹಿಂಸಾನಿವೃತ್ತಶ್ಚ ಮುನಿಃ ಸ್ಯಾತ್ಸರ್ವನಿಃಸ್ಪೃಹಃ || (ಸನ್ಯಾಸಧರ್ಮ)

"ಇಂದ್ರಿಯಗಳು ದುರ್ವಿಷಯಗಳನ್ನು ಅನುಭವಿಸದಂತೆ ತಡೆಯಬೇಕು. ಯಾವ ವಸ್ತುವಿನಲ್ಲಿಯೂ ಆಸೆಯೂ ದ್ವೇಷವೂ ಇರಬಾರದು. ಯಾವ ಪ್ರಾಣಿಗಳನ್ನೂ ಹಿಂಸಿಸಬಾರದು. ಮಣ್ಣಿನಲ್ಲಿಯೂ ಭಂಗಾರದಲ್ಲಿಯೂ ಸಮತ್ವ ಬುದ್ಧಿಯುಳ್ಳವನಾಗಬೇಕು. ಇವನು ಮುನಿ ಅಂದರೆ ಸನ್ಯಾಸಿಯೆನಿಸುವನು."

ಈ ಶ್ಲೋಕದಲ್ಲಿ ಹೇಳಿರುವ ಸನ್ಯಾಸಧರ್ಮದಲ್ಲಿ ಪ್ರಾಣಿಹಿಂಸೆಯು ಕೂಡದೆಂದು ಹೇಳಿರುತ್ತದೆ. ತುಳಸಿಯನ್ನು ಕೊಯ್ಯುವುದೂ ಸಹ ತುಳಸೀಗಿಡ ಎಂಬ ಪ್ರಾಣಿಯ ಹಿಂಸೆಯಾಗಿರುತ್ತದೆ. ಆದ್ದರಿಂದ ಸನ್ಯಾಸಿಗಳು ತುಳಸಿಯನ್ನು ಕೊಯ್ಯಕೂಡದು ಎಂದು ಸಿದ್ಧವಾಗುತ್ತದೆ.

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಹೌ |
ಅಕ್ರೋಧೋ ಗುರುಶುಶ್ರೂಷಾ ಶೌಚಂ ದ್ವಿರ್ಭುಕ್ತವರ್ಜನಮ್ ||
ವಾಙ್ಮನಃಕರ್ಮಚೇಷ್ಟಾಸು ಪ್ರಮಾದಸ್ಯ ಚ ವರ್ಜನಮ್ |
ಏತೇಷಾಮನನುಷ್ಠಾನೇ ಯತಿರ್ನಾರಕಮಶ್ನುತೇ ||

"ಪ್ರಾಣಿಗಳನ್ನು ಹಿಂಸಿಸದಿರುವುದು, ಸತ್ಯವಾದ ಮಾತುಗಳನ್ನು ಆಡುವುದು, ಕದಿಯದಿರುವುದು, ಬ್ರಹ್ಮಚರ್ಯ ವ್ರತ, ಯಾರಿಂದಲೂ ಯಾವ ವಸ್ತುವನ್ನೂ ತೆಗೆದುಕೊಳ್ಳದಿರುವುದು, ಕೋಪವು ಬಾರದಿರುವುದು, ಗುರುಗಳನ್ನು ಸೇವಿಸುವುದು, ವಾಕ್ಶುದ್ಧಿ ದೇಹಶುದ್ಧಿ ಮನಃಶುದ್ಧಿಗಳಿಂದ ಯುಕ್ತನಾಗಿರುವುದು, ಎರಡಾವರ್ತಿ ಭೋಜನ ಮಾಡದಿರುವುದು, ಮಾತು ಮನಸ್ಸು ಮತ್ತು ದೇಹಗಳ ವ್ಯಾಪಾರಗಳಲ್ಲಿ ಅಜಾಗ್ರತೆಯಿಲ್ಲದಿರುವಿಕೆ, ಇವುಗಳೆಲ್ಲವೂ ಸನ್ಯಾಸಿಯ ಧರ್ಮಗಳು. ಇವುಗಳನ್ನು ಅನುಷ್ಠಿಸದಿರುವ ಯತಿಯು ನರಕವನ್ನು ಅನುಭವಿಸುವನು."

ಸರ್ವೇಷಾಮಭಯಂ ದತ್ವಾ ವಿರಕ್ತಃ ಪ್ರವ್ರಜೇದ್ಧರಿಮ್ | (ಶ್ರೀಮದಾಚಾರ್ಯರ ವಚನ)

"ಎಲ್ಲರಿಗೂ ಅಭಯವನ್ನು ಕೊಡಬೇಕು. ವಿರಕ್ತನಾಗಬೇಕು. ಅನಂತರದಲ್ಲಿ ಸನ್ಯಾಸವನ್ನು ಸ್ವೀಕರಿಸಬೇಕು."

ಛೇದನೇ ಭೇದನೇ ಪಾಕೇ ಯತಿರ್ಯತ್ರ ಪ್ರವರ್ತತೇ |
ತಾದೃಶಂ ಕಶ್ಮಲಂ ದೃಷ್ಟ್ವಾ ಸವಾಸಾ ಜಲಮಾವಿಶೇತ್ || (ಸ್ಮೃತ್ಯಂತರ)

"ಕಡಿಯುವುದು, ಶೀಳುವುದು, ಬೇಯಿಸುವುದು ಮುಂತಾದ ಕೀಳುತರದ ಕಾರ್ಯಗಳನ್ನು ಮಾಡುತ್ತಿರುವ ಸನ್ಯಾಸಿಯನ್ನು ನೋಡಿದವನು ಉಟ್ಟ ಬಟ್ಟೆಯೊಡನೆ ನೀರಿನಲ್ಲಿ ಮುಳುಗಿ ಸ್ನಾನವನ್ನು ಮಾಡಬೇಕು."

ಅಕರ್ಮಾ ಯದಿ ಹಿಂಸಾಂ ತು ಯತಿರ್ಭಿಕ್ಷುಃ ಸಮಾಚರೇತ್ |
ಕುರ್ಯಾತ್ಕೃಛ್ರಾತಿಕೃಛ್ರಂ ತು ಚಾಂದ್ರಾಯಣಮಥಾಪಿ ವಾ ||
ಮೂಲೋತ್ಪಾಟೇಷು ಪುಷ್ಪೇಷು ಪತ್ರೇಷು ಚ ಫಲೇಷು ಚ |
ಸ್ಥಾವರಾಣಾಂ ಚೋಪಮರ್ದೇ ಪ್ರಾಣಾಯಾಮಾಸ್ತ್ರಯಃ ತ್ರಯಃ ||

"ಯಜ್ಞ ಮುಂತಾದ ಕರ್ಮಗಳನ್ನು ಮಾಡಲು ಅಧಿಕಾರವಿಲ್ಲದವನು ಸನ್ಯಾಸಿಯು. ಅವನು ಹಿಂಸೆಯನ್ನು ಮಾಡಬಾರದು.

ಹಾಗೆ ಹಿಂಸೆಯನ್ನು ಮಾಡಿದರೆ ಕೃಚ್ಛ್ರವನ್ನೂ ಅತಿಕೃಚ್ಛ್ರವನ್ನೂ ಚಾಂದ್ರಾಯಣವನ್ನೂ ಪ್ರಾಯಶ್ಚಿತ್ತರೂಪವಾಗಿ ಅನುಷ್ಠಿಸಬೇಕು. ಬೇರನ್ನು ಕಿತ್ತರೆ, ಪುಷ್ಪ, ಎಲೆ ಮತ್ತು ಹಣ್ಣುಗಳನ್ನು ಕೊಯ್ದರೆ, ಮರ ಮುಂತಾದ ಸ್ಥಾವರಪ್ರಾಣಿಗಳನ್ನು ಪೀಡಿಸಿದರೆ ಒಂದೊಂದು ಕಾರ್ಯಗಳನ್ನು ಮಾಡಿ ಮುಗಿಸಿದ ಕೂಡಲೇ ಮೂರು ಮೂರು ಸಲ ಪ್ರಾಣಾಯಾಮವನ್ನು ಮಾಡಬೇಕು."

**ತುಳಸಿ ಇಲ್ಲದಿರುವಾಗ ಸನ್ಯಾಸಿಗಳು ಪೂಜೆಯನ್ನು ಮಾಡುವ ಕ್ರಮ**

ಮಾನಸೇನಾಥ ಪುಷ್ಪೈರ್ವಾ ಪ್ರಣವೇನ ಸಮರ್ಚಯೇತ್ || (ಆಚಾರ್ಯರ ವಚನ)

"ತುಳಸಿಯು ಇಲ್ಲದಿರುವಾಗ ಮನಸ್ಸಿನಿಂದ ನಿರ್ಮಿತವಾದ ತುಳಸಿಯಿಂದಲಾಗಲೀ ಪುಷ್ಪಗಳಿಂದಲಾಗಲೀ ಪ್ರಣವ ಮಂತ್ರದಿಂದ ಪೂಜಿಸಬೇಕು."

ಬುದ್ಧ್ಯಾ ವಿಹಿಂಸಾಪುಷ್ಪೈರ್ವಾ ಪ್ರಣವೇನ ಸಮರ್ಚಯೇತ್ |
ವಾಸುದೇವಾತ್ಮಕಂ ಬ್ರಹ್ಮ ಮೂಲಮಂತ್ರೇಣ ವಾ ಯತಿಃ || (ಗೀತಾತಾತ್ಪರ್ಯ)

"ಸನ್ಯಾಸಿಯಾದವನು ಬುದ್ಧಿಯಿಂದ ನಿರ್ಮಿತವಾದ ಪುಷ್ಪಗಳಿಂದಲೂ ಹಿಂಸೆಯೇ ಏರ್ಪಡದಿರುವ ಪುಷ್ಪಗಳಿಂದಲೂ ವಾಸುದೇವರೂಪಿಯಾದ ಶ್ರೀಹರಿಯನ್ನು ಪ್ರಣವಮಂತ್ರ ಅಥವಾ ನಾರಾಯಣಾಷ್ಟಾಕ್ಷರಮಂತ್ರಗಳಿಂದ ಪೂಜಿಸಬೇಕು."

ದ್ರವ್ಯಾಣಾಮಪ್ಯಲಾಭೇ ತು ಸಲಿಲೇನಾಪಿ ಪೂಜಿತಃ |
ಯೋ ದದಾತಿ ಸ್ವಕಂ ಸ್ಥಾನಂ ಸ ತ್ವಯಾ ಕಿಂ ನ ಪೂಜಿತಃ || (ಕೃಷ್ಣಾಮೃತಮಹಾರ್ಣವ)

"ತುಳಸೀ ಮುಂತಾದ ದ್ರವ್ಯಗಳು ಸಿಗದಿದ್ದರೆ ಬರೇ ನೀರಿನಿಂದ ಪೂಜಿಸಲ್ಪಟ್ಟ ಶ್ರೀಹರಿಯು ತನ್ನ ಸ್ಥಾನಗಳನ್ನು ಕೊಡುವನು. ಅವನನ್ನು ನೀನು ಪೂಜಿಸಲಿಲ್ಲವೇ?"

ವಿಧಿವದ್ದೇವದೇವೇಶಃ ಶಂಖಚಕ್ರಗದಾಧರಃ |
ಫಲಂ ದದಾತಿ ವಿಪುಲಂ ಸಲಿಲೇನಾಪಿ ಪೂಜಿತಃ || (ಪಾದ್ಮವಚನ)

"ಶಂಖಚಕ್ರಗದೆಗಳನ್ನು ಧರಿಸಿರುವ ದೇವದೇವೇಶನಾಗಿರುವ ನಾರಾಯಣನನ್ನು ವಿಧಿಪ್ರಕಾರವಾಗಿ ನೀರಿನಿಂದಲಾದರೂ ಪೂಜಿಸಿದರೆ ಫಲವನ್ನು ಕೊಡುವನು."

ಏವಮೇವ ಯತೇಃ ಸ್ವೀಯವಿತ್ತೇನ ತು ವಿನಾ ಸದಾ | (ಆಚಾರ್ಯರ ವಚನ)

"ಸನ್ಯಾಸಿಗಳು ತಮ್ಮ ಸ್ವಂತಹಣ ಮುಂತಾದ ವಸ್ತುಗಳಿಲ್ಲದೆ ಇತರರು ತಂದು ಕೊಡುವ ವಸ್ತುಗಳಿಂದಲೇ ಶ್ರೀಹರಿಯನ್ನು ಪೂಜಿಸಬೇಕು."

ಅಯಾಚಿತಾನಿ ಲಬ್ಧಾನಿ ಯದ್ವಾ ಕಮಲಸಂಭವ | (ಪಂಚರಾತ್ರ ವಚನ)

"ಬ್ರಹ್ಮನೇ, ಸನ್ಯಾಸಿಗಳು ಯಾರಿಂದಲೂ ಯಾವ ವಸ್ತುಗಳನ್ನೂ ಬೇಡಬಾರದು. ತಾನಾಗಿಯೇ ಸಿಕ್ಕಿರುವ ವಸ್ತುಗಳಿಂದ ಶ್ರೀಹರಿಯನ್ನು ಪೂಜಿಸಬೇಕು."

ಮೇಲ್ಕಂಡ ವಚನಗಳಿಂದ "ಸನ್ಯಾಸಿಗಳು ಮರ ಗಿಡ ಮುಂತಾದವುಗಳನ್ನು ಛೇದಿಸಬಾರದು. ತನ್ನ ಪ್ರಯತ್ನವಿಲ್ಲದೆ ಶ್ರೀಹರಿಯ ಸಂಕಲ್ಪದಿಂದ ತಾನಾಗಿಯೇ ಬಂದಿರುವ ವಸ್ತುಗಳಿಂದ ಅಥವಾ ತುಳಸೀಕಾಷ್ಠದಿಂದ ಅಥವಾ ನೀರಿನಿಂದ ಶ್ರೀಹರಿಯನ್ನು ಪೂಜಿಸಬೇಕು." ಎಂದು ಸಿದ್ಧವಾಯಿತು. ಆದ್ದರಿಂದ ಸನ್ಯಾಸಿಗಳು ತುಳಸಿಯನ್ನು ಕೊಯ್ದು ಶ್ರೀಹರಿಯನ್ನು ಪೂಜಿಸಬಾರದು.

## ತುಳಸಿಯ ಮಹಿಮೆ

ಸರ್ವೇಷಾಂ ಪತ್ರಜಾತೀನಾಂ ತುಲಸೀ ಕೇಶವಪ್ರಿಯಾ |
ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ||
ವಾಸುದೇವಾದಯೋ ದೇವಾ ವಸಂತಿ ತುಲಸೀದಲೇ |
ಸರ್ವತ್ರ ಸರ್ವಕಾಲೇ ತು ತುಲಸೀ ವಿಷ್ಣುವಲ್ಲಭಾ ||
ತ್ಯಕ್ತ್ವಾ ತು ಮಾಲತೀಪುಷ್ಪಂ ಮುಕ್ತಾಂ ಚೈವ ಮನೋಹರಾಮ್ |
ಗೃಹೀತ್ವಾ ತುಲಸೀಪತ್ರಂ ಭಕ್ತ್ಯಾ ಮಾಧವಮರ್ಚಯೇತ್ ||
ತಸ್ಯ ಪುಣ್ಯಫಲಂ ಭೂಯಸ್ತಥಾ ದೋಷೋಽಪಿ ನೋ ಭವೇತ್ |
ದಾರಿದ್ರ್ಯದುಃಖರೋಗಾದಿ ಪಾಪಾನಿ ಸುಬಹೂನ್ಯಪಿ ||
ತುಳಸೀ ಹರತೇ ಕ್ಷಿಪ್ರಂ ರೋಗಾನಿವ ಹರೀತಕೀ ||
ವರ್ಜ್ಯಂ ಪರ್ಯುಷಿತಂ ಪುಷ್ಪಂ ವರ್ಜ್ಯಂ ಪರ್ಯುಷಿತಂ ಪಯಃ ||
ನ ವರ್ಜ್ಯಂ ತುಲಸೀಪತ್ರಂ ನ ವರ್ಜ್ಯಂ ಜಾಹ್ನವೀಜಲಮ್ |
ಕಾರ್ತಿಕ್ಯಾಂ ಸಕಲಂ ಮಾಸಂ ತುಲಸ್ಯಾಽರ್ಚಯತೇ ಹರಿಮ್ ||
ದಿನೇ ದಿನೇ ಫಲಂ ತಸ್ಯ ಕಪಿಲಾಶತದಾನಕಮ್ |
ನಾರಾಯಣಾತ್ಪರಂ ದೈವಂ ನ ಪತ್ರಂ ತುಲಸೀದಲಾತ್ ||
ನಾಹತಂ ವಿಪ್ರಸದೃಶಂ ನ ದಾನಂ ಸುರಭೀಸಮಮ್ |
ನ ತಥಾ ಹವಿಷಾ ಹೋಮೈರ್ನ ದಾನೈರ್ನ ಸಮಾಧಿಭಿಃ ||
ತುಲಸೀದರ್ಶನಾದೇವ ಯಥಾ ತುಷ್ಯತಿ ಕೇಶವಃ |
ನ ತೃಪ್ತಿರಶನಾದನ್ಯನ್ನ ಗುರುರ್ಜನಕಾತ್ಪರಃ ||
ನಾರಾಯಣಾತ್ಪರಂ ದೈವಂ ನ ಸಮಂ ತುಲಸೀದಲಾತ್ |

"ಎಲ್ಲಾ ಪತ್ರಗಳ ಮಧ್ಯದಲ್ಲಿ ತುಳಸೀಪತ್ರವು ಶ್ರೀಹರಿಗೆ ಅತ್ಯಂತಪ್ರಿಯವಾದುದು. ಪುಷ್ಕರ ಮುಂತಾದ ಸಕಲ ತೀರ್ಥಗಳೂ ಗಂಗೆ ಮುಂತಾದ ಸಕಲನದಿಗಳೂ ವಾಸುದೇವನೇ ಮೊದಲಾದ ಸಕಲದೇವತೆಗಳೂ ತುಳಸೀದಲದಲ್ಲಿ ವಾಸಿಸುತ್ತಿರುವರು. ಎಲ್ಲಾ ದೇಶಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ತುಳಸಿಯು ವಿಷ್ಣುವಿಗೆ ಪ್ರಿಯಳಾಗಿರುವಳು. ಮಾಲತೀ ಪುಷ್ಪವನ್ನೂ ಸುಂದರವಾದ ಮುತ್ತುಗಳನ್ನೂ ಬಿಟ್ಟು ತುಳಸೀಪತ್ರವನ್ನು ತೆಗೆದುಕೊಂಡು ಅದರಿಂದ ಭಕ್ತಿಯಿಂದ ಶ್ರೀಹರಿಯನ್ನು ಪೂಜಿಸಬೇಕು. ಹೀಗೆ ಪೂಜಿಸುವವನಿಗೆ ಬರುವ ಪುಣ್ಯವು ಅಪಾರವಾದುದು. ತುಳಸೀದಳವಿಲ್ಲದೆ ಪೂಜಿಸುವವನಿಗೆ ಬರುವ ದೋಷವೂ ಅಪಾರವಾದುದು. ದಾರಿದ್ರ್ಯ ದುಃಖ ರೋಗ ಮುಂತಾದವುಗಳಿಗೆ ಕಾರಣವಾಗಿರುವ ತುಂಬಾ ಅಧಿಕವಾಗಿರುವ ಎಲ್ಲಾ ಪಾಪಗಳನ್ನೂ ಅಣಲೆಕಾಯಿಯು ಎಲ್ಲಾ ರೋಗಗಳನ್ನು ಪರಿಹರಿಸಿದಂತೆ ತುಳಸಿಯು ಬೇಗನೆ ಪರಿಹರಿಸುವಳು. ಹಳೆಯ ಪುಷ್ಪವೂ ಹಾಲೂ ತ್ಯಾಜ್ಯವಾಗುತ್ತದೆ. ಆದರೆ ತುಳಸೀದಳವೂ ಗಂಗಾಜಲವೂ ಹಳೆಯದಾದರೂ ತ್ಯಾಜ್ಯವಲ್ಲ. ಕಾರ್ತಿಕಮಾಸದಲ್ಲಿ ಇಡೀ ತಿಂಗಳು ಮುಗಿಯುವವರೆಗೆ ತುಳಸಿಯಿಂದ ಶ್ರೀಹರಿಯನ್ನು ಅರ್ಚಿಸುವವನಿಗೆ ಒಂದೊಂದು ದಿನದಲ್ಲಿಯೂ ನೂರು ಕಪಿಲಗೋವಿನ ದಾನದಿಂದ ಬರುವ ಫಲವು ಬರುತ್ತದೆ. ನಾರಾಯಣನಿಗಿಂತ ಉತ್ತಮನಾದ ದೇವತೆಯೂ, ತುಲಸೀಪುತ್ರಕ್ಕಿಂತ ಉತ್ತಮವಾದ ಪತ್ರವೂ ಬ್ರಾಹ್ಮಣನಿಗೆ ಸಮನಾದ ಪರಿಶುದ್ಧವ್ಯಕ್ತಿಯೂ ಗೋದಾನಕ್ಕೆ

ಸಮವಾದ ದಾನವೂ ಇಲ್ಲ. ತುಳಸಿಯನ್ನು ನೋಡಿದ ಕೂಡಲೇ ಶ್ರೀಹರಿಗೆ ಏರ್ಪಡುವ ಸಂತೋಷವು ಯಜ್ಞಗಳಲ್ಲಿ ಸಮರ್ಪಿಸುವ ಹವಿಸ್ಸುಗಳಿಂದಲೂ ಹೋಮಗಳಿಂದಲೂ ದಾನಗಳಿಂದಲೂ ಅಷ್ಟಾಂಗಯೋಗ ಮತ್ತು ಸಮಾಧಿಗಳಿಂದಲೂ ಏರ್ಪಡುವುದಿಲ್ಲ. ಊಟಕ್ಕಿಂತ ತೃಪ್ತಿಕರವಾದ ವಸ್ತುವಿಲ್ಲ. ತಂದೆಗಿಂತ ಉತ್ತಮನಾದ ಗುರುವಿಲ್ಲ. ನಾರಾಯಣನಿಗಿಂತ ಉತ್ತಮನಾದ ದೇವತೆಯಿಲ್ಲ. ತುಳಸೀದಳಕ್ಕೆ ಸಮವಾದ ಪತ್ರವಿಲ್ಲ."

ನ ಪಶ್ಯತಿ ಯಮಂ ವೈಶ್ಯ ತುಲಸೀವನರೋಪಣಾತ್ |
ಸರ್ವಪಾಪಹರಂ ಸರ್ವಕಾಮದಂ ತುಲಸೀದಲಮ್ ||
ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ |
ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ||
ತುಲಸೀಕಾನನಂ ವೈಶ್ಯ ಗೃಹೇ ಯಸ್ಮಿಂಸ್ತು ತಿಷ್ಠತಿ |
ತದ್ಗೃಹಂ ತೀರ್ಥಭೂತಂ ಹಿ ನಾಯಾಂತಿ ಯಮಕಿಂಕರಾಃ ||
ತಾವದ್ವರ್ಷಸಹಸ್ರಾಣಿ ಯಾವದ್ಬೀಜದಲಾನಿ ಚ |
ವಸಂತಿ ವಿಷ್ಣುಲೋಕೇ ತು ತುಲಸೀಂ ರೋಪಯಂತಿ ಯೇ ||
ತುಲಸೀಗಂಧಮಾಘ್ರಾಯ ಪಿತರಸ್ತುಷ್ಟಮಾನಸಾಃ |
ಪ್ರಯಾಂತಿ ಗರುಡಾರೂಢಾಸ್ತತ್ಪದಂ ಚಕ್ರಪಾಣಿನಃ ||
ದರ್ಶನಂ ನರ್ಮದಾಯಾಸ್ತು ಗಂಗಾಸ್ನಾನಂ ವಿಶಾಂ ವರ |
ತುಲಸೀದಲಸಂಸ್ಪರ್ಶಸ್ತ್ರಯಮೇತತ್ಸಮಂ ಸ್ಮೃತಮ್ ||
ರೋಪಣಾತ್ಪಾಲನಾತ್ಸೇಕಾದ್ದರ್ಶನಾತ್ಸ್ಪರ್ಶನಾನ್ನೃಣಾಮ್ |
ತುಲಸೀ ಹರತೇ ಪಾಪಂ ವಾಙ್ಮನಃಕಾಯಸಂಚಿತಮ್ ||
ಪಕ್ಷೇ ಪಕ್ಷೇ ಚ ಸಂಪ್ರಾಪ್ತೇ ದ್ವಾದಶ್ಯಾಂ ವೈಶ್ಯಸತ್ತಮ |
ಬ್ರಹ್ಮಾದಯೋಽಪಿ ಕುರ್ವಂತಿ ತುಲಸೀವನಪೂಜನಮ್ ||
ಮಣಿಕಾಂಚನಪುಷ್ಪಾಣಿ ವಜ್ರವೈಡೂರ್ಯಕಾಣಿ ಚ |
ತುಲಸೀಪತ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಮ್ ||
ಆಮ್ರಾರೋಪಸಹಸ್ರೇಣ ಪಿಪ್ಪಲಾನಾಂ ಶತೇನ ಚ |
ಯತ್ಫಲಂ ಹಿ ತದೇಕೇನ ತುಲಸೀವಿಟಪೇನ ತು ||
ವಿಷ್ಣುಪೂಜನಸಂಸಕ್ತಸ್ತುಲಸೀಂ ಯಸ್ತು ರೋಪಯೇತ್ |
ಯಜ್ಞಾಯುತಶತೈಕಂ ವೈ ರೋಪಕೋ ವಸತೇ ದಿವಿ ||
ಆರೋಪ್ಯ ತುಲಸೀಂ ವೈಶ್ಯ ಸಂಪೂಜ್ಯ ಸುದಲೈರ್ಹರಿಮ್ |
ವಸಂತಿ ಮೋದಮಾನಾಸ್ತು ಯತ್ರ ದೇವಶ್ಚತುರ್ಭುಜಃ || (ಪಾದ್ಮಪುರಾಣ ವಚನ )

"ತುಳಸಿಯ ವನವನ್ನು ಬೆಳೆಯಿಸಿದವನು ಯಮನನ್ನು ನೋಡುವುದಿಲ್ಲ. ತುಳಸೀದಲವು ಎಲ್ಲಾ ಪಾಪಗಳನ್ನೂ ಪರಿಹರಿಸುತ್ತದೆ. ಎಲ್ಲಾ ಇಷ್ಟಗಳನ್ನೂ ಕೊಡುತ್ತದೆ. ಎಲ್ಲೆಲ್ಲಿ ತುಳಸಿಯ ವನಗಳಿವೆಯೋ. ಪದ್ಮಗಳ ವನಗಳಿವೆಯೋ ವಿಷ್ಣು ಭಕ್ತರು ವಾಸಿಸುತ್ತಿರುವರೋ ಅಲ್ಲಲ್ಲಿ ಶ್ರೀಹರಿಯು ಸನ್ನಿಹಿತನಾಗಿರುವನು. ಯಾವ ಮನೆಯಲ್ಲಿ ತುಳಸಿಯ ವನವಿದೆಯೋ

ಆ ಮನೆಯು ದೊಡ್ಡ ತೀರ್ಥಕ್ಷೇತ್ರವೆನಿಸುತ್ತದೆ. ಆ ಮನೆಗೆ ಯಮದೂತರು ಬರುವುದಿಲ್ಲ. ತುಳಸೀವನವನ್ನು ಬೆಳೆಯಿಸಿದಾಗ ಎಷ್ಟು ತುಳಸಿಯ ಬೀಜಗಳು ಮತ್ತು ತುಳಸೀದಳಗಳು ಏರ್ಪಟ್ಟಿವೆಯೋ ಅಷ್ಟು ಸಹಸ್ರವರ್ಷಗಳವರೆಗೆ ವಿಷ್ಣು ಲೋಕಗಳಲ್ಲಿ ತುಳಸೀವನಗಳನ್ನು ಏರ್ಪಡಿಸಿದವರು ವಾಸಿಸುವರು. ತುಳಸಿಯ ಪರಿಮಳವನ್ನು ಮೂಸುತ್ತಿರುವ ಪಿತೃಗಳು ತೃಪ್ತರಾಗಿ ಗರುಡದೇವನ ಮೇಲೆ ಕುಳಿತವರಾಗಿ ಚಕ್ರಪಾಣಿಯಾದ ಶ್ರೀಹರಿಯ ಲೋಕವನ್ನು ಹೊಂದುವರು. ನರ್ಮದಾ ನದಿಯ ದರ್ಶನ, ಗಂಗಾಸ್ನಾನ, ತುಳಸೀದಳದ ಸ್ಪರ್ಶ ಈ ಮೂರೂ ಸಮಾನವೆನಿಸುತ್ತವೆ. ತುಳಸೀಗಿಡವನ್ನು ನೆಡುವುದು, ರಕ್ಷಿಸುವುದು, ತುಳಸೀಗಿಡದ ಬೇರಿಗೆ ನೀರನ್ನು ಎರೆಯುವುದು, ತುಳಸೀಗಿಡವನ್ನು ನೋಡುವುದು, ಇವುಗಳಲ್ಲಿ ಒಂದೊಂದರಿಂದಲೂ ಮಾತುಗಳಿಂದಲೂ ಮನಸ್ಸಿನಿಂದಲೂ ಶರೀರದಿಂದಲೂ ಬಂದಿರುವ ಎಲ್ಲಾ ಪಾಪಗಳೂ ಹೋಗುತ್ತವೆ. ಒಂದೊಂದು ಪಕ್ಷಗಳಲ್ಲಿಯೂ ದ್ವಾದಶೀದಿನಗಳಲ್ಲಿ ಬ್ರಹ್ಮ ಮುಂತಾದ ಸಕಲದೇವತೆಗಳೂ ತುಳಸೀವನದ ಪೂಜೆಯನ್ನು ಮಾಡುತ್ತಿರುವರು. ಮಣಿಗಳಿಂದಲೂ ಸುವರ್ಣದಿಂದಲೂ ವಜ್ರದಿಂದಲೂ ವೈಡೂರ್ಯದಿಂದಲೂ ನಿರ್ಮಿತವಾದ ಪುಷ್ಪಗಳನ್ನು ದಾನ ಮಾಡಿದರೂ ತುಳಸೀದಳದಾನವನ್ನು ಮಾಡಿದ್ದರಿಂದ ಬರುವ ಪುಣ್ಯಕ್ಕಿಂತ ಹದಿನಾರು ಭಾಗಗಳಲ್ಲಿ ಒಂದು ಭಾಗದಷ್ಟು ಪುಣ್ಯವೂ ಬರಲಾರದು. ಒಂದು ಸಾವಿರ ಮಾವಿನಗಿಡಗಳನ್ನೂ ಒಂದು ನೂರು ಪಿಪ್ಪಲಿಯ ಗಿಡಗಳನ್ನೂ ನೆಡುವುದರಿಂದ ಬರುವ ಫಲವು ಬರೇ ಒಂದು ತುಳಸೀಗಿಡವನ್ನು ನೆಡುವುದರಿಂದ ಬರುತ್ತದೆ. ವಿಷ್ಣುಪೂಜೆಯಲ್ಲಿ ಆಸಕ್ತಿಯಿಂದ ಒಂದು ತುಳಸೀಗಿಡವನ್ನು ನೆಡುವವನು ಹತ್ತುಲಕ್ಷ ಯಜ್ಞಗಳನ್ನು ಮಾಡಿದವನಿಗೆ ಬರುವ ಪುಣ್ಯವನ್ನು ಪಡೆದು ಆ ಪುಣ್ಯದಿಂದ ಎಷ್ಟು ವರ್ಷಗಳವರೆಗೆ ದೇವಲೋಕದಲ್ಲಿ ವಾಸಿಸಲು ಸಾಧ್ಯವೋ ಅಷ್ಟು ವರ್ಷಗಳವರೆಗೆ ದೇವಲೋಕಗಳಲ್ಲಿ ವಾಸಿಸುವನು. ತುಳಸೀಗಿಡವನ್ನು ನೆಡಬೇಕು. ಆ ಗಿಡದ ತುಳಸಿಯಿಂದ ಶ್ರೀಹರಿಯನ್ನು ಪೂಜಿಸಬೇಕು. ಹೀಗೆ ಮಾಡುವವರು ಚತುರ್ಭುಜನಾದ ಶ್ರೀಹರಿಯು ವಾಸಿಸುತ್ತಿರುವ ವೈಕುಂಠ ಮುಂತಾದ ಲೋಕಗಳಲ್ಲಿ ಸುಖವಾಗಿ ವಾಸಿಸುವರು.

ತುಲಸ್ಯುವಾಚ -

ಅಂತಕಾಲೇ ಚ ಮತ್ಪತ್ರಂ ಭಕ್ಷಯೇದ್ಯದಿ ಪಾಪಕೃತ್ |
ತವ ಸಾಯುಜ್ಯಮಾಪ್ನೋತು ಅಸ್ಮಿನ್ ಪ್ರೀತಿವಿವೃದ್ಧಯೇ ||

ಶ್ರೀಭಗವಾನುವಾಚ -

ತಥಾ ಭವತು ಕಲ್ಯಾಣಿ ಪ್ರಭಾವಾತ್ಸರ್ವಮೇಷ್ಯಸಿ |
ಭಕ್ಷಣಾತ್ತವ ದೇವೇಶಿ ಸ್ಮೃತಿಮಂತೇ ದದಾಮ್ಯಹಮ್ ||
ಸರ್ವೇಷಾಂ ಚೈವ ಪುಷ್ಪಾಣಾಂ ಪತ್ರಾಣಾಂ ಚೈವ ಸುಂದರಿ |
ಶ್ರೈಷ್ಠ್ಯಂ ದದಾಮಿ ದೇವೇಶಿ ಪ್ರೀತಿರ್ಮೇ ತವ ದರ್ಶನಾತ್ ||
ಶುಷ್ಕಂ ಪರ್ಯುಷಿತಂ ವಾರ್ದ್ರಂ ಕಾಷ್ಠಮೂಲಮ್ಮೃದಾದಿಭಿಃ |
ಅರ್ಚಯೇನ್ಮಮ ಬಿಂಬಸ್ಯ ಭಾವಶುದ್ಧಿರ್ಭವಿಷ್ಯತಿ ||
ಕ್ಷೀರಾರ್ಣವೇ ಚ ವೈಕುಂಠೇ ಹರಿಕ್ಷೇತ್ರೇ ಚ ನೈಮಿಷೇ |
ವಿಲಿಪ್ತಸ್ತುಲಸೀಮೂಲೇ ಸದಾ ಸನ್ನಿಹಿತೋಽಸ್ಮ್ಯಹಮ್ ||
ಆಗಮಾನಾಂ ತತೋ ಮೂರ್ಧ್ನಿ ಭಕ್ತಾನಾಂ ಹೃದಯೇಂಽಬುಜೇ |
ಭಾನುಮಂಡಲಮಧ್ಯೇ ತು ತವ ಮೂಲೇ ವಸಾಮ್ಯಹಮ್ ||

ದೇವೋ ವಾ ಮಾನುಷೋ ವಾಽಪಿ ಕಿಂಕರೋ ವಾಽಥ ಸುಂದರಿ |
ತ್ವತ್ಪತ್ರರಹಿತಾ ಯೇ ಚ ಗಚ್ಛಂತಿ ನರಕಾಯುತಮ್ || (ಸ್ಕಾಂದಪುರಾಣ ತುಳಸೀಮಾಹಾತ್ಮ್ಯ)

"ಸಾಯುವ ಕಾಲದಲ್ಲಿ ನನ್ನ ಎಲೆಯನ್ನು ಯಾರು ತಿನ್ನುತ್ತಾರೋ ಅವನು ನಿನ್ನ ಸಾಯುಜ್ಯವನ್ನು ಪಡೆಯಲಿ. ನಿನ್ನ ಪ್ರೀತಿಯು ಅವನಲ್ಲಿ ಹೆಚ್ಚಲಿ" ಇದು ತುಳಸೀದೇವಿಯು ಶ್ರೀಹರಿಯಲ್ಲಿ ಮಾಡಿದ ಪ್ರಾರ್ಥನೆ.

"ಎಲೌ ದೇವಶ್ರೇಷ್ಠಳಾದ ತುಳಸೀದೇವಿಯೇ, ನೀನು ಕೇಳಿದ ವರವನ್ನು ಕೊಟ್ಟಿರುವೆನು. ನಿನ್ನ ಎಲೆಯನ್ನು ಅಂತ್ಯಕಾಲದಲ್ಲಿ ತಿಂದಿದ್ದರಿಂದ ಸಕಲಕಲ್ಯಾಣಗಳೂ ಏರ್ಪಡುತ್ತವೆ. ಅಂತ್ಯಕಾಲದಲ್ಲಿ ನನ್ನ ಸ್ಮರಣವು ಏರ್ಪಡುವಂತೆ ಮಾಡುವೆನು. ಎಲ್ಲಾ ಪುಷ್ಪಗಳಿಗಿಂತಲೂ ಪತ್ರೆಗಳಿಗಿಂತಲೂ ಶ್ರೇಷ್ಠತ್ವವನ್ನು ನಿನಗೆ ಕೊಟ್ಟಿರುವೆನು. ನಿನ್ನನ್ನು ನೋಡಿದವರಲ್ಲಿ ನನಗೆ ಪ್ರೀತಿಯು ಅಧಿಕವಾಗುತ್ತದೆ. ನಿನ್ನ ಕಾಷ್ಠ, ಮೂಲ, ಮೃತ್ತಿಕೆ ಮುಂತಾದ ವಸ್ತುಗಳು ಒಣಗಿದ್ದರೂ, ಹಸಿಯಾಗಿದ್ದರೂ, ಹಳಸಿದ್ದರೂ ಅವುಗಳಿಂದ ನನ್ನ ಪ್ರತಿಮೆಯನ್ನು ಪೂಜಿಸಬಹುದು. ಇದರಿಂದ ಮನಸ್ಸು ಶುದ್ಧವಾಗುತ್ತದೆ ಕ್ಷೀರಸಮುದ್ರದಲ್ಲಿಯೂ ವೈಕುಂಠದಲ್ಲಿಯೂ ಶ್ರೀಹರಿಸನ್ನಿಧಾನವುಳ್ಳ ಸಕಲಕ್ಷೇತ್ರಗಳಲ್ಲಿಯೂ ನೈಮಿಷಾರಣ್ಯದಲ್ಲಿಯೂ ನಾನು ಯಾವಾಗಲೂ ಸನ್ನಿಹಿತನಾಗಿರುವೆನು. ಉಪನಿಷತ್ತುಗಳಲ್ಲಿಯೂ, ಭಕ್ತರ ಹೃದಯಕಮಲಗಳಲ್ಲಿಯೂ, ಸೂರ್ಯಮಂಡಲಮಧ್ಯದಲ್ಲಿಯೂ ವಾಸಿಸಿದಂತೆ ನಿನ್ನ ಬೇರಿನ ಬುಡದಲ್ಲಿಯೂ ನಾನು ಸನ್ನಿಹಿತನಾಗಿರುವೆನು. ದೇವನಾಗಲೀ ಮನುಷ್ಯನಾಗಲೀ ಸೇವಕನಾಗಲೀ ನಿನ್ನ ಪತ್ರವನ್ನು ಧರಿಸದಿದ್ದರೆ ಹತ್ತು ಸಾವಿರ ನರಕಗಳನ್ನು ಪಡೆಯುವನು."

ಶೃಣ್ವತಾಂ ಚೈವ ಮಹಾತ್ಮ್ಯಂ ಪುನರೇವ ವದಾಮ್ಯಹಮ್ |
ಯಸ್ಯಾಃ ಕೀರ್ತನಮಾತ್ರೇಣ ಪ್ರೀತೋ ಭವತಿ ದೇವರಾಟ್ ||
ಸಿತಾ ವಾಽಪ್ಯಸಿತಾ ವಾಽಪಿ ತುಲಸೀ ವಿಷ್ಣುವಲ್ಲಭಾ |
ಲಲಾಟೇ ಧಾರಯೇದ್ಯೋ ವೈ ತುಲಸೀಮೂಲಮೃತ್ತಿಕಾಮ್ ||
ದಶಾಶ್ವಮೇಧಮಾಪ್ನೋತಿ ಸ್ನಾನಕಾಲೇ ಶತಾಧಿಕಮ್ |
ತುಲಸೀಭಕ್ಷಣೇನೈವ ಚಾಂದ್ರಾಯಣಶತಾಧಿಕಮ್ ||
ತಸ್ಮಾತ್ ಕಾಯವಿಶುದ್ಧ್ಯರ್ಥಂ ತುಲಸೀಂ ಭಕ್ಷಯೇದ್ಬುಧಃ |
ತ್ವದಂಗಸಂಭವೈಃ ಪತ್ರೈಃ ಪೂಜಯಂತಿ ಜಗತ್ಪತಿಮ್ ||
ತಥಾ ಕುರು ಪವಿತ್ರಾಂಗಿ ಕಲೌ ಮಲವಿನಾಶಿನಿ |
ಕೃಷ್ಣಾನಂದಾಶ್ರುಸಂಭೂತೇ ಕ್ಷೀರೋದಮಥನೇ ಪುರಾ ||
ತದುತ್ತಮಾಂಗೇ ತುಲಸಿ ವಿಷ್ಣುನಾ ವಿಧೃತಾ ಸ್ವಯಮ್ |
ವ್ಯಾಪಿತಾನಿ ತ್ವಯಾ ದೇವಿ ವಿಷ್ಣೋರಂಗಾನಿ ಸರ್ವಶಃ ||
ಪವಿತ್ರತಾ ತ್ವಯಾ ಪ್ರಾಪ್ತಾ ತುಲಸಿ ತ್ವಾಂ ನಮಾಮ್ಯಹಮ್ |
ತುಲಸೀಪತ್ರಗಲಿತಂ ಯತ್ತೋಯಂ ಶಿರಸಾ ವಹೇತ್ ||
ಗಂಗಾಪುಣ್ಯಮವಾಪ್ನೋತಿ ಶತಧೇನುಫಲಂ ಲಭೇತ್ | (ಶತಾನಂದರ ವಚನ)

"ತುಲಸಿಯ ಮಹಿಮೆಯು ಕೇಳುವವರಿಗೂ ಹೇಳುವವರಿಗೂ ದೇವತಾಸಾರ್ವಭೌಮನಾದ ಶ್ರೀಹರಿಯ ಪ್ರೀತಿಯನ್ನು ಕೊಡುತ್ತದೆ. ಅವಳ ಮಹಾತ್ಮ್ಯವನ್ನು ಈಗ ಹೇಳುತ್ತೇನೆ. ಕೃಷ್ಣತುಳಸಿಯಾಗಲೀ ಬಿಳಿತುಳಸಿಯಾಗಲೀ ಶ್ರೀಹರಿಗೆ ಅತ್ಯಂತಪ್ರಿಯಳಾದವಳು. ತುಳಸಿಯ ಬುಡದಲ್ಲಿರುವ ಮೃತ್ತಿಕೆಯನ್ನು ಹಣೆಯಲ್ಲಿ ಧರಿಸುವವನು ಹತ್ತು

ಅಶ್ವಮೇಧಯಾಗಗಳನ್ನು ಮಾಡಿದವನ ಫಲವನ್ನು ಪಡೆಯುವನು ಸ್ನಾನಕಾಲದಲ್ಲಿ ಧರಿಸುವವನು ನೂರಕ್ಕಿಂತಲೂ ಅಧಿಕವಾದ ಅಶ್ವಮೇಧಯಾಗಗಳನ್ನು ಮಾಡುವವನ ಫಲವನ್ನು ಪಡೆಯುವನು. ತುಲಸೀದಲಗಳನ್ನು ತಿನ್ನುವವನು ನೂರು ಚಾಂದ್ರಾಯಣವ್ರತಗಳಿಗಿಂತ ಅಧಿಕವಾದ ಚಾಂದ್ರಾಯಣವ್ರತಗಳನ್ನು ಮಾಡಿದವನ ಫಲಗಳನ್ನು ಪಡೆಯುವನು. ಆದ್ದರಿಂದ ಶರೀರ ಶುದ್ಧಿಗಾಗಿ ತುಳಸಿಯನ್ನು ತಿನ್ನಬೇಕು."

"ಎಲೌ ತುಳಸೀದೇವಿಯೇ, ನಿನ್ನ ಅಂಗಗಳಿಂದ ಹುಟ್ಟಿರುವ ತುಳಸೀದಳಗಳಿಂದ ನಿನ್ನನ್ನು ಪೂಜಿಸುವಂತೆ ಮಾಡು. ಕಲಿಕಾಲದ ದೋಷಗಳನ್ನೆಲ್ಲವನ್ನೂ ಪರಿಹರಿಸು. ಪಾವಿತ್ರ್ಯವು ಬರುವಂತೆ ಮಾಡು. ಹಿಂದೆ ಕ್ಷೀರಸಮುದ್ರಮಥನಕಾಲದಲ್ಲಿ ಶ್ರೀಕೃಷ್ಣದೇವನ ಆನಂದಭಾಷ್ಪಗಳಿಂದ ಹುಟ್ಟಿದವಳೇ, ಶ್ರೀಹರಿಯಿಂದ ಪ್ರೀತಿಯಿಂದ ತನ್ನ ತಲೆಯಲ್ಲಿ ಧರಿಸಲ್ಪಟ್ಟವಳೇ, ಶ್ರೀಹರಿಯ ಎಲ್ಲಾ ಅವಯವಗಳಲ್ಲಿಯೂ ವ್ಯಾಪಿಸಿರುವಿ. ಆದ್ದರಿಂದಲೇ ಪವಿತ್ರತೆಯನ್ನು ನೀನು ಧರಿಸಿದವಳಾಗಿರುವಿ. ನಿನ್ನನ್ನು ಭಕ್ತಿಯಿಂದ ನಾನು ನಮಸ್ಕರಿಸುವೆನು. ನಿನ್ನ ಪತ್ರಗಳಿಂದ ಕೆಳಗೆ ಬಿದ್ದ ನೀರನ್ನು ತಲೆಯಲ್ಲಿ ಧರಿಸುವವನು ಗಂಗಾ ಸ್ನಾನದಿಂದ ಬರುವ ಪುಣ್ಯವನ್ನೂ ನೂರು ಗೋದಾನಗಳ ಫಲಗಳನ್ನೂ ಪಡೆಯುವನು."

## ಧನವನ್ನು ಸಂಪಾದಿಸುವುದು

ತೃತೀಯೇ ಚ ತಥಾ ಭಾಗೇ ಭೃತ್ಯವರ್ಗಾರ್ಥಸಾಧನಮ್ | (ದಕ್ಷ ವಚನ)

"ಹಗಲಿನ ಪ್ರಮಾಣವನ್ನು ಎಂಟರಿಂದ ಭಾಗಿಸಬೇಕು. ಆ ಭಾಗಗಳಲ್ಲಿ ಮೂರನೆಯ ಭಾಗದಲ್ಲಿ ಸೇವಕರನ್ನು ರಕ್ಷಿಸುವುದಕ್ಕೆ ಬೇಕಾದ ಹಣವನ್ನು ಸಂಪಾದಿಸಬೇಕು."

ಪೋಷ್ಯವರ್ಗಾರ್ಥಸಿದ್ಧ್ಯರ್ಥಂ ಧನಮಿಚ್ಛೇತ ಬುದ್ಧಿಮಾನ್ | (ಚತುರ್ವಿಂಶತಿಮತ)

"ಪೋಷಿಸುವುದಕ್ಕೆ ಯೋಗ್ಯರನ್ನು ರಕ್ಷಿಸುವುದಕ್ಕಾಗಿ ವಿವೇಕಿಗಳು ಹಣವನ್ನು ಅಪೇಕ್ಷಿಸಬೇಕು."

ಮಾತಾ ಪಿತಾ ಗುರುರ್ಭ್ರಾತಾ ಪ್ರಜಾ (ರಾಜಾ) ದೀನಃ ಸಮಾಶ್ರಿತಃ |
ಅಭ್ಯಾಗತೋಽತಿಥಿಶ್ಚಾಗ್ನಿಃ ಪೋಷ್ಯವರ್ಗ ಉದಾಹೃತಃ || (ದಕ್ಷ ವಚನ)

"ತಾಯಿ, ತಂದೆ, ಗುರು, ಸಹೋದರ, ಮಗ, (ರಾಜ) ದೀನ. ನಮ್ಮನ್ನು ನಂಬಿಕೊಂಡು ಇರುವವನು, ಅಭ್ಯಾಗತ, ಅತಿಥಿ, ಅಗ್ನಿ ಇಷ್ಟು ವಸ್ತುಗಳು ಪೋಷ್ಯವರ್ಗದಲ್ಲಿ ಸೇರಿದವುಗಳು."

ಯಾತ್ರಾಮಾತ್ರಪ್ರಸಿದ್ಧ್ಯರ್ಥಂ ಸ್ವೈಃ ಕರ್ಮಭಿರಗರ್ಹಿತೈಃ |
ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಮ್ | (ಮನುವಿನ ವಚನ)

"ಮೇಲ್ಕಂಡ ಪೋಷ್ಯವರ್ಗದಲ್ಲಿ ಸೇರಿದವರ ದೇಹವನ್ನು ರಕ್ಷಿಸುವುದಕ್ಕೆ ಬೇಕಾದಷ್ಟೇ ಹಣವನ್ನು ಸಂಗ್ರಹಿಸಬೇಕು. ಅದೂ ತನ್ನ ಜಾತಿಗೂ ಆಶ್ರಮಕ್ಕೂ ಹೇಳಲ್ಪಟ್ಟ ರೀತಿಯಿಂದಲೇ ಸಂಗ್ರಹಿಸಬೇಕು. ನಿಂದಿಸಲ್ಪಟ್ಟ ಯಾವ ಕಾರ್ಯಗಳನ್ನೂ ಮಾಡಕೂಡದು. ಶರೀರವನ್ನು ಕಷ್ಟಪಡಿಸಬಾರದು. ಈ ರೀತಿಯಿಂದ ದ್ರವ್ಯವನ್ನು ಸಂಗ್ರಹಿಸಬೇಕು."

ಅಧ್ಯಾಪನಂ ಚಾಧ್ಯಯನಂ ಯಜನಂ ಯಾಜನಂ ತಥಾ |
ದಾನಂ ಪ್ರತಿಗ್ರಹಶ್ಚೈವ ಷಟ್ಕರ್ಮಾಣ್ಯಗ್ರಜನ್ಮನಃ || (ಮನುವಿನ ವಚನ)

"(1) ಅಧ್ಯಾಪನ ಅಂದರೆ ಪಾಠವನ್ನು ಹೇಳುವುದು, (2) ಅಧ್ಯಯನ ಅಂದರೆ ಪಾಠವನ್ನು ಓದುವುದು. (3) ಯಜನ ಅಂದರೆ ಯಜ್ಞ ಮುಂತಾದ ವೇದೋಕ್ತಕರ್ಮಗಳನ್ನು ಮಾಡುವುದು. (4) ಯಾಜನ ಅಂದರೆ ಅದೇ ಕರ್ಮಗಳನ್ನು ಇತರರಿಂದ ಮಾಡಿಸುವುದು. (5) ದಾನ ಅಂದರೆ ದಾನವನ್ನು ಕೊಡುವುದು ಮತ್ತು. (6) ಪ್ರತಿಗ್ರಹ ಅಂದರೆ ದಾನವನ್ನು ತೆಗೆದುಕೊಳ್ಳುವುದು. ಹೀಗೆ ಆರು ಕರ್ಮಗಳನ್ನು ಬ್ರಾಹ್ಮಣನು ಮಾಡಬೇಕು."

ಷಣ್ಣಾಂ ತು ಕರ್ಮಣಾಂ ಮಧ್ಯೇ ತ್ರೀಣಿ ಕರ್ಮಾಣಿ ಜೀವಿಕಾಃ |
ಯಾಜನಾಧ್ಯಾಪನೇ ಚೈವ ವಿಶುದ್ಧಾಚ್ಚ ಪ್ರತಿಗ್ರಹಃ || (ಮನುವಿನ ವಚನ)

"ಮೇಲ್ಕಂಡ ಆರು ಕರ್ಮಗಳ ಮಧ್ಯದಲ್ಲಿ (1) ವೇದೋಕ್ತಕರ್ಮಗಳನ್ನು ಬೇರೆ ಜನರಿಂದ ಮಾಡಿಸುವುದು. (2) ಪಾಠವನ್ನು ಹೇಳುವುದು. (3) ಪರಿಶುದ್ಧನಾದ ಯಜಮಾನನಿಂದ ದಾನವನ್ನು ತೆಗೆದುಕೊಳ್ಳುವುದು. ಈ ಮೂರು ಕರ್ಮಗಳನ್ನು ಜೀವನೋಪಾಯವಾಗಿ ಇಟ್ಟುಕೊಳ್ಳಬೇಕು." ಇವುಗಳನ್ನು ಮಾಡಲೇಬೇಕೆಂಬ ನಿಯಮವಿಲ್ಲ. ಉಳಿದ ಮೂರು ಕರ್ಮಗಳನ್ನು ಅವಶ್ಯವಾಗಿ ಮಾಡಲೇಬೇಕು.

ದ್ವಿಜಾತೀನಾಮಧ್ಯಯನಮಿಜ್ಯಾ ದಾನಂ, ಬ್ರಾಹ್ಮಣಸ್ಯಾಧಿಕಾಃ
ಪ್ರವಚನಯಾಜನಪ್ರತಿಗ್ರಹಾಃ,
ಪೂರ್ವೇಷು ನಿಯಮಃ | (ಗೌತಮರ ವಚನ)

"ಬ್ರಾಹ್ಮಣ ಕ್ಷತ್ರಿಯ ವೈಶ್ಯ ಎಂಬ ಮೂರು ಜಾತಿಯವರಿಗೆ ಉಪನಯನ ಎಂಬ ಎರಡನೆಯ ಜನ್ಮವಿರುತ್ತದೆ. ಆದ್ದರಿಂದ ಅವರೆಲ್ಲರೂ ದ್ವಿಜಾತಿಗಳು ಅಂದರೆ ಎರಡನೆಯ ಜನ್ಮವುಳ್ಳವರು ಎಂದು ಹೇಳಲ್ಪಡುತ್ತಾರೆ. ಈ ದ್ವಿಜಾತಿಗಳೆಲ್ಲರೂ ಅಧ್ಯಯನ ಯಜನ ದಾನ ಎಂಬ ಮೂರು ಕರ್ಮಗಳನ್ನು ಅವಶ್ಯವಾಗಿ ಮಾಡಲೇಬೇಕು. ಈ ದ್ವಿಜಾತಿಗಳಲ್ಲಿ ಬ್ರಾಹ್ಮಣರಿಗೆ ಮಾತ್ರ ಅಧ್ಯಾಪನ ಯಾಜನ ಪ್ರತಿಗ್ರಹ ಎಂಬ ಮೂರು ಕರ್ಮಗಳು ಅಧಿಕವಾಗಿವೆ. ಅವುಗಳನ್ನು ಅವಶ್ಯವಿದ್ದಾಗ ಮಾತ್ರ ಮಾಡಬೇಕು. ಅವಶ್ಯವಾಗಿ ಮಾಡಿಯೇ ಆಗಬೇಕೆಂಬ ನಿಯಮವಿಲ್ಲ."

ತ್ರಯೋ ಧರ್ಮಾ ನಿವರ್ತಂತೇ ಬ್ರಾಹ್ಮಣಾತ್ಕ್ಷತ್ರಿಯಂ ಪ್ರತಿ |
ಅಧ್ಯಾಪನಂ ಯಾಜನಂ ಚ ತೃತೀಯಂ ಚ ಪ್ರತಿಗ್ರಹಃ ||
ವೈಶ್ಯಂ ಪ್ರತಿ ತಥೈವೇತಿ ನಿವರ್ತೇರನ್ನಿತಿ ಸ್ಥಿತಿಃ |
ಶಸ್ತ್ರಾಸ್ತ್ರಭೃತ್ತ್ವಂ ಕ್ಷತ್ರಸ್ಯ ವಣಿಕ್ಪಶುಕೃಷೀ ವಿಶಃ ||
ಆಜೀವನಾರ್ಥಂ ಧರ್ಮಸ್ತು ದಾನಮಧ್ಯಯನಂ ಯಜಿಃ | (ಮನುವಿನ ವಚನ)

"ಬ್ರಾಹ್ಮಣನಲ್ಲಿರುವ ಆರು ಧರ್ಮಗಳ ಮಧ್ಯದಲ್ಲಿ ಅಧ್ಯಾಪನ ಯಾಜನ ಪ್ರತಿಗ್ರಹ ಎಂಬ ಮೂರು ಧರ್ಮಗಳು ಕ್ಷತ್ರಿಯನಲ್ಲಿ ಕಡಿಮೆಯಾಗುತ್ತವೆ. ಅದರಂತೆಯೇ ವೈಶ್ಯನಲ್ಲಿಯೂ ಕಡಿಮೆಯಾಗುತ್ತವೆ. ಶಸ್ತ್ರ ಮತ್ತು ಅಸ್ತ್ರಗಳನ್ನು ಧರಿಸುವುದೂ ಅವುಗಳಿಂದ ಪ್ರಜೆಗಳನ್ನು ರಕ್ಷಿಸುವುದೂ ಕ್ಷತ್ರಿಯನಿಗೆ ಜೀವನೋಪಾಯವೆನಿಸುತ್ತದೆ. ಅಂಗಡಿಯನ್ನು ಇಟ್ಟುಕೊಂಡು ವ್ಯಾಪಾರವನ್ನು ಮಾಡುವುದೂ ಪಶುಗಳನ್ನು ರಕ್ಷಿಸುವುದೂ ಕೃಷಿಯನ್ನು ಮಾಡುವುದೂ ವೈಶ್ಯನಿಗೆ ಜೀವನೋಪಾಯವೆನಿಸುತ್ತದೆ. ಕ್ಷತ್ರಿಯ ವೈಶ್ಯ ಎಂಬ ಇಬ್ಬರಿಗೆ ಬ್ರಾಹ್ಮಣನಂತೆ ದಾನವನ್ನು ಕೊಡುವುದೂ ಅಧ್ಯಯನವೂ ವೇದೋಕ್ತ ಕರ್ಮಗಳನ್ನು ಮಾಡುತ್ತಿರುವುದೂ ಅವಶ್ಯಕರ್ತವ್ಯವಾದ ಧರ್ಮಗಳೆನಿಸುತ್ತವೆ."

ಪ್ರಧಾನಂ ಕ್ಷಾತ್ರಿಯಂ ಕರ್ಮ ಪ್ರಜಾನಾಂ ಪರಿಪಾಲನಮ್ |
ಕುಸೀದಕೃಷಿವಾಣಿಜ್ಯಪಶುಪಾಲ್ಯಂ ವಿಶಃ ಸ್ಮೃತಮ್ || (ಯಾಜ್ಞವಲ್ಕ್ಯರ ವಚನ)

"ಪ್ರಜೆಗಳ ಪಾಲನವು ಕ್ಷತ್ರಿಯನಿಗೆ ಪ್ರಧಾನಕರ್ಮವೆನಿಸುತ್ತದೆ. (1) ಬಡ್ಡಿಗಾಗಿ ಹಣವನ್ನು ಇನ್ನೊಬ್ಬರಿಗೆ ಕೊಡುವುದು. (2) ಕೃಷಿಯನ್ನು ಮಾಡುವುದು. (3) ಒಂದು ವಸ್ತುವನ್ನು ಇನ್ನೊಬ್ಬನಿಂದ ಕಡಿಮೆಕ್ರಯಕ್ಕೆ ತೆಗೆದುಕೊಂಡು ಲಾಭದಿಂದ ಮಾರುವುದು ವಾಣಿಜ್ಯವೆನಿಸುತ್ತದೆ. (4) ಪಶುಗಳ ರಕ್ಷಣ. ಈ ನಾಲ್ಕು ಕರ್ಮಗಳು ವೈಶ್ಯನ ಪ್ರಧಾನ ಕರ್ಮಗಳೆನಿಸುತ್ತವೆ."

ಗಾ ರಕ್ಷಂಸ್ತಾಸ್ವಪೀತಾಸು ನ ಪಿಬೇತ್, ನ ತಿಷ್ಠಂತೀಷೂಪವಿಶೇತ್, ನ ಸ್ವಯಮುತ್ಥಾಪಯೇತ್, ತಾಃ ಶನೈರಾರ್ದ್ರ ಶಾಖಯಾ ಸಪಲಾಶಯಾ ಪೃಷ್ಠತೋಽಭಿಹನ್ಯಾತ್, ನಾತೀರ್ಥೇ ನ ವಿಷಮೇ ನಾಲ್ಪೋದಕೇಽವತಾರಯೇತ್, ಬಾಲವೃದ್ಧಾತುರಾಃ ಶ್ರಾಂತಾ ಉಪಾಸೀತ. ಶಕ್ತಿತಃ ಪ್ರತೀಕಾರಂ ಕುರ್ಯಾತ್, ಗವಾಮೇಷ ಧರ್ಮೋಽನ್ಯಥಾ ವಿಪ್ಲವಃ (ಶಂಖ ಮತ್ತು ಲಿಖಿತರ ವಚನ)

ಯಾಜ್ಞವಲ್ಕ್ಯರು ಹೇಳಿರುವ ಹಿಂದಿನ ವಚನದಲ್ಲಿ ಪಶುಗಳ ರಕ್ಷಣವು ವೈಶ್ಯನ ಪ್ರಧಾನಕರ್ಮವೆಂದು ಹೇಳಿರುತ್ತದೆ. ಆ ಪಶುಗಳಲ್ಲಿ ಗೋವಿನ ರಕ್ಷಣದಲ್ಲಿ ವಿಶೇಷಕ್ರಮವನ್ನು ಶಂಖ ಮತ್ತು ಲಿಖಿತರು ಕೆಳಗೆ ಬರೆದ ರೀತಿಯಿಂದ ಹೇಳಿರುತ್ತಾರೆ. "ಗೋವುಗಳನ್ನು ರಕ್ಷಿಸುವವನು ಮಾಡುವ ರೀತಿಯನ್ನು ತಿಳಿಸುತ್ತೇವೆ. (1) ಗೋವುಗಳು ನೀರನ್ನು ಕುಡಿಯುವುದಕ್ಕಿಂತ ಪೂರ್ವದಲ್ಲಿ ತಾನು ನೀರನ್ನು ಕುಡಿಯಬಾರದು. (2) ನಿಂತು ಕೊಂಡಿರುವಾಗ ಕುಳಿತುಕೊಳ್ಳಬಾರದು. (3) ಮಲಗಿದ ಅಥವಾ ಕುಳಿತುಕೊಂಡಿರುವ ಗೋವುಗಳನ್ನು ತಾನು ಪ್ರಯತ್ನದಿಂದ ಎಬ್ಬಿಸಬಾರದು. (4) ಗೋವುಗಳನ್ನು ಹಸಿಯಾದ ಮತ್ತು ಎಲೆಗಳಿಂದ ಯುಕ್ತವಾಗಿರುವ ಕೋಲಿನಿಂದ ಮೆಲ್ಲನೆ ಬೆನ್ನಿನಲ್ಲಿ ತಟ್ಟಿ ಎಬ್ಬಿಸಬೇಕು. (5) ಮೆಟ್ಟಲಿಲ್ಲದಿರುವ ಎತ್ತರ ತಗ್ಗುಗಳಿಂದ ಯುಕ್ತವಾಗಿರುವ ಮತ್ತು ಸ್ವಲ್ಪನೀರಿನಿಂದ ಯುಕ್ತವಾಗಿರುವ ಸ್ಥಳಗಳಲ್ಲಿ ಇಳಿಸಬಾರದು. (6) ಚಿಕ್ಕ ಕರುಗಳನ್ನೂ ಮುದಿದನಗಳನ್ನೂ ರೋಗಗಳಿಂದ ಪೀಡಿತವಾಗಿರುವ ದನಗಳನ್ನೂ ತುಂಬಾ ಶ್ರಮದಿಂದ ಯುಕ್ತವಾದ ದನಗಳನ್ನೂ ಸಮೀಪದಲ್ಲಿದ್ದು ಉಪಚರಿಸಬೇಕು. (7) ಅವುಗಳಿಗೆ ಬಂದಿರುವ ಆಪತ್ತುಗಳನ್ನು ಶಕ್ತಿಯಿದ್ದಷ್ಟು ಪರಿಹರಿಸಬೇಕು. ಇದು ಗೋವುಗಳ ವಿಷಯದಲ್ಲಿ ಅನುಷ್ಠಿಸುವ ಧರ್ಮವೆನಿಸುತ್ತದೆ. ಈ ಧರ್ಮದಂತೆ ನಡೆಯದಿದ್ದರೆ ಅನರ್ಥವು ಬರುತ್ತದೆ."

ಸಪ್ತ ವಿತ್ತಾಗಮಾ ಧರ್ಮ್ಯಾ ದಾಯೋ ಲಾಭಃ ಕ್ರಯೋ ಜಯಃ |
ಪ್ರಯೋಗಃ ಕರ್ಮಯೋಗಶ್ಚ ಸತ್ಪ್ರತಿಗ್ರಹ ಏವ ಚ || (ಮನುವಿನ ವಚನ)

"ಹಣವು ಬರುವ ರೀತಿಯು ಏಳು ವಿಧವಾಗಿದೆ. (1) ದಾಯ ಅಂದರೆ ವಂಶಪರಂಪರೆಯಿಂದ ಬಂದಿರುವ ಹಣ. (2) ಲಾಭ ಅಂದರೆ ಭೂಮಿಯ ಅಡಿಯಿಂದ ನಿಧಿಯು ಸಿಗುವುದು. (3) ಕ್ರಯ ಅಂದರೆ ಲಾಭದಿಂದ ವಸ್ತುಗಳನ್ನು ತೆಗೆದುಕೊಳ್ಳುವುದು. ಈ ದಾಯ ಲಾಭ ಕ್ರಯ ಎಂಬ ಮೂರು ಉಪಾಯಗಳು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಎಂಬ ಮೂವರಿಗೂ ಸಮವಾಗಿರುತ್ತದೆ. (4) ಜಯ ಅಂದರೆ ಶತ್ರುಗಳನ್ನು ಜಯಿಸುವುದು. ಈ ಉಪಾಯವು ಕ್ಷತ್ರಿಯನಿಗೆ ಮಾತ್ರ ಸಂಬಂಧಿಸಿದೆ. (5) ಪ್ರಯೋಗ ಅಂದರೆ ಬಡ್ಡಿಗಾಗಿ ಲೇವಾದೇವಿಯನ್ನು ಮಾಡುವುದು. (6) ಕರ್ಮಯೋಗ ಅಂದರೆ ಕೃಷಿ ಮತ್ತು ಹಿಂದೆ ಹೇಳಿರುವ ವಾಣಿಜ್ಯ. ಈ ಪ್ರಯೋಗ ಮತ್ತು ಕರ್ಮಯೋಗಗಳನ್ನು ವೈಶ್ಯನೇ ಮಾಡಬೇಕು. (7) ಸತ್ಪ್ರತಿಗ್ರಹ ಅಂದರೆ ಸಜ್ಜನರ ಕೈಯಿಂದ ದಾನವನ್ನು ತೆಗೆದುಕೊಳ್ಳುವುದು. ಈ ಉಪಾಯವು ಬ್ರಾಹ್ಮಣರಿಗೆ ಮಾತ್ರ ಸಂಬಂಧಿಸಿದ್ದು."

ಮೇಲ್ಕಂಡ ಏಳು ದ್ರವ್ಯಸಂಪಾದನೆಯ ಕ್ರಮಗಳಲ್ಲಿ ಎರಡನೆಯ ವಿಷಯದಲ್ಲಿ ವಿಷ್ಣುವು ವಿಶೇಷವಿಷಯಗಳನ್ನು ತಿಳಿಸಿರುವನು. ಆ ವಿಷಯವನ್ನು ಈಗ ವಿವರಿಸುತ್ತೇವೆ.

ನಿಧಿಂ ಬ್ರಾಹ್ಮಣೋ ಲಬ್ಧ್ವಾ ಸರ್ವಮಾದದ್ಯಾತ್, ಕ್ಷತ್ರಿಯಶ್ಚತುರ್ಥಮಂಶಂ ರಾಜ್ಞೇ ದದ್ಯಾತ್, ಚತುರ್ಥಮಂಶಂ ಬ್ರಾಹ್ಮಣೇಭ್ಯಃ, ಸ್ವಯಮರ್ಧಮಾದದ್ಯಾತ್, ವೈಶ್ಯಶ್ಚತುರ್ಥಮಂಶಂ ರಾಜ್ಞೇ ದದ್ಯಾತ್, ಅರ್ಧಂ ಬ್ರಾಹ್ಮಣೇಭ್ಯೋಽಂಶಂ ದದ್ಯಾತ್, ಚತುರ್ಥಮಂಶಮಾತ್ಮನೇ ಆದದ್ಯಾತ್, ಶೂದ್ರಶ್ಚಾವಾಪ್ತಂ, ದ್ವಾದಶಧಾ ವಿಭಜ್ಯ ಪಂಚಾಂಶಾನ್ ರಾಜ್ಞೇ ದದ್ಯಾತ್, ಪಂಚಾಂಶಾನ್ ಬ್ರಾಹ್ಮಣೇಭ್ಯಃ, ಸ್ವಯಮಂಶದ್ವಯಮಾದದ್ಯಾತ್, (ವಿಷ್ಣುಸ್ಮೃತಿ).

"ಬ್ರಾಹ್ಮಣನು ನಿಧಿಯನ್ನು ಪಡೆದರೆ ಆ ನಿಧಿಯಲ್ಲಿರುವ ಎಲ್ಲಾ ಹಣವನ್ನೂ ಅವನೇ ಪಡೆಯಬೇಕು. ಯಾರಿಗೂ ಯಾವ ಅಂಶವನ್ನೂ ಕೊಡಬೇಕಾಗಿಲ್ಲ. ಕ್ಷತ್ರಿಯನು ಪಡೆದರೆ ಆ ನಿಧಿಯಲ್ಲಿರುವ ಹಣವನ್ನು ನಾಲ್ಕು ಭಾಗ ಮಾಡಬೇಕು.

ಆ ನಾಲ್ಕು ಭಾಗಗಳಲ್ಲಿ ಒಂದು ಭಾಗವನ್ನು ರಾಜನಿಗೂ ಒಂದು ಭಾಗವನ್ನು ಬ್ರಾಹ್ಮಣರಿಗೂ ಕೊಟ್ಟು ಉಳಿದ ಎರಡು ಭಾಗಗಳನ್ನು ತಾನು ಸ್ವೀಕರಿಸಬೇಕು. ವೈಶ್ಯನು ಪಡೆದರೆ ಆ ನಿಧಿಯಲ್ಲಿರುವ ಹಣವನ್ನು ನಾಲ್ಕು ಭಾಗವಾಗಿ ವಿಂಗಡಿಸಬೇಕು. ಆ ನಾಲ್ಕು ಭಾಗಗಳಲ್ಲಿ ಎರಡು ಭಾಗಗಳನ್ನು ಬ್ರಾಹ್ಮಣನಿಗೂ ಒಂದು ಭಾಗವನ್ನು ಕ್ಷತ್ರಿಯನಿಗೂ ಕೊಟ್ಟು ಉಳಿದ ಒಂದು ಭಾಗವನ್ನು ತಾನು ಸ್ವೀಕರಿಸಬೇಕು. ಶೂದ್ರನು ನಿಧಿಯನ್ನು ಪಡೆದರೆ ಆ ನಿಧಿಯಲ್ಲಿರುವ ಹಣವನ್ನು ಹನ್ನೆರಡು ವಿಭಾಗ ಮಾಡಿ ಆ ಹನ್ನೆರಡು ಭಾಗಗಳಲ್ಲಿ ಐದು ಭಾಗಗಳನ್ನು ಬ್ರಾಹ್ಮಣನಿಗೂ ಐದು ಭಾಗಗಳನ್ನು ರಾಜನಿಗೂ ಕೊಟ್ಟು ಉಳಿದ ಎರಡು ಭಾಗಗಳನ್ನು ತಾನು ಸ್ವೀಕರಿಸಬೇಕು."

ಋತಾಮೃತಾಭ್ಯಾಂ ಜೀವೇತ್ತು ಮೃತೇನ ಪ್ರಮೃತೇನ ವಾ |
ಸತ್ಯಾನೃತಾಭ್ಯಾಂ ಜೀವೇತ ನ ಶ್ವವೃತ್ತ್ಯಾ ಕಥಂ(ಕದಾ) ಚ ನ ||
ಋತಮುಂಛಶಿಲಂ ಪ್ರೋಕ್ತಮಮೃತಂ ಸ್ಯಾದಯಾಚಿತಮ್ |
ಮೃತಂ ತು ಯಾಚಿತಂ ಪ್ರೋಕ್ತಂ ಪ್ರಮೃತಂ ಕರ್ಷಣಂ ಸ್ಮೃತಮ್ ||
ಸತ್ಯಾನೃತಂ ತು ವಾಣಿಜ್ಯಂ ತೇನ ಚೈವಾಪಿ ಜೀವ್ಯತೇ |
ಸೇವಾ ಶ್ವವೃತ್ತಿರಾಖ್ಯಾತಾ ತಸ್ಮಾತ್ತಾಂ ಪರಿವರ್ಜಯೇತ್ || (ಮನುವಿನ ವಚನ)

"ಋತ ಮತ್ತು ಅಮೃತ ಎಂಬ ಹೆಸರುಳ್ಳ ಜೀವನೋಪಾಯಗಳಿಂದ ಜೀವಿಸಬೇಕು. ಅಥವಾ ಮೃತ ಪ್ರಮೃತ ಎಂಬ ಎರಡು ಜೀವನೋಪಾಯಗಳಿಂದ ಜೀವಿಸಬಹುದು. ಸತ್ಯಾನೃತ ಎಂಬ ಜೀವನೋಪಾಯವು ವಾಣಿಜ್ಯ ಎಂದೆನಿಸುತ್ತದೆ. ಆದರಿಂದಲೂ ಜೀವಿಸಬಹುದು. ನೀಚರ ಸೇವೆಯು ಶ್ವವೃತ್ತಿಯೆನಿಸುತ್ತದೆ. ಆ ಸೇವೆಯನ್ನು ಸರ್ವಥಾ ಬಿಡಬೇಕು."

ಪತಿತಪರಿತ್ಯಕ್ತೈಕಕಣಾದಾನಂ ತು ಉಂಛಃ | ಶಾಲ್ಯಾದೇರ್ನಿಪತಿತ ಪರಿತ್ಯಕ್ತವಲ್ಲರೀಗ್ರಹಣಂ ಶಿಲಃ | (ಸ್ಮೃತಿಮುಕ್ತಾವಲೀಕಾರರ ವಚನ)

"ಹೊಲದ ಯಜಮಾನನು ತನ್ನ ಧಾನ್ಯಗಳೆಲ್ಲವನ್ನೂ ತೆಗೆದುಕೊಂಡು ಹೋದ ಮೇಲೆ ಹೊಲದಲ್ಲಿ ಬಿದ್ದಿರುವ ಅಥವಾ ಅವನು ಬಡವರಿಗಾಗಿ ಹೊಲದಲ್ಲಿ ಬಿಟ್ಟಿರುವ ಧಾನ್ಯಗಳಲ್ಲಿ ಒಂದೊಂದು ಕಾಳುಗಳನ್ನು ಆರಿಸಿ ಆ ಧಾನ್ಯಗಳಿಂದ ಜೀವಿಸುವುದು ಉಂಛ ಎಂದೆನಿಸುತ್ತದೆ. ಅದೇ ಧಾನ್ಯಗಳಲ್ಲಿ ಒಂದೊಂದು ಮಂಜರಿಗಳನ್ನು ಆರಿಸಿ ಆ ಮಂಜರಿಗಳಲ್ಲಿರುವ ಧಾನ್ಯಗಳಿಂದ ಜೀವಿಸುವುದು ಶಿಲ ಎಂದೆನಿಸುತ್ತದೆ."

ಮೇಲ್ಕಂಡ ಉಂಛ ಮತ್ತು ಶಿಲ ಎಂಬ ಎರಡು ಜೀವನೋಪಾಯಗಳು ಋತ ಎಂದೆನಿಸುತ್ತವೆ. ಇನ್ನೊಬ್ಬರನ್ನು ಬೇಡದೆ ತಾನಾಗಿಯೇ ಲಬ್ಧವಾಗಿರುವ ವಸ್ತುಗಳಿಂದ ಜೀವಿಸುವುದು ಅಮೃತ ಎಂದೆನಿಸುತ್ತದೆ. ಪ್ರತಿದಿನಗಳಲ್ಲಿಯೂ ಭಿಕ್ಷೆಯನ್ನು ಬೇಡಿ ಜೀವಿಸುವುದು ಮೃತ ಎಂದೆನಿಸುತ್ತದೆ. ಕೃಷಿಯನ್ನು ಮಾಡಿ ಜೀವಿಸುವುದು ಪ್ರಮೃತ ಎಂದೆನಿಸುತ್ತದೆ. ಸುಳ್ಳು ಮತ್ತು ಸತ್ಯ ಮಾತುಗಳನ್ನು ಹೇಳುತ್ತಾ ಅಂಗಡಿಯ ವ್ಯಾಪಾರದಿಂದ ಜೀವಿಸುವುದು ಸತ್ಯಾನೃತ ಅಥವಾ ವಾಣಿಜ್ಯ ಎಂದೆನಿಸುತ್ತದೆ. ತನಗಿಂತ ಕೆಳಗಿನ ದರ್ಜೆಗೆ ಸೇರಿದವರನ್ನು ಸೇವಿಸುತ್ತಾ ಜೀವಿಸುವುದು ಶ್ವವೃತ್ತಿ ಅಂದರೆ ನಾಯಿಯ ಜೀವನವೆನಿಸುತ್ತದೆ. ಈ ಆರು ಜೀವನೋಪಾಯಗಳಲ್ಲಿ ಶ್ವವೃತ್ತಿಯನ್ನು ಬ್ರಾಹ್ಮಣರು ಯಾವ ಕಾರಣದಿಂದಲೂ ಮಾಡಕೂಡದು. ಉಳಿದ ಐದು ಜೀವನೋಪಾಯಗಳಲ್ಲಿ ಮೊದಲು ಮೊದಲು ಹೇಳಿರುವ ಜೀವನೋಪಾಯಗಳು ಉತ್ತಮವೆಂದು ತಿಳಿಯಬೇಕು.

ಕುಸೂಲಕುಂಭೀಧಾನ್ಯೋ ವಾ ತ್ರ್ಯಾಹಿಕೋಽಶ್ವಸ್ತನೋಽಪಿ ವಾ |
ಜೀವೇದ್ವಾಪಿ ಶಿಲೋಂಛೇನ ಶ್ರೇಯಾನೇಷಾಂ ಪರಃ ಸ್ಮೃತಃ || (ಯಾಜ್ಞವಲ್ಕ್ಯರ ವಚನ)

"(1) ಒಂದು ಕೊಟ್ಟಿಗೆಯಲ್ಲಿ ಧಾನ್ಯವನ್ನು ತುಂಬಿಸಿ ಸಂಗ್ರಹಿಸಿದವನು "ಕುಸೂಲಧಾನ್ಯಕ" ಎಂದೆನಿಸುವನು.

(2) ನಾಲ್ಕು ಮುಷ್ಟಿಗಳು ತುಂಬುವಷ್ಟು ಧಾನ್ಯಗಳನ್ನು ತುಂಬಿಸುವ ಕೊಳಗವು "ಕುಡುಪ" ಎಂದೂ, ನಾಲ್ಕು ಕುಡುಪಗಳಷ್ಟು ಧಾನ್ಯಗಳನ್ನು ತುಂಬಿಸುವ ಕೊಳಗವು "ಪ್ರಸ್ಥ" ಎಂದೂ, ನಾಲ್ಕು ಪ್ರಸ್ಥಗಳಷ್ಟು ಧಾನ್ಯಗಳನ್ನು ತುಂಬಿಸುವ ಕೊಳಗವು "ಆಢಕ" ಎಂದೂ, ನಾಲ್ಕು ಆಢಕಗಳಷ್ಟು ಧಾನ್ಯಗಳನ್ನು ತುಂಬಿಸುವ ಕೊಳಗವು "ದ್ರೋಣ" ಎಂದೂ, ಎರಡು ದ್ರೋಣಗಳಷ್ಟು ಧಾನ್ಯಗಳನ್ನು ತುಂಬಿಸುವ ಕೊಳಗವು "ಖಾರಿಕಾ" ಎಂದೂ, ಮೂರು ಖಾರಿಕೆಗಳಷ್ಟು ಧಾನ್ಯಗಳನ್ನು ತುಂಬಿಸುವ ಕೊಳಗವು "ಭಾರ" ಎಂದೂ, ನಾಲ್ಕು ಭಾರಗಳಷ್ಟು ಧಾನ್ಯಗಳನ್ನು ತುಂಬಿಸುವ ಕೊಳಗವು "ಕುಂಭಿಕಾ" ಎಂದೂ ಹೇಳಲ್ಪಡುತ್ತವೆ. ಈ ಕುಂಭೀಧಾನ್ಯವನ್ನು ಸಂಗ್ರಹಿಸುವವನು ಕುಂಭಧಾನ್ಯಕ ಎಂದೆನಿಸುವನು. (3) ಮೂರು ದಿನಗಳಿಗೆ ಬೇಕಾದ ಧಾನ್ಯಗಳನ್ನು ಸಂಗ್ರಹಿಸುವವನು "ತ್ರ್ಯಾಹಿಕ" ಎಂದೆನಿಸುವನು. (4) ಅಂದು ಸಂಗ್ರಹಿಸಿದ ಧಾನ್ಯವನ್ನು ಅಂದೇ ಖರ್ಚುಮಾಡಿ ಮರುದಿನಕ್ಕೆ ಇಟ್ಟುಕೊಳ್ಳದಿರುವವನು "ಅಶ್ವಸ್ತನಿಕ" ಅಂದರೆ ಮರುದಿನಕ್ಕಾಗಿ ಸಂಗ್ರಹಿಸದವನು ಎಂದೆನಿಸುವನು. ಮೇಲ್ಕಂಡ ನಾಲ್ಕು ವಿಧದಿಂದ ಜೀವಿಸಬೇಕು. (5) ಹಿಂದೆ ಹೇಳಿರುವ "ಶಿಲ" ಎಂಬ ವೃತ್ತಿಯಿಂದ ಅಥವಾ (6) "ಉಂಛ" ಎಂಬ ವೃತ್ತಿಯಿಂದ ಜೀವಿಸಬೇಕು. ಈ ಆರು ವೃತ್ತಿಗಳ ಮಧ್ಯದಲ್ಲಿ ಮೊದಲು ಮೊದಲನೆಯ ವೃತ್ತಿಗಳು ಸಾಮಾನ್ಯವೃತ್ತಿಗಳೆಂದೂ ಅನಂತರ ಅನಂತರದಲ್ಲಿರುವ ವೃತ್ತಿಗಳು ಉತ್ತಮವೃತ್ತಿಗಳೆಂದೂ ತಿಳಿಯಬೇಕು."

ಷಟ್ಕರ್ಮೈಕೋ ಭವತ್ಯೇಷಾಂ ತ್ರಿಭಿರನ್ಯಃ ಪ್ರವರ್ತತೇ |
ದ್ವಾಭ್ಯಾಮೇಕಶ್ಚತುರ್ಥಸ್ತು ಬ್ರಹ್ಮಸತ್ರೇಣ ಜೀವತೇ |

"(1) ಕುಸೂಲಧಾನ್ಯ ಮುಂತಾದ ನಾಲ್ಕು ವೃತ್ತಿಯುಳ್ಳವರನ್ನು ಹಿಂದೆ ಹೇಳಿದೆವು. ಅವರಲ್ಲಿ ಕುಸೂಲಧಾನ್ಯನು ಅಧ್ಯಯನ ಮುಂತಾದ ಆರು ಕರ್ಮಗಳನ್ನು ಮಾಡುವನು. (2) ಕುಂಭೀಧಾನ್ಯ ಎಂಬವನು ಯಾಜನ ಅಧ್ಯಾಪನ ಪ್ರತಿಗ್ರಹ ಎಂಬ ಮೂರು ಕರ್ಮಗಳನ್ನು ಮಾಡುವನು. (3) ತ್ರ್ಯಾಹಿಕ ಎಂಬವನು ಯಾಜನ ಅಧ್ಯಾಪನ ಎಂಬ ಎರಡು ಕರ್ಮಗಳನ್ನು ಮಾಡುವನು. (4) ಅಶ್ವಸ್ತನ ಎಂಬವನು ಅಧ್ಯಾಪನ ಎಂಬ ಒಂದು ಕರ್ಮವನ್ನು ಮಾಡುವನು. ಕುಸೂಲಧಾನ್ಯ ಮುಂತಾದವರು ಯಾಜನ ಅಧ್ಯಾಪನ ಮುಂತಾದ ಕರ್ಮಗಳು ಕ್ಷತ್ರಿಯಾದಿಗಳಿಗೆ ಇಲ್ಲದಿರುವುದರಿಂದ ಬ್ರಾಹ್ಮಣರೇ ಹೊರತು ಕ್ಷತ್ರಿಯ ಮುಂತಾದವರಲ್ಲ. ಶಿಲ ಉಂಛ ಎಂಬ ಎರಡು ವಿಧವಾದ ವೃತ್ತಿಗಳು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಎಂಬ ಮೂವರಿಗೂ ಸಾಧಾರಣವಾದ ವೃತ್ತಿಗಳು.

ಸ್ವಕರ್ಮ ಬ್ರಾಹ್ಮಣಸ್ಯಾಧ್ಯಾಪನಂ ಅಧ್ಯಯನಂ ಯಜ್ಞೋ ಯಾಜನಂ ದಾನಂ ಪ್ರತಿಗ್ರಹಣಂ | (ಆಪಸ್ತಂಬರ ವಚನ)

"ಅಧ್ಯಾಪನ, ಅಧ್ಯಯನ, ಯಜ್ಞವನ್ನು ಮಾಡುವುದು, ಯಾಜನ, ದಾನ, ಪ್ರತಿಗ್ರಹ ಎಂಬ ಆರು ಕರ್ಮಗಳು ಬ್ರಾಹ್ಮಣನ ಕರ್ಮಗಳು."

ಅತಃ ಪರಂ ಗೃಹಸ್ಥಸ್ಯ ಕರ್ಮಾಚಾರಂ ಕಲೌ ಯುಗೇ |
ಸಂಪ್ರವಕ್ಷ್ಯಾಮ್ಯಹಂ ಭೂಪ ಪಾರಾಶರ್ಯಪ್ರಚೋದಿತಮ್ ||
ಷಟ್ಕರ್ಮನಿರತೋ ವಿಪ್ರಃ ಕೃಷಿಕರ್ಮ ಸಮಾಚರೇತ್ |
ಸ್ವಯಂ ಕೃಷ್ಟೇ ತಥಾ ಕ್ಷೇತ್ರೇ ಧಾನ್ಯೈಶ್ಚ ಸ್ವಯಮಾರ್ಜಿತೈಃ ||
ನಿರ್ವಪೇತ್ಪಂಚಯಜ್ಞಾಂಸ್ತು ಕ್ರತುದೀಕ್ಷಾಂ ಚ ಕಾರಯೇತ್ |
ಕ್ಷತ್ರಿಯೋಽಪಿ ಕೃಷಿಂ ಕುರ್ಯಾದ್ದ್ವಿಜಾನ್ ದೇವಾಂಶ್ಚ ಪೂಜಯೇತ್ ||
ವೈಶ್ಯಃ ಶೂದ್ರಸ್ತಥಾ ಕುರ್ಯಾತ್ಕೃಷಿಂ ವಾಣಿಜ್ಯಮೇವ ಚ |
ಚತುರ್ಣಾಮಪಿ ವರ್ಣಾನಾಮೇಷ ಧರ್ಮಃ ಸನಾತನಃ || (ಪರಾಶರಸ್ಮೃತಿ ವಚನ)

"ಕಲಿಯುಗಧರ್ಮಗಳನ್ನು ಪರಾಶರರ ಅಭಿಪ್ರಾಯದಂತೆ ತಿಳಿಸುವೆನು. ಹಿಂದೆ ಹೇಳಿದಂತೆ ಯಜನ, ಯಾಜನ ಮುಂತಾದ ಆರು ಕರ್ಮಗಳಿಂದ ಯುಕ್ತನಾದ ಬ್ರಾಹ್ಮಣನು ಏಳನೆಯದಾಗಿ ಕೃಷಿಯನ್ನು ಮಾಡಬೇಕು. ಹೊಲಗಳನ್ನು ತಾನೇ ಊಳಬೇಕು. ಆ ಹೊಲದಲ್ಲಿ ತನ್ನಿಂದಲೇ ಬೆಳೆಯಿಸಲ್ಪಟ್ಟ ಧಾನ್ಯಗಳಿಂದ ಪಂಚಯಜ್ಞಗಳನ್ನು ಮಾಡಬೇಕು. ನಾನಾವಿಧವಾದ ಯಜ್ಞಗಳಲ್ಲಿ ದೀಕ್ಷೆಯನ್ನು ಸ್ವೀಕರಿಸಬೇಕು. ಕ್ಷತ್ರಿಯನು ಹಿಂದೆ ಹೇಳಿದ ಯಜನ ಮುಂತಾದ ಮೂರು ಕರ್ಮಗಳನ್ನು ಮಾಡುತ್ತಾ ನಾಲ್ಕನೆಯದಾಗಿ ಕೃಷಿಯನ್ನು ಮಾಡಬೇಕು. ತನ್ನಿಂದ ಮಾಡಲ್ಪಟ್ಟ ಕೃಷಿಯಿಂದ ಸಿದ್ಧವಾದ ಧಾನ್ಯದಿಂದ ಬ್ರಾಹ್ಮಣರನ್ನೂ ದೇವತೆಗಳನ್ನೂ ಪೂಜಿಸಬೇಕು. ವೈಶ್ಯನು ಮೇಲ್ಕಂಡ ಯಜನ ಮುಂತಾದ ಮೂರು ಕರ್ಮಗಳ ಜೊತೆಯಲ್ಲಿ ಕೃಷಿಯನ್ನೂ ವಾಣಿಜ್ಯವನ್ನೂ ಮಾಡಬೇಕು. ಶೂದ್ರನು ಮೇಲ್ಕಂಡ ಯಜನ ಮುಂತಾದ ಆರು ಕರ್ಮಗಳಲ್ಲಿ ಯಾವ ಕರ್ಮಗಳನ್ನೂ ಮಾಡಬಾರದು. ಕೃಷಿಯನ್ನೂ ವಾಣಿಜ್ಯವನ್ನೂ ಮಾಡಬೇಕು. ಇದು ನಾಲ್ಕು ಜಾತಿಯವರಿಗೆ ವಿಹಿತವಾದ ಧರ್ಮಗಳು."

ಭವೇದಷ್ಟಗವಂ ಧರ್ಮ್ಯಂ ಷಡ್ಗವಂ ಜೀವಿತಾರ್ಥಿನಾಮ್ |
ಚತುರ್ಗವಂ ನೃಶಂಸಾನಾಂ ದ್ವಿಗವಂ ಬ್ರಹ್ಮಭೂತಿನಾಮ್ ||
ಬಾಲಾನಾಂ ದಮನಂ ಚೈವ ವಾಹನಂ ಚ ನ ಶಸ್ಯತೇ |
ವೃದ್ಧಾನಾಂ ದುರ್ಬಲಾನಾಂ ಚ ಪ್ರಜಾಪತಿವಚೋ ಯಥಾ || (ಹಾರೀತರ ವಚನ)

"ಎಂಟು ಎತ್ತುಗಳನ್ನು ರಕ್ಷಿಸುತ್ತಾ ಕೃಷಿಯನ್ನು ಮಾಡುತ್ತಿರುವುದು ಧರ್ಮಯುಕ್ತವಾಗುತ್ತದೆ. ಆರು ಎತ್ತುಗಳನ್ನು ರಕ್ಷಿಸುತ್ತಾ ಕೃಷಿ ಮಾಡುವುದು ಧರ್ಮಕ್ಕೆ ಸಾಧನವಾಗಲಾರದು. ಬರೇ ಜೀವನಕ್ಕೆ ಉಪಯುಕ್ತವಾಗುತ್ತದೆ. ನಾಲ್ಕು ಎತ್ತುಗಳನ್ನು ರಕ್ಷಿಸುತ್ತಾ ಕೃಷಿ ಮಾಡುವುದು ಘಾತುಕರ ಕೆಲಸವೆನಿಸುತ್ತದೆ. ಎರಡು ಎತ್ತುಗಳನ್ನು ರಕ್ಷಿಸುತ್ತಾ ಕೃಷಿ ಮಾಡುವುದು ಬ್ರಾಹ್ಮಣರಲ್ಲಿ ನೀಚಕೆಲಸವೆನಿಸುತ್ತದೆ. ಚಿಕ್ಕಕರುಗಳನ್ನು ದಮನ ಮಾಡುವುದು ಅಂದರೆ ಬೀಜವನ್ನು ಗುದ್ದುವುದು, ವಾಹನ ಅಂದರೆ ಕೃಷಿ ಮುಂತಾದವುಗಳಿಗೆ ಉಪಯೋಗಿಸುವುದು ಕೂಡದು. ಮುದಿ ಎತ್ತುಗಳನ್ನೂ ದುರ್ಬಲವಾದ ಎತ್ತುಗಳನ್ನೂ ಕೃಷಿ ಮುಂತಾದ ಕಾರ್ಯಗಳಿಗೆ ಉಪಯೋಗಿಸಬಾರದು."

ಕ್ಷುಧಿತಂ ತೃಷಿತಂ ಶ್ರಾಂತಂ ಬಲೀವರ್ದಂ ನ ಯೋಜಯೇತ್ |
ಹೀನಾಂಗಂ ವ್ಯಾಧಿತಂ ಕ್ಲೀಬಂ ವೃಷಂ ವಿಪ್ರೋ ನ ವಾಹಯೇತ್ ||
ವಾಹಯೇದ್ದಿವಸಸ್ಯಾರ್ಧಂ ಪಶ್ಚಾತ್ಸ್ನಾನಂ ಸಮಾಚರೇತ್ |

"ಹಸಿವಿನಿಂದ ಯುಕ್ತವಾಗಿರುವ, ನೀರಡಿಸಿದ, ಆಯಾಸದಿಂದ ಯುಕ್ತವಾಗಿರುವ, ಅಂಗಹೀನವಾಗಿರುವ, ರೋಗವುಳ್ಳ ಮತ್ತು ನಪುಂಸಕವಾಗಿರುವ ಎತ್ತನ್ನು ಕೃಷಿ ಮುಂತಾದವುಗಳಿಗೆ ಉಪಯೋಗಿಸಬಾರದು. ಪ್ರಾತಃಕಾಲದಿಂದ ಮಧ್ಯಾಹ್ನದವರೆಗೆ ಎತ್ತುಗಳಿಂದ ಕೆಲಸವನ್ನು ಮಾಡಿಸಬೇಕು. ಮಧ್ಯಾಹ್ನಾನಂತರದಲ್ಲಿ ಸ್ನಾನವನ್ನು ಮಾಡಿಸಬೇಕು."

ಸ್ನಾಪಯಿತ್ವಾಽನಡುಹೋಽಲಂಕೃತ್ಯ ಬ್ರಾಹ್ಮಣಾನ್ ಭೋಜಯೇತ್ | (ಹಾರೀತರ ವಚನ)

"ಎತ್ತುಗಳನ್ನು ಸ್ನಾನಮಾಡಿಸಿದ ಮೇಲೆ ಅಲಂಕರಿಸಬೇಕು. ಅನಂತರದಲ್ಲಿ ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು."

ಲಬ್ಧಲಾಭಃ ಪಿತ್ನನ್ ದೇವಾನ್ ಬ್ರಾಹ್ಮಣಾಂಶ್ಚಾಪಿ ಪೂಜಯೇತ್ |
ತೇ ತೃಪ್ತಾಸ್ತಸ್ಯ ತಂ ದೋಷಂ ಶಮಯಂತಿ ನ ಸಂಶಯಃ ||
ದೇವೇಭ್ಯಶ್ಚ ಪಿತೃಭ್ಯಶ್ಚ ದದ್ಯಾದ್ಭಾಗಂ ಚ ವಿಂಶಕಮ್ |
ತ್ರಿಂಶದ್ಭಾಗಂ ಬ್ರಾಹ್ಮಣಾನಾಂ ಕೃಷಿಂ ಕುರ್ವನ್ನ ದುಷ್ಯತಿ || (ಕೂರ್ಮಪುರಾಣ)

"ಕೃಷಿಯನ್ನು ಮಾಡಿ ಬಂದಿರುವ ಲಾಭದಲ್ಲಿ 30 ಭಾಗವನ್ನು ಬ್ರಾಹ್ಮಣರಿಗೆ ವಿನಿಯೋಗಿಸಬೇಕು. 20 ಭಾಗವನ್ನು ಪಿತೃಗಳ ಮತ್ತು ದೇವತೆಗಳ ಕಾರ್ಯಗಳಿಗೆ ವಿನಿಯೋಗಿಸಬೇಕು. ಹೀಗೆ ಮಾಡಿದರೆ ದೇವತೆಗಳೂ ಪಿತೃಗಳೂ ಬ್ರಾಹ್ಮಣರೂ ಕೃಷಿಯನ್ನು ಮಾಡಿದ್ದರಿಂದ ಬಂದಿರುವ ದೋಷವನ್ನು ಪರಿಹರಿಸುವರು."

ರಾಜ್ಞೇ ದತ್ವಾ ಚ ಷಡ್ಭಾಗಂ ದೇವತಾನಾಂ ಚ ವಿಂಶಕಮ್ |
ತ್ರಿಂಶದ್ಭಾಗಂ ತು ವಿಪ್ರಾಣಾಂ ಕೃಷಿಂ ಕುರ್ವನ್ನ ದೋಷಭಾಕ್ ||

"ಕೃಷಿಯಿಂದ ತನಗೆ ಸಿಕ್ಕಿದ ದ್ರವ್ಯವನ್ನು ಆರು ಭಾಗವಾಗಿ ವಿಂಗಡಿಸಬೇಕು. ಆ ಆರು ಭಾಗಗಳಲ್ಲಿ ಒಂದು ಭಾಗವನ್ನು ರಾಜನಿಗೆ ಕೊಡಬೇಕು. ಅದೇ ದ್ರವ್ಯವನ್ನು ಇಪ್ಪತ್ತು ಭಾಗವಾಗಿ ವಿಂಗಡಿಸಬೇಕು. ಆ ಇಪ್ಪತ್ತು ಭಾಗಗಳಲ್ಲಿ ಒಂದು ಭಾಗವನ್ನು ದೇವತಾಕಾರ್ಯಕ್ಕೆ ವಿನಿಯೋಗಿಸಬೇಕು. ಅದೇ ದ್ರವ್ಯವನ್ನು ಮೂವತ್ತು ಭಾಗವಾಗಿ ವಿಂಗಡಿಸಬೇಕು. ಆ ಮೂವತ್ತು ಭಾಗಗಳಲ್ಲಿ ಒಂದು ಭಾಗವನ್ನು ಬ್ರಾಹ್ಮಣರಿಗಾಗಿ ವಿನಿಯೋಗಿಸಬೇಕು. ಹೀಗೆ ವಿನಿಯೋಗಿಸುವವನು ಕೃಷಿಯಿಂದ ದೋಷಿಯಾಗುವುದಿಲ್ಲ."

ವೃಕ್ಷಂ ಛಿತ್ವಾ ಮಹೀಂ ಭಿತ್ವಾ ಹತ್ವಾ ಕೀಟಪಿಪೀಲಿಕಾಃ |
ಕರ್ಷಕಃ ಖಲಯಜ್ಞೇನ ಸರ್ವಪಾಪೈಃ ಪ್ರಮುಚ್ಯತೇ || (ಹಾರೀತರ ವಚನ)

"ಕೃಷಿಯನ್ನು ಮಾಡುವಾಗ ಮರಗಳನ್ನು ಕತ್ತರಿಸುವುದು, ಭೂಮಿಯನ್ನು ಭೇದಿಸುವುದು, ಹುಳಗಳು ಇರುವೆಗಳು ಮುಂತಾದವುಗಳನ್ನು ಕೊಲ್ಲುವುದು ಮುಂತಾದ ಪ್ರಾಣಹಿಂಸಾಕಾರ್ಯಗಳು ಏರ್ಪಡುತ್ತವೆ. ಆ ದೋಷಗಳ ಪರಿಹಾರಕ್ಕಾಗಿ ಖಲಯಜ್ಞ ಅಂದರೆ ಮೇಲೆ ಹೇಳಿದಂತೆ ಲಾಭದಲ್ಲಿ ಬಂದಿರುವ ದ್ರವ್ಯಗಳ ವಿನಿಯೋಗವನ್ನು ಮಾಡಬೇಕು. ಹೀಗೆ ಮಾಡುವವನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಪಡೆಯುವನು."

ಯೋ ನ ದದ್ಯಾದ್ದ್ವಿಜಾತಿಭ್ಯೋ ರಾಶಿಮೂಲಮುಪಾಗತಃ |
ಸ ಚೋರಃ ಸ ಚ ಪಾಪಿಷ್ಠೋ ಬ್ರಹ್ಮಘ್ನಂ ತಂ ವಿನಿರ್ದಿಶೇತ್ || (ಪರಾಶರರ ವಚನ)

"ಕೃಷಿಯನ್ನು ಮಾಡಿದ ಮೇಲೆ ಧಾನ್ಯರಾಶಿಯು ಮನೆಗೆ ಬರುತ್ತದೆ. ಆ ಧಾನ್ಯರಾಶಿಯ ಬುಡದಲ್ಲಿ ನಿಂತಾಗ ಹಿಂದೆ ಹೇಳಿದಂತೆ ದೇವತೆಗಳಿಗೂ ಬ್ರಾಹ್ಮಣರಿಗೂ ಧಾನ್ಯವನ್ನು ಕೊಡಬೇಕು. ಕೊಡದವನು ಕಳ್ಳನು, ಪಾಪಿಷ್ಠನು. ಬ್ರಹ್ಮಹತ್ಯೆಯನ್ನು ಮಾಡಿದವನಿಗೆ ಸಮಾನನು ಎಂದು ತಿಳಿಯಬೇಕು."

ದ್ವಿವಿಧಸ್ತು ಗೃಹೀ ಜ್ಞೇಯಃ ಸಾಧಕಶ್ಚಾಪ್ಯಸಾಧಕಃ |
ಅಧ್ಯಾಪನಂ ಯಾಜನಂ ಚ ಪೂರ್ವಸ್ಯಾಹುಃ ಪ್ರತಿಗ್ರಹಮ್ ||
ಶಿಲೋಂಛಂ ಚಾಪಿ ಯೋ ದದ್ಯಾದ್ಗೃಹಸ್ಥಃ ಸಾಧಕಃ ಪುನಃ |
ಅಸಾಧಕಸ್ತು ಯಃ ಪ್ರೋಕ್ತೋ ಗೃಹಸ್ಥಾಶ್ರಮಸಂಸ್ಥಿತಃ ||
ಶಿಲೋಂಛೇ ತಸ್ಯ ಕಥಿತೇ ದ್ವೇ ವೃತ್ತೀ ಪರಮರ್ಷಿಭಿಃ |
ಅಮೃತೇನಾಥ ವಾ ಜೀವೇನ್ಮೃತೇನಾಪ್ಯಥವಾಽಽಪದಿ ||
ಅಯಾಚಿತಂ ಸ್ಯಾದಮೃತಂ ಮೃತಂ ಭೈಕ್ಷಂ ತು ಯಾಚಿತಮ್ |

"ಎರಡು ವಿಧರಾದ ಗೃಹಸ್ಥಾಶ್ರಮಿಗಳಿರುವರು. (1) ಅಧ್ಯಾಪನ, ಯಾಜನ, ಪ್ರತಿಗ್ರಹ, ಶಿಲ, ಉಂಛ ಎಂಬ ಐದು ವೃತ್ತಿಗಳಲ್ಲಿ ಯಾವುದಾದರೂ ಒಂದು ವೃತ್ತಿಯಿಂದ ಜೀವಿಸುತ್ತಾ ಶ್ರೀಹರಿಯನ್ನು ಆರಾಧಿಸುತ್ತಿರುವವರು ಸಾಧಕಗೃಹಸ್ಥರೆನಿಸುವರು. ಇವರು ಮೊದಲನೆಯ ದರ್ಜೆಗೆ ಸೇರಿದವರು. (2) ಶಿಲ, ಉಂಛ ಎಂಬ ಎರಡು ವೃತ್ತಿಗಳು

ಪ್ರಧಾನಜೀವನೋಪಾಯಗಳು. ಅವುಗಳನ್ನು ಮಾಡಲು ಶಕ್ತಿಯಿಲ್ಲದಿದ್ದರೆ ಅಮೃತ ಅಥವಾ ಮೃತ ಎಂಬ ಎರಡು ವೃತ್ತಿಗಳಿಂದ ಜೀವಿಸುವವರು ಅಸಾಧಕಗೃಹಸ್ಥರೆನಿಸುವರು. ಇನ್ನೊಬ್ಬನಲ್ಲಿ ಬೇಡದೆ ಶ್ರೀಹರಿಯು ಕೊಟ್ಟಿರುವ ವಸ್ತುಗಳಿಂದ ಜೀವಿಸುವುದು ಅಮೃತವೃತ್ತಿ ಎಂದೂ ಪ್ರತಿದಿನದಲ್ಲಿಯೂ ಭಿಕ್ಷೆ ಮಾಡಿ ಜೀವಿಸುವುದು ಮೃತವೃತ್ತಿ ಎಂದೂ ಹೇಳಲ್ಪಡುತ್ತದೆ.

### ಶೂದ್ರನ ಜೀವನೋಪಾಯಗಳು

ಶೂದ್ರಸ್ಯ ದ್ವಿಜಶುಶ್ರೂಷಾ ಸರ್ವಶಿಲ್ಪಾನಿ ವಾಽಪದಿ |
ವಿಕ್ರಯಃ ಸರ್ವವರ್ಣಾನಾಂ ಶೂದ್ರಧರ್ಮ ಉದಾಹೃತಃ || (ಉಶನರ ವಾಕ್ಯ)

"ಶೂದ್ರನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ಜಾತಿಯವರನ್ನು ಸೇವಿಸಬೇಕು. ಅವರು ಕೊಡುವ ವಸ್ತುಗಳಿಂದ ಜೀವಿಸಬೇಕು. ಇದು ಅವನಿಗೆ ಮುಖ್ಯಧರ್ಮವೆನಿಸುತ್ತದೆ. ಅವರು ಕೊಡದಿದ್ದರೆ ಅಥವಾ ಅವರು ಕೊಡುವ ವಸ್ತುಗಳು ಸಾಲದಿದ್ದರೆ ನಾನಾವಿಧವಾದ ವಸ್ತುಗಳನ್ನು ಮಾರಿ ಜೀವಿಸಬೇಕು. ಇದು ಅವನು ಅಪತ್ಕಾಲದಲ್ಲಿ ಮಾಡುವ ಧರ್ಮಗಳು.

ವಿಪ್ರಸೇವೈವ ಶೂದ್ರಸ್ಯ ವಿಶಿಷ್ಟಂ ಕರ್ಮ ಕೀರ್ತ್ಯತೇ | (ಮನುವಿನ ವಚನ)

"ಬ್ರಾಹ್ಮಣಸೇವೆಯೇ ಶೂದ್ರನಿಗೆ ಪ್ರಧಾನಕರ್ಮವೆನಿಸುತ್ತದೆ."

ಶೂದ್ರಸ್ಯ ದ್ವಿಜಶುಶ್ರೂಷಾ ತಯಾಽಜೀವನ್ವಣಿಗ್ಭವೇತ್ |
ಶಿಲ್ಪೈರ್ವಾ ವಿವಿಧೈರ್ಜೀವನ್ ದ್ವಿಜಾತಿಹಿತಮಾಚರನ್ || (ಯಾಜ್ಞವಲ್ಕ್ಯರ ವಚನ)

"ಶೂದ್ರನಿಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ಜಾತಿಯವರ ಸೇವೆಯೇ ಮುಖ್ಯಧರ್ಮವೆನಿಸುತ್ತದೆ. ಆ ವೃತ್ತಿಯಿಂದ ಜೀವನವು ನಡೆಯದಿದ್ದರೆ ಆ ಮೂರು ಜಾತಿಯವರಿಗೆ ಬೇಕಾದ ವಸ್ತುಗಳನ್ನು ಮಾರುತ್ತಾ ಆ ಮೂರು ಜಾತಿಯವರಿಗೆ ಹಿತವಾದ ಕಾರ್ಯಗಳನ್ನು ಮಾಡುತ್ತಾ ಜೀವಿಸಬೇಕು."

ಯೈಃ ಕರ್ಮಭಿಃ ಪ್ರಚರಿತೈಃ ಶುಶ್ರೂಷ್ಯಂತೇ ದ್ವಿಜಾತಯಃ |
ತಾನಿ ಕಾರುಕಕರ್ಮಾಣಿ ಶಿಲ್ಪಾನಿ ವಿವಿಧಾನಿ ಚ || (ಮನುವಿನ ವಚನ)

"ಯಾವ ಕರ್ಮಗಳನ್ನು ಮಾಡಿದ್ದರಿಂದ ಬ್ರಾಹ್ಮಣ. ಕ್ಷತ್ರಿಯ, ವೈಶ್ಯರು ಸೇವಿಸಲ್ಪಡುವರೋ ಆ ಕರ್ಮಗಳೂ ನಾನಾವಿಧವಾದ ಶಿಲ್ಪಗಳೂ ಕಾರುಕರ್ಮಗಳೆನಿಸುತ್ತವೆ."

ಶೌದ್ರೋ ಧರ್ಮೋ ದ್ವಿಜಾತಿಶುಶ್ರೂಷಾ, ಪಾಪವರ್ಜಂ ಕಲತ್ರಾದಿಪೋಷಣಂ, ಕರ್ಷಣಂ, ಪಶುಪಾಲನಂ, ಭಾರೋದ್ವಹನಂ, ಪಣ್ಯವ್ಯವಹಾರಶ್ಚಿತ್ರಕರ್ಮ ನೃತ್ತಗೀತವೇಣುವೀಣಾಮುರಜಮೃದಂಗವಾದನಾನಿ (ದೇವಲರ ವಚನ)

"ಬ್ರಾಹ್ಮಣ ಕ್ಷತ್ರಿಯ ವೈಶ್ಯರ ಸೇವೆ, ಪತ್ನೀಪುತ್ರಾದಿಗಳ ಪೋಷಣೆ ಮುಂತಾದ ಪಾಪವಲ್ಲದಿರುವ ಕರ್ಮಗಳು, ಉಳುವುದು, ಪಶುರಕ್ಷಣೆ, ಮೂಟೆಯನ್ನು ಹೊರುವುದು, ಸಾಮಾನುಗಳ ಸಂಬಂಧವಾದ ವ್ಯಾಪಾರಗಳು, ಚಿತ್ರವನ್ನು ಬರೆಯುವುದು, ನರ್ತನ, ಸಂಗೀತ, ಕೊಳಲು ವೀಣೆ ಮೃದಂಗ ತಮಟೆ ಮುಂತಾದ ವಾದ್ಯಗಳನ್ನು ಬಾರಿಸುವುದು ಇವುಗಳು ಶೂದ್ರನಿಗೆ ಸಂಬಂಧಿಸಿದ ಜೀವನೋಪಾಯವೆನಿಸುತ್ತವೆ.

ಉಚ್ಛಿಷ್ಟಮನ್ನಂ ದಾತವ್ಯಂ ಜೀರ್ಣಾನಿ ವಸನಾನಿ ಚ |
ಪುಲಾಕಾಶ್ಚೈವ ಧಾನ್ಯಾನಾಂ ಜೀರ್ಣಾಶ್ಚೈವ ಪರಿಚ್ಛದಾಃ || (ಮನುವಿನ ವಚನ)

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಎಂಬ ಮೂರು ಜಾತಿಯವರು ಶೂದ್ರನಿಗೆ ಉಳಿದನ್ನವನ್ನೂ ಹಳೆಯ ಬಟ್ಟೆಗಳನ್ನೂ ಚೆನ್ನಾಗಿ ಅರೆಯಲ್ಪಡದಿರುವ ಧಾನ್ಯಗಳನ್ನೂ ಹಳೆಯ ಪಾದರಕ್ಷೆ ಕೊಡೆ ಮುಂತಾದ ವಸ್ತುಗಳನ್ನೂ ಕೊಡಬೇಕು.

ರಾಜಾಂತೇವಾಸಿಯಾಜ್ಯೇಭ್ಯಃ ಸೀದನ್ನಿಚ್ಛೇದ್ಧನಂ ಕ್ಷುಧಾ |

"ಹಸಿವಿನಿಂದ ಪೀಡಿತರಾಗಿರುವ ಪ್ರಜೆಗಳು ರಾಜನಿಂದಲೂ, ಗುರುಗಳು ಶಿಷ್ಯನಿಂದಲೂ, ಪುರೋಹಿತರು ಯಜಮಾನನಿಂದಲೂ ದ್ರವ್ಯವನ್ನು ಬೇಡಬಹುದು."

ರಾಜತೋ ಧನಮನ್ವಿಚ್ಛೇತ್ಸಂಸೀದನ್ ಸ್ನಾತಕಃ ಕ್ಷುಧಾ |
ಯಾಜ್ಯಾಂತೇವಾಸಿನೋರ್ವಾಽಪಿ ನ ತ್ವನ್ಯತ ಇತಿ ಸ್ಥಿತಿಃ || (ಮನುವಿನ ವಚನ)

"ಹಸಿವಿನಿಂದ ಪೀಡಿತನಾದ ಸ್ನಾತಕವ್ರತಧಾರಿಯು ರಾಜನಿಂದ ಧನವನ್ನು ಪಡೆದು ಧರ್ಮಕಾರ್ಯಗಳನ್ನೂ ದೇಹ ಯಾತ್ರಾನಿರ್ವಾಹವನ್ನೂ ಮಾಡಬೇಕು. ಅದರಂತೆ ತನ್ನ ಶಿಷ್ಯನಿಂದಲೂ ಯಜಮಾನನಾದ ಗೃಹಸ್ಥನಿಂದಲೂ ದ್ರವ್ಯವನ್ನು ಪಡೆದು ಧರ್ಮಕಾರ್ಯ ಮತ್ತು ದೇಹಯಾತ್ರಾನಿರ್ವಾಹವನ್ನು ಮಾಡಬಹುದು. ಈ ಮೂವರನ್ನು ಬಿಟ್ಟು ಬೇರೆ ಯಾರಿಂದಲೂ ಧನವನ್ನು ಪಡೆಯಬಾರದು. ಇದು ಮನುವಿನ ವಚನ. ಈ ಮೂವರು ಇಲ್ಲದಿದ್ದಾಗ ಬೇರೆ ಜನರಿಂದಲೂ ದ್ರವ್ಯವನ್ನು ಪಡೆಯಬಹುದು ಎಂದು ಅದೇ ಮನುವು ಹೇಳಿದ್ದಾನೆ. ಆ ವಚನವನ್ನು ಕೆಳಗೆ ಕೊಟ್ಟಿದ್ದೇನೆ.

ಸರ್ವತಃ ಪ್ರತಿಗೃಹ್ಣೀಯಾದ್ಬ್ರಾಹ್ಮಣಸ್ತ್ವನಯಂ ಗತಃ | (ಮನುವಿನ ವಚನ)

"ತುಂಬಾ ಕಷ್ಟವು ಏರ್ಪಟ್ಟಾಗ ಬ್ರಾಹ್ಮಣನು ಎಲ್ಲಾ ಜಾತಿಯವರಿಂದಲೂ ಹಣವನ್ನು ತೆಗೆದು ಕೊಳ್ಳಬಹುದು."

ಶ್ರೇಯಾನ್ ಪ್ರತಿಗ್ರಹೋ ರಾಜ್ಞೋ ನಾನ್ಯೇಷಾಂ ಬ್ರಾಹ್ಮಣಾದೃತೇ |
ಬ್ರಾಹ್ಮಣಶ್ಚೈವ ರಾಜಾ ಚ ದ್ವಾವಪ್ಯೇತೌ ಧೃತವ್ರತೌ ||
ನೈತಯೋರಂತರಂ ಕಿಂಚಿತ್ಪ್ರಜಾಧರ್ಮಾದಿರಕ್ಷಣಾತ್ |
ಶುಚೀನಾಮಶುಚೀನಾಂ ಚ ಸನ್ನಿಪಾತೋ ಯಥಾಂಽಭಸಾಮ್ ||
ಸಮುದ್ರೇ ಸಮತಾಂ ಯಾತಿ ತದ್ವದ್ರಾಜಾನಂ ಧನಾಗಮಾಃ |
ಯಥಾಽಗ್ನೌ ಸಂಸ್ಥಿತಂ ಚೈವ ಶುದ್ಧಿಮಾಯಾತಿ ಕಾಂಚನಮ್ ||
ಏವಂ ಧನಾಗಮಾಃ ಸರ್ವೇ ಶುದ್ಧಿಮಾಯಾಂತಿ ರಾಜನಿ | (ನಾರದರ ವಚನ)

"ಕ್ಷತ್ರಿಯನು ಸರ್ವರಿಂದಲೂ ಹಣವನ್ನು ತೆಗೆದುಕೊಳ್ಳಬೇಕು. ಬ್ರಾಹ್ಮಣರೂ ಕ್ಷತ್ರಿಯರಂತೆ ಸರ್ವರಿಂದಲೂ ಹಣವನ್ನು ತೆಗೆದುಕೊಳ್ಳಬಹುದು. ಬ್ರಾಹ್ಮಣರನ್ನೂ ಕ್ಷತ್ರಿಯರನ್ನೂ ಬಿಟ್ಟು ಉಳಿದ ಯಾವ ಜಾತಿಯವರೂ ಸರ್ವರಿಂದ ಹಣವನ್ನು ತೆಗೆದುಕೊಳ್ಳಕೂಡದು. ಬ್ರಾಹ್ಮಣನೂ ಕ್ಷತ್ರಿಯನೂ ಪ್ರಜೆಗಳನ್ನೂ ಧರ್ಮಗಳನ್ನೂ ರಕ್ಷಿಸುತ್ತಿರುವರು. ಇವರಿಬ್ಬರಿಗೆ ಯಾವ ವ್ಯತ್ಯಾಸವೂ ಇಲ್ಲ. ಆದ್ದರಿಂದಲೇ ಇಬ್ಬರೂ ಸರ್ವರಿಂದಲೂ ಹಣವನ್ನು ಸ್ವೀಕರಿಸಬಹುದೆಂದು ಹೇಳಿದೆವು."

"ಶುಚಿಯಾದ ನೀರುಗಳೂ ಅಶುಚಿಯಾದ ನೀರುಗಳೂ ಸಮುದ್ರದಲ್ಲಿ ಹೋಗಿ ಸೇರಿದ ಕೂಡಲೇ ಶುದ್ಧವಾಗುತ್ತವೆ. ಅದರಂತೆ ರಾಜನಲ್ಲಿ ಸೇರಿದ ಒಳ್ಳೆಯ ಹಣವೂ ಕೆಟ್ಟಹಣವೂ ಶುದ್ಧವಾಗುತ್ತದೆ. ಅಗ್ನಿಯಲ್ಲಿ ಹಾಕಿದ ಭಂಗಾರವು ಅಶುದ್ಧವಾಗಿದ್ದರೂ ಶುದ್ಧವಾಗುತ್ತದೆ. ಅದರಂತೆ ಎಲ್ಲಾ ಹಣಗಳೂ ರಾಜನಲ್ಲಿ ಹೋಗಿ ಸೇರಿದರೆ ಶುದ್ಧವಾಗುತ್ತವೆ. ರಾಜನಲ್ಲಿರುವ ಹಣವು ಶುದ್ಧವಾಗಿರುವುದರಿಂದ ಆ ಹಣವನ್ನು ಸ್ನಾತಕವ್ರತಧಾರಿಗಳು ಸ್ವೀಕರಿಸಿ ಧರ್ಮಕಾರ್ಯಗಳನ್ನು ಮಾಡಬಹುದು. ಬ್ರಾಹ್ಮಣರಲ್ಲೇ ಹಣವಿದ್ದಾಗ ಅವರೂ ಸಹ ರಾಜನ ದ್ರವ್ಯವನ್ನು ತೆಗೆದುಕೊಳ್ಳಬಾರದು."

ನ ಸೀದೇತ್ಸ್ನಾತಕೋ ವಿಪ್ರಃ ಕ್ಷುಧಾ ಶಕ್ತಃ ಕಥಂಚನ |
ನ ಜೀರ್ಣಮಲವದ್ವಾಸಾ ಭವೇಚ್ಚ ವಿಭವೇ ಸತಿ || (ಮನುವಿನ ವಚನ)

"ಸ್ನಾತಕವ್ರತಧಾರಿಯಾದ ಬ್ರಾಹ್ಮಣನು ಶಕ್ತನಾಗಿದ್ದರೆ ಹಸಿವಿನಿಂದ ಪೀಡಿಸಲ್ಪಡಬಾರದು. ವೈಭವವಿದ್ದಾಗ ಜೀರ್ಣವಾದ

ಮತ್ತು ಕೊಳೆಯುಳ್ಳ ವಸ್ತ್ರಗಳನ್ನು ಧರಿಸಬಾರದು. ತನ್ನ ಹಣದಿಂದಲೇ ಎಲ್ಲಾ ನಿರ್ವಾಹಗಳನ್ನೂ ಮಾಡಬೇಕು. ತನ್ನಲ್ಲಿ ಹಣವಿಲ್ಲದಿದ್ದಾಗ ಹಸಿವಿನಿಂದ ಪೀಡಿಸಲ್ಪಟ್ಟಾಗಲೇ ಇತರರಿಂದ ಹಣವನ್ನು ತೆಗೆದುಕೊಳ್ಳಬೇಕು."

ವಿದ್ಯಮಾನೇ ಧನೇ ಯಸ್ತು ಪ್ರತಿಗ್ರಹರುಚಿರ್ದ್ವಿಜಃ |
ನರಕಂ ರೌರವಂ ಪ್ರಾಪ್ಯ ತತ್ರೈವ ಪರಿಪಚ್ಯತೇ | (ವ್ಯಾಸರ ವಚನ)

"ಸ್ವಂತ ಹಣವು ಇರುವಾಗ ಪ್ರತಿಗ್ರಹವನ್ನು ಸ್ವೀಕರಿಸುವ ವಿಷಯದಲ್ಲಿ ಅಭಿರುಚಿಯುಳ್ಳ ಬ್ರಾಹ್ಮಣನು ರೌರವ ನರಕವನ್ನು ಪಡೆದು ಅಲ್ಲಿಯೇ ದುಃಖವನ್ನು ಪಡೆಯುತ್ತಾ ವಾಸಿಸುವನು."

ಯಸ್ತು ಯಾಚನಕೋ ವಿಪ್ರೋ ನ ಸ ಸ್ವರ್ಗಸ್ಯ ಭಾಜನಮ್ |
ಉದ್ವೇಜಯತಿ ಭೂತಾನಿ ಯದ್ವಚ್ಚೋರಸ್ತಥೈವ ಚ ||
ಸಕ್ತಾಃ ಪ್ರತಿಗ್ರಹೇ ಯೇ ತು ನ ದಾನೇ ತು ಕಥಂಚನ |
ತೇಷಾಂ ಚೈವ ಸ್ವತಃ ಪ್ರಾಹ ನ ತೂರ್ಧ್ವಗಮನಂ ಕ್ವಚಿತ್ || (ಯಮವಚನ)

"ಯಾವಾಗಲೂ ಬೇಡುತ್ತಿರುವವನು ಯಾಚನಕ ಎಂದು ಹೇಳಲ್ಪಡುವನು. ಈ ಯಾಚನಕನು ಸ್ವರ್ಗವನ್ನು ಪಡೆಯಲಾರನು. ಕಳ್ಳನಲ್ಲದಿದ್ದರೂ ಇತರರನ್ನು ಹೆದರಿಸುತ್ತಿರುವವನು ಸ್ವರ್ಗವನ್ನು ಪಡೆಯಲಾರನು. ಯಾವಾಗಲೂ ಪ್ರತಿಗ್ರಹದಲ್ಲಿಯೇ ಆಸಕ್ತರಾಗಿರುವವರೂ ದಾನದಲ್ಲಿ ಆಸಕ್ತಿಯಿಲ್ಲದವರೂ ಮೇಲಿನ ಲೋಕಗಳನ್ನು ಪಡೆಯಲಾರರು."

## ವೇದಗಳನ್ನು ಮಾರಬಾರದು

ವೇದಾಕ್ಷರಾಣಿ ಯಾವಂತಿ ನಿಯುಂಜ್ಯಾದರ್ಥಕಾರಣಾತ್ |
ತಾವತೀಂ ಭ್ರೂಣಹತ್ಯಾಂ ವೈ ವೇದವಿಕ್ರಯ್ಯವಾಪ್ನುಯಾತ್ ||

"ದುಡ್ಡಿಗಾಗಿ ವೇದಾಕ್ಷರಗಳನ್ನು ಉಪಯೋಗಿಸುವವನು ವೇದವಿಕ್ರಯೀ ಎಂದೆನಿಸುವನು. ದುಡ್ಡಿಗಾಗಿ ಎಷ್ಟು ವೇದಾಕ್ಷರಗಳನ್ನು ವಿನಿಯೋಗಿಸುವನೋ ಅಷ್ಟು ಗರ್ಭನಾಶಗಳನ್ನು ಮಾಡಿದ ದೋಷಗಳನ್ನು ಪಡೆಯುವನು."

ಪ್ರಖ್ಯಾಪನಂ ಪ್ರಾಧ್ಯಯನಂ ಪ್ರಶ್ನಪೂರ್ವಪ್ರತಿಗ್ರಹಃ |
ಯಾಜನಾಧ್ಯಾಪನೇ ವಾದಃ ಷಡ್ವಿಧೋ ವೇದವಿಕ್ರಯಃ || (ಅಗಸ್ತ್ಯರ ವಚನ)

(1) "ವೇದವನ್ನು ಅಯೋಗ್ಯರು ತಿಳಿಯುವಂತೆ ಪ್ರಕಟಿಸುವುದು ಪ್ರಖ್ಯಾಪನವೆನಿಸುತ್ತದೆ. (2) ಅದೇ ವೇದವನ್ನು ಅಯೋಗ್ಯರ ಸಮೂಹದಲ್ಲಿ ಗಟ್ಟಿಯಾಗಿ ಅಧ್ಯಯನ ಮಾಡುವುದು ಪ್ರಾಧ್ಯಯನವೆನಿಸುತ್ತದೆ. (3) ಬ್ರಾಹ್ಮಣನು ಅಯೋಗ್ಯನಲ್ಲಿ ಕೇಳಿ ವೇದವನ್ನು ಓದುವುದು ಪ್ರಶ್ನಪೂರ್ವಪ್ರತಿಗ್ರಹವೆನಿಸುತ್ತದೆ. (4) ಅಯೋಗ್ಯರಿಂದ ಯಜ್ಞ ಮುಂತಾದ ವೈದಿಕಕರ್ಮಗಳನ್ನು ಮಾಡಿಸುವುದು ಯಾಜನವೆನಿಸುತ್ತದೆ, (5) ಅಯೋಗ್ಯರಿಗೆ ವೇದಗಳನ್ನು ಹೇಳುವುದು ಅಧ್ಯಾಪನವೆನಿಸುತ್ತದೆ. (6) ದುಡ್ಡಿಗಾಗಿ ಶಾಸ್ತ್ರಾರ್ಥವಿಚಾರವನ್ನು ಮಾಡುವುದು ವಾದವೆನಿಸುತ್ತದೆ. ಈ ಆರು ವೇದವಿಕ್ರಯವೆನಿಸುತ್ತದೆ. (7) ಪ್ರಶ್ನಪೂರ್ವಪ್ರತಿಗ್ರಹದಂತೆ ಪ್ರಶ್ನಪೂರ್ವದಾನವೂ ಅಂದರೆ ಅಯೋಗ್ಯನು ಕೇಳಿ ನಮ್ಮಿಂದ ವೇದವನ್ನು ಓದುವುದೂ ವೇದವಿಕ್ರಯವೆನಿಸುತ್ತದೆ. ಹಿಂದಿನ ಶ್ಲೋಕದಲ್ಲಿ ಹೇಳಿದ ವೇದವಿಕ್ರಯವನ್ನು ಈ ಶ್ಲೋಕದಲ್ಲಿ ಸ್ಪಷ್ಟಪಡಿಸಿದಂತಾಯಿತು."

ಪ್ರಶ್ನಪೂರ್ವಂ ತು ಯೋ ದದ್ಯಾದ್ಬ್ರಾಹ್ಮಣಸ್ಯ ಪ್ರತಿಗ್ರಹಮ್ |
ಸ ಪೂರ್ವಂ ನರಕಂ ಯಾತಿ ಬ್ರಾಹ್ಮಣಸ್ತದನಂತರಂ || (ಶಾತಾತಪರ ವಚನ)

"ಅಯೋಗ್ಯನಲ್ಲಿ ಬ್ರಾಹ್ಮಣನು ಪ್ರಶ್ನಿಸಿದ ಮೇಲೆ ವಿದ್ಯೆಯನ್ನು ಉಪದೇಶಿಸಿದ ಅಯೋಗ್ಯನು ಮೊದಲು ನರಕವನ್ನು ಪಡೆಯುವನು. ಅನಂತರದಲ್ಲಿ ಬ್ರಾಹ್ಮಣನು ನರಕವನ್ನು ಪಡೆಯುವನು. ಇದೇ ರೀತಿಯಲ್ಲಿ ವಿದ್ಯೆಯಂತೆ ಇತರ ಎಲ್ಲಾ

ವಸ್ತುಗಳನ್ನೂ ಇನ್ನೊಬ್ಬನಲ್ಲಿ ಕೇಳಿ ಪಡೆಯುವವನು ಪ್ರಶ್ನಪೂರ್ವಪ್ರತಿಗ್ರಹವನ್ನು ಮಾಡುವವನು. ಇಲ್ಲಿ ದಾನವನ್ನು ಕೊಡುವವನೂ ತೆಗೆದುಕೊಳ್ಳುವವನೂ ಇಬ್ಬರೂ ನರಕವನ್ನು ಪಡೆಯುವರು."

ಇಲ್ಲಿ ಒಂದು ಪ್ರಶ್ನೆಯು ಬರುತ್ತದೆ. ಹಣವನ್ನು ಇನ್ನೊಬ್ಬನಲ್ಲಿ ಕೇಳಿ ಪಡೆಯುವುದು ದೋಷವೆಂದು ಹೇಳಿದಿರಿ. ಹಾಗಾದರೆ ಹಣವೇ ಇಲ್ಲದಿರುವ ಬಡವನು ದೋಷಿಯಲ್ಲವೆಂದು ಹೇಳಿದಂತಾಯಿತಲ್ಲವೇ? ಎಂಬ ಪ್ರಶ್ನೆ. ಈ ಪ್ರಶ್ನೆಗೆ ಉತ್ತರವನ್ನು ಹೇಳುತ್ತಿದ್ದೇವೆ.

### ಪ್ರತಿಗ್ರಹದಲ್ಲಿ ಆಸೆಯುಳ್ಳವನಾಗಬಾರದು

ಪ್ರತಿಗ್ರಹರುಚಿರ್ನ ಸ್ಯಾತ್ಸ್ಥಿತ್ಯರ್ಥಂ ತು ಸಮಾಹರೇತ್ |
ಸ್ಥಿತ್ಯರ್ಥಾದಧಿಕಂ ಗೃಹ್ಣನ್ ಬ್ರಾಹ್ಮಣೋ ಯಾತ್ಯಧೋಗತಿಮ್ ||
ವೃತ್ತಿಸಂಕೋಚಮನ್ವಿಚ್ಛನ್ನ ಲಭೇದ್ಧನವಿಸ್ತರಮ್ |
ಧನಲಾಭೇ ಪ್ರವೃತ್ತಸ್ತು ಬ್ರಾಹ್ಮಣ್ಯಾದೇವ ಹೀಯತೇ ||

"ಹಣವನ್ನು ದೇಹಯಾತ್ರಾನಿರ್ವಾಹಕ್ಕಾಗಿಯೇ ಸಂಪಾದಿಸಬೇಕು. ದೇಹಯಾತ್ರಾ ನಿರ್ವಾಹಕ್ಕೆ ಬೇಕಾದ ಹಣಕ್ಕಿಂತ ಅಧಿಕವಾದ ಹಣವನ್ನು ಬಯಸುವವನು ಅಧೋಗತಿಯನ್ನು ಪಡೆಯುವನು. ರಾಜಾದಿಗಳಿಂದ ದೇಹಯಾತ್ರಾ ನಿರ್ವಾಹಕ್ಕೆ ಬೇಕಾದಷ್ಟು ಹಣವನ್ನೇ ಬಯಸಬೇಕು. ಅದಕ್ಕಿಂತ ಅಧಿಕವಾದ ಹಣವನ್ನು ಬಯಸಬಾರದು. ದುಡ್ಡನ್ನು ಸಂಪಾದಿಸಬೇಕೆಂಬ ಆಸೆಯಿಂದ ಹೊರಟ ಬ್ರಾಹ್ಮಣನು ಕ್ರಮವಾಗಿ ಬ್ರಾಹ್ಮಣತ್ವವನ್ನೇ ಕಳೆದುಕೊಳ್ಳುವನು. ಆದ್ದರಿಂದ ಧನವನ್ನು ತೆಗೆದುಕೊಳ್ಳಬೇಕೆಂಬ ಆಸೆಯನ್ನೇ ಮಾಡಕೂಡದು. ಬಡವನಾದರೂ ದಾನವನ್ನು ತೆಗೆದುಕೊಳ್ಳಬೇಕೆಂಬ ಆಸೆಯಿಂದ ಯುಕ್ತನಾಗಬಾರದು."

ದಶ ಸೂನಾಸಹಸ್ರಾಣಿ ಅಹ್ನಿ ರಾಜಾ ಕರೋತಿ ವೈ |
ತಾನ್ಯೇವ ಕುರುತೇ ರಾತ್ರೌ ಘೋರಸ್ತಸ್ಯ ಪ್ರತಿಗ್ರಹಃ ||

"ರಾಜನು ಹಗಲಿನಲ್ಲಿ ಹತ್ತುಸಾವಿರ ಪ್ರಾಣಿಹಿಂಸೆಗಳನ್ನೂ ರಾತ್ರಿಯಲ್ಲಿ ಹತ್ತುಸಾವಿರ ಪ್ರಾಣಿಹಿಂಸೆಗಳನ್ನೂ ಮಾಡುತ್ತಿರುವನು. ಅವನಿಂದ ಹಣವನ್ನು ಪಡೆದವರಿಗೂ ಅವನು ಮಾಡಿದ ಪಾಪಗಳಲ್ಲಿ ಭಾಗವುಂಟು. ಆದ್ದರಿಂದ ಅವನಿಂದ ಹಣವನ್ನು ಪಡೆಯುವುದು ಅತಿಘೋರವಾದ ಕೆಲಸವೆನಿಸುತ್ತದೆ."

ರಾಜಪ್ರತಿಗ್ರಹೋ ಘೋರೋ ಮಧ್ವಾಸ್ವಾದೋ ವಿಷೋಪಮಃ |
ಮಲಮೂತ್ರಂ ವರಂ ಪ್ರೋಕ್ತಂ ನ ಚ ರಾಜಪ್ರತಿಗ್ರಹಃ || (ಚತುರ್ವಿಂಶತಿಮತ)

"ರಾಜನಿಂದ ಹಣವನ್ನು ತೆಗೆದುಕೊಳ್ಳುವುದು ಅತ್ಯಂತಘೋರವೆನಿಸುತ್ತದೆ. ವಿಷಮಿಶ್ರಿತವಾದ ಜೇನನ್ನು ಕುಡಿಯುವುದೂ ಮಲಮೂತ್ರಗಳನ್ನು ಭಕ್ಷಿಸುವುದೂ ರಾಜನಿಂದ ಹಣವನ್ನು ಪಡೆಯುವುದಕ್ಕಿಂತ ಉತ್ತಮವೆನಿಸುತ್ತದೆ."

ಈ ಶ್ಲೋಕದಲ್ಲಿ ರಾಜನಿಂದ ಹಣವನ್ನು ತೆಗೆದುಕೊಳ್ಳಲೇ ಕೂಡದು ಎಂದು ಹೇಳುತ್ತಿದೆ. ಶಾಸ್ತ್ರದಲ್ಲಿ ಹೇಳಿದಂತೆ ರಾಜ್ಯವನ್ನು ಪರಿಪಾಲಿಸುತ್ತಿರುವ ರಾಜನಿಂದ ಹಣವನ್ನು ತೆಗೆದುಕೊಳ್ಳುವುದರಿಂದ ದೋಷವಿಲ್ಲ. ಈ ವಿಷಯವು ಕೆಳಗೆ ಬರೆದಿರುವ ಮನುವಿನ ವಚನದಿಂದ ತಿಳಿಯುತ್ತದೆ.

ಯೋ ರಾಜ್ಞಃ ಪ್ರತಿಗೃಹ್ಣೀತ ಲುಬ್ಧಸ್ಯೋಚ್ಛಾಸ್ತ್ರವರ್ತಿನಃ |
ಸ ಪರ್ಯಾಯೇಣ ಯಾತೀಮಾನ್ನರಕಾನೇಕವಿಂಶತಿಮ್ ||
ತಾಮಿಸ್ರಮಂಧತಾಮಿಸ್ರಂ ಮಹಾರೌರವರೌರವೌ |
ನರಕಂ ಕಾಲಸೂತ್ರಂ ಚ ಮಹಾನರಕಮೇವ ಚ ||

ಸಂಜೀವನಂ ಮಹಾವೀಚಿಂ ತಪನಂ ಸಂಪ್ರತಾಪನಮ್ |
ಸಂಘಾತಂ ಚ ಸಕಾಕೋಲಂ ಕುಡ್ಮಲಂ ಪೂತಿಮೃತ್ತಿಕಮ್ ||
ಲೋಹಶಂಕುಮೃಜೀಷಂ ಚ ಪಂಥಾನಂ ಶಾಲ್ಮಲೀನದೀಮ್ |
ಅಸಿಪತ್ರವನಂ ಚೈವ ಲೋಹದಾರಕಮೇವ ಚ ||
ಏತದ್ವಿದಂತೋ ವಿದ್ವಾಂಸೋ ಬ್ರಾಹ್ಮಣಾ ಬ್ರಹ್ಮವಾದಿನಃ |
ನ ರಾಜ್ಞಃ ಪ್ರತಿಗೃಹ್ಣಂತಿ ಪ್ರೇತ್ಯ ಶ್ರೇಯೋಭಿಕಾಂಕ್ಷಿಣಃ || (ಮನುವಿನ ವಚನ)

"ಯಾವನು ಲೋಭಿಯಾಗಿ ಶಾಸ್ತ್ರವನ್ನು ಮೀರಿ ನಡೆಯುತ್ತಿರುವನೋ ಆ ರಾಜನಿಂದ ಹಣವನ್ನು ಬಯಸುವವರು ಇಪ್ಪತ್ತೊಂದು ನರಕಗಳನ್ನು ಕ್ರಮವಾಗಿ ಪಡೆಯುವರು. (1) ತಾಮಿಸ್ರ, (2) ಅಂಧತಾಮಿಸ್ರ, (3) ಮಹಾರೌರವ, (4) ರೌರವ, (5) ಕಾಲಸೂತ್ರ, (6) ಮಹಾನರಕ, (7) ಸಂಜೀವನ, (8) ಮಹಾವೀಚಿ, (9) ತಪನ, (10) ಸಂಪ್ರತಾಪನ, (11) ಸಂಘಾತ, (12) ಕಾಕೋಲ, (13) ಕುಡ್ಮಲ, (14) ಪೂತಿಮೃತ್ತಿಕ, (15) ಲೋಹಶಂಕು, (16) ಋಜೀಷ, (17) ಪಂಥಾನ, (18) ಶಾಲ್ಮಲೀ, (19) ವೈತರಣೀನದೀ (20) ಅಸಿಪತ್ರವನ, (21) ಲೋಹದಾರಕ, ಇವುಗಳು 21 ನರಕಗಳು.

## ಪತಿತಯಾಜನವು ಮಹಾದೋಷಕರ

ಪತಿತಯಾಜನಾತ್ಪತಿತಃ ಸಂಕರಯಾಜನಾತ್ಸಂಕರಿತ್ವಮುಪೈತಿ. ಸಂಕೀರ್ಣಯಾಜನಾತ್ಸಂಕೀರ್ಣತ್ವಂ ಶೂದ್ರಯಾಜನಾಜ್ಜಾತಿತಶ್ಚ್ಯವತೇ | (ಹಾರೀತರ ವಚನ)

"ಉತ್ತಮಜಾತಿಯಲ್ಲಿ ಹುಟ್ಟಿ ನೀಚಕಾರ್ಯವನ್ನು ಮಾಡಿದರೆ ಪತಿತನೆನಿಸುವನು. ನೀಚಜಾತಿಯಲ್ಲಿ ಹುಟ್ಟಿ ಉತ್ತಮಜಾತಿಯ ಸ್ತ್ರೀಯನ್ನು ವಿವಾಹ ಮಾಡಿಕೊಳ್ಳುವವನು ಸಂಕರಿ ಎನಿಸುವನು. ವ್ಯಭಿಚಾರದಿಂದ ಹುಟ್ಟಿದವನು ಸಂಕೀರ್ಣನೆನಿಸುವನು. ಪತಿತನಿಂದ ಯಜ್ಞಾದಿಕಾರ್ಯಗಳನ್ನು ಮಾಡಿಸುವವನು ಪತಿತನಾಗುವನು. ಸಂಕರನಿಂದ ಯಜ್ಞ ಮುಂತಾದ ಕಾರ್ಯಗಳನ್ನು ಮಾಡಿಸುವವನು ಸಂಕರಿಯಾಗುವನು. ಸಂಕೀರ್ಣನಿಂದ ಯಜ್ಞ ಮುಂತಾದ ಕಾರ್ಯಗಳನ್ನು ಮಾಡಿಸುವವನು ಸಂಕೀರ್ಣತ್ವವನ್ನು ಪಡೆಯುವನು. ಶೂದ್ರನಿಂದ ಯಜ್ಞವನ್ನು ಮಾಡಿಸುವವನು ಜಾತಿಭ್ರಷ್ಟನಾಗುವನು."

ಯಾಜನಂ ಯೋನಿಸಂಬಂಧಂ ಸ್ವಾಧ್ಯಾಯಂ ಸಹಭೋಜನಮ್ |
ಕೃತ್ವಾ ಸದ್ಯಃ ಪತತ್ಯೇವ ಪತಿತೇನ ನ ಸಂಶಯಃ || (ದೇವಲರ ವಚನ)

"(1) ಯಾಜನ, (2) ಯೋನಿಸಂಬಂಧ ಅಂದರೆ ಪತಿತನ ಕನ್ಯೆಯಲ್ಲಿ ತಾನಾಗಲೀ ತನ್ನ ಕನ್ಯೆಯಲ್ಲಿ ಪತಿತನಾಗಲೀ ಸಂಭೋಗವನ್ನು ಮಾಡುವುದು. (3) ಪತಿತನೊಡನೆ ವೇದಾಧ್ಯಯನವನ್ನು ಮಾಡುವುದು, (4) ಪತಿತನೊಡನೆ ಭೋಜನವನ್ನು ಮಾಡುವುದು ಮುಂತಾದ ಯಾವ ಸಂಬಂಧವನ್ನೂ ಪತಿತನ ಜೊತೆಯಲ್ಲಿ ಇಟ್ಟುಕೊಳ್ಳಬಾರದು. ಹಾಗೆ ಸಂಬಂಧವನ್ನು ಇಟ್ಟುಕೊಂಡರೆ ಪತಿತನಾಗುವವನು, ಈ ವಿಷಯದಲ್ಲಿ ಸಂಶಯವಿಲ್ಲ."

## ಪತಿತದ್ರವ್ಯಸ್ವೀಕಾರಕ್ಕೆ ಪ್ರಾಯಶ್ಚಿತ್ತ

ಪತಿತದ್ರವ್ಯಮಾದಾಯ ಭಕ್ತಂ ವಾ ಬ್ರಾಹ್ಮಣೋ ಯದಿ |
ಕೃತ್ವಾ ತಸ್ಯ ಸಮುತ್ಸರ್ಗಮತಿಕೃಚ್ಛ್ರಂ ಚರೇದ್ದ್ವಿಜಃ || (ಉಶನರ ವಚನ)

"ಪತಿತನ ದ್ರವ್ಯವನ್ನಾಗಲೀ ಅನ್ನವನ್ನಾಗಲೀ ಸ್ವೀಕರಿಸಿದರೆ ಆ ದ್ರವ್ಯವನ್ನೂ ಅನ್ನವನ್ನೂ ಬಿಟ್ಟು ಬಿಡಬೇಕು. ಅತಿ ಕೃಛ್ರಪ್ರಾಯಶ್ಚಿತ್ತವನ್ನು ಮಾಡಬೇಕು. ಶೂದ್ರನಿಗೆ ಪೌರೋಹಿತ್ಯವನ್ನು ಮಾಡಿಸಿದರೂ ಇದೇ ಪ್ರಾಯಶ್ಚಿತ್ತವೆಂದು ತಿಳಿಯಬೇಕು."

ಶೂದ್ರಯಾಜಕಃ ಸರ್ವಪರಿತ್ಯಾಗಾತ್ಪೂತೋ ಭವತಿ | (ಸುಮಂತು ವಚನ)

ಶೂದ್ರಯಾಜಕೋ ಗರ್ಹಿತದ್ರವ್ಯಂ ನಾಗಹ್ರದೇ ಪ್ರಕ್ಷಿಪ್ಯ ಬ್ರಾಹ್ಮಣಾಂಸ್ತೂಪೇತ್ಯ ಬ್ರೂಯಾತ್ "ತ್ರಾಯಂತಾಂ ಭವಂತೋ ವರ್ಣಾಶ್ರಮ್ಯಮಿಚ್ಛಾಮಿ" ಇತಿ (ಹಾರೀತರ ವಚನ)

"ಶೂದ್ರನ ಪೌರೋಹಿತ್ಯವನ್ನು ಮಾಡಿಸುವವನು ಅವನಿಂದ ತೆಗೆದುಕೊಂಡಿರುವ ಎಲ್ಲಾ ಹಣವನ್ನೂ ಆಳವಾದ ಮಡುವಿನಲ್ಲಿ ಹಾಕಬೇಕು. ಬ್ರಾಹ್ಮಣರಲ್ಲಿ ಬಂದು "ನನ್ನನ್ನು ರಕ್ಷಿಸಿರಿ. ಬ್ರಾಹ್ಮಣತ್ವವು ನನ್ನನ್ನು ಬಿಟ್ಟು ಹೋಯಿತು. ಆ ಬ್ರಾಹ್ಮಣತ್ವವನ್ನು ಅಪೇಕ್ಷಿಸುತ್ತಿರುವೆನು" ಎಂದು ಪ್ರಾರ್ಥಿಸಬೇಕು. ಇದರಿಂದ ಶುದ್ಧನಾಗುವನು.

### ಕೆಲವು ವಸ್ತುಗಳು ಪತಿತನ ವಸ್ತುಗಳಾದರೂ ದೋಷವಿಲ್ಲ

ಶಯ್ಯಾಂ ಕುಶಾನ್ ಗೃಹಾನ್ ಗಂಧಾನಯಃ ಪುಷ್ಪಂ ಮಣೀನ್ ದಧಿ |
ಧಾನಾ ಮತ್ಸ್ಯಾನ್ ಪಯೋ ಮಾಂಸಂ ಶಾಕಂ ಚೈವ ನ ನಿರ್ನುದೇತ್ || (ಮನುವಿನ ವಚನ)

"ಹಾಸಿಗೆ, ದರ್ಭೆ, ಮನೆ, ಗಂಧಗಳು, ಕಬ್ಬಿಣ, ಪುಷ್ಪ, ಮಣಿಗಳು, ಮೊಸರು, ಧಾನ್ಯಗಳು, ಮೀನುಗಳು, ಹಾಲು, ಮಾಂಸ, ತರಕಾರಿ ಇಷ್ಟು ಪದಾರ್ಥಗಳು ತಾನಾಗಿಯೇ ಪ್ರಾರ್ಥನೆಯಿಲ್ಲದೆ ಸಿಕ್ಕಿದರೆ ಅವುಗಳನ್ನು ಸ್ವೀಕರಿಸಿದ್ದರಿಂದ ದೋಷವಿಲ್ಲ."

ಕುಶಾಃ ಶಾಕಂ ಪಯೋ ಮತ್ಸ್ಯಾ ಗಂಧಾಃ ಪುಷ್ಪಂ ದಧಿ ಕ್ಷಿತಿಃ |
ಮಾಂಸಂ ಶಯ್ಯಾಸನಂ ಧಾನಾಃ ಪ್ರತ್ಯಾಖ್ಯೇಯಾ ನ ವಾರಿ ಚ || (ಯಾಜ್ಞವಲ್ಕ್ಯರ ವಚನ)

"ದರ್ಭೆಗಳು, ತರಕಾರಿಗಳು, ಹಾಲು, ಮೀನುಗಳು, ಗಂಧಗಳು, ಪುಷ್ಪಗಳು, ಮೊಸರು, ಭೂಮಿ, ಮಾಂಸ, ಹಾಸಿಗೆ, ಆಸನಗಳು, ಧಾನ್ಯಗಳು, ನೀರು ಇವುಗಳನ್ನು ತ್ಯಜಿಸಬಾರದು."

ಅಯಾಚಿತೋಪಪನ್ನೇನ ನಾಸ್ತಿ ದೋಷಃ ಪರಿಗ್ರಹೇ |
ಅಮೃತಂ ತದ್ವಿದುರ್ದೇವಾಸ್ತಸ್ಮಾತ್ತಂ ನೈವ ನಿರ್ನುದೇತ್ || (ಭಾರದ್ವಾಜರ ವಚನ)

"ಯಾವ ವಸ್ತುವು ಇತರರನ್ನು ಬೇಡದೆ ತಾನಾಗಿಯೇ ಬಂದಿರುತ್ತದೆಯೋ ಆ ವಸ್ತುವು ಅಮೃತವೆನಿಸುತ್ತದೆ. ಆ ಅಮೃತವಸ್ತುವನ್ನು ತೆಗೆದುಕೊಂಡದ್ದರಿಂದ ದೋಷವಿಲ್ಲ."

### ಈ ವಿಷಯದಲ್ಲಿ ಮನುವಿನ ಅಭಿಪ್ರಾಯ

ನಾಶ್ನಂತಿ ಪಿತರಸ್ತಸ್ಯ ದಶ ವರ್ಷಾಣಿ ಪಂಚ ಚ |
ನ ಚ ಹವ್ಯಂ ವಹತ್ಯಗ್ನಿರ್ಯಸ್ತಾಮಭ್ಯವಮನ್ಯತೇ || (ಮನುವಿನ ವಚನ)

"ಅಮೃತವಸ್ತುವನ್ನು ಸ್ವೀಕರಿಸುವವನ ಪಿತೃಗಳು ಹದಿನೈದು ವರ್ಷಗಳವರೆಗೆ ಪಿಂಡ, ತರ್ಪಣ ಮುಂತಾದವುಗಳನ್ನು ಸ್ವೀಕರಿಸುವುದಿಲ್ಲ. ಅಗ್ನಿಯು ಹವಿಸ್ಸನ್ನು ಸ್ವೀಕರಿಸಿ ಆಯಾಯಾ ದೇವತೆಗಳಿಗೆ ಸೇರಿಸುವುದಿಲ್ಲ."

### ಅಮೃತವಸ್ತುವನ್ನೂ ಕೆಲವು ಸಂದರ್ಭಗಳಲ್ಲಿ ಸ್ವೀಕರಿಸಬಹುದು

ಅಯಾಚಿತಾಹೃತಂ ಗ್ರಾಹ್ಯಮಪಿ ದುಷ್ಕೃತಕರ್ಮಣಃ |
ಅನ್ಯತ್ರ ಕುಲಟಾಷಂಡಪತಿತೇಭ್ಯಸ್ತಥಾ ದ್ವಿಷಃ || (ಯಾಜ್ಞವಲ್ಕ್ಯರ ವಚನ)

"ಅಮೃತವಸ್ತುವನ್ನು ಪಾಪಿಯ ಕೈಯಿಂದಲೂ ಸ್ವೀಕರಿಸಬಹುದು. ಆದರೆ ವ್ಯಭಿಚಾರಿಣೀ, ನಪುಂಸಕ, ಪತಿತ, ಶತ್ರು ಈ ನಾಲ್ಕರಿಂದ ತೆಗೆದುಕೊಳ್ಳಬಾರದು."

ಚಿಕಿತ್ಸಕಸ್ಯ ಮೃಗಯೋರ್ವೇಶ್ಯಾಯಾಃ ಕಿತವಸ್ಯ ಚ |
ಷಂಡಸೂನ(ಚ)ಕಯೋಶ್ಚೈವಮುದ್ಯತಾಮಪಿ ವರ್ಜಯೇತ್ || (ಯಮವಚನ)

"ಅಮೃತವಾದ ವಸ್ತುಗಳು ವೈದ್ಯ, ಬೇಟೆಗಾರ, ಸೂಳೆ, ಜೂಜುಕೋರ, ನಪುಂಸಕ, ಕೊಲೆಗಾರ, ಬಾಡಿಕೋರ ಇವರ ವಸ್ತುಗಳಾಗಿದ್ದರೆ ಅವುಗಳನ್ನು ಸ್ವೀಕರಿಸಕೂಡದು."

ಚಿಕಿತ್ಸಕಕೃತಘ್ನಾನಾಂ ಶಲ್ಯಕರ್ತುಶ್ಚ ವಾರ್ಧುಷೇಃ |
ಷಂಡಸ್ಯ ಕುಲಟಾಯಾಶ್ಚ ಉದ್ಯತಾಮಪಿ ವರ್ಜಯೇತ್ || (ಹಾರೀತರ ವಚನ)

"ವೈದ್ಯರು, ಕೃತಘ್ನರು, ಆಯುಧಗಳನ್ನು ತಯಾರಿಸುವವರು, ಲೇವಾದೇವಿಯನ್ನು ಮಾಡುವವರು, ನಪುಂಸಕರು, ಸೂಳೆ ಇವರುಗಳು ತಾವಾಗಿಯೇ ಕೊಟ್ಟರೂ ಆ ವಸ್ತುಗಳನ್ನು ತೆಗೆದುಕೊಳ್ಳಬಾರದು."

### ವಾರ್ಧುಷಿಕರ ಲಕ್ಷಣ

ಸಮರ್ಘಂ ಧನಮಾಹೃತ್ಯ ಮಹಾರ್ಘಂ ಯಃ ಪ್ರಯಚ್ಛತಿ |
ಸ ವೈ ವಾರ್ಧುಷಿಕೋ ನಾಮ ಬ್ರಹ್ಮವಾದಿಷು ಗರ್ಹಿತಃ || (ವಸಿಷ್ಠರ ವಚನ)

"ಕಮ್ಮಿ ಬೆಲೆಯ ಸಾಮಾನುಗಳನ್ನು ತೆಗೆದುಕೊಂಡು ಹೆಚ್ಚಿನ ಬೆಲೆಗೆ ಕೊಡುವವನು ವಾರ್ಧುಷಿಕ ಎಂದೆನಿಸುವನು. ಇವನನ್ನು ಬ್ರಹ್ಮವಾದಿಗಳು ನಿಂದಿಸುತ್ತಾರೆ."

### ಸ್ವಧರ್ಮನಿಷ್ಠರು ಪತಿತರ ದ್ರವ್ಯವನ್ನೂ ಸ್ವೀಕರಿಸಬಹುದು

ವೈಶ್ಯವೃತ್ತಿಮನಾತಿಷ್ಠನ್ ಬ್ರಾಹ್ಮಣಃ ಸ್ವೇ ಪಥಿ ಸ್ಥಿತಃ |
ಅವೃತ್ತಿಕರ್ಶಿತಃ ಸೀದನ್ನಿಮಂ ಧರ್ಮಂ ಸಮಾಶ್ರಯೇತ್ ||
ಸರ್ವತಃ ಪ್ರತಿಗೃಹ್ಣೀಯಾದ್ಬ್ರಾಹ್ಮಣಸ್ತ್ವನಯಂ ಗತಃ |
ಪವಿತ್ರಂ ದುಷ್ಯತೀತ್ಯೇತದ್ಧರ್ಮತೋ ನೋಪಪದ್ಯತೇ || (ಮನುವಿನ ವಚನ)

"ಬ್ರಾಹ್ಮಣನು ತನ್ನ ಧರ್ಮವನ್ನು ಬಿಡದೆ ಅನುಷ್ಠಿಸುತ್ತಿರುವಾಗ ವೈಶ್ಯವೃತ್ತಿಯಾಗಿರುವ ವಾಣಿಜ್ಯವನ್ನೂ ಮಾಡದಿದ್ದರೆ ಅವನಿಗೆ ಜೀವನವೇ ನಡಿಯಲಾರದು. ಇಂಥಾ ಶ್ರಮದಶೆಯಲ್ಲಿ ಎಲ್ಲರಿಂದಲೂ ಹಣವನ್ನು ತೆಗೆದುಕೊಳ್ಳಬಹುದು. ಗಂಗಾನದಿಯ ಜಲವನ್ನು ರಸ್ತೆಯ ಜಲವು ಅಶುದ್ಧವಾಗುವಂತೆ ಮಾಡುವುದೆ? ಅದರಂತೆ ಅಂತಹ ಸ್ವಧರ್ಮನಿಷ್ಠನಾದ ಬ್ರಾಹ್ಮಣನಲ್ಲಿ ಹೋಗಿ ಸೇರುವ ವಸ್ತುವು ಅಯೋಗ್ಯರ ವಸ್ತುವಾಗಿದ್ದರೂ ಶುದ್ಧವಾಗುವುದು."

### ಪ್ರಾಣರಕ್ಷಣಕ್ಕಾಗಿ ಅಕಾರ್ಯವನ್ನೂ ಸಹ ಮಾಡಬಹುದು

ನಾಧ್ಯಾಪನಾದ್ಯಾಜನಾದ್ವಾ ಗರ್ಹಿತಾದ್ವಾ ಪ್ರತಿಗ್ರಹಾತ್ |
ದೋಷೋ ಭವತಿ ವಿಪ್ರಾಣಾಂ ಜ್ವಲನಾಂಬುಸಮಾ ಹಿ ತೇ ||
ಜೀವಿತಾತ್ಯಯಮಾಪನ್ನೋ ಯೋಽನ್ನಮತ್ತಿ ಯತಸ್ತತಃ |
ಆಕಾಶಮಿವ ಪಂಕೇನ ನ ಸ ಪಾಪೇನ ಲಿಪ್ಯತೇ || (ಮನುವಿನ ವಚನ)

ಬೆಂಕಿಯಲ್ಲಿ ಹಾಕಿದ ಅಶುದ್ಧವಸ್ತುವೂ ಶುದ್ಧವಾಗುತ್ತದೆ. ಗಂಗಾಜಲದಲ್ಲಿ ಸೇರಿದ ಅಶುದ್ಧಜಲವೂ ಶುದ್ಧವಾಗುತ್ತದೆ. ಆಕಾಶದಲ್ಲಿ ಕೆಸರಿನ ಸ್ಪರ್ಶವಾದರೂ ಆ ಆಕಾಶವೂ ಆ ಕೆಸರಿನಿಂದ ಲಿಪ್ತವಾಗುವುದಿಲ್ಲ. ಬ್ರಾಹ್ಮಣರು ಬೆಂಕಿಯಂತೆಯೂ ಗಂಗಾಜಲದಂತೆಯೂ ಆಕಾಶದಂತೆಯೂ ಸ್ವಭಾವದಿಂದಲೇ ಅತ್ಯಂತಪರಿಶುದ್ಧರಾಗಿರುವವರು. ತಮ್ಮಲ್ಲಿ ಸೇರಿದ ದ್ರವ್ಯಗಳನ್ನೂ ಪರಿಶುದ್ಧವಾಗುವಂತೆ ಮಾಡುವ ಶಕ್ತಿಯುಳ್ಳವರು. ಸ್ವಧರ್ಮನಿಷ್ಠರಾದ ಆ ಬ್ರಾಹ್ಮಣರು ತಮಗೆ ಪ್ರಾಣವು ಹೋಗುವ ಸಂದರ್ಭವು ಬಂದಾಗ ಪ್ರಾಣವನ್ನು ಉಳಿಸಿಕೊಳ್ಳಬೇಕು. ಪ್ರಾಣರಕ್ಷಣಕ್ಕಾಗಿ ಅಧ್ಯಾಪನವನ್ನೂ ಯಾಜನವನ್ನೂ ಮಾಡಬಹುದು. ಅಯೋಗ್ಯಪುರುಷರಿಂದ ದಾನವನ್ನೂ ತೆಗೆದುಕೊಳ್ಳಬಹುದು. ಅಯೋಗ್ಯರ ಮನೆಯಲ್ಲಿ ಊಟವನ್ನೂ ಸಹ ಮಾಡಬಹುದು."

ವೃದ್ಧೌ ಚ ಮಾತಾಪಿತರೌ ಸಾಧ್ವೀ ಭಾರ್ಯಾ ಸುತಃ ಶಿಶುಃ |
ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್ || (ಬೃಹಸ್ಪತಿಯ ವಚನ)

"(1) ವೃದ್ಧರಾದ ತಾಯಿತಂದೆಗಳು, (2) ಪತಿವ್ರತೆಯಾದ ಪತ್ನೀ, (3) ಚಿಕ್ಕಮಗುವಾಗಿರುವ ಪುತ್ರ, ಈ ಮೂವರನ್ನು ನೂರಾರು ಅಕಾರ್ಯಗಳನ್ನು ಮಾಡಿಯಾದರೂ ರಕ್ಷಿಸಬೇಕು."

ಅಜೀಗರ್ತಃ ಸುತಂ ಹಂತುಮುಪಾಸರ್ಪದ್ಬುಭುಕ್ಷಿತಃ |
ನ ಚಾಲಿಪ್ಯತ ಪಾಪೇನ ಕ್ಷುತ್ಪ್ರತೀಘಾತಮಾಚರನ್ ||
ಶ್ವಮಾಂಸಮಿಚ್ಛನ್ನಾರ್ತೋಽತ್ತುಂ ಧರ್ಮಾಧರ್ಮವಿಚಕ್ಷಣಃ |
ಪ್ರಾಣಾನಾಂ ಪರಿರಕ್ಷಾರ್ಥಂ ವಾಮದೇವೋ ನ ಲಿಪ್ತವಾನ್ ||
ಭರದ್ವಾಜಃ ಕ್ಷುಧಾಽಽರ್ತಸ್ತು ಸಪುತ್ರೋ ನಿರ್ಜನೇ ವನೇ |
ಬಹ್ವೀರ್ಗಾಃ ಪ್ರತಿಜಗ್ರಾಹ ವೃಧೋಸ್ತಕ್ಷ್ಣೋ ಮಹಾಯಶಾಃ ||
ಕ್ಷುಧಾಽಽರ್ತಶ್ಚಾತ್ತುಮಭ್ಯಾಗಾದ್ವಿಶ್ವಾಮಿತ್ರಃ ಶ್ವಜಾಘನೀಮ್ |
ಚಂಡಾಲಹಸ್ತಾದಾದಾಯ ಧರ್ಮಾಧರ್ಮವಿಚಕ್ಷಣಃ || (ಮನುವಿನ ವಚನ)

"(1) ಅಜೀಗರ್ತ ಎಂಬ ಮುನಿಯು ಹಸಿವಿನಿಂದ ಪೀಡಿಸಲ್ಪಟ್ಟನು. ಆ ಹಸಿವನ್ನು ಅಡಗಿಸಿ ಕೊಳ್ಳಲಿಕ್ಕಾಗಿ ತನ್ನ ಮಗನನ್ನೇ ಕೊಲ್ಲಲು ಮುಂದೆ ಬಂದನು. ಆದರೂ ಪಾಪದಿಂದ ಲಿಪ್ತನಾಗಲಿಲ್ಲ. (2) ಧರ್ಮ ಅಧರ್ಮ ಇವುಗಳನ್ನು ಚೆನ್ನಾಗಿ ತಿಳಿದವನಾದ ವಾಮದೇವ ಎಂಬ ಮುನಿಯು ತನ್ನ ಪ್ರಾಣವನ್ನು ರಕ್ಷಿಸುವುದಕ್ಕಾಗಿ ನಾಯಿಯ ಮಾಂಸವನ್ನು ತಿನ್ನಲು ಇಚ್ಛಿಸಿದನು. ಆದರೂ ಪಾಪದಿಂದ ಲಿಪ್ತನಾಗಲಿಲ್ಲ. (3) ಹಸಿವಿನಿಂದ ಪೀಡಿತನಾದ ಭರದ್ವಾಜಮುನಿಯು ಪುತ್ರ ಸಹಿತನಾಗಿ ವೃಧು ಎಂಬ ಬಡಗಿಯ ಅಸಂಖ್ಯವಾದ ಗೋವುಗಳನ್ನು ತಿನ್ನುವುದಕ್ಕಾಗಿ ಸ್ವೀಕರಿಸಿದನು. ಆದರೂ ಅಪಾರಕೀರ್ತಿಯಿಂದ ಯುಕ್ತನಾದನು. ಗೋವುಗಳನ್ನು ಅಪಹರಿಸಿದ್ದರಿಂದಲೂ ಕೊಂದದ್ದರಿಂದಲೂ ಅಪಕೀರ್ತಿಯನ್ನೂ ಪಡೆಯಲಿಲ್ಲ. (4) ಹಸಿವಿನಿಂದ ಪೀಡಿತನಾದ ವಿಶ್ವಾಮಿತ್ರಮುನಿಯು ಚಂಡಾಲನ ಕೈಯಿಂದ ನಾಯಿಯ ಜಘನಪ್ರದೇಶದಲ್ಲಿರುವ ಮಾಂಸವನ್ನು ತಿನ್ನುವುದಕ್ಕಾಗಿ ಕಿತ್ತುಕೊಂಡನು. ಆದರೆ ಅದರಿಂದ ಅಪಕೀರ್ತಿಯನ್ನು ಪಡೆಯಲಿಲ್ಲ. "ಧರ್ಮವನ್ನೂ ಅಧರ್ಮವನ್ನೂ ತಿಳಿದವನು" ಎಂಬ ಕೀರ್ತಿಯನ್ನೇ ಪಡೆದನು. ಆದ್ದರಿಂದ "ಆಪತ್ಕಾಲದಲ್ಲಿ ಅಕಾರ್ಯವನ್ನು ಮಾಡಿಯಾದರೂ ಪ್ರಾಣವನ್ನು ಉಳಿಸಿಕೊಳ್ಳಬೇಕು" ಎಂಬ ತತ್ತ್ವವು ಸಕಲ ಧರ್ಮಜ್ಞರಿಗೂ ಸಮ್ಮತವಾಗಿದೆ ಎಂದು ಈ ಉದಾಹರಣಗಳಿಂದಲೂ ಇಂತಹ ಅನೇಕ ಉದಾಹರಣಗಳಿಂದಲೂ ಸಿದ್ಧವಾಗುತ್ತದೆ.

ಅದು ಮಾತ್ರವಲ್ಲ. ತಮಗೆ ವಿಹಿತವಾಗಿರುವ ಮತ್ತು ಮುಖ್ಯವಾಗಿರುವ ಜೀವನೋಪಾಯವು ಸಾಧ್ಯವಾಗದಿರುವ ಸಮಯದಲ್ಲಿ ಇತರರಿಗೆ ವಿಹಿತವಾಗಿರುವ ಜೀವನೋಪಾಯವನ್ನು ಸ್ವೀಕರಿಸಕೂಡದು. ತನಗೆ ವಿಹಿತವಾಗಿರುವ ಜೀವನೋಪಾಯವನ್ನೇ ಸ್ವೀಕರಿಸಬೇಕು. ಪ್ರಬಲವಾದ ಕಷ್ಟಗಳು ಬಂದು ತನಗೆ ವಿಹಿತವಾದ ಜೀವನೋಪಾಯವನ್ನು ಮಾಡಲು ಸಾಧ್ಯವಾಗದೆ ಇದ್ದರೆ ನಾಯಿಮಾಂಸ ಮುಂತಾದ ಶಾಸ್ತ್ರನಿಷಿದ್ಧವಾದ ಆಹಾರಗಳನ್ನು ಆ ಕಷ್ಟಕಾಲದಲ್ಲಿ ಸ್ವೀಕರಿಸಿ ಪುನಃ ಕಷ್ಟಕಾಲವು ಹೋದ ಮೇಲೆ ತನಗೆ ವಿಹಿತವಾದ ಜೀವನೋಪಾಯದಿಂದಲೇ ದೇಹಯಾತ್ರೆಯನ್ನು ಮುಂದುವರಿಸಬೇಕು. ನಾಯಿಯ ಮಾಂಸ ಮುಂತಾದವುಗಳ ಭಕ್ಷಣದಿಂದ ತನ್ನ ಜೀವನೋಪಾಯದಲ್ಲಿ ವೈಗುಣ್ಯವು ಏರ್ಪಟ್ಟರೂ ಪರಧರ್ಮವನ್ನು ಆಶ್ರಯಿಸುವುದರಿಂದ ಏರ್ಪಡುವ ದೋಷಕ್ಕಿಂತ ಸ್ವಧರ್ಮದಲ್ಲಿ ವೈಗುಣ್ಯದಿಂದ ಏರ್ಪಡುವ ದೋಷವು ಅಧಿಕವಲ್ಲ. ಆದ್ದರಿಂದ ಪರಧರ್ಮಾನುಷ್ಠಾನಕ್ಕಿಂತ ವಿಗುಣವಾದ ಸ್ವಧರ್ಮಾನುಷ್ಠಾನವೇ ಮೇಲು ಎಂದು ಈ ಉದಾಹರಣಗಳಿಂದ ತಿಳಿಯುತ್ತದೆ, ಈ ವಿಷಯವು ಮನುವಿನಿಂದ ಕೆಳಗೆ ಬರೆದಿರುವ ವಾಕ್ಯಗಳಿಂದ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

### ವಿಗುಣವಾದ ಸ್ವಧರ್ಮವು ಚೆನ್ನಾಗಿ ಅನುಷ್ಠಿಸಲ್ಪಟ್ಟ ಪರಧರ್ಮಕ್ಕಿಂತ ಉತ್ತಮ

ವರಂ ಸ್ವಧರ್ಮೋ ವಿಗುಣೋ ನ ಪಾರಕ್ಯಃ ಸ್ವನುಷ್ಠಿತಃ |
ಪರಧರ್ಮೇಣ ಜೀವನ್ಹಿ ಸೋಽಯಂ ಪತಿತ ಏವ ಸಃ || (ಮನುವಿನ ವಚನ)

"ಸ್ವಧರ್ಮದಲ್ಲಿ ಎಷ್ಟೇ ಲೋಪಗಳು ಏರ್ಪಟ್ಟರೂ ಚೆನ್ನಾಗಿ ಅನುಷ್ಠಿಸಲ್ಪಟ್ಟ ಪರಧರ್ಮಕ್ಕಿಂತ ಈ ವಿಗುಣವಾದ ಸ್ವಧರ್ಮವೇ ಉತ್ತಮವೆನಿಸುತ್ತದೆ. ಪರಧರ್ಮದಿಂದ ಜೀವಿಸುವವನು ತನ್ನ ಜಾತಿಯಿಂದ ಪತಿತನಾಗುವನು ಅಂದರೆ ತನ್ನ ಜಾತಿಯನ್ನು ಕಳೆದುಕೊಳ್ಳುವನು ಮತ್ತು ಕೀಳ್ತರವಾದ ಜಾತಿಯನ್ನು ಪಡೆಯುವನು."

### ಶೂದ್ರನಿಂದ ಪ್ರತಿಗ್ರಹವನ್ನು ಮಾಡಕೂಡದು

ದ್ವಿಜಾತಿಭ್ಯೋ ಧನಂ ಲಿಪ್ಸೇತ್ಪ್ರಶಸ್ತೇಭ್ಯೋ ವಿಶೇಷತಃ |
ಅಥ ವಾ ಜಾತಿಮಾತ್ರೇಭ್ಯೋ ನ ತು ಶೂದ್ರಾತ್ಕಥಂಚನ || (ವ್ಯಾಸರ ವಚನ)

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ಜಾತಿಯವರಿಂದ ಧನವನ್ನು ತೆಗೆದುಕೊಳ್ಳಲು ಆಶಿಸಬೇಕು. ಈ ಮೂರು ಜಾತಿಯವರಲ್ಲಿಯೂ ತನ್ನ ಜಾತಿಗಿಂತ ಉತ್ತಮಜಾತಿಯವರಲ್ಲಿ ಹಣವನ್ನು ತೆಗೆದುಕೊಳ್ಳಲು ಪ್ರಯತ್ನಿಸಬೇಕು. ಅಥವಾ ತನಗಿಂತ ನಿಕೃಷ್ಟಜಾತಿಯಲ್ಲಿ ಸೇರಿದ ಈ ಮೂರು ಜಾತಿಯವರಲ್ಲಿಯೂ ತೆಗೆದುಕೊಳ್ಳಬಹುದು. ಶೂದ್ರಜಾತಿಗೆ ಸೇರಿದವನಿಂದ ಯಾವ ಕಾರಣದಿಂದಲೂ ಹಣವನ್ನು ತೆಗೆದುಕೊಳ್ಳಬಾರದು."

### ಶೂದ್ರನಿಂದಲೂ ಹಣವನ್ನು ತೆಗೆದುಕೊಳ್ಳಬಹುದು.

ಸೀದಂಶ್ಚೇತ್ಪ್ರತಿಗೃಹ್ಣೀಯಾದ್ಬ್ರಾಹ್ಮಣೇಭ್ಯಸ್ತತೋ ನೃಪಾತ್ |
ತತಸ್ತು ವೈಶ್ಯಶೂದ್ರೇಭ್ಯಃ ಶಂಖಸ್ಯ ವಚನಂ ಯಥಾ || (ಚತುರ್ವಿಂಶತಿಮತ)

"ತುಂಬಾ ಕಷ್ಟಗಳಿಗೆ ಗುರಿಯಾದವನು ಬ್ರಾಹ್ಮಣರಿಂದ ಪ್ರತಿಗ್ರಹವನ್ನು ಪಡೆಯಬೇಕು. ಬ್ರಾಹ್ಮಣರಿಂದ ಪ್ರತಿಗ್ರಹವನ್ನು ಮಾಡಲು ಶಕ್ಯವಾಗದಿದ್ದರೆ ಕ್ಷತ್ರಿಯನಿಂದಲೂ, ಅವನಲ್ಲಿಯೂ ಹಣವು ಸಿಗದಿದ್ದರೆ ವೈಶ್ಯನಿಂದಲೂ ಅಲ್ಲಿಯೂ ಸಾಧ್ಯವಾಗದಿದ್ದರೆ ಶೂದ್ರನಿಂದಲೂ ಹಣವನ್ನು ತೆಗೆದುಕೊಳ್ಳಬಹುದು ಎಂದು ಶಂಖ ಎಂಬ ಮುನಿಯು ಹೇಳಿರುವರು."

### ಶೂದ್ರನಿಂದ ಹಣವನ್ನು ತೆಗೆದುಕೊಳ್ಳುವ ರೀತಿ

ಯತ್ತು ರಾಶೀಕೃತಂ ದ್ರವ್ಯಂ ಖಲೇ ಕ್ಷೇತ್ರೇಽಥ ವಾ ಭವೇತ್ |
ಶೂದ್ರಾದಪಿ ಗೃಹೀತವ್ಯಂ ಇತ್ಯಾಂಗೀರಸಭಾಷಿತಂ || (ಆಂಗೀರಸರ ವಚನ)

"ಹೊಲದಲ್ಲಾಗಲೀ ಕಣಜದಲ್ಲಾಗಲೀ ರಾಶಿಯಾಗಿ ಮಾಡಿರುವ ಶೂದ್ರನ ಧಾನ್ಯವನ್ನು ತಾನೇ ತೆಗೆದುಕೊಳ್ಳಬೇಕು. ಶೂದ್ರನ ಕೈಯಿಂದ ತೆಗೆದುಕೊಳ್ಳಬಾರದು. ಇದು ಆಂಗಿರಸರ ವಚನವಾಗಿದೆ."

### ವಿದ್ಯಾವಂತನೇ ಪ್ರತಿಗ್ರಹಾದಿಗಳನ್ನು ಮಾಡಬೇಕು

ವಿದ್ಯಾತಪೋಭ್ಯಾಂ ಹೀನೇನ ನ ತು ಗ್ರಾಹ್ಯಃ ಪ್ರತಿಗ್ರಹಃ |
ಗೃಹ್ಣನ್ ಪ್ರದಾತಾರಮಧೋ ನಯತ್ಯಾತ್ಮಾನಮೇವ ಚ ||
ಆಮಪಾತ್ರೇ ಯಥಾ ನ್ಯಸ್ತಂ ಕ್ಷೀರಂ ದಧಿ ಘೃತಂ ಮಧು |
ನಶ್ಯೇಯುಃ ಪಾತ್ರದೌರ್ಬಲ್ಯಾತ್ತೇ ರಸಾಸ್ತತ್ರ ಭಾಜನೇ ||
ಏವಂ ಹಿರಣ್ಯಂ ಗಾಮಶ್ವಂ ವಸ್ತ್ರಂ ಛತ್ರಂ ತಿಲಾನ್ಮಹೀಮ್ |
ಅವಿದ್ವಾನ್ಪ್ರತಿಗೃಹ್ಣಾನೋ ಭಸ್ಮೀಭವತಿ ಕಾಷ್ಠವತ್ ||

"ವಿದ್ಯೆಯಿಂದಲೂ ತಪಸ್ಸಿನಿಂದಲೂ ಹೀನನಾದ ಪುರುಷನು ದಾನವನ್ನು ತೆಗೆದುಕೊಳ್ಳಕೂಡದು. ತೆಗೆದುಕೊಂಡರೆ ಕೊಡುವವನೂ ತೆಗೆದುಕೊಳ್ಳುವವನೂ ಇಬ್ಬರೂ ನರಕದಲ್ಲಿ ಬೀಳುವರು. ಹಸಿಮಡಿಕೆಯಲ್ಲಿ ಹಾಲು, ಮೊಸರು, ತುಪ್ಪ, ಜೇನು ಮುಂತಾದ ರಸಪದಾರ್ಥಗಳು ಪಾತ್ರವು ದುರ್ಬಲವಾದುದರಿಂದ ನಶಿಸುತ್ತದೆ. ಭಂಗಾರ, ಗೋವು, ಕುದುರೆ, ವಸ್ತ್ರ, ಕೊಡೆ, ಎಳ್ಳು, ಭೂಮಿ ಮುಂತಾದ ವಸ್ತುಗಳನ್ನು ವಿದ್ಯಾವಂತನಲ್ಲದಿರುವವನು ತೆಗೆದುಕೊಂಡರೆ ಅವುಗಳೆಲ್ಲವೂ ವ್ಯರ್ಥವಾಗುತ್ತವೆ. ಅದೇ ಕ್ಷಣದಲ್ಲಿಯೇ ಭಸ್ಮವಾಗುತ್ತವೆ.

### ಪ್ರತಿಗ್ರಹಾಧಿಕಾರವಿದ್ದರೂ ದಾನವನ್ನು ತೆಗೆದುಕೊಳ್ಳದವನಿಗೆ ಬರುವ ಫಲ

ಪ್ರತಿಗ್ರಹಸಮರ್ಥೋಽಪಿ ನಾದತ್ತೇ ಯಃ ಪ್ರತಿಗ್ರಹಮ್ |
ಯೇ ಲೋಕಾ ದಾನಶೀಲಾನಾಂ ಸ ತಾನಾಪ್ನೋತಿ ಪುಷ್ಕಲಾನ್ ||
ಪ್ರತಿಗ್ರಹಸಮರ್ಥಸ್ಯ ನಿವೃತ್ತಸ್ಯ ಪ್ರತಿಗ್ರಹಾತ್ |
ಯ ಏವ ದದತೋ ಧರ್ಮಃ ಸ ಏವಾಪ್ರತಿಗೃಹ್ಣತಃ ||
ಸರ್ವವೇದಾಧಿಗಮನಾತ್ ಸರ್ವವೇದನಿಷೇವಣಾತ್ |
ಗವಾಂ ಕೋಟಿಪ್ರದಾನಾಚ್ಚ ಶ್ರೇಯಾಂಸ್ತಸ್ಯಾಪ್ರತಿಗ್ರಹಃ || (ಯಾಜ್ಞವಲ್ಕ್ಯರ ವಚನ)

"ಪ್ರತಿಗ್ರಹವನ್ನು ಮಾಡುವುದಕ್ಕೆ ಸಮರ್ಥನಾಗಿದ್ದರೂ ಪ್ರತಿಗ್ರಹವನ್ನು ಮಾಡದವನು ಯಾವಾಗಲೂ ದಾನವನ್ನು ಕೊಡುವ ಸ್ವಭಾವವುಳ್ಳವರ ಲೋಕಗಳನ್ನು ಪಡೆಯುವನು. ಸಕಲವೇದಗಳನ್ನು ಅರ್ಥಜ್ಞಾನಪೂರ್ವಕವಾಗಿ ಅಧ್ಯಯನ ಮಾಡಿದ್ದರಿಂದಲೂ ಸಕಲವೇದಗಳಲ್ಲಿ ಹೇಳಿದಂತೆ ಅನುಷ್ಠಿಸಿದುದರಿಂದಲೂ ಒಂದು ಕೋಟಿಗೋದಾನಗಳನ್ನು ಮಾಡಿದ್ದರಿಂದಲೂ ಬರುವ ಫಲಕ್ಕಿಂತ ಅಧಿಕವಾದ ಫಲವು ದಾನವನ್ನು ತೆಗೆದುಕೊಳ್ಳದಿರುವುದರಿಂದ ಬರುತ್ತದೆ."

### ಆಪತ್ಕಾಲದಲ್ಲಿ ಜೀವಿಸುವ ರೀತಿ

ಅಜೀವಂಸ್ತು ಯಥೋಕ್ತೇನ ಬ್ರಾಹ್ಮಣಃ ಸ್ವೇನ ಕರ್ಮಣಾ |
ಜೀವೇತ್ ಕ್ಷತ್ರಿಯಧರ್ಮೇಣ ಸಹ್ಯಸ್ಯ ಪ್ರತ್ಯನಂತರಃ ||
ಉಭಾಭ್ಯಾಮಪ್ಯಜೀವಂಸ್ತು ಕಥಂ ಸ್ಯಾದಿತಿ ಚೇದ್ಭವೇತ್ |
ಕೃಷಿಗೋರಕ್ಷಮಾಸ್ಥಾಯ ಜೀವೇದ್ವೈಶ್ಯಸ್ಯ ಜೀವಿಕಾಮ್ || (ಮನುವಿನ ವಚನ)

"ಬ್ರಾಹ್ಮಣನು ಬ್ರಾಹ್ಮಣನಿಗೆ ಹೇಳಲ್ಪಟ್ಟ ಜೀವನೋಪಾಯದಿಂದ ಜೀವಿಸಲು ಸಾಧ್ಯವಾಗದಿದ್ದರೆ ಬ್ರಾಹ್ಮಣ ಜಾತಿಗಿಂತ ಅನಂತರದಲ್ಲಿ ಸಮೀಪದಲ್ಲಿರುವ ಕ್ಷತ್ರಿಯಜಾತಿಗೆ ಹೇಳಿರುವ ಜೀವನೋಪಾಯದಿಂದ ಜೀವಿಸಬೇಕು. ಈ ಎರಡು ಜಾತಿಗೆ ಹೇಳಿರುವ ಜೀವನೋಪಾಯಗಳಿಂದಲೂ ಜೀವಿಸಲು ಸಾಧ್ಯವಾಗದಿದ್ದರೆ ಈ ಎರಡು ಜಾತಿಗಳಿಗಿಂತ ಅನಂತರದಲ್ಲಿರುವ ವೈಶ್ಯಜಾತಿಗೆ ಹೇಳಿರುವ ಕೃಷಿ, ಗೋರಕ್ಷಣ, ವಾಣಿಜ್ಯ ಅಂದರೆ ಅಂಗಡಿ ವ್ಯಾಪಾರಗಳಿಂದ ಜೀವಿಸಬೇಕು."

ಅಜೀವನ್ ಕರ್ಮಣಾ ಸ್ವೇನ ವಿಪ್ರಃ ಕ್ಷತ್ರ್ಯಂ ಸಮಾಚರೇತ್ |
ವೈಶ್ಯಕರ್ಮಾಥ ವಾ ಕುರ್ಯಾದ್ವೃಷಲಂ ಪರಿವರ್ಜಯೇತ್ || (ಬೃಹಸ್ಪತಿ ವಚನ)

"ಬ್ರಾಹ್ಮಣನು ತನ್ನ ಜಾತಿಗೆ ವಿಹಿತವಾದ ಕರ್ಮಗಳಿಂದ ಜೀವಿಸಲು ಸಾಧ್ಯವಾಗದಿದ್ದರೆ ಕ್ಷತ್ರಿಯರಿಗೆ ಅಥವಾ ವೈಶ್ಯರಿಗೆ ಹೇಳಿರುವ ಜೀವನೋಪಾಯದಿಂದ ಜೀವಿಸಬೇಕು. ಶೂದ್ರರಿಗೆ ಹೇಳಿರುವ ಜೀವನೋಪಾಯದಿಂದ ಜೀವಿಸಬಾರದು."

## ವೈಶ್ಯರಿಗೆ ಹೇಳಿರುವ ಜೀವನೋಪಾಯದಲ್ಲಿ ವಿಶೇಷ

ಕೃಷಿವಾಣಿಜ್ಯೇ ಚಾಸ್ವಯಂ ಕೃತೇ ಕುಸೀದಂ ಚ |(ಗೌತಮರ ವಚನ)

"ವೈಶ್ಯವೃತ್ತಿಯನ್ನು ಆಪತ್ಕಾಲದಲ್ಲಿ ಬ್ರಾಹ್ಮಣನು ಸ್ವೀಕರಿಸಬೇಕೆಂದು ಹೇಳಿದೆವು. ಅವುಗಳಲ್ಲಿ ಕೃಷಿಯನ್ನೂ ವ್ಯಾಪಾರವನ್ನೂ ತಾನಾಗಿಯೇ ಮಾಡಬಾರದು. ಇನ್ನೊಬ್ಬರಿಂದ ಮಾಡಿಸಬೇಕು. ಹಣವನ್ನು ಬಡ್ಡಿಗೆ ಕೊಟ್ಟು ಬರುವ ಬಡ್ಡಿಯಿಂದ ಜೀವಿಸಬಹುದು."

ಕುಸೀದಂ ಕೃಷಿವಾಣಿಜ್ಯಂ ಪ್ರಕುರ್ವೀತಾಸ್ವಯಂ ಕೃತಮ್ |
ಕೃಷೇರಭಾವೇ ವಾಣಿಜ್ಯಂ ತದಭಾವೇ ಕುಸೀದಕಮ್ ||(ಕೂರ್ಮಪುರಾಣ)

"ಬ್ರಾಹ್ಮಣನು ಆಪತ್ಕಾಲದಲ್ಲಿ ಕೃಷಿಯಿಂದ ಜೀವಿಸಬೇಕು. ಕೃಷಿಯು ಸಾಧ್ಯವಾಗದಿದ್ದರೆ ವ್ಯಾಪಾರದಿಂದ ಜೀವಿಸಬೇಕು. ಅದರಿಂದಲೂ ಸಾಧ್ಯವಾಗದಿದ್ದರೆ ಹಣವನ್ನು ಬಡ್ಡಿಗೆ ಕೊಟ್ಟು ಬಡ್ಡಿಯಿಂದ ಜೀವಿಸಬೇಕು. ಈ ಮೂರು ಕರ್ಮಗಳನ್ನೂ ತಾನೇ ಮಾಡಬಾರದು. ಬೇರೆ ಜನರಿಂದ ಮಾಡಿಸಬೇಕು.

ವೈಶ್ಯವೃತ್ತ್ಯಾಪಿ ಜೀವಂಸ್ತು ಬ್ರಾಹ್ಮಣಃ ಕ್ಷತ್ರಿಯೋಽಪಿ ವಾ |
ಹಿಂಸಾಪ್ರಾಯಾಂ ಪರಾಧೀನಾಂ ಕೃಷಿಂ ಯತ್ನೇನ ವರ್ಜಯೇತ್ ||
ಕೃಷಿಂ ಸಾಧ್ವಿತಿ ಮನ್ಯಂತೇ ಸಾ ವೃತ್ತಿಃ ಸದ್ವಿಗರ್ಹಿತಾ |
ಭೂಮಿಂ ಭೂಮಿಶಯಾಂಶ್ಚೈವ ಹಂತಿ ಕಾಷ್ಠಮಯೋಮುಖಮ್ ||(ಮನು ವಚನ)

"ಬ್ರಾಹ್ಮಣನೂ ಕ್ಷತ್ರಿಯನೂ ಆಪತ್ಕಾಲದಲ್ಲಿ ವೈಶ್ಯರ ಜೀವನೋಪಾಯದಿಂದ ಬದುಕಬೇಕು. ವೈಶ್ಯರ ಜೀವನೋಪಾಯದಲ್ಲಿಯೂ ಕೃಷಿಯು ಉತ್ತಮವೆಂದು ಕೆಲವರು ಹೇಳುತ್ತಾರೆ. ಆದರೆ ಜ್ಞಾನಿಗಳು ಕೃಷಿಯು ಎತ್ತಿನ ಸಹಾಯದಿಂದಲೇ ಮಾಡುವುದಕ್ಕೆ ಸಾಧ್ಯವೆಂದೂ ಆದ್ದರಿಂದಲೇ ಪರಾಧೀನವೆಂದೂ ಅಧಿಕವಾದ ಪ್ರಾಣಿಹಿಂಸೆಗೆ ಕಾರಣವೆಂದೂ ಹೇಳಿ ಆ ಕೃಷಿಯನ್ನು ನಿಂದಿಸುವರು. ಕೃಷಿಯನ್ನು ಮಾಡುವವರು ಭೂಮಿಯನ್ನು ಉಳಬೇಕು. ಉಳುವಾಗ ನೇಗಿಲಿನ ಕೆಳಭಾಗದಲ್ಲಿರುವ ಕಬ್ಬಿಣದ ಹಲ್ಲಿನಿಂದ ಭೂದೇವಿಯೂ ಭೂಮಿಯ ಅಡಿಯಲ್ಲಿರುವ ಪ್ರಾಣಿಗಳೂ ಹಿಂಸಿಸಲ್ಪಡುತ್ತಾರೆ. ಅಧಿಕಪ್ರಾಣಿಗಳು ಸಾಯುತ್ತವೆ. ಆದ್ದರಿಂದ ಕೃಷಿಯನ್ನು ಮಾಡಲೇ ಕೂಡದು. ಉಳಿದ ವೈಶ್ಯರ ಜೀವನೋಪಾಯವಾಗಿರುವ ವಾಣಿಜ್ಯ ಮುಂತಾದವುಗಳಿಂದ ಜೀವಿಸಬೇಕು."

ಈ ಶ್ಲೋಕಗಳಲ್ಲಿ ಕೃಷಿಯು ನಿಂದಿಸಲ್ಪಟ್ಟಿದೆ. ಇದೇ ಮನುವು ಹೇಳಿರುವ ಹಿಂದೆ ಉದಾಹರಿಸಿರುವ ವಚನದಲ್ಲಿ ಕೃಷಿಯಿಂದ ಜೀವಿಸಬಹುದೆಂದು ಹೇಳಿದೆ. ಆದ್ದರಿಂದ ಮನುವು ಹೇಳಿರುವ ಎರಡು ವಾಕ್ಯಗಳಿಗೆ ಪರಸ್ಪರವಿರೋಧವು ಬರುತ್ತದೆ. ಈ ವಿರೋಧವನ್ನು ಪರಿಹರಿಸಲೇಬೇಕು. ಅದಕ್ಕಾಗಿ ಕೃಷಿಯನ್ನು ಬ್ರಾಹ್ಮಣನಾಗಲೀ ಕ್ಷತ್ರಿಯನಾಗಲೀ ತಾನೇ ಮಾಡಕೂಡದೆಂದು ಈ ವಾಕ್ಯವು ತಿಳಿಸುವುದಾಗಿಯೂ ಇನ್ನೊಬ್ಬರಿಂದ ಮಾಡಿಸಬಹುದೆಂದು ಹಿಂದಿನ ವಾಕ್ಯವು ತಿಳಿಸುವುದಾಗಿಯೂ ಹೇಳಿದರೆ ಈ ಎರಡು ವಾಕ್ಯಗಳಿಗೂ ವಿರೋಧವಿಲ್ಲ. ಬೃಹಸ್ಪತಿ ಮುಂತಾದವರು ಅತಿಸ್ಪಷ್ಟವಾಗಿ ಕೃಷಿಯನ್ನು ತಾನೇ ಮಾಡಬಾರದೆಂದು ಹೇಳಿರುವರು. ಆದ್ದರಿಂದ ನಾವು ಈಗ ಹೇಳಿರುವ ತೀರ್ಮಾನವೇ ಪ್ರಾಮಾಣಿಕವಾದುದು.

## ಕೃಷಿಯನ್ನು ಮಾಡಲಿಕ್ಕೆ ಬೇರೆ ಜನರು ಸಿಗದಿದ್ದಾಗ ತಾನೇ ಮಾಡಬಹುದು

ಕುಸೀದಂ ಕೃಷಿವಾಣಿಜ್ಯಂ ಪ್ರಕುರ್ವೀತಾಸ್ವಯಂ ಕೃತಮ್ |
ಆಪತ್ಕಾಲೇ ಸ್ವಯಂ ಕುರ್ವನ್ನೈನಸಾ ಯುಜ್ಯತೇ ದ್ವಿಜಃ ||(ಬೃಹಸ್ಪತಿ ವಚನ)

"ಹಣವನ್ನು ಬಡ್ಡಿಗೆ ಕೊಟ್ಟು ಬಡ್ಡಿಯಿಂದ ಜೀವಿಸುವುದು, ಕೃಷಿಯನ್ನು ಮಾಡುವುದು, ವ್ಯಾಪಾರವನ್ನು ಮಾಡುವುದು ಈ ಮೂರನ್ನು ಬೇರೆ ಜನರಿಂದ ಮಾಡಿಸಿ ಜೀವಿಸಬೇಕು. ಆಪತ್ಕಾಲದಲ್ಲಿ ತಾನೇ ಮಾಡಿದರೂ ಪಾಪವು ಬರುವುದಿಲ್ಲ."

**ಬಡ್ಡಿವ್ಯಾಪಾರದಿಂದ ಜೀವಿಸಬಾರದು**

ಸ್ವಯಂ ವಾ ಕರ್ಷಣಂ ಕುರ್ಯಾದ್ವಾಣಿಜ್ಯಂ ವಾ ಕುಸೀದಕಮ್ |
ಕಷ್ಟಾ ಪಾಪೀಯಸೀ ವೃತ್ತಿಃ ಕುಸೀದಂ ತಾಂ ವಿವರ್ಜಯೇತ್ | (ಕೂರ್ಮ ಪುರಾಣ)

"ಕೃಷಿಯನ್ನೂ ವ್ಯಾಪಾರವನ್ನೂ ಬಡ್ಡಿವ್ಯಾಪಾರವನ್ನೂ ಆಪತ್ಕಾಲದಲ್ಲಿ ತಾನೇ ಮಾಡಬಹುದು. ಆದರೆ ಈ ಬಡ್ಡಿವ್ಯಾಪಾರವು ಮಹಾಪಾಪಕರವಾದುದು. ಅದನ್ನು ಬಿಡಬೇಕು."

ಆಪತ್ಸ್ವಪಿ ಹಿ ಕಷ್ಟಾಸು ಬ್ರಾಹ್ಮಣಸ್ಯ ನ ವಾರ್ಧುಷಮ್ | (ನಾರದರ ವಚನ)

"ತುಂಬಾ ಆಪತ್ತುಗಳು ಬಂದಿರುವಾಗಲೂ ಬ್ರಾಹ್ಮಣನು ಬಡ್ಡಿವ್ಯಾಪಾರವನ್ನು ಮಾಡಕೂಡದು."

ಬ್ರಾಹ್ಮಣರಾಜನ್ಯೌ ವಾರ್ಧುಷಾನ್ನಂ ನಾದ್ಯಾತಾಮ್ | (ವಸಿಷ್ಠ ವಚನ)

"ಬ್ರಾಹ್ಮಣನೂ ಕ್ಷತ್ರಿಯನೂ ಬಡ್ಡಿವ್ಯಾಪಾರವನ್ನು ಮಾಡುವವನ ಅನ್ನವನ್ನು ತಿನ್ನಬಾರದು."

ಹಿಂದೆ ಹೇಳಿದ ಕೂರ್ಮಪುರಾಣವಾಕ್ಯದಲ್ಲಿ ಬ್ರಾಹ್ಮಣನು ಬಡ್ಡಿವ್ಯಾಪಾರವನ್ನು ಮಾಡಬಹುದೆಂದೂ ಕೂಡದೆಂದೂ ಪರಸ್ಪರವಿರುದ್ಧವಾಗಿ ಹೇಳಿದೆ. ಅದರ ಅಭಿಪ್ರಾಯವನ್ನು ಸ್ಮೃತಿಮುಕ್ತಾವಲೀಕಾರರು ವಿವರಿಸಿದ್ದಾರೆ. ಬಡ್ಡಿ ವ್ಯಾಪಾರವು ಎರಡು ವಿಧವಾಗಿದೆ. (1) ಇನ್ನೊಬ್ಬನಿಂದ ಕಮ್ಮಿ ಬಡ್ಡಿಗೆ ಹಣವನ್ನು ತೆಗೆದುಕೊಂಡು ಆ ಹಣವನ್ನು ಹೆಚ್ಚು ಬಡ್ಡಿಗೆ ಇನ್ನೊಬ್ಬನಿಗೆ ಕೊಡುವವನು "ವಾರ್ಧುಷಿಕ" ಎಂದೆನಿಸುವನು. ಇದು ಮೊದಲನೆಯ ವಿಧ. ಈ ಕಾರ್ಯವನ್ನು ಮಾಡಬಾರದು. (2) ತನ್ನಲ್ಲಿರುವ ಹಣವನ್ನು ಬಡ್ಡಿಗೆ ಕೊಟ್ಟು ಬಡ್ಡಿಯಿಂದ ಜೀವಿಸುವುದು ಎರಡನೆಯ ವಿಧ. ಈ ಕಾರ್ಯವನ್ನು ಮಾಡಬಹುದು.

ಸಮರ್ಘಂ ಧನಮುದ್ಧೃತ್ಯ ಮಹಾರ್ಘಂ ಯಃ ಪ್ರಯಚ್ಛತಿ |
ಸ ವೈ ವಾರ್ಧುಷಿಕೋ ನಾಮ ಬ್ರಹ್ಮವಾದಿಷು ಗರ್ಹಿತಃ || (ವಸಿಷ್ಠ ವಚನ)

"ಕಮ್ಮಿ ಬಡ್ಡಿಗೆ ಹಣವನ್ನು ಸಾಲ ತೆಗೆದು ಅಧಿಕ ಬಡ್ಡಿಗೆ ಯಾವನು ಕೊಟ್ಟು ಹಣವನ್ನು ಸಂಪಾದಿಸುವನೋ ಅವನು ವಾರ್ಧುಷಿಕ ಎಂದೆನಿಸುವನು. ಇವನು ಬ್ರಹ್ಮವಾದಿಗಳ ಮಧ್ಯದಲ್ಲಿ ನಿಂದಿತನಾಗುವನು."

ಭ್ರೂಣಹತ್ಯಾಂ ಚ ವೃದ್ಧಿಂ ಚ ತುಲಯಾ ಸಮತೋಲಯತ್ |
ಅತಿಷ್ಠದ್ಭ್ರೂಣಹಾ ಕೋಟ್ಯಾಂ ವಾರ್ಧುಷಿರ್ನ್ಯಕ್ಪಪಾತ ಹ || (ವಸಿಷ್ಠರ ವಚನ)

"ಗರ್ಭವನ್ನು ನಾಶಮಾಡುವುದು ಭ್ರೂಣಹತ್ಯೆಯೆನಿಸುತ್ತದೆ. ಈ ಭ್ರೂಣಹತ್ಯೆಯನ್ನು ತ್ರಾಸಿನ ಒಂದು ಪಕ್ಕದಲ್ಲಿಯೂ ಬಡ್ಡಿವ್ಯಾಪಾರವನ್ನು ಇನ್ನೊಂದು ಪಕ್ಕದಲ್ಲಿಯೂ ಇಟ್ಟು ತೂಗಿದರು. ಭ್ರೂಣಹತ್ಯೆ ಇದ್ದ ಭಾಗವು ಹಗುರವಾಗಿದ್ದು ಮೇಲೆ ಮೇಲೆ ಹೋಯಿತು. ಬಡ್ಡಿವ್ಯಾಪಾರವು ಕೆಳಕೆಳಗೆ ಬರುತ್ತಾ ತ್ರಾಸಿನಿಂದ ಕೆಳಗೆ ಬಿತ್ತು."

**ಹೆಚ್ಚು ಲಾಭದಿಂದ ಧಾನ್ಯಗಳ ವ್ಯಾಪಾರವನ್ನೂ ಮಾಡಬಾರದು**

ಸಮರ್ಘಂ ಪಣ್ಯಮಾಹೃತ್ಯ ಮಹಾರ್ಘಂ ಯಃ ಪ್ರಯಚ್ಛತಿ |
ಸ ವೈ ವಾರ್ಧುಷಿಕೋ ನಾಮ ಬ್ರಹ್ಮವಾದಿಷು ಗರ್ಹಿತಃ || (ಯಮನ ವಚನ)

"ಅಂಗಡಿಯಲ್ಲಿ ಮಾರುವ ಅಕ್ಕಿ ಮುಂತಾದ ಎಲ್ಲಾ ಪದಾರ್ಥಗಳು ಪಣ್ಯವೆನಿಸುತ್ತವೆ. ಈ ಪಣ್ಯವನ್ನು ತುಂಬಾ ಕಡಿಮೆ ಹಣಕ್ಕೆ ತೆಗೆದುಕೊಂಡು ತುಂಬಾ ಅಧಿಕವಾದ ಬೆಲೆಗೆ ಮಾರುವವನೂ ಸಹ ವಾರ್ಧುಷಿಕ ಎಂದೆನಿಸುವನು. ಅವನೂ ಸಹ ಬ್ರಹ್ಮವಾದಿಗಳಲ್ಲಿ ನಿಂದ್ಯನಾಗುವನು."

ಬ್ರಾಹ್ಮಣಃ ಕ್ಷತ್ರಿಯೋ ವಾಽಪಿ ವೃದ್ಧಿಂ ನೈವ ಪ್ರಯೋಜಯೇತ್ |
ಕಾಮಂ ತು ಖಲು ಧರ್ಮಾರ್ಥಂ ದದ್ಯಾತ್ಪಾಪೀಯಸೇಽಲ್ಪಿಕಾಮ್ || (ಮನುವಿನ ವಚನ)

"ಬ್ರಾಹ್ಮಣನಿಂದಲೂ ಕ್ಷತ್ರಿಯನಿಂದಲೂ ಬಡ್ಡಿಯನ್ನು ತೆಗೆದುಕೊಳ್ಳಬಾರದು. ನಿಕೃಷ್ಟಕಾರ್ಯವನ್ನು ಮಾಡುತ್ತಿರುವವನಿಂದ ಬಡ್ಡಿಯನ್ನು ತೆಗೆದುಕೊಳ್ಳಬೇಕು. ತನಗೆ ಸುಖಲೋಪವೂ ಧರ್ಮಲೋಪವೂ ಏರ್ಪಡುವ ಸಂದರ್ಭದಲ್ಲಿ ಮಾತ್ರ ಬಡ್ಡಿಯನ್ನು ತೆಗೆದುಕೊಳ್ಳಬೇಕು. ಆ ಬಡ್ಡಿಯ ಹಣವನ್ನು ತನ್ನ ಸುಖ ಮತ್ತು ಧರ್ಮಕಾರ್ಯಗಳಿಗಾಗಿ ಉಪಯೋಗಿಸಬೇಕು. ಬಡ್ಡಿಯನ್ನೂ ಸ್ವಲ್ಪವೇ ತೆಗೆದುಕೊಳ್ಳಬೇಕು. ಅಧಿಕವಾಗಿ ತೆಗೆದುಕೊಳ್ಳಬಾರದು."

ಕಾಮಂ ತು ಪಾಪೀಯಸೇ ದದ್ಯಾನ್ನ ಜ್ಯಾಯಸೀಂ ವೃದ್ಧಿಮುಪಾದದೀತ | (ಪೈಠೀನಸಿ ವಚನ)

"ನಿಕೃಷ್ಟವಾದ ಕರ್ಮವನ್ನು ಮಾಡುವವನಿಗೆ ಸಾಲವನ್ನು ಕೊಡಬೇಕು. ಹೆಚ್ಚಿನ ಬಡ್ಡಿಯನ್ನು ತೆಗೆದುಕೊಳ್ಳಬಾರದು."

ವಸಿಷ್ಠವಿಹಿತಾಂ ವೃದ್ಧಿಂ ವಿಸೃಜೇದ್ವಿತ್ತವರ್ಧಿನೀಮ್ |
ಅಶೀತಿಭಾಗಂ ಗೃಹ್ಣೀಯಾನ್ಮೋ ಚೇದ್ವಾರ್ಧುಷಿಕಃ ಸದಾ || (ವೃದ್ಧಮನುವಿನ ವಚನ)

"ವಸಿಷ್ಠರು ನೂರು ರೂಪಾಯಿಗಳಿಗೆ ಒಂದು ವರ್ಷಕೆ ತುಂಬಾ ಅಧಿಕವಾದ ಬಡ್ಡಿಯನ್ನು ಹೇಳಿರುವರು. ಹಣವನ್ನು ಹೆಚ್ಚಿಸುವುದಕ್ಕಾಗಿ ಅವರು ಹೇಳಿರುವ ಬಡ್ಡಿಯನ್ನು ತೆಗೆದುಕೊಳ್ಳಬಾರದು. ಒಂದು ನೂರು ರೂಪಾಯಿಗಳಿಗೆ ಒಂದೂ ಕಾಲು ರೂಪಾಯಿಗಳನ್ನು ಮಾತ್ರ ತೆಗೆದುಕೊಳ್ಳಬೇಕು."

ಬಹವೋ ವರ್ತನೋಪಾಯಾ ಋಷಿಭಿಃ ಪರಿಕೀರ್ತಿತಾಃ |
ಸರ್ವೇಷಾಮಪಿ ಚೈತೇಷಾಂ ಕುಸೀದಮಧಿಕಂ ವಿದುಃ || (ಬೃಹಸ್ಪತಿ ವಚನ)

"ಋಷಿಗಳು ಅನೇಕಜೀವನೋಪಾಯಗಳನ್ನು ಹೇಳಿರುವರು. ಎಲ್ಲಾ ಉಪಾಯಗಳ ಮಧ್ಯದಲ್ಲಿ ಕುಸೀದ ಎಂಬ ಬಡ್ಡಿವ್ಯಾಪಾರವು ಹೆಚ್ಚುಹಣವನ್ನು ಕೊಡತಕ್ಕದ್ದು."

ಈ ಶ್ಲೋಕದಲ್ಲಿ "ಕುಸೀದಮಧಿಕಂ ವಿದುಃ" ಎಂಬ ವಾಕ್ಯವು ಬಡ್ಡಿವ್ಯಾಪಾರವು ಶ್ರೇಷ್ಠ ಎಂಬ ಅರ್ಥವನ್ನು ತಿಳಿಸುವುದಾಗಿ ತೋರುತ್ತದೆ. ಆದರೆ ಮುಂದಿನ ವಾಕ್ಯವನ್ನು ನೋಡಿದಾಗ ಆ ಅಭಿಪ್ರಾಯವು ಬೃಹಸ್ಪತ್ಯಾಚಾರ್ಯರಿಗೆ ಸಮ್ಮತವಲ್ಲವೆಂದೂ ಮೇಲ್ಕಂಡ ಅರ್ಥವೇ ಸಮ್ಮತವೆಂದೂ ತಿಳಿಯುತ್ತದೆ. ಅದಕ್ಕಾಗಿ ಮುಂದಿನ ವಾಕ್ಯವನ್ನು ಕೊಟ್ಟಿರುತ್ತೇವೆ.

ಅನಾವೃಷ್ಟ್ಯಾ ರಾಜಭಯಾನ್ಮೂಷಿಕಾದ್ಯೈರುಪದ್ರವೈಃ |
ಕೃಷ್ಯಾದಿಕೇ ಭವೇದ್ಧಾನಿಃ ಸಾ ಕುಸೀದೇ ನ ವಿದ್ಯತೇ ||
ಶುಕ್ಲಪಕ್ಷೇ ತಥಾ ಕೃಷ್ಣೇ ರಜನ್ಯಾಂ ದಿವಸೇಽಪಿ ವಾ |
ಉಷ್ಣೇ ವರ್ಷೇಽತಿಶೀತೇ ವಾ ವರ್ಧನೇನ ವಿವರ್ಧತೇ ||
ದೇಶಂ ಗತಾನಾಂ ಯಾ ವೃದ್ಧಿರ್ಯಾ ಚ ಪುಣ್ಯೋಪಜೀವಿನಾಮ್ |
ಕುಸೀದಂ ಕುರ್ವತಃ ಸಮ್ಯಕ್ಸಾಪಿ ತಸ್ಯೈವ ಜಾಯತೇ || (ಬೃಹಸ್ಪತಿ ವಚನ)

"ಮಳೆಯು ಬಾರದಿರುವುದು, ರಾಜಭಯ, ಇಲಿ ಮುಂತಾದ ಪ್ರಾಣಿಗಳಿಂದ ಏರ್ಪಡುವ ಉಪದ್ರವಗಳು ಮುಂತಾದವುಗಳಿಂದ ಕೃಷಿ, ವ್ಯಾಪಾರ ಮುಂತಾದವುಗಳಲ್ಲಿ ನಷ್ಟವು ಏರ್ಪಡುವ ಸಂಭವವುಂಟು. ಈ ನಷ್ಟವು ಬಡ್ಡಿವ್ಯಾಪಾರದಲ್ಲಿಲ್ಲ. ಶುಕ್ಲಪಕ್ಷ, ಕೃಷ್ಣಪಕ್ಷ, ರಾತ್ರಿ, ಹಗಲು, ಛಳಿ, ಬಿಸಿಲು, ಮಳೆ ಮುಂತಾದ ಎಲ್ಲಾ ಕಾಲಗಳಲ್ಲಿಯೂ ಬಡ್ಡಿವ್ಯಾಪಾರವು ಲಾಭಕರವಾಗಿದೆ. ದೇಶ, ಪರದೇಶ, ಮುಂತಾದ ಸ್ಥಳಗಳಲ್ಲಿಯೂ ಪುಣ್ಯ, ಪಾಪ ಮುಂತಾದ ಎಲ್ಲಾ ಕಾರ್ಯಗಳಲ್ಲಿಯೂ ಬಡ್ಡಿಯು ಲಾಭಕರವೆನಿಸುತ್ತದೆ. ಆದ್ದರಿಂದ ಬ್ರಾಹ್ಮಣನು ಬ್ರಾಹ್ಮಣಧರ್ಮದಿಂದ ಜೀವಿಸಲು ಸಾಧ್ಯವಿಲ್ಲದಿರುವಾಗ ಕ್ಷತ್ರಿಯಧರ್ಮದಿಂದಲಾಗಲೀ, ಕ್ಷತ್ರಿಯಧರ್ಮದಿಂದ ಸಾಧ್ಯವಾಗದಿದ್ದರೆ ವೈಶ್ಯಧರ್ಮದಿಂದಾಗಲೀ ಅದರಿಂದಲೂ ಸಾಧ್ಯವಿಲ್ಲದಿರುವಾಗ ತನಗೆ ತೋರಿದ ಮತ್ತು ಯೋಗ್ಯವಾದ ಇತರ ಕೆಲಸಗಳಿಂದಾಗಲೀ ಬಡ್ಡಿವ್ಯಾಪಾರದಿಂದಲಾಗಲೀ ಜೀವಿಸಬೇಕು.

### ಕ್ಷತ್ರಿಯನ ಆಪದ್ಧರ್ಮ

ಜೀವೇದೇತೇನ ರಾಜನ್ಯಃ ಸರ್ವೇಣಾಪ್ಯನಯಂ ಗತಃ |
ನತ್ವೇವ ಜ್ಯಾಯಸೀಂ ವೃತ್ತಿಮಭಿಮನ್ಯೇತ ಕರ್ಹಿಚಿತ್ || (ಮನುವಿನ ವಚನ)

"ಆಪತ್ಕಾಲದಲ್ಲಿ ರಾಜನು ವೈಶ್ಯಧರ್ಮದಿಂದ ಜೀವಿಸಬೇಕು. ಅವನಿಗಿಂತ ಉತ್ತಮರಾದ ಬ್ರಾಹ್ಮಣರ ಧರ್ಮವನ್ನು ಯಾವ ಕಾರಣದಿಂದಲೂ ಸ್ವೀಕರಿಸಬಾರದು."

### ವೈಶ್ಯನ ಆಪದ್ಧರ್ಮ

ವೈಶ್ಯೋಽಜೀವನ್ ಸ್ವಧರ್ಮೇಣ ಶೂದ್ರವೃತ್ತ್ಯಾಪಿ ವರ್ತಯೇತ್ |
ಅನಾಚರನ್ನಕಾರ್ಯಾಣಿ ನಿವರ್ತೇತ ಚ ಶಕ್ತಿಮಾನ್ ||

"ವೈಶ್ಯನು ಸ್ವಧರ್ಮದಿಂದ ಜೀವಿಸುವುದಕ್ಕೆ ಸಾಧ್ಯವಾಗದಿದ್ದರೆ ಶೂದ್ರರ ಧರ್ಮದಿಂದ ಜೀವಿಸಬೇಕು. ಆಗ ಅವರು ಎಂಜಲು ತಿನ್ನುವುದು ಮುಂತಾದ ಕಾರ್ಯಗಳನ್ನು ಯಾವ ಕಾರಣದಿಂದಲೂ ಮಾಡಕೂಡದು. ಇಂತಹ ನೀಚ ಕಾರ್ಯಗಳನ್ನು ಮಾಡದೆ ಬ್ರಾಹ್ಮಣಸೇವಾ ಕ್ಷತ್ರಿಯಸೇವಾ ಮುಂತಾದ ಕಾರ್ಯಗಳಿಂದ ಜೀವಿಸಬೇಕು. ಸ್ವಧರ್ಮದಿಂದ ಜೀವಿಸಲು ಶಕ್ತಿಬಂದಾಗ ಸ್ವಧರ್ಮವನ್ನೇ ಅನುಷ್ಠಾನಮಾಡಬೇಕು."

ಅಜೀವನ್ ಸ್ವಧರ್ಮೇಣಾನಂತರಾಂ ಪಾಪೀಯಸೀಂ ವೃತ್ತಿಮಾತಿಷ್ಠೇತ್ |
ನ ತು ಕದಾಚಿಜ್ಜ್ಯಾಯಸೀಮ್ || (ವಸಿಷ್ಠರ ವಚನ)

"ಎಲ್ಲಾ ಜಾತಿಯವರೂ ತಮ್ಮ ಸ್ವಧರ್ಮದಿಂದ ಜೀವನವು ನಡೆಯದಿರುವಾಗ ತಮಗಿಂತ ಕೆಳಗಣ ಜಾತಿಯವರಲ್ಲಿ ಸಮೀಪದ ಜಾತಿಯವರ ಧರ್ಮಗಳನ್ನು ಆಶ್ರಯಿಸಬೇಕು. ಉತ್ತಮರ ಧರ್ಮಗಳನ್ನು ಆಶ್ರಯಿಸಕೂಡದು. ಸಮೀಪದ ಜಾತಿಯವರ ಧರ್ಮದಿಂದಲೂ ಜೀವಿಸಲು ಸಾಧ್ಯವಾಗದಿದ್ದಾಗ ಅವರಿಗಿಂತಲೂ ಕೆಳಗಣ ಜಾತಿಯವರಲ್ಲಿ ಸಮೀಪದಲ್ಲಿರುವ ಜಾತಿಯವರ ಧರ್ಮಗಳನ್ನು ಆಶ್ರಯಿಸಬೇಕು.

### ಶೂದ್ರನ ಆಪದ್ಧರ್ಮ

"ಬ್ರಾಹ್ಮಣನು ಆಪತ್ಕಾಲದಲ್ಲಿ ಶೂದ್ರಧರ್ಮವನ್ನು ಬಿಟ್ಟು ಕ್ಷತ್ರಿಯ ಮತ್ತು ವೈಶ್ಯರ ಧರ್ಮಗಳನ್ನೂ, ಶೂದ್ರನು ಬ್ರಾಹ್ಮಣರ ಧರ್ಮವನ್ನು ಬಿಟ್ಟು ಕ್ಷತ್ರಿಯ ಮತ್ತು ವೈಶ್ಯರ ಧರ್ಮಗಳನ್ನೂ ಆಶ್ರಯಿಸಬೇಕು. ಕ್ಷತ್ರಿಯರು ಮತ್ತು ವೈಶ್ಯಜಾತಿಯವರಿಗೆ ಹೇಳಿರುವ ವಿಶೇಷಧರ್ಮಗಳನ್ನು ಬಿಟ್ಟು ಉಳಿದ ಎಲ್ಲಾ ಧರ್ಮಗಳೂ ನಾಲ್ಕು ಜಾತಿಯವರಿಗೂ ಯೋಗ್ಯವಾಗಿದೆ.

### ಬ್ರಾಹ್ಮಣರು ಅತ್ಯಂತಾಪತ್ಕಾಲದಲ್ಲಿ ಶೂದ್ರ ಧರ್ಮದಿಂದಲೂ ಜೀವಿಸಬಹುದು

ಅಶೂದ್ರೇಣ ತದಪ್ಯೇಕೇ ಪ್ರಾಣಸಂಶಯೇ | (ಗೌತಮರ ವಚನ)

"ಬ್ರಾಹ್ಮಣರು ಆಪತ್ಕಾಲದಲ್ಲಿ ಶೂದ್ರಧರ್ಮದಿಂದ ಜೀವಿಸಬಾರದು. ಆದರೆ ಪ್ರಾಣಸಂಶಯವು ಬಂದಾಗ ಶೂದ್ರಧರ್ಮದಿಂದಲೂ ಜೀವಿಸಬಹುದೆಂದು ಕೆಲವು ಜ್ಞಾನಿಗಳು ಹೇಳುತ್ತಾರೆ."

### ಪುನಃ ಶೂದ್ರನ ಆಪದ್ಧರ್ಮಗಳು

ಶೂದ್ರಸ್ಯ ದ್ವಿಜಶುಶ್ರೂಷಾ ತಯಾಽಜೀವನ್ವಣಿಗ್ಭವೇತ್ |
ಶಿಲ್ಪೈರ್ವಾ ವಿವಿಧೈರ್ಜೀವೇದ್ದ್ವಿಜಾತಿಹಿತಮಾಚರನ್ || (ಯಾಜ್ಞವಲ್ಕ್ಯರ ವಚನ)

"ಶೂದ್ರನಿಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ಜಾತಿಯವರ ಸೇವೆಯು ಮುಖ್ಯಧರ್ಮವೆನಿಸುತ್ತದೆ.

ಆದರಿಂದ ಜೀವನವು ನಡೆಯದಿದ್ದರೆ ಬ್ರಾಹ್ಮಣ ಮುಂತಾದ ಮೂರು ಜಾತಿಯವರಿಗೂ ಹಿತವಾದ ಕಾರ್ಯಗಳನ್ನು ಮಾಡುತ್ತಾ ಅಂಗಡಿಯನ್ನಿಟ್ಟುಕೊಂಡು ವ್ಯಾಪಾರವನ್ನು ಮಾಡಬೇಕು."

ಕೃಷಿಃ ಶಿಲ್ಪಂ ಭೃತಿರ್ವಿದ್ಯಾ ಕುಸೀದಂ ಶಕಟಂ ಗಿರಿಃ |
ಸೇವಾಽನೂಪಂ ನೃಪೋ ಭೈಕ್ಷ್ಯಮಾಪತ್ತೌ ಜೀವನಾನಿ ತು || (ಯಾಜ್ಞವಲ್ಕ್ಯ ವಚನ)

"ಶೂದ್ರನು ಆಪತ್ಕಾಲದಲ್ಲಿ ಆಶ್ರಯಿಸಬೇಕಾದ ಜೀವನೋಪಾಯಗಳನ್ನು ಹೇಳುತ್ತೇವೆ. (1) ಕೃಷಿಯನ್ನು ಮಾಡುವುದು. (2) ಅಡಿಗೆ ಮುಂತಾದ ಕಾರ್ಯಗಳನ್ನು ಮಾಡುವುದು. (3) ಇನ್ನೊಬ್ಬನ ದಾಸತ್ವವನ್ನು ವಹಿಸುವುದು. (4) ಸಂಬಳದಿಂದ ಪಾಠವನ್ನು ಹೇಳುವುದು. (5) ಬಡ್ಡಿವ್ಯಾಪಾರವನ್ನು ಮಾಡುವುದು. (6) ಬಂಡಿಗಳನ್ನಿಟ್ಟುಕೊಂಡು ಧಾನ್ಯ ಮುಂತಾದವುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸುವುದು. (7) ಬೆಟ್ಟದಲ್ಲಿರುವ ಗೆಡ್ಡೆಗಳು, ಗೆಣಸುಗಳು, ಹಣ್ಣುಗಳು, ತರಕಾರಿಗಳು ಮುಂತಾದವುಗಳನ್ನು ಮಾರಿ ಜೀವಿಸುವುದು. (8) ಪರರ ಮನಸ್ಸನ್ನು ತಿಳಿದು ಅವರಿಗೆ ಬೇಕಾದಂತೆ ನಡೆದುಕೊಳ್ಳುವುದು (9) ರಾಜನನ್ನು ಆಶ್ರಯಿಸುವುದು. (10) ಭಿಕ್ಷೆಯನ್ನು ಬೇಡಿ ಜೀವಿಸುವುದು. (11) ತುಂಬಾ ಗಿಡಗಳು ನೀರುಗಳು ಮುಂತಾದ ವಸ್ತುಗಳುಳ್ಳ ಪ್ರದೇಶಗಳಲ್ಲಿ ವಾಸಿಸುವುದು. ಈ ಹನ್ನೊಂದು ಮಾರ್ಗಗಳಿಂದ ಜೀವಿಸಬಹುದು."

ವಿದ್ಯಾ ಶಿಲ್ಪಂ ಭೃತಿಃ ಸೇವಾ ರಾಜಾ ಚ ವಿಪಣಿಃ ಕೃಷಿಃ |
ಧೃತಿರ್ಭೈಕ್ಷ್ಯಂ ಕುಸೀದಂ ಚ ದಶ ಜೀವನಹೇತವಃ || (ಮನುವಿನ ವಚನ)

"(1) ಪಾಠವನ್ನು ಹೇಳುವುದು. (2) ಅಡಿಗೆ ಮುಂತಾದವುಗಳನ್ನು ಮಾಡುವುದು. (3) ಯಾವುದಾದರೂ ಕೆಲಸವನ್ನು ಮಾಡಿ ಸಂಬಳದಿಂದ ಜೀವಿಸುವುದು. (4) ಇನ್ನೊಬ್ಬರ ಮನಸ್ಸಿನಂತೆ ನಡೆಯುವುದು. (5) ರಾಜನನ್ನು ಆಶ್ರಯಿಸುವುದು. (6) ಅಂಗಡಿಯನ್ನು ಇಟ್ಟುಕೊಂಡು ವ್ಯಾಪಾರವನ್ನು ಮಾಡುವುದು. (7) ಕೃಷಿಯನ್ನು ಮಾಡುವುದು. (8) ತನಗೆ ಸಿಕ್ಕಿರುವ ಅಲ್ಪವಸ್ತುವಿನಿಂದ ಸುತುಷ್ಟನಾಗಿ ಜೀವಿಸುವುದು. (9) ಭಿಕ್ಷೆಯಿಂದ ಜೀವಿಸುವುದು. (10) ಬಡ್ಡಿವ್ಯಾಪಾರವನ್ನು ಮಾಡುವುದು. ಈ ಹತ್ತು ಶೂದ್ರರಿಗೆ ಆಪತ್ಕಾಲದಲ್ಲಿ ಜೀವನೋಪಾಯಗಳು."

ವ್ಯಾಧಿತಸ್ಯ ದರಿದ್ರಸ್ಯ ಕುಟುಂಬಾತ್ಪ್ರಚ್ಯುತಸ್ಯ ಚ |
ಅಧ್ವಾನಂ ಚಾನುವೃತ್ತಸ್ಯ ಭಿಕ್ಷಾಚರ್ಯಂ ವಿಧೀಯತೇ || (ಅಂಗಿರಸರ ವಚನ)

"ರೋಗದಿಂದ ಪೀಡಿತನಾದವನು, ಕುಟುಂಬದಿಂದ ಬಿಡಲ್ಪಟ್ಟು ಏಕಾಕಿಯಾಗಿರುವವನು. ಬಡವನು, ಪರಂಪರೆಯಿಂದ ಭಿಕ್ಷುಕನು ಈ ನಾಲ್ಕರಿಗೆ ಭಿಕ್ಷೆಯನ್ನು ಬಿಟ್ಟು, ಬೇರೆ ವಿಧದಿಂದ ಜೀವಿಸುವುದು ಸಾಧ್ಯವಿಲ್ಲ. ಅತ್ಯಲ್ಪವಾದ ಸ್ವಧರ್ಮದಿಂದ ಜೀವಿಸಲು ಯಾವ ವಿಧದಿಂದಲೂ ಸಾಧ್ಯವಿಲ್ಲ. ಅಂತಹ ಜನರು ಭಿಕ್ಷೆಯಿಂದ ಜೀವಿಸಬೇಕು.

ವರಂ ಸ್ವಧರ್ಮೋ ವಿಗುಣೋ ನ ಪಾರಕ್ಯಃ ಸ್ವನುಷ್ಠಿತಃ |
ಪರಧರ್ಮೇಣ ಜೀವನ್ ಹಿ ಸದ್ಯಃ ಪತತಿ ಜಾತಿತಃ || (ಮನುವಿನ ವಚನ)

"ಎಲ್ಲಾ ವಿಧವಾದ ಗುಣಗಳಿಂದಲೂ ಯುಕ್ತವಾಗದಿದ್ದರೂ ಸ್ವಧರ್ಮಾನುಷ್ಠಾನವೇ ಮೇಲು. ಎಲ್ಲಾ ವಿಧವಾದ ಅಂಗಗಳಿಂದ ಯುಕ್ತವಾಗಿರುವ ಪರಧರ್ಮಾನುಷ್ಠಾನವು ಶ್ರೇಯಸ್ಕರವಲ್ಲ. ಇಂತಹ ಪರಧರ್ಮದಿಂದ ಜೀವಿಸುವವನು ಅದೇ ಕ್ಷಣದಲ್ಲಿಯೇ ಜಾತಿಭ್ರಷ್ಟನೆನಿಸುವನು."

ಯಾಜನಾಧ್ಯಾಪನಪ್ರತಿಗ್ರಹಾಃ ಸರ್ವೇಷಾಂ. ಪೂರ್ವಪೂರ್ವೋ ಗುರುಃ. ತದಲಾಭೇ ಕ್ಷತ್ರವೃತ್ತಿಃ | (ಗೌತಮರ ವಚನ)

ಇನ್ನೊಬ್ಬನಿಂದ ಯಜ್ಞ ಮುಂತಾದ ಸತ್ಕಾರ್ಯಗಳನ್ನು ಮಾಡಿಸಿ ಅದರಿಂದ ಬರುವ ಹಣದಿಂದ ಜೀವಿಸುವುದು ಯಾಜನವೆನಿಸುತ್ತದೆ. ಸಂಬಳವನ್ನು ತೆಗೆದುಕೊಂಡು ಪಾಠವನ್ನು ಹೇಳಿ ಜೀವಿಸುವುದು ಅಧ್ಯಾಪನವೆನಿಸುತ್ತದೆ. ದಾನವನ್ನು ತೆಗೆದುಕೊಂಡು ಜೀವಿಸುವುದು ಪ್ರತಿಗ್ರಹವೆನಿಸುತ್ತದೆ. ಎಲ್ಲಾ ಬ್ರಾಹ್ಮಣರೂ ಈ ಮೂರು ವೃತ್ತಿಯಿಂದ ಜೀವಿಸಬಹುದು.

ಬ್ರಾಹ್ಮಣರಲ್ಲಿ ಪ್ರಶಸ್ತಬ್ರಾಹ್ಮಣರೆಂದೂ ಅಪ್ರಶಸ್ತಬ್ರಾಹ್ಮಣರೆಂದೂ ಎರಡು ವಿಧರಾಗಿರುವರು. ಇವರಲ್ಲಿ ಪ್ರಶಸ್ತಬ್ರಾಹ್ಮಣರಿಗೆ ಆಪತ್ತು ಇಲ್ಲದಿರುವ ಕಾಲದಲ್ಲಿಯೂ ಈ ಮೂರು ವಿಧವಾದ ಜೀವನೋಪಾಯಗಳು ಹೇಳಲ್ಪಟ್ಟಿವೆ. ಆವರಿಗೆ ಯಾಜನ ಅಧ್ಯಾಪನ ಎಂಬ ಎರಡು ಜೀವನೋಪಾಯಗಳಿಗಿಂತ ಪ್ರತಿಗ್ರಹವೇ ಉತ್ತಮವೆಂದು ತಿಳಿಯಬೇಕು. ಅಪ್ರಶಸ್ತಬ್ರಾಹ್ಮಣರಿಗೆ ಆಪತ್ಕಾಲದಲ್ಲಿ ಈ ಮೂರುವೃತ್ತಿಗಳು ಹೇಳಲ್ಪಟ್ಟಿವೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರುಜಾತಿಯವರಿಗೆ ಮಾತ್ರ ಯಾಜನ ಅಧ್ಯಾಪನ ಎಂಬ ಎರಡನ್ನು ಮಾಡಿಸಬೇಕು. ಪ್ರತಿಗ್ರಹವನ್ನು ಈ ಮೂವರಿಂದಲೇ ಮಾಡಬೇಕು. ಹೀಗೆ ಮಾಡುವಾಗ ಈ ಮೂರು ಜೀವನೋಪಾಯಗಳಲ್ಲಿ ಪ್ರತಿಗ್ರಹವೇ ಉತ್ತಮವೆನಿಸುತ್ತದೆ.

ಪ್ರತಿಗ್ರಹಾಧ್ಯಾಪನಯಾಜನಾನಾಂ ಪ್ರತಿಗ್ರಹಂ ಶ್ರೇಷ್ಠತಮಂ ವದಂತಿ |
ಪ್ರತಿಗ್ರಹಃ ಶುಧ್ಯತಿ ಜಪ್ಯಹೋಮೈರ್ಯಾಜ್ಯಂ ತು ಪಾಪಂ ನ ಪುನಂತಿ ದೇವಾಃ || (ಯಮ ವಚನ)

"ಪ್ರತಿಗ್ರಹ, ಯಾಜನ, ಅಧ್ಯಾಪನ ಎಂಬ ಮೂರು ಜೀವನೋಪಾಯಗಳೂ ಪಾಪಸಾಧನಗಳಾಗಿವೆ. ಅವುಗಳಲ್ಲಿ ಪ್ರತಿಗ್ರಹದಿಂದ ಬರುವ ಪಾಪವು ಜಪ, ಹೋಮ ಮುಂತಾದ ಪುಣ್ಯಕಾರ್ಯಗಳಿಂದ ಪರಿಹರಿಸಲ್ಪಡುತ್ತದೆ. ಯಾಜನದಿಂದ ಬರುವ ಪಾಪಗಳನ್ನು ಪರಿಹರಿಸಲು ದೇವತೆಗಳೂ ಶಕ್ತರಾಗಲಾರರು. ಆದ್ದರಿಂದ ಪ್ರತಿಗ್ರಹದಿಂದ ಜೀವಿಸುವುದೇ ಉತ್ತಮವೆನಿಸುತ್ತದೆ. ಆದರೆ ದಾನವನ್ನು ತೆಗೆದುಕೊಳ್ಳುವಾಗ ಬ್ರಾಹ್ಮಣರಿಂದಲೂ ಕ್ಷತ್ರಿಯರಿಂದಲೂ ವೈಶ್ಯರಿಂದಲೂ ದಾನವನ್ನು ತೆಗೆದುಕೊಳ್ಳಬೇಕು. ಶೂದ್ರ ಮುಂತಾದ ಜಾತಿಯವರಿಂದಲೂ ದಾನವನ್ನು ತೆಗೆದುಕೊಳ್ಳಕೂಡದು. ಈ ವಿಷಯವನ್ನು ಮನುವು ಹೇಳಿ ಅದಕ್ಕೆ ಕಾರಣವನ್ನೂ ಹೇಳಿದ್ದಾನೆ. ಅವನ ವಾಕ್ಯಗಳನ್ನು ಕೆಳಗೆ ಕೊಟ್ಟಿದ್ದೇನೆ.

ಪ್ರತಿಗ್ರಹಾದ್ಯಾಜನಾದ್ವಾ ತಥೈವಾಧ್ಯಾಪನಾದಪಿ |
ಪ್ರತಿಗ್ರಹಃ ಪ್ರತ್ಯವರೋ ನ ತು ವಿಪ್ರಸ್ಯ ಗರ್ಹಿತಃ ||
ಯಾಜನಾಧ್ಯಾಪನೇ ನಿತ್ಯಂ ಕ್ರಿಯೇತೇ ಸಂಸ್ಕೃತಾತ್ಮನಾಮ್ |
ಪ್ರತಿಗ್ರಹಸ್ತು ಕ್ರಿಯತೇ ಶೂದ್ರಾದಪ್ಯಂತ್ಯಜನ್ಮನಃ ||
ಜಪಹೋಮೈರಪೈತ್ಯೇನೋ ಯಾಜನಾಧ್ಯಾಪನೈಃ ಕೃತಮ್ |
ಪ್ರತಿಗ್ರಹನಿಮಿತ್ತಂ ತು ತ್ಯಾಗೇನ ತಪಸೈವ ಚ ||

"ಪ್ರತಿಗ್ರಹ, ಯಾಜನ, ಅಧ್ಯಾಪನ ಎಂಬ ಮೂರು ಜೀವನೋಪಾಯಗಳ ಮಧ್ಯದಲ್ಲಿ ಪ್ರತಿಗ್ರಹವೇ ಶ್ರೇಷ್ಠವೆಂದು ಹಿಂದೆ ಹೇಳಿದೆವು. ಆದರೆ ಇಲ್ಲಿ ಸೂಕ್ಷ್ಮವಾಗಿ ವಿಚಾರಿಸಬೇಕಾದ ಅಂಶವಿದೆ. ಅಧ್ಯಾಪನ, ಯಾಜನ ಎಂಬ ಜೀವನೋಪಾಯಗಳನ್ನು ಉಪನಯನಸಂಸ್ಕಾರದಿಂದ ಯುಕ್ತರಾದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಎಂಬ ಮೂರು ಜಾತಿಯವರಿಗೆ ಮಾತ್ರ ಮಾಡಿಸುವ ಸಂಭವವಿದೆ. ಆದ್ದರಿಂದ ಅದರಿಂದ ಬರುವ ಪಾಪವು ಹೆಚ್ಚಲ್ಲ. ಆ ಪಾಪಗಳನ್ನು ಜಪಗಳಿಂದಲೂ ಹೋಮಗಳಿಂದಲೂ ಪರಿಹರಿಸಿಕೊಳ್ಳಬಹುದು. ಈ ಮೂರು ಜಾತಿಯವರನ್ನು ಬಿಟ್ಟು ಕೆಳಗಿನ ಜಾತಿಯವರಿಗೆ ಯಾಜನ, ಅಧ್ಯಾಪನಗಳನ್ನು ಮಾಡಿಸಿದರೆ ಅದರಿಂದ ಬರುವ ಪಾಪಗಳನ್ನು ಪರಿಹರಿಸಲು ದೇವತೆಗಳಿಂದಲೂ ಸಾಧ್ಯವಿಲ್ಲವೆಂದು ನಾವು ಹಿಂದೆ ತಿಳಿಸಿದೆವು.

ಪ್ರತಿಗ್ರಹವನ್ನು ಎಲ್ಲಾ ಜಾತಿಯವರಿಂದಲೂ ತೆಗೆದುಕೊಳ್ಳುವ ಸಂಭವವಿದೆ. ಈ ಪ್ರತಿಗ್ರಹದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ಜಾತಿಯವರಿಂದ ಪ್ರತಿಗ್ರಹವನ್ನು ಮಾಡಿದರೆ ಜಪ ಹೋಮಾದಿಗಳಿಂದ ಆ ಪ್ರತಿಗ್ರಹದಿಂದ ಬರುವ ಪಾಪವು ಪರಿಹಾರವಾಗುವುದಾಗಿಯೂ ಆ ಪ್ರತಿಗ್ರಹವು ಯಾಜನ ಮತ್ತು ಅಧ್ಯಾಪನಗಳಿಗಿಂತ ಉತ್ತಮವೆಂದೂ ಹಿಂದೆ ಹೇಳಿದೆವು. ಈ ಮೂರು ಜಾತಿಯವರಿಗಿಂತ ಕೆಳಗಣದರ್ಜೆಯಲ್ಲಿ ಸೇರಿರುವ ಶೂದ್ರಚಂಡಾಲಾದಿಗಳಿಂದಲೂ ಪ್ರತಿಗ್ರಹವನ್ನು

ಸ್ವೀಕರಿಸುವ ಸಂಭವವು ಬರುತ್ತದೆ. ಈ ಪ್ರತಿಗ್ರಹದಿಂದ ಬರುವ ಪಾಪವು ಹೋಗ ಬೇಕಾದರೆ ದಾನ ತೆಗೆದುಕೊಂಡ ವಸ್ತುವನ್ನು ಬಿಸಾಡಬೇಕು. ಮತ್ತು ಪಾಪಪರಿಹಾರಕ್ಕಾಗಿ ಉಗ್ರವಾದ ತಪಸ್ಸನ್ನು ಮಾಡಬೇಕು. ಆದ್ದರಿಂದ ಪ್ರತಿಗ್ರಹದಲ್ಲಿ ಯಾಜನ ಅಧ್ಯಾಪನಗಳಿಂದ ಬರುವ ದೋಷಗಳಿಗಿಂತ ಅಧಿಕವಾದ ದೋಷಗಳು ಬರುವ ಸಂಭವವಿರುವುದರಿಂದ ಈ ಪ್ರತಿಗ್ರಹವು ನಿಕೃಷ್ಟವಾದುದು ಎಂದು ತೀರ್ಮಾನಿಸಬಹುದು.

ಈ ಎಲ್ಲಾ ವಾಕ್ಯಗಳನ್ನೂ ವಿಮರ್ಶಿಸುವಾಗ ತಿಳಿಯುವ ಸಾರಾಂಶವನ್ನು ಕೆಳಗೆ ಕೊಟ್ಟಿದ್ದೇನೆ. (1) ಯಾಜನ. ಅಧ್ಯಾಪನಗಳನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಮಾಡಿಸಿದಾಗ ಈ ಮೂವರಿಂದ ಪ್ರತಿಗ್ರಹವನ್ನು ಮಾಡಿದ್ದರಿಂದ ಬರುವ ಪಾಪವು ಕಮ್ಮಿಯಾಗಿರುತ್ತದೆ. ಆದ್ದರಿಂದ ಪ್ರತಿಗ್ರಹವೇ ಮೇಲು. (2) ಯಾಜನ ಮತ್ತು ಅಧ್ಯಾಪನವನ್ನು ಶೂದ್ರಾದಿಗಳಿಂದ ಮಾಡಿಸಿದ ಅವನ ಪಾಪಕ್ಕೆ ಪರಿಹಾರವೇ ಇಲ್ಲ. ಆದ್ದರಿಂದ ಈ ಕೆಲಸವು ಪರಮನೀಚವೆನಿಸುತ್ತದೆ. (3) ಶೂದ್ರಾದಿಗಳಿಂದ ಪ್ರತಿಗ್ರಹವನ್ನು ಮಾಡಿದರೆ ದಾನತೆಗೆದುಕೊಂಡ ವಸ್ತುವನ್ನು ತ್ಯಜಿಸಬೇಕು. ಮತ್ತು ಉಗ್ರವಾದ ತಪಸ್ಸನ್ನು ಮಾಡಬೇಕು. ಆದ್ದರಿಂದ ಈ ಪ್ರತಿಗ್ರಹವು ಅತ್ಯಂತನಿಕೃಷ್ಟವೆನಿಸುತ್ತದೆ.

### ಪ್ರತಿಗ್ರಹದಲ್ಲಿ ವಿಶೇಷ

ಅಕೃತಂ ಚ ಕೃತಾತ್ಕ್ಷೇತ್ರಾದ್ಗೌರಜಾವಿಕಮೇವ ಚ |
ಹಿರಣ್ಯಂ ಧಾನ್ಯಮನ್ನಂ ಚ ಪೂರ್ವಂ ಪೂರ್ವಮದೋಷವತ್ || (ಮನುವಿನ ವಚನ)

"(1) ಉತ್ತು ಗೊಬ್ಬರ ಮುಂತಾದ ವಸ್ತುಗಳನ್ನು ಹಾಕಿ ಕೃಷಿಗೆ ಸಿದ್ಧಪಡಿಸಿದ ಭೂಮಿ, (2) ಕೃಷಿಗೆ ಸಿದ್ಧಪಡಿಸದ ಭೂಮಿ, (3) ಗೋವು, (4) ಆಡು ಕುರಿ ಮುಂತಾದ ಪ್ರಾಣಿಗಳು, (5) ಭಂಗಾರ, (6) ನೆಲ್ಲು ಮುಂತಾದ ಧಾನ್ಯಗಳು (7) ಬೇಯಿಸಿದ ಅನ್ನ ಈ ಏಳು ಪದಾರ್ಥಗಳನ್ನು ಸ್ವೀಕರಿಸಬಹುದು. ಇವುಗಳಲ್ಲಿ ಮೊದಲು ಹೇಳಿರುವ ವಸ್ತುಗಳನ್ನು ಸ್ವೀಕರಿಸುವುದು ದೋಷಕರವಲ್ಲವೆಂದೂ ಅನಂತರದಲ್ಲಿ ಹೇಳಿರುವ ವಸ್ತುಗಳನ್ನು ಸ್ವೀಕರಿಸಿದರೆ ಕ್ರಮವಾಗಿ ದೋಷವು ಅಧಿಕವೆಂದೂ ತಿಳಿಯಬೇಕು."

### ಬ್ರಾಹ್ಮಣನು ಮಾರಕೂಡದ ವಸ್ತುಗಳು

"ಬ್ರಾಹ್ಮಣನು ವ್ಯಾಪಾರದಿಂದ ಜೀವಿಸಬೇಕೆಂದು ಹಿಂದೆ ಹೇಳಿದೆವು. ಈ ವ್ಯಾಪಾರವನ್ನು ಮಾಡುವಾಗ ಕೆಳಗಣ ವಸ್ತುಗಳನ್ನು ಮಾರಕೂಡದು.

ಫಲೋಪಲಕ್ಷೌಮಸೋಮ ಮನುಷ್ಯಾಪೂಪವೀರುಧಃ |
ತಿಲೋದನರಸಕ್ಷಾರಾನ್ ದಧಿ ಕ್ಷೀರಂ ಘೃತಂ ಜಲಂ ||
ಶಸ್ತ್ರಾಸವಮಧೂಚ್ಛಿಷ್ಟಮಧುಲಾಕ್ಷಾಶ್ಚ ಬರ್ಹಿಷಃ |
ಮೃಚ್ಚರ್ಮಪುಷ್ಪಕುತಪಕೇಶತಕ್ರವಿಷಕ್ಷಿತೀಃ ||
ಕೌಶೇಯ ನೀಲಲವಣಮಾಂಸೈಕಶಫಸೀಸಕಾನ್ |
ಶಾಕಾದ್ರೌಷಧಿಪಿಣ್ಯಾಕಪಶುಗಂಧಾಂಸ್ತಥೈವ ಚ ||
ವೈಶ್ಯವೃತ್ತ್ಯಾಪಿ ಜೀವನ್ನೋ ವಿಕ್ರೀಣೀತ ಕದಾಚನ || (ಯಾಜ್ಞವಲ್ಕ್ಯರ ವಚನ)

"ವೈಶ್ಯರ ಜೀವನೋಪಾಯದಿಂದ ಜೀವಿಸುವವನು (1) ಬೋರೆ ಹಣ್ಣು ಮತ್ತು ಇಂಗುದ ಫಲಗಳನ್ನು ಬಿಟ್ಟು ಉಳಿದ ಫಲಗಳು, (2) ಮಾಣಿಕ್ಯ ಮುಂತಾದ ರತ್ನಗಳು, (3) ಅಗಸೆಯ ನೂಲಿನಿಂದ ಮಾಡಲ್ಪಟ್ಟ ಮಡಿಗಳು, (4) ಸೋಮರಸ, (5) ಮನುಷ್ಯರು, (6) ಅಪೂಪಗಳು, (7) ಬಳ್ಳಿಗಳು, (8) ಎಳ್ಳು, (9) ಅನ್ನ, (10) ಕಬ್ಬಿನ ಹಾಲು ಮುಂತಾದ ರಸಪದಾರ್ಥಗಳು,

(11) ಬಿಳಿಯ ಉಪ್ಪು, (12) ಮೊಸರು, (13) ಹಾಲು, (14) ತುಪ್ಪ, (15) ನೀರು, (16) ನಾನಾವಿಧವಾದ ಆಯುಧಗಳು, (17) ಹೆಂಡ, (18) ಜೇನಿನ ಗೂಡು, (19) ಜೇನು, (20) ಅರಗು, (21) ದರ್ಭೆಗಳು, (22) ಗೋಪೀಚಂದನ ಮುಂತಾದ ಮಣ್ಣುಗಳು, (23) ಕೃಷ್ಣಾಜಿನ ಮುಂತಾದ ಚರ್ಮಗಳು, (24) ಪುಷ್ಪಗಳು, (25) ಕಂಬಳಿಗಳು, (26) ಚಾಮರ ಮುಂತಾದ ಮೃಗಗಳ ಕೂದಲುಗಳು, (27) ಮಜ್ಜಿಗೆ, (28) ವಿಷಪದಾರ್ಥಗಳು, (29) ಭೂಮಿ, (30) ರೇಶ್ಮೆ ಮಡಿಗಳು, (31) ಕಪ್ಪುಬಣ್ಣದ ಉಪ್ಪು, (32) ಮಾಂಸ, (33) ಒಂದು ಗೊರಸಿನಿಂದ ಯುಕ್ತವಾದ ಕುದುರೆ ಮುಂತಾದ ಪ್ರಾಣಿಗಳು, (34) ಸೀಸ, (35) ತರಕಾರಿಗಳು, (36) ಶುಂಠಿ, (37) ಮೂಲಿಕೆಗಳು, (38) ಎಳ್ಳುಹಿಂಡಿ ಮುಂತಾದ ಹಿಂಡಿಗಳು, (39) ಕಾಡುಗಳಲ್ಲಿಯೂ ಊರುಗಳಲ್ಲಿಯೂ ಹುಟ್ಟಿ ಬೆಳೆಯುವ ಪಶುಗಳು, (40) ಗಂಧವಸ್ತುಗಳು, ಹೀಗೆ 40 ವಸ್ತುಗಳನ್ನು ಮಾರಕೂಡದು.

ತಸ್ಮಾಪಣ್ಯಂ ಗಂಧರಸಕೃತಾನ್ನತಿಲಶಾಣಕ್ಷೌಮಾಜಿನಾನಿ, ರಕ್ತನಿರ್ಣಿಕ್ತೇ ವಾಸಸೀ, ಕ್ಷೀರಂ ಸವಿಕಾರಂ, ಮೂಲ ಫಲಪುಷ್ಪೌಷಧಮಧುಮಾಂಸತೃಣೋದಕಾಪಥ್ಯಾನಿ, ಪಶವಶ್ಚ ಹಿಂಸಾಸಂಯೋಗೇ, ಪುರುಷವಶಾ ಕುಮಾರೀ, ವೇಹತಶ್ಚ, ನಿತ್ಯಂ ಭೂಮಿವ್ರೀಹಿಯವಾಜಾವ್ಯಶ್ವರ್ಷಭಧೇನ್ವನಡುಹಶ್ಚೈಕೇ. (ಗೌತಮರ ವಚನ)

"ಬ್ರಾಹ್ಮಣನು ಕೆಳಗೆ ಹೇಳಿರುವ ವಸ್ತುಗಳನ್ನು ಮಾರಕೂಡದು. (1) ಗಂಧವಸ್ತುಗಳು, (2) ಮಧುರರಸ ಮುಂತಾದ ರಸಗಳಿಂದ ಯುಕ್ತವಾದ ಪದಾರ್ಥಗಳು, (3) ಬೇಯಿಸಿದ ಆಹಾರಸಾಮಗ್ರಿಗಳು, (4) ಎಳ್ಳು, (5) ನಾರು ಮಡಿಗಳು, (6) ರೇಶ್ಮೆ ಮಡಿಗಳು, (7) ಚರ್ಮಗಳು, (8) ನೂಲಿನ ವಸ್ತ್ರಗಳು, (9) ಒಮ್ಮೆ ನೀರಿನಲ್ಲಿ ಹಾಕಿ ಒಗೆದ ವಸ್ತ್ರಗಳು, (10) ಹಾಲು ಮತ್ತು ಹಾಲಿನ ವಿಕಾರವಾಗಿರುವ ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ ಮುಂತಾದ ವಸ್ತುಗಳು, (11) ಗೆಡ್ಡೆಗಳು, (12) ಹಣ್ಣುಗಳು, (13) ಪುಷ್ಪಗಳು, (14) ಔಷಧಗಳು, (15) ಜೇನುತುಪ್ಪ, (16) ಮಾಂಸ, (17) ಹುಲ್ಲುಗಳು, (18) ನೀರು, (19) ಅಪಥ್ಯವಾದ ಪದಾರ್ಥಗಳು, (20) ಪಶುಗಳು, (21) ಹಿಂಸೆಗೆ ಸಂಬಂಧಿಸಿರುವ ವಸ್ತುಗಳು, (22) ಪುರುಷರು, (23) ಬಂಜೆ, (24) ಕನ್ಯೆ, (25) ಎತ್ತುಗಳು, (26) ಭೂಮಿ, (27) ನೆಲ್ಲುಗಳು, (28) ಜವೆಗೋಧಿಗಳು, (29) ಆಡುಗಳು ಮತ್ತು ಕುರಿಗಳು, (30) ಕುದುರೆಗಳು, (31) ಗೋವುಗಳು ಮುಂತಾದ ವಸ್ತುಗಳನ್ನು ಮಾರಕೂಡದು.

ಈ ಸೂತ್ರದಲ್ಲಿ ಗೌತಮರು "ಏಕೇ" ಎಂದು ಬರೆದಿದ್ದಾರೆ. ಆದ್ದರಿಂದ ಈ ಅಭಿಪ್ರಾಯವು ತಮಗೆ ಸಮ್ಮತವಲ್ಲವೆಂದೂ ಇತರರಿಗೆ ಸಮ್ಮತವೆಂದೂ ಹೇಳಿರುವುದಾಗಿ ಈ ಸೂತ್ರದ ಭಾಷ್ಯದಲ್ಲಿ ಭಾಷ್ಯಕಾರರು ಬರೆದಿರುತ್ತಾರೆ.

ಕುಸುಂಭಂ ನಾರಿಕೇಳಂ ಚ ವೃಂತಾಕಂ ಪೂರಿತಂ ತಥಾ |
ಸೋಮಃ ಶ್ಲೇಷ್ಮಾತಕೋ ಯಜ್ಞಸ್ತೋಯಂ ಸರ್ಪಿಶ್ಚ ಸರ್ವದಾ || (ನಾರದರ ವಚನ)

"ಕುಸುವೆ ಬೀಜ, ತೆಂಗಿನಕಾಯಿ, ಬದನೇಕಾಯಿ, ಸೋಮಲತೆ, ಶ್ಲೇಷ್ಮಾತಕ, ನೀರು, ತುಪ್ಪ, ಇವುಗಳನ್ನು ಯಾವಾಗಲೂ ಮಾರಕೂಡದು.

ಕ್ಷೀರಂ ಕ್ಷೌದ್ರಂ ದಧಿ ಘೃತಂ ತೈಲಂ ಮಧು ಗುಡಂ ಕುಶಾನ್ | (ಮನುವಿನ ವಚನ)

"ಹಾಲು, ಜೇನುತುಪ್ಪ, ಮೊಸರು, ತುಪ್ಪ, ಎಣ್ಣೆ, ಹೆಂಡ, ಬೆಲ್ಲ, ದರ್ಭೆಗಳು ಇವುಗಳನ್ನು ಮಾರಲೇಕೂಡದು.

ವೈಶ್ಯವೃತ್ತಾವವಿಕ್ರೇಯಂ ಬ್ರಾಹ್ಮಣಸ್ಯ ಪಯೋ ದಧಿ | (ನಾರದರ ವಚನ)

ವೈಶ್ಯರ ವೃತ್ತಿಯಿಂದ ಬ್ರಾಹ್ಮಣನು ಜೀವಿಸಬೇಕಾದ ಸಂದರ್ಭದಲ್ಲಿ ಹಾಲನ್ನೂ ಮೊಸರನ್ನೂ ಮಾರಕೂಡದು."

ಅವಿಹಿತಾ ಬ್ರಾಹ್ಮಣಸ್ಯ ವಣಿಜ್ಯಾ, ಆಪದಿ ವ್ಯವಹರೇತ್, ಪಣ್ಯಾನಾಮಪಣ್ಯಾನಿ ವ್ಯುದಸ್ಯನ್ ಮನುಷ್ಯಾನ್ ರಸಾನ್ ರಾಗಾನ್ ಗಂಧಾನನ್ನಂ ಚರ್ಮ, ಗವಾಂ ವಶಾಂ, ಶ್ಲೇಷ್ಮೋದಕೇ, ತೋಕ್ಮಕಿಣ್ವೇ, ಪಿಪ್ಪಲಮರೀಚೇ, ಧಾನ್ಯಂ, ಮಾಂಸಮಾಯುಧಂ, ಸುಕೃತಾಶಾಂ ಚ ತಿಲತಂಡುಲಾಂಸ್ತ್ವೇವ ಧಾನ್ಯಸ್ಯ ವಿಶೇಷೇಣ ನ ವಿಕ್ರೀಣೀಯಾತ್ (ಆಪಸ್ತಂಬರ ವಚನ)

"ಬ್ರಾಹ್ಮಣರಿಗೆ ವೈಶ್ಯರ ವೃತ್ತಿಯು ವಿಹಿತವಲ್ಲ. ಆಪತ್ಕಾಲದಲ್ಲಿ ವೈಶ್ಯರ ವೃತ್ತಿಯನ್ನೂ ಮಾಡಬಹುದು. ಅಂಗಡಿಯನ್ನು ಇಟ್ಟುಕೊಂಡು ಮುಂದೆ ಹೇಳುವ ವಸ್ತುಗಳನ್ನು ಮಾರದೆ ಉಳಿದ ವಸ್ತುಗಳನ್ನು ಮಾರಿ ಬರುವ ಲಾಭದಿಂದ ಜೀವಿಸಬಹುದು. ಬ್ರಾಹ್ಮಣನು ಮಾರಕೂಡದ ವಸ್ತುಗಳು. (1) ಹೆಂಡತಿ ಮುಂತಾದ ಮನುಷ್ಯರು, (2) ಹಾಲು, ಉಪ್ಪು ಮುಂತಾದ ರಸಪದಾರ್ಥಗಳು, (3) ಕುಸುಂಭ ಮುಂತಾದ ವರ್ಣಪದಾರ್ಥಗಳು, (4) ಗಂಧದ್ರವ್ಯಗಳು, (5) ಅನ್ನ, (6) ಚರ್ಮಗಳು, (7) ಕರುವನ್ನು ಹಾಕದ ಮತ್ತು ಬಂಜೆಯಾಗಿರುವ ಗೋವುಗಳು, (8) ಚರ್ಮ ಮುಂತಾದವುಗಳನ್ನು ಅಂಟಿಸುವ ಗೋಂದುಗಳು, (9) ಮೊಳಕೆ ಬಂದಿರುವ ಧಾನ್ಯಗಳು, (10) ಹೆಂಡವನ್ನು ತಯಾರಿಸುವ ವಸ್ತುಗಳು, (11) ಹಿಪ್ಪಲೀ, (12) ಮೆಣಸು, (13) ಧಾನ್ಯಗಳು, (14) ಮಾಂಸ, (15) ಆಯುಧಗಳು, (16) ಸುಕೃತ ಫಲಗಳು ಇವುಗಳನ್ನು ಮಾರಕೂಡದು. ಧಾನ್ಯಗಳ ಮಧ್ಯದಲ್ಲಿಯೂ (17) ಎಳ್ಳು, (18) ಅಕ್ಕಿ ಇವುಗಳನ್ನು ಯಾವ ಕಾರಣದಿಂದಲೂ ಮಾರಕೂಡದು.

ತಿಲದಧಿಕ್ಷೌದ್ರಲವಣಲಾಕ್ಷಾಮದ್ಯಮಾಂಸಕೃತಾನ್ನಸ್ತ್ರೀಪುರುಷಹಸ್ತ್ಯಶ್ವವೃಷಭಗಂಧರಸಕೃಷ್ಣಾಜಿನಸೋಮೋದಕ-ವಿಕ್ರಯಾತ್ಸದ್ಯಃ ಪತತಿ ಬ್ರಾಹ್ಮಣಃ | (ಶಂಖ ಮತ್ತು ಲಿಖಿತರ ವಚನ)

"ಎಳ್ಳು, ಮೊಸರು, ಜೇನುತುಪ್ಪ, ಉಪ್ಪು, ಅರಗು, ಹೆಂಡ, ಅನ್ನ, ಸ್ತ್ರೀಯರು, ಪುರುಷರು, ಆನೆ, ಕುದುರೆ, ಎತ್ತು, ಗಂಧಪದಾರ್ಥಗಳು, ರಸಪದಾರ್ಥಗಳು, ಕೃಷ್ಣಾಜಿನ, ಸೋಮಲತೆ, ನೀರು ಇವುಗಳನ್ನು ಮಾರಿದ ಬ್ರಾಹ್ಮಣನು ಮಾರಿದ ಕೂಡಲೇ ಪತಿತನಾಗುವನು."

ಲಾಕ್ಷಾಲವಣಮಾಂಸಾನಿ ಪತನೀಯಾನಿ ವಿಕ್ರಯೇ |
ಪಯೋ ದಧಿ ಚ ಮದ್ಯಂ ಚ ಹೀನವರ್ಣಕರಾಣಿ ತು || (ಯಾಜ್ಞವಲ್ಕ್ಯರ ವಚನ)

"ಅರಗು, ಉಪ್ಪು, ಮಾಂಸಗಳು ಇವುಗಳನ್ನು ಮಾರುವವನು ಪತಿತನಾಗುವನು, ಹಾಲು, ಮೊಸರು, ಹೆಂಡಗಳನ್ನು ಮಾರುವವನು ಹೀನವರ್ಣನಾಗುವನು."

ಸದ್ಯಃ ಪತತಿ ಮಾಂಸೇನ ಲಾಕ್ಷಯಾ ಲವಣೇನ ಚ |
ತ್ರ್ಯಹೇಣ ಶೂದ್ರೋ ಭವತಿ ಬ್ರಾಹ್ಮಣೋ ರಸವಿಕ್ರಯಾತ್ ||
ಇತರೇಷಾಂ ತು ಪಣ್ಯಾನಾಂ ವಿಕ್ರಯಾದಿಹ ಕಾಮತಃ |
ಬ್ರಾಹ್ಮಣಃ ಸಪ್ತರಾತ್ರೇಣ ವೈಶ್ಯಭಾವಂ ಹಿ ಗಚ್ಛತಿ || (ಮನುವಿನ ವಚನ)

"ಅರಗು, ಮಾಂಸ, ಉಪ್ಪುಗಳನ್ನು ಮಾರುವ ಬ್ರಾಹ್ಮಣನು ಆ ಕ್ಷಣದಲ್ಲಿಯೇ ಪತಿತನಾಗುವನು. ಮೂರು ದಿನಗಳವರೆಗೆ ಹಾಲು ಮುಂತಾದ ರಸಪದಾರ್ಥಗಳನ್ನು ಮಾರುವ ಬ್ರಾಹ್ಮಣನು ಶೂದ್ರನೆನಿಸುವನು. ಇತರ ವಸ್ತುಗಳನ್ನು ಆಶೆಯಿಂದ ಮಾರುವ ಬ್ರಾಹ್ಮಣನು ಏಳು ದಿನಗಳಲ್ಲಿ ವೈಶ್ಯತ್ವವನ್ನು ಪಡೆಯುವನು."

ಸ್ನೇಹದ್ರವ್ಯರಸಾನಾಂ ಚ ಸತ್ವಾನಾಂ ಜೀವತಾಮಪಿ |
ವಿಕ್ರೇತಾ ದಾನಪುಣ್ಯಾನಾಂ ಪ್ರೋಚ್ಯತೇ ಬ್ರಹ್ಮಹಾ ಬುಧೈಃ ||
ಗವಾಂ ವಿಕ್ರಯಕಾರೀ ತು ಗವಿ ರೋಮಾಣಿ ಯಾನಿ ತು |
ತಾವದ್ವರ್ಷಸಹಸ್ರೇಷು ಗವಾಂ ಗೋಷ್ಠೇ ಕೃಮಿರ್ಭವೇತ್ || (ಯಮನ ವಚನ)

"ಜಿಡ್ಡಿನಿಂದ ಯುಕ್ತವಾಗಿರುವ ಎಣ್ಣೆ ಮುಂತಾದ ಪದಾರ್ಥಗಳನ್ನೂ, ಹಾಲು ಮುಂತಾದ ರಸಪದಾರ್ಥಗಳನ್ನೂ, ಜೀವಿಸಿರುವ ಪ್ರಾಣಿಗಳನ್ನೂ, ದಾನ ಮುಂತಾದ ಪುಣ್ಯಕಾರ್ಯಗಳಿಂದ ಸಂಪಾದಿಸಿದ ಪುಣ್ಯಗಳನ್ನೂ ಮಾರುವವನು ಬ್ರಹ್ಮಹತ್ಯೆಯನ್ನು ಮಾಡಿದವನಿಗೆ ಸಮಾನನೆನಿಸುವನು. ಗೋವುಗಳನ್ನು ಮಾರುವವನು ಆ ಗೋವುಗಳ ದೇಹಗಳಲ್ಲಿರುವ

ರೋಮಗಳ ಸಂಖ್ಯೆಗಳಿಗೆ ಸಮಾನವಾದ ಸಂಖ್ಯೆಗಳುಳ್ಳ ಸಹಸ್ರವರ್ಷಗಳಷ್ಟು ವರ್ಷಗಳವರೆಗೆ ದನಗಳ ಕೊಟ್ಟಿಗೆಗಳಲ್ಲಿ ಕೃಮಿಯಾಗಿ ಹುಟ್ಟುವನು."

ದಾನಾಭ್ಯಂಜನಹೋಮೇಭ್ಯೋ ಯದನ್ಯತ್ಕುರುತೇ ತಿಲೈಃ |

ಕೃಮಿರ್ಭವತಿ ವಿಷ್ಠಾಯಾಂ ಕರ್ಮಣಾ ತೇನ ಪಾಪಕೃತ್ || (ಯಮನ ವಚನ)

"(1) ಎಳ್ಳುಗಳನ್ನು ದಾನ ಮಾಡಬೇಕು. (2) ಅವುಗಳಿಂದ ಎಣ್ಣೆಯನ್ನು ತೆಗೆದು ಮೈಗೆ ಹಚ್ಚಿಕೊಳ್ಳಬೇಕು. ಹೋಮಕ್ಕಾಗಿ ಅವುಗಳನ್ನು ಉಪಯೋಗಿಸಬೇಕು. ಈ ಮೂರು ಕಾರ್ಯಗಳನ್ನು ಬಿಟ್ಟು ಬೇರೆ ಕಾರ್ಯಗಳಿಗೆ ಉಪಯೋಗಿಸುವವನು ಮಹಾಪಾಪಿಯೆನಿಸುವನು. ಈ ಪಾಪದಿಂದ ಮಲದಲ್ಲಿ ಹುಳುವಾಗಿ ಹುಟ್ಟುವನು.

ಭೋಜನಾಭ್ಯಂಜನಾದ್ದಾನಾದ್ಯದನ್ಯತ್ಕುರುತೇ ತಿಲೈಃ |

ಕೃಮಿಭೂತ್ವಾ ಶ್ವವಿಷ್ಠಾಯಾಂ ಪಿತೃಭಿಃ ಸಹ ಮಜ್ಜತಿ || (ಮನುವಿನ ವಚನ)

"(1) ಎಳ್ಳನ್ನು ತಿನ್ನಬಹುದು, (2) ಎಳ್ಳಿನ ಎಣ್ಣೆಯಿಂದ ಅಭ್ಯಂಜನವನ್ನು ಮಾಡಿಕೊಳ್ಳಬಹುದು. (3) ದಾನವನ್ನು ಮಾಡಬಹುದು. ಈ ಮೂರು ಕಾರ್ಯಗಳನ್ನು ಬಿಟ್ಟು ಮಾರಾಟ ಮುಂತಾದ ಬೇರೆ ಕಾರ್ಯಗಳಿಗೆ ಉಪಯೋಗಿಸುವವನು ತನ್ನ ಪಿತೃಗಳಿಂದ ಸಹಿತನಾಗಿ ನಾಯಿಯ ಮಲದಲ್ಲಿ ಮುಳುಗುವನು."

ಅಸಕ್ತೋ ಭೇಷಜಸ್ಯಾರ್ಥೇ ಯಜ್ಞಹೇತೋಸ್ತಥೈವ ಚ |

ಯದ್ಯವಶ್ಯಂ ತು ವಿಕ್ರೇಯಾಸ್ತಿಲಾ ಧಾನ್ಯೇನ ತತ್ಸಮಾಃ || (ನಾರದರ ವಚನ)

ಔಷಧಕ್ಕಾಗಿಯೂ ಯಜ್ಞಾದಿಪುಣ್ಯಕಾರ್ಯಗಳಿಗಾಗಿಯೂ ಎಳ್ಳನ್ನು ಮಾರಬೇಕಾದ ಆವಶ್ಯಕತೆ ಏರ್ಪಟ್ಟಾಗ ಎಳ್ಳನ್ನೂ ಮಾರಬಹುದು. ಆದರೆ ದುಡ್ಡಿನ ಆಸೆಯಿಂದ ಮಾರಕೂಡದು. ಮಾರುವಾಗಲೂ ಎಳ್ಳಿಗೆ ಸಮವಾದ ಭಾರದಿಂದ ಯುಕ್ತವಾಗಿರುವ ಧಾನ್ಯಗಳನ್ನು ತೆಗೆದುಕೊಳ್ಳಬೇಕು. ಹಣವನ್ನು ತೆಗೆದುಕೊಳ್ಳಕೂಡದು.

ಧರ್ಮಾರ್ಥಂ ವಿಕ್ರಯಂ ನೇಯಾಸ್ತಿಲಾ ಧಾನ್ಯೇನ ತತ್ಸಮಾಃ | (ಯಾಜ್ಞವಲ್ಕ್ಯರ ವಚನ)

"ಧರ್ಮಕಾರ್ಯವನ್ನು ಮಾಡುವುದಕ್ಕಾಗಿ ಎಳ್ಳುಗಳನ್ನು ಮಾರಬಹುದು. ಎಳ್ಳುಗಳನ್ನು ಕೊಟ್ಟು ಅದಕ್ಕೆ ಸಮಾನವಾದ ಭಾರವುಳ್ಳ ನೆಲ್ಲು ಮುಂತಾದ ಧಾನ್ಯಗಳನ್ನು ತೆಗೆದುಕೊಳ್ಳಬೇಕು. ಹಣವನ್ನಾಗಲೀ ಎಳ್ಳುಗಳ ಭಾರಕ್ಕಿಂತ ಅಧಿಕವಾದ ಭಾರವುಳ್ಳ ಧಾನ್ಯಗಳನ್ನಾಗಲೀ ತೆಗೆದುಕೊಳ್ಳಕೂಡದು."

ರಸಾ ರಸೈರ್ನಿಮಾತವ್ಯಾ ನ ತ್ವೇವ ಲವಣಂ ರಸೈಃ |

ಕೃತಾನ್ನಂ ಚಾಕೃತಾನ್ನೇನ ತಿಲಾ ಧಾನ್ಯೇನ ತತ್ಸಮಾಃ || (ಮನುವಿನ ವಚನ)

ಹಾಲು ಮುಂತಾದ ರಸಪದಾರ್ಥಗಳನ್ನು ಕೊಟ್ಟು ಮೊಸರು ಮುಂತಾದ ರಸಪದಾರ್ಥಗಳನ್ನು ತೆಗೆದುಕೊಳ್ಳಬಹುದು. ರಸಪದಾರ್ಥಗಳನ್ನು ಕೊಟ್ಟು ಉಪ್ಪನ್ನಾಗಲೀ, ಉಪ್ಪನ್ನು ಕೊಟ್ಟು ರಸಪದಾರ್ಥಗಳನ್ನಾಗಲೀ ತೆಗೆದುಕೊಳ್ಳಬಾರದು. ಅಕ್ಕಿ ಮುಂತಾದ ಬೇಯಿಸದ ಪದಾರ್ಥಗಳನ್ನು ಕೊಟ್ಟು ಅನ್ನ ಮುಂತಾದ ಬೇಯಿಸಿದ ಪದಾರ್ಥಗಳನ್ನಾಗಲೀ, ಬೇಯಿಸಿದ ಪದಾರ್ಥಗಳನ್ನು ಕೊಟ್ಟು ಬೇಯಿಸದ ಪದಾರ್ಥಗಳನ್ನಾಗಲೀ ತೆಗೆದುಕೊಳ್ಳಬಹುದು. ಎಳ್ಳನ್ನು ಕೊಟ್ಟು ನೆಲ್ಲು ಮುಂತಾದ ಧಾನ್ಯಗಳನ್ನಾಗಲೀ ಧಾನ್ಯಗಳನ್ನು ಕೊಟ್ಟು ಎಳ್ಳನ್ನಾಗಲೀ ತೆಗೆದುಕೊಳ್ಳಬಹುದು. ಈ ಎಲ್ಲಾ ವ್ಯಾಪಾರಗಳಲ್ಲಿಯೂ ಕೊಡುವ ವಸ್ತುವಿನ ಭಾರಕ್ಕೆ ಸಮಾನವಾದ ಭಾರದಿಂದ ಯುಕ್ತವಾಗಿರುವ ವಸ್ತುಗಳನ್ನೇ ತೆಗೆದುಕೊಳ್ಳಬೇಕು. ಅಧಿಕಭಾರವುಳ್ಳ ವಸ್ತುಗಳನ್ನು ತೆಗೆದುಕೊಳ್ಳಕೂಡದು.

ಅನ್ನೇನ ಚಾನ್ನಸ್ಯ ಮನುಷ್ಯಾಣಾಂ ಮನುಷ್ಯೈ ರಸಾನಾಂ ಚ ರಸೈ ರಾಗಾಣಾಂ ಚ ರಾಗೈರ್ಗಂಧಾನಾಂ ಚ ಗಂಧೈರ್ವಿದ್ಯಯಾ ಚ ವಿದ್ಯಾಮಕ್ರೀತವಣ್ಯೈರ್ವ್ಯವಹರೇತ | (ಆಪಸ್ತಂಬರ ವಚನ)

"ಒಂದು ವಸ್ತುವನ್ನು ಇನ್ನೊಬ್ಬನಿಗೆ ಮಾರಲೇಬೇಕೆಂಬ ನಿರ್ಬಂಧವಿಲ್ಲ. ಬದಲಾಯಿಸಿಕೊಂಡರೂ ಮಾರಿದಂತಾಗುವುದು. ಪಕ್ವವಾದ ಅನ್ನ ಮುಂತಾದ ವಸ್ತುಗಳನ್ನು ಇನ್ನೊಬ್ಬನಿಗೆ ಕೊಟ್ಟು, ಅವನಿಂದ ಪಕ್ವವಾದ ಚಿತ್ರಾನ್ನ ಮುಂತಾದ ವಸ್ತುಗಳನ್ನು ಸ್ವೀಕರಿಸಬಹುದು. ಇನ್ನೊಬ್ಬನ ಮನುಷ್ಯರನ್ನು ತನಗೆ ಸಹಾಯಕ್ಕಾಗಿ ಕರೆದಾಗ ಅವನ ಮನೆಯ ಕೆಲಸಕ್ಕಾಗಿ ತನ್ನ ಮನೆಯ ಜನರನ್ನು ಕಳುಹಿಸಬೇಕು. ಇನ್ನೊಬ್ಬನಿಗೆ ಹಾಲು ಮುಂತಾದ ರಸವಸ್ತುಗಳನ್ನು ಕೊಟ್ಟು, ನಮಗೆ ಬೇಕಾದ ರಸವಸ್ತುಗಳನ್ನು ಸ್ವೀಕರಿಸಬಹುದು. ಇನ್ನೊಬ್ಬರಿಗೆ ಬೇಕಾದ ಅಲಂಕಾರವಸ್ತುಗಳನ್ನು ಕೊಟ್ಟು, ತನಗೆ ಬೇಕಾದ ಅಲಂಕಾರವಸ್ತುಗಳನ್ನು ಸ್ವೀಕರಿಸಬಹುದು. ಇನ್ನೊಬ್ಬರಿಗೆ ಬೇಕಾದ ಗಂಧ ಮುಂತಾದ ವಸ್ತುಗಳನ್ನು ಕೊಟ್ಟು, ತನಗೆ ಬೇಕಾದ ಗಂಧ ಮುಂತಾದ ವಸ್ತುಗಳನ್ನು ಸ್ವೀಕರಿಸಬಹುದು. ಇನ್ನೊಬ್ಬರಿಗೆ ತಿಳಿಯದಿರುವ ವಿದ್ಯೆಯನ್ನು ಉಪದೇಶಿಸಿ ಅವರಿಂದ ತಾನು ತಿಳಿಯದಿಯವ ವಿದ್ಯೆಯನ್ನು ಸ್ವೀಕರಿಸಬಹುದು. ಈ ರೀತಿಯಲ್ಲಿ ಒಂದು ಕ್ರಮದಿಂದ ವ್ಯವಹರಿಸಬೇಕು. ಇದು ಶಾಸ್ತ್ರಬದ್ಧವಾದ ನಿಯಮವೆನಿಸುತ್ತದೆ. ಇವುಗಳಲ್ಲಿ ಪಕ್ವಾನ್ನವನ್ನು ಬದಲಾಯಿಸುವಾಗ ತನ್ನ ಜಾತಿಗೆ ಸಂಬಂಧಿಸಿದ ಎಲ್ಲಾ ಕಟ್ಟುಪಾಡುಗಳಿಗೂ ಒಳಪಟ್ಟೇ ವ್ಯವಹರಿಸಬೇಕು.

ರಸಾ ರಸೈಃ ಸಮತೋ ಹೀನತೋ ವಾ ತಿಲತಂಡುಲಪಕ್ವಾನ್ನಂ ವಿಹಿತಾ ಮನುಷ್ಯಾಶ್ಚ ಪರಿವರ್ತನೀಯಾಃ | (ವಸಿಷ್ಠರ ವಚನ)

"ಹಾಲು ಮುಂತಾದ ರಸಪದಾರ್ಥಗಳನ್ನು ಕೊಟ್ಟು ಮೊಸರು ಮುಂತಾದ ರಸಪದಾರ್ಥಗಳನ್ನೂ, ಎಳ್ಳುಗಳನ್ನು ಕೊಟ್ಟು, ನೆಲ್ಲು ಮುಂತಾದ ಧಾನ್ಯಗಳನ್ನೂ, ಬೇಯಿಸದ ಅಕ್ಕಿ ಮುಂತಾದ ಧಾನ್ಯಗಳನ್ನು ಕೊಟ್ಟು, ಬೇಯಿಸಿದ ಅನ್ನ ಮುಂತಾದ ವಸ್ತುಗಳನ್ನೂ, ನಮ್ಮ ಕಡೆಯ ಜನರನ್ನು ಕಳುಹಿಸಿ ಬೇರೆ ಜನರ ಕಡೆಯ ಜನರನ್ನೂ ಬದಲಾಯಿಸಿಕೊಳ್ಳಬಹುದೆಂದು ಎಲ್ಲರೂ ಅಂಗೀಕರಿಸಿಯವರು. ಆದರೆ ನಮ್ಮಿಂದ ಇನ್ನೊಬ್ಬರಿಗೆ ಎಷ್ಟು ಲಾಭವು ಏರ್ಪಟ್ಟಿದೆಯೋ ಅಷ್ಟೇ ಲಾಭವು ಅವರಿಂದ ನಮಗೆ ಏರ್ಪಡಬೇಕೆಂದೂ ಆ ಲಾಭಕ್ಕಿಂತ ಅಧಿಕಲಾಭವಾಗಲೀ ಕಡಿಮೆ ಲಾಭವಾಗಲೀ ಏರ್ಪಡಕೂಡದೆಂದೂ ಹಾಗೆ ಏರ್ಪಟ್ಟರೆ ವ್ಯಾಪಾರವೆನಿಸಲಾರದೆಂದೂ ಕೆಲವು ಜ್ಞಾನಿಗಳು ಹೇಳುತ್ತಾರೆ. ವಸಿಷ್ಠರು ಈ ವಿಷಯವನ್ನು ಅಂಗೀಕರಿಸುವುದಿಲ್ಲ. ನಮ್ಮಿಂದ ಇನ್ನೊಬ್ಬರಿಗೆ ಏರ್ಪಟ್ಟ ಉಪಕಾರಕ್ಕೆ ಸಮಾನವಾದ ಉಪಕಾರವಾಗಲೀ ಕಡಿಮೆಯಾದ ಉಪಕಾರವಾಗಲೀ ನಮಗೆ ಏರ್ಪಟ್ಟರೂ ಈ ಉಪಕಾರವು ವ್ಯಾಪಾರಕ್ಕೆ ಸಮಾನವೆಂದು ಹೇಳುತ್ತಾರೆ. ಈ ವಿಧವಾದ ಉಪಕಾರವನ್ನು ಮಾಡಿಕೊಂಡು ಅನ್ಯೋನ್ಯಮಿತ್ರಭಾವದಿಂದ ಜೀವಿಸುವುದು ಅವರಿಗೆ ಸಂಮತವಾಗಿದೆ.

ಸಮೇನಾಮೇವ ತು ಪಕ್ವಸ್ಯ ಸಂಪ್ರತ್ಯರ್ಥೇ ಸರ್ವಥಾ ತು ವೃತ್ತಿಃ ತದಪ್ಯಶಕ್ತಾವಶೂದ್ರೇಣ
ತದಪ್ಯೇಕಪ್ರಮಾಣಸಂಶಯೇ | (ಗೌತಮರ ವಚನ)

ಬೇಯಿಸದ ಅಕ್ಕಿ ಮುಂತಾದ ವಸ್ತುಗಳನ್ನು ಕೊಟ್ಟು, ಅದಕ್ಕೆ ಸಮವಾದ ಬೇಯಿಸಿದ ಅನ್ನ ಮುಂತಾದ ವಸ್ತುಗಳನ್ನು ಸ್ವೀಕರಿಸಬಹುದು. ಜೀವನವು ಸುರಕ್ಷಿತವಾಗಿ ನಡೆಯುವುದಕ್ಕಾಗಿಯೇ ವ್ಯಾಪಾರ ಮತ್ತು ಪದಾರ್ಥಗಳ ಬದಲಾವಣೆಗಳು ಹೇಳಲ್ಪಟ್ಟಿವೆ. ಈ ವ್ಯಾಪಾರ ಮತ್ತು ಬದಲಾವಣೆಗಳಿಗೂ ಕಟ್ಟುಪಾಡುಗಳು ಹೇಳಲ್ಪಟ್ಟಿವೆ. ಈ ಕಟ್ಟುಪಾಡುಗಳನ್ನು ರಕ್ಷಿಸಲೇಬೇಕು. ಆಪತ್ಕಾಲದಲ್ಲಿ ಈ ಕಟ್ಟುಪಾಡುಗಳನ್ನೂ ರಕ್ಷಿಸಲು ಸಾಧ್ಯವಾಗದಿದ್ದರೆ ಕಟ್ಟುಪಾಡುಗಳನ್ನು ಮೀರಿಯಾದರೂ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕು. ಕಟ್ಟುಪಾಡುಗಳನ್ನು ಮೀರುವ ಸಂದರ್ಭ ಬಂದಾಗ ಶೂದ್ರನ ಜೊತೆಯಲ್ಲಿ ಬದಲಾವಣೆ ಮುಂತಾದ ಯಾವ ಸಂಬಂಧವನ್ನೂ ಇಟ್ಟುಕೊಳ್ಳಕೂಡದು. ಅದೂ ಕೂಡ ನಿಯಮವಿಲ್ಲ. ಪ್ರಾಣವು ಹೋಗುವ ಆಪತ್ತು

ಬಂದಿರುವಾಗ ಶೂದ್ರನ ಜೊತೆಯಲ್ಲಿಯೂ ಬದಲಾವಣೆ ಮುಂತಾದ ಹಿಂದೆ ಹೇಳಿದ ಜೀವನೋಪಾಯವನ್ನು ನಡೆಯಿಸಬಹುದು."

ವಿನಿಮೇಯರಸಾದೀನಾಂ ವಿಕ್ರಯೇ ನೈವ ದುಷ್ಯತಿ |
ಯಜ್ಞಾರ್ಥೇ ದಕ್ಷಿಣಾಯಾಂ ಚ ಪ್ರಜಾಪತಿವಚೋ ಯಥಾ || (ಹಾರೀತರ ವಚನ)

"ಹಿಂದೆ ಬ್ರಾಹ್ಮಣರು ಮಾರಲಿಕ್ಕೆ ಅಯೋಗ್ಯವಾದ ಹಾಲು ಮುಂತಾದ ವಸ್ತುಗಳನ್ನು ತಿಳಿಸಿದೆವು. ಹಾಲು ಮುಂತಾದ ವಸ್ತುಗಳು ನಮ್ಮಲ್ಲಿದ್ದಾಗ ಆ ವಸ್ತುಗಳನ್ನು ಮಾರದಿದ್ದರೂ ಇನ್ನೊಬ್ಬರಿಗೆ ಕೊಟ್ಟು ಅವುಗಳಿಗೆ ಬದಲಾಗಿ ಸ್ವೀಕರಿಸಬಹುದಾದ ವಸ್ತುಗಳನ್ನೂ ಹೇಳಿದೆವು, ಬದಲಾಯಿಸುವುದಕ್ಕೆ ಯೋಗ್ಯವಾದ ಹಾಲು ಮುಂತಾದ ವಸ್ತುಗಳನ್ನು ಮಾರುವುದು ದೋಷಕರವೆನಿಸುತ್ತದೆ. ಬದಲಾಯಿಸಲು ಯೋಗ್ಯವಾದ ವಸ್ತುಗಳನ್ನು ಯಜ್ಞ ಮುಂತಾದ ಪುಣ್ಯಕಾರ್ಯಗಳನ್ನು ಮಾಡುವಾಗ ದಕ್ಷಿಣಾರೂಪವಾಗಿಯೂ ಕೊಡಬಹುದು. ಈ ದಕ್ಷಿಣೆಯನ್ನು ಕೊಡುವಾಗ ಈ ವಸ್ತುಗಳಿಂದ ಪ್ರತಿಫಲರೂಪವಾಗಿ ಯಾವ ವಸ್ತುವೂ ಸಿಗಲಾರದು. ಪುಣ್ಯವೇ ಸಿಗುತ್ತದೆ. ಬದಲಾಯಿಸಿದಾಗಲೂ ಪ್ರತಿಫಲವು ಸಿಗುತ್ತದೆ."

ಬ್ರಾಹ್ಮಣಸ್ಯ ತು ವಿಕ್ರೇಯಂ ಶುಷ್ಕದಾರುತೃಣಾದಿಕಮ್ | (ನಾರದರ ವಚನ)

"ಒಣಗಿದ ಕಟ್ಟಿಗೆ ಹುಲ್ಲು ಮುಂತಾದ ವಸ್ತುಗಳನ್ನು ಬ್ರಾಹ್ಮಣನು ಮಾರಬಹುದು."

ಇಷ್ಟರವರೆಗೆ ಬ್ರಾಹ್ಮಣ ಮುಂತಾದವರು ಆಪತ್ಕಾಲದಲ್ಲಿ ಆಶ್ರಯಿಸಬೇಕಾದ ಜೀವನೋಪಾಯಗಳನ್ನು ಹೇಳಿದೆವು. ಈ ಆಪದ್ಧರ್ಮಗಳೆಲ್ಲವೂ ಆಯಾ ಜಾತಿಗಳಿಗೆ ಸಂಬಂಧಿಸಿದ ಮುಖ್ಯಧರ್ಮಗಳಲ್ಲ. ಆಪತ್ಕಾಲಗಳಲ್ಲಿ ಈ ಆಪದ್ಧರ್ಮಗಳನ್ನು ಅನುಸರಿಸಬೇಕು. ಆಪತ್ತುಗಳೆಲ್ಲವೂ ಮುಗಿದ ಕೂಡಲೇ ಆಪದ್ಧರ್ಮಗಳನ್ನು ಬಿಡಬೇಕು. ಆಪದ್ಧರ್ಮಗಳನ್ನು ಅನುಷ್ಠಿಸುವಾಗ ತಮ್ಮ ಸ್ವಾಭಾವಿಕವಾದ ಧರ್ಮಗಳನ್ನು ಬಿಟ್ಟಿದ್ದರಿಂದ ದೋಷಗಳು ಬಂದಿರುತ್ತವೆ. ಆ ದೋಷಗಳ ಪರಿಹಾರಕ್ಕಾಗಿ ಶಾಸ್ತ್ರಗಳಲ್ಲಿ ಹೇಳಿರುವ ಪ್ರಾಯಶ್ಚಿತ್ತಗಳನ್ನು ಅನುಷ್ಠಿಸಬೇಕು. ಆ ಪ್ರಾಯಶ್ಚಿತ್ತಗಳ ಅನುಷ್ಠಾನದಿಂದ ಪಾಪಗಳನ್ನೆಲ್ಲವನ್ನೂ ಪರಿಹರಿಸಿಕೊಳ್ಳಬೇಕು. ಶುದ್ಧನಾದ ಮೇಲೆ ಸ್ವಭಾವಸಿದ್ಧವಾದ ಸ್ವಧರ್ಮಗಳನ್ನು ಅನುಷ್ಠಿಸಬೇಕು.

ಕ್ಷಾತ್ರೇಣ ಕರ್ಮಣಾ ಜೀವೇದ್ವಿಶಾಂ ವಾಽಪ್ಯಾಪದಿ ದ್ವಿಜಃ |
ನಿಸ್ತೀರ್ಯ ತಾಮಥಾತ್ಮಾನಂ ಪಾವಯಿತ್ವಾ ನ್ಯಸೇತ್ತತಃ || (ನಾರದರ ವಚನ)

"ಬ್ರಾಹ್ಮಣನು ಆಪತ್ಕಾಲದಲ್ಲಿ ಕ್ಷತ್ರಿಯಧರ್ಮದಿಂದಲಾಗಲೀ ವೈಶ್ಯಧರ್ಮದಿಂದಲಾಗಲೀ ಜೀವಿಸಬೇಕು. ಆಪತ್ತು ಮುಗಿದ ಕೂಡಲೇ ಆಪದ್ಧರ್ಮವನ್ನು ಬಿಡಬೇಕು. ಸ್ವಾಭಾವಿಕಧರ್ಮವನ್ನು ಬಿಟ್ಟಿದ್ದರಿಂದ ಬಂದಿರುವ ಪಾಪಗಳನ್ನು ಪ್ರಾಯಶ್ಚಿತ್ತಗಳಿಂದ ಪರಿಹರಿಸಿಕೊಂಡು ಶುದ್ಧನಾಗಬೇಕು. ಅನಂತರದಲ್ಲಿ ಸ್ವಧರ್ಮಗಳನ್ನು ಚೆನ್ನಾಗಿ ರಕ್ಷಿಸುತ್ತಾ ಬಂದರೆ ಸನ್ಯಾಸ ಮುಂತಾದ ಉತ್ತಮವಾದ ಆಶ್ರಮಗಳನ್ನು ಪಡೆಯಲು ಅರ್ಹನಾಗುವನು.

ಏವಂ ಶ್ರೀತುಲಸೀಂ ಪುಷ್ಪಂ ಸಮಾಹೃತ್ಯ ವಿಧಾನತಃ |
ಅಹ್ನೋಽಷ್ಟಧಾ ವಿಭಕ್ತಸ್ಯ ಭಾಗೇ ಚೈವ ತೃತೀಯಕೇ ||
ಪೋಷ್ಯವರ್ಗಾರ್ಥಸಿದ್ಧ್ಯರ್ಥಂ ಧನಮಿಚ್ಛೇತ ಬುದ್ಧಿಮಾನ್ |
ಮಾತಾ ಪಿತಾ ಗುರುರ್ಭಾರ್ಯಾ ಪ್ರಜಾ ದೀನಃ ಸಮಾಶ್ರಿತಃ ||
ಅಭ್ಯಾಗತೋಽತಿಥಿಶ್ಚಾಗ್ನಿಃ ಪೋಷ್ಯವರ್ಗ ಉದಾಹೃತಃ || (ಸಂಗ್ರಹ ವಚನ)

"ಸೂರ್ಯೋದಯವನ್ನು ಆರಂಭಿಸಿ ಸೂರ್ಯಾಸ್ತದವರೆಗಿನ ಕಾಲವು ಹಗಲೆನಿಸುತ್ತದೆ. ಈ ಹಗಲಿನ ಪ್ರಮಾಣವನ್ನು ತಿಳಿದು ಎಂಟರಿಂದ ಭಾಗಿಸಬೇಕು. ಬಂದ ಫಲವು ಹಗಲಿನ ಎಂಟನೆಯ ಭಾಗವೆನಿಸುತ್ತದೆ. ಸೂರ್ಯೋದಯವಾದ ಮೇಲೆ ಎರಡು

ಭಾಗಗಳು ಕಳೆದ ಮೇಲೆ ಸುಮಾರು ಹಗಲು 9 ಗಂಟೆಯಿಂದ 10½ ಗಂಟೆಗಳವರೆಗೆ ಮೂರನೆಯ ಭಾಗವು ಬರುತ್ತದೆ. ಈ ಮೂರನೆಯ ಭಾಗದಲ್ಲಿ ಪೋಷ್ಯಜನರನ್ನು ರಕ್ಷಿಸುವುದಕ್ಕಾಗಿ ಧನವನ್ನು ಸಂಗ್ರಹಿಸಬೇಕು. ತಾಯಿ, ತಂದೆ, ಗುರುಗಳು, ಹೆಂಡತಿ, ಮಕ್ಕಳು, ದೀನರಾಗಿರುವವರು, ತನ್ನನ್ನು ನಂಬಿದವರು, ಅತಿಥಿಗಳು, ಅಭ್ಯಾಗತರು, ಅಗ್ನಿ ಇಷ್ಟು ಜನರೂ ವಸ್ತುಗಳೂ ಪೋಷ್ಯವರ್ಗದಲ್ಲಿ ಅಂದರೆ ಅವಶ್ಯವಾಗಿ ರಕ್ಷಿಸಬೇಕಾದವರ ಗುಂಪಿನಲ್ಲಿ ಸೇರಿದವರು."

ಯಾತ್ರಾಮಾತ್ರಪ್ರಸಿದ್ಧ್ಯರ್ಥಂ ಸ್ವೈಃ ಕರ್ಮಭಿರಗರ್ಹಿತೈಃ |
ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಮ್ || (ಸಂಗ್ರಹ ವಚನ)

"ಪೋಷ್ಯವರ್ಗವನ್ನು ರಕ್ಷಿಸುವುದಕ್ಕಾಗಿ ಧನವನ್ನು ಸಂಗ್ರಹಿಸಬೇಕೆಂದು ಹೇಳಿದೆವು. ಪೋಷ್ಯವರ್ಗವನ್ನು ಬಿಟ್ಟಿರುವ ಯೋಗಿಯೂ ಕೂಡ ತನ್ನ ದೇಹವನ್ನು ಉಳಿಸಿಕೊಳ್ಳಲೇಬೇಕು. ದೇಹವನ್ನು ರಕ್ಷಿಸುವುದಕ್ಕೂ ಸಹ ಹಣದ ಅವಶ್ಯಕತೆ ಇದೆ. ಅವನೂ ಸಹ ಹಣವನ್ನು ಸಂಪಾದಿಸಲೇಬೇಕು. ಅವನಿಗೂ ಸ್ವಧರ್ಮಾನುಷ್ಠಾನವು ಇದ್ದೇ ಇದೆ. ಸ್ವಧರ್ಮವನ್ನು ಅನುಷ್ಠಿಸುತ್ತಾ ಅನಿಂದಿತವಾದ ಸ್ವಧರ್ಮಷ್ಠಾನದಿಂದಲೇ ಯಾವ ವಿಧವಾದ ಶರೀರಕ್ಲೇಶಗಳನ್ನೂ ಪಡೆಯದೆ ಹಣವನ್ನು ಸಂಪಾದಿಸಬೇಕು.

ಪ್ರತಿಗ್ರಹಂ ದ್ವಿಜೇಭ್ಯೋ ವೈ ಶ್ರೇಷ್ಠಂ ವಿಪ್ರಸ್ಯ ಶೋಭನಮ್ |
ವದಂತಿ ಮುನಯಃ ಸರ್ವೇ ತದಭಾವೇ ತ್ವನಂತರಮ್ ||
ವೈಷ್ಣವೇಭ್ಯೋ ನೃಪೇಭ್ಯಶ್ಚ ಸ್ವಯಮೇವಾರ್ಜಯೇನ್ನ ಹೀಮ್ || (ಸಂಗ್ರಹ ವಚನ)

"ಬ್ರಾಹ್ಮಣನು ಬ್ರಾಹ್ಮಣ, ಕ್ಷತ್ರಿಯ, ಮತ್ತು ವೈಶ್ಯರಿಂದ ಪ್ರತಿಗ್ರಹವನ್ನು ಮಾಡಬೇಕು. ಹೀಗೆ ಮಾಡುವ ಪ್ರತಿಗ್ರಹವು ಶ್ರೇಷ್ಠವೆನಿಸುತ್ತದೆ. ಈ ಪ್ರತಿಗ್ರಹವು ಸಾಧ್ಯವಾಗದಿದ್ದರೆ ರಾಜರ ಮತ್ತು ವಿಷ್ಣು ಭಕ್ತರ ಸಹಾಯದಿಂದಲೂ ಸ್ವಪ್ರಯತ್ನದಿಂದಲೂ ದ್ರವ್ಯವನ್ನು ಸಂಗ್ರಹಿಸಬೇಕು.

## ಕಲಿಯುಗ ಧರ್ಮಗಳು

ಅತಃ ಪರಂ ಗೃಹಸ್ಥಸ್ಯ ಕರ್ಮಾಚಾರಂ ಕಲೌ ಯುಗೇ |
ಧರ್ಮಂ ಸಾಧಾರಣಂ ಶಕ್ತ್ಯಾ ಚಾತುರ್ವರ್ಣ್ಯಾಶ್ರಮಾಗತಮ್ |
ತಂ ಪ್ರವಕ್ಷ್ಯಾಮ್ಯಹಂ ಪೂರ್ವಂ ಪರಾಶರವಚೋ ಯಥಾ ||
ಷಟ್ಕರ್ಮಸಹಿತೋ ವಿಪ್ರಃ ಕೃಷಿಕರ್ಮ ಸಮಾಚರೇತ್ ||
ಸ್ವಯಂ ಕೃಷ್ಟೇ ತಥಾ ಕ್ಷೇತ್ರೇ ಧಾನ್ಯೈಶ್ಚ ಸ್ವಯಮಾರ್ಜಿತೈಃ |
ನಿರ್ವಪೇತ್ಪಂಚಯಜ್ಞಾಂಸ್ತು ಕ್ರತುದೀಕ್ಷಾಂ ಚ ಕಾರಯೇತ್ ||
ಕ್ಷತ್ರಿಯೋಽಪಿ ಕೃಷಿಂ ಕುರ್ಯಾದ್ದ್ವಿಜಾನ್ ದೇವಾಂಶ್ಚ ಪೂಜಯೇತ್ |
ವೈಶ್ಯಃ ಶೂದ್ರಸ್ತಥಾ ಕುರ್ಯಾತ್ಕೃಷಿವಾಣಿಜ್ಯಶಿಲ್ಪಕಮ್ ||
ಚತುರ್ಣಾಮಪಿ ವರ್ಣಾನಾಮೇಷ ದರ್ಮಃ ಸನಾತನಃ ||

"ಇನ್ನು ಮುಂದೆ ಕಲಿಯುಗದಲ್ಲಿ ಗೃಹಸ್ಥನ ಧರ್ಮಗಳನ್ನು ತಿಳಿಸುತ್ತೇನೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಜಾತಿಗಳಲ್ಲಿ ಹುಟ್ಟಿದವರಿಗೂ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿಗಳಿಗೂ ಸಾಧಾರಣವಾಗಿರುವ ಧರ್ಮಗಳನ್ನೂ ಹೇಳುತ್ತೇನೆ. ಶಕ್ತ್ಯನುಸಾರವಾಗಿ ಎಲ್ಲರೂ ಮಾಡಬೇಕಾದ ಧರ್ಮಗಳನ್ನೂ ತಿಳಿಸುತ್ತೇನೆ. ಪರಾಶರರು ಈ ಧರ್ಮವನ್ನು ಚೆನ್ನಾಗಿ ತಿಳಿಸಿರುವರು. ಅವರ ಉಪದೇಶದಂತೆ ಎಲ್ಲವನ್ನೂ ತಿಳಿಸುವೆನು. ಬ್ರಾಹ್ಮಣನಿಗೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಎಂದು ಆರು ಕರ್ಮಗಳು ವಿಹಿತವಾಗಿವೆ. ಈ ಆರು ಕರ್ಮಗಳಲ್ಲಿ ಯಾಜನ,

ಅಧ್ಯಾಪನ, ಪ್ರತಿಗ್ರಹ ಎಂಬ ಮೂರು ಕರ್ಮಗಳು ಜೀವನೋಪಾಯಗಳೆನಿಸುತ್ತವೆ. ಕಲಿಯುಗದಲ್ಲಿ ಯಜ್ಞಾದಿ ಕರ್ಮಗಳನ್ನೂ ಅಧ್ಯಯನವನ್ನೂ ದಾನವನ್ನೂ ಮಾಡುವವರು ಅತ್ಯಂತವಿರಳರಾಗಿರುವರು. ಆದ್ದರಿಂದ ಯಾಜನ, ಅಧ್ಯಾಪನ, ಪ್ರತಿಗ್ರಹಗಳು ಹೆಚ್ಚಾಗಿ ನಡೆಯುವುದಿಲ್ಲ. ಆದ್ದರಿಂದಲೇ ಆ ಮೂರು ಜೀವನೋಪಾಯಗಳಿಂದ ಜೀವನವು ನಡೆಯುವುದು ಅಶಕ್ಯವಾಗುತ್ತದೆ. ಅದಕ್ಕಾಗಿ ಅವರುಗಳು ಈ ಆರು ಕರ್ಮಗಳ ಜೊತೆಯಲ್ಲಿ ಕೃಷಿಯನ್ನೂ ಮಾಡಬೇಕು. ಭೂಮಿಯನ್ನು ತಾವೇ ಉಳಬೇಕು. ಬೀಜಗಳನ್ನು ತಾವೇ ಬಿತ್ತಬೇಕು. ಕೊನೆಯವರೆಗೂ ಕೃಷಿಯನ್ನು ತಾವೇ ಮಾಡಬೇಕು. ಹೀಗೆ ಸ್ವಪ್ರಯತ್ನದಿಂದ ಸಂಪಾದಿಸಿದ ಧಾನ್ಯಗಳಿಂದ ಬ್ರಹ್ಮಯಜ್ಞ ಮುಂತಾದ ಪಂಚಯಜ್ಞಗಳನ್ನು ಮಾಡುತ್ತಾ ನಾನಾವಿಧವಾದ ಯಜ್ಞಗಳನ್ನು ಮಾಡುವುದಕ್ಕಾಗಿ ದೀಕ್ಷೆಯನ್ನು ಸ್ವೀಕರಿಸಬೇಕು. ಇದು ಬ್ರಾಹ್ಮಣನು ಮಾಡಬೇಕಾದ ಕೆಲಸ. ಕ್ಷತ್ರಿಯನೂ ಇದರಂತೆ ಕೃಷಿಯನ್ನು ಮಾಡಿ ದೇವತೆಗಳನ್ನು ಪೂಜಿಸಬೇಕು. ವೈಶ್ಯನೂ ಶೂದ್ರನೂ ಕೃಷಿಗಳನ್ನೂ ಅಂಗಡಿ ವ್ಯಾಪಾರವನ್ನೂ ನಾನಾವಿಧವಾದ ಕೈಗಾರಿಕೆ ಕೆಲಸಗಳನ್ನೂ ಮಾಡುತ್ತಾ ಜೀವಿಸಬೇಕು. ಹೀಗೆ ಬ್ರಾಹ್ಮಣ ಮುಂತಾದ ನಾಲ್ಕು ಜಾತಿಯವರು ಜೀವಿಸಬೇಕು. ಇದು ಎಲ್ಲಾ ಜಾತಿಯವರಿಗೂ ಕಲಿಯುಗದಲ್ಲಿ ಪರಂಪರೆಯಿಂದ ಬಂದಿರುವ ಧರ್ಮವೆನಿಸುತ್ತದೆ.

ಕುಸೂಲಕುಂಭೀಧಾನ್ಯೋ ವಾ ತ್ರ್ಯಾಹಿಕೋಽಶ್ವಸ್ತನೋಽಪಿ ವಾ |
ಜೀವೇದ್ವಾಽಥ ಶಿಲೋಂಽಛೇನ ಶ್ರೇಯಾನೇಷಾಂ ಪರಃ ಪರಃ ||

(1) ದೊಡ್ಡ ದೊಡ್ಡ ಕಣಜಗಳನ್ನು ಏರ್ಪಡಿಸಿ ಆ ಕಣಜಗಳಲ್ಲಿ ಧಾನ್ಯಗಳನ್ನು ಶೇಖರಿಸುವವನು "ಕುಸೂಲಧಾನ್ಯ" ನೆನಿಸುವನು. (2) ಮಡಿಕೆಗಳಲ್ಲಿ ಧಾನ್ಯವನ್ನು ತುಂಬಿಸಿ ಸಂಗ್ರಹಿಸುವವನು "ಕುಂಭೀಧಾನ್ಯ" ನೆನಿಸುವವನು. (3) ಮೂರು ದಿನಗಳಿಗೆ ಬೇಕಾದಷ್ಟೇ ಧಾನ್ಯಗಳನ್ನು ಸಂಗ್ರಹಿಸುವವನು "ತ್ರ್ಯಾಹಿಕ" ಎಂದೆನಿಸುವನು, (4) ಅಂದಂದಿಗೆ ಬೇಕಾದ ಧಾನ್ಯಗಳನ್ನು ಮಾತ್ರ ಸಂಗ್ರಹಿಸಿ ಮರುದಿನಕ್ಕೆ ಇಟ್ಟುಕೊಳ್ಳದವನು "ಅಶ್ವಸ್ತನ" ಎಂದೆನಿಸುವನು. (5) ಯಜಮಾನನು ಹೊಲವನ್ನು ಖಾಲಿ ಮಾಡಿಕೊಂಡು ಹೋಗುವಾಗ ಆ ಹೊಲದಲ್ಲಿ ಬಿದ್ದಿರುವ ಧಾನ್ಯಗಳ ಗೊಂಚಲುಗಳನ್ನು ಸಂಗ್ರಹಿಸಿ ಜೀವಿಸುವವನು "ಶಿಲ" ಎಂಬ ಜೀವನೋಪಾಯದಿಂದ ಜೀವಿಸುವವನು ಎಂದೆನಿಸುವನು. (6) ಅದೇ ಹೊಲದಲ್ಲೋ ಬೀದಿಗಳಲ್ಲೋ ಬಿದ್ದಿರುವ ಒಂದೊಂದು ಧಾನ್ಯಗಳ ಕಾಳುಗಳನ್ನು ಆರಿಸಿ ಜೀವಿಸುವವನು ಉಂಛವೃತ್ತಿಯಿಂದ ಜೀವಿಸುವವನು ಎಂದೆನಿಸುವನು. ಈ ಆರು ಜೀವನೋಪಾಯಗಳಲ್ಲಿ ಮೊದಲು ಮೊದಲಿನ ಜೀವನೋಪಾಯಗಳು ನಿಕೃಷ್ಟವೆಂದೂ ಅನಂತರದಲ್ಲಿ ಹೇಳಿರುವ ಜೀವನೋಪಾಯಗಳು ಉತ್ಕೃಷ್ಟವೆಂದೂ ತಿಳಿಯಬೇಕು.

ಜೀವೇದ್ಯಾಯಾವರೇಣೈವ ವಿಪ್ರಃ ಸರ್ವತ್ರ ಸರ್ವದಾ |
ವರ್ಜಯಿತ್ವೈವ ಪಾಷಂಡಾನ್ ಪತಿತಾಂಸ್ತ್ವಾನವೈದಿಕಾನ್ ||
ಋಷೀಣಾಮಪಿ ಜೀವೇತ ಸತಾಂ ಚಾನುಮತೇನ ವಾ |
ಆಪದ್ಯಪಿ ನ ಕುರ್ವೀತ ಸೇವಾಂ ವಾಣಿಜ್ಯಮೇವ ವಾ ||
ಅಸತ್ಪರಿಗ್ರಹಂ ಸ್ತೇಯಂ ತಥಾ ಧರ್ಮಸ್ಯ ವಿಕ್ರಯಮ್ |
ಧರ್ಮಶಾಸ್ತ್ರಂ ವಿದಿತ್ವಾ ಸದ್ವೃತ್ತ್ಯಾ ಜೀವೇತ ಧಾರ್ಮಿಕಃ ||
ಮಹಾಭಾಗವತೈರ್ದತ್ತಂ ಯತ್ಕಿಂಚಿನ್ಮಿಶ್ರಿತಂ ಭವೇತ್ |
ಅಸತಾಮಪಿ ಗೃಹ್ಣೀಯಾದ್ವಿಮಲಂ ತನ್ನ ಸಂಶಯಃ ||
ಪ್ರೀತಯೇ ವಾಸುದೇವಸ್ಯ ದತ್ತಂ ಯದಸತಾಮಪಿ |
ಮಹಾಭಾಗವತಸ್ಪರ್ಶಾತ್ತತ್ಸದಿತ್ಯುಚ್ಯತೇ ಬುಧೈಃ ||

ತಾಪಾದಿಪಂಚಸಂಸ್ಕಾರೀ ಪಂಚಕಾಲಪರಾಯಣಃ |
ಹರೇರನನ್ಯಶರಣೋ ಮಹಾಭಾಗವತಃ ಸ್ಮೃತಃ ||
ದತ್ತಂ ಭಾಗವತೈರ್ಗ್ರಾಹ್ಯಂ ಭಕ್ತ್ಯಾ ಕೇಶವತುಷ್ಟಯೇ |
ನಾಸ್ತಿ ದೋಷಃ ಶಚೀನಾಥ ಉಭಯೋಸ್ಸಾಧನಂ ಕಲೌ ||
ಯಕ್ಷರಾಕ್ಷಸಭೂತನಾಂ ತಾಮಸಾನಾಂ ದಿವೌಕಸಾಮ್ |
ತೇಷಾಂ ಯತ್ಪ್ರೀತಯೇ ದತ್ತಂ ತದಾ ತದಪಿ ವರ್ಜಯೇತ್ |
ಇತಿ ಪ್ರಯಾಗಮಹಾತ್ಮ್ಯೇ ವಾಸಿಷ್ಠೇ ನಾರದೇ ತಥಾ |
ಉಕ್ತಂ ಸರ್ವಂ ತತಃ ಸಮ್ಯಗ್ಜ್ಞಾತ್ವಾ ವೃತ್ತಿಂ ಪ್ರಕಲ್ಪಯೇತ್ ||

"ಒಂದೊಂದು ದಿನದಲ್ಲಿಯೂ ಕ್ಲಪ್ತವಾದ ಕೆಲವು ಮನೆಗಳಿಗೆ ಹೋಗಿ ಭಿಕ್ಷೆಯನ್ನು ಬೇಡುವುದು ಯಾಯಾವರ ವೃತ್ತಿಯೆನಿಸುತ್ತದೆ. ಈ ಯಾಯಾವರವೃತ್ತಿಯಿಂದ ಜೀವಿಸಬೇಕು. ಈ ಯಾಯಾವರವೃತ್ತಿಯಲ್ಲಿಯೂ ವೇದನಿಂದಕರು, ಪಾತಕಿಗಳು, ವೇದೋಕ್ತಕರ್ಮಗಳನ್ನು ಅನುಷ್ಠಿಸದಿರುವವರು ಮುಂತಾದವರ ಮನೆಗಳಿಗೆ ಹೋಗಕೂಡದು. ಋಷಿಗಳು ಮತ್ತು ಸಜ್ಜನರ ಮನೆಗಳಿಗೆ ಹೋಗಬೇಕು. ಋಷಿಗಳಿಗೂ ಸಜ್ಜನರಿಗೂ ಸಂಮತವಾದ ಮನೆಗಳಿಗೆ ಹೋಗಬೇಕು.

ಎಷ್ಟು ಕಷ್ಟ ಬಂದರೂ ಜೀವನಕ್ಕಾಗಿ ಹೀನರ ಸೇವೆಯನ್ನೂ ಅಂಗಡಿವ್ಯಾಪಾರವನ್ನೂ ಮಾಡಕೂಡದು. ಅಯೋಗ್ಯರಿಂದ ಪ್ರತಿಗ್ರಹವನ್ನೂ ಕಳ್ಳತನವನ್ನೂ ಹಣಕ್ಕಾಗಿ ಪುಣ್ಯಕಾರ್ಯಗಳನ್ನು ಮಾಡಿ ಆ ಪುಣ್ಯಕಾರ್ಯಗಳ ವಿಕ್ರಯವನ್ನೂ ಮಾಡಕೂಡದು. ಧರ್ಮಶಾಸ್ತ್ರಗಳಲ್ಲಿ ಹೇಳಿರುವ ಜೀವನೋಪಾಯಗಳೇ ಸದ್ವೃತ್ತಿಯೆನಿಸುತ್ತವೆ. ಆ ಸದ್ವೃತ್ತಿಯಿಂದ ಜೀವಿಸಬೇಕು.

ಅಯೋಗ್ಯರಿಂದ ದಾನವನ್ನು ತೆಗೆದುಕೊಂಡಿದ್ದರೂ ಆ ವಸ್ತುಗಳ ಜೊತೆಯಲ್ಲಿ ಮಹಾಭಗವದ್ಭಕ್ತರಿಂದ ಭಿಕ್ಷೆಬೇಡಿ ತಂದಿರುವ ಸ್ವಲ್ಪವಸ್ತುಗಳನ್ನು ಮಿಶ್ರಣಮಾಡಬೇಕು. ಹಾಗೆ ಮಾಡಿದರೆ ಅಯೋಗ್ಯರಿಂದ ತಂದ ವಸ್ತುಗಳೂ ಪರಿಶುದ್ಧವಾಗುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ. ಅಯೋಗ್ಯರಿಂದ ಭಿಕ್ಷೆ ಬೇಡಿ ತಂದಿರುವ ವಸ್ತುಗಳನ್ನು ಮಹಾಭಗವದ್ಭಕ್ತರ ಕೈಯಿಂದ ಮುಟ್ಟಿಸಬೇಕು. ಮತ್ತು ಶ್ರೀಹರಿಯ ಪ್ರೀತಿಗಾಗಿ ಶ್ರೀಹರಿಗೆ ಸಮರ್ಪಿಸಬೇಕು. ಇದರಿಂದ ಅಯೋಗ್ಯರ ದ್ರವ್ಯಗಳೂ ಪರಿಶುದ್ಧವಾಗುತ್ತವೆ.

ಬಿಸಿಲುಕಾಲದಲ್ಲಿ ಹಗಲಿನಲ್ಲಿ ಬೆಳಗಿನಿಂದ ಸಾಯಂಕಾಲದವರೆಗೆ ಬಿಸಿಲಿನಲ್ಲಿ ನಾಲ್ಕು ದಿಕ್ಕುಗಳಲ್ಲಿ ಬೆಂಕಿಯನ್ನಿಟ್ಟುಕೊಂಡು ತಪಸ್ಸನ್ನು ಮಾಡುವವನು ತಾಪಪಂಚಸಂಸ್ಕಾರವುಳ್ಳವನೆಸುವನು. ಸೂರ್ಯೋದಯಕ್ಕಿಂತ ಪೂರ್ವದಲ್ಲಿಯೂ ಸೂರ್ಯಾಸ್ತಮನಾನಂತರದಲ್ಲಿಯೂ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಎಂಬ ಮೂರು ಕಾಲಗಳಲ್ಲಿಯೂ ಎಡೆಬಿಡದೆ ಶ್ರೀಹರಿಯನ್ನು ಆರಾಧಿಸುತ್ತಿರುವವನು ಪಂಚಕಾಲಪರಾಯಣನೆನಿಸುವನು. ಶ್ರೀಹರಿಯನ್ನು ಬಿಟ್ಟು ಬೇರೆ ಯಾರೂ ತನಗೆ ಗತಿಯಿಲ್ಲ ಎಂದು ನಂಬಿದವನು ಅನನ್ಯಶರಣನೆನಿಸುವನು. ಪಂಚತಾಪ ಮುಂತಾದ ತಾಪಗಳಿಂದ ಯುಕ್ತನಾಗಿರುವವನೂ ಪಂಚಕಾಲಪರಾಯಣನೂ ಅನನ್ಯಶರಣನೂ ಮಹಾಭಾಗವತನೆನಿಸುವನು. ಇಂತಹ ಮಹಾಭಾಗವತರ ಮನೆಯಲ್ಲಿ ಭಿಕ್ಷೆಯನ್ನು ಬೇಡಬೇಕು. ಭಾಗವತರೂ ಸಹ ಶ್ರೀಹರಿಯಲ್ಲಿ ತಮಗಿರುವ ಅಪಾರಭಕ್ತಿಯಿಂದ ಶ್ರೀಹರಿಯು ಪ್ರೀತನಾಗಲಿ ಎಂಬ ಸದುದ್ದೇಶದಿಂದ ಭಿಕ್ಷೆಯನ್ನು ನೀಡಬೇಕು. ಈ ಭಿಕ್ಷಾದ್ರವ್ಯವು ಕಲಿಕಾಲದಲ್ಲಿ ಈ ಲೋಕದಲ್ಲಿ ಜೀವನಕ್ಕೂ ಪರಲೋಕದಲ್ಲಿ ಮುಕ್ತಿಗೂ ಸಾಧಕವಾಗುತ್ತದೆ. ಅವರಲ್ಲಿ ಭಿಕ್ಷೆ ಬೇಡಿ ಸಂಗ್ರಹಿಸಿದ ವಸ್ತುಗಳಿಂದ ಯಾವ ಹಾನಿಯೂ ಏರ್ಪಡಲಾರದು.

ಯಕ್ಷರು, ರಾಕ್ಷಸರು, ಭೂತಗಳು, ಮುಂತಾದವರು ಅಯೋಗ್ಯರೆನಿಸುವರು. ಉಚ್ಛಿಷ್ಟಗಣಪತಿ ಮುಂತಾದ ದೇವತೆಗಳು ತಾಮಸರಾದುದರಿಂದ ಅಯೋಗ್ಯರೆನಿಸುವರು. ಈ ಅಯೋಗ್ಯರ ಪ್ರೀತಿಗಾಗಿ ಕೊಟ್ಟ ವಸ್ತುವಿನ ಪ್ರತಿಗ್ರಹವನ್ನು ಮಾಡಕೂಡದು.

ಹಾಗೆ ಮಾಡಿದರೂ ಹಿಂದೆ ಹೇಳಿದಂತೆ ಭಾಗವತರಿಂದ ಬೇಡಿ ತಂದಿರುವ ವಸ್ತುಗಳನ್ನು ಮಿಶ್ರಣ ಮಾಡಿ ದಾನಮಾಡಬೇಕು. ಹಾಗೆ ಮಾಡಿದಾಗ ಅಯೋಗ್ಯರಾದ ಜೀವರು ಆ ಭಾಗಗಳನ್ನು ಪಡೆಯದಂತಾಗುತ್ತದೆ. ಸಜ್ಜೀವರಾದ ದೇವತೆಗಳಿಗೆಯೇ ಆ ಭಾಗವು ಹೋಗಿ ಸೇರುತ್ತದೆ. ಅದರಿಂದ ನಮಗೆ ಯಾವ ವಿಧವಾದ ಹಾನಿಯೂ ಏರ್ಪಡಲಾರದು. ಈ ವಿಷಯವು ಪ್ರಯಾಗಮಹಾತ್ಮ್ಯದಲ್ಲಿಯೂ ವಸಿಷ್ಠಪುರಾಣದಲ್ಲಿಯೂ ನಾರದಪುರಾಣದಲ್ಲಿಯೂ ವಿವರವಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಆ ಗ್ರಂಥಗಳಿಂದ ಎಲ್ಲಾ ವಿಷಯಗಳನ್ನೂ ಚೆನ್ನಾಗಿ ತಿಳಿದು ಜೀವನೋಪಾಯವನ್ನು ಮಾಡಬೇಕು."

ಯಥಾಲಬ್ಧೇನ ವರ್ತೇತ ಭಿಕ್ಷಯಾ ವಾ ದ್ವಿಜೋತ್ತಮಃ |
ಶಿಷ್ಯಯಾಜ್ಯೋಪಲಬ್ಧೈರ್ವಾ ಮಹಾಪದಿ ವಿಶಾಂ ತು ವಾ ||

(1) ಪ್ರಯತ್ನವಿಲ್ಲದೆ ತಾನಾಗಿಯೇ ಸಿಕ್ಕಿದ ವಸ್ತುಗಳಿಂದ ಜೀವಿಸಬೇಕು. (2) ಭಿಕ್ಷೆಯಿಂದಲಾದರೂ ಜೀವಿಸಬೇಕು. (3) ಶಿಷ್ಯರು ಕೊಟ್ಟಿರುವ ಹಣದಿಂದ ಜೀವಿಸಬೇಕು. (4) ಶಿಷ್ಯರ ಮೂಲಕವಾಗಿ ಯಜ್ಞ ಮುಂತಾದ ಪುಣ್ಯ ಕಾರ್ಯಗಳನ್ನು ಮಾಡಿಸಿ ಅದಕ್ಕಾಗಿ ಅವರು ಕೊಡುವ ಸಂಭಾವನಾದ್ರವ್ಯದಿಂದಲಾದರೂ ಜೀವಿಸಬೇಕು. ಯಾವ ಮಾರ್ಗದಿಂದಲೂ ಜೀವನವು ನಡೆಯದಿರುವ ಕಾಲವು ಮಹಾಆಪತ್ತಿನ ಕಾಲವೆನಿಸುತ್ತದೆ. ಆ ಆಪತ್ತಿನ ಕಾಲದಲ್ಲಿ ವೈಶ್ಯರಿಗೆ ಹೇಳಿರುವ ಕೃಷಿ ಮುಂತಾದವುಗಳಿಂದ ಜೀವಿಸಬೇಕು.

ನಾನ್ಯಾಯವೃತ್ತ್ಯಾ ಜೀವೇತ ಪರಮಾಪದ್ಗತೋಽಪಿ ವಾ |

"ಅತಿಪ್ರಬಲವಾದ ಆಪತ್ತು ಬಂದಿದ್ದರೂ ಅನ್ಯಾಯಮಾರ್ಗದಿಂದ ಜೀವಿಸಕೂಡದು"

ಪಾಷಂಡಾಃ ಪತಿತಾಃ ಪಾಪಾಸ್ತಥೈವ ಪ್ರತಿಲೋಮಜಾಃ |
ಕುಲಟಾಶ್ಚ ವಿಕರ್ಮಸ್ಥಾ ಅಸಂತಃ ಪರಿಕೀರ್ತಿತಾಃ ||
ಪಾಷಂಡಪತಿತಾದಿಭ್ಯಃ ಕದಾಚಿನ್ನೈವ ಯಾಚಯೇತ್ |

ವೇದಗಳನ್ನು ನಿಂದಿಸುವವರು ಪಾಷಂಡರೆನಿಸುವರು. ಉತ್ತಮವಾದ ಜಾತಿಯಲ್ಲಿ ಹುಟ್ಟಿ ಹೀನವಾದ ಕಾರ್ಯಗಳನ್ನು ಮಾಡುವವರು ಪತಿತರೆನಿಸುವರು. ಪಾಪಕಾರ್ಯಗಳನ್ನು ಯಾವಾಗಲೂ ಮಾಡುತ್ತಿರುವವರು ಪಾಪ ಎಂದೆನಿಸುವರು. ಉತ್ತಮಜಾತಿಯ ಸ್ತ್ರೀಯರಲ್ಲಿ ಹೀನಜಾತಿಯ ಪುರುಷನಿಂದ ಹುಟ್ಟಿದವರು ಪ್ರತಿಲೋಮಜ ಎಂದೆನಿಸುವರು. ವ್ಯಭಿಚಾರಿಣಿಸ್ತ್ರೀಯರು ಕುಲಟೆಯರೆಂದೆನಿಸುವರು. ಶಾಸ್ತ್ರನಿಷಿದ್ಧವಾದ ಕಾರ್ಯಗಳನ್ನೇ ಯಾವಾಗಲೂ ಮಾಡುತ್ತಿರುವವರು ವಿಕರ್ಮಸ್ಥರೆನಿಸುವರು. ಈ ಪಾಷಂಡ ಮುಂತಾದವರಿಂದ ಯಾವ ವಸ್ತುವನ್ನೂ ಬೇಡಿ ತೆಗೆದುಕೊಳ್ಳಬಾರದು.

ಮುಷ್ಟಿಮಾತ್ರಮಥಾಮಂ ವಾ ಯಾಚಯೇತ್ತು ಗೃಹೇ ಗೃಹೇ |
ತದಭಾವೇ ಶಿಲೋಂಛೇನ ಜೀವೇಚ್ಛಕ್ತೋ ದ್ವಿಜೋತ್ತಮಃ ||

"ಬ್ರಾಹ್ಮಣಶ್ರೇಷ್ಠನು ಒಂದೊಂದು ಮನೆಗೂ ಹೋಗಿ ಒಂದು ಮುಷ್ಟಿಯಷ್ಟೇ ಬೇಯಿಸಿದ ಅನ್ನವನ್ನಾಗಲೀ ಅಕ್ಕಿ ಮುಂತಾದ ಹಸಿಧಾನ್ಯಗಳನ್ನಾಗಲೀ ಬೇಡಿ ತೆಗೆದುಕೊಳ್ಳಬೇಕು. ಅದು ಸಾಧ್ಯವಾಗದಿದ್ದರೆ ಹಿಂದೆ ಹೇಳಿರುವ ಶಿಲ ಎಂಬ ವೃತ್ತಿಯಿಂದಲಾಗಲೀ ಉಂಛ ಎಂಬ ವೃತ್ತಿಯಿಂದಲಾಗಲೀ ಜೀವಿಸಬೇಕು. ಶಕ್ತನಾದವನು ಈ ರೀತಿಯಲ್ಲಿ ನಡೆದುಕೊಳ್ಳಬೇಕು. ಶಕ್ತಿಯಿಲ್ಲದವನು ಹಿಂದೆ ಹೇಳಿರುವ ಕೃಷಿ ಮುಂತಾದ ಉಪಾಯಗಳಿಂದ ಜೀವಿಸಬೇಕು."

ಕನ್ಯಾಂ ಪುತ್ರಂ ಚ ದಾಸೀಂ ಚ ಶಿಷ್ಯಂ ಗಾಂ ಮಹಿಷೀಂ ತಥಾ |
ಅಜಂ ಖರಂ ತಥಾನ್ಯಚ್ಚ ಧನಂ ಯಜ್ಜೀವಸಂಜ್ಞಿತಮ್ ||
ಕ್ಷೀರಂ ದಧಿ ಘೃತಂ ತೈಲಂ ಗುಡಂ ಕ್ರಮುಕಮೇವ ಚ |

ಕಂಬಲಂ ವಸನಂ ಕ್ಷೌದ್ರಂ ಲವಣಾದಿ ಚ ಯದ್ಧನಮ್ |
ಏವಮಾದಿಕ್ರಯಾದ್ವಿಪ್ರಃ ಪತಿತೋ ನಾತ್ರ ಸಂಶಯಃ ||

"ಕನ್ಯೆ, ಮಗ, ದಾಸಿಯರು, ಶಿಷ್ಯ, ಆಕಳು, ಎಮ್ಮೆ, ಆಡು, ಕತ್ತೆ, ಮುಂತಾದ ಎಲ್ಲಾ ಜೀವರೆಂಬ ಧನವನ್ನೂ ಹಾಲು, ಮೊಸರು ತುಪ್ಪ, ಎಣ್ಣೆ, ಬೆಲ್ಲ, ಅಡಿಕೆ, ಕಂಬಳಿ, ವಸ್ತ್ರ, ಜೇನುತುಪ್ಪ, ಉಪ್ಪು ಮುಂತಾದ ಜಡವಸ್ತುಗಳೆಂಬ ಧನಗಳನ್ನೂ ಮಾರುವ ಬ್ರಾಹ್ಮಣನು ಪತಿತನಾಗುವನು. ಈ ವಿಷಯದಲ್ಲಿ ಸಂಶಯವು ಬೇಡ."

ವಿದ್ಯಮಾನೇ ಧನೇ ಯೋ ವೈ ಯಾಚನಾರ್ಥಂ ಪ್ರವರ್ತತೇ |
ಸ ಸ್ತೇನೋ ದಸ್ಯುವದ್ದಂಡ್ಯೋ ನಾತ್ರ ಕಾರ್ಯಾ ವಿಚಾರಣಾ ||

"ಹಣವು ಇರುವಾಗ ಹಣವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಭಿಕ್ಷೆಯನ್ನು ಬೇಡುವವನು ಕಳ್ಳನೆನಿಸುವನು. ಕಳ್ಳನನ್ನು ಶಿಕ್ಷಿಸಿದಂತೆ ಅವನನ್ನು ಶಿಕ್ಷಿಸಬೇಕು. ಈ ವಿಷಯದಲ್ಲಿ ಯಾವ ವಿಧವಾದ ವಿಚಾರವನ್ನೂ ಮಾಡಬೇಕಾಗಿಲ್ಲ."

ಸ್ಥಿತ್ಯರ್ಥಾದಧಿಕಂ ಗೃಹ್ಣನ್ ಬ್ರಾಹ್ಮಣೋ ಯಾತ್ಯಧೋಗತಿಮ್ |
ವೃತ್ತಿಸಂಕೋಚಮನ್ವಿಚ್ಛನ್ನ ಲಭೇದ್ಧನವಿಸ್ತೃತಿಮ್ ||

"ಆದಷ್ಟು ಖರ್ಚನ್ನು ಕಮ್ಮಿ ಮಾಡಿಕೊಂಡು ಜೀವಿಸಬೇಕು. ಹಣವನ್ನು ಹೆಚ್ಚಾಗಿ ಸಂಪಾದಿಸಕೂಡದು. ಜೀವನಕ್ಕೆ ಬೇಕಾದಷ್ಟು ಹಣಕ್ಕಿಂತ ಅಧಿಕವಾದ ಹಣವನ್ನು ಬಯಸುವವನು ಅಧೋಗತಿಯನ್ನು ಪಡೆಯುವನು."

ಅತ್ಯುಷ್ಣಾತ್ಸಘೃತಾದನ್ನಾದಚ್ಛಿದ್ರಾಚ್ಚೈವ ವಾಸಸಃ |
ಅಪರಪ್ರೇಷ್ಯಭಾವಾಚ್ಚ ಭೂಯ ಇಚ್ಛನ್ ಪತತ್ಯಧಃ ||

"ಊಟಮಾಡುವ ಅನ್ನವು ಬಿಸಿಯಾಗಿಯೂ ತುಪ್ಪದಿಂದ ಮಿಶ್ರಿತವಾಗಿಯೂ ಇದ್ದರೆ ಸಾಕು. ಉಟ್ಟುಕೊಳ್ಳುವ ಬಟ್ಟೆಯು ಹರಿದು ಹೋಗಿದ್ದಾಗದಿದ್ದರೆ ಸಾಕು. ಇನ್ನೊಬ್ಬನನ್ನು ಸೇವಿಸದಿರುವ ಜನ್ಮವು ಶ್ರೇಷ್ಠವೆನಿಸುತ್ತದೆ. ಅನ್ನವೂ ಬಟ್ಟೆಯೂ ಹಿಂದೆ ಹೇಳಿದ ರೀತಿಯಿಂದಿದ್ದು ಇನ್ನೊಬ್ಬನನ್ನು ಸೇವಿಸುವ ದೌರ್ಭಾಗ್ಯವಿಲ್ಲದಿರುವವನು ಭಾಗ್ಯಶಾಲಿಯೆನಿಸುವನು. ಇದಕ್ಕಿಂತಲೂ ಅಧಿಕವಾದ ಹಣವನ್ನು ಬಯಸುವವನು ಅಧೋಗತಿಯನ್ನು ಪಡೆಯುವನು."

ಸರ್ವೇಷಾಮಪ್ಯಲಾಭೇ ತು ವನೇ ಶಾಕಾದಿಕಂ ಹರೇತ್ |
ಶಾಕಮೂಲಫಲೈರ್ವಾಪಿ ಜೀವೇತ್ಸಮ್ಯಕ್ಪತೋಷಿತಃ ||
ಏವಂ ದ್ರವ್ಯಾರ್ಜನಂ ಶಕ್ತ್ಯಾ ಕೃತ್ವಾ ಚ ಪ್ರತ್ಯಹಂ ಗೃಹೀ |
ಸ್ನಾತ್ವಾ ಸಂಪೂಜಯೇದ್ವಿಷ್ಣುಂ ವೇದತಂತ್ರೋಕ್ತಮಾರ್ಗತಃ ||
ಏವಂ ವೃತ್ತ್ಯಾದಿನಾನೀತದೇವೇಜ್ಯಾಸಾಧನಾದಿಭಿಃ |

"ಮೇಲ್ಕಂಡ ವಿಧದಿಂದ ಭಿಕ್ಷೆಯಿಂದಲೂ ಜೀವಿಸಲು ಸಾಧ್ಯವಾಗದಿದ್ದಲ್ಲಿ ಕಾಡಿಗೆ ಹೋಗಬೇಕು. ಅಲ್ಲಿರುವ ಎಲೆ, ತರಕಾರಿಗಳು, ಗೆಡ್ಡೆಗಳು ಮತ್ತು ಹಣ್ಣುಗಳಿಂದ ಜೀವಿಸಬೇಕು."

ಮೇಲ್ಕಂಡ ಜೀವನೋಪಾಯಗಳಿಂದ ಆಯಾ ದಿನಗಳಲ್ಲಿ ಆಹಾರಕ್ಕೆ ಬೇಕಾದ ವಸ್ತುಗಳನ್ನೂ ಹಣವನ್ನೂ ಸಂಪಾದಿಸಬೇಕು. ವೇದಗಳಲ್ಲಿಯೂ ಪಂಚರಾತ್ರಾಗಮ ಮುಂತಾದ ಆಗಮಗಳಲ್ಲಿಯೂ ಹೇಳಿರುವ ವಿಧಿಯಿಂದ ಶ್ರೀಹರಿಯನ್ನು ಪೂಜಿಸಬೇಕು. ಈ ಪೂಜೆಗೂ ಬೇಕಾದ ವಸ್ತುಗಳನ್ನು ತನ್ನ ವೃತ್ತಿಯಿಂದ ಸಂಪಾದಿಸಿದ ದ್ರವ್ಯಗಳಿಂದಲೇ ಸಂಪಾದಿಸಬೇಕು. ಬೇರೆ ವಿಧದಿಂದ ಸಂಪಾದಿಸಿದ ಹಣದಿಂದ ಸಂಗ್ರಹಿಸಕೂಡದು.

## ಸ್ತ್ರೀಧರ್ಮ

ಧರ್ಮಪತ್ನೀ ಪ್ರಕುರ್ವೀತ ಸಂಶೋಧ್ಯ ಪಚನಕ್ರಿಯಾಮ್ |
ವಿಷ್ಣೋರ್ನಿವೇದನಾರ್ಥಾಯ ಶುಚಿರ್ನಿಯತಮಾನಸಾ ||

ಧರ್ಮಪತ್ನಿಯಾದವಳು ಪಾತ್ರೆಗಳನ್ನೆಲ್ಲಾ ತೊಳೆದುಕೊಳ್ಳಬೇಕು. ಸ್ನಾನಾದಿಗಳಿಂದ ಶುದ್ಧಳಾಗಬೇಕು. ಶುದ್ಧವಾದ ಮನಸ್ಸಿನಿಂದ ಶ್ರೀಹರಿಗೆ ನೈವೇದ್ಯಮಾಡುವುದಕ್ಕಾಗಿ ಅಡಿಗೆಯನ್ನು ಮಾಡಬೇಕು.

ಪ್ರಸಂಗಾದುಚ್ಯತೇ ಧರ್ಮಃ ಸ್ತ್ರೀಣಾಂ ವೃತ್ತಿರ್ದಿನೇ ದಿನೇ |
ಅಧುನಾ ಚ ಪ್ರವಕ್ಷ್ಯಾಮಿ ವೃತ್ತಿಮೇಕಾಂತಲಕ್ಷಣಾಮ್ ||
ನಾರೀಣಾಮಪಿ ಕರ್ತವ್ಯಾಮಹನ್ಯಹನಿ ಶಾಶ್ವತೀಮ್ ||

"ಸ್ತ್ರೀಯರು ಅಡಿಗೆಯನ್ನು ಮಾಡಬೇಕೆಂದು ಹೇಳುತ್ತಿರುವಾಗ ಸ್ತ್ರೀಯರ ಧರ್ಮಗಳ ಸ್ಮರಣೆಯು ಏರ್ಪಟ್ಟಿತು. ಆದ್ದರಿಂದ ಸ್ತ್ರೀಯರ ಧರ್ಮಗಳನ್ನು ಹೇಳುವೆನು. ಸ್ತ್ರೀಯರು ಒಂದೊಂದು ದಿನದಲ್ಲಿ ಜೀವಿಸುವ ಕ್ರಮವನ್ನು ಹೇಳುವೆನು. ಈ ಕ್ರಮವು ಅನಾದಿಕಾಲದಿಂದ ಬಂದಿರುವ ಕ್ರಮವಾಗಿದೆ."

### ಬೆಳಿಗ್ಗೆ ಎದ್ದ ಕೂಡಲೇ ಸ್ತ್ರೀಯರು ಮಾಡಬೇಕಾದ ಕೆಲಸ

ಉತ್ಥಾಯ ಪಶ್ಚಿಮೇ ಯಾಮೇ ಭರ್ತುಃ ಪೂರ್ವಮತಂದ್ರಿತಾ |
ಕೃತ್ವಾ ಶೌಚಂ ವಿಧಾನೇನ ದಂತಧಾವನಮಾಚರೇತ್ ||
ಸ್ನಾತ್ವಾಽಥ ಮಂಗಲಸ್ನಾನಮಾಕಂಠಂ (ಸಕಚ್ಛಾ) ಶುಚಿವಸ್ತ್ರಧೃಕ್ |
ಆಚಮ್ಯ ಧಾರಯೇತ್ಪೂರ್ವಮೂರ್ಧ್ವಪುಂಡ್ರಂ ಮೃದೈವ ತು ||
ಚಂದನೇನಾಪಿ ಕಸ್ತೂರ್ಯಾ ಕುಂಕುಮೇನಾಪಿ ವೈ ಸತೀ |
ಕೃತ್ವಾ ಗುರುನಮಸ್ಕಾರಮಭಿವಂದ್ಯ ಚ ವೈಷ್ಣವಾನ್ ||
ನಮಸ್ಕೃತ್ವಾ ಜಗನ್ನಾಥಂ ಜಪ್ತ್ವಾಽಥ ಶರಣಾಗತಿಮ್ |
ಆತ್ಮಾನಂ ಸಮಲಂಕೃತ್ಯ ಚಿಂತಯೇನ್ಮಧುಸೂದನಮ್ ||

"ಸೂರ್ಯಾಸ್ತಮಾನದಿಂದ ಮರುದಿನ ಸೂರ್ಯೋದಯದವರೆಗಿನ ಕಾಲವು ರಾತ್ರಿಕಾಲವೆನಿಸುತ್ತದೆ. ಈ ರಾತ್ರಿಯ ಪ್ರಮಾಣವನ್ನು ತಿಳಿದು ಅದನ್ನು ನಾಲ್ಕರಿಂದ ಭಾಗಿಸಬೇಕು. ಇದು ರಾತ್ರಿಕಾಲದಲ್ಲಿ ನಾಲ್ಕು ಯಾಮಗಳೆನಿಸುತ್ತವೆ. ಈ ನಾಲ್ಕು ಯಾಮಗಳ ಮಧ್ಯದಲ್ಲಿ ನಾಲ್ಕನೆಯ ಯಾಮವು ಅಂದರೆ ಸುಮಾರು ರಾತ್ರಿಯಲ್ಲಿ 3 ಗಂಟೆಗಳ ಮೇಲೆ 6 ಗಂಟೆಗಳವರೆಗಿನ ಕಾಲವು ನಿದ್ದೆಯಿಂದ ಏಳುವುದಕ್ಕೆ ಯೋಗ್ಯವಾದ ಕಾಲವೆನಿಸುತ್ತದೆ. ಈ ನಾಲ್ಕನೆಯ ಯಾಮದಲ್ಲಿ ಗಂಡನು ಏಳುವುದಕ್ಕಿಂತ ಪೂರ್ವದಲ್ಲಿಯೇ ಹೆಂಡತಿಯು ಏಳಬೇಕು. ಏಳುವಾಗ ಯಾವ ಕೆಲಸವನ್ನು ಮಾಡುವ ವಿಷಯದಲ್ಲಿಯೂ ಸೋಮಾರಿಯಾಗಿರಬಾರದು. ಲವಲವಿಕೆಯಿಂದ ಯುಕ್ತಳಾಗಿ ಉತ್ಸಾಹದಿಂದ ಎಲ್ಲಾ ಕಾರ್ಯಗಳನ್ನೂ ಮಾಡುವುದಕ್ಕೆ ಸಿದ್ಧಳಾಗಿರಬೇಕು."

ಎದ್ದವಳು ಮಲಮೂತ್ರವಿಸರ್ಜನೆಗಳನ್ನು ಶಾಸ್ತ್ರೋಕ್ತವಿಧಿಪ್ರಕಾರವಾಗಿ ಮಾಡಬೇಕು. ದಂತಧಾವನ ಅಂದರೆ ಹಲ್ಲುಗಳ ಶುದ್ಧಿಯನ್ನು ಮಾಡಬೇಕು. ಅನಂತರದಲ್ಲಿ ಕುತ್ತಿಗೆವರೆಗೆ ಮುಳುಗಿ ಸ್ನಾನವನ್ನು ಮಾಡಬೇಕು. ಸುಮಂಗಲಿಯರಿಗೆ ಕಂಠಸ್ನಾನವೇ ಮಂಗಲಸ್ನಾನವೆನಿಸುತ್ತದೆ. ತಲೆಯನ್ನು ಮುಳುಗಿಸಿ ಸ್ನಾನವನ್ನು ಮಾಡಬಾರದು. ಈ ರೀತಿಯಾಗಿ ಶಿರಸ್ನಾನವನ್ನು ಸಮುದ್ರಸ್ನಾನ ಮುಂತಾದ ವಿಶೇಷಸ್ನಾನಕಾಲಗಳಲ್ಲಿಯೂ ಆಶೌಚ ಮುಂತಾದ ಕಾಲಗಳಲ್ಲಿಯೂ ಮಾಡಬೇಕು. ಸ್ನಾನವನ್ನು ಮಾಡಿ ಮುಗಿಸಿದ

ಕೂಡಲೇ ಮಡಿವಸ್ತ್ರಗಳನ್ನು ಉಟ್ಟುಕೊಳ್ಳಬೇಕು. ಕಚ್ಚೆಯನ್ನು ಹಾಕಿಕೊಂಡೇ ಯಾವಾಗಲೂ ಸೀರೆಗಳನ್ನು ಉಟ್ಟುಕೊಳ್ಳಬೇಕು. ಕಚ್ಚೆಯಿಲ್ಲದಿರಬಾರದು."

ಅನಂತರದಲ್ಲಿ ಆಚಮನವನ್ನು ಮಾಡಿಕೊಳ್ಳಬೇಕು. ಮೊದಲು ಗೋಪೀಚಂದನ ಮುಂತಾದ ಪವಿತ್ರವಾದ ಮೃತ್ತಿಕೆಗಳಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಊರ್ಧ್ವಪುಂಡ್ರದ ಮಧ್ಯದಲ್ಲಿ ಗಂಧ ಅಥವಾ ಕಸ್ತೂರಿ ಅಥವಾ ಕುಂಕುಮಗಳಿಂದ ತಿಲಕವನ್ನು ಧರಿಸಬೇಕು. ಅನಂತರದಲ್ಲಿ ಗುರುಮಂತ್ರಗಳನ್ನು ಜಪಿಸಬೇಕು. ಗುರುಗಳನ್ನೂ ವಿಷ್ಣು ಭಕ್ತರನ್ನೂ ನಮಸ್ಕರಿಸಬೇಕು. ಜಗನ್ನಾಥನಾದ ಶ್ರೀಹರಿಯನ್ನು ನಮಸ್ಕರಿಸಬೇಕು. ಉಪದೇಶವಿದ್ದವರು ಶ್ರೀಕೃಷ್ಣ ಮಂತ್ರ ಮುಂತಾದ ಮಂತ್ರಗಳನ್ನು ಜಪಿಸಬೇಕು. ಶ್ರೀಹರಿಯೇ ತನಗೂ ತನ್ನ ಪತಿಗೂ ಪುತ್ರರು ಮುಂತಾದವರಿಗೂ ಗತಿಯೆಂದು ಹೇಳುತ್ತಾ ಶರಣಾಗತಿಯನ್ನು ಹೊಂದಬೇಕು. ನಾನಾವಿಧವಾದ ಅಲಂಕಾರದ್ರವ್ಯಗಳಿಂದ ತನ್ನನ್ನು ಅಲಂಕರಿಸಿಕೊಳ್ಳಬೇಕು. ಮಧುಸೂದನನಾಮಕನಾದ ಶ್ರೀಹರಿಯು ತನ್ನ ದೇಹದಲ್ಲಿ ಯಾವಾಗಲೂ ವಾಸಿಸುತ್ತಿರುವುದಾಗಿಯೂ ಈ ಅಲಂಕಾರಗಳೆಲ್ಲವೂ ಅವನಿಗಾಗಿ ಮಾಡುವ ಅಲಂಕಾರಗಳೆಂದೂ ಭಾವಿಸಬೇಕು."

### ಮನೆಯನ್ನು ಶುದ್ಧವಾಗಿಟ್ಟಿರಬೇಕು

ಗೃಹಭಾಂಡಾದಿಕಂ ಸರ್ವಂ ವಾಗ್ಯತಾ ನಿಯತೇಂದ್ರಿಯಾ |
ಸಂಶೋಧಯೇತ್ಪ್ರತಿದಿನಂ ಪೂಜಾರ್ಥಂ ಪರಮಾತ್ಮನಃ ||
ಮಾರ್ಜಯಿತ್ವಾ ಗೃಹಂ ಪಶ್ಚಾದ್ಗೋಮಯೇನೋಪಲಿಪ್ಯ ಚ |
ರಂಗವಲ್ಯಾದಿಭಿಃ ಪಶ್ಚಾದಲಂಕೃತ್ಯ ಸಮಂತತಃ ||

"ಮನೆಯ ಯಜಮಾನಿಯು ಇಂದ್ರಿಯಗಳನ್ನು ಜಯಿಸಿದವಳೂ ಅನಾವಶ್ಯಕವಾದ ಮಾತುಗಳನ್ನಾಡದೆ ಮಿತವಾಗಿ ಮಾತುಗಳನ್ನಾಡುತ್ತಿರುವವಳೂ ಆಗಿರಬೇಕು. ಶ್ರೀಹರಿಯ ಪೂಜೆಗೆ ಉಪಯುಕ್ತವಾಗುವ ಮನೆಯಲ್ಲಿರತಕ್ಕ ಎಲ್ಲಾ ಪಾತ್ರೆಗಳನ್ನೂ ಪ್ರತಿದಿನದಲ್ಲಿಯೂ ತಾನೇ ತೊಳೆಯಬೇಕು. ಕೆಲಸದವರ ಮೂಲಕವಾಗಿ ತೊಳೆಯಿಸಬಾರದು. ಮನೆಯನ್ನು ತಾನೇ ಗುಡಿಸಿ ಶುದ್ಧಮಾಡಬೇಕು. ಅನಂತರದಲ್ಲಿ ಗೋಮಯದಿಂದ ಎಲ್ಲಾ ಕಡೆಯನ್ನೂ ಸಾರಿಸಿ ಶುದ್ಧಪಡಿಸಬೇಕು. ಆ ಮೇಲೆ ರಂಗವಲ್ಲೀ ಮುಂತಾದವುಗಳಿಂದ ಎಲ್ಲೆಡೆಗಳಲ್ಲೂ ಅಲಂಕರಿಸಬೇಕು."

### ನಾಲ್ಕುವಿಧವಾದ ಪಾತ್ರೆಗಳನ್ನು ಪ್ರತ್ಯೇಕವಾಗಿಟ್ಟಿರಬೇಕು

ಚತುರ್ವಿಧಾನಾಂ ಭಾಂಡಾನಾಂ ಕ್ಷಾಲನಂ ತು ಸಮಾಚರೇತ್ |
ಪಾಚಕಾನಿ ಬಹಿಃಸ್ನಾನಿ ಜಲಸ್ಯಾನಯನಾನಿ ಚ ||
ಸ್ಥಾಪನಾದಿಪಿಧಾನಾರ್ಥಂ ಚತುರ್ವಿಧಮುದಾಹೃತಮ್ |
ಪೃಥಕ್ಪೃಥಗುದಂಚಾನಿ ತೇಷು ತೇಷ್ವಪಿ ವಿನ್ಯಸೇತ್ ||
ನಾನ್ಯೋನ್ಯಸಂಕರಂ ಕುರ್ಯಾದ್ಭಾಂಡಾನಾಂ ಸರ್ವಕರ್ಮಸು |

ಮನೆಯಲ್ಲಿರುವ ಪಾತ್ರೆಗಳನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು. (1) ಅಡಿಗೆ ಮಾಡುವ ಪಾತ್ರೆಗಳು ಈ ಪಾತ್ರೆಗಳನ್ನು ಒಲೆಯಲ್ಲಿಟ್ಟು ನಾನಾವಿಧವಾದ ಆಹಾರವಸ್ತುಗಳನ್ನು ತಯಾರಿಸುತ್ತೇವೆ. (2) ಹೊರಗಿನ ಪಾತ್ರೆಗಳು. ಇವುಗಳು ಹೊರಗೆ ಮಾಡುವ ಸ್ನಾನ ಮುಂತಾದ ಕಾರ್ಯಗಳಿಗೆ ಉಪಯುಕ್ತವಾಗುತ್ತವೆ. (3) ನೀರನ್ನು ತರುವುದಕ್ಕಾಗಿ ಉಪಯುಕ್ತವಾಗುವ ತಂಬಿಗೆ, ಕೊಡ ಮುಂತಾದ ಪಾತ್ರೆಗಳು. ಇವುಗಳಿಂದ ಅಡಿಗೆಗೆ ಬೇಕಾದ ನೀರುಗಳನ್ನು ಸಂಗ್ರಹಿಸುತ್ತೇವೆ. (4) ಮುಚ್ಚಳಗಳು. ಇವುಗಳಿಂದ ಅನ್ನಪಾತ್ರೆ ಮುಂತಾದವುಗಳನ್ನು ಮುಚ್ಚುತ್ತೇವೆ. ಈ ಪಾತ್ರೆಗಳನ್ನು ಇಡುವುದಕ್ಕೆ ಬೇರೆ ಬೇರೆ ಅಲಮಾರು

ಮುಂತಾದವುಗಳನ್ನು ಏರ್ಪಡಿಸಿರಬೇಕು, ಆಯಾ ಪಾತ್ರೆಗಳಿಗೆ ಏರ್ಪಡಿಸಿರುವ ಸ್ಥಳಗಳಲ್ಲಿಯೇ ಆಯಾ ಪಾತ್ರೆಗಳನ್ನಿಡಬೇಕು. ಒಂದು ಪಾತ್ರೆಗಳನ್ನಿಡಬೇಕಾದ ಸ್ಥಳದಲ್ಲಿ ಅಲ್ಲಿ ಇಡಬೇಕಾದ ಪಾತ್ರೆಗಳನ್ನೂ ಇತರ ಸ್ಥಳಗಳಲ್ಲಿಡಬೇಕಾದ ಪಾತ್ರೆಗಳನ್ನೂ ಸೇರಿಸಿ ಇಡಬಾರದು. ಎಲ್ಲಾ ಕಾರ್ಯಗಳನ್ನೂ ಇದೇ ರೀತಿಯಿಂದಲೇ ಮಾಡಬೇಕು. ಈ ನಾಲ್ಕು ವಿಧವಾದ ಪಾತ್ರೆಗಳನ್ನೂ ಮನೆಯ ಯಜಮಾನಿಯೇ ತೊಳೆಯಬೇಕು. ಈ ಕಾರ್ಯಕ್ಕೂ ಕೆಲಸದವರನ್ನು ಏರ್ಪಡಿಸಕೂಡದು.

### ಪಾತ್ರೆಗಳನ್ನು ಶುದ್ಧ ಮಾಡುವ ಕ್ರಮ

ತಾನಿ ಸ್ಪೃಷ್ಟಾನಿ ಚೇತ್ಪಾಣಿಂ ಪ್ರಕ್ಷಾಲ್ಯೈವ ಪುನಃ ಪುನಃ ||
ಸಮ್ಯಕ್ಪ್ರಕ್ಷಾಲ್ಯ ಭಾಂಡಾನಿ ದಾಹಯೇದ್ಯಾಜ್ಞಿಕೈಸ್ತೃಣೈಃ |
ರಸಭಾಂಡಾನಿ ಸರ್ವಾಣಿ ಕ್ಷಾಲಯೇದುಷ್ಣವಾರಿಣಾ ||
ಬಹಿರ್ನ ನಿಷ್ಕ್ರಮಯೀತ ಪಾಚಕಾನಿ ಗೃಹಾಂತಿಕಾತ್ ||

ಅಡಿಗೆ ಮಾಡಿದ ಪಾತ್ರೆಗಳನ್ನು ಮುಟ್ಟಿದರೆ ಕೈಗಳನ್ನು ತೊಳೆದುಕೊಳ್ಳಬೇಕು. ಪುನಃ ಪುನಃ ಮುಟ್ಟಿದರೆ ಪುನಃ ಪುನಃ ಕೈಗಳನ್ನು ತೊಳೆದುಕೊಳ್ಳಬೇಕು. ಅಡಿಗೆ ಮಾಡಿದ ಪಾತ್ರೆಗಳು ಅಶುದ್ಧವಾದ ಪದಾರ್ಥಗಳ ಸ್ಪರ್ಶದಿಂದ ದೂಷಿತವಾದರೆ ಆ ಪಾತ್ರೆಗಳನ್ನು ಚೆನ್ನಾಗಿ ತೊಳೆಯಬೇಕು. ಯಜ್ಞಕ್ಕೆ ಉಪಯುಕ್ತವಾದ ದರ್ಭೆ ಮುಂತಾದ ಹುಲ್ಲುಗಳಲ್ಲಿ ಬೆಂಕಿಯನ್ನು ಹಚ್ಚಿ ಆ ಬೆಂಕಿಯಲ್ಲಿ ಆ ಪಾತ್ರೆಗಳನ್ನು ಸುಡಬೇಕು. ಹಾಗೆ ಮಾಡಿದರೆ ಆ ಪಾತ್ರೆಗಳು ಶುದ್ಧವಾಗುತ್ತವೆ. ಹಾಲು, ಮೊಸರು, ತುಪ್ಪ ಮುಂತಾದ ರಸಪದಾರ್ಥಗಳನ್ನು ತುಂಬಿರುವ ಪಾತ್ರೆಗಳನ್ನು ಬಿಸಿನೀರಿನಿಂದ ತೊಳೆಯಬೇಕು. ಹಾಗೆ ಮಾಡಿದರೆ ಆ ಪಾತ್ರೆಗಳಲ್ಲಿ ಅಂಟಿಕೊಂಡಿರುವ ಜಿಡ್ಡುಗಳೆಲ್ಲವೂ ಹೋಗಿ ಶುದ್ಧವಾಗುತ್ತವೆ. ಅಡಿಗೆಗೆ ಉಪಯೋಗಿಸುವ ಪಾತ್ರೆಗಳನ್ನು ಯಾವ ಕಾರಣದಿಂದಲೂ ಮನೆಯಿಂದ ಹೊರಗೆ ತಾನಾಗಲೀ ತಮ್ಮ ಮನೆಯವರಾಗಲೀ ತೆಗೆದುಕೊಂಡು ಹೋಗಬಾರದು. ಇತರರು ತೆಗೆದುಕೊಂಡು ಹೋಗುತ್ತಿರುವುದನ್ನು ನೋಡಿ ಅದಕ್ಕೆ ಸಂಮತಿಸಲೂ ಕೂಡದು.

### ಬಡಿಸುವ ಪಾತ್ರೆಗಳು

ತಾಭಿರೇವ ನ ದದ್ಯಾತ್ತು ಭುಂಜತಾಂ ಹಿ ಕಥಂಚನ ||
ಕೃತ್ವಾ ಪಾತ್ರಾಂತರೇ ದದ್ಯಾತ್ಕಾಂಸ್ಯೇ ವಾ ಮೃಣ್ಮಯೇಪಿ ವಾ |
ಪಟಪರ್ಣಮಯೇನಾಪಿ ದದ್ಯಾದಗ್ರಸ್ರುವೇಣ ತು ||
ಸ್ರುವಂ ದಾರುಮಯಂ ಕಾಂಸ್ಯಂ ಕುರ್ವೀತಾಯೋಮಯಂ ನ ತು |
ನ ದದ್ಯಾದಾರನಾಳಸ್ಯ ಘಟಂ ತಸ್ಮಿನ್ಮಹಾನಸೇ ||
ಆರನಾಳಸ್ಯಯತ್ಕುಂಭಂ ತ್ಯಜೇನ್ಮದ್ಯಘಟಂ ಯಥಾ |

ಊಟವನ್ನು ಮಾಡುವವರಿಗೆ ಅಡಿಗೆ ಮಾಡಿದ ಪಾತ್ರೆಗಳಿಂದಲೇ ಯಾವ ಕಾರಣದಿಂದಲೂ ಬಡಿಸಬಾರದು. ಆ ಪಾತ್ರೆಗಳಿಂದ ಬೇರೆ ಪಾತ್ರೆಗಳಲ್ಲಿ ಬಗ್ಗಿಸಿ ಬೇರೆ ಪಾತ್ರೆಗಳಿಂದ ಬಡಿಸಬೇಕು. ಬೇರೆ ಪಾತ್ರೆಯು ಕಂಚಿನಿಂದಲಾದರೂ ಮಣ್ಣಿನಿಂದಲಾದರೂ ವಸ್ತ್ರದಿಂದಲಾದರೂ ಎಲೆಗಳಿಂದಲಾದರೂ ನಿರ್ಮಿಸಲ್ಪಟ್ಟಿರಬೇಕು. ಬೇರೆ ಪಾತ್ರೆಯಿಂದಲೂ ಅದೇ ಪಾತ್ರೆಯಿಂದ ಆ ಪಾತ್ರೆಯನ್ನು ಬಗ್ಗಿಸಿ ಬಡಿಸಬಾರದು. ಸೌಟು ಮುಂತಾದ ಸಾಧನಗಳಿಂದ ಬಡಿಸಬೇಕು. ಸೌಟು ಮುಂತಾದ ಸಾಧನಗಳೂ ಕಂಚಿನಿಂದಲೂ ಮರದಿಂದಲೂ ತಯಾರಿಸಿದ್ದಾಗಿರಬೇಕು. ಕಬ್ಬಿಣದಿಂದ ತಯಾರಿಸಲ್ಪಟ್ಟಿರಬಾರದು. ಅಡಿಗೆಯ ಮನೆಯಲ್ಲಿ ಹಿತ್ತಾಳೆಯ ಕೊಡವನ್ನು ಉಪಯೋಗಿಸಕೂಡದು. ಹಿತ್ತಾಳೆಯ ಕೊಡದಲ್ಲಿ ತುಂಬಿದ ನೀರು ಹೆಂಡಕ್ಕೆ ಸಮವೆನಿಸುತ್ತದೆ.

## ತ್ಯಾಜ್ಯವಾದ ವಸ್ತುಗಳು

ಆರನಾಳಂ ಕಾಲಶಾಕಂ ಕಲಂಜಂ ತಿಲಪಿಷ್ಟಕಮ್ ||
ಲಶುನಂ ಮೂಲಕಂ ಶಿಗ್ರುಂ ಛತ್ರಕೋಶಾತಕೀಫಲಮ್ |
ಅಲಾಬುಂ ಛತ್ರಶಾಕಂ ಚ ಕರನಿರ್ಮಥಿತಂ ದಧಿ ||
ನಿಂಬದ್ವಯಂ ಸನಿರ್ಯಾಸಂ ತಥಾ ಶ್ಲೇಷ್ಮಾತಕಂ ಫಲಮ್ |
ಆರಗಂಧಂ ಚ ನಿರ್ಗುಂಡೀಂ ಕಾಲಿಂಗಂ ನಾಲಿಕಾಂ ತಥಾ ||
ನಾಲಿಕೇರಾಖ್ಯಶಾಕಂ ಚ ಶ್ವೇತವೃಂತಾಕಮೇವ ಚ |
ಉಷ್ಟ್ರಾವಿಮಹಿಷೀಕ್ಷೀರಮವತ್ಸಾನಿರ್ದಶಾಹಗೋಃ ||
ಏತಾನ್ಯಕಾಮತಃ ಸ್ಪೃಷ್ಟ್ವಾ ಸವಾಸಾ ಜಲಮಾವಿಶೇತ್ |
ಮತ್ವಾ ಜಗ್ಧ್ವಾ ವ್ರತಂ ಕುರ್ಯಾದತ್ಯಜಂತೀ ಪತೇದಧಃ ||
ಕೇಶಾನಾಂ ರಂಜನಾರ್ಥಾಯ ನ ಸ್ಪೃಶೇದಾರನಾಲಕಮ್ |

ಆರನಾಳ, ಕಾಲಶಾಕ, ಕಲಂಜ, ಎಳ್ಳಿನ ಹಿಟ್ಟು, ಬೆಳ್ಳುಳ್ಳಿ, ಮೂಲಂಗಿ, ನುಗ್ಗೆಕಾಯಿ, ನಾಯಿಕೊಡೆ, ಕೋಶಾತಕೀ ಫಲ, ಬಿಳಿಯ ಬದನೆಕಾಯಿ, ಕೈಯಿಂದ ಕಡೆಯಲ್ಪಟ್ಟ ಮೊಸರು, ಅಲಾಬು, ಛತ್ರಶಾಕ, ನಿರ್ಯಾಸ, ಶ್ಲೇಷ್ಮಾತಕಫಲ, ಆರ ಗಂಧ, ನಿರ್ಗುಂಡೀ, ಕಾಲಿಂಗ, ನಾಲಿಕಾ, ಎಳೇ ತೆಂಗಿನಕಾಯಿ, ಒಂಟೆಯ ಹಾಲು, ಕುರಿಯ ಹಾಲು, ಎಮ್ಮೆಯ ಹಾಲು, ಕರುವಿಲ್ಲದಿರುವ ಮತ್ತು ಕರುಹಾಕಿ ಹತ್ತು ದಿನಗಳು ಪೂರ್ತಿಯಾಗದಿರುವ ದನದ ಹಾಲುಗಳನ್ನು ಕುಡಿಯಬಾರದು. ಇವುಗಳೆಲ್ಲವನ್ನು ತಿಳಿಯದೆ ಮುಟ್ಟಿದರೂ ಉಟ್ಟುಕೊಂಡ ಬಟ್ಟೆಯೊಡನೆ ನೀರಿನಲ್ಲಿ ಮುಳುಗಬೇಕು. ತಿಳಿದು ತಿಂದರೆ ಅದಕ್ಕಾಗಿ ಪ್ರಾಯಶ್ಚಿತ್ತ ವ್ರತವನ್ನು ಮಾಡಬೇಕು. ಇವುಗಳನ್ನು ಬಿಡದಿರುವ ಸ್ತ್ರೀಯು ಅಧೋಗತಿಯನ್ನು ಪಡೆಯುವಳು. ತಲೆಯಲ್ಲಿರುವ ಕೂದಲು ಕಪ್ಪಾಗಿರಬೇಕೆಂದು ಕೆಲವು ಸ್ತ್ರೀಯರು ಆರನಾಳಕವನ್ನು ತಲೆಗೆ ಹಚ್ಚಿಕೊಳ್ಳುವುದುಂಟು. ಆದರೆ ಯಾವ ಪತಿವ್ರತೆಯೂ ತಲೆಯಲ್ಲಿರುವ ಕೂದಲು ಕಪ್ಪಾಗಿರಬೇಕೆಂದು ಯಾವ ಔಷಧವನ್ನೂ ಉಪಯೋಗಿಸಕೂಡದು.

## ಪಾತ್ರೆಗಳ ಅಶುದ್ಧಿ ಮತ್ತು ಅವುಗಳ ವಿನಿಯೋಗ

ಊರ್ಧ್ವಂ ಮಾಸಾತ್ತ್ಯಜೇತ್ಸರ್ವಂ ಗೃಹಭಾಂಡಂ ತು ಮೃಣ್ಮಯಃ |
ನ ತ್ಯಜೇಲ್ಲೋಹಭಾಂಡಾನಿ ತಾಪಯೇಚ್ಚ ಹುತಾಶನೇ ||
ದಾರೂಣಾಂ ಸಂತ್ಯಜೇದ್ವಾಪಿ ಪ್ರೋಕ್ಷಣಂ ವಾ ಸಮಾಚರೇತ್ |
ಅದ್ಭಿಶ್ಚ ಭಸ್ಮಭಿರ್ಧಾತ್ವಾ ಗೋಬಾಲೈರ್ಘರ್ಷಯೇತ್ಸದಾ ||
ಸೂತಕೇ ಮೃತಕೇವಾಪಿ ಕಾಕಾದಿಸ್ಪರ್ಶನೇಽಥ ವಾ |
ಸ್ಪರ್ಶನೇ ವಾಪ್ಯಭಕ್ಷ್ಯಾಣಾಂ ಸದ್ಯ ಏವ ಪರಿತ್ಯಜೇತ್ ||
ಏವಂ ಸಂಶೋಧ್ಯ ಭಾಂಡಾನಿ ಯಜ್ಞಾರ್ಥಂ ಪಾಚಯೇದ್ವರೇಃ |

"ಮನೆಯಲ್ಲಿರುವ ಪಾತ್ರೆಗಳೆಲ್ಲವೂ ಮೂರುವಧವಾಗಿದೆ. (1) ಮಣ್ಣಿನ ಪಾತ್ರೆ, ಕಲ್ಲಿನ ಪಾತ್ರೆ ಮುಂತಾದವುಗಳು ಮೊದಲದೆಯ ದರ್ಜೆಯಲ್ಲಿ ಸೇರುತ್ತವೆ. ಆ ಪಾತ್ರೆಗಳನ್ನು ಒಂದು ತಿಂಗಳು ಮುಗಿದ ಕೂಡಲೇ ಮನೆಯಿಂದ ಹೊರಗೆ ಹಾಕಬೇಕು, (2) ಕಬ್ಬಿಣ, ತಾಮ್ರ ಮುಂತಾದ ಲೋಹಗಳಿಂದ ನಿರ್ಮಿತವಾದ ಪಾತ್ರೆಗಳು ಎರಡನೆಯ ದರ್ಜೆಗೆ ಸೇರುತ್ತವೆ ಆ ಪಾತ್ರೆಗಳನ್ನು ತೊಳೆದು ಬೆಂಕಿಯಲ್ಲಿ ಕಾಯಿಸಬೇಕು. ಹಾಗೆ ಮಾಡಿದರೆ ಶುದ್ಧವಾಗುತ್ತವೆ, (3) ಮರದಿಂದ ನಿರ್ಮಿತವಾದ

ಪಾತ್ರೆಗಳು ಮೂರನೆಯ ದರ್ಜೆಗೆ ಸೇರುತ್ತವೆ. ಆ ಪಾತ್ರೆಗಳನ್ನು ನೀರಿನಿಂದಲೂ ಬೂದಿಗಳಿಂದಲೂ ತೊಳೆದು ದನದ ಬಾಲದಲ್ಲಿರುವ ರೋಮಗಳಿಂದ ಪುನಃ ಪುನಃ ಉಜ್ಜಬೇಕು. ಇದರಿಂದ ಶುದ್ಧವಾಗುತ್ತವೆ. ಜಾತಾಶೌಚ ಮೃತಾಶೌಚ ಕಾಲಗಳಲ್ಲಿ ಮುಟ್ಟಿದ ಪಾತ್ರೆಗಳನ್ನೂ ಕಾಗೆ ನಾಯಿ ಮುಂತಾದ ಪ್ರಾಣಿಗಳಿಂದ ಮುಟ್ಟಲ್ಪಟ್ಟ ಪಾತ್ರೆಗಳನ್ನೂ ಮರುಕ್ಷಣದಲ್ಲಿಯೇ ಬಿಡಬೇಕು. ಶಾಸ್ತ್ರನಿಷಿದ್ಧವಾದ ಬೆಳ್ಳುಳ್ಳಿ ಮುಂತಾದ ವಸ್ತುಗಳ ಸ್ಪರ್ಶವು ಏರ್ಪಟ್ಟಿರುವ ಪಾತ್ರೆಗಳನ್ನೂ ಸಹ ಮರುಕ್ಷಣದಲ್ಲಿಯೇ ಬಿಡಬೇಕು. ಇದು ಪಾತ್ರೆಗಳನ್ನು ಶುದ್ಧವಾಗುವಂತೆ ಮಾಡುವ ಕ್ರಮ. ಹೀಗೆ ಪಾತ್ರೆಗಳನ್ನು ಶುದ್ಧವಾಗುವಂತೆ ಮಾಡಿ ಯಜ್ಞ ಮುಂತಾದ ಶ್ರೀಹರಿಯ ಪೂಜೆಗಾಗಿ ಅಡಿಗೆ ಮಾಡಬೇಕು."

### ಧಾನ್ಯಗಳನ್ನು ಶುದ್ಧ ಮಾಡುವ ಕ್ರಮ

ಸಂಪ್ರೋಕ್ಷ್ಯಾದ್ಭಿಃ ಶುಚೌ ದೇಶೇ ಧಾನ್ಯಂ ತಚ್ಛೋಷಯೇದ್ಭುವಿ |
ಅವಹನ್ಯಾಚ್ಛುಭತರಂ ಗಾಯಂತೀ ಮಧುಸೂದನಮ್ ||
ಸಂಶೋಧ್ಯ ತಂಡುಲಾನ್ ಶಶ್ವದದ್ಭಿಃ ಸುಕ್ಷಾಲಯೇತ್ತ್ರಿಭಿಃ |
ಅಂಭಸ್ತ್ರಿವಾರಂ ವಸ್ತ್ರೇಣ ಶೋಧಯಿತ್ವಾ ಘಟಾಂತರೇ ||
ಕುಶೇನೈವ ಪವಿತ್ರೇಣ ತಂಡುಲಾನ್ನಿರ್ವಪೇಚ್ಛುಭಾನ್ |
ಅಂತರ್ಧಾಯ ಕುಶಾಂಸ್ತತ್ರ ವಾಗ್ಯತಾ ನಿಯತೇಂದ್ರಿಯಾ ||

"ಶುಚಿಯಾದ ಪ್ರದೇಶದಲ್ಲಿ ಅಡಿಗೆಯನ್ನು ಮಾಡಬೇಕು. ಅದಕ್ಕೆ ಮುಂಚಿತವಾಗಿ ಸ್ಥಳವನ್ನು ಪ್ರೋಕ್ಷಣೆ ಮಾಡಿ ಶುದ್ಧಿ ಮಾಡಬೇಕು. ಆ ಸ್ಥಳದಲ್ಲಿ ನೆಲ್ಲು ಮುಂತಾದ ಧಾನ್ಯಗಳನ್ನು ಒಣಗಿಸಬೇಕು. ಒಣಗಿಸಿದ ಧಾನ್ಯಗಳನ್ನು ಕುಟ್ಟಬೇಕು. ಆ ಕಾಲದಲ್ಲಿಯೂ ಮಧುಸೂದನನನ್ನು ಹಾಡುತ್ತಾ ಮತ್ತು ಸ್ಮರಿಸುತ್ತಾ ಕುಟ್ಟಬೇಕು. ಕುಟ್ಟಿದ ಧಾನ್ಯಗಳಲ್ಲಿರುವ ಹೊಟ್ಟುಗಳನ್ನೂ ಕಲ್ಲು ನೆಲ್ಲು ಮುಂತಾದವುಗಳನ್ನೂ ಕೇರುವುದು ಮುಂತಾದ ಸಾಧನಗಳಿಂದ ಹೊರಪಡಿಸಬೇಕು. ಶುದ್ಧವಾದ ಅಕ್ಕಿ ಮುಂತಾದ ಪದಾರ್ಥಗಳನ್ನು ನೀರಿನಿಂದ ಮೂರು ಸಲ ತೊಳೆಯಬೇಕು. ಅಕ್ಕಿಯ ಪಾತ್ರದಲ್ಲಿರುವ ನೀರುಗಳನ್ನೆಲ್ಲವನ್ನೂ ಬಟ್ಟೆಯಿಂದ ಶೋಧಿಸಿ ತೆಗೆಯಬೇಕು. ಅನಂತರದಲ್ಲಿ ಅಂದಿನ ಅಡಿಗೆಗೆ ಬೇಕಾದ ಅಕ್ಕಿ ಮುಂತಾದ ಪದಾರ್ಥಗಳನ್ನು ಪವಿತ್ರವಾದ ದರ್ಭೆಯಿಂದ ಬೇರೆ ಗಡಿಗೆಯಲ್ಲಿ ಪ್ರತ್ಯೇಕವಾಗಿ ವಿಂಗಡಿಸಬೇಕು. ಆ ಅಕ್ಕಿ ಮುಂತಾದ ವಸ್ತುಗಳ ಮೇಲೆ ದರ್ಭೆಯಿಂದ ಮುಚ್ಚಿ ಆ ವಸ್ತುಗಳು ಇತರರ ಕಣ್ಣುಗಳಿಗೆ ಕಾಣಿಸದಂತೆ ಮಾಡಬೇಕು.

### ಬೆಂಕಿಯನ್ನು ಒಲೆಯಲ್ಲಿ ಹಚ್ಚುವ ಕ್ರಮ

ಉಪವೇಶ್ಯ ಶುಭೇ ಕುಂಡೇ ವಹ್ನಿಂ ಪ್ರಜ್ವಾಲಯೇತ್ತತಃ |

"ಕುಳಿತು ಶುದ್ಧವಾದ ಒಲೆಯಲ್ಲಿ ಬೆಂಕಿಯಲ್ಲಿ ಹಚ್ಚಬೇಕು." ಭಗವದ್ಭಕ್ತಿಯಿಲ್ಲದವರ, ಪಾತಕಿಗಳ ಮನೆಯ ಬೆಂಕಿಯನ್ನು ಅಡಿಗೆಗೆ ಉಪಯೋಗಿಸಬಾರದು.

ಸಂಪ್ರೋಕ್ಷ್ಯ ಮಂತ್ರರತ್ನೇನ ವಹ್ನಿಂ ಕುಶಜಲೈಸ್ತ್ರಿಭಿಃ |
ಯಾಜ್ಞೀಯೈರ್ವಿವಿಧೈಃ ಕಾಷ್ಠೈರ್ವ್ಯಜನೇನ ಪ್ರದೀಪಯೇತ್ ||
ಪಾಲಾಶೈಃ ಖಾದಿರೈರ್ಬಿಲ್ವೈಃ ಗೋಶಕೃತ್ತತ್ತ್ವತೈರಪಿ |
ಅನ್ಯೈಶ್ಚ ಯಾಜ್ಞಿಕೈಃ ಕಾಷ್ಠೈಸ್ತೃಣೈರ್ವಾ ಯಾಜ್ಞಿಕೈಃ ಶುಭೈಃ ||
ವರ್ಜಯೇನ್ಮಧ್ಯದಗ್ಧಾನಿ ತಥಾ ಬೈಭೀತಕಾನಿ ಚ |
ಆರಗ್ವಧಾನಿ ಶಿಗ್ರೂಣಿ ತಥಾ ನೈರ್ಗುಂಡಿಕಾನಿ ಚ ||

ಅನ್ಯೇಷಾಂ ಪಾಕಶೇಷಾಣಿ ನ ಯುಜ್ಯಾಚ್ಛ್ರಾದ್ಧಕರ್ಮಣಿ |
ಪ್ರದಾಯಾಗ್ನಿಂ ತತೋಽನ್ನಾದ್ಯಂ ಪಚೇನ್ನಿಯತಮಾನಸಾ ||
ಚಿಂತಯೇತ್ಪರಮಾತ್ಮಾನಂ ಜಪೇನ್ಮಂತ್ರದ್ವಯಂ ತಥಾ ||
ಶುದ್ಧಂ ಹೃದ್ಯಂ ತಥಾ ರುಚ್ಯಂ ಪಚೇದ್ರಮ್ಯತರಂ ಶುಭಮ್ |
ನಿಷಿದ್ಧಾನಿ ಚ ಶಾಕಾನಿ ಭಾವದುಷ್ಟಂ ಚ ವರ್ಜಯೇತ್ ||

ಓಂಕಾರವು ಮಂತ್ರಗಳಲ್ಲಿ ರತ್ನವೆನಿಸುತ್ತದೆ. ಓಂಕಾರವನ್ನು ಉಚ್ಚರಿಸುತ್ತಾ ಮೂರುದರ್ಭೆಗಳನ್ನು ನೀರಿನಲ್ಲಿ ಅದ್ದಿ ಅಗ್ನಿಯನ್ನು ಪ್ರೋಕ್ಷಣೆ ಮಾಡಬೇಕು. ಅನಂತರದಲ್ಲಿ ಯಜ್ಞಕ್ಕೆ ಉಪಯುಕ್ತವಾಗುವ ಪಲಾಶ, ಖದಿರ ಮುಂತಾದ ಕಟ್ಟಿಗೆಗಳನ್ನು ಹಾಕಿ ಬೀಸಣಿಗೆಯಿಂದ ಬೆಂಕಿಯನ್ನು ಜ್ವಲಿಸುವಂತೆ ಮಾಡಬೇಕು. ಯಜ್ಞಕ್ಕೆ ಉಪಯುಕ್ತವಾಗಿರುವ ದರ್ಭೆ ಮುಂತಾದ ಹುಲ್ಲುಗಳಿಂದಲೂ ಬೆಂಕಿಯನ್ನು ವೃದ್ಧಿಗೊಳಿಸಬೇಕು. ಮಧ್ಯದಲ್ಲಿ ಮಾತ್ರ ಸುಟ್ಟಿದ್ದು ಎರಡು ಪಾರ್ಶ್ವಗಳಲ್ಲಿ ಸುಡದಿರುವ ಕಟ್ಟಿಗೆಯನ್ನೂ ಶಾಂತಿಕಾಯಿಯ ಮರವನ್ನೂ ಆರಗ್ವಧ, ನುಗ್ಗೆಮರ, ನಿರ್ಗುಂಡೀ ಮುಂತಾದ ಕಟ್ಟಿಗೆಗಳನ್ನೂ ಉಪಯೋಗಿಸಬಾರದು. ಇನ್ನೊಬ್ಬರು ಅಡಿಗೆಮಾಡಿ ಉಳಿದಿರುವ ಕಟ್ಟಿಗೆಯನ್ನೂ ಉಪಯೋಗಿಸಬಾರದು. ಮೇಲ್ಕಂಡ ರೀತಿಯಿಂದ ಅಗ್ನಿಯು ಜ್ವಲಿಸುವಂತೆ ಮಾಡಿ ಪರಮಾತ್ಮನನ್ನು ಸ್ಮರಿಸುತ್ತಾ ಶ್ರಾದ್ಧಕ್ಕಾಗಿ ಶುದ್ಧವಾದ ಮನಸ್ಸಿನಿಂದ ಅಡಿಗೆಯನ್ನು ಮಾಡಬೇಕು. ಅಡಿಗೆಯ ಕಾಲದಲ್ಲಿ ಗುರು ಮಂತ್ರವನ್ನೂ ಶ್ರೀಕೃಷ್ಣಮಂತ್ರವನ್ನೂ ಜಪಿಸಬೇಕು. ಅಡಿಗೆಯು ಅತ್ಯಂತ ಮಡಿಯಿಂದ ಮಾಡಲ್ಪಡಬೇಕು. ರುಚಿಯಾಗಿರಬೇಕು. ಮನಸ್ಸಿಗೆ ಹಿತವಾಗಿರಬೇಕು. ನೋಡುವಾಗಲೇ ಆಕರ್ಷಿಸುವಂತಿರಬೇಕು. ನಿಷಿದ್ಧವಾಗಿರುವ ಮೂಲಂಗಿ ಮುಂತಾದ ತರಕಾರಿಗಳನ್ನು ಉಪಯೋಗಿಸಕೂಡದು. ನೋಡುವಾಗಲೇ ಮಾಂಸ ಮಲ ಮುಂತಾದ ವಸ್ತುಗಳ ನೆನಪನ್ನು ಕೊಡುತ್ತಿರುವ ತಕ್ಕಾಳಿ ಮುಂತಾದ ವಸ್ತುಗಳು ಭಾವದುಷ್ಟವೆನಿಸುತ್ತವೆ. ಅವುಗಳನ್ನೂ ಉಪಯೋಗಿಸಬಾರದು.

ಅವೈಷ್ಣವಾನಾಂ ನೀಚಾನಾಂ ಸಂಸರ್ಗಂ ದೂರತಸ್ತ್ಯಜೇತ್ |

"ವಿಷ್ಣುದ್ವೇಷಿಗಳು ಮತ್ತು ವಿಷ್ಣುಭಕ್ತಿಯಿಲ್ಲದವರ ಸಹವಾಸವನ್ನು ದೂರದಿಂದಲೇ ಬಿಡಬೇಕು."

ಪಕ್ವಾನ್ನಾನಿ ಯಥಾಪಕ್ವಂ ವಾಗ್ಯತಾ ಸಂಯತೇಂದ್ರಿಯಾ |
ಸಮ್ಮಾರ್ಜಯೇಚ್ಛುಭತರಂ ವಾರಿಣಾ ವಾಸಸೈವ ವಾ |
ಕರಕೈರಪಿಧಾಯಾಥ ಚಕ್ರೇಣೈವಾಂಕಯೇತ್ತಥಾ |
ಗಂಧೇನ ವಾ ಹರಿದ್ರೇಣ ಜಲೇನಾಪ್ಯಥವಾ ಲಿಖೇತ್ |
ಸುದರ್ಶನಂ ಪಾಂಚಜನ್ಯಂ ಭಾಂಡಾನಾಂ ಯಜ್ಞಯೋಗಿನಾಮ್ ||

"ಅಡಿಗೆಯನ್ನು ಮಾಡುವಾಗಲೂ ಮಾಡಿ ಮುಗಿಸಿದ ಮೇಲೆಯೂ ಸ್ತ್ರೀಯು ಮಿತಭಾಷಿಣಿಯಾಗಿರಬೇಕು. ಇಂದ್ರಿಯಗಳನ್ನು ಹತೋಟಿಯಲ್ಲಿ ಇಟ್ಟುಕೊಂಡಿರುವವಳಾಗಿರಬೇಕು. ಪಕ್ವಾನ್ನಗಳನ್ನೆಲ್ಲವನ್ನೂ ಅವುಗಳ ತಾರತಮ್ಯವನ್ನು ಅನುಸರಿಸಿ ನೀರಿನಿಂದಲಾಗಲೀ ವಸ್ತ್ರಗಳಿಂದಲಾಗಲೀ ಒರೆಸಬೇಕು. ಗಡಿಗೆಗಳಲ್ಲಿಟ್ಟು ಆ ಗಡಿಗೆಗಳನ್ನು ಚಕ್ರದಿಂದ ಮುದ್ರೆ ಮಾಡಬೇಕು. ಈ ಮುದ್ರೆಯನ್ನು ಗಂಧ, ಅರಿಶಿನ, ಅಥವಾ ನೀರಿನಿಂದ ಬರೆಯಬೇಕು. ಯಜ್ಞಕ್ಕೆ ಉಪಯುಕ್ತವಾಗುವ ಎಲ್ಲಾ ಪಾತ್ರೆಗಳಿಗೂ ಸುದರ್ಶನಚಕ್ರ ಮತ್ತು ಪಾಂಚಜನ್ಯಶಂಖ ಇವುಗಳ ಮುದ್ರೆಗಳನ್ನಿಡಬೇಕು.

## ಭೋಜನ ಕ್ರಮ

ಕುಶೋತ್ತರೇ ಶುಚೌ ದೇಶೇ ವಿನ್ಯಸ್ಯ ಕುಶವಾರಿಣಾ |
ಸಂಪ್ರೋಕ್ಷ್ಯ ಮಂತ್ರರತ್ನೇನ ವಸ್ತ್ರೇಣಾಚ್ಛಾದಯೇತ್ತತಃ ||
ಕ್ಷಾಲಯಿತ್ವಾಽಥ ದೇವಸ್ಯ ಭಾಜನಾನಿ ಶುಭೈರ್ಜಲೈಃ ||
ಅಭಿಪೂಜ್ಯ ತತೋ(ಹರೌ) ದದ್ಯಾದ್ಭೋಜಯೇಚ್ಚ ವಿಶೇಷತಃ ||
ಭೋಜಯೇದಾಗತಾನ್ ಕಾಲೇ ಸಖಿಸಂಬಂಧಿಬಾಂಧವಾನ್ ||
ಬಾಲಾನ್ ವೃದ್ಧಾನ್ಭೋಜಯಿತ್ವಾ ಭರ್ತಾರಂ ಭೋಜಯೇತ್ತತಃ |
ಸ್ವಯಂ ಹೃಷ್ಟಾ ತಥಾಽಶ್ನೀಯಾದ್ಭರ್ತುರ್ಭುಕ್ತಾವಶೇಷಿತಮ್ ||

"ಶುಚಿಯಾದ ಪ್ರದೇಶದಲ್ಲಿ ದರ್ಭೆಯನ್ನು ಹಾಸಬೇಕು. ಅದರ ಮೇಲೆ ಅಡಿಗೆ ಮಾಡಿದ ಪದಾರ್ಥಗಳನ್ನಿಡಬೇಕು. ಓಂ ಎಂಬ ಮಂತ್ರರತ್ನದಿಂದ ಪ್ರೋಕ್ಷಣೆ ಮಾಡಬೇಕು. ದೇವರ ನೈವೇದ್ಯಕ್ಕಾಗಿ ಇಡಬೇಕಾದ ಪಾತ್ರೆಗಳನ್ನು ಚೆನ್ನಾಗಿ ತೊಳೆದು ಆ ಪಾತ್ರೆಗಳಲ್ಲಿ ನೈವೇದ್ಯಸಮರ್ಪಣೆಗೆ ಇಡಬೇಕು. ಅನಂತರದಲ್ಲಿ ವಿಶೇಷವಾಗಿ ಭೋಜನವನ್ನು ಮಾಡಿಸಬೇಕು. ಭೋಜನಕಾಲದಲ್ಲಿ ಮನೆಗೆ ಬಂದಿರುವ ಮಿತ್ರರನ್ನೂ ಬೀಗರನ್ನೂ ತನ್ನ ಶರೀರಸಂಬಂಧಿಗಳನ್ನೂ ಮನೆಯಲ್ಲಿರುವ ಹುಡುಗರನ್ನೂ ಮುದುಕರನ್ನೂ ಭೋಜನ ಮಾಡಿಸಿ ಗಂಡನಿಗೆ ಬಡಿಸಬೇಕು. ಗಂಡನು ಊಟ ಮಾಡಿದ ಮೇಲೆ ಉಳಿದ ಅನ್ನವನ್ನು ಸಂತುಷ್ಟಳಾಗಿ ತಾನು ಭೋಜನವನ್ನು ಮಾಡಬೇಕು.

ಪತಿಸೇವಾಂ ಪುರಸ್ಕೃತ್ಯ ಗೃಹಕೃತ್ಯಂ ಚರೇತ್ತದಾ ||

"ಪತಿಸೇವೆಯನ್ನೇ ಪ್ರಧಾನವಾಗಿಟ್ಟುಕೊಂಡು ಮನೆಯ ಎಲ್ಲಾ ಕೆಲಸಗಳನ್ನೂ ಮಾಡಬೇಕು."

ಕಾಯೇನ ಮನಸಾ ವಾಚಾ ಹೇ ನಾರಿ ವಿಷ್ಣುತತ್ಪರಾ |
ಪತಿಂ ಭಜಸ್ವ ಸದ್ಭಕ್ತ್ಯಾ ಯದೀಚ್ಛಸಿ ಹರೇಃ ಪರಮ್ ||

"ಎಲೌ ಸ್ತ್ರೀಯೇ, ಪತಿಯಲ್ಲಿ ಶ್ರೀಹರಿಯು ಸನ್ನಿಹಿತನಾಗಿರುವನೆಂದು ತಿಳಿದು ಪತಿಸೇವೆಯೇ ಶ್ರೀಹರಿಯ ಸೇವೆಯೆಂದು ತಿಳಿದು ದೇಹದಿಂದಲೂ ಮನಸ್ಸಿನಿಂದಲೂ ಮಾತುಗಳಿಂದಲೂ ಶುದ್ಧವಾದ ಭಕ್ತಿಯಿಂದಲೂ ಪತಿಯನ್ನು ಸೇವಿಸು. ಇದರಿಂದ ಶ್ರೀಹರಿಯ ಸಾನ್ನಿಧ್ಯವನ್ನು ಪಡೆಯುವಿ."

ಭುಕ್ತೇ ಭುಂಕ್ಷ್ವ ಪತೌ ವತ್ಸೇ ಸ್ವಪ ಸುಪ್ತೇ ಸದಾಂ(ಪದಾ)ತಿಕೇ |

"ಪತಿಯು ಊಟ ಮಾಡಿದ ಮೇಲೆ ಊಟ ಮಾಡು, ಮಗಳೇ, ಗಂಡನು ಮಲಗಿದ ಮೇಲೆ ಯಾವಾಗಲೂ ಅವನ ಪಕ್ಕದಲ್ಲಿ ಅಥವಾ ಕಾಲಿನ ಬುಡದಲ್ಲಿ ಮಲಗು."

ಆಹೂತಾ ಗಚ್ಛ ನಮ್ರೈವ ಪೃಷ್ಟಾ ವದ ಸದುತ್ತರಮ್ |

"ಗಂಡನು ಕರೆದಾಗ ವಿನಯದಿಂದ ನಮ್ರಳಾಗಿಯೇ ಹೋಗು. ಅವನು ಯಾವುದನ್ನಾದರೂ ಕೇಳಿದಾಗ ಸತ್ಯವಾದ ಮತ್ತು ನಯವಾದ ಉತ್ತರವನ್ನು ಕೊಡು."

ತುಷ್ಟಾ ಭವ ಪತೌ ತುಷ್ಟೇ ದುಃಖಿತಾ ಭವ ದುಃಖಿತೇ ||

"ಗಂಡನು ಸಂತುಷ್ಟನಾದಾಗ ನೀನು ಸಂತುಷ್ಟಳಾಗು. ದುಃಖಿತನಾದಾಗ ದುಃಖಿತಳಾಗು.

"ಕ್ರುದ್ಧೇ ಮಂದಸ್ಮಿತಾ ಚ ಸ್ಯಾಃ ಯದೀಚ್ಛಸಿ ಹರೇಃ ಪರಮ್ ||

"ಗಂಡನು ಕುಪಿತನಾದಾಗ ಮುಗುಳುನಗೆಯಿಂದ ಮಾತಾಡು. ಇದರಿಂದ ಶ್ರೀಹರಿಯ ಸಾನ್ನಿಧ್ಯವನ್ನು ಪಡೆಯುವಿ."

ನ ಬ್ರೂಯಾ ವಿಪ್ರಿಯಂ ಭರ್ತುಃ ಕ್ರೀಡಾಯಾಂ ವಾ ಕದಾಚನ ||

"ತಮಾಷೆಗಾಗಿಯಾದರೂ ಆಟದ ಸಮಯದಲ್ಲಿಯೂ ಕೂಡ ಗಂಡನಿಗೆ ಅಪ್ರಿಯವಾದ ಮಾತುಗಳನ್ನು ಹೇಳಬೇಡ."

ನ ಕದಾಚಿತ್ಪರಾವಾಸಂ ಗಚ್ಛ ಭರ್ತುರಸನ್ನಿಧೌ ||

"ಪತಿಯು ಜೊತೆಯಲ್ಲಿಲ್ಲದಿರುವಾಗ ಯಾವಾಗಲೂ ಇನ್ನೊಬ್ಬನ ಮನೆಗೆ ಹೋಗಬೇಡ."

ನ ಸಂಭಾಷಸ್ವ ಚಾನ್ಯೈ ಸ್ತ್ವಂನ ವೀಥೀಂ ಚಾವಲೋಕಯ |

"ಪರಪುರುಷರೊಡನೆ ಮಾತಾಡುತ್ತಿರಬೇಡ. ಯಾವಾಗಲೂ ಬೀದಿಯನ್ನು ನೋಡುತ್ತಿರಬೇಡ."

ತದ್ದತ್ತಮಂಜಲಿಂ ಕೃತ್ವಾ ಹಸ್ತಾಭ್ಯಾಂ ತದ್ಗೃಹಾಣ ಚ ||

"ಗಂಡನು ಕೊಟ್ಟ ಯಾವ ವಸ್ತುವನ್ನೂ ಎರಡು ಕೈಗಳನ್ನು ಜೋಡಿಸಿ ಮರ್ಯಾದೆಯಿಂದ ಸ್ವೀಕರಿಸು. ಅಲಕ್ಷ್ಯ ಭಾವದಿಂದ ತೆಗೆದುಕೊಳ್ಳಬೇಡ."

ಸುಪ್ತೋತ್ಥಿತಾ ಮಂದಹಾಸಾ ಪತಿಂ ನತ್ವಾ ವ್ರಜಾಲಯಮ್ ||

"ಮಲಗಿ ಎದ್ದ ಕೂಡಲೇ ಮುಗುಳು ನಗೆಯಿಂದ ನಗುತ್ತಾ ಗಂಡನನ್ನು ನಮಸ್ಕರಿಸು. ಅನಂತರದಲ್ಲಿ ಮನೆಯ ಕೆಲಸಗಳಿಗಾಗಿ ಹೋಗು."

ಅಲಂಕುರು ಗೃಹಂ ನಿತ್ಯಂ ಯದ್ದತ್ತಂ ತತ್ಪ್ರವರ್ಧಯ |

"ಯಾವಾಗಲೂ ಮನೆಯನ್ನು ಅಲಂಕರಿಸು. ಗಂಡನು ಕೊಟ್ಟಿರುವ ಎಲ್ಲಾ ವಸ್ತುಗಳನ್ನೂ ಹೆಚ್ಚಿಸು. ಇಲ್ಲವೆಂದು ಹೇಳಬೇಡ."

ಕೀರ್ತಯಸ್ವ ಗುಣಾನ್ ದಿವ್ಯಾನ್ ಭರ್ತುರೇವಾನ್ಯಸನ್ನಿಧೌ |

"ಇನ್ನೊಬ್ಬರು ಹೆಂಗಸರಾಗಲೀ ಗಂಡಸರಾಗಲೀ ನಿನ್ನ ಜೊತೆಯಲ್ಲಿ ಮಾತಾಡುವುದಕ್ಕೆ ಬಂದಾಗ ದಿವ್ಯವಾದ ನಿನ್ನ ಗಂಡನ ಗುಣಗಳನ್ನೇ ಹೇಳು."

ಪ್ರವಸೇಚ್ಛ ಯದಾ ಭರ್ತಾ ಭವ ದತ್ತೇಕ್ಷಣಾ ಪಥಿ ||

"ಗಂಡನು ಪರವೂರಿಗೆ ಹೋಗಿದ್ದಾಗ ಅವನ ಆಗಮನವನ್ನೇ ನಿರೀಕ್ಷಿಸುತ್ತಾ ರಸ್ತೆಯನ್ನು ಆಗಾಗ್ಗೆ ನೋಡುತ್ತಿರು."

ಆಗತೇ ಚ ಪುನಃ ಪತ್ಯೌ ಸಂತುಷ್ಟಾಽಭಿಮುಖೀ ವ್ರಜ |

"ಗಂಡನು ದೇಶಾಂತರದಿಂದ ಹಿಂದಿರುಗಿ ಬಂದಾಗ ಸಂತುಷ್ಟಳಾಗಿ ಅವನನ್ನು ನೋಡುತ್ತಾ ಅಭಿಮುಖಳಾಗಿ ಹೋಗು."

ನತ್ವಾಽಽಸನಂ ಪ್ರಯಚ್ಛಾಶು ಶುಶ್ರೂಷಸ್ವ ಭಯಾನ್ವಿತಾ |

"ಗಂಡನು ಮನೆಗೆ ಬಂದ ಕೂಡಲೇ ನಮಸ್ಕರಿಸಿ ಆಸನವನ್ನು ಕೊಡು. ಹೆದರಿದವಳಾಗಿ ಸೇವಿಸು."

ಸ್ವಲ್ಪಂ ವಾ ಭುಂಕ್ಷ್ವ ಯದ್ದತ್ತಂ ಸಂತುಷ್ಟಾಽನ್ನಂ ಪಯೋಽಥವಾ |

"ಗಂಡನು ಕೊಟ್ಟಿರುವ ಅನ್ನವನ್ನಾಗಲೀ ನೀರನ್ನಾಗಲೀ ಹಾಲನ್ನಾಗಲೀ ಸಂತುಷ್ಟಳಾಗಿ ಸ್ವಲ್ಪವನ್ನಾಗಲೀ ತಿನ್ನು."

ಪತ್ಯೌ ಗೃಹಸ್ಥೇ ಕಾರ್ಯಾರ್ಥಂ ಯಥೇಷ್ಟಂ ಭಕ್ಷಯೌದನಮ್ ||

"ಗಂಡನು ಯಾವುದೋ ಒಂದು ಕೆಲಸಕ್ಕಾಗಿ ಮನೆಯಲ್ಲಿದ್ದಾಗ ಚೆನ್ನಾಗಿ ಇಷ್ಟದಂತೆ ಅನ್ನವನ್ನು ತಿನ್ನು."

ಪ್ರೋಷಿತೇ ಯದಿ ಕಾರ್ಯಾರ್ಥಂ ಪ್ರಾರ್ಥಯಂತ್ಯಾಗಮೇ ದ್ವಿಜಾನ್ |

ಪ್ರಾಣಧಾರಣಹೇತೋಸ್ತು ಸ್ವಲ್ಪಮೇವಾಶನಂ ಚರ ||

"ಗಂಡನು ಯಾವುದಾದರೊಂದು ಕಾರ್ಯಕ್ಕಾಗಿ ಪರವೂರಿಗೆ ಹೋಗಿದ್ದಾಗ "ಗಂಡನು ಸುಖವಾಗಿ ಬೇಗನೆ ಬರಲಿ " ಎಂದು ಬ್ರಾಹ್ಮಣರನ್ನು ಪ್ರಾರ್ಥಿಸುತ್ತಾ ಪ್ರಾಣವು ಉಳಿಯುವುದಕ್ಕಾಗಿ ಸ್ವಲ್ಪವೇ ಊಟವನ್ನು ಮಾಡು."

ಕನ್ಯಾಃ ಸಾಧ್ವ್ಯೋ ಬಲೀವರ್ದಾಃ ಶಿಷ್ಯಾಃ ಪುತ್ರಾಶ್ಚ ಕಿಂಕರಾಃ |
ಘಟಯಂತ್ಯಖಿಲಂ ಕಾರ್ಯಂ ಯಥೇಷ್ಟಂ ಭುಂಜತೇ ಯದಿ ||

"ಮನೆಯಲ್ಲಿರುವ ಕನ್ಯೆಯರು, ಸುಮಂಗಲಿಯರು, ಎತ್ತುಗಳು, ಶಿಷ್ಯರು, ಮಕ್ಕಳು, ಮತ್ತು ಸೇವಕರು ಹೊಟ್ಟೆ ತುಂಬ ಊಟ ಮಾಡಿದರೆ ಎಲ್ಲಾ ಕಾರ್ಯಗಳೂ ಸಿದ್ಧಿಸುತ್ತವೆ. ಆದ್ದರಿಂದ ಅವರೆಲ್ಲರನ್ನೂ ಭೋಜನದಿಂದ ತೃಪ್ತಿಪಡಿಸಬೇಕು.

ಕದಾಚಿದಪಿ ದುಷ್ಟಾನಾಂ ನಾರೀಣಾಂ ಗಚ್ಛ ನಾಂತಿಕಮ್ |

"ಯಾವಾಗಲೂ ದುಷ್ಟರಾದ ಸ್ತ್ರೀಯರ ಸಮೀಪಕ್ಕೆ ಹೋಗಬೇಡ."

ಏಕಾ ವಹ್ನಿರಿತಿ ಪ್ರೋಕ್ತಾ ದ್ವಿತೀಯಾ ವಾತ ಉಚ್ಯತೇ |
ತೃತೀಯಾ ತು ತೃಣಂ ಪ್ರೋಕ್ತಾ ದುಃಖಂ ತನ್ಮೇಲನಾತ್ಮಕಮ್ ||

ಒಬ್ಬಳು ದುಷ್ಟಸ್ತ್ರೀಯು ಬೆಂಕಿಯೆನಿಸುವಳು. ಎರಡನೆಯವಳು ಗಾಳಿಯೆನಿಸುವಳು. ಮೂರನೆಯವಳು ಹುಲ್ಲೆನಿಸುವಳು. ಮೂರು ದುಷ್ಟಸ್ತ್ರೀಯರ ಸಂಬಂಧವು, ಗಾಳಿ, ಬೆಂಕಿ, ಹುಲ್ಲುಗಳ ಸಂಬಂಧದಂತೆ ದುಃಖಕರವಾದವುಗಳು.

ಅಗ್ನಿಕಾರ್ಯೇ ಚ ದೈವೇ ಚ ಗುರೂಣಾಮಪಿ ವಂದನೇ |
ಗೃಹಕಾರ್ಯೇ ಚ ಸರ್ವತ್ರ ಜಾಗರೂಕಾ ಸದಾ ಭವ ||

"ಅಗ್ನಿಯಲ್ಲಿ ಮಾಡಬೇಕಾದ ಹೋಮ ಮುಂತಾದ ಕಾರ್ಯಗಳಲ್ಲಿಯೂ ದೇವಪೂಜಾ ಮುಂತಾದ ದೇವತಾಕಾರ್ಯಗಳಲ್ಲಿಯೂ ಗುರುಗಳ ನಮಸ್ಕಾರಗಳಲ್ಲಿಯೂ ಮನೆಯ ಎಲ್ಲಾ ಕಾರ್ಯಗಳಲ್ಲಿಯೂ ಯಾವಾಗಲೂ ಎಚ್ಚತ್ತವಳಾಗಿರು."

ಅಷ್ಟಾಕ್ಷರಪರಾ ನಿತ್ಯಂ ಸದಾಚಾರಪರಾ ಸದಾ |
ನಾಮತ್ರಯಪರಾ ನಿತ್ಯಂ ಭವ ಚಾಂತರ್ಗೃಹಾ ಶುಚಿಃ ||

"ಯಾವಾಗಲೂ ನಾರಾಯಣಾಷ್ಟಾಕ್ಷರಮಂತ್ರ ಮುಂತಾದ ಮಂತ್ರಗಳಲ್ಲಿ ಭಕ್ತಿಯುಳ್ಳವಳಾಗಿರು. ಯಾವಾಗಲೂ ಅಚ್ಯುತ ಅನಂತ ಗೋವಿಂದ ಎಂಬ ಮೂರು ನಾಮಗಳನ್ನು ಉಚ್ಚರಿಸುತ್ತಿರು. ಯಾವಾಗಲೂ ಮಡಿಯಾಗಿಯೂ ಸದಾಚಾರವಂತಳೂ ಆಗಿರು. ಯಾವಾಗಲೂ ಮನೆಯೊಳಗೆಯೇ ಇರು."

ಸನ್ಯಾಸ್ಯತಿಥಿಸಾಧೂನಾಂ ಸತ್ಕಾರಂ ಕುರು ಸರ್ವದಾ ||

"ಸಂನ್ಯಾಸಿಗಳು, ಅತಿಥಿಗಳು ಮತ್ತು ಸಾಧುಗಳ ಸತ್ಕಾರವನ್ನು ಯಾವಾಗಲೂ ಮಾಡು."

ಭರ್ತುಃ ಸಮೀಪಮಾಗತ್ಯ ಪೃಚ್ಛ ಧರ್ಮಾನ್ಯಥಾಮತಿ ||

"ಗಂಡನ ಸಮೀಪಕ್ಕೆ ಬಂದು ಎಲ್ಲಾ ಧರ್ಮಗಳನ್ನೂ ಬುದ್ಧಿಗೆ ತೋರಿದ ಮಟ್ಟಿಗೆ ಕೇಳಿ ತಿಳಿಯುತ್ತಿರು."

ಪತ್ಯುಃ ಸಕಾಶಾಚ್ಛೃಣು ಧರ್ಮಸಾರಂ ಪ್ರಣಮ್ಯ ಕಾಲದ್ವಿತಯೇಽಪಿ ಭಕ್ತ್ಯಾ |
ಸ್ನಾತ್ವಾ ಚ ಶುದ್ಧಾ ಪ್ರಣಮಯ್ಯ ಶಿಷ್ಟಾನ್ ಲೋಕದ್ವಯೇಽಪೀಚ್ಛಸಿ ನಿತ್ಯಸೌಖ್ಯಂ ||

"ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಯಾವಾಗಲೂ ಸೌಖ್ಯವನ್ನು ಬಯಸುವವಳಾಗಿದ್ದರೆ ಬೆಳಿಗ್ಗೆ ಮತ್ತು ಸಾಯಂಕಾಲಗಳಲ್ಲಿ ಸ್ನಾನವನ್ನು ಮಾಡಿ ಶುದ್ಧಳಾಗಿ ಭಕ್ತಿಯಿಂದ ಧರ್ಮದ ತಿರುಳನ್ನು ಪತಿಯಿಂದ ಕೇಳಿ ತಿಳಿದುಕೊಳ್ಳು. ಹಾಗೆಯೇ ಶಿಷ್ಟರಾದ ಜ್ಞಾನಿಗಳನ್ನೂ ಕೇಳಿ ತಿಳಿದುಕೊಳ್ಳು."

ಬಹುನಾऽತ್ರ ಕಿಮುಕ್ತೇನ ತತ್ತ್ವಂ ಸಂಕ್ಷೇಪತಃ ಶೃಣು |
ಸದಾ ಲಜ್ಜಾನ್ವಿತಾ ತುಷ್ಟಾ ಯದಿಷ್ಟಂ ಭರ್ತುರಾಚರ ||

"ಹೆಚ್ಚು ಹೇಳಿದ್ದರಿಂದ ಏನು ಪ್ರಯೋಜನ? ಸಂಕ್ಷೇಪವಾಗಿ ಒಂದೇ ಮಾತಿನಿಂದ ಧರ್ಮದ ರಹಸ್ಯವನ್ನು ತಿಳಿಸುವೆನು. ಯಾವಾಗಲೂ ಲಜ್ಜೆಯಿಂದ ಯುಕ್ತಳಾಗಿದ್ದು ಗಂಡನಿಗೆ ಇಷ್ಟವಾದ ಕಾರ್ಯವನ್ನು ಮಾಡು"

ನ ಕದಾಚನ ದೌರ್ಮುಖ್ಯಂ ದಾರಿದ್ರ್ಯಂ ನರಕಪ್ರದಮ್ |
ದೂರೀಕುರು ಸದಾ ಭರ್ತುರ್ಯುರರೀಕುರು ಶಾಸನಮ್ ||

"ಯಾವಾಗಲೂ ಮುಖವನ್ನು ಸೊಟ್ಟು ಮಾಡಿಕೊಳ್ಳುವುದೂ ಬಡತನವನ್ನು ಹೇಳಿಕೊಳ್ಳುವುದೂ ನರಕಕ್ಕೆ ಸಾಧನವೆನಿಸುತ್ತದೆ. ಅದನ್ನು ಬಿಟ್ಟುಬಿಡು. ಯಾವಾಗಲೂ ಗಂಡನ ಆಜ್ಞೆಯಂತೆ ನಡೆ.

ಯಾ ವೀಜಯೇಚ್ಛನೈಃ ಶ್ರಾಂತಂ ಭರ್ತಾರಂ ಭಕ್ತಿಭೂಷಿತಾ |
ಭ್ರಾಜಮಾನಾऽಪ್ಸರೋಭಿಃ ಸಾ ಸ್ವರ್ಗಲೋಕೇ ಮಹೀಯತೇ ||

"ಯಾವಳು ಆಯಾಸದಿಂದ ಬಂದಿರುವ ಗಂಡನನ್ನು ಭಕ್ತಿಯಿಂದ ಭೂಷಿತಳಾಗಿ ಬೀಸುವಳೋ ಅವಳು ಅಪ್ಸರಃ ಸ್ತ್ರೀಯರಿಂದ ದೇವಲೋಕದಲ್ಲಿ ಪೂಜಿಸಲ್ಪಡುವಳು"

ಶ್ರಾಂತಸ್ಯಾಭಿಮುಖೀ ಪಾತ್ರೇ ಭರ್ತುಃ ಪಾನೀಯಮಾದಿಶೇತ್ |
ಸ್ವರ್ಗಮಾರ್ಗೇऽಮೃತಂ ಪೀತ್ವಾ ಸುಖೇನ ತ್ರಿದಿವಂ ವ್ರಜೇತ್ ||

"ಆಯಾಸದಿಂದ ಯುಕ್ತನಾಗಿರುವ ಗಂಡನಿಗೆ ಪಾತ್ರೆಯಲ್ಲಿ ನೀರನ್ನು ತುಂಬಿಸಿ ಅಭಿಮುಖಳಾಗಿ ಯಾವಳು ಹೋಗುವಳೋ ಅವಳು ಸ್ವರ್ಗದ ಹಾದಿಯಲ್ಲಿ ಸುಖವಾಗಿ ಅಮೃತವನ್ನು ಕುಡಿಯುತ್ತಾ ಸ್ವರ್ಗಕ್ಕೆ ಹೋಗುವಳು."

ಏಕದಾ ವಾ ಸ್ವಭರ್ತುರ್ಯಾ ಪಾದಸಂವಾಹನಂ ಚರೇತ್ |
ಸೂರ್ಯರಾಗವಿಮಾನಸ್ಥಾ ಸದಾ ಸ್ವರ್ಗೇ ವಿರಾಜತೇ ||

"ಯಾವಳು ಒಮ್ಮೆಯಾದರೂ ತನ್ನ ಪತಿಯ ಪಾದಗಳನ್ನು ಒತ್ತುವಳೋ ಅವಳು ಸೂರ್ಯನಂತೆ ಪ್ರಕಾಶಿಸುತ್ತಿರುವ ವಿಮಾನದಲ್ಲಿ ಕುಳಿತವಳಾಗಿ ಯಾವಾಗಲೂ ಸ್ವರ್ಗಲೋಕದಲ್ಲಿ ಶೋಭಿಸುವಳು."

ಯದ್ಯದಿಷ್ಟಂ ಸತೀ ಜ್ಞಾತ್ವಾ ಭರ್ತುರ್ಭಕ್ತ್ಯಾ ಪ್ರಯಚ್ಛತಿ |
ಸಾऽನ್ನಂ ಚತುರ್ವಿಧಂ ಭುಕ್ತ್ವಾ ಸಾ ಮಾರ್ಗೇ ತ್ರಿದಿವೇ ವಸೇತ್ ||

ಗಂಡನಿಗೆ ಇಷ್ಟವಾದ ವಸ್ತುಗಳನ್ನು ತಾನೇ ತಿಳಿದು ಭಕ್ತಿಯಿಂದ ಕೊಡುವವಳು ಸ್ವರ್ಗಕ್ಕೆ ಹೋಗುವ ಮಾರ್ಗದಲ್ಲಿಯೂ ಸ್ವರ್ಗದಲ್ಲಿಯೂ ಲೇಹ್ಯ, ಪೇಯ, ಚೋಷ್ಯ, ಭಕ್ಷ್ಯ ಎಂಬ ಚತುರ್ವಿಧವಾದ ಆಹಾರವನ್ನು ತಿನ್ನುತ್ತಾ ಯಾವಾಗಲೂ ಸರ್ವರಿಂದಲೂ ಪೂಜಿಸಲ್ಪಡುವಳು."

ರತಿಕಾಲೇऽಪಿ ಯಾ ಭರ್ತುರ್ಧರ್ತ್ರೇ ದುರ್ವಾಕ್ಯಮುಗ್ರಧೀಃ |
ಪತೇನ್ನಿಕೃತ್ವಾ ಕ್ರಕಚೈ ರಾಬ್ರಹ್ಮಕ್ಷಾರಕರ್ದಮೇ ||

"ರತಿಕಾಲ ಎಂಬ ಸಂತೋಷಕಾಲದಲ್ಲಿಯೂ ತನ್ನ ಪತಿಯ ಮನಸ್ಸಿಗೆ ಆಯಾಸಕರವಾಗಿರುವ ಕಠೋರಶಬ್ದಗಳಿಂದ ಪತಿಯ ಮನಸ್ಸನ್ನು ಯಾವಳು ನೋಯಿಸುವಳೋ ಅವಳು ಗರಗಸಗಳಿಂದ ಶೀಳಲ್ಪಡುತ್ತಿರುವ ಶರೀರವುಳ್ಳವಳಾಗಿ "ಕ್ಷಾರಕರ್ದಮ" ಅಂದರೆ ಉಪ್ಪು ಕೆಸರಿನ ಹೊಂಡದಲ್ಲಿ ಶ್ರೀಹರಿಯು ಇರುವವರೆಗೂ ಅಂದರೆ ಯಾವಾಗಲೂ ಬೀಳುವಳು!"

ತದ್ಭರ್ತುರ್ದುರ್ವಚಃ ಶ್ರುತ್ವಾ ಭಾರ್ಯಾಂ ಶೋಚತಿ ರೋದಿತಿ |

ಕ್ಷಣಾನ್ಮಾತೃಕುಲಂ ಹತ್ವಾ ಸಾ ಘೋರಂ ರೌರವಂ (ನರಕಂ) ವ್ರಜೇತ್ ||

"ಹೆಂಡತಿಯ ಕಠೋರ ಶಬ್ದಗಳನ್ನು ಕೇಳಿದ ಗಂಡನು ಹೆಂಡತಿಯನ್ನು ಸ್ಮರಿಸಿ ದುಃಖಿಸಿದರೂ ಅತ್ತರೂ ಆ ಹೆಂಡತಿಯು ತಾಯಿಯ ವಂಶವನ್ನು ನಿರ್ಮೂಲಮಾಡಿ ರೌರವ ಮುಂತಾದ ಕಠೋರವಾದ ನರಕಗಳನ್ನು ಪಡೆಯುವಳು."

ತಸ್ಮಾದ್ಬುದ್ಧಿಮತೀ ಸಾಧ್ವೀ ಭರ್ತುಃ ಕ್ಷೇಮಕರಾ ಭವ |

ಯೇನ ಕೇನಾಪಿ ಭರ್ತಾರಂ ತೋಷಯಸ್ವ ಶುಭಾಪ್ತಯೇ ||

"ಎಲೈ ಮಗಳೇ, ಹಿಂದೆ ಹೇಳಿದ ಎಲ್ಲಾ ಬುದ್ಧಿವಾದಗಳನ್ನೂ ತಿಳಿದು ಬುದ್ಧಿವಂತಳಾಗು. ಪಾತಿವ್ರತವನ್ನು ಪಾಲಿಸು, ಗಂಡನಿಗೆ ಎಲ್ಲಾ ವಿಧದಿಂದಲೂ ಕ್ಷೇಮವನ್ನು ಮಾಡು. ಯಾವ ರೀತಿಯಿಂದಲಾದರೂ ಗಂಡನನ್ನು ಸಂತೋಷಪಡಿಸು. ಇದರಿಂದ ಎಲ್ಲಾ ವಿಧವಾದ ಮಂಗಲವೂ ಏರ್ಪಡುತ್ತದೆ."

ಸೌಮಂಗಲ್ಯಂ ತು ಯತ್ಕರ್ಮ ತತ್ತದೇವ ಸಮಾಚರೇತ್ |

ಆಪತ್ಕಾಲೇ ತು ವಿಧವಾಸಂಭಾಷಾಂ ಕುರು ದೂರತಃ ||

"ಸೌಮಂಗಲ್ಯವೃದ್ಧಿಕರವಾದ ಎಲ್ಲಾ ಕಾರ್ಯಗಳನ್ನೂ ಯಾವಾಗಲೂ ಮಾಡುತ್ತಿರು. ಆಪತ್ಕಾಲದಲ್ಲಿ ವಿಧವೆಯರೊಡನೆ ದೂರದಿಂದ ಮಾತಾಡು."

ವಿಧವಾಸಂಗದೋಷೇಣ ವಿಧವಾ ಜನ್ಮಜನ್ಮನಿ |

ಆನಯೇತ್ಕೃಷ್ಣಸರ್ಪಂ ವಾ ಸ್ವಗೃಹೇ ವಾಽಗ್ನಿಮುತ್ಸೃಜೇತ್ ||

ಶ್ರೇಯೋರ್ಥಿನೀ ಸ್ವಭವನೇ ವಿತಂತುಂ ನಾನಯೇತ್ಸುಧೀಃ |

"ವಿಧವೆಯರ ಸಹವಾಸವು ದೊಡ್ಡ ದೋಷವೆನಿಸುತ್ತದೆ. ಆ ದೋಷದಿಂದ ಒಂದೊಂದು ಜನ್ಮದಲ್ಲಿಯೂ ವಿಧವೆಯಾಗುವಳು. ಮನೆಯೊಳಗೆ ಕೃಷ್ಣಸರ್ಪವನ್ನು ತರಬಹುದು. ತನ್ನ ಮನೆಗೆ ಬೆಂಕಿಯನ್ನಿಡಬಹುದು. ಆದರೆ ವಿಧವೆಯನ್ನು ಮನೆಯೊಳಗೆ ಕರೆದುಕೊಂಡು ಹೋಗಕೂಡದು.

ಕಲ್ಪಾಂತೇ ಬ್ರಹ್ಮಹಾ ಮುಚ್ಯೇದೃಣಾತ್ತು ನ ಕದಾಚನ |

ವಿಧವಾ ಚಾಸತೀ ಭರ್ತುಃ ಪ್ರತಿಕೂಲಾ ನ ಶುದ್ಧ್ಯತಿ ||

"ಒಬ್ಬೊಬ್ಬನೂ ಬ್ರಹ್ಮಕಲ್ಪ ಮುಗಿಯವಾಗ ಮುಕ್ತಿಯನ್ನು ಪಡೆಯುವುದುಂಟು ಸಾಲವನ್ನು ಮಾಡಿದವನು ಸಾಲದಿಂದ ಬಿಡುಗಡೆಯನ್ನು ಎಂದೆಂದಿಗೂ ಪಡೆಯಲಾರನು. ಅದರಂತೆ ವಿಧವೆಯೂ ಗಂಡನಿಗೆ ಪ್ರತಿಕೂಲಳಾದ ಅಯೋಗ್ಯಳೂ ಯಾವಾಗಲೂ ಶುದ್ಧಳಾಗಲಾರಳು."

ಅತಃ ಪತ್ಯೈವ ಗಂತವ್ಯಂ ಸಾಧ್ವ್ಯಾ ವೈಕುಂಠಲಿಪ್ಸಯಾ |

"ಆದ್ದರಿಂದ ಸ್ತ್ರೀಯು ವೈಕುಂಠವನ್ನು ಪಡೆಯುವ ಆಸೆಯುಳ್ಳವಳಾಗಿದ್ದರೆ ಪತಿಯ ಮೂಲಕವಾಗಿಯೇ ಪಡೆಯಬೇಕು."

ಸರ್ವಧರ್ಮಾನ್ ಪರಿತ್ಯಜ್ಯ ಭಜ ಸರ್ವಾತ್ಮನಾ ಪತಿಮ್ |

ಪತಿಶುಶ್ರೂಷಣಂ ನಾರ್ಯಾಃ ಸ್ವರ್ಗಸೋಪಾನ ಪಂಕ್ತಯಃ ||

"ಎಲ್ಲಾ ಧರ್ಮಗಳನ್ನೂ ಬಿಟ್ಟರೂ ಪತಿಯನ್ನು ಸರ್ವವಿಧದಿಂದಲೂ ಸೇವಿಸು, ಪತಿಸೇವೆಯೇ ಸ್ವರ್ಗದ ಮೆಟ್ಟಲುಗಳು ಪಂಕ್ತಿಗಳು ಎಂದು ತಿಳಿ" ಅಗ್ನಿಪುರಾಣದಲ್ಲಿ ಮೂವತ್ತಾರನೆಯ ಅಧ್ಯಾಯದಲ್ಲಿ ನಾರದರು ಹೇಳಿರುವ ಈ ಮಾತುಗಳನ್ನು ಸರ್ವಸ್ತ್ರೀಯರೂ ಮುಖ್ಯವಾಗಿ ತಿಳಿಯಬೇಕು."

## ಮಾಧ್ಯಾಹ್ನಿಕಸಂಧ್ಯಾವಂದನ

ಪ್ರಾತಃ ಸಂಧ್ಯಾಂ ವಿಧಾನೇನ ಛಂದ ಆರ್ಷಂ ಚ ದೈವತಮ್ |
ಸ್ಮೃತ್ವಾ ಚಾಚಮ್ಯ ಚ ಪ್ರಾಣಾನಾಯಾಮೇದ್ದರ್ಭಪಾಣಿನಾ || (ಸಂಗ್ರಹ)

"ಪ್ರಾತಃ ಸಂಧ್ಯಾವಂದನವನ್ನು ಹಿಂದೆ ಹೇಳಿದಂತೆ ಮಾಡಬೇಕು. ಆಚಮನವನ್ನು ಮಾಡಬೇಕು. ದರ್ಭೆಯಿಂದ ನಿರ್ಮಿತವಾದ ಪವಿತ್ರವನ್ನು ಧರಿಸಬೇಕು, ಪ್ರಾಣಾಯಾಮಮಂತ್ರದ ಋಷಿಯನ್ನೂ ಛಂದಸ್ಸನ್ನೂ ದೇವತೆಯನ್ನೂ ಹೇಳಬೇಕು. ಪ್ರಾಣಾಯಾಮವನ್ನು ಮಾಡಬೇಕು.

ಆಪೋ ಹಿ ಷ್ಠಾದಿಭಿರ್ಮಂತ್ರೈರ್ಮಾರ್ಜನಂ ಕಾರಯೇತ್ತತಃ |
ಆಪಃ ಪುನಂತು ಮಂತ್ರೇಣ ಪೀತ್ವಾ ಚಾಚಮನಂ ಚರೇತ್ ||
ಆಚಮ್ಯ ವಿಧಿವತ್ ಕುರ್ಯಾದ್ದಧಿ ಕ್ರಾವ್ಣೇತಿ ಮಾರ್ಜನಮ್ |
ಆಪೋ ಹಿ ಷ್ಠಾದಿಭಿರ್ಮಂತ್ರೈರ್ಮಾರ್ಜನಂ ತು ತತಃ ಪುನಃ |
ಪ್ರಕ್ಷಿಪ್ಯ ಚಾಂಜಲಿಂ ಸಮ್ಯಗ್ಘಂಸಃ ಶುಚಿಷದಿತ್ಯಪಿ || (ಸಂಗ್ರಹ)

"ಆಪೋಹಿಷ್ಠಾ" ಮುಂತಾದ ಮಂತ್ರಗಳಿಂದ ಮಾರ್ಜನವನ್ನು ಮಾಡಬೇಕು. "ಆಪಃ ಪುನಂತು ಪೃಥಿವೀಂ" ಮುಂತಾದ ಮಂತ್ರಗಳಿಂದ ನೀರನ್ನು ಕುಡಿಯಬೇಕು. ಪುನಃ ಆಚಮನವನ್ನು ಮಾಡಬೇಕು. "ದಧಿಕ್ರಾವ್ಣೋ ಅಕಾರಿಷಂ" ಎಂಬ ಮಂತ್ರದಿಂದಲೂ "ಆಪೋ ಹಿ ಷ್ಠಾ" ಎಂಬ ಮಂತ್ರದಿಂದಲೂ ಮಾರ್ಜನವನ್ನು ಪುನಃ ಮಾಡಬೇಕು. "ಹಂಸಃ ಶುಚಿಷತ್" ಎಂಬ ಮಂತ್ರದಿಂದ ಅರ್ಘ್ಯಾಂಜಲಿಯನ್ನು ಕೊಡಬೇಕು.

ಸ್ವಶಾಖೋಕ್ತಾಮೃಚಂ ಚಾಪಿ ಜಪೇತ್ಪ್ರಯತಮಾನಸಃ |

"ಪರಿಶುದ್ಧವಾದ ಮನಸ್ಸಿನಿಂದ ಯುಕ್ತನಾಗಿ ಸ್ವಶಾಖೆಗೆ ಹೇಳಿರುವ ಋಕ್ಕನ್ನು ಜಪಿಸಬೇಕು."

ಮಧ್ಯಾಹ್ನೇ ಚಾಂಜಲಿಕ್ಷೇಪಂ ಸಕೃದೇವ ಸಮಾಚರೇತ್ ||

"ಮಧ್ಯಾಹ್ನದಲ್ಲಿ ಒಮ್ಮೆಯೇ ಅರ್ಘ್ಯಪ್ರದಾನವನ್ನು ಮಾಡಬೇಕು"

ಪ್ರಕ್ಷಿಪ್ಯ ಚಾಂಜಲಿಂ ಸಮ್ಯಗಾದಿತ್ಯಂ ಚಿತ್ರಮಿತ್ಯಪಿ |
ತಚ್ಚಕ್ಷುರಿತಿ ಮಂತ್ರೇಣ ಹಂಸಃ ಶುಚಿಷದಿತ್ಯಪಿ ||
ಕೃತಾಂಜಲಿಸ್ತೂರ್ಧ್ವಬಾಹುಃ ಸೂರ್ಯಂ ಪಶ್ಯನ್ಸಮಾಹಿತಃ |
ಆಸತ್ಯೇನೇತ್ಯಾದಿಭಿರ್ಮಂತ್ರೈರುಪಸ್ಥಾಯ ದಿವಾಕರಮ್ ||

ಅರ್ಘ್ಯವನ್ನು ಕೊಟ್ಟ ಮೇಲೆ ಸೂರ್ಯಾಂತರ್ಯಾಮಿಯಾದ ನಾರಾಯಣನನ್ನು "ಚಿತ್ರಂ ದೇವಾನಾಂ" ಎಂಬ ಮಂತ್ರದಿಂದಲೂ "ತಚ್ಚಕ್ಷುಃ" ಎಂಬ ಮಂತ್ರದಿಂದಲೂ "ಹಂಸಃ ಶುಚಿಷತ್" ಎಂಬ ಮಂತ್ರದಿಂದಲೂ "ಆಸತ್ಯೇನ ರಜಸಾ" ಎಂಬ ಮಂತ್ರದಿಂದಲೂ ಸೂರ್ಯನನ್ನು ನೋಡುತ್ತಾ ಎರಡು ಕೈಗಳನ್ನು ಮೇಲೆ ಎತ್ತಿ ಜೋಡಿಸುತ್ತಾ ಪ್ರಾರ್ಥಿಸಬೇಕು. ಇದು ಸೂರ್ಯೋಪಸ್ಥಾನವೆನಿಸುತ್ತದೆ.

ಸಂಧ್ಯಾಯೈ ನಮ ಇತ್ಯಾದಿಮಂತ್ರೋಕ್ತಾಃ ಪಂಚದೇವತಾಃ |
ಪ್ರದಕ್ಷಿಣನಮಸ್ಕಾರೈರ್ದಿಶಶ್ಚೈವೋಪತಿಷ್ಠತೇ ||

(1) "ಸಂಧ್ಯಾಯೈ ನಮಃ", (2) ಸಂಧಿಪತಯೇ ನಮಃ, (3) ಗಾಯತ್ರ್ಯೈ ನಮಃ, (4) ಸಾವಿತ್ರ್ಯೈ ನಮಃ, (5) ಸರಸ್ವತ್ಯೈ ನಮಃ ಎಂಬ ಐದು ಮಂತ್ರಗಳಿಂದ ಹೇಳಲ್ಪಟ್ಟ ಐದು ದೇವತೆಗಳನ್ನೂ ಹತ್ತು ದಿಕ್ಕುಗಳ ಅಧಿಪತಿಗಳಾದ ದೇವತೆಗಳನ್ನೂ ಉಪಸ್ಥಾನ ಮಾಡಬೇಕು. ಅಂದರೆ ಅವರಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಬೇಕು.

ಪರಮಾತ್ಮಾನಮಾತ್ಮಾನಂ ಭಾವಯಿತ್ವೋಪಸಂಗ್ರಹಃ |
ಗಾಯತ್ರ್ಯಾ ತು ಯಥಾಶಕ್ತಿ ಹ್ಯುಪಾಸೀತ ದಿವಾಕರಮ್ ||

ತನ್ನ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ಸ್ಮರಿಸುತ್ತಾ ಗಾಯತ್ರೀಮಂತ್ರವನ್ನು ಜಪಿಸುತ್ತಾ ತನ್ನಲ್ಲಿ ಗಾಯತ್ರೀಪ್ರತಿಪಾದ್ಯನಾದ ಶ್ರೀನಾರಾಯಣನು ಯಾವಾಗಲೂ ಸನ್ನಿಹಿತನಾಗಿರುವುದಾಗಿ ಯಾವಾಗಲೂ ತಿಳಿಯಬೇಕು. ಇದೇ ಗಾಯತ್ರ್ಯುಪಸಂಹಾರವೆನಿಸುತ್ತದೆ.

ಪ್ರಾತರ್ಮಧ್ಯಂದಿನೇ ವಾಪಿ ಬ್ರಹ್ಮಯಜ್ಞೋ ವಿಧೀಯತೇ |
ಪ್ರಾತರ್ಯದಿ ತದಾ ಪ್ರಾತರಾಹುತ್ಯಾಃ ಪರತೋ ಭವೇತ್ ||
ಮಧ್ಯಾಹ್ನೇ ತರ್ಪಣಾತ್ಪ್ರಾಗ್ವೈ ವೈಶ್ವದೇವಾತ್ಪರತ್ರ ವಾ | (ದಕ್ಷನ ವಚನ)

"ಪ್ರಾತಃಕಾಲದಲ್ಲಾಗಲೀ ಮಧ್ಯಾಹ್ನಕಾಲದಲ್ಲಾಗಲೀ ಬ್ರಹ್ಮಯಜ್ಞವನ್ನು ಮಾಡಬೇಕು. ಪ್ರಾತಃಕಾಲದಲ್ಲಿ ಮಾಡುವುದಾಗಿದ್ದರೆ ಪ್ರಾತಃಕಾಲದ ಆಹುತಿಯ ಅನಂತರದಲ್ಲಿ ಮಾಡಬೇಕು. ಮಧ್ಯಾಹ್ನಕಾಲದಲ್ಲಿ ಮಾಡುವುದಾಗಿದ್ದರೆ ತರ್ಪಣಕ್ಕಿಂತ ಪೂರ್ವದಲ್ಲಾಗಲ್ಲೀ ವೈಶ್ವದೇವದ ಅನಂತರದಲ್ಲಾಗಲೀ ಮಾಡಬೇಕು."

ಸ ಚಾರ್ವಾಕ್ತರ್ಪಣಾತ್ಕಾರ್ಯಃ ಪಶ್ಚಾದ್ವಾ ಪ್ರಾತರಾಹುತೇಃ |
ವೈಶ್ವದೇವಾವಸಾನೇ ವಾ ನಾನ್ಯದರ್ಥೇ ನಿಮಿತ್ತತಃ || (ಬೃಹಸ್ಪತಿ ವಚನ)

ಬ್ರಹ್ಮಯಜ್ಞವು ಪ್ರಾತಃಕಾಲದ ಆಹುತಿಯನ್ನು ಕೊಟ್ಟ ಮೇಲಾಗಲೀ ಮಧ್ಯಾಹ್ನದಲ್ಲಿ ಮಾಡಬೇಕಾದ ತರ್ಪಣಕ್ಕಿಂತ ಪೂರ್ವದಲ್ಲಾಗಲೀ ವೈಶ್ವದೇವದ ಅನಂತರದಲ್ಲಾಗಲೀ ಮಾಡಲ್ಪಡಬೇಕು. ನಿಮಿತ್ತವಿದ್ದರೆ ಬೇರೆ ಸಮಯದಲ್ಲಿಯೂ ಮಾಡಬಹುದು. ನಿಮಿತ್ತವಿಲ್ಲದೆ ಬೇರೆ ಕಾಲದಲ್ಲಿ ಮಾಡಕೂಡದು.

### ಬ್ರಹ್ಮಯಜ್ಞಕಾಲದಲ್ಲಿ ಮಂತ್ರೋಚ್ಚಾರಣಕ್ರಮ

ಮಂದಮೇವ ಪಠೇತ್ಪ್ರಾತರುಚ್ಚೈರ್ಮಧ್ಯಂದಿನೇ ಪಠೇತ್ |
ಉಚ್ಚೈರೇವಾಪರಾಹ್ನೇ ತು ಸಂಧ್ಯಾಕಾಲ ಉಪಾರಮೇತ್ || (ಶೌನಕರ ವಚನ)

ಪ್ರಾತಃಕಾಲದಲ್ಲಿ ಮೆಲ್ಲಗೆಯೂ ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಗಟ್ಟಿಯಾಗಿಯೂ ಮಂತ್ರಗಳನ್ನು ಬ್ರಹ್ಮಯಜ್ಞಕಾಲ್ಲಿ ಪಠನ ಮಾಡಬೇಕು. ಸಂಧ್ಯಾಕಾಲದಲ್ಲಿ ನಿಲ್ಲಿಸಬೇಕು.

### ಈ ವಿಷಯದಲ್ಲಿ ವ್ಯಾಸರ ವಚನ

ಅಗ್ನೇಃ ಪಶ್ಚಿಮತೋ ದೇವಭೂತಯಜ್ಞಾಂತ ಏವ ಚ |

"ಪ್ರಾತಃಕಾಲದ ಆಹುತಿಯ ಅನಂತರದಲ್ಲಿಯೂ ಭೂತಯಜ್ಞಕ್ಕಿಂತ ಪೂರ್ವದಲ್ಲಿಯೂ ಬ್ರಹ್ಮಯಜ್ಞವನ್ನು ಮಾಡಬೇಕು."

### ಈ ವಿಷಯದಲ್ಲಿ ಕೂರ್ಮಪುರಾಣ

ಯದಿ ಸ್ಯಾತ್ತರ್ಪಣಾದರ್ವಾಗ್ಬ್ರಹ್ಮಯಜ್ಞಃ ಕೃತೋ ನ ಹಿ |
ಕೃತ್ವಾ ಮನುಷ್ಯಯಜ್ಞಂ ವೈ ತತಃ ಸ್ವಾಧ್ಯಾಯಮಾರಭೇತ್ ||

"ಮಧ್ಯಾಹ್ನಕಾಲದಲ್ಲಿ ತರ್ಪಣಕ್ಕಿಂತ ಪೂರ್ವದಲ್ಲಿ ಬ್ರಹ್ಮಯಜ್ಞವನ್ನು ಮಾಡದಿದ್ದರೆ ಮನುಷ್ಯಯಜ್ಞಾನಂತರದಲ್ಲಿ ಮಾಡಬೇಕು."

## ಅರಣ್ಯದಲ್ಲಿಯೇ ಬ್ರಹ್ಮಯಜ್ಞವನ್ನು ಮಾಡಬೇಕು

ಅಪಾಂ ಸಮೀಪೇ ನಿಯತೋ ನೈತ್ಯಕಂ ವಿಧಿಮಾಸ್ಥಿತಃ |
ಗಾಯತ್ರೀಮಪ್ಯಧೀಯೀತ ಗತ್ವಾಽರಣ್ಯಂ ಸಮಾಹಿತಃ ||

"ನೀರಿನ ಸಮೀಪದಲ್ಲಿ ನಿತ್ಯಕರ್ಮಗಳನ್ನು ಸಾವಧಾನದಿಂದ ಮಾಡಿ ಕಾಡಿಗೆ ಹೋಗಿ ಗಾಯತ್ರೀ ಮುಂತಾದ ಎಲ್ಲಾ ಮಂತ್ರಗಳನ್ನು ಅಧ್ಯಯನ ಮಾಡಬೇಕು.

## ಬ್ರಹ್ಮಯಜ್ಞಕ್ರಮ

ಪ್ರದಕ್ಷಿಣಂ ಸಮಾವೃತ್ಯ ನಮಸ್ಕೃತ್ಯೋಪವಿಶ್ಯ ಚ |
ದರ್ಭೇಷು ದರ್ಭಪಾಣಿಭ್ಯಾಂ ಸಂಹತಾಭ್ಯಾಂ ಕೃತಾಂಜಲಿಃ ||
ಸ್ವಾಧ್ಯಾಯಂ ತು ಯಥಾಶಕ್ತಿ ಬ್ರಹ್ಮಯಜ್ಞಾರ್ಥಮಾಚರೇತ್ | (ಯೋಗಿಯಾಜ್ಞವಲ್ಕ್ಯರ ವಚನ)

"ಪ್ರದಕ್ಷಿಣಾಕಾರವಾಗಿ ಸುತ್ತಬೇಕು. ನಮಸ್ಕರಿಸಬೇಕು. ದರ್ಭವನ್ನು ಕೆಳಗೆ ತುಂಬಾ ಹಾಸಿ ಬಿಟ್ಟು ಅವುಗಳ ಮೇಲೆ ಕುಳಿತುಕೊಳ್ಳಬೇಕು. ಎರಡು ಕೈಗಳಲ್ಲಿಯೂ ದರ್ಭಗಳನ್ನು ಹಿಡಿದುಕೊಂಡು ಕೈಗಳಿಂದ ಬೊಗಸೆಯನ್ನು ಮಾಡಿಕೊಳ್ಳಬೇಕು. ಬ್ರಹ್ಮಯಜ್ಞಕ್ಕಾಗಿ ಎಲ್ಲಾಮಂತ್ರಗಳನ್ನೂ ಕ್ರಮವಾಗಿ ಉಚ್ಚರಿಸಬೇಕು.

ಪ್ರಾಣಾಯಾಮೈರ್ದಗ್ಧದೋಷಃ ಶುಕ್ಲಾಂಬರಧರಃ ಶುಚಿಃ |
ಯಥಾವಿಧ್ಯಾಪ ಆಚಮ್ಯ ಆಹರೇದ್ದರ್ಭಸಂಸ್ತರು ||
ಪವಿತ್ರಪಾಣೀ ಕೃತ್ವಾ ತು ಉಪಸ್ಥೇ ದಕ್ಷಿಣೋತ್ತರೌ | (ಶೌನಕರ ವಚನ)

"ಶುದ್ಧನಾಗಿ ಶುದ್ಧವಾದ ವಸ್ತ್ರವನ್ನು ಧರಿಸಬೇಕು. ವಿಧಿಪ್ರಕಾರವಾಗಿ ಆಚಮನವನ್ನು ಮಾಡಬೇಕು. ಪ್ರಾಣಾಯಾಮಗಳಿಂದ ಎಲ್ಲಾ ದೋಷಗಳನ್ನೂ ಕಳೆದುಕೊಳ್ಳಬೇಕು. ದರ್ಭಮುಷ್ಟಿಯನ್ನು ಕೈಯಲ್ಲಿ ಧರಿಸಬೇಕು. ಪವಿತ್ರವನ್ನು ಕೈಯಲ್ಲಿ ಧರಿಸಬೇಕು. ಎಡಗೈಯ ಮೇಲೆ ಬಲಗೈಯನ್ನಿಟ್ಟುಕೊಂಡು ಬೊಗಸೆಯಂತೆ ಮಾಡಿಕೊಳ್ಳಬೇಕು. ಆ ಮೇಲೆ ಮಂತ್ರಗಳನ್ನು ಉಚ್ಚರಿಸಬೇಕು.

"ದಕ್ಷಿಣತ ಉಪವೀಯೋಪವಿಶ್ಯ ಹಸ್ತಾವವನಿಜ್ಯ ತ್ರಿರಾಚಾಮೇದ್ದ್ವಿಃ ಪರಿಮೃಜ್ಯ ಸಕೃದುಪಸ್ಪೃಶ್ಯ ಶಿರಶ್ಚಕ್ಷುಷೀ ಶ್ರೋತ್ರೇ ಹೃದಯಮಾಲಭತೇ, ಮಹದುಪಸ್ತೀರ್ಯೋಪಸ್ಥಂ ಕೃತ್ವಾ, ಪ್ರಾಗಾಸೀನೋ ದಕ್ಷಿಣೋತ್ತರೇ ಪಾಣೀ ಕೃತ್ವಾ ಸಪವಿತ್ರಾವೋಮಿತಿ ಪ್ರತಿಪದ್ಯತೇ.

"ಯಜ್ಞೋಪವೀತವನ್ನು ಬಲಕ್ಕೆ ಹಾಕಿಕೊಂಡು ಕುಳಿತುಕೊಳ್ಳಬೇಕು. "ಬ್ರಹ್ಮಯಜ್ಞೇನ ಯಕ್ಷ್ಯೇ" ಎಂದು ಸಂಕಲ್ಪಿಸಬೇಕು. "ವಿದ್ಯುದಸಿ ವಿದ್ಯ ಮೇ" ಎಂಬ ಮಂತ್ರದಿಂದ ನೀರನ್ನು ಮುಟ್ಟಬೇಕು. ಎರಡು ಕೈಗಳನ್ನೂ ಕಾಲುಗಳನ್ನೂ ಮಣಿಗಂಟುಗಳ ಕೆಳಗೆ ತೊಳೆದುಕೊಳ್ಳಬೇಕು. ಮೂರು ಸಲ ಆಚಮನವನ್ನು ಮಾಡಬೇಕು. ಒದ್ದೆಯಾದ ಬೆರಳುಗಳಿಂದ ಎರಡು ತುಟಿಗಳನ್ನೂ ಎರಡು ಸಲ ಮುಟ್ಟಬೇಕು. ಪುನಃ ಒಮ್ಮೆ ಆಚಮನವನ್ನು ಮಾಡಬೇಕು. ಎಡಗೈಯನ್ನೂ ಎರಡು ಕಾಲುಗಳನ್ನೂ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಒದ್ದೆಯಾದ ಕೈಯಿಂದ ತಲೆಯನ್ನೂ ಎರಡು ಕಣ್ಣುಗಳನ್ನೂ ಮೂಗಿನ ಎರಡು ರಂಧ್ರಗಳನ್ನೂ ಎರಡು ಕಿವಿಗಳನ್ನೂ ಎದೆಯನ್ನೂ ಮುಟ್ಟಿಕೊಳ್ಳಬೇಕು. ಧಾರಾಳವಾಗಿ ದರ್ಭಗಳನ್ನು ಹಾಸಿ ಅವುಗಳ ಮೇಲೆ ಕುಳಿತುಕೊಳ್ಳಬೇಕು. ಸರಿಯಾಗಿ ಪೂರ್ವಾಭಿಮುಖವಾಗಿ ಕುಳಿತು ಎಡಗೈಯನ್ನು ದಕ್ಷಿಣಾಭಿಮುಖವಾಗಿಯೂ ಬಲಗೈಯನ್ನು ಉತ್ತರಾಭಿಮುಖವಾಗಿಯೂ ಬಲಮೊಣಕಾಲಿನ ಮೇಲೆ ಇಡಬೇಕು. "ಓಂ" ಎಂಬ ಮಂತ್ರದಿಂದ ಮಂತ್ರಗಳನ್ನು ಜಪಿಸಲು ಆರಂಭಿಸಬೇಕು.

"ಪೂರ್ವಯಾ ವ್ಯಾಹೃತ್ಯಾ ಸಾವಿತ್ರೀಮನ್ವಾಹ ಪಚ್ಛೋರ್ಧರ್ಚಶಃ ಸರ್ವಾಮಿತಿ ದ್ಯಾವಾಪೃಥಿವ್ಯೋಃ ಸಮೀಕ್ಷಮಾಣಃ" ಸಮ್ಮೀಲ್ಯ ವಾ, ಯಥಾಯುಕ್ತಮಾತ್ಮಾನಂ ಮನ್ಯೇತ, ತಥಾ ಯುಕ್ತೋಽಧೀಯೀತ ||

(1) "ಓಂ ಭೂಃ ತತ್ಸವಿತುರ್ವರೇಣ್ಯಂ" "ಓಂ ಭುವಃ ಭರ್ಗೋ ದೇವಸ್ಯ ಧೀಮಹಿ" "ಓಂ ಸ್ವಃ ಧಿಯೋ ಯೋ ನಃ ಪ್ರಚೋದಯಾತ್" ಎಂದು ಮೂರು ವ್ಯಾಹೃತಿಮಂತ್ರಗಳನ್ನು ಪ್ರತ್ಯೇಕವಾಗಿ ಗಾಯತ್ರಿಯ ಮೂರುಪಾದಗಳೊಡನೆ ಜೋಡಿಸಿ ಜಪಿಸಬೇಕು. (2) ಓಂ ಭೂರ್ಭುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ." "ಓಂ ಸ್ವಃ ಧಿಯೋಯೋ ನಃ ಪ್ರಚೋದಯಾತ್" ಎಂದು ಎರಡು ವ್ಯಾಹೃತಿಮಂತ್ರಗಳೊಡನೆ ಗಾಯತ್ರಿಯ ಎರಡು ಪಾದಗಳನ್ನೂ, ಮೂರನೆಯ ವ್ಯಾಹೃತಿಯೊಡನೆ ಗಾಯತ್ರಿಯ ಮೂರನೆಯ ಪಾದವನ್ನೂ ಜೋಡಿಸಿ ಜಪಿಸಬೇಕು. (3) ಓಂ ಭೂಃ ಭುವಃ ಸ್ವಃ ಎಂಬ ಮೂರು ವಾಹೃತಿಮಂತ್ರಗಳೊಡನೆ ಪೂರ್ಣಗಾಯತ್ರಿಯನ್ನೂ ಜಪಿಸಬೇಕು. ಜಪಕಾಲದಲ್ಲಿ ಆಕಾಶ ಮತ್ತು ಭೂಮಿಗಳ ಮಧ್ಯದಲ್ಲಿ ನೋಡಬೇಕು. ಮೇಲೆ ಅಥವಾ ಕೆಳಗೆ ನೋಡಬಾರದು. ಕಣ್ಣುಗಳನ್ನೂ ಮುಚ್ಚಿಕೊಂಡೂ ಜಪಿಸಬಹುದು.

ಆದಾವಾರಭ್ಯ ವೇದಂ ತು ಸ್ನಾತ್ವೋಽಪರ್ಯುಪರಿ ಕ್ರಮಾತ್ |
ಯದಧೀತೇಽನ್ವಹಂ ಶಕ್ತ್ಯಾ ಸ ಸ್ವಾಧ್ಯಾಯ ಇತಿ ಸ್ಮೃತಃ || (ಯೋಗಿಯಾಜ್ಞವಲ್ಕ್ಯರ ವಚನ)

ನಾಲ್ಕು ವೇದಗಳನ್ನು ಆರಂಭಿಸಿ ಅವುಗಳ ಅನಂತರದಲ್ಲಿ ಬ್ರಾಹ್ಮಣಗಳನ್ನೂ ಮಹಾಭಾರತ ಮುಂತಾದ ಇತಿಹಾಸಗಳನ್ನೂ ಪುರಾಣಗಳನ್ನೂ ಕಲ್ಪಸೂತ್ರಾದಿಗಳನ್ನೂ ಮೇಲೆ ಮೇಲೆ ಜಪಿಸಬೇಕು. ಇದೇ ಬ್ರಹ್ಮಯಜ್ಞವೆನಿಸುತ್ತದೆ."

ಓಂಕಾರಂ ವಾಹೃತೀಸ್ತಿಸ್ರೋ ಗಾಯತ್ರೀಂ ಚ ತದಿತ್ಯೃಚಮ್ |
ಮನಸ್ಯೆತಾನನುಸ್ಮೃತ್ಯ ವೇದಾದೀನ್ ಸಮುಪಕ್ರಮೇತ್ || (ವಿಷ್ಣು ವಚನ)

ಓಂಕಾರ, ವಾಹೃತಿಮಂತ್ರಗಳು, ಗಾಯತ್ರೀಮಂತ್ರ ಈ ಮೂರು ಮಂತ್ರಗಳನ್ನು ಮನಸ್ಸಿನಲ್ಲಿಯೇ ಜಪಿಸಬೇಕು. ಅನಂತರದಲ್ಲಿ ನಾಲ್ಕು ವೇದಗಳು ಮುಂತಾದವುಗಳನ್ನು ಬಾಯಿಯಿಂದ ಸ್ಪಷ್ಟವಾಗಿ ಉಚ್ಚರಿಸಬೇಕು. ಈ ಬ್ರಹ್ಮಯಜ್ಞವನ್ನು ಅನಧ್ಯಾಯ ದಿನಗಳಲ್ಲಿಯೂ ಮಾಡಬೇಕು.

ನೈತ್ಯಕೇ ನಾಸ್ತ್ಯನಧ್ಯಾಯೋ ಬ್ರಹ್ಮಯಜ್ಞಂ ಹಿ ತತ್ಸ್ಮೃತಮ್ || (ಮನು ವಚನ)

"ಬ್ರಹ್ಮಯಜ್ಞವು ನಿತ್ಯಯಾಗರೂಪವಾಗಿದೆ. ನಿತ್ಯವಾದ ಯಾವ ಕರ್ಮಗಳಲ್ಲಿಯೂ ಅನಧ್ಯಾಯವಿಲ್ಲ. ಆದ್ದರಿಂದ ಯಾವಾಗಲೂ ಮಾಡಬೇಕು."

"ತಸ್ಯ ವಾ ಏತಸ್ಯ ಯಜ್ಞಸ್ಯ ದ್ವಾವನಧ್ಯಾಯೌ ಯದಾತ್ಮಾಽಶುಚಿರ್ಯದ್ದೇಶಃ || (ಶ್ರುತಿ ವಚನ)

"ಜಾತಾಶೌಚ ಮುಂತಾದ ಅಶೌಚಗಳಿಂದ ದೇಹವೂ ಅಯೋಗ್ಯವಸ್ತುಗಳ ಸಂಬಂಧದಿಂದ ದೇಶವೂ ಅಶುದ್ಧವಾಗಿರುವಾಗ ಬ್ರಹ್ಮಯಜ್ಞವನ್ನು ಮಾಡಕೂಡದು."

ಸ ವಾ ಏಷ ಯಜ್ಞಃ ಸಂತಿಷ್ಠತೇ ತಸ್ಯ ಪ್ರಾಕ್ಸಾಯಮವಭೃಥೋ "ನಮೋ ಬ್ರಹ್ಮಣೇ" ಇತಿ ಪರಿಧಾನೀಯಾಂ ತ್ರಿಃ ಬ್ರೂಯಾತ್, ಅಪ ಉಪಸ್ಪೃಶ್ಯ ಗೃಹಾನೇತಿ. ತತೋ ಯತ್ಕಿಂಚಿದ್ದದಾತಿ. ಸಾ ದಕ್ಷಿಣೇತಿ.

"ಓಂ ನಮೋ ಬ್ರಹ್ಮಣೇ" ಎಂಬ ಮಂತ್ರವನ್ನು ಬ್ರಹ್ಮಯಜ್ಞವು ಮುಗಿಯುವಾಗ ಮೂರು ಸಲ ಹೇಳಬೇಕು. ಅದೇ ಬ್ರಹ್ಮಯಜ್ಞಕ್ಕೆ ಹೊದಿಕೆಯಂತೆ ರಕ್ಷಕವಾಗುತ್ತದೆ. ಅನಂತರದಲ್ಲಿ ಆಚಮನವನ್ನು ಮಾಡಿ ಮನೆಗೆ ಹಿಂದಿರುಗಬೇಕು. ಕೈಯಲ್ಲಿದ್ದ ಸ್ವಲ್ಪವಾದ ಹಣವನ್ನಾದರೂ ಯಾರಿಗಾದರೂ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು."

## ಬ್ರಹ್ಮಯಜ್ಞದಿಂದ ಬರುವ ಫಲ

ಯಂ ಯಂ ಕ್ರತುಮಧೀಯೀತ ತಸ್ಯ ತಸ್ಯಾಪ್ನುಯಾತ್ಫಲಮ್ |
ತ್ರಿರ್ವಿತ್ತಪೂರ್ಣಾಪೃಥಿವೀದಾನಸ್ಯ ಫಲಮಶ್ನುತೇ || (ಯಾಜ್ಞವಲ್ಕ್ಯರ ವಚನ)

ಯಾವ ಯಾವ ಯಜ್ಞ ಮುಂತಾದ ಕಾರ್ಯಗಳನ್ನು ಮಾಡುವನೋ ಆ ಎಲ್ಲಾ ಯಜ್ಞ ಮುಂತಾದವುಗಳ ಫಲವನ್ನು ಬ್ರಹ್ಮಯಜ್ಞವನ್ನು ಮಾಡುವವನು ಪಡೆಯುವನು. ಹಣದಿಂದ ತುಂಬಿರುವ ಭೂಮಿಯನ್ನು ಮೂರು ಸಲ ದಾನ ಮಾಡಿದ ಫಲವನ್ನೂ ಪಡೆಯುವನು.

## ತರ್ಪಣವನ್ನು ಮಾಡುವ ಕ್ರಮ

ಋಕ್ಸಾಮಾಥರ್ವವೇದೋಕ್ತಾನ್ ಜಪ್ಯ ಮಂತ್ರಾನ್ಯಜೂಂಷಿ ಚ |
ಜಪಿತ್ವೈವ ತತಃ ಕುರ್ಯಾದ್ದೇವರ್ಷಿಪಿತೃತರ್ಪಣಮ್ || (ವಸಿಷ್ಠರ ವಚನ)

"ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬ ನಾಲ್ಕುವೇದಗಳಲ್ಲಿ ಹೇಳಲ್ಪಟ್ಟ ಜಪಿಸಬೇಕಾದ ಎಲ್ಲಾ ಮಂತ್ರಗಳನ್ನೂ ಜಪಿಸಿ ಮುಗಿಸಿದ ಮೇಲೆ ಅಂದರೆ ಬ್ರಹ್ಮಯಜ್ಞವನ್ನು ಮಾಡಿದ ಮೇಲೆ ದೇವತೆಗಳಿಗೂ ಋಷಿಗಳಿಗೂ ಪಿತೃಗಳಿಗೂ ತರ್ಪಣವನ್ನು ಕೊಡಬೇಕು."

ಬ್ರಹ್ಮಯಜ್ಞಪ್ರಸಿದ್ಧ್ಯರ್ಥಂ ವಿದ್ಯಾಮಾಧ್ಯಾತ್ಮಿಕೀಂ ಜಪೇತ್ |
ಜಪ್ತ್ವಾ ವಾ ಪ್ರಣವಂ ಶಕ್ತ್ಯಾ ತತಸ್ತರ್ಪಣಮಾಚರೇತ್ || (ವಸಿಷ್ಠರ ವಚನ)

"ಬ್ರಹ್ಮಯಜ್ಞದಿಂದ ಬರಬೇಕಾದ ಎಲ್ಲಾ ಫಲಗಳೂ ಬರುವುದಕ್ಕಾಗಿ ಬ್ರಹ್ಮಸೂತ್ರಗಳು ಮುಂತಾದ ಅಧ್ಯಾತ್ಮ ವಿದ್ಯೆಗಳನ್ನು ಜಪಿಸಬೇಕು. ಶಕ್ತ್ಯನುಸಾರವಾಗಿ ಓಂಕಾರವನ್ನು ಜಪಿಸಿ ತರ್ಪಣವನ್ನು ಕೊಡಬೇಕು."

## ತರ್ಪಣದಲ್ಲಿ ಬೊಗಸೆಗಳ ಕ್ರಮ

ಏಕೈಕಮಂಜಲಿಂ ದೇವಾ ದ್ವೌ ದ್ವೌ ಚ ಸನಕಾದಯಃ |
ಅರ್ಹಂತಿ ಪಿತರಸ್ತ್ರೀನ್ ತ್ರೀನ್ ಸ್ತ್ರಿಯಶ್ಚೈಕೈಕಮಂಜಲಿಮ್ ||

ದೇವತೆಗಳು ಒಂದೊಂದು ಬೊಗಸೆಗಳನ್ನೂ ಸನಕಾದಿಋಷಿಗಳು ಎರಡೆರಡು ಬೊಗಸೆಗಳನ್ನೂ ಪಿತೃಗಳು ಮೂರು ಮೂರು ಬೊಗಸೆಗಳನ್ನೂ ಸ್ತ್ರೀಯರು ಒಂದೊಂದು ಬೊಗಸೆಗಳನ್ನೂ ಸ್ವೀಕರಿಸುವರು. ಸ್ತ್ರೀಯರಿಗೆ ಮೂರು ಮೂರು ಬೊಗಸೆಗಳನ್ನು ಕೊಡುವುದೂ ಉಂಟು. ಸಂಪ್ರದಾಯದಂತೆ ಮಾಡಬೇಕು.

## ಈ ತರ್ಪಣವನ್ನು ನೆಲದಲ್ಲಿ ಕೊಡಬೇಕು

ನೋದಕೇಷು ನ ಪಾತ್ರೇಷು ನ ಕ್ರುದ್ಧೋ ನೈಕಪಾಣಿನಾ |
ನೋಪತಿಷ್ಠತಿ ತತ್ತೋಯಂ ಯನ್ನ ಭೂಮೌ ಪ್ರಲೀಯತೇ || (ಗೋಭಿಲರ ವಚನ)

"ನೀರಿನಲ್ಲಿಯೂ, ಪಾತ್ರೆಯಲ್ಲಿಯೂ, ಕುಪಿತನಾಗಿಯೂ, ಒಂದು ಕೈಯಿಂದಲೂ ತರ್ಪಣವನ್ನು ಕೊಡಕೂಡದು. ಭೂಮಿಯಲ್ಲಿ ಬಿದ್ದು ಭೂಮಿಯೊಳಗೆ ಪ್ರವೇಶಿಸದಿರುವ ತರ್ಪಣಜಲವು ದೇವತೆಗಳು ಮುಂತಾದವರಿಗೆ ಸೇರಲಾರದು."

ವಸಿತ್ವಾ ವಸನಂ ಶುಷ್ಕಂ ಸ್ಥಲೇ ವಿಸ್ತೀರ್ಣಬರ್ಹಿಷಿ |
ವಿಧಿಜ್ಞಸ್ತರ್ಪಣಂ ಕುರ್ಯಾನ್ನ ಪಾತ್ರೇಷು ಕದಾಚನ || (ಹಾರೀತರ ವಚನ)

ಒಣಗಿದ ಬಟ್ಟೆಯನ್ನು ಉಟ್ಟುಕೊಳ್ಳಬೇಕು. ನೆಲದಲ್ಲಿ ದರ್ಭೆಯನ್ನು ಬಿಡಿಸಿ ಹಾಕಬೇಕು. ತರ್ಪಣದ ವಿಧಿಯನ್ನು ತಿಳಿದು ತರ್ಪಣವನ್ನು ಕೊಡಬೇಕು. ಪಾತ್ರೆಗಳಲ್ಲಿ ಯಾವಾಗಲೂ ಕೊಡಕೂಡದು.

### ಭಂಗಾರ, ಬೆಳ್ಳಿ, ತಾಮ್ರ, ಮತ್ತು ಕಂಚುಗಳಿಂದ ಮಾಡಲ್ಪಟ್ಟ ಪಾತ್ರೆಗಳಲ್ಲಿ ಕೊಡಬಹುದು

ಹೇಮರೌಪ್ಯಮಯಂ ಪಾತ್ರಂ ತಾಮ್ರಕಾಂಸ್ಯಸಮುದ್ಭವಮ್ |
ಪಿತೄಣಾಂ ತರ್ಪಣೇ ಪಾತ್ರಂ ಮೃಣ್ಮಯಂ ತು ಪರಿತ್ಯಜೇತ್ || (ಪಿತಾಮಹ ವಚನ)

ಪಿತೃಗಳಿಗೆ ತರ್ಪಣವನ್ನು ಮಾಡುವಾಗ ಮಣ್ಣಿನ ಪಾತ್ರೆಯಲ್ಲಿ ಯಾವ ಕಾರಣದಿಂದಲೂ ಮಾಡಕೂಡದೂ. ಭಂಗಾರ, ಬೆಳ್ಳಿ, ಕಂಚು, ತಾಮ್ರಗಳ ಪಾತ್ರೆಗಳಲ್ಲಿ ಮಾಡಬಹುದು.

### ದರ್ಭೆಯನ್ನು ಹಾಸುವ ಕ್ರಮ

ಅಪಾಂ ಹ್ಯಪೂರ್ವವನ್ಮಂತ್ರೈರಾಸ್ತೀರ್ಯ ಚ ಕುಶಾನ್ಬಹೂನ್ |
ಪ್ರಾಗಗ್ರೇಷು ಸುರಾನ್ ಸಮ್ಯಗ್ದಕ್ಷಿಣಾಗ್ರೇಷು ವೈ ಪಿತೄನ್ || (ಯೋಗಿಯಾಜ್ಞವಲ್ಕ್ಯರ ವಚನ)

ದರ್ಭೆಯ ತುದಿಯನ್ನು ಪೂರ್ವಾಭಿಮುಖವಾಗಿ ಹಾಸಿ ದೇವತೆಗಳನ್ನೂ ದಕ್ಷಿಣಾಭಿಮುಖವಾಗಿ ಹಾಸಿ ಪಿತೃಗಳನ್ನೂ ಉದ್ದೇಶಿಸಿ ಆಯಾ ಮಂತ್ರಗಳಿಂಧ ತರ್ಪಣವನ್ನು ಕೊಡಬೇಕು.

### ಶುಚಿಯಾದ ಭೂಮಿಯಿಲ್ಲದಿರುವಾಗ ಜಲದಲ್ಲಿ ತರ್ಪಣವನ್ನು ಕೊಡಬಹುದು

ಯತ್ರಾಶುಚಿ ಸ್ಥಲಂ ವಾ ಸ್ಯಾದುದಕೇ ದೇವತಾಃ ಪಿತೄನ್ |
ತರ್ಪಯೇತ್ತು ಯಥಾಕಾಮಮಪ್ಸು ಸರ್ವಂ ಪ್ರತಿಷ್ಠಿತಮ್ || (ವಿಷ್ಣುವಿನ ವಚನ)

"ಯಾವ ಸ್ಥಳದಲ್ಲಿ ಭೂಮಿಯು ಅಶುಚಿಯಾಗಿದೆಯೋ ಆ ಸ್ಥಳದಲ್ಲಿ ದೇವತೆಗಳಿಗೂ ಪಿತೃಗಳಿಗೂ ನೀರಿನಲ್ಲೇ ತರ್ಪಣವನ್ನು ಕೊಡಬಹುದು. ನೀರಿನಲ್ಲಿಯೇ ಎಲ್ಲಾ ಸನ್ನಿಧಾನವೂ ಇರುತ್ತದೆ."

ದೇವತಾನಾಂ ಪಿತೄಣಾಂ ಚ ಜಲೇ ದದ್ಯಾಜ್ಜಲಾಂಜಲಿಮ್ |
ಅಸಂಸ್ಕೃತಪ್ರಮೀತಾನಾಂ ಸ್ಥಾನೇ ದದ್ಯಾಜ್ಜಲಂ ಪುನಃ || (ಕಾರ್ಷ್ಣಾಜಿನಿ ವಚನ)

"ದೇವತೆಗಳಿಗೂ ಪಿತೃಗಳಿಗೂ ನೀರಿನಲ್ಲಿ ತರ್ಪಣವನ್ನು ಕೊಡಬೇಕು. ಕೆಲವರು ಸತ್ತಾಗ ಅವರಿಗೆ ಅಗ್ನಿಸಂಸ್ಕಾರವು ನಡೆದಿರುವುದಿಲ್ಲ. ಅವರಿಗೆ ಭೂಮಿಯಲ್ಲಿ ಒಂದೇ ಒಂದು ತರ್ಪಣವನ್ನು ಕೊಡಬೇಕು."

ಜಲಾಂಜಲಿತ್ರಯಂ ದದ್ಯಾದ್ಯೇ ಚಾನ್ಯೇ ಸಂಸ್ಕೃತಾ ಭುವಿ |
ಅಸಂಸ್ಕೃತಪ್ರಮೀತಾನಾಮೇಕಮೇವ ತಟೇ ಕ್ಷಿಪೇತ್ || (ಬೋಧಾಯನರ ವಚನ)

"ಭೂಮಿಯಲ್ಲಿ ದಹನಸಂಸ್ಕಾರ ಮಾಡಲ್ಪಟ್ಟವರಿಗೆ ಮೂರು ತರ್ಪಣಗಳನ್ನು ಕೊಡಬೇಕು. ಹಿಂದೆ ಹೇಳಲ್ಪಟ್ಟ ಅಸಂಸ್ಕೃತಪ್ರಮೀತರಿಗಾಗಿ ಒಂದೇ ಒಂದು ತರ್ಪಣವನ್ನು ನದೀ ಮುಂತಾದವುಗಳ ದಡದಲ್ಲಿ ಬಿಡಬೇಕು.

### ಅಸಂಸ್ಕೃತಪ್ರಮೀತರಿಗೆ ಕೊಡುವ ತರ್ಪಣಕ್ಕೆ ಮಂತ್ರ

ಅಗ್ನಿದಗ್ಧಾಶ್ಚ ಯೇ ಜಾತಾ ಯೇ ವಾ ದಗ್ಧಾಃ ಕುಲೇ ಮಮ |
ಭೂಮೌ ದತ್ತೇನ ತೋಯೇನ ತೃಪ್ತಾ ಯಾಂತು ಪರಾಂ ಗತಿಮ್ ||

### ಬರೇ ಕೈಯಿಂದ ತರ್ಪಣವನ್ನು ಕೊಡಕೂಡದು

ಖಡ್ಗಮೌಕ್ತಿಕಹಸ್ತೇನ ಕರ್ತವ್ಯಂ ಪಿತೃತರ್ಪಣಮ್ |
ಮಣಿಕಾಂಚನದರ್ಭೈರ್ವಾ ನ ಶುಷ್ಕೇಣ ಕದಾಚನ ||

"ಪಿತೃತರ್ಪಣವನ್ನು ಕೊಡುವಾಗ ಖಡ್ಗ, ಮುತ್ತುಗಳು, ಮಣಿಗಳು, ಭಂಗಾರ ಅಥವಾ ಪವಿತ್ರಗಳನ್ನು ಧರಿಸಿಯೇ ಕೊಡಬೇಕು. ಒರೇ ಕೈಯಿಂದ ಕೊಡಬಾರದು."

ಅನಾಮಿಕಾದ್ಧೃತಂ ಹೇಮ ತರ್ಜನ್ಯಾಂ ರೂಪ್ಯಮೇವ ಚ |
ಕನಿಷ್ಠಿಕಾದ್ಧೃತಂ ಖಡ್ಗಂ ತೇನ ಪೂತೋ ಭವೇನ್ನರಃ || (ಯೋಗಯಾಜ್ಞವಲ್ಕ್ಯರ ವಚನ)

"ಉಂಗುರದ ಬೆರಳಿನಲ್ಲಿ ಭಂಗಾರವನ್ನೂ ತೋರ್ಬೆರಳಿನಲ್ಲಿ ಬೆಳ್ಳಿಯನ್ನೂ ಕಿರಿಬೆರಳಿನಲ್ಲಿ ಖಡ್ಗವನ್ನೂ ಧರಿಸಿದವನು ಪರಿಶುದ್ಧನಾಗುವನು."

ವಿನಾ ರೂಪ್ಯಸುವರ್ಣೇನ ವಿನಾ ತಾಮ್ರಮಯೈಸ್ತಥಾ |
ವಿನಾ ಮಂತ್ರೈಶ್ಚ ದರ್ಭೈಶ್ಚ ಪಿತೄಣಾಂ ನೋಪತಿಷ್ಠತೇ || (ಮರೀಚಿ ವಚನ)

"ಬೆಳ್ಳಿ, ಭಂಗಾರ ಮತ್ತು ತಾಮ್ರಗಳು, ಮಂತ್ರಗಳು ಇಲ್ಲದೆ ಕೊಡುವ ತರ್ಪಣ ಮುಂತಾದವುಗಳು ಪಿತೃಗಳಿಗೆ ಹೋಗಿ ಸೇರುವುದಿಲ್ಲ."

ತಿಲಾನಾಮಪ್ಯಭಾವೇ ತು ಸುವರ್ಣರಜತಾನ್ವಿತಮ್ |
ತದಭಾವೇ ನಿಷಿಂಚೇತ್ತು ದರ್ಭೈರ್ಮಂತ್ರೈಶ್ಚ ವಾ ಪುನಃ || (ಮರೀಚಿ ವಚನ)

"ಎಳ್ಳು ಇಲ್ಲದಿರುವಾಗ ಭಂಗಾರ ಅಥವಾ ಬೆಳ್ಳಿಯ ಉಂಗುರದೊಡನೆಯೂ ಅದೂ ಇಲ್ಲದಿರುವಾಗ ದರ್ಭೆಯಿಂದ ನಿರ್ಮಿತವಾದ ಪವಿತ್ರವನ್ನು ಧರಿಸಿಯೂ, ಅದೂ ಇಲ್ಲದಿರುವಾಗ ಮಂತ್ರಗಳಿಂದಲೂ ಪಿತೃತರ್ಪಣವನ್ನು ಕೊಡಬೇಕು.

**ತರ್ಪಣಕಾಲದಲ್ಲಿ ಯಜ್ಞೋಪವೀತವನ್ನು ಧರಿಸುವ ಕ್ರಮ**

ಕೃತೋಪವೀತೋ ದೇವೇಭ್ಯೋ ನಿವೀತೀ ಚ ಭವೇತ್ತತಃ |
ಮನುಷ್ಯಾಂಸ್ತರ್ಪಯೇದ್ಭಕ್ತ್ಯಾ ಬ್ರಹ್ಮಪುತ್ರಾನೃಷೀಂಸ್ತಥಾ ||
ಅಪಸವ್ಯಂ ತತಃ ಕೃತ್ವಾ ಸವ್ಯಜಾನ್ವಾ ಚ ಭೂತಲೇ |
ದರ್ಭಪಾಣಿಸ್ತು ವಿಧಿನಾ ಪಿತೄನ್ ಸಂತರ್ಪಯೇತ್ತತಃ || (ಸತ್ಯವ್ರತರ ವಚನ)

ಯಜ್ಞೋಪವೀತದ ಒಂದು ಭಾಗವನ್ನು ಎಡಹೆಗಲಿನ ಮೇಲೆಯೂ ಇನ್ನೊಂದು ಭಾಗವನ್ನು ಹೊಟ್ಟೆಯ ಬಲಭಾಗದಲ್ಲಿಯೂ ಬರುವಂತೆ ಹಾಕಿಕೊಳ್ಳುವುದು ಸವ್ಯ ಅಥವಾ ಉಪವೀತವೆನಿಸುತ್ತದೆ. ಇದಕ್ಕೆ ವಿಪರೀತವಾಗಿ ಅಂದರೆ ಯಜ್ಞೋಪವೀತದ ಒಂದು ಭಾಗವನ್ನು ಬಲಹೆಗಲಿನ ಮೇಲಿಯೂ ಇನ್ನೊಂದು ಭಾಗವನ್ನು ಹೊಟ್ಟೆಯ ಎಡಭಾಗದಲ್ಲಿಯೂ ಬರುವಂತೆ ಹಾಕಿಕೊಳ್ಳುವುದು ಅಪಸವ್ಯವೆನಿಸುತ್ತದೆ. ಯಜ್ಞೋಪವೀತವನ್ನು ಹೊಟ್ಟೆಯ ಮುಂದೆ ಮೂಲಾಕಾರವಾಗಿ ಧರಿಸುವುದು ನಿವೀತವೆನಿಸುತ್ತದೆ. ದೇವತೆಗಳಿಗೆ ತರ್ಪಣವನ್ನು ಕೊಡುವಾಗ ಸವ್ಯವಾಗಿಯೂ, ಮನುಷ್ಯರಿಗೂ ಬ್ರಹ್ಮಪುತ್ರರಾದ ಋಷಿಗಳಿಗೂ ತರ್ಪಣವನ್ನು ಕೊಡುವಾಗ ನಿವೀತವಾಗಿಯೂ ಪಿತೃಗಳಿಗೆ ತರ್ಪಣವನ್ನು ಕೊಡುವಾಗ ಅಪಸವ್ಯವಾಗಿಯೂ ಯಜ್ಞೋಪವೀತವನ್ನು ಧರಿಸಬೇಕು. ಅದು ಮಾತ್ರವಲ್ಲ. ಪಿತೃತರ್ಪಣವನ್ನು ಕೊಡುವಾಗ ಎಡಮೊಣಕಾಲನ್ನು ಭೂಮಿಯಲ್ಲಿಟ್ಟು ಪವಿತ್ರಧಾರಿಯಾಗಿ ತರ್ಪಣವನ್ನು ಕೊಡಬೇಕು.

ಬ್ರಹ್ಮಾಣಂ ತರ್ಪಯೇತ್ಪೂರ್ವಂ ವಿಷ್ಣುಂ ರುದ್ರಂ ಪ್ರಜಾಪತಿಮ್ |
ವೇದಾನ್ ಛಂದಾಂಸಿ ದೇವಾಂಶ್ಚ ಋಷೀಂಶ್ಚೈವ ತಪೋಧನಾನ್ ||
ಆಚಾರ್ಯಾಂಶ್ಚೈವ ಗಂಧರ್ವಾನಾಚಾರ್ಯತನಯಾಂಸ್ತಥಾ ||
ಸಂವತ್ಸರಂ ಸಾವಯವಂ ದೇವೀರಪ್ಸರಸಸ್ತಥಾ |

ತಥಾ ದೇವಾನ್ನರಾನ್ನಾಗಾನ್ಸಾಗರಾನ್ ಪರ್ವತಾನಪಿ |
ಸರಿತಶ್ಚ ಮನುಷ್ಯಾಂಶ್ಚ ಯಕ್ಷಾನ್ ರಕ್ಷಾಂಸಿ ಚೈವ ಹಿ |
ಪಿಶಾಚಾಂಶ್ಚ ಸುಪರ್ಣಾಂಶ್ಚ ಭೂತಾನನ್ಯಾನ್ಪಶೂಂಸ್ತಥಾ |
ವನಸ್ಪತೀರೋಷಧೀಶ್ಚ ಭೂತಗ್ರಾಮಾಂಶ್ಚತುರ್ವಿಧಾನ್ ||
ಸವ್ಯಂ ಜಾನುಂ ತತೋಽನ್ವಾಚ್ಯ ಪಾಣಿಭ್ಯಾಂ ದಕ್ಷಿಣಾಮುಖಃ |
ಅಭ್ಯಿಂಗೈಸ್ತರ್ಪಯೇನ್ಮಂತ್ರೈಸ್ಸರ್ವಾನ್ ಪಿತೃಗಣಾಂಸ್ತಥಾ ||
ಮಾತಾಮಹಾಂಶ್ಚ ಸತತಂ ಶ್ರದ್ಧಯಾ ತರ್ಪಯೇದ್ದ್ವಿಜಃ |

ಬ್ರಹ್ಮ, ವಿಷ್ಣು, ರುದ್ರ, ಪ್ರಜಾಪತಿ, ವೇದಗಳು, ಛಂದಸ್ಸುಗಳು, ದೇವತೆಗಳು, ಋಷಿಗಳು, ತಪೋಧನರು, ಆಚಾರ್ಯರು, ಗಂಧರ್ವರು, ಆಚಾರ್ಯಪುತ್ರರು, ಸಂವತ್ಸರ, ಸಂವತ್ಸರದ ಅವಯವಗಳು, ಅಪ್ಸರಃಸ್ತ್ರೀಯರು, ಮನುಷ್ಯರು, ಸರ್ಪಗಳು, ಸಮುದ್ರಗಳು, ಪರ್ವತಗಳು, ನದಿಗಳು, ಯಕ್ಷರು, ರಾಕ್ಷಸರು, ಪಿಶಾಚಗಳು, ಸುಪರ್ಣಪಕ್ಷಿಗಳು, ಭೂತಗಳು, ಪಶುಗಳು. ವನಸ್ಪತಿಗಳು, ಔಷಧಿಗಳು, ಜರಾಯುಜ ಅಂಡಜ ಸ್ವೇದಜ ಉದ್ಭಿಜ ಎಂದು ನಾಲ್ಕು ವಿಧವಾದ ಪ್ರಾಣಿಗಳು. ಇವರೆಲ್ಲರಿಗೂ ತರ್ಪಣವನ್ನು ಕೊಡಬೇಕು. ಅನಂತರದಲ್ಲಿ ದಕ್ಷಿಣದಿಕ್ಕಿಗೆ ಅಭಿಮುಖನಾಗಿ ಎಡಮೊಣಕಾಲನ್ನು ಭೂಮಿಯಲ್ಲಿಟ್ಟು, ಎಲ್ಲಾ ಪಿತೃಗಳಿಗೂ ತಾಯಿಯ ತಂದೆಗೂ ಎರಡು ಕೈಗಳಿಂದ ತರ್ಪಣವನ್ನು ಕೊಡಬೇಕು.

### ಕಾಂಡರ್ಷಿತರ್ಪಣ

ಅಥ ಕಾಂಡಋಷೀನೇತಾನುದಕಾಂಜಲಿಭಿಸ್ತ್ರಿಭಿಃ |
ಅವ್ಯಗ್ರಸ್ತರ್ಪಯೇನ್ನಿತ್ಯಂ ಮಂತ್ರೈರೇವಾಷ್ಟನಾಮಭಿಃ ||

ಯಜುಶ್ಶಾಖೆಯವರಿಗೆ ಅಗ್ನಿ, ವಿಷ್ಣು, ಪ್ರಜಾಪತಿ ಮುಂತಾದ ಎಂಟು ಕಾಂಡಋಷಿಗಳು ಹೇಳಲ್ಪಟ್ಟಿರುವರು. ಯಜುಃ ಶಾಖೆಯವರು ಮೇಲ್ಕಂಡ ತರ್ಪಣಗಳನ್ನೆಲ್ಲಾ ಕೊಟ್ಟ ಮೇಲೆ ಪ್ರತಿದಿನಗಳಲ್ಲಿಯೂ ಎಂಟು ಕಾಂಡಋಷಿಗಳ ಹೆಸರುಗಳನ್ನು ಹೇಳುತ್ತಾ ಮೂರು ಮೂರು ಬೊಗಸೆ ನೀರುಗಳನ್ನು ತರ್ಪಣವಾಗಿ ಕೊಡಬೇಕು.

### ಪಿತೃತರ್ಪಣವನ್ನು ಕೊಡುವ ಕ್ರಮ

ಅಪಸವ್ಯಂ ತತಃ ಕೃತ್ವಾ ಸ್ಥಿತ್ವಾ ಚ ಪಿತೃದಿಙ್ಮುಖಃ |
ಪಿತೃನ್ ದಿವ್ಯಾನದಿವ್ಯಾಂಶ್ಚ ಪಿತೃತೀರ್ಥೇನ ತರ್ಪಯೇತ್ ||

"ಯಜ್ಞೋಪವೀತವನ್ನು ಅಪಸವ್ಯವಾಗಿ ಹಾಕಿಕೊಳ್ಳಬೇಕು. ದಕ್ಷಿಣದಿಕ್ಕಿಗೆ ಅಭಿಮುಖನಾಗಬೇಕು. ದಿವ್ಯ ಪಿತೃಗಳು ಅಂದರೆ ವಸು, ರುದ್ರ, ಆದಿತ್ಯರಿಗೂ ಅದಿವ್ಯಪಿತೃಗಳು ಅಂದರೆ ತಂದೆ ಮುಂತಾದವರಿಗೂ ಪಿತೃತೀರ್ಥ ಅಂದರೆ ಬಲಗೈಯ ಅಂಗುಷ್ಠದ ಬುಡದಿಂದ ತರ್ಪಣವನ್ನು ಕೊಡಬೇಕು."

### ಅಷ್ಟವಸುಗಳ ಹೆಸರುಗಳು

ಧ್ರುವೋ ಧರ್ಮಶ್ಚ ಸೋಮಶ್ಚ ಆಪಶ್ಚೈವಾನಿಲೋಽನಲಃ |
ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ || (ಪೈಠೀನಸಿ ವಚನ)

"(1) ಧ್ರುವ (2) ಧರ್ಮ (3) ಸೋಮ (4) ಆಪ (5) ಅನಿಲ (6) ಅನಲ (7) ಪ್ರತ್ಯೂಷ (8) ಪ್ರಭಾಸ ಎಂದು ಅಷ್ಟವಸುಗಳೆನಿಸುವರು."

## ಹನ್ನೊಂದು ರುದ್ರರ ಹೆಸರುಗಳು

ಅಜೈಕಪಾದಹಿರ್ಬುಧ್ನ್ಯೋ ವಿರೂಪಾಕ್ಷೋಽಥ ರೈವತಃ |
ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚ ಸುರೇಶ್ವರಃ ||
ಸಾವಿತ್ರಶ್ಚ ಜಯಂತಶ್ಚ ಪಿನಾಕೀ ಚಾಪರಾಜಿತಃ |
ಏತೇ ರುದ್ರಾಃ ಸಮಾಖ್ಯಾತಾ ಏಕಾದಶ ಸುರೋತ್ತಮಾಃ || (ಪೈಠೀನಸಿ ವಚನ)

"(1) ಅಜೈಕಪಾತ್ (2) ಅಹಿರ್ಬುಧ್ನ್ಯ (3) ವಿರೂಪಾಕ್ಷ (4) ರೈವತ (5) ಹರ (6) ಬಹುರೂಪ (7) ತ್ರ್ಯಂಬಕ (8) ಸಾವಿತ್ರ (9) ಜಯಂತ (10) ಪಿನಾಕೀ (11) ಅಪರಾಜಿತ ಇವರು ಏಕಾದಶರುದ್ರರೆನಿಸುವರು."

## ದ್ವಾದಶ ಆದಿತ್ಯರ ಹೆಸರುಗಳು

ಇಂದ್ರೋ ಧಾತಾ ಭಗಃ ಪೂಷಾ ಮಿತ್ರೋಽಥ ವರುಣೋಽರ್ಯಮಾ |
ಅರ್ಚಿರ್ವಿವಸ್ವಾಂಸ್ತ್ವಷ್ಟಾ ಚ ಸವಿತಾ ವಿಷ್ಣುರೇವ ಚ ||
ಏತೇ ಚ ದ್ವಾದಶಾದಿತ್ಯಾ ದೇವಾನಾಂ ಪ್ರವರಾ ಮತಾಃ ||
ಏತೇ ಚ ದಿವ್ಯಾಃ ಪಿತರಃ ಪೂಜ್ಯಾಃ ಸರ್ವೇ ಪ್ರಯತ್ನತಃ ||

"(1) ಇಂದ್ರ (2) ಧಾತಾ (3) ಭಗ (4) ಪೂಷಾ (5) ಮಿತ್ರ (6) ವರುಣ (7) ಅರ್ಯಮಾ (8) ಅರ್ಚಿ (9) ವಿವಸ್ವಾನ್ (10) ತ್ವಷ್ಟಾ (11) ಸವಿತಾ (12) ವಿಷ್ಣು ಈ ಹನ್ನೆರಡು ದೇವತೆಗಳು ಆದಿತ್ಯರೆನಿಸುವರು. ಎಂಟು ವಸುಗಳೂ ಹನ್ನೊಂದು ರುದ್ರರೂ ಹನ್ನೆರಡು ಆದಿತ್ಯರೂ ದಿವ್ಯಪಿತೃಗಳೆನಿಸುವರು. ದೇವತೆಗಳಲ್ಲಿ ಶ್ರೇಷ್ಠರಾದ ಈ ದಿವ್ಯಪಿತೃಗಳನ್ನು ತರ್ಪಣಾದಿಗಳಿಂದ ಪೂಜಿಸಬೇಕು. ಅನಂತರದಲ್ಲೇ ತಂದೆ ಮುಂತಾದ ತಮ್ಮ ಪಿತೃಗಳಿಗೆ ತರ್ಪಣಾದಿಗಳನ್ನು ಮಾಡಿ ಪೂಜಿಸಬೇಕು."

## ಪಿತೃತರ್ಪಣವನ್ನು ಮಾಡುವಾಗ ಹೇಳುವ ರೀತಿ

ಸ್ವಗೋತ್ರನಾಮಗ್ರಹಣಂ ಪುರುಷಂ ಪುರುಷಂ ಪ್ರತಿ |
ತಿಲೋದಕಾಂಜಲೀಂಸ್ತ್ರೀಂಸ್ತ್ರೀನುಚ್ಚೈರುಚ್ಚೈರ್ವಿನಿಕ್ಷಿಪೇತ್ || (ಪೈಠೀನಸಿ ವಚನ)

"ಒಬ್ಬೊಬ್ಬರ ಹೆಸರನ್ನೂ ಗೋತ್ರವನ್ನೂ ಪ್ರತ್ಯೇಕವಾಗಿ ಹೇಳಿ ಎಳ್ಳುನೀರಿನ ಬೊಗಸೆಗಳನ್ನು ಮೂರು ಮೂರು ಸಲ ಮೇಲೆ ಮೇಲೆ ಎಸೆಯಬೇಕು."

## ಬ್ರಾಹ್ಮಣಾದಿಗಳಿಗೆ ತರ್ಪಣದಲ್ಲಿ ವಿಶೇಷ

ಶರ್ಮಾಂತಂ ಬ್ರಾಹ್ಮಣಸ್ಯೋಕ್ತಂ ವರ್ಮಾಂತಂ ಕ್ಷತ್ರಿಯಸ್ಯ ತು |
ಗುಪ್ತಾಂತಂ ಚೈವ ವೈಶ್ಯಸ್ಯ ದಾಸಾಂತಂ ಶೂದ್ರಜನ್ಮನಃ || (ಬೋಧಾಯನರ ವಚನ)

ಬ್ರಾಹ್ಮಣನಾಗಿದ್ದರೆ ಶರ್ಮ ಎಂಬ ಪದವನ್ನೂ ಕ್ಷತ್ರಿಯನಾಗಿದ್ದರೆ ವರ್ಮ ಎಂಬ ಪದವನ್ನೂ ವೈಶ್ಯನಾಗಿದ್ದರೆ ಗುಪ್ತ ಎಂಬ ಪದವನ್ನೂ ಶೂದ್ರನಾಗಿದ್ದರೆ ದಾಸ ಎಂಬ ಪದವನ್ನೂ ಹೆಸರಿನ ಮುಂದೆ ಸೇರಿಸಿ ತರ್ಪಣವನ್ನು ಕೊಡಬೇಕು.

## ಪಿತೃತರ್ಪಣದಲ್ಲಿ ಕ್ರಮ

ಪಿತೃಭ್ಯಃ ಪ್ರತ್ಯಹಂ ದದ್ಯಾತ್ತತೋ ಮಾತೃಭ್ಯ ಏವ ಚ |
ತತೋ ಮಾತಾಮಹಾನಾಂ ಚ ಪಿತೃವ್ಯಸ್ಯ ಸುತಸ್ಯ ಚ |

"(1) ಪಿತಾ (2) ಪಿತಾಮಹ (3) ಪ್ರಪಿತಾಮಹ (4) ಮಾತಾ (5) ಪಿತಾಮಹೀ (6) ಪ್ರಪಿತಾಮಹೀ (7) ಮಾತಾಮಹ (8) ಮಾತುಃ ಪಿತಾಮಹ (9) ಮಾತುಃ ಪ್ರಪಿತಾಮಹ (10) ಮಾತಾಮಹೀ (11) ಮಾತುಃ ಪಿತಾಮಹೀ (12) ಮಾತುಃ ಪ್ರಪಿತಾಮಹೀ (13) ಪಿತೃವ್ಯ (14) ಮಕ್ಕಳು ಈ ಕ್ರಮದಿಂದ ಕೊಡಬೇಕು.

### ಪಿತೃತರ್ಪಣದ ಕೊನೆಗೆ ಕೊಡುವ ತರ್ಪಣ

ಪಿತೃವಂಶ್ಯಾ ಮಾತೃವಂಶ್ಯಾ ಯೇ ಚಾನ್ಯೇ ಪಿತರೋ ಜನಾಃ |
ಮತ್ತಸ್ತೂದಕಮರ್ಹಂತಿ ಏತಾಂಸ್ತಾಂಸ್ತರ್ಪಯಾಮ್ಯಹಮ್ ||
ಯತ್ರ ಕ್ವಚನ ಸಂಸ್ಥಾನಾಂ ಕ್ಷುತ್ತೃಷ್ಣೋಪಹತಾತ್ಮನಾಮ್ |
ತೇಷಾಂ ಹಿ ದತ್ತಮಕ್ಷಯ್ಯಮಿದಮಸ್ತು ತಿಲೋದಕಮ್ ||
ಯೇ ಮೇ ಕುಲೇ ಲುಪ್ತಪಿಂಡಾಃ ಪುತ್ರದಾರವಿವರ್ಜಿತಾಃ |
ತೇಷಾಂ ತು ದತ್ತಮಕ್ಷಯ್ಯಮಿದಮಸ್ತು ತಿಲೋದಕಮ್ ||
ಯೇಽಬಾಂಧವಾ ಬಾಂಧವಾ ಯೇ ಯೇಽನ್ಯಜನ್ಮನಿ ಬಾಂಧವಾಃ |
ತೇ ತೃಪ್ತಿಮಖಿಲಾ ಯಾಂತು ಯೇ ಚ ಮತ್ತೋಽಭಿವಾಂಛಿತಾಃ ||

ಈ ತರ್ಪಣವು ಅತಿಮುಖ್ಯವಾದುದು. ಈ ತರ್ಪಣದಿಂದ ಈ ಜನ್ಮದ ಬಂಧುಗಳೂ ಹಿಂದಿನ ಜನ್ಮದ ಬಂಧುಗಳೂ ಬಂಧುಗಳಲ್ಲದವರೂ ಸರ್ವರೂ ತೃಪ್ತಿಯನ್ನು ಪಡೆಯುವರು.

### ಸಂಕ್ಷೇಪತರ್ಪಣ

ಆಬ್ರಹ್ಮಸ್ತಂಬಪರ್ಯಂತಂ ಜಗತ್ತೃಪ್ಯತ್ವಿತಿ ಬ್ರುವನ್ |
ಕ್ಷಿಪೇತ್ಪಯೋಂಜಲೀಂಸ್ತ್ರೀಂಸ್ತು ಕುರ್ಯಾತ್ಸಂಕ್ಷೇಪತರ್ಪಣಮ್ ||

"ಬ್ರಹ್ಮದೇವನಿಂದ ಆರಂಭಿಸಿ ಹುಲ್ಲಿನವರೆಗಿನ ಸರ್ವರೂ ತೃಪ್ತರಾಗಲಿ" ಎಂದು ಹೇಳುತ್ತಾ ಮೂರು ಬೊಗಸೆ ನೀರುಗಳನ್ನು ಚೆಲ್ಲಬೇಕು. ಇದು ಸಂಕ್ಷೇಪತರ್ಪಣವೆನಿಸುತ್ತದೆ."

ಇಷ್ಟರವರೆಗೆ ಬ್ರಹ್ಮಯಜ್ಞವನ್ನೂ ಬ್ರಹ್ಮಯಜ್ಞಾಂಗವಾದ ದೇವ ಋಷಿ ಪಿತೃ ತರ್ಪಣಗಳನ್ನೂ ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ತಿಳಿಸಿದೆವು. ಪ್ರಾತಃಕಾಲಿಕಸಂಧ್ಯಾವಂದನೆಯನ್ನು ಮುಗಿಸಿ ಶಾಲಿಗ್ರಾಮದಿಂದ ನಿರ್ಮಾಲ್ಯವನ್ನು ವಿಸರ್ಜನೆ ಮಾಡಿ ದೇವರ ನಿರ್ಮಾಲ್ಯತೀರ್ಥದಿಂದ ಈ ತರ್ಪಣವನ್ನು ಕೊಡಬೇಕು. ಅಥವಾ ಮಾಧ್ಯಾಹ್ನಿಕ ಪೂಜೆಯನ್ನು ಮುಗಿಸಿ ವೈಶ್ವದೇವಾನಂತರದಲ್ಲಿ ದೇವರ ತೀರ್ಥದಿಂದಲೇ ತರ್ಪಣವನ್ನು ಕೊಡಬೇಕು.

**(ಮೂಲ) ಗಾಯತ್ರ್ಯಾಸ್ತ್ರಿಗುಣಂ ವಿಷ್ಣುಂ ಧ್ಯಾಯನ್ನಷ್ಟಾಕ್ಷರಂ ಜಪೇತ್ |**

ಪದಛೇದ - ಗಾಯತ್ರ್ಯಾಃ ತ್ರಿಗುಣಂ ವಿಷ್ಣುಂ ಧ್ಯಾಯನ್ ಅಷ್ಟಾಕ್ಷರಂ ಜಪೇತ್.

ಅನ್ವಯ - ವಿಷ್ಣುಂ ಧ್ಯಾಯನ್ ಗಾಯತ್ರ್ಯಾಃ ತ್ರಿಗುಣಂ ಅಷ್ಟಾಕ್ಷರಂ ಜಪೇತ್.

ಅನ್ವಯಾರ್ಥ - "ವಿಷ್ಣುಂ" ಶ್ರೀಹರಿಯನ್ನು "ಧ್ಯಾಯನ್" ಧ್ಯಾನಿಸುತ್ತಾ "ಗಾಯತ್ರ್ಯಾಃ" ಗಾಯತ್ರೀಮಂತ್ರವನ್ನು ಜಪಿಸಿದ ಸಂಖ್ಯೆಗೆ "ತ್ರಿಗುಣಂ" ಮೂರರಷ್ಟು "ಅಷ್ಟಾಕ್ಷರಂ" ನಾರಾಯಣಾಷ್ಟಾಕ್ಷರಮಂತ್ರವನ್ನು, "ಜಪೇತ್" ಜಪಿಸಬೇಕು.

**ವಿವರಣೆ** - ಸದಾಚಾರಸ್ಮೃತಿಯಲ್ಲಿ ಪ್ರಾತಃಕಾಲಿಕಸಂಧ್ಯಾವಂದನದಲ್ಲಿ ಗಾಯತ್ರೀಮಂತ್ರದ ಜಪಕ್ರಮವನ್ನು ತಿಳಿಸಿದರು. ಸ್ಮೃತಿಮುಕ್ತಾವಲಿಯಲ್ಲಿ ಇದೇ ವಿಷಯವನ್ನು ವಿವರಿಸುತ್ತಾ ಬ್ರಹ್ಮಯಜ್ಞವಿಧಿಯನ್ನೂ ಬ್ರಹ್ಮಯಜ್ಞಾಂಗತರ್ಪಣದ ವಿಧಿಯನ್ನೂ ತಿಳಿಸಿದರು. ಆ ವಿಷಯವನ್ನು ನಾವು ಹಿಂದೆ ತಿಳಿಸಿದೆವು. ಸದಾಚಾರಸ್ಮೃತಿಯಲ್ಲಿ ಗಾಯತ್ರೀಮಂತ್ರಜಪದ ಅನಂತರದಲ್ಲಿ ನಾರಾಯಣಾಕ್ಷರಮಂತ್ರಜಪದ ವಿಧಾನವನ್ನು ಸಂಕ್ಷೇಪವಾಗಿ ಈಗ ತಿಳಿಸುತ್ತಿದ್ದಾರೆ. ಗಾಯತ್ರೀಮಂತ್ರವನ್ನು ಒಂದುಸಾವಿರ ಸಲ ಜಪಿಸುವುದು ಉತ್ತಮವೆಂದೂ ನೂರು ಸಲ ಜಪಿಸುವುದು ಮಧ್ಯಮವೆಂದೂ ಹತ್ತು ಸಲ ಜಪಿಸುವುದು ಅಧಮವೆಂದೂ

ಹಿಂದೆ ತಿಳಿಸಿರುವರು. ಗಾಯತ್ರೀಮಂತ್ರವನ್ನು ಎಷ್ಟು ಸಲ ಜಪಿಸಿರುವೆವೋ ಆ ಸಂಖ್ಯೆಗೆ ಮೂರರಷ್ಟು ಸಂಖ್ಯೆಯಾಗುವ ಹಾಗೆ ಅಂದರೆ 1000 ಸಂಖ್ಯೆಗೆ 3000 ಸಂಖ್ಯೆಯಷ್ಟು ನಾರಾಯಣಾಷ್ಟಾಕ್ಷರಮಂತ್ರವನ್ನು ಜಪಿಸಬೇಕು.

(ಮೂಲ) ಪ್ರಣಮ್ಯ ದೇವಾನ್ ವಿಪ್ರಾಂಶ್ಚ ಗುರೂಂಶ್ಚ ಹರಿಪಾರ್ಷದಾನ್ |
ಏವಂ ಸರ್ವೋತ್ತಮಂ ವಿಷ್ಣುಂ ಧ್ಯಾಯನ್ನೇವಾರ್ಚಯೇದ್ಧರಿಮ್ || 11 ||

ಪದಚ್ಛೇದ - ಪ್ರಣಮ್ಯ ದೇವಾನ್ ಚ ಗುರೂನ್ ಚ ಹರಿಪಾರ್ಷದಾನ್ ಏವಂ ಸರ್ವೋತ್ತಮಂ ವಿಷ್ಣುಂ ಧ್ಯಾಯನ್ ಏವ ಅರ್ಚಯೇತ್ ಹರಿಮ್.

ಅನ್ವಯ - ದೇವಾನ್ ವಿಪ್ರಾನ್ ಚ ಗುರೂನ್ ಚ ಹರಿಪಾರ್ಷದಾನ್ ಪ್ರಣಮ್ಯ ಏವಂ ಸರ್ವೋತ್ತಮಂ ವಿಷ್ಣುಂ ಧ್ಯಾಯನ್ ಏವ ಹರಿಂ ಅರ್ಚಯೇತ್.

ಅನ್ವಯಾರ್ಥ - "ದೇವಾನ್" ಬ್ರಹ್ಮ ಮುಂತಾದ ಸಕಲದೇವತೆಗಳನ್ನೂ "ವಿಪ್ರಾನ್ ಚ" ವಸಿಷ್ಠರೇ ಮೊದಲಾದ ಬ್ರಾಹ್ಮಣರನ್ನೂ "ಗುರೂನ್ ಚ" ಶ್ರೀಮಧ್ವಾಚಾರ್ಯರು ಮುಂತಾದ ಗುರುಗಳನ್ನೂ "ಹರಿಪಾರ್ಷದಾನ್" ದ್ವಾರಪಾಲಕರು ಮುಂತಾದ ವಿಷ್ಣುಸೇವಕರನ್ನೂ "ಪ್ರಣಮ್ಯ" ನಿಷ್ಕಪಟವಾದ ಮನಸ್ಸಿನಿಂದಲೂ ಭಕ್ತಿಯಿಂದಲೂ ನಮಸ್ಕರಿಸಿ "ಏವಂ" ಶಾಸ್ತ್ರಗಳಲ್ಲಿ ಹೇಳಿದಂತೆ "ಸರ್ವೋತ್ತಮಂ" ಸರ್ವೋತ್ತಮನಾಗಿರುವ "ವಿಷ್ಣುಂ" ಶ್ರೀಹರಿಯನ್ನು "ಧ್ಯಾಯನ್ ಏವ" ಧ್ಯಾನಿಸುತ್ತಿರುವವನಾಗಿಯೇ "ಹರಿಂ" ಶ್ರೀಹರಿಯನ್ನು "ಅರ್ಚಯೇತ್" ಪೂಜಿಸಬೇಕು.

ಅನ್ವಯಾರ್ಥ ವಿವರಣೆ - ಸಂಧ್ಯಾವಂದನದಲ್ಲಿ ದಿಗ್ದೇವತೆಗಳ ಮತ್ತು ಗುರುಗಳ ನಮಸ್ಕಾರಗಳು ಮುಂತಾದವುಗಳು ಬರುತ್ತವೆ. ದೇವಪೂಜಾಕಾಲದಲ್ಲಿ ದ್ವಾರಪಾಲಕಪೂಜಾ ಮುಂತಾದ ಪೂಜೆಗಳು ಬರುತ್ತವೆ. ಹೀಗೆ ವಿಷ್ಣುವನ್ನು ಬಿಟ್ಟು ಇತರದೇವತೆಗಳನ್ನೂ ಬ್ರಾಹ್ಮಣರನ್ನೂ ಗುರುಗಳನ್ನೂ ವಿಷ್ಣುಪಾರ್ಷದರನ್ನೂ ಪೂಜಿಸುವ ಸಂದರ್ಭಗಳಲ್ಲಿ ಅವಶ್ಯವಾಗಿ ತಿಳಿಯಬೇಕಾದ ಅನುಸಂಧಾನವನ್ನು ಈ ಶ್ಲೋಕದಲ್ಲಿ ತಿಳಿಸುತ್ತಿದ್ದಾರೆ. "ಶ್ರೀಹರಿಯೇ ಸರ್ವೋತ್ತಮನು. ಇತರರು ಯಾರೂ ಶ್ರೀಹರಿಗೆ ಸಮರೂ ಅಲ್ಲ. ಅವನಿಗಿಂತ ಉತ್ತಮರೂ ಅಲ್ಲ." ಎಂಬ ಅನುಸಂಧಾನವು ಯಾವಾಗಲೂ ಇರಬೇಕು. ಎಲ್ಲರಲ್ಲಿಯೂ ಶ್ರೀಹರಿಯೇ ಇದ್ದು ಎಲ್ಲಾ ಕಾರ್ಯಗಳನ್ನೂ ಮಾಡಿಸುತ್ತಿರುವನು. ಎಂದು ತಿಳಿಯಬೇಕು. ಶಂಖ ಚಕ್ರ ಗದಾ ಪದ್ಮ ಮುಂತಾದ ವೈಭವದಿಂದ ಯುಕ್ತನಾಗಿರುವ ಶ್ರೀಹರಿಯು ವಾಸಿಸುತ್ತಿರುವುದಾಗಿ ತಿಳಿದು ಅವನನ್ನೇ ಪೂಜಿಸಬೇಕು.

ಈ ಶ್ಲೋಕದಲ್ಲಿ ಹರಿಯನ್ನು ಪೂಜಿಸಬೇಕೆಂದು ಹೇಳಿದೆ. ಈ ಸಂದರ್ಭದಲ್ಲಿ ಶ್ರೀಹರಿಯನ್ನು ಹೇಗೆ ಪೂಜಿಸಬೇಕು. ಯಾರನ್ನು ಪೂಜಿಸಬಾರದು. ಶಾಲಗ್ರಾಮದ ಲಕ್ಷಣ ಮುಂತಾದ ಅನೇಕವಿಷಯಗಳನ್ನು ಸ್ಮೃತಿಮುಕ್ತಾವಲಿಯ ಆಧಾರದಿಂದ ವಿವರಿಸುತ್ತೇವೆ.

ಜಲೇ ದೇವಾನ್ನಮಸ್ಕೃತ್ಯ ತತೋ ಗಚ್ಛೇದ್ಗೃಹಂ ಬುಧಃ |
ಪೌರುಷೇಣ ಚ ಸೂಕ್ತೇನ ತತೋ ವಿಷ್ಣುಂ ಸಮರ್ಚಯೇತ್ || (ನೃಸಿಂಹಪುರಾಣ)

ಪ್ರಾತಃಕಾಲಿಕಸಂಧ್ಯಾವಂದನವನ್ನು ಮುಗಿಸಬೇಕು. ಸಂಧ್ಯಾವಂದನಕ್ಕೆ ಉಪಯುಕ್ತವಾಗಿರುವ ನೀರಿನಲ್ಲಿ ಅಂತರ್ಗತರಾಗಿರುವ ಎಲ್ಲಾ ದೇವತೆಗಳನ್ನೂ ನಮಸ್ಕರಿಸಬೇಕು. ಮನೆಗೆ ಬರಬೇಕು. ಶ್ರೀವಿಷ್ಣುವಿನ ಪೂಜೆಯನ್ನು ಶಾಸ್ತ್ರೋಕ್ತ ಕ್ರಮದಿಂದ ಮಾಡಬೇಕು. ಇತರ ಮಂತ್ರಗಳು ತಿಳಿಯದಿದ್ದರೂ ಪುರುಷಸೂಕ್ತವನ್ನು ಅವಶ್ಯವಾಗಿ ತಿಳಿದಿರಬೇಕು. ಪುರುಷಸೂಕ್ತವು ಎಲ್ಲಾ ಮಂತ್ರಗಳ ಮಧ್ಯದಲ್ಲಿಯೂ ಶ್ರೇಷ್ಠವೆನಿಸುತ್ತದೆ. ಆ ಸೂಕ್ತದಲ್ಲಿ ಹದಿನಾರು ಋಕ್ಕುಗಳಿವೆ. ಒಂದೊಂದು ಋಕ್ಕುಗಳನ್ನು ಹೇಳಿ ಒಂದೊಂದು ಅರ್ಘ್ಯ ಮುಂತಾದ ಉಪಚಾರಗಳನ್ನು ಸಮರ್ಪಿಸುತ್ತಾ ಬಂದರೆ ಹದಿನಾರು ಋಕ್ಕುಗಳು ಮುಗಿಯುವಾಗ ಷೋಡಶೋಪಚಾರಪೂಜೆಯನ್ನು ಶ್ರೀಹರಿಗೆ ಮಾಡಿ ಮುಗಿಸಿ ಬಿಡಬಹುದು. ಇತರಮಂತ್ರಗಳನ್ನು

ತಿಳಿದಿದ್ದರೂ ಪುರುಷಸೂಕ್ತವನ್ನು ಪೂಜಾಕಾಲದಲ್ಲಿ ಅವಶ್ಯವಾಗಿ ಪಠನಮಾಡಲೇಬೇಕು. ಇಲ್ಲದಿದ್ದರೆ ಪೂಜಾಫಲವು ಬರಲಾರದು.

ಏವಂ ಮಾಧ್ಯಾಹ್ನಿಕಂ ಕೃತ್ವಾ ಗತ್ವಾ ತತಃ ಪರಮ್ |
ಪದೌ ಪ್ರಕ್ಷಾಲ್ಯ ಚಾಚಮ್ಯ ದೇವಪೂಜಾಂ ಪ್ರಕಲ್ಪಯೇತ್ || (ಸ್ಕಾಂದ ವಚನ)

"ನದೀ ಮುಂತಾದ ಹೊರಗಿನ ನೀರಿನಲ್ಲಿ ಮಧ್ಯಾಹ್ನಕಾಲದ ಸಂಧ್ಯಾವಂದನೆಯನ್ನು ಮುಗಿಸಬೇಕು. ಮನೆಗೆ ಬರಬೇಕು. ಕಾಲುಗಳನ್ನು ತೊಳೆದುಕೊಳ್ಳಬೇಕು. ಆಚಮನವನ್ನು ಮಾಡಬೇಕು. ಅನಂತರದಲ್ಲಿ ದೇವರ ಪೂಜೆಯನ್ನು ಮಾಡಬೇಕು."

(ಈ ವಾಕ್ಯವನ್ನು ಪರಿಶೀಲಿಸುವಾಗ ಮಾಧ್ಯಾಹ್ನಿಕಸಂಧ್ಯಾವಂದನವನ್ನು ಮನೆಯ ಹೊರಗೆಯೇ ಮಾಡಬೇಕೆಂದೂ ಮಾಧ್ಯಾಹ್ನಿಕಸಂಧ್ಯಾವಂದನವನ್ನು ಮಾಡಿ ಮುಗಿಸಿದ ಮೇಲೆಯೇ ಮಾಧ್ಯಾಹ್ನಿಕದೇವತಾರ್ಚನೆಯನ್ನು ಮಾಡಬೇಕೆಂದೂ ಸ್ಪಷ್ಟವಾಗುತ್ತದೆ.)

### ದೇವರ ಪೂಜೆಯನ್ನು ಮಾಡದಿದ್ದರೆ ಬರುವ ಅನರ್ಥ

ಯೋ ಮೋಹಾದಥವಾಽಲಸ್ಯಾದಕೃತ್ವಾ ದೇವತಾರ್ಚನಮ್ |
ಭುಂಕ್ತೇ ಸ ಚ ಮಲಂ ಭುಂಕ್ತೇ ಸೂಕರೇಷ್ವಭಿಜಾಯತೇ || (ನಾರದೀಯ ವಚನ)

ವಿಪರೀತಜ್ಞಾನ ಅಥವಾ ಆಲಸ್ಯದಿಂದ ದೇವತಾರ್ಚನೆಯನ್ನು ಮಾಡದೆ ಊಟ ಮಾಡುವವನು ಮಲವನ್ನು ತಿನ್ನುವನು. ಮುಂದಿನ ಜನ್ಮದಲ್ಲಿ ಹಂದಿಗಳ ಮಧ್ಯದಲ್ಲಿ ಹಂದಿಯಾಗಿ ಹುಟ್ಟುವನು.

ಅಸ್ನಾಯೀ ಚ ಮಲಂ ಭುಂಕ್ತೇ ಅಜಪೀ ಪೂಯಶೋಣಿತಮ್ |
ಅಹೋಮೀ ಚ ಕೃಮೀನ್ ಭುಂಕ್ತೇ ಅನರ್ಚಃ ಸರ್ವಪಾಪಕೃತ್ || (ಹಾರೀತರ ವಚನ)

"ಸ್ನಾನಮಾಡದೆ ಊಟ ಮಾಡುವವನು ಮಲವನ್ನೂ, ಜಪಮಾಡದಿರುವವನು ಕೀವು ರಕ್ತಗಳನ್ನೂ, ಹೋಮ ಮಾಡದಿರುವವನು ಕ್ರಿಮಿಗಳನ್ನೂ ತಿನ್ನುವನು. ದೇವಪೂಜೆಯನ್ನು ಮಾಡದವನು ಎಲ್ಲಾ ಪಾಪಗಳನ್ನೂ ಮಾಡುವವನೆನಿಸುವನು."

### ದೇವರ ಪೂಜೆಯಿಂದ ಬರುವ ಫಲ

ಸ್ವಾಧ್ಯಾಯೇನಾಗ್ನಿಹೋತ್ರೇಣ ಯಜ್ಞೇನ ತಪಸಾ ತಥಾ |
ನ ಚಾಪ್ನೋತಿ ಗೃಹೀ ಲೋಕಾನ್ ಪ್ರತ್ಯಕ್ಷಂ ದೇವಪೂಜನಾತ್ || (ಹಾರೀತರ ವಚನ)

"ತಾನೇ ದೇವರ ಪೂಜೆಯನ್ನು ಒಂದೊಂದು ದಿನದಲ್ಲಿಯೂ ಮಾಡಿದ್ದರಿಂದ ಬರುವ ಫಲವು ವೇದಾಧ್ಯಯನ, ಅಗ್ನಿಹೋತ್ರ, ಯಜ್ಞ, ತಪಸ್ಸು, ಮುಂತಾದ ಯಾವ ಕಾರ್ಯಗಳಿಂದಲೂ ಬರಲಾರದು."

ಯೇ ಚೈವಾನುದಿನಂ ಭಕ್ತ್ಯಾ ಪತ್ರಪುಷ್ಪಫಲಾದಿಭಿಃ |
ಯೇಽರ್ಚಯಂತಿ ಸದಾ ವಿಷ್ಣುಂ ತೇಷಾಂ ವಿಷ್ಣುಃ ಪ್ರಸೀದತಿ || (ಭಾಗವತ ವಚನ)

"ಶ್ರೀಹರಿಯನ್ನು ತೃಪ್ತಿಪಡಿಸುವುದಕ್ಕೆ ಸಂಪತ್ತೇ ಬೇಕಾಗಿಲ್ಲ. ಎಲೆಗಳು, ಪುಷ್ಪಗಳು, ಹಣ್ಣುಗಳು ಮುಂತಾದ ತಮಗೆ ಸಿಕ್ಕಿರುವ ವಸ್ತುಗಳಿಂದ ಭಕ್ತಿಯಿಂದ ಶ್ರೀಹರಿಯನ್ನು ಯಾವಾಗಲೂ ಪೂಜಿಸುತ್ತಿರುವವರ ವಿಷಯದಲ್ಲಿ ಶ್ರೀಹರಿಯು ಪ್ರಸನ್ನನಾಗುವನು."

ಹರಿರೇವ ಸದಾ ಪೂಜ್ಯೋ ನಾನ್ಯೋ ದೇವಃ ಸ್ವತಂತ್ರತಃ |

"ಶ್ರೀಹರಿಯನ್ನೇ ಸ್ವತಂತ್ರನೆಂದು ತಿಳಿದು ಯಾವಾಗಲೂ ಪೂಜಿಸಬೇಕು. ಬೇರೆ ಯಾರನ್ನೂ ಸ್ವತಂತ್ರನೆಂದು ಪೂಜಿಸಕೂಡದು."

ಮನುಜ್ಯೈರಿಜ್ಯತೇ ರಾಜನ್ ಶ್ರೇಯಸಾಮೀಶ್ವರೋ ಹರಿಃ |
ಶ್ರೋತವ್ಯಃ ಕೀರ್ತಿತವ್ಯಶ್ಚ ಧ್ಯೇಯಃ ಪೂಜ್ಯಶ್ಚ ನಿತ್ಯದಾ || (ಪದ್ಮಪುರಾಣ ವಚನ)

ಎಲ್ಲಾ ಶ್ರೇಯಸ್ಸುಗಳನ್ನೂ ಕೊಡುವ ವಿಷಯದಲ್ಲಿ ಪೂರ್ಣಶಕ್ತಿಯುಳ್ಳವನು ಶ್ರೀಹರಿಯು. ಅವನನ್ನು ಸರ್ವರೂ ಪೂಜಿಸುತ್ತಿರುವರು. ಆದ್ದರಿಂದ ಅವನ ಮಹಿಮೆಗಳನ್ನು ದೊಡ್ಡವರಿಂದ ಕೇಳುತ್ತಿರಬೇಕು. ಚಿಕ್ಕವರಿಗೆ ಹೇಳುತ್ತಿರಬೇಕು ಯಾರೂ ಇಲ್ಲದಿರುವಾಗ ಧ್ಯಾನಿಸುತ್ತಿರಬೇಕು ಮತ್ತು ಪೂಜಿಸುತ್ತಿರಬೇಕು.

ತಸ್ಮಾತ್ಸರ್ವಪ್ರಯತ್ನೇನ ಭೋಗಮೋಕ್ಷಾರ್ಥಸಿದ್ಧಯೇ |

"ಈ ಲೋಕದಲ್ಲಿಯೂ ಪರಲೋಕಗಳಲ್ಲಿಯೂ ಅನಿತ್ಯಸುಖವು ಸಿಗುವುದಕ್ಕೂ ಮುಕ್ತಿಸುಖವು ಸಿಗುವುದಕ್ಕೂ ಮಹಾಪ್ರಯತ್ನವನ್ನು ಮಾಡಿಯಾದರೂ ಶ್ರೀಹರಿಯನ್ನು ಪೂಜಿಸಬೇಕು."

ಸರ್ವೇಷಾಮಪಿ ದೇವಾನಾಂ ಮಯಾಽಪಿ ಪುರುಷೋತ್ತಮಃ |
ಪೂಜನೀಯೋ ಹರಿರ್ನಿತ್ಯಂ ಬ್ರಾಹ್ಮಣಾನಾಂ ವಿಶೇಷತಃ ||

"ಎಲ್ಲಾ ದೇವತೆಗಳಿಂದಲೂ ನನ್ನಿಂದಲೂ ಶ್ರೀಹರಿಯು ಯಾವಾಗಲೂ ಪೂಜಿಸಲ್ಪಡಬೇಕು. ಬ್ರಾಹ್ಮಣರಿಂದ ವಿಶೇಷವಾಗಿ ಪೂಜಿಸಲ್ಪಡಬೇಕು." (ಇದು ಬ್ರಹ್ಮದೇವರ ವಚನ)

ನ ಹ್ಯಂತೋಽನಂತಪಾರಸ್ಯ ಕರ್ಮಕಾಂಡಸ್ಯ ಚೋದ್ಧವ |
ಸಂಕ್ಷಿಪ್ಯ ವರ್ಣಯಿಷ್ಯಾಮಿ ಯಥಾವದನುಪೂರ್ವಶಃ || (ಶ್ರೀಭಾಗವತ ವಚನ)

"ಶ್ರೀಹರಿಯನ್ನು ಆರಾಧಿಸುವ ಕ್ರಮವನ್ನು ತಿಳಿಸುವ ಭಾಗವು ಕರ್ಮಕಾಂಡವೆನಿಸುತ್ತದೆ. ಈ ಕರ್ಮಕಾಂಡವನ್ನು ಎಷ್ಟು ಹೇಳಿದರೂ ಮುಗಿಯುವಂತಿಲ್ಲ. ಆದ್ದರಿಂದಲೇ ಅನಂತಪಾರವೆನಿಸುತ್ತದೆ. ಹೀಗಿರುವ ಕರ್ಮಕಾಂಡವನ್ನು ಪೂರ್ಣವಾಗಿ ಹೇಳಿ ಮುಗಿಸಲು ಹೇಗೆ ಸಾಧ್ಯವಾಗುತ್ತದೆ? ಆದ್ದರಿಂದ ತಿಳಿದ ಮಟ್ಟಿಗೆ ಸಂಕ್ಷೇಪವಾಗಿ ಹೇಳುವೆನು."

ವೈದಿಕಸ್ತಾಂತ್ರಿಕಾ ಮಿಶ್ರಾ ಇತಿ ಮೇ ತ್ರಿವಿಧಾ ಮತಾಃ |
ತ್ರಯಾಣಾಮಪಿ ಚೈಕೇನ ವಿಧಿನಾ ಮಾಂ ಸಮರ್ಚಯೇತ್ ||
ಯಥಾಸ್ವನಿಗಮೋಕ್ತೇನ ದ್ವಿಜತ್ವಂ ಪ್ರಾಪ್ಯ ಪೂರುಷಃ |
ಯಥಾ ಭಜೇತ ಮಾಂ ಭಕ್ತ್ಯಾ ಶ್ರದ್ಧಯಾ ತನ್ನಿಬೋಧ ಮೇ || (ಶ್ರೀಭಾಗವತ ವಚನ)

"ಉದ್ಧವಾ, ವೇದೋಕ್ತಪೂಜೆಯೆಂದೂ ಪಂಚರಾತ್ರಾದ್ಯಾಗಮೋಕ್ತಪೂಜೆಯೆಂದೂ ಮಿಶ್ರ ಅಂದರೆ ವೇದ ಮತ್ತು ಪಂಚರಾತ್ರಾದ್ಯಾಗಮಾದಿಗಳಲ್ಲಿ ಹೇಳಲ್ಪಟ್ಟ ಕ್ರಮಗಳನ್ನು ಮಿಶ್ರಣ ಮಾಡಲ್ಪಟ್ಟ ಕ್ರಮದಿಂದ ಮಾಡುವ ಪೂಜೆಯೆಂದೂ ನನ್ನ ಪೂಜೆಯು ಮೂರು ವಿಧವಾಗಿದೆ. ಈ ಮೂರು ವಿಧವಾದ ಪೂಜೆಗಳಲ್ಲಿ ಯಾವುದಾರೊಂದು ವಿಧಿಯಿಂದ ನನ್ನನ್ನು ಪೂಜಿಸಬೇಕು. ಪೂಜೆಯನ್ನು ಮಾಡುವವನು ತನ್ನ ಶಾಖೆಗೆ ಹೇಳಲ್ಪಟ್ಟ ಕ್ರಮದಿಂದ ಉಪನಯನವನ್ನು ಪಡೆದು ಭಕ್ತಿಯಿಂದ ಪೂಜಿಸಬೇಕು. ಪೂಜಿಸುವ ಕ್ರಮವನ್ನು ಹೇಳುವೆನು. ಶ್ರದ್ಧೆಯಿಂದ ಕೇಳು."

ವರ್ಣಾಶ್ರಮೇಷು ಯೇ ಧರ್ಮಾಃ ಶಾಸ್ತ್ರೋಕ್ತಾ ಮುನಿಸತ್ತಮ |
ತೇಷು ತಿಷ್ಠನ್ನರೋ ವಿಷ್ಣುಮಾರಾಧಯತಿ ನಾನ್ಯಥಾ ||
ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್ |
ವಿಷ್ಣುರಾರಾಧ್ಯತೇ ಪಂಥಾ ನಾನ್ಯಸ್ತತ್ತೋಷಕಾರಕಃ || (ವಿಷ್ಣುಪುರಾಣ ವಚನ)

"ಬ್ರಾಹ್ಮಣ ಮುಂತಾದ ವರ್ಣದವರೂ ಬ್ರಹ್ಮಚರ್ಯ ಮುಂತಾದ ನಾಲ್ಕು ಆಶ್ರಮದವರೂ ಅನುಷ್ಠಿಸಬೇಕಾದ

ಧರ್ಮಗಳು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ. ಆ ಧರ್ಮಗಳನ್ನು ಬಿಡದಂತೆ ಅನುಷ್ಠಿಸುತ್ತಿರುವವನು ವಿಷ್ಣುವನ್ನು ಆರಾಧಿಸುವವನೆನಿಸುವನು. ಬೇರೆ ಯಾವ ಮಾರ್ಗವೂ ವಿಷ್ಣುವನ್ನು ಸಂತೋಷಪಡಿಸಲಾರದು."

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚ ಕೃತಲಕ್ಷಣೈಃ ||
ಅರ್ಚನೀಯಃ ಸುಸೇವ್ಯಶ್ಚ ನಿತ್ಯಯುಕ್ತೈಃ ಸುಕರ್ಮಸು ||
ಕೃಷ್ಣೋ ಯಜ್ಞೈರಿಜ್ಯತೇ ಸೋಮಪೂತೈಃ ಕೃಷ್ಣೋ ವೀರೈರಿಜ್ಯತೇ ವಿಕ್ರಮದ್ಭಿಃ ||
ಕೃಷ್ಣೋ ವನ್ಯೈರಿಜ್ಯತೇ ಸಂಮ್ಯಶಾನ್ಯೈಃ ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ||
ಮನುಜೈರಿಜ್ಯತೇ ರಾಜನ್ ಶ್ರೇಯಸಾಮೀಶ್ವರೋ ಹರಿಃ |
ಕಲಿಂ ಸಭಾಜಯಂತ್ಯಾರ್ಯಾ ಗುಣಜ್ಞಾಃ ಸಾರಭಾಗಿನಃ |
ಶ್ರೋತವ್ಯಃ ಕೀರ್ತಿತವ್ಯಶ್ಚ ಧ್ಯೇಯಃ ಪೂಜ್ಯಶ್ಚ ನಿತ್ಯದಾ || (ಭಾಗವತ)

"ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಶಂಖ, ಚಕ್ರ ಮುಂತಾದ ವೈಷ್ಣವಚಿಹ್ನೆಗಳನ್ನು ಧರಿಸಿದವರಾಗಿ ಯಾವಾಗಲೂ ಶ್ರೀಹರಿಯಲ್ಲಿ ಮನಸ್ಸನ್ನು ನಿಲ್ಲಿಸಿದವರಾಗಿ ಶಾಸ್ತ್ರೋಕ್ತಕರ್ಮಗಳನ್ನು ಮಾಡುತ್ತಾ ಶ್ರೀಹರಿಯನ್ನು ಪೂಜಿಸುತ್ತಿರಬೇಕು. ಕೆಲವರು ಸೋಮಯಾಗಾದಿಗಳಿಂದ ಪರಿಶುದ್ಧರಾಗಿ ಯಜ್ಞಗಳಿಂದಲೂ, ಮತ್ತೆ ಕೆಲವರು ತಮ್ಮಲ್ಲಿರುವ ಬಲದಿಂದ ದುಷ್ಟನಿಗ್ರಹವನ್ನು ಮಾಡುತ್ತಲೂ, ಇನ್ನು ಕೆಲವರು ತತ್ವವಿಚಾರವನ್ನು ಮಾಡುತ್ತಾ ಕಾಡಿನಲ್ಲಿರುವ ಗೆಡ್ಡೆಗೆಣಸುಗಳನ್ನು ತಿನ್ನುತ್ತಾ ಶ್ರೀಹರಿಯನ್ನು ಪೂಜಿಸುತ್ತಲೂ, ಮತ್ತೆ ಕೆಲವರು ಅಜ್ಞಾನವಿಪರೀತಜ್ಞಾನಗಳನ್ನು ಕಳೆದುಕೊಂಡು ಮುಕ್ತಿಯನ್ನು ಪಡೆದವರಾಗಿ ಶ್ರೀಹರಿಯನ್ನು ಪೂಜಿಸುತ್ತಲೂ ಇರುವರು. ಕಲಿಕಾಲದಲ್ಲಿ ಸ್ವಲ್ಪ ಪುಣ್ಯವನ್ನು ಮಾಡಿದರೂ ಅಪಾರಪುಣ್ಯ ಫಲವು ಬರುತ್ತದೆ. ಅಧಿಕಪಾಪವನ್ನು ಮಾಡಿದರೂ ಅತ್ಯಲ್ಪಫಲವು ಬರುತ್ತದೆ. ಆದ್ದರಿಂದ ಕಲಿಕಾಲದ ಈ ಗುಣವನ್ನು ತಿಳಿದಿರುವ ಸಾರಜ್ಞರು ಕಲಿಕಾಲವನ್ನು ಹೊಗಳುತ್ತಿರುವರು. ಮನುಷ್ಯರು ಸಕಲಶ್ರೇಯಸ್ಸುಗಳನ್ನೂ ಕೊಡುತ್ತಿರುವ ಶ್ರೀಹರಿಯನ್ನು ಪೂಜಿಸುತ್ತಿರುವರು. ಆದ್ದರಿಂದ ಶ್ರೀಹರಿಯ ಗುಣಗಳನ್ನೇ ಯಾವಾಗಲೂ ಕೇಳಬೇಕು. ಹೇಳಬೇಕು. ಧ್ಯಾನಿಸಬೇಕು. ಮತ್ತು ಪೂಜಿಸಬೇಕು.

ಅರ್ಚನಂ ಮಂತ್ರಪಠನಂ ಯಾಗೋ ಯೋಗೋ ಮಹಾತ್ಮನಃ |
ನಾಮಸಂಕೀರ್ತನಂ ಸೇವಾ ತಚ್ಚಿಹ್ನೈರಂಕನಂ ತಥಾ ||
ತದೀಯಾರಾಧನಂ ಚೇಜ್ಯಾ ನವಧಾ ಭಿದ್ಯತೇ ಶುಭೇ |
ನವಕರ್ಮವಿಧಾನೇನ ವಿಪ್ರಸ್ಯ ಸತತಂ ಶ್ರುತಮ್ || (ಪದ್ಮಪುರಾಣ ವಚನ)

"ಬ್ರಾಹ್ಮಣನಿಗೆ ಒಂಭತ್ತು ವಿಧವಾದ ಕರ್ಮಗಳು ಯಾವಾಗಲೂ ಹೇಳಲ್ಪಟ್ಟಿವೆ. (1) ಶ್ರೀಹರಿಯ ಪೂಜೆ, (2) ವಿಷ್ಣುಸಹಸ್ರನಾಮ ಮುಂತಾದ ಮಂತ್ರಗಳನ್ನು ಹೇಳುವುದು, (3) ಅಗ್ನಿಹೋತ್ರ ಮುಂತಾದ ಯಜ್ಞಗಳನ್ನು ಮಾಡುವುದು. (4) ಸಜ್ಜನರ ಸಹವಾಸ, (5) ಶ್ರೀಹರಿಯ ನಾಮಗಳನ್ನು ಯಾವಾಗಲೂ ಸಂಕೀರ್ತನ ಮಾಡುವುದು, (6) ಶ್ರೀಹರಿಯನ್ನು ಮತ್ತು ಶ್ರೀಹರಿಭಕ್ತರನ್ನು ಸೇವಿಸುವುದು. (7) ಶಂಖ, ಚಕ್ರ, ಗದಾ, ಪದ್ಮ, ನಾರಾಯಣ ಮುದ್ರೆಗಳನ್ನು ಧರಿಸುವುದು, (8) ಶ್ರೀವಿಷ್ಣುಮಂದಿರಗಳಲ್ಲಿ ಉತ್ಸವಗಳನ್ನು ಮಾಡಿಸುವುದು, (9) ಮಹಾಯಜ್ಞಗಳನ್ನು ಮಾಡುವುದು. ಇವುಗಳು ಒಂಭತ್ತು ಕರ್ಮಗಳು."

ಮಹಾಭಾಗವತಶ್ರೇಷ್ಠೋ ಬ್ರಾಹ್ಮಣೋ ವೈ ಗುರುರ್ನೃಣಾಮ್ |
ಸರ್ವೇಷಾಮೇವ ಲೋಕಾನಾಮಸೌ ಪೂಜ್ಯೋ ಯಥಾ ಹರಿಃ |

ತಾಪಾದಿಪಂಚಸಂಸ್ಕಾರೀ ತವೇಜ್ಯಾಕರ್ಮಕಾರಕಃ |
ಅರ್ಥಪಂಚಕವಿದ್ವಿಪ್ರೋ ಮಹಾಭಾಗವತಃ ಸ್ಮೃತಃ || (ಪದ್ಮಪುರಾಣ ವಚನ)

"ಐದುಮುದ್ರೆಗಳನ್ನು ಕಾಸಿ ದೇಹದಲ್ಲಿ ಧರಿಸುವವನೂ ಶ್ರೀಹರಿಯ ಪೂಜೆಯನ್ನು ಯಾವಾಗಲೂ ಮಾಡುತ್ತಿರುವವನೂ ಎಲ್ಲಾ ವಸ್ತುಗಳೂ ಶ್ರೀಹರಿಯ ಅಧೀನವೆಂದು ತಿಳಿದವನೂ ಮಹಾಭಾಗವತನೆನಿಸುವನು. ಬ್ರಾಹ್ಮಣನಾಗಿದ್ದು ಮಹಾಭಾಗವತನೆನಿಸಿದವನು ಗುರುವೆನಿಸುವನು. ಹದಿನಾಲ್ಕುಲೋಕಗಳಲ್ಲಿರುವವರೂ ಶ್ರೀಹರಿಯನ್ನು ಪೂಜಿಸಿದಂತೆ ಈ ಗುರುವನ್ನು ಸರ್ವರೂ ಪೂಜಿಸಬೇಕು."

ನವಕರ್ಮವಿಧಾನೇಜ್ಯಾ ಕರ್ತವ್ಯಾ ತತ್ರ ನಿತ್ಯಶಃ |
ಅರ್ಚನಂ ಮಂತ್ರಪಠನಂ ತದೀಯಾನಾಂ ಚ ಪೂಜನಮ್ ||
ತಚ್ಚಿಹ್ನೈರಂಕನಂ ಸೇವಾ ವಂದನಂ ನಾಮಕೀರ್ತನಂ |
ಅರ್ಚನಂ ಚ ತದೀಯಾನಾಂ ಪಂಚೇಜ್ಯಾ ಶೂದ್ರಜನ್ಮನಾಮ್ ||
ಸಾಧಾರಣಂ ಹಿ ಸರ್ವೇಷಾಂ ಮಾನಸೇಜ್ಯಾ ನೃಣಾಂ ಶುಭೇ |
ಸ್ವಾಧಿಕಾರಾನುರೂಪಂ ವೈ ಕಾರ್ಯಂ ಹೀಜ್ಯಾ ಜಗದ್ಗುರೋಃ ||
ಅನನ್ಯದೇವತಾಭಕ್ತೈರನನ್ಯಫಲಸಾಧನೈಃ |
ಚಿದಚಿದ್‌ಬ್ರಹ್ಮತತ್ವಜ್ಞೈರ್ವೀತರಾಗೈರ್ಮುಮುಕ್ಷುಭಿಃ ||
ಗುರುಭಕ್ತಿಸಮಾಯುಕ್ತೈರಪ್ರಮತ್ತೈಃ ಸಮಾಧಿಭಿಃ |
ಬ್ರಾಹ್ಮಣೈರಿತರೈಶ್ಚಾಪಿ ಪೂಜನೀಯೋ ಹರಿಃ ಸದಾ || (ಪಾದ್ಮಪುರಾಣ ವಚನ)

ಬ್ರಾಹ್ಮಣರು ಮುಂತಾದ ಉತ್ತಮಾಧಿಕಾರಿಗಳು ಶ್ರೀಹರಿಯನ್ನು ಹಿಂದೆ ಹೇಳಿರುವ ಒಂಭತ್ತು ವಿಧದಿಂದ ಪೂಜಿಸಬೇಕು. ಶೂದ್ರರು (1) ಶ್ರೀಹರಿಯ ಪೂಜೆ, (2) ಮಂತ್ರಪಠನ (3) ನಮಸ್ಕಾರ (4) ನಾಮಸಂಕೀರ್ತನ (5) ವಿಷ್ಣುಭಕ್ತರ ಪೂಜೆ. ಹೀಗೆ ಐದು ವಿಧವಾದ ಪೂಜೆಯನ್ನು ಮಾಡಬೇಕು. ಮನಸ್ಸಿನಲ್ಲಿ ಶ್ರೀಹರಿಯನ್ನು ಸ್ಮರಿಸುತ್ತಾ ಷೋಡಶೋಪಚಾರಪೂಜೆಯನ್ನು ಮಾಡುವುದು ಮಾನಸಪೂಜೆಯೆನಿಸುತ್ತದೆ. ಈ ಮಾನಸಪೂಜೆಯನ್ನು ಎಲ್ಲಾ ಜಾತಿಯವರೂ ಮಾಡಬಹುದು. ಜಗದ್ಗುರುವಾಗಿರುವ ಶ್ರೀಹರಿಗೆ ತಮ್ಮ ತಮ್ಮ ಜಾತಿ ಮತ್ತು ಆಶ್ರಮಗಳಿಗೆ ಹೇಳಿದಂತೆ ಸರ್ವರೂ ಪೂಜೆಯನ್ನು ಮಾಡಬೇಕು. ಶ್ರೀಹರಿಯ ಭಕ್ತರು ಶ್ರೀಹರಿಯನ್ನು ಬಿಟ್ಟು ಇತರದೇವತೆಗಳಲ್ಲಿ ಸರ್ವೋತ್ತಮಭಕ್ತಿಯನ್ನು ಇಟ್ಟುಕೊಳ್ಳಬಾರದು. ಶ್ರೀಹರಿಯ ಅನುಗ್ರಹವನ್ನು ಬಿಟ್ಟು ಇತರ ಫಲಗಳನ್ನು ಅಪೇಕ್ಷಿಸಕೂಡದು. ಬ್ರಹ್ಮಾದಿದೇವತೆಗಳಲ್ಲಿ ತಾರತಮ್ಯವನ್ನು ತಿಳಿದು ಭಕ್ತಿಯನ್ನು ಮಾಡಬೇಕು. ಕಲಿ ಮುಂತಾದ ದೈತ್ಯರಲ್ಲಿ ದ್ವೇಷವನ್ನು ಮಾಡಬೇಕು. ನಿತ್ಯ ಸಂಸಾರಿಗಳ ವಿಷಯದಲ್ಲಿ ಉದಾಸೀನರಾಗಿರಬೇಕು. ಜಡವಸ್ತುಗಳಲ್ಲಿಯೂ ತಾರತಮ್ಯವನ್ನು ತಿಳಿದು ಶಾಲಿಗ್ರಾಮ ಮುಂತಾದ ಉತ್ತಮವಸ್ತುಗಳಲ್ಲಿ ಶ್ರೀಹರಿಯು ವಿಶೇಷಸನ್ನಿಧಾನದಿಂದ ಯುಕ್ತನಾಗಿರುವನೆಂದು ತಿಳಿದು ಆ ವಸ್ತುಗಳಲ್ಲಿ ಶ್ರೀಹರಿಯನ್ನು ವಿಶೇಷಭಕ್ತಿಯಿಂದ ಪೂಜಿಸಬೇಕು. ಶ್ರೀಹರಿಯು ಗುಣಪರಿಪೂರ್ಣನೆಂದೂ ತಿಳಿದು ಆ ವಸ್ತುಗಳಲ್ಲಿ ಶ್ರೀಹರಿಯನ್ನು ವಿಶೇಷಭಕ್ತಿಯಿಂದ ಪೂಜಿಸಬೇಕು. ಶ್ರೀಹರಿಯು ಗುಣಪರಿಪೂರ್ಣನೆಂದೂ ದೋಷರಹಿತನೆಂದೂ ತಿಳಿದು ಅವನಲ್ಲಿ ಅಪಾರವಾದ ಭಕ್ತಿಯನ್ನು ಮಾಡಬೇಕು. ಬ್ರಾಹ್ಮಣನೂ ಇತರರೂ ಗುರುಗಳಲ್ಲಿ ಭಕ್ತಿಯಿಂದ ಯುಕ್ತರಾಗಿ ಜಾಗ್ರತೆಯಿಂದ ಮನಸ್ಸನ್ನು ಏಕಾಗ್ರವಾಗಿ ಶ್ರೀಹರಿಯಲ್ಲಿ ನಿಲ್ಲಿಸಿ ಅವನನ್ನು ಪೂಜಿಸಬೇಕು."

ಸರ್ವೋಪನಿಷದಾಮರ್ಥಂ ವೇದಾಂತೋಪರಿ ನಿಶ್ಚಿತಮ್ |
ಸತ್ಯೋಪಾಸನಭೇದಾಂಸ್ತು ಶೃಣು ಚಾಪಿ ಪೃಥಕ್ ಪೃಥಕ್ ||
ಆದ್ಯಂ ತು ವೈಷ್ಣವಂ ಪ್ರೋಕ್ತಂ ಶಂಖಚಕ್ರಾಂಕನಂ ಹರೇಃ |
ಧಾರಣಂ ಚೋರ್ಧ್ವಪುಂಡ್ರಾಣಾಂ ತನ್ಮಂತ್ರಾಣಾಂ ಪರಿಗ್ರಹಃ ||
ಅರ್ಚನಂ ಚ ಜಪೋ ಧ್ಯಾನಂ ತನ್ನಾಮಸ್ಮರಣಂ ತಥಾ |
ಚಕ್ರಚಿಹ್ನವಿಹೀನಸ್ತು ಯಃ ಪೂಜಯತಿ ಕೇಶವಮ್ |
ತತ್ಸರ್ವಂ ನಿಷ್ಫಲಂ ಯಾತಿ ಪೂಜಾಮಂತ್ರಜಪಾದಿಕಮ್ || (ಪಾದ್ಮಪುರಾಣ ವಚನ)

"ಶ್ರೀಹರಿಯು ಎಲ್ಲಾ ಉಪನಿಷತ್ತುಗಳಲ್ಲಿಯೂ ಹೊಗಳಲ್ಪಡುವನೆಂದೂ ಬ್ರಹ್ಮಸೂತ್ರಗಳಲ್ಲಿಯೂ ಶ್ರೀಹರಿಯ ಸರ್ವೋತ್ತಮತ್ವವು ನಿರ್ಣೀತವಾಗಿದೆಯೆಂದೂ ದೃಢತರವಾದ ನಂಬಿಕೆಯಿರಬೇಕು. ಶ್ರೀಹರಿಯ ಉಪಾಸನೆಗಳಲ್ಲಿ ಅನೇಕ ವಿಧಗಳಿವೆ. ಅವುಗಳನ್ನು ಬೇರೆ ಬೇರೆಯಾಗಿ ಹೇಳುವೆನು. (1) ಶಂಖ ಚಕ್ರ ಮುಂತಾದ ಶ್ರೀಹರಿಯ ಆಯುಧಗಳನ್ನು ಧರಿಸುವುದು ಮೊದಲನೆಯದು, (2) ಊರ್ಧ್ವಪುಂಡ್ರಗಳನ್ನು ಧರಿಸುವುದು ಎರಡನೆಯದು, (3) ನಾರಾಯಣಾಷ್ಟಾಕ್ಷರ ಮುಂತಾದ ಶ್ರೀಹರಿಯ ಮಂತ್ರಗಳ ಉಪದೇಶವನ್ನು ಪಡೆಯುವುದು ಮೂರನೆಯದು, (4) ಶ್ರೀಹರಿಯ ಪೂಜೆಯನ್ನು ಮಾಡುವುದು ನಾಲ್ಕನೆಯದು. (5) ಶ್ರೀಹರಿಯ ಮಂತ್ರಗಳ ಜಪ ಐದನೆಯದು, (6) ಶ್ರೀಹರಿಯನ್ನು ಧ್ಯಾನಿಸುವುದು ಆರನೆಯದು, (7) ಶ್ರೀಹರಿಯ ನಾಮಸ್ಮರಣೆ ಏಳನೆಯದು. ಚಕ್ರಮುದ್ರೆಯನ್ನು ಧರಿಸದೆ ಶ್ರೀಹರಿಯ ಪೂಜೆ ಮಂತ್ರ ಜಪ ಮುಂತಾದ ಸತ್ಕಾರ್ಯಗಳನ್ನು ಮಾಡಿದರೆ ಎಲ್ಲಾ ಕಾರ್ಯಗಳೂ ನಿಷ್ಫಲವಾಗುವವು."

ಶ್ರುತಂ ಮಯಾ ಮುನಿಶ್ರೇಷ್ಠ ನಾನ್ಯೋ ದೇವೋ ಜನಾರ್ದನಾತ್ |
ಧ್ಯಾತಸ್ತಥಾರ್ಚಿತೋ ನೄಣಾಂ ಮುಕ್ತಿದೋ ಭವಬಂಧನಾತ್ || (ಪಾದ್ಮಪುರಾಣ ವಚನ)

"ಶ್ರೀಹರಿಯನ್ನು ಬಿಟ್ಟು ಉಳಿದ ಯಾವ ದೇವತೆಯೂ ಧ್ಯಾನಿಸಲ್ಪಟ್ಟರೂ ಪೂಜಿಸಲ್ಪಟ್ಟರೂ ಸಂಸಾರ ಎಂಬ ಬಂಧನದಿಂದ ಬಿಡಿಸುವವನಿಲ್ಲ."

ಏವಂ ಶುದ್ಧಾ ಮಹಾತ್ಮಾನೋ ಧ್ಯಾನಿನೋ ಮುಕ್ತಿಭಾಗಿನಃ |
ಯೇಽರ್ಚಯಂತಿ ಸದಾ ಕೃಷ್ಣಂ ತೇ ವೈ ಭಾಗವತಾ ನರಾಃ ||
ಯೇಽರ್ಚಯಂತಿ ಸದಾ ದೇವಂ ವಿಶ್ವೇಶಂ ವರದಂ ಪ್ರಭುಮ್ |
ದೇಹಿನಃ ಪುಣ್ಯಕರ್ಮಾಣಸ್ತೇ ವೈ ಭಾಗವತಾ ನರಾಃ ||
ಯೇ ಸ್ವಧರ್ಮನಿರತಾಃ ಶಾಂತಾ ಜಿತಕ್ರೋಧಾ ಜಿತೇಂದ್ರಿಯಾಃ |
ಸರ್ವಸತ್ವಹಿತೇ ಯುಕ್ತಾ ಯೇಽರ್ಚಯಂತಿ ಸದಾ ಹರಿಮ್ ||
ಮಹೇಂದ್ರಜಾಲಸದೃಶಂ ಹಿತ್ವಾ ಸಾಂಸಾರಿಕಂ ಸುಖಮ್ |
ಯೇ ಸ್ಥಿತಾಃ ಶಾಶ್ವತೇ ಧರ್ಮೇ ತೇಽರ್ಚಯಂತಿ ಸದಾ ಹರಿಮ್ ||
ಯೇ ವೈ ಚಾನುದಿನಂ ಭಕ್ತ್ಯಾ ಪಂಚಯಜ್ಞಕ್ರಿಯಾದಿಭಿಃ |
ಯೇಽರ್ಚಯಂತಿ ಸದಾ ವಿಷ್ಣುಂ ತೇಷಾಂ ವಿಷ್ಣುರ್ವರಪ್ರದಃ || (ಪದ್ಮಪುರಾಣ ವಚನ)

"ಹಿಂದೆ ಹೇಳಿದಂತೆ ಶುದ್ಧವಾದ ಮನಸ್ಸಿನಿಂದ ಯುಕ್ತರಾಗಿ ಶ್ರೀಹರಿಯನ್ನು ಧ್ಯಾನಿಸುತ್ತಿರುವವರು ಮುಕ್ತಿಯನ್ನು ಪಡೆಯುವರು, ಯಾವಾಗಲೂ ಶ್ರೀಕೃಷ್ಣನನ್ನು ಪೂಜಿಸುತ್ತಿರುವವರೂ, ಪುಣ್ಯಕಾರ್ಯಗಳನ್ನೂ ಮಾಡುತ್ತಿರುವವರೂ, ಕೋಪ

ಮುಂತಾದ ಶತ್ರುಗಳನ್ನು ಜಯಿಸಿದವರೂ, ಇಂದ್ರಿಯಗಳನ್ನು ಜಯಿಸಿದವರೂ, ಸ್ವಧರ್ಮದಲ್ಲಿ ನಿರತರಾಗಿರುವವರೂ, ಸರ್ವಪ್ರಾಣಿಗಳ ಹಿತದಲ್ಲಿ ಆಸಕ್ತರಾಗಿರುವವರೂ ಸಾಂಸಾರಿಕಸುಖವು ಇಂದ್ರಜಾಲದಂತೆ ಶಾಶ್ವತವಲ್ಲವೆಂದು ತಿಳಿದು ಶಾಶ್ವತವಾದ ಧರ್ಮದಲ್ಲಿಯೇ ಆಸಕ್ತರಾಗಿರುವವರೂ ಶ್ರೀವಿಷ್ಣುವನ್ನು ಪೂಜಿಸುವವರೆನಿಸುವರು. ಅವರಿಗೆ ಶ್ರೀಹರಿಯು ಎಲ್ಲಾ ವರಗಳನ್ನೂ ಕೊಡುವನು."

ಪ್ರವೃತ್ತೈಶ್ಚ ನಿವೃತ್ತೈಶ್ಚ ಸ್ವರ್ಗಗೈರ್ಮೋಕ್ಷಗೈರಪಿ |
ಆರಾಧ್ಯೋ ಭಗವಾನೇವ ವೇದಧರ್ಮೈಃ ಸನಾತನೈಃ ||
ಸ ಏವ ಸರ್ವಥೋಪಾಸ್ಯೋ ನಾನ್ಯಃ ಸಂಸಾರತಾರಕಃ |
ಉಭಾಭ್ಯಾಂ ಜ್ಞಾನಕರ್ಮಭ್ಯಾಮಾರಾಧ್ಯೋ ಭಗವಾನ್ಹರಿಃ || (ಶಾಂಡಿಲ್ಯರ ವಚನ)

"ಪ್ರವೃತ್ತಿಧರ್ಮಗಳಲ್ಲಿ ನಿರತರಾಗಿರುವವರಾಗಲೀ, ನಿವೃತ್ತಿಧರ್ಮದಲ್ಲಿ ನಿರತರಾಗಿರುವವರಾಗಲೀ ವೇದಗಳಲ್ಲಿ ಹೇಳಲ್ಪಟ್ಟ ಸನಾತನವಾದ ಧರ್ಮಗಳಿಂದ ಶ್ರೀಹರಿಯನ್ನೇ ಎಲ್ಲಾ ವಿಧದಿಂದಲೂ ಆರಾಧಿಸಬೇಕು. ಅವನನ್ನು ಬಿಟ್ಟು ಸಂಸಾರದಿಂದ ದಾಟಿಸುವವನು ಬೇರೆ ಯಾರೂ ಇಲ್ಲ. ಜ್ಞಾನಮಾರ್ಗದಿಂದಲೂ ಕರ್ಮಮಾರ್ಗದಿಂದಲೂ ಶ್ರೀಹರಿಯನ್ನೇ ಆರಾಧಿಸಬೇಕು."

ಬ್ರಹ್ಮಚಾರೀ ಗೃಹಸ್ಥೋ ವಾ ಭಿಕ್ಷುರ್ವೈಖಾನಸಸ್ತಥಾ |
ಕುರ್ವಂತೋ ನಿಜಕರ್ಮಾಣಿ ವಿಷ್ಣುಮೇವ ಯಜಂತಿ ತೇ ||
ಅಗ್ನಿಕಾರ್ಯಂ ಜಪಂ ಸ್ನಾನಂ ತಪಃ ಸ್ವಾಧ್ಯಾಯಮೇವ ಚ |
ತಮೇವೋದ್ದಿಶ್ಯ ದೇವೇಶಂ ಕುರು ನಿತ್ಯಮತಂದ್ರಿತಃ ||

"ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ನಾಲ್ಕು ಆಶ್ರಮದವರೂ ತಮ ತಮಗೆ ಶಾಸ್ತ್ರಗಳಲ್ಲಿ ವಿಹಿತವಾದ ಕರ್ಮಗಳನ್ನು ಮಾಡುತ್ತಿದ್ದರೆ ಶ್ರೀಹರಿಯನ್ನೇ ಆರಾಧಿಸಿದಂತಾಗುತ್ತದೆ. ಆದ್ದರಿಂದ ಅಗ್ನಿಕಾರ್ಯ, ಜಪ, ಸ್ನಾನ, ತಪಸ್ಸು, ವೇದಾಧ್ಯಯನ ಮುಂತಾದ ಎಲ್ಲಾ ಸ್ವವಿಹಿತಕರ್ಮಗಳನ್ನೂ ಯಾವಾಗಲೂ ಆಲಸ್ಯವಿಲ್ಲದಂತೆ ಮಾಡುತ್ತಿರು."

ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವನೇ ಫಲಮ್ |
ಯೈರ್ನ ಲಬ್ಧಾ ಹರೇರ್ದೀಕ್ಷಾ ನಾರ್ಚಿತೋ ವಾ ಜನಾರ್ದನಃ ||
ಅರ್ಚಿತೇ ದೇವದೇವೇಶೇ ಶಂಖಚಕ್ರಗದಾಧರೇ |
ಅರ್ಚಿತಾಃ ಸರ್ವದೇವಾಃ ಸ್ಯುರ್ಯತಃ ಸರ್ವಗತೋ ಹರಿಃ || (ಕೃಷ್ಣಾಮೃತಮಹಾರ್ಣವ)

"ತಪ್ತಮುದ್ರಾಧಾರಣ, ಊರ್ಧ್ವಪುಂಡ್ರಧಾರಣ ಮುಂತಾದವುಗಳು ವೈಷ್ಣವದೀಕ್ಷೆಯೆನಿಸುತ್ತವೆ. ಈ ವೈಷ್ಣವದೀಕ್ಷೆಯನ್ನು ಪಡೆಯದಿರುವವರ ಜನ್ಮವು ವ್ಯರ್ಥ ಮತ್ತು ಅವರು ಪಶುಗಳೆಂದು ಹೇಳಲ್ಪಡುವರು. ಶಂಖ, ಚಕ್ರ, ಗದೆಗಳನ್ನು ಧರಿಸಿರುವವನೂ ಎಲ್ಲಾ ದೇವತೆಗಳಿಗೂ ಪ್ರಭುವೂ ಆಗಿರುವ ನಾರಾಯಣನನ್ನು ಪೂಜಿಸಿದರೆ ಸಕಲದೇವತೆಗಳನ್ನೂ ಪೂಜಿಸಿದಂತಾಗುವುದು. ಸರ್ವಾಂತರ್ಯಾಮಿಯಾದ ಶ್ರೀಹರಿಯು ಸಂತುಷ್ಟನಾಗಿ ಬಿಟ್ಟರೆ ಸರ್ವರೂ ಸಂತುಷ್ಟರಾಗಬೇಕಾದುದು ನ್ಯಾಯವಲ್ಲವೇ?"

ಐಂದ್ರಮಿಂದ್ರಃ ಪರಂ ಸ್ಥಾನಂ ಯಮಾರಾಧ್ಯ ಜಗತ್ಪತಿಮ್ |
ಪ್ರಾಪ ಯಜ್ಞಪತಿಂ ವಿಷ್ಣುಂ ತಮಾರಾಧಯ ಸುವ್ರತ ||
ಸಂಸಾರೇಽಸ್ಮಿನ್ ಮಹಾಘೋರೇ ಜನ್ಮರೋಗಭಯಾಕುಲೇ |
ಅಯಮೇಕೋ ಮಹಾಭಾಗಃ ಪೂಜ್ಯತೇ ಯದಧೋಕ್ಷಜಃ ||

ಯೇಽರ್ಚಯಂತಿ ನರಾ ನಿತ್ಯಂ ತೇಽಪಿ ವಂದ್ಯಾ ಯಥಾ ಹರಿಃ |
ನಾಸ್ತಿ ಶ್ರೇಯಸ್ಕರಂ ನೃಣಾಂ ವಿಷ್ಣೋರಾರಾಧನಾನ್ಮುನೇ || (ಪುಲಸ್ತ್ಯರ ವಚನ)

"ಜಗತ್ಪತಿಯೂ ಯಜ್ಞಪತಿಯೂ ಆಗಿರುವ ಶ್ರೀಹರಿಯನ್ನು ಆರಾಧಿಸಿ ದೇವೇಂದ್ರನು ಇಂದ್ರಪದವಿಯನ್ನು ಪಡೆದಿರುವನು. ನೀನೂ ಅವನನ್ನು ಆರಾಧಿಸು. ಅತ್ಯಂತಘೋರವಾಗಿರುವ ಈ ಸಂಸಾರದಲ್ಲಿ ಜನ್ಮ ರೋಗ ಭಯ ಮುಂತಾದ ಅನರ್ಥಗಳು ತುಂಬಿವೆ. ಈ ಸಂಸಾರದಲ್ಲಿ ಶ್ರೀಹರಿಯನ್ನು ಭಕ್ತಿಯಿಂದ ಆರಾಧಿಸುವವನು ಎಲ್ಲಾ ಅನರ್ಥಗಳನ್ನೂ ದಾಟುವನು. ನಾರಾಯಣನನ್ನು ಆರಾಧಿಸುವವರೂ ಶ್ರೀಹರಿಯಂತೆ ಪೂಜ್ಯರೆನಿಸುವರು. ಈ ಸಂಸಾರದಲ್ಲಿ ನಾರಾಯಣನ ಆರಾಧನೆಗಿಂತ ಶ್ರೇಯಸ್ಕರವಾದದ್ದು ಯಾವುದೂ ಇಲ್ಲ."

ಯಸ್ಯಾಂತಃ ಸರ್ವಮೇವೇದಮಚ್ಯುತಸ್ಯಾವ್ಯಯಾತ್ಮನಃ |
ತಮಾರಾಧಯ ಗೋವಿಂದಂ ಸ್ಥಾನಮಗ್ರ್ಯಂ ಯದೀಚ್ಛಸಿ || (ಅಂಗೀರಸರ ವಚನ)

"ನಾಶವಿಲ್ಲದಿರುವ ಶರೀರವುಳ್ಳ ಅಚ್ಯುತನ ಶರೀರದೊಳಗೆ ಎಲ್ಲಾ ಪ್ರಪಂಚಗಳೂ ಅಡಗಿವೆ. ಅವನನ್ನು ಪೂಜಿಸಿಬಿಟ್ಟರೆ ಸಕಲಪ್ರಪಂಚವನ್ನೂ ತೃಪ್ತಿಪಡಿಸಿದಂತಾಗುತ್ತದೆ. ನೀನು ಉತ್ತಮವಾದ ಸ್ಥಾನವನ್ನು ಅಪೇಕ್ಷಿಸುವುದಾದರೆ ಆ ಗೋವಿಂದನನ್ನೇ ಪೂಜಿಸು."

ಸ ನಾಮ ಸುಕೃತೀ ಲೋಕೇ ಕುಲಂ ತೇನ ಹ್ಯಲಂಕೃತಮ್ |
ಆಧಾರಃ ಸರ್ವಭೂತಾನಾಂ ಯೇನ ವಿಷ್ಣುಃ ಪ್ರಸಾದಿತಃ ||
ಯಜ್ಞಾನಾಂ ತಪಸಾಂ ಚೈವ ಶುಭಾನಾಂ ಚೈವ ಕರ್ಮಣಾಮ್ |
ತದ್ವಿಶಿಷ್ಟಫಲಂ ನೃಣಾಂ ಸದ್ಯೈವಾರಾಧನಂ ಹರೇಃ ||
ಪ್ರಾಪ್ನೋತ್ಯಾರಾಧಿತೇ ವಿಷ್ಣೌ ಮನಸಾ ಯದ್ಯದಿಚ್ಛತಿ |
ತ್ರೈಲೋಕ್ಯಾಂತರ್ಗತಂ ಸ್ಥಾನಂ ಕಿಮು ಲೋಕೋತ್ತರೋತ್ತರಾನ್ ||
ಅರ್ಚಿತೇ ಸರ್ವಲೋಕೇಶೇ ಸುರಾಸುರನಮಸ್ಕೃತೇ |
ಕೇಶವೇ ಕಂಸನಿಘ್ನೇ ನ ಯಾತಿ ನರಕಂ ನರಃ | (ಕೃಷ್ಣಾಮೃತ ಮಹಾರ್ಣವ)

"ಯಾವನು ವಿಷ್ಣುವನ್ನು ಸಂತೋಷಪಡಿಸಿರುವನೋ ಅವನೇ ಪುಣ್ಯವಂತನು. ಕುಲವನ್ನು ಅಲಂಕರಿಸಿದವನು, ಎಲ್ಲಾ ಜೀವರಿಗೂ ಆಧಾರನೆಂದೆನಿಸುವನು. ಯಜ್ಞಗಳಿಂದಲೂ ತಪಸ್ಸುಗಳಿಂದಲೂ ಶುಭಕರ್ಮಗಳಿಂದಲೂ ಅಧಿಕವಾದ ಫಲವನ್ನು ಶ್ರೀಹರಿಯ ಆರಾಧನೆಯು ಕೊಡುತ್ತದೆ. ನಾರಾಯಣನನ್ನು ಆರಾಧಿಸುವವನು ಯಾವ ಫಲವನ್ನು ಅಪೇಕ್ಷಿಸುವನೋ ಅವುಗಳನ್ನೆಲ್ಲವನ್ನೂ ಪಡೆಯುವುದರಲ್ಲಿ ಸಂಶಯವೇನಿದೆ ? ಶ್ರೀಹರಿಯು ಸಕಲಲೋಕಗಳಿಗೂ ಅಧಿಪತಿಯಾಗಿರುವನು, ದೇವತೆಗಳೂ ದೈತ್ಯರೂ ಅವನನ್ನು ನಮಸ್ಕರಿಸುತ್ತಿರುವರು. ಕಂಸ ಕೇಶಿ ಮುಂತಾದ ದುಷ್ಟರನ್ನೆಲ್ಲರನ್ನೂ ಸಂಹರಿಸಿರುವ ಶ್ರೀಕೃಷ್ಣನನ್ನು ಆರಾಧಿಸಿದವನಿಗೆ ನರಕಭಯವಿಲ್ಲ."

ಬಾಹುಭ್ಯಾಂ ಸಾಗರಂ ತರ್ತುಂ ಕ ಇಚ್ಛೇತ ಪುಮಾನ್ ಭುವಿ |
ವಾಸುದೇವಮನಾರಾಧ್ಯ ಕೋ ಮೋಕ್ಷಂ ಗಂತುಮಿಚ್ಛತಿ || (ಬ್ರಹ್ಮನ ವಚನ)

"ಈಸುತ್ತಲೇ ಸಮುದ್ರವನ್ನು ದಾಟುವುದಕ್ಕಾಗಿ ಅಪೇಕ್ಷಿಸುವವನೂ ವಾಸುದೇವನನ್ನು ಆರಾಧಿಸದೆ ಮುಕ್ತಿಯನ್ನು ಅಪೇಕ್ಷಿಸುವವನೂ ಸಮಾನರೆಂದು ಹೇಳಬಹುದು."

### ವಿಷ್ಣುವನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸಕೂಡದು

ಭಗವಂತಮನುದ್ದಿಶ್ಯ ಯಃ ಕರ್ಮ ಕುರುತೇ ನರಃ |
ಸ ಪಾಷಂಡೀತಿ ವಿಜ್ಞೇಯಃ ಸರ್ವಲೋಕೇಷು ಗರ್ಹಿತಃ ||
ಅಶ್ವಮೇಧಶತೈರಿಷ್ಟ್ವಾ ವಾಜಪೇಯಶತೈರಪಿ |
ನ ಪ್ರಾಪ್ನುವಂತಿ ಸುಗತಿಂ ನಾರಾಯಣಪರಾಙ್ಮುಖಾಃ || (ಹಾರೀತರ ವಚನ)

ಶ್ರೀಹರಿಯ ಪ್ರೀತಿಯನ್ನು ಉದ್ದೇಶಿಸದೆ ಸತ್ಕರ್ಮಗಳನ್ನು ಮಾಡುವವನು ಪಾಷಂಡೀ ಎಂದು ಹೇಳಲ್ಪಡುವನು. ಅವನನ್ನು ಎಲ್ಲಾ ಲೋಕಗಳಲ್ಲಿಯೂ ಸರ್ವರೂ ನಿಂದಿಸುವರು. ನೂರು ಅಶ್ವಮೇಧಯಾಗಗಳನ್ನು ಮಾಡಿದರೂ ನೂರು ವಾಜಪೇಯಯಾಗಗಳನ್ನು ಮಾಡಿದರೂ ನಾರಾಯಣನಲ್ಲಿ ಭಕ್ತಿಯಿಲ್ಲದವರು ಸದ್ಗತಿಯನ್ನು ಪಡೆಯಲಾರರು."

ಯೋ ಹಿ ವಿಷ್ಣುಂ ಪರಿತ್ಯಜ್ಯ ಸರ್ವದೇವೇಶ್ವರಂ ಹರಿಂ |
ಇತರಾನರ್ಚಯೇನ್ಮೋಹಾತ್ಸ ಲೋಕಾತ್ಪತಿತಃ ಸ್ಮೃತಃ ||
ಯಃ ಕರ್ಮ ಕುರುತೇ ವಿಪ್ರೋ ವಿನಾ ವಿಷ್ಣ್ವರ್ಚನಂ ಕ್ವಚಿತ್ |
ಬ್ರಾಹ್ಮಣ್ಯಾದ್ ಭ್ರಶ್ಯತೇ ಸದ್ಯಶ್ಚಂಡಾಲತ್ವಂ ಸ ಗಚ್ಛತಿ || (ಹಾರೀತರ ವಚನ)

"ಸರ್ವದೇವತೆಗಳಿಗೂ ಪ್ರಭುವಾಗಿರುವ ಸರ್ವರ ಪಾಪಗಳನ್ನೂ ಪರಿಹರಿಸುವ ಶ್ರೀಹರಿಯನ್ನು ಬಿಟ್ಟು ವಿಪರೀತ ಜ್ಞಾನದಿಂದ ಇತರ ದೇವತೆಗಳನ್ನು ಆರಾಧಿಸುವವನು ಎಲ್ಲಾ ಲೋಕಗಳಿಂದಲೂ ಭ್ರಷ್ಟನಾಗಿ ನರಕಗಳಲ್ಲಿ ಬೀಳುವನು. ಶ್ರೀಹರಿಯ ಪೂಜೆಯನ್ನು ಬಿಟ್ಟು ಇತರ ಕಾರ್ಯಗಳನ್ನು ಮಾಡುವವನು ಬ್ರಾಹ್ಮಣನಾಗಿದ್ದರೂ ಬ್ರಾಹ್ಮಣ್ಯದಿಂದ ಭ್ರಷ್ಟನಾಗುವನು."

ಬ್ರಹ್ಮಣ್ಯಶ್ಚ ಶರಣ್ಯಶ್ಚ ತ್ವಮೇವ ಪುರುಷೋತ್ತಮ |
ತೇ ಪಾಷಂಡಿತ್ವಮಾಪನ್ನಾಃ ಸರ್ವಲೋಕವಿಗರ್ಹಿತಾಃ ||
ವಿಪ್ರಾಣಾಂ ವೇದವಿದುಷಾಂ ತ್ವಮೇವೇಜ್ಯೋ ಜನಾರ್ದನ |
ನಾನ್ಯಃ ಕಶ್ಚಿತ್ಸುರಾಣಾಂ ಚ ಪೂಜನೀಯಃ ಕದಾಚನ ||
ಅಶುದ್ಧಾ ಬ್ರಹ್ಮರುದ್ರಾದ್ಯಾ ರಜಸ್ತಮವಿಮಿಶ್ರಿತಾಃ |
ತ್ವಂ ಸತ್ವಶುದ್ಧಗುಣವಾನ್ ಪೂಜನೀಯೋಽಗ್ರಜನ್ಮಭಿಃ ||
ತಸ್ಮಾತ್ತ್ವಮೇವ ವಿಪ್ರಾಣಾಂ ಪೂಜ್ಯೋ ನಾನ್ಯಸ್ತು ಕಶ್ಚನ |
ಮೋಹಾದ್ಯಃ ಪೂಜಯೇದನ್ಯಾನ್ ಸ ಪಾಷಂಡೀ ಭವಿಷ್ಯತಿ || (ಭೃಗುಋಷಿಗಳ ವಚನ)

"ಓ ಪುರುಷೋತ್ತಮ, ನೀನೇ ಬ್ರಾಹ್ಮಣರಲ್ಲಿ ವಿಶೇಷಪ್ರೀತಿಯುಳ್ಳವನಾದುದರಿಂದ ಬ್ರಹ್ಮಣ್ಯನೆನಿಸುವಿ. ಶರಣಾಗತರಕ್ಷಕನಾದ್ದರಿಂದ ಶರಣ್ಯನೆನಿಸುವಿ. ವೇದವನ್ನು ತಿಳಿದಿರುವ ಬ್ರಾಹ್ಮಣರು ನಿನ್ನನ್ನೇ ಯಾವಾಗಲೂ ಆರಾಧಿಸುತ್ತಿರುವರು. ನಿನ್ನನ್ನು ಬಿಟ್ಟು ಇತರ ದೇವತೆಗಳನ್ನು ಆರಾಧಿಸುತ್ತಿರುವವರು ಪಾಷಂಡಿಗಳೆನಿಸುವರು. ನಿನ್ನನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸಕೂಡದು. ಅದಕ್ಕೆ ಕಾರಣವನ್ನು ಹೇಳುವೆನು. ಬ್ರಹ್ಮ ರುದ್ರ ಮುಂತಾದ ದೇವತೆಗಳಲ್ಲಿ ಕೆಲವರು ರಾಜಸರು. ಕೆಲವರು ತಾಮಸರು. ಆದ್ದರಿಂದ ಅವರನ್ನು ಪೂಜಿಸಕೂಡದು. ಶುದ್ಧವಾದ ಸತ್ವಗುಣವನ್ನು ಮುಂದಿಟ್ಟುಕೊಂಡು ಎಲ್ಲಾ ಕಾರ್ಯಗಳನ್ನೂ ಮಾಡುವವನು ನೀನೊಬ್ಬನೇ. ಆದ್ದರಿಂದ ಸಾತ್ವಿಕರಾದ ಬ್ರಾಹ್ಮಣರೆಲ್ಲರೂ ನಿನ್ನನ್ನೇ ಆರಾಧಿಸುತ್ತಿರುವರು. ವಿಪರೀತಜ್ಞಾನದಿಂದ ಇತರ ದೇವತೆಗಳನ್ನು ಆರಾಧಿಸುವವರು ಪಾಷಂಡಿಗಳೆನಿಸುವರು."

ಯಜಂತೇ ಸಾತ್ತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ |
ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ||
ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ |
ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ||
ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ |
ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ || (ಭಗವದ್ಗೀತಾ ವಚನ)

"ಸಾತ್ತ್ವಿಕರು ದೇವತೆಗಳನ್ನೂ ರಾಜಸರು ಯಕ್ಷ ಮತ್ತು ರಾಕ್ಷಸರನ್ನೂ ತಾಮಸರು ಪ್ರೇತಗಳು ಮತ್ತು ಭೂತಗಳನ್ನೂ ಪೂಜಿಸುತ್ತಾರೆ. ಇನ್ನು ಮುಂದೆ ಅಸುರಸ್ವಭಾವವುಳ್ಳವರನ್ನು ಹೇಳುವೆನು. ಶಾಸ್ತ್ರದಲ್ಲಿ ವಿಹಿತವಲ್ಲದಿರುವ ಅತಿಘೋರವಾದ ತಪಸ್ಸುಗಳನ್ನು ಮಾಡುತ್ತಿರುವವರೂ ಡಾಂಭಿಕತನ ಮತ್ತು ಅಹಂಕಾರದಿಂದ ಯುಕ್ತರಾಗಿರುವವರೂ ವಿಷಯದ ಆಸೆಯು ಮಿತಿಮೀರಿದವರೂ ತನ್ನ ಶರೀರಕ್ಕೆ ಸಂಬಂಧಿಸಿರುವ ಬಂಧುಗಳನ್ನು ಪೀಡಿಸುತ್ತಿರುವವರೂ ಅವರ ದೇಹಗಳೊಳಗೆ ವಾಸಿಸುತ್ತಿರುವ ನನಗೆ ವಿರುದ್ಧವಾದ ಕಾರ್ಯಗಳನ್ನು ಮಾಡುತ್ತಾ ನನ್ನ ಅತ[illegible]ೆ ಪಾತ್ರರಾಗಿರುವವರೂ ಅಸುರಸ್ವಭಾವವುಳ್ಳವರೆಂದು ತಿಳಿಯಬೇಕು."

### ತಾಮಸ ದೇವತೆಗಳು

ಭದ್ರಕಾಲೀ ಗಣೇಶಶ್ಚ ಕೂಷ್ಮಾಂಡಾ ಭೈರವಾದಯಃ |
ಮದ್ಯಮಾಂಸಾಶಿನಶ್ಚಾನ್ಯೇ ತಾಮಸಾಃ ಪರಿಕೀರ್ತಿತಾಃ || (ಹಾರೀತರ ವಚನ)

ಭದ್ರಕಾಲೀ, ಗಣೇಶ, ಕೂಷ್ಮಾಂಡಗಣಗಳು, ಭೈರವ ಮಂತಾದ ಭೂತಗಣಗಳು. ಮದ್ಯವನ್ನೂ ಮಾಂಸಗಳನ್ನೂ ತಿನ್ನುತ್ತಿರುವ ಇತರ ಗಣಗಳು ತಾಮಸದೇವತೆಗಳೆಂದು ಹೇಳಲ್ಪಡುವರು.

### ತಾಮಸ ದೇವತೆಗಳನ್ನು ಪೂಜಿಸಕೂಡದು

ಯಕ್ಷರಾಕ್ಷಸಭೂತಾನಾಂ ತಾಮಸಾನಾಂ ದಿವೌಕಸಾಮ್ ||
ಆಪದ್ಯಪಿ ನ ಕುರ್ವೀತ ಸರ್ವಕೃತ್ಯೇಷು ಸರ್ವದಾ ||
ಯಕ್ಷಾನ್ ಪಿಶಾಚಾನ್ ಭೂತಾಂಶ್ಚ ಮೋಹಾತ್ಸಂಪೂಜಯೇದ್ಯದಿ |
ಶ್ವಾನಯೋನಿಶತಂ ಪ್ರಾಪ್ಯ ಪುನಶ್ಚಂಡಾಲತಾಂ ವ್ರಜೇತ್ |
ಡಾಕಿನ್ಯಃ ಪ್ರೇತಕೂಷ್ಮಾಂಡಾ ದುರ್ಗಾಗಣಪಭೈರವಾಃ |
ಬ್ರಾಹ್ಮಣೈರ್ನಾರ್ಚನೀಯಾಃ ಸ್ಯುಃ ಪಿಶಾಚಾ ರಾಕ್ಷಸಾಸ್ತಥಾ || (ಆತ್ರೇಯರ ವಚನ)

"ಯಕ್ಷರು, ರಾಕ್ಷಸರು, ಭೂತಗಳು, ತಾಮಸರಾದ ದೇವತೆಗಳು ಇವರ ಪೂಜೆಯನ್ನು ತುಂಬಾ ಆಪತ್ತುಗಳು ಬಂದಾಗಲೂ ಯಾವ ಕಾರ್ಯಗಳಲ್ಲಿಯೂ ಮಾಡಕೂಡದು. ವಿಪರೀತಜ್ಞಾನದಿಂದ ಯಕ್ಷರನ್ನೂ ಪಿಶಾಚಗಳನ್ನೂ ಭೂತಗಳನ್ನೂ ಪೂಜಿಸಿದರೆ ನೂರು ಸಲ ನಾಯಿಜನ್ಮವನ್ನು ಪಡೆದು ಪುನಃ ಚಂಡಾಲನಾಗಿ ಹುಟ್ಟುವನು. ಡಾಕಿನೀ. ಪ್ರೇತಗಳು, ಕೂಷ್ಮಾಂಡಗಣಗಳಲ್ಲಿ ಸೇರಿದವರು, ದುರ್ಗೆ, ಗಣಪತಿ, ಭೈರವ, ಪಿಶಾಚಗಳು, ರಾಕ್ಷಸರು ಇವರನ್ನು ಬ್ರಾಹ್ಮಣರು ಪೂಜಿಸಲೇ ಕೂಡದು."

ಯಕ್ಷರಾಕ್ಷಸಭೂತಾನಾಮರ್ಚನಂ ವರ್ಜಯೇತ್ಸದಾ |
ಯೋ ಮೋಹಾತ್ಕುರುತೇ ವಿಪ್ರಃ ಸ ಪಾಷಂಡೀ ಭವೇದ್ಧ್ರುವಮ್ ||

ಯಕ್ಷಾಣಾಂ ಚ ಪಿಶಾಚಾನಾಂ ಮದ್ಯಮಾಂಸಭುಜಾಂ ತಥಾ |
ದಿವೌಕಸಾಂ ಚ ಭಜನಂ ಸುರಾಪಾನಸಮಂ ಮತಮ್ ||
ಬ್ರಹ್ಮರಾಕ್ಷಸವೇತಾಲಯಕ್ಷಭೂತಾರ್ಚನಂ ನೃಣಾಮ್ |
ಕುಂಭೀಪಾಕಮಹಾಘೋರನರಕಪ್ರಾಪ್ತಿಸಾಧನಮ್ ||
ಕೋಟಿಯಜ್ಞಕೃತಂ ಪುಣ್ಯಂ ಯಜ್ಞದಾನಜಪಾದಿಕಮ್ ||
ಸದ್ಯಃ ಸರ್ವಂ ಲಯಂ ಯಾತಿ ಯಕ್ಷಭೂತಾರ್ಚನಾನ್ನೃಣಾಮ್ ||
ಸ್ತ್ರಿಯೋ ವಾ ಪುರುಷಾ ವಾಽಪಿ ಯಕ್ಷಭೂತಾರ್ಚಕಾ ನರಾಃ |
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ||
ಕೃಮಿರ್ಭೂತ್ವಾ ತು ವಿಷ್ಠಾಯಾಂ ಪಿತೃಭಿಃ ಸಹ ಮಜ್ಜತಿ |
ಯಕ್ಷಾನಾಂ ಚ ಪಿಶಾಚಾನಾಂ ತಾಮಸಾನಾಂ ದಿವೌಕಸಾಮ್ ||
ನಿವೇದಿತಾನ್ನಂ ಯೋಽಶ್ನಾತಿ ಪೂಯಶೋಣಿತಭುಗ್ಭವೇತ್ |
ಯಕ್ಷಭೂತಗಣಾಂಶ್ಚಾನ್ಯಾನ್ ಕೂಷ್ಮಾಂಡಾನ್ ಬ್ರಹ್ಮರಾಕ್ಷಸಾನ್ ||
ಉದ್ದಿಶ್ಯ ಭುಂಕ್ತೇ ಯೋ ವಿಪ್ರಃ ಸದ್ಯಶ್ಚಾಂಡಾಲತಾಂ ವ್ರಜೇತ್ |
ಯಾ ನಾರೀ ಪೂಜಯೇದ್ಯಕ್ಷಾನ್ ಪಿಶಾಚಾನ್ ಘೋರರಾಕ್ಷಸಾನ್ ||
ಸಾ ಯಾತಿ ನರಕಂ ಘೋರಂ ಕಾಲಸೂತ್ರಮಧೋಮುಖಮ್ |
ಪತಿನಾ ಸಹ ಕಲ್ಪಾಂತಮುಷಿತ್ವಾ ತತ್ರ ದಾರುಣೇ ||
ಲಿಹನ್ಮೂತ್ರಪುರೀಷಂ ವೈ ಕೃಷ್ಣಸೂಚೀಮುಖಂ ತಥಾ |
ಕೃಮಿಭಿರ್ಭಕ್ಷ್ಯಮಾಣಾ ಸಾ ಯಾವದಾಭೂತಸಂಪ್ಲವಮ್ ||
ಪಶ್ಚಾತ್ತು ವಿಡ್ವರಾಹೇಷು ಜಾಯತೇ ಶತಸಂಖ್ಯಯಾ |
ತಸ್ಮಾದವೈದಿಕಾನಾಂ ಚ ದೇವಾನಾಮರ್ಚನಂ ತ್ಯಜೇತ್ || (ಪದ್ಮಪುರಾಣ ವಚನ)

"ಯಕ್ಷರು, ರಾಕ್ಷಸರು, ಭೂತಗಳು, ಪಿಶಾಚಗಳು, ಮದ್ಯಗಳನ್ನೂ ಮಾಂಸಗಳನ್ನೂ ತಿನ್ನುವ ದೇವತೆಗಳು, ಬ್ರಹ್ಮರಾಕ್ಷಸರು, ಭೇತಾಳಗಳು, ಮುಂತಾದವರನ್ನು ಯಾರು ಪೂಜಿಸುವರೋ ಅವರು ಪಾಷಂಡಿಗಳಾಗುವರು. ಅವರು ಹೆಂಡವನ್ನು ಕುಡಿದವರಿಗೆ ಸಮಾನರೆನಿಸುವರು. ಕುಂಭೀಪಾಕ ಮುಂತಾದ ಮಹಾಘೋರವಾದ ನರಕಗಳನ್ನು ಪಡೆಯುವರು. ಅವರು ಮಾಡಿರುವ ಒಂದು ಕೋಟಿ ಯಜ್ಞಗಳಿಂದ ಬಂದಿರುವ ಪುಣ್ಯವೂ, ಯಜ್ಞ, ದಾನ ಜಪಾದಿಗಳಿಂದ ಬಂದಿರುವ ಎಲ್ಲಾ ಪುಣ್ಯವೂ ಮರುಕ್ಷಣದಲ್ಲಿಯೇ ನಶಿಸುತ್ತದೆ."

"ಸ್ತ್ರೀಯಾಗಲೀ ಪುರುಷನಾಗಲೀ ಯಕ್ಷ ಮುಂತಾದವರನ್ನು ಪೂಜಿಸಿದರೆ ಕೋಟಿಲಕ್ಷಕಲ್ಪಗಳವರೆಗೆ ಅಮೇಧ್ಯದಲ್ಲಿ ಪಿತೃಗಳಿಂದ ಸಹಿತರಾಗಿ ಕ್ರಿಮಿಯಾಗಿ ಹುಟ್ಟುವರು."

"ಯಕ್ಷರೇ ಮೊದಲಾದವರಿಗೆ ನೈವೇದ್ಯ ಮಾಡಿರುವ ಅನ್ನವನ್ನು ತಿನ್ನುವವರು ಕೀವುಗಳನ್ನೂ ರಕ್ತಗಳನ್ನೂ ತಿನ್ನುವರು. ಯಕ್ಷಾದಿಗಳ ತೃಪ್ತ್ಯರ್ಥವಾಗಿ ಸಂತರ್ಪಣೆ ನಡೆಯಿಸಿದಾಗ ಭೋಜನವನ್ನು ಮಾಡುವ ಬ್ರಾಹ್ಮಣನು ಮರುಕ್ಷಣದಲ್ಲಿಯೇ ಚಂಡಾಲನಾಗುವನು."

ಯಕ್ಷಾದಿಗಳನ್ನು ಪೂಜಿಸುವ ಸ್ತ್ರೀಯು ಘೋರವಾದ ಕಾಲಸೂತ್ರ ಎಂಬ ನರಕದಲ್ಲಿ ಬೀಳುವಳು. ಅಲ್ಲಿ ಬ್ರಹ್ಮ

ಕಲ್ಪದವರೆಗೆ ಪತಿಯ ಜೊತೆಯಲ್ಲಿ ಮೂತ್ರವನ್ನೂ ಅಮೇಧ್ಯವನ್ನೂ ತಿನ್ನುತ್ತಾ ಇದ್ದು ಕೃಷ್ಣಸೂಚೀಮುಖ ಎಂಬ ನರಕಕ್ಕೆ ಹೋಗುವಳು. ಅಲ್ಲಿ ಒಂದು ಬ್ರಹ್ಮಕಲ್ಪದವರೆಗೆ ಇದ್ದು ಕೊನೆಗೆ ಭೂಮಿಯಲ್ಲಿ ನೂರುಕಲ್ಪಗಳವರೆಗೆ ಹಂದಿಯಾಗಿ ಹುಟ್ಟುವಳು. ಆದ್ದರಿಂದ ವೇದದಲ್ಲಿ ಹೇಳದಿರುವ ದೇವತೆಗಳ ಪೂಜೆಯನ್ನು ಮಾಡಲೇ ಕೂಡದು."

**ಅವೈದಿಕರಾದ ದೇವತೆಗಳನ್ನು ವಿಷ್ಣುವಿನ ಪರಿವಾರದಲ್ಲಿ ಸೇರಿದವರೆಂದು ಪೂಜಿಸಬಹುದು**

ಅಂಗತ್ವೇನೈವ ಸಂಪೂಜ್ಯಾ ವಿಷ್ಣೋರಾರಾಧನೇ ಸುರಾಃ |
ಇಂದ್ರಾದ್ಯಾ ಲೋಕಪಾಲಾಶ್ಚ ಪೂರ್ವೇ ಸಾಧ್ಯಾ ಮರುದ್ಗಣಾಃ ||
ರಕ್ಷಕಾಂತರಬುದ್ಧ್ಯಾ ಚ ಸ್ವಾತಂತ್ರ್ಯೇಣಾಪಿ ದೇವತಾಃ |
ನಾರ್ಚಯೇತ್ಸರ್ವದಾ ವಿಪ್ರಃ ಪರಮಾಪದ್ಗತೋಽಪಿ ವಾ |
ತಸ್ಮಾತ್ತು ಸಾತ್ತ್ವಿಕಾನ್ ದೇವಾನಂಗತ್ವೇನೈವ ಪೂಜಯೇತ್ || (ಸಂಗ್ರಹ ವಚನ)

"ವೇದಗಳಲ್ಲಿ ಸ್ವತಂತ್ರನೆಂದು ಹೊಗಳಲ್ಪಟ್ಟ ವಿಷ್ಣು ಒಬ್ಬನೇ ವೈದಿಕದೇವತೆಯೆನಿಸುವನು. ಇತರ ದೇವತೆಗಳೆಲ್ಲರೂ ಅವೈದಿಕರೆನಿಸುವರು. ಅವೈದಿಕರಲ್ಲಿ ಬ್ರಹ್ಮ ಮುಂತಾದ ಸಾತ್ತ್ವಿಕರನ್ನು ಪೂಜಿಸಬೇಕು. ಆದರೆ ಆ ದೇವತೆಗಳು ಸ್ವತಂತ್ರರೆಂದೂ ವಿಷ್ಣುವಿನ ಹಾಗೆ ರಕ್ಷಕರೆಂದೂ ತಿಳಿದು ಪೂಜಿಸಬಾರದು. ಸ್ವತಂತ್ರನೂ ರಕ್ಷಕನೂ ಆಗಿರುವ ಶ್ರೀವಿಷ್ಣುವಿನ ದಾಸರೆಂದು ತಿಳಿದು ಪೂಜಿಸಬೇಕು.

**ಬ್ರಹ್ಮಾದಿಗಳು ಸ್ವತಂತ್ರರೆಂದು ತಿಳಿದು ಪೂಜಿಸ ಕೂಡದು**

ತಸ್ಮಾದಾವರಣಂ ಹಿತ್ವಾ ಯೇ ಯಜಂತೀತರಾನ್ ಸುರಾನ್ |
ತೇ ಯಾಂತಿ ನರಕಂ ಘೋರಂ ಕಲ್ಪಕೋಟಿಶತಾನಿ ವೈ || (ಹಾರೀತರ ವಚನ)

"ಬ್ರಹ್ಮಾದಿದೇವತೆಗಳೆಲ್ಲರೂ ಶ್ರೀಹರಿಯ ಸುತ್ತಲೂ ಆವರಣ ಅಂದರೆ ಪರಿವಾರದೇವತೆಗಳೆಂದು ಅವರವರಿಗೆ ಯೋಗ್ಯವಾದ ಸ್ಥಾನದಲ್ಲಿ ಪೂಜಿಸಬೇಕು. ಹಾಗೆ ಮಾಡದೆ ಅವರಿಗೆ ಸ್ವತಂತ್ರವಾಗಿ ಪೂಜೆಯನ್ನು ಮಾಡಿದರೆ ನೂರುಕೋಟಿ ಬ್ರಹ್ಮಕಲ್ಪದವರೆಗೆ ಘೋರವಾದ ನರಕವನ್ನು ಹೊಂದುವರು."

ಶುದ್ಧಾನಾಮಪಿ ದೇವಾನಾಂ ಯಾ ಸ್ವತಂತ್ರಾರ್ಚನಕ್ರಿಯಾ |
ಸಾ ದುರ್ಗತಿಂ ನಯತ್ಯೇವ ವೈಷ್ಣವಾನ್ ವೀತಕಿಲ್ಬಿಷಾನ್ ||

"ಪರಮಸಾತ್ತ್ವಿಕರಾಗಿರುವ ಬ್ರಹ್ಮ ಮುಂತಾದ ದೇವತೆಗಳನ್ನು ಪೂಜಿಸುವುದರಲ್ಲಿ ತಪ್ಪಿಲ್ಲ. ಆದರೆ ಅವರು ಸ್ವತಂತ್ರರೆಂದು ತಿಳಿದು ಪೂಜಿಸಕೂಡದು. ಹಾಗೆ ಪೂಜಿಸುವವರು ವಿಷ್ಣುಭಕ್ತರಾಗಿದ್ದರೂ ಅವರಲ್ಲಿ ಯಾವ ವಿಧವಾದ ದೋಷವೂ ಇಲ್ಲದಿದ್ದರೂ ಅವರು ದುರ್ಗತಿಯನ್ನು ಪಡೆಯುವುದರಲ್ಲಿ ಸಂಶಯವಿಲ್ಲ."

ರುದ್ರಾರ್ಚನಂ ನ ಕರ್ತವ್ಯಂ ಸರ್ವಥಾ ಶುಭಮಿಚ್ಛತಾ |
ಮೋಹಾದ್ರುದ್ರಾರ್ಚನಂ ಕುರ್ಯಾತ್ಸ ಯಾತಿ ನರಕಾಯುತಮ್ || (ಹಾರೀತರ ವಚನ)

"ಶ್ರೇಯಸ್ಸನ್ನು ಬಯಸುವವರು ರುದ್ರದೇವನನ್ನು ಪೂಜಿಸಲೇ ಕೂಡದು. ಹಾಗೆ ಪೂಜಿಸುವವನು ಹತ್ತುಸಾವಿರ ವಿಧವಾದ ನರಕಗಳನ್ನು ಪಡೆಯುವನು."

ಯತ್ರ ರುದ್ರಾರ್ಚನಂ ಭಸ್ಮಧಾರಣಂ ಪ್ರೋಚ್ಯತೇ ದ್ವಿಜ |
ತದಬ್ರಹ್ಮಣ್ಯವಿಷಯಮನ್ಯೇಷಾಂ ನ ತು ಕರ್ಹಿಚಿತ್ ||

ರುದ್ರಾರ್ಚನಂ ತ್ರಿಪುಂಡ್ರಂ ಚ ಯತ್ಪುರಾಣೇಷು ಗೀಯತೇ |
ತತ್ತಾಮಸಪುರಾಣೇಷು ಮೋಹನಾರ್ಥಂ ಸುರದ್ವಿಷಾಮ್ || (ಹಾರೀತರ ವಚನ)

"ರುದ್ರದೇವನ ಪೂಜೆ, ಭಸ್ಮಧಾರಣ ಮುಂತಾದ ಶಾಸ್ತ್ರನಿಷಿದ್ಧವಾದ ಕರ್ಮಗಳನ್ನು ಮಾಡಬೇಕೆಂದು ತಾಮಸ ಪುರಾಣ ಮುಂತಾದ ಗ್ರಂಥಗಳಲ್ಲಿ ಹೇಳಿರುವುದುಂಟು. ಆ ಹೇಳಿಕೆಯು ಬ್ರಾಹ್ಮಣರಿಗೂ ಸಾತ್ವಿಕರಿಗೂ ಸಂಬಂಧಿಸಿಲ್ಲ. ತಾಮಸರಾದ ಜೀವರಿಗೆ ಸಂಬಂಧಿಸಿದ್ದೆಂದು ತಿಳಿಯಬೇಕು."

ರುದ್ರಾದಿತ್ಯಗಣೇಶಾನಾಂ ದುರ್ಗಾಭೈರವಸಂಜ್ಞಿನಾಮ್ |
ಪಂಚಾನಾಂ ಮಿಲಿತಾ ಪೂಜಾ ಮಹಾದುರ್ಗತಿಸಾಧನಮ್ || (ಹಾರೀತರ ವಚನ)

"ಕೆಲವರು ರುದ್ರದೇವರು, ಸೂರ್ಯ, ಗಣೇಶ, ದುರ್ಗಾ, ಭೈರವ ಎಂಬ ಐವರನ್ನು ಒಟ್ಟುಗೂಡಿಸಿ ಪೂಜಿಸುತ್ತಿರುವರು. ಇದು ಪಂಚಾಯತನ ಪೂಜೆಯೆನಿಸುತ್ತದೆ. ಈ ಪಂಚಾಯತನಪೂಜೆಯು ಮಹಾದುರ್ಗತಿಗೆ ಸಾಧನವೆನಿಸುತ್ತದೆ."

ಅರ್ಚಯಿತ್ವಾ ಜಗನ್ನಾಥಂ ವೈಷ್ಣವಃ ಪುರುಷೋತ್ತಮಮ್ |
ತದಾವರಣರೂಪೇಣ ಯಜೇದ್ದೇವಾನ್ಸಮಂತತಃ ||
ವಿಷ್ಣ್ವಾವರಣರೂಪೇಣ ಪೂಜಯೇದರ್ಚಯೇತ್ಸುರಾನ್ |
ಬ್ರಹ್ಮರುದ್ರೌ ತಥಾ ಸೂರ್ಯಮಿಂದ್ರಂ ಚಂದ್ರಾದಿಕಾನ್ಸುರಾನ್ ||
ವಿಷ್ಣೋರಾವರಣಂ ಹಿತ್ವಾ ಪೂಜಕೋ ನರಕಂ ವ್ರಜೇತ್ |
ಅನ್ಯಥಾ ನರಕಂ ಯಾತಿ ಯಾವದಾಭೂತಸಂಪ್ಲವಮ್ || (ಹಾರೀತರ ವಚನ)

"ವಿಷ್ಣುಭಕ್ತನಾದವನು ಜಗನ್ನಾಥನಾದ ಶ್ರೀಹರಿಯನ್ನು ಪೂಜಿಸಬೇಕು. ಅನಂತರದಲ್ಲಿ ಶ್ರೀಹರಿಯ ಸುತ್ತಲೂ ತಮತಮಗೆ ಕ್ಲ್ಪಪ್ತವಾದ ಸ್ಥಾನದಲ್ಲಿದ್ದು ಶ್ರೀಹರಿಯನ್ನು ಸೇವಿಸುತ್ತಿರುವ ಬ್ರಹ್ಮ, ರುದ್ರ, ಸೂರ್ಯ, ಇಂದ್ರ, ಚಂದ್ರ ಮುಂತಾದ ದೇವತೆಗಳನ್ನು ತಾರತಮ್ಯವನ್ನು ತಿಳಿದು ಪರಿವಾರವೆಂದು ತಿಳಿದು ಪೂಜಿಸಬೇಕು. ಹಾಗೆ ಪೂಜಿಸದವನು ಈ ಕಲ್ಪವು ಮುಗಿಯುವವರೆಗೂ ನರಕದಲ್ಲಿ ಬೀಳುವನು."

ತದಾವರಣರೂಪೇಣ ಪೂಜಯೇದರ್ಚಯೇತ್ಸುರಾನ್ |
ಮಾಂ ವಾ ಶಿವಂ ವಾ ಸೂರ್ಯಂ ವಾ ಹರೇರಾವರಣಂ ವಿನಾ ||
ಯಸ್ತು ಭೋಜಯೇದ್ವಿಪ್ರಃ ಸ ಪಾಷಂಡೀ ಭವೇದ್ ಧ್ರುವಮ್ |
ಭೋಕ್ತಾರಂ ಸರ್ವಯಜ್ಞಾನಾಂ ಸರ್ವಲೋಕೇಶ್ವರಂ ಹರಿಮ್ ||
ಯತ್ಪ್ರೀತಯೇ ಸುರಾನ್ಸರ್ವಾನ್ ಜುಹುಯಾತ್ಸತತಂ ಹವಿಃ | (ಬ್ರಹ್ಮನ ವಚನ)

"ಸಕಲಯಜ್ಞಗಳಲ್ಲಿಯೂ ಇಂದ್ರ ಮುಂತಾದ ಹೆಸರುಗಳಿಂದ ಕೊಡುವ ಎಲ್ಲಾ ಹವಿಸ್ಸುಗಳನ್ನೂ ಶ್ರೀಹರಿಯೇ ಸ್ವೀಕರಿಸುತ್ತಿರುವವನು. ಎಲ್ಲಾ ಲೋಕಗಳಿಗೂ ಅವನೇ ಈಶ್ವರನು. ಶ್ರೀಹರಿಯ ಪ್ರೀತಿಗಾಗಿಯೇ ಯಾವಾಗಲೂ ಯಜ್ಞಾದಿ ಕಾರ್ಯಗಳನ್ನು ಮಾಡುತ್ತಿರುವೆವು. ಆ ಶ್ರೀಹರಿಯ ಆವರಣದಲ್ಲಿ ಸೇರಿದವರೆಂದು ತಿಳಿದು ನನ್ನನ್ನಾಗಲೀ ಶಿವನನ್ನಾಗಲೀ ಸೂರ್ಯನನ್ನಾಗಲೀ ಪೂಜಿಸದವನು ಪಾಷಂಡಿಯೆನಿಸುವನು."

ಅರ್ಚಯಿತ್ವಾ ಜಗದ್ವಂದ್ಯಂ ದೇವಂ ನಾರಾಯಣಂ ಹರಿಮ್ |
ತದಾವರಣಸಂಸ್ಥಾನೇ ದೇವಸ್ಯ ಪರಿತೋಽರ್ಚಯೇತ್ ||

ಹರಿರ್ಭುಕ್ತ್ವಾ ವಿಶೇಷೇಣ ಬಲಿಂ ತೇಭ್ಯೋ ನಿವೇದಯೇತ್ |
ಹೋಮಂ ಚೈವ ತು ಕುರ್ವೀತ ತಚ್ಛೇಷೇಣೈವ ವೈಷ್ಣವಃ ||
ಹರೇರ್ನಿವೇದಿತಂ ಸಮ್ಯಗ್ದೇವೇಭ್ಯೋ ಜುಹುಯಾದ್ಧವಿಃ |
ಪಿತೃಭ್ಯಶ್ಚ ತಥಾ ದೇಯಂ ಸರ್ವಮಾನಂತ್ಯಮಾಪ್ನುಯಾತ್ ||

"ಜಗದ್ವಂದ್ಯನಾದ ನಾರಾಯಣನನ್ನು ಪೂಜಿಸಬೇಕು. ಅವನ ಸುತ್ತಲೂ ಆವರಣ ಸ್ಥಾನದಲ್ಲಿ ದೇವತೆಗಳನ್ನು ಪೂಜಿಸಬೇಕು. ಶ್ರೀಹರಿಯು ದೇವತೆಗಳಿಗೆ ಕೊಟ್ಟಿರುವ ಬಲಿಯನ್ನು ತಾನು ವಿಶೇಷವಾಗಿ ಸ್ವೀಕರಿಸಿ ಅವರವರಿಗೆ ಶೇಷವನ್ನು ಕೊಡುವನು. ಶ್ರೀಹರಿಯ ನೈವೇದ್ಯಶೇಷದಿಂದ ಹೋಮವನ್ನೂ ಪಿತೃಗಳಿಗೆ ಪಿಂಡದಾನಾದಿಗಳನ್ನೂ ಮಾಡಬೇಕು. ಇದರಿಂದ ಅನಂತಫಲವು ಬರುತ್ತದೆ."

### ಸಾಲಿಗ್ರಾಮದಲ್ಲಿ ಶ್ರೀಹರಿ ಪೂಜೆ

ಸಾಲಿಗ್ರಾಮಶಿಲಾಯಾಂ ತು ಗೃಹಾರ್ಚಾ ಸದ್ಭಿರಿಷ್ಯತೇ | (ಪದ್ಮಪುರಾಣ ವಚನ)

"ಸಾಲಿಗ್ರಾಮದಲ್ಲಿ ಶ್ರೀಹರಿಯನ್ನು ಪೂಜಿಸಬೇಕು. ಈ ಪೂಜೆಯು ಮನೆಯಲ್ಲಿ ವಿಶೇಷಫಲದಾಯಕವಾಗುತ್ತದೆ."

ಪ್ರತಿಮಾಯಾ ಅಭಾವೇಽಪಿ ಪೂಜಾಂ ವಿಷ್ಣೋಃ ಪ್ರಕಲ್ಪಯೇತ್ |
ಸಾಲಿಗ್ರಾಮಶಿಲಾಯಾಂ ತು ಧ್ಯಾತ್ವಾ ಪೂರ್ವೋಕ್ತವಿಗ್ರಹಮ್ || (ವಸಿಷ್ಠರ ವಚನ)

"ಶಾಸ್ತ್ರೋಕ್ತವಿಧಿಯಿಂದ ಪ್ರತಿಮೆಗಳನ್ನು ತಯಾರಿಸಿ ಆ ಪ್ರತಿಮೆಗಳಲ್ಲಿ ಶ್ರೀಹರಿಯನ್ನು ಪೂಜಿಸಬೇಕು. ಪ್ರತಿಮೆಯು ಇಲ್ಲದಿದ್ದರೂ ಸಾಲಿಗ್ರಾಮಗಳಲ್ಲಿ ಆಯಾ ಮೂರ್ತಿಗಳನ್ನು ಧ್ಯಾನಿಸುತ್ತಾ ಪೂಜಿಸಬೇಕು."

### ಸಾಲಿಗ್ರಾಮದ ಬಣ್ಣಗಳಿಂದ ಫಲ

ಶ್ಯಾಮಾ ನೀಲಾಸ್ತಥಾ ಪೀತಾ ಅತಿರಕ್ತಾಸ್ತಥೈವ ಚ |
ಪಾಂಡರಾಃ ಕೃಷ್ಣವರ್ಣಾಶ್ಚ ಕಪಿಲಾಶ್ಚಾಪಿ ಯಾಃ ಶಿಲಾಃ ||
ಕಪಿಲಾ ಪತ್ನಿಹಾ ನಿತ್ಯಂ ನೀಲಾ ಲಕ್ಷ್ಮೀಪ್ರದಾಯಿಕಾ |
ಪುಷ್ಟಿವೃದ್ಧಿಪ್ರದಾ ಶ್ಯಾಮಾ ಶುಕ್ಲಾ ಮೋಕ್ಷಪ್ರದಾಯಿನೀ ||
ಪೀತಾ ಧನಕರೀ ಜ್ಞೇಯಾ ರಕ್ತಾ ರಾಜ್ಯಕರೀ ಸ್ಮೃತಾ |
ಅತಿರಕ್ತಾ ರೋಗದಾ ಸ್ಯಾತ್ಕೃಷ್ಣಾ ಕೀರ್ತಿಪ್ರದಾಯಿಕಾ || (ನಾರದರ ವಚನ)

"(1) ಕಪ್ಪುಬಣ್ಣ ಮತ್ತು ಬಿಳಿ ಬಣ್ಣಗಳ ಮಿಶ್ರಣದಿಂದ ಏರ್ಪಡುವ ಬಣ್ಣವು ಶ್ಯಾಮಲವರ್ಣವೆನಿಸುತ್ತದೆ. (2) ನೇರಳೆ ಹಣ್ಣಿನ ಬಣ್ಣವು ನೀಲವೆನಿಸುತ್ತದೆ. (3) ಹಳದಿ ಬಣ್ಣ (4) ಸಾಧಾರಣ ಕೆಂಪು ಬಣ್ಣವು ರಕ್ತವರ್ಣವೆನಿಸುತ್ತದೆ. (5) ತುಂಬಾ ಕೆಂಪುಬಣ್ಣವು ಅತಿರಕ್ತವೆನಿಸುತ್ತದೆ. (6) ಅತಿಶುಭ್ರವಾದ ಬಿಳಿಬಣ್ಣವು ಪಾಂಡರವರ್ಣವೆನಿಸುತ್ತದೆ. (7) ಕಪಿಲ ಗೋವಿನ ಬಣ್ಣದಂತಿರುವ ಕೆಂಪುಮಿಶ್ರಿತವಾದ ಕಪ್ಪುಬಣ್ಣವು ಕಪಿಲಬಣ್ಣವೆನಿಸುತ್ತದೆ. (8) ಕಾಗೆಯ ಬಣ್ಣದಂತೆ ಅತ್ಯಂತ ಕಪ್ಪಾಗಿರುವ ಬಣ್ಣವು ಕೃಷ್ಣವರ್ಣವೆನಿಸುತ್ತದೆ.

ಮನೆಯಲ್ಲಿ ಪೂಜಿಸಲ್ಪಡುತ್ತಿರುವ ಸಾಲಿಗ್ರಾಮದ ಬಣ್ಣಗಳಿಂದ ಫಲವಿಶೇಷವನ್ನು ಈಗ ಹೇಳುತ್ತೇವೆ. ಕಪಿಲ ಬಣ್ಣದ ಸಾಲಿಗ್ರಾಮವು ಪತ್ನೀನಾಶಕರ, ನೀಲ ಬಣ್ಣದ ಸಾಲಿಗ್ರಾಮವು ಲಕ್ಷ್ಮೀಕರ, ಶ್ಯಾಮಲವರ್ಣದ ಸಾಲಿಗ್ರಾಮವು ಪುಷ್ಟಿಕರ ಮತ್ತು ವೃದ್ಧಿಕರ, ಪಾಂಡರವರ್ಣದ ಸಾಲಿಗ್ರಾಮವು ಮೋಕ್ಷಕರ, ಹಳದಿ ಬಣ್ಣದ ಸಾಲಿಗ್ರಾಮವು ಧನಕರ, ರಕ್ತಬಣ್ಣದ ಸಾಲಿಗ್ರಾಮವು ರಾಜ್ಯಕರ. ಅತಿರಕ್ತಬಣ್ಣದ ಸಾಲಿಗ್ರಾಮವು ರೋಗಕರ, ಕೃಷ್ಣವರ್ಣದ ಸಾಲಿಗ್ರಾಮವು ಕೀರ್ತಿಪ್ರದ ಎಂದು ತಿಳಿಯಬೇಕು."

## ತ್ಯಾಜ್ಯವಾದ ಸಾಲಿಗ್ರಾಮಗಳು

ಕರಾಳಂ ವಿಕರಾಳಂ ಚ ಅಧ ಊರ್ಧ್ವಾಸ್ಯಮುಷ್ಣಕಮ್ |
ಅಂತಃಸ್ಫುಟಿತಲಗ್ನಂ ಚ ಭಗ್ನಚಕ್ರಂ ತಥೈವ ಚ |
ಬಹುರೇಖಂ ಬಹುಚ್ಛಿದ್ರಂ ತಿರ್ಯಕ್ಚಕ್ರಂ ತಥಾ ತ್ಯಜೇತ್ |
ದಳಿತಂ ಸ್ಫುಟಿತಂ ದಗ್ಧಂ ತ್ರಿಕೋಣಂ ಚ ವಿವರ್ಜಯೇತ್ || (ನಾರದರ ವಚನ)

"(1) ಕರಾಳ ಅಂದರೆ ವಿಕಾರವಾದ ರೂಪವುಳ್ಳದ್ದು. (2) ವಿಕರಾಳ ಅಂದರೆ ಅಧಿಕವಾದ ವಿಕಾರವುಳ್ಳದ್ದು. (3) ಕೆಳಗೆ ಮುಖವುಳ್ಳದ್ದು. (೪) ತಲೆಯ ಮೇಲೆ ಮುಖವುಳ್ಳದ್ದು. (5) ಮುಖದಲ್ಲಿ ಒಡೆದು ಹೋದದ್ದು. (6) ಮುಖದ ಒಳಗೆ ಕೆಳಗಣ ಚಕ್ರವೂ ಮೇಲಿನ ಚಕ್ರವೂ ಅಂಟಿಕೊಂಡಂತೆ ಇರುವುದು. (7) ಒಡೆದು ಹೋದ ಚಕ್ರದಿಂದ ಯುಕ್ತವಾದದ್ದು. (8) ಅನೇಕ ರೇಖೆಗಳಿಂದ ಯುಕ್ತವಾದದ್ದು. (9) ಅನೇಕ ರಂಧ್ರಗಳುಳ್ಳದ್ದು. (10) ಮೇಲಿನಿಂದ ಕೆಳಗೆ ಚಕ್ರವುಳ್ಳದ್ದು. (11) ಎರಡಾಗಿ ಹೋಳಾದದ್ದು. (12) ಒಡೆದು ಹೋದದ್ದು. (13) ಬೆಂಕಿಯಲ್ಲಿ ಸುಟ್ಟು ಹೋದದ್ದು. (14) ತ್ರಿಕೋಣಾಕಾರವುಳ್ಳದ್ದು. (15) ತಣ್ಣಗಿಲ್ಲದೆ ಬಿಸಿಯಾಗಿರುವುದು. ಇಂತಹ ಸಾಲಿಗ್ರಾಮಗಳನ್ನು ಪೂಜಿಸಬಾರದು."

ವೃತ್ತಸೂತ್ರಾಷ್ಟಮೋ ಭಾಗ ಉತ್ತಮಾ ಮಧ್ಯಮಾ ಉಭೌ |
ಭಾಗತ್ರಯಂ ಕನಿಷ್ಠಂ ಸ್ಯಾತ್ಸಾಲಿಗ್ರಾಮಸ್ಯ ಲಕ್ಷಣಮ್ | (ನಾರದರ ವಚನ)

"ಸಾಲಿಗ್ರಾಮದ ಸುತ್ತಳತೆಯನ್ನು ಒಂದು ಹಗ್ಗದಿಂದ ಅಳೆಯಬೇಕು. ಆ ಹಗ್ಗದಲ್ಲಿ ಎಂಟನೆಯ ಒಂದು ಭಾಗದಷ್ಟು ಎತ್ತರವಾಗಿರುವ ಸಾಲಿಗ್ರಾಮವು ಉತ್ತಮ. ಎಂಟರಲ್ಲಿ ಎರಡರಷ್ಟು ಎತ್ತರವಾಗಿರುವ ಸಾಲಿಗ್ರಾಮವು ಮಧ್ಯಮ. ಎಂಟರಲ್ಲಿ ಮೂರರಷ್ಟು ಎತ್ತರವಾಗಿರುವ ಸಾಲಿಗ್ರಾಮವು ಅಧಮವೆನಿಸುತ್ತದೆ. ಅದಕ್ಕಿಂತ ಎತ್ತರವಾಗಿರತಕ್ಕ ಸಾಲಿಗ್ರಾಮವು ತ್ಯಾಜ್ಯವೆನಿಸುತ್ತದೆ."

ತಿರ್ಯಗ್ವಕ್ತ್ರಂ ವಿಘ್ನಕರಂ ವಿದಿಗ್ವಕ್ತ್ರಂ ತು ಶೋಕದಮ್ |
ಆಯುಷ್ಯಂ ಹರತೇ ಘೃಷ್ಟಂ ಕರಾಳಂ ಕುಲನಾಶನಮ್ || (ನಾರದರ ವಚನ)

"ಮೇಲಿನಿಂದ ಕೆಳಗಿನವರೆಗೆ ಮುಖವುಳ್ಳದ್ದು ವಿಘ್ನಕರ. ಆಗ್ನೇಯ, ನೈಋತ್ಯ, ವಾಯುವ್ಯ, ಈಶಾನ್ಯ ಈ ವಿದಿಕ್ಕುಗಳಲ್ಲಿ ಮುಖವುಳ್ಳದ್ದು ಶೋಕಪ್ರದ, ಆಸನವು ಉಜ್ಜಲ್ಪಟ್ಟಂತೆ ಅಸ್ಪಷ್ಟವಾಗಿರುವುದು ಆಯುಷ್ಯ ಹಾನಿಕರ. ವಿಕಾರವಾದ ರೂಪವುಳ್ಳದ್ದು ಕುಲನಾಶಕರ ಎಂದೆನಿಸುತ್ತದೆ."

ದರ್ದುರಂ ಲಗ್ನಮುಷ್ಣಂ ಚ ದಾರಿದ್ರ್ಯಕಲಿದುಃಖದಮ್ |
ಬಂಧನಂ ಬದ್ಧಚಕ್ರಂ ಚ ತ್ರಿಕೋಣಂ ಬಂಧುನಾಶನಮ್ || (ನಾರದರ ವಚನ)

(1) ಕಪ್ಪೆಯ ಆಕಾರವುಳ್ಳದ್ದು. (2) ಕೆಳಗಣ ಚಕ್ರವೂ ಮೇಲಿನ ಚಕ್ರವೂ ಅಂಟಿಕೊಂಡಂತೆ ಇರುವುದು. (3) ಬಿಸಿಯಾಗಿರುವುದು. ಇಂತಹ ಸಾಲಿಗ್ರಾಮಗಳು ಬಡತನ, ಕಲಹ, ದುಃಖಗಳನ್ನು ಕೊಡುತ್ತವೆ. ಕೆಳಗಣ ಚಕ್ರವೂ ಮೇಲಿನ ಚಕ್ರವೂ ಅಂಟಿಕೊಂಡಿದ್ದರೆ ಪೂಜಕನಿಗೆ ಬಂಧನವು ಏರ್ಪಡುತ್ತದೆ. ತ್ರಿಕೋಣಾಕಾರವಾದ ಸಾಲಿಗ್ರಾಮವು ಬಂಧುನಾಶಕವಾಗುತ್ತದೆ.

ಗೌರಾ ಶತ್ರುವಧಾ ಜ್ಞೇಯಾ ಬಿಂದುಃ ಪುತ್ರವಿನಾಶಿನೀ |
ವಿಮಲಾ ತ್ವರ್ಥಹಾನಿಃ ಸ್ಯಾದಮಲಂ ಕ್ಷಯಕಾರಕಮ್ || (ನಾರದರ ವಚನ)

"ಹಳದಿ ಬಣ್ಣವುಳ್ಳ ಸಾಲಿಗ್ರಾಮವು ಶತ್ರುವಧಕರ, ಬಿಂದುಗಳಿಂದ ಯುಕ್ತವಾದ ಸಾಲಿಗ್ರಾಮವು ಪುತ್ರನಾಶಕರ, ಕೊಳೆಯುಳ್ಳ ಸಾಲಿಗ್ರಾಮವು ದ್ರವ್ಯನಾಶಕರ, ನಿರ್ಮಲವಾದ ಸಾಲಿಗ್ರಾಮವು ಮನೆಯನ್ನು ಕೊಡುತ್ತದೆ."

ಕಪಿಲಂ ನಾರಸಿಂಹಂ ಚ ವಾಮನಂ ತ್ವತಸೀಪ್ರಭಮ್ |
ವಾಸದೇವಂ ಸಿತಂ ಕ್ಷೇತ್ರಂ ರಕ್ತಂ ಸಂಕರ್ಷಣಂ ಸ್ಮೃತಮ್ ||
ದಾಮೋದರಂ ತು ನೀಲಾಭಮನಿರುದ್ಧಂ ತಥೈವ ಚ |
ಶ್ಯಾಮಂ ನಾರಾಯಣಂ ಕ್ಷೇತ್ರಂ ಕೃಷ್ಣವರ್ಣಂ ತು ವೈಷ್ಣವಮ್ ||
ಬಹುವರ್ಣಮನಂತಂ ಸ್ಯಾಚ್ಛ್ರೀಧರಂ ಪೀತಮುಚ್ಯತೇ |
ಕ್ಷೇತ್ರಂ ಕಥಿತಮಿತ್ಯೇತದ್ವಿಜ್ಞೇಯಂ ಮುನಿಪುಂಗವ || (ನಾರದರ ವಚನ)

"ಸಾಲಿಗ್ರಾಮಗಳ ಬಣ್ಣಗಳಿಂದ ಸ್ಥೂಲವಾಗಿ ಸಾಲಿಗ್ರಾಮಗಳ ಪರಿಚಯವು ಏರ್ಪಡುತ್ತದೆ. ಈ ರೀತಿಯಿಂದ ತಿಳಿಯುವುದು ಕ್ಷೇತ್ರಪರಿಚಯವೆನಿಸುತ್ತದೆ. ಕಪಿಲಬಣ್ಣದಿಂದ ಯುಕ್ತವಾಗಿರುವ ಸಾಲಿಗ್ರಾಮವು ನರಸಿಂಹ ಸಾಲಿಗ್ರಾಮವೆಂದೂ, ಅಗಸೆ ಎಲೆಯ ಬಣ್ಣದಿಂದ ಯುಕ್ತವಾಗಿರುವ ಸಾಲಿಗ್ರಾಮವು ವಾಮನ ಸಾಲಿಗ್ರಾಮವೆಂದೂ, ಬಿಳಿ ಬಣ್ಣವುಳ್ಳ ಸಾಲಿಗ್ರಾಮವು ವಾಸುದೇವ ಸಾಲಿಗ್ರಾಮವೆಂದೂ, ಕೆಂಪುಬಣ್ಣವುಳ್ಳದ್ದು ಸಂಕರ್ಷಣ ಸಾಲಿಗ್ರಾಮವೆಂದೂ, ನೀಲಬಣ್ಣವುಳ್ಳದ್ದು ದಾಮೋದರ ಸಾಲಿಗ್ರಾಮವೆಂದೂ, ಶ್ಯಾಮಬಣ್ಣವುಳ್ಳದ್ದು ಅನಿರುದ್ಧ ಸಾಲಿಗ್ರಾಮವೆಂದೂ, ಕೃಷ್ಣಬಣ್ಣವುಳ್ಳದ್ದು ವಿಷ್ಣು ಸಾಲಿಗ್ರಾಮವೆಂದೂ ಅನೇಕ ಬಣ್ಣಗಳುಳ್ಳದ್ದು ಅನಂತ ಸಾಲಿಗ್ರಾಮವೆಂದೂ, ಹಳದಿ ಬಣ್ಣವುಳ್ಳದ್ದು ಶ್ರೀಧರ ಸಾಲಿಗ್ರಾಮವೆಂದೂ ತಿಳಿಯಬೇಕು."

ಬಿಂದುತ್ರಯಸಮಾಯುಕ್ತಶ್ಚಕ್ರದ್ವಯಯುತೋಽಪಿ ವಾ |
ದೀರ್ಘದಕ್ಷಿಣವಾಮಾಸ್ಯಭಾಗೇ ವಲಯಪಂಚಕಮ್ |
ಸಾ ಮಂದರಧರಾ ಕೂರ್ಮಮೂರ್ತಿಃ ಸ್ಯಾತ್ಸರ್ವಕಾಮದಾ || (ನಾರದರ ವಚನ)

"ಸಾಲಿಗ್ರಾಮದಲ್ಲಿ ಮೂರು ಬಿಂದುಗಳಿರಬೇಕು. ಎರಡು ಚಕ್ರಗಳಿರಬೇಕು. ಮುಖವು ಎಡದಿಂದ ಬಲಭಾಗದವರೆಗೆ ಋಜುವಾಗಿರಬೇಕು. ಮುಖದ ಎಡಭಾಗದಲ್ಲಿ ಐದು ರೇಖೆಗಳಿರಬೇಕು. ಈ ಸಾಲಿಗ್ರಾಮವು ಮಂದರಪರ್ವತವನ್ನು ಎತ್ತಿಕೊಂಡಿರುವ ಕೂರ್ಮಮೂರ್ತಿಯ ಸಾಲಿಗ್ರಾಮವೆನಿಸುತ್ತದೆ. ಈ ಸಾಲಿಗ್ರಾಮವು ಅಪೇಕ್ಷಿಸಿದ ಎಲ್ಲಾ ಇಷ್ಟಾರ್ಥಗಳನ್ನೂ ಕೊಡುತ್ತದೆ."

ವಾರಾಹಃ ಶಕ್ತಿಲಿಂಗಸ್ತು ಚಕ್ರೇ ಚ ವಿಷಮೇ ಸ್ಮೃತೇ |
ಇಂದ್ರನೀಲನಿಭಃ ಸ್ಥೂಲಸ್ತ್ರಿರೇಖೋ ನಾಭಿತಃ ಶುಭಃ || (ನಾರದರ ವಚನ)

"ಮೂರು ಚಕ್ರಗಳಿರಬೇಕು. ಇಂದ್ರನೀಲಮಣಿಯಂತೆ ನೀಲಬಣ್ಣವುಳ್ಳದ್ದಾಗಿರಬೇಕು. ಸ್ಥೂಲವಾಗಿರಬೇಕು. ನಾಭಿಪ್ರದೇಶದಿಂದ ಅಂದರೆ ಚಕ್ರದ ಒಳಗಿನ ಮೂರು ರೇಖೆಯುಳ್ಳದ್ದಾಗಿರಬೇಕು. ಈ ಸಾಲಿಗ್ರಾಮವು ಶಕ್ತಿವರಾಹ ಸಾಲಿಗ್ರಾಮವೆನಿಸುತ್ತದೆ. ಇದು ಶುಭಪ್ರದವಾಗುತ್ತದೆ."

ಕಪಿಲೋ ನಾರಸಿಂಹಶ್ಚ ಪೃಥುವಕ್ತ್ರಃ ಸುಶೋಭಿತಃ |
ಬ್ರಹ್ಮಚರ್ಯೇಣ ಪೂಜ್ಯೋಽಸೌ ನಾನ್ಯಥಾ ಪೂಜಿತೋ ಭವೇತ್ | (ನಾರದರ ವಚನ)

"ಕಪಿಲವರ್ಣ, ದೊಡ್ಡಬಾಯಿ, ದೊಡ್ಡಚಕ್ರ ಇವುಗಳಿಂದ ಯುಕ್ತವಾದದ್ದು ನರಸಿಂಹ ಸಾಲಿಗ್ರಾಮವೆನಿಸುತ್ತದೆ. ಈ ಸಾಲಿಗ್ರಾಮವನ್ನು ಬ್ರಹ್ಮಚರ್ಯದಿಂದ ಪೂಜಿಸಿದರೆ ಸಕಲ ಇಷ್ಟಾರ್ಥಗಳೂ ಸಿಗುತ್ತವೆ. ಬ್ರಹ್ಮಚರ್ಯದಿಂದ ಪೂಜಿಸದಿದ್ದರೆ ಅನಿಷ್ಟಗಳು ಬರುತ್ತವೆ."

ವಾಮಪಾರ್ಶ್ವೇ ಚ ಚಕ್ರೇಣ ಕೃಷ್ಣವರ್ಣಃ ಸಬಿಂದುಕಃ |
ಲಕ್ಷ್ಮೀನೃಸಿಂಹೋ ವಿಜ್ಞೇಯೋ ಭುಕ್ತಿಮುಕ್ತಿಫಲಪ್ರದಃ | (ನಾರದರ ವಚನ)

ಕಪ್ಪು ಬಣ್ಣವಿರಬೇಕು. ಮಧ್ಯಮಧ್ಯದಲ್ಲಿ ಬಿಂದುಗಳಿರಬೇಕು. ಮುಖದ ಮಧ್ಯದಲ್ಲಿ ನಾಮವಿರಬೇಕು. ಆ ನಾಮದ ಎರಡು ಭಾಗಗಳಲ್ಲಿಯೂ ಕೆಳಗಣ ಮತ್ತು ಮೇಲಿನ ಚಕ್ರಗಳು ಕಾಣಿಸುತ್ತಿರಬೇಕು. ಈ ಸಾಲಿಗ್ರಾಮವು ಲಕ್ಷ್ಮೀನೃಸಿಂಹ ಸಾಲಿಗ್ರಾಮವೆನಿಸುತ್ತದೆ. ಈ ಸಾಲಿಗ್ರಾಮವು ಈ ಲೋಕದಲ್ಲಿ ಎಲ್ಲಾ ಸುಖಗಳನ್ನೂ ಪರಲೋಕದಲ್ಲಿ ಮುಕ್ತಿಯನ್ನೂ ಕೊಡುತ್ತದೆ."

ವರ್ತುಲಶ್ಚಾತಿಹ್ರಸ್ವಶ್ಚ ವಾಮನಃ ಪರಿಕೀರ್ತಿತಃ |
ಅತಸೀಪುಷ್ಪಸಂಕಾಶೋ ಬಿಂದುನಾ ಪರಿಶೋಭಿತಃ || (ನಾರದರ ವಚನ)

"ವರ್ತುಲಾಕಾರವಾಗಿಯೂ ತುಂಬಾ ಚಿಕ್ಕದಾಗಿಯೂ ಇರುವ ಸಾಲಿಗ್ರಾಮವು ವಾಮನ ಸಾಲಿಗ್ರಾಮವೆನಿಸುತ್ತದೆ. ಈ ಸಾಲಿಗ್ರಾಮವು ಅಗಸೆಪುಷ್ಪದ ಬಣ್ಣದಿಂದಲೂ ಬಿಂದುವಿನಿಂದಲೂ ಯುಕ್ತವಾಗಿರುತ್ತದೆ.

ದೂರ್ವಾಶ್ಯೇತಾಃ ಪರಶುಧನುರ್ಲಾಂಗಲಾಂಕಿತ ಶೋಭನಾಃ |
ರಾಮರಾಮಸುರಾಮೇತಿ ಸರ್ವಮೃತ್ಯುಹರಾಃ ಶುಭಾಃ || (ನಾರದರ ವಚನ)

"ಪರಶುರಾಮ, ರಾಮ, ಬಲರಾಮ ಎಂಬ ಮೂರು ಸಾಲಿಗ್ರಾಮಗಳನ್ನು ಈ ಶ್ಲೋಕದಲ್ಲಿ ತಿಳಿಸುತ್ತಿದ್ದಾರೆ. ಈ ಮೂರು ಸಾಲಿಗ್ರಾಮಗಳೂ ಗರಿಕೆಹುಲ್ಲಿನಂತೆ ಶುಭ್ರವಾಗಿರುತ್ತವೆ. ಪರಶುರಾಮ ಸಾಲಿಗ್ರಾಮದಲ್ಲಿ ಕೊಡಲಿಯ ರೇಖೆಯೂ, ರಾಮ ಸಾಲಿಗ್ರಾಮದಲ್ಲಿ ಧನುಸ್ಸಿನ ರೇಖೆಯೂ, ಬಲರಾಮ ಸಾಲಿಗ್ರಾಮದಲ್ಲಿ ನೇಗಿಲಿನ ರೇಖೆಯೂ ಇರುತ್ತವೆ. ಈ ಮೂರು ಸಾಲಿಗ್ರಾಮಗಳೂ ಎಲ್ಲಾ ಮೃತ್ಯುಗಳನ್ನೂ ಪರಿಹರಿಸುತ್ತವೆ."

ಪರಮೇಷ್ಠೀ ಚ ಶುಕ್ಲಾಭಶ್ಚಕ್ರಪದ್ಮಸಮನ್ವಿತಃ |
ಬಿಂಬಾಕೃತಿಸ್ತಥಾ ಪೃಷ್ಠೇ ಸುಷಿರಂ ಚಾತಿಪುಷ್ಕಲಮ್ || (ನಾರದರ ವಚನ)

"ಬಿಳಿಯ ಬಣ್ಣ, ಚಕ್ರ, ಪದ್ಮರೇಖೆ, ಬೆನ್ನಿನಲ್ಲಿ ತೊಂಡೆಹಣ್ಣಿನಂತಿರುವ ರೇಖೆ ಮತ್ತು ದೊಡ್ಡ ರಂಧ್ರ ಇವುಗಳಿಂದ ಯುಕ್ತವಾದುದು ಪರಮೇಷ್ಠಿ ಸಾಲಿಗ್ರಾಮವೆನಿಸುತ್ತದೆ."

ಹಯಗ್ರೀವೋ ಹಯಾಕಾರೋ ರೇಖಾಪಂಚಕಭೂಷಿತಃ |
ಬಹುಬಿಂದುಸಮಾಕೀರ್ಣಃ ಪೃಷ್ಠೇ ನೀಲಂ ತು ರೂಪಕಮ್ || (ನಾರದರ ವಚನ)

"ಕುದುರೆಯ ಆಕಾರ, ಐದು ರೇಖೆಗಳು, ಅನೇಕ ಬಿಂದುಗಳು, ಬೆನ್ನಿನಲ್ಲಿ ನೀಲ ಗುರುತು. ಇವುಗಳಿಂದ ಯುಕ್ತವಾದುದು ಹಯಗ್ರೀವ ಸಾಲಿಗ್ರಾಮವೆನಿಸುತ್ತದೆ."

ದ್ವೇ ಚಕ್ರೇ ಚೈಕಲಗ್ನೇ ತು ಭಾಗ್ಯೈಕೇ ಪುಷ್ಕಲಂ ಭವೇತ್ |
ಸಂಕರ್ಷಣಃ ಸ ವಿಜ್ಞೇಯೋ ರಕ್ತಾಭಶ್ಚಾತಿಶೋಭನಃ || (ನಾರದರ ವಚನ)

"ಎರಡು ಮುಖಗಳು. ಒಂದು ಮುಖದಲ್ಲಿ ಅಂಟಿಕೊಂಡಂತೆ ಎರಡು ಚಕ್ರಗಳು, ಇನ್ನೊಂದು ಮುಖದಲ್ಲಿ ಸ್ಪಷ್ಟವಾದ ಎರಡು ಚಕ್ರಗಳು, ರಕ್ತವರ್ಣ ಇವುಗಳಿಂದ ಯುಕ್ತವಾದ ಸಾಲಿಗ್ರಾಮವು ಸಂಕರ್ಷಣ ಸಾಲಿಗ್ರಾಮವೆನಿಸುತ್ತದೆ. ಇದು ಅತ್ಯಂತ ಶುಭಕರವಾದುದು."

ದ್ವಾರದೇಶೇ ಸಮೇ ಚಕ್ರೇ ದೃಶ್ಯೇತೇ ನಾಂತರಂ ಯದಿ |
ವಾಸುದೇವಃ ಸ ವಿಜ್ಞೇಯಃ ಶುಕ್ಲಶ್ಚೈವಾತಿಶೋಭನಃ ||

"ಒಂದು ಮುಖ, ಮುಖದ ದ್ವಾರದಲ್ಲಿ ಸಮವಾದ ಎರಡು ಚಕ್ರಗಳು, ಮುಖವು ಅಳವಾಗಿರುವುದಿಲ್ಲ. ಬಿಳಿಯ ಬಣ್ಣ. ಇವುಗಳಿಂದ ಯುಕ್ತವಾದ ಸಾಲಿಗ್ರಾಮವು ವಾಸುದೇವ ಸಾಲಿಗ್ರಾಮವೆನಿಸುತ್ತದೆ. ಇದು ಅತ್ಯಂತ ಶುಭಕರವಾದುದು."

ಪ್ರದ್ಯುಮ್ನಃ ಸೂಕ್ಷ್ಮವಕ್ತ್ರಸ್ತು ನೀಲದೀಪ್ತಿಸ್ತಥೈವ ಚ |
ಸುಷಿರಂ ಛಿದ್ರಬಹುಲಂ ದೀರ್ಘಾಕಾರಂ ತು ತದ್ಭವೇತ್ ||

"ಎಡದಿಂದ ಬಲಕ್ಕೆ ಉದ್ದವಾಗಿರುವುದು. ಮುಖದಲ್ಲಿ ಸೂರ್ಯಾಕಾರದ ರೇಖೆಯಿಂದ ಯುಕ್ತವಾದುದು, ನೀಲವರ್ಣದಿಂದ ಯುಕ್ತವಾದುದು. ಅನೇಕಛಿದ್ರಗಳಿಂದ ಯುಕ್ತವಾದ ರಂಧ್ರವುಳ್ಳದ್ದು. ಇಂತಹ ಸಾಲಿಗ್ರಾಮವು ಪ್ರದ್ಯುಮ್ನ ಸಾಲಿಗ್ರಾಮವೆನಿಸುತ್ತದೆ."

ಅನಿರುದ್ಧಸ್ತು ಪೀತಾಭೋ ವರ್ತುಲಶ್ಚಾತಿಶೋಭನಃ |
ರೇಖಾತ್ರಯಾಂಕಿತೋ ದ್ವಾರೇ ದೃಷ್ಟಪದ್ಮೇನ ಚಿಹ್ನವತ್ ||

"ದ್ವಾರದಲ್ಲಿ ಮೇಲಿನಿಂದ ಕೆಳಗಿನವರೆಗೆ ಮೂರುರೇಖೆಗಳು. ವರ್ತುಲವಾದ ಆಕಾರ. ಹಳದಿ ಬಣ್ಣ, ಪದ್ಮಚಿಹ್ನೆ ಇವುಗಳಿಂದ ಯುಕ್ತವಾದ ಸಾಲಿಗ್ರಾಮವು ಅನಿರುದ್ಧ ಸಾಲಿಗ್ರಾಮವೆನಿಸುತ್ತದೆ. ಇದು ಅತ್ಯಂತಶುಭಕರವಾದುದು."

ಧ್ವಜವಜ್ರಾಂಕುಶಃ ಪೀತಶ್ಚತುಶ್ಚಕ್ರಸಮನ್ವಿತಃ |
ಲಕ್ಷ್ಮೀನಾರಾಯಣೋ ದೇವಃ ಸರ್ವಕಾಮಫಲಪ್ರದಃ ||

"ಧ್ವಜ, ವಜ್ರ, ಅಂಕುಶ ಎಂಬ ಮೂರು ರೇಖೆಗಳು, ಹಳದಿ ಬಣ್ಣ, ನಾಲ್ಕು ಚಕ್ರಗಳು ಇವುಗಳಿಂದ ಯುಕ್ತವಾಗಿರುವ ಸಾಲಿಗ್ರಾಮವು ಲಕ್ಷ್ಮೀನಾರಾಯಣ ಸಾಲಿಗ್ರಾಮವೆನಿಸುತ್ತದೆ. ಇದು ಅಪೇಕ್ಷಿಸಿದ ಸರ್ವಫಲಗಳನ್ನೂ ಕೊಡುತ್ತದೆ."

ಶ್ಯಾಮೋ ನಾರಾಯಣೋ ದೇವೋ ನಾಭಿಚಕ್ರೇ ತಥೋನ್ನತೇ |
ದೀರ್ಘರೇಖಾಸಮೋಪೇತೋ ದಕ್ಷಿಣೇ ಸುಷಿರಾನ್ವಿತಃ ||

"ನೀಲವರ್ಣ, ಸಾಲಿಗ್ರಾಮದ ಮೇಲಿನ ಕೆಳಭಾಗದ ಮಧ್ಯದಲ್ಲಿ ದಕ್ಷಿಣಭಾಗಕ್ಕೆ ಸೇರಿದಂತಿರುವ ಚಕ್ರ, ಆ ಚಕ್ರವು ದ್ವಾರದ ಹೊರಭಾಗದಲ್ಲಿ ಕಾಣಿಸುವಂತೆ ಸ್ಪಷ್ಟವಾಗಿರುವುದು, ಉದ್ದವಾದ ರೇಖೆ ಇವುಗಳಿಂದ ಯುಕ್ತವಾದ ಸಾಲಿಗ್ರಾಮವು ನಾರಾಯಣ ಸಾಲಿಗ್ರಾಮವೆನಿಸುತ್ತದೆ. ಇದು ಉತ್ತಮ."

ಕೃಷ್ಣವರ್ಣಸ್ತಥಾ ವಿಷ್ಣುರ್ಮೂಲೇ ಚಕ್ರೇ ಸುಶೋಭನೇ |
ದ್ವಾರೋಪರಿ ತಥಾ ರೇಖಾ ದೃಶ್ಯತೇ ಮಧ್ಯದೇಶತಃ ||

"ಕಪ್ಪುಬಣ್ಣ, ಬುಡದಲ್ಲಿ ಸುಂದರವಾದ ಎರಡು ಚಕ್ರಗಳು, ದ್ವಾರದಲ್ಲಿ ಮಧ್ಯದಲ್ಲಿ ಮೇಲಿನಿಂದ ಕೆಳಗಿನವರೆಗೆ ರೇಖೆ, ಇವುಗಳಿಂದ ಯುಕ್ತವಾದುದು ವಿಷ್ಣು ಸಾಲಿಗ್ರಾಮವೆನಿಸುತ್ತದೆ. ಇದು ಉತ್ತಮ.

ಶ್ರೀಧರಸ್ತು ತಥಾ ದೇವಶ್ಚಿಹ್ನಿತೋ ವನಮಾಲಯಾ |
ಕದಂಬಕುಸುಮಾಕಾರೋ ರೇಖಾಪಂಚಕಸಂಯುತಃ ||

"ವನಮಾಲೆ, ಕದಂಬಪುಷ್ಪದಂತೆ ಆಕಾರ, ಐದು ರೇಖೆಗಳು ಇವುಗಳಿಂದ ಯುಕ್ತವಾದ ಸಾಲಿಗ್ರಾಮವು ಶ್ರೀಧರ ಸಾಲಿಗ್ರಾಮವೆನಿಸುತ್ತದೆ. ಇದು ಉತ್ತಮ."

ಸುದರ್ಶನಸ್ತಥಾ ದೇವಃ ಶ್ಯಾಮವರ್ಣೋ ಮಹಾದ್ಯುತಿಃ |
ವಾಮಪಾರ್ಶ್ವೇ ಗದಾಚಕ್ರೇ ರೇಖಾ ಚೈವ ಚ ದಕ್ಷಿಣೇ ||

"ಶ್ಯಾಮವರ್ಣ, ಅತ್ಯಂತ ತೇಜಸ್ಸು, ಎಡಪಾರ್ಶ್ವದಲ್ಲಿ ಗದೆ ಮತ್ತು ಚಕ್ರಗಳು, ಬಲಭಾಗದಲ್ಲಿ ರೇಖೆ ಇವುಗಳಿಂದ ಯುಕ್ತವಾಗಿರುವ ಸಾಲಿಗ್ರಾಮವು ಸುದರ್ಶನ ಸಾಲಿಗ್ರಾಮವೆನಿಸುತ್ತದೆ. ಇದು ಉತ್ತಮ."

ವೈಕುಂಠಮವಿಭಿನ್ನಾಂಗಂ ಚಕ್ರಮೇಕಂ ತಥಾ ಧ್ವಜಮ್ |
ದ್ವಾರೋಪರಿ ತಥಾ ರೇಖಾ ಗುಂಜಾಕಾರಾ ಸುಶೋಭನಾ ||

"ಭಿನ್ನವಾಗದಿರುವ ಒಂದು ಚಕ್ರ, ಧ್ವಜರೇಖೆ, ಗುಲಗುಂಜಿಯ ಆಕಾರ, ದ್ವಾರದಲ್ಲಿ ಒಂದು ರೇಖೆ ಇವುಗಳಿಂದ ಯುಕ್ತವಾದುದು ವೈಕುಂಠ ಸಾಲಿಗ್ರಾಮವೆನಿಸುತ್ತದೆ."

ಗೋವಿಂದಂ ಪುಂಡರೀಕಾಕ್ಷಂ ಕೃಷ್ಣವರ್ಣಂ ಮಹಾದ್ಯುತಿಮ್ |
ದಕ್ಷಿಣೇ ಪೃಷ್ಠಚಕ್ರಾಢ್ಯಂ ವಾಮೇ ಪರ್ವತಲಾಂಛನಮ್ ||

"ಕಪ್ಪುಬಣ್ಣ, ಅಧಿಕ ತೇಜಸ್ಸು, ಬಲಭಾಗದಲ್ಲಿ ಬೆನ್ನಿನಲ್ಲಿ ಚಕ್ರ, ಎಡಭಾಗದಲ್ಲಿ ಪರ್ವತದ ಗುರುತು ಇವುಗಳಿಂದ ಯುಕ್ತವಾದ ಸಾಲಿಗ್ರಾಮವು ಪುಂಡರೀಕಾಕ್ಷ ಸಾಲಿಗ್ರಾಮವೆನಿಸುತ್ತದೆ. ಇದು ಶುಭಕರ."

ದಾಮೋದರಸ್ತಥಾ ಸ್ಥೂಲೋ ಮಧ್ಯೇ ಚಕ್ರಂ ಪ್ರತಿಷ್ಠಿತಮ್ |
ದೂರ್ವಾಭಂ ದ್ವಾರಸಂಯುಕ್ತಂ ಪೀತರೇಖಂ ತಥೈವ ಚ ||

"ಗರಿಕೆ ಹುಲ್ಲಿನ ಬಣ್ಣ, ಮಧ್ಯದಲ್ಲಿ ಚಕ್ರ, ಹಳದಿ ಬಣ್ಣದ ರೇಖೆಗಳು, ದೊಡ್ಡ ಆಕಾರ, ಇವುಗಳಿಂದ ಯುಕ್ತವಾದ ಸಾಲಿಗ್ರಾಮವು ದಾಮೋದರ ಸಾಲಿಗ್ರಾಮವೆನಿಸುತ್ತದೆ. ಇದು ಉತ್ತಮ."

ತ್ರಿವಿಕ್ರಮಂ ತಥಾ ಸೂಕ್ಷ್ಮಂ ಶ್ಯಾಮವರ್ಣಂ ಮಹಾದ್ಯುತಿಮ್ |
ವಾಮಪಾರ್ಶ್ವೇ ಸ್ಥಿತೇ ಚಕ್ರೇ ರೇಖಾ ಚೈವ ತು ದಕ್ಷಿಣೇ ||

"ಚಿಕ್ಕ ಆಕಾರ, ಶ್ಯಾಮವರ್ಣ, ಅಧಿಕತೇಜಸ್ಸು, ಎಡಭಾಗದಲ್ಲಿ ಚಕ್ರ, ಬಲಭಾಗದಲ್ಲಿ ರೇಖೆ ಇವುಗಳಿಂದ ಯುಕ್ತವಾದ ಸಾಲಿಗ್ರಾಮವು ತ್ರಿವಿಕ್ರಮ ಸಾಲಿಗ್ರಾಮವೆನಿಸುತ್ತದೆ. ಇದು ಉತ್ತಮ."

ಅರ್ಧಚಂದ್ರಾಕೃತಿರ್ದೇವೋ ಹೃಷೀಕೇಶ ಉದಾಹೃತಃ |
ತಮರ್ಚ್ಯ ಲಭತೇ ಸ್ವರ್ಗಂ ವಿಷಯಾಂಶ್ಚ ಮನೋಹರಾನ್ ||

"ಅರ್ಧಚಂದ್ರಾಕಾರವುಳ್ಳ ಸಾಲಿಗ್ರಾಮವು ಹೃಷೀಕೇಶ ಸಾಲಿಗ್ರಾಮವೆನಿಸುತ್ತದೆ. ಆ ಸಾಲಿಗ್ರಾಮವನ್ನು ಪೂಜಿಸಿದವನು ಸ್ವರ್ಗವನ್ನೂ, ಮನೋಹರವಾದ ವಿಷಯಗಳನ್ನೂ ಪಡೆಯುವನು."

ನಾನಾವರ್ಣೋ ಹ್ಯನಂತಸ್ತು ನಾಗಭೋಗೇನ ವೇಷ್ಟಿತಃ |
ಅನೇಕಮೂರ್ತಿಕೋ ಭಿನ್ನಃ ಸರ್ವಕಾಮಫಲಪ್ರದಃ ||

"ಅನೇಕವರ್ಣಗಳಿಂದ ಯುಕ್ತವಾಗಿರುವುದು, ಸರ್ಪಗಳ ದೇಹಗಳಿಂದ ಸುತ್ತಲ್ಪಟ್ಟಿರುವುದು. ಇವುಗಳುಳ್ಳ ಸಾಲಿಗ್ರಾಮವು ಅನಂತ ಸಾಲಿಗ್ರಾಮವೆನಿಸುತ್ತದೆ. ಈ ಅನಂತ ಸಾಲಿಗ್ರಾಮವು ಅನೇಕಮೂರ್ತಿಗಳಿಂದ ಯುಕ್ತವಾಗಿದ್ದು ಭಿನ್ನಭಿನ್ನವಾಗಿರುತ್ತದೆ. ಬೇಡಿದ ಎಲ್ಲಾ ವರಗಳನ್ನೂ ಕೊಡುತ್ತದೆ."

ನಾಗಭೋಗಸಮಾಯುಕ್ತಾ ಶಿಲಾ ಸೂಕ್ಷ್ಮಾ ಚ ಯಾ ಭವೇತ್ |
ತಸ್ಯಾಮೇವ ಸದಾ ಬ್ರಹ್ಮನ್ ಶ್ರಿಯಾ ಸಹ ವಸಾಮ್ಯಹಮ್ ||

"ಚಿಕ್ಕ ಸಾಲಿಗ್ರಾಮಶಿಲೆಯು ಸರ್ಪರೇಖೆಯಿಂದ ಯುಕ್ತವಾಗಿದ್ದರೆ ಅದರಲ್ಲಿ ಲಕ್ಷ್ಮಿಯಿಂದ ಸಹಿತನಾಗಿ ನಾನು ಯಾವಾಗಲೂ ವಾಸಿಸುತ್ತಿರುವೆನು."

ಯಥಾ ಯಥಾ ಶಿಲಾ ಸೂಕ್ಷ್ಮಾ ತಥಾ ಸ್ಯಾತ್ತು ಮಹತ್ಫಲಮ್ |
ತಸ್ಮಾತ್ತಾಂ ಪೂಜಯೇನ್ನಿತ್ಯಂ ಧರ್ಮಕಾಮಾರ್ಥಮುಕ್ತಯೇ ||

"ಸಾಲಿಗ್ರಾಮವು ಎಷ್ಟೆಷ್ಟು ಚಿಕ್ಕದಾಗಿರುತ್ತದೋ ಅಷ್ಟಷ್ಟು ಅಧಿಕವಾದ ಫಲವು ಬರುತ್ತದೆ. ಆದ್ದರಿಂದ ಸಾಲಿಗ್ರಾಮವನ್ನು ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಅಪೇಕ್ಷಿಸುವವನು ಪೂಜಿಸಬೇಕು."

ಸಾಲಿಗ್ರಾಮಶಿಲಾಶ್ಶ್ವೇತಾಃ ಸೌಮ್ಯಾಃ ಸರ್ವಫಲಪ್ರದಾಃ |
ಶ್ರೀಕರೀ ಪೀತವರ್ಣಾ ಚ ರಕ್ತಾ ಕಾಮಪ್ರದಾ ಮತಾ ||
ಕೃಷ್ಣಾ ಪುಷ್ಟಿಪ್ರದಾ ನಿತ್ಯಂ ಪಿಂಗಲಾ ರೋಗದಾ ಸದಾ |
ಶಿಲಾಶ್ಚ ಚಕ್ರಸಂಜಾತಾಃ ಸರ್ವಮೋದಫಲಪ್ರದಾಃ ||
ಮೂರ್ತಿಭಿರ್ಗರ್ಭಿತಾಃ ಸರ್ವಾಃ ಶಿಲಾಶ್ಚಕ್ರಸರಿದ್ಭವಾಃ |
ಪ್ರಾದುರ್ಭಾವೈಶ್ಚ ಮೀನಾದ್ಯೈಸ್ತಥಾ ದಿವ್ಯಾಯುಧೈರಪಿ ||
ಲಾಂಛಿತಾಃ ಕೌಸ್ತುಭಾದ್ಯೈಶ್ಚ ಭೂಷಣೈಃ ಕಮಲಾಸನ |
ಅಂಕಿತಾಃ ಪೂಜನೀಯಾಃ ಸ್ಯುರ್ಭುಕ್ತಿಮುಕ್ತಿಫಲಾರ್ಥಿಭಿಃ ||
ಸರ್ವಾಃ ಸ್ವಾಯಂಭುವಾ ಜ್ಞೇಯಾಃ ಶಿಲಾಶ್ಚಕ್ರಸಮುದ್ಭವಾಃ |
ನಿತ್ಯಂ ಸನ್ನಿಧಿರೇತಾಸು ಪರಸ್ಯ ಪರಮಾತ್ಮನಃ ||
ನ ಪ್ರತಿಷ್ಠಾ ವಿಧಾತವ್ಯಾ ನೈವ ಚಾವಾಹನಾದಿಕಮ್ |
ಸಾಲಿಗ್ರಾಮಶಿಲಾ ಯತ್ರ ಪೂಜ್ಯತೇ ಭಗವನ್ಮಯೈಃ || (ಪದ್ಮಸಂಹಿತಾ)

"ಮೇಲ್ಕಂಡ ಎಲ್ಲಾ ಸಾಲಿಗ್ರಾಮಗಳೂ ಸೌಮ್ಯವಾದವುಗಳು ಮತ್ತು ಅಪೇಕ್ಷಿಸುವ ಎಲ್ಲಾ ಫಲಗಳನ್ನೂ ಕೊಡತಕ್ಕವುಗಳು. ಹಳದಿ ಬಣ್ಣದ ಸಾಲಿಗ್ರಾಮವು ಸಂಪತ್ಕರವಾಗುತ್ತದೆ. ಕೆಂಪು ಬಣ್ಣದ ಸಾಲಿಗ್ರಾಮವು ಅಪೇಕ್ಷಿತವಾದ ವಸ್ತುಗಳನ್ನು ಕೊಡುತ್ತದೆ. ಕಪ್ಪುಬಣ್ಣದ್ದಾಗಿದ್ದರೆ ಪುಷ್ಟಿಕರವಾಗುತ್ತದೆ. ಹೊಂಬಣ್ಣದ್ದಾಗಿದ್ದರೆ ಯಾವಾಗಲೂ ರೋಗಪ್ರದವಾಗುತ್ತದೆ. ಚಕ್ರನದಿಯಲ್ಲಿ ಹುಟ್ಟಿರುವ ಶಿಲೆಗಳು ಎಲ್ಲಾ ವಿಧವಾದ ಸಂತೋಷಗಳನ್ನು ಕೊಡುತ್ತವೆ. ಅದೇ ಶಿಲೆಗಳಲ್ಲಿ ಮತ್ಸ್ಯ ಮುಂತಾದ ಶ್ರೀಹರಿಯ ಅವತಾರಗಳೂ ಪಾಂಚಜನ್ಯ ಶಂಖ ಮುಂತಾದ ಶ್ರೀಹರಿಯ ಆಯುಧಗಳೂ ಕೌಸ್ತುಭ ಮುಂತಾದ ಆಭರಣಗಳೂ ಇದ್ದರೆ ಈ ಲೋಕದಲ್ಲಿ ಸಕಲಸುಖಗಳನ್ನೂ ಪರಲೋಕದಲ್ಲಿ ಮುಕ್ತಿಯನ್ನೂ ಕೊಡುತ್ತವೆ. ಈ ಸಾಲಿಗ್ರಾಮಗಳಲ್ಲಿ ಶ್ರೀಹರಿಯು ಯಾವಾಗಲೂ ಸನ್ನಿಹಿತನಾಗಿರುವನು. ಇವುಗಳಿಗೆ ಪ್ರತಿಷ್ಠೆಯನ್ನು ಮಾಡಬೇಕಾಗಿಲ್ಲ. ಆವಾಹನ ಮುಂತಾದವುಗಳನ್ನೂ ಮಾಡಬೇಕಾಗಿಲ್ಲ."

ನ ಜಪೋ ನಾಧಿವಾಸಶ್ಚ ನ ಚ ಸಂಸ್ಥಾಪನಕ್ರಿಯಾ |
ಸಾಲಿಗ್ರಾಮಾರ್ಚನೇ ವಿಷ್ಣುಸ್ತಸ್ಮಾತ್ಸನ್ನಿಹಿತಸ್ಸದಾ ||
ಮೂರ್ತ್ಯಂತರೇಷು ಬಿಂಬೇಷು ನ ಯಷ್ಟವ್ಯಂ ಸದೈವ ತತ್ |
ಸಾಲಿಗ್ರಾಮಶಿಲಾಯಾಂ ತು ಯಷ್ಟವ್ಯಾಃ ಸರ್ವಮೂರ್ತಯಃ || (ವಸಿಷ್ಠಸಂಹಿತಾ)

"ಸಾಲಿಗ್ರಾಮದಲ್ಲಿ ವಿಷ್ಣುಸಾನ್ನಿಧ್ಯವು ಏರ್ಪಡುವುದಕ್ಕಾಗಿ ಜಪವನ್ನೂ, ಧಾನ್ಯಾಧಿವಾಸ ಮುಂತಾದ ಅಧಿವಾಸಗಳನ್ನೂ ಪ್ರತಿಷ್ಠೆಯನ್ನೂ ಮಾಡಬೇಕಾಗಿಲ್ಲ. ಶ್ರೀಹರಿಯು ಆ ಶಿಲೆಯಲ್ಲಿ ಯಾವಾಗಲೂ ಸನ್ನಿಹಿತನಾಗಿರುವನು. ಒಂದು ಪ್ರತಿಮೆಯಲ್ಲಿ ಬೇರೆ ಮೂರ್ತಿಯನ್ನು ಪೂಜಿಸಕೂಡದು. ಸಾಲಿಗ್ರಾಮಶಿಲೆಯಲ್ಲಿ ಎಲ್ಲಾ ಮೂರ್ತಿಗಳನ್ನೂ ಪೂಜಿಸಬಹುದು."

ಏಕಚಕ್ರಂ ದ್ವಾರವತ್ಯಾಃ ಶಿಲಾಯಾಸ್ತತ್ಸುಶೋಭನಮ್ |
ಸುದರ್ಶನಂ ನಾಮಧೇಯಂ ಮೋಕ್ಷೈಕಫಲದೋಽರ್ಚಿತಃ ||
ಲಕ್ಷ್ಮೀನಾರಾಯಣೋ ದ್ವಾಭ್ಯಾಂ ಭುಕ್ತಿಮುಕ್ತಿಫಲಪ್ರದಃ |
ತೃತೀಯಂ ಚಾಚ್ಯುತಂ ವಿದ್ಯಾತ್ತಮೈಂದ್ರಫಲದಾಯಕಂ ||
ಶ್ರೀಪ್ರದೋ ರಿಪುಹಂತಾ ಚ ಚತುಶ್ಚಕ್ರೋ ಜನಾರ್ದನಃ |
ಪಂಚಭಿರ್ವಾಸುದೇವಸ್ತು ಜನ್ಮಮೃತ್ಯುಭಯಾಪಹಃ ||
ಪ್ರದ್ಯುಮ್ನಃ ಷಡ್ಭಿರೇವಾಥ ಲಕ್ಷ್ಮೀಂ ಕೀರ್ತಿಂ ದದಾತಿ ಚ |
ಸಪ್ತಭಿರ್ಬಲಭದ್ರಸ್ತು ಗೋತ್ರಕೀರ್ತಿವಿವರ್ಧನಃ ||
ಅಷ್ಟಭಿರ್ವಾಂಛಿತಫಲಂ ದದಾತಿ ಪುರುಷೋತ್ತಮಃ |
ಸರ್ವದಸ್ತು ನವವ್ಯೂಹೋ ದುರ್ಲಭೋ ಯಃ ಸುರೋತ್ತಮೈಃ ||
ದಶಾವತರೋ ದಶಭೀ ರಾಜ್ಯದಾತಾ ತಥೈವ ಚ |
ಏಕಾದಶೋಽನಿರುದ್ಧಶ್ಚ ದ್ವಾದಶ ದ್ವಾದಶಾತ್ಮಕಃ |
ಅನ್ಯಾನಿ ಬಹುಚಕ್ರಾಣಿ ಅನಂತೇತ್ಯಭಿಧೀಯತೇ || (ಪದ್ಮಪುರಾಣ)

"ಒಂದು ಚಕ್ರವುಳ್ಳ ಸಾಲಿಗ್ರಾಮವು ಸುದರ್ಶನವೆನಿಸುತ್ತದೆ. ಇದು ಮೋಕ್ಷಪ್ರದ. ಎರಡು ಚಕ್ರಗಳುಳ್ಳದ್ದು ಲಕ್ಷ್ಮೀನಾರಾಯಣ ಸಾಲಿಗ್ರಾಮವೆನಿಸುತ್ತದೆ. ಇದು ಈ ಲೋಕದಲ್ಲಿ ಎಲ್ಲಾ ಸುಖಗಳನ್ನೂ ಪರಲೋಕದಲ್ಲಿ ಮುಕ್ತಿಯನ್ನೂ ಕೊಡುತ್ತದೆ. ಮೂರು ಚಕ್ರಗಳುಳ್ಳದ್ದು ಅಚ್ಯುತ ಸಾಲಿಗ್ರಾಮ. ಇದು ಇಂದ್ರಪದವಿಯ ಸುಖವನ್ನು ಕೊಡುತ್ತದೆ. ನಾಲ್ಕು ಚಕ್ರಗಳುಳ್ಳ ಸಾಲಿಗ್ರಾಮವು ಜನಾರ್ದನ ಸಾಲಿಗ್ರಾಮ. ಇದು ಸಂಪತ್ಕರ ಮತ್ತು ಶತ್ರುನಾಶಕರ. ಐದು ಚಕ್ರಗಳುಳ್ಳದ್ದು ವಾಸುದೇವ ಸಾಲಿಗ್ರಾಮ. ಇದು ಜನ್ಮಹರ ಮತ್ತು ಮರಣಹರ. ಆರು ಚಕ್ರಗಳುಳ್ಳದ್ದು ಪ್ರದ್ಯುಮ್ನ ಸಾಲಿಗ್ರಾಮ. ಇದು ಸಂಪತ್ಕರ ಮತ್ತು ಕೀರ್ತಿಕರ. ಏಳು ಚಕ್ರಗಳುಳ್ಳದ್ದು ಬಲಭದ್ರ ಸಾಲಿಗ್ರಾಮ. ಇದು ಕುಲದ ಕೀರ್ತಿವರ್ಧಕ. ಎಂಟು ಚಕ್ರಗಳುಳ್ಳದ್ದು ಪುರುಷೋತ್ತಮ ಸಾಲಿಗ್ರಾಮ. ಇದು ಅಪೇಕ್ಷಿತಫಲಪ್ರದ. ಒಂಭತ್ತು ಚಕ್ರಗಳುಳ್ಳದ್ದು ಸರ್ವವನ್ನೂ ಕೊಡುತ್ತಿರುವುದರಿಂದ ಸರ್ವದ ಸಾಲಿಗ್ರಾಮವೆನಿಸುತ್ತದೆ. ಉತ್ತಮರಾದ ದೇವತೆಗಳಿಗೂ ಈ ಸಾಲಿಗ್ರಾಮವು ದುರ್ಲಭ. ಹತ್ತು ಚಕ್ರಗಳುಳ್ಳದ್ದು ದಶಾವತಾರ ಸಾಲಿಗ್ರಾಮ. ಇದು ರಾಜ್ಯಪ್ರದ. ಹನ್ನೊಂದು ಚಕ್ರಗಳುಳ್ಳದ್ದು ಅನಿರುದ್ಧ ಸಾಲಿಗ್ರಾಮ. ಹನ್ನೆರಡು ಚಕ್ರಗಳುಳ್ಳದ್ದು ದ್ವಾದಶಾತ್ಮಕ ಸಾಲಿಗ್ರಾಮ. ಹದಿಮೂರು ಅಥವಾ ಅದಕ್ಕಿಂತ ಹೆಚ್ಚು ಚಕ್ರಗಳಿಂದ ಯುಕ್ತವಾದದ್ದು ಅನಂತ ಸಾಲಿಗ್ರಾಮ. ಕೊನೆಯಲ್ಲಿ ಹೇಳಿರುವ ಈ ಮೂರು ಸಾಲಿಗ್ರಾಮಗಳೂ ಅನಂತಫಲಗಳನ್ನು ಕೊಡುತ್ತವೆ."

ಕೃಷ್ಣಾ ಮೃತ್ಯುಪ್ರದಾ ನಿತ್ಯಂ ಕಪಿಲಾ ಚ ಭಯಾಪಹಾ |
ಅತ್ಯಂತರರ್ದುರಾ ನಿತ್ಯಂ ಪೀತಾ ವಿತ್ತವಿನಾಶಿನೀ ||
ಧೂಮ್ರಾ ಪುತ್ರವಿನಾಶಾಯ ಭಗ್ನಾ ಭಾರ್ಯಾವಿಯೋಗಕೃತ್ |
ಅರ್ಧಚಂದ್ರಾಕೃತಿರ್ಯಾ ತು ಪೂಜಾರ್ಹಾ ನ ಭವಂತಿ ತಾಃ || (ಪದ್ಮಪುರಾಣ ವಚನ)

"ಕಪ್ಪುಬಣ್ಣದ ಸಾಲಿಗ್ರಾಮವು ಯಾವಾಗಲೂ ಮೃತ್ಯುಪ್ರದ. ಕಪಿಲಬಣ್ಣದ ಸಾಲಿಗ್ರಾಮವು ಭಯಪರಿಹಾರಕ. ಅತ್ಯಂತ ಒರಟಾಗಿರುವ ಮತ್ತು ಹಳದಿಬಣ್ಣದ ಸಾಲಿಗ್ರಾಮವು ದ್ರವ್ಯನಾಶಕರ. ಹೊಗೆಯ ಬಣ್ಣವುಳ್ಳದ್ದು ಪುತ್ರನಾಶಕರ. ಒಡೆದು ಹೋದದ್ದು ಪತ್ನೀನಾಶಕರ. ಹಿಂದೆ ಹೇಳಿದ ಸಾಲಿಗ್ರಾಮಗಳನ್ನೂ, ಅರ್ಧಚಂದ್ರಾಕಾರವುಳ್ಳ ಸಾಲಿಗ್ರಾಮಗಳನ್ನೂ ಪೂಜಿಸಕೂಡದು."

ವರ್ತುಲಂ ಚತುರಸ್ರಂ ತು ಶ್ವೇತಂ ಸರ್ವೋತ್ತಮಂ ತಥಾ |
ಏಕಚಕ್ರಮುಪೇಂದ್ರಸ್ಯ ದ್ವಿಚಕ್ರಂ ವಹ್ನಿಪೂಜಿತಮ್ ||

"ವರ್ತುಲಾಕಾರ ಅಥವಾ ಚತುಷ್ಕೋಣಾಕಾರ, ಬಿಳಿಬಣ್ಣ ಇವುಗಳಿಂದಲೂ ಒಂದು ಚಕ್ರದಿಂದಲೂ ಯುಕ್ತವಾಗಿರುವುದು ಉಪೇಂದ್ರ ಸಾಲಿಗ್ರಾಮವೆನಿಸುತ್ತದೆ. ಇದೇ ಲಕ್ಷಣಗಳಿಂದ ಯುಕ್ತವಾಗಿದ್ದು ಎರಡು ಚಕ್ರಗಳಿಂದ ಯುಕ್ತವಾಗಿದ್ದರೆ ಅಗ್ನಿದೇವರಿಂದ ಪೂಜ್ಯವಾದ ಸಾಲಿಗ್ರಾಮವೆನಿಸುತ್ತದೆ."

ಯಾಮ್ಯಾಯಾಂ ತು ಚತುಶ್ಚಕ್ರಂ ಷಟ್ಚಕ್ರಂ ನೈಋತಂ ಸ್ಮೃತಮ್ |
ತ್ರಿಚಕ್ರಂ ವಾರುಣಂ ಜ್ಞೇಯಂ ವಾಯುವ್ಯಂ ತ್ವಷ್ಟಚಕ್ರಕಮ್ ||
ಕೌಬೇರಂ ನವಮಂ ಚಕ್ರಮೈಶಾನ್ಯಂ ದಶಚಕ್ರಕಮ್ |
ಅನ್ಯೇನ ಪೂಜಿತಾ ಏತೇ ವಿಪರೀತಫಲಪ್ರದಾಃ |
ಶೇಷಾಃ ಸರ್ವತ್ರ ಪೂಜ್ಯಾಃ ಸ್ಯುರಭೀಷ್ಟಫಲದಾಯಕಾಃ || (ಪದ್ಮಪುರಾಣ ವಚನ)

"ದಕ್ಷಿಣ ದಿಕ್ಕಿನಲ್ಲಿ ನಾಲ್ಕು ಚಕ್ರಗಳಿಂದ ಯುಕ್ತವಾದ ಸಾಲಿಗ್ರಾಮವೂ ಅಗ್ನಿದೇವರಿಂದ ಪೂಜ್ಯವಾದುದು. ನೈಋತ್ಯ ದಿಕ್ಕಿನಲ್ಲಿ ಆರು ಚಕ್ರಗಳುಳ್ಳದ್ದು ನಿಋತಿಯಿಂದ ಪೂಜ್ಯವಾದದ್ದು. ಮೂರು ಚಕ್ರಗಳುಳ್ಳದ್ದು ವರುಣದೇವನಿಂದಲೂ, ಎಂಟು ಚಕ್ರಗಳುಳ್ಳದ್ದು ವಾಯುದೇವನಿಂದಲೂ, ಒಂಭತ್ತು ಚಕ್ರಗಳುಳ್ಳದ್ದು ಕುಬೇರನಿಂದಲೂ, ಹತ್ತು ಚಕ್ರಗಳುಳ್ಳದ್ದು ರುದ್ರದೇವನಿಂದಲೂ ಪೂಜ್ಯವಾದುದು. ಅಗ್ನಿ ಮುಂತಾದ ದೇವತೆಗಳಿಂದ ಪೂಜ್ಯವಾದ ಈ ಸಾಲಿಗ್ರಾಮಗಳು ಬೇರೆ ಜನರಿಂದ ಪೂಜಿಸಲ್ಪಟ್ಟರೆ ಅನಿಷ್ಟಫಲಗಳನ್ನು ಕೊಡುತ್ತವೆ. ಈ ಸಾಲಿಗ್ರಾಮಗಳನ್ನು ಬಿಟ್ಟು ಉಳಿದ ಸಾಲಿಗ್ರಾಮಗಳು ಸರ್ವರಿಂದಲೂ ಪೂಜಿಸಲ್ಪಡಬಹುದು. ಹಾಗೆ ಪೂಜಿಸಲ್ಪಟ್ಟರೆ ಅಭೀಷ್ಟಫಲಗಳನ್ನು ಕೊಡುತ್ತವೆ."

### ಸಾಲಿಗ್ರಾಮ ಪೂಜಾಮಹಿಮಾ

ದ್ವಾದಶೈತಾಃ ಶಿಲಾ ಯೋ ವೈ ಸಾಲಿಗ್ರಾಮಸಮುದ್ಭವಾಃ |
ಅರ್ಚಯೇದ್ವೈಷ್ಣವೋ ನಿತ್ಯಂ ತಸ್ಯ ಪುಣ್ಯಂ ನಿಬೋಧ ಮೇ ||
ಕೋಟಿಲಿಂಗಸಹಸ್ರೈಸ್ತು ಪೂಜಿತೈರ್ಜಾಹ್ನವೀತಟೇ |
ಕಾಶೀವಾಸಯುಗಾನ್ಯಷ್ಟೌ ದಿನೇನೈಕೇನ ತದ್ಭವೇತ್ ||
ಕಿಂ ಪುನರ್ಬಹುಶೋ ಯಸ್ತು ಪೂಜಯೇದ್ವೈಷ್ಣವೋ ನರಃ |
ತಸ್ಮಾದ್ಭಕ್ತೈಶ್ಚ ಮನುಜೈಃ ಪ್ರೀತ್ಯರ್ಥಂ ಮಮ ಪುತ್ರಕ ||
ಕರ್ತವ್ಯಂ ಸತತಂ ಭಕ್ತ್ಯಾ ಸಾಲಿಗ್ರಾಮಶಿಲಾರ್ಚನಂ |
ಸಾಲಿಗ್ರಾಮಶಿಲಾರೂಪೀ ಯತ್ರ ತಿಷ್ಠತಿ ಕೇಶವಃ ||
ತತ್ರ ದೇವಾಸುರಾ ಯಕ್ಷಾ ಭುವನಾನಿ ಚತುರ್ದಶ |
ಸಾಲಿಗ್ರಾಮಶಿಲಾಸ್ಪರ್ಶಂ ಯಃ ಕರೋತಿ ದಿನೇ ದಿನೇ ||
ವಾಂಛಂತಿ ಕರಸಂಸ್ಪರ್ಶಂ ತಸ್ಯ ದೇವಾಃ ಸವಾಸವಾಃ | (ಪದ್ಮಪುರಾಣ ವಚನ)

"ಶ್ರೀಹರಿಯು ಬ್ರಹ್ಮದೇವನನ್ನು ಕುರಿತು ಸಾಲಿಗ್ರಾಮ ಪೂಜೆಯ ಮಹಿಮೆಯನ್ನು ಉಪದೇಶಿಸುತ್ತಿರುವವನು. ಎಲೈ ಪುತ್ರನೇ, ಸಾಲಿಗ್ರಾಮ ಶಿಲೆಯ ಪೂಜೆಯಿಂದ ಬರುವ ಪುಣ್ಯವನ್ನು ಹೇಳುವೆನು: ಹನ್ನೆರಡು ಸಾಲಿಗ್ರಾಮಗಳು ಒಟ್ಟುಗೂಡಿದರೆ ಒಂದು ಕ್ಷೇತ್ರ ಸಾಲಿಗ್ರಾಮವೆನಿಸುತ್ತದೆ. ಕಾಶೀಕ್ಷೇತ್ರದಲ್ಲಿ ಗಂಗಾನದೀತೀರದಲ್ಲಿ ಕೋಟಿಸಹಸ್ರ ಶಿವಲಿಂಗಗಳನ್ನು ಪೂಜಿಸುತ್ತಾ

ಎಂಟು ಯುಗಗಳವರೆಗೆ ವಾಸಿಸಿದರೆ ಬರುವ ಪುಣ್ಯವು ಒಂದೇ ದಿನದಲ್ಲಿ ಒಂದು ಕ್ಷೇತ್ರ ಸಾಲಿಗ್ರಾಮವನ್ನು ಪೂಜಿಸಿದ್ದರಿಂದ ಬರುತ್ತದೆ. ಹೀಗಿರುವಾಗ ಪ್ರತಿದಿನದಲ್ಲಿಯೂ ಒಂದು ಕ್ಷೇತ್ರ ಸಾಲಿಗ್ರಾಮವನ್ನು ಪೂಜಿಸಿದ್ದರಿಂದ ಬರುವ ಪುಣ್ಯವನ್ನು ಕುರಿತು ಹೇಳಬೇಕಾದ್ದೇನಿದೆ? ಸಾಲಿಗ್ರಾಮಶಿಲೆಯು ಎಲ್ಲಿದೆಯೋ ಅಲ್ಲಿ ಯಾವಾಗಲೂ ಶ್ರೀಹರಿಯು ವಾಸಿಸುವನು. ಶ್ರೀಹರಿಯು ವಾಸಿಸುವ ಸ್ಥಳದಲ್ಲಿ ಎಲ್ಲಾ ದೇವತೆಗಳೂ, ದೈತ್ಯರೂ ಯಕ್ಷರೂ ವಾಸಿಸುವರು. ಪ್ರತಿದಿನದಲ್ಲಿ ಸಾಲಿಗ್ರಾಮ ಶಿಲಾಸ್ಪರ್ಶವನ್ನು ಮಾಡುತ್ತಿರುವವನ ಹಸ್ತಸ್ಪರ್ಶವನ್ನು ಮಾಡಬೇಕೆಂದು ಇಂದ್ರ ಮುಂತಾದ ಸಕಲದೇವತೆಗಳೂ, ಸಕಲಲೋಕಗಳೂ ಅಪೇಕ್ಷಿಸುವವು."

ಸಾಲಿಗ್ರಾಮಶಿಲಾಯಾಂ ತು ಪೂಜನಾತ್ಸ್ನಪನಾದಪಿ |
ಸಾ ಚ ದಿವ್ಯಾ ಹರೇರ್ಮೂರ್ತಿರ್ದರ್ಶನಾದೇವ ಸಿದ್ಧಿಕೃತ್ || (ಭರದ್ವಾಜ ಸಂಹಿತಾ)

"ಸಾಲಿಗ್ರಾಮದಲ್ಲಿ ಸನ್ನಿಹಿತನಾದ ಶ್ರೀಹರಿಗೆ ಪಂಚಾಮೃತಾಭಿಷೇಕ ಮುಂತಾದ ಅಭಿಷೇಕಗಳನ್ನು ಮಾಡಿಸಬೇಕು ಮತ್ತು ಪೂಜಿಸಬೇಕು. ಅಲ್ಲಿ ಸನ್ನಿಹಿತನಾಗಿರುವ ಶ್ರೀಹರಿಯ ಮೂರ್ತಿಯು ದರ್ಶನಮಾತ್ರದಿಂದಲೇ ಸಿದ್ಧಿಯನ್ನು ಕೊಡುತ್ತದೆ."

ಸಾಲಿಗ್ರಾಮಶಿಲಾಯಾಂ ತು ಪೂಜನಂ ಪರಮಾತ್ಮನಃ |
ಕೋಟಿಕೋಟಿಗುಣಾಧಿಕ್ಯಂ ಭವೇತ್ತತ್ರ ನ ಸಂಶಯಃ || (ವಸಿಷ್ಠ ಸಂಹಿತಾ)

"ಸಾಲಿಗ್ರಾಮಶಿಲೆಯಲ್ಲಿ ಶ್ರೀಹರಿಯನ್ನು ಒಮ್ಮೆ ಪೂಜಿಸುವುದು ಕೋಟಿಪಾಲು ಅಧಿಕವಾದ ಪೂಜೆಯೆನಿಸುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ."

ಅರ್ಚನಂ ವಂದನಂ ದಾನಂ ಪ್ರಣತಿರ್ದರ್ಶನಂ ನೃಣಾಮ್ |
ಸಾಲಿಗ್ರಾಮಶಿಲಾಯಾಂ ತು ಸರ್ವಂ ಕೋಟಿಗುಣಂ ಭವೇತ್ ||
ಪಂಚಸಂಸ್ಕಾರಸಂಪನ್ನೋ ಮಂತ್ರವರ್ಣಾರ್ಥಕೋವಿದಃ |
ಸಾಲಿಗ್ರಾಮಶಿಲಾಯಾಂ ತು ಪೂಜಯೇತ್ಪುರುಷೋತ್ತಮಮ್ ||
ಸಾಲಿಗ್ರಾಮಶಿಲಾಯಾಂ ತು ತುಲಸೀದಲಪೂಜಿತಃ |
ದದಾತಿ ಸರ್ವಾನ್ಕಾಮಾಂಶ್ಚ ಪ್ರಸನ್ನಃ ಪರಮೇಶ್ವರಃ ||
ಧ್ಯಾತ್ವಾ ಕಮಲಪತ್ರಾಕ್ಷಂ ಸಾಲಿಗ್ರಾಮಶಿಲೋಪರಿ |
ಪೌರುಷಸ್ಯೈವ ಸೂಕ್ತೇನ ಪೂಜಯೇತ್ಪುರುಷೋತ್ತಮಮ್ ||
ಯಃ ಶ್ರಾದ್ಧಂ ಕುರುತೇ ವಾಽಪಿ ಸಾಲಿಗ್ರಾಮಶಿಲಾಗ್ರತಃ |
ಪಿತ್ಯೃಣಾಂ ತಸ್ಯ ತೃಪ್ತಿಃ ಸ್ಯಾದ್ಗಯಾಶ್ರಾದ್ಧಾದನಂತಕಮ್ ||
ಜಪ್ತಂ ಹುತಂ ತಥಾ ದತ್ತಮರ್ಚನಂ ಚ ತತಃ ಕ್ರಿಯಾ |
ಸಾಲಿಗ್ರಾಮಸಮೀಪೇ ತು ಸರ್ವಂ ಕೋಟಿಗುಣಂ ಭವೇತ್ || (ವಸಿಷ್ಠ ಸಂಹಿತಾ)

"ಸಾಲಿಗ್ರಾಮಶಿಲೆಯಲ್ಲಿ ಶ್ರೀಹರಿಯನ್ನು ಅರ್ಚನೆ, ನಮಸ್ಕಾರ, ದಾನ, ಸ್ತುತಿಸುವುದು, ದರ್ಶನ ಮುಂತಾದವುಗಳಿಂದ ಸೇವಿಸಿದರೆ ಒಂದೊಂದೂ ಕೋಟಿಯಷ್ಟು ಫಲವನ್ನು ಕೊಡುತ್ತದೆ. ಉಪನಯನ, ಮಂತ್ರೋಪದೇಶ, ತಪ್ತಮುದ್ರಾಧಾರಣ, ಗೋಪೀಚಂದನಧಾರಣ, ಗದಾದ್ಯಾಯುಧಗಳ ಧಾರಣೆ. ಈ ಐದು ಸಂಸ್ಕಾರಗಳಿಂದ ಯುಕ್ತನಾಗಿರಬೇಕು. ಮಂತ್ರಗಳಲ್ಲಿರುವ ಒಂದೊಂದು ಅಕ್ಷರಗಳಿಂದ ಪ್ರತಿಪಾದ್ಯವಾಗಿರುವ ಮೂರ್ತಿಗಳನ್ನೂ ತಿಳಿದಿರಬೇಕು. ಇಂತಹ ಅಧಿಕಾರಿಯು ಸಾಲಿಗ್ರಾಮದಲ್ಲಿ ಶ್ರೀಹರಿಯನ್ನು ಪೂಜಿಸಬೇಕು. ಇವನು ತುಲಸೀ ಅರ್ಚನೆಯನ್ನು ಮಾಡಿದರೆ ಒಂದೊಂದು ಅರ್ಚನೆಯು ಕೋಟಿಅರ್ಚನೆಗೆ

ಸಮವೆನಿಸುತ್ತದೆ. ಹೀಗೆ ಪೂಜಿಸುವವನು ಅಪೇಕ್ಷಿಸುವ ಸಕಲ ಇಷ್ಟಾರ್ಥಗಳನ್ನೂ ಶ್ರೀಹರಿಯು ಕೊಡುವನು. ಕಮಲಪತ್ರಾಕ್ಷನಾದ ಶ್ರೀಹರಿಯನ್ನು ಪುರುಷಸೂಕ್ತದಿಂದ ಪೂಜಿಸಿ ಸಾಲಿಗ್ರಾಮದ ಮುಂದೆ ಪಿತೃಗಳಿಗೆ ಪಿಂಡದಾನವನ್ನು ಮಾಡಿದರೆ ಗಯಾಕ್ಷೇತ್ರದಲ್ಲಿ ಶ್ರಾದ್ಧವನ್ನು ಮಾಡುವುದರಿಂದ ಬರುವ ಫಲಕ್ಕಿಂತಲೂ ಅನಂತಪಾಲು ಅಧಿಕವಾದ ಫಲವು ಬರುತ್ತದೆ. ಜಪಿಸುವುದು, ಹೋಮವನ್ನು ಮಾಡುವುದು, ದಾನಕೊಡುವುದು, ಅರ್ಚಿಸುವುದು ಮುಂತಾದ ಎಲ್ಲಾ ಕಾರ್ಯಗಳನ್ನೂ ಸಾಲಿಗ್ರಾಮದ ಮುಂದೆ ಮಾಡಿದರೆ ಕೋಟಿಪಾಲು ಅಧಿಕವಾಗುತ್ತದೆ."

ಸಾಲಿಗ್ರಾಮಶಿಲಾಸ್ಪರ್ಶಂ ಯಃ ಕರೋತಿ ದಿನೇ ದಿನೇ |
ವಾಂಛಂತಿ ಕರಸಂಸ್ಪರ್ಶಂ ತಸ್ಯ ದೇವಾಃ ಸಮಾಸವಾಃ || (ಗರುಡಪುರಾಣ ವಚನ)

"ಪ್ರತಿದಿನದಲ್ಲಿಯೂ ಸಾಲಿಗ್ರಾಮ ಶಿಲಾಸ್ಪರ್ಶವನ್ನು ಬಯಸುವವನ ಹಸ್ತಸ್ಪರ್ಶವನ್ನು ಇಂದ್ರ ಮುಂತಾದ ಎಲ್ಲಾ ದೇವತೆಗಳೂ ಬಯಸುವರು."

ಮನೋವಾಕ್ಕಾಯಜೈರ್ಗ್ರಸ್ತೈಃ ಪ್ರಾಪ್ತೈರ್ಬಹುವಿಧೈರಪಿ |
ಸಾಲಿಗ್ರಾಮಶಿಲಾವೀಕ್ಷಾದ್ಭವೇನ್ನಸ್ತಮಲೋ ನರಃ ||
ಶ್ರುತಾ ಸಂಕೀರ್ತಿತಾ ಧ್ಯಾತಾ ದೃಷ್ಟಾ ಸ್ಪೃಷ್ಟಾ ಪ್ರಣಾಮಿತಾ |
ಸಾಲಿಗ್ರಾಮಶಿಲಾ ಪುಂಸಾಂ ಕುಲಂ ತಾರಯತೇ ದ್ವಿಜ ||
ಚಕ್ಷುಷ್ಮಾನಪಿ ಜಾತ್ಯಂಧೋ ಜೀವನ್ನಪಿ ಮೃತೋಪಮಃ |
ಸಾಲಿಗ್ರಾಮಾರ್ಚನಾಹೀನೋ ಧನವಾನಪಿ ನಿರ್ಧನಃ ||
ಸಾಲಿಗ್ರಾಮಶಿಲಾಪೂಜಾರಹಿತಾನಾಂ ಕಿಮಧ್ವರೈಃ |
ಸಾಲಿಗ್ರಾಮಶಿಲಾಯುಕ್ತಂ ಯೋ ದದ್ಯಾದ್ದಾನಮುತ್ತಮಮ್ ||
ಭೂಚಕ್ರಂ ತೇನ ದತ್ತಂ ಸ್ಯಾತ್ಸಶೈಲವನಕಾನನಮ್ | (ವಸಿಷ್ಠಸಂಹಿತಾವಚನ)

"ಮನಸ್ಸು, ಮಾತುಗಳು, ದೇಹಗಳು ದುಷ್ಟವಾಗಿದ್ದರೂ, ಸಾಲಿಗ್ರಾಮಶಿಲೆಯನ್ನು ನೋಡಿದ ಕೂಡಲೇ ಎಲ್ಲಾ ದೋಷಗಳೂ ಹೋಗುತ್ತವೆ. ಸಾಲಿಗ್ರಾಮಶಿಲೆಯ ಶ್ರವಣ, ಸಂಕೀರ್ತನ, ಧ್ಯಾನ, ದರ್ಶನ, ಸ್ಪರ್ಶ, ನಮಸ್ಕಾರ, ಈ ಆರರಲ್ಲಿ ಯಾವುದನ್ನು ಮಾಡಿದರೂ ತನ್ನ ಕುಲವು ಉದ್ಧರಿಸಲ್ಪಡುತ್ತದೆ. ಸಾಲಿಗ್ರಾಮ ಪೂಜೆಯನ್ನು ಮಾಡದವನು ಕಣ್ಣುಗಳುಳ್ಳವನಾಗಿದ್ದರೂ ಹುಟ್ಟುಕುರುಡನೆಂದೂ, ಜೀವಿತನಾಗಿದ್ದರೂ ಹೆಣಕ್ಕೆ ಸಮನೆಂದೂ, ಶ್ರೀಮಂತನಾದರೂ ಬಡವನೆಂದೂ ಹೇಳಲ್ಪಡುವನು. ಸಾಲಿಗ್ರಾಮಪೂಜೆಯನ್ನು ಮಾಡದವನು ಯಜ್ಞಗಳನ್ನು ಮಾಡಿದರೆ ಯಾವ ಫಲವೂ ಸಿಗಲಾರದು. ಸಾಲಿಗ್ರಾಮಶಿಲಾಸಹಿತವಾದ ದಾನವನ್ನು ಮಾಡಬೇಕು. ಇದರಿಂದ ಪರ್ವತ, ವನ ಮುಂತಾದವುಗಳಿಂದ ಸಹಿತವಾದ ಭೂಮಂಡಲವನ್ನು ದಾನಮಾಡಿದ ಫಲವು ಸಿಗುತ್ತದೆ."

ಸಾಲಿಗ್ರಾಮಶಿಲಾ ಯತ್ರ ತತ್ತೀರ್ಥಂ ತತ್ತಪೋವನಮ್ |
ಯತ್ರ ಸನ್ನಿಹಿತಸ್ತತ್ರ ಭಗವಾನ್ ಮಧುಸೂದನಃ ||
ಯದ್ಗೃಹೇ ನಾಸ್ತಿ ತುಲಸೀ ಸಾಲಿಗ್ರಾಮಶಿಲಾರ್ಚನಮ್ |
ಶ್ಮಶಾನಸದೃಶಂ ವಿದ್ಯಾತ್ತದ್ಗೃಹಂ ಶುಭವರ್ಜಿತಮ್ || (ಬೃಹನ್ನಾರದೀಯವಚನ)

"ಸಾಲಿಗ್ರಾಮಶಿಲೆಯು ಎಲ್ಲಿದೆಯೋ ಅಲ್ಲಿ ಇರುವ ಜಲವು ತೀರ್ಥವೆನಿಸುತ್ತದೆ. ಅದೇ ವನವೇ ತಪೋವನವೆನಿಸುತ್ತದೆ. ಅಲ್ಲಿ ಮಧುಸೂದನನು ಸನ್ನಿಹಿತನಾಗಿರುವನು. ಯಾವ ಮನೆಯಲ್ಲಿ ತುಳಸೀಗಿಡವಿಲ್ಲವೋ, ಸಾಲಿಗ್ರಾಮಶಿಲೆಯ ಪೂಜೆಯಿಲ್ಲವೋ ಆ ಮನೆಯು ಸ್ಮಶಾನಕ್ಕೆ ಸಮವೆನಿಸುತ್ತದೆ. ಆ ಮನೆಯು ಯಾವ ಶುಭಕಾರ್ಯಗಳಿಗೂ ಅರ್ಹವಲ್ಲ.

ಸಾಲಿಗ್ರಾಮಶಿಲಾಯಾಂ ತು ತ್ರೈಲೋಕ್ಯಂ ಸಚರಾಚರಮ್ |
ಮಯಾ ಸಹ ಮಹಾದೇವೀ ಲೀನಾ ತಿಷ್ಠತಿ ಸರ್ವದಾ ||
ಸಾಲಿಗ್ರಾಮಶಿಲಾಬಿಂಬಂ ಸರ್ವಪಾಪಪ್ರಣಾಶನಂ |
ಸ್ಮೃತಂ ಸಂಕೀರ್ತಿತಂ ಧ್ಯಾತಂ ಪೂಜಿತಂ ಚ ನಮಸ್ಕೃತಮ್ ||
ಸಾಲಿಗ್ರಾಮನಮಸ್ಕಾರಃ ಶಾಠ್ಯೇನಾಪಿ ಹಿ ಯೈಃ ಕೃತಃ |
ನಿರಸ್ತಾಶೇಷಪಾಪ್ಮಾನಸ್ತೇ ಯಾಂತಿ ಪರಮಾಂ ಗತಿಮ್ ||
ಸಾಲಿಗ್ರಾಮಶಿಲಾ ಯತ್ರ ಯತ್ರ ದ್ವಾರವತೀ ಶಿಲಾ |
ಉಭಯೋಃ ಸಂಗಮೋ ಯತ್ರ ಬ್ರಹ್ಮಹತ್ಯಾಂ ವ್ಯಪೋಹತಿ |
ಸಾಲಿಗ್ರಾಮೋದ್ಭವೋ ಯತ್ರ ದೇವಶ್ಚ ದ್ವಾರಕೋದ್ಭವಃ ||
ಉಭಯೋಃ ಸಂಗಮೋ ಯತ್ರ ತತ್ರ ಮುಕ್ತಿರ್ನ ಸಂಶಯಃ |
ಸಾಲಿಗ್ರಾಮೋದ್ಭವೋ ದೇವಃ ಶೈಲಂ ಚಕ್ರಾಂಕಮಂಡಿತಮ್ |
ಯತ್ರಾಪಿ ನೀಯತೇ ತತ್ರ ವಾರಾಣಸ್ಯಾಃ ಶತಾಧಿಕಮ್ ||

"ಸಾಲಿಗ್ರಾಮಶಿಲೆಯಲ್ಲಿ ಚರಾಚರಾತ್ಮಕವಾದ ಸಕಲಜೀವರಿಂದ ಸಹಿತವಾದ ಮೂರು ಲೋಕಗಳೂ ವಾಸಿಸುತ್ತಿವೆ. ನನ್ನಿಂದ ಸಹಿತಳಾದ ಪಾರ್ವತೀದೇವಿಯು ಅದೃಶ್ಯಳಾಗಿ ಯಾವಾಗಲೂ ವಾಸಿಸುತ್ತಿರುವಳು. ಸಾಲಿಗ್ರಾಮ ಶಿಲೆಯಲ್ಲಿ ಸನ್ನಿಹಿತನಾದ ಶ್ರೀಹರಿಯನ್ನು ಸ್ಮರಿಸಿದರೂ ಸ್ತುತಿಸಿದರೂ ಧ್ಯಾನಿಸಿದರೂ ಪೂಜಿಸಿದರೂ ನಮಸ್ಕರಿಸಿದರೂ ಎಲ್ಲಾ ಪಾಪಗಳೂ ನಶಿಸುತ್ತವೆ. ಕಪಟಕ್ಕಾಗಿಯಾದರೂ ಸಾಲಿಗ್ರಾಮಶಿಲೆಯನ್ನು ನಮಸ್ಕರಿಸಿದರೆ ಎಲ್ಲಾ ಪಾಪಗಳನ್ನೂ ಕಳೆದುಕೊಂಡವರಾಗಿ ಪರಮಗತಿಯನ್ನು ಪಡೆಯುವರು. ಎಲ್ಲೆಲ್ಲಿ ಸಾಲಿಗ್ರಾಮಶಿಲೆ ಅಥವಾ ದ್ವಾರಕೆಯಲ್ಲಿರುವ ಚಕ್ರಾಂಕಿತಶಿಲೆಯು ಇರುತ್ತದೆಯೋ ಆ ಸ್ಥಳವು ಸಕಲಪಾಪಪರಿಹಾರಕವಾದುದು. ಈ ಎರಡು ಶಿಲೆಗಳನ್ನು ಒಟ್ಟುಗೂಡಿಸಿ ಪೂಜಿಸುವವನು ಬ್ರಹ್ಮಹತ್ಯೆ ಮುಂತಾದ ಮಹಾಪಾಪಗಳನ್ನು ಕಳೆದುಕೊಳ್ಳುವನು. ಈ ಎರಡು ಶಿಲೆಗಳು ಇರುವ ಸ್ಥಳವು ಮುಕ್ತಿಯನ್ನು ಕೊಡುತ್ತದೆ. ಈ ಎರಡು ಶಿಲೆಗಳು ಎಲ್ಲೆಲ್ಲಿಗೆ ಒಯ್ಯಲ್ಪಡುತ್ತವೆಯೋ ಆ ಸ್ಥಳವು ಕಾಶೀಕ್ಷೇತ್ರಕ್ಕಿಂತ ನೂರಕ್ಕಿಂತಲೂ ಅಧಿಕವಾದದ್ದು." ಇದು ರುದ್ರದೇವನ ವಚನ.

## ಅರ್ಘ್ಯೋದಕವನ್ನು ತರುವ ಕ್ರಮ

ನಿರ್ದೋಷಂ ತೋಯಮಾದಾಯ ನವಪಾತ್ರೇ ಪ್ರಪೂರಯೇತ್ |
ನವವಸ್ತ್ರೇಣ ಪೂತೇನ ತೋಯಶುದ್ಧಿರುದೀರಿತಾ || (ಕಪಿಂಜಲಸಂಹಿತಾ)

"ಹಿಂದೆ ಹೇಳಿದಂತೆ ಸ್ನಾನ ಮುಂತಾದ ಎಲ್ಲಾ ಕಾರ್ಯಗಳನ್ನೂ ಮುಗಿಸಬೇಕು. ಅರ್ಘ್ಯೋದಕ ಅಂದರೆ ಶ್ರೀಹರಿಯ ಪೂಜೆಯನ್ನು ಮಾಡುವುದಕ್ಕೋಸ್ಕರ ಶ್ರೇಷ್ಠವಾದ ನೀರನ್ನು ತರುವುದಕ್ಕೋಸ್ಕರ ಬಂಗಾರ, ಬೆಳ್ಳಿ, ತಾಮ್ರ ಮುಂತಾಥವುಗಳಿಂದ ನಿರ್ಮಿತವಾದ ಕಲಶಗಳನ್ನು ಚೆನ್ನಾಗಿ ತೊಳೆಯಬೇಕು. ಆ ಕಲಶಗಳು ಹೊಸದಾಗಿರಬೇಕು. ನದೀ ಮುಂತಾದವುಗಳಿಂದ ಪರಿಶುದ್ಧವಾದ ನೀರನ್ನು ಆ ಕಲಶಗಳಲ್ಲಿ ತುಂಬಬೇಕು. ಆ ನೀರುಗಳಲ್ಲಿ ಯಾವ ವಿಧವಾದ ದೋಷಗಳೂ ಇರಕೂಡದು. ಬೆಳ್ಳಗಿರುವ ಮತ್ತು ಮಡಿಯಾಗಿರುವ ಹೊಸಬಟ್ಟೆಯಿಂದ ನೀರನ್ನು ಶೋಧಿಸಿ ತುಂಬಿಸಬೇಕು. ಇದು ನೀರನ್ನು ಶುದ್ಧವಾಗುವಂತೆ ಮಾಡುವ ಕ್ರಮ."

ಭಾಂಡಂ ವರಜಲಂ ನೀತ್ವಾ ಶೋಧಯಿತ್ವಾ ಸುವಾಸಸಾ |
ತ್ರಿವಾರಂ ಶೋಧಯಿತ್ವೈವ ಜಲಂ ಕುಂಭೇ ಚ ಪೂರಯೇತ್ || (ವಸಿಷ್ಠರ ವಚನ)

"ನೀರಿದ್ದಲ್ಲಿಗೆ ಕಲಶವನ್ನು ತೆಗೆದುಕೊಂಡು ಹೋಗಬೇಕು. ಶುದ್ಧವಾದ ಬಟ್ಟೆಯಿಂದ ಮೂರು ಸಲ ಶೋಧಿಸಬೇಕು. ಆಮೇಲೆ ಕಲಶವನ್ನು ಶುದ್ಧವಾದ ಬಟ್ಟೆಯಿಂದ ಮುಚ್ಚಬೇಕು. ತಲೆಯಲ್ಲಿ ಅಥವಾ ಹೆಗಲಿನಲ್ಲಿ ಆ ಕಲಶವನ್ನು ಇಟ್ಟುಕೊಳ್ಳಬೇಕು. ವಾದ್ಯಧ್ವನಿಯಿಂದ ಸಹಿತನಾಗಿ ಮನೆಗೆ ತರಬೇಕು. ದೇವರ ಕೋಣೆಯ ಬಾಗಿಲಿನ ಸಮೀಪದಲ್ಲಿ ಶುದ್ಧವಾದ ಸ್ಥಳದಲ್ಲಿ ಇಡಬೇಕು. ಕಾಲುಗಳನ್ನು ತೊಳೆದುಕೊಳ್ಳಬೇಕು. ಪುನಃ ಶುದ್ಧಿಗಾಗಿ ಆಚಮನವನ್ನು ಮಾಡಬೇಕು. ತುಳಸೀಕಾಷ್ಠ ಮತ್ತು ಗಂಧವನ್ನು ತೇಯಬೇಕು. ಗಂಧವನ್ನು ತಯಾರಿಸುವಾಗ ಮೂಗು, ಬಾಯಿ ಮುಂತಾದವುಗಳನ್ನು ಮುಚ್ಚಿಕೊಂಡು ದೇಹದೊಳಗಿರುವ ಗಾಳಿಯು ಗಂಧಾದಿಗಳಲ್ಲಿ ತಗಲದಂತೆ ಜಾಗ್ರತೆಯಿಂದ ನೋಡಿಕೊಳ್ಳಬೇಕು."

### ತುಳಸೀಕಾಷ್ಠ ಸಂಯುಕ್ತ ಚಂದನ

ತುಳಸೀಕಾಷ್ಠಸಂಯುಕ್ತಂ ಚಂದನಂ ಯಚ್ಛತೋ ಹರೇಃ |
ನಿರ್ದಹೇತ್ಪಾತಕಂ ಸರ್ವಂ ಪೂರ್ವಜನ್ಮಶತಾರ್ಜಿತಮ್ || (ಪದ್ಮಪುರಾಣವಚನ)

"ಗಂಧದ ಕೊರಡಿನ ಜೊತೆಯಲ್ಲಿ ತುಳಸೀಕಾಷ್ಠವನ್ನೂ ತೇಯಬೇಕು. ಇದು ತುಳಸೀಕಾಷ್ಠಸಂಯುಕ್ತಚಂದನವೆನಿಸುತ್ತದೆ. ಈ ಚಂದನವನ್ನು ಶ್ರೀಹರಿಗೆ ಸಮರ್ಪಿಸಬೇಕು. ಇದರಿಂದ ಹಿಂದಿನ ನೂರು ಜನ್ಮಗಳಲ್ಲಿ ಸಂಪಾದಿಸಿದ ಪಾಪಗಳು ಸುಟ್ಟುಬೂದಿಯಾಗುತ್ತವೆ."

### ಬರೇ ತುಲಸೀಕಾಷ್ಠ ಚಂದನ ಸಮರ್ಪಣೆಯ ಫಲ

ಯೋ ದದಾತಿ ಹರೇರ್ನಿತ್ಯಂ ತುಲಸೀಕಾಷ್ಠಚಂದನಮ್ |
ವಸತೇ ವಿಷ್ಣುಸದನೇ ಯುಗಾನಿ ದಶ ಪಂಚ ಚ ||
ಹರೇರ್ವಿಲೇಪನಾರ್ಥಂ ಚ ತುಲಸೀಕಾಷ್ಠಸಂಭವಮ್ |
ಚಂದನಂ ವೈಷ್ಣವೋ ಭೂತ್ವಾ ಯಚ್ಛತೇ ಸೋऽಶ್ವಮೇಧಭಾಕ್ ||
ತುಲಸೀಚಂದನಂ ಮುಖ್ಯಂ ಕಿಂ ವಾ ಮಲಯಜಂ ಶುಭಮ್ |
ಅಭಾವೇ ಬಿಲ್ವಗಂಧೋ ವಾ ದೇವದಾರುಮಯಂ ತಥಾ ||
ವಿಹಾಯ ಚಂದನಂ ದಿವ್ಯಂ ಕರ್ಪೂರಮಗರುಂ ತಥಾ |
ತುಲಸೀಕಾಷ್ಠಜಾತಸ್ಯ ಗಂಧಂ ಗೃಹ್ಣಾತಿ ಕೇಶವಃ ||
ವಾಲಾಗ್ರಶತಭಾಗಂ ತು ತುಲಸೀಕಾಷ್ಠಚಂದನಮ್ |
ಹರೇರ್ದದಾತಿ ಯೋ ಭಕ್ತ್ಯಾ ಭಿನತ್ತಿ ರವಿಮಂಡಲಮ್ ||

"ತುಲಸೀಕಾಷ್ಠಚಂದನವನ್ನು ಅತ್ಯಂತಭಕ್ತಿಯಿಂದ ಶ್ರೀಹರಿಗೆ ಸಮರ್ಪಿಸುವವನು ಹದಿನೈದು ಯುಗಗಳವರೆಗೆ ವಿಷ್ಣುವಿನ ಮನೆಯಲ್ಲಿ ವಾಸಿಸುವನು. ಶ್ರೀಹರಿಯ ದೇಹದಲ್ಲಿ ಲೇಪನ ಮಾಡುವುದಕ್ಕಾಗಿ ತುಲಸೀಕಾಷ್ಠಚಂದನವನ್ನು ಸಮರ್ಪಿಸುವವನು ಮುಂದಿನ ಜನ್ಮದಲ್ಲಿ ವೈಷ್ಣವನಾಗಿ ಹುಟ್ಟುವನು ಮತ್ತು ಅಶ್ವಮೇಧಯಾಗವನ್ನು ಮಾಡುವನು. ತುಲಸೀಚಂದನವು ಮುಖ್ಯವಾಗಿರುತ್ತದೆ. ಅದು ಸಿಗದಿದ್ದರೆ ಮಲಯಪರ್ವತದಲ್ಲಿ ಬೆಳೆದಿರುವ ಗಂಧ, ಬಿಲ್ವಮರದ ಗಂಧ, ದೇವದಾರು ಮರದ ಗಂಧಗಳನ್ನು ಕ್ರಮವಾಗಿ ಸ್ವೀಕರಿಸಬಹುದು. ದಿವ್ಯವಾದ ಚಂದನ, ಕರ್ಪೂರ, ಅಗರು ಮುಂತಾದವುಗಳನ್ನು ಬಿಟ್ಟು ತುಲಸೀಕಾಷ್ಠಚಂದನವನ್ನು ಶ್ರೀಹರಿಯು ಸ್ವೀಕರಿಸುವನು. ಕುದುರೆಯ ಬಾಲದ ಕೊನೆಯ ನೂರರಲ್ಲಿ ಒಂದು ಭಾಗದಷ್ಟು

ತುಲಸೀಕಾಷ್ಠಚಂದನವನ್ನು ಭಕ್ತಿಯಿಂದ ಶ್ರೀಹರಿಗೆ ಸಮರ್ಪಿಸುವವನು ಸೂರ್ಯಮಂಡಲವನ್ನು ಭೇದಿಸಿ ವೈಕುಂಠಕ್ಕೆ ಹೋಗುವನು."

ಅಷ್ಟಗಂಧಗಳು

ಚಂದನಂ ಕುಂಕುಮಂ ಕೋಷ್ಠಂ ಕರ್ಪೂರಂ ಗ್ರಂಥಿರೋಚನಮ್ |
ಸುರಾಗುರುಸಮಾಯುಕ್ತಂ ಗಂಧಾಷ್ಟಕಮುದಾಹೃತಮ್ ||

"ಬಿಳಿಯ ಗಂಧ, ಅಗರು ಗಂಧ, ಕೇಸರಿ, ಚಂಗಲ್ ಕೋಷ್ಠ, ಪಚ್ಚಕರ್ಪೂರ, ಗ್ರಂಥಿ, ಗೋರೋಚನ, ದೇವದಾರು ಹೀಗೆ ಎಂಟು ವಿಧವಾದ ಗಂಧಗಳು ಅಷ್ಟಗಂಧಗಳೆನಿಸುತ್ತವೆ."

ವಿಲೇಪಯತಿ ಗೋವಿಂದಂ ಶಂಖೇ ಕೃತ್ವಾ ತು ಚಂದನಮ್ |
ಪರಮಾತ್ಮಾ ಪರಾಂ ಪ್ರೀತಿಂ ಕರೋತಿ ಶತವಾರ್ಷಿಕೀಮ್ || (ಸ್ಮೃತಿ ವಚನ)

"ಗಂಧವನ್ನು ಶಂಖದಲ್ಲಿಟ್ಟು ಶ್ರೀಹರಿಯ ದೇಹದಲ್ಲಿ ಲೇಪನಮಾಡುವವನ ವಿಷಯದಲ್ಲಿ ಶ್ರೀಹರಿಯು ನೂರು ವರ್ಷಗಳವರೆಗೆ ಅಧಿಕವಾಗಿ ಪ್ರೀತಿಸುವನು." ಹೀಗೆ ಗಂಧವನ್ನು ತೆಗೆದ ಮೇಲೆ ಪೂಜೋಪಯುಕ್ತವಾದ ಪಾತ್ರೆಗಳನ್ನು ತೊಳೆಯಬೇಕು. ಬಂಗಾರದಿಂದ ನಿರ್ಮಿತವಾದ ಪಾತ್ರೆಗಳು ಮುಂತಾದ ಪಾತ್ರೆಗಳನ್ನು ಕಂಚಿನದ್ದಾಗಿದ್ದರೆ ಬೂದಿಯಿಂದಲೂ, ತಾಮ್ರದ್ದಾಗಿದ್ದರೆ ಮಾವಿನಕಾಯಿಯಿಂದಲೂ, ಇತರ ಪಾತ್ರೆಗಳಾಗಿದ್ದರೆ ಅವುಗಳಿಗೆ ಹೇಳಿರುವ ವಸ್ತುಗಳಿಂದಲೂ ಶುದ್ಧಪಡಿಸಬೇಕು. ದೇವರ ಎದುರಿನಲ್ಲಿ ಬಲಭಾಗದಲ್ಲಿರುವ ಯಾಗಮಂಟಪದಲ್ಲಿ ಪೂಜೆಗೆ ಉಪಯುಕ್ತವಾಗಿರುವ ಅರ್ಘ್ಯೋದಕ ಮುಂತಾದ ಎಲ್ಲಾ ವಸ್ತುಗಳನ್ನೂ ತಾನೇ ಆಗಲೀ ಶಿಷ್ಯ ಮುಂತಾದವರ ಮೂಲಕವಾಗಿಯಾಗಲೀ ಇಡಬೇಕು."

ದೇವರ ಮನೆಯನ್ನು ಗುಡಿಸುವವನಿಗೆ ಫಲ

ಶ್ರೀಮದಾಯತನಂ ಶೌರೇಃ ಸಂಮಾರ್ಜಯತಿ ಯೋ ನರಃ |
ಸ ಪಾಂಸುಪಾವಿತತನುಃ ಸರ್ವಪಾಪಂ ವ್ಯಪೋಹತಿ || (ನಾರದೀಯ ವಚನ)

"ಯಾವನು ಶ್ರೀಹರಿಯ ಮನೆಯನ್ನು ಗುಡಿಸುವನೋ ಅವನು ಗುಡಿಸುವಾಗ ಏರ್ಪಟ್ಟಿರುವ ಧೂಳಿಗಳಿಂದ ಪರಿಶುದ್ಧವಾದ ದೇಹವುಳ್ಳವನಾಗುವನು. ಅವನ ಎಲ್ಲಾ ಪಾಪಗಳೂ ದೂರವಾಗುತ್ತವೆ."

ಯಃ ಸದಾಯತನೇ ವಿಷ್ಣೋಃ ಕುರುತೇ ಮಾರ್ಜನಕ್ರಿಯಾಮ್ |
ಸ ಪಾಂಸುಪೂತದೇಹಶ್ಚ ಸರ್ವಂ ಪಾಪಂ ವ್ಯಪೋಹತಿ || (ನಾರದೀಯ ವಚನ)

ಯಾವನು ಯಾವಾಗಲೂ ಶ್ರೀಹರಿಯ ಮಂದಿರದಲ್ಲಿ ಗುಡಿಸುವನೋ ಅವನು ಆ ಧೂಳಿನಿಂದ ಪರಿಶುದ್ಧವಾದ ದೇಹವುಳ್ಳನಾಗಿ ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುವನು.

ಯಾವತ್ಯಃ ಪಾಂಸುಕಣಿಕಾ ಮಾರ್ಜ್ಯಂತೇ ಕೇಶವಾಲಯೇ |
ವರ್ಷಾಣಿ ದಿವಿ ತಾವಂತಿ ತಿಷ್ಠತ್ಯಸ್ತಮಿತೋ ನರಃ ||
ಅಹನ್ಯಹನಿ ಯತ್ಪಾಪಂ ಕುರುತೇ ದ್ವಿಜಸತ್ತಮಃ |
ಗೋಚರ್ಮಮಾತ್ರಂ ಸಂಮಾರ್ಜ್ಯ ಹಂತಿ ತತ್ಕೇಶವಾಲಯೇ ||
ಬಾಹ್ಯಾಭ್ಯಂತರಂ ವೈಶ್ಯ ಮಾರ್ಜಯೇದಚ್ಯುತಾಲಯೇ |
ಸ ಬಾಹ್ಯಾಭ್ಯಂತರಸ್ತಸ್ಯ ವಾಯುರ್ನಿಷ್ಕಲ್ಮಷೋ ಭವೇತ್ ||

ಶನೈಃ ಸಂಮಾರ್ಜನಂ ಕುರ್ಯಾನ್ಮಾರ್ಜನ್ಯಾ ಮೃದುಕೂರ್ಚಯಾ |
ಪಶ್ಯನ್ಮೃದುತರಂ ಜಂತುಂ ಚಾಂದ್ರಾಯಣಫಲಂ ಭವೇತ್ ||
ಅಗ್ನಿಷ್ಟೋಮಂ ತು ಪಕ್ಷೇಣ ವಾಜಪೇಯಂ ತು ಮಾಸತಃ |
ಸಂವತ್ಸರೇಣಾಶ್ವಮೇಧಂ ಮಾರ್ಜನಾತ್ಫಲಮಶ್ನುತೇ ||
ನೈರಂತರ್ಯೇಣ ಯಃ ಕುರ್ಯಾತ್ಪಕ್ಷಂ ಸಂಮಾರ್ಜನಂ ನರಃ |
ಯುಗಕೋಟಿಶತಂ ದಿವ್ಯಂ ವಿಷ್ಣುಲೋಕೇ ಮಹೀಯತೇ ||
ತಸ್ಮಾತ್ತ್ರೇನ ಚತುರ್ವೇದೀ ಸುರೂಪಃ ಪ್ರಿಯದರ್ಶನಃ |
ಅರ್ಚ್ಯಃ ಸರ್ವಗುಣೋಪೇತೋ ರಾಜಾ ವಾ ಭವತಿ ಪ್ರಿಯಃ || (ವಿಷ್ಣುಧರ್ಮ ವಚನ)

ಶ್ರೀಹರಿಯ ಮಂದಿರದಲ್ಲಿ ಎಷ್ಟು ಧೂಳಿಗಳ ಅಣುಗಳು ಗುಡಿಸಲ್ಪಡುತ್ತವೆಯೋ ಅಷ್ಟು ವರ್ಷಗಳವರೆಗೆ ದೇವಲೋಕದಲ್ಲಿ ವಾಸಿಸುವನು. ಶ್ರೀಹರಿಯ ಮಂದಿರದಲ್ಲಿ ಗೋಚರ್ಮದಷ್ಟು ಪ್ರದೇಶವನ್ನು ಗುಡಿಸಿದವನು ಅಂದು ಮಾಡಿರುವ ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುವನು. ಶ್ರೀಹರಿಯ ಮಂದಿರದಲ್ಲಿ ಒಳಗೂ ಹೊರಗೂ ಗುಡಿಸುವವನ ದೇಹದ ಒಳಗೂ ಹೊರಗೂ ಇರುವ ವಾಯುವು ನಿಷ್ಕಲ್ಮಷವಾಗುತ್ತದೆ. ಗುಡಿಸುವ ಕಸಬರಳು ಮೃದುವಾದ ದರ್ಭೆಯಿಂದ ನಿರ್ಮಿಸಲ್ಪಟ್ಟಿರಬೇಕು. ಆ ಕಸಬರಳಿನಿಂದಲೂ ಮೆಲ್ಲಗೆ ಗುಡಿಸಬೇಕು. ಅತ್ಯಂತಮೃದುವಾದ ದೇಹವುಳ್ಳ ಪ್ರಾಣಿಗಳಿಗೆ ನೋವಾಗದಂತೆ ಗುಡಿಸಬೇಕು. ಹೀಗೆ ಒಂದು ದಿನದಲ್ಲಿ ಗುಡಿಸುವವನು ಚಾಂದ್ರಾಯಣವ್ರತದ ಫಲವನ್ನು ಪಡೆಯುವನು. ಹದಿನೈದು ದಿನಗಳಲ್ಲಿ ಗುಡಿಸುವವನು ಅಗ್ನಿಷ್ಟೋಮದ ಫಲವನ್ನೂ, ಒಂದು ತಿಂಗಳಿನಲ್ಲಿ ವಾಜಪೇಯದ ಫಲವನ್ನೂ, ಒಂದು ವರ್ಷದಲ್ಲಿ ಅಶ್ವಮೇಧದ ಫಲವನ್ನೂ ಪಡೆಯುವನು. ಯಾವಾಗಲೂ ಬಿಡದೆ ಒಂದು ಪಕ್ಷದವರೆಗೆ ಗುಡಿಸುವವನು ನೂರು ಕೋಟಿಯುಗಗಳವರೆಗೆ ದಿವ್ಯವಾದ ವಿಷ್ಣುಲೋಕದಲ್ಲಿ ಗೌರವಿಸಲ್ಪಡುವನು. ಅನಂತರದಲ್ಲಿ ನಾಲ್ಕು ವೇದಗಳನ್ನು ತಿಳಿದವನೂ, ಸುಂದರನೂ, ಸರ್ವರಿಗೂ ಪ್ರಿಯನೂ, ಸಕಲಗುಣಗಳುಳ್ಳವನೂ, ಸರ್ವರಿಂದಲೂ ಪೂಜ್ಯನೂ ಆಗಿ ಹುಟ್ಟುವನು. ಅಥವಾ ಮೇಲ್ಕಂಡ ಗುಣಗಳುಳ್ಳ ರಾಜನಾಗಿ ಹುಟ್ಟುವನು.

**ಮಂದಿರವನ್ನು ಶುದ್ಧಿ ಮಾಡುವುದಕ್ಕೆ ಬೇಕಾದ ಗೋಮಯದ ಲಕ್ಷಣ**

ಗೃಹೀತ್ವಾ ಗೋಮಯಂ ಸಂಸ್ಥಂ ಸ್ಥಾನೇ ವಾ ಪತಿತಂ ದ್ವಿಜಃ |
ಉಪರ್ಯಧಶ್ಚ ಸಂತ್ಯಜ್ಯ ಪ್ರತ್ಯಗ್ರಂ ಜಂತುವರ್ಜಿತಂ ||
ಶ್ರೀಮತ್ಯಾಯತನೇ ವಿಷ್ಣೋರ್ಯಃ ಕುರ್ಯಾದುಪಲೇಪನಮ್ |
ಅಗ್ನಿಷ್ಟೋಮಂ ತು ಪಕ್ಷೇಣ ವಾಜಪೇಯಂ ತು ಮಾಸತಃ ||
ಸಂವತ್ಸರೇಣಾಶ್ವಮೇಧಂ ಸುಪ್ರಾಪ್ನೋತ್ಯುಪಲೇಪನಾತ್ | (ವಿಷ್ಣುಧರ್ಮವಚನ)

"ದನಗಳನ್ನು ಕಟ್ಟಿರುವ ಕೊಟ್ಟಿಗೆಯಲ್ಲಿ ಅಥವಾ ಶುದ್ಧವಾದ ಪ್ರದೇಶದಲ್ಲಿ ಬಿದ್ದಿರುವ ಸಗಣಿಯನ್ನು ತೆಗೆದುಕೊಳ್ಳಬೇಕು. ಆ ಸಗಣಿಯಲ್ಲಿ ಕೆಳಗಣ ಮತ್ತು ಮೇಲಿನ ಭಾಗವನ್ನು ಬಿಡಬೇಕು. ಉಳಿದ ಸಗಣಿಯಲ್ಲಿಯೂ ಹುಳಗಳಿರಬಾರದು. ಆ ಸಗಣಿಯೂ ಆಗಲೇ ಹಾಕಿದ್ದಾಗಿರಬೇಕು. ಹಳೆಯದಾಗಿರಕೂಡದು. ಆ ಸಗಣಿಯಿಂದ ಶ್ರೀಹರಿಯ ಮಂದಿರವನ್ನು ಸಾರಿಸಬೇಕು. ಹೀಗೆ ಒಂದು ಪಕ್ಷದವರೆಗೆ ಸಾರಿಸುವವನು ಅಗ್ನಿಷ್ಟೋಮದ ಫಲವನ್ನೂ ಒಂದು ತಿಂಗಳಿನವರೆಗೆ ಸಾರಿಸುವವನು ವಾಜಪೇಯಯಾಗದ ಫಲವನ್ನೂ, ಒಂದು ವರ್ಷದವರೆಗೆ ಸಾರಿಸುವವನು ಅಶ್ವಮೇಧಯಾಗದ ಫಲವನ್ನೂ ಪಡೆಯುವನು."

ಉಪಲೇಪನಕರ್ತಾರಃ ಸಂಮಾರ್ಜನಪರಾಶ್ಚ ಯೇ |

ಕೃಷ್ಣಾಲಯೇ ಪರಿತ್ಯಾಜ್ಯಂ ತೇಷಾಂ ತ್ರಿಪುರುಷಂ ಕುಲಮ್ || (ಯಮದೂತರಿಗೆ ಯಮದೇವನ ಆಜ್ಞೆ)

"ಶ್ರೀಕೃಷ್ಣನ ಮಂದಿರದಲ್ಲಿ ಗುಡಿಸುವವನ ಮತ್ತು ಸಾರಿಸುವವನ ವಂಶದಲ್ಲಿ ಅವನಿಂದ ಆರಂಭಿಸಿ ಮೂರು ತಲೆಯವರೆಗೆ ಯಾರನ್ನೂ ನನ್ನ ಪಟ್ಟಣಕ್ಕೆ ಕರೆದುಕೊಂಡು ಬರಬೇಡಿರಿ."

ಅಪಿ ನಃ ಸ್ವಕುಲೇ ಭೂಯಾದ್ವಿಷ್ಣ್ವಾಲಯವಿಲೇಪನಮ್ |

ಸಂಮಾರ್ಜನಂ ಚ ಧರ್ಮಾತ್ಮಾ ಯಃ ಕರಿಷ್ಯತಿ ಭಕ್ತಿತಃ || (ಪಿತೃಗಳ ವಚನ)

"ನಮ್ಮ ವಂಶದಲ್ಲಿ ಯಾರಾದರೂ ಒಬ್ಬನು ಶ್ರೀಹರಿಯ ಮಂದಿರವನ್ನು ಭಕ್ತಿಯಿಂದ ಗುಡಿಸುವವನೂ ಸಾರಿಸುವವನೂ ಆಗಿರುವ ಧರ್ಮಾತ್ಮನು ಹುಟ್ಟುವನೇ ? ಎಂದು ತುಂಬಾ ಆಶಿಸುತ್ತಿರುವೆವು."

ಯಶ್ಚೋಪಲೇಪನಂ ಕುರ್ಯಾದ್ವಿಷ್ಣೋರಾಯತನೇ ನರಃ |

ಸೋಽಪಿ ಲೋಕಂ ಸಮಾಸಾದ್ಯ ಮೋದತೇ ವೈ ಸನಾತನಮ್ || (ವಿಷ್ಣುಧರ್ಮವಚನ)

"ಶ್ರೀಹರಿಯ ಮಂದಿರದಲ್ಲಿ ಸೆಗಣಿಯಿಂದ ಸಾರಿಸುವವನೂ ಸಹ ಶಾಶ್ವತವಾದ ವೈಕುಂಠಲೋಕವನ್ನು ಪಡೆದವನಾಗಿ ಸಂತೋಷಿಸುವನು."

## ಯಾಗಮಂಟಪ ಪ್ರವೇಶ

ಪ್ರಕ್ಷಾಲ್ಯ ಪಾದಾವಾಚಮ್ಯ ಯಾಗಭೂಮಿಂ ವಿಶೇತ್ಸುಧೀಃ || (ಆತ್ರೇಯರ ವಚನ)

"ಶ್ರೀಹರಿಯ ಪೂಜಾಮಂಟಪವು ಯಾಗಭೂಮಿಯೆನಿಸುತ್ತದೆ. ಎರಡು ಕಾಲುಗಳನ್ನು ತೊಳೆದುಕೊಳ್ಳಬೇಕು. ಆಚಮನವನ್ನು ಮಾಡಬೇಕು. ಅನಂತರದಲ್ಲಿ ಯಾಗಭೂಮಿಯನ್ನು ಪ್ರವೇಶಿಸಬೇಕು."

ಪ್ರಕ್ಷಾಲ್ಯ ಪಾದಾವಾಚಮ್ಯ ಪೂಜಾಮಂಟಪಮಾವಿಶೇತ್ || (ಹಾರೀತರ ವಚನ)

"ಎರಡು ಕಾಲುಗಳನ್ನು ತೊಳೆದುಕೊಂಡು ಆಚಮನವನ್ನು ಮಾಡಿ ಪೂಜಾಮಂಟಪವನ್ನು ಪ್ರವೇಶಿಸಬೇಕು."

ಪ್ರಕ್ಷಾಲ್ಯ ಪಾದೌ ಹಸ್ತೌ ತು ಸಮ್ಯಗಾಚಮನಂ ಚರೇತ್ |

ಯಾಗಭೂಮಿಂ ಪ್ರವಿಶ್ಯಾದ್ಭಿಃ ಸಂಪ್ರೋಕ್ಷ್ಯಾಸ್ತ್ರಂ ಚ ವಿನ್ಯಸೇತ್ || (ಪುಷ್ಕರ ವಚನ)

"ಎರಡು ಕಾಲುಗಳನ್ನು ಕೈಗಳನ್ನೂ ಚೆನ್ನಾಗಿ ತೊಳೆದುಕೊಳ್ಳಬೇಕು. ಆಚಮನವನ್ನು ಮಾಡಬೇಕು. ಯಾಗಭೂಮಿಯನ್ನು ಪ್ರವೇಶಿಸಬೇಕು. ಎಲ್ಲಾ ಪೂಜಾಮಂಟಪವನ್ನೂ ನೀರಿನಿಂದ ಪ್ರೋಕ್ಷಿಸಬೇಕು. ಅಸ್ತ್ರಗಳನ್ನು ತೋರಿಸುತ್ತಾ ಆ ಪ್ರದೇಶದಲ್ಲಿ ದೈತ್ಯರು ಪ್ರವೇಶಿಸದಂತೆ ಮಾಡಬೇಕು."

ತತ್ರ ದ್ವಾರಶ್ರಿಯಂ ನತ್ವಾ ಜಯಂ ಚ ವಿಜಯಂ ತಥಾ |

ಬಲಂ ಚ ಪ್ರಬಲಂ ಚೈವ ದ್ವಾರಪಾಲಾಂಶ್ಚ ಪೂಜಯೇತ್ ||

ತದನುಜ್ಞಾಮವಾಪ್ಯಾಥ ತಾಲತ್ರಯಕರೋ ದ್ವಿಜಃ |

ಕವಾಟದ್ವಯಮುನ್ಮೀಲ್ಯ ವಿಶೇದ್ದಕ್ಷಾಂಘ್ರಿಪೂರ್ವಕಮ್ || (ಸ್ಮೃತಿ ವಚನ)

"ಶ್ರೀಹರಿಯ ಮಂದಿರದ ಬಾಗಿಲಿನವರೆಗೆ ಹೋಗಬೇಕು. ಅಲ್ಲಿ "ದ್ವಾರಶ್ರಿಯೈ ನಮಃ" ಎಂದು ಹೇಳುತ್ತಾ ಬಾಗಿಲಿನ ಅಭಿಮಾನಿಯಾಗಿರುವ ಲಕ್ಷ್ಮೀದೇವಿಯನ್ನು ನಮಸ್ಕರಿಸಬೇಕು. "ಜಯಾಯ ನಮಃ" "ವಿಜಯಾಯ ನಮಃ" "ಬಲಾಯ ನಮಃ" "ಪ್ರಬಲಾಯ ನಮಃ" ಎಂದು ಹೇಳುತ್ತಾ ದ್ವಾರಪಾಲಕರನ್ನು ನಮಸ್ಕರಿಸಬೇಕು. ಅವರಿಂದ ಶ್ರೀಹರಿಯ ಮಂದಿರದೊಳಗೆ ಹೋಗುವುದಕ್ಕೆ ಅನುಮತಿಯನ್ನು ಪಡೆಯಬೇಕು. ಮೂರುಸಲ ಕೈಗಳನ್ನು ತಟ್ಟಬೇಕು. ವಾಯುದೇವರ ಮಂತ್ರವನ್ನು

ಉಚ್ಚರಿಸುತ್ತಾ ದೇವರ ಬಾಗಿಲನ್ನು ತೆರೆಯಬೇಕು. ಬಲಗಾಲನ್ನು ಮುಂದಿಡುತ್ತಾ ದೇವಾಲಯದೊಳಗೆ ಪ್ರವೇಶಿಸಬೇಕು." ಅಗ್ನಿಮಂತ್ರದಿಂದ ದೀಪವನ್ನು ಹಚ್ಚಬೇಕು.

**ದೀಪದ ಮಹಿಮೆ**

ಘೃತೇನ ವಾಥ ತೈಲೇನ ದೀಪಂ ಯೋ ಜ್ವಾಲಯೇನ್ನರಃ |
ವಿಷ್ಣವೇ ವಿಧಿವದ್ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ||
ವಿಹಾಯ ಸಕಲಂ ಪಾಪಂ ಸಹಸ್ರಾದಿತ್ಯಸನ್ನಿಭಃ |
ಜ್ಯೋತಿಷ್ಮತಾ ವಿಮಾನೇನ ವಿಷ್ಣುಲೋಕೇ ಮಹೀಯತೇ ||
ನಿಮಿಷಂ ನಿಮಿಷಾರ್ಧಂ ವಾ ಘೃತದೀಪಂ ನಿವೇದಯೇತ್ |
ಕಲ್ಪಕೋಟಿಸಹಸ್ರಾಣಿ ವಿಷ್ಣುಲೋಕೇ ಮಹೀಯತೇ || (ನೃಸಿಂಹಪುರಾಣ ವಚನ)

"ತುಪ್ಪ ಅಥವಾ ಎಣ್ಣೆಯಿಂದ ಶ್ರೀಹರಿಯ ಮುಂದೆ ವಿಧಿಪ್ರಕಾರವಾಗಿ ಭಕ್ತಿಯಿಂದ ದೀಪವನ್ನು ಹಚ್ಚುವವನು ಪಡೆಯುವ ಪುಣ್ಯಫಲವನ್ನು ಕೇಳು. ಎಲ್ಲಾ ಪಾಪಗಳನ್ನೂ ಕಳೆದುಕೊಂಡವನಾಗಿ ತೇಜೋಮಯವಾದ ವಿಮಾನದಲ್ಲಿ ಕುಳಿತವನಾಗಿ ಸಹಸ್ರಸೂರ್ಯನಂತೆ ಪ್ರಕಾಶಿಸಿರುತ್ತಿರುವವನಾಗಿ ವಿಷ್ಣುಲೋಕದಲ್ಲಿ ಸರ್ವರಿಂದಲೂ ಗೌರವಿಸಲ್ಪಡುವನು. ಒಂದು ನಿಮಿಷ ಅಥವಾ ಅರ್ಧನಿಮಿಷದವರೆಗೆ ತುಪ್ಪದ ದೀಪವನ್ನು ಹಚ್ಚುವವನು ಕೋಟಿಸಹಸ್ರಕಲ್ಪಗಳವರೆಗೆ ವಿಷ್ಣುಲೋಕದಲ್ಲಿ ಗೌರವಿಸಲ್ಪಡುವನು."

ದೀಪಮಾರೋಪಯೇದ್ಯಸ್ತು ಯಾಚಿತಂ ಪ್ರಗೃಹೇ ಮಮ |
ಸಂಮಾರ್ಜನಾದಿ ವಾ ಕುರ್ಯಾತ್ತಸ್ಯ ತುಷ್ಟೋಽಸ್ಮ್ಯಹಂ ಸದಾ || (ವಿಷ್ಣುಧರ್ಮೋತ್ತರವಚನ)

"ಅಶಕ್ತನಾದವನು ಬೇಡಿಯಾದರೂ ನನ್ನ ಮಂದಿರದಲ್ಲಿ ದೀಪವನ್ನು ಹಚ್ಚಬೇಕು. ಅಥವಾ ಗುಡಿಸುವುದು ಸಾರಿಸುವುದು ಮುಂತಾದ ಸೇವೆಯನ್ನು ಮಾಡಬೇಕು. ಅವನ ವಿಷಯದಲ್ಲಿ ನಾನು ಯಾವಾಗಲೂ ಸಂತುಷ್ಟನಾಗಿರುವೆನು." ಇದು ಶ್ರೀಹರಿಯು ಹೇಳಿರುವ ವಾಕ್ಯ.

ಭವೇದೇಕಸ್ಯ ದೀಪಸ್ಯ ಭೂಮೌ ರಾಜ್ಯಂ ಭವೇದಿತಿ |
ಬಹೂನಾಂ ತು ಫಲಂ ವಕ್ತುಮಹಂ ನಾರ್ಹಾಮಿ ಪಾರ್ವತಿ ||
ಸಂಮಾರ್ಜನೇ ಶತಂ ಪುಣ್ಯಂ ಸಹಸ್ರಮನುಲೇಪನಾತ್ |
ಮಾಲಾಶತಸಹಸ್ರಂ ತು ಅನಂತಂ ದೀಪಮುಚ್ಯತೇ ||
ಮೇರುಮಂದರಮಾತ್ರೇಣ ಕೃತಾಃ ಪಾಪಸ್ಯ ರಾಶಯಃ |
ದಹ್ಯಂತೇ ನಾತ್ರ ಸಂದೇಹೋ ದೀಪದಾನೇನ ಕಾರ್ತಿಕೇ || (ಪದ್ಮಪುರಾಣವಚನ)

ಎಲೌ ಪಾರ್ವತಿಯೇ, ಒಂದು ದೀಪವನ್ನು ಶ್ರೀಹರಿಗೆ ಸಮರ್ಪಿಸಿದವನು ಮುಂದಿನ ಜನ್ಮದಲ್ಲಿ ಭೂಮಿಯಲ್ಲಿ ರಾಜನಾಗಿ ಹುಟ್ಟುವನು. ಹೀಗಿರುವಾಗ ಅನೇಕದೀಪಗಳನ್ನು ಹಚ್ಚುವವನಿಗೆ ಬರುವ ಫಲವನ್ನು ಹೇಳಲು ನಾನು ಶಕ್ತನಲ್ಲ. ಶ್ರೀಹರಿಗೆ ನೂರು ಪುಷ್ಪದ ಮಾಲೆಗಳನ್ನು ಸಮರ್ಪಿಸಿದ್ದರಿಂದ ಬರುವ ಫಲವು ದೇವಾಲಯವನ್ನು ಒಮ್ಮೆ ಗುಡಿಸಿದ್ದರಿಂದಲೂ, ಸಾವಿರಮಾಲೆಗಳನ್ನು ಸಮರ್ಪಿಸಿದ್ದರಿಂದ ಬರುವ ಫಲವು ಒಮ್ಮೆ ಸಗಣಿಯಿಂದ ಸಾರಿಸಿದ್ದರಿಂದಲೂ, ಲಕ್ಷಮಾಲೆಗಳನ್ನು ಸಮರ್ಪಿಸಿದ್ದರಿಂದ ಬರುವ ಫಲವು ಹೆಚ್ಚೇಕೆ ? ಅನಂತಫಲವು ದೀಪಸಮರ್ಪಣೆಯಿಂದಲೂ ಬರುತ್ತವೆ. ಕಾರ್ತಿಕಮಾಸದಲ್ಲಿ ದೀಪದಾನ ಮಾಡಿದ್ದರಿಂದ ಮೇರುಮಂದರಪರ್ವತದಷ್ಟು ಅಧಿಕಪಾಪರಾಶಿಗಳು ಭಸ್ಮವಾಗುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ." ಇದು ಪಾರ್ವತಿಯನ್ನು ಕುರಿತು ರುದ್ರದೇವನು ಹೇಳಿದ ಮಾತು.

ವಿಷ್ಣ್ವಾಲಯೆ ತು ಕಾರ್ತಿಕ್ಯಾಂ ದೀಪದಾನಂ ಕರೋತಿ ಯಃ |
ಸ ಸಪ್ತಕುಲಸಂಯುಕ್ತೋ ವಿಷ್ಣುಲೋಕೇ ಮಹೀಯತೇ || (ನೃಸಿಂಹಪುರಾಣ ವಚನ)

"ಕಾರ್ತಿಕಪೂರ್ಣಿಮಾ ದಿನದಲ್ಲಿ ವಿಷ್ಣುಮಂದಿರದಲ್ಲಿ ದೀಪವನ್ನು ಹಚ್ಚುವವನು ಏಳು ತಲೆಯವರೆಗೆ ವಿಷ್ಣುಲೋಕದಲ್ಲಿ ಗೌರವಿಸಲ್ಪಡುವನು."

ಕುರ್ವತಃ ಕಾರ್ತಿಕೇ ಮಾಸಿ ವಿಷ್ಣೋರ್ದೀಪಂ ಹಿ ಮಂದಿರೇ |
ಆಜನ್ಮತಃ ಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ||

"ಕಾರ್ತಿಕಮಾಸದಲ್ಲಿ ವಿಷ್ಣುವಿನ ಮಂದಿರದಲ್ಲಿ ದೀಪವನ್ನು ಹಚ್ಚು. ಇದರಿಂದ ಹುಟ್ಟಿದ ದಿನದಿಂದ ಮಾಡಿರುವ ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಪಡೆಯುವಿ. ಈ ವಿಷಯದಲ್ಲಿ ಸಂಶಯವಿಲ್ಲ."

ಯಸ್ತು ವಿಷ್ಣುಗೃಹೇ ದತ್ತಂ ದೀಪಂ ದೃಷ್ಟ್ವಾऽನುಮೋದತೇ |
ಸೋऽಪಿ ತತ್ಫಲಮಾಪ್ನೋತಿ ಕಿಂ ಪುನರ್ದೀಪದಾನತಃ ||

ವಿಷ್ಣುಮಂದಿರದಲ್ಲಿ ಇನ್ನೊಬ್ಬನಿಂದ ಹಚ್ಚಲ್ಪಟ್ಟ ದೀಪವನ್ನು ನೋಡಿ ಸಂತೋಷಿಸಿದವನೂ ಸಹ ದೀಪವನ್ನು ಹಚ್ಚಿದವನ ಫಲವನ್ನು ಪಡೆಯುವನು. ಹೀಗಿರುವಾಗ ತಾವಾಗಿಯೇ ದೀಪವನ್ನು ಹಚ್ಚಿದವನು ಆ ಫಲವನ್ನು ಪಡೆಯುವನೆಂದು ಹೇಳಬೇಕಾದ್ದೇನಿದೆ?"

## ದೀಪದಾನವನ್ನು ನಿಲ್ಲಿಸಕೂಡದು

ತಸ್ಮಾದಾಯತನೇ ವಿಷ್ಣೋರ್ದಶಾಂ ದದ್ಯಾದ್ದ್ವಿಜೋತ್ತಮಾಃ |
ತಾಂಶ್ಚ ದತ್ವಾನ್ನ ಹಿಂಸ್ಯಾತ್ತು ನೈವ ತೈಲವಿಯೋಜಿತಾನ್ ||
ಕುರ್ವೀತ ದೀಪಹರ್ತಾ ಚ ಮೂಕೋऽಂಧೋ ಜಾಯತೇ ಜಡಃ |
ಆರೋಪಿತಂ ಪ್ರದೀಪಂ ಯೋ ನಯತ್ಯನ್ಯತ್ರ ಮಂದಿರಾತ್ ||
ಅಂಧಾಸ್ತೇ ತು ಭವಿಷ್ಯಂತಿ ಮೂಕಾ ವೈ ಜನ್ಮಪಂಚಕೇ | (ಪುಲಸ್ತ್ಯರ ವಚನ)

ವಿಷ್ಣುಮಂದಿರದಲ್ಲಿ ದೀಪಕ್ಕಾಗಿ ಕೊಡಲ್ಪಟ್ಟ ಬತ್ತಿಗಳನ್ನೂ, ದೀಪಗಳನ್ನೂ ಎಣ್ಣೆಗಳನ್ನೂ ಅಪಹರಿಸಕೂಡದು. ಹಾಗೆ ಮಾಡುವವನು ಮೂಕನೂ ಕುರುಡನೂ, ಬುದ್ಧಿಶೂನ್ಯನೂ ಆಗುವನು. ದೇವರ ಮುಂದೆ ಹಚ್ಚಿರುವ ದೀಪವನ್ನು ದೇವಾಲಯದಿಂದ ಬೇರೆ ಕಡೆಗೆ ತೆಗೆದುಕೊಂಡು ಹೋಗುವವರು ಐದು ಜನ್ಮಗಳಲ್ಲಿ ಮೂಕರಾಗುವರು.

ಕೃತ್ವಾ ನೀರಾಜನಂ ವಿಷ್ಣೋರ್ದೀಪವಲ್ಯಾऽನುವೃತ್ತಯಾ |
ತಮೋವಿಕಾರಂ ಜಯತಿ ಜಿತೇ ತಸ್ಮಿಂಶ್ಚ ಕೋ ಭವಃ ||
ಘೃತಾಭಾವೇ ತು ತೈಲಂ ವಾ ತೈಲಾಭಾವೇ ತಥಾ ದಶಾಮ್ |
ತಯೋರಭಾವೇ ಪಾತ್ರಂ ವಾ ಯೋ ದದ್ಯಾತ್ಸೋऽಪಿ ದೀಪವಾನ್ || (ನಾರದೀಯವಚನ)

ವಿಷ್ಣುವಿಗೆ ಆರತಿಯನ್ನು ಮಾಡಬೇಕು. ಶಾಶ್ವತವಾಗಿ ಸಾಲುದೀಪಗಳನ್ನು ಹಚ್ಚಬೇಕು. ಹೀಗೆ ಮಾಡುವವನು ಕತ್ತಲೆಯಂತೆ ಜ್ಞಾನಕ್ಕೆ ಪ್ರತಿಬಂಧಕವಾಗಿರುವ ವಿಪರೀತಜ್ಞಾನವನ್ನು ಜಯಿಸುವನು. ವಿಪರೀತಜ್ಞಾನವನ್ನು ಜಯಿಸಿದವನಿಗೆ ಸಂಸಾರವಿಲ್ಲ. ದೀಪಕ್ಕಾಗಿ ತುಪ್ಪವನ್ನು ಕೊಡಬೇಕು. ತುಪ್ಪವಿಲ್ಲದಿದ್ದರೆ ಎಣ್ಣೆಯನ್ನಾದರೂ ಕೊಡಬೇಕು. ಎಣ್ಣೆ ಇಲ್ಲದಿದ್ದರೆ ಬತ್ತಿಯನ್ನು ಕೊಡಬೇಕು. ಬತ್ತಿಯೂ ಇಲ್ಲದಿದ್ದರೆ ದೀಪವನ್ನು ಹಚ್ಚುವುದಕ್ಕಾಗಿ ಪಾತ್ರೆಯನ್ನು ಕೊಡಬೇಕು. ಹೀಗೆ ಮಾಡುವವನು ದೀಪದಾನದ ಫಲವನ್ನು ಪಡೆಯುವನು.

ತಿಷ್ಠಂತಿ ಬಹುವಿತ್ತಾನಿ ಕರ್ಮಾಣಿ ವರವರ್ಣಿನಿ |
ಹೃದಯಾಯಾಸಕಾರೀಣಿ ದೀಪದಾನಾದಿಕಂ ಕುರು ||
ಏಕತಃ ಸರ್ವದಾನಾನಿ ದೀಪದಾನಮಥೈಕತಃ |
ಕಾರ್ತಿಕೇ ನ ಸಮಂ ಪ್ರೋಕ್ತಂ ದೀಪಕೋಟ್ಯಧಿಕಂ ಸ್ಮೃತಮ್ || (ನೃಸಿಂಹಪುರಾಣವಚನ)

ಎಷ್ಟೋ ಪುಣ್ಯಕರ್ಮಗಳಿವೆ. ಅವುಗಳೆಲ್ಲಾ ಹೆಚ್ಚಿನ ಹಣದ ಖರ್ಚಿನಿಂದ ಸಾಧ್ಯವಾದವುಗಳು. ಅವುಗಳನ್ನು ಮಾಡುವಾಗ ಹೃದಯಕ್ಕೆ ಆಯಾಸವನ್ನು ಕೊಡತಕ್ಕವುಗಳು. ದೀಪದಾನ ಮುಂತಾದವುಗಳು ಅತ್ಯಂತ ಸುಲಭ ಸಾಧ್ಯವಾದವುಗಳು. ಅವುಗಳನ್ನು ಮಾಡು. ತ್ರಾಸಿನಲ್ಲಿ ಸಕಲದಾನಗಳನ್ನೂ ಒಂದು ಪಕ್ಕದಲ್ಲಿ ಇಟ್ಟು ದೀಪದಾನವನ್ನು ಇನ್ನೊಂದು ಪಕ್ಕದಲ್ಲಿ ಇಟ್ಟು ಪರೀಕ್ಷಿಸಿದಾಗ ದೀಪದಾನಕ್ಕೆ ಇತರ ದಾನಗಳು ಸಮವಾಗಲಾರವು. ಕಾರ್ತಿಕಮಾಸದಲ್ಲಿ ಕೊಡುವ ಒಂದು ದೀಪದಾನವು ಕೋಟಿದೀಪದಾನಗಳಿಗಿಂತ ಅಧಿಕವೆಂದೂ ತಿಳಿಯಬೇಕು.

## ಭೂತೋಚ್ಚಾಟನಾದಿಗಳು

ನಿರೀಕ್ಷ್ಯ ಪುಷ್ಪಕ್ಷೇಪೇಣ ಪಾಣಿಘಾತತ್ರಯೇಣ ಚ |
ದಿವ್ಯಾಂತರಿಕ್ಷ ಭೂಮಿಷ್ಠಾನ್ವಿಘ್ನಾನುತ್ಸಾದಯೇತ್ಸುಧೀಃ ||
ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ |
ಯೇ ಭೂತಾ ವಿಘ್ನಕರ್ತಾರಸ್ತೇ ನಶ್ಯಂತ್ವಾಜ್ಞಯಾ ಹರೇಃ ||

ಹಿಂದೆ ದೇವಾಲಯದ ಬಾಗಿಲನ್ನು ತೆರೆಯುವ ವಿಧಿಯನ್ನೂ ದೀಪವನ್ನು ಹಚ್ಚುವ ಅವಶ್ಯಕತೆ ಮತ್ತು ವಿಧಾನವನ್ನೂ ತಿಳಿಸಿದ್ದಾಯಿತು. ಇನ್ನು ಮುಂದೆ ಪೂಜೆಗೆ ಪ್ರತಿಬಂಧಕರಾಗಿರುವ ಭೂತಗಳನ್ನು ಓಡಿಸುವ ವಿಧಿಯನ್ನು ಹೇಳುವೆವು. "ಎರಡು ಕೈಯಲ್ಲಿ ಪುಷ್ಪಗಳನ್ನು ತೆಗೆದುಕೊಂಡು ಆ ಪುಷ್ಪಗಳನ್ನು ಶ್ರೀಹರಿಯ ಮೇಲೆ ಚೆಲ್ಲಬೇಕು. ಮೂರುಸಲ ಕೈಗಳನ್ನು ತಟ್ಟಬೇಕು. ಹಾಗೆ ತಟ್ಟಿದ್ದರಿಂದ ದೇವಲೋಕ, ಅಂತರಿಕ್ಷಲೋಕ ಮತ್ತು ಭೂಲೋಕಗಳಲ್ಲಿರುವ ಯಾವ ಭೂತಗಳು ನಮ್ಮಿಂದ ಮಾಡಲ್ಪಡುವ ಶ್ರೀಹರಿಪೂಜೆ ಮುಂತಾದ ಪುಣ್ಯಕರ್ಮಗಳಿಗೆ ವಿಘ್ನಗಳನ್ನು ಮಾಡುತ್ತಿರುತ್ತವೆಯೋ ಆ ಭೂತಗಳು ದೂರಕ್ಕೆ ಸರಿಯುತ್ತವೆ. ಕೈಗಳನ್ನು ಮೂರುಸಲ ತಟ್ಟಿಬಿಟ್ಟು "ಅಪಸರ್ಪಂತು" ಎಂಬ ಮಂತ್ರವನ್ನು ಪಠನ ಮಾಡಬೇಕು. "ಶ್ರೀಹರಿಯ ಆಜ್ಞೆಯಿಂದ ಎಲ್ಲಾ ಭೂತಗಳೂ ಓಡಿಹೋಗಲಿ" ಎಂದು ಆ ಮಂತ್ರದ ಅರ್ಥ. ಅನಂತರದಲ್ಲಿ ಶ್ರೀಹರಿಯ ಮುಖಕ್ಕೆ ಮುಚ್ಚಿರುವ ವಸ್ತ್ರವನ್ನು ತೆಗೆಯಬೇಕು. ಎರಡು ಕೈಗಳನ್ನು ಜೋಡಿಸಿಕೊಂಡು ದೇವರ ಮುಂದೆ ನಿಲ್ಲಬೇಕು. "ಸ್ವಾಮಿನ್, ಕೃಪಯಾ ಪೂಜಾರ್ಥಂ ತಿಷ್ಠ" ಅಂದರೆ "ಓ ಮಹಾಸ್ವಾಮಿಯೇ, ಕೃಪೆಯಿಂದ ಪೂಜೆಯನ್ನು ನನ್ನಿಂದ ಸ್ವೀಕರಿಸುವುದಕ್ಕಾಗಿ ಈ ವಿಗ್ರಹದಲ್ಲಿ ಸನ್ನಿಹಿತನಾಗಿರು" ಎಂದು ಪ್ರಾರ್ಥಿಸಬೇಕು. ಆ ಮೇಲೆ ಮಲಗಿರುವ ಶ್ರೀಹರಿಯನ್ನು ಎಬ್ಬಿಸಬೇಕು.

ಆಯತಾಭ್ಯಾಂ ವಿಶಾಲಾಭ್ಯಾಂ ಶೀತಲಾಭ್ಯಾಂ ಕೃಪಾನಿಧೇ |
ಕರುಣಾರಸಪೂರ್ಣಾಭ್ಯಾಂ ಲೋಚನಾಭ್ಯಾಂ ವಿಲೋಕಯ ||

"ಓ ಕೃಪಾಸಮುದ್ರನಾದ ಶ್ರೀಹರಿಯೇ, ನಿನ್ನ ಎರಡು ಕಣ್ಣುಗಳೂ ನೀಳವಾಗಿವೆ ಮತ್ತು ಅಗಲವಾಗಿವೆ. ಕರುಣಾ ರಸಪೂರ್ಣವಾಗಿವೆ. ಅವುಗಳಿಂದ ನನ್ನನ್ನು ನೋಡು" ಎಂದು ಪ್ರಾರ್ಥಿಸಬೇಕು.

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ |
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ||

ಅನೇನ ದಂಡವದ್ಭೂಮೌ ಕೃತಾಂಜಲಿಪುರಃ ಸರಃ |
ಪ್ರಣಮ್ಯೋತ್ಥಾಯ ಕುರ್ವೀತ ಮಸ್ತಕಾಂಜಲಿಸಂಪುಟಮ್ ||

"ನಮೋ ಬ್ರಹ್ಮಣ್ಯದೇವಾಯ" ಎಂಬ ಮಂತ್ರವನ್ನು ಹೇಳುತ್ತಾ ಸಾಷ್ಟಾಂಗ ದಂಡಪ್ರಣಾಮವನ್ನು ಮಾಡಬೇಕು. ಎರಡು ಕೈಗಳನ್ನು ಜೋಡಿಸಿಕೊಂಡು ಎದ್ದು ನಿಲ್ಲಬೇಕು. ಎರಡು ಕೈಗಳನ್ನು ಜೋಡಿಸಿ ತಲೆಯ ಮೇಲೆ ಇಟ್ಟುಕೊಂಡು ತನ್ನಿಂದ ಮಾಡಲ್ಪಡುತ್ತಿರುವ ಅಪರಾಧಗಳನ್ನು ಕ್ಷಮಿಸಬೇಕೆಂದು ಮುಂದಿನ ಶ್ಲೋಕದಲ್ಲಿ ಹೇಳಿದಂತೆ ಪ್ರಾರ್ಥಿಸಬೇಕು.

ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ |
ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಪುರುಷೋತ್ತಮ ||
ಕೃತಾಂಜಲಿಪುಟೋ ಭೂತ್ವಾ ವಿನಯಾನತಕಂಧರಃ |
ಮಾನಸಾನ್ ವಾಚಿಕಾನ್ ದೋಷಾನ್ ಕಾಯಿಕಾನಪಿ ಸರ್ವದಾ |
ವೈಷ್ಣವದ್ವೇಷಹೇತೂನ್ಮೇ ಭಸ್ಮಸಾತ್ಕುರು ಮಾಧವ ||

"ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಎಡೆಬಿಡದೆ ಸಾವಿರಗಟ್ಟಲೆ ಅಪರಾಧಗಳನ್ನು ಮಾಡುತ್ತಿರುವೆನು. ಅವುಗಳನ್ನೆಲ್ಲವನ್ನೂ ಪುರುಷೋತ್ತಮನಾದ ನೀನು ಕ್ಷಮಿಸು." ಎಂದು ಪ್ರಾರ್ಥಿಸುತ್ತಾ ತನ್ನ ಅಪರಾಧಗಳನ್ನು ಶ್ರೀಹರಿಯಲ್ಲಿ ಸಮರ್ಪಿಸಬೇಕು. ಎರಡು ಕೈಗಳನ್ನೂ ಜೋಡಿಸಿಕೊಂಡು ವಿನಯದಿಂದ ತಲೆಯನ್ನು ಬಗ್ಗಿಸಿದವನಾಗಿ "ಓ ದೇವ, ನನ್ನ ಮನಸ್ಸಿನಿಂದಲೂ ಮಾತುಗಳಿಂದಲೂ ದೇಹದಿಂದಲೂ ವೈಷ್ಣವರನ್ನು ದ್ವೇಷಿಸುವುದಕ್ಕೆ ಕಾರಣವಾಗಿರುವ ತ್ರಿವಿಧವಾದ ಅಪರಾಧಗಳನ್ನು ಮಾಡುತ್ತಿರುವೆನು. ಅವುಗಳನ್ನೆಲ್ಲವನ್ನೂ ಭಸ್ಮವಾಗುವಂತೆ ಮಾಡು" ಎಂದು ಹೇಳುತ್ತಾ ತನ್ನ ದೋಷಗಳನ್ನು ಕ್ಷಮಿಸುವಂತೆ ಮಾಡಬೇಕು."

## ಘಂಟೆಯನ್ನು ಬಾರಿಸುವುದು

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ |
ಕುರು ಘಂಟಾರವಂ ತತ್ರ ದೇವತಾಹ್ವಾನಲಾಂಛನಂ ||
ಅಜ್ಞಾನಾಜ್ಞಾನತೋ ವಾಪಿ ಕಾಂಸ್ಯಘಂಟಾಂ ನ ವಾದಯೇತ್ |
ರಾಕ್ಷಸಾನಾಂ ಪಿಶಾಚಾನಾಂ ತದ್ದೇಶೇ ವಸತಿರ್ಭವೇತ್ |
ತಸ್ಮಾತ್ಸರ್ವಪ್ರಯತ್ನೇನ ಘಂಟಾಮಾಚಲ್ಯ ಪೂಜಯೇತ್ || (ಮಹಾಪುರುಷಸಂಹಿತಾವಚನ)

ಘಂಟೆಯನ್ನು ಬಾರಿಸುವುದು ದೇವತೆಗಳನ್ನು ಕರೆಯುವುದಕ್ಕೆ ಗುರುತೆನಿಸುತ್ತದೆ. ಕಂಚಿನ ಗಂಟೆಯ ಧ್ವನಿಯು ಏರ್ಪಡುವ ಸ್ಥಳದಲ್ಲಿ ರಾಕ್ಷಸರು ಪಿಶಾಚಗಳು ಬಂದು ಸೇರುವರು. ಆದ್ದರಿಂದ ಕಂಚಿನ ಗಂಟೆಯನ್ನು ಪೂಜಾಕಾಲದಲ್ಲಿ ಈ ವಿಷಯವನ್ನು ತಿಳಿದವನೂ, ತಿಳಿಯದವನೂ ಬಾರಿಸಕೂಡದು. ರಾಕ್ಷಸರು ಮತ್ತು ಪಿಶಾಚಗಳು ಪೂಜಾಗೃಹದಲ್ಲಿ ಪೂಜೆ ಮಾಡುವವರನ್ನು ಮುಟ್ಟಿ ಮೈಲಿಗೆ ಮಾಡುವುದಕ್ಕೋಸ್ಕರ ಕಾದಿರುವರು. ಅವರನ್ನು ಓಡಿಸುವುದಕ್ಕಾಗಿಯೂ, ದೇವತೆಗಳನ್ನು ಕರೆಯುವುದಕ್ಕೂ ಪೂಜಾರಂಭ ಕಾಲದಲ್ಲಿ ಗಂಟೆಯನ್ನು ಬಾರಿಸಲೇಬೇಕು.

## ಮಂಟಪಧ್ಯಾನ

ಉತ್ತಪ್ತೋಜ್ಜ್ವಲಕಾಂಚನೇನ ರಚಿತಂ ತುಂಗಾಂಗರಂಗಸ್ಥಲಂ
ಶುದ್ಧಸ್ಫಾಟಿಕಭಿತ್ತಿಕಾವಿಲಸಿತೈಃ ಸ್ತಂಭೈಶ್ಚ ಹೈಮ್ಯೈಃ ಶುಭೈಃ |
ದ್ವಾರೈಶ್ಚಾಮರರತ್ನರಾಜಿಖಚಿತೈಃ ಶೋಭಾವಹಂ ಮಂಡಿತಂ
ರತ್ನಾಗ್ರೈರಪಿ ಶಂಖಪದ್ಮಧವಲೈಃ ಪ್ರಭ್ರಾಜಿತಂ ಸ್ವಸ್ತಿಕೈಃ ||

ಮುಕ್ತಾಜಾಲವಿಲಂಬಿಮಂಟಪಯುತೈರ್ವಜ್ರೈಶ್ಚ ಸೋಪಾನಕೈಃ |
ನಾನಾರತ್ನವಿನಿರ್ಮಿತೈಶ್ಚ ಕಲಶೈರತ್ಯಂತಶೋಭಾವಹಮ್ |
ಮಾಣಿಕ್ಯೋಜ್ಜ್ವಲದೀಪ ದೀಪ್ತಿವಿಲಸಲ್ಲಕ್ಷ್ಮೀವಿಲಾಸಾಸ್ಪದಂ
ಧ್ಯಾಯೇನ್ಮಂಟಪಮರ್ಚನೇಷು ಸಕಲೈರೇವಂವಿಧಂ ಸಾಧಕಃ ||
ಸಂಮಾರ್ಜನಂ ರಂಗವಲ್ಲ್ಯಾ ಧ್ವಜಕೌತುಕತೋರಣೈಃ |
ಸವಿತಾನೇಕ್ಷುಕದಲೀಪೂರ್ಣಕುಂಭಾಂಕುರಾದಿಭಿಃ ||
ಗೀತವಾದಿತ್ರನೃತ್ತೈಶ್ಚ ಪುರಾಣಪಠನೈಸ್ತಥಾ |
ಶೋಭಮಾನಂ ಮಹಾಪುಣ್ಯವರ್ಧನಂ ಸುಮನೋಹರಮ್ || (ಕರ್ಮಕ್ರಮದೀಪಿಕಾವಚನ)

"ಶ್ರೀವಿಷ್ಣುವಿನ ವಿಶೇಷಾನುಗ್ರಹವನ್ನು ಸಂಪಾದಿಸಬೇಕೆಂಬ ಆಸೆಯಿಂದ ಯುಕ್ತನಾಗಿರುವ ಸಾಧಕನು ಪೂಜಾಕಾಲದಲ್ಲಿ ಶ್ರೀಹರಿಯು ಕುಳಿತಿರುವ ಮಂಟಪವನ್ನು ಹೀಗೆ ಧ್ಯಾನಿಸಬೇಕು. ಆ ಮಂಟಪವು ಅತ್ಯಂತ ಪ್ರಕಾಶವುಳ್ಳ, ಭಂಗಾರವು ಕುದಿಯುತ್ತಿರುವಾಗ ಯಾವ ಬಣ್ಣವುಳ್ಳದ್ದಾಗಿರುತ್ತದೆಯೋ ಆ ಬಣ್ಣದಿಂದ ಯುಕ್ತವಾಗಿರಬೇಕು. ಆ ಮಂಟಪದ ಮಧ್ಯದಲ್ಲಿ ಎತ್ತರವಾದ ರಂಗಸ್ಥಳದಲ್ಲಿ ಶ್ರೀಹರಿಯು ಭಕ್ತರಿಗೆ ಬೇಕಾದ ಇಷ್ಟಾರ್ಥಗಳನ್ನು ಕೊಡುತ್ತಾ ಕುಳಿತಿರಬೇಕು. ಶುದ್ಧ ಸ್ಫಟಿಕಮಣಿಗಳಿಂದ ನಿರ್ಮಿತವಾದ ಗೋಡೆಗಳಿಂದ ಯುಕ್ತವಾಗಿರುವ ಆ ಮಂಟಪದಲ್ಲಿ ಭಂಗಾರದಿಂದ ನಿರ್ಮಿತವಾದ ಸುಂದರವಾದ ಕಂಬಗಳಿರಬೇಕು. ದೇವತೆಗಳಲ್ಲಿರುವ ಶ್ರೇಷ್ಠವಾದ ರತ್ನಗಳಿಂದ ನಿರ್ಮಿತವಾದ ಬಾಗಿಲುಗಳಿಂದ ಶೋಭಿಸುತ್ತಿರಬೇಕು. ಶಂಖದಂತೆಯೂ ಪದ್ಮದಂತೆಯೂ ಶೋಭಿಸುತ್ತಿರುವ ಶ್ರೇಷ್ಠವಾದ ರತ್ನಗಳಿಂದ ಶೋಭಿಸುತ್ತಿರಬೇಕು. ಸ್ವಸ್ತಿಕ ಚಿಹ್ನೆಗಳಿಂದಲೂ ಮುತ್ತಿನ ಮಾಲೆಗಳಿಂದಲೂ ಶೋಭಿಸುತ್ತಿರಬೇಕು. ವಜ್ರದ ಮೆಟ್ಟಿಲುಗಳಿಂದಲೂ ನಾನಾವಿಧವಾದ ರತ್ನಗಳಿಂದ ರಚಿತವಾದ ಕಲಶಗಳಿಂದಲೂ ಅತ್ಯಂತವಾಗಿ ಶೋಭಿಸುತ್ತಿರಬೇಕು. ಮಾಣಿಕ್ಯದಂತೆ ಹೊಳೆಯುತ್ತಿರುವ ದೀಪಗಳಿಂದ ಪ್ರಕಾಶಿಸುತ್ತಿರಬೇಕು. ಲಕ್ಷ್ಮೀದೇವಿಯರು ನಾನಾರೂಪಗಳಿಂದ ಶ್ರೀಹರಿಯನ್ನು ಸೇವಿಸುತ್ತಿರಬೇಕು. ಗುಡಿಸಿ ಸಾರಿಸಿರುವ ಆ ಮಂಟಪದಲ್ಲಿ ರಂಗವಲ್ಲಿಯಿಂದ ಅಲಂಕಾರವನ್ನು ಮಾಡಿರಬೇಕು. ಧ್ವಜಸ್ತಂಭಗಳು, ಸುಂದರವಾದ ತೋರಣಗಳು ಮೇಲ್ಕಟ್ಟುಗಳು, ಕಬ್ಬಿನ ಗಿಡಗಳು, ಬಾಳೆ ಕಂಬಗಳು, ಪೂರ್ಣಕುಂಭಗಳು ಮುಂತಾದ ಮಂಗಲವಸ್ತುಗಳಿಂದ ಅಲಂಕೃತವಾಗಿರಬೇಕು. ಸಂಗೀತ, ವಾದ್ಯಗಳು, ನರ್ತನಗಳು, ಪುರಾಣ ಪ್ರವಚನಗಳು, ಮುಂತಾದ ಪುಣ್ಯವರ್ಧಕವಸ್ತುಗಳಿಂದ ಯುಕ್ತವಾಗಿದ್ದು ಪುಣ್ಯವರ್ಧಕವೂ ಪರಮಸುಂದರವೂ ಆಗಿರಬೇಕು. ಅಂತಹ ಮಂಟಪವನ್ನು ಧ್ಯಾನಮಾಡಿ ಕೊಂಡು ಶ್ರೀಹರಿಯನ್ನು ಆ ಮಂಟಪದಲ್ಲಿ ಪೂಜಿಸಬೇಕು."

ವಿತಾನಾದಿಸುಶೋಭಾದ್ಯೈರ್ದಿವ್ಯೈರ್ಧೂಪೈಃ ಸುಶೋಭಿತೇ |
ಚಂದನಾಗುರುಕರ್ಪೂರಕಸ್ತೂರ್ಯಾಮೋದಸಂಯುತೇ ||
ದೀಪೈರ್ವಿರಾಜಿತೇ ರತ್ನೈ ರಂಗವಲ್ಲ್ಯಾ ವಿಚಿತ್ರಿತೇ |
ತಸ್ಮಿನ್ ಪೀಠೇ ಸುವಿಸ್ತೀರ್ಣೇ ಪರ್ಯಂಕೇ ಪುಷ್ಪಶೋಭಿತೇ || (ಹಾರೀತರ ವಚನ)

"ಶ್ರೀಹರಿಯು ಮೇಲ್ಕಟ್ಟಿನ ಬಟ್ಟೆಗಳಿಂದ ಶೋಭಿತವಾಗಿರುವ, ಪುಷ್ಪಗಳನ್ನು ಚೆಲ್ಲಲ್ಪಟ್ಟ ಹಾಸಿಗೆಯಲ್ಲಿ ಕುಳಿತಿರುವನು. ಆ ಹಾಸಿಗೆಯು ಬಿಳಿ ಗಂಧ, ಅಗುರುಗಂಧ, ಪಚ್ಚಕರ್ಪೂರ, ಕಸ್ತೂರಿ ಮುಂತಾದ ಸುಗಂಧ ದ್ರವ್ಯಗಳ ಪರಿಮಳದಿಂದ ಯುಕ್ತವಾಗಿದೆ. ರತ್ನಮಯವಾದ ದೀಪಗಳಿಂದ ಪ್ರಕಾಶಿಸುತ್ತಿದೆ. ರಂಗವಲ್ಲಿಯಿಂದ ಅಲಂಕೃತವಾಗಿದೆ. ವಿಶಾಲವಾಗಿದೆ. ಹಳದಿಬಣ್ಣದಿಂದ ಯುಕ್ತವಾಗಿದೆ."

ಉಪವಿಷ್ಟಂ ಗೃಹೇ ರಮ್ಯೇ ರಂಗವಲ್ಯಾದಿಶೋಭಿತೇ |
ವಿತಾನಾದಿಸುಶೋಭಾಢ್ಯೇ ಶುಭ್ರೈರ್ದಿವ್ಯೈರ್ವಿರಾಜಿತೇ ||
ಚಂದನಾಗುರುಕರ್ಪೂರಕಸ್ತೂರ್ಯಾಮೋದಸಂಯುತೇ |
ಸುಪುಷ್ಪಮಂಟಪೇ ತಸ್ಮಿನ್ನರ್ಚಯೇತ್ಶ್ರೀಶಕೇ ಶುಭೇ || (ವಸಿಷ್ಠರ ವಚನ)

"ಅತ್ಯಂತ ಶ್ರೇಷ್ಠವಾಗಿರುವ ಪುಷ್ಪಮಂಟಪದಲ್ಲಿ ಕುಳಿತಿರುವ ಮತ್ತು ಲಕ್ಷ್ಮೀದೇವಿಯರಿಂದ ಪೂಜಿಸಲ್ಪಡುತ್ತಿರುವ ಶ್ರೀಹರಿಯನ್ನು ಪೂಜಿಸಬೇಕು. ಆ ಪುಷ್ಪಮಂಟಪವು ರಂಗವಲ್ಲಿ ಮುಂತಾದವುಗಳಿಂದ ಅಲಂಕೃತವಾಗಿದೆ. ಮೇಲ್ಕಟ್ಟು ಮುಂತಾದ ಅಲಂಕಾರದ್ರವ್ಯಗಳಿಂದ ಶೋಭಿತವಾಗಿದೆ. ಚಂದನ, ಅಗುರುಗಂಧ, ಪಚ್ಚಕರ್ಪೂರ, ಕಸ್ತೂರಿ ಮುಂತಾದ ಸುಗಂಧದ್ರವ್ಯಗಳ ಸುಗಂಧದಿಂದ ಪರಿಮಳಿತವಾಗಿದೆ."

## ನಿರ್ಮಾಲ್ಯ ವಿಸರ್ಜನೆ

ದೇವರ ಮುಂದೆ ಪೂರ್ವಾಭಿಮುಖವಾಗಿಯಾಗಲೀ ಬಲಭಾಗದಲ್ಲಿ ಪೂರ್ವ ಅಥವಾ ಉತ್ತರವನ್ನು ನೋಡುತ್ತಾ ದೇವರಿಗೆ ಅಭಿಮುಖವಾಗಿಯಾಗಲೀ ಕುಳಿತುಕೊಳ್ಳಬೇಕು. ದೇವರ ಸಂಪುಟವನ್ನು ತೆಗೆದುಕೊಂಡು "ನಾರಾಯಣಾಯ ವಿದ್ಮಹೇ, ವಾಸುದೇವಾಯ ಧೀಮಹಿ, ತನ್ನೋ ವಿಷ್ಣುಃ ಪ್ರಚೋದಯಾತ್, ಎಂಬ ವಿಷ್ಣುಗಾಯತ್ರಿಯಿಂದಲೂ", ಓಂ ಪಕ್ಷಿ ಸ್ವಾಹಾ" ಎಂಬ ಗರುಡಪಂಚಾಕ್ಷರೀ ಮಂತ್ರದಿಂದಲೂ ಸಂಪುಟವನ್ನು ತೆರೆಯಬೇಕು. "ಶ್ರೀಸೂಕ್ತ" ಮುಂತಾದ ಲಕ್ಷ್ಮೀ ಮಂತ್ರಗಳಿಂದ ದೇವರ ಮೇಲಿರುವ ನಿರ್ಮಾಲ್ಯಗಳನ್ನು ತೆಗೆಯಬೇಕು. ಶ್ರೀಹರಿಯ ಎಡಭಾಗದಲ್ಲಿ ಶುದ್ಧವಾದ ಸ್ಥಳವನ್ನು ಏರ್ಪಡಿಸಿ ಆ ಸ್ಥಳದಲ್ಲಿ ಎರಡು ಕೈಗಳನ್ನು ಜೋಡಿಸಿಕೊಂಡವನಾಗಿ ರುದ್ರದೇವನನ್ನು ಸ್ಮರಿಸಬೇಕು. ಆ ರುದ್ರದೇವನ ತಲೆಯಲ್ಲಿ ಒಂದು ಪಾತ್ರೆಯನ್ನಿಡಬೇಕು. ಆ ಪಾತ್ರೆಯಲ್ಲಿ "ಭೂಮ್ಯೈ ನಮಃ" ಎಂಬ ಭೂದೇವಿಯ ಮಂತ್ರದಿಂದ ಭೂದೇವಿಯನ್ನು ಆವಾಹಿಸಬೇಕು. "ಓಂ ಪ್ರಾಣಾಯ ನಮಃ" ಎಂಬ ಮುಖ್ಯಪ್ರಾಣದೇವರ ಮಂತ್ರದಿಂದ ಆ ಪಾತ್ರೆಯನ್ನು ಪ್ರೋಕ್ಷಿಸಬೇಕು. ಆ ಪಾತ್ರೆಯಲ್ಲಿ ಸನ್ನಿಹಿತರಾದ ಮುಖ್ಯಪ್ರಾಣದೇವರ ತಲೆಯಲ್ಲಿ ನಿರ್ಮಾಲ್ಯವನ್ನಿಡಬೇಕು. ಅದರಂತೆಯೇ ಇಡಲ್ಪಟ್ಟ ಸ್ನಾನಪಾತ್ರದಲ್ಲಿ ಶಾಲಿಗ್ರಾಮ ಮುಂತಾದವುಗಳನ್ನಿಡಬೇಕು.

ತಸ್ಮಿನ್ನಾಸ್ತೀರ್ಯ ಪರ್ಯಂಕೇ ರಮ್ಯಂ ಶ್ಲಕ್ಷ್ಣಂ ವರಂ ಶುಭಮ್ |
ವಿಕೀರ್ಯ ತತ್ರ ಪುಷ್ಪಾಣಿ ರಮ್ಯಾಣಿ ಸುರಭೀಣಿ ಚ ||
ತಸ್ಮಿನ್ನೇವಂ ಪ್ರಕಾರೇಣ ಅರ್ಚಯೇದ್ರಮಯಾ ಸಹ | (ವಸಿಷ್ಠರ ವಚನ)

"ಆ ಪಾತ್ರೆಯಲ್ಲಿಯೂ ಮಂಚದಲ್ಲಿ ಸುಂದರವಾದ ಮೃದುವಾಗಿರುವ ಶ್ರೇಷ್ಠವಾದ ಹಾಸಿಗೆಯನ್ನು ಹಾಸಬೇಕು. ರಮ್ಯವೂ ಸುಗಂಧವುಳ್ಳದ್ದೂ ಆಗಿರುವ ಪುಷ್ಪಗಳನ್ನು ಚೆಲ್ಲಬೇಕು. ಆ ಪುಷ್ಪಗಳ ಮೇಲೆ ಶ್ರೀಹರಿಯನ್ನು ಲಕ್ಷ್ಮೀದೇವಿಯೊಡನೆ ಇಟ್ಟು ಮುಂದೆ ಹೇಳುವಂತೆ ಪೂಜಿಸಬೇಕು.

ಧೌತೈರ್ವಿಚಿತ್ರವಸ್ತ್ರಾದ್ಯೈರ್ದೇವಪೀಠಂ ಮನೋಹರಮ್ |
ಅಲಂಕೃತಂ ನ್ಯಸೇದ್ದೇವಂ ಪುಷ್ಪಂ ತನ್ಮೂರ್ಧ್ನಿ ಚಾರ್ಚಯೇತ್ ||

"ಒಗೆದು ಒಣಗಿಸಿದ ವಿಚಿತ್ರವರ್ಣದ ಬಟ್ಟೆಗಳಿಂದ ಅಲಂಕರಿಸಲ್ಪಟ್ಟ ದೇವರ ಪೀಠದಲ್ಲಿ ದೇವರನ್ನು ಕುಳ್ಳಿರಿಸಿ ದೇವರ ತಲೆಯ ಮೇಲೆ ಪುಷ್ಪಗಳಿಂದ ಅರ್ಚನೆಯನ್ನು ಮಾಡಬೇಕು.

### ಆಸನಗಳ ಫಲ

ವಂಶಾಸನೇ ದರಿದ್ರಃ ಸ್ಯಾತ್ಪಾಷಾಣೇ ವ್ಯಾಧಿಸಂಭವಃ |
ಧರಣ್ಯಾಂ ದುಃಖಮಾಪ್ನೋತಿ ದೌರ್ಭಾಗ್ಯಂ ದಾರುಕಾಸನೇ ||
ತೃಣಾಸನೇ ಯಶೋಹಾನಿಃ ಪಲ್ಲವೇ ಚಿತ್ತವಿಭ್ರಮಃ |
ಕುಶಾಸನೇ ಸರ್ವಸಿದ್ಧಿಃ ಕಂಬಲೇ ದುಃಖಮೇವ ಚ ||
ಕೃಷ್ಣಾಜಿನೇ ಜ್ಞಾನಸಿದ್ಧಿರ್ಮೋಕ್ಷಃ ಸ್ಯಾದ್ವ್ಯಾಘ್ರಚರ್ಮಣಿ |

"ಶ್ರೀಹರಿಯನ್ನು ಪೂಜಿಸುವಾಗ ಹಾಕಿಕೊಳ್ಳುವ ಆಸನವಿಶೇಷದಿಂದ ಫಲವಿಶೇಷವನ್ನು ತಿಳಿಯಬೇಕು. ಬಿದಿರಿನಿಂದ ನಿರ್ಮಿತವಾದ ಆಸನದಲ್ಲಿ ಕುಳಿತು ಪೂಜಿಸಿದರೆ ದರಿದ್ರನಾಗುವನು. ಕಲ್ಲಿನಲ್ಲಿ ಕುಳಿತರೆ ವ್ಯಾಧಿಯು ಸಂಭವಿಸುತ್ತದೆ. ಮರದಿಂದ ನಿರ್ಮಿಸಿದ ಮಣೆ ಮುಂತಾದವುಗಳಲ್ಲಿ ಕುಳಿತರೆ ದೌರ್ಭಾಗ್ಯವೂ, ಹುಲ್ಲಿನಿಂದ ನಿರ್ಮಿತವಾದ ಚಾಪೆ ಮುಂತಾದವುಗಳಲ್ಲಿ ಕುಳಿತರೆ ಕೀರ್ತಿನಾಶವೂ, ಚಿಗುರುಗಳಿಂದ ನಿರ್ಮಿತವಾದ ಆಸನಗಳಲ್ಲಿ ಕುಳಿತರೆ ಬುದ್ಧಿಭ್ರಮವೂ, ದರ್ಭೆಯಿಂದ ನಿರ್ಮಿತವಾದ ಆಸನದಲ್ಲಿ ಕುಳಿತರೆ ಸರ್ವಸಿದ್ಧಿಯೂ, ಕಂಬಳಿ ಮತ್ತು ಭೂಮಿಯಲ್ಲಿ ಕುಳಿತರೆ ದುಃಖಪ್ರಾಪ್ತಿಯೂ, ಕೃಷ್ಣಾಜಿನದಲ್ಲಿ ಕುಳಿತರೆ ಜ್ಞಾನಸಿದ್ಧಿಯೂ, ಹುಲಿಚರ್ಮದಲ್ಲಿ ಕುಳಿತರೆ ಮೋಕ್ಷಪ್ರಾಪ್ತಿಯೂ ಏರ್ಪಡುತ್ತದೆ."

ಪ್ಲಕ್ಷಕಾಚರ್ಮಚೇಲಾದಿವ್ಯಾಸನೈಃ ಸ್ವಸ್ತಿಕಾದಿಭಿಃ |
ಧೃತಧೌತೋತ್ತರೀಯಃ ಸನ್ ಋಜುಕಾಯಃ ಸಮಾಹಿತಃ || (ಪರಮಪುರುಷಸಂಹಿತಾವಚನ)

"ಆಲದ ತೊಗಟೆಯಿಂದ ನಿರ್ಮಿತವಾದ ವಸ್ತ್ರ, ಕೃಷ್ಣಾಜಿನ ಮುಂತಾದ ಚರ್ಮಗಳು, ವಸ್ತ್ರಗಳು ಇವುಗಳಿಂದ ನಿರ್ಮಿತವಾದ ಆಸನಗಳಲ್ಲಿಯೂ, ಸ್ವಸ್ತಿಕ ಮುಂತಾದ ಆಸನಗಳಲ್ಲಿಯೂ, ಚೆನ್ನಾಗಿ ಒಗೆಯಲ್ಪಟ್ಟ ಮಡಿವಸ್ತ್ರಗಳನ್ನು ಉಟ್ಟುಕೊಂಡವನಾಗಿ ಮತ್ತು ಹೊದ್ದುಕೊಂಡವನಾಗಿ ಋಜುವಾದ ದೇಹವುಳ್ಳವನಾಗಿ ಸಾವಧಾನವಾದ ಮನಸ್ಸಿನಿಂದ ಯುಕ್ತವಾಗಿ ಶ್ರೀಹರಿಯನ್ನು ಪೂಜಿಸಬೇಕು."

ಕೃಷ್ಣಾಜಿನೇ ಕುಶೇ ವಾಽಪಿ ಕಂಬಲೇ ವಾಽಪಿ ಪೀಠಕೇ |
ಉಪವಿಶ್ಯ ಗುರೂನ್ನತ್ವಾ ಪೂಜಯೇತ್ತತ್ಸಮಾಹಿತಃ || (ವಸಿಷ್ಠರ ವಚನ)

"ಕೃಷ್ಣಾಜಿನ, ದರ್ಭೆ, ಕಂಬಳಿ ಪೀಠಗಳು ಇವುಗಳಲ್ಲಿ ಕುಳಿತವನಾಗಿ ಗುರುಗಳನ್ನು ನಮಸ್ಕರಿಸಿ ಸಾವಧಾನವಾದ ಮನಸ್ಸಿನಿಂದ ಶ್ರೀಹರಿಯನ್ನು ಪೂಜಿಸಬೇಕು."

ಕುಶೇ ಕೃಷ್ಣಾಜಿನೇ ವಾಽಪಿ ಸುಖಾಸೀನಃ ಸುಖಾಸನೇ |
ಪ್ರಾಙ್ಮುಖೋಽದಙ್ಮುಖೋ ವಾಽಪಿ ದೇವಸ್ಯಾಭಿಮುಖೋಽಪಿ ವಾ || (ಹಾರೀತರ ವಚನ )

"ಪೂರ್ವದಿಕ್ಕನ್ನಾಗಲೀ ಉತ್ತರದಿಕ್ಕನ್ನಾಗಲೀ ದೇವರನ್ನಾಗಲೀ ನೋಡುತ್ತಾ ಕೃಷ್ಣಾಜಿನ, ದರ್ಭೆಯಿಂದ ನಿರ್ಮಿತವಾದ ಸುಖಕರವಾದ ಆಸನಗಳಲ್ಲಿ ಕುಳಿತುಕೊಂಡು ದೇವರ ಪೂಜೆಯನ್ನು ಮಾಡಬೇಕು."

ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಮ್ |
ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ || (ಗೀತಾ ವಚನ)

"ಆಸನವು ತುಂಬಾ ಎತ್ತರವೂ ಆಗಿರಬಾರದು. ತುಂಬಾ ತಗ್ಗಾಗಿಯೂ ಇರಬಾರದು. ಕೆಳಗೆ ಕಾಲು ನೋಯದಂತೆ ಬಟ್ಟೆಯನ್ನಾಗಲೀ ಕೃಷ್ಣಾಜಿನ ಮುಂತಾದ ಚರ್ಮಗಳನ್ನಾಗಲೀ ದರ್ಭೆಗಳನ್ನಾಗಲೀ ಹಾಸಿಕೊಳ್ಳಬೇಕು. ಬಟ್ಟೆಗಿಂತ ಚರ್ಮವೂ ಚರ್ಮಕ್ಕಿಂತ ದರ್ಭೆಯೂ ಶ್ರೇಷ್ಠವೆನಿಸುತ್ತದೆ. ಮನಸ್ಸಿನ ಮತ್ತು ಎಲ್ಲಾ ಇಂದ್ರಿಯಗಳ ವ್ಯಾಪಾರಗಳನ್ನೂ ನಿಲ್ಲಿಸಬೇಕು.

ಏಕಾಗ್ರವಾದ ಮನಸ್ಸಿನಿಂದ ಶ್ರೀಹರಿಯನ್ನು ಪೂಜಿಸಬೇಕು. ಕೃಷ್ಣಾಜಿನ ಮುಂತಾದ ಹೊರಗಣ ಆಸನಗಳಲ್ಲಿ ಪದ್ಮ, ಸ್ವಸ್ತಿಕ, ಮತ್ತು ವೀರಾಸನಗಳೆಂಬ ದೇಹಕ್ಕೆ ಸಂಬಂಧಿಸಿದ ಆಸನಗಳಲ್ಲಿ ಕುಳಿತವರಾಗಿ ಪೂಜಿಸಬೇಕು ಎಂಬುದು ಸಾರಾಂಶ.

ನಿಯಮೋ ವೀರಪದ್ಮೇ ಚ ಸ್ವಸ್ತಿಕಾದ್ಯಾನಿ ಚಾಸನಮ್ |
ಊರ್ವೋರಧಃ ಪದೋರೂರ್ಧ್ವಂ ವಿಭಾಗೇನೇತಿ ಚ ತ್ರಿಧಾ |
ಆಸನತ್ರಯಮುದ್ದಿಷ್ಟಂ ಮಂತ್ರಸ್ಮರಣಪೂರ್ವಕಮ್ || (ತಂತ್ರಸಾರ ವಚನ )

ಬಲಪಾದವನ್ನು ಎಡತೊಡೆಯ ಕೆಳಭಾಗದಲ್ಲಿಯೂ ಎಡಪಾದವನ್ನು ಬಲತೊಡೆಯ ಕೆಳಭಾಗದಲ್ಲಿಯೂ ಇಟ್ಟುಕೊಳ್ಳುವುದು ಸ್ವಸ್ತಿಕಾಸನ, ಬಲಪಾದವನ್ನು ಎಡತೊಡೆಯ ಮೇಲ್ಭಾಗದಲ್ಲಿಯೂ ಎರಡಪಾದವನ್ನು ಬಲತೊಡೆಯ ಮೇಲ್ಭಾಗದಲ್ಲಿಯೂ ಇಟ್ಟುಕೊಳ್ಳುವುದು ಪದ್ಮಾಸನ. ಬಲಪಾದವನ್ನು ಎಡತೊಡೆಯ ಮೇಲ್ಭಾಗದಲ್ಲಿ ಇಟ್ಟುಕೊಳ್ಳುವುದು ವೀರಾಸನವೆನಿಸುತ್ತದೆ. ಈ ಮೂರು ಆಸನಗಳು ದೇಹಕ್ಕೆ ಸಂಬಂಧಿಸಿದವುಗಳು. ಈ ಮೂರು ಆಸನಗಳಲ್ಲಿ ಯಾವುದಾದರೊಂದು ಆಸನದಲ್ಲಿ ಕುಳಿತವನಾಗಿ ಮಂತ್ರಗಳನ್ನು ಸ್ಮರಿಸುತ್ತಾ ಪೂಜೆಯನ್ನು ಮಾಡಬೇಕು.

ಪದ್ಮಸ್ವಸ್ತಿಕವೀರಾದ್ಯಾ ಆಸನೇಷು ಪ್ರಧಾನತಃ || (ವಿಷ್ಣುತೀರ್ಥೀಯವಚನ)

"ಪದ್ಮಾಸನ, ಸ್ವಸ್ತಿಕಾಸನ ವೀರಾಸನ ಮುಂತಾದವುಗಳು ಆಸನಗಳಲ್ಲಿ ಪ್ರಧಾನವೆನಿಸುತ್ತವೆ.

## ಪದ್ಮಾಸನ

ಉತ್ತಾನೌ ಚರಣೌ ಕೃತ್ವಾ ಊರುಸಂಸ್ಥೌ ಪ್ರಯತ್ನತಃ |
ಊರುಮಧ್ಯೇ ತಥೋತ್ತಾನೌ ಪಾಣೀ ಕೃತ್ವಾ ತತೋ ದೃಶೌ ||
ನಾಸಾಗ್ರೇ ವಿನ್ಯಸೇದ್ದೃಷ್ಟಿಮಂತಮೂರ್ಲಕವಿದ್ಯಯಾ |
ಉತ್ತುಂಗಚಿಬುಕಂ ವಕ್ಷ್ಯೇ ಸಂಸ್ಥಾಪ್ಯ ಪವನಂ ಶನೈಃ ||
ಇದಂ ಪದ್ಮಾಸನಂ ಪ್ರೋಕ್ತಂ ಸರ್ವವ್ಯಾಧಿವಿನಾಶನಮ್ |
ದುರ್ಲಭಂ ಯೋಜಕೇನಾಪಿ ಧೀಮತಾಮಪಿ ಲಭ್ಯತೇ || (ಯೋಗಶಾಸ್ತ್ರವಚನ)

"ಎರಡು ಪಾದಗಳನ್ನೂ ಮೇಲ್ಮುಖವಾಗಿ ಮಾಡಿಕೊಳ್ಳಬೇಕು. ಪ್ರಯತ್ನದಿಂದ ಆ ಎರಡು ಪಾದಗಳನ್ನು ತೊಡೆಗಳ ಮೇಲೆ ಇಟ್ಟುಕೊಳ್ಳಬೇಕು. ಎರಡು ತೊಡೆಗಳ ಮಧ್ಯದಲ್ಲಿ ಎರಡು ಅಂಗೈಗಳನ್ನೂ ಮೇಲ್ಮುಖವಾಗಿ ಇಟ್ಟುಕೊಳ್ಳಬೇಕು. ಎರಡು ಕಣ್ಣುಗಳಿಂದ ಮೂಗಿನ ತುದಿಯನ್ನು ನೋಡಬೇಕು. ಗಲ್ಲವನ್ನು ಮುಂದಿಟ್ಟುಕೊಳ್ಳಬೇಕು. ಮೆಲ್ಲನೆ ಗಾಳಿಯನ್ನು ವಕ್ಷಸ್ಥಳದಲ್ಲಿ ಬಿಗಿಹಿಡಿಯಬೇಕು. ಇದು ಪದ್ಮಾಸನವೆನಿಸುತ್ತದೆ. ಈ ಪದ್ಮಾಸನವು ಎಲ್ಲಾ ವ್ಯಾಧಿಗಳನ್ನೂ ಪರಿಹರಿಸುತ್ತದೆ. ಯೋಗಶಾಸ್ತ್ರದಲ್ಲಿ ಮಹಾನಿಪುಣನಿಗೂ ಈ ಪದ್ಮಾಸನವು ದುರ್ಲಭವಾದುದು."

## ಸ್ವಸ್ತಿಕಾಸನ

ಜಾನೂರ್ವೋರಂತರೇ ಸಮ್ಯಕ್ಕೃತ್ವಾ ಪಾದತಲೇ ಶುಭೇ |
ಋಜುಕಾಯಃ ಸಮಾಸೀನಃ ಸ್ವಸ್ತಿಕಾಸನಮುಚ್ಯತೆ || (ಯೋಗಶಾಸ್ತ್ರವಚನ)

"ಅನೋನ್ಯ ಮೊಣಕಾಲು ಮತ್ತು ತೊಡೆಗಳ ಮಧ್ಯದಲ್ಲಿ ಎರಡು ಪಾದಗಳನ್ನು ಚೆನ್ನಾಗಿ ಇಟ್ಟುಕೊಳ್ಳಬೇಕು. ದೇಹವು ನೆಟ್ಟಗಿರುವಂತೆ ಮಾಡಿಕೊಳ್ಳಬೇಕು. ಹೀಗೆ ಕುಳಿತುಕೊಳ್ಳುವುದು ಸ್ವಸ್ತಿಕಾಸನವೆನಿಸುತ್ತದೆ."

### ವೀರಾಸನ

ದಕ್ಷಿಣೋರೋರಧಃ ಪಾದಂ ವಾಮಂ ವಿನ್ಯಸ್ಯ ದಕ್ಷಿಣಮ್ ।
ಪಾದಂ ವಾಮೋರುಕಂ ಕೃತ್ವಾ ವೀರಾಸನಮಿಹೋಚ್ಯತೇ ॥ (ಯೋಗಶಾಸ್ತ್ರ ವಚನ)

"ಎಡಪಾದವನ್ನು ಬಲತೊಡೆಯ ಕೆಳಗೆ ಇಟ್ಟವನಾಗಿ ಬಲಪಾದವನ್ನು ಎಡತೊಡೆಯ ಮೇಲೆ ಇಟ್ಟುಕೊಳ್ಳುವುದು. ವೀರಾಸನವೆನಿಸುತ್ತದೆ." ಈ ಮೂರು ಆಸನಗಳ ಮಧ್ಯದಲ್ಲಿ ಪೂಜಾಕಾಲದಲ್ಲಿ ಸ್ವಸ್ತಿಕಾಸನವೇ ಅನುಕೂಲವಾಗಿಯತ್ತದೆ."

ಉಪವಿಶ್ಯಾಸನೇ ಶುದ್ಧೇ ಪೂಜಾಂ ಪೂರ್ವವದಾಚರೇತ್ । (ಯೋಗಶಾಸ್ತ್ರವಚನ)

"ಮೇಲ್ಕಂಡ ಮೂರು ಆಸನಗಳು ಶುದ್ಧವಾದ ಆಸನಗಳು. ಇವುಗಳಲ್ಲಿ ಅನುಕೂಲವಾದ ಆಸನದಲ್ಲಿ ಕುಳಿತವನಾಗಿ ಪ್ರಾತಃಕಾಲಿಕ ಪೂಜೆಯನ್ನು ಮಾಧ್ಯಾಹ್ನಿಕ ಪೂಜೆಯನ್ನು ಮಾಡಬೇಕು." ಆ ಮೇಲೆ ಪ್ರಾತಃಕಾಲಿಕಸ್ನಾನ ಜಪಪ್ರಕರಣಗಳಲ್ಲಿ ಹೇಳಿದಂತೆ ಭೂತೋಚ್ಚಾಟನ, ಜಪ, ನಮಸ್ಕಾರಗಳು, ದೇಹಶುದ್ಧಿ, ಪಾಪಪುರುಷಶೋಷಣ, ದಹನ, ದೇಹಕ್ಕೆ ಅಮೃತಸ್ನಾನ, ತತ್ವನ್ಯಾಸ, ಮಾತೃಕಾನ್ಯಾಸ, ಅಷ್ಟಾಕ್ಷರನ್ಯಾಸ ಮುಂತಾದವುಗಳನ್ನು ಮಾಡಬೇಕು. ಅನಂತರದಲ್ಲಿ ಪ್ರತಿಮೆಗಳಲ್ಲಿ ದೇವರನ್ನು ಆವಾಹನೆ ಮಾಡಬೇಕು. ಆ ಮೇಲೆ ಎರಡು ಕೈಗಳನ್ನು ಜೋಡಿಸಿಕೊಂಡವನಾಗಿ "ನಿಷುಸೀದ" ಎಂಬ ವೈದಿಕ ಮಂತ್ರದಿಂದಲೂ "ಆರಾಧ್ಯಸೇ" ಎಂಬ ಪೌರಾಣಿಕ ಮಂತ್ರದಿಂದಲೂ ಶ್ರೀಮುಖ್ಯಪ್ರಾಣದೇವರ ಸ್ವಾಮಿಯಾದ ಶ್ರೀಹರಿಯನ್ನು ಪ್ರಾರ್ಥಿಸಬೇಕು. ಆ ಎರಡು ಮಂತ್ರಗಳನ್ನು ಕೆಳಗೆ ಕೊಟ್ಟಿರುವೆವು."

"ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್ ।
ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವಂಚ್ಚಿತ್ರಮರ್ಚ ॥" (ವೈದಿಕಮಂತ್ರ)
"ಆರಾಧ್ಯಸೇ ಪ್ರಾಣಭೃತಾಂ ಪ್ರಣೇತ್ರಾ ಪ್ರಾಣಾಧಿನಾಥೇನ ಸಮೀರಣೇನ ।
ನಾರಾಯಣ ಜ್ಞಾನಸುಖೈಕಪೂರ್ಣ ಸ್ವಾಮಿನ್ ಮಮ ಶ್ರೀರಮಣ ಪ್ರಸೀದ ॥" (ಪೌರಾಣಿಕಮಂತ್ರ)
"ಅನಂತರದಲ್ಲಿ ಯೋಗದೀಪಿಕೆಯಲ್ಲಿ ಹೇಳಿರುವ ಪ್ರಾರ್ಥನೆಯನ್ನು ಮಾಡಬೇಕು."
ಬಿಂಬೋಽಸಿ ಪ್ರತಿಬಿಂಬೋಽಸ್ಮಿ ತವ ಯದ್ಯಪಿ ಚಾಂತರಮ್ ।
ಸ್ವಾಮಿನ್ನಿರ್ದೋಷ ಮದ್ದೋಷಂ ವಿರೇಚಯ ನಮೋಽಸ್ತು ತೇ ॥
ಭಗವನ್ನನ್ಮಯಾ ಕರ್ಮ ಶುಭಂ ಕಾರಯತೇ ಪ್ರಭುಃ ।
ತತ್ಸರ್ವಂ ವಿಷ್ಣುಪೂಜಾಸ್ತು ತಚ್ಚ ದೇವಪ್ರಸಾದತಃ ॥
ಜಯಾಚ್ಯುತ ಜಯಾನಂತ ಜಯ ಕೃಷ್ಣ ಹರೇ ಪ್ರಭೋ ।
ಜಯ ಕೇಶವ ಲಕ್ಷ್ಮೀಶೇತ್ಯುಕ್ತ್ವಾ ಕೃಷ್ಣಂ ಪರಿವ್ರಜೇತ್ ॥
ಮಯಿ ಸ್ಥಿತೋ ಮದಂಗೇಷು ಸ್ವತಂತ್ರೋ ವ್ಯಾಪ್ತವಾನ್ ಹರಿಃ ।
ಸ ಸರ್ವಃ ಸ್ವಾತ್ಮತಂತ್ರಂ ಮಾಂ ಸ್ವೇಚ್ಛಯಾ ವರ್ತಯತ್ಯಜಃ ॥
ಸ್ವಾತ್ಮನಸ್ತಸ್ಯ ಪೂಜಾಸ್ತು ಮನೋವಾಕ್ಕಾಯವೃತ್ತಯಃ ॥
ಮಮೈತಾ ಇತಿ ಕರ್ತಾರಮುದ್ದಿಶ್ಯ ಚ ಹರಿಂ ಸ್ಮರೇತ್ ॥ (ಯೋಗದೀಪಿಕಾ ವಚನ)

"ಓ ಮಹಾಸ್ವಾಮಿಯೇ, ನಿನಗೂ ನನಗೂ ಮಧ್ಯದಲ್ಲಿರುವ ವ್ಯತ್ಯಾಸವು ಅನಂತವಾಗಿದೆ. ಆದರೂ ನೀನು ಬಿಂಬನಾಗಿರುವಿ. ನಾನು ಪ್ರತಿಬಿಂಬನಾಗಿರುವೆನು. ನೀನು ದೋಷರಹಿತನು ನಾನು ದೋಷಪೂರ್ಣನು. ನನ್ನ ದೋಷಗಳನ್ನೆಲ್ಲವನ್ನೂ ನೀನು ತಿಳಿದು ನನಗೆ ಯೋಗ್ಯವಾದ ಫಲವನ್ನು ಕೊಡು. ನಿನ್ನನ್ನು ಭಕ್ತಿಯಿಂದ ನಮಸ್ಕರಿಸುವೆನು

ನನ್ನಿಂದ ನೀನು ಯಾವ ಯಾವ ಶುಭಕಾರ್ಯಗಳನ್ನು ಮಾಡಿಸುತ್ತಿರುವಿಯೋ ಆ ಎಲ್ಲಾ ಶುಭಕರ್ಮಗಳೂ ನಿನ್ನ ಪೂಜೆಯೆನಿಸಲಿ. ಅದೂ ನಿನ್ನ ಅನುಗ್ರಹದಿಂದಲೇ ಆಗಬೇಕು. ಅಚ್ಯುತ, ಅನಂತ, ಕೃಷ್ಣ, ಪ್ರಭೋ, ಕೇಶವ, ಲಕ್ಷ್ಮೀಪತಿಯೇ ನಿನಗೆ ಜಯವಾಗಲಿ, ಎಂದು ಹೇಳುತ್ತಾ ಮನೆಯಲ್ಲಿದ್ದರೂ ಸನ್ಯಾಸಿಯಂತೆ ವಿರಕ್ತನಾಗಿರುವ ಸ್ಥಿತಿಯು ನನ್ನಲ್ಲಿ ಏರ್ಪಡಲಿ. ನೀನು ಸ್ವತಂತ್ರನು. ನಾನು ಪರತಂತ್ರನು. ನನ್ನಲ್ಲಿಯೂ ನನ್ನ ಎಲ್ಲಾ ಅವಯವಗಳಲ್ಲಿಯೂ ನೀನು ವ್ಯಾಪ್ತನಾಗಿರುವಿ. ನನ್ನಿಂದ ಎಲ್ಲಾ ಕಾರ್ಯಗಳನ್ನೂ ಮಾಡಿಸುತ್ತಿರುವಿ. ನನ್ನ ಮನಸ್ಸಿನಿಂದಲೂ ಮಾತುಗಳಿಂದಲೂ ದೇಹದಿಂದಲೂ ಏರ್ಪಡುತ್ತಿರುವ ಸರ್ವವ್ಯಾಪಾರಗಳೂ ನನ್ನಿಂದ ನಡೆಯುತ್ತಿಲ್ಲ. ಇವುಗಳೆಲ್ಲವೂ ನಿನ್ನಿಂದಲೇ ನಡೆಯುತ್ತಿವೆ. ಎಂದು ಯಾವಾಗಲೂ ಸ್ಮರಿಸುತ್ತಿರಬೇಕು. ಹೀಗೆ ಪ್ರಾರ್ಥಿಸಿ ಬ್ರಹ್ಮಪಾರಸ್ತೋತ್ರವನ್ನು ಹೇಳಬೇಕು."

## ಬ್ರಹ್ಮಪಾರಸ್ತೋತ್ರ

**ಪ್ರಚೇತಸ ಊಚುಃ -**

ಬ್ರಹ್ಮಪಾರಂ ಮುನೇ ಶ್ರೋತುಮಿಚ್ಛಾಮಃ ಪರಮಂ ಸ್ತವಂ |
ಜಪತಾ ಕಂಡುನಾ ದೇವೋ ಯೇನಾರಾಧ್ಯತ ಕೇಶವಃ ||

**ಸೋಮ ಉವಾಚ -**

ಪಾರಂ ಪರಂ ವಿಷ್ಣುರನಂತಪಾರಃ ಪರಃ ಪರಾಣಾಮಪಿ ಪಾರಪಾರಃ |
ಸ ಬ್ರಹ್ಮಪಾರಃ ಪರಪಾರಭೂತೋ ಪರಃ ಪರೇಭ್ಯಃ ಪರಮಾರ್ಥರೂಪೀ ||
ಸ ಕಾರಣಂ ಕಾರಣತಸ್ತತೋಽಪಿ ತಸ್ಯಾಪಿ ಹೇತುಃ ಪರಹೇತುಹೇತುಃ |
ಕಾರ್ಯೇಷು ಚೈವಂ ಸ ಹಿ ಕರ್ಮಕರ್ತೃರೂಪೈರಶೇಷೈರವತೀಹ ಸರ್ವಮ್ ||
ಬ್ರಹ್ಮಪ್ರಭುರ್ಬ್ರಹ್ಮ ಸ ಸರ್ವಭೂತೋ ಬ್ರಹ್ಮಪ್ರಜಾನಾಂ ಪತಿರಚ್ಯುತೋಽಸೌ |
ಬ್ರಹ್ಮಾವ್ಯಯಂ ನಿತ್ಯಮಜಂ ಸ ವಿಷ್ಣುರಪಕ್ಷಯಾದ್ಯೈರಖಿಲೈರಸಂಗಃ ||
ಬ್ರಹ್ಮಾಕ್ಷರಮಜಂ ನಿತ್ಯಂ ಯಥಾಽಸೌ ಪುರುಷೋತ್ತಮಃ |
ತಥಾ ರಾಗಾದಯೋ ದೋಷಾಃ ಪ್ರಯಾಂತು ಪ್ರಶಮಂ ಮಮ ||
ಯ ಏತದ್ಬ್ರಹ್ಮಪಾರಾಖ್ಯಂ ಸಂಸ್ತವಂ ಪರಮಂ ಜಪನ್ |
ಅವಾಪ ಪರಮಾಂ ಸಿದ್ಧಿಂ ಸ ಸಮಾರಾಧ್ಯ ಕೇಶವಮ್ || (ವಿಷ್ಣುಪುರಾಣವಚನ)
ತ್ರಿಕಾಲಮರ್ಚಯೇದ್ವಿಷ್ಣುಂ ಭಕ್ತ್ಯಾ ವೈ ಪುರುಷೋತ್ತಮಮ್ |
ನೈಮಿತ್ತಿಕವಿಶೇಷೇಣ ಪೂಜಯೇದ್ವಿಧಿನಾ ಶುಭೇ || (ಪದ್ಮಪುರಾಣವಚನ)

"ಪ್ರತಿದಿನದಲ್ಲಿಯೂ ಪ್ರಾತಃ ಕಾಲ, ಮಧ್ಯಾಹ್ನಕಾಲ ಸಾಯಂಕಾಲ ಎಂಬ ಮೂರು ಕಾಲಗಳಲ್ಲಿಯೂ ಭಕ್ತಿಯಿಂದ ಪುರುಷೋತ್ತಮನಾದ ಶ್ರೀಹರಿಯನ್ನು ಪೂಜಿಸಬೇಕು. ವಿಶೇಷನಿಮಿತ್ತಗಳು ಏರ್ಪಟ್ಟ ಕಾಲದಲ್ಲಿಯೂ ವಿಧಿಪ್ರಕಾರವಾಗಿ ಶ್ರೀಹರಿಯನ್ನೇ ಪೂಜಿಸಬೇಕು."

## ಪೂಜಾಕಾಲದಲ್ಲಿ ನಿಯಮಗಳು

ನಾತಿದ್ರುತಂ ನಾತಿಮಂದಂ ನೋಚ್ಚೈರ್ಮಂತ್ರಾನುದೀರಯನ್ |
ಅತ್ವರಃ ಸುಮನಾಃ ಕ್ರೋಧಂ ಕಾಮಂ ಹಿತ್ವಾ ಯತೇತ ಚ ||

ನ ಶಬ್ದಯನ್ ಪಾತ್ರಸಂಘಂ ನ ನಾನಾ ನಾದಯನ್ಮಹೀಮ್ |
ನಾಕುರ್ವನ್ ಜಲ್ಪಕಶ್ಚೈವ ಶುದ್ಧಮೌನೋಽರ್ಚಯೇದ್ವಶೀ ||
ವಿಶುದ್ಧದಂತವಸನೋ ನಿರ್ಮಲೀಕೃತವಿಗ್ರಹಃ |
ಶುದ್ಧೋದಕಂ ಪ್ರಸನ್ನಾತ್ಮಾ ಯಥಾಲಬ್ಧಂ ಸಮರ್ಚಯೇತ್ ||
ಅಲಾಭೇ ಸರ್ವಭೋಗಾನಾಮುದಕೇನಾಪಿ ಪೂಜಿತಃ |
ಪ್ರಯಚ್ಛತ್ಯಮಲಂ ಲೋಕಂ ಭಕ್ತಿಪೂತಾಂತರಾತ್ಮನಾಮ್ || (ಶಾಂಡಿಲ್ಯರ ವಚನ )

"ಮಂತ್ರಗಳನ್ನು ಅತಿವೇಗವಾಗಿ ಅಥವಾ ಅತ್ಯಂತ ಗಟ್ಟಿಯಾಗಿ ಅಥವಾ ಅತ್ಯಂತ ಮೃದುವಾಗಿ ಉಚ್ಚರಿಸಕೂಡದು ಅವಸರವಿರಕೂಡದು. ಶುದ್ಧಮನಸ್ಸಿನಿಂದ ಯುಕ್ತನಾಗಿರಬೇಕು. ಯಾವುದಾದರೊಂದು ವಸ್ತುವಿನಲ್ಲಿಯೂ ಆಸೆಯನ್ನು ಬಿಡಬೇಕು. ಪಾತ್ರೆಗಳಿಗೆ ಒಂದಕ್ಕೊಂದು ತಗಲಿಸುತ್ತಾ ಶಬ್ದವನ್ನು ಮಾಡಕೂಡದು. ನಡೆಯುವಾಗ ಭೂಮಿಯಲ್ಲಿ ಶಬ್ದವು ಏರ್ಪಡಕೂಡದು. ಸುಮ್ಮನೆ ಕುಳಿತಿರಬಾರದು. ಹರಟೆಯನ್ನು ಹರಟಬಾರದು. ಶುದ್ಧವಾದ ಮೌನವನ್ನು ಧರಿಸಿದವನಾಗಬೇಕು. ಉಟ್ಟುಕೊಳ್ಳುವ ಬಟ್ಟೆಯೂ ಹಲ್ಲುಗಳೂ ಶುದ್ಧವಾಗಿರಬೇಕು. ದೇಹವೂ ಅತ್ಯಂತ ನಿರ್ಮಲವಾಗಿರಬೇಕು. ಇಂದ್ರಿಯಗಳನ್ನೆಲ್ಲವನ್ನೂ ವಶಪಡಿಸಿಕೊಂಡಿರಬೇಕು. ಶುದ್ಧವಾದ ನೀರಿನಿಂದ ಪೂಜೆಯನ್ನು ಮಾಡಬೇಕು. ಪ್ರಸನ್ನವಾದ ಮನಸ್ಸಿನಿಂದ ಯುಕ್ತನಾಗಿರಬೇಕು. ದೇವರು ಕೊಟ್ಟಿರುವ ವಸ್ತುಗಳಿಂದ ತೃಪ್ತಿಯನ್ನು ಪಡೆದು ಪೂಜಿಸಬೇಕು. ಪೂಜೆಗೆ ಬೇಕಾದ ಯಾವ ವಸ್ತುಗಳೂ ಸಿಗದಿದ್ದರೂ ನೀರಿನಿಂದಲಾದರೂ ಪೂಜಿಸಬೇಕು. ಶ್ರೀಹರಿಯು ಭಕ್ತಿಯಿಂದ ಯಾವ ವಸ್ತುವಿನಿಂದ ಪೂಜಿಸಿದವರಿಗೂ ನಿರ್ಮಲವಾದ ಲೋಕಗಳನ್ನು ಕೊಡುವನು.

ಯಥಾ ಯುವಾನಂ ರಾಜಾನಂ ಯಥಾ ಚ ಮದಹಸ್ತಿನಮ್ |
ಯಥಾ ಚ ಪುತ್ರಂ ದೈತೇಯಂ ತಥೈವೋಪಚರೇದ್ಧರಿಮ್ ||
ಪತ್ನೀವ ಪ್ರಿಯಭರ್ತಾರಂ ಜನನೀವ ಸ್ತನಂಧಯಮ್ |
ಅರ್ಚಯೇಚ್ಛಿಷ್ಯವನ್ಮಿತ್ರಂ ಪುತ್ರವಲ್ಲಾಲಯೇದ್ಧರಿಮ್ ||

"ತರುಣನಾದ ರಾಜನನ್ನೂ ಮದದಿಂದ ಯುಕ್ತವಾದ ಆನೆಯನ್ನೂ ದೈತ್ಯಸ್ವಭಾವವುಳ್ಳ ಮಗನನ್ನೂ ವಶಪಡಿಸಿಕೊಳ್ಳುವುದು ತುಂಬಾ ಕಷ್ಟಸಾಧ್ಯವೆನಿಸುತ್ತದೆ. ಅಂತಹ ಕಷ್ಟಸಾಧ್ಯರನ್ನು ವಶಪಡಿಸಿಕೊಳ್ಳುವುದಕ್ಕಾಗಿ ಎಷ್ಟು ಕಷ್ಟಪಡಲು ಸಿದ್ಧರಾಗಿರುವೆವೋ ಶ್ರೀಹರಿಯನ್ನು ವಶಪಡಿಸಿಕೊಳ್ಳಲಿಕ್ಕೂ ಅಷ್ಟು ಕಷ್ಟಪಡಲು ಸಿದ್ಧರಾಗಿರಬೇಕು. ಹೆಂಡತಿಯು ತನಗೆ ಪ್ರಿಯನಾದ ಗಂಡನನ್ನೂ ತಾಯಿಯು ತನ್ನ ಹಾಲು ಕುಡಿಯುವ ಮಗುವನ್ನೂ ಮಿತ್ರನು ತನ್ನ ಪ್ರಿಯಮಿತ್ರನನ್ನೂ ಶಿಷ್ಯನು ಗುರುವನ್ನೂ ವಶಪಡಿಸಿಕೊಳ್ಳಲು ಕಷ್ಟಪಟ್ಟಂತೆ ಶ್ರೀಹರಿಯನ್ನು ಸಂತೋಷಪಡಿಸಲೂ ಸಿದ್ಧನಾಗಿರಬೇಕು."

ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದಾಸುರೀ ತಥಾ | (ತಂತ್ರಸಾರ ವಚನ)

"ವಿಷ್ಣುವಿನ ಸ್ಮರಣವಿಲ್ಲದ ಪೂಜೆಯು ಆಸುರೀಪೂಜೆಯೆನಿಸುತ್ತದೆ."

### ಶ್ರುತ್ಯುಕ್ತಪೂಜೆ

ಅಥ ವಕ್ಷ್ಯಾಮಿ ರಾಜೇಂದ್ರ ವಿಷ್ಣುಪೂಜಾವಿಧಿಂ ಪರಮ್ |
ಶ್ರೌತಂ ಮಹರ್ಷಿಭಿಃ ಪ್ರೋಕ್ತಂ ವಸಿಷ್ಠಾದ್ಯೈಃ ಪುರಾತನೈಃ ||
ವೈಖಾನಸೈಶ್ಚ ಭೃಗ್ವಾದ್ಯೈಃ ಸನಕಾದ್ಯೈಶ್ಚ ಯೋಗಿಭಿಃ |
ವೈಷ್ಣವೈರ್ವೈದಿಕೈಃ ಪೂರ್ವೈರ್ಯದ್ಯದಾಚರಿತಂ ಪುರಾ ||

ತಥಾ ವಕ್ಷ್ಯಾಮಿ ರಾಜೇಂದ್ರ ಮಹಾಪ್ರಿಯತಮಂ ಹರೇಃ |
ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಸಮ್ಯಗಾಚಮ್ಯ ವಾರಿಣಾ ||
ಧ್ಯಾತ್ವಾ ಹೃತ್ಪಂಕಜೇ ವಿಷ್ಣುಂ ಪೂಜಯೇನ್ಮನಸೈವ ತು |
ತಂ ಪ್ರಯಚ್ಛೇತಿ ಸೂಕ್ತೇನ ಬೋಧಯೇತ್ ಕಮಲಾಪತಿಮ್ |
ವನಸ್ಪತೇತಿ ಸೂಕ್ತೇನ ತೂರ್ಯಘೋಷಂ ನಿನಾದಯೇತ್ |
ಕುರ್ಯಾತ್ಪ್ರದಕ್ಷಿಣಂ ವಿಷ್ಣೋರತೋ ದೇವೇತ್ಯನೇನ ತು ||
ತದ್ವಿಷ್ಣೋರಿತಿ ಮಂತ್ರಾಭ್ಯಾಂ ತ್ರಿಃ ಪ್ರಣಮ್ಯಾಥ ವಾಗ್ಯತಃ |
ಕೃತಶೌಚಸ್ತಥಾ ಶಾಂತೋ ದಂತಧಾವನಪೂರ್ವಕಮ್ ||
ಸ್ನಾನಂ ಕುರ್ಯಾದ್ವಿಧಾನೇನ ಧಾತ್ರೀಂ ಶ್ರೀ ತುಲಸೀಯುತಮ್ |
ನಾರಾಯಣಾನುವಾಕೇನ ಕೃತ್ವಾ ತತ್ರಾಘಮರ್ಷಣಮ್ ||
ಕೃತಕೃತ್ಯಃ ಶುಚಿರ್ಭೂತ್ವಾ ತರ್ಪಯಿತ್ವಾ ಚ ಪೂರ್ವವತ್ ||
ಧೃತೋರ್ಧ್ವಪುಂಡ್ರದೇಹಶ್ಚ ಪವಿತ್ರಕರ ಏವ ಚ ||
ಪ್ರವಿಶ್ಯ ಮಂದಿರಂ ವಿಷ್ಣೋಃ ಸಂಮಾರ್ಜನ್ಯಾ ವಿಶೋಧಯೇತ್ |
ವಾಸ್ತೋಷ್ಪತೇತಿ ವೈ ಸೂಕ್ತಂ ಜಪನ್ ಸಂಮಾರ್ಜಯೇದ್ಗೃಹಮ್ ||
ಆಗಾವ ಇತಿ ಸೂಕ್ತೇನ ಗೋಮಯೇನ ವಿಲೇಪಯೇತ್ |
ಆ ನೋ ಭದ್ರೇತಿ ಸೂಕ್ತೇನ ರಂಗವಲ್ಲೀಂ ವಿನಿಕ್ಷಿಪೇತ್ ||
ತತಃ ಕಲಶಮಾದಾಯ ಜಪನ್ ವೈ ಶಾಕಿನೀಋಚಾ |
ಗತ್ವಾ ಜಲಾಶಯಂ ರಮ್ಯಂ ನಿರ್ಮಲಂ ಶುಚಿ ಪಾಂಡುರಮ್ ||
ಇಮಂ ಮೇ ಗಂಗೇತಿ ಋಚಾ ಜಲಂ ಭಕ್ತ್ಯಾಽಭಿಮಂತ್ರಯೇತ್ |
ಆಪೋ ಅಸ್ಮಾನಿತಿ ಋಚಾ ಕಲಶಂ ಕ್ಷಾಲಯೇದ್ದ್ವಿಜಃ ||
ಸಮುದ್ರಜ್ಯೇಷ್ಠೇತಿ ಋಚಾ ಗೃಹ್ಣೀಯಾತ್ಪ್ರಯತೋ ಜಲಮ್ |
ಉತಸ್ಮೈನಂ ವಸ್ತ್ರಮಿತಿ ವಸ್ತ್ರೇಣಾಚ್ಛಾದ್ಯ ವೈಷ್ಣವಃ ||
ಪ್ರ ಸಮ್ರಾಡಿತಿ ಸೂಕ್ತಂ ತು ಜಪನ್ ಸಂಪ್ರವಿಶೇದ್ಗೃಹಮ್ |
ಧ್ಯಾನೋಪರಿ ತಥಾ ಕುಂಭಂ ನ್ಯಸೇದ್ದಕ್ಷಿಣತೋ ಹರೇಃ ||
ಇಮಂ ಮೇ ವರುಣೇತ್ಯೃಚಾ ಮಂಗಲದ್ರವ್ಯಸಂಯುತಮ್ |
ಅಂಜಂತಿ ತ್ವೇತಿ ಸೂಕ್ತೇನ ಕುರ್ಯಾತ್ಪುಷ್ಪಸ್ಯ ಸಂಚಯಮ್ ||
ಅವಾಕ್ ಶುಭಾಂಗೇತಿ ದ್ವಾಭ್ಯಾಂ ಗೃಹ್ಣೀಯಾತ್ತುಲಸೀಂ ತಥಾ |
ಗಂಧಾಂಶ್ಚ ಪೇಷಯೇತ್ತದ್ವದೃಚ್ಛ್ರೀಸೂಕ್ತೇನೈವ ವೈಷ್ಣವಃ || (ಹಾರೀತರ ವಚನ)

"ಅಂಬರೀಷ ಮಹಾರಾಜನನ್ನು ನೋಡಿ ಹಾರೀತರು ಉಪದೇಶಿಸುತ್ತಿರುವರು. ಓ ರಾಜೇಂದ್ರನೇ, ಶ್ರೇಷ್ಠವಾದ ವಿಷ್ಣುಪೂಜಾವಿಧಿಯನ್ನು ಹೇಳುವೆನು. ಈ ವಿಧಿಯು ವೇದಮಂತ್ರಗಳಿಂದ ಪೂಜಿಸುವ ವಿಧಿಯೆನಿಸುತ್ತದೆ ಈ ವಿಧಿಯನ್ನು ಪ್ರಾಚೀನರಾದ ವಸಿಷ್ಠರೇ ಮೊದಲಾದ ಮಹರ್ಷಿಗಳೂ, ಭೃಗುಋಷಿಗಳು ಮುಂತಾದ ವೈಖಾನಸರೂ, ಸನಕ ಮುಂತಾದ

ಯೋಗಿಗಳೂ ಹೇಳಿರುವರು. ವೇದಮಾರ್ಗಾವಲಂಬಿಗಳಾದ ಪ್ರಾಚೀನರಾದ ಎಲ್ಲಾ ವೈಷ್ಣವರೂ ಹಿಂದೆ ಯಾವ ಯಾವ ಅನುಷ್ಠಾನಗಳನ್ನು ಮಾಡಿರುವರೋ ಶ್ರೀಹರಿಗೆ ಅತ್ಯಂತ ಪ್ರಿಯವಾಗಿರುವ ಆ ಅನುಷ್ಠಾನಗಳನ್ನು ಹೇಳುವೆನು.

ಪ್ರತಿದಿನದಲ್ಲಿಯೂ ಅರುಣೋದಯಕಾಲವು ಶ್ರೀಹರಿಗೆ ಅತ್ಯಂತ ಪ್ರಿಯವಾದ ಕಾಲವಾಗಿರುವುದರಿಂದ ಬ್ರಾಹ್ಮೀ ಮುಹೂರ್ತವೆನಿಸುತ್ತದೆ. ಆ ಕಾಲದಲ್ಲಿ ಹಾಸಿಗೆಯಿಂದ ಏಳಬೇಕು. ಚೆನ್ನಾಗಿ ಆಚಮನವನ್ನು ಮಾಡಬೇಕು. ಹೃದಯ ಕಮಲದಲ್ಲಿ ಶ್ರೀಹರಿಯನ್ನು ಸ್ಮರಿಸಬೇಕು. ಹೃದಯದಲ್ಲಿಯೆ ಶ್ರೀಹರಿಯನ್ನು ಮನಸ್ಸಿನಿಂದ ಪೂಜಿಸಬೇಕು. "ತಂ ಪ್ರಯಚ್ಛ" ಎಂಬ ಸೂಕ್ತದಿಂದ ಶ್ರೀಹರಿಯನ್ನು ಎಬ್ಬಿಸಬೇಕು. "ವನಸ್ಪತೇ" ಎಂಬ ಸೂಕ್ತದಿಂದ ವಾದ್ಯವನ್ನು ಬಾರಿಸಬೇಕು. "ಅತೋ ದೇವಾಃ" ಎಂಬ ಮಂತ್ರದಿಂದ ಪ್ರದಕ್ಷಿಣವನ್ನು ಮಾಡಬೇಕು. "ತದ್ವಿಷ್ಣೋಃ" ಎಂಬ ಮಂತ್ರದಿಂದಲೂ ಅದರ ಅನಂತರ ಮಂತ್ರದಿಂದಲೂ ಮೂರು ಸಲ ನಮಸ್ಕಾರವನ್ನು ಮಾಡಬೇಕು. ಮೌನದಿಂದ ಮಲಮೂತ್ರಗಳನ್ನು ವಿಸರ್ಜನೆ ಮಾಡಬೇಕು. ಶಾಂತನಾಗಿ ಹಲ್ಲುಗಳನ್ನು ಉಜ್ಜಬೇಕು. ವಿಧಿಪ್ರಕಾರವಾಗಿ ಸ್ನಾನವನ್ನು ಮಾಡಬೇಕು. ನೆಲ್ಲಿ ಮತ್ತು ಶ್ರೀ ತುಳಸೀಸ್ನಾನವನ್ನು ಮಾಡಬೇಕು. ನಾರಾಯಣಸೂಕ್ತವನ್ನು ಜಪಿಸುತ್ತಾ ಅಘಮರ್ಷಣ ಸೂಕ್ತದಿಂದ ತನ್ನ ಪಾಪಗಳನ್ನೆಲ್ಲವನ್ನೂ ತೊಳೆದುಕೊಳ್ಳಬೇಕು. ಮಡಿಯನ್ನು ಉಟ್ಟುಕೊಳ್ಳಬೇಕು. ಊರ್ಧ್ವಪುಂಡ್ರಗಳನ್ನೂ ನಾರಾಯಣಾದಿ ಮುದ್ರೆಗಳನ್ನೂ ಧರಿಸಬೇಕು. ಸಂಧ್ಯಾವಂದನಾದಿ ಕರ್ಮಗಳನ್ನು ಮುಗಿಸಬೇಕು. ಪವಿತ್ರವನ್ನು ಕೈಯಲ್ಲಿ ಧರಿಸಬೇಕು. ವಿಷ್ಣುವಿನ ಮಂದಿರದೊಳಗೆ ಪ್ರವೇಶಿಸಬೇಕು. ಕಸಬರಿಗೆಯನ್ನು ತೆಗೆದುಕೊಳ್ಳಬೇಕು. "ವಾಸ್ತೋಷ್ಪತೇ" ಎಂಬ ಸೂಕ್ತವನ್ನು ಹೇಳುತ್ತಾ ಮಂದಿರವನ್ನು ಗುಡಿಸಬೇಕು. "ಆಗಾವಃ" ಎಂಬ ಸೂಕ್ತವನ್ನು ಜಪಿಸುತ್ತಾ ಗುಡಿಯನ್ನು ಸಗಣಿಯಿಂದ ಸಾರಿಸಬೇಕು. "ಆ ನೋ ಭದ್ರಾ" ಎಂಬ ಸೂಕ್ತವನ್ನು ಹೇಳುತ್ತಾ ಗುಡಿಯನ್ನು ರಂಗವಲ್ಲಿಯಿಂದ ಅಲಂಕರಿಸಬೇಕು. ಕೊಡವನ್ನು "ಶಾಕಿನೀ" ಎಂಬ ಋಕ್ಕಿನಿಂದ ತೆಗೆದುಕೊಳ್ಳಬೇಕು. ಶುಭ್ರವಾದ ಬಿಳಿಯ ನೀರಿನಿಂದ ಯುಕ್ತವಾದ ನಿರ್ಮಲವಾದ ರಮ್ಯವಾದ ನದೀ ಮುಂತಾದ ಜಲಾಶಯಗಳಿಗೆ ಹೋಗಬೇಕು. "ಇಮಂ ಮೇ ಗಂಗೇ" ಎಂಬ ಮಂತ್ರದಿಂದ ನೀರನ್ನು ಅಭಿಮಂತ್ರಣ ಮಾಡಬೇಕು. "ಆಪೋ ಅಸ್ಮಾನ್" ಎಂಬ ಮಂತ್ರದಿಂದ ಕೊಡವನ್ನು ತೊಳೆಯಬೇಕು. "ಸಮುದ್ರಜ್ಯೇಷ್ಠಾ" ಎಂಬ ಮಂತ್ರದಿಂದ ನೀರನ್ನು ತುಂಬಿಸಿಕೊಳ್ಳಬೇಕು. "ಉತಸ್ಮೈನಂ ವಸ್ತ್ರಂ" ಎಂಬ ಮಂತ್ರದಿಂದ ಕೊಡವನ್ನು ವಸ್ತ್ರದಿಂದ ಮುಚ್ಚಬೇಕು. "ಪ್ರಸಮ್ರಾಟ್" ಎಂಬ ಸೂಕ್ತವನ್ನು ಪಠಿಸುತ್ತಾ ನೀರಿನ ಕೊಡವನ್ನು ಮನೆಯೊಳಗೆ ತರಬೇಕು. ದೇವರ ಬಲಭಾಗದಲ್ಲಿ ಧಾನ್ಯಗಳ ಮೇಲೆ ಕೊಡವನ್ನಿಡಬೇಕು. "ಇಮಂ ಮೇ ಗಂಗೇ" ಎಂಬ ಮಂತ್ರದಿಂದ ಮಂಗಲ ದ್ರವ್ಯಗಳನ್ನು ಆ ನೀರಿನಲ್ಲಿ ಮಿಶ್ರಣಮಾಡಬೇಕು. "ಅಂಜಂತಿ ತ್ವಾ" ಎಂಬ ಸೂಕ್ತದಿಂದ ಪೂಜೆಗಾಗಿ ಪುಷ್ಪಗಳನ್ನು ಸಂಗ್ರಹಿಸಬೇಕು. "ಅವಾಕ್" "ಶುಭಾಂಗ" ಎಂಬ ಎರಡು ಮಂತ್ರಗಳಿಂದ ತುಲಸಿಯನ್ನು ಕೊಯ್ಯಬೇಕು. "ಶ್ರೀಸೂಕ್ತ" ದಿಂದ ಗಂಧವನ್ನು ತೇಯಬೇಕು.

ವಿಶ್ವಾನಿ ನ ಇತಿ ಋಚಾ ದೀಪಂ ದದ್ಯಾತ್ಸುದೀಪಿತಮ್ ।
ತತ್ರತ್ಯಾತ್ರೇಷು ಸಲಿಲಂ ದತ್ವಾ ಗಂಧಾಂಸ್ತು ನಿಕ್ಷಿಪೇತ್ ॥
ಶಂ ನೋ ದೇವ್ಯಾ ಚ ಸಲಿಲಂ ಗಾಯತ್ರ್ಯಾ ಚ ಕುಶಾಂಸ್ತಥಾ ।
ಆಯನೇ ಚೇತಿ ಪುಷ್ಪಾಣಿ ಯವ್ರೋಸೀತಿ ಋಚಾಽಕ್ಷತಾಃ ॥
ಗಂಧದ್ವಾರೇತಿ ವೈ ಗಂಧಾನೋಷಧ್ಯಾ ತಿಲಸರ್ಷಪಾನ್ ।
ಕಾಂಡಾತ್ಕಾಂಡೇತಿ ದೂರ್ವಾಕಾನ್ ಸ ಹಿ ರತ್ನಾನಿ ಚಾರ್ಪಯೇತ್ ॥
ಹಿರಣ್ಯರೂಪೇತಿ ಋಚಾ ಹಿರಣ್ಯಂ ನಿಕ್ಷಿಪೇತ್ತಥಾ ।
ಏವಂ ದ್ರವ್ಯಾಣಿ ನಿಕ್ಷಿಪ್ಯ ತುಲಸ್ಯಾ ಚ ಸಮರ್ಚಯೇತ್ ॥

ಸವಿತುಷ್ಟ್ವೇತ್ಯಾದಿಋಚಾ ದದ್ಯಾದರ್ಘ್ಯಾದಿಕಂ ಹರೇಃ |
ಶ್ರೀಯೇ ತೇ ಪಾದೇತಿ ಋಚಾ ಮುಖಸಂಮಾರ್ಜನಂ ತಥಾ ||
ಭದ್ರಾ ತೇ ಹಸ್ತೇತ್ಯನೇನ ಹಸ್ತಪ್ರಕ್ಷಾಲನಂ ಚರೇತ್ |
ಯದ್ಯಾ ಸುಪರ್ಣೇತಿ ಋಚಾ ಮುಖಸಂಮಾರ್ಜನಂ ತಥಾ ||
ಆಪೋ ಅಸ್ಮಾನಿತಿ ಋಚಾ ವಸ್ತ್ರಂ ಗಂಡೂಷಮೇವ ಚ |
ಹಿರಣ್ಯಾಯೇತ್ಯನೇನರ್ಚಾ ದಂತಕಾಷ್ಠಂ ನಿವೇದಯೇತ್ ||
ಬೃಹಸ್ಪತೇ ಪ್ರಥಮೇತಿ ಜಿಹ್ವಾಲೇಪನಮೇವ ಚ |
ಆಪ ಇದ್ವಾ ಉಭೇ ಇತಿ ತ್ರ್ಯಚಾ ಗಂಡೂಷಮಾಚರೇತ್ ||
ಆಪೋ ಹಿ ಷ್ಠಾ ಮಯೋಭುವ ಇತ್ಯನೇನಾಚಮನೀಯಕಮ್ |
ಮೂರ್ಧಾನಂ ದಿವ ಇತ್ಯನೇನ ತೈಲಾಭ್ಯಂಗಂ ಸಮಾಚರೇತ್ ||
ಮೂರ್ಧಾನಂ ದಿವ ಇತ್ಯನೇನ ಗಂಧಾನ್ ಕೇಶೇ ಪ್ರಲೇಪಯೇತ್ |
ತದ್ವಿ ವಯಸ್ತ್ವಾ ಕೇಶವಂತೇ ಕೇಶಾನ್ ಸಂಕ್ಷಾಲಯೇತ್ಪುನಃ ||
ಶ್ರಿಯೇ ತೇ ಪುಷ್ಪಿ ಇತ್ಯೃಚಾ ದತ್ವಾ ಚೋದ್ವರ್ತನಾದಿಕಮ್ |
ಆಯವಃ ಪ್ರಥಮಮಿತಿ ಸೂಕ್ತೇನಾಂಗಸ್ಯ ಸೇಚನಮ್ ||
ಕೃತ್ವಾಥ ಸ್ನಾಪಯೇತ್ಸೂಕ್ತೈರ್ವೈಷ್ಣವೈರ್ಗಂಧವಾರಿಣಾ |
ತತಃ ಪಂಚಾಮೃತೈರ್ಗವ್ಯೈಃ ಸ್ನಾಪಯೇತ್ತತ್ಕಾರಕೈಃ ||
ಆಪ್ಯಾಯಸ್ವೇತ್ಯೃಚಾ ಕ್ಷೀರಂ ದಧಿಕ್ರಾವ್ಣೇತಿ ವೈ ದಧಿ |
ಘೃತಂ ಮಿಮಿಕ್ಷೇತಿ ಘೃತಂ ಮಧು ವಾತೇತಿ ವೈ ಮಧು ||
ಶಂ ತೇ ವಯಂ ಯಥಾ ಗೋಭಿರಿತ್ಯೃಚೇಕ್ಷುರಸಂ ಶುಭಮ್ |
ಏಭಿಃ ಪಂಚಾಮೃತೈಃ ಸ್ನಾಪ್ಯ ಚಂದನಂ ಚ ನಿವೇದಯೇತ್ ||
ಶ್ರೀಸೂಕ್ತಪುರುಷಸೂಕ್ತಾಭ್ಯಾಂ ಪುನಃ ಸಂಸ್ನಾಪಯೇದ್ಧರಿಮ್ |
ವನಸ್ಪತೇತಿ ಸೂಕ್ತೇನ ಕುರ್ಯಾದ್ಧೂಪಸಮನ್ವಿತಮ್ || (ಹಾರೀತರ ವಚನ)

"ವಿಶ್ವಾನಿ ನಃ" ಎಂಬ ಮಂತ್ರದಿಂದ ದೀಪವನ್ನು ಹಚ್ಚಬೇಕು, ಕಲಶಪೂಜಾದಿಕಾಲದಲ್ಲಿ ಹೇಳಬೇಕಾದ ಮಂತ್ರಗಳನ್ನು ತಿಳಿಸುವೆವು. ಆಯಾ ಕಲಶಾದಿಪಾತ್ರಗಳಲ್ಲಿ "ಶಂ ನೋ ದೇವೀಃ" ಎಂಬ ಮಂತ್ರದಿಂದ ನೀರನ್ನು ತುಂಬಬೇಕು. ಗಾಯತ್ರೀಮಂತ್ರದಿಂದ ದರ್ಭೆಗಳನ್ನೂ "ಆಯನೇ ತೇ" ಎಂಬ ಮಂತ್ರದಿಂದ ಪುಷ್ಪಗಳನ್ನೂ "ಯವೋಸಿ" ಎಂಬ ಮಂತ್ರದಿಂದ ಅಕ್ಷತೆಗಳನ್ನೂ "ಗಂಧದ್ವಾರಾ" ಎಂಬ ಮಂತ್ರದಿಂದ ಗಂಧವನ್ನೂ "ಓಷಧಯಃ" ಎಂಬ ಮಂತ್ರದಿಂದ ಎಳ್ಳುಗಳನ್ನೂ ಸಾಸಿವೆಗಳನ್ನೂ "ಕಾಂಡಾತ್ಕಾಂಡಾತ್" ಎಂಬ ಮಂತ್ರದಿಂದ ಗರಿಕೆಹುಲ್ಲುಗಳನ್ನೂ "ಸ ಹಿ ರತ್ನಾನಿ" ಎಂಬ ಮಂತ್ರದಿಂದ ರತ್ನಗಳನ್ನೂ "ಹಿರಣ್ಯರೂಪಃ" ಎಂಬ ಮಂತ್ರದಿಂದ ಬಂಗಾರವನ್ನೂ ಕಲಶದಲ್ಲಿ ಹಾಕಿಬಿಟ್ಟು ತುಳಸಿಯಿಂದ ಅರ್ಚನೆ ಮಾಡಬೇಕು. "ಸವಿತುಷ್ಟ್ವಾ" ಇತ್ಯಾದಿ ಮಂತ್ರಗಳಿಂದ ಶ್ರೀಹರಿಗೆ ಅರ್ಘ್ಯ ಮುಂತಾದವುಗಳನ್ನು ಕೊಡಬೇಕು. "ಶ್ರೀಯೇ ತೇ ಪಾದ" ಎಂಬ ಮಂತ್ರದಿಂದ ಕಾಲುಗಳನ್ನು ತೊಳೆಯುವುದಕ್ಕೆ ನೀರನ್ನು ಸಮರ್ಪಿಸಬೇಕು." "ಭದ್ರಾ ತೇ ಹಸ್ತ" ಎಂಬ ಮಂತ್ರದಿಂದ ಕೈಗಳನ್ನು ತೊಳೆಯುವುದಕ್ಕೆ ನೀರನ್ನು ಸಮರ್ಪಿಸಬೇಕು. "ದ್ಯಾ ಸುಪರ್ಣಾ" ಎಂಬ ಮಂತ್ರದಿಂದ ಮುಖವನ್ನು

ತೊಳೆಯುವುದಕ್ಕೆ ನೀರನ್ನು ಕೊಡಬೇಕು. "ಆಪೋ ಅಸ್ಮಾನ್" ಎಂಬ ಮಂತ್ರದಿಂದ ಬಾಯಿ ಮುಕ್ಕಳಿಸುವುದಕ್ಕೆ ನೀರನ್ನು ಕೊಡಬೇಕು. "ಹಿರಣ್ಮಯ" ಎಂಬ ಮಂತ್ರದಿಂದ ದಂತಕಾಷ್ಠವನ್ನು ಸಮರ್ಪಿಸಬೇಕು. "ಬೃಹಸ್ಪತೇ ಪ್ರಥಮ" ಎಂಬ ಮಂತ್ರದಿಂದ ನಾಲಿಗೆಯನ್ನು ಶುದ್ಧಪಡಿಸಬೇಕು. ಅಥವಾ "ಆಪ ಇದ್ವಾ ಉಭೇ" ಎಂಬ ಮಂತ್ರದಿಂದ ಆರಂಭಿಸಿ ಮೂರು ಮಂತ್ರಗಳಿಂದ ಬಾಯಿ ಮುಕ್ಕಳಿಸಬೇಕು. "ಆಪೋ ಹಿ ಷ್ಠಾ ಮಯೋಭುವಃ" ಎಂಬ ಮಂತ್ರದಿಂದ ಆಚಮನವನ್ನೂ" "ಮೂರ್ಧಾನಂ ದಿವಃ" ಎಂಬ ಮಂತ್ರದಿಂದ ತೈಲಾಭ್ಯಂಗ ಮತ್ತು ತಲೆಗೆ ಗಂಧ ಸಮರ್ಪಣವನ್ನೂ ಮಾಡಬೇಕು. "ತದ್ವಿ ವಯಸ್ತೌ" ಎಂಬ ಮಂತ್ರದಿಂದ ತಲೆಕೂದಲುಗಳನ್ನು ತೊಳೆಯಬೇಕು. "ಶ್ರೀಯೇ ಜು ಪುಷ್ಟಿ" ಎಂಬ ಮಂತ್ರದಿಂದ ಮೈಗಳನ್ನು ತೊಳೆಯಬೇಕು. "ಆಯವಃ ಪ್ರಥಮಂ" ಎಂಬ ಮಂತ್ರದಿಂದ ಅಂಗಗಳ ಮೇಲೆ ನೀರನ್ನು ಅಭಿಷೇಕ ಮಾಡಬೇಕು. ಅನಂತರದಲ್ಲಿ ವಿಷ್ಣುವನ್ನು ಸ್ತುತಿಸುವ ಸೂಕ್ತಗಳಿಂದ ಅಭಿಷೇಕವನ್ನು ಮಾಡಬೇಕು. "ಆಪ್ಯಾಯಸ್ವ" ಎಂಬ ಮಂತ್ರದಿಂದ ದನದ ಹಾಲಿನಿಂದಲೂ "ದಧಿಕ್ರಾವ್ಣೋ" ಎಂಬ ಮಂತ್ರದಿಂದ ಮೊಸರಿನಿಂದಲೂ "ಘೃತಂ ಮಿಮಿಕ್ಷೇ" ಎಂಬ ಮಂತ್ರದಿಂದ ತುಪ್ಪದಿಂದಲೂ "ಮಧುವಾತಾ" ಎಂಬ ಮಂತ್ರದಿಂದ ಜೇನಿನಿಂದಲೂ "ತಂ ತೇವ ವಯಂ ಯಥಾ ಗೋಭಿಃ" ಎಂಬ ಮಂತ್ರದಿಂದ ಕಬ್ಬಿನ ಹಾಲಿನಿಂದಲೂ ಹೀಗೆ ಪಂಚಾಮೃತಗಳಿಂದ ಅಭಿಷೇಕ ಮಾಡಿ ಗಂಧವನ್ನು ಲೇಪನ ಮಾಡಿ ಶ್ರೀಸೂಕ್ತ ಮತ್ತು ಪುರುಷ ಸೂಕ್ತಗಳಿಂದ ಪುನಃ ಶ್ರೀಹರಿಗೆ ಅಭಿಷೇಕವನ್ನು ಮಾತಬೇಕು. "ವನಸ್ಪತೇ" ಎಂಬ ಮಂತ್ರದಿಂದ ವಾದ್ಯಘೋಷವನ್ನು ಸಮರ್ಪಿಸಬೇಕು.

ಶ್ರಿಯೇ ಜಾತೇತ್ಯೃಚಾ ದದ್ಯಾನ್ನೀರಾಜನಮುಖಂ ತಥಾ |
ಯುವಾ ಸುವಾಸೇತ್ಯೃಚಾ ವಸ್ತ್ರೇಣಾಂಗಂ ಪ್ರಮಾರ್ಜಯೇತ್ ||
ಪ್ರಸೇನಾನೀತಿ ಮಂತ್ರೇಣ ವಸ್ತ್ರಂ ಸಂವೇಷ್ಟಯೇತ್ತತಃ |
ಯುವಂ ವಸ್ತ್ರಾಣೀತಿ ಋಚಾ ಕಿರೀಟಂ ಶಿರಸಿ ಕ್ಷಿಪೇತ್ ||
ಋಕ್ಸಾಮಾಭ್ಯಾಮಿತಿ ಶ್ರೋತ್ರೇ ಕುಂಡಲೇ ಮಕರೇಽರ್ಪಯೇತ್ |
ದ್ಯುಮನಸೋ ಪಸ ಇತಿ ಕೇಯೂರಾದಿ ವಿಭೂಷಣಮ್ ||
ಆಯತೇ ಯಸ್ಯೇತಿ ಋಚಾ ಹಾರಾನ್ ದದ್ಯಾಚ್ಚ ನಿರ್ಮಲಾನ್ |
ಹಸ್ತಾಭ್ಯಾಂ ದಶಶಾಖಾಭ್ಯಾಮಿತ್ಯೃಚಾ ಚಾಂಗುಲೀಯಕಮ್ ||
ಯಸ್ಯ ತ್ರಿಪೂರ್ಣಾ ಮಧುನಾ ನೂಪುರೇ ವಿನ್ಯಸೇಚ್ಛುಭೇ |
ಇಂದ್ರ ಉತ್ತರ ಇತಿ ಕಟಿಸೂತ್ರಂ ಸದೋದಿತಮ್ ||
ಸ್ವಸ್ತಿದಾ ವಿಶಸ್ಪತಿರಿತ್ಯಾಯುಧಾನಿ ಸಮರ್ಪಯೇತ್ |
ಊರ್ಣ ಇದಂದ್ರೇತ್ಯೃಚಾ ಛತ್ರಂ ಸುವಿಮಲಂ ತಥಾ ||
ಸೋಮಪ್ರವೃತ್ತೇತ್ಯೃಚಾ ಚಾಮರಂ ಹೈಮಮುತ್ತಮಮ್ |
ಸೋಮಾ ಪೂಷಣೇತ್ಯೃಚಾ ತಾಲವೃಂತೌ ಸುವರ್ಚಸೌ ||
ರೂಪಂ ರೂಪಮಿತ್ಯೃಚಾ ದದ್ಯಾದಾದರ್ಶನಂ ಶುಭಮ್ |
ಇಂದ್ರಮೇವ ಧಿಷಣೇತ್ಯೃಚಾ ಆಸನೇ ವಿನಿವೇಶಯೇತ್
ಇಹೈವೇತಿ ಋಚಾ ದದ್ಯಾದ್ವೃಕ್ಷ್ಯಾ ಚ ಕುಶವಿಷ್ಟರಮ್ |
ಅಪಃ ಸ್ವಂತರಿತಿ ಋಚಾ ಪಾದ್ಯಂ ದದ್ಯಾಚ್ಚ ಭಕ್ತಿತಃ ||

ಗೌರೀರ್ಮಿಮಾಯಸೂಕ್ತೇನ ಅರ್ಘ್ಯಂ ಹಸ್ತೇ ನಿವೇದಯೇತ್ |
ಪಿಬಾ ಸೋಮಮಿತ್ಯನೇನ ಮಧುಪರ್ಕಂ ಚ ಪ್ರಾಶಯೇತ್ ||
ಅಪ್ಸ್ವಗ್ನೇಽಧಿಷ್ಟವೇತಿ ಪುನರಾಚಮನಂ ಚರೇತ್ |
ಅರ್ಚಂತು ತ್ವಾ ಹವಾಮಹೇತ್ಯಕ್ಷತೈರರ್ಚಯೇಚ್ಛುಭೈಃ ||
ತಂಡುಲಾಃ ಸಹರಿದ್ರಾಸ್ತು ಅಕ್ಷತಾ ಇತಿ ಕೀರ್ತಿತಾಃ | (ಹಾರೀತರ ವಚನ)

"ಶ್ರಿಯೇ ಜಾತಃ" ಎಂಬ ಮಂತ್ರದಿಂದ ಆರತಿಯನ್ನು ಮಾಡಬೇಕು. "ಯುವಾ ಸುವಾಸಾಃ" ಎಂಬ ಮಂತ್ರದಿಂದ ಮೈಯನ್ನು ಒರಸಬೇಕು. "ಪ್ರಸೇನಾನೀಃ" ಎಂಬ ಮಂತ್ರದಿಂದ ವಸ್ತ್ರವನ್ನು ಉಡಿಸಬೇಕು. "ಯುವಂ ವಸ್ತ್ರಾಣಿ"ಎಂಬ ಮಂತ್ರದಿಂದ ಕಿರೀಟವನ್ನಿಡಬೇಕು. "ಋತ್ವಾಮಾಭ್ಯಾಂ" ಎಂಬ ಮಂತ್ರದಿಂದ ಎರಡು ಕಿವಿಗಳಲ್ಲಿ ಮಕರಕುಂಡಲಗಳನ್ನು ಸಮರ್ಪಿಸಬೇಕು. "ಧ್ರುಮನಸೋಽಪಸಃ" ಎಂಬ ಮಂತ್ರದಿಂದ ಭುಜಕೀರ್ತಿ ಮುಂತಾದ ಆಭರಣಗಳನ್ನು ಸಮರ್ಪಿಸಬೇಕು. "ಆಯತೇ ಯಸ್ಯ" ಎಂಬ ಮಂತ್ರದಿಂದ ನಿರ್ಮಲವಾದ ಹಾರಗಳನ್ನು ಸಮರ್ಪಿಸಬೇಕು. ಹಸ್ತಾಭ್ಯಾಂ ದಶಶಾಖಾಭ್ಯಾಂ" ಎಂಬ ಮಂತ್ರದಿಂದ ಉಂಗುರಗಳನ್ನು ಸಮರ್ಪಿಸಬೇಕು. "ಯಸ್ಯ ತ್ರಿಪೂರ್ಣಾ ಮಧುನಾ" ಎಂಬ ಮಂತ್ರದಿಂದ ಎರಡು ಕಾಲುಗಳಲ್ಲಿ ಕಾಲುಗಡಗಗಳನ್ನಿಡಬೇಕು. "ಇಂದ್ರ ಉತ್ತರ" ಎಂಬ ಮಂತ್ರದಿಂದ ಉಡುದಾರವನ್ನು ಸಮರ್ಪಿಸಬೇಕು. "ಸ್ವಸ್ತಿದಾ ವಿಶ್ಪತಿಃ" ಎಂಬ ಮಂತ್ರದಿಂದ ಆಯುಧಗಳನ್ನು ಸಮರ್ಪಿಸಬೇಕು. "ದೀರ್ಘ ಇದಂದ್ರ:" ಎಂಬ ಮಂತ್ರದಿಂದ ವಿಶಾಲವಾದ ಶ್ವೇತಛತ್ರವನ್ನು ಸಮರ್ಪಿಸಬೇಕು, "ಸೋಮಃ ಪ್ರವೃತ್ತ:" ಎಂಬ ಮಂತ್ರದಿಂದ ಬಂಗಾರದಿಂದ ನಿರ್ಮಿತವಾದ ಚಾಮರಗಳನ್ನು ಸಮರ್ಪಿಸಬೇಕು. "ಸೋಮಾ ಪೂಷಣಾ" ಎಂಬ ಮಂತ್ರದಿಂದ ಪ್ರಕಾಶಿಸುತ್ತಿರುವ ಎರಡು ಬೀಸಣಿಗೆಗಳನ್ನು ಸಮರ್ಪಿಸಬೇಕು. "ರೂಪಂ ರೂಪಂ" ಎಂಬ ಮಂತ್ರದಿಂದ ಸುಂದರವಾದ ಕನ್ನಡಿಯನ್ನು ಸಮರ್ಪಿಸಬೇಕು. "ಇಂದ್ರಮೇವ ಧಿಷಣಾ" ಎಂಬ ಮಂತ್ರದಿಂದ ಆಸನದಲ್ಲಿ ಶ್ರೀ ಹರಿಯನ್ನು ಕುಳ್ಳಿರಿಸಬೇಕು. "ಇತ್ಥೇವ" ಎಂಬ ಮಂತ್ರದಿಂದ ಭಕ್ತಿಯಿಂದ ದರ್ಭೆಯ ಆಸನವನ್ನೂ "ಅಪಃ ಸ್ವಂತಃ" ಎಂಬ ಮಂತ್ರದಿಂದ ಭಕ್ತಿಯಿಂದ ಕಾಲುಗಳನ್ನು ತೊಳೆಯುವುದಕ್ಕೆ ನೀರನ್ನೂ "ಗೌರೀರ್ಮಿಮಾಯ" ಎಂಬ ಸೂಕ್ತದಿಂದ ಕೈಗಳನ್ನು ತೊಳೆಯುವುದಕ್ಕೆ ಅರ್ಘ್ಯವನ್ನೂ "ಪಿಬಾ ಸೋಮಂ" ಎಂಬ ಮಂತ್ರದಿಂದ ಮಧುಪರ್ಕವನ್ನೂ ಸಮರ್ಪಿಸಬೇಕು. "ಅಪ್ಸ್ವಗ್ನೇಽಧಿಷ್ಟವ" ಎಂಬ ಮಂತ್ರದಿಂದ ಪುನಃ ಆಚಮನಕ್ಕಾಗಿ ನೀರನ್ನು ಸಮರ್ಪಿಸಬೇಕು. ಅಕ್ಕಿಯನ್ನು ಅರಶಿನದ ಜೊತೆಯಲ್ಲಿ ಮಿಶ್ರಣ ಮಾಡಿದರೆ ಅಕ್ಷತೆ ಎಂದೆನಿಸುವವು. "ಅರ್ಚಂತು ತ್ವಾ ಹವಾಮಹೇ" ಎಂಬ ಮಂತ್ರದಿಂದ ಅಕ್ಷತೆಗಳಿಂದ ಪೂಜಿಸಬೇಕು.

ವಿಷ್ಣೋರ್ನು ಕಮಿತಿ ಋಚಾ ಧೂಪಂ ದದ್ಯಾತ್ಸುದೀಪಿತಮ್ |
ಅಗಾವ ಇತಿ ಸೂಕ್ತೇನ ದೀಪಾನ್ನೀರಾಜಯೇಚ್ಛುಭಾನ್ ||
ಇದಂ ತೇ ಪಾತ್ರಮಿತ್ಯೃಚಾ ಭಾಜನಂ ವಿನ್ಯಸೇಚ್ಛುಭಮ್ |
ತಸ್ಮಾ ಅರಂ ಗಮಾಮವೇತಿ ಪಾತ್ರಪ್ರಕ್ಷಾಲನಂ ಚರೇತ್ ||
ತಸ್ಮಿನ್ನಾದೇ ತಸ್ಮಿವಾಂಸಂ ಗವಾಜ್ಯೇನಾಭಿಪೂರಯೇತ್ ||
ಪಿತುರ್ನಸ್ತೋಷಮಿತಿ ಸೂಕ್ತೇನ ದದ್ಯಾದನ್ನಾದಿಕಂ ಹರೇಃ ||
ತಸ್ಮಾ ತ್ರಿತೇತಿ ಋಚಾ ಸಹಿರಣ್ಯಂ ಘೃತಂ ತಥಾ |
ತಮಸ್ಮೈರಾಯುವತಯೋ ದದ್ಯಾದಾಪೋಶನಂ ಘೃತಮ್ ||

ತತಃ ಪ್ರಾಣಾದ್ಯಾಹುತಯೋ ಹೋತವ್ಯಾಃ ಪರಮಾತ್ಮನಿ |
ಅಗ್ನೇ ಜುಷಸ್ವನ ಇತಿ ಪಂಚಭಿಶ್ಚ ಯಥಾಕ್ರಮಂ ||
ಸಮುದ್ರಾದೂರ್ಮಿರಿತಿ ಸೂಕ್ತೇನ ಘೃತಧಾರಾಂ ಸಮಾಚರೇತ್|
ಪರೋ ಮಾತ್ರೇತಿ ಸೂಕ್ತೇನ ಭೋಜಯೇತ್ಪ್ರಯತೋ ಹರಿಮ್ ||
ತುಭ್ಯಂ ಹಿ ನಾಥ ಇತಿ ಪ್ರಾಯಃ ಸರ್ವಂ ನಿವೇದಯೇತ್ |
ಇಂದ್ರಾಪೀತೇರಿತ್ಯನೇನ ದದ್ಯಾದಾಪೋಶನಂ ಪುನಃ ||
ಪ್ರ ತ ಆಸಾವ ಇತಿ ಹಸ್ತಪ್ರಕ್ಷಾಳನಂ ಚರೇತ್ |
ಸರಸ್ವತೀಂ ದೇವಯಂತಂ ತ್ರಿಭಿರ್ಗಂಡೂಷಮೇವ ಚ ||
ವೃಷ್ಟಿಂ ದಿವಃ ಶತಧಾರೇತಿ ದದ್ಯಾದಾಚಮನೀಯಕಂ |
ಶಿಶುಂ ನ ಜಾತ ಇತ್ಯೃಚಾ ಮುಖಹಸ್ತೌ ಚ ಮಾರ್ಜಯೇತ್ ||
ದಕ್ಷಿಣಾವತಾಮಿತಿ ಋಚಾ ದದ್ಯಾತ್ತಾಂಬೂಲಮುತ್ತಮಮ್ |
ಸ್ವಾದುಃ ಪವಸ್ವೇತೀ ಋಚಾ ದದ್ಯಾದಾಚಮನಂ ಪುನಃ ||
ಆಯನ್ನೆರಿತಿ ಸೂಕ್ತಾಭ್ಯಾಂ ದದ್ಯಾತ್ಪುಷ್ಪಾಂಜಲಿಂ ತತಃ |
ದೀಪಾನ್ನೀರಾಜಯೇತ್ಪಶ್ಚಾದ್ಧ್ರುವಸೂಕ್ತೇನ ವೈಷ್ಣವಮ್ ||
ಯತ ಇಂದ್ರೇತ್ಯಾದಿಋಗ್ಭಿಃ ಪಙ್ಕ್ತೀ ರಕ್ಷಾಃ ಪ್ರದಾಪಯೇತ್ |
ದೇವಾನಾಮಿತಿ ಸೂಕ್ತೇನ ಉಪಸ್ಥಾನಜಪಂ ಚರೇತ್ ||
ತದ್ವಿಷ್ಣೋರಿತಿ ಮಂತ್ರಾಭ್ಯಾಂ ಪ್ರಣಮೇಚ್ಚಾತಿಭಕ್ತಿತಃ |
ಗೌರೀರ್ಮಿಮಾಯೇತಿ ಋಚಾ ದದ್ಯಾದ್ಧ್ಯವಸಿತಾಂ ತತಃ ||
ಸಹಸ್ರನಾಮಭಿಃ ಸ್ತುತ್ವಾ ಪಶ್ಚಾದ್ಧೋಮಂ ಸಮಾಚರೇತ್ |
ಪ್ರಾತರೌಪಾಸನಂ ಹುತ್ವಾ ತಸ್ಮಿನ್ನಗ್ನೌ ಜನಾರ್ದನಮ್ ||
ಧ್ಯಾತ್ವಾ ಸಂಪೂಜ್ಯ ಜುಹುಯಾದ್ವೈಷ್ಣವಂ ಪ್ರತ್ಯೃಚಂ ಹವಿಃ |
ಶ್ರೀ ಸೂಕ್ತಾಭ್ಯಾಮಪಿ ತಥಾ ಹುತ್ವಾ ಘೃತಯುತಂ ಹವಿಃ ||
ಯಾಭಿಃ ಸೋಮೋ ಮೋದತೇತಿ ಮಾತೃಭ್ಯೋ ಜುಹುಯಾದ್ಧವಿಃ |
ಕಿಂತದ್ವೇದ ನ ಇತ್ಯನೇನ ನಮೋಽಂತಂ ಜುಹುಯಾದ್ಧವಿಃ || (ಹಾರೀತರ ವಚನ)

"ವಿಷ್ಣೋರ್ನು ಕಂ" ಎಂಬ ಮಂತ್ರದಿಂದ ಧೂಪವನ್ನೂ "ಅಗಾವಃ" ಎಂಬ ಸೂಕ್ತದಿಂದ ಆರತಿಯನ್ನೂ ಮಾಡಬೇಕು. "ಇದಂ ತೇ ಪಾತ್ರಂ" ಎಂಬ ಮಂತ್ರದಿಂದ ಎಲೆ ಅಥವಾ ಭೋಜನ ಪಾತ್ರವನ್ನಿಡಬೇಕು. "ತಸ್ಮಾ ಆರಂಗಮಾಮವಃ" ಎಂಬ ಮಂತ್ರದಿಂದ ಆ ಪಾತ್ರೆಯನ್ನು ತೊಳೆಯಬೇಕು. "ತಸ್ಮಿನ್ನಾದೇತಸ್ಮಿವಾಂಸಂ" ಎಂಬ ಮಂತ್ರದಿಂದ ದನದ ತುಪ್ಪದಿಂದ ಅಭಿಘಾರಣ ಮಾಡಬೇಕು. "ಪಿತುರ್ನಸ್ತೋಷಂ" ಎಂಬ ಸೂಕ್ತದಿಂದ ಭೋಜನಪಾತ್ರದಲ್ಲಿ ಅನ್ನ ಮುಂತಾದ ವಸ್ತುಗಳನ್ನು ಬಡಿಸಬೇಕು. "ತಸ್ಮಾ ತ್ರಿಪತ್" ಎಂಬ ಮಂತ್ರದಿಂದ ಭಂಗಾರಸಹಿತವಾದ ತುಪ್ಪವನ್ನು ಬಡಿಸಬೇಕು. "ತಮಸ್ಮೆ ರಾಹುತಯೇ" ಎಂಬ ಮಂತ್ರದಿಂದ ತುಪ್ಪದಿಂದ ಆಪೋಶನವನ್ನು ಕೂಡಬೇಕು. ಆನಂತರದಲ್ಲಿ ಪ್ರಾಣಾದಿಪಂಚಾಹುತಿಗಳನ್ನು ಶ್ರೀಹರಿಗೆ ಕೊಡಬೇಕು. ಪಂಚಾಹುತಿಗಳನ್ನು ಕೊಡುವಾಗ "ಅಗ್ನೇ ಜುಷಸ್ವ ನಃ" ಎಂದು ಪ್ರತ್ಯೇಕವಾಗಿ ಹೇಳಬೇಕು. "ಸಮದ್ರಾ-

ದೂರ್ವಿ:" ಎಂಬ ಸೂಕ್ತವನ್ನು ಹೇಳುತ್ತಾ ತುಪ್ಪದ ಧಾರೆಯನ್ನು ಸುರಿಯಬೇಕು. "ಪರೋ ಮಾತ್ರಯಾ" ಎಂಬ ಸೂಕ್ತವನ್ನು ಹೇಳುತ್ತಾ ಶ್ರೀಹರಿಯನ್ನು ಊಟ ಮಾಡಿಸಬೇಕು. "ತುಭ್ಯಂ ಹಿ ನಾಥಃ" ಎಂಬ ಮಂತ್ರವನ್ನು ಹೇಳುತ್ತಾ ತನ್ನಲ್ಲಿರುವ ಸರ್ವಸ್ವವನ್ನೂ ಶ್ರೀಹರಿಗೆ ಸಮರ್ಪಿಸಬೇಕು. "ಇಂದ್ರಪೀತೇ" ಎಂಬ ಮಂತ್ರವನ್ನು ಹೇಳುತ್ತಾ ಉತ್ತರಾಪೋಶನವನ್ನು ಕೊಡಬೇಕು. "ಪ್ರಾತ ಆಸಾವಃ" ಎಂಬ ಮಂತ್ರವನ್ನು ಹೇಳುತ್ತಾ ಶ್ರೀಹರಿಯ ಕೈಗಳನ್ನು ತೊಳೆಯಬೇಕು. "ಸರಸ್ವತೀಂ ದೇವಯಂತಂ" ಎಂಬ ಮಂತ್ರದಿಂದ ಆರಂಭಿಸಿ ಮೂರು ಮಂತ್ರಗಳಿಂದ ಬಾಯಿ ಮುಕ್ಕಳಿಸುವಂತೆ ಮಾಡಬೇಕು. "ವೃಷ್ಟಿಂ ದಿವಂ ಶತಧಾರ" ಎಂಬ ಮಂತ್ರದಿಂದ ಆಚಮನಕ್ಕೆ ನೀರನ್ನು ಕೊಡಬೇಕು. "ಶಿಶುಂ ನ ಜಾತಃ" ಎಂಬ ಮಂತ್ರದಿಂದ ಮುಖವನ್ನೂ ಕೈಗಳನ್ನೂ ಒರೆಸಬೇಕು. "ದಕ್ಷಿಣಾವತಾಂ" ಎಂಬ ಮಂತ್ರದಿಂದ ಉತ್ತಮವಾದ ತಾಂಬೂಲವನ್ನು ಸಮರ್ಪಿಸಬೇಕು. "ಸ್ವಾದುಃ ಪವಸ್ವ" ಎಂಬ ಮಂತ್ರದಿಂದ ಪುನಃ ಆಚಮನಕ್ಕೆ ನೀರನ್ನು ಕೊಡಬೇಕು. "ಆಯನ್ನೆಃ" ಎಂಬ ಸೂಕ್ತದಿಂದಲೂ ಅನಂತರದ ಸೂಕ್ತದಿಂದಲೂ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು. "ಧ್ರುವಾದ್ಯೌಃ" ಎಂಬ ಧ್ರುವಸೂಕ್ತದಿಂದ ಮಂಗಳನೀರಾಜನವನ್ನು ಮಾಡಬೇಕು. "ಯತ ಇಂದ್ರ" ಮುಂತಾದ ಆರು ಮಂತ್ರಗಳಿಗೆ ತನಗೆ ರಕ್ಷೆಯು ಏರ್ಪಡುವಂತೆ ಪ್ರಾರ್ಥಿಸಬೇಕು. "ದೇವಾನಾಂ" ಎಂಬ ಸೂಕ್ತದಿಂದ ಉಪಸ್ಥಾನಜಪವನ್ನು ಮಾಡಬೇಕು. "ತದ್ವಿಷ್ಣೋಃ" ಎಂಬ ಮಂತ್ರದಿಂದ ಆರಂಭಿಸಿ ಎರಡು ಮಂತ್ರಗಳಿಂದ ಅತ್ಯಂತಭಕ್ತಿಯಿಂದ ನಮಸ್ಕರಿಸಬೇಕು. "ಗೌರೀರ್ಮಿಮಾಯ" ಎಂಬ ಮಂತ್ರದಿಂದ ದೇವರನ್ನು ಹೊದಿಸಬೇಕು. ಸಹಸ್ರನಾಮಗಳಿಂದ ಶ್ರೀಹರಿಯನ್ನು ಸ್ತುತಿಸಿ ಕೊನೆಗೆ ಹೋಮವನ್ನು ಮಾಡಬೇಕು.

ಹೋಮಕ್ರಮವನ್ನು ಕ್ರಮವಾಗಿ ಹೇಳುತ್ತೇವೆ. ಪ್ರಾತಃಕಾಲದ ಔಪಾಸನವನ್ನು ಮಾಡಬೇಕು. ಆ ಅಗ್ನಿಯಲ್ಲಿ ಜನಾರ್ದನನ್ನು ಧ್ಯಾನಿಸಿ ಪೂಜಿಸಬೇಕು. ಅನಂತರದಲ್ಲಿ ವಿಷ್ಣುಸೂಕ್ತದಲ್ಲಿರುವ ಒಂದೊಂದು ಮಂತ್ರಗಳಿಂದ ಒಂದೊಂದು ಆಹುತಿಯಂತೆ ಹೋಮವನ್ನು ಮಾಡಬೇಕು. ಶ್ರೀಸೂಕ್ತವನ್ನು ಎರಡು ಸಲ ಆವೃತ್ತಿಮಾಡಿ ತುಪ್ಪದಿಂದ ಯುಕ್ತವಾದ ಹವಿಸ್ಸಿನ ಹೋಮವನ್ನು ಮಾಡಬೇಕು. "ಯಾಭಿಃ ಸೋಮೋ ಮೋದತೇ" ಎಂಬ ಮಂತ್ರದಿಂದ ಮಾತೃಗಳಿಗೆ ಹೋಮವನ್ನು ಮಾಡಬೇಕು. "ಕಿಂ ತದ್ವೇದ ನ " ಎಂಬ ಮಂತ್ರದ ಕೊನೆಯಲ್ಲಿ "ನಮಃ" ಎಂಬ ಪದವನ್ನು ಸೇರಿಸಿ ಹೋಮವನ್ನು ಮಾಡಬೇಕು.

ಸುಪರ್ಣಂ ವಿಪ್ರಾ ಇತಿ ಋಚಾ ಸುಪರ್ಣಾಯ ಮಹಾತ್ಮನೇ |
ಚಮೂಷಚ್ಛ್ಯೇನ ಇತಿ ಚ ಸೇನೇಶಾಯ ವಿಧೀಯತಾಮ್ ||
ಪವಿತ್ರಂ ತ ಇತಿ ದ್ವಾಭ್ಯಾಂ ಚಕ್ರಾಯಾಮಿತತೇಜಸೇ |
ಸ್ವಾದುಷಂ ಸದ ಇತ್ಯೃಚಾ ಯತಿಭ್ಯೋ ಜುಹುಯಾದ್ಧವಿಃ ||
ಇಂದ್ರಃ ಶ್ರೇಷ್ಠಾನೀತೀಂದ್ರಾಯ ಅಗ್ನಿಮೂರ್ಧೇತಿ ಪಾವಕಮ್ |
ಯಮಾಯ ಸೋಮೇತಿ ಧರ್ಮಂ ನಿಋತಿಂ ಮೋಷುಣೇತ್ಯೃಚಾ ||
ಯಚ್ಚಿದ್ಧಿತೇತಿ ವರುಣಂ ವಾಯುರ್ಯುಂಕ್ಷ್ವೇತಿ ಮಾರುತಮ್ |
ದ್ರವಿಣೋದಾ ದದಾತು ನೋ ದ್ರವಿಣಾಧೀಶಮೇವ ಚ ||
ತ್ರ್ಯಂಬಕೇತಿ ಋಚಾ ರುದ್ರಂ ಆ ನಃ ಪ್ರಜಾಮಿತಿ ಪ್ರಜಾಪತಿಮ್ |
ಯಜ್ಞೇನೇತ್ಯೃಚಾ ಸಾಧ್ಯಾಂ ವ್ಯೋಮತೋ ಯದ್ಧ್ವವೇದಿತಿ ||
ಮರುತಸ್ತ್ವಥಾಯನೇ ಸಪತ್ನಾ ಇತ್ಯೃಚಾ ವಸುರುದ್ರೇಭ್ಯ ಏವ ಚ |
ವಿಶ್ವೇದೇವಾಂಶ್ಚತಸೃಭಿರ್ಯೇ ದೇವಾಸಋಚಾ ತಥಾ ||

ಸರ್ವೇಭ್ಯಶ್ಚೇತಿ ದೇವೇಭ್ಯೋ ಜುಹುಯಾದನ್ನಮುತ್ತಮಮ್ |
ನಾಸತ್ಯಾಭ್ಯಾಮಿತಿ ಋಚಾ ಅಶ್ವಿನೀಭ್ಯಾಂ ತಥೈವ ಚ ||
ಸಹಸ್ತೋಮೇತ್ಯೃಚಾಽಥ ಋಷಿಛಂದೋಭ್ಯ ಏವ ಚ |
ಸೋಮಾಪೂಷೇತ್ಯೃಚಾ ಚೈವ ಸೂರ್ಯಾಚಂದ್ರಮಸೋಸ್ತಥಾ ||
ಸಂಸಮಿದ್ವಿವಸೂಕ್ತೇನ ವೈಷ್ಣವೇಭ್ಯಸ್ತಥೈವ ಚ |
ತತಃ ಸ್ವಿಷ್ಟಕೃತಂ ಹುತ್ವಾ ಭೂತೇಭ್ಯಶ್ಚ ಬಲಿಂ ಕ್ಷಿಪೇತ್ ||
ನಮೋ ಮಹದ್ಭ್ಯ ಇತ್ಯೃಚಾ ಬಲಿಂ ಭೂಮೌ ವಿನಿಕ್ಷಿಪೇತ್ |
ಆಚಮ್ಯ ವಾರಿಣಾ ಪಶ್ಚಾನ್ಮಂತ್ರಹೋಮಂ ಸಮಾಚರೇತ್ ||
ಏತಚ್ಛ್ರೌತವಿಧಾನಂ ತು ಮುನಿಭಿಃ ಸಂಪ್ರಕೀರ್ತಿತಮ್ |
ಸಮ್ಯಗುಕ್ತಂ ಮಯಾ ತೇದ್ಯ ನಿಶ್ಚಿತಂ ಮತಮುತ್ತಮಮ್ ||
ಏತತ್ಕ್ರಿಯತಮಂ ವಿಷ್ಣೋಃ ಶ್ರೀನಾಥಸ್ಯ ತು ಸರ್ವದಾ |
ಶ್ರೌತೇನೈವ ಹರಿಂ ದೇವಾನರ್ಚಯಂತಿ ಮನೀಷಿಣಃ ||
ಶ್ರೌತಸ್ಮಾರ್ತಾಗಮೈರ್ವಿಷ್ಣೋಃ ಪೂಜನಂ ತ್ರಿವಿಧಂ ಸ್ಮೃತಮ್ |
ಏತಚ್ಛ್ರೌತಂ ತತಃ ಸ್ಮಾರ್ತಂ ಪೌರುಷೇಣ ಚ ಯತ್ಕೃತಮ್ ||
ಮಂತ್ರೈರಷ್ಟಾದಶಾದ್ಯೈಸ್ತು ತೇ ದಿವ್ಯಾ ಮಮ ಸಂಮತಾಃ |
ಶ್ರೌತಮೇವ ವಿಶಿಷ್ಟಂ ಸ್ಯಾತ್ತೇಷಾಂ ನೃಪವರೋತ್ತಮ ||
ಶ್ರೌತಮೇವ ಸದಾ ವಿಪ್ರಾಃ ಪ್ರಕುರ್ವಂತಿ ಜನಾರ್ದನೇ |
ಯಜಂತಿ ಕೇಚಿತ್ತ್ರಿತಯಂ ತ್ರಿಸಂಧ್ಯಾಸು ಚ ದೇಶಿಕಾಃ || (ಹಾರೀತರ ವಚನ)

"ಸುಪರ್ಣಂ ವಿಪ್ರಾಃ" ಎಂಬ ಮಂತ್ರದಿಂದ ಗರುಡನಿಗೂ "ಚಮೂಷಚ್ಛ್ಯೇನಃ" ಎಂಬ ಮಂತ್ರದಿಂದ ಸೇನೇಶನಿಗೂ "ಪವಿತ್ರಂ ತೇ" ಎಂಬ ಮಂತ್ರದಿಂದಲೂ ಅನಂತರದಲ್ಲಿರುವ ಸುದರ್ಶನ ಮಂತ್ರದಿಂದಲೂ ಚಕ್ರಕ್ಕೂ "ಸ್ವಾದುಷಂ ಸದಃ" ಎಂಬ ಮಂತ್ರದಿಂದ ಯತಿಗಳಿಗೂ "ಇಂದ್ರ ಶ್ರೇಷ್ಠಾನಿ" ಎಂಬ ಮಂತ್ರದಿಂದ ಇಂದ್ರನಿಗೂ "ಅಗ್ನಿರ್ಮೂರ್ಧಾ" ಎಂಬ ಮಂತ್ರದಿಂದ ಅಗ್ನಿಗೂ "ಯಮಾಯ ಸೋಮಂ" ಎಂಬ ಮಂತ್ರದಿಂದ ಯಮಧರ್ಮನಿಗೂ "ಮೋಷುಣೇ" ಎಂಬ ಮಂತ್ರದಿಂದ ನಿಋತಿಗೂ "ಯಚ್ಚಿದ್ಧಿತೇ" ಎಂಬ ಮಂತ್ರದಿಂದ ವರುಣನಿಗೂ "ವಾಯುರ್ಯುಂಕ್ತೇ" ಎಂಬ ಮಂತ್ರದಿಂದ ವಾಯುವಿಗೂ "ದ್ರವಿಣೋದಾ ದದಾತು ನೋ" ಎಂಬ ಮಂತ್ರದಿಂದ ಕುಬೇರನಿಗೂ "ತ್ರ್ಯಂಬಕಂ" ಎಂಬ ಮಂತ್ರದಿಂದ ರುದ್ರನಿಗೂ "ಆನಃ ಪ್ರಜಾಪತಿಂ" ಎಂಬ ಮಂತ್ರದಿಂದ ಪ್ರಜಾಪತಿಗೂ "ಯಜ್ಞೇನ" ಎಂಬ ಮಂತ್ರದಿಂದ ಸರಸ್ವತಿಗೂ "ವ್ಯೋಮತೋ ಯದ್ಭವೇತ್" ಎಂಬ ಮಂತ್ರದಿಂದ ಮರುತ್ತಾಗಳಿಗೂ "ಆಯನೇ ಸಪತ್ನಾ" ಎಂಬ ಮಂತ್ರದಿಂದ ವಸುಗಳಿಗೂ ರುದ್ರರಿಗೂ ವಿಶ್ವೇದೇವರ ಮೂರು ಋಕ್ಕುಗಳಿಂದಲೂ "ಯೇ ದೇವಾಸಃ" ಎಂಬ ಮಂತ್ರದಿಂದಲೂ ವಿಶ್ವೇದೇವರಿಗೂ "ನಾಸತ್ಯಾಭ್ಯಾಂ" ಎಂಬ ಮಂತ್ರದಿಂದ ಅಶ್ವಿನಿದೇವತೆಗಳಿಗೂ "ಸಹ ಸ್ತೋಮೇ" ಎಂಬ ಮಂತ್ರದಿಂದ ಋಷಿಗಳಿಗೂ ಛಂದಸ್ಸುಗಳಿಗೂ "ಸೋಮಾಪೂಷ" ಎಂಬ ಮಂತ್ರದಿಂದ ಸೂರ್ಯಚಂದ್ರರುಗಳಿಗೂ "ಸಂಸಮಿದ್ವಿವ" ಎಂಬ ಮಂತ್ರದಿಂದ ಎಲ್ಲಾ ವೈಷ್ಣವರಿಗೂ ಆಹುತಿಯನ್ನು ಕೊಡಬೇಕು. ಕೊನೆಗೆ ಸ್ವಿಷ್ಟಕೃದ್ಧೋಮವನ್ನು ಮಾಡಬೇಕು. ಹೋಮವು ಮುಗಿದ ಮೇಲೆ "ನಮೋ ಮಹದ್ಭ್ಯಃ" ಎಂಬ ಮಂತ್ರದಿಂದ ಎಲ್ಲಾ ಭೂತಗಳ ತೃಪ್ತಿಗಾಗಿ ಭೂಮಿಯಲ್ಲಿ ಬಲಿಯನ್ನು ಕೊಡಬೇಕು. ಕೊನೆಗೆ ಆಚಮನವನ್ನು ಮಾಡಬೇಕು.

ಆ ಮೇಲೆ ಪ್ರಾತಃಕಾಲದ ಔಪಾಸನ ಮಂತ್ರಗಳಿಂದ ಮಾಡಬೇಕಾದ ಹೋಮವನ್ನು ಮಾಡಬೇಕು. ಇದು ಶ್ರೌತಹೋಮವಿಧಾನ. ಶ್ರೀಹರಿಗೆ ಈ ವಿಧಾನವೇ ಅತ್ಯಂತಪ್ರಿಯವಾದುದು. ಇದನ್ನು ಚೆನ್ನಾಗಿ ನಾನು ಹೇಳುವೆನು. ಶ್ರೀಹರಿಯ ಪೂಜೆಯು ಶ್ರೌತ, ಸ್ಮಾರ್ತ, ಆಗಮೋಕ್ತ ಎಂಬ ಮೂರು ವಿಧವಾಗಿದೆ. ಈ ಮೂರರಲ್ಲಿಯೂ ಶ್ರೌತವೇ ಶ್ರೇಷ್ಠವಾದುದು. ಕೆಲವರು ಪ್ರತಿದಿನದಲ್ಲಿಯೂ ಮೂರು ವಿಧವಾದ ಪೂಜೆಗಳನ್ನು ಮೂರು ಕಾಲಗಳಲ್ಲಿಯೂ ಮಾಡುವರು. ಮತ್ತೆ ಕೆಲವರು ಒಂದೊಂದು ಕಾಲಗಳಲ್ಲಿ ಒಂದು ಪೂಜೆಯಂತೆ ಮೂರು ಕಾಲಗಳಲ್ಲಿ ಮೂರು ಪೂಜೆಗಳನ್ನೂ ಮಾಡುವರು.

## ಸ್ಮಾರ್ತಪೂಜಾ

ಹಿಂದೆ ಶ್ರೌತಪೂಜಾ ಅಂದರೆ ಶ್ರುತ್ಯುಕ್ತವಾದ ಪೂಜೆಯ ಕ್ರಮವನ್ನು ತಿಳಿಸಿದೆವು. ಈಗ ಸ್ಮಾರ್ತಪೂಜಾ ಅಂದರೆ ಸ್ಮೃತ್ಯುಕ್ತಪೂಜಾ ವಿಧಿಯನ್ನು ತಿಳಿಸುತ್ತೇವೆ. ಈ ಸ್ಮಾರ್ತಪೂಜೆಯ ಎರಡು ವಿಧ. (1) ಪುರುಷಸೂಕ್ತದಲ್ಲಿರುವ ಹದಿನಾರು ಋಕ್ಕುಗಳಲ್ಲಿ ಒಂದೊಂದು ಉಪಚಾರದಂತೆ ಹದಿನಾರು ಋಕ್ಕುಗಳಿಗೆ ಹದಿನಾರು ಉಪಚಾರಗಳನ್ನು ಮಾಡುತ್ತಾ ಪೂಜಿಸುವುದು ಮೊದಲನೆಯ ಕ್ರಮ. ಇದು ಅತ್ಯಂತ ಸುಲಭ ಮತ್ತು ಶೀಘ್ರದಲ್ಲಿ ಮುಗಿಯುವ ಪೂಜೆಯೆನಿಸುತ್ತದೆ.

(2) ಈ ಎರಡನೆಯ ಪೂಜೆಯು ನಾನಾವಿಧವಾಗಿದೆ. ಅದನ್ನು ಮುಂದೆ ವಿವರಿಸುವೆವು. ಮೊದಲಿನಲ್ಲಿ ಪುರುಷಸೂಕ್ತದ ಋಷಿ ದೇವತಾ ಛಂದಸ್ಸುಗಳನ್ನು ತಿಳಿಸುವೆವು.

ಬ್ರಹ್ಮೋವಾಚ -

ಸೂಕ್ತಸ್ಯಾಂಗೇಷು ಭಗವನ್ ಪೌರುಷಸ್ಯ ಕಥಂ ಭವೇತ್ |
ನ್ಯಾಸಃ ಕಥಂ ವಾ ತತ್ತ್ವೇನ ಅರ್ಚಯಾಮಿತಥಾ ಮಮ ||
ಪೃಚ್ಛತಃ ಸಂಶಯೋ ನ ಸ್ಯಾದ್ಗೃಹಾರ್ಚನವಿಧಿಃ ಕಥಮ್ |
ಯಾಥಾತಥ್ಯೇನ ವಕ್ತವ್ಯಂ ಮಯಿ ಚೇದಸ್ತ್ಯನುಗ್ರಹಃ || (ಪಾದ್ಮ ಸಂಹಿತಾ)

"ಬ್ರಹ್ಮದೇವರಿಗೂ ನಾರಾಯಣನಿಗೂ ಸಂವಾದವು ಪಾದ್ಮಸಂಹಿತೆಯಲ್ಲಿ ಹೇಳಲ್ಪಟ್ಟಿದೆ. (1) ಓ ಶ್ರೀಹರಿಯೇ, ಪುರುಷಸೂಕ್ತದಲ್ಲಿರುವ ಹದಿನಾರು ಮಂತ್ರಗಳಿಂದ ಮಾಡುವ ಅಂಗನ್ಯಾಸ ಅಂದರೆ ಯಾವ ಯಾವ ಮಂತ್ರದಿಂದ ಯಾವ ಯಾವ ಅಂಗವನ್ನು ಮುಟ್ಟಬೇಕು? ಹಾಗೆ ಮುಟ್ಟಿದ್ದರಿಂದ ದೇಹವು ಮಂತ್ರಮಯ ಅಂದರೆ ಅತ್ಯಂತಪರಿಶುದ್ಧವಾಗುತ್ತದೆ. (2) ನಿನ್ನನ್ನು ವಿಧಿಪ್ರಕಾರವಾಗಿ ಪೂಜಿಸುವ ವಿಧಿ ಯಾವುದು? (3) ಮನೆಯಲ್ಲಿರುವ ನಿನ್ನನ್ನು ಪೂಜಿಸುವ ವಿಧಾನವನ್ನು ಸ್ವಲ್ಪವೂ ಸಂಶಯವು ಬಾರದಂತೆ ನನಗೆ ಹೇಳಬೇಕು. ನಿನಗೆ ನನ್ನಲ್ಲಿ ಅನುಗ್ರಹವಿದ್ದರೆ ಎಲ್ಲಾ ಪ್ರಶ್ನೆಗಳಿಗೂ ನಿಜವಾದ ಉತ್ತರವನ್ನು ಕೊಡಬೇಕು.

ಶ್ರೀ ಭಗವಾನುವಾಚ -

ಛಂದೋಽನುಷ್ಟುಪ್ ಋಷಿಸ್ತಸ್ಯ ವಾಸುದೇವೋಽಸ್ಯ ದೇವತಾ | (ಪಾದ್ಮ ಸಂಹಿತಾ )

"ಶ್ರೀ ಹರಿಯು ಬ್ರಹ್ಮದೇವರ ಪ್ರಶ್ನೆಗೆ ಉತ್ತರವನ್ನು ಕೊಡಲು ಆರಂಭಿಸಿದನು. ಮೊದಲು ಪುರುಷಸೂಕ್ತದಿಂದ ಮಾಡುವ ಶ್ರೀಹರಿಯ ಪೂಜೆಯನ್ನು ತಿಳಿಸುವನು. ಯಾವ ಮಂತ್ರವನ್ನು ಮೊದಲು ತಿಳಿದವನು ಯಾವನೋ ಅವನು ಆ ಮಂತ್ರಕ್ಕೆ ಋಷಿಯೆನಿಸುವನು. ಆ ಮಂತ್ರಗಳಲ್ಲಿರುವ ಅಕ್ಷರಸಂಖ್ಯೆಯು ಅವುಗಳ ಛಂದಸ್ಸನ್ನೂ ತಿಳಿಸುತ್ತದೆ. ಆ ಮಂತ್ರಗಳಲ್ಲಿ ಹೊಗಳಲ್ಪಡುವವನು ದೇವತೆಯೆನಿಸುವನು ಒಂದೊಂದು ಮಂತ್ರಗಳ ಋಷಿಯನ್ನೂ ಛಂದಸ್ಸನ್ನೂ ದೇವತೆಯನ್ನೂ ಹೇಳಿಯೇ ಆ ಮಂತ್ರವನ್ನು ಜಪಿಸಬೇಕು. ಮತ್ತು ಆ ಮಂತ್ರಗಳಿಂದ ಪೂಜಾದಿಗಳನ್ನು ಮಾಡಬೇಕು. ಇಲ್ಲದಿದ್ದರೆ ಆ ಮಂತ್ರದ ಜಪ ಮತ್ತು ಆ ಮಂತ್ರದಿಂದ ಮಾಡುವ ಪೂಜಾದಿಗಳು ನಿಷ್ಫಲವಾಗುತ್ತವೆ. ಮತ್ತು ಅನರ್ಥಕರವಾಗುತ್ತವೆ."

"ಪುರುಷಸೂಕ್ತ ಮಂತ್ರಕ್ಕೆ ಋಷಿ ಮುಂತಾದವರನ್ನು ತಿಳಿಸುವೆವು. ಆ ಮಂತ್ರಕ್ಕೆ ನಾರಾಯಣನೇ ಋಷಿಯೆನಿಸುವನು. ಅನುಷ್ಟುಪ್ ಛಂದಸ್ಸು. ವಾಸುದೇವನು ದೇವತೆಯೆನಿಸುವನು.

ಮೂರ್ಧ್ನಿ ಫಾಲೇ ನಯನಯೋರ್ನಾಸಿಕಾಯಾಂ ತಥಾ ಮುಖೇ |
ಗಲೇ ಬಾಹ್ವೋಃಶ್ಚ ಹೃದಯೇ ನಾಭೌ ಲಿಂಗೇ ಚ ಮೇಹನೇ ||
ಊರ್ವೋಃಶ್ಚರಣಯೋರ್ನ್ಯಸ್ಯೇತ್ಪ್ರಥಮಾದ್ಯಾ ಋಚಃ ಕ್ರಮಾತ್ | (ಪಾದ್ಮ ಸಂಹಿತಾ)

"ಪುರುಷಸೂಕ್ತದಲ್ಲಿ ಹದಿನಾರು ಋಕ್ಕುಗಳಿವೆ ಎಂದು ಹೇಳಿರುವೆವು. ಆ ಹದಿನಾರು ಋಕ್ಕುಗಳನ್ನು ಕ್ರಮವಾಗಿ ತಿಳಿಸುವೆವು."

## ಪುರುಷಸೂಕ್ತ

ಸಹಸ್ರಶೀರ್ಷೇತಿ ಷೋಡಶರ್ಚಸ್ಯ ಸೂಕ್ತಸ್ಯ ನಾರಾಯಣ ಋಷಿಃ | ಅನುಷ್ಟುಪ್ ಛಂದಃ | ಅಂತ್ಯಾ ತ್ರಿಷ್ಟುಪ್ | ಪರಮಪುರುಷೋ ದೇವತಾ || ಪುರುಷಸೂಕ್ತಮಂತ್ರಾಭಿಷೇಕೇ (ಮಂತ್ರಪಠನೇ) ವಿನಿಯೋಗಃ ||

ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ |
ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಮ್ || 1 ||
ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ |
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ || 2 ||
ಏತಾವಾನಸ್ಯ ಮಹಿಮಾಽತೋ ಜ್ಯಾಯಾಂಶ್ಚ ಪೂರುಷಃ |
ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ || 3 ||
ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾಭವತ್ಪುನಃ |
ತತೋ ವಿಷ್ವಙ್ ವ್ಯಕ್ರಾಮತ್ಸಾಶನಾನಶನೇ ಅಭಿ || 4 ||
ತಸ್ಮಾದ್ವಿರಾಳಜಾಯತ ವಿರಾಜೋ ಅಧಿಪೂರುಷಃ |
ಸ ಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ || 5 ||
ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ |
ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ || 6 ||
ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ಪುರುಷಂ ಜಾತಮಗ್ರತಃ |
ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ || 7 ||
ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂ ಪೃಷದಾಜ್ಯಮ್ |
ಪಶೂಂಸ್ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಂಶ್ಚ ಯೇ || 8 ||
ತಸ್ಮಾದ್ಯಜ್ಞಾತ್ಸರ್ವಹುತ ಋಚಃ ಸಾಮಾನಿ ಜಜ್ಞಿರೇ |
ಛಂದಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ || 9 ||
ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ |
ಗಾವೋ ಹ ಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ || 10 ||

ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ |
ಮುಖಂ ಕಿಮಸ್ಯ ಕೌ ಬಾಹೂ ಕಾವೂರೂ ಪಾದಾ ಉಚ್ಯೇತೇ || 11 ||
ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ |
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ || 12 ||
ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ |
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ || 13 ||
ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ |
ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾಂ ಅಕಲ್ಪಯನ್ || 14 ||
ಸಪ್ತಾಸ್ಯಾಸನ್ ಪರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ |
ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಮ್ || 15 ||
ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ |
ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ಓಮ್ || 16 ||

### ಪುರುಷಸೂಕ್ತದಿಂದ ಷೋಡಶೋಪಚಾರಪೂಜೆ

ಆದ್ಯಯಾಽವಾಹಯೇದ್ದೇವಮೃಚಾ ತು ಪುರುಷೋತ್ತಮಮ್ |
ದ್ವಿತೀಯಯಾಽಽಸನಂ ದದ್ಯಾತ್ಪಾದ್ಯಂ ದದ್ಯಾತ್ತೃತೀಯಯಾ ||
ಚತುರ್ಥ್ಯಾರ್ಘ್ಯಂ ಪ್ರದಾತವ್ಯಂ ಪಂಚಮ್ಯಾಽಽಚಮನೀಯಕಮ್ |
ಷಷ್ಠ್ಯಾ ಸ್ನಾನಂ ಪ್ರಕುರ್ವೀತ ಸಪ್ತಮ್ಯಾ ವಸ್ತ್ರಮೇವ ಚ ||
ಯಜ್ಞೋಪವೀತಮಷ್ಟಮ್ಯಾ ನವಮ್ಯಾ ಗಂಧಮೇವ ಚ |
ದಶಮ್ಯಾ ಪುಷ್ಪದಾನಂ ಸ್ಯಾದೇಕಾದಶ್ಯಾ ತು ಧೂಪಕಂ ||
ದ್ವಾದಶ್ಯಾ ತು ತಥಾ ದೀಪಂ ತ್ರಯೋದಶ್ಯಾ ಚರುಂ ತಥಾ |
ಚತುರ್ದಶ್ಯಾ ನಮಸ್ಕುರ್ಯಾತ್ಪಂಚದಶ್ಯಾ ಪ್ರದಕ್ಷಿಣಮ್ |
ಷೋಡಶ್ಯೋದ್ವಾಸನಂ ಕುರ್ಯಾಚ್ಛೇಷಕರ್ಮಾಣಿ ಪೂರ್ವವತ್ |
ಸಮಿದನ್ನಾಜ್ಯಹೋಮಂ ಚ ಪ್ರತ್ಯೃಚಂ ಜಾತವೇದಸಮ್ || (ಪಾದ್ಮ ಸಂಹಿತಾ)

"ಪುರುಷಸೂಕ್ತದಲ್ಲಿರುವ ಪ್ರಥಮ ಋಕ್ಕಿನಿಂದ ಪುರುಷೋತ್ತಮನಾದ ಶ್ರೀ ಹರಿಯನ್ನು ಆವಾಹಿಸಬೇಕು. ಎರಡನೆಯ ಋಕ್ಕಿನಿಂದ ಆಸನವನ್ನೂ, ಮೂರನೆಯ ಋಕ್ಕಿನಿಂದ ಪಾದ್ಯ ಅಂದರೆ ಪಾದಪ್ರಕ್ಷಾಳನಕ್ಕೆ ನೀರನ್ನೂ, ನಾಲ್ಕನೆಯ ಋಕ್ಕಿನಿಂದ ಅರ್ಘ್ಯ ಅಂದರೆ ಕೈಯನ್ನು ತೊಳೆಯುವುದಕ್ಕೆ ನೀರನ್ನೂ, ಐದನೆಯ ಋಕ್ಕಿನಿಂದ ಆಚಮನೀಯಕ ಅಂದರೆ ಆಚಮನಕ್ಕೆ ನೀರನ್ನೂ, ಆರನೆಯ ಋಕ್ಕಿನಿಂದ ಅಭಿಷೇಕವನ್ನೂ, ಏಳನೆಯ ಋಕ್ಕಿನಿಂದ ವಸ್ತ್ರವನ್ನೂ, ಎಂಟನೆಯ ಋಕ್ಕಿನಿಂದ ಯಜ್ಞೋಪವೀತವನ್ನೂ, ಒಂಭತ್ತನೆಯ ಋಕ್ಕಿನಿಂದ ಗಂಧವನ್ನೂ, ಹತ್ತನೆಯ ಋಕ್ಕಿನಿಂದ ಪುಷ್ಪಸಮರ್ಪಣೆಯನ್ನೂ, ಹನ್ನೊಂದನೆಯ ಋಕ್ಕಿನಿಂದ ಧೂಪವನ್ನು, ಹನ್ನೆರಡನೆಯ ಋಕ್ಕಿನಿಂದ ದೀಪಸಮರ್ಪಣೆಯನ್ನೂ, ಹದಿಮೂರನೆಯ ಋಕ್ಕಿನಿಂದ ನೈವೇದ್ಯಸಮರ್ಪಣವನ್ನೂ, ಹದಿನಾಲ್ಕನೆಯ ಋಕ್ಕಿನಿಂದ ನಮಸ್ಕಾರಗಳನ್ನೂ, ಹದಿನೈದನೆಯ ಋಕ್ಕಿನಿಂದ ಪ್ರದಕ್ಷಿಣವನ್ನು, ಹದಿನಾರನೆಯ ಋಕ್ಕಿನಿಂದ ಉದ್ವಾಸನವನ್ನೂ ಮಾಡಬೇಕು. ಉಳಿದ ಎಲ್ಲಾ ಕರ್ಮಗಳನ್ನೂ ಹಿಂದೆ

ಹೇಳಿರುವ ಶ್ರೌತಪೂಜೆಯಂತೆ ಮಾಡಬೇಕು. ಒಂದೊಂದು ಋಕ್ಕಿನಿಂದ ಸಮಿತ್ತುಗಳನ್ನೂ ಅನ್ನ ಮುಂತಾದ ಚರುಗಳನ್ನೂ ತುಪ್ಪವನ್ನೂ ಅಗ್ನಿಯಲ್ಲಿ ಆಹುತಿಕೊಡಬೇಕು.

**ಷೋಡಶೋಪಚಾರಪೂಜಾವಿಧಿ**

ಸ್ವಗೃಹೇ ಪೂಜಯೇದ್ವಿಷ್ಣುಂ ಶುಚೌ ದೇಶೇ ಗೃಹೇ ಕ್ವಚಿತ್ |
ಸ್ಥಲೇ ರತ್ನಮಯೇ ಧಾಮ್ನಿ ವಿಮಾನೇ ಚ ತಥಾವಿಧೇ ||
ಅಪ್ಸ್ವಗ್ನೌ ಹೃದಯೇ ಸೂರ್ಯೇ ಸ್ಥಂಡಿಲೇ ಪ್ರತಿಮಾಸು ಚ |
ಪುಷ್ಪೋದಪಾತ್ರಮಾದಾಯ ತಿಷ್ಠನ್ನಾವಾಹಯೇದ್ಧರಿಮ್ ||

"ಒಂದೆ ಪುರುಷಸೂಕ್ತದಲ್ಲಿರುವ ಒಂದೊಂದು ಋಕ್ಕುಗಳಿಂದ ಒಂದೊಂದು ಉಪಚಾರದಂತೆ ಹದಿನಾರು ಉಪಚಾರಗಳನ್ನು ಸಮರ್ಪಿಸಬೇಕೆಂದು ಹೇಳಿದೆವು. ಈಗ ಅದೇ ವಿಷಯವನ್ನು ವಿವರಿಸುವೆವು. ಒಬ್ಬೊಬ್ಬನು ತನ್ನ ಮನೆಯಲ್ಲಿ ಶ್ರೀಹರಿಯನ್ನು ಪೂಜಿಸಬೇಕು. (1) ತನ್ನ ಮನೆಯಲ್ಲಿ ಪರಿಶುದ್ಧವಾದ ಪ್ರದೇಶ. (2) ರತ್ನಮಯವಾದ ಮಂಟಪ. (3) ರತ್ನಮಯವಾದ ವಿಮಾನ. (4) ನೀರು (5) ಅಗ್ನಿ (6) ಹೃದಯ (7) ಸೂರ್ಯ. (8) ಸರ್ವತೋಭದ್ರ ಮುಂತಾದ ಭೂಮಿಯಲ್ಲಿ ಬರೆದಿರುವ ಮಂಡಲಗಳು. (9) ಪ್ರತಿಮೆಗಳು ಮುಂತಾದವುಗಳಲ್ಲಿ ಪುಷ್ಪ ಮತ್ತು ನೀರಿನ ಪಾತ್ರೆಗಳನ್ನು ತೆಗೆದುಕೊಂಡು ನಿಂತುಕೊಂಡು ಶ್ರೀಹರಿಯನ್ನು ಆವಾಹಿಸಬೇಕು.

ದೂರ್ವಾಭಿರ್ವ್ಯಾಹೃತಿಭಿಶ್ಚ ಪ್ರತ್ಯೇಕಂ ಪುರುಷೋತ್ತಮಮ್ |
ವ್ಯಸ್ತಾಭಿಶ್ಚ ಸಮಸ್ತಾಭಿರ್ವೇದಾದ್ಯೈ ರಾಸನಂ ತಥಾ ||

"ಪ್ರತ್ಯೇಕವಾದ ವ್ಯಾಹೃತಿಮಂತ್ರಗಳಿಂದಲೂ ಒಟ್ಟು ಗೂಡಿದ ವ್ಯಾಹೃತಿಮಂತ್ರಗಳಿಂದಲೂ ವೇದಾದಿಗಳಿಂದಲೂ ಪ್ರತ್ಯೇಕವಾಗಿ ಗರಿಕೆ ಹುಲ್ಲುಗಳಿಂದ ಪುರುಷೋತ್ತಮನಿಗೆ ಆಸನವನ್ನು ಸಮರ್ಪಿಸಬೇಕು.

ಪಾತ್ರಮಂಭಶ್ಚ ಸಾವಿತ್ರ್ಯಾ ಅಭಿಮಂತ್ರ್ಯ ಪವಿತ್ರಕಮ್ |
ತದರ್ಘ್ಯಂ ವಿಷ್ಣುಗಾಯತ್ರ್ಯಾ ದದ್ಯಾತ್ತ್ರೀಣಿ ಪದೇತಿ ಚ ||

"ಜಲಪಾತ್ರೆಯನ್ನೂ ಜಲವನ್ನೂ ಪವಿತ್ರವನ್ನೂ ಗಾಯತ್ರೀಮಂತ್ರದಿಂದ ಅಭಿಮಂತ್ರಿಸಬೇಕು. "ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ | ತನ್ನೋ ವಿಷ್ಣುಃ ಪ್ರಚೋದಯಾತ್ ||" ಎಂಬ ವಿಷ್ಣುಗಾಯತ್ರೀಮಂತ್ರದಿಂದಲೂ "ತ್ರೀಣಿ ಪದಾ ವಿಚಕ್ರಮೇ" ಎಂಬ ಮಂತ್ರದಿಂದಲೂ ಅರ್ಘ್ಯವನ್ನು ಕೊಡಬೇಕು.

ಪಾದ್ಯಮಾಚಮನೀಯಂ ಚ ಪ್ರಣವೇನ ಪ್ರಕಲ್ಪಯೇತ್ |

"ಪಾದ್ಯವನ್ನೂ ಆಚಮನೀಯನ್ನೂ ಪ್ರಣವಮಂತ್ರದಿಂದ ಸಮರ್ಪಿಸಬೇಕು.

ಮಂತ್ರೈಃ ಸ್ನಾಪನ ಮಬ್ಲಿಂಗೈಃ

"ಗಂಗಾದಿಜಲಗಳ ಮಹಿಮೆಯನ್ನು ವರ್ಣಿಸುತ್ತಿರುವ ಮಂತ್ರಗಳಿಂದ ಅಭಿಷೇಕವನ್ನು ಮಾಡಬೇಕು"

ಅಂಗಂ ಚ ವಿಮೃಜೇತ್ತತಃ |
ವ್ಯಾಹೃತ್ಯಾ ಧೌತವಸ್ತ್ರೇಣ ಋತಂ ಚ ಇತಿ ವಿದ್ಯಯಾ ||

"ವ್ಯಾಹೃತಿಮಂತ್ರ" "ಋತಂ ಚ" ಎಂಬ ಮಂತ್ರ ಇವುಗಳಿಂದ ಚೆನ್ನಾಗಿ ಒಗೆದ ವಸ್ತ್ರದಿಂದ ಒರೆಸಿ ವಸ್ತ್ರವನ್ನು ಸಮರ್ಪಿಸಬೇಕು."

ವಾಸೋ ವೇದಾದಿನಾ ದದ್ಯಾದುಪವೀತಂ ಚ

ವೇದ ಮುಂತಾದ ಮಂತ್ರಗಳಿಂದ ಯಜ್ಞೋಪವೀತವನ್ನು ಸಮರ್ಪಿಸಬೇಕು.

ಲೇಪನಮ್ |

ಇದಂ ವಿಷ್ಣುರಿತಿ ಪ್ರೋಚ್ಯ ಪ್ರಭಾವೇನ ಪ್ರಸಾಧನಮ್ |

"ಇದಂ ವಿಷ್ಣುರ್ವಿಚಕ್ರಮೇ" ಎಂಬ ಮಂತ್ರದಿಂದ ಗಂಧಲೇಪನವನ್ನೂ ಅಲಂಕಾರವನ್ನೂ ಮಾಡಬೇಕು.

ತದ್ವಿಷ್ಣೋರಿತಿ ಪುಷ್ಪಾಣಿ ಜಿತಂ ತ ಇತಿ ಧೂಪಕಮ್ |

"ತದ್ವಿಷ್ಣೋಃ ಪರಮಂ ಪದಂ" ಎಂಬ ಮಂತ್ರದಿಂದ ಪುಷ್ಪವನ್ನು ಸಮರ್ಪಿಸಬೇಕು. "ಜಿತಂ ತೇ ಪುಂಡರೀಕಾಕ್ಷ" ಎಂಬ ಮಂತ್ರದಿಂದ ಧೂಪವನ್ನು ಸಮರ್ಪಿಸಬೇಕು."

ಉದ್ದೀಪ್ಯಸ್ವೇತಿ ದೀಪಂ ಚ ದೇವಸ್ಯೇತಿ ಚ ವೈ ಹವಿಃ |

"ಉದ್ದೀಪ್ಯಸ್ವ" ಎಂಬ ಮಂತ್ರದಿಂದ ದೀಪವನ್ನು ಸಮರ್ಪಿಸಬೇಕು. "ದೇವಸ್ಯ ತ್ವಾ" ಎಂಬ ಮಂತ್ರದಿಂದ ನೈವೇದ್ಯವನ್ನು ಸಮರ್ಪಿಸಬೇಕು.

ವಾಸುದೇವಾದಿಮಂತ್ರೈಶ್ಚ ಮತ್ಸ್ಯಾದ್ಯೈಃ ಕೇಶವಾದಿಭಿಃ |
ಪುಷ್ಪಾಣಿ ದತ್ವಾ ಧ್ಯಾತ್ವಾಽಥ ತತ್ತನ್ಮೂರ್ತೀರ್ಯಥಾತಥಮ್ ||

"ವಾಸುದೇವ ಮುಂತಾದ ನಾಲ್ಕು ಮಂತ್ರಗಳಿಂದಲೂ ಮತ್ಸ್ಯ ಮುಂತಾದ ಹತ್ತು ಮಂತ್ರಗಳಿಂದಲೂ ಕೇಶವ ಮುಂತಾದ ಹನ್ನೆರಡು ಮಂತ್ರಗಳಿಂದಲೂ ಶಾಸ್ತ್ರೋಕ್ತರೀತಿಯಿಂದ ಆಯಾ ಮೂರ್ತಿಗಳನ್ನು ಧ್ಯಾನಿಸುತ್ತ ಪುಷ್ಪಗಳನ್ನು ಸಮರ್ಪಿಸಬೇಕು."

ಚತುರ್ಮುಖಾದಿದೇವಾನಾಂ ಪರಿವಾರತಯಾಽರ್ಚನಮ್ |
ತೇ ನ ಸ್ವತಂತ್ರೇಣ ಯಷ್ಟವ್ಯಾ ವೈಷ್ಣವೇನ ಗೃಹಾರ್ಚನೇ ||

"ವಿಷ್ಣುಭಕ್ತನಾದವನು ಚತುರ್ಮುಖ ಬ್ರಹ್ಮದೇವ ಮುಂತಾದವರನ್ನು ಶ್ರೀಹರಿಯ ಪರಿವಾರಗಳಾದಲ್ಲಿ ಸೇರಿದವರೆಂದು ತಿಳಿದು ಪೂಜಿಸಬೇಕು. ಅವರು ಸ್ವತಂತ್ರರೆಂದು ತಿಳಿದು ಪೂಜಿಸಕೂಡದು."

ಜಪಕಾಲೇ ತು ಸೂಕ್ತಂ ವಾ ದ್ವಾದಶಾಕ್ಷರಮೇವ ವಾ |
ಜಪೇತ್ತನ್ಮೂರ್ತಿಮನಾ ಧ್ಯಾತ್ವಾ ತುರ್ಯಂ ಚ ಗೋಚರಮ್ ||

'ಪುಷ್ಪಾರ್ಚನೆ ಮುಂತಾದವುಗಳನ್ನು ಮಾಡುವಾಗ ಅರ್ಚನೆಮಂತ್ರಗಳನ್ನು ಜಪಿಸಬೇಕೆಂದು ಹೇಳಿರುವೆವು. ಆ ಮಂತ್ರಗಳನ್ನು ಜಪಿಸುವಾಗ ಪುರುಷಸೂಕ್ತಪ್ರತಿಪಾದ್ಯ ಮೂರ್ತಿಯನ್ನಾಗಲೀ ದ್ವಾದಶಾಕ್ಷರಮಂತ್ರ ಪ್ರತಿಪಾದ್ಯಮೂರ್ತಿಯನ್ನಾಗಲೀ ತುರ್ಯಮೂರ್ತಿಯನ್ನಾಗಲೀ ಧ್ಯಾನಿಸುತ್ತಾ ಅರ್ಚನೆಯನ್ನು ಮಾಡಬೇಕು."

ಯೋ ನಿತ್ಯಂ ಪೂಜಯೇದ್ವಿಷ್ಣುಂ ಗೃಹಸ್ಥೋ ವೇಶ್ಮನಿ ಸ್ವಯಮ್ |
ಸ್ವಾನಪತ್ಯಕುಲೋದ್ಭೂತಾನ್ ಪುರುಷಾನೇಕವಿಂಶತಿಮ್ |
ವಿಷ್ಣೋಃ ಪದಂ ವಾ ಸಾಲೋಕ್ಯಂ ಯದ್ಯನ್ಯಮಭಿವಾಂಛಿತಮ್ |

"ಗೃಹಸ್ಥನಾದವನು ಒಬ್ಬೊಬ್ಬನೂ ತನ್ನ ಮನೆಯಲ್ಲಿ ಶ್ರೀ ಹರಿಯನ್ನು ಪೂಜಿಸಲೇ ಬೇಕು. ಅವನು ತನ್ನಿಂದ ಆರಂಭಿಸಿ ಅನಂತರದಲ್ಲಿರುವ ಇಪ್ಪತ್ತೊಂದು ಜನರನ್ನು ವಿಷ್ಣುವಿನ ಲೋಕಕ್ಕೆ ಕರೆದುಕೊಂಡುಹೋಗುವನು. ಸಾಲೋಕ್ಯ ಮುಂತಾದ ಮುಕ್ತಿಗಳನ್ನೂ ಅಪೇಕ್ಷಿಸಿದ ಎಲ್ಲಾ ವಸ್ತುಗಳನ್ನೂ ಪಡೆಯುವನು.

## ಅಷ್ಟಾಕ್ಷರೋಕ್ತಪೂಜಾ

"ಅಷ್ಟಾಕ್ಷರೇಣ ಸಂಪೂಜ್ಯ" (ತಂತ್ರಸಾರ ವಚನ) ತತ್ರಸ್ಥಿತವಾರಾನುಕ್ತ್ವಾ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣು ಪ್ರೀತ್ಯರ್ಥಂ ಶ್ರೀಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿನಂ ಅನಂತಕಲ್ಯಾಣಗುಣಪರಿಪೂರ್ಣಂ ಕ್ಷೀರಾಬ್ಧಿಶಾಯಿನಂ ಶ್ರೀಲಕ್ಷ್ಮೀನಾರಾಯಣಮುದ್ದಿಶ್ಯ ಯಥಾಶಕ್ತಿ ತಂತ್ರಸಾರೋಕ್ತವಿಧಿನಾ ಓಂ ಭಗವತೋ ಬಲೇನ ಓಂ ಶ್ರೀ ಭಗವತೋ ವೀರ್ಯೇಣ ಓಂ ಶ್ರೀ ಭಗವತಸ್ತೇಜಸಾ ಓಂ ಶ್ರೀ ಭಗವತಃ ಕರ್ಮಣಾ ಓಂ ಶ್ರೀ ವಾಸುದೇವಸ್ಯ ಪೂಜಾತ್ಮಕಂ ಕರ್ಮ ಕರಿಷ್ಯೇ ಇತಿ ಸಂಕಲ್ಪ್ಯ ಕುರ್ಯಾತ್.

ತ್ರಿಕಾಲಮರ್ಚಯೇದ್ವಿಷ್ಣುಂ ಭಕ್ತ್ಯಾ ವೈ ಪುರುಷೋತ್ತಮಮ್ |
ನೈಮಿತ್ತಿಕೇ ವಿಶೇಷೇಣ ಪೂಜಯೇದ್ವಿಧಿನಾ ತತಃ || (ತಂತ್ರಸಾರ ವಚನ)

"ಅಷ್ಟಾಕ್ಷರೇಣ ಸಂಪೂಜ್ಯ" ಎಂದು ತಂತ್ರಸಾರದಲ್ಲಿ ಅಷ್ಟಾಕ್ಷರದಿಂದ ಶ್ರೀವಾಸುದೇವನ ಪೂಜೆಯು ಹೇಳಲ್ಪಟ್ಟಿದೆ. ಈ ಪೂಜೆಯಲ್ಲಿ ಒಂದೊಂದು ಮಂತ್ರಗಳನ್ನು ಹೇಳುವಾಗಲೂ "ಓಂ ನಮೋ ನಾರಾಯಣಾಯ" ಎಂಬ ನಾರಾಯಣಾಷ್ಟಾಕ್ಷರಮಂತ್ರವನ್ನೂ ಹೇಳುತ್ತಾ ಪೂಜಿಸಬೇಕು. ಆದಿಯಲ್ಲಿ ಸಂಕಲ್ಪವನ್ನು ಮಾಡಬೇಕು. ತಿಥಿ, ವಾರ ಮುಂತಾದವುಗಳನ್ನು ಹೇಳಬೇಕು. ಅನಂತರದಲ್ಲಿ ಶ್ರೀವಿಷ್ಣುವಿನ ಪ್ರೇರಣೆಯಿಂದ ಶ್ರೀವಿಷ್ಣುವಿನ ಪ್ರೀತಿಗಾಗಿ ಶ್ರೀಮಧ್ವಾಚಾರ್ಯರ ಹೃದಯ ಕಮಲದ ಮಧ್ಯದಲ್ಲಿರುವವನಾಗಿಯೂ ಅನಂತಕಲ್ಯಾಣಗುಣಗಳಿಂದ ಪರಿಪೂರ್ಣನಾಗಿಯೂ ಕ್ಷೀರಸಮುದ್ರದಲ್ಲಿ ಮಲಗಿರುವವನಾಗಿಯೂ ಇರುವ ಶ್ರೀಲಕ್ಷ್ಮೀಸಹಿತನಾಗಿರುವ ನಾರಾಯಣನ ಪ್ರೀತಿಯನ್ನು ಉದ್ದೇಶಿಸಿ ಯಥಾಶಕ್ತಿ ತಂತ್ರಸಾರೋಕ್ತ ವಿಧಿಯಿಂದ ಶ್ರೀವಾಸುದೇವನ ಪೂಜೆಯನ್ನು ಮಾಡುವೆನು. ಅದೂ ಕೂಡ ಶ್ರೀಹರಿಯು ನನ್ನಲ್ಲಿ ಸನ್ನಿಹಿತನಾಗಿ ಕೊಟ್ಟಿರುವ ಬಲ, ವೀರ್ಯ, ತೇಜಸ್ಸು ಮತ್ತು ಕರ್ಮಗಳಿಂದ ಮಾಡುವೆನು. ಎಂದು ಸಂಕಲ್ಪಿಸಬೇಕು. ಅನಂತರದಲ್ಲಿ ಕಲಶಪೂಜೆಯನ್ನು ಮಾಡಬೇಕು.

## ಕಲಶಪೂಜಾ

ನಿತ್ಯಂ ಪುಣ್ಯದಿವಸೇ ವಾಸುದೇವಸ್ಯಾಗ್ರೇ ಪಾರ್ಶ್ವಯೋರ್ವಾ ಸ್ವಯಮೇವ ಕಲಶಂ ಪೂಜಯೇತ್ ಅನ್ಯೈರ್ವಿಶಿಷ್ಟೈರ್ವಾ ಕಾರಯೇತ್.

"ನಿತ್ಯದಲ್ಲಿ ವಾಸುದೇವನ ಮುಂದೆ ಅಥವಾ ಎರಡು ಪಕ್ಕಗಳಲ್ಲಿ ಕುಳಿತವನಾಗಿ ತಾನೇ ಕಲಶವನ್ನು ಪೂಜಿಸಬೇಕು. ಅಥವಾ ಜ್ಞಾನಾದಿಗುಣಗಳಿಂದ ಶ್ರೇಷ್ಠರಾಗಿರುವ ಇತರರಿಂದಲೂ ಮಾಡಿಸಬಹುದು."

ತತ್ಕ್ರಮಃ -

ಸಂಭವೇ ಸಪ್ತಕಲಶಾನಭಿಷೇಕಸ್ಯ ಸಿದ್ಧಯೇ |
ಬೃಹತ್ಕಲಶಮೇಕಂ ತು ದ್ವಿತೀಯಂ ಕುಂಭಸಂಜ್ಞಿತಮ್ |
ನೈವೇದ್ಯ ಪ್ರೋಕ್ಷಣಾಯೈಕಂ ಪಂಚಪಾತ್ರಪ್ರಪೂರಕಮ್ ||
ಪಾನೀಯಾರ್ಥಂ ಚ ಗಂಧಾರ್ಥಂ ಹಸ್ತಪ್ರಕ್ಷಾಳನಾರ್ಥಕಮ್ |
ಏವಂ ಸದಾ ಚ ಕಲಶಾನ್ ಪಂಚ ತ್ರೀನೇಕಮೇವ ವಾ ||
ಅಸಂಭವೇ ಚ ಸರ್ವೇಷಾಂ ಭಿನ್ನಪಾತ್ರಾಣಿ ಕಲ್ಪಯೇತ್ |

"ಕುಂಭಂ ಚತುರ್ದಿಕ್ಷು ಗಂಧಾಕ್ಷತಾದಿಭಿರಲಂಕೃತ್ಯ ಹಸ್ತೇನ ಸ್ಪೃಷ್ಟ್ವಾ ಮಂತ್ರಂ ಜಪೇತ್ |

ಕಲಶಪೂಜಾಕ್ರಮವನ್ನು ವಿವರಿಸುವೆನು. ಶ್ರೀಹರಿಗೆ ಅಭಿಷೇಕವನ್ನು ಮಾಡುವುದಕ್ಕಾಗಿ ಸಾಧ್ಯವಿದ್ದರೆ ಏಳು ಕಲಶಗಳನ್ನು

ಪೂಜಿಸಬೇಕು. ಆ ಏಳು ಕಲಶಗಳಲ್ಲಿ ಮಹಾಭಿಷೇಕಕ್ಕಾಗಿ ದೊಡ್ಡ ಕಲಶವು ಒಂದು. ಎರಡನೆಯದ್ದು ಕುಂಭ ಅಂದರೆ ತಂಬಿಗೆ, ಮೂರನೆಯದ್ದು ನೈವೇದ್ಯ ಪ್ರೋಕ್ಷಣಾಕ್ಕಾಗಿ, ನಾಲ್ಕನೆಯದ್ದು ಪಂಚಪಾತ್ರವನ್ನು ತುಂಬಿಸುವುದಕ್ಕಾಗಿ, ಐದನೆಯದ್ದು ಪಾನೀಯ ಅಂದರೆ ಕುಡಿಯುವ ನೀರಿಗಾಗಿ. ಆರನೆಯದ್ದು ಗಂಧಕ್ಕಾಗಿ. ಏಳನೆಯದ್ದು ಹಸ್ತಪ್ರಕ್ಷಾಳನ ಅಂದರೆ ಕೈತೊಳೆಯುವುದಕ್ಕಾಗಿ ಎಂದು ತಿಳಿಯಬೇಕು. ಹೀಗೆ ಏಳು ಕಲಶಗಳನ್ನು ಪೂಜಿಸಬೇಕು. ಅದು ಸಾಧ್ಯವಿಲ್ಲದಿದ್ದರೆ ಐದು ಅಥವಾ ಮೂರು ಅಥವಾ ಒಂದು ಕಲಶವನ್ನು ಪೂಜಿಸಬೇಕು. ಒಂದು ಕಲಶವನ್ನು ಪೂಜಿಸಿದ್ದರೆ ಪಾನೀಯ, ಗಂಧಮುಂತಾದವುಗಳಿಗೆ ಈ ಕಲಶದಿಂದಲೇ ಬೇರೆ ಬೇರೆ ಪಾತ್ರಗಳಲ್ಲಿ ನೀರನ್ನು ತುಂಬಬೇಕು. ಕುಂಭ ಎಂಬ ಎರಡನೆಯ ಕಲಶವನ್ನು ನಾಲ್ಕು ದಿಕ್ಕುಗಳಲ್ಲಿಯೂ ಗಂಧ ಅಕ್ಷತ ಮುಂತಾದವುಗಳಿಂದ ಅಲಂಕರಿಸಬೇಕು. ಕೈಯಿಂದ ಮುಟ್ಟಿಕೊಂಡು ಮುಂದೆ ಹೇಳುವ ಮಂತ್ರವನ್ನು ಜಪಿಸಬೇಕು.

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ |
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ||
ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ |
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ||
ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬು ಸಮಾಶ್ರಿತಾಃ |
ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ ||
ಆಯಾಂತು ದೇವಪೂಜಾರ್ಥಮಭಿಷೇಕಾರ್ಥಮಾದರಾತ್ |
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ||
ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ |
ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ||
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು |
ಗಂಗಾ ಗೋದಾವರೀ ಕೃಷ್ಣಾ ಪ್ರಯಾಗೋ ದ್ವಾರಕಸ್ತಥಾ ||
ಆವಾಹ್ಯಾಃ ಪಂಚ ಗಂಗಾಯಾಃ ಸರ್ವಪಾಪಹರಾಃ ಶುಭಾಃ |
ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ||
ಆಗಚ್ಛಂತು ಪವಿತ್ರಾಣಿ ಪೂಜಾಕಾಲೇ ಸದಾ ಮಮ |

ಕಲಶದ ಮುಖದಲ್ಲಿ ವಿಷ್ಣುವೂ ಕಂಠದಲ್ಲಿ ರುದ್ರನೂ ಬುಡದಲ್ಲಿ ಬ್ರಹ್ಮನೂ ಮಧ್ಯದಲ್ಲಿ ಮಾತೃಗಣಗಳೂ ಸನ್ನಿಹಿತರಾಗಿರುವರು. ಕಲಶದ ಹೊಟ್ಟೆಯಲ್ಲಿ ಎಲ್ಲಾ ಸಮುದ್ರಗಳೂ ಸಪ್ತದ್ವೀಪಗಳಿಂದ ಸಹಿತವಾಗಿರುವ ಭೂಮಿಯೂ ಸನ್ನಿಹಿತವಾಗಿವೆ. ಋಗ್ವೇದ, ಯಜುರ್ವೇದ, ಸಾಮವೇದ. ಅಥರ್ವಣವೇದ ಮತ್ತು ವೇದಾಂಗಗಳ ಅಭಿಮಾನಿ ದೇವತೆಗಳೆಲ್ಲರೂ ಕಲಶದ ನೀರಿನಲ್ಲಿ ಆಶ್ರಯಿಸಿರುವರು. ಶಾಂತಿ, ಪುಷ್ಟಿ, ಗಾಯತ್ರೀ, ಸಾವಿತ್ರೀ, ಸರಸ್ವತೀ ಈ ಐದು ದೇವತೆಗಳು ದೇವರ ಪೂಜೆಗೂ ಅಭಿಷೇಕಕ್ಕೂ ಭಕ್ತಿಯಿಂದ ಸನ್ನಿಹಿತರಾಗಲಿ, ಎಲ್ಲಾ ಸಮುದ್ರಗಳೂ, ನದಿಗಳೂ, ತೀರ್ಥಗಳೂ, ಜಲದಿಂದ ತುಂಬಿರುವ ಗಂಡು ಹೊಳೆಗಳೂ, ಪಾಪಗಳನ್ನೆಲ್ಲಾ ಪರಿಹರಿಸುತ್ತವೆ. ಅವುಗಳೆಲ್ಲಾ ಶ್ರೀಹರಿಯ ಪೂಜೆಗಾಗಿ ಬರಲಿ. ಎಲೈ ಗಂಗೆಯೇ, ಯಮುನೆಯೇ, ಗೋದಾವರಿಯೇ, ಸರಸ್ವತಿಯೇ, ನರ್ಮದೆಯೇ, ಸಿಂಧುವೆ, ಕಾವೇರಿಯೇ ಈ ನೀರಿನಲ್ಲಿ ಸನ್ನಿಹಿತಳಾಗು ಗಂಗೆ, ಗೋದಾವರೀ, ಕೃಷ್ಣಾ, ಪ್ರಯಾಗ, ದ್ವಾರಕ ಈ ಪಂಚಗಂಗೆಗಳು ಸರ್ವಪಾಪಗಳನ್ನೂ ಪರಿಹರಿಸುತ್ತವೆ

ಮತ್ತು ಪರಮ ಮಂಗಳಕರಗಳಾಗಿವೆ. ಈ ಪಂಚಗಂಗೆಗಳನ್ನು ಅಭಿಷೇಕಜಲದಲ್ಲಿ ಆವಾಹನೆಯನ್ನು ಮಾಡಲೇಬೇಕು. ಪುಷ್ಕರ ಮುಂತಾದ ತೀರ್ಥಗಳೂ ಗಂಗಾದಿನದಿಗಳೂ ಪರಮಪವಿತ್ರವಾದವುಗಳು. ಅವುಗಳೆಲ್ಲವೂ ನಾನು ಪೂಜಿಸುತ್ತಿರುವಾಗ ಯಾವಾಗಲೂ ಸನ್ನಿಹಿತವಾಗಿರಲಿ.

ಅಥ "ಇಮಂ ಮೇ" ಇತಿ ಋಚಾ "ಯಾಃ ಪ್ರವತ" ಇತಿ ಮಂತ್ರೇಣ ಚಾಭಿಮಂತ್ರ್ಯ.

ಅನಂತರದಲ್ಲಿ "ಇಮಂ ಮೇ" ಎಂಬ ಋಕ್ಕಿನಿಂದಲೂ "ಯಾಃ ಪ್ರವತ" ಎಂಬ ಮಂತ್ರದಿಂದಲೂ ಕಲಶವನ್ನು ಅಭಿಮಂತ್ರಣ ಮಾಡಬೇಕು.

ಏಲಾಲವಂಗಕಕ್ಕೋಲಕೋಷ್ಠಜಾತಿಫಲಾಕ್ಷತಾನ್ |
ಉಶೀರಂ ತುಲಸೀಪತ್ರಂ ಕೌಶೇಯಂ ಚಂದನಂ ತಥಾ |
ಪುಷ್ಪಾಣೀಹ ಸುಗಂಧೀನಿ ವಿನ್ಯಸೇತ್ಕಲಶೋದಕೇ ||

ಯಾಲಕ್ಕಿ, ಲವಂಗ, ಕಕ್ಕೋಲ, ಚಂಗಲ್‌ಕೋಷ್ಟ, ಜಾಜಿಕಾಯಿ, ಲವಂಚ, ತುಲಸೀಪತ್ರ, ಚಂದನ, ದರ್ಭೆ, ಸುಗಂಧದ ಪುಷ್ಪಗಳು ಇವುಗಳನ್ನು ಕಲಶಜಲದಲ್ಲಿ ಹಾಕಬೇಕು.

"ಕಲಶದೇವತಾಭ್ಯೋ ನಮಃ ಗಂಧಪುಷ್ಪಾಕ್ಷತಾನಿ ಸಮರ್ಪಯಾಮಿ" ಎಂದು ಹೇಳುತ್ತಾ ಗಂಧವನ್ನೂ ಪುಷ್ಪಗಳನ್ನೂ ಅಕ್ಷತೆಗಳನ್ನೂ ಸಮರ್ಪಿಸಬೇಕು.

ಏಕಪಂಚಾಶದ್ವರ್ಣಾನಾಂ ಚತುರ್ವಿಂಶತಿಮೂರ್ತಯಃ |
ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯಕಚ್ಛಪೌ ||
ಕೋಲೋ ನೃಸಿಂಹಃ ಸವಟುರ್ಜಾಮದಗ್ನ್ಯರಘೂದ್ವಹೌ |
ವಾಸಿಷ್ಠಯಾದವೌ ಕೃಷ್ಣಾವಾತ್ರೇಯೋ ಬುದ್ಧಕಲ್ಕಿನೌ ||
ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶದೇವತಾಃ |
ಆಹೂಯ ಪೂಜಯೇದೇತಾಃ ಸ್ನಾನೀಯಕಲಶೇ ಬುಧಃ ||

ಶ್ರೀಹರಿಗೆ ಅಭಿಷೇಕವನ್ನು ಮಾಡುವುದಕ್ಕಾಗಿ ಸಿದ್ಧಪಡಿಸಿದ ಕಲಶದಲ್ಲಿ "ಅಜಾದಿದೇವತಾಭ್ಯೋ ನಮಃ " ಎಂದು ಅಜ ಮುಂತಾದ ಐವತ್ತೊಂದು ವರ್ಣದೇವತೆಗಳನ್ನೂ "ಕೇಶವಾದಿದೇವತಾಭ್ಯೋ ನಮಃ " ಎಂದು ಕೇಶವ ಮುಂತಾದ ಇಪ್ಪತ್ತನಾಲ್ಕು ದೇವತೆಗಳನ್ನೂ "ಆತ್ಮಾದಿಚತುರ್ಮೂರ್ತಯೇ ನಮಃ" ಎಂದು ಆತ್ಮ ಮುಂತಾದ ನಾಲ್ಕು ಮೂರ್ತಿಗಳನ್ನೂ, "ವಾಸುದೇವಾದಿಚತುರ್ಮೂರ್ತಯೇ ನಮಃ" ಎಂದು ವಾಸುದೇವ ಮುಂತಾದ ನಾಲ್ಕು ಮೂರ್ತಿಗಳನ್ನೂ "ವಿಶ್ವಾದಿಚತುರ್ಮೂರ್ತಯೇ ನಮಃ" ಎಂದು ವಿಶ್ವ ಮುಂತಾದ ನಾಲ್ಕು ಮೂರ್ತಿಗಳನ್ನೂ "ಮತ್ಸ್ಯಾದಿದಶಮೂರ್ತಯೇ ನಮಃ" ಎಂದು ಮತ್ಸ್ಯ ಮುಂತಾದ ಹತ್ತು ಮೂರ್ತಿಗಳನ್ನೂ "ದತ್ತಾತ್ರೇಯಾಯ ನಮಃ" ಎಂಬ ಮಂತ್ರದಿಂದ ದತ್ತಾತ್ರೇಯನನ್ನೂ "ವೇದವ್ಯಾಸಾಯ ನಮಃ" ಎಂಬ ಮಂತ್ರದಿಂದ ಶ್ರೀವೇದವ್ಯಾಸರನ್ನೂ "ಶಿಂಶುಮಾರಾಯ ನಮಃ" ಎಂಬ ಮಂತ್ರದಿಂದ ಶಿಂಶುಮಾರನನ್ನೂ ಆವಾಹಿಸಬೇಕು.

ಆ ಜಲದಲ್ಲಿ ವಿಷಮಿಶ್ರಣವು ಏರ್ಪಟ್ಟಿದ್ದರೆ ಅದರ ಪರಿಹಾರಕ್ಕಾಗಿ ತಾರ್ಕ್ಷ್ಯಮುದ್ರೆಯನ್ನೂ ಆ ಜಲವು ಅಮೃತಮಯವಾಗುವುದಕ್ಕೋಸ್ಕರ ಧೇನುಮುದ್ರೆಯನ್ನೂ ಪವಿತ್ರವಾಗುವುದಕ್ಕೋಸ್ಕರ ಶಂಖಮುದ್ರೆಯನ್ನೂ ಎಲ್ಲಾ ದಿಕ್ಕುಗಳಿಂದಲೂ ದೈತ್ಯರುಗಳು ಬಂದು ಮುಟ್ಟದಿರುವುದಕ್ಕಾಗಿ ಗದಾಮುದ್ರೆಯನ್ನೂ ಸರ್ವಕಾರ್ಯಾರ್ಥವಾಗಿ ಚಕ್ರಮುದ್ರೆಯನ್ನೂ ಕಲಶಕ್ಕೆ ತೋರಿಸಬೇಕು. ಇಲ್ಲಿ ಹೇಳಿರುವ ತಾರ್ಕ್ಷ್ಯಮುದ್ರಾ ಮುಂತಾದವುಗಳ ಲಕ್ಷಣಗಳನ್ನು ಲೇಖನದಿಂದ ತಿಳಿಸಲು ಸಾಧ್ಯವಿಲ್ಲ. ಹಿರಿಯರ ಉಪದೇಶದಿಂದ ತಿಳಿಯಬೇಕು.

ಪೂಜಿಸಬೇಕು. ಆ ಏಳು ಕಲಶಗಳಲ್ಲಿ ಮಹಾಭಿಷೇಕಕ್ಕಾಗಿ ದೊಡ್ಡಕಲಶವು ಒಂದು. ಎರಡನೆಯದ್ದು ಕುಂಭ ಅಂದರೆ ತಂಬಿಗೆ, ಮೂರನೆಯದ್ದು ನೈವೇದ್ಯ ಪ್ರೋಕ್ಷಣಕ್ಕಾಗಿ, ನಾಲ್ಕನೆಯದ್ದು ಪಂಚಪಾತ್ರವನ್ನು ತುಂಬಿಸುವುದಕ್ಕಾಗಿ, ಐದನೆಯದ್ದು ಪಾನೀಯ ಅಂದರೆ ಕುಡಿಯುವ ನೀರಿಗಾಗಿ. ಆರನೆಯದ್ದು ಗಂಧಕ್ಕಾಗಿ. ಏಳನೆಯದ್ದು ಹಸ್ತಪ್ರಕ್ಷಾಳನ ಅಂದರೆ ಕೈತೊಳೆಯುವುದಕ್ಕಾಗಿ ಎಂದು ತಿಳಿಯಬೇಕು. ಹೀಗೆ ಏಳು ಕಲಶಗಳನ್ನು ಪೂಜಿಸಬೇಕು. ಅದು ಸಾಧ್ಯವಿಲ್ಲದಿದ್ದರೆ ಐದು ಅಥವಾ ಮೂರು ಅಥವಾ ಒಂದು ಕಲಶವನ್ನು ಪೂಜಿಸಬೇಕು. ಒಂದು ಕಲಶವನ್ನು ಪೂಜಿಸಿದ್ದರೆ ಪಾನೀಯ, ಗಂಧಮುಂತಾದವುಗಳಿಗೆ ಈ ಕಲಶದಿಂದಲೇ ಬೇರೆ ಬೇರೆ ಪಾತ್ರಗಳಲ್ಲಿ ನೀರನ್ನು ತುಂಬಬೇಕು. ಕುಂಭ ಎಂಬ ಎರಡನೆಯ ಕಲಶವನ್ನು ನಾಲ್ಕು ದಿಕ್ಕುಗಳಲ್ಲಿಯೂ ಗಂಧ ಅಕ್ಷತ ಮುಂತಾದವುಗಳಿಂದ ಅಲಂಕರಿಸಬೇಕು. ಕೈಯಿಂದ ಮುಟ್ಟಿಕೊಂಡು ಮುಂದೆ ಹೇಳುವ ಮಂತ್ರವನ್ನು ಜಪಿಸಬೇಕು.

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ |
ಮೂಲೇ ತತ್ರ ಸ್ಥಿತೋ ಬ್ರಹ್ಮಾಮಧ್ಯೇ ಮಾತೃಗಣಾಃ ಸ್ಮೃತಾಃ ||
ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ |
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ||
ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬು ಸಮಾಶ್ರಿತಾಃ |
ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ ||
ಆಯಾಂತು ದೇವಪೂಜಾರ್ಥಮಭಿಷೇಕಾರ್ಥಮಾದರಾತ್ |
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ||
ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ |
ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ||
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು |
ಗಂಗಾ ಗೋದಾವರೀ ಕೃಷ್ಣಾ ಪ್ರಯಾಗೋ ದ್ವಾರಕಸ್ತಥಾ ||
ಆವಾಹ್ಯಾಃ ಪಂಚ ಗಂಗಾಯಾಃ ಸರ್ವಪಾಪಹರಾಃ ಶುಭಾಃ |
ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ||
ಆಗಚ್ಛಂತು ಪವಿತ್ರಾಣಿ ಪೂಜಾಕಾಲೇ ಸದಾ ಮಮ |

ಕಲಶದ ಮುಖದಲ್ಲಿ ವಿಷ್ಣುವೂ ಕಂಠದಲ್ಲಿ ರುದ್ರನೂ ಬುಡದಲ್ಲಿ ಬ್ರಹ್ಮನೂ ಮಧ್ಯದಲ್ಲಿ ಮಾತೃಗಣಗಳೂ ಸನ್ನಿಹಿತರಾಗಿರುವರು. ಕಲಶದ ಹೊಟ್ಟೆಯಲ್ಲಿ ಎಲ್ಲಾ ಸಮುದ್ರಗಳೂ ಸಪ್ತದ್ವೀಪಗಳಿಂದ ಸಹಿತವಾಗಿರುವ ಭೂಮಿಯೂ ಸನ್ನಿಹಿತವಾಗಿವೆ. ಋಗ್ವೇದ, ಯಜುರ್ವೇದ, ಸಾಮವೇದ. ಅಥರ್ವಣವೇದ ಮತ್ತು ವೇದಾಂಗಗಳ ಅಭಿಮಾನಿ ದೇವತೆಗಳೆಲ್ಲರೂ ಕಲಶದ ನೀರಿನಲ್ಲಿ ಆಶ್ರಯಿಸಿರುವರು. ಶಾಂತಿ, ಪುಷ್ಟಿ, ಗಾಯತ್ರೀ, ಸಾವಿತ್ರೀ, ಸರಸ್ವತೀ ಈ ಐದು ದೇವತೆಗಳು ದೇವರ ಪೂಜೆಗೂ ಅಭಿಷೇಕಕ್ಕೂ ಭಕ್ತಿಯಿಂದ ಸನ್ನಿಹಿತರಾಗಲಿ, ಎಲ್ಲಾ ಸಮುದ್ರಗಳೂ, ನದಿಗಳೂ, ತೀರ್ಥಗಳೂ, ಜಲದಿಂದ ತುಂಬಿರುವ ಗಂಡು ಹೊಳೆಗಳೂ, ಪಾಪಗಳನ್ನೆಲ್ಲಾ ಪರಿಹರಿಸುತ್ತವೆ. ಅವುಗಳೆಲ್ಲಾ ಶ್ರೀಹರಿಯ ಪೂಜೆಗಾಗಿ ಬರಲಿ. ಎಲೈ ಗಂಗೆಯೇ, ಯಮುನೆಯೇ, ಗೋದಾವರಿಯೇ, ಸರಸ್ವತಿಯೇ, ನರ್ಮದೆಯೇ, ಸಿಂಧುವೆ, ಕಾವೇರಿಯೇ ಈ ನೀರಿನಲ್ಲಿ ಸನ್ನಿಹಿತಳಾಗು ಗಂಗೆ, ಗೋದಾವರೀ, ಕೃಷ್ಣಾ, ಪ್ರಯಾಗ, ದ್ವಾರಕ ಈ ಪಂಚಗಂಗೆಗಳು ಸರ್ವಪಾಪಗಳನ್ನೂ ಪರಿಹರಿಸುತ್ತವೆ

ಮತ್ತು ಪರಮ ಮಂಗಳಕರಗಳಾಗಿವೆ. ಈ ಪಂಚಗಂಗೆಗಳನ್ನು ಅಭಿಷೇಕಜಲದಲ್ಲಿ ಆವಾಹನೆಯನ್ನು ಮಾಡಲೇಬೇಕು. ಪುಷ್ಕರ ಮುಂತಾದ ತೀರ್ಥಗಳೂ ಗಂಗಾದಿನದಿಗಳೂ ಪರಮಪವಿತ್ರವಾದವುಗಳು. ಅವುಗಳೆಲ್ಲವೂ ನಾನು ಪೂಜಿಸುತ್ತಿರುವಾಗ ಯಾವಾಗಲೂ ಸನ್ನಿಹಿತವಾಗಿರಲಿ.

ಅಥ "ಇಮಂ ಮೇ" ಇತಿ ಋಚಾ "ಯಾಃ ಪ್ರವತ" ಇತಿ ಮಂತ್ರೇಣ ಚಾಭಿಮಂತ್ರ್ಯ.

ಅನಂತರದಲ್ಲಿ "ಇಮಂ ಮೇ" ಎಂಬ ಋಕ್ಕಿನಿಂದಲೂ "ಯಾಃ ಪ್ರವತ" ಎಂಬ ಮಂತ್ರದಿಂದಲೂ ಕಲಶವನ್ನು ಅಭಿಮಂತ್ರಣ ಮಾಡಬೇಕು.

ಏಲಾಲವಂಗಕಕ್ಕೋಲಕೋಷ್ಠಜಾತಿಫಲಾಕ್ಷತಾನ್ |
ಉಶೀರಂ ತುಲಸೀಪತ್ರಂ ಕೌಶೇಯಂ ಚಂದನಂ ತಥಾ |
ಪುಷ್ಪಾಣೀಹ ಸುಗಂಧೀನಿ ವಿನ್ಯಸೇತ್ಕಲಶೋದಕೇ ||

ಯಾಲಕ್ಕಿ, ಲವಂಗ, ಕಕ್ಕೋಲ, ಚಂಗಲ್‌ಕೋಷ್ಠ, ಜಾಜಿಕಾಯಿ, ಲವಂಚ, ತುಲಸೀಪತ್ರ, ಚಂದನ, ದರ್ಭೆ, ಸುಗಂಧದ ಪುಷ್ಪಗಳು ಇವುಗಳನ್ನು ಕಲಶಜಲದಲ್ಲಿ ಹಾಕಬೇಕು.

"ಕಲಶದೇವತಾಭ್ಯೋ ನಮಃ ಗಂಧಪುಷ್ಪಾಕ್ಷತಾನಿ ಸಮರ್ಪಯಾಮಿ" ಎಂದು ಹೇಳುತ್ತಾ ಗಂಧವನ್ನೂ ಪುಷ್ಪಗಳನ್ನೂ ಅಕ್ಷತೆಗಳನ್ನೂ ಸಮರ್ಪಿಸಬೇಕು.

ಏಕಪಂಚಾಶದ್ವರ್ಣಾನಾಂ ಚತುರ್ವಿಂಶತಿಮೂರ್ತಯಃ |
ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯಕಚ್ಛಪೌ ||
ಕೋಲೋ ನೃಸಿಂಹಃ ಸವಟುರ್ಜಾಮದಗ್ನ್ಯರಘೂದ್ವಹೌ |
ವಾಸಿಷ್ಠಯಾದವೌ ಕೃಷ್ಣಾವಾತ್ರೇಯೋ ಬುದ್ಧಕಲ್ಕಿನೌ ||
ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶದೇವತಾಃ |
ಆಹೂಯ ಪೂಜಯೇದೇತಾಃ ಸ್ನಾನೀಯಕಲಶೇ ಬುಧಃ ||

ಶ್ರೀಹರಿಗೆ ಅಭಿಷೇಕವನ್ನು ಮಾಡುವುದಕ್ಕಾಗಿ ಸಿದ್ಧಪಡಿಸಿದ ಕಲಶದಲ್ಲಿ "ಅಜಾದಿದೇವತಾಭ್ಯೋ ನಮಃ " ಎಂದು ಅಜ ಮುಂತಾದ ಐವತ್ತೊಂದು ವರ್ಣದೇವತೆಗಳನ್ನೂ "ಕೇಶವಾದಿದೇವತಾಭ್ಯೋ ನಮಃ " ಎಂದು ಕೇಶವ ಮುಂತಾದ ಇಪ್ಪತ್ತನಾಲ್ಕು ದೇವತೆಗಳನ್ನೂ "ಆತ್ಮಾದಿಚತುರ್ಮೂರ್ತಯೆ ನಮಃ" ಎಂದು ಆತ್ಮ ಮುಂತಾದ ನಾಲ್ಕು ಮೂರ್ತಿಗಳನ್ನೂ, "ವಾಸುದೇವಾದಿಚತುರ್ಮೂರ್ತಯೇ ನಮಃ" ಎಂದು ವಾಸುದೇವ ಮುಂತಾದ ನಾಲ್ಕು ಮೂರ್ತಿಗಳನ್ನೂ "ವಿಶ್ವಾದಿಚತುರ್ಮೂರ್ತಯೇ ನಮಃ" ಎಂದು ವಿಶ್ವ ಮುಂತಾದ ನಾಲ್ಕು ಮೂರ್ತಿಗಳನ್ನೂ "ಮತ್ಸ್ಯಾದಿದಶಮೂರ್ತಯೇ ನಮಃ" ಎಂದು ಮತ್ಸ್ಯ ಮುಂತಾದ ಹತ್ತು ಮೂರ್ತಿಗಳನ್ನೂ "ದತ್ತಾತ್ರೇಯಾಯ ನಮಃ" ಎಂಬ ಮಂತ್ರದಿಂದ ದತ್ತಾತ್ರೇಯನನ್ನೂ "ವೇದವ್ಯಾಸಾಯ ನಮಃ" ಎಂಬ ಮಂತ್ರದಿಂದ ಶ್ರೀವೇದವ್ಯಾಸರನ್ನೂ "ಶಿಂಶುಮಾರಾಯ ನಮಃ" ಎಂಬ ಮಂತ್ರದಿಂದ ಶಿಂಶುಮಾರನನ್ನೂ ಆವಾಹಿಸಬೇಕು.

ಆ ಜಲದಲ್ಲಿ ವಿಷಮಿಶ್ರಣವು ಏರ್ಪಟ್ಟಿದ್ದರೆ ಅದರ ಪರಿಹಾರಕ್ಕಾಗಿ ತಾರ್ಕ್ಷ್ಯಮುದ್ರೆಯನ್ನೂ ಆ ಜಲವು ಅಮೃತಮಯವಾಗುವುದಕ್ಕೋಸ್ಕರ ಧೇನುಮುದ್ರೆಯನ್ನೂ ಪವಿತ್ರವಾಗುವುದಕ್ಕೋಸ್ಕರ ಶಂಖಮುದ್ರೆಯನ್ನೂ ಎಲ್ಲಾ ದಿಕ್ಕುಗಳಿಂದಲೂ ದೈತ್ಯರುಗಳು ಬಂದು ಮುಟ್ಟದಿರುವುದಕ್ಕಾಗಿ ಗದಾಮುದ್ರೆಯನ್ನೂ ಸಂರಕ್ಷಣಾರ್ಥವಾಗಿ ಚಕ್ರಮುದ್ರೆಯನ್ನೂ ಕಲಶಕ್ಕೆ ತೋರಿಸಬೇಕು. ಇಲ್ಲಿ ಹೇಳಿರುವ ತಾರ್ಕ್ಷ್ಯಮುದ್ರಾ ಮುಂತಾದವುಗಳ ಲಕ್ಷಣಗಳನ್ನು ಲೇಖನದಿಂದ ತಿಳಿಸಲು ಸಾಧ್ಯವಿಲ್ಲ. ಹಿರಿಯರ ಉಪದೇಶದಿಂದ ತಿಳಿಯಬೇಕು.

ಪೂಜಿಸಬೇಕು. ಆ ಏಳು ಕಲಶಗಳಲ್ಲಿ ಮಹಾಭಿಷೇಕಕ್ಕಾಗಿ ದೊಡ್ಡಕಲಶವು ಒಂದು. ಎರಡನೆಯದ್ದು ಕುಂಭ ಅಂದರೆ ತಂಬಿಗೆ, ಮೂರನೆಯದ್ದು ನೈವೇದ್ಯ ಪ್ರೋಕ್ಷಣಾಕ್ಕಾಗಿ, ನಾಲ್ಕನೆಯದ್ದು ಪಂಚಪಾತ್ರವನ್ನು ತುಂಬಿಸುವುದಕ್ಕಾಗಿ, ಐದನೆಯದ್ದು ಪಾನೀಯ ಅಂದರೆ ಕುಡಿಯುವ ನೀರಿಗಾಗಿ. ಆರನೆಯದ್ದು ಗಂಧಕ್ಕಾಗಿ. ಏಳನೆಯದ್ದು ಹಸ್ತಪ್ರಕ್ಷಾಳನ ಅಂದರೆ ಕೈತೊಳೆಯುವುದಕ್ಕಾಗಿ ಎಂದು ತಿಳಿಯಬೇಕು. ಹೀಗೆ ಏಳು ಕಲಶಗಳನ್ನು ಪೂಜಿಸಬೇಕು. ಅದು ಸಾಧ್ಯವಿಲ್ಲದಿದ್ದರೆ ಐದು ಅಥವಾ ಮೂರು ಅಥವಾ ಒಂದು ಕಲಶವನ್ನು ಪೂಜಿಸಬೇಕು. ಒಂದು ಕಲಶವನ್ನು ಪೂಜಿಸಿದ್ದರೆ ಪಾನೀಯ, ಗಂಧಮುಂತಾದವುಗಳಿಗೆ ಈ ಕಲಶದಿಂದಲೇ ಬೇರೆ ಬೇರೆ ಪಾತ್ರಗಳಲ್ಲಿ ನೀರನ್ನು ತುಂಬಬೇಕು. ಕುಂಭ ಎಂಬ ಎರಡನೆಯ ಕಲಶವನ್ನು ನಾಲ್ಕು ದಿಕ್ಕುಗಳಲ್ಲಿಯೂ ಗಂಧ ಅಕ್ಷತ ಮುಂತಾದವುಗಳಿಂದ ಅಲಂಕರಿಸಬೇಕು. ಕೈಯಿಂದ ಮುಟ್ಟಿಕೊಂಡು ಮುಂದೆ ಹೇಳುವ ಮಂತ್ರವನ್ನು ಜಪಿಸಬೇಕು.

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ |
ಮೂಲೇ ತತ್ರ ಸ್ಥಿತೋ ಬ್ರಹ್ಮಾಮಧ್ಯೇ ಮಾತೃಗಣಾಃ ಸ್ಮೃತಾಃ ||
ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ |
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ||
ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬು ಸಮಾಶ್ರಿತಾಃ |
ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ ||
ಆಯಾಂತು ದೇವಪೂಜಾರ್ಥಮಭಿಷೇಕಾರ್ಥಮಾದರಾತ್ |
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ||
ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ |
ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ||
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು |
ಗಂಗಾ ಗೋದಾವರೀ ಕೃಷ್ಣಾ ಪ್ರಯಾಗೋ ದ್ವಾರಕಸ್ತಥಾ ||
ಆವಾಹ್ಯಾಃ ಪಂಚ ಗಂಗಾಯಾಃ ಸರ್ವಪಾಪಹರಾಃ ಶುಭಾಃ |
ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ||
ಆಗಚ್ಛಂತು ಪವಿತ್ರಾಣಿ ಪೂಜಾಕಾಲೇ ಸದಾ ಮಮ |

ಕಲಶದ ಮುಖದಲ್ಲಿ ವಿಷ್ಣುವೂ ಕಂಠದಲ್ಲಿ ರುದ್ರನೂ ಬುಡದಲ್ಲಿ ಬ್ರಹ್ಮನೂ ಮಧ್ಯದಲ್ಲಿ ಮಾತೃಗಣಗಳೂ ಸನ್ನಿಹಿತರಾಗಿರುವರು. ಕಲಶದ ಹೊಟ್ಟೆಯಲ್ಲಿ ಎಲ್ಲಾ ಸಮುದ್ರಗಳೂ ಸಪ್ತದ್ವೀಪಗಳಿಂದ ಸಹಿತವಾಗಿರುವ ಭೂಮಿಯೂ ಸನ್ನಿಹಿತವಾಗಿವೆ. ಋಗ್ವೇದ, ಯಜುರ್ವೇದ, ಸಾಮವೇದ. ಅಥರ್ವಣವೇದ ಮತ್ತು ವೇದಾಂಗಗಳ ಅಭಿಮಾನಿ ದೇವತೆಗಳೆಲ್ಲರೂ ಕಲಶದ ನೀರಿನಲ್ಲಿ ಆಶ್ರಯಿಸಿರುವರು. ಶಾಂತಿ, ಪುಷ್ಟಿ, ಗಾಯತ್ರೀ, ಸಾವಿತ್ರೀ, ಸರಸ್ವತೀ ಈ ಐದು ದೇವತೆಗಳು ದೇವರ ಪೂಜೆಗೂ ಅಭಿಷೇಕಕ್ಕೂ ಭಕ್ತಿಯಿಂದ ಸನ್ನಿಹಿತರಾಗಲಿ, ಎಲ್ಲಾ ಸಮುದ್ರಗಳೂ, ನದಿಗಳೂ, ತೀರ್ಥಗಳೂ, ಜಲದಿಂದ ತುಂಬಿರುವ ಗಂಡು ಹೊಳೆಗಳೂ, ಪಾಪಗಳನ್ನೆಲ್ಲಾ ಪರಿಹರಿಸುತ್ತವೆ. ಅವುಗಳೆಲ್ಲಾ ಶ್ರೀಹರಿಯ ಪೂಜೆಗಾಗಿ ಬರಲಿ. ಎಲೈ ಗಂಗೆಯೇ, ಯಮುನೆಯೇ, ಗೋದಾವರಿಯೇ, ಸರಸ್ವತಿಯೇ, ನರ್ಮದೆಯೇ, ಸಿಂಧುವೆ, ಕಾವೇರಿಯೇ ಈ ನೀರಿನಲ್ಲಿ ಸನ್ನಿಹಿತಳಾಗು ಗಂಗೆ, ಗೋದಾವರೀ, ಕೃಷ್ಣಾ, ಪ್ರಯಾಗ, ದ್ವಾರಕ ಈ ಪಂಚಗಂಗೆಗಳು ಸರ್ವಪಾಪಗಳನ್ನೂ ಪರಿಹರಿಸುತ್ತವೆ

ಮತ್ತು ಪರಮ ಮಂಗಳಕರಗಳಾಗಿವೆ. ಈ ಪಂಚಗಂಗೆಗಳನ್ನು ಅಭಿಷೇಕಜಲದಲ್ಲಿ ಆವಾಹನೆಯನ್ನು ಮಾಡಲೇಬೇಕು. ಪುಷ್ಕರ ಮುಂತಾದ ತೀರ್ಥಗಳೂ ಗಂಗಾದಿನದಿಗಳೂ ಪರಮಪವಿತ್ರವಾದವುಗಳು. ಅವುಗಳೆಲ್ಲವೂ ನಾನು ಪೂಜಿಸುತ್ತಿರುವಾಗ ಯಾವಾಗಲೂ ಸನ್ನಿಹಿತವಾಗಿರಲಿ.

ಅಥ "ಇಮಂ ಮೇ" ಇತಿ ಋಚಾ "ಯಾಃ ಪ್ರವತ" ಇತಿ ಮಂತ್ರೇಣ ಚಾಭಿಮಂತ್ರ್ಯ.

ಅನಂತರದಲ್ಲಿ "ಇಮಂ ಮೇ" ಎಂಬ ಋಕ್ಕಿನಿಂದಲೂ "ಯಾಃ ಪ್ರವತ" ಎಂಬ ಮಂತ್ರದಿಂದಲೂ ಕಲಶವನ್ನು ಅಭಿಮಂತ್ರಣ ಮಾಡಬೇಕು.

ಏಲಾಲವಂಗಕಕ್ಕೋಲಕೋಷ್ಠಜಾತಿಫಲಾಕ್ಷತಾನ್ |
ಉಶೀರಂ ತುಲಸೀಪತ್ರಂ ಕೌಶೇಯಂ ಚಂದನಂ ತಥಾ |
ಪುಷ್ಪಾಣೀಹ ಸುಗಂಧೀನಿ ವಿನ್ಯಸೇತ್ಕಲಶೋದಕೇ ||

ಯಾಲಕ್ಕಿ, ಲವಂಗ, ಕಕ್ಕೋಲ, ಚಂಗಲ್‌ಕೋಷ್ಠ, ಜಾಜಿಕಾಯಿ, ಲವಂಚ, ತುಲಸೀಪತ್ರ, ಚಂದನ, ದರ್ಭೆ, ಸುಗಂಧದ ಪುಷ್ಪಗಳು ಇವುಗಳನ್ನು ಕಲಶಜಲದಲ್ಲಿ ಹಾಕಬೇಕು.

"ಕಲಶದೇವತಾಭ್ಯೋ ನಮಃ ಗಂಧಪುಷ್ಪಾಕ್ಷತಾನಿ ಸಮರ್ಪಯಾಮಿ" ಎಂದು ಹೇಳುತ್ತಾ ಗಂಧವನ್ನೂ ಪುಷ್ಪಗಳನ್ನೂ ಅಕ್ಷತೆಗಳನ್ನೂ ಸಮರ್ಪಿಸಬೇಕು.

ಏಕಪಂಚಾಶದ್ವರ್ಣಾನಾಂ ಚತುರ್ವಿಂಶತಿಮೂರ್ತಯಃ |
ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯಕಚ್ಛಪೌ ||
ಕೋಲೋ ನೃಸಿಂಹಃ ಸವಟುರ್ಜಾಮದಗ್ನ್ಯರಘೂದ್ವಹೌ |
ವಾಸಿಷ್ಠಯಾದವೌ ಕೃಷ್ಣಾವಾತ್ರೇಯೋ ಬುದ್ಧಕಲ್ಕಿನೌ ||
ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶದೇವತಾಃ |
ಆಹೂಯ ಪೂಜಯೇದೇತಾಃ ಸ್ನಾನೀಯಕಲಶೇ ಬುಧಃ ||

ಶ್ರೀಹರಿಗೆ ಅಭಿಷೇಕವನ್ನು ಮಾಡುವುದಕ್ಕಾಗಿ ಸಿದ್ಧಪಡಿಸಿದ ಕಲಶದಲ್ಲಿ "ಅಜಾದಿದೇವತಾಭ್ಯೋ ನಮಃ " ಎಂದು ಅಜ ಮುಂತಾದ ಐವತ್ತೊಂದು ವರ್ಣದೇವತೆಗಳನ್ನೂ "ಕೇಶವಾದಿದೇವತಾಭ್ಯೋ ನಮಃ " ಎಂದು ಕೇಶವ ಮುಂತಾದ ಇಪ್ಪತ್ತನಾಲ್ಕು ದೇವತೆಗಳನ್ನೂ "ಆತ್ಮಾದಿಚತುರ್ಮೂರ್ತಯೆ ನಮಃ" ಎಂದು ಆತ್ಮ ಮುಂತಾದ ನಾಲ್ಕು ಮೂರ್ತಿಗಳನ್ನೂ, "ವಾಸುದೇವಾದಿಚತುರ್ಮೂರ್ತಯೇ ನಮಃ" ಎಂದು ವಾಸುದೇವ ಮುಂತಾದ ನಾಲ್ಕು ಮೂರ್ತಿಗಳನ್ನೂ "ವಿಶ್ವಾದಿಚತುರ್ಮೂರ್ತಯೇ ನಮಃ" ಎಂದು ವಿಶ್ವ ಮುಂತಾದ ನಾಲ್ಕು ಮೂರ್ತಿಗಳನ್ನೂ "ಮತ್ಸ್ಯಾದಿದಶಮೂರ್ತಯೇ ನಮಃ" ಎಂದು ಮತ್ಸ್ಯ ಮುಂತಾದ ಹತ್ತು ಮೂರ್ತಿಗಳನ್ನೂ "ದತ್ತಾತ್ರೇಯಾಯ ನಮಃ" ಎಂಬ ಮಂತ್ರದಿಂದ ದತ್ತಾತ್ರೇಯನನ್ನೂ "ವೇದವ್ಯಾಸಾಯ ನಮಃ" ಎಂಬ ಮಂತ್ರದಿಂದ ಶ್ರೀವೇದವ್ಯಾಸರನ್ನೂ "ಶಿಂಶುಮಾರಾಯ ನಮಃ" ಎಂಬ ಮಂತ್ರದಿಂದ ಶಿಂಶುಮಾರನನ್ನೂ ಆವಾಹಿಸಬೇಕು.

ಆ ಜಲದಲ್ಲಿ ವಿಷಮಿಶ್ರಣವು ಏರ್ಪಟ್ಟಿದ್ದರೆ ಅದರ ಪರಿಹಾರಕ್ಕಾಗಿ ತಾರ್ಕ್ಷ್ಯಮುದ್ರೆಯನ್ನೂ ಆ ಜಲವು ಅಮೃತಮಯವಾಗುವುದಕ್ಕೋಸ್ಕರ ಧೇನುಮುದ್ರೆಯನ್ನೂ ಪವಿತ್ರವಾಗುವುದಕ್ಕೋಸ್ಕರ ಶಂಖಮುದ್ರೆಯನ್ನೂ ಎಲ್ಲಾ ದಿಕ್ಕುಗಳಿಂದಲೂ ದೈತ್ಯರುಗಳು ಬಂದು ಮುಟ್ಟದಿರುವುದಕ್ಕಾಗಿ ಗದಾಮುದ್ರೆಯನ್ನೂ ಸಂರಕ್ಷಣಾರ್ಥವಾಗಿ ಚಕ್ರಮುದ್ರೆಯನ್ನೂ ಕಲಶಕ್ಕೆ ತೋರಿಸಬೇಕು. ಇಲ್ಲಿ ಹೇಳಿರುವ ತಾರ್ಕ್ಷ್ಯಮುದ್ರಾ ಮುಂತಾದವುಗಳ ಲಕ್ಷಣಗಳನ್ನು ಲೇಖನದಿಂದ ತಿಳಿಸಲು ಸಾಧ್ಯವಿಲ್ಲ. ಹಿರಿಯರ ಉಪದೇಶದಿಂದ ತಿಳಿಯಬೇಕು.

### ಕಲಶಪ್ರಾರ್ಥನಾ

ಕಲಶಃ ಕೀರ್ತಿಮಾಯುಷ್ಯಂ ಪ್ರಜ್ಞಾಂ ಮೇಧಾಂ ಶ್ರಿಯಂ ಭಗಮ್ ।
ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಸಾಧಯೇತ್ ॥
ಸರ್ವಕ್ಷೇತ್ರಮಯೋ ಯಸ್ಮಾತ್ಸರ್ವತೀರ್ಥಮಯೋ ಯತಃ ।
ಅತೋ ಹರಿಪ್ರಿಯೋಽಸಿ ತ್ವಂ ಪೂರ್ಣಕುಂಭ ನಮೋಽಸ್ತು ತೇ ॥
ತನ್ಮುಖಂ ಸಂಸ್ಪೃಶೇದಷ್ಟವಾರಂ ಮೂಲಂ ಜಪೇನ್ಮನುಮ್ ।
ದಶವಾರಂ ತು ಗಾಯತ್ರ್ಯಾ ಅಭಿಮಂತ್ರ್ಯ ಯಥಾವಿಧಿ ॥
ಧೂಪಂ ದೀಪಂ ಚ ನೈವೇದ್ಯಂ ನೀರಾಜನಮಥಾಚರೇತ್ ।

"ಹಿಂದೆ ಏಳು ಕಲಶಗಳನ್ನು ಸ್ಥಾಪನೆ ಮಾಡಬೇಕೆಂದು ಹೇಳಿದ್ದೆವು. ಅವುಗಳಲ್ಲಿ ಮೊದಲನೆಯದಾಗಿರುವ ದೊಡ್ಡ ಕಲಶವು ಕೀರ್ತಿ, ಆಯುಷ್ಯ, ಪ್ರಜ್ಞಾ ಅಂದರೆ ಉತ್ತಮವಾದ ಜ್ಞಾನ, ಮೇಧಾ ಅಂದರೆ ವಿಚಾರ ಶಕ್ತಿ, ಶ್ರೀ ಅಂದರೆ ಸಂಪತ್ತು, ಭಾಗ್ಯ, ಯೋಗ್ಯತಾ ಅಂದರೆ ಶ್ರೀಹರಿಯನ್ನು ಪೂಜಿಸುವ ಅರ್ಹತೆ, ಪಾಪಪರಿಹಾರ, ಪುಣ್ಯ ವೃದ್ಧಿ ಮುಂತಾದ ಗುಣಗಳನ್ನು ಕೊಡುತ್ತದೆ. ಎರಡನೆಯದಾದ ಪೂರ್ಣಕುಂಭದಲ್ಲಿ ಎಲ್ಲಾ ತೀರ್ಥಗಳೂ ಸನ್ನಿಹಿತವಾಗಿವೆ. ಆದ್ದರಿಂದ ಶ್ರೀಹರಿಗೆ ಅತ್ಯಂತ ಪ್ರಿಯವಾದದ್ದು. ದೊಡ್ಡಕಲಶವೂ ಪೂರ್ಣಕುಂಭವೂ ನಮಗೆ ಎಲ್ಲಾ ಗುಣಗಳನ್ನೂ ಕೊಡಲಿ. ಎಂದು ಪ್ರಾರ್ಥಿಸಬೇಕು. ಅನಂತರದಲ್ಲಿ ಪ್ರಧಾನಕಲಶದ ಮುಖವನ್ನು ಮುಟ್ಟಿಕೊಂಡು "ಓಂ ನಮೋ ನಾರಾಯಣಾಯ" ಎಂಬ ನಾರಾಯಣಾಷ್ಟಾಕ್ಷರದಿಂದ ಎಂಟು ಸಲ ಜಪಿಸಬೇಕು. ಗಾಯತ್ರೀಮಂತ್ರದಿಂದ ಹತ್ತು ಸಲ ವಿಧಿಪ್ರಕಾರವಾಗಿ ಜಪಿಸಬೇಕು. ಆ ಕಲಶಕ್ಕೆ ಧೂಪ, ದೀಪ, ನೈವೇದ್ಯ, ಮಹಾಮಂಗಳಾರತಿ ಮುಂತಾದವುಗಳನ್ನು ಸಮರ್ಪಿಸಬೇಕು.

### ಶಂಖಪೂಜಾ

ಪೂರ್ಣಕುಂಭ ಎಂಬ ಎರಡನೆಯ ಕಲಶದಲ್ಲಿರುವ ನೀರನ್ನು ಶಂಖದಲ್ಲಿ ತುಂಬಬೇಕು. ಆ ಶಂಖದಲ್ಲಿ ತುಳಸಿಯನ್ನೂ ಪುಷ್ಪವನ್ನೂ ಇಡಬೇಕು. ಧೇನುಮುದ್ರೆಯನ್ನು ತೋರಿಸಬೇಕು. ಕೈಯಿಂದ ಮುಟ್ಟಿಕೊಂಡು ಮುಂದೆ ಹೇಳುವ ಮಂತ್ರಗಳನ್ನು ಹೇಳಬೇಕು.

ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।
ನಮಿತಃ ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತು ತೇ ॥
ಗರ್ಭಾದೇವಾರಿನಾರೀಣಾಂ ವಿಶೀರ್ಯಂತೇ ಸಹಸ್ರಧಾ ।
ತವ ನಾದೇನ ಪಾತಾಲೇ ಪಾಂಚಜನ್ಯ ನಮೋಽಸ್ತುತೇ ॥
ತವ ನಾದೇನ ಜೀಮೂತಾ ವಿದ್ರವಂತಿ ಸುರಾಸುರಾಃ ।
ಶಶಾಂಕಾಯುತದೀಪ್ತಾಭ ಪಾಂಚಜನ್ಯ ನಮೋಽಸ್ತುತೇ ॥
ದರ್ಶನೇನ ಹಿ ಶಂಖಸ್ಯ ಕಿಂ ಪುನಃ ಸ್ಪರ್ಶನೇನ ಚ ।
ವಿಲಯಂ ಯಾಂತಿ ಪಾಪಾನಿ ತಮಃ ಸೂರ್ಯೋದಯೇ ಯಥಾ ॥
ನತ್ವಾ ಶಂಖಂ ಕರೇ ಧೃತ್ವಾ ಮಂತ್ರೇಣಾನೇನ ವೈಷ್ಣವಃ ।
ಯಃ ಸ್ನಾಪಯತಿ ಗೋವಿಂದಂ ತಸ್ಯ ಪುಣ್ಯಮನಂತಕಮ್ ॥

ಶಂಖಂ ಚಂದ್ರಾರ್ಕದೈವತ್ಯಂ ಮಧ್ಯೇ ವರುಣದೈವತಮ್ |
ಪೃಷ್ಠೇ ಪ್ರಜಾಪತಿಂ ವಿಂದ್ಯಾದಗ್ರೇ ಗಂಗಾ ಸರಸ್ವತೀ ||
ತ್ರೈಲೋಕ್ಯೇ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ |
ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾಚ್ಛಂಖಂ ಪ್ರಪೂಜಯೇತ್ ||

"ಎಲೈ ಪಾಂಚಜನ್ಯ ಶಂಖಾಭಿಮಾನಿಯಾದ ದೇವತೆಯೇ, ನೀನು ಹಿಂದೆ ಕ್ಷೀರಸಮುದ್ರದಲ್ಲಿ ಅವತರಿಸಿದಿ. ಆ ಕಾಲದಲ್ಲಿಯೂ ಅನಂತರದಲ್ಲಿಯೂ ಸರ್ವದೇವತೆಗಳಿಂದ ನಮಸ್ಕರಿಸಲ್ಪಟ್ಟೆ. ನಿನ್ನ ಧ್ವನಿಯಿಂದ ಪಾತಾಳಲೋಕದಲ್ಲಿರುವ ದೇವಶತ್ರುಗಳಾದ ದೈತ್ಯರ ಸ್ತ್ರೀಯರ ಗರ್ಭಗಳು ಸಾವಿರಾರು ಹೋಳುಗಳಾಗಿ ಭಿನ್ನಭಿನ್ನವಾಗುತ್ತವೆ. ಎಲೈ ಪಾಂಚಜನ್ಯ ಶಂಖವೇ, ನಿನ್ನ ಧ್ವನಿಯಿಂದ ದೇವತೆಗಳೂ, ದೈತ್ಯರೂ ಮೇಘಗಳಂತೆ ಅತಿವೇಗದಿಂದ ಓಡುತ್ತಿರುವರು. ಎಲೈ ಪಾಂಚಜನ್ಯ ಶಂಖವೇ. ಅಸಂಖ್ಯ ಚಂದ್ರರುಗಳಂತೆ ಪ್ರಕಾಶಿಸುತ್ತಿರುವ ನಿನ್ನನ್ನು ನಾನು ಭಕ್ತಿಯಿಂದ ನಮಸ್ಕರಿಸುವೆನು. ಎಲೈ ಶಂಖವೇ, ನಿನ್ನನ್ನು ನೋಡಿದ ಮಾತ್ರದಿಂದಲೇ ಎಲ್ಲಾ ಪಾಪಗಳೂ ದಿಕ್ಕು ದಿಕ್ಕುಗಳಿಗೆ ಓಡುತ್ತಿರುತ್ತವೆ. ಸೂರ್ಯೋದಯವಾದ ಮರುಕ್ಷಣದಲ್ಲಿ ಕತ್ತಲೆಯು ನಿಲ್ಲುವುದೇ? ಹೀಗಾದ ಮೇಲೆ ನಿನ್ನನ್ನು ಮುಟ್ಟುವವನಿಗೆ ಪಾಪವು ಉಳಿಯುವುದೇ? ಶಂಖವನ್ನು ನಮಸ್ಕರಿಸಬೇಕು. ಕೈಯಲ್ಲಿ ಎತ್ತಬೇಕು. ಪುರುಷಸೂಕ್ತ ಮುಂತಾದ ಮಂತ್ರಗಳಿಂದ ಅಭಿಷೇಕ ಮಾಡಬೇಕು. ಹೀಗೆ ಮಾಡುವವನಿಗೆ ಅನಂತಪುಣ್ಯವು ಬರುತ್ತದೆ. ಶಂಖದಲ್ಲಿ ಚಂದ್ರ ಮತ್ತು ಸೂರ್ಯರು ಅಭಿಮಾನಿಗಳಾಗಿರುವರು. ಮಧ್ಯದಲ್ಲಿ ವರಣನು ದೇವತೆಯಾಗಿರುವನು. ಬೆನ್ನಿನಲ್ಲಿ ಪ್ರಜಾಪತಿಯು ಅಭಿಮಾನಿಯಾಗಿರುವನು. ಶಂಖದ ತುದಿಯಲ್ಲಿ ಗಂಗೆಯೂ ಸರಸ್ವತಿಯೂ ಸನ್ನಿಹಿತರಾಗಿರುವರು. ಮೂರು ಲೋಕಗಳಲ್ಲಿರುವ ಎಲ್ಲಾ ತೀರ್ಥಗಳೂ ವಾಸುದೇವನ ಆಜ್ಞೆಯಿಂದ ಶಂಖದಲ್ಲಿ ಸನ್ನಿಹಿತವಾಗಿವೆ. ಆದ್ದರಿಂದ ಶಂಖವನ್ನು ಮೊದಲು ಪೂಜಿಸಲೇ ಬೇಕು.

ಈ ಮಂತ್ರಗಳಿಂದ ಶಂಖವನ್ನು ಜಪಿಸಿ ಶಂಖ, ಪದ್ಮ, ಗರುಡ, ಸುರಭಿ ಮುದ್ರೆಗಳನ್ನು ತೋರಿಸಬೇಕು. ಶಂಖದಲ್ಲಿರುವ ನೀರಿನಲ್ಲಿ ತುಳಸಿಯನ್ನೂ ಗಂಧವನ್ನೂ ಪುಷ್ಪಗಳನ್ನೂ ಹಾಕಬೇಕು. ಕೈಯಿಂದ ಮುಟ್ಟಬೇಕು. ನಾರಾಯಣಾಷ್ಟಾಕ್ಷರ ಮಂತ್ರದಿಂದ ಎಂಟು ಜಲ ಜಪಿಸಬೇಕು. "ಪಾಚಜನ್ಯಾಯ ವಿದ್ಮಹೇ | ಪಾವಮಾನಾಯ ಧೀಮಹಿ | ತನ್ನಃ ಶಂಖಃ ಪ್ರಚೋದಯಾತ್ " ಎಂಬ ಪಾಂಚಜನ್ಯಗಾಯತ್ರೀಮಂತ್ರವನ್ನು ಪಠಿಸಬೇಕು.

ಧ್ಯಾನಮಾವಾಹನಂ ಸಾರ್ಘ್ಯಂ ಪಾದ್ಯಂ ಚ ಮಧುಪರ್ಕಯುಕ್ |
ಪುನರಾಚಮನಂ ಗಂಧಂ ಪುಷ್ಪಂಚೇತ್ಯಷ್ಟಪೂಜನಮ್ ||

"ಧ್ಯಾನ, ಆವಾಹನ, ಅರ್ಘ್ಯ, ಪಾದ್ಯ, ಮಧುಪರ್ಕ, ಪುನರಾಚಮನ, ಗಂಧ, ಪುಷ್ಪ ಹೀಗೆ ಎಂಟು ವಿಧವಾದ ಪೂಜೆಗಳನ್ನು "ಶಂಖದೇವತಾಭ್ಯೋ ನಮಃ" ಎಂಬ ಮಂತ್ರದಿಂದ ಮಾಡಬೇಕು.

ಪುರತೋ ದೇವದೇವಸ್ಯ ಸಪುಷ್ಪಸಜಲಾಕ್ಷತೈಃ |
ಶಂಖಶ್ಚಾಭ್ಯರ್ಚಿತೋ ಯೇನ ತಸ್ಯ ಲಕ್ಷ್ಮೀರ್ನದೂರಗಾ ||

"ದೇವದೇವನಾದ ಶ್ರೀಹರಿಯ ಮುಂದೆ ಪುಷ್ಪ, ಜಲ, ಅಕ್ಷತೆಗಳಿಂದ ಸಹಿತವಾದ ಪೂಜೆಯನ್ನು ಮಾಡುವವನಿಗೆ ಲಕ್ಷ್ಮೀದೇವಿಯು ದೂರದಲಿಲ್ಲ.

ಶಂಖಪೃಷ್ಠೇನ ತೋಯಂ ತು ದೇವೋಪರಿ ನ ನಿಕ್ಷಿಪೇತ್ |

"ಶಂಖದ ಮುಖದಿಂದಲೇ ನೀರನ್ನು ದೇವರ ಮೇಲೆ ಅಭಿಷೇಕ ಮಾಡಬೇಕು ಬೇರೆ ಕಡೆಯಿಂದ ಅಭಿಷೇಕವನ್ನು ಮಾಡಕೂಡದು.

## ಕಲಶಶುದ್ಧಿ ಕ್ರಮ

ಕ್ಷಾಲಯೇದುದಕೈಃ ಕುಂಭಾನ್ ಬಹಿರಂತಶ್ಚ ಶಾಸ್ತ್ರತಃ | (ತಂತ್ರತಿಲಕವಾಕ್ಯ)

ಶಾಸ್ತ್ರೋಕ್ತರೀತಿಯಿಂದ ಕಲಶದ ಒಳಗೂ ಹೊರಗೂ ತೊಳೆಯಬೇಕು.

## ಪಂಚಾಮೃತ ಕಲಶಗಳು

ಪಂಚಾಮೃತಾನಾಂ ಕಲಶಾನ್ ಪೂಜಯೇತ್ಸ್ಥಾಪಯೇದಿತಿ | (ಪಾದ್ಮ ವಚನ)

ಪಂಚಾಮೃತಗಳ ಕಲಶಗಳನ್ನು ಸ್ಥಾಪಿಸಬೇಕು ಮತ್ತು ಪೂಜಿಸಬೇಕು.

ತತಃ ಪಂಚಾಮೃತೈರ್ಗವ್ಯೈಃ ಸ್ನಾಪಯೇತ್ತತ್ಪ್ರಕಾಶಕೈಃ |
ಆಪ್ಯಾಯಸ್ವೇತ್ಯೃಚಾ ಕ್ಷೀರಂ ದಧಿಕ್ರಾವ್ಣೇತಿ ವೈ ದಧಿ |
ಘೃತಂ ಮಿಮಿಕ್ಷೇತಿ ಘೃತಂ ಮಧುವಾತೇತಿ ವೈ ಮಧು |
ತಂ ತೇ ವಯಂ ಯಥಾ ಗೋಭಿರಿತ್ಯಬೇಕ್ಷುರಸಃ ಸ್ಮೃತಃ || (ಹಾರೀತರ ವಚನ)

"ಅನಂತರದಲ್ಲಿ ದನದ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಕಬ್ಬಿನಹಾಲು ಇವುಗಳಿಂದ ಪಂಚಾಮೃತಸ್ನಾನವನ್ನು ಮಾಡಿಸಬೇಕು. "ಆಪ್ಯಾಯಸ್ವ" ಎಂಬ ಮಂತ್ರದಿಂದ ಹಾಲನ್ನೂ, "ದಧಿಕ್ರಾವ್ಣೋ" ಎಂಬ ಮಂತ್ರದಿಂದ ಮೊಸರನ್ನೂ, "ಘೃತಂ ಮಿಮಿಕ್ಷೇ" ಎಂಬ ಮಂತ್ರದಿಂದ ತುಪ್ಪವನ್ನೂ, "ಮಧು ವಾತಾ" ಎಂಬ ಮಂತ್ರದಿಂದ ಜೇನುತುಪ್ಪವನ್ನೂ, "ತಂ ತೇ ವಯಂ ಯಥಾ ಗೋಭಿಃ" ಎಂಬ ಮಂತ್ರದಿಂದ ಕಬ್ಬಿನ ಹಾಲನ್ನೂ ಅಭಿಷೇಕಮಾಡಬೇಕು."

## ತ್ಯಾಜ್ಯವಾದ ಪಂಚಗವ್ಯಗಳು

ನಾರ್ತಾಯಾಂ ನ ಚ ಗರ್ಭಿಣ್ಯಾಂ ನ ವೃದ್ಧಾಯಾಂ ಕದಾಚನ |
ನ ವತ್ಸಾಯಾಂ ತು ಪೂಜಾರ್ಥಮುಪಾದೇಯಮಿತಿ ಸ್ಮೃತಿಃ || (ಪಾದ್ಮಸಂಹಿತಾವಾಕ್ಯ)

"ರೋಗಿಷ್ಠವಾಗಿರುವ ಅಥವಾ ಗರ್ಭಿಣಿಯಾಗಿರುವ ಅಥವಾ ಮುದಿಯಾಗಿರುವ ಅಥವಾ ಕರು ಹಾಕದಿರುವ ಗೋವಿನ ಹಾಲು ಮುಂತಾದವುಗಳನ್ನು ದೇವರ ಪೂಜೆಗಳಿಗಾಗಿ ಸ್ವೀಕರಿಸಕೂಡದು."

## ಗ್ರಾಹ್ಯವಾದ ಪಂಚಗವ್ಯಗಳು

ಪಯಶ್ಚ ತಾಮ್ರವರ್ಣಾಯಾಃ ಶ್ವೇತಾಯಾಶ್ಚ ತಥಾದಧಿ |
ಕಪಿಲಾಯಾ ಘೃತಂ ಗ್ರಾಹ್ಯಮ್ || (ಪಾದ್ಮಸಂಹಿತಾವಾಕ್ಯ)

"ಕೆಂಪುಬಣ್ಣದ ಆಕಳಿನ ಹಾಲು, ಬಿಳಿಬಣ್ಣದ ಆಕಳಿನ ಮೊಸರು, ಕಪಿಲಬಣ್ಣದ ಆಕಳಿನ ತುಪ್ಪವನ್ನು ಸ್ವೀಕರಿಸಬೇಕು.

ಕಪಿಲಾಯಾಶ್ಚ ಪೀತಾಯಾಃ ಪಂಚಗವ್ಯಂ ಪ್ರಶಸ್ಯತೇ |
ತಯೋರಭಾವೇ ಸರ್ವಾಸಾಂ ಪಂಚಗವ್ಯಂ ವಿಧೀಯತೇ ||
ಸದ್ಯಸ್ತಪ್ತಘೃತಂ ಶುದ್ಧಮಹೋರಾತ್ರೋಷಿತಂ ದಧಿ |
ಕ್ಷೀರಂ ಗ್ರಾಹ್ಯಮತಪ್ತಂ ಚ ದಶಾಹಾಜ್ಜನ್ಮನಃ ಪರಮ್ || (ಪಾದ್ಮಸಂಹಿತಾ)

"ಕಪಿಲಗೋವು ಅಥವಾ ಹಳದಿಗೋವಿನ ಪಂಚಗವ್ಯ ಅಂದರೆ ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯ ಇವುಗಳು ಪ್ರಶಸ್ತವಾಗಿವೆ. ಈ ಎರಡು ಬಣ್ಣಗಳುಳ್ಳ ಗೋವುಗಳಿಲ್ಲದಿದ್ದರೆ ಎಲ್ಲಾ ಗೋವುಗಳ ಪಂಚಗವ್ಯಗಳೂ ಶಾಸ್ತ್ರಗಳಲ್ಲಿ ವಿಹಿತವಾಗಿವೆ. ಆಗಲೇ ಕಾಯಿಸಿದ ತುಪ್ಪವೂ ಒಂದು ರಾತ್ರಿ ಮತ್ತು ಹಗಲಿನಲ್ಲಿದ್ದ ಮೊಸರೂ ಹಸಿಹಾಲೂ ಗ್ರಾಹ್ಯವೆನಿಸುತ್ತವೆ. ದನವು ಕರುಹಾಕಿ ಹತ್ತು ದಿನಗಳ ಮೇಲೆಯೇ ಪಂಚಗವ್ಯಗಳು ಶುದ್ಧವಾಗುತ್ತದೆ.

## ದ್ರೋಣ ಪರಿಮಾಣ

ಪಲದ್ವಯಂ ತು ಪ್ರಸೃತಿಸ್ತದ್ದ್ವಯಂ ಕುಡವಸ್ತಥಾ |
ಚತುರ್ಭಿಃ ಕುಡವೈಃ ಪ್ರಸ್ಥಃ ಪ್ರಸ್ಥಾಶ್ಚತ್ವಾರ ಆಢಕಮ್ ||
ತಚ್ಚತುಷ್ಕಂ ಭವೇದ್ದ್ರೋಣಮ್

ಎರಡು ಪಲಗಳು ಪ್ರಸೃತಿ ಎಂದೂ, ಎರಡು ಪ್ರಸೃತಿಗಳು ಕುಡವ ಎಂದೂ, ನಾಲ್ಕು ಕುಡವಗಳು ಪ್ರಸ್ಥ ಎಂದೂ, ನಾಲ್ಕೂ ಪ್ರಸ್ಥಗಳು ಆಢಕ ಎಂದೂ ನಾಲ್ಕೂ ಆಢಕಗಳು ದ್ರೋಣ ಎಂದೂ ಹೇಳಲ್ಪಡುತ್ತವೆ.

## ಪಂಚಾಮೃತ ಪರಿಮಾಣ

ದ್ರೋಣಮಾನಂ ಪಂಚಗವ್ಯಂ ಘೃತಮಾನಂ ಚ ತಾದೃಶಮ್ |
ತಾವದೇವ ದಧಿಕ್ಷೀರಂ ತಾವದೇವ ಹಿ ಮಾಕ್ಷಿಕಮ್ ||
ಅರ್ಧಂ ವಾ ಸ್ಯಾದಾಢಕಂ ವಾ ನ್ಯೂನಂ ಚೇದಾಸುರಂ ತಥಾ |
ಗೃಹಾರ್ಚಾಸ್ನಾಪನೇ ನೂನಂ ಪ್ರಸ್ಥಂ ಚೈವ ಪ್ರಕಲ್ಪಯೇತ್ ||

ಪಂಚಾಮೃತವನ್ನು ಮಾಡುವುದಕ್ಕೆ ದನದ ಹಾಲು, ದನದ ಮೊಸರು, ದನದ ತುಪ್ಪ, ಜೇನುತುಪ್ಪ ಈ ನಾಲ್ಕು ವಸ್ತುಗಳೂ ದ್ರೋಣಪರಿಮಿತವಾಗಿಯೂ, ಅಥವಾ ಅರ್ಧದ್ರೋಣಪರಿಮಿತವಾಗಿಯೂ, ಅಥವಾ ಕಾಲು ದ್ರೋಣಪರಿಮಿತವಾಗಿಯೂ ಇರಬೇಕು. ಇದಕ್ಕಿಂತ ಕಡಿಮೆಯಾಗಿದ್ದರೆ ಈ ಪೂಜೆಯು ಆಸುರಪೂಜೆಯನಿಸುತ್ತದೆ. ಮನೆಯಲ್ಲಿ ಮಾಡುವ ಪಂಚಾಮೃತಾಭಿಷೇಕವಾಗಿದ್ದರೆ ಪ್ರಸ್ಥದಷ್ಟು ಹಾಲು ಮುಂತಾದವುಗಳು ಇರಬೇಕು.

## ಪಂಚಾಮೃತಕಲಶಪೂಜಾಕ್ರಮ

ಕೆಳಗೆ ಅಕ್ಕಿಯನ್ನು ಹರವಬೇಕು. ಅಕ್ಕಿಯ ಮಧ್ಯದಲ್ಲಿ ಹಾಲನ್ನೂ, ಪೂರ್ವದಲ್ಲಿ ಮೊಸರನ್ನೂ, ದಕ್ಷಿಣದಲ್ಲಿ ತುಪ್ಪವನ್ನೂ, ಉತ್ತರದಲ್ಲಿ ಕಬ್ಬಿನ ರಸವನ್ನೂ ಇಡಬೇಕು. ಶಂಖದಲ್ಲಿರುವ ನೀರನ್ನು ತುಲಸೀದಳದಿಂದ ಅದ್ದಿ ಆ ಎಲ್ಲಾ ವಸ್ತುಗಳನ್ನೂ ಪ್ರೋಕ್ಷಿಸಬೇಕು. ಆ ಐದು ವಸ್ತುಗಳ ಮೇಲೆ ಕ್ರಮವಾಗಿ ತುಳಸೀದಳಗಳನ್ನು ಇಡಬೇಕು. ಆಯಾ ಕಲಶಗಳನ್ನು ಒಂದೊಂದನ್ನೂ ಮುಟ್ಟುತ್ತಾ ಮುಂದೆ ಹೇಳುವ ಮಂತ್ರಗಳನ್ನು ಕ್ರಮದಿಂದ ಜಪಿಸಬೇಕು.

(1) "ಆಪ್ಯಾಯಸ್ವೇತಿ ಗೌತಮ ಋಷಿಃ | ಗಾಯತ್ರೀ ಛಂದಃ | ಸೋಮೋ ದೇವತಾ |" (2) "ದಧಿಕ್ರಾವ್ಣ ಇತ್ಯಸ್ಯ ಗೌತಮ ಪುತ್ರೋ ವಾಸುದೇವ ಋಷಿಃ |ವಿಷ್ಣುರ್ದೇವತಾ | ಅನುಷ್ಟುಪ್ ಛಂದಃ " (3) "ಘೃತಂ ಮಿಮಿಕ್ಷೇ" ಇತ್ಯಸ್ಯ ಜಮದಗ್ನಿ ಋಷಿಃ | ಸ್ವಾಹಾಕೃತಿರ್ದೇವತಾ | ತ್ರಿಷ್ಟುಪ್ ಛಂದಃ" (4) "ಮಧುವಾತಾ ಇತ್ಯಸ್ಯ ರಾಹುಗಣಪುತ್ರೋ ಗೌತಮ ಋಷಿಃ| ವಿಶ್ವೇದೇವಾ ದೇವತಾಃ | ಗಾಯತ್ರೀ ಛಂದಃ (5) "ತಂ ತೇ ವಯಂ ಯಥಾ ಗೋಭಿಃ" ಇತ್ಯಸ್ಯ ಪ್ರಗಾಥ ಋಷಿಃ | ಇಂದ್ರೋ ದೇವತಾ | ಗಾಯತ್ರೀ ಛಂದಃ | ಇಕ್ಷುರಸಾಭಾವೇ "ಸ್ವಾದುಃ ಪವಸ್ವ" "ಇತ್ಯೃಚಃ ಭರದ್ವಾಜ ಋಷಿಃ | ಲಿಂಗೋಕ್ತಾ ದೇವತಾಃ | ತ್ರಿಷ್ಟುಪ್ ಛಂದಃ" ಇತಿ ಪ್ರಾಗುಕ್ತಮಾನಶರ್ಕರಾಮಾನೇನ ಮಂತ್ರೇಣಾನುಮಂತ್ರ್ಯ.

"ಒಂದೊಂದು ಮಂತ್ರಗಳಿಗೂ ಋಷಿ, ಛಂದಸ್ಸು ಮತ್ತು ದೇವತೆಗಳನ್ನು ಹೇಳಿದೆವು. ಅವುಗಳನ್ನು ಹೇಳಿ ಆಯಾ ವಸ್ತುಗಳನ್ನು ಜಪಿಸಬೇಕು. ಕಬ್ಬಿನ ಹಾಲು ಸಿಗದಿದ್ದರೆ ಹಿಂದೆ ಹೇಳಿರುವ ಪ್ರಮಾಣದಷ್ಟು ಸಕ್ಕರೆಯನ್ನು "ಸ್ವಾದುಃ ಪವಸ್ವ" ಎಂಬ ಮಂತ್ರಕ್ಕೆ ಹೇಳಿರುವ ಋಷಿ, ಛಂದಸ್ಸು ಮತ್ತು ದೇವತೆಗಳನ್ನು ಹೇಳಿ ಜಪಿಸಬೇಕು. ಕಲಶಕ್ಕೆ ಮಾಡಿದಂತೆ ಪೀಠ ಪೂಜೆ ಮುಂತಾದವುಗಳನ್ನು ಮಾಡಬೇಕು. ಆಯಾ ಕಲಶಗಳಿಗೆ ಹೇಳಲ್ಪಟ್ಟ ದ್ರವ್ಯಗಳಿಗೆ ಅಭಿಮಾನಿಗಳಾಗಿರುವ ದೇವತೆಗಳಲ್ಲಿ ಅಂತರ್ಯಾಮಿಯಾಗಿರುವ ಶ್ರೀಹರಿಯನ್ನು ಆವಾಹಿಸಬೇಕು. ಆ ಶ್ರೀಹರಿಗೆ ಅರ್ಘ್ಯ, ಪಾದ್ಯ, ಮುಂತಾದ ನೀರಾಜನದ ವರೆಗಿನ ಷೋಡಶೋಪಚಾರಪೂಜೆಯನ್ನು ಮಾಡಬೇಕು. ತಾನು ಅಶಕ್ತನಾಗಿದ್ದರೆ ಇತರರಿಂದ ಮಾಡಿಸಬೇಕು.

### ದೀಪಸ್ತಂಭ ಲಕ್ಷಣ

ಲೋಹಜಾನ್ ದೀಪಿಕಾಸ್ತಂಭಾಂಶ್ಚತುರ್ಹಸ್ತಸಮುಚ್ಛ್ರಿತಾನ್ |
ತ್ರಿಹಸ್ತಾನೇಕಹಸ್ತಾನ್ವಾ ದ್ವಿಹಸ್ತಾನ್ವಾ ಯಥಾಬಲಮ್ ||
ತಾರಾಮಾರಾನ್ ದರ್ಶನೀಯಾನ್ ಯುಗ್ಮೈಶ್ಚ ಸ್ನೇಹವಾರಿಜೈಃ |
ಯುಗ್ಮೈರ್ವಾ ಚಿತ್ರವಿಸ್ತೀರ್ಣೈರ್ಬ್ರಹ್ಮಸೈರ್ವಾ ಪರಿಷ್ಕೃತೈಃ ||
ಸ್ನೇಹಧಾರಗ್ರಹಃ ಕ್ಲೃಪ್ತ್ಯಾ ಪದ್ಮಕೋಶೈರಲಂಕೃತಮ್ | (ಪಾದ್ಮ ಸಂಹಿತಾ ವಚನ )

ನಾಲ್ಕು ಮೊಳ ಅಥವಾ ಮೂರು ಮೊಳ ಅಥವಾ ಎರಡು ಮೊಳ ಅಥವಾ ಒಂದು ಮೊಳ ಎತ್ತರವುಳ್ಳ ಲೋಹದಿಂದ ನಿರ್ಮಿತವಾಗಿರುವ ದೀಪಸ್ತಂಭಗಳಿರಬೇಕು. ಸುಂದರವಾಗಿರಬೇಕು. ಎರಡು ದೀಪಗಳಿರಬೇಕು. ಎಣ್ಣೆಯು ಯಾವಾಗಲೂ ಬರುತ್ತಿರುವಂತೆ ಏರ್ಪಾಡು ಮಾಡಿರಬೇಕು. ಪದ್ಮದ ಮೊಗ್ಗಿನಂತೆ ಅಲಂಕರಿಸಲ್ಪಟ್ಟಿರಬೇಕು ಇದು ದೀಪಸ್ತಂಭದ ಲಕ್ಷಣ.

### ಧೂಪಪಾತ್ರದ ಲಕ್ಷಣ

ಧೂಪಪಾತ್ರಂ ಸರೋಜಾತಂ ಸುವರ್ಣೇನ ವಿರಾಜಿತಮ್ |
ಹಸ್ತಮಾನಯತಾನಂ ವಾಮಯುಕ್ತಸ್ತ್ರಿಪದಾ ದ್ವಿಪಾತ್ ||
ಪಾದಯೋರಧಿತಃ ಸಃ ಸ್ಯಾದುತ್ಸೇಧ ಶ್ಚತುರಂಗುಲಃ |
ಅನೇನ ಸುಷಿರಂ ತಸ್ಯ ವಿಧಾನಂ ಸಹಜಂ ಭವೇತ್ ||

ಧೂಮಪಾತ್ರದ ಲಕ್ಷಣವನ್ನು ಈಗ ಹೇಳುವೆವು. ಧೂಪದ ಪಾತ್ರವು ಬೆಳ್ಳಿಯಿಂದಲೂ, ಬಂಗಾರದಿಂದಲೂ ನಿರ್ಮಿತವಾಗಿರಬೇಕು. ಒಂದು ಮೊಳದಷ್ಟು ಎತ್ತರವಾಗಿರಬೇಕು. ಮೂರು ಕಾಲು ಅಥವಾ ಎರಡು ಕಾಲುಗಳಿಂದ ಯುಕ್ತವಾಗಿರಬೇಕು. ಪಾದಗಳ ಸುತ್ತಲೂ ನಾಲ್ಕು ಬೆರಳುಗಳಷ್ಟು ಎತ್ತರವಿರಬೇಕು. ಅದರೊಳಗೆ ಧೂಪವನ್ನು ಹಾಕುವುದಕ್ಕೆ ರಂಧ್ರವಿರಬೇಕು. ಆ ರಂಧ್ರವೂ ಧೂಪಪಾತ್ರೆಯಲ್ಲಿ ಬೆಸೆಯಲ್ಪಟ್ಟಿರಬಾರದು."

ಅಥವಾ ವಿಕಸ್ವತ್ಪದ್ಮಸದೃಶಾಕಾರಶೋಭಿತಮ್ |
ಇಂದುನಾಲವಧಾನಾಂಘ್ರಿದಂಡಾಗ್ರೇ ಸುಪ್ರತಿಷ್ಠಿತಮ್ ||

"ಅಥವಾ ಅರಳಿದ ಪದ್ಮಕ್ಕೆ ಸಮಾನವಾದ ಆಕಾರವುಳ್ಳದ್ದಾಗಿರಬೇಕು. ಚಂದ್ರನಂತೆ ಶೋಭಿಸುತ್ತಿರುವ ಮತ್ತು ಕೋಲಿನಂತೆ ಎತ್ತರವಾಗಿರುವ ದಂಡದಲ್ಲಿ ಧೂಪವನ್ನು ಹಾಕುವ ಪಾತ್ರೆಯಿರಬೇಕು."

### ದೀಪದ ಲಕ್ಷಣ

ದೀಪಪಾತ್ರಂ ತಥಾ ನಾಲಂ ಮಧ್ಯೇ ಕುಮುದಕುಡ್ಮಲಮ್ |
ವರ್ತ್ಯಾಧಾರಶತೇನಾಪಿ ಯುಕ್ತಮಷ್ಟಾಭಿರೇವ ಚ ||
ವಿಂಶತ್ಯಾ ಚಾಷ್ಟಭಿಶ್ಚೈವ ದ್ವಾಭ್ಯಾಂ ವಾ ದಶಭಿಶ್ಚ ತತ್ |
ಅಷ್ಟಾಭಿರ್ವಾ ಯಥಾಶಕ್ತಿ ಕಲ್ಪಯೇಚ್ಛಿಲ್ಪವಿತ್ತಮಃ || (ಪಾದ್ಮಸಂಹಿತಾ)

"ಇನ್ನು ಮುಂದೆ ದೀಪದ ಲಕ್ಷಣವನ್ನು ಹೇಳುವೆವು. ದೀಪದಲ್ಲಿ ಎತ್ತರವಾದ ನಾಳವಿರಬೇಕು. ಅದರ ಮೇಲ್ಭಾಗದಲ್ಲಿ ಕಮಲದ ಮೊಗ್ಗಿನಂತೆ ಇರಬೇಕು. ಬತ್ತಿಗಳನ್ನು ಹಚ್ಚುವುದಕ್ಕೆ ನೂರು ಎಂಟು, ಅಥವಾ ಹನ್ನೆರಡು ಅಥವಾ ಎಂಟು ಮುಖವಿರಬೇಕು.

### ಘಂಟಾ ಲಕ್ಷಣ

ಶಬ್ದಬ್ರಹ್ಮಮಯೀ ವರ್ಣಾಹಸ್ತೋತ್ಸೇಧಪ್ರಮಾಣಿಕಾ |
ಬ್ರಹ್ಮಾಂಡಗೋಲಕಾಕಾರ ಸೌಷ್ಠವಾವಯವಾ ಭವೇತ್ ||
ಅಧೋ ಮುಸ್ತ್ವಾಕಮಾನಾ ಚ ವಿಸ್ತರೋತ್ಸೇಧಸಂಮಿತಾ |
ಪ್ರದೀಪತುಲ್ಯಸಂಸ್ಥಾನಾ ಶ್ಲಕ್ಷ್ಣಾಭ್ಯಂತರತಾಲಕಾ ||
ತಾಲೋನದಂಡಮೂಲಾ ಸ್ಯಾದಗ್ರೇ ಸುಸ್ಥಿತಪಕ್ಷಿರಾಟ್ |
ಚಕ್ರಾಗ್ರಾ ಪಂಕಜಾಗ್ರಾ ವಾ ಘಂಟೈಷಾ ಪರಿಕೀರ್ತಿತಾ ||
ನಾಲಬಂಧಾಶ್ಚ ತಸ್ಯಾಶ್ಚ ಘಂಟಾಃ ಪ್ರತಿದಿಶಂ ಕೃತಾಃ |
ಏಕಸ್ಯಾ ಏವ ಘಂಟಾಯಾ ಯದ್ವಾ ವಿತ್ತಾನುಸಾರತಃ || (ಪಾದ್ಮಸಂಹಿತಾ )

"ತನ್ನಲ್ಲಿರುವ ಹಣಕ್ಕೆ ಯೋಗ್ಯವಾದ ಘಂಟೆಯನ್ನು ತಯಾರಿಸಬೇಕು. "ಓಂ" ಎಂಬ ಧ್ವನಿಯಿಂದ ಯುಕ್ತವಾಗಿರಬೇಕು. ಬ್ರಹ್ಮಾಂಡಗೋಳಕದಂತೆ ಆಕಾರದಿಂದ ಯುಕ್ತವಾಗಿರಬೇಕು. ಅತಿಸುಂದರವಾಗಿರಬೇಕು. ದೀಪದಂತೆ ಹೊಳೆಯುತ್ತಿರಬೇಕು. ಘಂಟೆಯನ್ನು ಹೊಡೆಯುವ ಒಳಗಿರುವ ತಾಳವು ಸುಂದರವಾಗಿರಬೇಕು. ಘಂಟೆಯನ್ನು ಹಿಡಿಯುವ ಹೊರಗಿನ ಭಾಗವು ಒಳಗಿರುವ ತಾಳದಷ್ಟೇ ಎತ್ತರವಾಗಿರಬೇಕು. ಮೇಲ್ಭಾಗದಲ್ಲಿ ಗರುಡನಾಗಲೀ, ಚಕ್ರವಾಗಲೀ, ಕಮಲವಾಗಲೀ ಇರಬೇಕು."

### ದೀಪಸ್ತಂಭದಲ್ಲಿ ಅಭಿಮಾನಿದೇವತೆಗಳು

ಸಪ್ತವಿಂಶತಿನಕ್ಷತ್ರಂ ನಾಲಂ ವಾಸುಕಿದೈವತಮ್ |
ಪಾದಾನಾಮರ್ಕಚಂದ್ರೌ ಚ ದೀಪಾನಾಮಧಿದೇವತಾಃ || (ಪಾದ್ಮ ಸಂಹಿತಾ )

"ದೀಪಕ್ಕೆ ಇಪ್ಪತ್ತೇಳು ನಕ್ಷತ್ರಗಳೂ ದೀಪದ ಕಂಬಕ್ಕೆ ವಾಸುಕಿಯೂ ಬುಡಕ್ಕೆ ಸೂರ್ಯಚಂದ್ರರೂ ಅಧಿದೇವತೆಗಳೆನಿಸುವರು."

### ದೀಪದ ಪಾತ್ರೆಗೆ ಮತ್ತು ಧೂಪದ ಪಾತ್ರೆಗ ಅಭಿಮಾನಿದೇವತೆಗಳು

ಪಾದಾನಾಮರ್ಕಸೋಮೌ ಚ ನಾಲಂ ವಾಸುಕಿದೈವತಮ್ |
ಅಗ್ನಿಶ್ಚ ದೀಪಪಾತ್ರೇ ಚ ಧೂಪಸ್ಯಾಪ್ಯಧಿದೇವತಾ || (ಪಾದ್ಮ ಸಂಹಿತಾ)

"ದೀಪಪಾತ್ರೆ ಮತ್ತು ಧೂಪಪಾತ್ರೆಗಳ ಬುಡದಲ್ಲಿ ಸೂರ್ಯಚಂದ್ರರೂ ಮೇಲಿನಿಂದ ಕೆಳಗಿನವರೆಗೆ ಇರುವ ಭಾಗದಲ್ಲಿ ವಾಸುಕಿಯೂ, ದೀಪಪಾತ್ರೆ ಮತ್ತು ಧೂಪಪಾತ್ರೆಯಲ್ಲಿ ಅಗ್ನಿಯೂ ಅಧಿದೇವತೆಗಳಾಗಿರುವರು."

### ಘಂಟೆಯಲ್ಲಿ ಅಭಿಮಾನಿದೇವತೆಗಳು

ಘಂಟಾಗ್ರೇ ಬ್ರಹ್ಮದೈವತ್ಯಂ ಮುಕುಲೇ ರುದ್ರದೈವತಮ್ |
ಸೂತ್ರಾಣಾಂ ಚ ಮಹಾನಾಗಂ ಸ್ವರಂ ಚೈವ ಸರಸ್ವತೀಮ್ |
ನಾದಂ ಪ್ರಜಾಪತಿಂ ವಿದ್ಯಾತ್ ಘಂಟಾನಾಮಧಿದೇವತಾಃ || (ಪರಮಪುರುಷ ಸಂಹಿತಾ )

"ಘಂಟೆಯ ತುದಿಯಲ್ಲಿ ಬ್ರಹ್ಮನೂ, ಘಂಟೆಯಲ್ಲಿರುವ ಕಮಲದ ಮೊಗ್ಗಿನಲ್ಲಿ ರುದ್ರನೂ, ದಂಡದಲ್ಲಿ ವಾಸುಕಿಯೂ, ಸ್ವರದಲ್ಲಿ ಸರಸ್ವತಿಯೂ, ನಾದದಲ್ಲಿ ಪ್ರಜಾಪತಿಯೂ ಅಭಿಮಾನಿದೇವತೆಗಳಾಗಿರುವರು."

"ದೀಪಸ್ತಂಭದಲ್ಲಿ" ಸಪ್ತವಿಂಶತಿನಕ್ಷತ್ರೇಭ್ಯೋ ನಮಃ, ನಾಲದಲ್ಲಿ "ವಾಸುಕಿದೇವತಾಯೈ ನಮಃ" ಪಾದದಲ್ಲಿ "ಅರ್ಕಾಯ ನಮಃ" ದೀಪಪಾತ್ರದಲ್ಲಿಯೂ ಧೂಪಪಾತ್ರದಲ್ಲಿಯೂ "ಸೋಮಾಯ ನಮಃ" ಘಂಟೆಯಲ್ಲಿ "ಬ್ರಹ್ಮಣೇ ನಮಃ" ದಂಡದಲ್ಲಿ

"ಮಹಾನಾಗಾಯ ನಮಃ" ಸ್ವರದಲ್ಲಿ "ಸರಸ್ವತ್ಯೈ ನಮಃ" ನಾದದಲ್ಲಿ "ಪ್ರಜಾಪತಯೇ ನಮಃ" ಎಂಬ ಮಂತ್ರಗಳಿಂದ ಪ್ರತ್ಯೇಕವಾಗಿ ಒಂದೊಂದು ಪುಷ್ಪಗಳನ್ನು ಸಮರ್ಪಿಸಬೇಕು."

**ಪೀಠಪೂಜಾ**

ಪ್ರಥಮಂ ದೇವತಾಂ ಪರಾಮ್ |
ಮಧ್ಯೆ ಸವ್ಯೇ ಗುರೂಂಶ್ಚೈವ ದಕ್ಷಿಣೇ ಸರ್ವದೇವತಾಃ |
ಪುನಃ ಸವ್ಯೇ ಸರ್ವಗುರೂನ್ (ತಂತ್ರಸಾರ ವಚನ)

"ಪೀಠವನ್ನು ಸ್ಥಾಪಿಸುವ ಪ್ರದೇಶದಲ್ಲಿ ಮಧ್ಯದಲ್ಲಿ ಪರದೇವತೆಯಾಗಿರುವ ನಾರಾಯಣನನ್ನು "ಓಂ ನಮೋ ನಾರಾಯಣಾಯ" ಎಂಬ ನಾರಾಯಣಾಷ್ಟಾಕ್ಷರ ಮಂತ್ರದಿಂದ ಆವಾಹಿಸಬೇಕು. ಶ್ರೀಹರಿಯ ಎಡಭಾಗದಲ್ಲಿ ಪೀಠಕ್ಕಿಂತ ಹೊರಗೆ ಸರ್ವರಿಗೂ ಗುರುಗಳಾಗಿರುವ ಮುಖ್ಯಪ್ರಾಣದೇವರನ್ನು ಆವಾಹಿಸಬೇಕು. ಬಲಭಾಗದಲ್ಲಿ ಪೀಠಕ್ಕಿಂತ ಹೊರಗೆ ವಿಷ್ಣು, ಬ್ರಹ್ಮ, ರುದ್ರ ಮುಂತಾದ ಸರ್ವದೇವತೆಗಳನ್ನು ಆವಾಹಿಸಬೇಕು. ಪುನಃ ಎಡಭಾಗದಲ್ಲಿ ಸನತ್ಕುಮಾರ, ಸನಕ, ಸನಂದನ, ಸನಾತನ ಎಂಬ ಸರ್ವಗುರುಗಳನ್ನು ಆವಾಹಿಸಬೇಕು. ಅವರನ್ನೆಲ್ಲರನ್ನೂ ಧ್ಯಾನಿಸಬೇಕು. ಈ ಗುರುಗಳೆಲ್ಲರೂ ಬಿಳಿಯ ಬಟ್ಟೆಯನ್ನು ಉಟ್ಟುಕೊಂಡವರಾಗಿಯೂ ಹಳದಿ ಬಣ್ಣದಿಂದ ಯುಕ್ತರಾಗಿಯೂ ಒಂದು ಕೈಯಲ್ಲಿ ಪುಸ್ತಕವನ್ನು ಧರಿಸಿದವರಾಗಿಯೂ ಇನ್ನೊಂದು ಕೈಯಲ್ಲಿ ಜ್ಞಾನಮುದ್ರೆಯಿಂದ ಯುಕ್ತರಾಗಿಯೂ ಎಲ್ಲರೂ ಶ್ರೀಹರಿಯನ್ನು ಧ್ಯಾನಿಸುತ್ತಿರವರಾಗಿಯೂ ಇರುವಂತೆ ಭಾವಿಸಬೇಕು. ಈ ರೀತಿಯಿಂದ ಅವರನ್ನು ಧ್ಯಾನಿಸಿದವನು ಜ್ಞಾನವಂತನಾಗುವನು.

ಮಧ್ಯೇ ನಾರಾಯಣಂ ದೇವಂ ಪೂಜಯೇದ್ವಾಮತೋ ಗುರೂನ್ |
ದಕ್ಷಿಣೇ ದೇವತಾಃ ಸರ್ವಾ ಗುರುಭ್ಯಃ ಪೂರ್ವಪೂರ್ವವತ್ || (ವಿಷ್ಣುತೀರ್ಥೀಯ ವಚನ)

"ಪೀಠದ ಮಧ್ಯದಲ್ಲಿ ನಾರಾಯಣದೇವನನ್ನೂ ಎಡಭಾಗದಲ್ಲಿ ಗುರುಗಳನ್ನೂ ಗುರುಗಳಿಗಿಂತ ಬಲಭಾಗದಲ್ಲಿ ಸಕಲ ದೇವತೆಗಳನ್ನೂ ತಾರತಮ್ಯಾನುಸಾರವಾಗಿ ಆವಾಹಿಸಬೇಕು."

ಪೂಜಯಿತ್ವಾ ಪೂರ್ವಮ್ | (ವಾಸಿಷ್ಠ ವಚನ)

"ಶ್ರೀ ಹರಿಯ ಆವಾಹನೆಗಿಂತ ಪೂರ್ವದಲ್ಲಿ ಸಕಲದೇವತೆಗಳನ್ನೂ ಗುರುಗಳನ್ನೂ ಆವಾಹಿಸಬೇಕು."

ಆತ್ಮನಶ್ಚ ಗುರೂನ್ ಧ್ಯಾತ್ವಾ ಕಾರಯೇದಚ್ಯುತಾರ್ಚನಮ್ | (ಪಾದ್ಮಸಂಹಿತಾ ವಚನ)

"ತನ್ನ ಗುರುಗಳನ್ನು ಧ್ಯಾನಿಸಿದ ಮೇಲೆ ಅಚ್ಯುತನ ಪೂಜೆಯನ್ನು ಮಾಡಬೇಕು."

ಮೂಲಗುರುಂ ಸರ್ವಗುರುಮನುಜ್ಞಾಂ, ಭಕ್ತಿಪೂರ್ವಕಮ್ | (ವಿಷ್ಣುತೀರ್ಥೀಯ ವಚನ)

"ಮೂಲಗುರುವಾದ ಶ್ರೀಹರಿಯನ್ನೂ ಸರ್ವಗುರುಗಳಾದ ಶ್ರೀವಾಯುದೇವರನ್ನೂ ಆವಾಹಿಸಿ ಭಕ್ತಿಪೂರ್ವಕವಾಗಿ ಅವರಿಂದ ಅನುಜ್ಞೆಯನ್ನು ಪಡೆದು ಶ್ರೀಹರಿಯನ್ನು ಪೂಜಿಸಬೇಕು."

ಪಶ್ಚಾತ್ಪೀಠಂ ಸಮರ್ಚಯೇತ್ | (ವಾಸಿಷ್ಠ ವಚನ)

"ಕಲಶಪೂಜೆಯ ಅನಂತರದಲ್ಲಿ ಪೀಠವನ್ನು ಪೂಜಿಸಬೇಕು."

ಅರ್ಚಯೇದ್ಗಂಧಪುಷ್ಪಾದ್ಯೈಃ ಪೀಠಪಾರ್ಶ್ವೇ ತು ಸವ್ಯಕೇ |
ವಾಯುಮಾದ್ಯಗುರುಂ ಲೋಕೇ ಪೀಠಪಾರ್ಶ್ವೇ ತು ದಕ್ಷಿಣೇ ||
ಬ್ರಹ್ಮಾಣಂ ವಿಷ್ಣುಮೀಶಂ ಚ ಸಮಾರಾಧ್ಯ ತಥೋತ್ತರೇ |
ಸನತ್ಕುಮಾರಂ ಸನಕಂ ಸನಂದನಸನಾತನೌ || (ಪಾದ್ಮತಂತ್ರ ವಚನ)

"ಪೀಠಕ್ಕಿಂತ ಎಡಭಾಗದಲ್ಲಿ ಆದಿಗುರುಗಳಾಗಿರುವ ವಾಯುದೇವರನ್ನೂ ಬಲಭಾಗದಲ್ಲಿ ಬ್ರಹ್ಮ, ವಿಷ್ಣು, ರುದ್ರರುಗಳನ್ನೂ ಆವಾಹಿಸಿ ಗಂಧ, ಪುಷ್ಪ ಮುಂತಾದವುಗಳಿಂದ ಪೂಜಿಸಬೇಕು. ಎಡಭಾಗದಲ್ಲಿ, ಸನತ್ಕುಮಾರ, ಸನಕ, ಸನಂದನ, ಸನಾತನ ಎಂಬ ಗುರುಗಳನ್ನೂ ತನಗಿಂತ ಉತ್ತಮರಾಗಿರುವ ಒಂಭತ್ತು ಕೋಟಿ ದೇವತೆಗಳನ್ನೂ ಪೂಜಿಸಬೇಕು.

ಆಗ್ನೇಯಾದಿಷು ಚ ಕ್ರಮಾತ್ |
ಧರ್ಮಂ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚೈವ ಕೋಣಗಮ್ |
ತದಂತಃ ಪೂರ್ವದಿಕ್ಪೂರ್ವಮಧರ್ಮಾದೀಂಶ್ಚ ಪೂಜಯೇತ್ ||
ಅಪೂಜಿತಾ ಅಧರ್ಮಾದಿದಾತಾರಸ್ತೇ ತಥಾಭಿಧಾಃ |
ಯಮವಾಯುಶಿವೇಂದ್ರಾಶ್ಚ ಜ್ಞೇಯಾ ಧರ್ಮಾದಿದೇವತಾಃ || (ತಂತ್ರಸಾರ ವಚನ)

"ದೇವರಿಗೂ ದೇವರ ಪೂಜೆಯನ್ನು ಮಾಡುತ್ತಿರುವವನಿಗೂ ಮಧ್ಯಭಾಗವು ಅಂದರೆ ದೇವರ ಮುಖದ ಮುಂಭಾಗವು ಪೂರ್ವದಿಕ್ಕೆನಿಸುತ್ತದೆ. ಅಲ್ಲಿಂದ ಆಗ್ನೇಯ ಮುಂತಾದ ಎಂಟು ದಿಕ್ಕುಗಳೆಂದು ತಿಳಿಯಬೇಕು. ಪೀಠದ ಕಾಲುಗಳ ಕೆಳಭಾಗದಲ್ಲಿ ಆಗ್ನೇಯ, ನೈಋತ್ಯ, ವಾಯವ್ಯ, ಈಶಾನ್ಯ ಎಂಬ ನಾಲ್ಕು ವಿದಿಕ್ಕುಗಳಲ್ಲಿ ಕ್ರಮವಾಗಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಎಂಬ ನಾಲ್ಕು ಗುಣಗಳಿಗೆ ಅಭಿಮಾನಿದೇವತೆಗಳನ್ನೂ, ಪೀಠದ ಹಲಿಗೆಯ ಮೇಲೆ ಪೂರ್ವದಿಂದ ಕ್ರಮವಾಗಿ ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ ಎಂಬ ನಾಲ್ಕು ದೋಷಗಳಿಗೆ ಅಭಿಮಾನಿಗಳಾಗಿರುವ ದೇವತೆಗಳನ್ನೂ ಪೂಜಿಸಬೇಕು. ಅಧರ್ಮಾದಿಗಳಿಗೆ ಕ್ರಮವಾಗಿ ಅಭಿಮಾನಿದೇವತೆಗಳು ನಿಯತಿ, ದುರ್ಗಾ, ಕಾಮ, ರುದ್ರ ಎಂದು ತಿಳಿಯಬೇಕು. ಇವರನ್ನು ಪೂಜಿಸದಿದ್ದರೇ ತಮ್ಮ ಅಧೀನವಾಗಿರುವ ಅಧರ್ಮ ಮುಂತಾದವುಗಳನ್ನು ಕೊಡುವರು. ಧರ್ಮಕ್ಕೆ ಯಮನೂ, ಜ್ಞಾನಕ್ಕೆ ವಾಯುದೇವನೂ, ವೈರಾಗ್ಯಕ್ಕೆ ಶಿವನೂ, ಐಶ್ವರ್ಯಕ್ಕೆ ಇಂದ್ರನೂ ಅಭಿಮಾನಿಗಳೆಂದೂ ತಿಳಿಯಬೇಕು."

ಆಗ್ನೇಯಾದಿಷು ಕೋಣೇಷು ದಿಕ್ಷು ಧರ್ಮಾದಿಕಾನ್ನ್ಯಸೇತ್ |
ಧರ್ಮಾದಯಃ ಪಾದರೂಪಾಃ ಪೀಠಸ್ಯ ಫಲಕಾಃ ಪರೇ ||

ಆಗ್ನೇಯ, ನೈಋತ್ಯ, ವಾಯವ್ಯ, ಈಶಾನ್ಯ ಎಂಬ ನಾಲ್ಕು ಕೋಣ ದಿಕ್ಕುಗಳಲ್ಲಿ ಪೀಠದ ಪಾದಗಳಿವೆ. ಆ ಪಾದಗಳಲ್ಲಿ ಕ್ರಮವಾಗಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳಿಗೆ ಅಭಿಮಾನಿಗಳಾಗಿರುವ ದೇವತೆಗಳನ್ನು ಪೂಜಿಸಬೇಕು. ಪೀಠದ ಹಲಿಗೆಯಲ್ಲಿ ಅಧರ್ಮಾದಿಗಳಿಗೆ ಅಭಿಮಾನಿಗಳಾಗಿರುವ ದೇವತೆಗಳನ್ನು ಪೂಜಿಸಬೇಕು.

### ಪೀಠಪಾದದೇವತಾಸ್ವರೂಪ

......ಪುರುಷಾಕೃತಯಃ ಸ್ಥಿತಾಃ |
ಚತುರ್ಭುಜಾಃ ಸಿಂಹವಕ್ತ್ರಾಃ ಸಿತಾಃ ಪೂರ್ವೇಽರುಣಾಃ ಪರೇ ||
ಹಸ್ತಾಭ್ಯಾಮಾಭಿಮುಖ್ಯಾಭ್ಯಾಂ ರವಿಭಾಂಜಲಿಸಂಪುಟಾಃ |
ಅಪರಾಭ್ಯಾಂ ಚ ಬಿಭ್ರಾಣಾಃ ಕರಾಭ್ಯಾಂ ಯೋಗಪೀಠಿಕಾಮ್ ||
ಮಧ್ಯೇಽಷ್ಟಧಾ ಶಿವೋ ದೇವಃ....... |

"ಪೀಠದ ಪಾದಗಳಲ್ಲಿರುವ ದೇವತೆಗಳ ಸ್ವರೂಪಗಳನ್ನು ಈಗ ಹೇಳುವೆವು. ಎಂಟು ದಿಕ್ಕುಗಳಲ್ಲಿರುವ ಎಲ್ಲಾ ದೇವತೆಗಳೂ ಪುರುಷರ ಆಕಾರಗಳಿಂದ ಯುಕ್ತರಾಗಿರುವರು. ನಾಲ್ಕು ಕೈಗಳಿಂದಲೂ ಸಿಂಹದ ಮುಖಗಳಿಂದಲೂ ಯುಕ್ತರಾಗಿರುವರು. ಪೂರ್ವದಲ್ಲಿರುವ ದೇವತೆಯು ಬಿಳಿಬಣ್ಣವುಳ್ಳವಾಗಿಯೂ ಉಳಿದ ಏಳು ದಿಕ್ಕುಗಳಲ್ಲಿರುವವರು ಕೆಂಪುಬಣ್ಣದಿಂದ ಯುಕ್ತರಾಗಿಯೂ ಇರುವರು. ಎಂಟು ದೇವತೆಗಳ ನಾಲ್ಕು ನಾಲ್ಕು ಕೈಗಳಲ್ಲಿ ಮೇಲಿರುವ ಎರಡು ಎರಡು ಕೈಗಳನ್ನು ಜೋಡಿಸಿ

ಪೀಠದಲ್ಲಿರುವ ಶ್ರೀಹರಿಯನ್ನು ನಮಸ್ಕರಿಸುತ್ತಿರುವರು. ಆ ಕೈಗಳು ಸೂರ್ಯನಂತೆ ಪ್ರಕಾಶಿಸುತ್ತಿವೆ ಎಂದು ಭಾವಿಸಬೇಕು. ಉಳಿದ ಎರಡು ಕೈಗಳಿಂದ ಸರ್ವರೂ ಪೀಠವನ್ನು ಎತ್ತುತ್ತಿರುವಂತೆ ಭಾವಿಸಬೇಕು. ಆ ಎಂಟು ದೇವತೆಗಳಿಗೂ ಶ್ರೀಹರಿಗೂ ಮಧ್ಯದಲ್ಲಿ ಶಿವನು ಎಂಟು ರೂಪಗಳನ್ನು ಧರಿಸಿದವನಾಗಿ ಶ್ರೀಹರಿಯ ಪೀಠವನ್ನು ಎತ್ತುತ್ತಿರುವಂತೆ ಭಾವಿಸಬೇಕು."

### ಪೀಠಪೂಜೆಯನ್ನು ಮಾಡುವ ಕ್ರಮ

ಸ್ವಗುರುಂ ಮನಸಾ ಧ್ಯಾತ್ವಾ ತಸ್ಮಾನುಜ್ಞಾಮವಾಪ್ಯ ಚ |

"ತನ್ನ ಗುರುವನ್ನು ಮನಸ್ಸಿನಿಂದ ಧ್ಯಾನಮಾಡಬೇಕು. ಅವರಿಂದ ಪೀಠಪೂಜೆಯನ್ನು ಮಾಡುವುದಾಗಿ ಅನುಜ್ಞೆಯನ್ನು ಪಡೆಯಬೇಕು."

ಪೀಠದ ಮಧ್ಯದಲ್ಲಿ "ಓಂ ಪರದೇವತಾಯೈ ನಮಃ" ಎಂದು ಹೇಳುತ್ತಾ ಪರದೇವತೆಯನ್ನು ಆವಾಹಿಸಬೇಕು. ಅನಂತರದಲ್ಲಿ ಎಡಭಾಗದಲ್ಲಿ "ಓಂ ಗುಂ ಗುರುಭ್ಯೋ ನಮಃ" ಎಂದು ಹೇಳುತ್ತಾ ಗುರುಗಳನ್ನೂ, ಬಲಭಾಗದಲ್ಲಿ "ಓಂ ಸಂ ಸರ್ವದೇವತಾಭ್ಯೋ ನಮಃ" ಎಂದು ಹೇಳುತ್ತಾ ಸರ್ವದೇವತೆಗಳನ್ನೂ ಆವಾಹಿಸಬೇಕು. ಪುನಃ ಎಡಭಾಗದಲ್ಲಿ "ಓಂ ಸಂ ಸರ್ವಗುರುಭ್ಯೋ ನಮಃ" ಎಂದು ಹೇಳುತ್ತಾ ಸರ್ವಗುರುಗಳನ್ನೂ ಆವಾಹಿಸಬೇಕು.

### ಪೀಠದ ಪಾದಗಳ ಕೆಳಭಾಗದಲ್ಲಿರುವ ದೇವತೆಗಳ ಪೂಜೆ

ಗರುಡಂ ವ್ಯಾಸದೇವಂ ಚ ದುರ್ಗಾಂ ಚೈವ ಸರಸ್ವತೀಮ್ ||

ನಾಲ್ಕು ಪಾದಗಳ ಕೆಳಭಾಗಗಳಲ್ಲಿ ಆಗ್ನೇಯ, ನೈಋತ್ಯ, ವಾಯವ್ಯ, ಈಶಾನ್ಯ, ಎಂಬ ವಿದಿಕ್ಕುಗಳಲ್ಲಿ ಕ್ರಮವಾಗಿ "ಓಂ ಗಂ ಗರುಡಾಯ ನಮಃ" "ಓಂ ವ್ಯಾಂ ವೇದವ್ಯಾಸಾಯ ನಮಃ" "ಓಂ ದುಂ ದುರ್ಗಾಯೈ ನಮಃ" "ಓಂ ಸಂ ಸರಸ್ವತ್ಯೈ ನಮಃ" ಎಂಬ ನಾಲ್ಕು ಮಂತ್ರಗಳಿಂದ ಆ ಮಂತ್ರಗಳಿಂದ ಹೇಳಲ್ಪಟ್ಟ ನಾಲ್ಕು ದೇವತೆಗಳನ್ನು ಆವಾಹಿಸಬೇಕು.

### ಪೀಠದ ಪಾದಗಳ ಮೇಲ್ಭಾಗದಲ್ಲಿರುವ ದೇವತೆಗಳ ಪೂಜೆ

ನಾಲ್ಕು ಪಾದಗಳ ಮೇಲ್ಭಾಗಗಳಲ್ಲಿ, ಆಗ್ನೇಯ, ನೈಋತ್ಯ, ವಾಯವ್ಯ, ಈಶಾನ್ಯ ಎಂಬ ನಾಲ್ಕು ವಿದಿಕ್ಕುಗಳಲ್ಲಿ "ಓಂ ಧರ್ಮಾಧಿಪತಯೇ ಯಂ ಯಮಾಯ ನಮಃ" "ಓಂ ಜ್ಞಾನಾಧಿಪತಯೇ ವಾಂ ವಾಯವೇ ನಮಃ" "ಓಂ ವೈರಾಗ್ಯಾಧಿಪತಯೇ ಶಿಂ ಶಿವಾಯ ನಮಃ" "ಓಂ ಐಶ್ವರ್ಯಾಧಿಪತಯೇ ಇಂ ಇಂದ್ರಾಯ ನಮಃ" ಎಂಬ ನಾಲ್ಕು ಮಂತ್ರಗಳಿಂದ ಈ ನಾಲ್ಕು ಮಂತ್ರಗಳಿಂದ ಹೇಳಲ್ಪಟ್ಟ ದೇವತೆಗಳನ್ನು ಆವಾಹಿಸಬೇಕು.

### ಪೀಠದ ಹಲಿಗೆಯಲ್ಲಿರುವ ದೇವತೆಗಳ ಪೂಜೆ

ಈ ವಿದಿಕ್ಕುಗಳ ಒಳಭಾಗದಲ್ಲಿ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳಲ್ಲಿ ಪೀಠದ ಹಲಿಗೆಯ ಮೇಲೆ "ಓಂ ಅಧರ್ಮಾಧಿಪತಯೇ ನಿಂ ನಿಯತಯೇ ನಮಃ" "ಓಂ ಅಜ್ಞಾನಾಧಿಪತ್ಯೈ ದುಂ ದುರ್ಗಾಯೈ ನಮಃ" "ಓಂ ಅವೈರಾಗ್ಯಾಧಿಪತಯೇ ಕಾಂ ಕಾಮಾಯ ನಮಃ" "ಓಂ ಅನೈಶ್ವರ್ಯಾಧಿಪತಯೇ ರುಂ ರುದ್ರಾಯ ನಮಃ" ಎಂಬ ನಾಲ್ಕು ದೇವತೆಗಳನ್ನು ಆ ಮಂತ್ರಗಳಿಂದ ಆವಾಹಿಸಬೇಕು. ಇದು ಪೀಠದ ಹಲಿಗೆಯಲ್ಲಿರುವ ದೇವತೆಗಳ ಪೂಜೆಯೆನಿಸುತ್ತದೆ.

### ಪೀಠದ ಕೆಳಗಿರುವ ದೇವತೆಗಳ ಪೂಜೆ

ಪರಮಃ ಪುರುಷೋ ಮಧ್ಯೇ ಶಕ್ತಿರಾಧಾರರೂಪಿಣೀ ||
ಕೂರ್ಮೋಽನಂತಶ್ಚ ಪೃಥಿವೀ ಕ್ಷೀರಸಾಗರ ಏವ ಚ |
ಶ್ವೇತದ್ವೀಪೋ ಮಂಟಪಶ್ಚ ದಿವ್ಯರತ್ನಮಯೋ ಮಹಾನ್ || (ತಂತ್ರಸಾರ ವಚನ)

ಹಿಂದೆ ಹೇಳಿದಂತೆ ಮೊದಲು ಸಿಂಹಾಸನವನ್ನು ಧ್ಯಾನಿಸಬೇಕು. ಅನಂತರದಲ್ಲಿ ಬ್ರಹ್ಮಾಂಡದ ಕೆಳಗಿರುವ ಪರಮ ಪುರುಷ ಮುಂತಾದವನ್ನು ಧ್ಯಾನಿಸಿ ಪೂಜಿಸಬೇಕು.

## ಬ್ರಹ್ಮಾಂಡ ಕೆಳಗಿರುವ ದೇವತೆಗಳು

ಬ್ರಹ್ಮಾಂಡವು ಐವತ್ತುಕೋಟಿ ಯೋಜನದಷ್ಟು ಉದ್ದವು ಅಗಲವು ಆಗಿದೆ. ಆ ಬ್ರಹ್ಮಾಂಡದ ಮೇಲೆ ನೂರುಕೋಟಿಯೋಜನದಷ್ಟು ದಪ್ಪನಾಗಿರುವ ಬಂಗಾರದ ಆವರಣವಿದೆ. ಅದರ ಮೇಲೆ ನೀರು, ಅಗ್ನಿ, ವಾಯು, ಆಕಾಶ, ಅಹಂಕಾರತತ್ತ್ವ, ಮಹತತ್ತ್ವ, ತಮೋಗುಣ, ರಜೋಗುಣ, ಸತ್ತ್ವಗುಣ ಎಂಬ ಎಂಟು ಆವರಣಗಳಿವೆ. ಆ ಎಂಟು ಆವರಣಗಳೂ ಮೊದಲನೆಯ ಬಂಗಾರದ ಆವರಣಕ್ಕಿಂತ ಕ್ರಮವಾಗಿ ಹತ್ತು ಹತ್ತರಷ್ಟು ಹೆಚ್ಚಾಗುತ್ತಾ ಇರುತ್ತವೆ.

"ಈ ಒಂಭತ್ತು ಆವರಣಗಳಿಂದ ಯುಕ್ತವಾದ ಬ್ರಹ್ಮಾಂಡವನ್ನು ಪರಮಪುರುಷನಾದ ಶ್ರೀಹರಿಯು ತನ್ನ ತಲೆಯಲ್ಲಿ ಧರಿಸಿದವನಾಗಿ ಪದ್ಮಾಸನವನ್ನು ಹಾಕಿಕೊಂಡು ಪೂರ್ವಾಭಿಮುಖನಾಗಿ ಪೀಠದ ಕೆಳಗೆ ಕುಳಿತಿರುವನು. ಪೀಠದ ಮಧ್ಯದಲ್ಲಿ ಒಂದು ಹಗ್ಗವನ್ನು ಕಟ್ಟಿ ಕೆಳಗೆ ಜೋಲಾಡಿಸಿದರೆ ಎಲ್ಲಿ ಹೋಗಿ ತಗಲಬಹುದೋ ಅಲ್ಲಿ ಪರಮಪುರುಷನು ಕುಳಿತಿರುವನು."

"ಪರಮಪುರುಷನ ಮೇಲೆ ಬ್ರಹ್ಮಾಂಡದ ಆವರಣಗಳಿಗೆ ಆಧಾರಗಳಾಗಿರುವ ಶಕ್ತಿನಾಮಕಳಾದ ಲಕ್ಷ್ಮೀದೇವಿಯು ಕುಳಿತಿರುವಳು, ಶಕ್ತಿನಾಮಕಳಾದ ಲಕ್ಷ್ಮೀದೇವಿಯನ್ನು ಆಶ್ರಯಿಸಿಕೊಂಡು ಬ್ರಹ್ಮಾಂಡವನ್ನು ಧರಿಸಿರುವ ವಿಷ್ಣುಕೂರ್ಮನು ಕುಳಿತಿರುವನು. ಬ್ರಹ್ಮಾಂಡದ ಒಳಗೆ ತುಂಬಾ ಅಗಾಧವಾದ ಜಲವು ಇರುತ್ತದೆ. ಆ ಜಲಕ್ಕೆ ಆಧಾರನಾಗಿರುವ ಇನ್ನೊಬ್ಬ ವಿಷ್ಣುಕೂರ್ಮನು ಬ್ರಹ್ಮಾಂಡಕ್ಕೆ ಆಧಾರನಾಗಿರುವ ವಿಷ್ಣುಕೂರ್ಮನನ್ನು ಆಶ್ರಯಿಸಿ ಕೊಂಡಿರುನು. ಅವನ ಮೇಲೆ ಕೂರ್ಮರೂಪವನ್ನು ಧರಿಸಿದ ವಾಯುದೇವರು ಕುಳಿತಿರುವರು. ಕೂರ್ಮರೂಪಿಯಾದ ವಾಯುದೇವರ ಬಾಲದಲ್ಲಿ ಶೇಷದೇವನು ಕುಳಿತಿರುವನು."

"ಆ ಶೇಷದೇವನ ಮೇಲೆ ಅಂದರೆ ಪೃಥಿವೀ ಪಂಚಭೂತಗಳಲ್ಲಿ ಕೊನೆಯದಾಗಿರುವ ಭೂಮಿಯೂ ಆ ಭೂಮಿಯ ಅಭಿಮಾನಿ ದೇವತೆಯೂ ಕುಳಿತಿರುವಳು. ಆ ಭೂಮಿಯ ಮಧ್ಯದಲ್ಲಿ ಕ್ಷೀರಸಮುದ್ರವು ಇರುತ್ತದೆ. ಆ ಕ್ಷೀರ ಸಮುದ್ರದ ಮಧ್ಯದಲ್ಲಿ ಶ್ವೇತದ್ವೀಪವು ಇರುತ್ತದೆ. ಶ್ವೇತದ್ವೀಪದ ಮಧ್ಯದಲ್ಲಿ ದಿವ್ಯವಾದ ನಾನಾ ವಿಧವಾದ ರತ್ನಗಳಿಂದ ಖಚಿತವಾದ ಸುವರ್ಣಮಂಟಪವಿದೆ. ಪರಮಪುರುಷನಿಂದ ಆರಂಭಿಸಿ ಸುವರ್ಣಮಂಟಪದವರೆಗಿರುವ ಹಿಂದೆ ಹೇಳಲ್ಪಟ್ಟವುಗಳೆಲ್ಲವೂ ದೇವರ ಪೀಠದ ಕೆಳಗೆ ಕ್ರಮದಿಂದ ಒಂದರ ಮೇಲೆ ಇನ್ನೊಂದರಂತೆ ಇವೆಯೆಂದು ಭಾವಿಸಬೇಕು ಆ ದೇವತೆಗಳ ಮೇಲೆ ಮೇಲ್ಕಂಡ ರೀತಿಯಿಂದ ದೇವರ ಪೀಠದ ಪಾದದ ಕೆಳಗಿರುವ ಮತ್ತು ಹಲಿಗೆಯಲ್ಲಿರುವ ದೇವತೆಗಳನ್ನು ಧ್ಯಾನಿಸಬೇಕು."

## ಪೀಠದ ಮೇಲ್ಭಾಗದಲ್ಲಿರುವ ದೇವತೆಗಳು

ಪದ್ಮಮೇತತ್ರಯಂ ದೇವೀ ರಮ್ಯೈವ ಬಹುರೂಪಿಣೀ | (ತಂತ್ರಸಾರ ವಚನ)

"ಇನ್ನು ಮುಂದೆ ಪೀಠದ ಮೇಲೆ ಇರುವ ವಸ್ತುಗಳನ್ನು ವಿವರಿಸುವೆವು. ದೇವರ ಪೀಠವು ನಾಲ್ಕು ಮೂಲೆಗಳಿಂದ ಯುಕ್ತವಾಗಿರಬೇಕು. ಆ ಪೀಠದಲ್ಲಿ ಆರು ದಳಗಳಿಂದ ಯುಕ್ತವಾದ ಪದ್ಮವನ್ನು ಸ್ಮರಿಸಬೇಕು. ಆ ಪದ್ಮದ ಮಧ್ಯದಲ್ಲಿ ಎಂಟು ದಳಗಳಿಂದ ಯುಕ್ತವಾದ ಚಿಕ್ಕ ಪದ್ಮವನ್ನು ಸ್ಮರಿಸಬೇಕು."

"ಹಿಂದೆ ಹೇಳಿರುವ ಶ್ವೇತದ್ವೀಪ ಮತ್ತು ಸುವರ್ಣಮಂಟಪಗಳೂ ಈಗ ಹೇಳುತ್ತಿರುವ ಎರಡು ಪದ್ಮಗಳೂ ಬಹುರೂಪಗಳನ್ನು ಧರಿಸಿರುವ ಲಕ್ಷ್ಮೀದೇವಿಯರೇ ಆಗಿರುವರು."

## ಆರು ದಳಗಳುಳ್ಳ ಪದ್ಮದಲ್ಲಿ ಪೂಜ್ಯರಾದ ದೇವತೆಗಳು

ಸೂರ್ಯಸೋಮಹುತಾಶಾಶ್ಚ ಪದ್ಮೇ ಶ್ರೀ ಸ್ತ್ರೀಗುಣಾತ್ಮಿಕಾ | (ತಂತ್ರಸಾರ ವಚನ)

"ಪೀಠದ ಮೇಲಿರುವ ಆರುದಳಗಳಿಂದ ಯುಕ್ತವಾದ ಪದ್ಮದಲ್ಲಿ ಪೂರ್ವದಲ್ಲಿರುವ ಮೂರು ದಳಗಳಲ್ಲಿ ಪ್ರದಕ್ಷಿಣಾಕಾರವಾಗಿ ಒಂದೊಂದು ದಳಗಳಲ್ಲಿ ಒಬ್ಬೊಬ್ಬ ದೇವತೆಯಂತೆ ಸೂರ್ಯನೂ ಚಂದ್ರನೂ ಅಗ್ನಿಯೂ

ಮಂಡಲಾಕಾರವಾಗಿ ದೀಪದಂತೆ ಪ್ರಕಾಶಿಸುತ್ತಿರುವರು. ಹಿಂಭಾಗದಲ್ಲಿರುವ ಮೂರು ದಳಗಳಲ್ಲಿ ಪ್ರದಕ್ಷಿಣಾಕಾರವಾಗಿ ಒಂದೊಂದು ದಳಗಳಲ್ಲಿ ಕ್ರಮವಾಗಿ ಸತ್ವಗುಣಕ್ಕೆ ಅಭಿಮಾನಿನಿಯರಾಗಿರುವ "ಶ್ರೀ" ಎಂಬ ಲಕ್ಷ್ಮೀದೇವಿಯರೂ, ರಜೋಗುಣಕ್ಕೆ ಅಭಿಮಾನಿನಿಯರಾಗಿರುವ "ಭೂ" ಎಂಬ ಲಕ್ಷ್ಮೀದೇವಿಯರೂ, ತಮೋಗುಣಕ್ಕೆ ಅಭಿಮಾನಿನಿಯರಾಗಿರುವ "ದುರ್ಗಾ" ಎಂಬ ಲಕ್ಷ್ಮೀದೇವಿಯರೂ ಪೂಜಿಸಲ್ಪಡಬೇಕು."

### ಸೋಪಾನಗಳಲ್ಲಿ ಪೂಜ್ಯರಾದ ದೇವತೆಗಳು

ಆತ್ಮಾಂತರಾತ್ಮಪರಮಜ್ಞಾನಾತ್ಮಾನಶ್ಚ ಮೂರ್ತಯಃ | (ತಂತ್ರಸಾರ ವಚನ)

"ದೇವರ ಪೀಠಕ್ಕೆ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಮೆಟ್ಟಲುಗಳಿವೆ. ಪೂರ್ವದಿಕ್ಕಿನ ಮೆಟ್ಟಲಿನಲ್ಲಿ "ಆತ್ಮ" ಎಂಬ ಶ್ರೀಹರಿಯ ಮೂರ್ತಿಯನ್ನೂ, ದಕ್ಷಿಣದಿಕ್ಕಿನ ಮೆಟ್ಟಲಿನಲ್ಲಿ "ಅಂತರಾತ್ಮ" ಎಂಬ ಶ್ರೀಹರಿಯ ಮೂರ್ತಿಯನ್ನೂ, ಪಶ್ಚಿಮದಿಕ್ಕಿನ ಮೆಟ್ಟಲಿನಲ್ಲಿ "ಅಂತರಾತ್ಮ" ಎಂಬ ಶ್ರೀ ಹರಿಯ ಮೂರ್ತಿಯನ್ನೂ, ಪಶ್ಚಿಮ ದಿಕ್ಕಿನ ಮೆಟ್ಟಲಿನಲ್ಲಿ "ಪರಮಾತ್ಮ" ಎಂಬ ಶ್ರೀಹರಿಯ ಮೂರ್ತಿಯನ್ನೂ, ಉತ್ತರ ದಿಕ್ಕಿನ ಮೆಟ್ಟಲಿನಲ್ಲಿ "ಜ್ಞಾನಾತ್ಮ" ಎಂಬ ಶ್ರೀಹರಿಯ ಮೂರ್ತಿಯನ್ನೂ ಪೂಜಿಸಬೇಕು.

### ಅಷ್ಟದಳಗಳುಳ್ಳ ಪದ್ಮದಲ್ಲಿ ಪೂಜ್ಯರಾದ ದೇವತೆಗಳು

ವಿಮಲೋತ್ಕರ್ಷಿಣೀ ಜ್ಞಾನಾ ಕ್ರಿಯಾ ಯೋಗಾ ತಥೈವ ಚ |
ಪ್ರಹ್ವೀ ಸತ್ಯಾ ತಥೇಶಾನಾಽನುಗ್ರಹಾ ಚೇತಿ ಶಕ್ತಯಃ ||
ಅಷ್ಟದಿಕ್ಷು ಚ ಮಧ್ಯೇ ಚ ಸ್ವರೂಪಾಣ್ಯೇವ ತಾ ಹರೇಃ |
ತತೋಽನಂತಂ ಯೋಗಪೀಠಸ್ವರೂಪಂ ಪೂಜಯೇದ್ಧರೇಃ || (ತಂತ್ರಸಾರ ವಚನ)

ಆರು ದಳಗಳಿಂದ ಯುಕ್ತವಾದ ಕಮಲದ ಮಧ್ಯದಲ್ಲಿ ಎಂಟು ದಳಗಳಿಂದ ಯುಕ್ತವಾದ ಕಮಲವನ್ನು ಧ್ಯಾನಿಸಬೇಕು ಎಂದು ಹೇಳಿರುವೆವು. ಆ ಕಮಲದ ಎಂಟು ದಳಗಳಲ್ಲಿ ಎಂಟು ಮೂರ್ತಿಗಳನ್ನೂ ಕೊನೆಗೆ ಮಧ್ಯದಲ್ಲಿ ಒಂದು ಮೂರ್ತಿಯನ್ನೂ ಪೂಜಿಸಬೇಕು. ಈ ಒಂಭತ್ತು ಮೂರ್ತಿಗಳು ಶಕ್ತಿ ಎಂದು ಹೇಳಲ್ಪಡುತ್ತವೆ. ಈ ಒಂಭತ್ತು ಶಕ್ತಿಗಳು ಶ್ರೀಹರಿಯ ಸ್ವರೂಪಗಳು. ಪೂರ್ವದಿಕ್ಕಿನ ದಳದಿಂದ ಆರಂಭಿಸಿ ಎಂಟು ದಿಕ್ಕುಗಳಲ್ಲಿರುವ ಎಂಟು ದಳಗಳಲ್ಲಿ ಕ್ರಮವಾಗಿಯೂ ಪೀಠದ ಮಧ್ಯದಲ್ಲಿಯೂ ಇರುತ್ತವೆ. ಆ ಒಂಭತ್ತು ಶಕ್ತಿಗಳ ಹೆಸರುಗಳನ್ನು ಕ್ರಮವಾಗಿ ಹೇಳುವೆವು. (1) ವಿಮಲಾ (2) ಉತ್ಕರ್ಷಿಣೀ (3) ಜ್ಞಾನಾ (4) ಕ್ರಿಯಾ (5) ಯೋಗಾ (6) ಪ್ರಹ್ವೀ (7) ಸತ್ಯಾ (8) ಈಶಾನಾ (9) ಅನುಗ್ರಹಾ ಇವುಗಳು ನವಶಕ್ತಿಗಳು. ಈ ನವಶಕ್ತಿಗಳ ಹೆಸರುಗಳು ಶ್ರೀಹರಿಯ ಅನುಗ್ರಹ ವಿಶೇಷದಿಂದ ಲಕ್ಷ್ಮೀ ದೇವಿಯರಿಗೂ ಬ್ರಹ್ಮದೇವನಿಗೂ ವಾಯುದೇವನಿಗೂ ಶೇಷದೇವನಿಗೂ ಗರುಡನಿಗೂ ಇರುತ್ತವೆ. ಆ ದೇವತೆಗಳೆಲ್ಲರೂ ಶ್ರೀಹರಿಯ ಅನುಗ್ರಹದಿಂದ ವಿಮಲಾ ಮುಂತಾದ ಒಂದೊಂದು ಹೆಸರಿನಿಂದ ಯುಕ್ತನಾಗಿರುವ ಶ್ರೀಹರಿಯ ಸಮೀಪದಲ್ಲಿ ವಿಮಲಾ ಮುಂತಾದ ಹೆಸರುಗಳಿಂದ ಯುಕ್ತರಾಗಿ ಪೂಜಿಸಲ್ಪಡುತ್ತಾರೆ.

### ಪೀಠದೇವತಾಮಂತ್ರಗಳು

ಪರದೇವತೆಯಿಂದ ಆರಂಭಿಸಿ ಅನುಗ್ರಹಾದೇವತೆಯವರೆಗೆ ಪೀಠದೇವತೆಗಳ ಹೆಸರುಗಳನ್ನು ಹೇಳಿದೆವು. ಈಗ ಅವರನ್ನು ಆವಾಹಿಸುವಾಗ ಹೇಳಬೇಕಾದ ಮಂತ್ರಗಳನ್ನು ಹೇಳುವೆವು. ಮೊದಲು ಓಂಕಾರವನ್ನೂ ಕೊನೆಗೆ ನಮಃ ಎಂಬ ಪದಗಳನ್ನೂ ಹೇಳಬೇಕು. ಈ ಎರಡು ಪದಗಳ ಮಧ್ಯದಲ್ಲಿ ಚತುರ್ಥೀವಿಭಕ್ತ್ಯಂತವಾದ ಆಯಾ ದೇವತೆಗಳ ಪದಗಳನ್ನು ಹೇಳಬೇಕು. ಉದಾಹರಣೆ - ಪರದೇವತೆಯನ್ನು ಆವಾಹಿಸುವಾಗ ಮೊದಲು "ಓಂ" ಎಂಬ ಪದವನ್ನೂ ಕೊನೆಗೆ "ನಮಃ" ಎಂಬ ಪದವನ್ನೂ ಮಧ್ಯದಲ್ಲಿ ಚತುರ್ಥೀವಿಭಕ್ತ್ಯಂತವಾದ "ಪರದೇವತಾಯೈ" ಎಂಬ ಪದವನ್ನೂ ಅಂದರೆ "ಓಂ ಪರದೇವತಾಯೈ ನಮಃ" ಎಂದು ಹೇಳಬೇಕು. ಹೀಗೆಯೇ ಎಲ್ಲಾ ಮಂತ್ರಗಳನ್ನೂ ತಿಳಿಯಬೇಕು.

ಸೂರ್ಯ, ಸೋಮ, ಅಗ್ನಿಮಂಡಲಗಳಲ್ಲಿ ಕ್ರಮವಾಗಿ ಓಂಕಾರದ ಅನಂತರದಲ್ಲಿ "ಅಂ" "ಉಂ" "ಮಂ" ಎಂದು ಸೇರಿಸಿಕೊಳ್ಳಬೇಕು. ಬೇರೆ ಎಲ್ಲಾ ಕ್ರಮವೂ ಹಿಂದೆ ಹೇಳಿದಂತೆ ಎಂದು ತಿಳಿಯಬೇಕು. ಉದಾಹರಣೆ - "ಓಂ ಅಂ ಸೂರ್ಯಮಂಡಲಾಯ ನಮಃ" ಎಂದೂ ಇದರಂತೆ ಇತರ ಮಂತ್ರಗಳನ್ನೂ ತಿಳಿಯಬೇಕು.

ಪರಬ್ರಹ್ಮೈವ ಮಧ್ಯೇ ಚ ಕ್ರಮಾದುತ್ತರಮುತ್ತರಮ್ |
ಆಧಾರಶಕ್ತಿಂ ಕೂರ್ಮಂ ಚಾಪ್ಯನಂತಂ ಪೃಥಿವೀಂ ತಥಾ ||
ಕಂದಂ ನಾಳಂ ತಥಾ ಪದ್ಮಂ ಕ್ಷೀರಸಾಗರಮೇವ ಚ |
ಶ್ವೇತದ್ವೀಪೋ ಮಂಟಪಶ್ಚ ದಿವ್ಯರತ್ನಮಯಃ ಶುಭಃ ||
ಪದ್ಮಂ ತನ್ಮಧ್ಯತಃ ಪೂಜ್ಯಂ ಸತಾರಂ ಮಂಡಲತ್ರಯಮ್ |
ಗುಣತ್ರಯಾತ್ಮಿಕಾ ಶ್ರೀಶ್ಚ ತಥಾಽತ್ಮಾದಿಚತುಷ್ಟಯಮ್ ||
ವಿಮಲಾದ್ಯಾ ಅಷ್ಟದಿಕ್ಷು ಏತಾಃ ಪುರುಷಶಕ್ತಯಃ ||
ತತೋಽನಂತಂ ಯೋಗಪೀಠಸ್ವರೂಪಂ ಮೂಲಮಂತ್ರತಃ || (ವಿಷ್ಣುತೀರ್ಥೀಯ ವಚನ)

ಪರಬ್ರಹ್ಮಸ್ವರೂಪಿಯಾದ ಆಧಾರಶಕ್ತಿ, ವಾಯು ಕೂರ್ಮ, ಅನಂತ, ಪೃಥಿವೀ, ಕಂದ, ನಾಳ, ಪದ್ಮ, ಕ್ಷೀರ ಸಮುದ್ರ, ಶ್ವೇತದ್ವೀಪ, ದಿವ್ಯರತ್ನಮಯವಾದ ಮಂಟಪ, ಷಟ್ಕೋಣಪದ್ಮ ಮುಂತಾದ ಹೆಸರುಗಳಿಂದ ಅವುಗಳ ಒಳಗೆ ಅಂತರ್ಯಾಮಿಯಾಗಿರುವ ಶ್ರೀಹರಿಯೇ ಕ್ರಮವಾಗಿ ಮೇಲೆ ಮೇಲೆ ಆಧಾರನಾಗಿರುವನು. ಪೀಠದ ಮಧ್ಯದಲ್ಲಿ ಆರುಕೋಣಗಳಿಂದ ಯುಕ್ತವಾದ ಪದ್ಮದಲ್ಲಿ ಪೂರ್ವದಲ್ಲಿರುವ ಮೂರ ದಳಗಳಲ್ಲಿ ಓಂಕಾರದಿಂದ ಸಹಿತವಾಗಿರುವ ಸೂರ್ಯಮಂಡಲ, ಸೋಮಮಂಡಲ, ಮತ್ತು ಅಗ್ನಿಮಂಡಲಗಳನ್ನು ಕ್ರಮವಾಗಿ ಪೂಜಿಸಬೇಕು. ಹಿಂಭಾಗದಲ್ಲಿರುವ ಮೂರು ದಳಗಳಲ್ಲಿ ಕ್ರಮವಾಗಿ ಸತ್ವಗುಣಾಭಿಮಾನಿನಿಯಾದ ಶ್ರೀದೇವಿಯನ್ನು ರಜೋಗುಣಾಭಿಮಾನಿನಿಯಾದ ಭೂದೇವಿಯನ್ನೂ ತಮೋಗುಣಾಭಿಮಾನಿನಿಯಾದ ದುರ್ಗಾದೇವಿಯನ್ನೂ ಪೂಜಿಸಬೇಕು.

ಆರು ದಳಗಳಿಂದ ಯುಕ್ತವಾದ ಪದ್ಮದ ಮಧ್ಯದಲ್ಲಿರುವ ಎಂಟು ದಳಗಳಿಂದ ಯುಕ್ತವಾಗಿರುವ ಕಮಲದಲ್ಲಿ ಕ್ರಮವಾಗಿ ಪೂರ್ವದಿಕ್ಕಿನಲ್ಲಿರುವ ದಳದಿಂದ ಆರಂಭಿಸಿ ಎಂಟು ದಿಕ್ಕುಗಳಲ್ಲಿರುವ ದಳಗಳಲ್ಲಿ "ವಿಮಲಾ" ಎಂಬ ಶಕ್ತಿಯಿಂದ ಆರಂಭಿಸಿ ಪುರುಷನಾಮಕನಾದ ಶ್ರೀಹರಿಯ ಎಂಟು ಶಕ್ತಿಗಳನ್ನು ಪೂಜಿಸಬೇಕು. ಆ ಪದ್ಮದ ಮಧ್ಯದಲ್ಲಿ "ಅನುಗ್ರಹಾ" ಎಂಬ ಶ್ರೀಹರಿಯ ಶಕ್ತಿಯನ್ನೂ ಆ ಶಕ್ತಿಯನ್ನೂ ಆಧಾರವಾಗಿ ಇಟ್ಟುಕೊಂಡಿರುವ ಯೋಗಪೀಠಸ್ವರೂಪಿಯಾದ ಶೇಷದೇವನನ್ನೂ ಮೂಲಮಂತ್ರದಿಂದ ಪೂಜಿಸಬೇಕು.

### ಕೂರ್ಮಸ್ವರೂಪ

ಸ ಏವ ಕೂರ್ಮರೂಪೇಣ ವಾಯುರಂಡೋದರೇ ಸ್ಥಿತಃ |
ವಿಷ್ಣುನಾ ಕೂರ್ಮರೂಪೇಣ ಧಾರಿತೋಽನಂತಧಾರಕಃ ||
ಅಷ್ಟಪಾದಾಹಿ ಚತ್ವಾರೋ ಹ್ಯಂಡೋದೇ ಕೋಣಸಂಸ್ಥಿತಾಃ |
ಉರಸ್ತು ಭೂಮಿಸಂಶ್ಲಿಷ್ಟಮತಿರಿಚ್ಯ ಭುವಂ ಪುನಃ ||
ಪಾರ್ಶ್ವತಃ ಪೃಷ್ಠತಶ್ಚೈವ ಶಿರಶ್ಚೋದಕಸಂಸ್ಥಿತಮ್ |
ಆಕಾಶಮುದರೇ ತಸ್ಯ ದ್ಯೌಃ ಪೃಷ್ಠೇ ಸಂಸ್ಥಿತಾ ವಿಭೋಃ ||
ಏವಂ ವಿದ್ವಾಂಸ್ತು ಯತ್ರೈವ ತತ್ರೈವ ಪ್ರತಿತಿಷ್ಠತಿ | (ಪ್ರಭಂಜನ ವಾಕ್ಯ)

"ಬ್ರಹ್ಮಾಂಡದ ಆವರಣರೂಪವಾಗಿರುವ ನೀರಿನಲ್ಲಿ ಆಮೆಯ ರೂಪವನ್ನು ಸ್ವೀಕರಿಸಿರುವ ವಾಯುದೇವನು ಆಮೆಯ ರೂಪವನ್ನು ಸ್ವೀಕರಿಸಿರುವ ವಿಷ್ಣುವಿನ ಬೆನ್ನಿನಲ್ಲಿ ಮಲಗಿರುವನು. ಆ ವಾಯುದೇವನ ನಾಲ್ಕು ಕಾಲುಗಳು ಬ್ರಹ್ಮಾಂಡದ ಆವರಣದಲ್ಲಿರುವ ನೀರಿನಲ್ಲಿಯೂ, ಹೊಟ್ಟೆಯು ನೀರಿನ ಅಡಿಯಲ್ಲಿರುವ ಭೂಮಿಯಲ್ಲಿಯೂ ಅಂಟಿಕೊಂಡಿದೆ. ತಲೆಯೂ ಬಾಲವೂ ಎರಡು ಪಾರ್ಶ್ವಗಳೂ ನೀರಿನ ಅಡಿಯಲ್ಲಿರುವ ಭೂಮಿಯನ್ನು ದಾಟಿ ಬ್ರಹ್ಮಾಂಡದ ಆವರಣವಾಗಿರುವ ನೀರಿನಲ್ಲಿವೆ. ಆಕಾಶವು ಆ ವಾಯದೇವನ ಹೊಟ್ಟೆಯಲ್ಲಿಯೂ ಸ್ವರ್ಗಾದಿಲೋಕಗಳು ಬೆನ್ನಿನಲ್ಲಿಯೂ ಇವೆ. ಹೀಗೆ ವಾಯುದೇವನ ರೂಪವನ್ನು ತಿಳಿದವನು ಶಾಶ್ವತವಾದ ಲೋಕಗಳನ್ನು ಪಡೆಯುನು."

ಉಪಾಸ್ತೇ ಕೂರ್ಮರೂಪಂ ಯೋ ವಾಯುಂ ಸಂಸ್ಥಿತಿಮಾಪ್ನುಯಾತ್ |
ಇಚ್ಛಯಾ ವಿನಿವೃತ್ತಿಂ ವಾ ಲೋಕಂ ಚಾವೃತ್ತಿವರ್ಜಿತಮ್ || (ಅಧ್ಯಾತ್ಮ ವಚನ)

"ಕೂರ್ಮರೂಪಿಯಾದ ವಾಯುದೇವನನ್ನು ಉಪಾಸಿಸುವನು ತನ್ನ ನಿಜಸ್ವರೂಪವನ್ನಾಗಲೀ ಪುನರಾವೃತ್ತಿಯಿಲ್ಲದಿರುವ ವೈಕುಂಠವನ್ನಾಗಲೀ ಪಡೆಯುವನು."

ಬಿಭರ್ತ್ಯಂಡಂ ಹರಿಃ ಕೂರ್ಮಸ್ತ್ವಂಡೇ ಚಾಪ್ಯುದಕಂ ಮಹತ್ |
ಉದಕೇ ಕೂರ್ಮರೂಪಸ್ಯ ವಾಯುಃ ಪುಚ್ಛಂ ಸಮಾಶ್ರಿತಃ ||
ವಾಯೋಃ ಪುಚ್ಛಂ ಸಮಾಶ್ರಿತ್ಯ ಶೇಷಸ್ತು ಪೃಥಿವೀಮಿಮಾಮ್ |
ಬಿಭರ್ತಿ ತಸ್ಯಾಂ ಚ ಜಗದಿದಂ ಸರ್ವಂ ಪ್ರತಿಷ್ಠಿತಮ್ || (ವೈಭವ ವಚನ)

"ಕೂರ್ಮರೂಪಿಯಾದ ಶ್ರೀಹರಿಯು ಬ್ರಹ್ಮಾಂಡವನ್ನು ತನ್ನ ಬೆನ್ನಿನಲ್ಲಿ ಎತ್ತಿಕೊಂಡಿರುವನು. ಆ ಬ್ರಹ್ಮಾಂಡದಲ್ಲಿರುವ ನೀರಿನ ಆವರಣದಲ್ಲಿ ಅತ್ಯಧಿಕವಾದ ಜಲವಿದೆ. ಆ ಜಲದಲ್ಲಿ ಆಮೆಯ ರೂಪದಿಂದ ವಾಯುದೇವನು ಮಲಗಿರುವನು. ಆ ಕೂರ್ಮರೂಪಿಯಾದ ವಾಯುದೇವನ ಬಾಲವನ್ನು ಆಶ್ರಯಿಸಿ ಕೊಂಡು ಶೇಷದೇವನು ನಿಂತಿರುವನು. ಆ ಶೇಷ ದೇವನು ತನ್ನ ತಲೆಯಲ್ಲಿ ಈ ಭೂಮಿಯನ್ನು ಧರಿಸಿಕೊಂಡಿರುವನು. ಆ ಭೂಮಿಯನ್ನು ಆಶ್ರಯಿಸಿಕೊಂಡು ಚರಾಚರಾತ್ಮಕವಾದ ಈ ಸಕಲಪ್ರಪಂಚವು ಇರುತ್ತದೆ."

ವಾಯೋಸ್ತು ಕೂರ್ಮರೂಪಸ್ಯ ಪೂರ್ವತಶ್ಚೋದಕೇ ಮುಖಮ್ |
ಆಗ್ನೇಯೇಶಾನಗೌ ಬಾಹೂ ಪಾದೌ ನಿರ್ಋತಿವಾಯುಗೌ || (ಪ್ರಕೃಷ್ಟ ವಚನ)

ಕೂರ್ಮರೂಪಿಯಾದ ವಾಯುದೇವನ ಮುಖವು ಪೂರ್ವದಿಕ್ಕಿನಲ್ಲಿದೆ. ಬಲಗೈಯು ಆಗ್ನೇಯದಿಕ್ಕಿನಲ್ಲಿಯೂ, ಎಡಗೈಯು ಈಶಾನ್ಯದಿಕ್ಕಿನಲ್ಲಿಯೂ, ಬಲಗಾಲು ನೈಋತ್ಯದಿಕ್ಕಿನಲ್ಲಿಯೂ, ಎಡಗಾಲು ವಾಯವ್ಯದಿಕ್ಕಿನಲ್ಲಿಯೂ ಇವೆ."

## ತಂತ್ರಸಾರೋಕ್ತ ಪೀಠಪೂಜಾ ಮಂತ್ರಗಳು

ಪೀಠದ ಕೆಳಗೆ ಮಧ್ಯಭಾಗದಲ್ಲಿ "ಓಂ, ಪಂ ಪರಮಪುರುಷಾಯ ನಮಃ" "ಆಧಾರರೂಪಿಣ್ಯೈ ಓಂ, ಶಂ ಶಕ್ತ್ಯೈ ನಮಃ" ಎಂದು ಕೂರ್ಮರೂಪಿಯಾದ ಪರಮಪುರುಷನನ್ನೂ, ಶಕ್ತಿಯನ್ನೂ, ಆವಾಹಿಸಬೇಕು. ಪರಮಪುರುಷನ ಮೇಲೆ "ಓಂ, ವಾಂ ವಾಯುಕೂರ್ಮಾಯ ನಮಃ" ಎಂದು ಕೂರ್ಮರೂಪಿಯಾದ ವಾಯುದೇವನನ್ನು ಆವಾಹಿಸಬೇಕು. ವಾಯುಕೂರ್ಮನ ಬಾಲದ ಮೇಲೆ "ಓಂ, ಅಂ ಅನಂತಾಯ ನಮಃ" ಎಂದು ಶೇಷದೇವನನ್ನು ಆವಾಹಿಸಬೇಕು. ಶೇಷನ ತಲೆಯ ಮೇಲೆ "ಓಂ ಪೃಂ ಪೃಥಿವ್ಯಭಿಮಾನಿನ್ಯೈ ಭೂಂ ಭೂಮ್ಯೈ ನಮಃ " ಎಂದು ಭೂಮಿಯನ್ನು ಆವಾಹಿಸಬೇಕು. ಭೂಮಿಯ ಮೇಲೆ "ಕ್ಷೀರಸಾಗರಾಭಿಮಾನಿನೇ ಓಂ ವಂ ವರುಣಾಯನಮಃ" ಎಂದು ವರುಣನ್ನೂ ವರುಣನ ಮೇಲೆ "ಓಂ ಶ್ವೇಂ ಶ್ವೇತದ್ವೀಪಾಯ ನಮಃ" ಎಂದು ಶ್ವೇತದ್ವೀಪನ್ನೂ ಶ್ವೇತದ್ವೀಪದ ಮಧ್ಯದಲ್ಲಿ "ಓಂ ಮಹತ್ಯೈ ಚತುಸ್ತಂಭಯುಕ್ತದಿವ್ಯರತ್ನಮಯ

ಮಹಾಮಂಟಪಾಯೈ ಶ್ರೀಂ ಶ್ರೀಯೈ ನಮಃ" ಎಂದು ರತ್ನಮಂಟಪವನ್ನೂ ಆ ರತ್ನಮಂಟಪದ ಮಧ್ಯದಲ್ಲಿ "ಕಂದಾತ್ಮಿಕಾಯೈ ಓಂ ಶ್ರೀಂ ಶ್ರೀಯೈ ನಮಃ" ಎಂದು ಕಂದವನ್ನೂ, ಕಂದದ ಮಧ್ಯದಲ್ಲಿ "ನಾಳಾತ್ಮಿಕಾಯೈ ಓಂ ಶ್ರೀ ಶ್ರೀಯೈ ನಮಃ" ಎಂದು ನಾಳವನ್ನೂ ಆವಾಹಿಸಬೇಕು.

ನಾಳದ ಮಧ್ಯದಲ್ಲಿ "ಪಂ ಪದ್ಮಾತ್ಮಿಕಾಯೈ ಓಂ ಶ್ರೀಂ ಶ್ರೀಯೈ ನಮಃ" ಎಂದು ಆರು ದಳಗಳಿಂದ ಯುಕ್ತವಾಗಿರುವ ಪದ್ಮವನ್ನೂ, ಆ ಪದ್ಮದ ಆರುದಳಗಳಲ್ಲಿ ಪ್ರದಕ್ಷಿಣಾಕಾರವಾಗಿ "ಓಂ, ಅಂ ಸೂರ್ಯಮಂಡಲಾಯ ನಮಃ" ಓಂ ಉಂ ಸೋಮಮಂಡಲಾಯ ನಮಃ" "ಓಂ, ಮಂ ಹುತಾಶನಮಂಡಲಾಯ ನಮಃ" ಎಂದು ಮೂರು ಮಂಡಳಗಳನ್ನೂ ಓಂಭಾಗದಲ್ಲಿ ಎಡಭಾಗ, ಬಲಭಾಗ ಮತ್ತು ಹಿಂದೆ ಕ್ರಮವಾಗಿ "ಓಂ ಸಂ ಸತ್ವಾಭಿಮಾನಿನ್ಯೈ ಶ್ರೀಂ ಶ್ರೀಯೈ ನಮಃ" "ಓಂ ರಂ ರಜೋಽಭಿಮಾನಿನ್ಯೈ ಭೂಂ ಭೂಮ್ಯೈ ನಮಃ" "ಓಂ, ತಂ ತಮೋಽಭಿಮಾನಿನ್ಯೈ ದುಂ ದುರ್ಗಾಯೈ ನಮಃ" ಎಂದು ಆರು ದೇವತೆಗಳನ್ನೂ ಆವಾಹನೆ ಮಾಡಬೇಕು.

ಅನಂತರದಲ್ಲಿ ಪೂರ್ವ ಮುಂತಾದ ನಾಲ್ಕು ದಿಕ್ಕುಗಳಲ್ಲಿ ಓಂ, ಆಂ ಆತ್ಮನೇ ನಮಃ" "ಓಂ, ಅಂ, ಅಂತರಾತ್ಮನೇ ನಮಃ". ಓಂ, ಪಂ ಪರಮಾತ್ಮನೇ ನಮಃ" "ಓಂ ಜ್ಞಾಂ ಜ್ಞಾನಾತ್ಮನೇ ನಮಃ" ಎಂದು ನಾಲ್ಕು ಭಗವನ್ಮೂರ್ತಿಗಳನ್ನೂ ಆವಾಹಿಸಬೇಕು.

ಆ ಮೇಲೆ ಎಂಟು ದಳಗಳಿಂದ ಯುಕ್ತವಾದ ಪದ್ಮದಲ್ಲಿರುವ ಎಂಟು ದಳಗಳಲ್ಲಿ ಪೂರ್ವದಿಕ್ಕಿನ ದಳದಿಂದ ಆರಂಭಿಸಿ ಕ್ರಮವಾಗಿ ಓಂ ವಿಂ ವಿಮಲಾಯೈ ನಮಃ" "ಓಂ, ಉಂ ಉತ್ಕರ್ಷಿಣ್ಯೈ ನಮಃ " "ಓಂ ಜ್ಞಾನಂ ಜ್ಞಾನಾಯೈ ನಮಃ" "ಓಂ ಕ್ರಿಂ ಕ್ರಿಯಾಯೈ ನಮಃ" "ಓಂ, ಯೋಂ ಯೋಗಾಯೈ ನಮಃ" "ಓಂ ಪ್ರಂ ಪ್ರಹ್ವ್ಯೈ ನಮಃ" "ಓಂ ಸಂ ಸತ್ಯಾಯೈ ನಮಃ" "ಓಂ ಈಂ ಈಶಾನಾಯೈ ನಮಃ ಎಂದು ಎಂಟು ಮೂರ್ತಿಗಳನ್ನೂ, ಅಷ್ಟದಳ ಪದ್ಮದಲ್ಲಿ ಹಿಂದೆ "ಓಂ ಅಂ ಅನುಗ್ರಹಾಯೈ ನಮಃ" ಎಂಬ ಮೂರ್ತಿಯನ್ನೂ ಆವಾಹಿಸಬೇಕು.

## ವಿಮಲಾ ಮುಂತಾದ ಒಂಭತ್ತು ಮೂರ್ತಿಗಳ ಲಕ್ಷಣಗಳು

ಗೃಹೀತಚಾಮರಾ ದಿವ್ಯಾ ವಿಮಲಾದ್ಯಾಶ್ಚ ಶಕ್ತಯಃ | (ವಾಸಿಷ್ಠ ವಚನ)

"ಮೇಲ್ಕಂಡ "ವಿಮಲಾ" ಮುಂತಾದ ಒಂಭತ್ತು ಮೂರ್ತಿಗಳೂ ಶ್ರೀಹರಿಯ ಮೂರ್ತಿಗಳೇ ಆಗಿವೆ. ವಿಚಿತ್ರವಾದ ಚಾಮರಗಳನ್ನು ಕೈಯಲ್ಲಿ ಧರಿಸಿ ಶ್ರೀಹರಿಗೆ ಅಭಿಮುಖವಾಗಿದ್ದು ಶ್ರೀಹರಿಯನ್ನು ಸೇವಿಸುತ್ತಿವೆ ಎಂದು ಧ್ಯಾನಿಸಬೇಕು."

ಅನಂತರದಲ್ಲಿ ಶ್ರೀಹರಿಯ ಮುಂದೆ "ವಿಸ್ತಾರಿತಸಹಸ್ರಫಣಾಮಂಡಲಾಕೃತಿಸ್ಥಾಯ ಹರೇರ್ಯೋಗಪೀಠಸ್ವರೂಪಾಯ ಅಂ ಶ್ರೀಮದನಂತಾಯ ನಮಃ" ಎಂದು ಶೇಷದೇವರನ್ನು ಆವಾಹಿಸಬೇಕು. ಇದು ತಂತ್ರಸಾರೋಕ್ತ ಪೀಠಪೂಜಾಕ್ರಮ.

## ಪಂಚರಾತ್ರಾದಿಗ್ರಂಥೋಕ್ತ ಪೀಠಪೂಜಾಕ್ರಮ

ಆಧಾರಂ ಪ್ರಥಮಂ ಕೂರ್ಮಂ ಕಾಲಾಗ್ನಿಂ ಸಮನಂತರಮ್ |
ಉಪರಿಷ್ಟಾಚ್ಚ ಭೋಗೀಂದ್ರಂ ಫಣಾಭಿರ್ಭೂಮಿಮಂಡಲಮ್ ||
ಚತುರಸ್ರಂ ಸಹಸ್ರೇಣ ಬಿಭ್ರಾಣಂ ಬಲವತ್ತರಮ್ |
ಭುವಶ್ಚೋಪರಿ ಧರ್ಮಾದ್ಯಾ ಯದಾಸನಮನಂತರಮ್ ||
ಆಗ್ನೇಯಾದಿಷು ಚತ್ವಾರಶ್ಚತಸೃಷ್ವೇವ ಪದ್ಮಜ |
ಅಧರ್ಮಾದ್ಯಾಶ್ಚ ತಾವಂತ ಪ್ರಾಗಾದಿಷು ಯಥಾಕ್ರಮಮ್ || (ಪಾದ್ಮಸಂಹಿತಾ ವಚನ)

"ಬ್ರಹ್ಮಾಂಡಕ್ಕೆ ಆಧಾರನಾಗಿರುವ ಕೂರ್ಮರೂಪಿಯಾದ ಶ್ರೀಹರಿಯನ್ನು ಮೊದಲು ಪೂಜಿಸಬೇಕು. ಅನಂತರದಲ್ಲಿ

ಪ್ರಪಂಚವನ್ನು ಭಸ್ಮಮಾಡುವ ಕಾಲಾಗ್ನಿಯನ್ನು ಸ್ಮರಿಸಬೇಕು. ಅನಂತರದಲ್ಲಿ ಸಾವಿರ ಹೆಡೆಗಳಿಂದ ಯುಕ್ತನಾಗಿರುವ ಶೇಷದೇವನನ್ನು ಸ್ಮರಿಸಬೇಕು. ಅವನ ಹೆಡೆಯ ಮೇಲೆ ಭೂಮಿಯನ್ನು ಭೂಮಿಯ ಮೇಲೆ ಭುವರ್ಲೋಕವನ್ನೂ ಆ ಲೋಕದಲ್ಲಿ ಶ್ರೀಹರಿಯ ಆಸನವಿದೆ ಎಂದೂ ತಿಳಿಯಬೇಕು. ಆ ಆಸನದಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಅಧರ್ಮ, ಅಜ್ಞಾನ, ಅವೈರಾಗ್ಯ ಅನೈಶ್ವರ್ಯಗಳಿಗೆ ಅಭಿಮಾನಿಗಳಾದ ದೇವತೆಗಳನ್ನೂ, ಆಗ್ನೇಯಾದಿ ನಾಲ್ಕು ವಿದಿಕ್ಕುಗಳಲ್ಲಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳಿಗೆ ಅಭಿಮಾನಿದೇವತೆಗಳನ್ನೂ ಆವಾಹಿಸಬೇಕು.

ಆಧಾರಶಕ್ತಿಂ ಪ್ರಥಮಂ ಕೂರ್ಮಂ ಕಾಲಂ ಹುತಾಶನಮ್ |
ಅನಂತಮವನೀಂ.ಶಕ್ರಮಮೃತಾರ್ಣವಮಬ್ಜಜಮ್ ||
ಆಗ್ನೇಯಾದಿಷು ಕೋಣೇಷು ದಿಶಾಸು ಚ ಸಮರ್ಚಯೇತ್ |
ಧರ್ಮಾದಿಚತುರಃ ಪಾದಾನ್ ಸ್ಥಾಪಯೇತ್ತದ್ವಿಪರ್ಯಯಾತ್ ||
ತದಂತರೇಷು ದೇವಾನಾಂ ಯುಗಾದೀನಾಂ ಚತುಷ್ಟಯಮ್ |
ಯುಗಾನ್ ಕೃತಾದೀಂಶ್ಚತುರಸ್ತದೂರ್ಧ್ವಂ ವ್ಯಕ್ತಮಂಬುಜಮ್ ||
ಮಂಡಲತ್ರಿತಯಂ ತತ್ರ ಸೂರ್ಯಸೋಮಾಗ್ನಿಸಂಯುತಮ್ |
ವರ್ಣಾನ್ ಸತ್ವಾದಿಕಾಸ್ತತ್ರ ವಿಮಲಾದೀನ್ನಿವೇಶಯೇತ್ ||
ಪೂರ್ವಪತ್ರಾತ್ಸಮಾರಭ್ಯ ತದ್ದಲಾಂತಂ ಯಥಾಕ್ರಮಮ್ |
ವಿಮಲೋತ್ಕರ್ಷಿಣೀತ್ಯಾದಿ || (ಪರಮ ಪುರುಷ ಸಂಹಿತಾ ವಚನ)

ಆಧಾರ ಶಕ್ತಿಯನ್ನು ಮೊದಲು ಪೂಜಿಸಬೇಕು. ಅನಂತರದಲ್ಲಿ ಕೂರ್ಮರೂಪಿಯಾದ ಶ್ರೀಹರಿಯನ್ನೂ ಪ್ರಳಯಕಾಲದ ಅಗ್ನಿಯನ್ನೂ, ಶೇಷನನ್ನೂ, ಭೂಮಿಯನ್ನೂ, ದೇವೆಂದ್ರನನ್ನೂ ಅಮೃತಸಮುದ್ರವನ್ನೂ, ಬ್ರಹ್ಮನನ್ನೂ ಒಬ್ಬರ ಮೇಲೆ ಇನ್ನೊಬ್ಬರಂತೆ ಕ್ರಮದಿಂದ ಧ್ಯಾನಿಸಬೇಕು. ಪೀಠದ ಎಂಟು ದಿಕ್ಕುಗಳಲ್ಲಿ ಆಗ್ನೇಯ ಮುಂತಾದ ವಿದಿಕ್ಕುಗಳಲ್ಲಿ ಕ್ರಮವಾಗಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳಿಗೂ ಪೂರ್ವ ಮುಂತಾದ ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯಗಳಿಗೂ ಅಭಿಮಾನಿಗಳಾಗಿರುವ ದೇವತೆಗಳನ್ನು ಆವಾಹಿಸಬೇಕು. ಅನಂತರದಲ್ಲಿ ಎಂಟು ದಿಕ್ಕುಗಳ ಮಧ್ಯದಲ್ಲಿ ನಡುನಡುವೆ ಮುಂದೆ ಹೇಳುವ ಎಲ್ಲಾ ದೇವತೆಗಳನ್ನು ಆವಾಹಿಸಬೇಕು. ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳನ್ನೂ ಅವುಗಳ ಅಭಿಮಾನಿದೇವತೆಗಳನ್ನೂ ಪೂರ್ವ ಮುಂತಾದ ನಾಲ್ಕು ದಿಕ್ಕುಗಳಲ್ಲಿ ಆವಾಹಿಸಬೇಕು. ಪೀಠದ ಮೇಲೆ ಆರು ದಳಗಳುಳ್ಳ ಕಮಲವನ್ನು ಕಲ್ಪಿಸಬೇಕು. ಆ ಕಮಲದಲ್ಲಿ ಹಿಂದೆ ಹೇಳಿದಂತೆ ಸೂರ್ಯಾದಿಮಂಡಲಗಳನ್ನೂ ಸತ್ವಾದಿಗುಣಗಳ್ನೂ ಸ್ಮರಿಸಬೇಕು ಆ ಕಮಲದ ಮಧ್ಯದಲ್ಲಿ ಎಂಟು ದಳಗಳ ಕಮಲವನ್ನು ಸ್ಮರಿಸಬೇಕು. ಆ ಕಮಲದಲ್ಲಿ ಹಿಂದೆ ಹೇಳಿದಂತೆ "ವಿಮಲಾ" ಮುಂತಾದ ಒಂಭತ್ತು ಶಕ್ತಿಗಳನ್ನು ಸ್ಮರಿಸಬೇಕು.

ಪ್ರಾರಭೇತ ಹರೇಃ ಪೂಜಾಮಾಸನಾರ್ಚನಪೂರ್ವಕಮ್ |
ಶಕ್ತ್ಯಾದಿಶಕ್ತಿಪರ್ಯಂತಮಾಸನಂ ದೇವತಾಮಯಮ್ ||
ಜಗತ್ಪ್ರಪಂಚಜಲಂ ಯತ್ತದಾಸನಗತಂ ಸ್ಮರೇತ್ |
ಆಧಾರಶಕ್ತಿಮಾಧಾರರೂಪಿಣೀಂ ಜಗತಾಂ ಪರಾಮ್ ||
ಅರ್ಚಯೇದಾಸನಾಧಸ್ತಾನ್ಮಧ್ಯೇ ಕೂರ್ಮಂ ಫಲಾದಧಃ |
ಆಧಾರಶಕ್ತೇರುಪರಿ ಕೂರ್ಮಂ ಕೂರ್ಮಶಿಲೋಪರಿ ||

ಶ್ಯಾಮಂ ಕೂರ್ಮಂ ಶ್ಯಾಮಾಕಾರಮಾಸನಾಧಾರಮರ್ಚಯೇತ್||
ಕಾಲಾಗ್ನಿಂ ಪೂಜಯೇದೂರ್ಧ್ವಂ ರಕ್ತಂ ಬ್ರಹ್ಮಶಿಲಾಸ್ಥಿತಮ್ |
ಅನಂತಂ ಪೂಜಯೇತ್ತತ್ರ ಕಾಲಾಗ್ನೇರುಪರಿ ಸ್ಥಿತಮ್ ||
ತಸ್ಯೋರ್ಧ್ವಂ ಚಾರ್ಚಯೇದ್ಭೂಮಿಂ ತತ್ರಸ್ಥಂ ಕ್ಷೀರಸಾಗರಮ್ |
ಕ್ಷೀರಾರ್ಣವಸಮುದ್ಭೂತಂ ಧವಳಂ ಪದ್ಮಮರ್ಚಯೇತ್ ||
ಪ್ರಾಗಾದಿ ಪೂಜಯೇತ್ತತ್ರ ಕೇಸರಾಣಿ ಚ ಕರ್ಣಿಕಾಮ್ |
ಧರ್ಮಂ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚ ಯಥಾ ಕ್ರಮಮ್ ||
ಪ್ರಾಗದಿಷು ಚತುರ್ದಿಕ್ಷು ವಿದಿಕ್ಷು ಪುನರಕ್ರಮಾತ್ !
ಪೀಠಸ್ಯ ಫಲಕಾಕಾರಾನ್ ಪಾದಸಂಸಕ್ತಮಸ್ತಕಾನ್ ||
ಋಗಾದೀಂಶ್ಚತುರೋ ವೇದಾನ್ ಫಲಕಾಸು ಪ್ರತಿಷ್ಠಿತಾನ್ |
ಕೃತತ್ರೇತಾದ್ವಾಪರಾಂಶ್ಚ ಕಲಿಂ ಕೋಣೇಷು ಪೂಜಯೇತ್ ||
ಫಲಕಾದಿಸ್ವರೂಪಾಂಸ್ತಾನ್ ವಹ್ನ್ಯಾದಿಷು ನರಾಕೃತೀನ್ |
ಕಾಲಂ ಚಕ್ರಂ ಯಜೇತ್ತತ್ರ ಸೂರ್ಯಸೋಮಾಗ್ನಿ ಮಂಡಲಾನ್ ||
ಪತ್ರೇಷು ಕೇಸರಾಗ್ರೇಷು ಕರ್ಣಿಕಾಯಾಂ ಯಥಾಕ್ರಮಮ್ ||
ಗುಣತ್ರಯಮಯಂ ತತ್ರ ಕರ್ಣಿಕಾಯಾಂ ಯಥಾಕ್ರಮಮ್ |
ಗುಣತ್ರಯಮಯಂ ತತ್ರ ಆಸನಂ ಸಂಪ್ರಪೂಜಯೇತ್ || (ತಂತ್ರತಿಲಕ ವಾಕ್ಯ)

ಮೊದಲು ಪೀಠಪೂಜೆಯನ್ನು ಮಾಡಿ ಶ್ರೀಹರಿಯ ಪೂಜೆಯನ್ನು ಆರಂಭಿಸಬೇಕು. ಆರಂಭದಲ್ಲಿ ಆಧಾರ ಶಕ್ತಿಯ ಪೂಜೆ, ಕೊನೆಯಲ್ಲಿ "ವಿಮಲಾ" ಮುಂತಾದ ಒಂಭತ್ತು ಶಕ್ತಿಗಳ ಪೂಜೆ ಹೀಗೆ ಪೀಠಪೂಜೆಯು ಆರಂಭದಲ್ಲಿಯೂ ಅಂತ್ಯದಲ್ಲಿಯೂ ಶಕ್ತಿಪೂಜೆಯಿಂದ ಯುಕ್ತವಾಗಿಯತ್ತದೆ. ಈ ಶಕ್ತಿಗಳೆಲ್ಲವೂ ಭಗವದ್ರೂಪಗಳಾಗಿರುವುದರಿಂದ ಪೀಠಪೂಜೆಯು ದೇವತಾಮಯವೆನಿಸುತ್ತದೆ.

ಪೀಠದ ಹಲಿಗೆಯ ಅಡಿಯಲ್ಲಿ ಪ್ರಲಯಕಾಲದ ನೀರು ಇರುತ್ತದೆ. ಎಂದು ಭಾವಿಸಬೇಕು. ಆ ನೀರಿಗೆ ಆಧಾರವು ಆಧಾರ ಶಕ್ತಿ ಎಂಬ ಶ್ರೀಹರಿಯ ರೂಪವೆಂದು ಭಾವಿಸಬೇಕು. ಆಧಾರಶಕ್ತಿಯೇ ಸಕಲ ಜಗತ್ತುಗಳಿಗೂ ಪ್ರಧಾನವಾದ ಆಧಾರವೆನಿಸುತ್ತದೆ. ಶ್ರೀಹರಿಯ ಪೂಜೆಗಾಗಿ ಸ್ಥಾಪಿಸಿರುವ ಪೀಠದ ಅಡಿಯಲ್ಲಿ ಆಧಾರ ಶಕ್ತಿಯನ್ನು ಪೂಜಿಸಬೇಕು.

ಪೀಠದ ಹಲಿಗೆಯ ಅಡಿಯಲ್ಲಿ ಆಧಾರಶಕ್ತಿಯ ಮೇಲೆ ಕೂರ್ಮಾಕಾರವಾದ ಶಿಲೆಯು ಇರುತ್ತದೆ. ಈ ಶಿಲೆಯ ಮೇಲೆ ಶ್ರೀಹರಿಯು ಕೂರ್ಮಾಕಾರದಿಂದ ಮಲಗಿರುವನು. ಈ ಕೂರ್ಮರೂಪಿಯಾದ ಶ್ರೀ ಹರಿಯು ಪೀಠಕ್ಕೆ ಆಧಾರನಾಗಿರುವನು. ಕಪ್ಪುಬಣ್ಣದಿಂದ ಯುಕ್ತನಾಗಿರುನು.

ಈ ಕೂರ್ಮರೂಪಿಯಾದ ಶ್ರೀಹರಿಯ ಬೆನ್ನಿನಲ್ಲಿ ಬ್ರಹ್ಮಶಿಲಾ ಎಂಬ ಶಿಲೆಯಿದೆ. ಆ ಬ್ರಹ್ಮಶಿಲೆಯಲ್ಲಿ ಪ್ರಳಯಕಾಲದ ಅಗ್ನಿಯು ಇರುತ್ತದೆ. ಈ ಪ್ರಳಯಕಾಲದ ಬೆಂಕಿಯ ಮಧ್ಯದಲ್ಲಿ ಶೇಷದೇವನು ಇರುವನು. ಆ ಶೇಷದೇವನ ಹೆಡೆಯಲ್ಲಿ ಭೂಮಿಯು ಇರುತ್ತದೆ. ಈ ಭೂಮಿಯಲ್ಲಿ ಕ್ಷೀರಸಮುದ್ರವು ಇರುತ್ತದೆ. ಕ್ಷೀರ ಸಮುದ್ರದ ಮಧ್ಯದಲ್ಲಿ ಬಿಳಿಯ ಪದ್ಮವು ಇರುತ್ತದೆ.

ಈ ಪದ್ಮವನ್ನೂ ಪದ್ಮದ ಕೇಸರಗಳನ್ನೂ ಕರ್ಣಿಕೆಯನ್ನೂ ಪೂಜಿಸಬೇಕು. ಪದ್ಮದ ಪೂರ್ವ ಮುಂತಾದ ನಾಲ್ಕು ದಿಕ್ಕುಗಳಲ್ಲಿ ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ ಎಂಬ ದೇವತೆಗಳನ್ನೂ ಆಗ್ನೇಯ ಮುಂತಾದ ವಿದಿಕ್ಕುಗಳಲ್ಲಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಎಂಬ ದೇವತೆಗಳನ್ನೂ ಪೂಜಿಸಬೇಕು. ಇವರೆಲ್ಲರೂ ಪ್ರಧಾನವಾದ ಶ್ರೀಹರಿಯ ಪಾದಗಳನ್ನು ತಮ್ಮ ತಲೆಗಳಿಂದ ಮುಟ್ಟಿಕೊಂಡು ಶ್ರೀಹರಿಯನ್ನು ಸೇವಿಸುತ್ತಾ ಇರುವಂತೆ ಭಾವಿಸಬೇಕು. ಹಲಿಗೆಯಲ್ಲಿರುವ ಪೂರ್ವಾದಿನಾಲ್ಕುದಿಕ್ಕುಗಳಲ್ಲಿ ಋಗ್ವೇದಾದಿ ನಾಲ್ಕು ವೇದಗಳೂ ಆಗ್ನೇಯಾದಿ ನಾಲ್ಕು ವಿದಿಕ್ಕುಗಳಲ್ಲಿ ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳೂ ಇರುತ್ತವೆಯೆಂದು ಭಾವಿಸಬೇಕು. ಈ ಎಂಟು ಕೃತ ಮುಂತಾದ ಯುಗಗಳೂ ನಾಲ್ಕು ವೇದಗಳು ಮನುಷ್ಯರ ಆಕಾರದಿಂದ ಶ್ರೀಹರಿಯನ್ನು ಸೇವಿಸುತ್ತಿರುವಂತೆ ಭಾವಿಸಬೇಕು.

ಇವರನ್ನೆಲ್ಲರನ್ನೂ ಎಂಟು ದಳಗಳುಳ್ಳ ಪದ್ಮದಲ್ಲಿ ಪೂರ್ವ ದಿಕ್ಕಿನಲ್ಲಿರುವ ದಳದಿಂದ ಆರಂಭಿಸಿ, ಕ್ರಮವಾಗಿ ಪೂಜಿಸಬೇಕು. ಅನಂತರದಲ್ಲಿ ಪದ್ಮದ ಕೇಸರಗಳ ತುದಿಗಳಲ್ಲಿ ಕಾಲಚಕ್ರದ ಅಭಿಮಾನಿ ದೇವತೆಯನ್ನೂ ಕರ್ಣಿಕೆಯಲ್ಲಿ ಸೂರ್ಯಮಂಡಲ, ಸೋಮಮಂಡಲ, ಅಗ್ನಿಮಂಡಲಗಳ್ನೂ ಪೂಜಿಸಬೇಕು. ಸತ್ವಗುಣ, ರಜೋಗುಣ, ತಮೋಗುಣಗಳ ಅಭಿಮಾನಿ ದೇವತೆಗಳನ್ನು ಕ್ರಮದಿಂದ ಪೂಜಿಸಬೇಕು. ಹೀಗೆ ಮೂರು ಗುಣಗಳು ಮತ್ತು ಅವುಗಳ ಅಧೀನವಾಗಿರುವ ಎಲ್ಲಾ ವಸ್ತುಗಳೂ ಪೀಠಗಳೆನಿಸುತ್ತವೆ.

ಶಕ್ತಿರಾಧಾರಶಕ್ತಿಶ್ಚ ಚಿಚ್ಛಕ್ತಿಶ್ಚೇತಿ ಶಕ್ತಯಃ |
ಪುರುಷಾದ್ಯಾಸ್ತು ಪೀಠಾಧಃ ಪೂಜ್ಯಾ ದ್ವೀಪಾವಸಾನಕಾಃ ||
ಧರ್ಮಾದೀನರ್ಚಯೇತ್ಪೀಠೇ ಪಾದಗಾಂಸ್ತತ್ರ ಚಾಂಜಸಾ | (ವಾಸಿಷ್ಠ ವಚನ )

ವಿಮಲಾಶಕ್ತಿಗಳು, ಆಧಾರಶಕ್ತಿ, ಚಿಚ್ಛಕ್ತಿ ಎಂದು ಅನೇಕವಿಧವಾದ ಶಕ್ತಿಗಳಿವೆ. ಪರಮಪುರುಷನಿಂದ ಆರಂಭಿಸಿ ಶ್ವೇತದ್ವೀಪದವರೆಗಿರುವ ವಸ್ತುಗಳು ಪೀಠದ ಕೆಳಗೆ ಪೂಜಿಸಲ್ಪಡಬೇಕಾದವುಗಳು. ಧರ್ಮಾದಿಗಳು ಪೀಠದ ಪಾದಗಳಲ್ಲಿರುತ್ತವೆ. ಅಧರ್ಮಾದಿಗಳು ಪೀಠದಲ್ಲಿರುತ್ತವೆ. ಆಯಾ ಸ್ಥಳಗಳಲ್ಲಿರುವವರನ್ನು ಅಲ್ಲಲ್ಲಿ ಪೂಜಿಸಬೇಕು.

ಇಲ್ಲಿ ಕೆಲವರ ಮತದಲ್ಲಿ ಆಧಾರಶಕ್ತಿಯನ್ನು ಆರಂಭಿಸಿ ಮಂಟಪದವರೆಗಿನ ವಸ್ತುಗಳನ್ನು ಮೊದಲು ಪೂಜಿಸಬೇಕು. ಆ ಸ್ಥಳದಲ್ಲಿ ಪೀಠವನ್ನಿಡಬೇಕು. ಆ ಪೀಠದಲ್ಲಿ ಆರು ದಳಗಳ ಪದ್ಮವನ್ನೂ ಎಂಟು ದಳಗಳ ಪದ್ಮವನ್ನೂ ಬರೆದು ಹಿಂದೆ ಹೇಳಿದಂತೆ ಎಲ್ಲಾ ಪೂಜೆಗಳನ್ನೂ ಮಾಡಬೇಕೆಂದು ಹೇಳುವರು.

**ಪಂಚರಾತ್ರಾಗಮ ಮುಂತಾದವುಗಳಲ್ಲಿ ಹೇಳಿರುವ ಪೀಠಪೂಜಾವಿಧಿಯು**
**ಇಲ್ಲಿಗೆ ಮುಗಿಯಿತು.**

## ಆವಾಹನ ಪ್ರಕಾರ

ತತ್ರಾವಾಹ್ಯ ಹರಿಂ..... | (ತಂತ್ರಸಾರ ವಚನ)

**ಹಿಂದೆ ಹೇಳಿದಂತೆ ಪೀಠಪೂಜೆಯನ್ನು** ಮಾಡಬೇಕು. ಪೂಜಿಸಲ್ಪಟ್ಟ ಪೀಠವೇ ಅನಂತಾಸನ ಎಂದು ತಿಳಿಯಬೇಕು. ಆ ಪೀಠದಲ್ಲಿ ಶ್ರೀಹರಿಯ ಪ್ರತಿಮೆಯನ್ನು ಇಡಬೇಕು. ಆ ಪ್ರತಿಮೆಯಲ್ಲಿ ತನ್ನ ಹೃದಯದಲ್ಲಿರುವ ಬಿಂಬರೂಪಿಯಾದ ಶ್ರೀಹರಿಯನ್ನು ಆವಾಹಿಸಬೇಕು.

ಅಷ್ಟೈಶ್ವರ್ಯಸಮಾಯುಕ್ತಂ ಶ್ವೇತಮತ್ಯಂತನಿರ್ಮಲಮ್ |
ಶ್ವೇತಾಬ್ಜಸ್ಥಂ ಪದ್ಮಕರಂ ಗದಿನಂ ಶಂಖಚಕ್ರಿಣಮ್ ||

ಶುದ್ಧಸ್ಫಟಿಕಸಂಕಾಶಂ ಸರ್ವಾಭರಣಭೂಷಿತಮ್ |
ವನಮಾಲಾಧರಂ ದೇವಂ ಧ್ಯಾಯೇನ್ನಾರಾಯಣಂ ಪರಮ್ ||
ಮಾನಸೈರುಪಚಾರೈಶ್ಚ ಪೂಜಾಂ ಸಮ್ಯಕ್ಸಮಾಚರೇತ್ |
ಬಹಿರ್ಯಾಗಪ್ರಸಿದ್ಧ್ಯರ್ಥಮುಚ್ಚರನ್ ಪ್ರಣವಂ ತಥಾ ||
ದೇವಂ ಸುಷುಮ್ನಾಮಾರ್ಗೇಣ ಆನೀಯ ಬ್ರಹ್ಮರಂಧ್ರಂಕಮ್ |
ವಾಮನಾಸಾಪುಟೇ ಧ್ಯಾತ್ವಾ ನಿರ್ಗತಂ ಸ್ವಾಂಜಲಿಸ್ಥಿತಮ್ ||
ಸಂಪೂಜ್ಯ ಪ್ರತಿಮಾದೌ ತು ಪುಷ್ಪಮಾರೋಪ್ಯ ಮಂತ್ರತಃ |
ಸಹಸ್ರ ಶೀರ್ಷಾಮಂತ್ರೇಣ ಕುರ್ಯಾದಾವಾಹನಂ ವಿಭೋಃ ||
ಹೃತ್ಸ್ಥಂ ದೇವಂ ಸಮಾವಾಹ್ಯ ಬಹಿರ್ಬಿಂಬೇ ನಿಯೋಜಯೇತ್ || (ಪರಮಪುರುಷ ಸಂಹಿತಾ)

"ಸರ್ವೋತ್ತಮನಾದ ನಾರಾಯಣನನ್ನು ಮೊದಲು ಧ್ಯಾನಿಸಬೇಕು. ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ ಈಶಿತ್ವ, ವಶಿತ್ವ ಎಂಬ ಅಷ್ಟೈಶ್ವರ್ಯಗಳಿಂದ ಯುಕ್ತನಾಗಿರುವುದಾಗಿಯೂ, ಅತ್ಯಂತ ನಿರ್ಮಲವಾದ ಬಿಳಿಯ ಬಣ್ಣದಿಂದ ಯುಕ್ತನಾಗಿರುವುದಾಗಿಯೂ, ಬಿಳಿಯ ಕಮಲದಲ್ಲಿ ಕುಳಿತಿರುವುದಾಗಿಯೂ ಭಾವಿಸಬೇಕು. ಪದ್ಮ, ಗದಾ, ಶಂಖ, ಚಕ್ರಗಳನ್ನು ಒಂದೊಂದನ್ನು ಒಂದೊಂದು ಕೈಗಳಂತೆ ನಾಲ್ಕು ಕೈಗಳಲ್ಲಿ ಧರಿಸಿದವನಾಗಿ ಭಾವಿಸಬೇಕು. ಶುದ್ಧವಾದ ಸ್ಫಟಿಕಮಣಿಯಂತೆ ಹೊಳೆಯುತ್ತಿರುವವನಾಗಿಯೂ, ಸರ್ವಾಭರಣಗಳಿಂದ ಅಲಂಕೃತನಾಗಿಯೂ, ವನಮಾಲೆಯನ್ನು ಧರಿಸಿದವನಾಗಿಯೂ ಇರಬೇಕು. ಈ ರೀತಿಯಾಗಿ ಬಿಂಬರೂಪಿಯಾದ ಶ್ರೀಹರಿಯನ್ನು ಧ್ಯಾನಿಸಿ ಮನಸ್ಸಿನಿಂದಲೇ ಷೋಡಶೋಪಚಾರಪೂಜೆಯನ್ನು ಚೆನ್ನಾಗಿ ಮಾಡಬೇಕು. ಅನಂತರದಲ್ಲಿ ಓಂಕಾರವನ್ನು ಉಚ್ಚರಿಸುತ್ತಾ ಸುಷುಮ್ನಾನಾಡಿಯ ಮೂಲಕವಾಗಿ ಹೃದಯದಿಂದ ಬ್ರಹ್ಮರಂಧ್ರದವರೆಗೆ ಅವನನ್ನು ಕರೆದುಕೊಂಡುಬರಬೇಕು. ಅಲ್ಲಿಂದ ಎಡಭಾಗದ ಮೂಗಿನ ರಂಧ್ರದಲ್ಲಿ ಧ್ಯಾನಿಸಬೇಕು. ಅಲ್ಲಿಂದ ಹೊರಟು ತನ್ನ ಬೊಗಸೆಗಳ ಮಧ್ಯದಲ್ಲಿ ಕುಳಿತಂತೆ ಭಾವಿಸಬೇಕು. ಅಲ್ಲಿಯೂ ಬಿಂಬರೂಪಿಯಾದ ಶ್ರೀಹರಿಯನ್ನು ಪೂಜಿಸಬೇಕು. ಅನಂತರದಲ್ಲಿ ಪುಷ್ಪವನ್ನು ಪ್ರತಿಮೆಯ ಮೇಲೆ ಸಮರ್ಪಿಸಬೇಕು. "ಸಹಸ್ರಶೀರ್ಷಾ" ಎಂಬ ಪುರುಷಸೂಕ್ತವನ್ನು ಹೇಳಬೇಕು. ಇದು ಶ್ರೀಹರಿಯ ಆವಾಹನೆಯೆನಿಸುತ್ತದೆ."

ಆವಾಹಯೇದ್ಧರಿಂ ತಸ್ಮಿನ್ನಾದಿತ್ಯಾದಾತ್ಮನೋಽಥ ವಾ |
ಆದಿತ್ಯಸ್ಥಃ ಪರಾರ್ಥೇ ತು ಸ್ವಯಮರ್ಥೇ ತಥಾಽಽತ್ಮನಃ |
ಸ್ವಾಗತ ಪರಯಾ ಭಕ್ತ್ಯಾ.........|| (ವಿಷ್ಣುತೀರ್ಥೀಯವಚನ)

"ಪೀಠದಲ್ಲಿರುವ ಪ್ರತಿಮೆಯಲ್ಲಿ ತನ್ನ ಹೃದಯಕಮಲದಲ್ಲಿರುವ ಬಿಂಬರೂಪಿಯಾದ ಶ್ರೀಹರಿಯನ್ನಾಗಲೀ, ಸೂರ್ಯಮಂಡಲಮಧ್ಯದಲ್ಲಿರುವ ಶ್ರೀಹರಿಯನ್ನಾಗಲೀ ಆವಾಹಿಸಬೇಕು. ಪರರಿಗಾಗಿ ಪೂಜೆಯನ್ನು ಮಾಡುವುದಾಗಿದ್ದರೆ ಸೂರ್ಯಾಂತರ್ಗತನಾದ ಶ್ರೀಹರಿಯನ್ನೂ ತನಗಾಗಿ ಪೂಜೆಯನ್ನು ಮಾಡುವುದಾಗಿದ್ದರೆ ತನ್ನ ಹೃದಯ ಕಲಮದಲ್ಲಿರುವ ಶ್ರೀಹರಿಯನ್ನೂ ಆವಾಹಿಸಬೇಕು. ಆವಾಹಿಸದ ಮೇಲೆ ತುಂಬಾ ಭಕ್ತಿಯಿಂದ ಸ್ವಾಗತವನ್ನು ಹೇಳಬೇಕು."

## ಹೃದಯಕಮಲದ ಉನ್ಮುಖೀಕರಣ

ಅಧೋಮುಖಂ ಹೃತ್ಕಮಲಂ ವಾಯುಬೀಜೇನ ಸಮ್ಮುಖಂ |
ಪ್ರಣವೇನೋನ್ಮುಖೀಕೃತ್ಯ ಜ್ಞಾನಾರ್ಕೇಣ ವಿಕಾಸಯೇತ್ || (ಪುರುಷಸಂಹಿತಾ ವಚನ)

"ಹೃದಯಕಮಲವು ಯಾವಾಗಲೂ ಕೆಳಮುಖವಾಗಿರುತ್ತದೆ. ಅದನ್ನು "ಓಂ ಯಂ" ಎಂಬ ವಾಯು ಬೀಜಾಕ್ಷರವನ್ನು

ಉಚ್ಚರಿಸುತ್ತಾ ತನಗೆ ಅಭಿಮುಖವಾಗುವಂತೆ ಮಾಡಿಕೊಳ್ಳಬೇಕು. ಅನಂತರದಲ್ಲಿ "ಓಂ" ಎಂಬ ಪ್ರಣವ ಮಂತ್ರವನ್ನು ಉಚ್ಚರಿಸುತ್ತಾ ಮೇಲ್ಮುಖವಾಗುವಂತೆ ಮಾಡಿಕೊಳ್ಳಬೇಕು. "ತನ್ನಲ್ಲಿರುವ ವಿಷ್ಣುಸರ್ವೋತ್ತಮತ್ವಜ್ಞಾನ ಎಂಬ ಸೂರ್ಯನಿಂದ ಅರಳುವಂತೆ ಮಾಡಿಕೊಳ್ಳಬೇಕು."

### ಸ್ವಾರ್ಥಪೂಜೆಯಲ್ಲಿ ಆವಾಹನಕ್ರಮ

"ಅನಂತರದಲ್ಲಿ ಆ ಕಮಲದ ಕರ್ಣಿಕೆಯಲ್ಲಿರುವ ನಾರಾಯಣನನ್ನು "ಉದ್ಯದ್ಭಾಸ್ವತ್ಸಮಾಭಾಸಃ" ಎಂಬ ಶ್ಲೋಕದಲ್ಲಿ ಹೇಳಿರುವಂತೆ ಧ್ಯಾನಿಸಬೇಕು. ಅನಂತರದಲ್ಲಿ ತುಳಸಿಯನ್ನೂ ಪುಷ್ಪಗಳನ್ನೂ ಕೈಗಳಲ್ಲಿ ಸ್ವೀಕರಿಸಿದವನಾಗಿ ತನಗಾಗಿ ಪೂಜೆಯನ್ನು ಮಾಡುವುದಾಗಿದ್ದರೆ "ಆತ್ಮಾ ದೇವಾನಾಂ ಭುವನಸ್ಯ ಗರ್ಭಃ ಯಥಾವಶಂ ಚರತಿ ದೇವ ಏಷಃ | ಘೋಷಾ ಯದಸ್ಯ ಶೃಣ್ವಿರೇಽನುರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ" ಎಂಬ ವೈದಿಕಮಂತ್ರದಿಂದ ತನ್ನ ಹೃದಯಕಮಲದಲ್ಲಿರುವ ಶ್ರೀಮುಖ್ಯ ಪ್ರಾಣದೇವರಲ್ಲಿ ಅಂತರ್ಗತನಾಗಿರುವ ನಾರಾಯಣನನ್ನು "ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ಶ್ರೀಪುರುಷೋತ್ತಮ| ಆವಾಹಯಾಮಿ ಪೀಠೇಽಸ್ಮಿನ್ ಪ್ರತಿಮಾಯಾಂ ಜಗತ್ಪತೇ" ಎಂಬ ಮಂತ್ರದಿಂದ "ಪೀಠಸ್ಥತಪ್ರತಿಮಾಯಾಮಾವಾಹಯಾಮಿ" ಎಂದು ಎರಡು ಸಲ ಹೇಳಿ "ಭೋಃ ಸ್ವಾಮಿನ್ ಜಗತಾಂ ನಾಥ ಯಾ ವತ್ಪೂಜಾವಸಾನಕಂ | ತಾವತ್ಸಂಪ್ರೀತಿಭಾವೇನ ಬಿಂಬೇಽಸ್ಮಿನ್ ಸಂಸ್ಥಿತೋ ಭವ" ಎಂಬ ಮಂತ್ರದಿಂದ ಪ್ರಾರ್ಥಿಸಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು."

### ಪರಾರ್ಥಪೂಜೆಯಲ್ಲಿ ಆವಾಹಿಸುವ ಕ್ರಮ

"ಇನ್ನೊಬ್ಬರಿಗೆ ಪೂಜೆಯನ್ನು ಮಾಡುವುದಾಗಿದ್ದರೆ ಸೂರ್ಯಾಂತರ್ಗತನಾದ ನಾರಾಯಣನನ್ನು "ಧ್ಯೇಯ, ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ ಸರಸಿಜಾಸನಸನ್ನಿವಿಷ್ಟಃ | ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ಎಂಬ ಮಂತ್ರದಿಂದ ಧ್ಯಾನಿಸಿ, "ಏಹ್ಯೇಹಿ" ಎಂಬ ಮಂತ್ರವನ್ನು ಹೇಳುತ್ತಾ "ಭೋಃ ಸ್ವಾಮಿನ್" ಎಂಬ ಮಂತ್ರದಿಂದ ಪ್ರಾರ್ಥಿಸಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು. ಇದು ಆವಾಹನಕ್ರಮ."

### ಮುದ್ರೆಗಳ ಹೆಸರುಗಳು ಮತ್ತು ಲಕ್ಷಣಗಳು

ಆವಾಹನಂ ಸ್ಥಾಪನಂ ಚ ಸಾನ್ನಿಧ್ಯಂ ಸನ್ನಿರೋಧನಮ್ |
ಸಮ್ಮುಖೀಕರಣಂ ಚೈವ ಅವಗುಂಠನಮೇವ ಚ ||

"ಆವಾಹನೀ, ಸ್ಥಾಪನೀ, ಸನ್ನಿಧಾಯಿನೀ, ಸಂರೋಧಿನೀ, ಸಮುಖೀಕರಣಾ, ಅವಗುಂಠನಾ ಎಂದು ಆರು ಮುದ್ರೆಗಳು ಮತ್ತು ಅವುಗಳ ಹೆಸರುಗಳು,"

ಹಸ್ತಾಭ್ಯಾಮಂಜಲೀ ಕೃತ್ವಾಽನಾಮಿಕಾಮೂಲಪರ್ವಣೋಃ |
ಅಂಗುಷ್ಠೌ ನಿಕ್ಷಿಪೇತ್ಸೇಯಂ ಮುದ್ರಾ ತ್ವಾವಾಹನೀ ಮತಾ ||

"ಎರಡು ಕೈಗಳನ್ನೂ ಬೊಗಸೆಯಂತೆ ಮಾಡಿಕೊಳ್ಳಬೇಕು. ಎರಡು ಅಂಗುಷ್ಠಗಳನ್ನೂ ಆಯಾ ಕೈಗಳ ಉಂಗುರದ ಬೆರಳಿನಲ್ಲಿರುವ ಕೆಳಗಿನ ಎರಡು ಪರ್ವಗಳಲ್ಲಿ ತಗಲಿಸಬೇಕು. ಇದು ಆವಾಹನೀ ಮುದ್ರೆಯೆನಿಸುತ್ತದೆ."

ಅಧೋಮುಖೀ ತ್ವಿಯಂ ಚೇತ್ಸ್ಯಾತ್ಸ್ಥಾಪನೀ ಮುದ್ರಿಕಾ ಮತಾ |

"ಈ ಆವಾಹನಮುದ್ರೆಯೇ ಕೆಳಮುಖವಾಗಿದ್ದರೆ ಸ್ಥಾಪನೀಮುದ್ರೆಯೆನಿಸುತ್ತದೆ.

ಉಚ್ಛ್ರಿತಾಂಗುಷ್ಠಮುಷ್ಟ್ಯೋಸ್ತು ಸಂಯೋಗಾತ್ಸನ್ನಿಧಾಯಿನೀ |

"ಎರಡು ಕೈಗಳ ಅಂಗುಷ್ಠಗಳನ್ನು ಮೇಲ್ಮುಖವಾಗಿ ಮಾಡಿಕೊಳ್ಳಬೇಕು. ಉಳಿದ ಎಲ್ಲಾ ಬೆರಳುಗಳನ್ನೂ ಮಡಿಸಿಕೊಂಡು ಮುಷ್ಟಿಯಾಗಿ ಮಾಡಿಕೊಳ್ಳಬೇಕು. ಆ ಎರಡು ಮುಷ್ಟಿಗಳನ್ನೂ ಒಟ್ಟಿಗೆ ಜೋಡಿಸಬೇಕು. ಇದು ಸನ್ನಿಧಾಯಿನೀ ಮುದ್ರೆಯೆನಿಸುತ್ತದೆ."

ಅಂತಃ ಪ್ರವೇಶಿತಾಂಗುಷ್ಠೇ ಸಾ ವೈ ಸಂರೋಧಿನೀ ಮತಾ |

"ಎರಡು ಮುಷ್ಟಿಗಳ ಒಳಗೆ ಅಂಗುಷ್ಠಗಳನ್ನು ಪ್ರವೇಶಮಾಡಿಸಿ ಆ ಎರಡು ಮುಷ್ಟಿಗಳನ್ನೂ ಒಟ್ಟುಗೂಡಿಸಿದರೆ ಸಂರೋಧಿನೀಮುದ್ರೆಯೆನಿಸುತ್ತದೆ."

ಮುಷ್ಟಿದ್ವಯಸ್ಥಿತಾಂಗುಷ್ಠೌ ಸಂಮುಖೌ ಚ ಪರಸ್ಪರಮ್ |
ಸಂಶ್ಲಿಷ್ಟಾವುಚ್ಛ್ರಿತೌ ಕುರ್ಯಾತ್ಸೇಯಂ ಸಂಮುಖಮುದ್ರಿಕಾ ||

"ಎರಡು ಮುಷ್ಟಿಗಳ ಅಂಗುಷ್ಠಗಳನ್ನು ಒಂದು ಅಂಗುಷ್ಠದ ಮೇಲೆ ಇನ್ನೊಂದು ಅಂಗುಷ್ಠವನ್ನು ಇಡಬೇಕು. ಆ ಎರಡು ಅಂಗುಷ್ಠಗಳನ್ನೂ ಮೇಲ್ಮುಖವಾಗಿ ಮಾಡಿಕೊಳ್ಳಬೇಕು. ಇದು ಸಂಮುಖಮುದ್ರೆಯೆನಿಸುತ್ತದೆ.

ಹಸ್ತೌ ತು ಸಂಮುಖೌ ಕೃತ್ವಾ ಮುಷ್ಟೀಕೃತ್ವಾ ವಿಗುಂಠಯೇತ್ |
ತಯೋರುಪರಿ ಚಾಂಗುಷ್ಠೌ ನಿಕ್ಷಿಪ್ತೌ ವಿವೃತೌ ತಥಾ ||
ಅವಗುಂಠನಮುದ್ರೇಯಂ ಸರ್ವಕಾಮಫಲಪ್ರದಾ |

"ಎರಡು ಅಂಗೈಗಳನ್ನು ತನಗೆ ಅಭಿಮುಖವಾಗುವಂತೆ ಮಾಡಿಕೊಳ್ಳಬೇಕು. ಎರಡು ಕೈಗಳ ಅಂಗುಷ್ಠವನ್ನು ಬಿಟ್ಟು ಉಳಿದ ನಾಲ್ಕು ಬೆರಳುಗಳನ್ನು ಮಡಿಸಿ ಮುಷ್ಟಿಗಳಾಗುವಂತೆ ಮಾಡಿಕೊಳ್ಳಬೇಕು. ಆ ಎರಡು ಮುಷ್ಟಿಗಳ ಮೇಲೆ ಆಯಾ ಮುಷ್ಟಿಗಳ ಅಂಗುಷ್ಠಗಳನ್ನು ತಗಲಿಸಿ ಬಿಡಿಸಬೇಕು. ಇದು ಅವಗುಂಠನಮುದ್ರೆಯೆನಿಸುತ್ತದೆ. ಈ ಮುದ್ರೆಯು ಅಪೇಕ್ಷಿಸಿದ ಎಲ್ಲಾ ಫಲಗಳನ್ನೂ ಕೊಡುತ್ತದೆ."

ಮೇಲ್ಕಂಡ ಆರು ಮುದ್ರೆಗಳನ್ನು ಶ್ರೀಹರಿಯ ವಿಗ್ರಹಕ್ಕೆ ತೋರಿಸಬೇಕು. ಆವಾಹಿನೀಮುದ್ರೆಯನ್ನು ತೋರಿಸಿ ಆವಾಹಿಸಬೇಕು, ಸ್ಥಾಪನೀಮುದ್ರೆಯನ್ನು ತೋರಿಸುತ್ತಾ ಸ್ಥಾಪನವನ್ನು ಮಾಡಬೇಕು. ಸನ್ನಿಧಾಯಿನೀ ಮುದ್ರೆಯನ್ನು ತೋರಿಸುತ್ತಾ ಶ್ರೀಹರಿಯ ಸನ್ನಿಧಾನವು ಬರುವಂತೆ ಮಾಡಬೇಕು. ಸಂರೋಧಿನೀ ಮುದ್ರೆಯನ್ನು ತೋರಿಸುತ್ತಾ ಶ್ರೀಹರಿಯನ್ನು ಭಕ್ತಿಯಿಂದ ಬಿಗಿದು ಶ್ರೀಹರಿಯು ವಿಗ್ರಹವನ್ನು ಬಿಟ್ಟು ಕದಲದಂತೆ ಮಾಡಬೇಕು. ಸಂಮುಖಮುದ್ರೆಯನ್ನು ತೋರಿಸುತ್ತಾ ಶ್ರೀಹರಿಯು ನಮಗೆ ಸಂಮುಖನಾಗುವಂತೆ ಮಾಡಬೇಕು. ಅವಗುಂಠನ ಮುದ್ರೆಯನ್ನು ತೋರಿಸುತ್ತಾ ಶ್ರೀಹರಿಯು ಸರ್ವರಿಗೆ ಬೇಕಾದ ಇಷ್ಟಾರ್ಥಗಳನ್ನು ಕೊಡುತ್ತಿರುವಂತೆ ಭಾವಿಸಬೇಕು.

ಪ್ರಸೃತಾಂಗುಲಿಕೌ ಹಸ್ತೌ ಮಿಥಃ ಶ್ಲಿಷ್ಟಾವಸಂಮುಖೌ |
ಕುರ್ಯಾತ್ಸ್ವಹೃದಯೇ ಸೇಯಂ ಮುದ್ರಾ ಪ್ರಾರ್ಥನಸಂಜ್ಞಕಾ ||

"ಎರಡು ಕೈಗಳ ಬೆರಳುಗಳನ್ನು ಬಿಡಿಸಬೇಕು. ಆ ಎರಡು ಕೈಗಳನ್ನೂ ಒಟ್ಟುಗೂಡಿಸಬೇಕು. ಬೊಗಸೆಯಂತೆ ಮಾಡಿಕೊಳ್ಳಬೇಕು. ಆ ಬೊಗಸೆಯನ್ನು ಎದೆಯ ಮೇಲೆ ಇಟ್ಟುಕೊಳ್ಳಬೇಕು. ಈ ಮುದ್ರೆಯು ಪ್ರಾರ್ಥನಮುದ್ರೆಯೆನಿಸುತ್ತದೆ."

ಉತ್ತಾನೌ ತು ಕರೌ ಕೃತ್ವಾ ಪ್ರಸಾರ್ಯ ಹೃದಯಸ್ಥಿತೌ |
ಪ್ರಸಾದಮುದ್ರಾ ವಿಜ್ಞೇಯಾ ಸರ್ವದೇವಪ್ರಸಾದಿನೀ ||

"ಎರಡು ಕೈಗಳನ್ನು ಉದ್ದವಾಗಿ ಚಾಚಬೇಕು. ಎದೆಯ ಮೇಲೆ ಇಟ್ಟುಕೊಳ್ಳಬೇಕು. ಇದು ಪ್ರಸಾದ ಮುದ್ರೆಯೆನಿಸುತ್ತದೆ. ಈ ಪ್ರಸಾದಮುದ್ರೆಯು ಸರ್ವದೇವತೆಗಳ ಅನುಗ್ರಹವನ್ನು ಮಾಡುತ್ತದೆ.

### ಸ್ವಯಂವ್ಯಕ್ತ ಮುಂತಾದ ಪ್ರತಿಮೆಗಳಲ್ಲಿ ಆವಾಹನಕ್ರಮ

ಶಾಲಿಗ್ರಾಮ, ಚಕ್ರಾಂಕಿತ ಬದರೀ ಮುಂತಾದ ಕ್ಷೇತ್ರಗಳಲ್ಲಿರುವ ವಿಗ್ರಹ ಮುಂತಾದವುಗಳು ಸ್ವಯಂವ್ಯಕ್ತ ವಿಗ್ರಹಗಳೆನಿಸುತ್ತವೆ. ಅವುಗಳಲ್ಲಿ ಮೇಲ್ಕಂಡ ರೀತಿಯಿಂದ ಆವಾಹನೆಯನ್ನು ಮಾಡಕೂಡದು. ಮುಂದೆ ಹೇಳುವಂತೆ ಮಾಡಬೇಕು.

ಪಾತ್ರಮೇಕಂ ಜಲೇ ಪೂರ್ಯ ಗಂಧಪುಷ್ಪಾದಿ ಸೇಚಯೇತ್ |
ಆವಾಹಯೇತ್ತತೋ ದೇವಂ ಜಿತಂತ ಇತಿ ಮಂತ್ರತಃ ||
ಮೂಲವೇದಾದ್ದ್ವಿಜಶ್ರೇಷ್ಠ: ಪಾತ್ರಮಧ್ಯೇ ಸಮಾಹ್ವಯೇತ್ |
ಸೇಚಯೇತ್ಪ್ರತಿಮಾಮೂರ್ಧ್ನಿ ತೇನ ಮಂತ್ರೇಣ ದೇಶಿಕಃ ||
ಕೇವಲಂ ಭಾವಮಾತ್ರಂ ತು ಮಂತ್ರೇಣ ದ್ವಿಜಸತ್ತಮಃ |
ಆವಾಹನಮಿದಂ ಜ್ಞೇಯಂ ಸ್ನಾನಕಾಲಸ್ಯ ಶಾರ್ಙ್ಗಿಣಃ |
ಸ್ವಾಗತಂ ಪ್ರಣವೇನ್ನೈವ ಆಸನಂ ತು ನಿವೇದಯೇತ್ (ಕಪಿಂಜಲಸಂಹಿತಾ)

"ಒಂದು ಪಾತ್ರೆಯನ್ನು ನೀರಿನಲ್ಲಿ ಮುಳುಗಿಸಿ ನೀರನ್ನು ತುಂಬಿಸಿ ಕೊಳ್ಳಬೇಕು. ಗಂಧಪುಷ್ಪಾದಿಗಳಿಂದ ಪೂಜಿಸಬೇಕು. "ಜಿತಂತೇ ಪುಂಡರೀಕಾಕ್ಷ" ಎಂಬ ಪಂಚರಾತ್ರೋಕ್ತ ಸ್ತೋತ್ರವು ಮೂಲವೇದವೆನಿಸುತ್ತದೆ. ಆ ಮೂಲವೇದದಿಂದ ಕಲಶದ ಮಧ್ಯದಲ್ಲಿ ಶ್ರೀಹರಿಯನ್ನು ಆವಾಹಿಸಬೇಕು. ಆ ಕಲಶದಲ್ಲಿರುವ ಜಲದಿಂದ ಸ್ವಯಂ ವ್ಯಕ್ತಪ್ರತಿಮೆಗೆ ಅಭಿಷೇಕವನ್ನು ಮಾಡಬೇಕು. ಇದು ಸ್ವಯಂವ್ಯಕ್ತಪ್ರತಿಮೆಯಲ್ಲಿ ಆವಾಹನವೆನಿಸುತ್ತದೆ. ಆವಾಹನಾನಂತರದಲ್ಲಿ "ಓಂ" ಎಂಬ ಪ್ರಣವ ಮಂತ್ರದಿಂದ ಸ್ವಾಗತ ಮತ್ತು ಆಸನಗಳನ್ನು ಸಮರ್ಪಿಸಬೇಕು."

ಹಸ್ತಾಭ್ಯಾಂ ಹೃತ್ಸಮಂ ಧೃತ್ವಾ ಪಾತ್ರಂ ಗಂಧಾಂಬುಪೂರಿತಮ್ |
ಚತುರಾವರ್ತಯೇನ್ಮಂತ್ರಂ ತಸ್ಮಿನ್ನಾವಾಹಯೇದ್ವಿಭುಮ್ ||
ಭಾವಂ ದರ್ಪಣಸಂಕಾಶಂ ಕೃತ್ವಾ ಹೃತ್ಸರಸೀರುಹಾತ್ |
ಧೃತ್ವಾ ಪ್ರಣವಪೀಠಸ್ಥಂ ತಸ್ಮಿನ್ ಪಾತ್ರಂ ನಿವೇದಯೇತ್||
ಅವಿಕಾರಾದವಿಕೃತಂ ದೀಪಾದ್ದೀಪಾಂತರಂ ಯಥಾ |
ಸಂಕಲೀಕೃತ್ಯ ದೇವೇಶಂ ದದ್ಯಾದರ್ಘ್ಯಮನಂತರಮ್ || (ಪರಮಪುರುಷ ಸಂಹಿತಾ)

"ಎರಡು ಕೈಗಳಿಂದ ಎದೆಗೆ ಸಮವಾಗಿ ಕಲಶವನ್ನು ಎತ್ತಿಕೊಳ್ಳಬೇಕು. ಆ ಕಲಶದಲ್ಲಿ ಗಂಧಜಲವನ್ನು ತುಂಬಿಸಿಕೊಳ್ಳಬೇಕು. "ಜಿತಂತೇ ಪುಂಡರೀಕಾಕ್ಷ" ಎಂಬ ಮಂತ್ರವನ್ನು ನಾಲ್ಕು ಸಲ ಜಪಿಸಬೇಕು. ಆ ಕಲಶದಲ್ಲಿ ತನ್ನ ಹೃದಯಕಮಲದಿಂದ ಶ್ರೀಹರಿಯು ಬಂದು ಕುಳಿತಂತೆ ಭಾವಿಸಬೇಕು. ಕನ್ನಡಿಯಂತೆ ಸ್ವಚ್ಛನಾದ ಕಲಶದಲ್ಲಿರುವ ಶ್ರೀಹರಿಯು ಹೃದಯದಲ್ಲಿರುವ ಬಿಂಬಮೂರ್ತಿಯಿಂದ ಅಭಿನ್ನನಾಗಿರುವನು. ದೀಪದಿಂದ ದೀಪಾಂತರವು ಹೊರಟಂತೆ ಹೃದಯದಲ್ಲಿರುವ ಶ್ರೀಹರಿಯಿಂದ ಹೊರಟಿರುವ ಕಲಶದಲ್ಲಿರುವ ಶ್ರೀಹರಿಯನ್ನು ಆವಾಹಿಸಿದ ಮೇಲೆ ಅವನಿಗೆ ಅರ್ಘ್ಯವನ್ನು ಸಮರ್ಪಿಸಬೇಕು."

ಆವಾಹನಮಿದಂ ಪಾತ್ರಂ ಪ್ರಕ್ಷಾಲಿತಮಥಾಂಬುಭಿಃ |
ಪೂರಯೇನ್ಮೂಲಮಂತ್ರೇಣ ಹಸ್ತಾಭ್ಯಾಂ ಚ ಸಮುದ್ಧರೇತ್|
ಲಲಾಟಸಮಮೇತಸ್ಮಿನ್ನಂತರಾವಾಹ್ಯ ಕೇಶವಮ್ |
ಅಥ ಬಿಂಬಂ ತಥಾರೂಪಂ ದೀಪಾದವಿಕೃತಂ ತಥಾ ||
ಚತುರುಚ್ಚಾರಯೇನ್ಮಂತ್ರಮಾಗಚ್ಛಪದಸಂಯುತಮ್ |
ತೇನ ನ್ಯಾಯೇನ ಕರ್ಮಾರ್ಚಾ: ಸಿಂಚತ್ಕೂರ್ಚೇನ ಮೂರ್ಧನಿ ||
ತತ್ರ ಸನ್ನಿಹಿತಂ ದೇವಂ ಕರ್ಮಾರ್ಚಾಯಾಂ ವಿಚಿಂತಯೇತ್ |
ಪ್ರಣಮ್ಯ ಕಿಂಚಿದುತ್ಥಾಯ ಸ್ವಾಗತೋಕ್ತೇರನಂತರಮ್ ||

ದರ್ಶಯೇತ್ತೃತಿಮಾಂ ಮುದ್ರಾಂ ದರ್ಶಯಿತ್ವಾ ಚ ಸನ್ನಿಧಿಮ್ |
ಯಾಗಾವಸಾನಿಕಾಂ ತತ್ರ ಪ್ರಾರ್ಥಯೇಚ್ಚ ಹರೇಃ ಸ್ಥಿತಿಮ್ ||
ಸಂಮುಖೀಕರಣಂ ಕುರ್ಯಾತ್ಪುಂಡರೀಕಾಕ್ಷವಿದ್ಯಯಾ |
ದದ್ಯಾಚ್ಚ ಮೂಲಮಂತ್ರೇಣ ಅರ್ಘ್ಯಂ ಚಾಸನಮೇವ ಚ |
ಯಥಾ ದೇಹೇ ತಥಾಽರ್ಚಾಯಾಂ ಮಂತ್ರನ್ಯಾಸಂ ಸಮಾಚರೇತ್||
ಹಸ್ತನ್ಯಾಸಂ ವಿನಾ ಶಂಖಚಕ್ರಮುದ್ರಾಂ ಪ್ರದರ್ಶಯೇತ್ |
ನಾವಾಹಯೇತ್ಕುಬೇರೇಷ್ವು ಸುರಸಿದ್ಧೈಶ್ಚಕಾರಿತೇ||
ಋಷಿಭಿರ್ಮನುಜೈಶ್ಚಾಪಿ ಸ್ಥಾಪಿತೇ ನಿಶ್ಚಲೇ ಹರೌ |
ಸುಸ್ಥಿತೇಽಭಿಮುಖೀಭಾವಂ ತದೇವಾವಾಹನಂ ಹರೇಃ || (ಪಾದ್ಮಸಂಹಿತಾ)

ಕಲಶಪಾತ್ರೆಯನ್ನು ನೀರುಗಳಿಂದ ತೊಳೆಯಬೇಕು. "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ದೀಪದಿಂದ ದೀಪಾಂತರವು ಹೊರಟಂತೆ ಹೃದಯದಲ್ಲಿರುವ ಬಿಂಬರೂಪಿಯಾದ ಶ್ರೀಹರಿಯನ್ನು ಆವಾಹಿಸಬೇಕು. ಆವಾಹನಕಾಲದಲ್ಲಿ ನಾಲ್ಕುಸಲ ಮೂಲಮಂತ್ರವನ್ನು ಹೇಳುತ್ತಾ "ಹೇ ಭಗವನ್ ಆಗಚ್ಛ" ಎಂದು ಹೇಳುತ್ತಾ ಆವಾಹಿಸಬೇಕು."

"ಪ್ರತಿಷ್ಠಾದಿಗಳನ್ನು ಮಾಡುವಾಗ ಹಿಂದೆ ಹೇಳಿದಂತೆ ಕಲಶಪೂಜೆಯನ್ನು ಮಾಡಿ ಪ್ರತಿಷ್ಠಾದಿಕರ್ಮಗಳಿಗೆ ಸಂಬಂಧಿಸಿದ ವಿಗ್ರಹಗಳ ತಲೆಯ ಮೇಲೆ ಕೂರ್ಚವನ್ನು ಇಟ್ಟು ಪೂರ್ವದಲ್ಲಿ ಹೇಳಿದಂತೆ ಆ ಪ್ರತಿಮೆಗಳಿಗೆ ಅಭಿಷೇಕವನ್ನು ಮಾಡಬೇಕು. ಅಭಿಷೇಕದ ಆರಂಭದಲ್ಲಿ ಸ್ವಲ್ಪ ಎದ್ದು ನಮಸ್ಕರಿಸಬೇಕು. ಆನಂತರದಲ್ಲಿ "ಭಗವಾನ್ ಸ್ವಾಗತಂ" ಎಂದು ಹೇಳಬೇಕು. ಹಿಂದೆ ಹೇಳಿದ "ಆವಾಹನೀ" ಮುಂತಾದ ಮುದ್ರೆಗಳನ್ನು ತೋರಿಸಬೇಕು. ವಿಶೇಷಪೂಜೆಯು ಮುಗಿದ ಕೂಡಲೇ ಶ್ರೀಹರಿಯನ್ನು ಪ್ರಾರ್ಥಿಸಬೇಕು. ಮೊದಲು ಸಂಮುಖಮುದ್ರೆಯನ್ನು ತೋರಿಸಿ ಸಂಮುಖನಾಗುವಂತೆ ಮಾಡಿಕೊಳ್ಳಬೇಕು. ಮೂಲಮಂತ್ರದಿಂದ ಅರ್ಘ್ಯವನ್ನು ಆಸನವನ್ನೂ ಸಮರ್ಪಿಸಬೇಕು."

ತನ್ನ ದೇಹದಲ್ಲಿ ಮಂತ್ರಗಳಿಗಾಗಿ ಮಾಡುವ ನ್ಯಾಸವನ್ನು ಮಾಡಿದಂತೆ ಪ್ರತಿಮೆಯಲ್ಲಿಯೂ ಮಾಡಬೇಕು. ಹಸ್ತನ್ಯಾಸವನ್ನು ಮಾಡಕೂಡದು. ಹಸ್ತನ್ಯಾಸಕ್ಕೆ ಬದಲಾಗಿ ಶಂಖಮುದ್ರೆಯನ್ನೂ ಚಕ್ರಮುದ್ರೆಯನ್ನೂ ತೋರಿಸಬೇಕು. ನೀರಿನಲ್ಲಿಯೂ, ಕುಬೇರನಲ್ಲಿಯೂ, ದೇವತೆಗಳಿಂದಲೂ, ಸಿದ್ಧರಿಂದಲೂ, ಋಷಿಗಳಿಂದಲೂ ಪ್ರತಿಷ್ಠಿತವಾದ ವಿಗ್ರಹದಲ್ಲಿಯೂ ಆವಾಹನೆಯನ್ನು ಮಾಡಕೂಡದು. ಮನುಷ್ಯರಿಂದ ನಿರ್ಮಿತವಾದ ದೇವಾಲಯದಲ್ಲಿರುವ ನಿಶ್ಚಲವಾದ ವಿಗ್ರಹದಲ್ಲಿಯೂ ಆವಾಹನೆಯನ್ನು ಮಾಡಕೂಡದು. ಮನುಷ್ಯರಿಂದ ನಿರ್ಮಿತವಾದ ದೇವಾಲಯದಲ್ಲಿರುವ ನಿಶ್ಚಲವಾದ ವಿಗ್ರಹದಲ್ಲಿಯೂ ಆವಾಹನೆಯನ್ನು ಮಾಡಕೂಡದು. ಹಿಂದೆ ಹೇಳಿರುವ ಆವಾಹನೆಯಿಲ್ಲದ ವಿಗ್ರಹಗಳಲ್ಲಿ ಸಂಮುಖಮುದ್ರೆಯಿಂದ ಸಂಮುಖನಾಗುಂತೆ ಮಾಡುವುದೇ ಆವಾಹನವೆನಿಸುತ್ತದೆ.

## ವಿಗ್ರಹಗಳಲ್ಲಿ ಮಂತ್ರನ್ಯಾಸಗಳು

ಯಥಾತ್ಮನಿ ತಥಾ ದೇವೇ ನ್ಯಾಸಕರ್ಮ ಸಮಾಚರೇತ್ | (ವಾಸಿಷ್ಠ ವಚನ)

"ತನ್ನ ದೇಹದಲ್ಲಿ ಮಾಡಿದಂತೆ ಶ್ರೀಹರಿಯ ಪ್ರತಿಮೆಯಲ್ಲಿಯೂ ಮಂತ್ರಗಳಿಗೆ ಸಂಬಂಧಿಸಿದ ನ್ಯಾಸಗಳನ್ನು ಮಾಡಬೇಕು."

ಹಸ್ತನ್ಯಾಸಾದೃತೆ ದೇವೇ ಮಂತ್ರನ್ಯಾಸಂ ಸಮಾಚರೇತ್ | (ಪರಮಪುರುಷ ಸಂಹಿತಾ)

"ಹಸ್ತನ್ಯಾಸಗಳನ್ನು ಬಿಟ್ಟು ಮಂತ್ರನ್ಯಾಸಗಳನ್ನು ದೇವರ ಪ್ರತಿಮೆಯಲ್ಲಿ ಮಾಡಬೇಕು."

ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ಕರೋ ಭವ |
ತ್ವಾಂ ಭಕ್ತ್ಯಾ ಪೂಜಯಾಮ್ಯದ್ಯ ಭೋಗೈರರ್ಘ್ಯಾದಿಭಿಃ ಕ್ರಮಾತ್ ||
ವಿಭೋ, ಸಕಲಲೋಕೇಶ, ಕೃಷ್ಣ ವಿಷ್ಣೋ, ಹರೇ, ಪ್ರಭೋ || (ಪಾದ್ಮಸಂಹಿತಾ)

"ಸಕಲಲೋಕವ್ಯಾಪ್ತನಾಗಿಯೂ ಎಲ್ಲಾ ಲೋಕಗಳಿಗೂ ಒಡೆಯನಾಗಿಯೂ ಇರುವ ಕೃಷ್ಣ, ವಿಷ್ಣೋ, ಹರೇ, ಪ್ರಭುವೇ, ಅರ್ಘ್ಯ ಮುಂತಾದ ಸುಖಸಾಧನಗಳಿಂದ ನಿನ್ನನ್ನು ಭಕ್ತಿಯಿಂದ ಪೂಜಿಸುವೆನು. ದೇವೇಶನೇ, ನೀನು ಸನ್ನಿಹಿತನಾಗು. ಎಲ್ಲಾ ಸಂಪತ್ತುಗಳನ್ನೂ ಕೊಡು" ಎಂದು ಪ್ರಾರ್ಥಿಸಬೇಕು.

### ಅರ್ಘ್ಯ ಮುಂತಾದ ಉಪಚಾರಗಳ ಕ್ರಮ

ಹಿಂದೆ ಕಲಶಪೂಜೆಯ ಕಾಲದಲ್ಲಿ ಅರ್ಘ್ಯಕ್ಕಾಗಿ ಒಂದು ಪಾತ್ರೆಯಲ್ಲಿ ಪ್ರತ್ಯೇಕವಾಗಿ ನೀರನ್ನು ತುಂಬಿಸಬೇಕು ಎಂದು ಹೇಳಿದ್ದೆವು. ಆ ಪಾತ್ರೆಯಲ್ಲಿರುವ ನೀರನ್ನು ಉದ್ಧರಣೆಯಿಂದ ತೆಗೆದುಕೊಳ್ಳಬೇಕು. ಆ ನೀರನ್ನು ಗಾಯತ್ರೀ ಮಂತ್ರವನ್ನಾಗಲೀ ನಾರಾಯಣಾಷ್ಟಾಕ್ಷರಮಂತ್ರವನ್ನಾಗಲೀ ಜಪಿಸುತ್ತಾ "ದೇವಸ್ಯಾರ್ಘ್ಯಂ ಲಕ್ಷ್ಮೀಹಸ್ತೇನ ಸಮರ್ಪಯಾಮಿ" ಎಂದು ಹೇಳುತ್ತಾ ಇನ್ನೊಂದು ಪಾತ್ರೆಯಲ್ಲಿ ಹಾಕಬೇಕು. ಹಿಂದೆ ಪ್ರೋಕ್ಷಣವನ್ನು ಮಾಡುವುದಕ್ಕಾಗಿ ಇನ್ನೊಂದು ಪಾತ್ರೆಯಲ್ಲಿಟ್ಟಿರುವ ನೀರಿನಿಂದ ಪುಷ್ಪವನ್ನು ತೊಳೆದು ಶ್ರೀಹರಿಗೆ ಪುಷ್ಪವನ್ನು ಸಮರ್ಪಿಸಬೇಕು. ಇದೇ ಕ್ರಮದಿಂದ "ಆಪಃ ಪುನಂತು" ಎಂಬ ಮಂತ್ರದಿಂದ ಶ್ರೀಹರಿಗೆ "ದೇವಸ್ಯಪಾದ್ಯಂ ಸರಸ್ವತೀಹಸ್ತೇನ ಸಮರ್ಪಯಾಮಿ" ಎಂದು ಹೇಳುತ್ತಾ ಪಾದ್ಯವನ್ನು ಸಮರ್ಪಿಸಬೇಕು. "ಶಂ ನೋ ದೇವೀರಭಿಷ್ಟಯೇ" ಎಂಬ ಮಂತ್ರದಿಂದ "ದೇವಸ್ಯಾಚಮನಂ ರತಿಹಸ್ತೇನ ಸಮರ್ಪಯಾಮಿ" ಎಂದು ಹೇಳುತ್ತಾ ಆಚಮನವನ್ನು ಸಮರ್ಪಿಸಬೇಕು.

ಅರ್ಘ್ಯ, ಪಾದ್ಯ ಆಚಮನೀಯ ಎಂಬ ಮೂರು ಉಪಚಾರಗಳನ್ನು ಮಾಡುವಾಗ ಅರ್ಘ್ಯವನ್ನು ತಲೆಯಲ್ಲಿ ಸಮರ್ಪಿಸಬೇಕೆಂದು ಕೆಲವರು ಹೇಳುತ್ತಾರೆ. ಆದರೆ ಹಾರೀತರು "ಅರ್ಘ್ಯಂ ಹಸ್ತೇ ದದ್ಯಾತ್" ಎಂದು ಹೇಳಿರುವುದರಿಂದ ಅರ್ಘ್ಯವನ್ನು ಕೈಗಳಲ್ಲಿಯೂ, ಪಾದ್ಯವನ್ನು ಕಾಲುಗಳಲ್ಲಿಯೂ, ಆಚಮನೀಯವನ್ನು ಮುಖದಲ್ಲಿಯೂ ಸಮರ್ಪಿಸುವುದು ಅತ್ಯಂತ ಯುಕ್ತವಾಗಿದೆ. ಅರ್ಘ್ಯ, ಪಾದ್ಯ ಮುಂತಾದ ಉಪಚಾರಗಳಿಂದ ಪೂಜಿಸುವಾಗ ಅರ್ಘ್ಯಾದಿಗಳಿಗಾಗಿ ಪ್ರತ್ಯೇಕವಾಗಿ ಇಟ್ಟಿರುವ ನೀರನ್ನು ಉದ್ಧರಣೆಯಿಂದ ತೆಗೆದು ಅರ್ಘ್ಯ ಮುಂತಾದವುಗಳನ್ನು ಸಮರ್ಪಿಸಿದ ಮೇಲೆ ಆ ಉದ್ಧರಣೆಯನ್ನು ಪ್ರೋಕ್ಷಣಕ್ಕಾಗಿ ಇಟ್ಟಿರುವ ನೀರಿನಿಂದ ತೊಳೆದು ಮುಂದಿನ ಉಪಚಾರಗಳನ್ನು ಮಾಡಬೇಕು.

ಅರ್ಘ್ಯ ಮುಂತಾದವುಗಳಿಗಾಗಿ ಪ್ರತ್ಯೇಕವಾದ ಪಾತ್ರೆಯಲ್ಲಿ ನೀರನ್ನು ಇಟ್ಟುಕೊಳ್ಳದಿದ್ದರೆ ಹಿಂದೆ ಶಂಖದಲ್ಲಿ ನೀರನ್ನು ತುಂಬಿಸಿ ಆ ನೀರಿನಿಂದ ಅರ್ಘ್ಯ ಮುಂತಾದ ಉಪಚಾರಗಳನ್ನು ಮಾಡಬೇಕು. ಅನಂತರದಲ್ಲಿ ಶಂಖವನ್ನು ತೊಳೆದು ಆ ಶಂಖದಲ್ಲಿ ನೀರನ್ನು ತುಂಬಿಸಿ ಮುಂದಿನ ಉಪಚಾರಗಳನ್ನು ಮಾಡಬೇಕು. ಹೀಗೆ ಹಿಂದೆ ಹೇಳಿದಂತೆ ಅರ್ಘ್ಯ, ಪಾದ್ಯ, ಆಚಮನೀಯಗಳನ್ನು ಸಮರ್ಪಿಸಿದ ಮೇಲೆ ಮಧುಪರ್ಕವನ್ನು ಮಾಡಬೇಕು.

### ಮಧುಪರ್ಕ ಕ್ರಮ

ಮಧುಪರ್ಕಂ ತತೋ ದದ್ಯಾದರ್ಘ್ಯಾಚಮನಪೂರ್ವಕಮ್ |
ಪುನರಾಚಮನಂ ದತ್ವಾ......|| (ವಾಸಿಷ್ಠ ವಚನ)

ಅರ್ಘ್ಯ, ಪಾದ್ಯ, ಆಚಮನೀಯ ಎಂಬ ಮೂರು ಉಪಚಾರಗಳನ್ನು ಸಮರ್ಪಿಸಿದ ಮೇಲೆ ಮಧುಪರ್ಕಕ್ಕೆ ಅಂಗವಾಗಿ ಇನ್ನೊಮ್ಮೆ ಆಚಮನೀಯವನ್ನು ಸಮರ್ಪಿಸಬೇಕು. ಮೇಲೆ "ಮಧುಪರ್ಕಂ ಬ್ರಹ್ಮಹಸ್ತೇನ ಸಮರ್ಪಯಾಮಿ" ಎಂದು ಹೇಳುತ್ತಾ ಮಧುಪರ್ಕವನ್ನು ಸಮರ್ಪಿಸಬೇಕು.

ಮಧುಪರ್ಕಂ ತತೋ ದದ್ಯಾದರ್ಘ್ಯತ್ರಯಸಮನ್ವಿತಮ್ |
ದೇವಾಯ ದಕ್ಷಿಣೇ ಪಾಣೌ ತ್ರಿವಾರಂ ಮೂಲಮಂತ್ರತಃ ||
ಪುನರಾಚಮನಂ ದತ್ವಾ ನಿರ್ಮಾಲ್ಯಮಪನೀಯ ಚ || (ತಂತ್ರತಿಲಕವಾಕ್ಯ)

ಒಂದು ಉಪಚಾರವು ಮುಗಿದು ಇನ್ನೊಂದು ಉಪಚಾರವನ್ನು ಆರಂಭಿಸುವಾಗ ಆಗಾಗ್ಗೆ ಆಚಮನೀಯವನ್ನು ಸಮರ್ಪಿಸಬೇಕು. "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರವನ್ನು ಜಪಿಸುತ್ತಾ ಶ್ರೀಹರಿಯ ಬಲಗೈಯಲ್ಲಿ ಮೂರು ಅರ್ಘ್ಯಗಳನ್ನು ಸಮರ್ಪಿಸುತ್ತಾ ಮೇಲ್ಕಂಡ ಮಂತ್ರವನ್ನು ಹೇಳುತ್ತಾ ಮದುಪರ್ಕವನ್ನು ಸಮರ್ಪಿಸಬೇಕು. ಆ ಮೇಲೆ ನಿರ್ಮಾಲ್ಯವನ್ನು ವಿಸರ್ಜನೆ ಮಾಡಬೇಕು.

## ಸ್ನಾನ ಕ್ರಮ

"ಸ್ನಾನಗೃಹಮಾಗಚ್ಛ" ಎಂದು ಹೇಳುತ್ತಾ "ಸ್ನಾನಕ್ಕಾಗಿ ಸ್ನಾನಗೃಹಕ್ಕೆ ಬಾ" ಎಂದು ಪ್ರಾರ್ಥಿಸಬೇಕು, ಶ್ರೀಹರಿಯು ಏಳುವಾಗ "ಇಂದ ವಿಷ್ಣುರ್ವಿಚಕ್ರಮೇ" ಎಂಬ ಮಂತ್ರದಿಂದ ಪಾದುಕೆಗಳನ್ನು ಸಮರ್ಪಿಸ ಬೇಕು. "ಉತ್ತಿಷ್ಠ ಬ್ರಹ್ಮಣಸ್ಪತೇ" ಎಂಬ ಮಂತ್ರದಿಂದ ಶ್ರೀಹರಿಯನ್ನು ಎಬ್ಬಿಸಿ ನಿಲ್ಲಿಸಬೇಕು. "ಭದ್ರಂ ಕರ್ಣೇಭಿಃ"ಎಂಬ ಮಂತ್ರವನ್ನು ಹೇಳುತ್ತಾ "ಸ್ನಾನಪೀಠೇ ಉಪವಿಶ" ಎಂದು ವಿಜ್ಞಾಪಿಸಿ ಕೊಳ್ಳಬೇಕು. ಇದು ಪಂಚರಾತ್ರದಲ್ಲಿ ಹೇಳಿದ ಕ್ರಮವಾಗುತ್ತದೆ.

ಸ್ನಾನಾರ್ಥಂ ಪಾದಪೀಠಂ ತು ದದ್ಯಾಚ್ಛುಭಜಲಂ ತಥಾ |
ತಸ್ಮಿನ್ನಿವೇಶ್ಯ ದೇವೇಶಂ ದಂತಕಾಷ್ಠಂ ಸಮರ್ಪಯೇತ್ || (ವಾಸಿಷ್ಠ ವಚನ)

"ಸ್ನಾನಕ್ಕಾಗಿ ಶ್ರೀಹರಿಗೆ ಪಾದಪೀಠವನ್ನು ಸಮರ್ಪಿಸಬೇಕು. ಪಾದಪೀಠಕ್ಕೆ ಬದಲಾಗಿ ಶುದ್ಧವಾದ ನೀರನ್ನು ಉದ್ಧರಣೆಯಿಂದ ಸಮರ್ಪಿಸಬೇಕು. ಪಾದಪೀಠದಲ್ಲಿ ನಿಲ್ಲಿಸಿ ಹಲ್ಲುಗಳನ್ನು ತೊಳೆಯುವುದಕ್ಕಾಗಿ ದಂತಕಾಷ್ಠವನ್ನು ಸಮರ್ಪಿಸಬೇಕು. ಇಂದು ವಾಸಿಷ್ಠವಚನದಲ್ಲಿ ಹೇಳಿದ ಕ್ರಮ.

ದಂತಧಾವನಗಂಡೂಷಂ ದರ್ಪಣಾಲೋಕನಂ ತಥಾ |
ನಿವೇಶ್ಯಾಭ್ಯಂಜನಂ ಕುರ್ಯಾದ್ಗಂಧತೋಯೇನ ವೈಷ್ಣವಃ || (ಹಾರೀತರ ವಚನ)

ವಿಷ್ಣುಭಕ್ತನು ಶ್ರೀಹರಿಗೆ ದಂತಕಾಷ್ಠಗಳನ್ನು ಸಮರ್ಪಿಸಬೇಕು. ಆ ದಂತಕಾಷ್ಠಗಳಿಂದ ಹಲ್ಲುಗಳನ್ನು ಉಜ್ಜಿಕೊಂಡಂತೆ ಭಾವಿಸಬೇಕು. ಆನಂತರದಲ್ಲಿ ಬಾಯಿಯನ್ನು ಮುಕ್ಕಳಿಸಿ ಗಂಡೂಷಜಲವನ್ನು ಉಗಳಿದಂತೆ ಭಾವಿಸಬೇಕು. ಕನ್ನಡಿಯನ್ನು ಶ್ರೀಹರಿಗೆ ತೋರಿಸಬೇಕು. ಉತ್ತಮವಾದ ಆಸನದಲ್ಲಿ ಕುಳ್ಳಿರಿಸಿ ಗಂಧಮಿಶ್ರಿತವಾದ ಜಲದಿಂದ ಸ್ನಾನವನ್ನು ಮಾಡಿಸಬೇಕು. "ತದ್ವಿಷ್ಣೋಃ ಪರಮಂ ಪದಂ" ಎಂಬ ಮಂತ್ರದಿಂದ ಶ್ರೀಹರಿಗೆ ದಂತಕಾಷ್ಠವನ್ನು ಸಮರ್ಪಿಸಬೇಕು. "ಭೋಃ ವಾಮದೇವ, ವಾರುಣೇಹಸ್ತೇನ ಅಭ್ಯಂಗಸ್ನಾನಂ ಸಮರ್ಪಯಾಮಿ" ಎಂದು ಹೇಳುತ್ತಾ ಅಭ್ಯಂಗಸ್ನಾನವನ್ನು ಮಾಡಿಸಬೇಕು. ಅಭ್ಯಂಗಸ್ನಾನವನ್ನು ಮಾಡಿಸುವುದೇ "ಉದ್ವರ್ತನ" ಅಂದರೆ ಶ್ರೀಹರಿಯ ಮೈಯನ್ನು ತೊಳೆಯುವುದು ಎಂದು ಪಂಚರಾತ್ರಾಗಮದಲ್ಲಿ ಹೇಳಲ್ಪಟ್ಟಿದೆ.

## ಪಂಚಾಮೃತಾಭಿಷೇಕ

ಏಭಿಃ ಪಂಚಾಮೃತೈಃ ಸ್ನಾಪ್ಯ ಚಂದನಂ ಚ ನಿವೇದಯೇತ್ || (ಹಾರೀತ ವಚನ)

ಹಿಂದೆ ದನದ ಹಾಲು, ದನದ ಮೊಸರು, ದನದ ತುಪ್ಪ, ಜೇನು ತುಪ್ಪ, ಕಬ್ಬಿನ ಹಾಲು ಇವುಗಳು ಪಂಚಾಮೃತಗಳೆಂದೂ ಇವುಗಳಿಂದ ಮಾಡುವ ಅಭಿಷೇಕವು ಪಂಚಾಮೃತಭಿಷೇಕವೆಂದೂ ವಿಸ್ತಾರವಾಗಿ ಹೇಳಿದ್ದೇವೆ. ಅವುಗಳ ಪರಿಮಾಣವನ್ನೂ ಕ್ರಮವನ್ನೂ ತಿಳಿಸಿದ್ದೇವೆ. ಈ ಐದು ಅಮೃತಗಳಿಂದ ಅಭಿಷೇಕವನ್ನು ಮಾಡಿದ ಮೇಲೆ ಗಂಧವನ್ನು ಸಮರ್ಪಿಸಬೇಕು.

## ಪಂಚಾಮೃತಾಭಿಷೇಕದ ಫಲ

ಕ್ಷೀರಾಬ್ಧಿತಟಮಾಸಾದ್ಯ ವಸೇತ್ಕಲ್ಪಂ ಸ ಪುಣ್ಯವಾನ್ |

ಹಾಲಿನಿಂದ ಶ್ರೀಹರಿಯ ಅಭಿಷೇಕವನ್ನು ಮಾಡಿದವನು ಕ್ಷೀರಸಮುದ್ರದ ತೀರವನ್ನು ಹೊಂದಿದವನಾಗಿ ಕಲ್ಪದವರೆಗೆ ವಾಸಿಸುವನು.

## ಪಂಚಾಮೃತಾಭಿಷೇಕದ ಕ್ರಮ

ಹಿಂದೆ ಶಂಖಪೂಜೆಯನ್ನು ಮಾಡಬೇಕೆಂದೂ ಆ ಶಂಖದಲ್ಲಿ ಜಲವನ್ನು ತುಂಬಿಸಿ ನಾರಾಯಣಾಷ್ಟಾಕ್ಷರಮಂತ್ರವನ್ನು ಯಥಾಶಕ್ತಿ ಜಪಿಸಬೇಕೆಂದೂ ಹೇಳಿರುವೆವು. ಆ ಶಂಖದಲ್ಲಿರುವ ಜಲದಿಂದ ಶ್ರೀಹರಿಯನ್ನು ಸ್ನಾನಮಾಡಿಸಬೇಕು. ಅದರಂತೆ ಹಿಂದೆ ದನದ ಹಾಲು ಮುಂತಾದ ಪಂಚಾಮೃತದ್ರವ್ಯಗಳನ್ನು ಪೂಜಿಸಬೇಕೆಂದೂ ಹೇಳಿರುವೆವು. ಪೂಜಿಸಲ್ಪಟ್ಟ ದನದ ಹಾಲನ್ನು ಶಂಖದಲ್ಲಿ ತುಂಬಿಸಬೇಕು. "ಆಪ್ಯಾಯಸ್ವ" ಎಂಬ ಮಂತ್ರದಿಂದ ಶ್ರೀಹರಿಯ ಶಿರಸ್ಸಿನಲ್ಲಿ ಅಭಿಷೇಕವನ್ನು ಮಾಡಬೇಕು. ಅನಂತರದಲ್ಲಿ ದನದ ಮೊಸರು, ದನದ ತುಪ್ಪ, ಜೇನುತುಪ್ಪ, ಕಬ್ಬಿನ ಹಾಲು ಮುಂತಾದವುಗಳಿಗೆ ಹೇಳಿರುವ ಮಂತ್ರಗಳಿಂದ ಕ್ರಮವಾಗಿ ದನದ ಮೊಸರು ಮುಂತಾದವುಗಳನ್ನು ಶ್ರೀಹರಿಯ ಶಿರಸ್ಸಿನಲ್ಲಿ ಅಭಿಷೇಕ ಮಾಡಬೇಕು. ಒಂದೊಂದು ಪದಾರ್ಥಗಳಿಂದ ಅಭಿಷೇಕವು ಮುಗಿದ ಕೂಡಲೇ ಗಂಧೋದಕ ಮತ್ತು ಶುದ್ಧೋದಕಗಳಿಂದ ಅಭಿಷೇಕವನ್ನು ಮಾಡಿ ವಸ್ತ್ರದಿಂದ ಆರಂಭಿಸಿ ಆರತಿಯವರೆಗೆ ಎಲ್ಲಾ ಉಪಚಾರಗಳನ್ನೂ ಮಾಡಬೇಕು. ಹೀಗೆ ಶಂಖದಲ್ಲಿಯೇ ದನದ ಹಾಲು ಮುಂತಾದವುಗಳನ್ನು ತುಂಬಿಸಿ ಎಲ್ಲಾ ಅಭಿಷೇಕಗಳನ್ನೂ ಮಾಡಬೇಕು.

ಉದ್ವರ್ತನಂ ಸುಗಂಧೇನ ಕೇಶಸಂಶೋಧನಂ ತಥಾ |
ಸುಖೋಷ್ಣಿತಜಲೇ ಸ್ನಾಪ್ಯ ಪುನರುದ್ವರ್ತನಂ ಚರೇತ್ |
ಕುಂಕುಮೇನ ಹರಿದ್ರೇಣ ಚಂದನೇನ ಸುಗಂಧಿನಾ ||
ಉದ್ವರ್ತ್ಯಗಂಧತೋಯೇನ ಸ್ನಾಪಯೇತ ಪುನಸ್ತತಃ || (ಹಾರೀತರ ವಚನ)

ಅತ್ಯಂತಪರಿಮಳವುಳ್ಳ ಗಂಧದಿಂದ ಶ್ರೀಹರಿಯ ಅಂಗವನ್ನು ಉಜ್ಜಬೇಕು. ತಲೆಯ ಕೂದಲುಗಳನ್ನು ತೊಳೆಯಬೇಕು ತುಂಬಾ ಬಿಸಿಯಿಲ್ಲದಿರುವ ಮತ್ತು ಸುಖಕರವಾಗಿರುವ ಬಿಸಿನೀರಿನಿಂದ ಪುನಃ ಮೈಯನ್ನು ಉಜ್ಜುತ್ತಾ ಸ್ನಾನವನ್ನು ಮಾಡಿಸಬೇಕು. ಕೇಸರೀ, ಅರಶಿನ, ಸುಗಂಧವಾಗಿರುವ ಗಂಧ ಇವುಗಳಿಂದ ಉಜ್ಜುತ್ತಾ ಗಂಧಜಲದಿಂದ ಸ್ನಾನವನ್ನು ಮಾಡಿಸಬೇಕು.

## ಕ್ಷೀರ ಮುಂತಾದವುಗಳಿಂದ ಸ್ನಾನವನ್ನು ಮಾಡಿಸಿದ ಫಲ

ಕಪಿಲಾಕ್ಷೀರಮಾದಾಯ ಶಂಖೇ ಕೃತ್ವಾ ಜನಾರ್ದನಮ್ |
ಯಜ್ಞಾಯುತಸಹಸ್ರಸ್ಯ ಸ್ನಾಪಯಿತ್ವಾ ಲಭೇತ್ಫಲಮ್ ||
ಕ್ಷೀರಸ್ನಾನಂ ಪ್ರಕುರ್ವಂತಿ ಯೇ ನರಾಃ ಕೃಷ್ಣಮೂರ್ಧನಿ |
ಜ್ಞಾತ್ವಾಽಶ್ವಮೇಧಕಂ ಪುಣ್ಯಂ ಬಿಂದುನಾ ಬಿಂದುನಾ ಸ್ಮೃತಮ್ ||
ಕ್ಷೀರಾದ್ದಶಗುಣಂ ದಧ್ನೋಽಘೃತಂ ಚೈವ ಶತೋತ್ತರಮ್ |
ಘೃತಾಚ್ಛತಗುಣಂ ಕ್ಷೌದ್ರಂ ಸ್ಯಾದೂನ್ಯಪಿ ತಥೋತ್ತರಮ್ ||
ಪುಷ್ಪೋದಕಂ ಚ ರತ್ನೋದಂ ವರ್ತತೇ ಚ ತಥೋತ್ತರಮ್ |
ಮಂತ್ರೋದಕಂ ಚ ಗಂಧೋದಂ ತಥೈವ ಋಷಿಸತ್ತಮ ||

ಇಕ್ಷೂರಸಂ ಚೂತರಸಂ ದಶವಾಜಿಮಖೈಃ ಸಮಮ್ |
ತಥೈವ ತೀರ್ಥನೀರಂ ತು ಫಲಂ ಯಚ್ಛೇತ ಭೂಮಿಪ || (ಪಾದ್ಮವಚನ)

ಕಪಿಲವರ್ಣದಿಂದ ಯುಕ್ತವಾದ ದನವು ಕಪಿಲಾ ಎಂದೆನಿಸುತ್ತದೆ. ಕಪಿಲಾಗೋವಿನ ಹಾಲವನ್ನು ಶಂಖದಲ್ಲಿ ಇಟ್ಟುಕೊಂಡು ಶ್ರೀಹರಿಗೆ ಅಭಿಷೇಕವನ್ನು ಮಾಡುವವನು ಒಂದು ಕೋಟಿಯಜ್ಞಗಳ ಫಲವನ್ನು ಪಡೆಯುವನು. ಶ್ರೀಕೃಷ್ಣನ ತಲೆಯಲ್ಲಿ ಕ್ಷೀರಾಭಿಷೇಕವನ್ನು ಮಾಡುವವನು ಒಂದೊಂದು ಹಾಲಿನ ಬಿಂದುಗಳಿಗೂ ಅಶ್ವಮೇಧಯಾಗದ ಫಲವನ್ನು ಪಡೆಯುವನು. ಹಾಲಿನ ಅಭಿಷೇಕದಿಂದ ಬರುವ ಪುಣ್ಯಕ್ಕಿಂತ ಹತ್ತರಷ್ಟು ಅಧಿಕವಾದ ಪುಣ್ಯವನ್ನು ಮೊಸರಿನ ಅಭಿಷೇಕದಿಂದಲೂ ನೂರರಷ್ಟು ಅಧಿಕವಾದ ಪುಣ್ಯವನ್ನು ತುಪ್ಪದ ಅಭಿಷೇಕದಿಂದಲೂ ತುಪ್ಪದ ಅಭಿಷೇಕದಿಂದ ಬರುವ ಪುಣ್ಯಕ್ಕಿಂತ ನೂರರಷ್ಟು ಅಧಿಕವಾದ ಪುಣ್ಯವನ್ನು ಜೇನುತುಪ್ಪದ ಅಭಿಷೇಕದಿಂದಲೂ ಹೆಚ್ಚು ಹೆಚ್ಚು ರುಚಿಯಾದ ವಸ್ತುಗಳ ಅಭಿಷೇಕದಿಂದ ಹೆಚ್ಚು ಹೆಚ್ಚು ಪುಣ್ಯಗಳನ್ನೂ ಪಡೆಯುವನು. ಪುಷ್ಪಗಳಿಂದ ಮಿಶ್ರಿತವಾದ ನೀರಿನ ಅಭಿಷೇಕ, ರತ್ನಮಿಶ್ರಿತವಾದ ನೀರಿನಿಂದ ಅಭಿಷೇಕಗಳು ಅಧಿಕ ಅಧಿಕವಾದ ಪುಣ್ಯಗಳನ್ನು ಕೊಡುತ್ತವೆ. ಹಾಗೆಯೇ ಮಂತ್ರವನ್ನು ಜಪಿಸುತ್ತಾ ಮಾಡುತ್ತಿರುವ ಅಭಿಷೇಕ ಮತ್ತು ಗಂಧಜಲದಿಂದ ಮಾಡುವ ಅಭಿಷೇಕಗಳು ಅಧಿಕ ಅಧಿಕವಾದ ಫಲಗಳನ್ನು ಕೊಡುತ್ತವೆ. ಕಬ್ಬಿನ ಹಾಲು, ಮಾವಿನ ಹಣ್ಣಿನ ರಸಗಳಿಂದ ಮಾಡುವ ಅಭಿಷೇಕಗಳು ಹಾಗೆಯೇ ಅಧಿಕ ಅಧಿಕವಾದ ಫಲಗಳನ್ನು ಕೊಡುತ್ತವೆ. ಮೇಲ್ಕಂಡ ಯಾವ ವಸ್ತುಗಳೂ ಸಿಗದಿದ್ದರೆ ಗಂಗೆ ಮುಂತಾದ ತೀರ್ಥಗಳ ಜಲದಿಂದ ಮಾಡುವ ಅಭಿಷೇಕಗಳು ಮಹಾಪುಣ್ಯವನ್ನು ಕೊಡುತ್ತವೆ.

ತುಲಸೀಮಂಜರೀಯುಕ್ತಂ ಸುಚಂದನವಿಮಿಶ್ರಿತಮ್ |
ಸ್ನಾನಾರ್ಥಮುದಕಂ ದತ್ವಾ ಸರ್ವತೀರ್ಥಫಲಂ ಲಭೇತ್ ||
ಕ್ಷೀರಸ್ನಾನಂ ತು ಯಃ ಕುರ್ಯಾದೇಕಾದಶ್ಯಾಂ ಸಮಾಹಿತಃ |
ದ್ವಾದಶ್ಯಾಮಥ ವಾ ವಿಷ್ಣೋರ್ಮಹಾಪಾತಕನಾಶನಮ್ ||
ಪೌರ್ಣಮಾಸ್ಯಾಮಮಾವಾಸ್ಯಾಮಯನೇ ವಿಷುವೇ ತಥಾ |
ಕ್ಷೀರಾದಿಸ್ನಾಪನಂ ವಿಷ್ಣೋಃ ಪ್ರೀತಯೆ ಪಿತೃಕಾರಣಾತ್ ||
ಕಲ್ಪಕೋಟಿಂ ದಿವಂ ಪ್ರಾಪ್ಯ ಮುಕ್ತಿಂ ಯಾತಿ ಪಿತಾಮಹಃ ||

ತುಳಸಿಯ ಪುಷ್ಪಗಳಿಗೆ ತುಳಸೀಮಂಜರೀ ಎಂದು ಹೆಸರು. ತುಳಸೀಮಂಜರಿಯಿಂದಲೂ ಗಂಧದಿಂದಲೂ ಮಿಶ್ರಿತವಾದ ನೀರನ್ನು ಶ್ರೀಹರಿಯ ಸ್ನಾನಕ್ಕಾಗಿ ಯಾರು ಕೊಡುವನೋ ಅವನು ಸರ್ವತೀರ್ಥಗಳಲ್ಲಿ ಸ್ನಾನವನ್ನು ಮಾಡಿಸಿದ ಫಲವನ್ನು ಪಡೆಯುವನು. ಏಕಾದಶೀ ದಿನ ಅಥವಾ ದ್ವಾದಶೀದಿನಗಳಲ್ಲಿ ವಿಷ್ಣುವಿಗೆ ಅಭಿಷೇಕಕ್ಕಾಗಿ ಹಾಲನ್ನು ಸಮರ್ಪಿಸುವವನು ತನ್ನ ಮಹಾಪಾಪಗಳನ್ನೆಲ್ಲಾ ಕಳೆದುಕೊಳ್ಳುವನು. ಹುಣ್ಣಿಮೆ, ಅಮಾವಾಸ್ಯಾ, ದಕ್ಷಿಣಾಯನ ಮತ್ತು ಉತ್ತರಾಯಣ ಪುಣ್ಯಕಾಲಗಳು ಮತ್ತು ಮೇಷಸಂಕ್ರಮಣಕಾಲಗಳಲ್ಲಿ ಪಿತೃಗಳಿಗೆ ತೃಪ್ತಿಯು ಏರ್ಪಡುವುದಕ್ಕಾಗಿ ಶ್ರೀಹರಿಯ ಪ್ರೀತಿಗಾಗಿ ಕ್ಷೀರಾಭಿಷೇಕ ಮುಂತಾದವುಗಳನ್ನು ಮಾಡಿಸುವವನ ಅಜ್ಜನು ಕೋಟಿಕಲ್ಪಗಳವರೆಗೆ ಸ್ವರ್ಗದಲ್ಲಿ ವಾಸಿಸುತ್ತಿದ್ದು ಕೊನೆಗೆ ಮುಕ್ತಿಯನ್ನು ಹೊಂದುವನು.

### ಅಭಿಷೇಕವನ್ನು ಶಂಖದಿಂದಲೇ ಮಾಡಬೇಕು

ಶಂಖಸ್ಥಿತೇನ ತೋಯೇನ ಸ್ನಾಪಯೇದ್ಯದಿ ಕೇಶವಮ್ |
ಕಪಿಲಾದಶದಾನಸ್ಯ ಫಲಂ ಪ್ರಾಪ್ನೋತಿ ಮಾನವಃ ||

ಶಂಖೇ ತೀರ್ಥೋದಕಂ ದತ್ವಾ ಯಃ ಸ್ನಾಪಯತಿ ಮಾನವಃ |
ದ್ವಾದಶ್ಯಾಂ ಬಿಂದುಮಾತ್ರಂ ಚ ಕುಲಾನಾಂ ತಾರಯೇಚ್ಛತಮ್ ||
ಶಂಖೇ ಕೃತ್ವಾ ತು ಪಾನೀಯಂ ಸಾಕ್ಷತಂ ಕುಸುಮಾನ್ವಿತಮ್ |
ಸ್ನಾಪಯೇದ್ದೇವದೇವೇಶಂ ಲಭೇತ್ಸಾಸಂಗಿಕಂ ಫಲಮ್ ||
ಸತಿಲಂ ಕುಸುಮೋಪೇತಂ ಶಂಖತೋಯಂ ಸಚಂದನಮ್ |
ಕೃತ್ವಾ ತು ಸ್ನಾಪಯೇದ್ದೇವಂ ಮಮ ಲೋಕೇ ವಸೇಚ್ಚಿರಮ್ ||
ಸುವರ್ಣರತ್ನಪೂರ್ಣಾಂಬು ಶಂಖೇ ಕೃತ್ವಾ ತು ಪುಣ್ಯವಾನ್ |
ಸುವರ್ಣಪೂರ್ಣಪೃಥಿವೀಂ ಸಂಕಲ್ಪೋದಕಪೂರ್ವಕಮ್ ||
ತೇನ ದತ್ತಂ ಭವೇತ್ಸಮ್ಯಕ್ಸುಪಾತ್ರಾಯ ಸುಪರ್ವಣಿ |
ನದ್ಯಾ ತಟಾಕಜಂ ವಾಪಿ ವಾಪೀಕೂಪಹ್ರದಾದಿಜಮ್ ||
ಶಂಖಸ್ಥಿತಂ ತು ಗಾಂಗೇಯಂ ತೋಯಮಾಹ ಜನಾರ್ದನಃ |
ಸ್ನಾಪನಂ ಕೃಷ್ಣದೇವಸ್ಯ ಯಃ ಕರೋತಿ ಸ್ವಶಕ್ತಿತಃ ||
ಸಕಾಮಃ ಫಲಮಾಪ್ನೋತಿ ನಿಷ್ಕಾಮೋ ಮೋಕ್ಷಮಾಪ್ನುಯಾತ್ |
ಸ್ನಾನಕಾಲೇ ತು ಕೃಷ್ಣಸ್ಯ ಅಗುರುಂ ದಾಹಯೇತ್ತು ಯಃ ||
ಪ್ರವಿಷ್ಟೇ ನಾಸಿಕಾಂ ಗಂಧೇ ಪಾಪಮಜ್ಜಾ ಪುನರ್ವ್ರಜೇತ್ | (ಪಾದ್ಮಪುರಾಣ ವಚನ)

ಶಂಖದಲ್ಲಿ ತುಂಬಿಸಿದ ನೀರಿನಿಂದ ಕೇಶವನ್ನು ಸ್ನಾನ ಮಾಡಿಸುವವನು ಹತ್ತು ಕಪಿಲಾಗೋವಿನ ದಾನದ ಫಲವನ್ನು ಪಡೆಯುವನು. ಶಂಖದಲ್ಲಿ ಗಂಗಾ ಮುಂತಾದ ತೀರ್ಥಗಳಲ್ಲಿರುವ ನೀರನ್ನು ತುಂಬಿಸಿ ದ್ವಾದಶೀದಿನದಲ್ಲಿ ಶ್ರೀಹರಿಗೆ ಅಭಿಷೇಕವನ್ನು ಮಾಡುವವನು ಒಂದೊಂದು ಬಿಂದುವಿಗೂ ತನ್ನ ಕುಲದಲ್ಲಿ ಹುಟ್ಟಿರುವ ನೂರು ಜನರನ್ನು ನರಕದಿಂದ ದಾಟಿಸುವನು. ಶಂಖದಲ್ಲಿ ಬರೇ ನೀರನ್ನು ತುಂಬಿಸಿ ಮಂತ್ರಾಕ್ಷತೆ, ಪುಷ್ಪಗಳೊಡನೆ ಅಭಿಷೇಕವನ್ನು ಮಾಡುವವನು ಅಭಿಲಷಿತವಾದ ಎಲ್ಲಾ ಫಲಗಳನ್ನೂ ಪಡೆಯುವನು. ಎಳ್ಳು, ಪುಷ್ಪ, ಗಂಧಗಳಿಂದ ಸಹಿತವಾದ ಜಲವನ್ನು ಶ್ರೀಹರಿಗೆ ಅಭಿಷೇಕವನ್ನು ಮಾಡುವವನು ನನ್ನ ಲೋಕದಲ್ಲಿ ಬಹುಕಾಲದವರೆಗೆ ವಾಸಿಸುವನು ಎಂದು ಶ್ರೀಹರಿಯು ಹೇಳಿರುವನು.

ಬಂಗಾರದಿಂದಲೂ ರತ್ನಗಳಿಂದಲೂ ಮಿಶ್ರಿತವಾದ ನೀರನ್ನು ಶಂಖದಲ್ಲಿ ತುಂಬಿಸಿ ಶ್ರೀಹರಿಗೆ ಅಭಿಷೇಕವನ್ನು ಮಾಡುವವನು ಆ ಪುಣ್ಯದಿಂದ ಭಂಗಾರದಿಂದ ತುಂಬಿದ ಭೂಮಿಯನ್ನು ಸಂಕಲ್ಪಪೂರ್ವಕವಾಗಿ ಸತ್ಪಾತ್ರನಾದ ಬ್ರಾಹ್ಮಣನಿಗೆ ಮಹಾಪರ್ವಕಾಲದಲ್ಲಿ ದಾನ ಮಾಡಿದ ಫಲವನ್ನು ಪಡೆಯುವನು.

ನದೀ, ಕೆರೆ, ಭಾವಿ, ಹಳ್ಳ, ಮಡು ಮುಂತಾದವುಗಳಲ್ಲಿರುವ ನೀರುಗಳು ಶಂಖದಲ್ಲಿ ಬಂದು ಸೇರಿದರೆ ಗಂಗಾಜಲಕ್ಕೆ ಸಮವಾಗುತ್ತವೆ. ಎಂದು ಜನಾರ್ದನನು ಹೇಳಿರುವನು. ಶಂಖದಲ್ಲಿ ತುಂಬಿಸಿದ ನೀರುಗಳಿಂದ ಶಕ್ತ್ಯನುಸಾರವಾಗಿ ಶ್ರೀಹರಿಗೆ ಅಭಿಷೇಕವನ್ನು ಮಾಡುವವನು ಫಲವನ್ನು ಅಪೇಕ್ಷಿಸಿದರೆ ತಾನು ಅಪೇಕ್ಷಿಸಿದ ಫಲವನ್ನೂ ಫಲಾಪೇಕ್ಷೆಯಿಲ್ಲದವನಾಗಿದ್ದರೆ ಮುಕ್ತಿಯನ್ನೂ ಪಡೆಯುವನು.

ಶ್ರೀಹರಿಗೆ ಅಭಿಷೇಕವನ್ನು ಮಾಡುತ್ತಿರುವಾಗ ಅಗುರು ಮುಂತಾದ ಸುಗಂಧದ್ರವ್ಯಗಳನ್ನು ಸುಟ್ಟರೆ ಅವುಗಳ ಪರಿಮಳವು ಮೂಗಿನಲ್ಲಿ ಪ್ರವೇಶಿಸಿದರೆ ಪಾಪ ಎಂಬ ಮಜ್ಜೆಯು ದೂರವಾಗುತ್ತದೆ.

## ಶುದ್ಧೋದಕ ಸ್ನಾನ

ಪೂರ್ವವನ್ಮುಷ್ಟಿಮುದ್ರಾ ತು ಅಂಗುಷ್ಠೇನಾಭಿವೇಷ್ಟಿತಾ |
ಸ್ನಾನಮುದ್ರೇತಿ ವಿಜ್ಞೇಯಾ ಸೈವ ಮುಕ್ತಕನಿಷ್ಠಿಕಾ ||
ಗಂಧಮುದ್ರೇತಿ ವಿಜ್ಞೇಯಾ ವಿಮುಕ್ತಾನಾಮಿಕಾ ಚ ಸಾ |
ವಸ್ತ್ರಮುದ್ರೇತಿ ವಿಜ್ಞೇಯಾ........|| (ಕಪಿಂಜಲಸಂಹಿತಾ)

"ಹಿಂದೆ ಹೇಳಿದಂತೆ ಅಂಗುಷ್ಠವನ್ನು ಬಿಟ್ಟು ಉಳಿದ ಬೆರಳುಗಳನ್ನು ಮುಷ್ಟಿಯಾಗಿ ಮಾಡಿಕೊಳ್ಳಬೇಕು. ಇದು ಮುಷ್ಟಿಮುದ್ರೆಯೆನಿಸುತ್ತದೆ. ಈ ಮುಷ್ಟಿಯನ್ನು ಎಷ್ಟರವರೆಗೆ ಅಂಗುಷ್ಠವು ಮುಟ್ಟಬಹುದೋ ಅಷ್ಟರವರೆಗೆ ಅಂಗುಷ್ಠವನ್ನು ವರ್ತುಲಾಕಾರವಾಗಿ ಸುತ್ತಲೂ ಮುಟ್ಟಬೇಕು. ಇದು ಸ್ನಾನಮುದ್ರೆಯೆನಿಸುತ್ತದೆ. ಈ ಸ್ನಾನಮುದ್ರೆಯಲ್ಲಿ ಕಿರಿಬೆರಳನ್ನು ಬಿಟ್ಟು ಮುಷ್ಟಿಯನ್ನು ಮಾಡಿಕೊಂಡು ಹಿಂದೆ ಹೇಳಿದಂತೆ ಮಾಡಿದರೆ ಗಂಧಮುದ್ರೆಯೆನಿಸುತ್ತದೆ. ಕಿರಿಬೆರಳನ್ನೂ ಉಂಗುರದ ಬೆರಳನ್ನೂ ಬಿಟ್ಟು ಹಿಂದೆ ಹೇಳಿದಂತೆ ಮಾಡಿದರೆ ವಸ್ತ್ರಮುದ್ರೆಯೆನಿಸುತ್ತದೆ.

ಚಂದನೋಶೀರಕರ್ಪೂರಕುಂಕುಮಾಗುರುವಾಸಿತೈಃ |
ಸಲಿಲೈಃ ಸ್ನಾಪಯೇನ್ಮಂತ್ರೈರ್ನಿತ್ಯದಾ ವಿಭವೇ ಸತಿ || (ಭಾಗವತ ವಚನ)

"ಹರಿಚಂದನ, ಲಾಮಂಚ, ಪಚ್ಚಕರ್ಪೂರ, ಕುಂಕುಮಕೇಸರಿ, ಅಗುರುಗಂಧ ಇವುಗಳಿಂದ ಪರಿಮಳಿತವಾದ ಮತ್ತು ಎಳ್ಳಿನಿಂದ ಯುಕ್ತವಾದ ನೀರಿನಿಂದ ಮಂತ್ರಗಳನ್ನು ಹೇಳುತ್ತಾ ವೈಭವವಿದ್ದರೆ ಪ್ರತಿದಿನದಲ್ಲಿಯೂ ಅಭಿಷೇಕವನ್ನು ಮಾಡಬೇಕು. ವೈಭವವಿಲ್ಲದಿದ್ದರೆ ಯಥಾಶಕ್ತಿ ಮಾಡಬೇಕು."

ಸ್ವಸ್ಯ ಘರ್ಮಾನುವಾಕೇನ ಮಹಾಪುರುಷವಿದ್ಯಯಾ |
ಪೌರುಷೇಣ ಚ ಸೂಕ್ತೇನ....|| (ತಂತ್ರಸಾರ)

"ಶ್ರೀಹರಿಯ ಮಹಿಮೆಯನ್ನು ಹೇಳುತ್ತಿರುವ ಘರ್ಮಸೂಕ್ತ, ಮಹಾಪುರುಷವಿದ್ಯಾ ಮತ್ತು ಪುರುಷಸೂಕ್ತಗಳಿಂದ ಅಭಿಷೇಕವನ್ನು ಮಾಡಬೇಕು.

ನ ತೇ ವಿಷ್ಣೋರಿತಿ ಕ್ಷಾಲ್ಯಮಭಿಷೇಕವಿಧಿಸ್ತತಃ |
ಆಪೋ ಹಿಷ್ಠೇತಿ ತಿಸೃಭಿರತೋ ದೇವಾ ಅವಂತ್ವಿತಿ ||
ಕಂಕತೋನ ಇಮಾ ಕೇಶೇ ಕಲಶಸ್ನಾಪನಂ ತತಃ |
ಹಿರಣ್ಯವರ್ಣಾಂ ಹರಿಣೀಮಿತ್ಯಾಲೇಪೋ ಹರಯೇ ತಥಾ ||
ಹಿರಣ್ಯವರ್ಣಾಃ ಶುಚಯಃ ಪಾವಕೇತಿ ಚತಸೃಭಿಃ |
ಕ್ಷಾಲ್ಯ ಗಂಧಾಂಬುನಾ ದೇಹಂ ಪುನಸ್ತತ್ಕುಂಕುಮೇನ ತು ||
ಆಲಿಪ್ಯ ವಿಷ್ಣುಗಾಯತ್ರ್ಯಾ ಕ್ಷಾಲಯೇತ್ಪಾವಮಾನಿಭಿಃ |
ಬ್ರಹ್ಮಜಜ್ಞಾನಂ ಚ ತಥಾ ಕಯಾನಶ್ಚಿತ್ರ ಅಭುವತ್||
ಜಿತಂ ತೇತ್ಯಾದಿಮಂತ್ರೈಶ್ಚ ಮಹಾಮಂತ್ರೈಶ್ಚ ಸ್ನಾಪಯೇತ್ | (ಪಾದ್ಮಸಂಹಿತಾ)

"ನ ತೇ ವಿಷ್ಣೋ" ಎಂಬ ಮಂತ್ರದಿಂದ ಶ್ರೀಹರಿಯ ವಿಗ್ರಹವನ್ನು ತೊಳೆಯಬೇಕು. ಅನಂತರದಲ್ಲಿ ವಿಧಿಪ್ರಕಾರವಾಗಿ "ಆಪೋಹಿಷ್ಠಾ" ಎಂಬ ಮಂತ್ರದಿಂದ ಆರಂಭಿಸಿ ಮೂರು ಮಂತ್ರಗಳಿಂದಲೂ "ಅತೋ ದೇವಾ ಅವಂತು ನೋ" ಎಂಬ ಮಂತ್ರದಿಂದಲೂ ಅಭಿಷೇಕವನ್ನು ಮಾಡಬೇಕು "ಕಂಕತೋನ" ಎಂಬ ಮಂತ್ರದಿಂದ ತಲೆಯ ಕೂದಲುಗಳನ್ನು ತೊಳೆಯಬೇಕು

ಆ ಮೇಲೆ ಅಭಿಷೇಕಕ್ಕಾಗಿ ಕಲಶಸ್ಥಾಪನವನ್ನು ಮಾಡಬೇಕು. "ಹಿರಣ್ಯವರ್ಣಾಂ ಹರಿಣೀಂ" ಎಂಬ ಮಂತ್ರದಿಂದ ಶ್ರೀಹರಿಯ ದೇಹದಲ್ಲಿ ಗಂಧವನ್ನು ಹಚ್ಚಬೇಕು. "ಹಿರಣ್ಯವರ್ಣಾಃ ಶುಚಯಃ ಪಾವಕಾಃ" ಎಂಬ ಮಂತ್ರದಿಂದ ಆರಂಭಿಸಿ ನಾಲ್ಕು ಮಂತ್ರಗಳಿಂದ ಗಂಧಜಲದಿಂದ ಶ್ರೀಹರಿಯ ದೇಹವನ್ನು ತೊಳೆಯಬೇಕು. ಅನಂತರದಲ್ಲಿ ಕೇಸರಿಯಿಂದ ಲೇಪನ ಮಾಡಬೇಕು. ಆ ಮೇಲೆ "ನಾರಾಯಣಾಯ ವಿದ್ಮಹೇ | ವಾಸುದೇವಾಯ ಧೀಮಹಿ | ತನ್ನೋ ವಿಷ್ಣುಃ ಪ್ರಚೋದಯಾತ್" ಎಂಬ ವಿಷ್ಣುಗಾಯತ್ರೀಮಂತ್ರದಿಂದಲೂ, ಪವಮಾನಸೂಕ್ತದಿಂದಲೂ, "ಬ್ರಹ್ಮಜಜ್ಞಾನಂ" ಎಂಬ ಮಂತ್ರದಿಂದಲೂ, "ಕಯಾ ನಶ್ಚಿತ್ರ ಆಭುವತ್" ಎಂಬ ಮಂತ್ರದಿಂದಲೂ "ಜಿತಂ ತೇ" ಮುಂತಾದ ಮಹಾಮಂತ್ರಗಳಿಂದಲೂ ಶ್ರೀಹರಿಗೆ ಸ್ನಾನವನ್ನು ಮಾಡಿಸಬೇಕು. ಈ ಅಭಿಷೇಕವನ್ನು ಮಾಡುವಾಗ ಕಲಶೋದಕವನ್ನು ಶಂಖದಿಂದಲೇ ಅಭಿಷೇಕ ಮಾಡಬೇಕು.

ಸ್ನಾನಪಾತ್ರಜಲಂ ಪಶ್ಚಾದಾದಾಯ ಕುಸುಮೈಃ ಸಹ |
ಪೌರುಷೇಣ ಚ ಸೂಕ್ತೇನ ಪಾವಮಾನೇನ ವೈ ತತಃ |
ಅಭಿಷಿಚ್ಯ ತತೋ ದೇವಂ ಪುಂಸೂಕ್ತೇನ ಚ ವಿದ್ಯಯಾ ||

"ಸ್ನಾನಪಾತ್ರದಲ್ಲಿರುವ ನೀರನ್ನೂ ಪುಷ್ಪಗಳನ್ನೂ ತೆಗೆದು ಮಹಾಭಿಷೇಕಕ್ಕೆ ಸಿದ್ಧಪಡಿಸಬೇಕು. ಹಿಂದೆ ಅಭಿಷೇಕ್ಕಾಗಿ ಕಲಶಪೂಜೆಯನ್ನು ಮಾಡಿ ಇಟ್ಟಿರುವ ಕಲಶಜಲದಿಂದ ಹಿಂದೆ ಹೇಳಿರುವ ಮಂತ್ರಗಳಿಂದ ಅಭಿಷೇಕವನ್ನು ಮಾಡಬೇಕು.

### ವಿಷ್ಣುಪಾದೋದಕಮಹಿಮೆ

ಪಾದೋದಕಂ ಚ ದೇವಸ್ಯ ಪವಿತ್ರಂ ಪರಮಂ ಮತಮ್ |
ಅರ್ಘ್ಯಂ ದತ್ವಾ ಜಲಂ ವಿಷ್ಣೋರ್ಮೂಲಮಂತ್ರೇಣ ದೇಶಿಕಃ ||
ಗೃಹೀತ್ವಾ ತೋಯಧಾರೇಣ ಮೂರ್ಧ್ನಿ ದೇವಂ ವಿಶೋಧಯೇತ್ |
ಶೋಧನಂ ಸರ್ವಪಾಪಾನಾಂ ಸರ್ವದುಷ್ಕರ್ಮನಾಶನಮ್ ||
ಲಕ್ಷ್ಮೀವಿವರ್ಧನಂ ನಿತ್ಯಮಾಯುರ್ವೃದ್ಧಿಕರಂ ಪರಮ್ | (ಪಾದ್ಮಸಂಹಿತಾ ವಚನ)

"ವಿಷ್ಣುವಿನ ಅಭಿಷೇಕಜಲವು ವಿಷ್ಣುಪಾದೋದಕವೆನಿಸುತ್ತದೆ. ಇದು ಪರಮಪವಿತ್ರವೆನಿಸುತ್ತದೆ. ಇದೇ ತೀರ್ಥಲದಿಂದ ತರ್ಪಣಾದಿಗಳನ್ನು ಕೊಡಬೇಕು. ಅನಂತರದಲ್ಲಿ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ತೀರ್ಥಧಾರೆಯನ್ನು ಶಿರಸ್ಸಿನಲ್ಲಿ ಧರಿಸಬೇಕು. ಇದರಿಂದ ಎಲ್ಲಾ ಪಾಪಗಳೂ ಹೋಗುತ್ತವೆ. ಜನ್ಮಜನ್ಮಾಂತರಗಳಲ್ಲಿ ಮಾಡಿರುವ ಎಲ್ಲಾ ದುಷ್ಕರ್ಮಗಳೂ ಸಮೂಲವಾಗಿ ದೂರವಾಗುತ್ತವೆ. ಲಕ್ಷ್ಮೀವೃದ್ಧಿಯೂ ಏರ್ಪಡುತ್ತದೆ. ಯಾವಾಗಲೂ ಆಯುಸ್ಸು ವೃದ್ಧಿಯಾಗುತ್ತದೆ.

ಮ್ರಿಯಮಾಣಃ ಸ್ವಯಂ ವಿಷ್ಣೋಃ ಪ್ರತಿಮಾಸ್ಪರ್ಶನಂ ಜಲಮ್ |
ಪೀತ್ವಾ ತದ್ಗತಿಮಾಪ್ನೋತಿ ದೇಹೋ ಧ್ರಿಯತೇ ಪುನಃ ||
ಪಿತೄಣಾಂ ತರ್ಪಣಾಂ ಶಸ್ತಂ ವಾರಿಣಾ ತೇನ ತರ್ಪಿತಾಃ |
ಋಣೇಭ್ಯಃ ಪಿತರೋ ಮುಕ್ತಾ ವಸಂತಿ ದಿವಿ ದೇವತಾಃ ||
ಭಕ್ತಾಯ ದೇಯಂ ಪಾದೋದಂ ಶಾಂತಾಯ ಶುಭಕರ್ಮಣೇ |
ಪಂಚಕಾಲವಿಧಿಜ್ಞಾಯ ತದನುಷ್ಠಾನಶಾಲಿನೇ ||
ನ ನಾಸ್ತಿಕಾಯ ದಾತವ್ಯಂ ದಾತವ್ಯಂ ಪಾಪಿನಾಂ ನ ಚ |
ಪಾಷಂಡಿನೇ ನ ದಾತವ್ಯಂ ತೇಭ್ಯೋ ರಕ್ಷೇತ್ಪ್ರಯತ್ನತಃ || (ಪಾದ್ಮಸಂಹಿತಾ)

"ಸಾಯುವಾಗ ಶ್ರೀಹರಿಯ ವಿಗ್ರಹವನ್ನು ಮುಟ್ಟಿದರೂ ವಿಷ್ಣುಪಾದೋದಕವನ್ನು ಕುಡಿದರೂ ಶ್ರೀಹರಿಸಾನ್ನಿಧ್ಯ ಪ್ರಾಪ್ತಿಯಾಗುತ್ತದೆ. ಪುನರ್ಜನ್ಮವಿಲ್ಲ. ಪಿತೃಗಳಿಗೆ ವಿಷ್ಣುಪಾದೋದಕದಿಂದ ತರ್ಪಣವನ್ನು ಕೊಡುವುದು ಪ್ರಶಸ್ತವೆನಿಸುತ್ತದೆ. ವಿಷ್ಣುಪಾದೋದಕದಿಂದ ಪಿತೃಗಳು ತೃಪ್ತರಾಗುವರು. ಎಲ್ಲಾ ಋಣಗಳಿಂದಲೂ ಬಿಡುಗಡೆಯನ್ನು ಹೊಂದಿದವರಾಗಿ ದೇವತಾಶರೀರದಿಂದ ದೇವಲೋಕದಲ್ಲಿ ವಾಸಿಸುವರು. ಶ್ರೀಹರಿಯಲ್ಲಿ ಭಕ್ತಿಯುಳ್ಳವರಿಗೂ ಶಾಂತರಿಗೂ ಶುಭಕಾರ್ಯಗಳನ್ನೇ ಯಾವಾಗಲೂ ಮಾಡುತ್ತಿರುವವರಿಗೂ ಮಾತ್ರ ವಿಷ್ಣುಪಾದೋದಕವನ್ನು ಕೊಡಬೇಕು. ಅರುಣೋದಯಕಾಲ, ಸೂರ್ಯೋದಯಕಾಲ, ಮಧ್ಯಾಹ್ನಕಾಲ, ಸಾಯಂಕಾಲ, ರಾತ್ರಿಕಾಲ ಎಂದು ಐದು ವಿಧವಾದ ಕಾಲಗಳಿವೆ. ಈ ಐದು ಕಾಲಗಳಲ್ಲಿ ಮಾಡಬೇಕಾದ ಕಾರ್ಯಗಳ ವಿಧಾನವನ್ನು ತಿಳಿದು ಅದರಂತೆ ಅನುಷ್ಠಾನವನ್ನು ಮಾಡುತ್ತಿರುವವನಾಗಿರಬೇಕು. ಅವನಿಗೆ ಮಾತ್ರ ವಿಷ್ಣುಪಾದೋದಕವನ್ನು ಕೊಡಬೇಕು."

"ದೇವರು ಇಲ್ಲ" ಮುಂತಾದ ಮಾತುಗಳನ್ನು ಹೇಳುತ್ತಿರುವ ನಾಸ್ತಿಕನಿಗೂ ಪಾಪಿಗಳಿಗೂ ವೇದವನ್ನು ನಿಂದಿಸುವವರಿಗೂ ಕೊಡಬಾರದು.

### ದೇವರ ಅಭಿಷೇಕಕಾಲದಲ್ಲಿ ಶಂಖಾದಿವಾದ್ಯಗಳನ್ನು ಬಾರಿಸುವವನಿಗೆ ಫಲ

ಸ್ನಾನಕಾಲೇ ತು ಕೃಷ್ಣಸ್ಯ ಶಂಖಾದೀನಾಂ ಚ ವಾದನಮ್ |
ಕುರುತೇ ಬ್ರಹ್ಮಲೋಕೇ ತು ವಸತೇ ಬ್ರಹ್ಮವಚ್ಚಿರಮ್ ||
ಸ್ನಾನಕಾಲೇ ತು ಕೃಷ್ಣಸ್ಯ ಪಠೇನ್ನಾಮಸಹಸ್ರಕಮ್ |
ಪ್ರತ್ಯಕ್ಷರಫಲಂ ಪುಣ್ಯಂ ಕಪಿಲಾಗೋಶತೋದ್ಭವಮ್ ||
ಫಲಮೇತನ್ಮಹೀಪಾಲ ಗೀತಾಯಾಃ ಪರಿಕೀರ್ತನಾತ್ |
ಸ್ತವೈಃ ಋಷಿಗತೈಃ ಸಮ್ಯಕ್ಕೃತನ್ಯೈಶ್ಚ ನರಾಧಿಪ ||
ಹರ್ಷಮಾಯಾತಿ ದೇವೇಶಃ ಸರ್ವಾನ್ ಕಾಮಾನ್ ಪ್ರಯಚ್ಛತಿ |
ಕಿಂ ಪುನರ್ವೇದಪಾಠಂ ತು ಸ್ನಾನಕಾಲೇ ಕರೋತಿ ಯಃ |
ತಸ್ಯ ಯತ್ತು ಭವೇತ್ಪುಣ್ಯಂ ನ ಜ್ಞಾತಂ ನರನಾಯಕ ||
ಸ್ನಾನಕಾಲೇ ತು ಸಂಪ್ರಾಪ್ತೇ ಕೃಷ್ಣಸ್ಯಾಗ್ರೇ ತು ನರ್ತನಮ್ |
ಗೀತಂ ಚೈವ ಪುನರ್ಮರ್ತ್ಯಃ ಕೃಷ್ಣಸ್ಯ ಸವನೇನ ಹ ||
ಸ್ನಾನಕಾಲೇ ತು ದೇವಸ್ಯ ಜಯಶಬ್ದಂ ಕರೋತಿ ಯಃ |
ಕರತಾಡನಸಂಯುಕ್ತಂ ಗೀತನೃತ್ತಂ ತಥೈವ ಚ ||
ಉನ್ಮತ್ತಚೇಷ್ಟಾಂ ಕುರ್ವಾಣೋ ಸಹಜಲ್ಪಂ ಯಥೇಚ್ಛಯಾ |
ತ್ಯಕ್ತಂ ತೇನ ಧರಾಪಾತೋ ಯೋನಿಯಂತ್ರಸ್ಯ ನಿರ್ಗಮಃ ||
ನೋತ್ಥಾನಶಾಯೀ ಭವತಿ ಮಾತುರಂಕೇ ನಕೇಶ್ವರ |
ಗುಣಾನ್ ವಕ್ಷ್ಯತಿ ಕೃಷ್ಣಸ್ಯ ಯಃ ಕಲೌ ಮುನಿಸಂಚಯೇ || (ಗಾರುಡ ವಚನ)

ಶ್ರೀಕೃಷ್ಣದೇವನ ಅಭಿಷೇಕಕಾಲದಲ್ಲಿ ಶಂಖ ಮುಂತಾದ ವಾದ್ಯಗಳನ್ನು ಬಾರಿಸುವವನು ಬ್ರಹ್ಮಲೋಕದಲ್ಲಿ ಬ್ರಹ್ಮನಂತೆ ಬಹುಕಾಲದವರೆಗೆ ವಾಸಿಸುವನು. ಶ್ರೀಕೃಷ್ಣನ ಅಭಿಷೇಕ ಕಾಲದಲ್ಲಿ ವಿಷ್ಣುಸಹಸ್ರನಾಮ ಮುಂತಾದ ಸಹಸ್ರನಾಮಗಳನ್ನು ಪಠಿಸುವವನು. ಒಂದೊಂದು ಅಕ್ಷರಗಳ ಪಠನದಿಂದ ನೂರು ಕಪಿಲಾಗೋವುಗಳ ದಾನದಿಂದ ಬರುವ ಫಲವನ್ನು ಪಡೆಯುವನು.

ಇದೇ ಫಲವೇ ಭಗವದ್ಗೀತೆಯನ್ನು ಸರಿಯಾಗಿ ಹೇಳಿದ್ದರಿಂದ ಬರುತ್ತದೆ. ಈ ಸ್ತೋತ್ರಗಳನ್ನು ಋಷಿಗಳು ಚೆನ್ನಾಗಿ ಪಾರಾಯಣ ಮಾಡಿದ್ದರಿಂದ ಬರುವ ಫಲವನ್ನು ಪಡೆಯುವನು. ಈ ಸ್ತೋತ್ರಗಳನ್ನು ಪಠಿಸಿದ್ದರಿಂದ ದೇವೇಶನಾದ ಶ್ರೀಹರಿಯು ಸಂತುಷ್ಟನಾಗುವನು. ಭಕ್ತನು ಅಪೇಕ್ಷಿಸಿದ ಸಕಲ ಇಷ್ಟಗಳನ್ನೂ ಕೊಡುವನು. ಈ ಸ್ತೋತ್ರಗಳನ್ನು ಪಾರಾಯಣ ಮಾಡಿದ್ದರಿಂದ ಇಷ್ಟು ಫಲವು ಬರುವುದಾಗಿದ್ದರೆ ವೇದಪಾರಾಯಣದಿಂದ ಅತ್ಯಧಿಕ ಫಲವು ಬರುತ್ತದೆ ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಶ್ರೀಕೃಷ್ಣದೇವನ ಅಭಿಷೇಕಕಾಲದಲ್ಲಿ ನರ್ತನಸೇವೆಯನ್ನೂ ಗಾಯನಸೇವೆಯನ್ನೂ ಯಾರು ಮಾಡುವರೋ ಅವರು ಯಜ್ಞಗಳ ಫಲವನ್ನು ಪಡೆಯುವರು. ಶ್ರೀಕೃಷ್ಣದೇವನ ಅಭಿಷೇಕಕಾಲದಲ್ಲಿ ಜಯ ಜಯಕಾರವನ್ನು ಮಾಡುವವನೂ ಕೈಗಳನ್ನು ತಟ್ಟಿ ಹಾಡುವವನೂ ಕುಣಿಯುವವನೂ ಹುಚ್ಚನಂತೆ ನಟಿಸುವವನೂ ಪುನಃ ಭೂಮಿಯಲ್ಲಿ ಹುಟ್ಟುವುದಿಲ್ಲ. ಕಲಿಯುಗದಲ್ಲಿ ಒಂದೊಂದು ಪುಣ್ಯಗಳಿಂದಲೂ ಅನೇಕ ಯಜ್ಞಗಳ ಫಲವು ಬರುತ್ತದೆ. ಮೇಲ್ಕಂಡಂತೆ ಭಕ್ತಪರವಶನಾಗಿ ಸೇವಿಸುವವನು ಮುಂದೆ ಯಾವಾಗಲೂ ತಾಯಿಯ ತೊಡೆಯಲ್ಲಿ ಮೇಲ್ಮುಖನಾಗಿ ಮಲಗುವುದಿಲ್ಲ.

### ಘಂಟಾ ಮಹಿಮೆ

ಸ್ನಾನಾರ್ಚನಕ್ರಿಯಾಕಾಲೇ ಘಂಟಾನಾದಂ ಕರೋತಿ ಯಃ |
ಪುರತೋ ವಾಸುದೇವಸ್ಯ ತಸ್ಯ ಪುಣ್ಯಫಲಂ ಶೃಣು ||
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ |
ವಸತೇ ದೇವಲೋಕೇ ತು ಅಪ್ಸರೋಗಣಸೇವಿತಃ ||
ಸರ್ವವಾದ್ಯಮಯೀ ಘಂಟಾ ಕೇಶವಸ್ಯ ಸದಾ ಪ್ರಿಯಾ |
ವಾದನಾಲ್ಲಭತೇ ಪುಣ್ಯಂ ವರ್ಷಕೋಟಿಶತೋದ್ಭವಮ್ ||
ವಾದಿತ್ರಾಣಾಂ ನಿನಾದೈಸ್ತು ಗೀತಾಮಂಗಲಸಂಸ್ತವೈಃ |
ಯಃ ಸ್ನಾಪಯತಿ ದೇವೇಶಂ ಜೀವನ್ಮುಕ್ತೋ ಭವೇದ್ಧಿ ಸಃ ||
ವಾದಿತ್ರಾಣಾಮಲಾಭೇ ತು ಘಂಟಾನಾದಂ ಕರೋತಿ ಯಃ |
ತಸ್ಯ ವಿಷ್ಣುಃ ಪ್ರಸೀದೇತ ಸರ್ವವಾದ್ಯಮಯೀ ಯತಃ ||
ಸರ್ವವಾದ್ಯಮಯೀ ಘಂಟಾ ದೇವದೇವಸ್ಯ ವಲ್ಲಭಾ |
ತಸ್ಮಾತ್ಸರ್ವಪ್ರಯತ್ನೇನ ಘಂಟಾನಾದಂ ಹಿ ಕಾರಯೇತ್ ||
ಮನ್ವಂತರಸಹಸ್ರೇಷು ಮನ್ವಂತರಶತಾನಿ ಚ ||
ಘಂಟಾನಾದೇನ ದೇವೇಶಃ ಪ್ರೀತೋ ಭವತಿ ಕೇಶವಃ |
ವಲ್ಲಭಂ ವಾದ್ಯಶಬ್ದಂ ತು ಪೂಜಾಕಾಲೇ ತು ಕಾರಯೇತ್ ||
ದ್ವಾದಶ್ಯಾಂ ಜಾಗರೇ ರಾತ್ರೌ ಕೋಟಿಯಜ್ಞೈಸ್ತು ಕಿಂ ಕೃತೈಃ |
ವೇಣುವಾದ್ಯಸ್ವನೇನೈವ ಕರೋತಿ ಸ್ನಪನಂ ಹರೇಃ ||
ಪುರತೋ ಗೀತಶಬ್ದೇನ ಸ ಯಾತಿ ಹರಿಮಂದಿರಮ್ |
ಮೃದಂಗವಾದ್ಯೇನ ಯುತಃ ಪ್ರಣವೇನ ಸಮನ್ವಿತಃ ||
ಅರ್ಚನಂ ವಾಸುದೇವಸ್ಯ ಸನೃತ್ತಂ ಮೋಕ್ಷದಂ ನೃಣಾಮ್ |

ಗೀತನೃತ್ತೇನ ವಾದ್ಯೇನ ಪ್ರಣವೇನ ಸಮನ್ವಿತಃ |
ಅರ್ಚನಂ ವಾಸುದೇವಸ್ಯ ಪ್ರನೃತ್ತಂ ಮೋಕ್ಷದಂ ನೃಣಾಮ್ || (ಪಾದ್ಮ ಪುರಾಣ ವಚನ)

"ಶ್ರೀಹರಿಯ ಅಭಿಷೇಕಕಾಲದಲ್ಲಿಯೂ ಪೂಜಾಕಾಲದಲ್ಲಿಯೂ ಶ್ರೀಹರಿಯ ಮುಂಭಾಗದಲ್ಲಿ ಘಂಟೆಯನ್ನು ಬಾರಿಸುವುದರಿಂದ ಬರುವ ಪುಣ್ಯದ ಫಲವನ್ನು ಹೇಳುವೆನು ಕೇಳು. ಕೋಟಿ ಸಹಸ್ರಕಲ್ಪಗಳು ಮತ್ತು ನೂರು ಕೋಟಿ ಕಲ್ಪಗಳವರೆಗೆ ದೇವಲೋಕದಲ್ಲಿ ಅಪ್ಸರಃಸ್ತ್ರೀಯರ ಸಮೂಹದಿಂದ ಸೇವಿಸಲ್ಪಡುತ್ತಾ ವಾಸಿಸುವನು. ಘಂಟೆಯು ಸರ್ವವಾದ್ಯಮಯವಾದುದು. ಕೇಶವನಿಗೆ ಯಾವಾಗಲೂ ಪ್ರಿಯವಾದುದು. ಘಂಟೆಯನ್ನು ಒಮ್ಮೆ ಬಾರಿಸಿದರೆ ಎಲ್ಲಾ ವಾದ್ಯಗಳನ್ನೂ ಕೋಟಿಶತವರ್ಷಗಳವರೆಗೆ ಬಾರಿಸಿದ ಫಲವು ಬರುತ್ತದೆ. ವಾದ್ಯದ ಧ್ವನಿಗಳಿಂದಲೂ ಗೀತಾಪಾರಾಯಣ ಮತ್ತು ಮಂಗಳಸ್ತುತಿಗಳಿಂದಲೂ ಶ್ರೀಹರಿಯನ್ನು ಸ್ನಾನಮಾಡಿಸುವವನು ಜೀವನ್ಮುಕ್ತನೆನಿಸುವನು. ವಾದ್ಯಗಳು ಸಿಗದಿದ್ದರೆ ಘಂಟೆಯನ್ನು ಬಾರಿಸಬೇಕು. ಘಂಟೆಯು ಸರ್ವವಾದ್ಯಮಯವಾದುದು. ಶ್ರೀಹರಿಗೆ ಅತ್ಯಂತ ಪ್ರಿಯವಾದುದು. ಆದ್ದರಿಂದ ಸರ್ವಪ್ರಯತ್ನಗಳನ್ನೂ ಮಾಡಿ ಘಂಟೆಯನ್ನು ಬಾರಿಸಬೇಕು. ಈ ಘಂಟೆಯ ಧ್ವನಿಯಿಂದ ಮನ್ವಂತರ ಸಹಸ್ರ ಮತ್ತು ಮನ್ವಂತರಶತಗಳ ವರೆಗೆ ದೇವೇಶನಾದ ಶ್ರೀಹರಿಯು ಪ್ರೀತನಾಗುವನು. ಶ್ರೀಹರಿಯ ಪೂಜಾಕಾಲದಲ್ಲಿ ದ್ವಾದಶೀದಿನದಲ್ಲಾಗಲೀ ಏಕಾದಶೀದಿನದಲ್ಲಿ ಜಾಗರಣಕಾಲದಲ್ಲಾಗಲೀ ಶ್ರೀಹರಿಗೆ ಅತ್ಯಂತ ಪ್ರಿಯವಾಗಿರುವ ವಾದ್ಯವನ್ನುಬಾರಿಸುವಂತೆ ಯಾವನು ಮಾಡುವನೋ ಅನು ಕೋಟಿ ಯಜ್ಞಗಳನ್ನೂ ಸಹಮಾಡಬೇಕಾಗಿಲ್ಲ. ವೇಣುಗಾನವನ್ನೂ ಸಂಗೀತಧ್ವನಿಯನ್ನೂ, ಮದಂಗಧ್ವನಿಯನ್ನೂ ಪ್ರಣವಮಂತ್ರಪಠನವನ್ನೂ ಮಾಡುತ್ತಾ ಶ್ರೀಹರಿಗೆ ಅಭಿಷೇಕವನ್ನು ಮಾಡಿಸುವವನು ಹರಿಯ ಮನೆಯಾಗಿರುವ ವೈಕುಂಠಕ್ಕೆ ಹೋಗುವನು. ನೃತ್ಯಪೂರ್ವಕವಾಗಿ ಶ್ರೀಹರಿಗೆ ಅರ್ಚನವನ್ನು ಮಾಡುವವನು ಮೋಕ್ಷವನ್ನು ಪಡೆಯುನು.

## ಸ್ನಾನಾನಂತರಕೃತ್ಯ

ಮಾರ್ಜಯೇಚ್ಛುಭ್ರವಸ್ತ್ರೇಣ ಧೂಪೈರ್ನೀರಾಜಯೇತ್ತದಾ | (ಹಾರೀತ ವಚನ)

"ಶುಭ್ರವಾದ ವಸ್ತ್ರದಿಂದ ಶ್ರೀಹರಿಯ ಪ್ರತಿಮೆಯನ್ನು ಒರೆಸಬೇಕು. ಧೂಪವನ್ನು ತೋರಿಸಬೇಕು."

ಕೃಷ್ಣಂ ಸ್ನಾನಾಂತರೇ ಯಸ್ತು ವಸ್ತ್ರೇಣ ಪರಿಮಾರ್ಜಯೇತ್ |
ತಸ್ಯ ಜನ್ಮಾಂತರಸ್ಯಾಪಿ ಲಭತೇ ಪಾಪಮಾರ್ಜನಮ್ ||

"ಶ್ರೀಕೃಷ್ಣದೇವನನ್ನು ಸ್ನಾನಾನಂತರದಲ್ಲಿ ವಸ್ತ್ರದಿಂದ ಒರೆಸುವವನು ಜನ್ಮಾಂತರಗಳಲ್ಲಿ ಮಾಡಿರುವ ಎಲ್ಲಾ ಪಾಪಗಳನ್ನು ಕಳೆದುಕೊಳ್ಳುವನು. ಅನಂತರದಲ್ಲಿ "ಅಲಂಕಾರಪೀಠೇ ಆಗಚ್ಛ" ಅಂದರೆ "ಶ್ರೀಹರಿಯೇ ನಿನ್ನನ್ನು ಅಲಂಕರಿಸುವನು. ಅದಕ್ಕಾಗಿ ಅಲಂಕಾರಪೀಠದಲ್ಲಿ ಬಾ" ಎಂದು ಪ್ರಾರ್ಥಿಸಬೇಕು. ಅನಂತರದಲ್ಲಿ ಸ್ನಾನವು ಮುಗಿದ ಕೂಡಲೇ ಸಮರ್ಪಿಸುವ ಆಚಮನವನ್ನು ಕೊಡಬೇಕು.

ಸ್ನಾನೇ ವಸ್ತ್ರೇ ಚ ನೈವೇದ್ಯೇ ದದ್ಯಾದಾಚಮನೀಯಕಮ್ |
ಧೂಪೇ ದೀಪೇ ಚ ಪಾದ್ಯೇ ಚ ತಾಂಬೂಲೇ ದಂತಧಾವನೇ || (ವಾಸಿಷ್ಠ ವಚನ)

ಸ್ನಾನ, ವಸ್ತ್ರಧಾರಣ, ನೈವೇದ್ಯಸಮರ್ಪಣ, ಧೂಪಸಮರ್ಪಣ, ದೀಪಸಮರ್ಪಣ, ಪಾದ್ಯಸಮರ್ಪಣ, ತಾಂಬೂಲ ಸಮರ್ಪಣ ದಂತಧಾವನ ಇವುಗಳ ಅನಂತರದಲ್ಲಿ ಆಚಮನವನ್ನು ಸಮರ್ಪಿಸಬೇಕು.

## ಯಜ್ಞೋಪವೀತಮುದ್ರೆ ಮತ್ತು ಅಲಂಕಾರಮುದ್ರೆ

ಮಧ್ಯಮಾಂಗುಷ್ಠಶಿರಸೋಃ ಸಂಹತಿರ್ವ್ಯಗ್ರ ಪರ್ವಣೀ |
ಯಜ್ಞೋಪವೀತಮುದ್ರಾ ಸಾ ಇತಿ ಸರ್ವತ್ರ ಪೂಜಿತಾ ||
ತಥಾಂಽಗುಷ್ಠಕನಿಷ್ಠಾಭ್ಯಾಂ ಜ್ಞೇಯಾಽಲಂಕಾರಮುದ್ರಿಕಾ |(ಕಪಿಂಜಲ ಸಂಹಿತಾ)

"ನಡುಬೆರಳು, ಅಂಗುಷ್ಠ ಇವುಗಳ ತುದಿಗಳನ್ನು ಮುಟ್ಟಿಸಬೇಕು. ಇದು ಯಜ್ಞೋಪವೀತಮುದ್ರೆಯೆನಿಸುತ್ತದೆ. ಅಂಗುಷ್ಠ ಮತ್ತು ಕಿರಿಬೆರಳಿನ ತುದಿಯನ್ನು ಮುಟ್ಟಿಸಬೇಕು. ಇದು ಅಲಂಕಾರಮುದ್ರೆಯೆನಿಸುತ್ತದೆ. ವಸ್ತ್ರ ಮುದ್ರೆಯನ್ನು ಹಿಂದೆ ಹೇಳಿರುವೆವು. ಅದರಿಂದ ವಸ್ತ್ರವನ್ನು ಉಡಿಸಬೇಕು. ಯಜ್ಞೋಪವೀತಮುದ್ರೆಯಿಂದ ಯಜ್ಞೋಪವೀತವನ್ನೂ ಅಲಂಕಾರಮುದ್ರೆಯಿಂದ ಅಲಂಕಾರವನ್ನೂ ಸಮರ್ಪಿಸಬೇಕು."

ಪ್ರಣವೇನ ಬ್ರಹ್ಮಸೂತ್ರಮುತ್ತರೀಯಂ ಪ್ರಕಲ್ಪಯೇತ್ |
ಆಚಾಂತಮನ್ವತಿಷ್ಠಾಯ ಪಾದುಕೇ ಮಧ್ಯಮಾಸನೇ ||
ಸುಖಾಸೀನಾಯ ದೇವಾಯ ಪ್ರಾಗ್ವದರ್ಘ್ಯಾದಿ ನಿರ್ವಪೇತ್ | (ಪಾದ್ಮ ಸಂಹಿತಾ)

"ಓಂ" ಎಂಬ ಪ್ರಣವಮಂತ್ರದಿಂದ ಯಜ್ಞೋಪವೀತ, ಹೊದ್ದುಕೊಳ್ಳುವ ವಸ್ತ್ರ, ಪಾದುಕೆಗಳು ಮಧ್ಯಮವಾದ ಆಸನಗಳು ಇವುಗಳನ್ನು ಸಮರ್ಪಿಸಬೇಕು. ಸುಖವಾಗಿ ಕುಳಿತಿರುವ ಶ್ರೀಹರಿಗೆ ಹಿಂದೆ ಹೇಳಿದಂತೆ ಅರ್ಘ್ಯ ಮುಂತಾದ ಉಪಚಾರಗಳಿಂದ ಪೂಜಿಸಬೇಕು.

ಆದರ್ಶನಂ ದರ್ಶಯಿತ್ವಾ ಪೂಜಾಪೀಠೇ ನಿವೇಶಯೆತ್ |
ಉಪಚಾರಾಂಸ್ತತೋ ದತ್ವಾ ದದ್ಯಾದಾಚಮನೀಯಕಮ್ ||
ಸುಖಾಸೀನಾಯ ದೇವಾಯ ಉಪಚಾರಾನ್ ಪ್ರಕಲ್ಪಯೇತ್ | (ವಾಸಿಷ್ಠ ವಚನ)

"ಅಲಂಕಾರವನ್ನು ಮಾಡಿದ ಮೇಲೆ ಕನ್ನಡಿಯನ್ನು ತೋರಿಸಬೇಕು. ಪೂಜಾಪೀಠದಲ್ಲಿ ಕುಳ್ಳಿರಿಸಬೇಕು. ಒಂದೊಂದು ಉಪಚಾರಗಳನ್ನೂ ಸಮರ್ಪಿಸಿ ಕೊನೆಗೆ ಆಚಮನೀಯವನ್ನು ಸಮರ್ಪಿಸಬೇಕು. ಸುಖವಾಗಿ ಕುಳಿತಿರುವ ಶ್ರೀಹರಿಗೆ ಎಲ್ಲಾ ಉಪಚಾರಗಳನ್ನೂ ಸಮರ್ಪಿಸಬೇಕು.

## ಉಪಚಾರಗಳ ಕ್ರಮ

ಮೊದಲು ವಸ್ತ್ರಮುದ್ರೆಯನ್ನು ತೋರಿಸಬೇಕು. ವಿಷ್ಣುಗಾಯತ್ರಿಯಿಂದ ಒಗೆದ ಎರಡು ಬಟ್ಟೆಗಳನ್ನು ಸಮರ್ಪಿಸಬೇಕು. ಯಜ್ಞೋಪವೀತ ಮುದ್ರೆಯನ್ನು ತೋರಿಸಬೇಕು. ಪ್ರಣವಮಂತ್ರದಿಂದ ಯಜ್ಞೋಪವೀತವನ್ನೂ ಹೊದ್ದುಕೊಳ್ಳುವ ವಸ್ತ್ರವನ್ನೂ ಸಮರ್ಪಿಸಬೇಕು. ತಲೆಯನ್ನು ಒಣಗಿಸಬೇಕು.

ಮೂರ್ಧಾನಮಿತ್ಯೃಚಾ ಕೇಶಾನ್ ಸುಧೀಃ ಸುಶೋಧಯೇತ್ತತಃ | (ಪಾದ್ಮ ತಂತ್ರ)

"ಮೂರ್ಧಾನಂ" ಎಂಬ ಋಕ್ಕಿನಿಂದ ತಲೆಗೂದಲುಗಳನ್ನು ಒಣಗಿಸಬೇಕು. ಅನಂತರದಲ್ಲಿ ಕಿರೀಟ ಮುಂತಾದ ಆಭರಣಗಳನ್ನು ಸಮರ್ಪಿಸಬೇಕು."

ತತಶ್ಚ ತಂತ್ರಸಾರೋಕ್ತಗಂಧಪುಷ್ಪೈಸ್ತಥೈವ ಚ |

"ಅನಂತರದಲ್ಲಿ ತಂತ್ರಸಾರದಲ್ಲಿ ಹೇಳಿರುವ ಗಂಧವನ್ನೂ ಪುಷ್ಪವನ್ನೂ ಸಮರ್ಪಿಸಬೇಕು."

ಶ್ರೀಖಂಡಂ ಕುಂಕುಮಂ ವಾಪಿ ತುಲಸೀಕಾಷ್ಠಚಂದನಮ್ |
ಕರ್ಪೂರಾಗುರುಸಂಮಿಶ್ರಂ ದತ್ವಾ ಮಾಧವಲೋಕತಾಮ್ || (ಪಾದ್ಮ ವಚನ)

"ಶ್ರೀಖಂಡ ಕೇಸರಿ, ತುಲಸೀಕಾಷ್ಠಚಂದನ, ಪಚ್ಚಕರ್ಪೂರ, ಅಗುರು ಮಿಶ್ರಿತವಾದದ್ದನ್ನು ಶ್ರೀಹರಿಗೆ ಸಮರ್ಪಿಸಿದರೆ ಮಾಧವನ ಲೋಕವನ್ನು ಹೊಂದುವನು." ಹಿಂದೆ ಹೇಳಿರುವ ಲಕ್ಷಣಗಳಿಂದ ಯುಕ್ತವಾಗಿರುವ ಗಂಧಮುದ್ರೆಯನ್ನು ತೋರಿಸಬೇಕು. ಆ ಗಂಧವನ್ನು ತುಳಸೀದಳದೊಡನೆ "ಇದಂ ವಿಷ್ಣುಃ" ಎಂಬ ಮಂತ್ರದಿಂದಲೂ ಮೂಲಮಂತ್ರದಿಂದಲೂ ಸಮರ್ಪಿಸಬೇಕು. ವಸ್ತ್ರವನ್ನು ತೊಳೆಯಬೇಕು. ಅನಂತರದಲ್ಲಿ ಪುಷ್ಪಸಹಿತವಾದ ತುಳಸಿಯನ್ನು ಸಮರ್ಪಿಸಬೇಕು. ಮೊದಲು ಪುಷ್ಪಸಹಿತವಾದ ತುಳಸಿಯನ್ನು ಪ್ರಾರ್ಥಿಸಬೇಕು.

ತ್ವದಂಗಸಂಭವೈಃ ಪತ್ರೈಃ ಪೂಜಯಾಮಿ ಯಥಾ ಹರಿಂ |
ತಥಾ ಕುರು ಪವಿತ್ರಾಂಗಿ ಕಲೌ ಮಲವಿನಾಶಿನಿ ||

"ಓ ತುಳಸೀದೇವಿಯೇ, ನಿನ್ನ ಅಂಗಗಳಿಂದ ಹುಟ್ಟಿರುವ ಎಲೆಗಳಿಂದ ಶ್ರೀಹರಿಯನ್ನು ಪೂಜಿಸುವಂತೆ ಮಾಡು. ನೀನು ಪವಿತ್ರವಾದ ಅಂಗಗಳಿಂದ ಯುಕ್ತಳಾಗಿರುವಿ. ಕಲಿಕಾಲದ ದೋಷಗಳನ್ನು ಪರಿಹರಿಸುವಿ. ಅನಂತರದಲ್ಲಿ ಪುಷ್ಪ ಮುದ್ರೆಯನ್ನು ತೋರಿಸಬೇಕು.

## ಪುಷ್ಪ ಮುದ್ರಾಲಕ್ಷಣ

ಉತ್ತಾನಂ ದಕ್ಷಿಣಂ ಪಾಣಿಂ ಪ್ರಗೃಹ್ಯಾಕುಂಚನಾಂಗುಲಿಮ್ |
ವಿಮುಕ್ತಮಧ್ಯಮಾ ಚೈವ ಪುಷ್ಪಮೇವಂ ಪ್ರಚಕ್ಷತೇ || (ಕಪಿಂಜಲಸಂಹಿತಾ)

"ಬಲ ಅಂಗೈಯನ್ನು ಮೇಲ್ಮುಖವಾಗುವಂತೆ ಮಾಡಿ ಕೊಳ್ಳಬೇಕು. ಬೆರಳುಗಳನ್ನೆಲ್ಲಾ ಬಗ್ಗಿಸಿ ಕೊಳ್ಳಬೇಕು. ಆದರೆ ನಡುಬೆರಳನ್ನು ನೆಟ್ಟಗೆ ಮಾಡಿಕೊಳ್ಳಬೇಕು. ಇದು ಪುಷ್ಪಮುದ್ರೆಯೆನಿಸುತ್ತದೆ. ಹಿಂದೆ ಹೇಳಿರುವ ಪುಷ್ಪಗಳನ್ನು ತುಲಸೀದಳಗಳೊಡನೆ "ತದ್ವಿಷ್ಣೋಃ" ಎಂಬ ಮಂತ್ರದಿಂದಲಾಗಲೀ ಮೂಲಮಂತ್ರದಿಂದಲಾಗಲೀ ನೂರ ಎಂಟು ಅಥವಾ ಅಷ್ಟೋತ್ತರ ಸಹಸ್ರಸಂಖ್ಯೆಯನ್ನು ಸಮರ್ಪಿಸಬೇಕು.

ಜಾತ್ಯಾದೀನಿ ಸುಗಂಧೀನಿ ತುಲಸೀಮಿಶ್ರಿತಾನಿ ಚ |
ದತ್ವಾ ಪುಣ್ಯಮವಾಪ್ನೋತಿ ಕೇಶವಾಯ ಪ್ರತುಷ್ಟಿರಮ್ ||

"ಜಾಜಿ ಮುಂತಾದ ತುಂಬಾ ಪರಿಮಳದಿಂದ ಯುಕ್ತವಾದ ಪುಷ್ಪಗಳೊಡನೆ ತುಳಸಿಯನ್ನೂ ಸೇರಿಸಿ ಶ್ರೀಹರಿಗೆ ಸಮರ್ಪಿಸಬೇಕು. ಇದರಿಂದ ಶ್ರೀಹರಿಯು ಸಂತುಷ್ಟನಾಗುವನು. ಪುಣ್ಯವು ವೃದ್ಧಿಯಾಗುತ್ತದೆ.

ಸ್ನಾಪಯಿತ್ವಾ ತು ಗೋವಿಂದಂ ಪುಷ್ಪಮಾಲಾವರೋಹಣಮ್ |
ಕುರುತೇ ಪ್ರತಿಪುಷ್ಪಂ ತು ಸ್ವರ್ಣನಿಷ್ಕಾಯುತಂ ಫಲಮ್ ||
ಸುಮಂಜರೀದಲೈರ್ಯುಕ್ತೈಃ ಕೋಮಲೈಸ್ತುಲಸೀದಲೈಃ |
ಪ್ರಕುರ್ವಂತಿ ಹರೇಃ ಪೂಜಾಂ ಕೃತಾರ್ಥಾಸ್ತು ಕಲೌ ಯುಗೇ ||
ಯಃ ಪುನಸ್ತುಲಸೀಪತ್ರೈಃ ಕೋಮಲೈರ್ಮಂಜರೀಯುತೈಃ |
ಪೂಜಾಯೇತ್ಸೂತ್ರಬದ್ಧೈಸ್ತು ಕೃಷ್ಣಂ ಮುಚ್ಯೇತ ಬಂಧನಾತ್ ||
ಆಪೀಠಾಂತಂ ಮಹೇಶಾನಂ ತುಲಸೀದಲಮಾಲಯಾ |
ಸಂಛಾದಯತಿ ಯೋ ವಿಷ್ಣುಂ ಗವಾಂ ಕೋಟಿಫಲಂ ಲಭೇತ್ ||
ತುಲಸೀಪುತ್ರಮೇಕಂ ತು ಸುವರ್ಣಫಲಸಂಯುತಮ್ |
ತುಲ್ಯಂ ಭವತಿ ಪಕ್ಷೀಂದ್ರ ದತ್ತಂ ಕೇಶವಮೂರ್ಧನಿ ||

"ಗೋವಿಂದನನ್ನು ಸ್ನಾನ ಮಾಡಿಸಿ ಪುಷ್ಪದ ಮಾಲೆಯನ್ನು ಸಮರ್ಪಿಸಬೇಕು. ಆ ಮಾಲೆಯಲ್ಲಿರುವ ಒಂದೊಂದು ಪುಷ್ಪಗಳಿಗೂ ಬಂಗಾರದ ಹತ್ತು ಸಾವಿರ ನಾಣ್ಯಗಳನ್ನು ಸಮರ್ಪಿಸಿದ ಫಲವು ಬರುತ್ತದೆ. ತುಳಸೀಮಂಜರಿಯಿಂದ ಯುಕ್ತವಾಗಿರುವ ಅತಿಮೃದುವಾದ ತುಲಸೀದಳಗಳಿಂದ ಶ್ರೀಹರಿಯನ್ನು ಪೂಜಿಸುವವರು ಕಲಿಯುಗದಲ್ಲಿ ಕೃತಕೃತ್ಯರಾಗುವರು. ಮೇಲ್ಕಂಡ ತುಳಸೀದಳಗಳನ್ನು ಬಾಳೆನಾರುಗಳಿಂದ ಕಟ್ಟಿ ಶ್ರೀಹರಿಗೆ ಸಮರ್ಪಿಸುವವನು ಸಂಸಾರಬಂಧನದಿಂದ ಬಿಡುಗಡೆಯನ್ನು ಪಡೆಯುವನು. ಪೀಠದ ವರೆಗೆ ತುಲಸೀದಳಗಳ ಮಾಲೆಯಿಂದ ಯಾವನು ಮುಚ್ಚುವನೋ ಅವನು ಕೋಟಿ ಗೋದಾನಗಳ ಫಲವನ್ನು ಪಡೆಯುವನು. ಶ್ರೀಕೃಷ್ಣನ ತಲೆಯಲ್ಲಿ ಸಮರ್ಪಿಸಿರುವ ಒಂದೇ ಒಂದು ತುಲಸೀದಳವು ಸುವರ್ಣಫಲದಿಂದ ಯುಕ್ತವಾಗಿರುವಂ ಪುಷ್ಪಕ್ಕೆ ಸಮವೆನಿಸುತ್ತದೆ.

ಶುಷ್ಕಂ ಪರ್ಯುಷಿತಂ ಚಾರ್ದ್ರಂ ಕಾಷ್ಠಂ ವಾ ತುಲಸೀಗತಮ್ |
ಅರ್ಚನೇ ವಾಸುದೇವಸ್ಯ ಲಕ್ಷಕೋಟಿಗುಣಂ ಭವೇತ್ ||

ಒಣಗಿದ ತುಳಸಿ, ಹಳಸಿದ ತುಳಸಿ, ತುಳಸೀಕಾಷ್ಠ ಮುಂತಾದವುಗಳಿಂದ ಶ್ರೀವಾಸುದೇವನನ್ನು ಅರ್ಚಿಸಿದರೂ ಲಕ್ಷಕೋಟಿ ಅರ್ಚನೆಯ ಫಲವು ಬರುತ್ತದೆ.

## ತುಳಸಿ ಇಲ್ಲದ ಪುಷ್ಪಗಳ ಸಮರ್ಪಣೆಯು ನಿಷಿದ್ಧವಾಗಿದೆ

ತುಳಸೀ ಇಲ್ಲದ ಪುಷ್ಪಗಳಿಂದ ಶ್ರೀಹರಿಯನ್ನು ಪೂಜಿಸಕೂಡದು. ಹಾಗೂ ಪೂಜಿಸಿದರೆ ಅದಕ್ಕೆ ಪ್ರಾಯಶ್ಚಿತರೂಪವಾಗಿ ಸಂಧ್ಯಾಕಾಲದಲ್ಲಿ ಕೊಡುವ ಮೂರು ಅರ್ಘ್ಯಗಳನ್ನು ವಿಷ್ಣುಗಾಯತ್ರಿಮಂತ್ರದಿಂದ ಕೊಡಬೇಕು.

## ಆಯುಧ ಪೂಜೆ

ಸುದರ್ಶನಂ ಪಾಂಚಜನ್ಯಂ ಗದಾಸೀಷುಧನುರ್ಹಲಾನ್ |
ಮುಸಲಂ ಕೌಸ್ತುಭಂ ಮಾಲಾಂ ಶ್ರೀವತ್ಸಂ ಚಾನುಪೂಜಯೇತ್ || (ಭಾಗವತ ವಚನ)

ಶ್ರೀಹರಿಯನ್ನು ಪೂಜಿಸಿ ಮುಗಿದ ಕೂಡಲೇ ಶ್ರೀಹರಿಯ ಸುದರ್ಶನಚಕ್ರ, ಪಾಂಚಜನ್ಯ ಶಂಖ, ಕೌಮೋದಕೀಗದೆ, ನಂದಕಖಡ್ಗ, ಬಾಣಗಳು, ಧನುಸ್ಸು, ನೇಗಿಲು, ಒನಕೆ, ಕೌಸ್ತುಭಮಣಿ, ವೈಜಯಂತೀಮಾಲಾ, ಶ್ರೀವತ್ಸಚಿಹ್ನೆ ಇವುಗಳನ್ನು ಪೂಜಿಸಬೇಕು.

## ಆಯುಧಗಳಲ್ಲಿರುವ ದೇವತೆಗಳು

ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ ತಮಸ್ಥಿತಾ ಶ್ರೀರಿತಿ ಯಾಂ ವದಂತಿ |
ಸತ್ವಾತ್ಮಿಕಾ ಶಂಖಮಥೋ ರಜಸ್ಥಾ ಭೂನಾಮಿಕಾ ಪದ್ಮಮಭೂದ್ಧರೇರ್ಹಿ ||
ಗದಾ ತು ವಾಯುರ್ಬಲಸಂವಿದಾತ್ಮಾ ಶಾರ್ಙ್ಗಂ ಚ ವಿದ್ಯೇತಿ ರಮೈವ ಖಡ್ಗಮ್ ||
ದುರ್ಗಾತ್ಮಿಕಾ ಸೈವ ಚ ಚರ್ಮನಾಮ್ನೀ ಪಂಚಾತ್ಮಕೋ ಮಾರುತ ಏವ ಬಾಣಃ |
ಏವಂ ಸ್ಥಿತೇಷ್ವೇವ ಪುರಾತನೇಷು ವರಾದ್ರಥಾಂಗತ್ವಮವಾಪ ಕಾಮಃ || (ಮಹಾಭಾರತ ತಾತ್ಪರ್ಯನಿರ್ಣಯ)

ಮೊದಲು ತಮೋಗುಣಗಳಿಗೆ ಅಭಿಮಾನಿನಿಯಾಗಿರುವ ದುರ್ಗಾದೇವಿಯು ಚಕ್ರದ ರೂಪವನ್ನು ಧರಿಸಿದಳು. ಅನಂತರದಲ್ಲಿ ಸತ್ವಗುಣಕ್ಕೆ ಅಭಿಮಾನಿನಿಯಾದ ಶ್ರೀದೇವಿಯು ಪಾಂಚಜನ್ಯಶಂಖದ ರೂಪವನ್ನು ಧರಿಸಿದಳು. ರಜೋಗುಣಕ್ಕೆ ಅಭಿಮಾನಿನಿಯಾಗಿರುವ "ಭೂ" ಎಂಬ ಹೆಸರುಳ್ಳ ಲಕ್ಷ್ಮೀದೇವಿಯು ಪದ್ಮದ ರೂಪವನ್ನು ಧರಿಸಿದಳು. ಬಲ ಮತ್ತು ಜ್ಞಾನಪೂರ್ಣರಾಗಿರುವ ವಾಯುದೇವರು ಕೌಮೋದಕೀ ಎಂಬ ಗದೆಯ ರೂಪವನ್ನು ಧರಿಸಿದರು. ವಿದ್ಯಾಭಿಮಾನಿನಿಯಾದ ಶ್ರೀಲಕ್ಷ್ಮೀದೇವಿಯು ಶಾರ್ಙ್ಗ ಎಂಬ ಧನಸ್ಸಿನ ರೂಪವನ್ನು ಧರಿಸಿದಳು. ರಮಾ ದೇವಿಯು ನಂದಕ ಎಂಬ ಖಡ್ಗದ ರೂಪವನ್ನು

ಧರಿಸಿದಳು. ದುರ್ಗಾದೇವಿಯು ಗುರಾಣಿ ಎಂಬ ರೂಪವನ್ನು ಧರಿಸಿದಳು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ರೂಪಗಳನ್ನು ಧರಿಸಿರುವ ವಾಯುದೇವರು ಬಾಣಗಳ ರೂಪವನ್ನು ಧರಿಸಿದರು.

ಹೀಗೆ ಸೃಷ್ಟಿಯ ಆದಿಯಲ್ಲಿ ತನ್ನ ಪತ್ನಿಯಾದ ರಮಾದೇವಿಯರನ್ನೂ ಮಗನಾದ ವಾಯುದೇವರನ್ನೂ ಬೇರೆ ಬೇರೆ ಆಯುಧಗಳಾಗಿ ಧರಿಸಿದ್ದನು. ಆಯಾ ಆಯುಧಗಳಿಂದ ದುಷ್ಟನಿಗ್ರಹವನ್ನು ಶ್ರೀಹರಿಯು ಮಾಡುತ್ತಿದ್ದನು. ಆ ದುಷ್ಟ ನಿಗ್ರಹದಿಂದ ಹರಿಗೆ ಫಲವಿಲ್ಲ. ವಾಯುದೇವರೂ ಯಾವಾಗಲೂ ಯಾವ ಫಲವನ್ನೂ ಅಪೇಕ್ಷಿಸದೆ ಶ್ರೀಹರಿಯು ಸೇವಿಸುತ್ತಿರುವರು.

ಇತರ ದೇವತೆಗಳು ಶ್ರೀಹರಿಯ ಆಯುಧಗಳಿಂದ ದುಷ್ಟನಿಗ್ರವು ಏರ್ಪಡುತ್ತಿರುವುದನ್ನು ನೋಡಿದರು. ಆ ದುಷ್ಟನಿಗ್ರಹದಿಂದ ಏರ್ಪಡುವ ಫಲವು ತಮಗೆ ಬರಲೆಂದು ಶ್ರೀ ಹರಿಯನ್ನು ಆರಾಧಿಸಿ ಅವನ ಅನುಗ್ರಹದಿಂದ ಬೇರೆ ಬೇರೆ ಆಯುಧಗಳಿಗೆ ಅಭಿಮಾನಿಗಳಾದರು. ಅವರುಗಳ ಮಧ್ಯದಲ್ಲಿ ಮನ್ಮಥನು ಚಕ್ರಕ್ಕೆ ಅಭಿಮಾನಿಯಾದನು. ಈ ಆಯುಧಗಳಲ್ಲಿ ಚಕ್ರವನ್ನು ಮೇಲಿರುವ ಬಲಗೈಯಲ್ಲಿಯೂ ಶಂಖವನ್ನು ಮೇಲಿರುವ ಎಡಗೈಯಲ್ಲಿಯೂ ಪದ್ಮನ್ನು ಕೆಳಗಿರುವ ಎಡಗೈಯಲ್ಲಿಯೂ ಗದೆಯನ್ನು ಕೆಳಗಿರುವ ಬಲಗೈಯಲ್ಲಿರೂ ಶ್ರೀಹರಿಯು ಧರಿಸಿರುವನು.

### ಆಯುಧ ಪೂಜಾಕ್ರಮ

ಚಕ್ರಾಭಿಮಾನಿನ್ಯೈ ಓಂ ದುಂ ದುರ್ಗಾಯೈ ನಮಃ, ಶಂಖಾಭಿಮಾನಿನ್ಯೈ, ಓಂ ಶ್ರೀಂ ಶ್ರೀಯೈ ನಮಃ, ಗದಾಭಿಮಾನಿನೇ ಓಂ ವಾಂ ವಾಯವೇ ನಮಃ ಪದ್ಮಾಭಿಮಾನಿನ್ಯೈ ಓಂ ಭೂಂ ಭೂಮ್ಯೈ ನಮಃ ಚರ್ಮಾಭಿಮಾನಿನ್ಯೈ ಓಂ ದುಂ ದುರ್ಗಾಯೈ ನಮಃ, ಖಡ್ಗಾಭಿಮಾನಿನ್ಯೈ ಓಂ ರಂ ರಮಾಯೈ ನಮಃ, ಶಾರ್ಙ್ಗಾಭಿಮಾನಿನ್ಯೈ ಓಂ ಏಂ ವಿದ್ಯಾಯೈ ನಮಃ, ಬಾಣಾಭಿಮಾನಿನೇ ಓಂ ಪಂಚಾತ್ಮಕಮುಖ್ಯಪ್ರಾಣಾಯ ನಮಃ, ಓಂ ಕಂ ಕೌಸ್ತುಭಸ್ಯರೂಪಸ್ಯ ವಿರಿಂಚಾಯ ನಮಃ ಓಂ ವನಮಾಲಾಭಿಮಾನಿನ್ಯೇ ಶ್ರೀಂ ಶ್ರೀಯೈ ನಮಃ ಓಂ ಶ್ರೀವತ್ಸಾಭಿಮಾನಿನ್ಯೈ ಓಂ ಲಂ ಲಕ್ಷ್ಮ್ಯೈ ನಮಃ ಇದು ಮಹಾಭಾರತತಾತ್ಪರ್ಯನಿರ್ಣಯ ಸಮ್ಮತಪೂಜಾ.

### ಪಾದ್ಮತಂತ್ರದಲ್ಲಿ ಹೇಳಿರುವ ಆಯುಧಪೂಜಾಕ್ರಮ

ಶಂಖಚಕ್ರಗದಾಶಾರ್ಙ್ಗಧನುಃಪಂಚಾಯುಧಾನಿ ತು |
ದ್ವಿಹಸ್ತಾನ್ ಪುರುಷಾಕಾರಾನ್ ಸ್ವಚಿಹ್ನಾಂಕಿತಮಸ್ತಕಾನ್ ||
ಶಾರ್ಙ್ಗಾಕಾರಂ ಪ್ರಕುರ್ವೀತ ಲಂಬಕುಕ್ಷಿಂ ಸಿತಪ್ರಭಮ್ |
ರಕ್ತವರ್ಣಂ ವಿವಿಕ್ತಾಕ್ಷಂ ಕುರ್ಯಾಚ್ಚಕ್ರಧರಂ ಪರಮ್ ||
ಗದಾಧರಂ ಮಹಾಕಾಯಂ ವೃತ್ತಾಕ್ಷಂ ಪಿಂಗಲಪ್ರಭಮ್ |
ಸ್ತ್ರೀವೇಷಃ ಖಡ್ಗಧಾರೀ ತು ಸ್ವತನುಃಶ್ಯಾಮಲಪ್ರಭಃ ||
ಸ್ವಾಂಗೇಷು ಹೇಮವರ್ಣಾಭೋ ಮಹಾಕಾಯೋ ಮಹೋದರಃ ||

ಶಂಖ, ಚಕ್ರ, ಗದೆ, ಶಾರ್ಙ್ಗಧನುಸ್ಸು ಐದು ಆಯುಧಗಳು ಇವುಗಳನ್ನು ಪೂಜಿಸಬೇಕು. ಈ ಎಲ್ಲಾ ಆಯುಧಗಳೂ ಪುರುಷಾಕಾರದಿಂದಲೂ ತಮ್ಮ ತಮ್ಮ ಆಯುಧಗಳನ್ನು ತಲೆಯ ಮೇಲೆ ಧರಿಸಿದವುಗಳಾಗಿಯೂ ಇರಬೇಕು.

ಇನ್ನು ಮುಂದೆ ಒಂದೊಂದು ಆಯುಧಗಳ ವಿಶೇಷಾಕಾರಗಳನ್ನು ತಿಳಿಸುವೆವು. ಶಾರ್ಙ್ಗಧನುಸ್ಸಿನ ಆಕಾರದಿಂದಲೂ ಜೋಲಾಡುತ್ತಿರುವ ಹೊಟ್ಟೆಯಿಂದಲೂ ಶುಭ್ರವರ್ಣ ದಿಂದಲೂ ಯುಕ್ತವಾದ ಶಾರ್ಙ್ಗಧನುಸ್ಸನ್ನು ಸ್ಮರಿಸಬೇಕು. ಕೆಂಪು ಬಣ್ಣದಿಂದಲೂ ಸ್ಪಷ್ಟವಾದ ಕಣ್ಣುಗಳಿಂದಲೂ ಚಕ್ರದಿಂದ ಯುಕ್ತವಾಗಿರುವ ಕೈಗಳಿಂದಲೂ ಸಹಿತವಾಗಿರುವ ಚಕ್ರವನ್ನು

ಸ್ಮರಿಸಬೇಕು. ದೊಡ್ಡ ಆಕಾರ, ಕೈಯಲ್ಲಿ ಗದೆ, ವರ್ತುಲಾಕಾರವಾದ ಕಣ್ಣುಗಳು, ಹೊಂಬಣ್ಣ ಇವುಗಳಿಂದ ಯುಕ್ತವಾಗಿರುವ ಗದಾಯುಧವನ್ನು ಸ್ಮರಿಸಬೇಕು. ಕೈಯಲ್ಲಿ ಖಡ್ಗ, ಶ್ಯಾಮಲವಾದ ದೇಹದ ಕಾಂತಿ, ಖಡ್ಗದ ಆಕಾರ, ಬಂಗಾರದಂತೆ ಹೊಳೆಯುವಿಕೆ, ದೊಡ್ಡ ಆಕಾರ, ದೊಡ್ಡ ಹೊಟ್ಟೆ ಇವುಗಳಿಂದ ಯುಕ್ತವಾಗಿರುವ ಸ್ತ್ರೀವೇಷಧಾರಿಯಾಗಿರುವ ಖಡ್ಗಾಯುಧವನ್ನು ಸ್ಮರಿಸಬೇಕು.

## ಉಪಚಾರಗಳು

ಉಪಚಾರಾ ಹರೇರದ್ಯ ಸಪರ್ಯಾಸನಗೋಚರಾಃ |
ಕಥ್ಯಂತೇ ವಿಂಶತಿರ್ಬ್ರಹ್ಮನ್ ಶೃಣು ತಾನ್ಮನ್ಮುಖೋದ್ಗತಾನ್ ||
ಆವಾಹನಂ ನಮಸ್ಕಾರಃ ಪ್ರತ್ಯುತ್ಥಾನಮನಂತರಮ್ |
ಪುಷ್ಪಾಂಜಲಿಃ ಸ್ವಾಗತೋಕ್ತಿರಾಸನಂ ಪಾದಪೀಠಿಕಾ ||
ಅರ್ಘ್ಯಂ ಪ್ರತಿಗ್ರಹಂ ಪಾದ್ಯಂ ಆಪ್ಯತಾದ್ಯಾತಿದರ್ಶನಮ್ |
ಆಲೇಪನಂ ಚರಣಯೋಶ್ಚಂದನಂ ಕ್ಷೀರವಾರಿಭಿಃ ||
ಅಪಾಮಾಚಮನೀಯಾನಾಂ ಪ್ರತಿಗ್ರಹಣದರ್ಶನಮ್ |
ಉಪಸ್ಪರ್ಶನಮಾಲೇಪಶ್ಚಂದನಾದ್ಯನುಚರ್ಚಯಾ ||
ಪುಷ್ಪಮಾಲಾ ಧೂಪದಾನಂ ಮಧುಪರ್ಕನಿವೇದನಮ್ |
ಘನಸಾರೋ ನಾಗವಲ್ಲೀ ಸ್ನಾನವಿಷ್ಟರಗೋಚರಾಃ ||
ಪಾದುಕೇ ಸ್ನಾನಪೀಠಂ ಚ ಸ್ನಾನಶಾದಿಕಮನ್ವಿತಾ |
ದಂತಕಾಷ್ಠಮಥಾಽದರ್ಶೋ ಜಾತ್ಯಾ ನಿರ್ಲೇಖ್ಯಪಟ್ಟಿಕಾ ||
ತಾಂಬೂಲವೀಟಿಕಾ ವಸ್ತ್ರಮಪರಾಧಪ್ರಸಾದಿತಮ್ |
ಅಭ್ಯಂಗೋ ಮೌಲಿಮಾಲಾ ಚ ತಾಲವೃಂತಮನಂತರಮ್ ||
ಚಂದನೋದ್ವರ್ತನಂ ತನ್ವೀಗಾಥಾಽಽಮಲಕವಾರಿ ಚ |
ಕಂಕತಂ ರಜನೀಸ್ನಾನಂ ವಸ್ತ್ರಗಂಧಾನುಲೇಪನಮ್ ||
ಉತ್ತರೀಯಪವಿತ್ರಾಣಿ ನೃತ್ತಗೇಯಮನಂತರಮ್ |
ಪಾದ್ಯಂ ದಶಶತೈಶ್ಛಿದ್ರೈಃ ಸ್ನಾನಂ ಧಾರಾಭಿರಂಭಸಾಮ್ ||
ನೀರಾಜನಂ ಶಿರಃ ಪ್ರೋತಮುಷ್ಣಪ್ರೋತಂ ಚ ವಾಸಸಾ |
ಅಂಗಾದಿಮಾರ್ಜನಂ ವಸ್ತ್ರಮುಪವೀತಮನಂತರಮ್ ||
ಉತ್ತರೀಯಂ ತ್ರಿಂಶದೇತೇ ಕಥಿತಾಃ ಕಮಲಾಸನ |
ಅಲಂಕಾರಾಸನಸ್ಯಾಸ್ಯ ಹರೇಸ್ತತ್ಕಾಲಗೋಚರಾಃ ||
ಉಪಚಾರಾಃ ಶಿರಸ್ನಾನಂ ಪೀತಕೌಶೇಯವಾಸಸಾ |
ಕರ್ಪೂರಸಾರಮಾಲೋಕೋ ಹ್ಯಾಪಾದತಲಮಸ್ತಕಮ್ ||
ಕಸ್ತೂರಿಕಾ ಮೃಗಮದಚಂದನೇನಾನುಲೇಪನಮ್ |
ವ್ಯಜನಂ ಚಾಮರಂ ಪ್ರಾಹ್ಯೈಃ ಕುಂಕುಮೇನಾನುಲೇಪನಮ್ ||

ಗಂಧಶ್ಚ ಕೃತಿನೋ ಭೂಪಾಃ ಬ್ರಹ್ಮಸೂತ್ರಮನಂತರಮ್ |
ಉತ್ತರೀಯಂ ಮೌಲಿಮಾಲಾ ಬಹುಮಾಲಾವಿಲಂಬನಮ್ ||
ಮೃತ್ಸ್ನಯಾ ತಿಲಕಂ ಚೋರ್ಧ್ವಮಂಜನಂ ಚ ಶಲಾಕಯಾ |
ಪುಷ್ಪಾಲೀಕರಣಂ ಬ್ರಹ್ಮಮಹಾದರ್ಶನದರ್ಶನಮ್ ||
ತಾಂಬೂಲಿಕಾ ಧೂಪದೀಪೌ ಶಾಲಿತಂಡುಲಮಾತ್ರಕಃ |
ಸ್ವಾಧ್ಯಾಯೋಽಧ್ಯಾಪನಂ ನಾಟ್ಯಂ ಗಾನಂ ವೇಣುವಿನೋದನಮ್ ||
ವೀಣಾದಿನಾದನಂ ಪಾಠೋ ಮಂಗಳಾನಾಮನಂತರಮ್ |
ನೀರಾಜನಂ ಪೀಠದಾನಂ ಪಂಚಾಂಗಕ್ಷೇಪಣಂ ಧ್ವಶಿ ||
ಪಂಚವಿಂಶೋಪಚಾರಾಣಾಮಲಂಕಾರಸ್ತು ಪದ್ಮಜ |
ಯತ್ರೋಪಚಾರಾಸ್ತು ಹರೇಸ್ತತ್ಕಾಲಾಚಾರಗೋಚರಾಃ ||
ಉಪಾನಹೌ ಚಾಮರಾಣಿ ಮುಕ್ತಾತಪನಿವಾರಣಮ್ |
ಮಯೂರಪಿಂಛವ್ಯಜನಂ ತಾಲವೃಂತಂ ರಥೋ ಗಜಃ ||
ಅಶ್ವಾಶ್ಚ ಶಿಬಿಕಾಯಾನಂ ವೈನತೇಯೋ ಗಜೋನ್ನತಿಃ |
ಕ್ರೀಡಾಯಷ್ಟಿಶ್ಚ ತಾಂಬೂಲಕ್ರೀಡಾ ಫಲಸಮೃದ್ಧಯಃ ||
ಏವಂ ಪಂಚದಶ ಪ್ರೋಕ್ತಂ ಯಾತ್ರಾಸನಮನಂತರಮ್ |
ಭೋಜನಾಸನ ಆರೂಢೇ ಹರೇಸ್ತತ್ಕಾಲಗೋಚರಾಃ ||
ಮಧುಪರ್ಕಶ್ಚ ತಾಂಬೂಲವಾಟಿಕಾ ಚಾನ್ನಚಾಟಿಕಾ |
ಅರ್ಹಣಾಂತಃ ಪಯಸಾನ್ನಂ ಮುದ್ಗಾನ್ನಂ ಚ ಗುಡೋದನಮ್ ||
ದಧ್ಯೋದನಂ ಪಾಯಸಾದಿ ಪಾನೀಯಂ ಹಸ್ತಚಾಟಕಮ್ |
ಶುದ್ಧಿಶ್ಚ ಕರಯೋರ್ದೇಯಂ ಚಂದನಾಂಭೋದವಾರಿಣಾ ||
ಏವಂ ಭೋಜ್ಯಾಸನೇ ಪ್ರೋಕ್ತಾ ಉಪಚಾರಸ್ತ್ರಯೋದಶ | (ಪಾದ್ಮಸಂಹಿತಾ)

ಶ್ರೀಹರಿಯನ್ನು ಪೂಜಾಕಾಲದಲ್ಲಿ ಆಗಾಗ್ಗೆ ಬೇರೆ ಬೇರೆ ಆಸನಗಳಲ್ಲಿ ಕೂಡಿಸಬೇಕು. ಪೂಜಾಪೀಠದಲ್ಲಿರುವಾಗ ಇಪ್ಪತ್ತು ಉಪಚಾರಗಳನ್ನು ಮಾಡಬೇಕು. (1) ಆವಾಹನ. (2) ನಮಸ್ಕಾರ. (3) ಪ್ರತ್ಯುತ್ಥಾನ ಅಂದರೆ ಎದುರುಗೊಳ್ಳುವುದು. (4) ಪುಷ್ಪಾಂಜಲಿ. (5) ಸ್ವಾಗತೋಕ್ತಿ. (6) ಆಸನ. (7) ಪಾದಪೀಠಸಮರ್ಪಣೆ. (8) ಅರ್ಘ್ಯ. (9) ಪಾದ್ಯ. (10) ಎರಡು ಪಾದಗಳಿಗೂ ಗಂಧಲೇಪನ. (11) ಆಚಮನೀಯ ಜಲವನ್ನು ತೋರಿಸುವುದು. (12) ದೇವರನ್ನು ಮುಟ್ಟುವುದು. (13) ಗಂಧ ಮುಂತಾದ ಸುಗಂಧ ದ್ರವ್ಯಗಳ ಲೇಪನ. (14) ಪುಷ್ಪಮಾಲಾಸಮರ್ಪಣ. (15) ಧೂಪವನ್ನು ತೋರಿಸುವುದು. (16) ಮಧುಪರ್ಕ ಸಮರ್ಪಣೆ. (17) ಗಂಧಸಮರ್ಪಣೆ. (18) ತಾಂಬೂಲ ಸಮರ್ಪಣೆ. (19) ಆಚಮನೀಯ ಜಲ ಸಮರ್ಪಣ. (20) ಕನ್ನಡಿಯನ್ನು ತೋರಿಸುವುದು. ಹೀಗೆ 20 ಉಪಚಾರಗಳನ್ನು ಪೂಜಾಪೀಠದಲ್ಲಿ ಕುಳಿತಿರುವಾಗ ಶ್ರೀಹರಿಗೆ ಮಾಡಬೇಕು.

ಸ್ನಾನವನ್ನು ಮಾಡುವುದಕ್ಕಾಗಿ ಶ್ರೀಹರಿಯು ಆಸನದಲ್ಲಿ ಕುಳಿತಿರುವಾಗ ಮೂವತ್ತು ಉಪಚಾರಗಳನ್ನು ಮಾಡಬೇಕು.

(1) ಪಾದುಕೆಗಳು. (2) ಸ್ನಾನಪೀಠದ ಸಮರ್ಪಣೆ. (3) ದಂತಕಾಷ್ಠ. (4) ಕನ್ನಡಿ. (5) ತಾಂಬೂಲದ ಬೀಡಾ ಮತ್ತು ಬರಿಯ ಬೇಕಾದ ಕಾಗದ. (6) ವಸ್ತ್ರ. (7) ಅಪರಾಧಗಳನ್ನು ಕ್ಷಮಿಸುವಂತೆ ಬೇಡುವುದು. (8) ಅಭ್ಯಂಗ. (9) ತಲೆಯಿಂದ

ಕಾಲುಗಳವರೆಗೆ ಮಾಲೆ. (10) ಬೀಸಣಿಗೆ. (11) ಗಂಧದಿಂದ ಉಜ್ಜುವುದು. (12) ಹಳೆಯ ಕಥೆಗಳು. (13) ನೆಲ್ಲಿಯ ನೀರು. (14) ಬಾಚಣಗೆ ಮತ್ತು (15) ರಜನಿಯಿಂದ ಸ್ನಾನ. (16) ವಸ್ತ್ರ. (17) ಗಂಧದಿಂದ ಲೇಪಿಸುವುದು. (18) ಹೊದ್ದುಕೊಳ್ಳುವ ಬಟ್ಟೆ. (19) ಪವಿತ್ರ. (20) ನೃತ್ಯ. (21) ಹಾಡುವಿಕೆ. (22) ಪಾದ್ಯ. (23) ಒಂದು ಸಾವಿರ ಛಿದ್ರಗಳಿಂದ ಯುಕ್ತವಾದ ತಟ್ಟೆಯಿಂದ ಧಾರಾಸ್ನಾನ. (24) ಆರತಿ. (25) ವಸ್ತ್ರದಿಂದ ಮೈಯನ್ನು ಒರೆಸುವುದು. (26) ಶಿರಃಸ್ನಾನ. (27) ಉಷ್ಣೋದಕಸ್ನಾನ. (28) ವಸ್ತ್ರವನ್ನು ಉಡಿಸುವುದು. (29) ಯಜ್ಞೋಪವೀತ. (30) ಹೊದ್ದುಕೊಳ್ಳುವ ಬಟ್ಟೆಯಿಂದ ಹೊದಿಸುವುದು. ಈ ಮೂವತ್ತು ಉಪಚಾರಗಳನ್ನು ಸ್ನಾನಕ್ಕಾಗಿ ಕುಳಿತಿರುವ ಶ್ರೀಹರಿಗೆ ಮಾಡಬೇಕು.

ಶ್ರೀಹರಿಯನ್ನು ಅಲಂಕಾರ ಮಾಡುವುದಕ್ಕಾಗಿ ಕುಳ್ಳಿರಿಸಿರುವಾಗ ಇಪ್ಪತ್ತೈದು ಉಪಚಾರಗಳನ್ನು ಮಾಡಬೇಕು.

(1) ಪಚ್ಚಕರ್ಪೂರದ ಸಾರವನ್ನು ಲೇಪಿಸುವುದು. (2) ಕನ್ನಡಿಯನ್ನು ತೋರಿಸುವುದು. (3) ಅಂಗಾಲಿನಿಂದ ಆರಂಭಿಸಿ ತಲೆಯವರೆಗೆ ಕಸ್ತೂರೀ, ಪುನುಗು, ಗಂಧಗಳಿಂದ ಲೇಪಿಸುವುದು. (4) ಬೀಸಣಿಗೆ. (5) ಚಾಮರ ಸೇವೆ. (6) ಕೇಸರಿಯಿಂದ ಲೇಪಿಸುವುದು. (7) ಗಂಧಸಮರ್ಪಣೆ. (8) ಯಜ್ಞೋಪವೀತ ಸಮರ್ಪಣೆ. (9) ಹೊದ್ದುಕೊಳ್ಳುವ ವಸ್ತ್ರ. (10) ತಲೆಯಿಂದ ಕಾಲಿನವರೆಗೆಯೂ ಅಸಂಖ್ಯಾಕವಾಗಿಯೂ ಇರುವ ಮಾಲೆಗಳನ್ನು ಸಮರ್ಪಿಸುವುದು. (11) ಹಣೆಯಲ್ಲಿ ತಿಲಕವನ್ನಿಡುವುದು. (12) ಪುಷ್ಪಗಳಿಂದ ಅಲಂಕರಿಸುವುದು. (13) ತಾಂಬೂಲ ಸಮರ್ಪಣೆ. (14) ಧೂಪ. (15) ಆರತಿ. (16) ವೇದಾದಿಶಾಸ್ತ್ರಗಳ ಅಧ್ಯಯನ. (17) ಪಾಠ ಹೇಳುವುದು. (18) ಹಾಡುವುದು. (19) ನಾಟ್ಯವನ್ನು ಆಡುವುದು. (20) ಕೊಳಲನ್ನು ಊದುವುದು. (21) ವೀಣೆ ಮುಂತಾದವುಗಳನ್ನು ಬಾರಿಸುವುದು. (22) ಮಂಗಳಗ್ರಂಥಗಳನ್ನು ಪಾಠ ಹೇಳುವುದು. (23) ಆರತಿಯನ್ನು ಮಾಡುವುದು. (24) ಪೀಠಸಮರ್ಪಣ. (25) ಪಂಚಾಂಗವನ್ನು ತೋರಿಸುವುದು. ಹೀಗೆ ಇಪ್ಪತ್ತೈದು ಉಪಚಾರಗಳನ್ನು ಅಲಂಕಾರಪೀಠದ ಮುಂದೆ ಸಮರ್ಪಿಸಬೇಕು.

ಶ್ರೀಹರಿಯು ಯಾತ್ರೆಗೆ ಹೊರಟಿರುವಾಗ ಹದಿನೈದು ಉಪಚಾರಗಳನ್ನು ಸಮರ್ಪಿಸಬೇಕು.

(1) ಪಾದರಕ್ಷೆಗಳು. (2) ಚಾಮರಗಳು. (3) ಮುತ್ತಿನ ಕೊಡೆಗಳು. (4) ನವಿಲಿನ ಗರಿಯ ಬೀಸಣಿಗೆಗಳು. (5) ಬೀಸಣಿಗೆ. (6) ರಥ. (7) ಆನೆ. (8) ಕುದುರೆಗಳು. (9) ಪಲ್ಲಕ್ಕಿಗಳು. (10) ಗರುಡ. (11) ಆನೆಯ ಮೇಲೆ ಸವಾರಿ. (12) ಆಟದ ಬೆತ್ತಗಳು. (13) ತಾಂಬೂಲ. (14) ಕ್ರೀಡಾಸಾಮಗ್ರಿಗಳು. (15) ನಾನಾವಿಧವಾದ ಫಲಗಳ ಸಮೃದ್ಧಿ. ಹೀಗೆ ಹದಿನೈದು ಉಪಚಾರಗಳನ್ನು ಶ್ರೀಹರಿಯು ಯಾತ್ರೆಗಾಗಿ ಹೊರಟಿರುವಾಗ ಮಾಡಬೇಕು.

ಶ್ರೀಹರಿಯು ಭೋಜನಕ್ಕಾಗಿ ಕುಳಿತಿರುವಾಗ ಹದಿಮೂರು ಉಪಚಾರಗಳನ್ನು ಮಾಡಬೇಕು.

(1) ಮಧುಪರ್ಕ. (2) ತಾಂಬೂಲದ ಬೀಡ. (3) ಅನ್ನದ ಮುದ್ದೆಗಳು. (4) ಪಾಯಸಾನ್ನ. (5) ಹುಗ್ಗಿ. (6) ಗುಡೋದನ. (7) ದಧ್ಯೋದನ. (8) ಹಾಲಿನ ಪಾಯಸ. (9) ನೀರು. (10) ಕೈತುತ್ತು. (11) ಕೈಗಳನ್ನು ತೊಳೆಯುವುದು. (12) ಗಂಧದ ನೀರು. (13) ಕಮಲದ ನೀರು. ಹೀಗೆ ಹದಿಮೂರು ಉಪಚಾರಗಳನ್ನು ಭೋಜನ ಪೀಠದಲ್ಲಿ ಕುಳಿತಿರುವಾಗ ಶ್ರೀಹರಿಗೆ ಸಮರ್ಪಿಸಬೇಕು.

## ಆವರಣ ಪೂಜೆ

ದೇವರ ಮುಂಭಾಗದಲ್ಲಿ ಅಥವಾ ಪೂರ್ವದಿಕ್ಕಿನಲ್ಲಿ ಶ್ರೀಹರಿಯ ಆವರಣ ದೇವತೆಗಳನ್ನು ಪೂಜಿಸಬೇಕು. ದೇವರ ಆವರಣ ಪೂಜೆ ಬೇರೆ ಬೇರೆ ಗ್ರಂಥಗಳಲ್ಲಿ ಬೇರೆ ಬೇರೆ ವಿಧವಾಗಿ ಹೇಳಲ್ಪಟ್ಟಿದೆ. ಅವುಗಳಲ್ಲಿ ತಂತ್ರಸಾರಗ್ರಂಥಕ್ಕೆ ವಿರುದ್ಧವಾದ ಕ್ರಮವನ್ನು ಬಿಟ್ಟು ತಂತ್ರಸಾರದಲ್ಲಿ ಹೇಳಲ್ಪಟ್ಟಿರುವ ಕ್ರಮವು ಕೆಳಗೆ ಕೊಡಲ್ಪಟ್ಟಿದೆ.

ಲಕ್ಷ್ಮೀಧರೇ ಯಜೇತ್ತತ್ರ ಪಾರ್ಶ್ವಯೋರುಭಯೋರಪಿ | (ತಂತ್ರಸಾರ ವಚನ)

"ಶ್ರೀಹರಿಯ ಎರಡು ಪಾರ್ಶ್ವಗಳಲ್ಲಿ ಲಕ್ಷ್ಮೀದೇವಿಯರನ್ನೂ ಭೂದೇವಿಯರನ್ನೂ ಪೂಜಿಸಬೇಕು."

ಶ್ರಿಯಂ ವಾಮೇ ಭುವಂ ದಕ್ಷೇ ತನ್ಮುಖನ್ಯಸ್ತಲೋಚನೇ |
ಚಿಂತಯೇದ್ದಕ್ಷಿಣೇ ಪಾರ್ಶ್ವೇ ಲಕ್ಷ್ಮೀಂ ಕಾಂಚನಸನ್ನಿಭಾಮ್ ||
ಪದ್ಮಹಸ್ತಾಂ ವಿಶಾಲಾಕ್ಷೀಂ ದುಕೂಲವಸನಾಂ ಶುಭಾಮ್ |

ಶ್ರೀಹರಿಯ ಬಲಭಾಗದಲ್ಲಿ ಭೂದೇವಿಯರನ್ನೂ ಎಡಭಾಗದಲ್ಲಿ ಶ್ರೀದೇವಿಯರನ್ನೂ ಪೂಜಿಸಬೇಕು. ಶ್ರೀಹರಿಯನ್ನು ನೋಡುತ್ತಿರುವ ಈ ಎರಡು ದೇವಿಯರಲ್ಲಿ ಶ್ರೀದೇವಿಯರು ಬಂಗಾರದಂತೆ ಹೊಳೆಯುತ್ತಿರುವವರಾಗಿಯೂ ಕೈಗಳಲ್ಲಿ ಪದ್ಮವನ್ನು ಧರಿಸಿದವರಾಗಿಯೂ ವಿಶಾಲವಾದ ಕಣ್ಣುಗಳಿಂದ ಯುಕ್ತರಾಗಿಯೂ, ಪೀತಾಂಬರವನ್ನು ಉಟ್ಟುಕೊಂಡವರಾಗಿಯೂ ಇರಬೇಕು.

ವಾಮೇ ದೂರ್ವಾದಲಶ್ಯಾಮಾಂ ಚಿತ್ರಾಭರಣಭೂಷಿತಾಮ್ |
ಚಿಂತಯೇದ್ಧರಣೀಂ ದೇವೀಂ ನೀಲೋತ್ಪಲಕರಾಂ ಶುಭಾಮ್ || (ವಿಷ್ಣುತೀರ್ಥೀಯ ವಚನ)

ಶ್ರೀಹರಿಯ ಎಡಭಾಗದಲ್ಲಿ ಭೂದೇವಿಯರನ್ನು ಪೂಜಿಸಬೇಕು. ಆ ಭೂದೇವಿಯರು ಗರಿಕೆಹುಲ್ಲಿನಂತೆ ಹಸಿರು ಬಣ್ಣವುಳ್ಳ ದೇಹವುಳ್ಳವರಾಗಿಯೂ ನೀಲವಾದ ಕಮಲವನ್ನು ಕೈಗಳಲ್ಲಿ ಧರಿಸಿದವರಾಗಿಯೂ ವಿಚಿತ್ರವಾದ ಆಭರಣಗಳನ್ನು ಧರಿಸಿದವರಾಗಿಯೂ ಇರುವಂತೆ ಚಿಂತಿಸಬೇಕು. ಈ ಪೂಜೆಯನ್ನು ಅನುಷ್ಠಿಸುವ ಕ್ರಮವನ್ನು ಹೇಳುವೆವು.

"ಭಗವದಾವರಣಪೂಜಾಂ ಕರಿಷ್ಯೇ" ಎಂದು ಸಂಕಲ್ಪಿಸಿ ಪ್ರಥಮ ಆವರಣಪೂಜೆಯನ್ನು ಮಾಡಬೇಕು. "ದೇವಸ್ಯ ವಾಮೇ ಭಾಗೇ ಸ್ಥಿತಾಯೈ ಶ್ರೀಲಕ್ಷ್ಮ್ಯೈ ಸುವರ್ಣವರ್ಣಾಯೈ ಸರ್ವಾಭರಣಭೂಷಿತಾಯೈ ಪದ್ಮಹಸ್ತಾಯೈ ವಿಶಾಲಾಕ್ಷ್ಯೈ ತನ್ಮುಖನ್ಯಸ್ತಲೋಚನಾಯೈ ನಮಃ. ದಕ್ಷಿಣಪಾರ್ಶ್ವೇ ಸ್ಥಿತಾಯೈ ಧರಾಯೈ ದೂರ್ವಾದಲಶ್ಯಾಮಲಾಯೈ ವಿಚಿತ್ರಾಭರಣ ಭೂಷಿತಾಯೈ ನೀಲೋತ್ಪಲಹಸ್ತಾಯೈ ವಿಶಾಲಾಕ್ಷ್ಯೈ ತನ್ಮುಖನ್ಯಸ್ತಲೋಚನಾಯೈ ನಮಃ"

ಇನ್ನು ಮುಂದೆ ದ್ವಿತೀಯಾವರಣಪೂಜೆಯನ್ನು ಮಾಡಬೇಕು.

ಹೃದಯಾದೀಂಸ್ತಥೇಂದ್ರಾದಿದಿಕ್ಷ್ವಸ್ತ್ರಂ ಕೋಣಕೇಷು ಚ | (ತಂತ್ರಸಾರ ವಚನ)
ಚಕ್ರಶಂಖವರಾಭೀತಿಹಸ್ತಾನ್ಯೇತಾನಿ ಸರ್ವಶಃ |
ಮೂಲರೂಪಸ್ಯ ರೂಪಾಣಿ ಕೃಷ್ಣವರ್ಣಾ ಶಿಖೋಚ್ಯತೇ |

ಪೀಠಕ್ಕಿಂತ ಹೊರಗೆ ಪೂರ್ವದಿಕ್ಕಿನಲ್ಲಿ "ಕ್ರುದ್ಧೋಲ್ಕ" ಎಂಬ ಶ್ರೀಹರಿಯ ಮೂರ್ತಿಯನ್ನೂ, ದಕ್ಷಿಣದಿಕ್ಕಿನಲ್ಲಿ "ಮಹೋಲ್ಕ" ಎಂಬ ಶ್ರೀಹರಿಯ ಮೂರ್ತಿಯನ್ನೂ, ಪಶ್ಚಿಮದಿಕ್ಕಿನಲ್ಲಿ "ವೀರೋಲ್ಕ" ಎಂಬ ಶ್ರೀಹರಿಯ ಮೂರ್ತಿಯನ್ನೂ, ಉತ್ತರದಿಕ್ಕಿನಲ್ಲಿ, "ದ್ಯುಲ್ಕ" ಎಂಬ ಶ್ರೀಹರಿಯ ಮೂರ್ತಿಯನ್ನೂ ಆಗ್ನೇಯ, ನೈಋತ್ಯ, ವಾಯುವ್ಯ, ಈಶಾನ್ಯ ಎಂಬ ನಾಲ್ಕು ಕೋಣದಿಕ್ಕುಗಳಲ್ಲಿ "ಸಹಸ್ರೋಲ್ಕ" ಎಂಬ ಶ್ರೀಹರಿಯ ಮೂರ್ತಿಯನ್ನು ಪೂಜಿಸಬೇಕು. ಇದು ದ್ವಿತೀಯಾವರಣಪೂಜೆಯೆನಿಸುತ್ತದೆ. ಈ ದ್ವಿತಿಯಾವರಣದೇವತೆಗಳ ಬಣ್ಣವನ್ನು ತಿಳಿಸುತ್ತಾರೆ.

ಕ್ರುದ್ಧೋಲ್ಕ ಮುಂತಾದ ಎಲ್ಲಾ ಮೂರ್ತಿಗಳೂ ಮೂಲರೂಪದಂತೆ ಉದಯಿಸುತ್ತಿರುವ ಸೂರ್ಯನಂತೆ ಹೊಳೆಯುತ್ತಿರಬೇಕು. ಚಕ್ರ, ಶಂಖ, ವರಮುದ್ರೆ, ಅಭಯಮುದ್ರೆಗಳಿಂದ ಯುಕ್ತರಾಗಿರಬೇಕು. ಶಿಖೆಯಲ್ಲಿ ಸನ್ನಿಹಿತನಾಗಿರುವ "ವೀರೋಲ್ಕ" ಎಂಬ ಶ್ರೀಹರಿಯ ಮೂರ್ತಿಯು ತಲೆಯ ಕೂದಲಿನಂತೆ ಕಪ್ಪು ಬಣ್ಣದಿಂದ ಯುಕ್ತನಾಗಿರಬೇಕು.

### ಈ ಆವರಣದೇವತೆಗಳನ್ನು ಪೂಜಿಸುವ ಕ್ರಮ

ಪೀಠಾದ್ಬಹಿಃ ಪೂರ್ವದಿಕ್ಷು ಉದ್ಯದಾದಿತ್ಯವರ್ಣಾಯ ಚಕ್ರ, ಶಂಖ ವರಾಭಯಹಸ್ತಾಯ ಓಂ ಕ್ರುಂ ಕ್ರುದ್ಧೋಲ್ಕಾಯ ನಮಃ., ಪೀಠಾದ್ಬಹಿಃ ದಕ್ಷಿಣದಿಕ್ಷು ಉದ್ಯದಾದಿತ್ಯವರ್ಣಾಯ ಚಕ್ರ, ಶಂಖ ವರಾಭಯಹಸ್ತಾಯ ಓಂ ಮಂ ಮಹೋಲ್ಕಾಯ

ನಮಃ, ಪೀಠಾದ್ಬಹಿಃ ಪಶ್ಚಿಮದಿಕ್ಷು ಉದ್ಯದಾದಿತ್ಯವರ್ಣಾಯ ಚಕ್ರ, ಶಂಖ ವರಾಭಯಹಸ್ತಾಯ ಓಂ ವೀಂ ವೀರೋಲ್ಕಾಯ ನಮಃ, ಪೀಠಾದ್ಬಹಿಃ ಉತ್ತರದಿಕ್ಷು ಪ್ರೋದ್ಯದಾದಿತ್ಯವರ್ಣಾಯ ಚಕ್ರ, ಶಂಖ ವರಾಭಯಹಸ್ತಾಯ ಓಂ ದ್ಯುಂ ದ್ಯುಲ್ಕಾಯ ನಮಃ, ಪೀಠಾದ್‌ಬಹಿಃ ಆಗ್ನೇಯಾದಿಕೋಣೇಷು ಕೃಷ್ಣವರ್ಣಾಯ ಚಕ್ರ, ಶಂಖ ವರಾಭಯಹಸ್ತಾಯ ಓಂ ಸಹಸ್ರೋಲ್ಕಾಯ ನಮಃ, ಇದು ದ್ವಿತೀಯಾವರಣಪೂಜೆ.

ವಾಸುದೇವಾದಿಕಾನ್ ದಿಕ್ಷು ಕೇಶವಾದೀಂಸ್ತತಃ ಪರಮ್ | (ತಂತ್ರಸಾರ ವಚನ)

ದ್ವಿತೀಯಾವರಣಪೂಜೆಯು ಮುಗಿದ ಮೇಲೆ ಪೀಠದಲ್ಲಿ ದ್ವಿತೀಯಾವರಣ ದೇವತೆಗಳಿಗಿಂತ ಹೊರಗೆ ಪೂರ್ವ ದಿಕ್ಕಿನಲ್ಲಿ ವಾಸುದೇವನನ್ನೂ ಆಗ್ನೇಯದಿಕ್ಕಿನಲ್ಲಿ ಮಾಯಾದೇವಿಯನ್ನೂ ದಕ್ಷಿಣದಿಕ್ಕಿನಲ್ಲಿ ಸಂಕರ್ಷಣನನ್ನೂ ನೈಋತ್ಯ ದಿಕ್ಕಿನಲ್ಲಿ ಜಯಾದೇವಿಯನ್ನೂ ಪಶ್ಚಿಮದಿಕ್ಕಿನಲ್ಲಿ ಪ್ರದ್ಯುಮ್ನನನ್ನೂ ವಾಯವ್ಯದಿಕ್ಕಿನಲ್ಲಿ ಕೃತಿದೇವಿಯನ್ನೂ ಉತ್ತರದಿಕ್ಕಿನಲ್ಲಿ ಅನಿರುದ್ಧನನ್ನೂ ಈಶಾನ್ಯದಿಕ್ಕಿನಲ್ಲಿ ಶಾಂತಿದೇವಿಯನ್ನೂ ಪೂಜಿಸಬೇಕು.

ಈ ತೃತೀಯಾವರಣದೇವತೆಗಳಿಗಿಂತ ಹೊರಗೆ ಪೂರ್ವದಿಕ್ಕಿನಲ್ಲಿ ಕೇಶವನನ್ನೂ ನಾರಾಯಣನನ್ನೂ ಆಗ್ನೇಯ ದಿಕ್ಕಿನಲ್ಲಿ ಮಾಧವನನ್ನೂ ದಕ್ಷಿಣದಿಕ್ಕಿನಲ್ಲಿ ಗೋವಿಂದನನ್ನೂ ವಿಷ್ಣುವನ್ನೂ ನೈಋತ್ಯದಿಕ್ಕಿನಲ್ಲಿ ಮಧುಸೂದನನ್ನೂ ಪಶ್ಚಿಮ ದಿಕ್ಕಿನಲ್ಲಿ ತ್ರಿವಿಕ್ರಮನನ್ನೂ ವಾಮನನ್ನೂ ವಾಯವ್ಯದಿಕ್ಕಿನಲ್ಲಿ ಶ್ರೀಧರನನ್ನೂ ಉತ್ತರದಿಕ್ಕಿನಲ್ಲಿ ಹೃಷೀಕೇಶನನ್ನೂ ಪದ್ಮನಾಭನನ್ನೂ ಈಶಾನ್ಯದಿಕ್ಕಿನಲ್ಲಿ ದಾಮೋದರನನ್ನೂ ಪೂಜಿಸಬೇಕು. ಇದು ತಂತ್ರಸಾರೋಕ್ತ ತೃತೀಯ ಆವರಣ ಪೂಜೆ.

ವಾಸುದೇವಃ ಸೀರಪಾಣಿಃ ಪ್ರದ್ಯುಮ್ನಶ್ಚ ಉಷಾಪತಿಃ |
ದಿಕ್ಷು ಸಂಪೂಜನೀಯಾಶ್ಚ ಶಕ್ತಿಸ್ತೇಷಾಂ ವಿದಿಕ್ಷು ಚ || (ಹಾರೀತರ ವಚನ)

ಪೂರ್ವದಿಕ್ಕಿನಲ್ಲಿ ವಾಸುದೇವನನ್ನೂ ದಕ್ಷಿಣ ದಿಕ್ಕಿನಲ್ಲಿ ಬಲರಾಮನನ್ನೂ ಪಶ್ಚಿಮದಿಕ್ಕಿನಲ್ಲಿ ಪ್ರದ್ಯುಮ್ನನನ್ನೂ ಉತ್ತರ ದಿಕ್ಕಿನಲ್ಲಿ ಅನಿರುದ್ಧನನ್ನೂ ಪೂಜಿಸಬೇಕು. ಇದು ಹಾರೀತರು ಹೇಳಿರುವ ಚತುರ್ಥಾವರಣಪೂಜೆ.

ಈ ವಾಸುದೇವಾದಿಗಳ ಲಕ್ಷಣಗಳು ತಂತ್ರಸಾರದಲ್ಲಿ ಹೇಳಲ್ಪಟ್ಟಿವೆ.

ವಾಸುದೇವಾದಿಕಾಃ ಶುಕ್ಲರಕ್ತಪೀತಸಿತೋಜ್ಜ್ವಲಾಃ |
ಚಕ್ರಶಂಖಗದಾಬ್ಜೇತಃ ಪ್ರಥಮೋ ಮುಸಲೀ ಹಲೀ ||
ಸಶಂಖಚಕ್ರಸ್ತ್ವಪರಸ್ತೃತೀಯಃ ಶಾರ್ಙ್ಗಬಾಣವಾನ್ |
ಸಶಂಖಚಕ್ರಸ್ತುರ್ಯಸ್ತು ಚಕ್ರಶಂಖಾಸಿಚರ್ಮವಾನ್ ||

ವಾಸುದೇವಮೂರ್ತಿಯು ಬಿಳಿಬಣ್ಣದಿಂದಲೂ ಸಂಕರ್ಷಣಮೂರ್ತಿಯು ಕೆಂಪುಬಣ್ಣದಿಂದಲೂ ಪ್ರದ್ಯುಮ್ನ ಮೂರ್ತಿಯು ಹಳದಿಬಣ್ಣದಿಂದಲೂ, ಅನಿರುದ್ಧಮೂರ್ತಿಯು ಥಳಥಳ ಹೊಳೆಯುತ್ತಿರುವ ಬಿಳಿಬಣ್ಣದಿಂದಲೂ ಯುಕ್ತರಾಗಿರುವರು. ವಾಸುದೇವನು ಚಕ್ರ, ಶಂಖ, ಗದೆ, ಪದ್ಮ ಇವುಗಳನ್ನು ಧರಿಸಿರುವನು. ಸಂಕರ್ಷಣನು ಒನಕೆ, ನೇಗಿಲು, ಶಂಖ ಮತ್ತು ಚಕ್ರಗಳನ್ನು ಧರಿಸಿರುವನು. ಪ್ರದ್ಯುಮ್ನನು ಶಂಖ, ಚಕ್ರ, ಶಾರ್ಙ್ಗಧನುಸ್ಸು ಮತ್ತು ಬಾಣಗಳನ್ನು ಧರಿಸಿರುವನು. ಅನಿರುದ್ಧನು ಶಂಖ, ಚಕ್ರ, ಖಡ್ಗ ಮತ್ತು ಗುರಾಣಿಗಳನ್ನು ಧರಿಸಿರುವನು. ವಾಸುದೇವ ಮುಂತಾದ ನಾಲ್ಕು ಮೂರ್ತಿಗಳ ಅವತಾರ ಪ್ರಯೋಜನ ಮತ್ತು ಹೆಸರುಗಳು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೇಳಲ್ಪಟ್ಟಿವೆ.

ಇತ್ಥಂ ವಿಚಿಂತ್ಯ ಪರಮಃ ಸ ತು ವಾಸುದೇವನಾಮಾ ಬಭೂವ ನಿಜಮುಕ್ತಿಪದಪ್ರದಾತಾ |
ತಸ್ಮಾಚ್ಚ ಸೈವ ನಿಯತಾಥ ರಮಾಪಿ ರೂಪಂ ಬಭ್ರೇ ದ್ವಿತೀಯಮಪಿ ಯತ್ಪ್ರವದಂತಿ ಮಾಯಾಮ್ ||

ಸಂಕರ್ಷಣಶ್ಚ ಸ ಬಭೂವ ಪುನಃ ಸುನಿತ್ಯಃ ಸಂಹಾರಕಾರಣವಪುಸ್ತದನುಜ್ಞಯೈವ |
ದೇವೀ ಜಯೇತ್ಯನು ಬಭೂವ ಸ ಸೃಷ್ಟಿಹೇತೋಃ ಪ್ರದ್ಯುಮ್ನತಾಮುಪಗತಃ ಕೃತಿತಾಂ ಚ ದೇವೀ ||
ಸ್ಥಿತ್ಯೈ ಪುನಃ ಸ ಭಗವಾನನಿರುದ್ಧನಾಮಾ ದೇವೀ ಚ ಶಾಂತಿರಭವಚ್ಛರದಾಂ ಸಹಸ್ರಮ್ |
ಸ್ಥಿತ್ವಾ ಸ ಮೂರ್ತಿಭಿರಮೂಭಿರಚಿಂತ್ಯಶಕ್ತಿಃ ಪ್ರದ್ಯುಮ್ನರೂಪಕ ಇಮಾಂಶ್ಚರಮಾತ್ಮನೋಽದಾತ್ ||

ಸೃಷ್ಟಿಯ ಆದಿಯಲ್ಲಿ ಸರ್ವಜೀವರೂ ಶ್ರೀಹರಿಯ ದೇಹದೊಳಗಿದ್ದರು. ಅವರಲ್ಲಿ ಮುಕ್ತಿಯೋಗ್ಯರ ಸ್ವರೂಪ ದೇಹಗಳಲ್ಲಿ ಸ್ವರೂಪವಾಗಿರುವ ಸುಖವೂ ತಮೋಯೋಗ್ಯಜೀವರ ಸ್ವರೂಪ ದೇಹಗಳಲ್ಲಿ ಸ್ವರೂಪವಾಗಿರುವ ದುಃಖವೂ ನಿತ್ಯ ಸಂಸಾರಿಜೀವರ ಸ್ವರೂಪದೇಹಗಳಲ್ಲಿ ಸ್ವರೂಪವಾದ ದುಃಖ ಮತ್ತು ಸುಖಗಳು ಸಮವಾಗಿ ಮಿಶ್ರಿತವಾಗಿಯೂ ಅನಾದಿಕಾಲದಿಂದ ಇದ್ದೇ ಇದೆ. ಆದರೆ ಆ ಸ್ವರೂಪದೇಹಗಳ ಮೇಲೆ ಲಿಂಗದೇಹವು ಅನಾದಿಕಾಲದಿಂದ ಮುಚ್ಚಿರುತ್ತದೆ. ಆ ಲಿಂಗದೇಹಗಳನ್ನು ಸ್ವರೂಪ ದೇಹಗಳಿಂದ ಹೊರಪಡಿಸಿದರೆ ಸ್ವರೂಪ ಸುಖವೂ, ಸ್ವರೂಪದುಃಖವೂ ಸ್ವರೂಪಸುಖ ಮತ್ತು ಸ್ವರೂಪ ದುಃಖಗಳ ಮಿಶ್ರಣಾವಸ್ಥೆಯೂ ವ್ಯಕ್ತವಾಗುತ್ತವೆ. ಈ ಲಿಂಗದೇಹವನ್ನು ಸ್ವರೂಪದೇಹಗಳಿಂದ ಬಿಡಿಸುವುದಕ್ಕೆ ಸರ್ವಜೀವರೂ ನಾನಾವಿಧವಾದ ಸಾಧನಗಳನ್ನು ಮಾಡಬೇಕು. ಆ ಸಾಧನಗಳಿಗಾಗಿ ಸರ್ವರೂ ಜನ್ಮಗಳನ್ನು ಪಡೆಯಬೇಕು. ಅವುಗಳಿಗಾಗಿ ಸರ್ವರನ್ನೂ ಸೃಷ್ಟಿಸಬೇಕು. ಸರ್ವರನ್ನೂ ಸೃಷ್ಟಿಸುವುದಕ್ಕಾಗಿ ಸೃಷ್ಟಿಯಿಲ್ಲದಿರುವ ತಾನು ಅನೇಕ ರೂಪಗಳನ್ನೂ ಸ್ವೀಕರಿಸಬೇಕು. ತನ್ನ ಪತ್ನಿಯಾಗಿರುವ ಮಹಾಲಕ್ಷ್ಮೀದೇವಿಯರಿಗೂ ನಾನಾರೂಪಗಳು ಏರ್ಪಡುವಂತೆ ಮಾಡಬೇಕು ಎಂದು ಶ್ರೀಹರಿಯು ಸಂಕಲ್ಪಿಸಿದನು."

"ಮೊದಲು ಶ್ರೀಹರಿಯು ವಾಸುದೇವ ಎಂಬ ರೂಪವನ್ನು ಸ್ವೀಕರಿಸಿದನು. ಆ ರೂಪದಿಂದ ಅವರವರಿಗೆ ಯೋಗ್ಯವಾದ ಜ್ಞಾನವನ್ನು ಹುಟ್ಟಿಸುತ್ತಾ ಅವರವರಿಗೆ ಯೋಗ್ಯವಾದ ಮುಕ್ತಿಯನ್ನು ಈ ವಾಸುದೇವನೇ ಕೊಡುವನು. ಶ್ರೀವಾಸುದೇವನು ಅವತರಿಸಿದ ಕೂಡಲೇ ಅವನ ಪತ್ನಿಯಾದ ಲಕ್ಷ್ಮೀದೇವಿಯು "ಮಾಯಾ" ಎಂಬ ರೂಪವನ್ನು ಸ್ವೀಕರಿಸಿದಳು."

"ಅನಂತರದಲ್ಲಿ ಅದೇ ಶ್ರೀಹರಿಯು ಸಕಲಲೋಕಗಳನ್ನು ಸಂಹರಿಸುವುದಕ್ಕೋಸ್ಕರ "ಸಂಕರ್ಷಣ" ಎಂಬ ಎರಡನೆಯ ರೂಪವನ್ನು ಸ್ವೀಕರಿಸಿದನು. ಆಗ ಅವನ ಅನುಜ್ಞೆಯಿಂದ ಲಕ್ಷ್ಮೀದೇವಿಯು "ಜಯಾ" ಎಂಬ ಎರಡನೆಯ ರೂಪವನ್ನು ಸ್ವೀಕರಿಸಿದಳು."

"ಅನಂತರದಲ್ಲಿ ಶ್ರೀಹರಿಯು ಸಕಲಲೋಕಗಳನ್ನು ಸೃಷ್ಟಿಸುವುದಕ್ಕಾಗಿ "ಪ್ರದ್ಯುಮ್ನ" ಎಂಬ ಮೂರನೆಯ ರೂಪವನ್ನು ಸ್ವೀಕರಿಸಿದನು. ಆಗ ಲಕ್ಷ್ಮೀದೇವಿಯು "ಕೃತಿ" ಎಂಬ ಮೂರನೆಯ ರೂಪವನ್ನು ಸ್ವೀಕರಿಸಿದಳು."

"ಅನಂತರದಲ್ಲಿ ಶ್ರೀಹರಿಯು ಸಕಲಲೋಕಗಳನ್ನು ರಕ್ಷಿಸುವುದಕ್ಕಾಗಿ "ಅನಿರುದ್ಧ" ಎಂಬ ನಾಲ್ಕನೆಯ ರೂಪವನ್ನು ಸ್ವೀಕರಿಸಿದನು. ಆಗ ಲಕ್ಷ್ಮೀದೇವಿಯು ಶ್ರೀಹರಿಯ ಅನುಜ್ಞೆಯಿಂದ "ಶಾಂತಿ" ಎಂಬ ನಾಲ್ಕನೆಯ ರೂಪವನ್ನು ಸ್ವೀಕರಿಸಿದಳು."

"ಶ್ರೀಹರಿಯ ಈ ನಾಲ್ಕು ರೂಪಗಳೂ ಮನುಷ್ಯಮಾನದಿಂದ ಒಂದು ಸಾವಿರವರ್ಷಗಳವರೆಗೆ ಪ್ರಳಯಸಮುದ್ರದಲ್ಲಿ ವಿಹರಿಸಿದವು. ಅನಂತರದಲ್ಲಿ ಈ ನಾಲ್ಕು ಭಗವದ್ರೂಪಗಳಲ್ಲಿ ಇದ್ದ ಸರ್ವಜೀವರನ್ನೂ ಪ್ರದ್ಯುಮ್ನನು ತನ್ನ ಹೊಟ್ಟೆಯೊಳಗೆ ಸೆಳೆದು ಇಟ್ಟುಕೊಂಡನು. ಕೊನೆಗೆ ಸರ್ವರನ್ನೂ ಸೃಷ್ಟಿಸುವುದಕ್ಕಾಗಿ ಅನಿರುದ್ಧನ ಹೊಟ್ಟೆಯಲ್ಲಿಟ್ಟನು." ಇದು ಮಹಾಭಾರತತಾತ್ಪರ್ಯನಿರ್ಣಯ ಶ್ಲೋಕದ ಅರ್ಥ. ಈ ವಾಸುದೇವಾದಿ ನಾಲ್ಕು ಮೂರ್ತಿಗಳನ್ನು ಪೂಜಿಸುವ ಕ್ರಮ.

ಪೂರ್ವದಿಕ್ಕಿನಲ್ಲಿ "ಓಂ ವಂ ವಾಸುದೇವಾಯ ಶುಕ್ಲವರ್ಣಾಯ ಕಿರೀಟಾದಿ ವಿಭೂಷಿತಾಯ ಶಾರ್ಙ್ಗಬಾಣ ಶಂಖ ಚಕ್ರಧರಾಯ ನಮಃ" | ಆಗ್ನೇಯ ದಿಕ್ಕಿನಲ್ಲಿ "ಓಂ ಶ್ರೀಂ ಮಾಯಾಯೈ ನಮಃ" | ದಕ್ಷಿಣ ದಿಕ್ಕಿನಲ್ಲಿ "ಓಂ ಅಂ ಅನಿರುದ್ಧಾಯ ಕೃಷ್ಣವರ್ಣಾಯ ಕಿರೀಟಾದಿವಿಭೂಷಿತಾಯ ಶಂಖಚಕ್ರಾಸಿಚರ್ಮಧರಾಯ ನಮಃ | ನೈಋತ್ಯದಿಕ್ಕಿನಲ್ಲಿ "ಓಂ ಶ್ರೀಂ ಶಾಂತ್ಯೈ

ನಮಃ" | ಪಶ್ಚಿಮದಿಕ್ಕಿನಲ್ಲಿ "ಓಂ ಪ್ರಂ ಪ್ರದ್ಯುಮ್ನಾಯ ಸುವರ್ಣವರ್ಣಾಯ ಕಿರೀಟಾದಿವಿಭೂಷಿತಾಯ ಶಂಖ, ಚಕ್ರ, ಗದಾಪದ್ಮಧರಾಯ ನಮಃ" | ವಾಯವ್ಯದಿಕ್ಕಿನಲ್ಲಿ "ಓಂ ಶ್ರೀಂ ಕೃತ್ಯೈ ನಮಃ" | ಉತ್ತರದಿಕ್ಕಿನಲ್ಲಿ "ಓಂ ಸಂ ಸಂಕರ್ಷಣಾಯ ರಕ್ತವರ್ಣಾಯ ಕಿರೀಟಾದಿವಿಭೂಷಿತಾಯ ಶಂಖ, ಚಕ್ರ, ಗದಾ. ಪದ್ಮಧರಾಯ ನಮಃ" | ಈಶಾನ್ಯದಿಕ್ಕಿನಲ್ಲಿ "ಓಂ ಶ್ರೀಂ ಜಯಾಯೈ ನಮಃ" ಹೀಗೆ ಎಂಟು ದಿಕ್ಕುಗಳಲ್ಲಿ ಕ್ರಮವಾಗಿ ವಾಸುದೇವಾದಿನಾಲ್ಕು ಮೂರ್ತಿಗಳನ್ನೂ ಆ ಮೂರ್ತಿಗಳ ಪತ್ನಿಯರಾಗಿರುವ ಲಕ್ಷ್ಮೀದೇವಿಯರ ಮೂರ್ತಿಗಳನ್ನೂ ಆವರಣಪೂಜೆಯಲ್ಲಿ ಪೂಜಿಸಬೇಕು.

ಹಾಗೆಯೇ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂಬ ಶ್ರೀಹರಿಯ ನಾಲ್ಕು ಮೂರ್ತಿಗಳನ್ನೂ ಆಗ್ನೇಯ, ನೈಋತ್ಯ, ವಾಯವ್ಯ, ಈಶಾನ್ಯ ಎಂಬ ನಾಲ್ಕು ವಿದಿಕ್ಕುಗಳಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ಶ್ರೀಹರಿಯ ರೂಪಗಳನ್ನೂ ಪೂಜಿಸಬೇಕು. ಇದು ಹಾರೀತರು ಹೇಳಿರುವ ಮೂರನೆಯ ಆವರಣ ಪೂಜೆಯೆನಿಸುತ್ತದೆ.

ಹೀಗೆಯೇ ಕೇಶವ ಮುಂತಾದ ಭಗವನ್ಮೂರ್ತಿಗಳನ್ನು ಪೂಜಿಸುವಾಗ ಅವರರ ಶಕ್ತಿಗಳನ್ನೂ ಪೂಜಿಸಬೇಕೆಂದು ಹಾರೀತರು ಹೇಳಿರುತ್ತಾರೆ. ಅದಕ್ಕಾಗಿ ಕೇಶವಾದಿ ಭಗವನ್ಮೂರ್ತಿಗಳ ಶಕ್ತಿಗಳನ್ನು ಹಾರೀತರ ವಚನದಿಂದ ತಿಳಿಸುವೆವು.

ಶ್ರೀರ್ಲಕ್ಷ್ಮೀಃ ಕಮಲಾ ಪದ್ಮಾ ಪದ್ಮಿನೀ ಕಮಲಾಲಯಾ |
ರಮಾ ವೃಷಾಕಪಿರ್ಧನ್ಯಾ ವೃದ್ಧಿರ್ಯಜ್ಞಾ ತಥೇಂದಿರಾ ||
ಶಕ್ತಯಃ ಕೇಶವಾದೀನಾಂ ಸಂಪ್ರೋಕ್ತಾಃ ಪರಮೇ ಪದೇ |
ಹಿರಣ್ಯಾ ಹರಿಣೀ ಸತ್ಯಾ ನಿತ್ಯಾನಂದಾ ತ್ರಯೀ ಸುಖಾ ||
ಸುಗಂಧಾ ಸುಂದರೀ ವಿದ್ಯಾ ಸುಶೀಲಾ ಚ ಸುಲಕ್ಷಣಾ |
ಸಂಕರ್ಷಣಾದಿಮೂರ್ತೀನಾಂ ಶಕ್ತಯಃ ಸಂಪ್ರಕೀರ್ತಿತಾಃ ||
ಏವಂ ಸಶಕ್ತಯಃ ಪೂಜ್ಯಾಃ ಕೇಶವಾದ್ಯಾಃ ಸುರೇಶ್ವರಾಃ |
ಪಶ್ಚಾತ್ಸಶಕ್ತಯಃ ಪೂಜ್ಯಾಃ || (ಹಾರೀತರ ವಚನ)

ಕೇಶವ ಮುಂತಾದ ಹನ್ನೆರಡು ಮೂರ್ತಿಗಳ ಶಕ್ತಿಗಳನ್ನು ಈಗ ಹೇಳುವೆವು. ಶ್ರೀಃ, ಲಕ್ಷ್ಮೀ, ಕಮಲಾ, ಪದ್ಮಾ, ಪದ್ಮಿನೀ, ಕಮಲಾಲಯಾ, ರಮಾ, ವೃಷಾಕಪಿ, ಧನ್ಯಾ, ವೃದ್ಧಿ, ಯಜ್ಞಾ, ಇಂದಿರಾ, ಎಂಬ ಹನ್ನೆರಡು ಲಕ್ಷ್ಮೀದೇವಿಯರ ರೂಪಗಳು ಕೇಶವ ಮುಂತಾದ ಹನ್ನೆರಡು ಶ್ರೀಹರಿಯ ರೂಪಗಳಿಗೆ ಮುಕ್ತಿಸ್ಥಾನದಲ್ಲಿ "ಶಕ್ತಿಗಳು" ಅಂದರೆ ಪತ್ನಿಯರು ಎಂದೆನಿಸುವರು.

ಶ್ರೀಃ, ಹಿರಣ್ಯಾ, ಹರಿಣೀ, ಸತ್ಯಾ, ನಿತ್ಯಾನಂದಾ, ತ್ರಯೀ, ಸುಖಾ, ಸುಗಂಧಾ, ಸುಂದರೀ, ವಿದ್ಯಾ, ಸುಶೀಲಾ, ಸುಲಕ್ಷಣಾ ಎಂಬ ಹನ್ನೆರಡು ಲಕ್ಷ್ಮೀದೇವಿಯರ ರೂಪಗಳು ಸಂಕರ್ಷಣ ಮುಂತಾದ ಭಗವನ್ಮೂರ್ತಿಗಳ ಶಕ್ತಿಗಳು ಎಂದು ಹೇಳಲ್ಪಡುವರು.

ಮೊದಲು ಕೇಶವ ಮುಂತಾದ ಭಗವನ್ಮೂರ್ತಿಗಳನ್ನು ಪೂಜಿಸಬೇಕು. ಅನಂತರದಲ್ಲಿ ಪುನಃ ಶಕ್ತಿಸಹಿತರಾದ ಭಗವನ್ಮೂರ್ತಿಗಳನ್ನು ಪೂಜಿಸಬೇಕು. ಕೇಶವ ಮುಂತಾದ ಇಪ್ಪತ್ತನಾಲ್ಕು ಭಗವನ್ಮೂರ್ತಿಗಳ ಲಕ್ಷಣಗಳನ್ನು ತಂತ್ರಸಾರದಲ್ಲಿ ಹೇಳಿರುವರು. ಅದನ್ನು ಈಗ ವಿವರಿಸುವೆವು.

ಚತುರ್ವಿಂಶನ್ಮೂರ್ತಯಶ್ಚ ಮೂಲರೂಪಸವರ್ಣಕಾಃ | (ತಂತ್ರಸಾರ ವಚನ)

"ಕೇಶವ" ಮುಂತಾದ ಇಪ್ಪತ್ತನಾಲ್ಕು ಮೂರ್ತಿಗಳು ಮೂಲರೂಪವಾದ ನಾರಾಯಣರೂಪದಂತೆ ಉದಯಿಸುತ್ತಿರುವ ಸೂರ್ಯನಂತೆ ಪ್ರಕಾಶದಿಂದ ಯುಕ್ತವಾಗಿರುವವು. ಆವರಣಪೂಜೆಗಾಗಿ ಎಲ್ಲಾ ಮೂರ್ತಿಗಳನ್ನೂ ಮುಂದೆ ಹೇಳುವಂತೆ

ಧ್ಯಾನಿಸಬೇಕು. ಎಲ್ಲಾ ಭಗವನ್ಮೂರ್ತಿಗಳೂ ಕಿರೀಟಕುಂಡಲಕಟಕಕೇಯೂರಾದ್ಯಾಭರಣಯುಕ್ತವಾಗಿಯೂ ಶ್ರೀವತ್ಸ ಮತ್ತು ಪೀತಾಂಬರಗಳನ್ನು ಧರಿಸಿದವುಗಳಾಗಿಯೂ ಅವರವರಿಗೆ ಹೇಳಿರುವ ಆಯುಧಗಳನ್ನು ಧರಿಸಿಕೊಂಡಿರುವವರಾಗಿಯೂ ಉದಯಿಸುತ್ತಿರುವ ಸೂರ್ಯನಂತೆ ಪ್ರಕಾಶದಿಂದ ಯುಕ್ತರಾಗಿಯೂ, ಎಡಭಾಗದಲ್ಲಿರುವ ಲಕ್ಷ್ಮೀದೇವಿಯರಿಂದ ಸಹಿತರಾಗಿಯೂ ಧ್ಯಾನಿಸಲ್ಪಡಬೇಕು. ದೇವಿಯರೂ ಸಹ ಪದ್ಮಗಳನ್ನು ಕೈಗಳಲ್ಲಿ ಧರಿಸಿದವರಾಗಿಯೂ ಬಂಗಾರದ ಬಣ್ಣದಿಂದ ಯುಕ್ತರಾಗಿಯೂ ಇರಬೇಕು. ಕೇಶವಾದಿಮೂರ್ತಿಗಳು ಬಲಭಾಗದಲ್ಲಿರುವ ಮೇಲಿನ ಕೈಯಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ ಶಂಖ ಮುಂತಾದ ಆಯುಧಗಳನ್ನು ಧರಿಸಿದವರಾಗಿರಬೇಕು ಮತ್ತು ಶ್ರೀನಾರಾಯಣನಿಗೆ ಅಭಿಮುಖರಾಗಿರುವಂತೆ ಧ್ಯಾನಿಸಬೇಕು. ಒಬ್ಬೊಬ್ಬ ಮೂರ್ತಿಗಳಿಗೂ ಬೇರೆ ಬೇರೆ ಬಣ್ಣಗಳು ಪಾದ್ಮತಂತ್ರದಲ್ಲಿ ಹೇಳಲ್ಪಟ್ಟಿವೆ. ಅದನ್ನು ಆ ಗ್ರಂಥದಿಂದ ತಿಳಿಯಬೇಕು.

ಕೇಶವಾದಿದ್ವಾದಶಮೂರ್ತಿಗಳನ್ನು ಆವರಣಪೂಜಾಕಾಲದಲ್ಲಿ ಹೇಳುವ ಕ್ರಮವು ಮುಂದೆ ಕೊಡಲ್ಪಟ್ಟಿದೆ.

ಬಾಗಿಲಿನ ಎರಡು ಪಕ್ಕಗಳಲ್ಲಿಯೂ ಪ್ರದಕ್ಷಿಣಾಕಾರವಾಗಿ ಮೇಷಾದಿರಾಶಿ ಕ್ರಮದಿಂದ ಆವರಣಪೂಜೆಯನ್ನು ಮಾಡಬೇಕು. ಅಂದರೆ ಪೂರ್ವದಲ್ಲಿ ಮೇಷ, ವೃಷಭರಾಶಿಗಳ ಸ್ಥಾನದಲ್ಲಿ ಎರಡೆರಡು ಮೂರ್ತಿಗಳನ್ನೂ ಆಗ್ನೇಯದಲ್ಲಿ ಮಿಥುನರಾಶಿಯ ಸ್ಥಾನದಲ್ಲಿ ಮೂರನೆಯ ಮೂರ್ತಿಯನ್ನೂ, ದಕ್ಷಿಣದಲ್ಲಿ ಕರ್ಕಾಟಕ, ಸಿಂಹರಾಶಿಗಳ ಸ್ಥಾನದಲ್ಲಿ ನಾಲ್ಕು ಮತ್ತು ಐದನೆಯ ಮೂರ್ತಿಗಳನ್ನೂ ನೈಋತ್ಯದಲ್ಲಿ ಕನ್ಯಾರಾಶಿಯ ಸ್ಥಾನದಲ್ಲಿ ಆರನೆಯ ಮೂರ್ತಿಯನ್ನೂ ಪಶ್ಚಿಮದಲ್ಲಿ ತುಲಾ ವೃಶ್ಚಿಕ ಸ್ಥಾನಗಳಲ್ಲಿ ಏಳನೆಯ ಎಂಟನೆಯ ಮೂರ್ತಿಗಳನ್ನೂ ವಾಯವ್ಯ ದಿಕ್ಕಿನಲ್ಲಿ ಧನುರಾಶಿಯ ಸ್ಥಾನದಲ್ಲಿ ಒಂಭತ್ತನೆಯ ಮೂರ್ತಿಯನ್ನೂ ಉತ್ತರದಲ್ಲಿ ಮಕರಕುಂಭರಾಶಿಗಳ ಸ್ಥಾನದಲ್ಲಿ ಹತ್ತು, ಹನ್ನೊಂದನೆಯ ಮೂರ್ತಿಗಳನ್ನೂ ಈಶಾನ್ಯದಿಕ್ಕಿನಲ್ಲಿ ಮೀನರಾಶಿಯ ಸ್ಥಾನದಲ್ಲಿ ಹನ್ನೆರಡನೆಯ ಮೂರ್ತಿಯನ್ನೂ ಪೂಜಿಸಬೇಕು. ಈ ಪೂಜೆಯಲ್ಲಿ ಮಂತ್ರಗಳನ್ನು ಹೇಳುವೆವು.

ಶಂಖಚಕ್ರಗದಾಪದ್ಮಧರಾಯ ಶ್ರೀಸಹಿತಾಯ ಓಂ ಶ್ರೀಕೇಶವಾಯ ನಮಃ | ಪದ್ಮಗದಾಚಕ್ರಶಂಖಧರಾಯ ಲಕ್ಷ್ಮೀಸಹಿತಾಯ ಓಂ ಶ್ರೀನಾರಾಯಣಾಯ ನಮಃ | ಚಕ್ರಶಂಖಪದ್ಮಗದಾಧರಾಯ ಕಮಲಾಸಹಿತಾಯ ಓಂ ಶ್ರೀಮಾಧವಾಯ ನಮಃ | ಗದಾಪದ್ಮಶಂಖಚಕ್ರಧರಾಯ ಪದ್ಮಸಹಿತಾಯ ಓಂ ಶ್ರೀಗೋವಿಂದಾಯ ನಮಃ | ಪದ್ಮಶಂಖಚಕ್ರಗದಾಧರಾಯ ಪದ್ಮಿನೀಸಹಿತಾಯ ಓಂ ಶ್ರೀವಿಷ್ಣವೇ ನಮಃ | ಶಂಖಪದ್ಮಗದಾಚಕ್ರಧರಾಯ ಕಮಲಾಸಹಿತಾಯ ಓಂ ವೃಷಾಕಪಿಸಹಿತಾಯ ಓಂ ಶ್ರೀವಾಮನಾಯ ನಮಃ | ಚಕ್ರಗದಾಪದ್ಮಶಂಖಧರಾಯ ಧನ್ಯಾಸಹಿತಾಯ ಓಂ ಶ್ರೀಧರಾಯ ನಮಃ | ಚಕ್ರಪದ್ಮಶಂಖಗದಾಧರಾಯ ವೃದ್ಧಿಸಹಿತಾಯ ಓಂ ಶ್ರೀ ಹೃಷೀಕೇಶಾಯ ನಮಃ | ಪದ್ಮಚಕ್ರಗದಾಶಂಖಧರಾಯ ಇಂದಿರಾಸಹಿತಾಯ ಓಂ ಶ್ರೀದಾಮೋದರಾಯ ನಮಃ | ಇಲ್ಲಿಗೆ ಮೂರನೆಯ ಆವರಣಪೂಜೆಯು ಮುಗಿಯಿತು.

ಹಿಂದೆ ಹೇಳಿದಂತೆ ಪೂರ್ವಾದಿ ದಿಕ್ಕುಗಳಲ್ಲಿ ಹನ್ನೆರಡು ಸ್ಥಾನಗಳಲ್ಲಿ ಸಂಕರ್ಷಣ ಮುಂತಾದ ಹನ್ನೆರಡು ಮೂರ್ತಿಗಳನ್ನು ಪೂಜಿಸಬೇಕು. ಅದಕ್ಕೆ ಮಂತ್ರಗಳು ಹೇಳಲ್ಪಡುತ್ತವೆ.

ಶಂಖಪದ್ಮಚಕ್ರಗದಾಧರಾಯ ಹಿರಣ್ಯಾಸಹಿತಾಯ ಓಂ ಶ್ರೀಸಂಕರ್ಷಣಾಯ ನಮಃ | ಶಂಖಚಕ್ರಪದ್ಮಗದಾಧರಾಯ ಹರಿಣೀಸಹಿತಾಯ ಓಂ ಶ್ರೀವಾಸುದೇವಾಯ ನಮಃ | ಶಂಖಗದಾಪದ್ಮಚಕ್ರಧರಾಯ ಸತ್ಯಾಸಹಿತಾಯ ಓಂ ಶ್ರೀಪ್ರದ್ಯುಮ್ನಾಯ ನಮಃ | ಗದಾಶಂಖಪದ್ಮಚಕ್ರಗದಾಧರಾಯ ನಿತ್ಯಾಸಹಿತಾಯ ಓಂ ಶ್ರೀಅನಿರುದ್ಧಾಯ ನಮಃ | ಪದ್ಮಶಂಖಗದಾಚಕ್ರಧರಾಯ ಅನಂತಾಸಹಿತಾಯ ಓಂ ಶ್ರೀಪುರುಷೋತ್ತಮಾಯ ನಮಃ | ಚಕ್ರಪದ್ಮಗದಾಶಂಖಧರಾಯ ತ್ರಯೀಸಹಿತಾಯ ಓಂ ಶ್ರೀಅಧೋಕ್ಷಜಾಯ ನಮಃ | ಪದ್ಮಗದಾಶಂಖಚಕ್ರಧರಾಯ ಓಂ ಶ್ರೀನರಸಿಂಹಾಯ ನಮಃ | ಪದ್ಮಚಕ್ರಶಂಖಗದಾಧರಾಯ

ಸುಗಂಧಸಹಿತಾಯ ಓಂ ಶ್ರೀ ಅಚ್ಯುತಾಯ ನಮಃ | ಚಕ್ರಶಂಖಗದಾಪದ್ಮಧರಾಯ ಸುಂದರೀಸಹಿತಾಯ ಓಂ ಶ್ರೀಉಪೇಂದ್ರಾಯ ನಮಃ | ಚಕ್ರಪದ್ಮಗದಾಶಂಖಧರಾಯ ಸುಶೀಲಾಸಹಿತಾಯ ಓಂ ಶ್ರೀಹರಯೇ ನಮಃ | ಗದಾಪದ್ಮಚಕ್ರಶಂಖಧರಾಯ ಸುಲಕ್ಷ್ಮಣಾಸಹಿತಾಯ ಓಂ ಶ್ರೀಕೃಷ್ಣಾಯ ನಮಃ | ಇಲ್ಲಿಗೆ ನಾಲ್ಕನೆಯ ಆವರಣಪೂಜೆಯು ಮುಗಿಯಿತು.

ಹಿಂದೆ ಹೇಳಿದಂತೆ ಪೂರ್ವಾದಿದಿಕ್ಕುಗಳಲ್ಲಿ ಹನ್ನೆರಡು ಸ್ಥಾನಗಳಲ್ಲಿ ಮತ್ಸ್ಯ ಮುಂತಾದ ಹನ್ನೆರಡು ಮೂರ್ತಿಗಳನ್ನು ಪೂಜಿಸಬೇಕು.

ಮತ್ಸ್ಯಂ ಕೂರ್ಮಂ ವರಾಹಂ ಚ ನಾರಸಿಂಹಂ ಚ ವಾಮನಮ್ |
ಭಾರ್ಗವಂ ರಾಘವಂ ಕೃಷ್ಣಂ ಬುದ್ಧಂ ಕಲ್ಕಿನಮೇವ ಚ || (ತಂತ್ರಸಾರ ವಚನ)

ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ, ಅನಂತ, ವಿಶ್ವರೂಪ ಎಂಬ ಹನ್ನೆರಡು ಮೂರ್ತಿಗಳನ್ನು ಐದನೆಯ ಆವರಣದಲ್ಲಿ ಪೂಜಿಸಬೇಕು.

ಯಥಾಯೋಗ್ಯಸ್ಥಿತಾನ್ ದಿಕ್ಷು ಮತ್ಸ್ಯಾದೀಂಶ್ಚ ತಥೈವ ಚ | (ವಿಷ್ಣುತೀರ್ಥೀಯ ವಚನ)

ಪೂರ್ವಾದಿದಿಕ್ಕುಗಳಲ್ಲಿ ಯಥಾಯೋಗ್ಯಸ್ಥಾನಗಳಲ್ಲಿರುವ ಮತ್ಸ್ಯ ಮುಂತಾದ ಹನ್ನೆರಡು ಮೂರ್ತಿಗಳನ್ನು ಪೂಜಿಸಬೇಕು.

ಪಾದ್ಮಸಂಹಿತೆಯಲ್ಲಿ ಮತ್ಸ್ಯ ಮುಂತಾದ ಹನ್ನೆರಡು ಮೂರ್ತಿಗಳ ಲಕ್ಷಣಗಳು ಹೇಳಲ್ಪಟ್ಟಿವೆ. ಅವುಗಳನ್ನು ಈಗ ಹೇಳುವೆವು.

ಮತ್ಸ್ಯಾದಿದಶಮೂರ್ತೀನಾಂ ಲಕ್ಷಣಂ ಕಥ್ಯತೇಽಧುನಾ |
ಈಷದ್ಧೈ ಸ್ಥೂಲಗಾತ್ರಾಣಿ ತೈಸ್ತೈರ್ವಾಕ್ಯೈಃ ಶ್ರುತಾನಿ ಚ || (ಪಾದ್ಮಸಂಹಿತಾ ವಚನ)

ಮತ್ಸ್ಯ ಮುಂತಾದ ಹತ್ತು ಮೂರ್ತಿಗಳ ಲಕ್ಷಣಗಳು ಈಗ ಹೇಳಲ್ಪಡುತ್ತವೆ. ಅಲ್ಲಲ್ಲಿ ಪ್ರಮಾಣವಚನಗಳಲ್ಲಿ ಮತ್ಸ್ಯಾದಿಮೂರ್ತಿಗ ಅಳತೆಯು ಹೇಳಲ್ಪಟ್ಟಿದೆ. ಅದಕ್ಕೆ ಅನುಗುಣವಾಗಿ ಸ್ಥೂಲವಾದ ಅವಯವಗಳಿಂದ ಯುಕ್ತವಾಗಿರುವ ಮೂರ್ತಿಗಳನ್ನು ತಯಾರಿಸಬೇಕು.

### ಮತ್ಸ್ಯಮೂರ್ತಿಯ ಲಕ್ಷಣ

ತತ್ರ ಮತ್ಸ್ಯಾಖ್ಯಕಾಯಂ ಚ ದೈರ್ಘ್ಯಂ ವೈ ಷೋಡಶಾಂಗುಲಮ್ |
ದಶಾಂಗುಲಂ ತು ವೈ ತುಲ್ಯಂ ಜೀವಾಖ್ಯಂ ಪರಿಕಲ್ಪಯೇತ್ ||
ಸೂರ್ಯೇ ಮತ್ಸ್ಯಾಕೃತಿಂ ಕೃತ್ವಾ ಇಲಾಂ ವಾ ಕಾಷ್ಠಜಾಂ ತು ವಾ | .
ಅಥ ಚಿತ್ರೇಣ ವಾ ಕುರ್ಯಾಚ್ಚಿತ್ರಭಾವೇನ ವಾ ಪುನಃ ||
ಸದೃಶಂ ತು ಲಿಖೇದ್ಭಿತ್ತೌ ಚಿತ್ರಾದೀನ್ ಕಲ್ಪಯೇತ್ಪುನಃ |
ನಾರಾಯಣೇತಿ ಮನುನಾ ತಮಭ್ಯರ್ಚೇತ್ಸಮಾದರಾತ್ |
ತಮರ್ಚಾದಿಷು ಬಿಂಬಾದಿಸೌಮ್ಯಯುಕ್ತಾಂಶ್ಚತುರ್ಭುಜಾನ್ |
ಆಸೀನಾನ್ವಾ ಶಯಾನಾನ್ವಾ ಶಂಖಚಕ್ರಗದಾಧರಾನ್ || (ಪಾದ್ಮಸಂಹಿತಾ ವಚನ)

ಮತ್ಸ್ಯ ಎಂಬ ಶ್ರೀಹರಿಯ ರೂಪವನ್ನು ಹೇಳುವೆವು. ಹದಿನಾರು ಅಂಗುಲದಷ್ಟು ಉದ್ದವಾಗಿಯೂ ಹತ್ತು ಅಂಗುಲದಷ್ಟು ಅಗಲವಾಗಿಯೂ ಜೀವಕಳೆಯಿಂದ ಯುಕ್ತವಾಗಿಯೂ ಇರುವ ಮತ್ಸ್ಯಮೂರ್ತಿಯನ್ನು ತಯಾರಿಸಬೇಕು. ಉದ್ದ ಮತ್ತು ಅಗಲಗಳು ಸಮವಾಗಿದ್ದರೂ ಇರಬಹುದು. ಕಲ್ಲಿನಿಂದಲಾಗಲೀ ಕಟ್ಟಿಗೆಯಿಂದಲಾಗಲೀ ಮತ್ಸ್ಯಾಕಾರವನ್ನು ತಯಾರಿಸಿ ಸೂರ್ಯಾಂತರ್ಗತನಾದ ಮತ್ಸ್ಯಮೂರ್ತಿಯನ್ನು ಆ ಮತ್ಸ್ಯಾಕಾರದಲ್ಲಿ ಆವಾಹಿಸಿ ಪೂಜಿಸಬೇಕು. ಗೋಡೆಯಲ್ಲಿ ಚಿತ್ರ

ಮುಂತಾದವುಗಳನ್ನು ಬರೆದು ಪೂಜಿಸಬಹುದು. ನಾರಾಯಣಮಂತ್ರದಿಂದ ಭಕ್ತಿಯಿಂದ ಪೂಜಿಸಬೇಕು. ಈ ಎಲ್ಲಾ ಭಗವನ್ಮೂರ್ತಿಗಳನ್ನೂ ಕುಳಿತಂತೆಯೂ ಮಲಗಿದಂತೆಯೂ ಬರೆಯಬಹುದು. ಶಂಖ, ಚಕ್ರ, ಗದಾ, ಪದ್ಮ ಮುಂತಾದವುಗಳನ್ನು ಧರಿಸಿರುವ ಸೌಮ್ಯವಾದ ಆಕಾರಗಳಿಂದ ಯುಕ್ತವಾಗಿರುವಂತೆ ಬರೆಯಬೇಕು.

**ಕೂರ್ಮಮೂರ್ತಿಯ ಲಕ್ಷಣ**

ಕೂರ್ಮವತ್ಕೂರ್ಮಮೂರ್ತಿಂ ತು ಕಲ್ಪಯೇತ್ಕಮಲಾಸನ |
ತಪನೀಯನಿಭಂ ಕೂರ್ಮಂ ವಿಸ್ತಾರೇ ದ್ವಾದಶಾಂಗುಲಮ್ ||
ಶಿಲಾಮೃತ್ಕಾಷ್ಠಜಂ ಪದ್ಮಪೀಠೇ ಸಂಸ್ಥಾಪಯೇತ್ಪ್ರಭುಮ್ |
ಅಭಾವೇ ವಾಥ ಚಿತ್ರೇ ವಾ ಕ್ಷೀರೋದಮಮಲಂ ಲಿಖೇತ್ ||
ಕಚ್ಛಪೇಂದ್ರಸ್ಯ ಪೀಠೇ ತು ಮಂದರಂ ಪರ್ವತೋತ್ತಮಮ್ |
ತಮರ್ಚಾದಿಷು ಬಿಂಬಾದಿಸೌಮ್ಯವಕ್ತ್ರಂ ಚತುರ್ಭುಜಮ್ || (ಪಾದ್ಮಸಂಹಿತಾ ವಚನ)

ಆಮೆಯ ಆಕಾರದಿಂದ ಯುಕ್ತವಾಗಿರುವ ಕೂರ್ಮನ ಮೂರ್ತಿಯನ್ನು ತಯಾರಿಸಬೇಕು. ಬಂಗಾರದ ಹಾಗೆ ಹೊಳೆಯುತ್ತಿರುವ ಆ ಕೂರ್ಮಮೂರ್ತಿಯು ಹನ್ನೆರಡು ಅಂಗುಲದಷ್ಟು ಉದ್ದ ಮತ್ತು ಅಗಲವಾಗಿರಬೇಕು. ಅಥವಾ ಶಿಲೆಯಿಂದಾಗಲೀ ಮಣ್ಣಿನಿಂದಾಗಲೀ ಕಟ್ಟಿಗೆಯಿಂದಾಗಲೀ ನಿರ್ಮಿತವಾದ ಕೂರ್ಮಮೂರ್ತಿಯನ್ನು ಪದ್ಮಪೀಠದಲ್ಲಿ ಇಟ್ಟು ಪೂಜಿಸಬೇಕು. ಪದ್ಮಪೀಠವು ಇಲ್ಲದಿದ್ದಲ್ಲಿ ಚಿತ್ರದಲ್ಲಿ ನಿರ್ಮಲವಾದ ಕ್ಷೀರಸಮುದ್ರವನ್ನು ಬರೆಯಬೇಕು. ಅದರ ಮೇಲೆ ಕೂರ್ಮಸ್ವರೂಪಿಯಾದ ಶ್ರೀಹರಿಯ ಮೂರ್ತಿಯನ್ನು ಇಡಬೇಕು. ಕೂರ್ಮರೂಪಿಯಾದ ಶ್ರೀಹರಿಯ ಬೆನ್ನಿನಲ್ಲಿ ಪರ್ವತಗಳಲ್ಲಿ ಉತ್ತಮವಾಗಿರುವ ಮಂದರಪರ್ವತವನ್ನು ಇಡಬೇಕು.

**ವರಾಹಮೂರ್ತಿಯ ಲಕ್ಷಣ**

ವಿಷ್ಣೋರ್ಮಹಾವರಾಹಸ್ಯ ನಿರ್ಮಾಣಮಧುನೋಚ್ಯತೇ |
ನರವತ್ಕಂಠಪರ್ಯಂತಂ ವಕ್ತ್ರಸ್ಸೃಷ್ಟಿರ್ವರಾಹವತ್ ||
ಚತುರ್ಭುಜಂ ಶಂಖಚಕ್ರಧಾರಿಣಂ ಸ್ಫಟಿಕಪ್ರಭಮ್ |
ಪೀತವಸ್ತ್ರಂ ಮುಕುಟಿನಂ ಶ್ಯಾಮಲಾಕೃತಿಮೇವ ವಾ ||
ಸತಿರ್ಯಕ್ಸಂಸ್ಥಿತಂ ಸೂತ್ರೇ ದೇವಿಕೇ ಸ್ಥಾಪಯೇತ್ಪದೇ |
ಶಯನಂ ಯಾನಕಂ ಚೈವ ವರಾಹಸ್ಯ ತು ನೇಷ್ಯತೇ ||

ಮಹಾವರಾಹರೂಪಿಯಾದ ಶ್ರೀಹರಿಯ ನಿರ್ಮಾಣವು ಈಗ ಹೇಳಲ್ಪಡುತ್ತಿದೆ. ಕುತ್ತಿಗೆಯವರೆಗಿನ ಎಲ್ಲಾ ಅವಯವಗಳೂ ಮನುಷ್ಯನ ಅವಯವಗಳಂತೆ ಇರುತ್ತವೆ. ಮುಖವು ಮಾತ್ರ ಕಾಡಿನ ಹಂದಿಯಂತೆ ಇರುತ್ತದೆ. ನಾಲ್ಕು ಕೈಗಳು, ತಲೆಯಲ್ಲಿ ಕಿರೀಟ, ಕೈಗಳಲ್ಲಿ ಶಂಖ ಚಕ್ರಗಳು, ಸೊಂಟದಲ್ಲಿ ಪೀತಾಂಬರ, ನೀಲವಾದ ದೇಹದ ಬಣ್ಣ, ಸ್ಫಟಿಕದ ಪ್ರಕಾಶ, ಪಕ್ಕದ ಕಡೆಗೆ ದೃಷ್ಟಿ ಇರುತ್ತದೆ. ಅವನ ಎರಡು ಪಕ್ಕಗಳಲ್ಲಿ ಶ್ರೀದೇವಿ, ಭೂದೇವಿಯರು ಇರುವರು. ಈ ವರಾಹರೂಪಿಯಾದ ಶ್ರೀಹರಿಯು ಮಲಗಿರುವುದೂ ನಡೆಯುತ್ತಿರುವುದೂ ಪ್ರಶಸ್ತವಲ್ಲ.

**ನರಸಿಂಹಮೂರ್ತಿಯ ಲಕ್ಷಣ**

ವಕ್ತ್ರಂ ಕೇಸರಿಣೋ ವಕ್ತ್ರಂ ವ್ಯತ್ಯಸ್ತಂ ದಂಷ್ಟ್ರಯಾ ಯುತಮ್ |
ಭ್ರುಕುಟೀಕುಟಿಲಂ ಭೀಮಂ ತ್ರಿನೇತ್ರಂ ಮುಕುಟೋಜ್ಜ್ವಲಮ್ ||

ಅಂಗಾಂತರಂ ನರಸ್ಯೈವ ಚತುರ್ಭುಜಮುದಾಯುಧಮ್ |
ರತ್ನಕಂಚುಕಸಂಯುಕ್ತಂ ಶ್ರೀವತ್ಸಾಂಕವಿಭೂಷಿತಮ್ || (ಪಾದ್ಮಸಂಹಿತಾ ವಚನ)

ಸಿಂಹದ ಮುಖ, ವರ್ತುಲಾಕಾರವಾದ ಮುಖ, ಬಾಯಿಯಲ್ಲಿ ಕೋರೆ ಹಲ್ಲುಗಳು, ಮುಖದಲ್ಲಿ ವಕ್ರವಾಗಿರುವ ಹುಬ್ಬುಗಳಿಂದ ಭಯಂಕರವಾದ ಆಕಾರ, ಮೂರು ಕಣ್ಣುಗಳು, ತಲೆಯಲ್ಲಿ ಕಿರೀಟ, ಕುತ್ತಿಗೆಯ ಕೆಳಗಿರುವ ಎಲ್ಲಾ ಅವಯವಗಳೂ ಮನುಷ್ಯನ ಅವಯವಗಳು, ಆಯುಧಗಳನ್ನೆಲ್ಲವನ್ನೂ ಎತ್ತಿಕೊಂಡಿರುವನು. ರತ್ನಕವಚವನ್ನು ಧರಿಸಿರುವನು. ಎದೆಯಲ್ಲಿ ಶ್ರೀವತ್ಸಚಿಹ್ನದಿಂದ ಯುಕ್ತನಾಗಿರುವನು. ಇದು ನರಸಿಂಹಮೂರ್ತಿಯ ಆಕಾರ.

### ವಾಮನಮೂರ್ತಿಯ ಆಕಾರ

ವಾಮನಂ ವಾಮನಾಕಾರಂ ಶ್ಯಾಮಲಂ ದಂಡಧಾರಿಣಮ್ |
ದ್ವಿಭುಜಂ ಮೇಖಲಾಯಾಮಶೋಭಿತಂ ಶೋಭನಾಕೃತಿಮ್ ||
ಕೌಪೀನಾಚ್ಛಾದನಧರಂ ಮೃಗಾಜಿನಧರಂ ಪ್ರಭುಮ್ |
ಯಜ್ಞೋಪವೀತಿನಂ ಕಾಕಪಕ್ಷಮಂಡಲಮಂಡಿತಮ್ ||
ಈಷತ್ಕುಂಚಿತಸವ್ಯಾಂಘ್ರಿಂ ದಕ್ಷಿಣೇನ ಋಜುಸ್ಥಿತಮ್ |
ದಕ್ಷಿಣೇನ ತು ಹಸ್ತೇನ ಯಾಚಮಾನಂ ವಸುಂಧರಾಮ್ || (ಪಾದ್ಮಸಂಹಿತಾ ವಚನ)

ಕುಳ್ಳವಾದ ಆಕಾರ, ನೀಲವರ್ಣದ ದೇಹ, ಕೈಯಲ್ಲಿ ಕೋಲು, ಎರಡು ಕೈಗಳು, ಸೊಂಟದಲ್ಲಿ ಉದ್ದವಾದ ದರ್ಭೆಯ ಉಡುದಾರ, ಕೌಪೀನ, ಕೃಷ್ಣಾಜಿನದ ಹೊದ್ದಿಕೆ, ಕಂಠದಲ್ಲಿ ಯಜ್ಞೋಪವೀತ, ತಲೆಯಲ್ಲಿ ಕಾಕಪಕ್ಷ, ಎಡಪಾದವು ಸ್ವಲ್ಪ ಬಗ್ಗಿರುವುದು, ಬಲಪಾದವು ಋಜುವಾಗಿರುವುದು, ಬಲಗೈಯಿಂದ ಭೂಮಿಯನ್ನು ಬೇಡುತ್ತಿರುವುದು ಮುಂತಾದ ಲಕ್ಷಣಗಳಿಂದ ಯುಕ್ತವಾಗಿರುವುದು ವಾಮನಾಕಾರವೆನಿಸುತ್ತದೆ.

### ಪರಶುರಾಮಮೂರ್ತಿಯ ಆಕಾರ

ಕುರ್ಯಾದ್ಭಾರ್ಗವರಾಮಸ್ಯ ನಿರ್ಮಾಣಮಧುನೋಚ್ಯತೇ |
ಆಸೀನಂ ದ್ವಿಭುಜಂ ಶಾಂತಂ ಜಟಾಮುಕುಟಧಾರಿಣಮ್ ||
ಪರಶುಂ ಸಶರಂ ಚಾಪಂ ದಕ್ಷಿಣೇತರಹಸ್ತಯೋಃ |
ಧಾರಯಂತಂ ಸುವರ್ಣಾಭಂ ಬ್ರಾಹ್ಮ್ಯಾದಿಸುವಿರಾಜಿತಮ್ ||
ಶ್ರೀವತ್ಸೇನಾಂಕಿತೋರಸ್ಕಂ ಯಜ್ಞೋಪವೀತೋತ್ತರೀಯಕಮ್ |
ಸ್ಥಿತಂ ವಾ ಕಲ್ಪಿತಂ ದೇವಂ ಜಾಮದಗ್ನ್ಯಂ ಸಮರ್ಚಯೇತ್ || (ಪಾದ್ಮಸಂಹಿತಾ ವಚನ)

ಪರಶುರಾಮದೇವನು ಕುಳಿತಿರಬೇಕು. ಶಾಂತನಾಗಿರಬೇಕು. ತಲೆಯಲ್ಲಿ ಜಡೆಯನ್ನು ಗಂಟು ಹಾಕಿಕೊಂಡಿರಬೇಕು. ಬಲಗೈಯಲ್ಲಿ ಕೊಡಲಿಯನ್ನೂ ಎಡಗೈಯಲ್ಲಿ ಧನುಸ್ಸು ಮತ್ತು ಬಾಣಗಳನ್ನೂ ಧರಿಸಿರಬೇಕು. ಬಂಗಾರದಂತೆ ಹೊಳೆಯುತ್ತಿರಬೇಕು. ಬ್ರಾಹ್ಮೀ ಮುಂತಾದ ಮಾತೃಕಾಗಣಗಳಿಂದ ಸೇವಿಸಲ್ಪಡುತ್ತಿರಬೇಕು. ಶ್ರೀವತ್ಸಚಿಹ್ನವು ಎದೆಯಲ್ಲಿ ಶೋಭಿಸುತ್ತಿರಬೇಕು. ಕಂಠದಲ್ಲಿ ಯಜ್ಞೋಪವೀತವನ್ನೂ ಹೆಗಲಿನಲ್ಲಿ ಹೊದ್ದುಕೊಳ್ಳುವ ಬಟ್ಟೆಯನ್ನೂ ಧರಿಸಿರಬೇಕು. ನಿಂತಿದ್ದರೂ ಇರಬಹುದು. ಇದು ಪರಶುರಾಮದೇವನ ಮೂರ್ತಿಯ ಲಕ್ಷಣ.

### ರಾಘವರಾಮಮೂರ್ತಿಯ ಲಕ್ಷಣ

ರಾಮಸ್ಯ ರಾಘವಸ್ಯಾಥ ಲಕ್ಷಣಂ ವಕ್ಷ್ಯತೇಽಧುನಾ |
ತ್ರಿಭಂಗಿಂ ದ್ವಿಭುಜಂ ರಾಮಂ ಶ್ಯಾಮವರ್ಣಂ ಕಿರೀಟಿನಮ್ ||
ಶ್ರೀವತ್ಸಾಂಕಂ ಪ್ರಸನ್ನಾಭಮ್ | (ಪಾದ್ಮಸಂಹಿತಾ ವಚನ)

ರಾಘವರಾಮನು ತ್ರಿಭಂಗಿಯಾಗಿ ನಿಂತಿರಬೇಕು. ಎರಡು ಕೈಗಳಿಂದ ಯುಕ್ತನಾಗಿರಬೇಕು. ನೀಲವಾದ ದೇಹದ ಬಣ್ಣ, ಶ್ರೀವತ್ಸ ಚಿಹ್ನ, ತಲೆಯಲ್ಲಿ ಕಿರೀಟ, ಪ್ರಸನ್ನವಾದ ದೇಹದ ಕಾಂತಿ ಇವುಗಳಿಂದ ಯುಕ್ತನಾಗಿರಬೇಕು.

### ಶ್ರೀಕೃಷ್ಣಮೂರ್ತಿಯ ಲಕ್ಷಣ

ಸದ್ಭಾವಸ್ಯಾಥ ಕೃಷ್ಣಸ್ಯ ನಿರ್ಮಾಣಮಧುನೋಚ್ಯತೇ |
ಕಲ್ಯಾಣಲಕ್ಷಣಯುತಂ ತ್ರಿಭಂಗಿಂ ಸಿಂಹವಿಷ್ಟರೇ ||
ತಿಷ್ಠಂತಂ ರುಕ್ಮಿಣೀಸತ್ಯಭಾಮಾಭ್ಯಾಂ ಸಹಿತಂ ಪ್ರಭುಮ್ |
ಈಷತ್ಕುಂಚಿತವಾಮಾಂಘ್ರಿಸಂಸ್ಥಿತೇತರಮದ್ಭುತಮ್ ||
ಮೇಘಶ್ಯಾಮಂ ವಿಶಾಲಾಕ್ಷಂ ಪೀತವಸ್ತ್ರಂ ಚತುರ್ಭುಜಮ್ | (ಪಾದ್ಮಸಂಹಿತಾ ವಚನ)

ಕಲ್ಯಾಣಲಕ್ಷಣಗಳುಳ್ಳವನಾಗಿರಬೇಕು. ತ್ರಿಭಂಗಿ ಆಕಾರವುಳ್ಳವನಾಗಿರಬೇಕು. ಸಿಂಹಾಸನದಲ್ಲಿ ರುಕ್ಮಿಣೀ ಸತ್ಯಭಾಮೆಯರಿಂದ ಸಹಿತನಾಗಿ ಕುಳಿತಿರಬೇಕು. ಸ್ವಲ್ಪ ಬಗ್ಗಿರುವ ಎಡಗಾಲಿನ ಮೇಲೆ ಬಲಗಾಲನ್ನು ಇಟ್ಟಿರುವವನಾಗಬೇಕು. ಮೇಘಗಳಂತೆ ಶ್ಯಾಮಲವಾದ ದೇಹವುಳ್ಳವನಾಗಿರಬೇಕು. ವಿಶಾಲವಾದ ಕಣ್ಣುಗಳುಳವನಾಗಿರಬೇಕು. ಪೀತಾಂಬರವನ್ನು ಉಟ್ಟುಕೊಂಡವನಾಗಿರಬೇಕು. ನಾಲ್ಕು ಕೈಗಳಿಂದ ಯುಕ್ತನಾಗಿರಬೇಕು. ಇದು ಶ್ರೀಕೃಷ್ಣ ವಿಗ್ರಹದ ಲಕ್ಷಣ.

### ಬುದ್ಧಮೂರ್ತಿಯ ಲಕ್ಷಣ

ನಿರ್ಮಾಣಮಧುನಾ ವಕ್ಷ್ಯೇ ಬುದ್ಧದೇವಸ್ಯ ಚಕ್ರಿಣಃ |
ದೇವೀ ಸವ್ಯಭುಜೇ ನ್ಯಸ್ತವಾಮಹಸ್ತಸರೋರುಹಮ್ ||
ಗಂಡೋ ಮುಖಂ ತದ್ಧಸ್ತಾರಂ ನಾಭಿಸೂತ್ರಮವಸ್ಥಿತಮ್ |
ವಾಮೇತರಕರಸ್ಪೃಷ್ಟಕ್ರೀಡಾಯಷ್ಟಿಮನೋಹರಮ್ ||
ತತ್ಕರಂ ಕಟಿಸೂತ್ರಾಂತಮುದರಸ್ಥಕರದ್ವಯಮ್ |
ಶಂಖಚಕ್ರಧರಂ ಕುರ್ಯಾದ್ದ್ವಿಭುಜಂ ವಾ ಯಥೋದಿತಮ್ || (ಪಾದ್ಮಸಂಹಿತಾ ವಚನ)

ಬುದ್ಧಮೂರ್ತಿಯ ಲಕ್ಷಣಗಳನ್ನು ಹೇಳುವೆನು. ಬುದ್ಧದೇವನು ನಾಲ್ಕು ಕೈಗಳಿಂದಲಾಗಲೀ ಎರಡು ಕೈಗಳಿಂದಲಾಗಲೀ ಯುಕ್ತನಾಗಿರುವನು. ಅವನ ಎಡತೊಡೆಯ ಮೇಲೆ ದೇವಿಯು ಕುಳಿತಿರುವಳು. ಅವಳ ಬಲಗೈಯನ್ನು ತನ್ನ ಎಡಗೈಯಿಂದಲೂ ಬಲಗೈಯಿಂದ ಆಟಕ್ಕಾಗಿ ಹಿಡಿಯುವ ಬೆತ್ತವನ್ನೂ ಧರಿಸಿರುವನು. ಬಲಗೈಯು ದೇವಿಯ ಸೊಂಟದವರೆಗೆ ಇರುತ್ತದೆ. ಉಳಿದ ಎರಡು ಕೈಗಳಿಂದ ದೇವಿಯ ಹೊಟ್ಟೆಯನ್ನು ತಬ್ಬಿಕೊಂಡಿರುವನು. ಆ ಎರಡು ಕೈಗಳಿಂದ ಶಂಖ ಚಕ್ರ ಎಂಬ ಎರಡು ಆಯುಧಗಳನ್ನು ಧರಿಸಿರುವನು. ಬಲಗೈಯಿಂದ ದೇವಿಯ ಕೆನ್ನೆಯನ್ನೂ ಮುಖವನ್ನೂ ಹೊಕ್ಕಳಿಗಿಂತ ಮೇಲ್ಭಾಗದಲ್ಲಿ ಮುಟ್ಟುತ್ತಿರುವನು. ಇದು ಬುದ್ಧವಿಗ್ರಹದ ಲಕ್ಷಣ.

### ಕಲ್ಕಿವಿಗ್ರಹದ ಲಕ್ಷಣ

ನಿರ್ಮಾಣಮಧುನಾ ವಕ್ಷ್ಯೇ ಕಲ್ಕಿವಿಷ್ಣೋರ್ಮಹಾತ್ಮನಃ |
ಕೇಶಶ್ಮಶ್ರುವಿವೃತ್ತಾಕ್ಷಂ ರಕ್ತಾಭಂ ಹಯವಾಹನಮ್ ||
ದ್ವಿಭುಜಂ ಚರ್ಮವಸನಂ ಖಡ್ಗಖೇಟಕಧಾರಿಣಮ್ |
ಜಟಾಮುಕುಟಸಂಯುಕ್ತಂ ಬ್ರಾಹ್ಮ್ಯಾ ಲಕ್ಷ್ಮ್ಯಾ ವಿರಾಜಿತಮ್ ||
ಪೈಶಾಚೇಯಾರ್ಪಣಂ ಕುರ್ಯಾದ್ದಿವ್ಯಭಾಗ್ಯೈಃ ಸ್ಥಿತಿರ್ಭವೇತ್ | (ಪಾದ್ಮಸಂಹಿತಾ ವಚನ)

ಕಲ್ಕಿ ಮೂರ್ತಿಯ ಲಕ್ಷಣಗಳನ್ನು ಹೇಳುವೆನು. ಮುಖದಲ್ಲಿ ದಟ್ಟವಾದ ತಲೆಕೂದಲುಗಳು ದಪ್ಪವಾದ ಮೀಸೆ. ವರ್ತುಲಾಕಾರವಾದ ಕಣ್ಣುಗಳು, ಕೆಂಪುಬಣ್ಣದ ದೇಹ, ಕುದುರೆ ವಾಹನ, ಎರಡು ಕೈಗಳು, ತೊಗಲಿನ ಬಟ್ಟೆ, ಖಡ್ಗ, ಗುರಾಣಿ ಎಂಬ ಎರಡು ಆಯುಧಗಳು, ತಲೆಯಲ್ಲಿ ಜಡೆಯ ಕಿರೀಟ, ಬ್ರಾಹ್ಮಣರಿಗೆ ಯೋಗ್ಯವಾದ ಬ್ರಹ್ಮವರ್ಚಸ್ಸು ಇವುಗಳಿಂದ ಯುಕ್ತನಾದ ಕಲ್ಕಿಯ ವಿಗ್ರಹವನ್ನು ತಯಾರಿಸಬೇಕು. ಈ ಕಲ್ಕಿಯನ್ನು ಪಿಶಾಚಗಳೂ ಪಿಶಾಚಗಳಿಗೆ ಸಮಾನರಾಗಿರುವವರೂ ಪೂಜಿಸುವರು. ಆದರೆ ದಿವ್ಯವಾದ ವಸ್ತುಗಳಿಂದ ಪೂಜಿಸುವವರಲ್ಲಿ ಈ ಕಲ್ಕಿಯು ವಿಶೇಷಾನುಗ್ರಹವನ್ನು ಮಾಡುವನು.

### ವಿಶ್ವಮೂರ್ತಿಯ ಲಕ್ಷಣ

ವಾಸುದೇವಮುಖಾದೂರ್ಧ್ವಂ ನಾಗಗಂಧರ್ವಕಿನ್ನರಾಃ |
ಮುಖಾನ್ಯೇತಾನಿ ಚೈಂದ್ರಾದಿಯಮವೈಭವಮಾದರಾತ್ ||
ಕರ್ತವ್ಯಾನಿ ಚತುರ್ವಕ್ತ್ರಸಮರ್ಥಾನಿ ವಿಚಕ್ಷಣೈಃ |
ಉಪರಿಷ್ಟಾಚ್ಚ ವಕ್ತ್ರಾಣಾಂ ಕಿರೀಟಂ ಮಣಿಶೋಭಿತಮ್ ||
ಕುರ್ಯಾದ್ಭಗವದುದ್ಭೂತಂ ಸಹಸ್ರಾದಿತ್ಯವರ್ಚಸಮ್ |
ಅನೇಕಭುಜಸಂಯುಕ್ತಮನೇಕಾಯುಧಭೂಷಿತಮ್ ||
ಅರ್ಚ್ಯಂತಂ ಬ್ರಹ್ಮರುದ್ರಾಭ್ಯಾಂ ಭಕ್ತಿಭೂರಿಷು ದೇವತಾಃ |
ಚಿತ್ರೇಣ ಸರ್ವೇ ವಿಹಿತಾ ವಿಶ್ವರೂಪಸ್ಯ ಉತ್ತರೇ ||

ಈ ವಿಶ್ವರೂಪನಿಗೆ ನಾಲ್ಕು ಮುಖಗಳು. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಶ್ರೀಹರಿಯ ನಾಲ್ಕು ರೂಪಗಳ ಮುಖಗಳೇ ಆ ನಾಲ್ಕು ಮುಖಗಳು. ಈ ನಾಲ್ಕು ಮುಖಗಳನ್ನೂ ನಿಪುಣರಾದ ಶಿಲ್ಪಿಗಳಿಂದ ಮಾಡಿಸಬೇಕು. ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ವಾಸುದೇವ ಮುಂತಾದ ಭಗವನ್ಮೂರ್ತಿಗಳ ಮುಖಗಳನ್ನು ತಯಾರಿಸಬೇಕು. ಈ ನಾಲ್ಕು ಮುಖಗಳ ಮಧ್ಯದಲ್ಲಿ ಪೂರ್ವದಲ್ಲಿರುವ ವಾಸುದೇವಮುಖಕ್ಕಿಂತ ಹಿಂದೆ ನಾಗಗಳು, ಗಂಧರ್ವರು, ಕಿನ್ನರರು ಸಾಲುಸಾಲಾಗಿ ನಿಂತುಕೊಂಡಿರುವರು. ಈ ನಾಲ್ಕು ಮುಖಗಳ ಮೇಲೆ ಮಣಿಗಳಿಂದ ನಿರ್ಮಿತವಾದ ಒಂದು ಕಿರೀಟವು ಇರಬೇಕು. ಆ ಕಿರೀಟವು ಅನಂತ ಸೂರ್ಯರಂತೆ ಪ್ರಕಾಶದಿಂದ ಯುಕ್ತವಾಗಿರಬೇಕು. ಅನಂತ ಹಸ್ತಗಳಿಂದ ಯುಕ್ತವಾಗಿರಬೇಕು. ಆ ಒಂದೊಂದು ಕೈಗಳಲ್ಲಿಯೂ ಒಂದೊಂದು ಆಯುಧಗಳಂತೆ ಅನಂತ ಸಂಖ್ಯಾಕವಾದ ಆಯುಧಗಳಿಂದ ಯುಕ್ತವಾಗಿರಬೇಕು. ಬ್ರಹ್ಮದೇವನೂ ರುದ್ರದೇವನೂ ಈ ವಿಶ್ವರೂಪಮೂರ್ತಿಯನ್ನು ಪೂಜಿಸುತ್ತಿರಬೇಕು. ಅನಂತರದಲ್ಲಿ ಭಕ್ತಿತಾರತಮ್ಯವನ್ನು ಅನುಸರಿಸಿ ಎಲ್ಲಾ ದೇವತೆಗಳು ಪೂಜಿಸುತ್ತಿರಬೇಕು. ಇಷ್ಟು ವಿಷಯಗಳನ್ನೂ ಚಿತ್ರಕಾರನಿಂದ ಚಿತ್ರದಿಂದ ಬರೆಯಲು ಶಕ್ಯವಿಲ್ಲ. ಉತ್ತರ ದಿಕ್ಕಿನಲ್ಲಿರುವ ಒಂದು ಮುಖವನ್ನೂ ಆ ಮುಖಕ್ಕೆ ಸಂಬಂಧಿಸಿದ ವಿಷಯಗಳನ್ನೂ ಮಾತ್ರ ಬರೆಯಬೇಕು. ವಿಶ್ವರೂಪಮೂರ್ತಿಯ ಲಕ್ಷಣವನ್ನು ಸಂಕ್ಷೇಪವಾಗಿ ಇಲ್ಲಿ ತಿಳಿಸಿದೆವು.

ಈಗ ಶಿಲ್ಪಶಾಸ್ತ್ರೋಕ್ತಕ್ರಮದಿಂದ ಮತ್ಸ್ಯ ಕೂರ್ಮ ಮುಂತಾದ ಮೂರ್ತಿಗಳ ಲಕ್ಷಣಗಳನ್ನು ಹೇಳುವೆವು.

ಕಟ್ಯಾದೌ ಮತ್ಸ್ಯರೂಪಾಯ ಕಿರೀಟಾದಿವಿಭೂಷಿತಾಯ ಚಕ್ರಶಂಖವರಾಭಯಹಸ್ತಾಯ ವೇದಾಸಹಿತಾಯ ಓಂ ಶ್ರೀಮತ್ಸ್ಯಾಯ ನಮಃ | ಕಟ್ಯಾದೌ ಕೂರ್ಮರೂಪಾಯ ತಪನೀಯವರ್ಣಾಯ ಕಿರೀಟಾದಿವಿಭೂಷಿತಾಯ ಚಕ್ರಶಂಖವರಾಭಯಹಸ್ತಾಯ ವೇದವತೀಸಹಿತಾಯ ಓಂ ಶ್ರೀಕೂರ್ಮಾಯ ನಮಃ | ಕಂಠಾದುಪರಿ ವರಾಹಮುಖಾಯ ಸ್ಫಟಿಕವರ್ಣಾಯ ಕಿರೀಟಾದಿವಿಭೂಷಿತಾಯ, ಶಂಖಚಕ್ರವರಾಭಯಹಸ್ತಾಯ ಧಾತ್ರೀಸಹಿತಾಯ ಓಂ ಶ್ರೀವರಾಹಾಯ ನಮಃ | ಕಂಠಾದಧೋ ನರರೂಪಿಣೇ ಸಿಂಹಮುಖಾಯ ದಂಷ್ಟ್ರಾಯುಕ್ತಾಯ ವಿವೃತಾಸ್ಯಾಯ ಭ್ರುಕುಟೀಕುಟಿಲನೇತ್ರಾಯ ಮುಕುಟಾದಿವಿಭೂಷಿತಾಯ ಯಜ್ಞವರ್ಣಾಯ ಶಂಖಚಕ್ರವರಾಭಯಹಸ್ತಾಯ ಶ್ರೀಲಕ್ಷ್ಮೀಸಹಿತಾಯ ಓಂ ನೃಸಿಂಹಾಯ ನಮಃ | ಕೌಪೀನಮೇಖಲಾಜಿನಶಿಖಾಯಜ್ಞೋಪವೀತದಂಡಧರಾಯ ಶ್ಯಾಮಲವರ್ಣಾಯ ಈಷತ್ಕುಂಚಿತಸವ್ಯಾಂಘ್ರಿಭುಜಾಯ ವಸುಂಧರಾಯಾಚಮಾನದಕ್ಷಿಣಹಸ್ತಾಯ ಸುಗಂಧಾಸಹಸ್ಥಿತಾಯ ಓಂ ಶ್ರೀವಾಮನಾಯ ನಮಃ | ಜಟಾಮುಕುಟಧರಾಯ ಶಾಂತಾಯ ದಕ್ಷಿಣೇತರಹಸ್ತಯೋಃ ಪರಶುಚಾಪಶರಧರಾಯ ಸುವರ್ಣವರ್ಣಾಯ ಉಪವೀತೋತ್ತರೀಯಧರಾಯ ಭಾರ್ಗವೀಸಹಿತಾಯ ಓಂ ಶ್ರೀಭಾರ್ಗವಾಯ ನಮಃ | ಕಿರೀಟಾದಿವಿಭೂಷಿತಾಯ ತ್ರಿಭಂಗಿಶ್ಯಾಮವರ್ಣಧರಾಯ ಸೀತಾಸಹಿತಾಯ ಓಂ ಶ್ರೀರಾಮಾಯ ನಮಃ | ಮೇಘಶ್ಯಾಮಸದೃಶಕಲ್ಯಾಣಲಕ್ಷಣಾವಯವಯುಕ್ತಕಿರೀಟಾದಿವಿಭೂಷಿತಾಯ ಈಷತ್ಕುಂಚಿತವಾಮಾಂಘ್ರಿಸುಸ್ಥಿತಾಪರಪಾದಾಯ ತ್ರಿಭಂಗಿಯುಕ್ತಾಯ ಚಕ್ರಶಂಖವರಾಭಯಹಸ್ತಾಯ ರುಕ್ಮಿಣೀ ಸತ್ಯಭಾಮಾಭ್ಯಾಂ ಸಹಿತಾಯ ಸಿಂಹವಿಷ್ಟರೋಪರಿ ಸ್ಥಿತಾಯ ಓಂ ಶ್ರೀಕೃಷ್ಣಾಯ ನಮಃ | ಕಿರೀಟಕಟಕಾದ್ಯಲಂಕೃತಾಯ ಉದ್ಯದಾದಿತ್ಯವರ್ಣಾಯ ಪಾರ್ಶ್ವಯೋಶ್ಚಕ್ರಶಂಖಯುಕ್ತಾಯ ಉತ್ತಾನಾವಲಂಬಿತಕರಯುಗ್ಮಾಯ ದಿಗಂಬರಾಯ ಸ್ವದೇವ್ಯಾ ಸಹಿತಾಯ ಓಂ ಶ್ರೀಬುದ್ಧಾಯ ನಮಃ | ಜಟಾಮುಕುಟಶ್ಮಶ್ರುವಿವೃತಾಕ್ಷಾಯ ಚರ್ಮವಸನಾಯ ಯಜ್ಞೋಪವೀತಧರಾಯ ಖಡ್ಗಖೇಟಕಧರಾಯ ಪ್ರಭಾಸಹಿತಾಯ ಅಶ್ವಾರೂಢಾಯ ಓಂ ಶ್ರೀಕಲ್ಕಿನೇ ನಮಃ | ಓಂ ಶ್ರೀಲಕ್ಷ್ಮೀ ಸಹಿತಾಯ ಓಂ ಅನಂತಾತ್ಮನೇ ನಮಃ | ಪೂರ್ವಾದಿಚತುರ್ಮುಖೇಷು ವಾಸುದೇವ್ಯಾದ್ಯಧಿಷ್ಠಾನಾಯ ಸಹಸ್ರಾದಿತ್ಯವರ್ಣಾಯ ಕಿರೀಟಾದಿವಿಭೂಷಿತಾಯ ಅನಂತದಾಯಿನೇ ಅನಂತಾಯುಧಧರಾಯ ಭಕ್ತ್ಯಾ ಬ್ರಹ್ಮರುದ್ರಾಭ್ಯಾಂ ಸೇವ್ಯಮಾನಾಯ ವಿಶ್ವರೂಪಿಣ್ಯಾ ಸಹಿತಾಯ ವಿಷ್ಟರೇ ಪಾದಯುಗ್ಮಸ್ಥಿತಾಯ ಓಂ ಶ್ರೀವಿಶ್ವರೂಪಾಯ ನಮಃ |

### ಷಷ್ಠಾವರಣಪೂಜಾ

ಸ್ಥಾನಂ ತೇ ವಿಶ್ವರೂಪಂ ಸ್ಯಾಚ್ಛಂಖಪದ್ಮನಿಧೀ ಯಜೇತ್ |
ದಕ್ಷೇ ವಾಮೇ ಧ್ವಜಂ ಪೃಷ್ಠೇ ಗರುಡಂ ಪುರತೋ ಹರೇಃ ||
ಶಂಖಚಕ್ರಗದಾಬ್ಜಾನಿ ಯಜೇದ್ದಿಕ್ಷ್ವಾಯುಧಾನಿ ಚ | (ವಿಷ್ಣುತೀರ್ಥೀಯ ವಚನ)

"ಶ್ರೀಹರಿಯ ಬಲಭಾಗದಲ್ಲಿ ಶಂಖನಿಧಿಯನ್ನೂ ಎಡಭಾಗದಲ್ಲಿ ಪದ್ಮನಿಧಿಯನ್ನೂ ಹಿಂದಿನ ಭಾಗದಲ್ಲಿ ಧ್ವಜವನ್ನೂ ಮುಂಭಾಗದಲ್ಲಿ ಗರುಡನನ್ನೂ ಪೂರ್ವದಿಕ್ಕಿನಲ್ಲಿ ಶಂಖವನ್ನೂ ದಕ್ಷಿಣದಿಕ್ಕಿನಲ್ಲಿ ಚಕ್ರವನ್ನೂ ಪಶ್ಚಿಮದಿಕ್ಕಿನಲ್ಲಿ ಪದ್ಮವನ್ನೂ ಉತ್ತರದಿಕ್ಕಿನಲ್ಲಿ ಗದೆಯನ್ನೂ ಪೂಜಿಸಬೇಕು." ಅದಕ್ಕೆ ಮಂತ್ರಗಳು. ದೇವಸ್ಯ ದಕ್ಷಿಣೇ ಓಂ ಶಂಖನಿಧಯೇ ನಮಃ | ದೇವಸ್ಯ ಸವ್ಯೇ ಓಂ ಪದ್ಮನಿಧಯೇ ನಮಃ | ಪೃಷ್ಠೇ ಓಂ ಧ್ವಜಾಯ ನಮಃ ಪುರತಃ ಓಂ ಗರುಡಾಯ ನಮಃ | ಪೂರ್ವದಿಶಿ ಓಂ ಶಂಖಾಯ ನಮಃ | ದಕ್ಷಿಣದಿಶಿ ಚಕ್ರಾಯ ನಮಃ | ಪಶ್ಚಿಮದಿಶಿ ಓಂ ಪದ್ಮಾಯ ನಮಃ | ಉತ್ತರದಿಶಿ ಓಂ ಗದಾಯೈ ನಮಃ |

ಅನಂತಬ್ರಹ್ಮವಾಯ್ವೀಶಾನ್ ವೀಶಂ ಚಾಗ್ರೇ ಪ್ರಪೂಜಯೇತ್ |
ವಾರುಣೀಂ ಚೈವ ಗಾಯತ್ರೀಂ ಭಾರತೀಂ ಗಿರಿಜಾಮಪಿ ||
ಕೋಣೇಷು ವೀಂದ್ರವಾಮೇ ಚ ಸೌಪರ್ಣೀಂ ಪೂಜಯೇದಪಿ || (ತಂತ್ರಸಾರ ವಚನ)

ಶ್ರೀಹರಿಯ ಪೂರ್ವದಿಕ್ಕಿನಲ್ಲಿ ಮತ್ಸ್ಯಾದಿಮೂರ್ತಿಗಳ ಆವರಣಕ್ಕಿಂತ ಹೊರಗೆ ಶೇಷನನ್ನೂ ಅವನ ಎಡಭಾಗದಲ್ಲಿ ವಾರುಣೀದೇವಿಯನ್ನೂ ದಕ್ಷಿಣದಲ್ಲಿ ಬ್ರಹ್ಮನ ಎಡಭಾಗದಲ್ಲಿ ಗಾಯತ್ರೀದೇವಿಯನ್ನೂ ಪಶ್ಚಿಮದಿಕ್ಕಿನಲ್ಲಿ ವಾಯುವನ್ನೂ ವಾಯುವಿನ ಎಡಭಾಗದಲ್ಲಿ ಭಾರತೀದೇವಿಯನ್ನೂ ಉತ್ತರದಿಕ್ಕಿನಲ್ಲಿ ರುದ್ರನನ್ನೂ ರುದ್ರನ ಎಡಭಾಗದಲ್ಲಿ ಗಿರಿಜಾದೇವಿಯನ್ನೂ ಎಲ್ಲರಿಗಿಂತ ಮುಂಭಾಗದಲ್ಲಿ ಗರುಡನನ್ನೂ ಗರುಡನ ಎಡಭಾಗದಲ್ಲಿ ಸೌಪರ್ಣೀದೇವಿಯನ್ನೂ ಪೂಜಿಸಬೇಕು.

ಅನಂತಬ್ರಹ್ಮವಾಯ್ವೀಶಾನ್ ದಿಕ್ಷು ವೀಶಂ ತಥಾಽಗ್ರತಃ |
ವಾರುಣೀಂ ಚೈವ ಗಾಯತ್ರೀಂ ಭಾರತೀಂ ಗಿರಿಜಾಮಪಿ ||
ಕೋಣೇಷು ವೀಂದ್ರವಾಮೇ ಚ ಸೌಪರ್ಣೀಂ ಪೂಜಯೇದಪಿ || (ವಿಷ್ಣುತೀರ್ಥೀಯ ವಚನ)

ಈ ಶ್ಲೋಕವೂ ತಂತ್ರಸಾರಕ್ಕೆ ಸಮಾನಾರ್ಥಕವಾಗಿದೆ.

ಪೂಜಾಕ್ರಮ - ಪೂರ್ವದಿಶಿ ಕಿರೀಟಾದಿವಿಭೂಷಿತಸೌಮ್ಯವಕ್ತ್ರಾಯ ಸಹಸ್ರ ಫಣಯುಕ್ತಾಯ ಶುಭ್ರವರ್ಣಾಯ ಮುಸಲಾಭಯಹಸ್ತಸ್ಥಿತಾಯ ಓಂ ಶ್ರೀಮದನಂತಾಯ ನಮಃ | ದಕ್ಷಿಣದಿಶಿ ಕಿರೀಟಾದಿವಿಭೂಷಿತಚತುರ್ಮುಖಾಯ ಸುವರ್ಣವರ್ಣಾಯ ದಂಡಾಭಯಾಕ್ಷಮಾಲಾಜ್ಞಾನಮುದ್ರಾಸಹಿತಾಯ ಓಂ ಬ್ರಹ್ಮಣೇ ನಮಃ | ಪಶ್ಚಿಮದಿಶಿ ಕಿರೀಟಾದಿವಿಭೂಷಿತಾಯ ಉದ್ಯದಾದಿತ್ಯವರ್ಣಾಯ ಗದಾಭಯಮುಕುಲಿತಾಂಜಲಿಹಸ್ತಾಯ ಓಂ ಶ್ರೀವಾಯವೇ ನಮಃ | ಈಶಾನ್ಯದಿಶಿ ಜಟಾಮುಕುಟಧರಾಯ ಶುಭ್ರವರ್ಣಾಯ ಶೂಲಾಭಯಹಸ್ತಸ್ಥಿತಾಯ ಓಂ ಈಶಾನಾಯ ನಮಃ | ದೇವಸ್ಯಾಗ್ರೇ ಕಿರೀಟಾದಿವಿಭೂಷಿತಾಯ ಸುವರ್ಣಪಕ್ಷಾಯ ಮುಕುಲಿತಾಂಜಲಸ್ಥಿತಾಯ ಓಂ ಶ್ರೀಗರುಡಾಯ ನಮಃ | ಆಗ್ನೇಯದಿಶಿ ಓಂ ಶ್ರೀ ವಾರುಣ್ಯೈ ನಮಃ | ನೈಋತ್ಯದಿಶಿ ಓಂ ಶ್ರೀ ಗಾಯತ್ರ್ಯೈ ನಮಃ | ವಾಯವ್ಯದಿಶಿ ಓಂ ಶ್ರೀಭಾರತ್ಯೈ ನಮಃ | ಈಶಾನ್ಯದಿಶಿ ಓಂ ಶ್ರೀಗಿರಿಜಾಯೈ ನಮಃ | ಆಗ್ನೇಯದಿಶಿ ಸೌಪರ್ಣ್ಯೈ ನಮಃ |

ಇದು ಷಷ್ಠಾವರಣಪೂಜೆಯೆನಿಸುತ್ತವೆ.

### ಸಪ್ತಮಾವರಣಪೂಜೆ

ಇಂದ್ರಾದೀನ್ ಶೇಷವಿಧ್ಯಂತಾನ್ ಸಭಾರ್ಯಾನ್ ಸಪರಿಗ್ರಹಾನ್ | (ತಂತ್ರಸಾರ ವಚನ)

ಇಂದ್ರ ಮುಂತಾದ ಎಂಟು ದಿಕ್ಕುಗಳಿಗೆ ಪಾಲಕರನ್ನೂ ಮೇಲಿನ ಲೋಕಪಾಲಕನಾದ ಬ್ರಹ್ಮನನ್ನೂ ಕೆಳಗಣ ಲೋಕಗಳಿಗೆ ಪಾಲಕನಾಗಿರುವ ಶೇಷನನ್ನೂ ಪೂಜಿಸಬೇಕು. ಇವರೆಲ್ಲರನ್ನೂ ಪತ್ನಿಯರಿಂದ ಸಹಿತರಾಗಿಯೂ ಪರಿವಾರದಿಂದ ಸಹಿತರಾಗಿಯೂ ಪೂಜಿಸಬೇಕು.

ಇಂದ್ರಾದೀನ್ ಶೇಷವಿಧ್ಯಂತಾನ್ ಸಭಾರ್ಯಾನ್ ಸಪರಿಗ್ರಹಾನ್ |
ಅನಂತಂ ವರುಣಸ್ಯಾಪಿ ನಿಋತೇರ್ಮಧ್ಯತೋ ಯಜೇತ್ ||
ದೇವೇಂದ್ರೇಶಾನಯೋರ್ಮಧ್ಯೇ ಬ್ರಹ್ಮಾಣಂ ವೈ ಪ್ರಪೂಜಯೇತ್ |
ಸರ್ವಾನಭಿಮುಖಾನ್ವಿಷ್ಣೋಃ ಕೃತಾಂಜಲಿಪುಟಾನ್ ಯಜೇತ್ ||

ಇಂದ್ರನಿಂದ ಆರಂಭಿಸಿ ಬ್ರಹ್ಮನವರೆಗೆ ಇರುವ ಎಲ್ಲಾ ಲೋಕಪಾಲಕರನ್ನೂ ಅವರವರ ಪತ್ನೀಪರಿವಾರಗಳೊಡನೆ ಪೂಜಿಸಬೇಕು. ಇಂದ್ರ ಮುಂತಾದವರನ್ನು ಅವರವರ ದಿಕ್ಕುಗಳಲ್ಲಿಯೇ ಪೂಜಿಸಬೇಕು. ನೈಋತ್ಯ ಮತ್ತು ಪಶ್ಚಿಮ ದಿಕ್ಕುಗಳ

ಮಧ್ಯದಲ್ಲಿ ಶೇಷನನ್ನೂ ಪೂರ್ವ ಮತ್ತು ಈಶಾನ್ಯದಿಕ್ಕುಗಳ ಮಧ್ಯದಲ್ಲಿ ಬ್ರಹ್ಮನನ್ನೂ ಪೂಜಿಸಬೇಕು. ಈ ಎಲ್ಲಾ ದೇವತೆಗಳೂ ಶ್ರೀಹರಿಗೆ ಅಭಿಮುಖರಾಗಿದ್ದು ಕೈಗಳನ್ನು ಜೋಡಿಸಿ ನಮಸ್ಕರಿಸುತ್ತಿರುವಂತೆ ಸ್ಮರಿಸಬೇಕು.

ಮೇಲ್ಕಂಡ ಇಂದ್ರಾದಿದೇವತೆಗಳ ಆವರಣಪೂಜಾಮಂತ್ರಗಳನ್ನು ಈಗ ಹೇಳುವೆವು.

ಇಲ್ಲಿ ವಾಯವ್ಯದಿಕ್ಕಿಗೆ ಪಾಲಕರು ಪ್ರಧಾನವಾಯುದೇವರಲ್ಲ ಪ್ರಧಾನ ವಾಯುದೇವನ ಮಗನಾಗಿರುವ ವಾಯುವು ಬೇರೆ ಎಂದು ತಾತ್ಪರ್ಯನಿರ್ಣಯದಲ್ಲಿ ಹೇಳಿರುತ್ತದೆ.

"ಪ್ರಧಾನವಾಯೋಸ್ತನಯಂ ಚ ವಾಯುಂ ಕೋಣಾಧಿಪಂ ವಹ್ನಿಯಮಾದಿಕಾನಪಿ" ಇದು ಮಹಾಭಾರತತಾತ್ಪರ್ಯ ನಿರ್ಣಯ ವಚನ.

ಓಂ ಲಂ ಇಂದ್ರಾಯ ಸುರಾಧಿಪತಯೇ ಪೀತವರ್ಣಾಯ ವಜ್ರಹಸ್ತಾಯ ಸವಾಹನಾಯ ಸಭಾರ್ಯಾಯ ಶ್ರೀವಿಷ್ಣು ಪಾರ್ಷದಾಯ ನಮಃ | ಓಂ ರಂ ಅಗ್ನಯೇ ತೇಜೋಧಿಪತಯೇ ರಕ್ತವರ್ಣಾಯ ಶಕ್ತಿಹಸ್ತಾಯ ಸವಾಹನಾಯ ಸಭಾರ್ಯಾಯ ಶ್ರೀವಿಷ್ಣುಪಾರ್ಷದಾಯ ನಮಃ | ಓಂ ಯಂ ಯಮಾಯ ಪ್ರೇತಾಧಿಪತಯೇ ಕೃಷ್ಣವರ್ಣಾಯ ದಂಡಹಸ್ತಾಯ ಸವಾಹನಾಯ ಸಭಾರ್ಯಾಯ ಶ್ರೀವಿಷ್ಣುಪಾರ್ಷದಾಯ ನಮಃ | ಓಂ ಕ್ಷಂ ನಿಋತಯೇ ರಕ್ಷೋಧಿಪತಯೇ ಧೂಮ್ರವರ್ಣಾಯ ಖಡ್ಗಹಸ್ತಾಯ ಸವಾಹನಾಯ ಸಭಾರ್ಯಾಯ ಶ್ರೀವಿಷ್ಣುಪಾರ್ಷದಾಯ ನಮಃ | ಓಂ ವಂ ವರುಣಾಯ ಜಲಾಧಿಪತಯೇ ಶುಭ್ರವರ್ಣಾಯ ಪಾಶಹಸ್ತಾಯ ಸವಾಹನಾಯ ಸಭಾರ್ಯಾಯ ಶ್ರೀ ವಿಷ್ಣುಪಾರ್ಷದಾಯ ನಮಃ | ಓಂ ಯಂ ಅನಿಲಾಯ ಪ್ರಾಣಾಧಿಪತಯೇ ಧೂಮ್ರವರ್ಣಾಯ ಅಂಕುಶಹಸ್ತಾಯ ಸವಾಹನಾಯ ಸಭಾರ್ಯಾಯ ಶ್ರೀ ವಿಷ್ಣುಪಾರ್ಷದಾಯ ನಮಃ | ಓಂ ಸಂ ಸೋಮಾಯ ನಕ್ಷತ್ರಾಧಿಪತಯೇ ಶುಕ್ಲವರ್ಣಾಯ ಗದಾಧರಾಯ ಸವಾಹನಾಯ ಸಭಾರ್ಯಾಯ ಶ್ರೀವಿಷ್ಣುಪಾರ್ಷದಾಯ ನಮಃ | ಓಂ ಅಂ ಅನಂತಾಯ ನಾಗಾಧಿಪತಯೇ ಗೌರವರ್ಣಾಯ ಚಕ್ರಹಸ್ತಾಯ ಸವಾಹನಾಯ ಸಭಾರ್ಯಾಯ ಶ್ರೀ ವಿಷ್ಣುಪಾರ್ಷದಾಯ ನಮಃ | ಓಂ ಹ್ರೀಂ ಬ್ರಹ್ಮಣೇ ಲೋಕಾಧಿಪತಯೇ ರಕ್ತವರ್ಣಾಯ ಪದ್ಮಹಸ್ತಾಯ ಸವಾಹನಾಯ ಸಭಾರ್ಯಾಯ. ವಿಷ್ಣುಪಾರ್ಷದಾಯ ನಮಃ |

ಹೀಗೆ ಏಳು ಆವರಣಗಳಲ್ಲಿರುವ ದೇವತೆಗಳನ್ನು ಆವಾಹಿಸಬೇಕು. ಶ್ರೀಹರಿಗೆ ಅಭಿಮುಖರಾಗಿರುವ ಇವರನ್ನೆಲ್ಲರನ್ನೂ ಅರ್ಘ್ಯ ಪಾದ್ಯ ಮುಂತಾದ ದಶೋಪಚಾರಗಳಿಂದ ಪೂಜಿಸಬೇಕು.

**ದಶೋಪಚಾರಗಳು -**

ಅರ್ಘ್ಯಂ ಪಾದ್ಯಂ ಚಾಚಮನಂ ಸಾಚಾಮಂ ಮಧುಪರ್ಕಕಮ್ |
ಸ್ನಪನಂ ವಸನಂ ಚೈವ ಗಂಧಪುಷ್ಪೇ ಚ ಭೂಷಣಮ್ ||
ದಶೈತಾನುಪಚಾರಾಂಶ್ಚ ಸರ್ವೇಭ್ಯಶ್ಚ ಪೃಥಗ್ದದೇತ್ |
ಲಕ್ಷ್ಮ್ಯಾದ್ಯಾವರಣಸ್ಥೇಭ್ಯೋ ನಮೋಂತೈಃ ಸ್ವಸ್ವನಾಮಕೈಃ ||
ಆಸನಾದಿ ತು ಪೀಠಸ್ಥ ದೇವಾನಾಂ ವಿಷ್ಣುನಾ ಸಹ |
ಧೂಪದೀಪಾದಿಕಂ ಸರ್ವಂ ಸರ್ವೇಭ್ಯೋ ವಿಷ್ಣುನಾ ಸಹ ||

(1) ಅರ್ಘ್ಯ. (2) ಪಾದ್ಯ. (3) ಆಚಮನ. (4) ಪುನರಾಚಮನ. (5) ಮಧುಪರ್ಕ. (6) ಅಭಿಷೇಕ. (7) ವಸ್ತ್ರ. (8) ಗಂಧ. (9) ಪುಷ್ಪ. (10) ಆಭರಣ ; ಇವುಗಳು ದಶೋಪಚಾರಗಳೆನಿಸುತ್ತವೆ. ಎಲ್ಲಾ ದೇವತೆಗಳಿಗೂ ಪ್ರತ್ಯೇಕವಾಗಿ ಈ ಹತ್ತು ಉಪಚಾರಗಳನ್ನು ಬಾಯಿಯಿಂದ ಹೇಳುತ್ತಾ ಸಮರ್ಪಿಸಬೇಕು.

ಸಕೃತ್ಸಕೃತ್ಪುಷ್ಪಮನ್ಯೈರ್ಹೋಮಸ್ತಸ್ಯ ಚತುರ್ಗುಣಃ | (ತಂತ್ರಸಾರ ವಚನ)

ಈ ಉಪಚಾರಗಳಿಗಾಗಿ ಆಯಾಯಾ ದೇವತೆಗಳ ಹೆಸರನ್ನು ಚತುರ್ಥ್ಯಂತವಾಗಿ ಹೇಳಿ ಒಮ್ಮೊಮ್ಮೆ ಪುಷ್ಪಗಳನ್ನು ಸಮರ್ಪಿಸಬೇಕು. ಹಾಗೆ ಪುಷ್ಪಗಳನ್ನು ಸಮರ್ಪಣೆ ಮಾಡದಿದ್ದರೆ ಎಷ್ಟು ಪುಷ್ಪಗಳನ್ನು ಸಮರ್ಪಿಸಬೇಕಾಗಿತ್ತೋ ಆ ಸಂಖ್ಯೆಗೆ ನಾಲ್ಕು ಸಂಖ್ಯೆಯಷ್ಟು ಆಹುತಿಯನ್ನು ಕೊಡಬೇಕು. ಈ ಹತ್ತು ಉಪಚಾರಗಳ ಮಧ್ಯದಲ್ಲಿ ಧೂಪ ಮುಂತಾದ ಆರು ಉಪಚಾರಗಳನ್ನು ಶ್ರೀಹರಿಗೆ ಮಾಡುವಾಗಲೇ ಮಾಡಬೇಕು. ಆಸನ ಮುಂತಾದ ಉಪಚಾರಗಳನ್ನು ಪೀಠಪೂಜೆಯ ಕಾಲದಲ್ಲಿ ವಿಷ್ಣುವಿಗೆ ಮಾಡುವಾಗಲೇ ಮಾಡಬೇಕು. ಪ್ರತ್ಯೇಕ ಪೂಜೆಗಳಿಲ್ಲ.

### ದ್ವಾರಪಾಲಪೂಜೆ

ದ್ವಾರಿ ದಕ್ಷಿಣವಾಮಸ್ಥೌ ವಜ್ರನಾಭಹರೀಶ್ವರೌ |
ಚಂಡಂ ಪ್ರಚಂಡಂ ತಿಷ್ಠಂತೌ ದ್ವಿತೀಯದ್ವಾರಪಾರ್ಶ್ವಯೋಃ ||
ತತ್ರೈವಾಭ್ಯಂತರಗತೌ ಮೂಲತಃ ಪಾರ್ಶ್ವಶಾಖಯೋಃ |
ವಾಮದಕ್ಷಿಣತೋಽನ್ಯೌ ಚ ಶಂಖಪದ್ಮನಿಧೀಶ್ವರೌ ||
ಗಂಗಾಕಲಿಂಗತನಯಾಸುತೌ ಯುಗಲಮಧ್ಯಗೌ |
ಜಯಂ ಚ ವಿಜಯಂ ಚೌಭೌ ತೃತೀಯದ್ವಾರಪಾರ್ಶ್ವಯೋಃ ||
ತಥಾ ಧಾತೃವಿಧಾತಾರೌ ಚತುರ್ಥದ್ವಾರಪಾಲಕೌ |
ಸ್ಮರೇದ್ಭದ್ರಸುಭದ್ರಾಖ್ಯೌ ಪಂಚಮದ್ವಾರಪಾರ್ಶ್ವಯೋಃ ||
ಅಮರೇಶವಿರೂಪಾಕ್ಷೌ ಷಷ್ಠದ್ವಾರೇ ಪ್ರತಿಷ್ಠಿತೌ |
ಏತೇ ಸ್ವನಾಮಭಿರ್ಮಂತ್ರೈರ್ನಮೋಽಂತ್ಯೈಃ ಪ್ರಣವಾದಿಭಿಃ ||

ದೇವರ ಮನೆಯಲ್ಲಿ ಆರು ಬಾಗಿಲುಗಳಿರಬೇಕು. ಮೊದಲನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ ವಜ್ರನಾಭನೂ, ಎಡಭಾಗದಲ್ಲಿ ಹರೀಶ್ವರನೂ, ಎರಡನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ ಚಂಡನೂ ಎಡಭಾಗದಲ್ಲಿ ಪ್ರಚಂಡನೂ, ನಿಂತಿರುವರು. ಒಳಗೆ ಎಡಭಾಗದಲ್ಲಿ ಗಂಗಾಕುಮಾರನಾಗಿರುವ ಶಂಖನಿಧೀಶ್ವರನೂ ಕಲಿಂಗಕುಮಾರನಾಗಿರುವ ಪದ್ಮನಿಧೀಶ್ವರನೂ ಕುಳಿತಿರುವರು. ಮೂರನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ ಜಯನೂ ಎಡಭಾಗದಲ್ಲಿ ವಿಜಯನೂ ನಿಂತಿರುವರು. ನಾಲ್ಕನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ ಧಾತಾ ಎಂಬುವನೂ [illegible]ಭಾಗದಲ್ಲಿ ವಿಧಾತಾ ಎಂಬುವನೂ, ಐದನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ ಭದ್ರ ಎಂಬುವನೂ ಎಡಭಾಗದಲ್ಲಿ ಸುಭದ್ರ ಎಂಬುವನೂ, ಆರನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ ಅಮರೇಶ ಎಂಬುವನೂ ಎಡಭಾಗದಲ್ಲಿ ವಿರೂಪಾಕ್ಷ ಎಂಬುವನೂ ದ್ವಾರಪಾಲಕರಾಗಿರುವರು. ಈಗ ಹೇಳಿರುವ ಹದಿನಾಲ್ಕು ದ್ವಾರಪಾಲಕರನ್ನೂ ಒಂದೊಂದು ಪುಷ್ಪಗಳಿಂದ ಪೂಜಿಸಬೇಕು. ಅವರವರ ಚತುರ್ಥೀವಿಭಕ್ತ್ಯಂತವಾದ ಹೆಸರುಗಳು. ಮೊದಲು ಓಂಕಾರ. ಕೊನೆಗೆ ನಮಃ ಎಂಬ ಪದ ಇಷ್ಟನ್ನು ಒಟ್ಟಿಗೆ ಸೇರಿಸಿದರೆ ಆಯಾಯಾ ದ್ವಾರಪಾಲಕರುಗಳ ಪೂಜಾಕಾಲದಲ್ಲಿ ಹೇಳುವ ಮಂತ್ರಗಳಾಗುತ್ತವೆ.

### ದ್ವಾರಪಾಲಕರನ್ನು ಪೂಜಿಸುವಾಗ ಹೇಳಬೇಕಾದ ಮಂತ್ರಗಳು

ಮೊದಲನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ "ಓಂ ವಜ್ರನಾಭಾಯ ನಮಃ" ಎಂದೂ, ಎಡಭಾಗದಲ್ಲಿ "ಓಂ ಹರೀಶ್ವರಾಯ ನಮಃ" ಎಂದೂ, ಎರಡನೆಯ ಬಾಗಿಲಿನಲ್ಲಿ ಒಳಗೆ ಎಡಭಾಗದಲ್ಲಿ ಕುಳಿತಿರುವ "ಓಂ ಗಂಗಾತನಯಾಯ ಶಂಖನಿಧೀಶ್ವರಾಯ ನಮಃ" ಎಂದೂ, ಬಲಭಾಗದಲ್ಲಿ ಕುಳಿತಿರುವ "ಓಂ ಕಲಿಂಗತನಯಾಯ ಪದ್ಮನಿಧೀಶ್ವರಾಯ ನಮಃ" ಎಂದು, ಅದೇ ಬಾಗಿಲಿನಲ್ಲಿ ಹೊರಗೆ ಬಲಭಾಗದಲ್ಲಿ "ಓಂ ಚಂಡಾಯ ನಮಃ" ಎಂದೂ, ಎಡಭಾಗದಲ್ಲಿ "ಓಂ ಪ್ರಚಂಡಾಯ ನಮಃ"

ಎಂದೂ, ಮೂರನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ "ಓಂ ಜಯಾಯ ನಮಃ" ಎಂದೂ, ಎಡಭಾಗದಲ್ಲಿ "ಓಂ ವಿಜಯಾಯ ನಮಃ" ಎಂದೂ, ನಾಲ್ಕನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ "ಓಂ ಧಾತ್ರೇ ನಮಃ" ಎಂದೂ, ಎಡಭಾಗದಲ್ಲಿ "ಓಂ ವಿಧಾತ್ರೇ ನಮಃ" ಎಂದೂ, ಐದನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ "ಓಂ ಭದ್ರಾಯ ನಮಃ" ಎಂದೂ, ಎಡಭಾಗದಲ್ಲಿ "ಓಂ ಸುಭದ್ರಾಯ ನಮಃ" ಎಂದೂ, ಆರನೆಯ ಬಾಗಿಲಿನಲ್ಲಿ ಬಲಭಾಗದಲ್ಲಿ "ಓಂ ಅಮರೇಶ್ವರಾಯ ನಮಃ" ಎಂದೂ, ಎಡಭಾಗದಲ್ಲಿ "ಓಂ ವಿರೂಪಾಕ್ಷಾಯ ನಮಃ" ಎಂದೂ ಪೂಜಿಸಬೇಕು.

ಅನಂತರದಲ್ಲಿ ಅಗ್ನಿಯನ್ನು ಕುಂಡದಲ್ಲಾಗಲೀ ಕೆಳಗೆ ಬರೆದಿರುವ ಸ್ಥಂಡಿಲದಲ್ಲಾಗಲೀ ಪ್ರತಿಷ್ಠೆ ಮಾಡಿ ಪೀಠಪೂಜೆಯಿಂದ ಆರಂಭಿಸಿ ಆವರಣಪೂಜೆಯವರೆಗೆ ಪೂಜೆಯನ್ನು ಮಾಡಬೇಕು.

### ವಸಂತಪೂಜಾ ವಿಧಿ

ಶ್ವೇತದ್ವೀಪೇ ಸಮಾಸೀನಂ ಪ್ರಣಿಪತ್ಯ ಜನಾರ್ದನಮ್ |
ಪಪ್ರಚ್ಛ ಸುಮಹಾಪುಣ್ಯಂ ನಾರದೋ ಭಗವತ್ಪ್ರಿಯಃ || (ಪಂಚರಾತ್ರವಾಕ್ಯ)

ಶ್ವೇತದ್ವೀಪದಲ್ಲಿ ಸುಖವಾಗಿ ಕುಳಿತಿರುವ ಜನಾರ್ದನನನ್ನು ಶ್ರೀಹರಿಯ ಪ್ರೀತಿಗೆ ಪಾತ್ರರಾದ ನಾರದರು ನಮಸ್ಕರಿಸಿದರು. ಮಹಾಪುಣ್ಯಕರವಾದ ಪ್ರಶ್ನೆಯನ್ನು ಕೇಳಿದರು.

**ನಾರದ ಉವಾಚ -**

ಉತ್ಸವೇಷು ಚ ಸರ್ವೇಷು ಪ್ರಾಯಶಃ ಪ್ರೀತಿಕೃದ್ಭವೇತ್ |
ಕೋಽಯಮುತ್ಸವಸಂಘ್ಯೋಽತ್ರ ವಕ್ತುಮರ್ಹಸಿ ಕೇಶವ || (ಪಂಚರಾತ್ರವಾಕ್ಯ)

ಎಲ್ಲಾ ಉತ್ಸವಗಳೂ ಪ್ರಾಯಶಃ ನಿನಗೆ ಪ್ರೀತಿಕರವಾಗಿವೆ. ಎಲ್ಲಾ ಉತ್ಸವಗಳ ಮಧ್ಯದಲ್ಲಿಯೂ ನಿನಗೆ ಅತಿಪ್ರಿಯವಾದ ಉತ್ಸವವು ಯಾವುದು?

**ಶ್ರೀಭಗವಾನ್ ಉವಾಚ -**

ತಾತ ನಾರದ ಕಲ್ಯಾಣ, ಸಾಧು ಪೃಷ್ಟಂ ಮಹಾಮುನೇ |
ಉತ್ಸವಾ ಬಹವಃ ಸಂತಿ ಪುರಾ ಪೃಷ್ಟಾ ಮಹರ್ಷಿಭಿಃ ||
ವ್ರತೇಷು ಮನ್ಮನೋ ಲಗ್ನಂ ರಹಸ್ಯಂ ಪ್ರವದಾಮಿ ತೇ ||

ಕಲ್ಯಾಣಸ್ವಭಾವವುಳ್ಳ ಮಹಾಮುನಿಯಾದ ನಾರದನೇ, ಒಳ್ಳೆಯ ಪ್ರಶ್ನೆಯನ್ನು ಮಾಡಿದಿ. ಹಿಂದೆ ಮಹರ್ಷಿಗಳಿಂದ ಪ್ರಶ್ನಿಸಲ್ಪಟ್ಟು ತಿಳಿದಿರುವ ಉತ್ಸವಗಳು ಅಸಂಖ್ಯವಾಗಿವೆ. ವ್ರತಗಳೂ ಅಸಂಖ್ಯವಾಗಿವೆ. ನನ್ನ ಮನಸ್ಸು ಯಾವ ಉತ್ಸವದಲ್ಲಿ ಆಸಕ್ತವಾಗಿದೆಯೋ ರಹಸ್ಯವಾದ ಆ ಉತ್ಸವವನ್ನು ಹೇಳುವೆನು.

ಪಂಚೋತ್ಸವಾ ಹಿ ಗೃಹ್ಯಂತೇ ಕಾರ್ತಿಕಃ ಪ್ರಥಮೋತ್ಸವಃ |
ವಸಂತೋಽಪಿ ದ್ವಿತೀಯಸ್ತು ದಮನಾಖ್ಯಸ್ತೃತೀಯಕಃ ||
ಚತುರ್ಥಃ ಫಲಪೂಜಾಖ್ಯಃ ಪವಿತ್ರಾಖ್ಯಸ್ತಥಾಽಪರಃ |
ಏತೇ ಮಹೋತ್ಸವಾ ಬ್ರಹ್ಮನ್ ನಿತ್ಯಂ ಪ್ರಿಯಕರಾ ಮಮ ||

ಪ್ರತಿವರ್ಷದಲ್ಲಿಯೂ ಮಾಡುವ ಉತ್ಸವಗಳ ಮಧ್ಯದಲ್ಲಿ ಐದು ಉತ್ಸವಗಳು ನನಗೆ ಯಾವಾಗಲೂ ಪ್ರಿಯವಾದವುಗಳು. ಅವುಗಳಲ್ಲಿ ಕಾರ್ತಿಕೋತ್ಸವವು ಮೊದಲನೆಯದು. ವಸಂತೋತ್ಸವವು ಎರಡನೆಯದು. ದಮನೋತ್ಸವವು ಮೂರನೆಯದು. ಫಲಪೂಜೋತ್ಸವವು ನಾಲ್ಕನೆಯದು. ಪವಿತ್ರೋತ್ಸವವು ಐದನೆಯದು.

ಏತದ್ರಹಸ್ಯಂ ವಕ್ಷ್ಯಾಮಿ ಯಶ್ಚ ತೇಷು ಮಮ ಪ್ರಿಯಃ |
ಯದ್ದೇವಾಶ್ಚ ನ ಜಾನಂತಿ ತಚ್ಛೃಣುಷ್ವ ಮಹಾಮತೇ ||
ಸಂವತ್ಸರಕೃತಾ ಪೂಜಾ ವಸಂತೇನ ಕೃತಾ ಭವೇತ್ |
ನಿಷ್ಫಲಾ ಚ ಮಹಾಭಾಗ ಭಸ್ಮನೀವ ಹುತಂ ಹವಿಃ ||
ಕೃತೇ ಮಹೋತ್ಸವೇ ತಾತ ವಸಂತಾಖ್ಯೇ ಮಹಾಮುನೇ |
ಸಂವತ್ಸರಕೃತಾಂ ಪೂಜಾಂ ನಿರೀಕ್ಷೇಽಹಮಹರ್ನಿಶಮ್ ||
ಅಕಾಲೇ ಕ್ರಿಯತೇ ಪೂಜಾ ಕಾಲೇ ವಾ ವಿಧಿವರ್ಜಿತಾ |
ದುಷ್ಕೃತಾ ವಾಪಿ ವ್ಯಕ್ತಾ ವಾ ಕಾರಿತಾ ವಾಥ ವಾ ಕೃತಾ ||
ಕೃತೇ ವಸಂತೇ ಸಾ ಸರ್ವಾ ಸಫಲಾ ಸ್ಯಾನ್ನ ಸಂಶಯಃ |
ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯೋಽಯಂ ಮಹೋತ್ಸವಃ ||

ಮಹಾಮತಿಯುಳ್ಳ ನಾರದನೇ, ಹಿಂದೆ ಹೇಳಿರುವ ಐದು ಉತ್ಸವಗಳ ಮಧ್ಯದಲ್ಲಿ ನನಗೆ ಅತಿಪ್ರಿಯವಾದುದು ಯಾವುದು? ಎಂಬ ರಹಸ್ಯವನ್ನು ಹೇಳುವೆನು. ವಸಂತೋತ್ಸವವನ್ನು ಮಾಡದವನು ಒಂದು ವರ್ಷದವರೆಗೆ ಶ್ರೀಹರಿಯನ್ನು ಪೂಜಿಸಿದ್ದರೂ ಆ ಪೂಜೆಯು ಬೂದಿಯಲ್ಲಿ ಮಾಡಿದ ಹೋಮದಂತೆ ನಿಷ್ಫಲವಾಗುತ್ತದೆ. ವರ್ಷದಲ್ಲಿ ಮಾಡುತ್ತಿರುವ ಒಂದೊಂದು ಪೂಜೆಗಳನ್ನೂ ನಾನು ನೋಡುತ್ತಿರುವೆನು. (1) ಅಕಾಲದಲ್ಲಿ ಪೂಜೆಯನ್ನು ಮಾಡುವುದುಂಟು. (2) ಸಕಾಲದಲ್ಲಿ ವಿಧಿಯನ್ನು ಬಿಟ್ಟು ಮಾಡುವುದುಂಟು. (3) ತಪ್ಪಾಗಿ ಮಾಡುವುದುಂಟು. (4) ಎಲ್ಲರಿಗೂ ತಿಳಿಯುವಂತೆ ಬಹಿರಂಗವಾಗಿ ಮಾಡುವುದುಂಟು. ಇವುಗಳೆಲ್ಲವೂ ಪೂಜೆಯು ನಿಷ್ಫಲವಾಗುವಂತೆ ಮಾಡುವವುಗಳು ತಾನೇ ? ಮೇಲ್ಕಂಡಂತೆ ಮಾಡಿದರೂ ಇನ್ನೊಬ್ಬನ ಮೂಲಕವಾಗಿ ಮಾಡಿಸಿದರೂ ಪೂಜೆಯು ನಿಷ್ಫಲವಾಗುತ್ತದೆ. ವಸಂತಪೂಜೆಯನ್ನು ಮಾಡಿದರೆ ಈ ವಿಧವಾದ ಪೂಜೆಗಳೆಲ್ಲವೂ ಸಫಲವಾಗುತ್ತವೆ. ಈ ವಿಷಯದಲ್ಲಿ ಸಂಶಯವು ಬೇಡ. ಆದ್ದರಿಂದ ಎಲ್ಲಾ ವಿಧವಾದ ಪ್ರಯತ್ನದಿಂದ ವಸಂತೋತ್ಸವವನ್ನು ಮಾಡಬೇಕು.

ಮಹಾಪಾತಕಿನೋ ವಾಪಿ ಮಾತಾಪಿತೃವಿಘಾತಕಾಃ |
ಅಗಮ್ಯಾಗಾಮಿನೋ ವಾಪಿ ಸ್ತ್ರೀಬಾಲವ್ರತಘಾತಕಾಃ ||
ಯದ್ಯುತ್ಸವಂ ಪ್ರತನ್ವಂತಿ ಮುಚ್ಯಂತೇ ಪಾಪಕೈರ್ಧ್ರುವಮ್ |
ಯಃ ಕರೋತಿ ಮಹಾಭಾಗ ವಸಂತೋತ್ಸವಮಾದರಾತ್ ||
ನ ಚ ತಸ್ಯ ಫಲಂ ವಕ್ತುಂ ಮಯಾಪಿ ಬ್ರಹ್ಮಣಾಪಿ ವಾ |
ರುದ್ರೈರ್ವಾಪಿ ಸುರೈರ್ವಾಪಿ ಶಕ್ಯತೇ ನ ಮಹಾಮುನೇ ||

ಬ್ರಹ್ಮಹತ್ಯಾ ಮುಂತಾದ ಪಂಚಮಹಾಪಾತಕಗಳನ್ನು ಮಾಡಿದವನೂ, ಮಾತೃಹತ್ಯಾ ಪಿತೃಹತ್ಯೆಗಳನ್ನು ಮಾಡಿದವನೂ, ಸಂಗಕ್ಕೆ ಅನರ್ಹರಾದ ಸ್ತ್ರೀಯರ ಸಂಗವನ್ನು ಮಾಡಿದವನೂ, ಸ್ತ್ರೀಹತ್ಯಾ, ಬಾಲಹತ್ಯಾ, ವ್ರತಹತ್ಯೆಯನ್ನು ಮಾಡಿದವನೂ ವಸಂತೋತ್ಸವವನ್ನು ಮಾಡಿದರೆ ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಪಡೆದು ಮುಕ್ತಿಯನ್ನು ಪಡೆಯುವನು. ವಸಂತೋತ್ಸವನ್ನು ಮಾಡಿದ್ದರಿಂದ ಬರುವ ಫಲವನ್ನು ಹೇಳಲು ನಾನೂ ಬ್ರಹ್ಮನೂ ದ್ವಾದಶರುದ್ರರುಗಳೂ ಎಲ್ಲಾ ದೇವತೆಗಳೂ ಶಕ್ತರಲ್ಲ.

ನಾರದ ಉವಾಚ -

ಕೋಽಯಂ ಮಹೋತ್ಸವೋ ನಾಮ ವಸಂತಾಖ್ಯೋ ಜನಾರ್ದನ |
ಕಸ್ಮಿನ್ ದಿನೇ ಕಥಂ ಚೈವ ಶ್ರೋತುಂ ಕೌತೂಹಲಂ ಹಿ ಮೇ ||

ಓ ಜನಾರ್ದನ ವಸಂತೋತ್ಸವ ಎಂಬ ಉತ್ಸವವು ಯಾವುದು? ಯಾವ ದಿನದಲ್ಲಿ ಹೇಗೆ ಮಾಡಬೇಕು? ಈ ವಿಷಯವನ್ನು ಕೇಳಬೇಕೆಂಬ ಕುತೂಹಲವು ನನಗೆ ಇದೆ. ಹೇಳು.

ಭಗವಾನುವಾಚ -

ಸಂವತ್ಸರಾಂತಿಮೇ ಮಾಸೇ ಶುಕ್ಲಪಕ್ಷೇ ಮಹಾಮುನೇ |
ದ್ವಾದಶ್ಯಾಂ ಚ ಶುಭೇ ವಾಪಿ ಪೌರ್ಣಮಾಸ್ಯಾಮಥಾಪಿ ವಾ ||
ಕುರ್ಯಾನ್ಮಹೋತ್ಸವಂ ಬ್ರಹ್ಮನ್ ಪೂರ್ವೇದ್ಯುರಧಿವಾಸನಮ್ |
ಸದ್ಯೋಽಧಿವಾಸಂ ವಾ ಕುರ್ಯಾದ್ದೇಶಕಾಲಾನುಸಾರತಃ ||
ನಿಯಮಂ ತಸ್ಯ ವಕ್ಷ್ಯಾಮಿ ಶೃಣು ತಾತ ಸಮಾಹಿತಃ |
ಕೃತಗಂಗಾಜಲಸ್ನಾನಃ ಶುದ್ಧಾಂಬರವಿಭೂಷಿತಃ ||
ಕೃತನಿತ್ಯಕ್ರಿಯೋ ಯಶ್ಚ ಚೂತಚಂಪಕಶೋಭಿತಃ |
ರತಿಸ್ಮರೌ ವಸಂತಂ ಚ ಪೂಜಯೇತ್ತದ್ವನಾಧಿಪಾನ್ ||

ಸಂವತ್ಸರದಲ್ಲಿ ಕೊನೆಯ ಫಾಲ್ಗುನಮಾಸವಾಗಿರಬೇಕು. ಶುಕ್ಲಪಕ್ಷದಲ್ಲಿ ದ್ವಾದಶೀ, ಹುಣ್ಣಿಮೆ ಅಥವಾ ಶುಭದಿನದಲ್ಲಿ ವಸಂತೋತ್ಸವವನ್ನು ಮಾಡಬೇಕು. ವಸಂತೋತ್ಸವವನ್ನು ಮಾಡುವುದಕ್ಕಿಂತ ಹಿಂದಿನ ದಿನದಲ್ಲಿ ಅಧಿವಾಸವನ್ನು ಮಾಡಬೇಕು. ಉತ್ಸವದಿನದಲ್ಲಿಯೇ ಅಧಿವಾಸನವನ್ನು ಮಾಡಿದರೂ ಮಾಡಬಹುದು. ದೇಶವನ್ನೂ ಕಾಲವನ್ನೂ ಅನುಸರಿಸಿ ಮಾಡಬೇಕು. ವಸಂತೋತ್ಸವವನ್ನು ಮಾಡುವವನ ನಿಯಮಗಳನ್ನು ಹೇಳುವೆನು. ಸಾವಧಾನವಾದ ಮನಸ್ಸಿನಿಂದ ಕೇಳು. ಗಂಗಾಜಲದಲ್ಲಿ ಸ್ನಾನವನ್ನು ಮಾಡಬೇಕು. ಶುದ್ಧವಾದ ಮಡಿಯನ್ನು ಧರಿಸಬೇಕು. ನಿತ್ಯಕರ್ಮಗಳನ್ನು ಮಾಡಬೇಕು. ಮಾವಿನ ಹೂ ಮತ್ತು ಸಂಪಿಗೆ ಹೂಗಳಿಂದ ಅಲಂಕೃತನಾಗಬೇಕು. ರತಿದೇವಿಯನ್ನೂ ಮನ್ಮಥನನ್ನೂ ವಸಂತನನ್ನೂ ವನಾಧಿದೇವತೆಗಳನ್ನೂ ಪೂಜಿಸಬೇಕು.

### ವಸಂತೋತ್ಸವದಲ್ಲಿ ದೇವತೆಗಳನ್ನು ಪೂಜಿಸುವ ಮಂತ್ರಗಳು

ಓಂ ರಾಂ ರತ್ಯೈ ನಮಃ | ಓಂ ಕ್ಲೀಂ ಕಾಮಾಯ ನಮಃ | ಓಂ ವಂ ವಸಂತಾಯ ನಮಃ |

ಗಂಧಪುಷ್ಪೈಃ ಸಮಭ್ಯರ್ಚ್ಯ ನಮಸ್ಕುರ್ಯಾತ್ಸಮಾಹಿತಃ |
ತದ್ವನಾಭಿಮುಖೋ ಭೂತ್ವಾ ಪ್ರಾರ್ಥಯೇದ್ವನದೇವತಾಃ ||
ನಮಸ್ತೇ ಕುಸುಮಾಧಾರೇ, ನಮಸ್ತೇ ಕಮಲಾಶ್ರಯೇ |
ಪುಷ್ಪಾಣಿ ವಿಷ್ಣುಪೂಜಾರ್ಥಮಾಹರಿಷ್ಯೇ ತವಾಜ್ಞಯಾ ||
ಇತ್ಯುಕ್ತ್ವಾ ತತ್ಪ್ರವಿಶ್ಯಾಥ ಕುಸುಮಾನ್ಯಾಹರೇದ್ಬುಧಃ |
ಚೂತಚಂಪಕಪಾಲಾಶಕುಸುಮಾನಿ ಯಥಾರುಚಿ ||
ಗಂಗಾಜಲಂ ಚ ಸಿಕತಂ ಪಂಚತ್ವಕ್ಪಲ್ಲವಾಂಸ್ತಥಾ |

ಗೋರೋಚನಂ ಹರಿದ್ರಂ ಚ ಚಂದನಂ ತತ್ರ ನಿಕ್ಷಿಪೇತ್ |
ಕೇತಕೀಜಾತಿಪಾಲಾಶಚೂತಚಂಪಕಮಂಜರೀಃ ||
ಕುಂದಾದೀನಿ ಸುಪುಷ್ಪಾಣಿ ಮಲ್ಲಿಕಾದೀನಿ ನಾರದ |
ಅನ್ಯಾನಿ ಚ ಮನೋಜ್ಞಾನಿ ಸಮಾಹೃತ್ಯ ವಿನಿಕ್ಷಿಪೇತ್ ||
ಚತುರ್ಷ್ವಪಿ ಚ ಪಾತ್ರೇಷು ಬೀಜಪೂರಫಲಾನಿ ಚ |
ತಂಡುಲೋಪರಿ ನಿಕ್ಷಿಪ್ಯ ಸಂಭಾರಾಂಶ್ಚ ಸಮೀಪತಃ ||
ನಿಧಾಯ ತೇಷು ಪಾತ್ರೇಷು ರವಿಮಗ್ನಿಂ ಪಿತಾಮಹಮ್ |
ಮಾಂ ಚ ಸಂಪೂಜ್ಯ ವಿಧಿವದ್ವಾಸುದೇವಾದಿನಾಮಭಿಃ ||
ಸಮಾನೀಯ ನದೀತೀರೇ ಗೃಹೇ ವಾಥ ಮಹಾಮುನೇ |
ಗೋಮಯೇನೋಪಲಿಪ್ಯಾಥ ಚಕ್ರಾಬ್ಜಂ ಕಾರಯೇದ್ಬುಧಃ ||
ಮಂಟಪಂ ಕಾರಯಿತ್ವಾಥ ವಸ್ತ್ರಮಾಲ್ಯೋಪಶೋಭಿತಮ್ |
ಶೋಭೋಪಶೋಭಾಸಂಯುಕ್ತಂ ಚತುರ್ದ್ವಾರಸಮನ್ವಿತಮ್ ||
ಚತುರ್ದಿಕ್ಷ್ವವ್ರಣಾನ್ ಕುಂಭಾಂಸ್ತಂಡುಲೋಪರಿ ವಿನ್ಯಸೇತ್ |
ಭಕ್ತ್ಯಾಽಽಹೃತಾನಿ ಪುಷ್ಪಾಣಿ ಶೋಧಯೇನ್ಮೂಲಮಂತ್ರತಃ ||
ಪತ್ರಾಂತರೇ ವಿನಿಕ್ಷಿಪ್ಯ ಗಂಧಪುಷ್ಪೈಃ ಸಮರ್ಚಯೇತ್ |
ಜಾಗರಂ ತತ್ರ ಕರ್ತವ್ಯಂ ಗೀತಾವಾದ್ಯೈರ್ಮಹೋತ್ಸವೈಃ ||
ಪುರಾಣಶ್ರವಣೈಶ್ಚೈವ ಸ್ತೋತ್ರೈರ್ನಾನಾವಿಧೈರ್ಬುಧಾಃ |
ಪ್ರಭಾತೇ ವಿಮಲೇ ಸ್ನಾತ್ವಾ ಕುರ್ಯಾನ್ನಿತ್ಯಾರ್ಚನಂ ಕ್ರಮಾತ್ ||
ಪುಷ್ಪಾಣಾಂ ರಜ ಉದ್ಧೃತ್ಯ ಪ್ರೋಕ್ಷಯೇತ್ತತ್ತ್ವಮಂತ್ರಕೈಃ |
ನಿರೀಕ್ಷಣಾದಿಭಿಃ ಪೂರ್ವಂ ತದ್ವೇಧಾ ತದ್ವಿದುರ್ಬುಧಾಃ ||
ಏತದರ್ಧಂ ವಿನಿಕ್ಷಿಪ್ಯ ವೈಷ್ಣವಾಂಶ್ಚ ಯಜೇತ್ತತಃ ||
ಶೇಷಂ ಬ್ರಹ್ಮಾಣಮೀಶಂ ಚ ಮಮ ಬಿಂಬಂ ಸಮರ್ಚಯೇತ್ ||
ಮಂತ್ರೈರೇತೈರ್ಮಹಾಭಾಗ ನಮೋಽಂತೈಃ ಕೇಶವಾದಿಭಿಃ |
ದಕ್ಷಿಣೇ ವಾಮಭಾಗೇ ಚ ಕಾಮಬಾಣಾನ್ ಪ್ರಪೂಜಯೇತ್ ||

ಓಂ ಐಂ ಕ್ಲೀಂ ದ್ರಾವಣಬಾಣಾಯ ನಮಃ, ಓಂ ಐಂ ಕ್ಲೀಂ ಸಮ್ಮೋಹನಬಾಣಾಯ ನಮಃ, ಓಂ ಪ್ರಸಂತಾಪನಬಾಣಾಯ ನಮಃ, ಓಂ ಶ್ವೇತದ್ವೀಪಮಂಟಪಾಯ ನಮಃ, ಮಹಾಪೀಠಂ ಪೂಜಯೇತ್.

ಲಕ್ಷ್ಮ್ಯಾದಿದೇವತಾಶ್ಚೈವ ಪೂಜಯೇತ್ ಸ್ವಸ್ವಮಂತ್ರಕೈಃ |
ಇಂದ್ರಾದಿಲೋಕಪಾಲಾಂಶ್ಚ ಕಾಲಂ ಮದನಮೇವ ಚ ||
ಗಂಗಾಂ ಸರಸ್ವತೀಂ ಚೈವ ಯಮುನಾಂ ನರ್ಮದಾಂ ತಥಾ |
ಗುರುಪತ್ನೀ ಋಷೀನನ್ಯಾನ್ ಯಜೇತ್ತಾಂಸ್ತಾನ್ ಕ್ರಮಾದ್ಬುಧಃ ||

ತತೋ ನಾನಾವಿಧೈರ್ಭಕ್ಷ್ಯೈರ್ನೈವೇದ್ಯಂ ಪರಿಕಲ್ಪಯೇತ್ |
ಕುಂಭೇ ತು ತೋಯಮಾದಾಯ ಪ್ರೋಕ್ಷಯೇನ್ಮಮ ಮೂರ್ಧನಿ ||
ಪೌರುಷೇಣ ಚ ಸೂಕ್ತೇನ ಗಾಯತ್ರ್ಯಾ ವಾ ವಿಶೇಷತಃ |
ತತ್ತ್ವಮಂತ್ರೇಣ ವಾ ಬ್ರಹ್ಮನ್ ಸ್ವಮೂಲಮನುನಾ ಬುಧಃ ||
ತತಃ ಸ್ವಗುರುಮಭ್ಯರ್ಚ್ಯ ಗಂಧಪುಷ್ಪಾಕ್ಷತಾದಿಭಿಃ |
ತತೋ ಗೀತೈಶ್ಚ ನೃತ್ತೈಶ್ಚ ವಾದ್ಯೈರ್ನಾನಾವಿಧೈಸ್ತಥಾ ||
ಭೋಜನೈಶ್ಚ ಮಹಾಭಾಗ ತೋಷಯೇದ್ವೈಷ್ಣವೋತ್ತಮಾನ್ |
ತತೋ ಭುಂಜೀತ ನಿಯತೋ ಬಂಧುಭಿರ್ವೈಷ್ಣವೈಸ್ಸಹ ||
ಏವಂ ಯಃ ಕುರುತೇ ಮಹೋತ್ಸವಮಿಮಂ ತಸ್ಯಾಯುರತ್ಯುನ್ನತಮ್ |
ಪೂಜಾ ತಸ್ಯ ಫಲಪ್ರದಾ ರಿಪುಗಣಾ ನಶ್ಯಂತಿ ಗೇಹೇಷ್ವಪಿ ||
ಅನ್ಯೋನ್ಯಂ ಪುರುಷಃ ಸದಾ ಪ್ರಿಯಕರೋ ಲಕ್ಷ್ಮ್ಯಾ ದ್ವಿಜಾಗ್ರ್ಯೋ ಧ್ರುವಮ್ |
ಪುಣ್ಯಂ ತಸ್ಯ ಮಹಾನುಭಾವ ಗದಿತುಂ ನಾದ್ಯಾಪಿ ಶಕ್ಯಂ ಮುನೇ ||

"ಓಂ ರಾಂ ರತ್ಯೈ ನಮಃ. ಓಂ ಕ್ಲೀಂ ಕಾಮಾಯ ನಮಃ, ಓಂ ವಂ ವಸಂತಾಯ ನಮಃ ಎಂಬ ಮಂತ್ರಗಳಿಂದ ರತಿ, ಮನ್ಮಥ, ವಸಂತ ಎಂಬ ಮೂರು ದೇವತೆಗಳಿಗೆ ಗಂಧ ಮತ್ತು ಪುಷ್ಪಗಳಿಂದ ಪೂಜಿಸಬೇಕು. ಸಾವಧಾನವಾದ ಮನಸ್ಸಿನಿಂದ ನಮಸ್ಕರಿಸಬೇಕು. ವನಕ್ಕೆ ಅಭಿಮುಖವಾಗಿ ನಿಲ್ಲಬೇಕು. ವನದೇವತೆಗಳನ್ನು ಮುಂದೆ ಹೇಳುವಂತೆ ಪ್ರಾರ್ಥಿಸಬೇಕು. "ಎಲೈ ವನದೇವತೆಯೇ, ನೀನು ಪುಷ್ಪಗಳಿಗೆ ಆಧಾರಳಾಗಿರುವಿ. ಲಕ್ಷ್ಮೀದೇವಿಗೂ ಆಶ್ರಯಳಾಗಿರುವಿ. ನಿನ್ನ ಆಜ್ಞೆಯಿಂದ ವಿಷ್ಣುಪೂಜೆಗಾಗಿ ಪುಷ್ಪಗಳನ್ನು ಕೊಯ್ಯುವೆನು. ಅನುಮತಿಯನ್ನು ಕೊಡು" ಹೀಗೆ ಪ್ರಾರ್ಥಿಸಿ ವನವನ್ನು ಪ್ರವೇಶಿಸಬೇಕು. ತನಗೆ ಅಭಿರುಚಿಯಾಗಿರುವ ಮಾವಿನ ಪುಷ್ಪ, ಸಂಪಿಗೆ ಪುಷ್ಪ, ಪಲಾಶಪುಷ್ಪ ಮುಂತಾದ ಪುಷ್ಪಗಳನ್ನು ಕೊಯ್ಯಬೇಕು. ಗಂಗಾಜಲ, ಉಸುಗು, ಪಂಚಪಲ್ಲವಗಳು, ಐದು ತೊಗಟೆಗಳು ಇವುಗಳೆಲ್ಲವನ್ನೂ ಪುಷ್ಪಗಳ ಜೊತೆಯಲ್ಲಿ ಸೇರಿಸಬೇಕು. ಗೋರೋಚನ, ಅರಿಶಿನ, ಚಂದನಗಳನ್ನು ಅವುಗಳ ಮೇಲೆ ಇಡಬೇಕು. ಕೇತಕೀ, ಜಾಜಿ, ಪಾಲಾಶ, ಮಾವು, ಸಂಪಿಗೆ ಇವುಗಳ ಚಿಗುರುಗಳನ್ನೂ ಮಲ್ಲಿಗೆ ಮುಂತಾದ ಸುಂದರವಾದ ಪುಷ್ಪಗಳನ್ನೂ ಇವುಗಳ ಜೊತೆಯಲ್ಲಿ ಸೇರಿಸಬೇಕು.

ನಾಲ್ಕು ಪಾತ್ರೆಗಳಲ್ಲಿ ಸೀಬೆ ಹಣ್ಣುಗಳನ್ನು ತುಂಬಿಸಿ ಅಕ್ಕಿಯ ರಾಶಿಯ ಮೇಲೆ ಇಡಬೇಕು. ನಾಲ್ಕು ಪಾತ್ರೆಗಳಲ್ಲಿ ಕ್ರಮವಾಗಿ ಸೂರ್ಯ, ಅಗ್ನಿ, ಬ್ರಹ್ಮ, ಎಂಬ ಮೂರು ದೇವತೆಗಳನ್ನು ಅವರವರ ಹೆಸರಿನಿಂದಲೂ, ನನ್ನನ್ನು ವಾಸುದೇವ ಮುಂತಾದ ನನ್ನ ಹೆಸರುಗಳಿಂದಲೂ ವಿಧಿಪೂರ್ವಕವಾಗಿ ಅರ್ಚಿಸಬೇಕು.

ಅನಂತರದಲ್ಲಿ ನದೀತೀರ ಅಥವಾ ಮನೆಗೆ ಆ ಪಾತ್ರೆಗಳನ್ನು ತರಬೇಕು. ಗೋಮಯದಿಂದ ಭೂಮಿಯನ್ನು ಶುದ್ಧಪಡಿಸಬೇಕು. ಆ ಸ್ಥಳದಲ್ಲಿ ತಂತ್ರಸಾರದಲ್ಲಿ ಹೇಳಿದಂತೆ ಚಕ್ರಾಬ್ಜವನ್ನು ತಯಾರಿಸಬೇಕು. ಅದೇ ಸ್ಥಳದಲ್ಲಿ ಮಂಟಪವನ್ನು ತಯಾರಿಸಬೇಕು. ಆ ಮಂಟಪವನ್ನು ವಸ್ತ್ರಗಳಿಂದಲೂ ಮಾಲೆಗಳಿಂದಲೂ ಅಲಂಕರಿಸಬೇಕು. ಶೋಭ ಮತ್ತು ಉಪಶೋಭಿಕೆಗಳನ್ನು ರಚಿಸಬೇಕು. ಅದರ ಸುತ್ತಲೂ ನಾಲ್ಕು ದಿಕ್ಕುಗಳಿಂದ ಮಾರ್ಗಗಳನ್ನು ತಯಾರಿಸಬೇಕು.

ಚಕ್ರಾಬ್ಜಮಂಡಲದಲ್ಲಿ ನಾಲ್ಕು ದಿಕ್ಕುಗಳಲ್ಲಿ ಅಕ್ಕಿಯ ರಾಶಿಯ ಮೇಲೆ ನಾಲ್ಕು ಕಲಶಗಳನ್ನಿಡಬೇಕು. ಭಕ್ತಿಯಿಂದ ತಂದಿರುವ ಪುಷ್ಪಗಳನ್ನು ನಾರಾಯಣಾಷ್ಟಾಕ್ಷರ ಮಂತ್ರದಿಂದ ತೊಳೆಯಬೇಕು. ಆ ಪುಷ್ಪಗಳನ್ನು ಬೇರೆ ಎಲೆಯ ಮೇಲೆ ಇಡಬೇಕು. ಗಂಧ ಮತ್ತು ಪುಷ್ಪಗಳಿಂದ ಪೂಜಿಸಬೇಕು. ಆ ದಿನದಲ್ಲಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು.

ಜಾಗರಣಕಾಲದಲ್ಲಿ ಸಂಗೀತ, ವಾದ್ಯ, ಪುರಾಣಶ್ರವಣ, ಮತ್ತು ನಾನಾವಿಧವಾದ ಸ್ತೋತ್ರಗಳಿಂದ ದೊಡ್ಡ ಉತ್ಸವವನ್ನು ನಡೆಯಿಸಬೇಕು. ಮರುದಿನ ಬೆಳಿಗ್ಗೆ ಅರುಣೋದಯ ಕಾಲದಲ್ಲಿ ಸ್ನಾನವನ್ನು ಮಾಡಬೇಕು. ನಿತ್ಯದಲ್ಲಿ ಮಾಡುವ ಪೂಜೆಯನ್ನು ಮಾಡಬೇಕು.

ಪುಷ್ಪಗಳ ಕೇಸರಗಳನ್ನು ತೆಗೆಯಬೇಕು. ತತ್ತ್ವಮಂತ್ರಗಳಿಂದ ಆ ಪುಷ್ಪಗಳನ್ನು ಪ್ರೋಕ್ಷಿಸಬೇಕು. ಆ ಪುಷ್ಪಗಳನ್ನು ಚೆನ್ನಾಗಿ ನೋಡಿ ಅವುಗಳಲ್ಲಿರುವ ತ್ಯಾಜ್ಯವಾದ ಭಾಗವನ್ನು ತೆಗೆಯಬೇಕು. ಆ ಪುಷ್ಪಗಳನ್ನು ಎರಡಾಗಿ ವಿಂಗಡಿಸಬೇಕು. ಒಂದು ಭಾಗವನ್ನು ಹಾಗೆಯೇ ಇಡಬೇಕು. ಇನ್ನೊಂದು ಭಾಗದಿಂದ ಚಕ್ರಾಬ್ಜದ ಬಲಭಾಗದಲ್ಲಿ ಶೇಷ, ಬ್ರಹ್ಮ, ರುದ್ರ ಎಂಬ ವಿಷ್ಣುಭಕ್ತರನ್ನು ಪೂಜಿಸಬೇಕು. ಕೇಶವ ಮುಂತಾದ ದ್ವಾದಶ ಮಂತ್ರಗಳಿಂದ ನನ್ನನ್ನೂ ಬಲಭಾಗದಲ್ಲಿ ಪೂಜಿಸಬೇಕು.

ಉಳಿದ ಅರ್ಧದಿಂದ ಚಕ್ರಾಬ್ಜದ ಎಡಭಾಗದಲ್ಲಿ ಕಾಮಬಾಣಗಳನ್ನು ಪೂಜಿಸಬೇಕು. ಕಾಮಬಾಣಗಳನ್ನು ಪೂಜಿಸುವ ಮಂತ್ರಗಳನ್ನು ಹೇಳುವೆವು. ಓಂ ಐಂ ಕ್ಲೀಂ ದ್ರಾವಣಬಾಣಾಯ ನಮಃ, ಓಂ ಐಂ ಕ್ಲೀಂ ಸಮ್ಮೋಹನಬಾಣಾಯ ನಮಃ, ಓಂ ಪ್ರಸಂತಾಪನಬಾಣಾಯ ನಮಃ ಎಂದು ಮೂರು ಮಂತ್ರಗಳಿಂದ ಕಾಮಬಾಣಗಳನ್ನು ಪೂಜಿಸಿ, ಓಂ ಶ್ವೇತದ್ವೀಪಾಯ ನಮಃ ಮುಂತಾದ ಪೀಠಪೂಜಾಮಂತ್ರಗಳಿಂದ ಚಕ್ರಾಬ್ಜದಲ್ಲಿ ಪೀಠಪೂಜೆಯನ್ನು ಮಾಡಬೇಕು.

ಅನಂತರದಲ್ಲಿ ಲಕ್ಷ್ಮೀ ಮುಂತಾದ ದೇವತೆಗಳನ್ನು ಅವರವರ ಮಂತ್ರಗಳಿಂದ ಪೂಜಿಸಬೇಕು. ಅನಂತರದಲ್ಲಿ ಇಂದ್ರ ಮುಂತಾದ ಲೋಕಪಾಲಕರನ್ನೂ, ಕಾಲ, ಮದನ, ಗಂಗಾ, ಸರಸ್ವತೀ, ಯಮುನಾ, ನರ್ಮದಾ, ಗುರುಪತ್ನಿಯರು. ಇತರ ಎಲ್ಲಾ ಋಷಿಗಳು ಮುಂತಾದ ವಿಷ್ಣುಭಕ್ತರನ್ನೂ ಅವರವರ ಹೆಸರುಗಳಿಂದ ಪೂಜಿಸಬೇಕು.

ಅನಂತರದಲ್ಲಿ ನಾನಾವಿಧವಾದ ಭಕ್ಷ್ಯಗಳನ್ನು ನೈವೇದ್ಯ ಸಮರ್ಪಣೆ ಮಾಡಬೇಕು. ನೈವೇದ್ಯ ಸಮರ್ಪಣೆಯು ಮುಗಿದ ಮೇಲೆ ಪುರುಷಸೂಕ್ತ ಅಥವಾ ಗಾಯತ್ರೀ ಮಂತ್ರದಿಂದ ನಾಲ್ಕು ಕಲಶಗಳಲ್ಲಿರುವ ನೀರನ್ನು ತೆಗೆದುಕೊಂಡು ನನ್ನ ತಲೆಯಲ್ಲಿ ಪ್ರೋಕ್ಷಿಸಬೇಕು. ಅಥವಾ ಆಯಾ ದೇವತೆಗಳ ಹೆಸರುಗಳಿಂದಲೂ ಪ್ರೋಕ್ಷಿಸಬಹುದು. ನಾರಾಯಣಾಷ್ಟಾಕ್ಷರ ಮಂತ್ರದಿಂದಲೂ ಪ್ರೋಕ್ಷಿಸಬಹುದು. ಅನಂತರದಲ್ಲಿ ಗಂಧ, ಪುಷ್ಪ, ಮಂತ್ರಾಕ್ಷತೆಗಳಿಂದ ತನ್ನ ಗುರುವನ್ನು ಪೂಜಿಸಬೇಕು. ಅನಂತರದಲ್ಲಿ ವೈಷ್ಣವಶ್ರೇಷ್ಠರನ್ನು ಸಂಗೀತ, ನಾನಾವಿಧವಾದ ವಾದ್ಯಗಳು, ಭೋಜನ, ಇವುಗಳಿಂದ ತೃಪ್ತಿಪಡಿಸಬೇಕು. ಹೀಗೆ ನಿಯಮಗಳಿಂದ ಶ್ರೀಹರಿಯನ್ನೂ ವಿಷ್ಣುಭಕ್ತರನ್ನೂ ತೃಪ್ತಿಪಡಿಸಿ ಬಂಧುಗಳಿಂದ ಸಹಿತನಾಗಿ ಭೋಜನವನ್ನು ಮಾಡಬೇಕು. ಇದು ವಸಂತಪೂಜಾವಿಧಿ.

## ದಮನೋತ್ಸವ

ಅಥೇದಾನೀಂ ಪ್ರವಕ್ಷ್ಯಾಮಿ ದಮನಾರೋಪಣಕ್ರಿಯಾಮ್ |
ಪವಿತ್ರಪೂರ್ವಿಕಾ ಸಾಽರ್ಚಾ ಕರ್ತವ್ಯಾ ವಿಷ್ಣುಪೂಜಕೈಃ ||
ಚೈತ್ರೇ ಸಿತೇ ಹರಿದಿನೇ ಪೌರ್ಣಮ್ಯಾಮಥ ವಾಪಿ ವಾ |
ವಿಷ್ಣವೇ ದಮನಂ ದದ್ಯಾತ್ಕೃತ್ವಾ ತದಧಿವಾಸನಮ್ ||
ಕರ್ತವ್ಯಂ ತತ್ತು ಪೂರ್ವೇದ್ಯುಃ ಸದ್ಯೋ ವಾಪಿ ವಿಜಾನತಾ |
ನಿರ್ವರ್ತ್ಯ ನಿಜಕರ್ಮಾಣಿ ನಿತ್ಯಪೂಜಾಂ ಚ ಚಕ್ರಿಣಃ ||
ಆಚಾರ್ಯೇಣಾಭ್ಯನುಜ್ಞಾತೋ ಗತ್ವಾ ದಮನವಾಟಿಕಾಮ್ |
ಆನೀಯ ದಮನಂ ತತ್ರ ಮಂತ್ರೇಣಾನೇನ ಮಂತ್ರವಿತ್ ||

ವಿಷ್ಣುಪ್ರಸಾದಸಂಭೂತಾ ಅತ್ರ ಸನ್ನಿಹಿತೋ ಭವ |
ವಿಷ್ಣುಕಾರ್ಯಂ ಸಮುದ್ದಿಶ್ಯ ನೇತವ್ಯೋಽಸ್ಯಾಜ್ಞಯಾ ಹರೇಃ ||
ತತ್ರಾವಾಹ್ಯ ಹರಿಂ ನಿತ್ಯಂ ತಸ್ಮೈ ಕಾಮಾತ್ಮನೇ ನಮಃ |
ವಸಂತಾಯ ನಮಸ್ತುಭ್ಯಂ ವೃಕ್ಷಗುಲ್ಮಲತಾಪ್ರಿಯ ||
ಕಾಮಭಸ್ಮಸಮುದ್ಭೂತ ರತಿಬಾಷ್ಪಪರಿಪ್ಲುತ |
ಋಷಿಗಂಧರ್ವದೇವಾದಿವಿಮೋಹನ ನಮೋಽಸ್ತು ತೇ ||
ಅನೇನ ದಮನಂ ಸ್ಪೃಷ್ಟ್ವಾ ಕಾಮಮನ್ವರ್ಚಯೇತ್ತತಃ |
ದೇವಸ್ಯೋತ್ತರಭಾಗೇ ತು ಗೋಮಯೇನೋಪಲಿಪ್ಯ ಚ ||
ಲಿಖಿತ್ವಾ ಸರ್ವತೋಭದ್ರಂ ತನ್ಮಧ್ಯೇ ಚ ಸಿತಾಂಬುಜಮ್ |
ಲಿಖಿತ್ವಾಽಷ್ಟದಲಂ ಪದ್ಮಂ ಕರ್ಣಿಕಾಕೇಸರಾನ್ವಿತಮ್ ||
ತತ್ರ ಸಂಸ್ಥಾಪ್ಯ ತತ್ಪಾತ್ರಂ ರತಿಂ ಕಾಮಂ ತತೋಽರ್ಚಯೇತ್ |
ಸ್ವಗುರೂಕ್ತೇನ ಮನುನಾಽವಾಹಯೇದ್ಭುರ್ವನುಜ್ಞಯಾ ||
ತತ್ರ ಪೂರ್ವಾದಿಪಾತ್ರೇಷು ರತಿಂ ಕಾಮಂ ಸಮರ್ಚಯೇತ್ |

ಓಂ ಹ್ರೀಂ ರತ್ಯೈ ನಮಃ, ಓಂ ಕ್ಲೀಂ ಕಾಮಾಯ ನಮಃ, ಓಂ ಹ್ರೀಂ ಸುಭಗಾಯೈ ನಮಃ, ಓಂ ಕ್ಲೀಂ ಭಸ್ಮಶರೀರಾಯ ನಮಃ, ಓಂ ಹ್ರೀಂ ಆಹ್ಲಾದಿನ್ಯೈ ನಮಃ, ಓಂ ಕ್ಲೀಂ ಅನಂಗಾಯ ನಮಃ, ಓಂ ಹ್ರೀಂ ಹರ್ಷಾಯೈ ನಮಃ, ಓಂ ಕ್ಲೀಂ ಮನ್ಮಥಾಯ ನಮಃ, ಓಂ ಹ್ರೀಂ ಧೃತ್ಯೈ ನಮಃ, ಓಂ ಕ್ಲೀಂ ವಸಂತಸಖಾಯ ನಮಃ, ಓಂ ಹ್ರೀಂ ರತ್ಯೈ ನಮಃ, ಓಂ ಕ್ಲೀಂ ಇಕ್ಷುಚಾಪಾಯ ನಮಃ, ಓಂ ಹ್ರೀಂ ಪ್ರೀತ್ಯೈ ನಮಃ, ಓಂ ಕ್ಲೀಂ ಪುಷ್ಪಬಾಣಾಯ ನಮಃ, ಓಂ ಹ್ರೀಂ ಸಂಗಮಾಯೈ ನಮಃ, ಓಂ ಕ್ಲೀಂ ರತಿಪ್ರಿಯಾಯ ನಮಃ.

ಅಷ್ಟಗಂಧಾನಿ ಸಂಭೂಯ ದಮನಂ ಭಾವಯೇತ್ತತಃ |
ರತಿಂ ಚ ಕಾಮದೇವಂ ಚ ಉಪಚಾರ್ಯೈರ್ಯಥೋಚಿತೈಃ ||
ಯಜೇದನಲಗಾಯತ್ರೀಂ ಜಪೇದಷ್ಟೋತ್ತರಂ ಶತಮ್ ||

ಕಾಮದೇವಾಯ ವಿದ್ಮಹೇ | ಪಂಚಬಾಣಾಯ ಧೀಮಹಿ | ತನ್ನೋಽನಂಗಃ ಪ್ರಚೋದಯಾತ್ |

ನಮಸ್ಕುರ್ಯಾತ್ತಥಾ ಕಾಮಂ ಮಮ ಮಂತ್ರಮುದೀರಯನ್ |
ನಮೋಽಸ್ತು ಪುಷ್ಪಬಾಣಾಯ ಜಗದಾಹ್ಲಾನಕಾರಿಣೇ ||
ಮನ್ಮಥಾಯ ಜಗನ್ನೇತ್ರರತಿಪ್ರೀತಿಪ್ರದಾಯಿನೇ |
ತತಸ್ತು ದಮನಂ ಕಿಂಚಿದ್ಗೃಹೀತ್ವಾ ಧೂಪವಾಸಿತಮ್ ||
ವಿಜ್ಞಾಪಯೇತ್ತತಃ ಕಾಂತಂ ಮಂತ್ರೇಣಾನೇನ ಕಾಮದಮ್ |
ಆಮಂತ್ರಿತಾನಿ ದೇವೇಶ ಪ್ರಾತಃಕಾಲೇ ಮಯಾ ಪ್ರಭೋ ||
ಕರ್ತವ್ಯಂ ಚ ಯಥಾಲಾಭಂ ಪೂಜಾಂ ಕುರ್ವೇ ತವಾಜ್ಞಯಾ |
ದಮನಂ ಮೂಲಮಂತ್ರೇಣ ಹ್ಯರ್ಪಯೇದ್ವಿಷ್ಣುಮೂರ್ಧನಿ ||

ಧೂಪದೀಪಾದಿಕಂ ದತ್ವಾ ಮಂತ್ರೇಣ ಪ್ರಾರ್ಥಯೇತ್ತತಃ |
ದೇವದೇವ ಜಗನ್ನಾಥ ವಾಂಛಿತಾರ್ಥಫಲಪ್ರದ ||
ಹೃದಿಸ್ಥಾನ್ ಪೂರಯ ಸ್ವೇಷ್ಟಾನ್ ಶ್ರೀನಿವಾಸ ಸದಾ ಪ್ರಭೋ |
ತತಸ್ತತ್ರೈವ ದಮನಂ ನಾಮಮಂತ್ರಾವಗೂಹಿತಮ್ ||
ರಕ್ಷಿತಂ ಚಾಸ್ತ್ರಮಂತ್ರೇಣ ಸ್ವಯುಕ್ತಮಧಿವಾಸಯೇತ್ |
ತತೋ ಜಾಗರಣಂ ಕುರ್ಯಾದ್ರಾತ್ರೌ ಹರಿಪರಾಯಣಃ ||
ಪ್ರಭಾತೇ ನಿತ್ಯಕರ್ಮಾಣಿ ನಿರ್ವರ್ತ್ಯ ಹರಿಮರ್ಚಯೇತ್ |
ಆವಾಹನಾದಿ ಪುಷ್ಪಾಂತಂ ಸ್ವಾಗಮೋಕ್ತವಿಧಾನತಃ ||
ಧ್ಯಾಯಂಸ್ತನ್ಮೂಲಮಂತ್ರೇಣ ಹಸ್ತಾಭ್ಯಾಂ ವಿಷ್ಣುಮೂರ್ಧನಿ |
ಸಮಾರೋಪ್ಯಾಽಥ ಧೂಪಾದ್ಯೈರರ್ಚಯೇದ್ವಿಷ್ಣುಮವ್ಯಯಮ್ ||
ತತೋ ವಿಜ್ಞಾಪಯೇದ್ದೇವಂ ಕಿಂಚಿದಾದಾಯ ಮಂತ್ರತಃ |
ಭಗವನ್ನತಿರಿಕ್ತಂ ವಾ ನ್ಯೂನಂ ವಾ ಯನ್ಮಯಾ ಕೃತಮ್ ||
ಸರ್ವಂ ತದಸ್ತು ಸಂಪೂರ್ಣಂ ಪೂರ್ವದಾಮನಕಂ ಮಮ |
ಇತಿ ಸಂಪ್ರಾರ್ಥ್ಯ ಲಕ್ಷ್ಮ್ಯಾದಿದೇವಾಂಸ್ತತ್ರಮತೋ ಯಜೇತ್ ||
ತತಃ ಸ್ವಗುರುಮಭ್ಯರ್ಚ್ಯ ಗಂಧಪುಷ್ಪಾಂಬರಾದಿಭಿಃ |
ದತ್ವಾ ದಮನಕಂ ತಸ್ಮೈ ನಮಸ್ಕೃತ್ಯ ಪ್ರಸಾದ್ಯ ಚ ||
ಪೂಜಯೇದ್ವೈಷ್ಣವಾನ್ ವಿಪ್ರಾನ್ ಗಂಧಪುಷ್ಪಾಕ್ಷತಾದಿಭಿಃ |
ಜಲಕ್ರೀಡಾಂ ತತಃ ಕುರ್ಯಾತ್ಪ್ರಯತಃ ಸಖಿಭಿಃ ಸ್ವಕೈಃ ||
ಅಥವಾ ಕೃಷ್ಣಪಾದಾಬ್ಜಸ್ಪೃಷ್ಟಚಂದನವಾರಿಣಾ |
ಕುರ್ವೀತ ಮಾರ್ಜನಂ ಸಾರ್ಧಂ ಬಂಧುಭಿರ್ಭಕ್ತಿನಮ್ರಧೀಃ ||
ತತಸ್ತು ವೈಷ್ಣವಾನ್ ಸರ್ವಾನಾಚಾರ್ಯಪ್ರಮುಖಾನ್ ದ್ವಿಜಾನ್ |
ಭೋಜಯಿತ್ವಾ ತತಃ ಸಮ್ಯಕ್ ಮೃಷ್ಟಮನ್ನಂ ಸ್ವಶಕ್ತಿತಃ ||
ಭುಂಜೀತ ಸ್ವಜನೋಪೇತಃ ಸ್ವಯಂ ಸಂತುಷ್ಟಮಾನಸಃ |
ಏವಂ ಯಃ ಕುರುತೇ ವಿದ್ವಾನ್ ದಮನಾರೋಪಣಾಕ್ರಿಯಾಮ್ ||
ತಸ್ಯ ಸಾಂವತ್ಸರೀ ಪೂಜಾ ವೈಷ್ಣವೀ ಸಫಲಾ ಭವೇತ್ |
ಯೋ ನ ಕುರ್ಯಾದಿದಂ ಸರ್ವಂ ಶೋಭನಂ ಶ್ರೀಪತಿಪ್ರಿಯಮ್ ||
ಪೂಜಾ ನಿಷ್ಫಲತಾಂ ಯಾತಿ ವಾರ್ಷಿಕೀ ನಾತ್ರ ಸಂಶಯಃ |
ತಸ್ಮಾದ್ವಿಷ್ಣ್ವರ್ಚನಂ ಕಾರ್ಯಂ ಭಕ್ತಿದಂ ಪ್ರತಿವಾರ್ಷಿಕಮ್ ||
ತತ್ಪೂಜಾಫಲಸಿದ್ಧ್ಯರ್ಥಂ ಪ್ರೀತಯೇ ಚಕ್ರಪಾಣಿನಃ | (ಪಾಂಚರಾತ್ರವಚನ)

ಇನ್ನು ಮುಂದೆ ದಮನವನ್ನು ಶ್ರೀಹರಿಗೆ ಸಮರ್ಪಿಸುವ ರೀತಿಯನ್ನು ಹೇಳುವೆನು. ದಮನದಿಂದ ವಿಷ್ಣುಪೂಜೆಯನ್ನು ಮಾಡುವವರು ಮೊದಲು ಪವಿತ್ರವನ್ನು ಧರಿಸಿಯೇ ಮಾಡಬೇಕು. ಚೈತ್ರಮಾಸ ಶುಕ್ಲಪಕ್ಷದಲ್ಲಿ ದ್ವಾದಶೀ ಅಥವಾ ಹುಣ್ಣಿಮೆ

ದಿನದಲ್ಲಿ ವಿಷ್ಣುವಿಗೆ ದಮನವನ್ನು ಸಮರ್ಪಿಸಬೇಕು. ಮೊದಲನೇ ದಿನದಲ್ಲಿ ಅಥವಾ ಅಂದೇ ಅಧಿವಾಸನವನ್ನು ಮಾಡಿ, ಸಮರ್ಪಿಸಬೇಕು. ನಿತ್ಯಕರ್ಮಗಳನ್ನು ಮುಗಿಸಬೇಕು. ಶ್ರೀಹರಿಯ ನಿತ್ಯಪೂಜೆಯನ್ನೂ ಮುಗಿಸಬೇಕು. ಗುರುಗಳನ್ನು ನಮಸ್ಕರಿಸಿ ಅವರಿಂದ ಅನುಮತಿಯನ್ನು ಪಡೆಯಬೇಕು. ಅನಂತರದಲ್ಲಿ ದಮನದ ವನಕ್ಕೆ ಹೋಗಬೇಕು.

### ಅಧಿವಾಸನಕ್ರಮ

ಮುಂದೆ ಹೇಳುವ ಮಂತ್ರದಿಂದ "ವಿಷ್ಣುಪ್ರಸಾದಸಂಭೂತ ಅತ್ರ ಸನ್ನಿಹಿತೋ ಭವ | ವಿಷ್ಣುಕಾರ್ಯಂ ಸಮುದ್ದಿಶ್ಯ ನೇತವ್ಯೋಽಸ್ಯಾಜ್ಞಯಾ ಹರೇಃ" ವಿಷ್ಣುವಿನ ಅನುಗ್ರಹದಿಂದ ಹುಟ್ಟಿರುವ ಓ ದಮನವೇ, ಇಲ್ಲಿ ನೀನು ಸನ್ನಿಹಿತನಾಗು. ಶ್ರೀಹರಿಯ ಆಜ್ಞೆಯಿಂದ ಶ್ರೀವಿಷ್ಣುಕಾರ್ಯಕ್ಕಾಗಿ ನಿನ್ನನ್ನು ಕರೆದುಕೊಂಡು ಹೋಗುವೆನು." ಎಂದು ದಮನವನ್ನು ಪ್ರಾರ್ಥಿಸಬೇಕು.

ತತ್ರಾವಾಹ್ಯ ಹರಿಂ ನಿತ್ಯಂ ತಸ್ಮೈ ಕಾಮಾತ್ಮನೇ ನಮಃ | "ದಮನಾಯ ಕಾಮಾತ್ಮನೇ ನಮಃ" ಎಂಬ ಮಂತ್ರದಿಂದ ಶ್ರೀಹರಿಯನ್ನು ಆವಾಹಿಸಿ ಶ್ರೀಹರಿಯನ್ನೂ ದಮವನ್ನೂ ಪೂಜಿಸಬೇಕು.

ವಸಂತಾಯ ನಮಸ್ತುಭ್ಯಂ ವೃಕ್ಷಗುಲ್ಮಲತಾಪ್ರಿಯ |
ಕಾಮಭಸ್ಮಸಮುದ್ಭೂತ ರತಿಬಾಷ್ಪಪರಿಪ್ಲುತ ||
ಋಷಿಗಂಧರ್ವದೇವಾದಿವಿಮೋಹನ ನಮೋಽಸ್ತು ತೇ |
ಅನೇನ ದಮನಂ ಸ್ಪೃಷ್ಟ್ವಾ ಕಾಮಮಭ್ಯರ್ಚಯೇತ್ತತಃ ||

"ಮರಗಳು, ಪೊದರುಗಳು ಮತ್ತು ಲತೆಗಳಲ್ಲಿ ತುಂಬಾ ಪ್ರೀತಿಯಿಂದ ಯುಕ್ತನಾಗಿರುವವನೂ, ಕಾಮನ ಬೂದಿಯಿಂದ ಹುಟ್ಟಿದವನೂ, ರತಿದೇವಿಯ ಕಣ್ಣೀರುಗಳಿಂದ ಒದ್ದೆಯಾದವನೂ, ಋಷಿಗಂಧರ್ವ ದೇವಾದಿಗಳನ್ನು ಮೋಹಿತರಾಗುವಂತೆ ಮಾಡುತ್ತಿರುವವನೂ, ಆಗಿರುವ ಸಂತನೇ, ನಿನ್ನನ್ನು ನಮಸ್ಕರಿಸುವೆನು" ಎಂಬ ಮಂತ್ರದಿಂದ ದಮನವನ್ನು ಮುಟ್ಟಬೇಕು. ಆಮೇಲೆ ಮನ್ಮಥನನ್ನು ಪೂಜಿಸಬೇಕು.

ಅನಂತರದಲ್ಲಿ ದೇವರನ್ನು ಮೆಲ್ಲಗೆ ಎತ್ತಬೇಕು. ಎಂಟು ಬಿದಿರಿನ ಪಾತ್ರೆಗಳನ್ನು ತೆಗೆದುಕೊಳ್ಳಬೇಕು. ಅವುಗಳ ಮಧ್ಯದಲ್ಲಿ ಒಂದರಲ್ಲಿ ದೇವರನ್ನು ಇಡಬೇಕು. ಬಿಳಿಬಟ್ಟೆಯನ್ನು ಹೊದ್ದಿಸಬೇಕು. ಅಲ್ಲಿಂದ ಹೊರಟು ದೇವರ ಮನೆಗೆ ಹೋಗಬೇಕು.

ದೇವರ ಮನೆಯಲ್ಲಿ ದೇವರು ಇರುವ ಸ್ಥಳಕ್ಕಿಂತ ಉತ್ತರದಿಕ್ಕಿನಲ್ಲಿ ಗೋಮಯದಿಂದ ಮಂಡಲವನ್ನು ಮಾಡಬೇಕು. ಆ ಮಂಡಲದ ಮೇಲೆ ತಂತ್ರಸಾರದಲ್ಲಿ ಹೇಳಿದಂತೆ ಸರ್ವತೋಭದ್ರಮಂಡಲವನ್ನು ಬರೆಯಬೇಕು. ಆ ಸರ್ವತೋಭದ್ರ ಮಂಡಲದ ಮಧ್ಯದಲ್ಲಿ ಬಿಳಿಯ ಎಂಟು ದಳಗಳುಳ್ಳ ಕಮಲವನ್ನು ಬರೆಯಬೇಕು. ಆ ಕಮಲದಲ್ಲಿ ಕರ್ಣಿಕೆಯನ್ನೂ, ಕೇಸರಗಳನ್ನೂ ಬರೆಯಬೇಕು. ಕಮಲದ ಎಂಟು ದಳಗಳಲ್ಲಿ ಹಿಂದೆ ಹೇಳಿದ ಬಿದಿರಿನ ಪಾತ್ರೆಗಳನ್ನು ಇಡಬೇಕು. ಆ ಪಾತ್ರೆಗಳಲ್ಲಿ ರತಿಯನ್ನೂ, ಮನ್ಮಥನನ್ನೂ ಪೂಜಿಸಬೇಕು. ಗುರುಗಳ ಅನುಜ್ಞೆಯನ್ನು ಪಡೆದು ಗುರುಗಳಿಂದ ಹೇಳಲ್ಪಟ್ಟ ಮಂತ್ರಗಳಿಂದ ರತಿಯನ್ನೂ, ಮನ್ಮಥನನ್ನೂ ಆವಾಹನೆ ಮಾಡಬೇಕು. ಎಂಟು ದಿಕ್ಕುಗಳಲ್ಲಿರುವ ಎಂಟು ಪಾತ್ರೆಗಳಲ್ಲಿ ಕ್ರಮವಾಗಿ ಎಂಟು ಮಂತ್ರಗಳಿಂದ ರತಿಯನ್ನೂ, ಮನ್ಮಥನನ್ನೂ ಪೂಜಿಸಬೇಕು. ಕ್ರಮವಾಗಿ ಎಂಟು ರತಿಮಂತ್ರಗಳನ್ನೂ, ಎಂಟು ಮನ್ಮಥಮಂತ್ರಗಳನ್ನೂ ಹೇಳುವೆವು. ಪೂರ್ವದಿಕ್ಕಿನಲ್ಲಿರುವ ಪಾತ್ರೆಯಿಂದ ಆರಂಭಿಸಿ ಎಂಟು ದಿಕ್ಕುಗಳಲ್ಲಿರುವ ಎಂಟು ಪಾತ್ರೆಗಳಲ್ಲಿ ರತಿಯನ್ನೂ, ಮನ್ಮಥನನ್ನೂ ಪೂಜಿಸಬೇಕು.

(1) ಓಂ ಹ್ರೀಂ ರತ್ಯೈ ನಮಃ, ಓಂ ಕ್ಲೀಂ ಕಾಮಾಯ ನಮಃ (2) ಓಂ ಹ್ರೀಂ ಸುಭಗಾಯೈ ನಮಃ, ಓಂ ಕ್ಲೀಂ

ಭಸ್ಮಶರೀರಾಯ ನಮಃ, (3) ಓಂ ಹ್ರೀಮ್ ಆಹ್ಲಾದಿನ್ಯೈ ನಮಃ, ಓಂ ಕ್ಲೀಮ್ ಅನಂಗಾಯ ನಮಃ, (4) ಓಂ ಹ್ರೀಂ ಹರ್ಷಾಯೈ ನಮಃ, ಓಂ ಕ್ಲೀಂ ಮನ್ಮಥಾಯ ನಮಃ (5) ಓಂ ಹ್ರೀಂ ಧೃತ್ಯೈ ನಮಃ, ಓಂ ಕ್ಲೀಂ ವಸಂತಸಖಾಯ ನಮಃ (6) ಓಂ ಹ್ರೀಂ ರತ್ಯೈ ನಮಃ, ಓಂ ಕ್ಲೀಂ ಇಕ್ಷುಚಾಪಾಯ ನಮಃ, (7) ಓಂ ಹ್ರೀಂ ಪ್ರೀತ್ಯೈ ನಮಃ, ಓಂ ಕ್ಲೀಂ ಪುಷ್ಪಬಾಣಾಯ ನಮಃ (8) ಓಂ ಹ್ರೀಂ ಸಂಗಮಾಯೈ ನಮಃ, ಓಂ ಕ್ಲೀಂ ರತಿಪ್ರಿಯಾಯ ನಮಃ.

ಹೀಗೆ ಎಂಟು ರತಿ ಮಂತ್ರಗಳಿಂದ ರತಿಯನ್ನೂ ಮನ್ಮಥ ಮಂತ್ರಗಳಿಂದ ಮನ್ಮಥನನ್ನೂ ಪೂಜಿಸಬೇಕು. ಎಂಟು ಗಂಧಗಳ ಸ್ಥಾನದಲ್ಲಿ ದಮನವನ್ನು ಪೂಜಿಸಬೇಕು. ಯಥೋಚಿತವಾದ ಉಪಚಾರಗಳಿಂದ ರತಿಯನ್ನೂ, ಮನ್ಮಥನನ್ನೂ ಪೂಜಿಸಬೇಕು. ನೂರ ಎಂಟು ಸಲ ಅನಂಗಗಾಯತ್ರೀಮಂತ್ರವನ್ನು ಜಪಿಸಬೇಕು. "ಕಾಮದೇವಾಯ ವಿದ್ಮಹೇ | ಪಂಚಬಾಣಾಯ ಧೀಮಹಿ | ತನ್ನೋಽನಂಗಃ ಪ್ರಚೋದಯಾತ್" ಇದು ಅನಂಗಗಾಯತ್ರೀಮಂತ್ರವೆನಿಸುತ್ತದೆ. "ನಮೋಽಸ್ತು ಪುಷ್ಪಬಾಣಾಯ ಜಗದಾಹ್ಲಾನಕಾರಿಣೇ | ಮನ್ಮಥಾಯ ಜಗನ್ನೇತ್ರ ರತಿಪ್ರೀತಿಪ್ರದಾಯಿನೇ" ಅಂದರೆ "ಪುಷ್ಪಬಾಣನಾಗಿಯೂ ಜಗತ್ತಿನಲ್ಲಿರುವ ಸರ್ವರನ್ನೂ ಆಹ್ಲಾನ ಮಾಡುವವನಾಗಿಯೂ, ಸಕಲ ಪ್ರಪಂಚಕ್ಕೂ ಮಿತ್ರತ್ವವನ್ನೂ ಪ್ರೀತಿಗಳನ್ನೂ ಕೊಡುವವನಾಗಿಯೂ, ಇರುವ ಓ ಮನ್ಮಥ, ನಿನಗೆ ನಮಸ್ಕಾರ" ಎಂದು ನನ್ನ ಮಂತ್ರದಿಂದ ಸ್ತುತಿಸಬೇಕು.

ಅನಂತರದಲ್ಲಿ ಸ್ವಲ್ಪ ದಮನವನ್ನು ತೆಗೆಯಬೇಕು. ಧೂಪವನ್ನು ತೋರಿಸಬೇಕು. "ಆಮಂತ್ರಿತಾನಿ ದೇವೇಶ ಪ್ರಾತಃ ಕಾಲೇ ಮಯಾ ಪ್ರಭೋ | ಕರ್ತವ್ಯಂ ಚ ಯಥಾಲಾಭಂ ಪೂಜಾಂ ಕುರ್ವೇ ತವಾಜ್ಞಯಾ" ಅಂದರೆ "ಓ ಪ್ರಭೋ, ಇಂದು ಬೆಳಿಗ್ಗೆ ಎಲ್ಲಾ ದೇವತೆಗಳನ್ನೂ ಕರೆದಿರುವೆನು. ನನ್ನ ಶಕ್ತಿಯನ್ನು ಅನುಸರಿಸಿ ಅವರೆಲ್ಲರ ಪೂಜೆಯನ್ನು ಮಾಡಬೇಕು. ನಿನ್ನ ಆಜ್ಞೆಯಿಂದ ಮಾಡುವೆನು. ಸರ್ವರನ್ನೂ ತೃಪ್ತಿಪಡಿಸು" ಎಂದು ಪ್ರಾರ್ಥಿಸಬೇಕು.

ಅನಂತರದಲ್ಲಿ ಸ್ವಲ್ಪ ದಮನವನ್ನು ತೆಗೆದು ಕಾಮನ ಮೂಲಮಂತ್ರದಿಂದ ವಿಷ್ಣುವಿನ ತಲೆಯಲ್ಲಿ ಇಡಬೇಕು. ಪುನಃ ಧೂಪ, ಆರತಿ ಮುಂತಾದವುಗಳನ್ನು ಮಾಡಬೇಕು. "ದೇವದೇವ, ಜಗನ್ನಾಥ, ವಾಂಛಿತಾರ್ಥ ಫಲಪ್ರದ |

ಹೃದಿಸ್ಥಾನ್ ಪೂರಯಸ್ವೇಷ್ಟಾನ್ ಶ್ರೀನಿವಾಸ ಸದಾ ಪ್ರಭೋ", ಅಂದರೆ "ಪ್ರಭೋ, ದೇವದೇವ, ಜಗನ್ನಾಥ, ವಾಂಛಿತಾರ್ಥಫಲಪ್ರದ, ಶ್ರೀನಿವಾಸ ನನ್ನ ಮನಸ್ಸಿನಲ್ಲಿರುವ ನನ್ನ ಇಷ್ಟಾರ್ಥಗಳನ್ನು ಪೂರೈಸು." ಎಂದು ಪ್ರಾರ್ಥಿಸಬೇಕು.

ಅಲ್ಲಿಯೇ ದಮನಕ್ಕೆ ಅಧಿವಾಸನವನ್ನು ಮಾಡಬೇಕು. ರತಿಮಂತ್ರಗಳಿಂದಲೂ ಮನ್ಮಥಮಂತ್ರಗಳಿಂದಲೂ ದಮನವನ್ನು ಎಲ್ಲಾ ಕಡೆಯಿಂದಲೂ ಆಚ್ಛಾದನ ಮಾಡಬೇಕು. ಅಸ್ತ್ರಮಂತ್ರದಿಂದ ರಕ್ಷಿಸಬೇಕು. ಅಂದು ರಾತ್ರಿ ಜಾಗರಣವನ್ನು ಮಾಡಬೇಕು. ಇದು ಮೊದಲನೆಯ ದಿನದಲ್ಲಿ ಮಾಡುವ ಅಧಿವಾಸನವಿಧಿ.

### ದಮನಧಾರಣವಿಧಿ

ಮರುದಿನದಲ್ಲಿ ಬೆಳಿಗ್ಗೆ ಎದ್ದು ತನ್ನ ನಿತ್ಯಕರ್ಮಗಳನ್ನು ಮುಗಿಸಬೇಕು. ಶ್ರೀಹರಿಯನ್ನು ಪ್ರತಿದಿನದಂತೆ ಪೂಜಿಸಬೇಕು. ತನ್ನ ಆಗಮದಲ್ಲಿ ಹೇಳಿದ ವಿಧಿಯಿಂದ ಆವಾಹನೆಯಿಂದ ಆರಂಭಿಸಿ ಪುಷ್ಪಸಮರ್ಪಣೆಯವರೆಗೆ ಪೂಜೆಯನ್ನು ಮಾಡಬೇಕು. ತನ್ನ ಎರಡು ಕೈಗಳಿಂದ ಶ್ರೀಹರಿಯ ತಲೆಯಲ್ಲಿ ದಮನವನ್ನು ಇಡಬೇಕು. ಅನಂತರದಲ್ಲಿ ಧೂಪ, ನೀರಾಜನ ಮುಂತಾದವುಗಳಿಂದ ಪೂಜಿಸಬೇಕು. ತಲೆಯನ್ನು ಬಗ್ಗಿಸಿ "ಭಗವನ್ನತಿರಿಕ್ತಂ ವಾ ನ್ಯೂನಂ ವಾ ಯನ್ಮಯಾ ಕೃತಂ | ಸರ್ವಂ ತದಸ್ತು ಸಂಪೂರ್ಣಂ ಪೂರ್ವದಾಮನಕಂ ಮಮ | "ಓ ಭಗವನ್, ದಮನವನ್ನು ಸಮರ್ಪಿಸುವುದಕ್ಕಿಂತ ಪೂರ್ವದಲ್ಲಿ ನಾನು ಮಾಡಿರುವ ಪೂಜೆಗಳಲ್ಲಿ ನ್ಯೂನವಾಗಿರಬಹುದು. ಅಥವಾ ಅಧಿಕವಾಗಿರಬಹುದು. ಅದೆಲ್ಲವೂ ಸಂಪೂರ್ಣ ಫಲವನ್ನು ಕೊಡಲಿ" ಎಂದು ಪ್ರಾರ್ಥಿಸಬೇಕು.

ಅನಂತರದಲ್ಲಿ ಲಕ್ಷ್ಮೀ, ಬ್ರಹ್ಮ ಮುಂತಾದ ಸಕಲ ದೇವತೆಗಳನ್ನೂ ತಾರತಮ್ಯಕ್ರಮದಿಂದ ಪೂಜಿಸಬೇಕು. ಅನಂತರದಲ್ಲಿ ತನ್ನ ಗುರುಗಳನ್ನು ಗಂಧ, ಪುಷ್ಪ, ವಸ್ತ್ರ ಮುಂತಾದವುಗಳಿಂದ ಪೂಜಿಸಬೇಕು. ನಮಸ್ಕರಿಸಬೇಕು. ಸಂತೋಷಪಡಿಸಬೇಕು. ದಮನವನ್ನು ಅವರಿಗೆ ಕೊಡಬೇಕು. ವಿಷ್ಣುಭಕ್ತರಾದ ಬ್ರಾಹ್ಮಣರನ್ನು ಗಂಧ, ಪುಷ್ಪ, ಮಂತ್ರಾಕ್ಷರ ಮುಂತಾದವುಗಳಿಂದ ಪೂಜಿಸಬೇಕು. ಅನಂತರದಲ್ಲಿ ಜಲಕ್ರೀಡೆಯನ್ನು ಮಾಡಬೇಕು. ಅಥವಾ ಶ್ರೀಕೃಷ್ಣದೇವನ ಪಾದಕಮಲಗಳ ಸ್ಪರ್ಶವಾಗಿರುವ ಚಂದನದಿಂದ ಯುಕ್ತವಾದ ತೀರ್ಥದಿಂದ ಭಕ್ತಿನಮ್ರಬುದ್ಧಿಯುಳ್ಳವನಾಗಿ ಬಂಧುಗಳೊಡನೆ ಪ್ರೋಕ್ಷಣವನ್ನು ಮಾಡಿಸಿಕೊಳ್ಳಬೇಕು. ತನ್ನ ಶಕ್ತ್ಯನುಸಾರವಾಗಿ ಮೃಷ್ಟಾನ್ನಭೋಜನವನ್ನು ಸರ್ವವೈಷ್ಣವರಿಗೂ ಮಾಡಿಸಬೇಕು. ಸಂತುಷ್ಟನಾಗಿ ತಾನೂ ಬಂಧುಸಹಿತನಾಗಿ ಭೋಜನವನ್ನು ಮಾಡಬೇಕು.

ಈ ಶುಭಕಾರ್ಯವು ಶ್ರೀಪತಿಯಾದ ಪರಮಾತ್ಮನಿಗೆ ಪ್ರಿಯವಾದುದು. ಈ ಶುಭಕಾರ್ಯವನ್ನು ಮಾಡುವವನು ಒಂದು ವರ್ಷದಲ್ಲಿ ಮಾಡಿದ ಶ್ರೀಹರಿಪೂಜೆಯು ಸಫಲವಾಗುತ್ತದೆ. ಮಾಡದವನು ಮಾಡಿದ ಒಂದು ವರ್ಷವರೆಗಿನ ಶ್ರೀಹರಿಯ ಪೂಜೆಯು ನಿಷ್ಫಲವಾಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ. ಆದ್ದರಿಂದ ಒಂದೊಂದು ವರ್ಷದಲ್ಲಿಯೂ ಆಯಾ ವರ್ಷಗಳ ಪೂಜಾಫಲವು ಸಿಗುವುದಕ್ಕಾಗಿ ಶ್ರೀಹರಿಯ ಪ್ರೀತಿಗಾಗಿ ದಮನವನ್ನು ಸಮರ್ಪಿಸಬೇಕು.

## ಸಂಗ್ರಹೋಕ್ತಪೂಜಾವಿಧಿ

ಅಥ ಮಧ್ಯಾಹ್ನಪೂಜಾರ್ಥಮರ್ಘ್ಯೋಪಹರಣಾದಿಕಮ್ ।
ಕ್ರಮೇಣ ಕಥಯಿಷ್ಯಾಮಿ ಪೂಜಾಯಾಃ ಕ್ರಮಮೇವ ಚ ॥

"ಮಧ್ಯಾಹ್ನಪೂಜೆಗಾಗಿ ಅರ್ಘ್ಯೋದಕ ಮುಂತಾದವುಗಳನ್ನು ತರುವ ಕ್ರಮವನ್ನೂ ಪೂಜಾಕ್ರಮವನ್ನೂ ಹೇಳುವೆನು."

## ಜಲಪಾತ್ರೆಗಳು

ಸೌವರ್ಣಂ ರಜತಂ ತಾಮ್ರಂ ಪಾತ್ರಂ ಮೃಣ್ಮಯಮೇವ ಚ ।
ಕುರ್ವೀತ ಕಲಶಂ ಪುಣ್ಯಂ ತೇನ ಚೋದಕಮಾಹರೇತ್ ॥

"ಬಂಗಾರ, ಬೆಳ್ಳಿ, ತಾಮ್ರ ಇವುಗಳಿಂದ ನಿರ್ಮಿತವಾದ ಪಾತ್ರೆಗಳು ಅಥವಾ ಮಣ್ಣಿನ ಪಾತ್ರೆಗಳಿಂದ ಅರ್ಘ್ಯೋದಕವನ್ನು ತರಬೇಕು. ಈ ಜಲವು ಪುಣ್ಯಕರವಾಗುತ್ತದೆ."

## ಜಲಪ್ರಮಾಣ

"ಮುನ್ನೂರ ಇಪ್ಪತ್ತು ಗುಲಗಂಜಿಯಷ್ಟು ಭಾರವುಳ್ಳ ವಸ್ತುವು ಪಲಭಾರವುಳ್ಳದ್ದೆನಿಸುತ್ತದೆ. ಮೂವತ್ತುಭಾರದಷ್ಟು ಭಾರವುಳ ನೀರನ್ನು ದೇವಾಲಯದಲ್ಲಿ ಅಭಿಷೇಕಕ್ಕಾಗಿ ತರಬೇಕು. ಮನೆಯಲ್ಲಿ ಅಭಿಷೇಕವನ್ನು ಮಾಡುವುದಾಗಿದ್ದರೆ ಇನ್ನೂರ ನಲ್ವತ್ತು ಪಲದಷ್ಟು ಭಾರವುಳ್ಳ ನೀರನ್ನು ತರಬೇಕು. ಆಚಮನ ಮತ್ತು ನೈವೇದ್ಯಗಳಿಗಾಗಿ ನೀರನ್ನು ತರುವುದಾಗಿದ್ದರೆ ಹನ್ನೆರಡು ಪಲಗಳಷ್ಟು ಭಾರವುಳ್ಳ ನೀರನ್ನು ತರಬೇಕು. ಅರ್ಘ್ಯ ಮುಂತಾದವುಗಳಿಗೆ ಆರು ಪಲಗಳಷ್ಟು ಭಾರವುಳ್ಳ ನೀರನ್ನು ತರಬೇಕು. ಪ್ರೋಕ್ಷಣಕ್ಕಾಗಿ ನೀರನ್ನು ತರುವುದಾಗಿದ್ದರೆ ಮೂರು ಪಲಗಳಷ್ಟು ನೀರನ್ನು ತರಬೇಕು. ಇದಕ್ಕಿಂತ ಅಧಿಕವಾಗಿ ನೀರನ್ನು ತಂದು ಬೇರೆ ಕಾರ್ಯಗಳಿಗೆ ಉಪಯೋಗಿಸಲೂಬಾರದು. ಚೆಲ್ಲಲೂ ಬಾರದು.

## ನೀರನ್ನು ತರುವ ಕ್ರಮ

ಜಲೇ ಕುಂಭಂ ಶೋಧಯಿತ್ವಾ ವಸ್ತ್ರಪೂತಂ ಸಮಾಹರೇತ್ ।
ಉಕ್ತಾಶ್ಚ ವಕ್ಷ್ಯಮಾಣಾಶ್ಚ ಬ್ರಹ್ಮಪೂರ್ವಾಶ್ಚ ದೇವತಾಃ ॥

ಪೂಜನೀಯಾಃ ಸ್ನಾನಕುಂಭೇ ನ ಪಾನೀಯಾದಿ ಯತ್ಕ್ವಚಿತ್ |
ಮಹಾನದ್ಯಾಂ ಮಹಾತೀರ್ಥೇ ನ ತ್ಯಜೇತ್ಕಲಶಾರ್ಚನಮ್ ||
ಹಸ್ತೇನ ಶಿರಸಾ ವಾಪಿ ಧೃತ್ವಾ ಗೇಹಂ ಸಮಾವಿಶೇತ್ |
ಪಾದಪ್ರಕ್ಷಾಲನಂ ಕೃತ್ವಾ ದ್ವಿರಾಚಮ್ಯ ಚ ವಾಗ್ಯತಃ ||
ದ್ವಾರದೇಶಂ ಶನೈರ್ಗತ್ವಾ ದ್ವಾರಪಾಲಾನ್ನಮೇತ್ತತಃ |
ತದನುಜ್ಞಾಮವಾಪ್ಯಾಥ ವಾಯವಾಯೇತಿ ಮಂತ್ರತಃ ||
ಉದ್ಘಾಟ್ಯಾಥ ಕವಾಟಂ ಚ ದಕ್ಷಿಣಾಂಘ್ರಿಪುರಸ್ಸರಮ್ |
ಪ್ರವಿಶ್ಯ ದೇವತಾಗೇಹಂ ಮಾರ್ಜನಾದಿಕಮಾಚರೇತ್ ||

"ಕಲಶವನ್ನು ನೀರಿನಲ್ಲಿ ಮುಳುಗಿಸಿ ತೊಳೆಯಬೇಕು. ಶುದ್ಧವಾದ ವಸ್ತ್ರದಿಂದ ನೀರನ್ನು ಶೋಧಿಸಬೇಕು. "ಕಲಶಸ್ಯ ಮುಖೇ ವಿಷ್ಣುಃ" ಮುಂತಾದ ಕಲಶಾರ್ಚನ ಮಂತ್ರದಲ್ಲಿ ಹೇಳಲ್ಪಟ್ಟವರೂ ಮುಂದೆ ಹೇಳಲ್ಪಡುವವರೂ ಕಲಶದೇವತೆಗಳೆನಿಸುವರು. ಈ ಕಲಶದೇವತೆಗಳನ್ನು ಸ್ನಾನಕಲಶದಲ್ಲಿ ಪೂಜಿಸಬೇಕು. ಪಾನೀಯಕಲಶ ಮುಂತಾದವುಗಳಲ್ಲಿ ಈ ಕಲಶದೇವತೆಗಳನ್ನು ಪೂಜಿಸಬೇಕಾದ್ದಿಲ್ಲ.

ಗಂಗಾನದಿಮಹಾನದಿಗಳಲ್ಲಿಯೂ, ಸ್ವಾಮಿ ಪುಷ್ಕರಿಣೀ ಮುಂತಾದ ತೀರ್ಥಗಳಲ್ಲಿಯೂ, ಕಲಶಪೂಜೆಯನ್ನು ಮಾಡದಿರಬಾರದು. ಅನಂತರದಲ್ಲಿ ಕೈಯಲ್ಲಾಗಲೀ, ತಲೆಯಲ್ಲಾಗಲೀ ಕಲಶವನ್ನು ಇಟ್ಟುಕೊಂಡು ಮನೆಗೆ ತರಬೇಕು. ಎರಡು ಕಾಲುಗಳನ್ನು ತೊಳೆದುಕೊಳ್ಳಬೇಕು. ಎರಡು ಸಲ ಆಚಮನವನ್ನು ಮಾಡಬೇಕು. ಮೌನದಿಂದ ದೇವರ ಮನೆಯ ಬಾಗಿಲಿಗೆ ಮೆಲ್ಲನೆ ಬರಬೇಕು. ದ್ವಾರಪಾಲಕರನ್ನು ನಮಸ್ಕರಿಸಬೇಕು. ಅವರಿಂದ ಅನುಮತಿಯನ್ನು ಪಡೆಯಬೇಕು. "ವಾಯವಾಯಾಹಿ"ಎಂಬ ಮಂತ್ರದಿಂದ ದೇವರ ಬಾಗಿಲನ್ನು ತೆಗೆಯಬೇಕು. ಬಲಗಾಲನ್ನು ಮುಂದಿಟ್ಟುಕೊಂಡು ದೇವರ ಮನೆಯೊಳಗೆ ಪ್ರವೇಶಿಸಬೇಕು. ಕಸವನ್ನು ಗುಡಿಸಬೇಕು.

### ದೇವರ ಮನೆಯನ್ನು ಸಾರಿಸುವವನಿಗೆ ಫಲ

ಶ್ರೀಮದಾಯತನಂ ವಿಷ್ಣೋರ್ಯಃ ಕುರ್ಯಾದುಪಲೇಪನಮ್ |
ಅಗ್ನಿಷ್ಟೋಮಂ ತು ಪಕ್ಷೇಣ ವಾಜಪೇಯಂ ತು ಮಾಸತಃ ||

ದೇವರ ಮನೆಯೊಳಗೆ ಸಗಣಿಯಿಂದ ಸಾರಿಸಬೇಕು. ಹದಿನೈದು ದಿನಗಳವರೆಗೆ ಸಾರಿಸುವವನು ಅಗ್ನಿಷ್ಟೋಮ ಯಾಗದ ಫಲವನ್ನು, ಒಂದು ತಿಂಗಳಿನವರೆಗೆ ಸಾರಿಸುವವನು ವಾಜಪೇಯಯಾಗದ ಫಲವನ್ನೂ ಪಡೆಯುವನು.

### ದೀಪವನ್ನು ಹಚ್ಚುವವನಿಗೆ ಫಲ

ತತೋಽಗ್ನಿನೇತಿ ಮಂತ್ರೇಣ ದೀಪಂ ಪ್ರಜ್ವಾಲಯೇತ್ಸುಧೀಃ |
ಫಲಂ ತು ದೀಪಪ್ರಜ್ವಲನೇ ಪುರಾಣೇ ಸಮ್ಯಗೀರಿತಮ್ ||

ಅನಂತರದಲ್ಲಿ "ಅಗ್ನಿನಾಗ್ನಿಃ ಸವಿಧ್ಯತೇ" ಎಂಬ ಮಂತ್ರದಿಂದ ದೀಪವನ್ನು ಹಚ್ಚಬೇಕು. ದೀಪವನ್ನು ಹಚ್ಚಿದ್ದರಿಂದ ಬರುವ ಫಲವು ಪುರಾಣದಲ್ಲಿ ಚೆನ್ನಾಗಿ ಹೇಳಲ್ಪಟ್ಟಿದೆ.

### ದೀಪವನ್ನು ಹಚ್ಚಿದ್ದರಿಂದ ಬರುವ ಫಲ

ಘೃತೇನ ವಾಥ ತೈಲೇನ ದೀಪಂ ಯೋ ಜ್ವಾಲಯೇನ್ನರಃ |
ವಿಷ್ಣವೇ ವಿಧಿವದ್ಭಕ್ತ್ಯಾ ತಸ್ಯ ಪುಣ್ಯಮನಂತಕಮ್ ||

ಭವೇದೇಕಸ್ಯ ದೀಪಸ್ಯ ಭೂಮೌ ರಾಜ್ಯಂ ದ್ವಯೋರ್ದಿವಿ |
ಬಹೂನಾಂ ತತ್ಫಲಂ ವಕ್ತುಂ ನಾಹಂ ಶಕ್ತೋऽಸ್ಮಿ ಪಾರ್ವತಿ ||

"ತುಪ್ಪ ಅಥವಾ ಎಣ್ಣೆಯಿಂದ ಶ್ರೀಹರಿಯ ಸನ್ನಿಧಿಯಲ್ಲಿ ಅತ್ಯಂತ ಭಕ್ತಿಯಿಂದ ದೀಪವನ್ನು ಯಾವನು ಹಚ್ಚುವನೋ ಅವನಿಗೆ ಅನಂತಪುಣ್ಯವು ಬರುತ್ತದೆ. ಒಂದು ದೀಪವನ್ನು ಹಚ್ಚುವವನು ಮುಂದಿನ ಜನ್ಮದಲ್ಲಿ ಈ ಭೂಮಿಯಲ್ಲಿ ರಾಜ್ಯವನ್ನು ಆಳುವನು. ಎರಡು ದೀಪಗಳನ್ನು ಹಚ್ಚುವವನು ಸ್ವರ್ಗಲೋಕವನ್ನು ಆಳುವನು. ಎರಡು ದೀಪಗಳಿಗಿಂತ ಅಧಿಕವಾದ ದೀಪವನ್ನು ಹಚ್ಚುವವನಿಗೆ ಬರುವ ಫಲವನ್ನು ಹೇಳಲು ನಾನು ಶಕ್ತನಲ್ಲ."

**ಕಾರ್ತಿಕದಲ್ಲಿ ದೀಪದಾನದ ಫಲ**

ಮೇರುಮಂದರಮಾತ್ರೇಣ ಕೃತಾಃ ಪಾಪಸ್ಯ ರಾಶಯಃ |
ದಹ್ಯಂತೇ ನಾತ್ರ ಸಂದೇಹೋ ದೀಪದಾನೇನ ಕಾರ್ತಿಕೇ ||

"ಮೇರುಪರ್ವತದಷ್ಟು ಮಂದರಪರ್ವತದಷ್ಟು ಎತ್ತರವಾಗಿರುವ ಪಾಪಗಳ ರಾಶಿಗಳನ್ನು ಮಾಡಿದ್ದರೂ ಕಾರ್ತಿಕದಲ್ಲಿ ಮಾಡಿದ ದೀಪದಾನದಿಂದ ಬೂದಿಯಾಗುತ್ತವೆ. ಈ ವಿಷಯದಲ್ಲಿ ಸಂಶಯವು ಬೇಡ."

**ದೇವರನ್ನು ಎಬ್ಬಿಸುವುದು**

ತತಃ ಶಯಾನಂ ಸಂವೀಕ್ಷ್ಯ ಮುಖವಸ್ತ್ರಂ ವಿಸರ್ಜಯೇತ್ |
ಆಯತಾಭ್ಯಾಂ ವಿಶಾಲಾಭ್ಯಾಂ ಶೀತಲಭ್ಯಾಂ ಕೃಪಾನಿಧೇ |
ಕರುಣಾರಸಪೂರ್ಣಾಭ್ಯಾಂ ಲೋಚನಾಭ್ಯಾಂ ವಿಲೋಕಯ ||
ನಮೋ ಬ್ರಹ್ಮಣ್ಯೇತ್ಯಾದಿಮಂತ್ರೈಃ ಕ್ಷಮಸ್ವ ಚ ಪುನಃ ಪುನಃ |

"ಮಲಗಿರುವ ಶ್ರಿಹರಿಯ ಮುಖವನ್ನು ಮುಚ್ಚಿರುವ ವಸ್ತ್ರವನ್ನು ತೆಗೆಯಬೇಕು." ಶ್ರೀಹರಿಯು ನಮ್ಮನ್ನು ನೋಡುತ್ತಿರುವಂತೆ ಭಾವಿಸಬೇಕು." ಓ ಶ್ರೀಹರಿಯೇ, ನಿನ್ನ ಎರಡು ಕಣ್ಣುಗಳು ಅಗಲವಾಗಿವೆ. ಉದ್ದವಾಗಿವೆ. ತಣ್ಣಗಿವೆ. ಕರುಣಾರಸದಿಂದ ಪೂರ್ಣವಾಗಿವೆ. ಆ ಎರಡು ಕಣ್ಣುಗಳಿಂದ ನನ್ನನ್ನು ನೋಡು " ಎಂದು ಪ್ರಾರ್ಥಿಸಬೇಕು. "ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣಹಿತಾಯ ಚ | ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ" ಮುಂತಾದ ಸ್ತೋತ್ರಗಳನ್ನು ಮಾಡಬೇಕು. "ನನ್ನನ್ನು ಮನ್ನಿಸು" ಎಂದು ಪುನಃ ಪುನಃ ಪ್ರಾರ್ಥಿಸಬೇಕು."

**ಗಂಧಸಮರ್ಪಣೆ**

ತತೋ ಗಂಧಂ ವಿಶುದ್ಧಂ ತು ಸುಗಂಧಂ ಚ ಸಮರ್ಪಯೇತ್ |
ತುಲಸೀಕಾಷ್ಠಸಂಯುಕ್ತಂ ಚಂದನಂ ಯಚ್ಛತೋ ಹರೇಃ ||
ವಿದಹೇತ್ಪಾತಕಂ ಸರ್ವಂ ಪೂರ್ವಜನ್ಮಶತಾರ್ಜಿತಮ್ |

"ಪರಿಶುದ್ಧವಾಗಿಯೂ, ಪರಿಮಳದಿಂದ ಯುಕ್ತವಾಗಿಯೂ ಇರುವ ಗಂಧವನ್ನೂ, ತುಳಸೀಕಾಷ್ಠವನ್ನೂ ಸಮರ್ಪಿಸಬೇಕು. ಇವುಗಳನ್ನು ಸಮರ್ಪಿಸುವವನು ಹಿಂದಿನ ನೂರು ಜನ್ಮಗಳಲ್ಲಿ ಮಾಡಿರುವ ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುವನು.

ವಿಲೇಪಯತಿ ಗೋವಿಂದಂ ತಸ್ಯ ಪುಣ್ಯಮನಂತಕಮ್ |

"ಗಂಧದಿಂದ ಗೋವಿಂದನ ದೇಹದಲ್ಲಿ ಹಚ್ಚುವವನಿಗೆ ಬರುವ ಪುಣ್ಯವು ಅನಂತವಾಗಿದೆ."

ಯೋ ದದಾತಿ ಹರೇರ್ನಿತ್ಯಂ ತುಲಸೀಕಾಷ್ಠಚಂದನಮ್ |
ವಸತೇ ವಿಷ್ಣುಸದನೇ ಯುಗಾನಿ ದಶ ಪಂಚ ಚ ||

"ತುಲಸೀಕಾಷ್ಠವನ್ನು ಅರೆದು ಬಂದಿರುವ ಗಂಧವನ್ನು ಪ್ರತಿದಿನದಲ್ಲಿಯೂ ವಿಷ್ಣುವಿಗೆ ಸಮರ್ಪಿಸುವವನು ಹದಿನೈದು ಯುಗಗಳವರೆಗೆ ವಿಷ್ಣುವಿನ ಲೋಕದಲ್ಲಿ ವಾಸಿಸುವನು.

ತುಲಸೀಚಂದನಂ ಮುಖ್ಯಂ ಕಿಂ ವಾ ಮಲಯಜಂ ಶುಭಮ್ |
ಚಂದನಂ ಕುಂಕುಮಂ ಕೋಷ್ಠಂ ಕರ್ಪೂರಗ್ರಂಥಿರೋಚನಮ್ ||
ಸುರಾಗುರುಸಮಾಯುಕ್ತಂ ಗಂಧಾಷ್ಟಕಮುದಾಹೃತಮ್ |
ವಿಲೇಪಯತಿ ಗೋವಿಂದಂ ಶಂಖೇ ಕೃತ್ವಾ ತು ಚಂದನಮ್ ||
ಪರಮಾತ್ಮಾ ಪರಾಂ ಪ್ರೀತಿಂ ಕರೋತಿ ಶತವಾರ್ಷಿಕೀಮ್ |

ತುಲಸೀಕಾಷ್ಠದಿಂದ ಬಂದಿರುವ ಗಂಧ ಅಥವಾ ಮಲಯಪರ್ವತದಲ್ಲಿ ಹುಟ್ಟಿರುವ ಗಂಧಗಳು ಮುಖ್ಯಗಂಧಗಳೆನಿಸುತ್ತವೆ. ಈ ದ್ವಿವಿಧವಾದ ಗಂಧಗಳು, ಕೇಸರಿ, ಚಂಗಲ್‌ಕೋಷ್ಠ, ಪಚ್ಚಕರ್ಪೂರ, ಗೋರೋಚನ, ದೇವದಾರು ಗ್ರಂಥಿ ಈ ಎಂಟು ಪದಾರ್ಥಗಳು ಒಟ್ಟುಗೂಡಿದರೆ ಗಂಧಾಷ್ಟಕ ಎಂದು ಹೇಳಲ್ಪಡುತ್ತವೆ. ಶಂಖದಲ್ಲಿ ಈ ಅಷ್ಟಗಂಧಗಳನ್ನಿಟ್ಟು, ಗೋವಿಂದನಿಗೆ ಲೇಪನ ಮಾಡುವವನಲ್ಲಿ ನೂರು ವರ್ಷಗಳವರೆಗೂ ಶ್ರೀಹರಿಯು ಪ್ರೀತಿಯನ್ನು ಮಾಡುವನು.

### ಭೂತೋಚ್ಚಾಟನ ಮತ್ತು ಘಂಟಾನಾದ

ಭೂತೋಚ್ಚಾಟಂ ತತಃ ಕೃತ್ವಾ ಘಂಟಾನಾದಂ ಪ್ರಕಲ್ಪಯೇತ್ |

ಅನಂತರದಲ್ಲಿ ಭೂತೋಚ್ಚಾಟನಮಂತ್ರಗಳಿಂದ ಭೂತೋಚ್ಚಾಟನವನ್ನು ಮಾಡಬೇಕು. ಅನಂತರದಲ್ಲಿ ಗಂಟೆಯನ್ನು ಬಾರಿಸಬಾರದು.

"ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ |
ಕುರು ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ||"

"ಶ್ರೀಹರಿಯ ಪೂಜಾಕಾಲದಲ್ಲಿ ದೇವತೆಗಳು ಬರುವುದಕ್ಕೂ, ರಾಕ್ಷಸರು ಹೋಗುವುದಕ್ಕೂ ಘಂಟಾಧ್ವನಿಯನ್ನು ಮಾಡಬೇಕು." ಎಂಬ ಅರ್ಥವನ್ನು ತಿಳಿಸುವ ಈ ಮಂತ್ರವನ್ನು ಹೇಳುತ್ತಾ ಘಂಟಾಧ್ವನಿಯನ್ನು ಮಾಡಬೇಕು.

ರಾಕ್ಷಸಾನಾಂ ಪಿಶಾಚಾನಾಂ ತದ್ದೇಶೇ ವಸತಿರ್ಭವೇತ್ |
ತೇಷಾಮುತ್ಸಾದನಾರ್ಥಾಯ ಘಂಟಾಮಾನಾದ್ಯ ಪೂಜಯೇತ್ ||

"ಯಾವ ಸ್ಥಳದಲ್ಲಿ ಘಂಟಾಧ್ವನಿಯಿಲ್ಲವೋ, ಆ ಸ್ಥಳದಲ್ಲಿ ರಾಕ್ಷಸರು ಮತ್ತು ಪಿಶಾಚಗಳ ವಾಸವು ಏರ್ಪಡುತ್ತದೆ. ಅವರೆಲ್ಲರನ್ನೂ ನಾಶ ಮಾಡುವುದಕ್ಕಾಗಿ ಘಂಟೆಯನ್ನು ಬಾರಿಸಿ ಪೂಜಿಸಬೇಕು."

ಜ್ಞಾನತೋಽಜ್ಞಾನತೋ ವಾಽಪಿ ಕಾಂಸ್ಯಘಂಟಾಂ ವಿವರ್ಜಯೇತ್ |
ಘಂಟಾನಾದಂ ತು ಯಃ ಕುರ್ಯಾದ್ದೇವಪೂಜಾಕೃತೇ ಸತಿ ||
ಸ ತು ಮೋಕ್ಷಮವಾಪ್ನೋತಿ ಇಹ ಭೋಗಾನ್ ಸಮಶ್ನುತೇ |

"ತಿಳಿದೂ, ತಿಳಿಯದೆಯೂ ಕಂಚಿನ ಘಂಟೆಯನ್ನು ಬಾರಿಸಕೂಡದು. ದೇವರ ಪೂಜೆಗಾಗಿ ಘಂಟಾಧ್ವನಿಯನ್ನು ಮಾಡುವವನು ಈ ಲೋಕದಲ್ಲಿ ಎಲ್ಲಾ ಸುಖಗಳನ್ನೂ ಅನುಭವಿಸುವನು. ಕೊನೆಗೆ ಮೋಕ್ಷವನ್ನು ಪಡೆಯುವನು."

ಘಂಟಾನಾದವಿಹೀನಂ ಯಃ ಪೂಜಾಕರ್ಮ ಸಮಾಚರೇತ್ |
ವಿಷ್ಣುದ್ರೋಹಾತ್ಪತತ್ಯಂಧ ಇಹ ಮೂಕೋಽಭಿಜಾಯತೇ ||

"ಘಂಟೆಯನ್ನು ಬಾರಿಸದೆ ಪೂಜೆಯನ್ನು ಮಾಡುವವನು ಈ ಲೋಕದಲ್ಲಿ ಮೂಕನಾಗಿ ಹುಟ್ಟುವನು. ಕೊನೆಗೆ ಅಂಧಂತಮಸ್ಸಿನಲ್ಲಿ ಹೋಗಿ ಬೀಳುವನು.

### ನಿರ್ಮಾಲ್ಯ ವಿಸರ್ಜನೆ

ಪೂರ್ವಾನೀತಾರ್ಘ್ಯೋದಕಾದೀನ್ ದಕ್ಷಭಾಗೇ ವಿನಿಕ್ಷಿಪೇತ್ |

"ಹಿಂದೆ ತಂದಿರುವ ಅರ್ಘ್ಯೋದಕ ಮುಂತಾದವುಗಳನ್ನು ಶ್ರೀಹರಿಯ ಬಲಭಾಗದಲ್ಲಿ ಇಡಬೇಕು."

ತತಶ್ಚ ಮಂಟಪಂ ಧ್ಯಾಯೇದುತ್ತಪ್ರೇತ್ಯಾದಿಮಂತ್ರತಃ |

"ಅನಂತರದಲ್ಲಿ "ಉತ್ತಪ್ತೋಜ್ಜ್ವಲ" ಮುಂತಾದ ಮಂತ್ರಗಳಿಂದ ಶ್ರೀಹರಿಯ ಮಂಟಪವನ್ನು ಧ್ಯಾನಿಸಬೇಕು."

ಪ್ರಾಙ್ಮುಖೋದಙ್ಮುಖೋ ವಾऽಪಿ ಉಪವಿಶ್ಯಾಹರೇದ್ವಿಜಃ |
ಸಂಪುಟೋತ್ಪಾಟನಂ ಕೃತ್ವಾ ಗಾಯತ್ರ್ಯಾ ವಿಷ್ಣುಸಂಜ್ಞಯಾ ||

"ಪೂರ್ವ ಅಥವಾ ಉತ್ತರದಿಕ್ಕಿಗೆ ಅಭಿಮುಖನಾಗಿ ಕುಳಿತುಕೊಳ್ಳಬೇಕು. ದೇವರ ಸಂಪುಟವನ್ನು ತೆರೆಯಬೇಕು. ವಿಷ್ಣುಗಾಯತ್ರೀ ಮತ್ತು ಲಕ್ಷ್ಮೀಸೂಕ್ತದಿಂದ ನಿರ್ಮಾಲ್ಯ ವಿಸರ್ಜನೆಯನ್ನು ಮಾಡಬೇಕು."

ಲಕ್ಷ್ಮೀಸೂಕ್ತೇನ ನಿರ್ಮಾಲ್ಯಂ ವಿಸೃಜ್ಯ ಸ್ನಾನಪಾತ್ರಕೇ |
ಸಾಲಗ್ರಾಮಾನ್ ವಿನಿಕ್ಷಿಪ್ಯ ಪೀಠಂ ಸಂಶೋಧ್ಯ ಭಕ್ತಿತಃ ||

"ಸ್ನಾನಪಾತ್ರದಲ್ಲಿ ಶಾಲಿಗ್ರಾಮಗಳನ್ನು ಇಡಬೇಕು. ಪೀಠವನ್ನು ಭಕ್ತಿಯಿಂದ ಶುದ್ಧಪಡಿಸಬೇಕು."

ಪೀತವಸ್ತ್ರೈರಲಂಕೃತ್ಯ ಪ್ರತಿಮಾಃ ಸ್ಥಾಪಯೇತ್ತತಃ |
ಮಂತ್ರೇಣ ನಿಷುಸೀದೇತಿ ದೇವಂ ತಂ ಪ್ರಾರ್ಥಯೇತ್ತತಃ ||

"ಹಳದಿಬಣ್ಣದ ವಸ್ತ್ರಗಳಿಂದ ಪ್ರತಿಮೆಯನ್ನು ಅಲಂಕರಿಸಬೇಕು. "ನಿಷುಸೀದ ಗಣಪತೇ" ಎಂಬ ಮಂತ್ರದಿಂದ ದೇವರನ್ನು ಪ್ರಾರ್ಥಿಸಬೇಕು.

"ವಿಭ್ವೀ ಮಾತಾ" ಎಂಬ ಮಂತ್ರದಿಂದ ಪೂಜೆಗೆ ಜಗಲಿಯನ್ನು ತಯಾರಿಸಬೇಕು."

ಮನುಷ್ಯಗಂಧ ಆಯಾತಿ ದೇವಸ್ಯ ಕ್ಷಮ್ಯತಾಮಿತಿ |
ತತಃ ಕೃಷ್ಣಾಜಿನಾದ್ಯೇಷು ಆಸನೇಷು ಹ್ಯುದಙ್ಮುಖಃ ||
ಪ್ರಾಙ್ಮುಖೋದಙ್ಮುಖೋ ವಾऽಪಿ ಉಪವಿಶ್ಯಾಹರೇದ್ವಿಜಃ |

"ಮನುಷ್ಯಗಂಧ ಆಯಾತಿ ದೇವಸ್ಯ ಕ್ಷಾಮ್ಯತಾಂ ಪ್ರಭೋ" ಅಂದರೆ "ಮನುಷ್ಯರ ದೇಹದ ದುರ್ವಾಸನೆಯು ಪೂಜೆಯು ಮುಗಿಯುವವರೆಗೂ ಬರುತ್ತದೆ. ಓ ದೇವ, ನೀನು ಕ್ಷಮಿಸು" ಎಂದು ಹೇಳುತ್ತಾ ಉತ್ತರಾಭಿಮುಖನಾಗಲೀ, ಪೂರ್ವಾಭಿಮುಖನಾಗಲೀ ಕೃಷ್ಣಾಜಿನ ಮುಂತಾದವುಗಳ ಮೇಲೆ ಕುಳಿತುಕೊಳ್ಳಬೇಕು.

ಆರಾಧ್ಯಸೇ ಪ್ರಾಣಭೃತಾಂ ಪ್ರಣೇತ್ರಾ ಪ್ರಾಣಾಧಿನಾಥೇನ ಸಮೀರಣೇನ |
ನಾರಾಯಣ ಜ್ಞಾನಸುಖೈಕಪೂರ್ಣ ಸ್ವಾಮಿನ್ ಮಮ ಶ್ರೀರಮಣ ಪ್ರಸೀದ ||
ಇತ್ಯೇವಮಾಸನೇ ಶುದ್ಧೇ ಹ್ಯುಪವಿಶ್ಯ ಯಥಾವಿಧಿ |
ಪೂರ್ವೋಕ್ತೇನ ಪ್ರಕಾರೇಣ ಭೂತೋಚ್ಚಾಟನಮಾಚರೇತ್ ||

"ಆರಾಧ್ಯಸೇ ಪ್ರಾಣಭೃತಾಂ ಪ್ರಣೇತ್ರಾ" ಎಂಬ ಶ್ಲೋಕದಿಂದ ಶ್ರೀಹರಿಯನ್ನು ಪ್ರಾರ್ಥಿಸಬೇಕು. ಅನಂತರದಲ್ಲಿ ಶುದ್ಧವಾದ ಆಸನದಲ್ಲಿ ವಿಧಿಪ್ರಕಾರವಾಗಿ ಕುಳಿತುಕೊಳ್ಳಬೇಕು. ಹಿಂದೆ ಹೇಳಿರುವ ಪ್ರಕಾರದಿಂದ ಭೂತೋಚ್ಚಾಟನವನ್ನು ಮಾಡಬೇಕು."

ವೇದಿಕಾಮಾರಭೇದ್ವಿಪ್ರೋರೇಭ್ಯೋ ಮಾತೇತಿ ಮಂತ್ರತಃ |
ಕುರ್ಯಾದ್ಗುರ್ವಾದಿನಮನಂ ಕರಶುದ್ಧಿಂ ತತಶ್ಚರೇತ್ ||
ಧ್ಯಾತ್ವಾಽಥ ಪಾಪಪುರುಷಂ ಶೋಷಣಂ ದಹನಂ ಪ್ಲವಮ್ |
ಕೃತ್ವಾಽಥ ಮಾತೃಕಾನ್ಯಾಸಂ ಪಂಚಾಂಗನ್ಯಾಸಪೂರ್ವಕಮ್ ||
ತತ್ತ್ವನ್ಯಾಸಂ ತತಃ ಕುರ್ಯಾತ್ ತತ್ರನ್ಮಂತ್ರಾಂಶ್ಚ ಶಕ್ತಿತಃ |
ಜಪಿತ್ವಾ ತು ತತಃ ಸಮ್ಯಕ್ ತಿಥಿವಾರಾನುದೀರ್ಯ ಚ ||
ಮಧ್ವಾಂತಸ್ಥಹರಿಪ್ರೀತ್ಯೈ ತಸ್ಯ ಪ್ರೇರಣಯೇತ್ಯಲಮ್ ||

"ಗುರು ನಮಸ್ಕಾರ" ಮುಂತಾದವುಗಳನ್ನು ಮಾಡಬೇಕು. ಕೈಗಳ ಬೆರಳುಗಳಲ್ಲಿ ನ್ಯಾಸವನ್ನು ಮಾಡಿ ಕರಶುದ್ಧಿಯನ್ನು ಮಾಡಬೇಕು. ಎಡಹೊಟ್ಟೆಯಲ್ಲಿ "ಬ್ರಹ್ಮಹತ್ಯಾಶಿರಸ್ಕಂ ಚ" ಎಂಬ ಮಂತ್ರದಿಂದ ಪಾಪಪುರುಷನನ್ನು ಧ್ಯಾನಿಸಬೇಕು. ನಡುಹೊಟ್ಟೆಯಲ್ಲಿ "ಓಂ ಯಂ" ಎಂಬ ವಾಯುಬೀಜಾಕ್ಷರವನ್ನು ಜಪಿಸುತ್ತಾ ಪಾಪಪುರುಷನನ್ನು ಒಣಗಿಸಬೇಕು. ಎದೆಯಲ್ಲಿ "ಓಂ ರಂ" ಎಂಬ ವಹ್ನಿಬೀಜಾಕ್ಷರವನ್ನು ಜಪಿಸುತ್ತಾ ಪಾಪಪುರುಷನನ್ನು ಸುಡಬೇಕು. "ಓಂ ಯಂ" ಎಂಬ ವಾಯುಬೀಜಾಕ್ಷರವನ್ನು ಜಪಿಸುತ್ತಾ ಎಡಮೂಗಿನ ರಂಧ್ರದಿಂದ ಸುಟ್ಟ ಪಾಪಪುರುಷನ ಬೂದಿಯನ್ನು ಹೊರಪಡಿಸಬೇಕು. "ಓಂ ವಂ" ಎಂಬ ವರುಣ ಬೀಜಾಕ್ಷರವನ್ನು ಜಪಿಸುತ್ತಾ ತಲೆಯಿಂದ ಕಾಲಿನವರೆಗೆ ಅಮೃತವೃಷ್ಟಿಯಿಂದ ದೇಹವನ್ನು ಸ್ನಾನ ಮಾಡಿಸಬೇಕು. ಅನಂತರದಲ್ಲಿ ಪಂಚಾಂಗನ್ಯಾಸವನ್ನು ಮಾಡಿ ಅಂಗಗಳೆಲ್ಲಾ ಶುದ್ಧವಾದಂತೆ ಭಾವಿಸಬೇಕು. ಮಾತೃಕಾನ್ಯಾಸವನ್ನೂ ತತ್ತ್ವನ್ಯಾಸವನ್ನೂ ಮಾಡಬೇಕು. ತನ್ನ ಶಕ್ತ್ಯನುಸಾರವಾಗಿ ಎಲ್ಲಾ ಮಂತ್ರಗಳನ್ನೂ ಜಪಿಸಬೇಕು. ತಿಥಿವಾರ ಮುಂತಾದವುಗಳನ್ನು ಹೇಳಬೇಕು. ಮಧ್ವಾಂತರ್ಗತ ಶ್ರೀಹರಿಯ ಪ್ರೇರಣೆಯಿಂದ ಅವನ ಪ್ರೀತಿಗಾಗಿ ಪೂಜೆಯನ್ನು ಮಾಡುವುದಾಗಿ ಹೇಳಬೇಕು.

ದೇವಪೂಜಾಂ ಕರಿಷ್ಯಾಮಿ ಯಥಾವಿಭವಮಚ್ಯುತ |

ಬ್ರಹ್ಮಪಾರಸ್ತೋತ್ರಮಹಿಮೆ

ಸಂಕಲ್ಪ್ಯ ವಿಧಿವತ್ಪಶ್ಚಾದ್ಬ್ರಹ್ಮಪಾರಸ್ತವಂ ಪಠೇತ್ ||
ಬ್ರಹ್ಮಹತ್ಯಾದಿಪಾಪಾನಾಂ ಯತೋ ನಿಷ್ಕೃತಿಕಾರಣಮ್ |
ಏಕೈಕಬ್ರಹ್ಮಹತ್ಯಾ ಹಿ ವರಾಹಹರಿಣೋಽದಿತಾ ||
ಬ್ರಹ್ಮಪಾರಸ್ತವೇನೈವ ನಿಷ್ಕ್ರಾಂತಾ ತಸ್ಯ ದೇಹತಃ |

ಕೊನೆಗೆ "ಶಕ್ತ್ಯನುಗುಣವಾಗಿ ನಿನ್ನನ್ನು ಪೂಜಿಸುವೆನು." ಎಂದು ಸಂಕಲ್ಪಿಸಬೇಕು.

ಅನಂತರದಲ್ಲಿ ಬ್ರಹ್ಮಪಾರಸ್ತವವನ್ನು ಹೇಳಬೇಕು. ಈ ಬ್ರಹ್ಮಪಾರಸ್ತವವು ಬ್ರಹ್ಮಹತ್ಯಾ ಮುಂತಾದ ಪಾಪಗಳನ್ನು ಪರಿಹರಿಸುವ ಶಕ್ತಿಯಿಂದ ಯುಕ್ತವಾದದ್ದು. ವರಾಹರೂಪಿಯಾದ ಶ್ರೀಹರಿಯು ಒಂದೊಂದು ಬ್ರಹ್ಮಹತ್ಯಾ ದೋಷಗಳನ್ನು ವಿವರಿಸಿ ಹೇಳಿರುವನು. ಬ್ರಹ್ಮಪಾರಸ್ತವದಿಂದಲೇ ಆ ಎಲ್ಲಾ ಬ್ರಹ್ಮಹತ್ಯಾದೋಷಗಳೂ ಪಾಪಿಯ ದೇಹದಿಂದ ಹೊರಗೆ ಹೋದವು.

ಸ್ತೋತ್ರಸ್ಯ ತಸ್ಯ ಮಾಹಾತ್ಮ್ಯಾದ್ವ್ಯಾಧತ್ವಂ ಗಮಿತಾ ಪುನಃ |
ಪ್ರಾಪ್ಯ ಜ್ಞಾನಂ ಪರಂ ಚಾಪಿ ತಥಾಽನ್ಯಾನಪಿ ಸರ್ವತಃ ||
ಬ್ರಹ್ಮಪಾರಸ್ತವಸ್ತಸ್ಮಾನ್ನಿತ್ಯಂ ಪಠ್ಯೋ ಬುಭೂಷುಭಿಃ |

ಬ್ರಹ್ಮಹತ್ಯಾ ಮುಂತಾದ ಪಾಪಗಳನ್ನು ಮಾಡಿರುವ ಪಾಪಿಯು ಬ್ರಹ್ಮಹತ್ಯಾದಿಪಾಪಗಳನ್ನು ಕಳೆದುಕೊಂಡನು ಎಂದು ಹೇಳಿವೆವು. ಅವನು ಮುಂದಿನ ಜನ್ಮದಲ್ಲಿ ಬೇಡನಾಗಿ ಹುಟ್ಟಿದನು. ದಿವ್ಯಜ್ಞಾನವನ್ನು ಪಡೆಯುವನು. ಆ ಜ್ಞಾನದಿಂದ ಮುಕ್ತಿಯನ್ನು ಪಡೆಯುವನು. ಹೀಗೆಯೇ ಇತರ ಪಾಪಿಗಳನ್ನೂ ಈ ಬ್ರಹ್ಮಪಾರಸ್ತವವು ಉದ್ಧರಿಸುತ್ತದೆ. ಆದ್ದರಿಂದ ಶ್ರೇಯಸ್ಸನ್ನು ಬಯಸುವವರು ಬ್ರಹ್ಮಪಾರಸ್ತವವನ್ನು ಪೂಜಾಕಾಲದಲ್ಲಿ ಪಠಿಸಲೇಬೇಕು.

## ಪೂಜಾಕಾಲದಲ್ಲಿ ನಿಯಮಗಳು

ಪೂಜಾಕಾಲೋಕ್ತನಿಯಮೈಸ್ತತಃ ಪೂಜಾಂ ಪ್ರಕಲ್ಪಯೇತ್ |
ನಾತಿದ್ರುತಂ ನಾತಿಮಂದಂ ನೋಚ್ಚೈರ್ಮಂತ್ರಾನುದೀರಯೇತ್ ||
ಅತ್ವರಃ ಸುಮನಾಃ ಕ್ರೋಧಂ ಕಾಮಂ ಹಿತ್ವಾ ಯಜೇತ ಚ |
ನ ಶಬ್ದಯೇತ್ಪಾತ್ರಸಂಘಮಂಬುನಾ ನಾರ್ದ್ರಯೇನ್ಮಹೀಮ್ ||
ನಾಹಂ ಕುರ್ವನ್ನ ಕಲ್ಪಶ್ಚ ಶುದ್ಧಮೌನೇನ ಚಾರ್ಚಯೇತ್ |
ಸ್ಮೃತ್ವಾ ಯಃ ಪೂಜಯೇದ್ವಿಷ್ಣುಂ ಸರ್ವಪಾಪೈಃ ಪ್ರಮುಚ್ಯತೇ ||

"ಪೂಜಾಕಾಲದಲ್ಲಿ ಕೆಲವು ನಿಯಮಗಳು ಹಿಂದೆ ಹೇಳಲ್ಪಟ್ಟಿವೆ. ಈಗಲೂ ಹೇಳಲ್ಪಡುತ್ತವೆ. ಆ ನಿಯಮಗಳಿಂದ ಶ್ರೀಹರಿಯನ್ನು ಪೂಜಿಸಬೇಕು. ಮಂತ್ರಗಳನ್ನು ಅತಿವೇಗವಾಗಿಯೂ, ಅತ್ಯಂತ ನಿಧಾನವಾಗಿಯೂ, ಗಟ್ಟಿಯಾಗಿಯೂ ಹೇಳಕೂಡದು. ತುಂಬಾ ಅವಸರದಿಂದ ಪೂಜೆಯನ್ನು ಮಾಡಕೂಡದು. ಶುದ್ಧವಾದ ಮನಸ್ಸಿನಿಂದ ಪೂಜೆಯನ್ನು ಮಾಡಬೇಕು. ಕೋಪ, ಆಸೆ ಮುಂತಾದವುಗಳಿಂದ ಪೂಜಾಕಾಲದಲ್ಲಿ ಯುಕ್ತನಾಗಿರಕೂಡದು. ಪಾತ್ರಗಳಿಗೆ ಒಂದಕ್ಕೊಂದನ್ನು ತಗಲಿಸಿ ಶಬ್ದವನ್ನು ಮಾಡಕೂಡದು. ನೀರನ್ನು ಚೆಲ್ಲಿ ನೆಲವನ್ನು ಒದ್ದೆ ಮಾಡಕೂಡದು. ಅಹಂಕಾರವು ಬರಬಾರದು. ಅಶಕ್ತಿಯು ಇರಕೂಡದು. ಶುದ್ಧವಾದ ಮೌನದಿಂದ ಶ್ರೀಹರಿಯನ್ನು ಪೂಜಿಸಬೇಕು. ಶ್ರೀಹರಿಯನ್ನು ಸ್ಮರಿಸಿಕೊಂಡು ಯಾವನು ಪೂಜಿಸುವನೋ ಅವನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಪಡೆಯುವನು."

ವನಮಾಲಾಂ ವಿನಾ ಪೂಜಾಂ ವಿಷ್ಣೋಃ ಕುರ್ಯಾದ್ದ್ವಿಜಾಧಮಃ |
ನಿಷ್ಫಲಾ ತು ಭವೇತ್ಪೂಜಾ ಪರತ್ರ ನರಕಂ ವ್ರಜೇತ್ ||
ವಿಶುದ್ಧದಂತವಸನೋ ನಿರ್ಮಲೀಕೃತವಿಗ್ರಹಃ |
ಶುದ್ಧೋ ದಕ್ಷಃ ಪ್ರಸನ್ನಾತ್ಮಾ ಯಥಾಲಬ್ಧೈಃ ಸಮರ್ಚಯೇತ್ ||
ಅಲಾಭೇ ಸರ್ವವಸ್ತೂನಾಮುದಕೇನಾಪಿ ಪೂಜಿತಃ |
ಪ್ರಯಚ್ಛತ್ಯಮಲಾನ್ ಲೋಕಾನ್ ಭಕ್ತಿಪೂತಾಂತರಾತ್ಮನಾಮ್ ||
ಸುಗಂಧದ್ರವ್ಯಸಂಯುಕ್ತಂ ಪವಿತ್ರಗ್ರಂಥಿಸಂಯುತಮ್ |
ನೈವೇದ್ಯಶಂಖಭ್ರಮಣಾದ್ಯರ್ಘೋದಂ ಪೃಥಗುದ್ಧರೇತ್ ||

"ವನಮಾಲೆಯಲ್ಲದೆ ವಿಷ್ಣುವಿನ ಪೂಜೆಯನ್ನು ಮಾಡುವ ದ್ವಿಜಾಧಮನು ಮಾಡಿರುವ ಪೂಜೆಯು ನಿಷ್ಫಲವಾಗುತ್ತದೆ. ಪರಲೋಕದಲ್ಲಿ ಹಾಗೆ ಪೂಜಿಸಿದವನು ನರಕವನ್ನು ಪಡೆಯುವನು. ಪೂಜೆಯನ್ನು ಮಾಡುವವನ ಹಲ್ಲುಗಳೂ, ಬಟ್ಟೆಗಳೂ ಶುದ್ಧವಾಗಿರಬೇಕು. ದೇಹವು ನಿರ್ಮಲವಾಗಿರಬೇಕು. ಶುದ್ಧನಾಗಿ ಮಡಿ ಮಡಿಯಾಗಿರಬೇಕು. ಸಮರ್ಥನಾಗಿರಬೇಕು. ಅವನ ಮನಸ್ಸು ಪ್ರಸನ್ನವಾಗಿರಬೇಕು. ದೇವರು ಕೊಟ್ಟಿರುವ ವಸ್ತುಗಳಿಂದ ಶ್ರೀಹರಿಯನ್ನು ಪೂಜಿಸಬೇಕು. ಯಾವ ವಸ್ತುಗಳೂ ಸಿಗದಿದ್ದರೆ ನೀರನ್ನಾದರೂ ಸಮರ್ಪಿಸಿ ಪೂಜಿಸಬೇಕು. ಭಕ್ತಿಯಿಂದ ಪರಿಶುದ್ಧವಾದ ಮನಸ್ಸಿನಿಂದ ಯುಕ್ತರಾಗಿರುವ ಅವರಿಗೆ

ನಿರ್ಮಲವಾದ ಲೋಕಗಳನ್ನು ಶ್ರೀಹರಿಯು ಕೊಡುವನು. ನೈವೇದ್ಯ ಮತ್ತು ಶಂಖಭ್ರಮಣ ಮುಂತಾದ ಕಾರ್ಯಗಳಿಗಾಗಿ ಪ್ರತ್ಯೇಕವಾಗಿ ನೀರನ್ನು ತೆಗೆದಿಡಬೇಕು. ಆ ನೀರು ಸುಗಂಧದ್ರವ್ಯಗಳಿಂದಲೂ ಪವಿತ್ರಗಂಟಿನಿಂದಲೂ ಯುಕ್ತವಾಗಿರಬೇಕು."

ಗೃಹೀತ್ವಾ ತುಲಸೀಂ ಹಸ್ತೇ ಸೂಕ್ತಂ ಚೇಮಂ ಮ ಇತ್ಯಪಿ |
ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ||
ನರ್ಮದೇ ಸಿಂಧು ಕಾವೇರೀ ಜಲೇಽಸ್ಮಿನ್ ಸನ್ನಿಧಿಂ ಕುರು |
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ||
ಆಯಾಂತು ದೇವಪೂಜಾರ್ಥಮಭಿಷೇಕಾರ್ಥಮಾದರಾತ್ |
ಇತಿ ಮಂತ್ರಾನುದೀರ್ಯಾಥ ಕಲಶೋಪರಿ ತಾಂ ನ್ಯಸೇತ್ ||
ಷಟ್ಕೋಣಮಂಡಲಂ ತತ್ರ ಧ್ಯಾತ್ವಾ ತಾರ್ಕ್ಷ್ಯಾದಿಮುದ್ರಿಕಾಃ |
ದರ್ಶಯೇತ್ತತ್ರ ತಾರ್ಕ್ಷ್ಯಾಖ್ಯಂ ನಿರ್ವಿಷೀಕರಣಾಯ ವೈ ||
ಅಮೃತೀಕರಣಾರ್ಥಾಯ ಧೇನುಮುದ್ರಾಂ ಪ್ರದರ್ಶಯೇತ್ |
ಪವಿತ್ರೀಕರಣಾರ್ಥಾಯ ಶಂಖಮುದ್ರಾಂ ಪ್ರದರ್ಶ್ಯ ಚ ||
ದಿಗ್ಬಂಧನಾರ್ಥಂ ಚ ಗದಾಮುದ್ರಾಂ ಚಕ್ರಾಖ್ಯಮುದ್ರಿಕಾಮ್ |
ಸರ್ವರಕ್ಷಾಕರೀಂ ಬಾಧೋ ತಾಸಾಂ ಪ್ರೋಕ್ತಂ ಚ ಲಕ್ಷಣಮ್ ||

"ತುಳಸಿಯನ್ನು ಬಲಗೈಯಲ್ಲಿ ಹಿಡಿದುಕೊಂಡು ಕಲಶವನ್ನು ಮುಟ್ಟಬೇಕು. "ಇಮಂ ಮೇ ಗಂಗೇ" ಎಂಬ ಋಕ್ಕನ್ನೂ, "ಗಂಗೇ ಚ ಯಮುನೇ" ಮುಂತಾದ ಮಂತ್ರಗಳನ್ನೂ ಹೇಳಬೇಕು. ತುಳಸೀದಳವನ್ನು ಕಲಶದ ಮೇಲೆ ಹಾಕಬೇಕು. ಕಲಶದ ಮೇಲೆ ಷಟ್ಕೋಣ ಮಂಡಲವನ್ನು ತೋರಿಸಬೇಕು. "ತಾರ್ಕ್ಷ್ಯ" ಮುದ್ರೆ ಮುಂತಾದ ಮುದ್ರೆಗಳನ್ನು ತೋರಿಸಬೇಕು. ತಾರ್ಕ್ಷ್ಯಮುದ್ರೆ ಮುಂತಾದ ಮುದ್ರೆಗಳ ಲಕ್ಷಣಗಳು ಪಂಚರಾತ್ರಾಗಮ ಮುಂತಾದ ಆಗಮಗಳಲ್ಲಿ ಹೇಳಲ್ಪಟ್ಟಿವೆ. ಆ ಆಗಮಗಳಿಂದ ತಾರ್ಕ್ಷ್ಯಮುದ್ರೆ ಮುಂತಾದ ಮುದ್ರೆಗಳ ಲಕ್ಷಣಗಳನ್ನು ತಿಳಿಯಬೇಕು. ವಿಷಪರಿಹಾರಕ್ಕಾಗಿ ತಾರ್ಕ್ಷ್ಯಮುದ್ರೆ, ಅಮೃತದಂತೆ ಮಾಡುವುದಕ್ಕಾಗಿ ಧೇನುಮುದ್ರೆ, ಪವಿತ್ರವಾಗಿ ಮಾಡುವುದಕ್ಕಾಗಿ ಶಂಖಮುದ್ರೆ, ದಿಗ್ಬಂಧನಕ್ಕಾಗಿ ಗದಾಮುದ್ರೆ, ಎಲ್ಲಾ ದಿಕ್ಕುಗಳಿಂದಲೂ ರಕ್ಷಣೆಗಾಗಿ ಸರ್ವರಕ್ಷಾಕರವಾದ ಚಕ್ರಮುದ್ರೆ ಎಂಬ ಈ ಮುದ್ರೆಗಳನ್ನು ತೋರಿಸಬೇಕು.

ತತಃ ಕರೇ ಚಂದ್ರಬಿಂಬಂ ಧ್ಯಾತ್ವಾ ವಿಷ್ಣುಂ ತಥೈವ ಚ |
ತನ್ಮುಖಂ ಸಂಸ್ಪೃಶೇದಷ್ಟವಾರಂ ಮೂಲಂ ಜಪೇನ್ಮನುಮ್ ||

"ಅನಂತರದಲ್ಲಿ ಕೈಯಲ್ಲಿ ಚಂದ್ರನನ್ನೂ, ಅವನಲ್ಲಿ ವಿಷ್ಣುವನ್ನೂ ಧ್ಯಾನಿಸುತ್ತಾ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರವನ್ನು ಜಪಿಸುತ್ತಾ ಕಲಶದ ಮುಖವನ್ನು ಮುಟ್ಟಬೇಕು."

ತತಃ ಕುಂಭಸ್ಯ ಮಧ್ಯೇ ತು ಪೀಠಪೂಜಾಂ ಸಮಾಚರೇತ್ |

"ಅನಂತರದಲ್ಲಿ ಕಲಶದ ಮಧ್ಯದಲ್ಲಿ ಪೀಠಪೂಜೆಯನ್ನು ಮಾಡಬೇಕು."

ಏಕಪಂಚಾಶದ್ವರ್ಣಾನಾಂ ಚತುರ್ವಿಂಶತಿಮೂರ್ತಯಃ |
ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯಕಚ್ಛಪೌ ||
ಕೋಲೋ ನೃಸಿಂಹಃ ಸವಟುರ್ಜಾಮದಗ್ನ್ಯರಘೂದ್ವಹೌ |
ವಾಸಿಷ್ಠಯಾದವೌ ಕೃಷ್ಣಾವಾತ್ರೇಯೋ ಬುದ್ಧಕಲ್ಕಿನೌ ||

ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶದೇವತಾಃ |
ಏತಾಭಿಃ ಸಹಿತಾಂ ಮೂಲಮೂರ್ತಿಂ ಕುಂಭೋದಕೇ ಸ್ಮರೇತ್ ||

"ಅ"ಕಾರದಿಂದ ಆರಂಭಿಸಿ "ಳ"ಕಾರದವರೆಗಿರುವ ಐವತ್ತು ವರ್ಣಗಳಿಗೆ ಅಭಿಮಾನಿಗಳಾಗಿರುವ "ಅಜ" ಮುಂತಾದ ಐವತ್ತು ಭಗವನ್ಮೂರ್ತಿಗಳನ್ನೂ, "ಕ್ಷ"ಕಾರಕ್ಕೆ ಅಭಿಮಾನಿಯಾಗಿರುವ ನರಸಿಂಹನ್ನೂ, "ಕೇಶವ" ಮುಂತಾದ ಇಪ್ಪತ್ತನಾಲ್ಕು ಭಗವನ್ಮೂರ್ತಿಗಳನ್ನೂ, "ಆತ್ಮ" ಮುಂತಾದ ನಾಲ್ಕು ಭಗವನ್ಮೂರ್ತಿಗಳನ್ನೂ "ವಾಸುದೇವ" ಮುಂತಾದ ನಾಲ್ಕು ಭಗವನ್ಮೂರ್ತಿಗಳನ್ನೂ, "ವಿಶ್ವ" ಮುಂತಾದ ನಾಲ್ಕು ಭಗವನ್ಮೂರ್ತಿಗಳನ್ನೂ, ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ದಾಶರಥಿರಾಮ, ವೇದವ್ಯಾಸ, ಶ್ರೀಕೃಷ್ಣ, ದತ್ತಾತ್ರೇಯ, ಬುದ್ಧ, ಕಲ್ಕಿ, ಶಿಂಶುಮಾರ ಎಂಬ ಹದಿಮೂರು ಭಗವನ್ಮೂರ್ತಿಗಳನ್ನೂ ಕಲಶದಲ್ಲಿ ಆವಾಹಿಸಬೇಕು. ಈ ಭಗವನ್ಮೂರ್ತಿಗಳಿಂದ ಸಹಿತವಾಗಿರುವ ಮೂಲಮೂರ್ತಿಯಾಗಿರುವ ನಾರಾಯಣನನ್ನು ಕಲಶದಲ್ಲಿ ಸ್ಮರಿಸಬೇಕು.

ಆವಾಹಿತಾನಾಂ ಮೂರ್ತೀನಾಮುಪಚಾರಾನ್ ಪ್ರಕಲ್ಪಯೇತ್ |
ತತಃ ಕುಂಭಸ್ಥಿತಂ ವಿಷ್ಣುಂ ಪ್ರಾರ್ಥಯೇತ್ಸುಸಮಾಹಿತಃ ||

ಆವಾಹಿಸಲ್ಪಟ್ಟ "ಅಜ" ಮುಂತಾದ ಎಲ್ಲಾ ಮೂರ್ತಿಗಳಿಗೂ ಉಪಚಾರಗಳನ್ನು ಮಾಡಬೇಕು. ಅನಂತರದಲ್ಲಿ ಕಲಶದಲ್ಲಿರುವ ಶ್ರೀಹರಿಯನ್ನು ಏಕಾಗ್ರಚಿತ್ತದಿಂದ ಪ್ರಾರ್ಥಿಸಬೇಕು.

ಕಲಶಃ ಕೀರ್ತಿಮಾಯುಷ್ಯಂ ಪ್ರಜ್ಞಾಂ ಮೇಧಾಂ ಶ್ರಿಯಂ ಭಗಮ್ |
ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಸಾಧಯೇತ್ ||
ಸರ್ವಕ್ಷೇತ್ರಮಯೋ ಯಸ್ಮಾತ್ಸರ್ವತೀರ್ಥಮಯೋ ಯತಃ |
ಅತೋ ಹರಿಪ್ರಿಯೋಽಸಿ ತ್ವಂ ಪೂರ್ಣಕುಂಭ ನಮೋಽಸ್ತು ತೇ ||

"ಎಲೈ ಪೂರ್ಣಕುಂಭವೇ, ನೀನು ಸರ್ವಕ್ಷೇತ್ರಗಳ ಮತ್ತು ಸರ್ವತೀರ್ಥಗಳ ಸನ್ನಿಧಾನಪಾತ್ರನಾಗಿರುವಿ. ಆದ್ದರಿಂದ ಶ್ರೀಹರಿಯ ವಿಶೇಷಪ್ರೀತಿಗೆ ಪಾತ್ರನಾಗಿರುವಿ. ನೀನು ಕೀರ್ತಿಯನ್ನೂ, ಆಯುಸ್ಸನ್ನೂ, ಜ್ಞಾನವನ್ನೂ, ಬುದ್ಧಿಶಕ್ತಿಯನ್ನೂ, ಸಂಪತ್ತನ್ನೂ, ಎಲ್ಲಾ ಭಾಗ್ಯಗಳನ್ನೂ, ಯೋಗ್ಯತೆಯನ್ನೂ, ಪಾಪಹಾನಿಯನ್ನೂ, ಪುಣ್ಯವೃದ್ಧಿಯನ್ನೂ ಕೊಡುತ್ತಿರುವಿ. ಓ ಪೂರ್ಣಕುಂಭವೇ, ನಿನ್ನನ್ನು ನಮಸ್ಕರಿಸುವೆವು.

### ಶಂಖಪೂಜಾ

ಇತಿ ಸಂಪ್ರಾರ್ಥ್ಯ ಕಲಶಂ ಶಂಖಪೂಜಾಂ ತತಶ್ಚರೇತ್ |
ಶಂಖಂ ಚ ಪೂರಯೇತ್ತೋಯೈರ್ಜಪೇದೇತೇಷು ಪೂರ್ವವತ್ ||
ಶಂಖಪಾದ್ಯಾದಿಪಾತ್ರೇಷು ಕುಂಭತೋಯಂ ವಿನಿಕ್ಷಿಪೇತ್ |

ಹಿಂದೆ ಹೇಳಿದಂತೆ ಕಲಶವನ್ನು ಪ್ರಾರ್ಥಿಸಬೇಕು. ಅನಂತರದಲ್ಲಿ ಶಂಖಪೂಜೆಯನ್ನು ಮಾಡಬೇಕು. ಕಲಶದಲ್ಲಿರುವ ನೀರನ್ನು ಶಂಖದಲ್ಲಿ ತುಂಬಿಸಬೇಕು. ಆ ನೀರುಗಳಲ್ಲಿ ಹಿಂದಿನಂತೆ ಜಪವನ್ನು ಮಾಡಬೇಕು. ಇದರಂತೆ ಪಾದ್ಯ ಮುಂತಾದ ಪಾತ್ರೆಗಳಲ್ಲಿ ಕಲಶದ ನೀರನ್ನು ತುಂಬಿಸಬೇಕು.

### ಪೂಜಾಯೋಗ್ಯಶಂಖ

ಸುಶ್ವೇತಃ ಪುಂಶಿಖರಃ ಸ್ನಿಗ್ಧೋ ದೀರ್ಘಾಂಬುಪದ್ಧತಿಃ |
ಶಂಖಃ ಸ್ಯಾದರ್ಚನೇ ಯೋಗ್ಯೋ ಯೋ ಸವಲ್ಲೀಕಚಕ್ಷುಷಃ ||

ತುಂಬಾ ಬಿಳಿಯಬಣ್ಣ, ಹಿಂಭಾಗದಲ್ಲಿ ಶಿಖರದ ಆಕಾರ, ಫಳಫಳ ಹೊಳೆಯುವಿಕೆ, ದೀರ್ಘವಾದ ನೀರು ಹೋಗುವ ಪ್ರದೇಶ, ಬಳ್ಳಿಯಿಂದ ಯುಕ್ತವಾದ ಕಣ್ಣುಗಳು ಇವುಗಳಿಂದ ಯುಕ್ತವಾದ ಶಂಖವು ಪೂಜೆಗೆ ಯೋಗ್ಯವೆನಿಸುತ್ತದೆ.

### ಪೂಜೆಗೆ ಯೋಗ್ಯವಲ್ಲದ ಶಂಖ

ನಿಲೀನೋ ನಿಮ್ನಶಿಖರಃ ಸರಕ್ತಕ್ರಿಮಿದಷ್ಟಕಃ |
ಹ್ರಸ್ವಃ ಪ್ರವಾಳಿಕಃ ಶಂಖೋ ನ ಸ್ಯಾದ್ಯೋಗ್ಯಃ ಸುರಾರ್ಚನೇ ||

ಆಳವಾಗಿರುವ ಶಿಖರವಿಲ್ಲದ, ಕ್ರಿಮಿಗಳಿಂದ ಕಡಿಯಲ್ಪಟ್ಟ, ಹ್ರಸ್ವವಾಗಿರುವ, ಬಳ್ಳಿಗಳಿಂದ ಯುಕ್ತವಾಗಿರುವ ಶಂಖವು ದೇವತೆಗಳನ್ನು ಪೂಜಿಸುವುದಕ್ಕೆ ಯೋಗ್ಯವಲ್ಲ.

### ಬಂಗಾರ ಮುಂತಾದ ಕಟ್ಟುಹಾಕಿದ ಶಂಖಗಳಿಗೆ ದೋಷವಿಲ್ಲ

ತಾಮ್ರಸ್ಫಟಿಕಯುಕ್ತೇಷು ಸುವರ್ಣಕಲಧೌತಯೋಃ |
ನ ವಿದ್ಯತೇ ಭಿನ್ನದೋಷಃ ದ್ರವ್ಯೇಷ್ವಂ ನೈವ ವಿದ್ಯತೇ ||

ತಾಮ್ರ, ಸ್ಫಟಿಕ, ಬಂಗಾರ, ಬೆಳ್ಳಿ ಇವುಗಳಿಂದ ಕಟ್ಟು ಹಾಕಿರುವ ಶಂಖಗಳು ಭಿನ್ನವಾಗಿದ್ದರೂ ದೋಷವಿಲ್ಲ. ಕಟ್ಟುಹಾಕುವ ದ್ರವ್ಯಗಳಲ್ಲಿ ಇದೇ ದ್ರವ್ಯ ಎಂಬ ನಿಯಮವಿಲ್ಲ.

### ಶಂಖದ ಬೆನ್ನಿನ ನೀರು ಪೂಜೆಗೆ ಯೋಗ್ಯವಲ್ಲ

ಶಂಖಸ್ಯ ಪೃಷ್ಠಸಂಸ್ಪೃಷ್ಟಂ ಪಯಃ ಪಾಪಹರಂ ಧ್ರುವಮ್ |
ತೇನ ನ ಸ್ನಾಪಯೇದ್ವಿಷ್ಣುಪೂಜನಾತ್ಪಾಪಸಂಭವಮ್ ||

ಶಂಖದ ಬೆನ್ನನ್ನು ಮುಟ್ಟಿರುವ ನೀರು ನಿಶ್ಚಯವಾಗಿಯೂ ಪಾಪವನ್ನು ಪರಿಹರಿಸುತ್ತದೆ. ಆ ನೀರಿನಿಂದ ಶ್ರೀಹರಿಗೆ ಅಭಿಷೇಕವನ್ನು ಮಾಡಕೂಡದು. ಹಾಗೆ ಮಾಡಿದರೆ ಪಾಪವು ಬರುತ್ತದೆ.

### ಶಂಖದಲ್ಲಿರುವ ನೀರನ್ನು ಕುಡಿಯಬಾರದು

ಶಂಖಸ್ಥಮುದಕಂ ನೈವ ಪಾತುಂ ಯೋಗ್ಯಂ ಕಥಂಚನ |
ನ ತೇನಾರ್ಘ್ಯಂ ನ ಪಾದ್ಯಂ ಸ್ಯಾದಾಚಾಂತಂ ಮಧುಪರ್ಕಕಮ್ ||
ನ ನೈವೇದ್ಯಂ ಸುಧೀಃ ಕುರ್ಯಾದೇಷ ಧರ್ಮಃ ಸನಾತನಃ |
ನ ಶಂಖಸ್ಥಂ ಪಿಬೇತ್ತೋಯಂ ನ ಚ ಭೂಮೌ ವಿನಿಕ್ಷಿಪೇತ್ ||
ನ ಪ್ರೋಕ್ಷಯೇಚ್ಚ ನೈವೇದ್ಯಂ ಭುಂಜಾನಸ್ತ್ವಘವಾನ್ ಭವೇತ್ |
ಯಸ್ತು ಶಂಖಂ ಭುವಿ ಸ್ಥಾಪ್ಯ ಪೂಜಯೇನ್ಮಧುಸೂದನಮ್ ||
ತಸ್ಯ ಪೂಜಾಂ ನ ಗೃಹ್ಣಾತಿ ತಸ್ಮಾತ್ಪೀಠಂ ಪ್ರಕಲ್ಪಯೇತ್ |

"ಶಂಖದಲ್ಲಿರುವ ನೀರು ಕುಡಿಯುವುದಕ್ಕೆ ಯಾವ ವಿಧದಿಂದಲೂ ಯೋಗ್ಯವಲ್ಲ. ಶಂಖದಲ್ಲಿರುವ ನೀರಿನಿಂದ ಅರ್ಘ್ಯವನ್ನಾಗಲೀ ಪಾದ್ಯವನ್ನಾಗಲೀ ಆಚಮನೀಯವನ್ನಾಗಲೀ ಮಧುಪರ್ಕವನ್ನಾಗಲೀ ನೈವೇದ್ಯವನ್ನಾಗಲೀ ಮಾಡಕೂಡದು. ಶಂಖದಲ್ಲಿರುವ ನೀರನ್ನು ಕುಡಿಯಬಾರದು. ಭೂಮಿಯಲ್ಲಿ ಚೆಲ್ಲಲೂಬಾರದು. ನೈವೇದ್ಯವನ್ನು ಶಂಖದಲ್ಲಿರುವ ಜಲದಿಂದ ಪ್ರೋಕ್ಷಿಸಬಾರದು. ಶಂಖದಿಂದ ಪ್ರೋಕ್ಷಿಸಲ್ಪಟ್ಟ ನೈವೇದ್ಯವನ್ನು ತಿನ್ನುವವನು ಪಾಪವನ್ನು ಸಂಪಾದಿಸುವನು. ಶಂಖವನ್ನು ನೆಲದಲ್ಲಿಟ್ಟು ಶ್ರೀಹರಿಯನ್ನು ಪೂಜಿಸುವವನ ಪೂಜೆಯನ್ನು ಶ್ರೀಹರಿಯು ಸ್ವೀಕರಿಸುವುದಿಲ್ಲ. ಆದ್ದರಿಂದ ಶಂಖಕ್ಕೆ ಪೀಠವನ್ನು ತಯಾರಿಸಬೇಕು.

ಶಂಖಪೂಜಾಕ್ರಮ

ಪೀಠಸ್ಥ ಶಂಖೇ ಕಂ ಪೂರ್ಯ ಗಾಯತ್ರ್ಯಾ ವಿಷ್ಣುಸಂಜ್ಞಯಾ |
ತುಲಸೀಂ ನಿಧಾಯ ತಾರ್ಕ್ಷ್ಯಾದಿಪಂಚಮುದ್ರಾಃ ಪ್ರದರ್ಶಯೇತ್ ||
ಸ್ಪೃಷ್ಟ್ವಾ ತಂ ಮೂಲಮಂತ್ರಂ ತು ದ್ವಿಷಡ್ವಾರಂ ಜಪೇತ್ತತಃ |

ಕೆಳಗೆ ಶಂಖದ ಪೀಠವನ್ನೂ ಇಡಬೇಕು. ಶಂಖದಲ್ಲಿ ವಿಷ್ಣುಗಾಯತ್ರೀಮಂತ್ರದಿಂದ ಜಲವನ್ನು ತುಂಬಿಸಬೇಕು. ತುಲಸಿಯನ್ನು ಇಡಬೇಕು. ತಾರ್ಕ್ಷ್ಯಮುದ್ರೆ ಮುಂತಾದ ಐದು ಮುದ್ರೆಗಳನ್ನು ತೋರಿಸಬೇಕು. ಕೈಯಿಂದ ಶಂಖವನ್ನು ಮುಟ್ಟಬೇಕು. "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ಹನ್ನೆರಡು ಸಲ ಜಪಿಸಬೇಕು.

ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ |
ನಮಿತಃ ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತು ತೇ ||
ಗರ್ಭಾ ದೇವಾರಿನಾರೀಣಾಂ ವಿಶೀರ್ಯಂತೇ ಸಹಸ್ರಧಾ |
ತವ ನಾದೇನ ಪಾತಾಲೇ ಪಾಂಚಜನ್ಯ ನಮೋಽಸ್ತು ತೇ ||
ದರ್ಶನೇನ ಹಿ ಶಂಖಸ್ಯ ಕಿಂ ಪುನಃ ಸ್ಪರ್ಶನೇನ ತು ||
ವಿಲಯಂ ಯಾಂತಿ ಪಾಪಾನಿ ಹಿಮವದ್ಭಾಸ್ಕರೋದಯೇ |
ಇತಿ ಶಂಖಂ ಸಮಭ್ಯರ್ಚ್ಯ ತತ್ರ ಸಂಸ್ಥಜಲೇನ ತು ||
ತುಲಸ್ಯಾ ಮೂಲಮಂತ್ರೇಣ ಪೂಜಾಸಾಧನವಸ್ತುಷು |
ಪ್ರೋಕ್ಷ್ಯಾಥ ಪಂಚಪಾತ್ರಾಣಾಂ ಪೂಜಾಂ ತತ್ರ ಪ್ರಕಲ್ಪಯೇತ್ ||

"ತ್ವಂ ಪುರಾ ಸಾಗರೋತ್ಪನ್ನಃ" ಅಂದರೆ ಎಲೈ ಪಾಂಚಜನ್ಯ ಶಂಖವೇ, ನೀನು ಪೂರ್ವದಲ್ಲಿ ಸಮುದ್ರದಿಂದ ಹುಟ್ಟಿದಿ. ವಿಷ್ಣುವು ನಿನ್ನನ್ನು ಕೈಯಲ್ಲಿ ಧರಿಸಿದನು. ಎಲ್ಲಾ ದೇವತೆಗಳೂ ನಿನ್ನನ್ನು ನಮಸ್ಕರಿಸಿದರು. ನಿನ್ನ ಧ್ವನಿಯಿಂದ ಪಾತಾಳದಲ್ಲಿರುವ ದೈತ್ಯಸ್ತ್ರೀಯರ ಗರ್ಭಗಳು ಸಾವಿರ ಹೋಳಾಗಿ ಛಿನ್ನಭಿನ್ನವಾಗುತ್ತಿವೆ. ಶಂಖವನ್ನು ನೋಡಿದ ಕೂಡಲೇ ಸೂರ್ಯೋದಯಾನಂತರದಲ್ಲಿ ಮಂಜುಗಡ್ಡೆಯು ಕರಗಿದಂತೆ ಪಾಪಗಳೆಲ್ಲವೂ ಕರಗುತ್ತವೆ. ಹೀಗಿರುವಾಗ ನಿನ್ನ ಸ್ಪರ್ಶದಿಂದ ಪಾಪಗಳೆಲ್ಲವೂ ಕರಗುತ್ತವೆ ಎಂದು ಹೇಳಬೇಕಾದ್ದೇನಿದೆ? ಎಂದು ಪ್ರಾರ್ಥಿಸಬೇಕು. ಹೀಗೆ ಶಂಖಪೂಜೆಯನ್ನು ಮಾಡಿ ಶಂಖದಲ್ಲಿರುವ ನೀರಿನಿಂದ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ಪೂಜಾಸಾಧನವಾದ ವಸ್ತುಗಳ ಮೇಲೆ ಪ್ರೋಕ್ಷಿಸಬೇಕು. ಅನಂತರದಲ್ಲಿ ಪಂಚಪಾತ್ರಪೂಜೆಯನ್ನು ಮಾಡಬೇಕು.

ಪಂಚಪಾತ್ರಪೂಜಾಕ್ರಮ

ಲೋಹವರ್ಜಾಣಿ ಪಾತ್ರಾಣಿ ಯಥಾವಿತ್ತಾನುಸಾರತಃ |
ಅರ್ಘ್ಯಂ ವಾಯುಪದೇ ಸ್ಥಾಪ್ಯಂ ನೈಋತ್ಯಾಂ ಪಾದ್ಯಮೇವ ಚ ||
ಈಶೇ ತ್ವಾಚಮನೀಯಂ ಚ ಸ್ನಾನೀಯಂ ಚಾಗ್ನಿಕೋಣಕೇ |
ಮಧ್ಯೇ ಶುದ್ಧೋದಕಂ ಪಾತ್ರಂ ಪುರಸ್ತಾನ್ಮಧುಪರ್ಕಕಮ್ ||
ದೇವಸ್ಯ ದಕ್ಷಿಣೇ ಭಾಗೇ ಪಾನೀಯಾದಿಕಮುಚ್ಯತೇ |
ಪೂರಯಿತ್ವಾ ಪಲಾರ್ಧಂ ತು ಜಲಂ ಪಾತ್ರಂ ಸಪುಷ್ಪಕಮ್ ||
ದ್ರವ್ಯಾಣಾಮಪ್ಯಭಾವೇ ತು ಪ್ರಕ್ಷಿಪೇತ್ತುಲಸೀಮಪಿ |

"ಕಬ್ಬಿಣವನ್ನು ಬಿಟ್ಟು ಇತರ ಪಂಚಲೋಹಗಳಿಂದ ಪಾತ್ರೆಗಳನ್ನು ಮಾಡಿಸಬೇಕು. ಆ ಪಾತ್ರೆಗಳ ಮಧ್ಯದಲ್ಲಿ ಅರ್ಘ್ಯಪಾತ್ರೆಯನ್ನು ವಾಯವ್ಯದಿಕ್ಕಿನಲ್ಲಿಯೂ, ಪಾದ್ಯಪಾತ್ರೆಯನ್ನು ನೈಋತ್ಯದಿಕ್ಕಿನಲ್ಲಿಯೂ, ಆಚಮನೀಯ ಪಾತ್ರೆಯನ್ನು ಈಶಾನ್ಯದಿಕ್ಕಿನಲ್ಲಿಯೂ, ಆಗ್ನೇಯದಿಕ್ಕಿನಲ್ಲಿ ಸ್ನಾನೀಯಪಾತ್ರೆಯನ್ನೂ, ಮಧ್ಯದಲ್ಲಿ ಶುದ್ಧೋದಕಪಾತ್ರೆಯನ್ನೂ, ಮುಂಭಾಗದಲ್ಲಿ ಮಧುಪರ್ಕಪಾತ್ರೆಯನ್ನೂ, ದೇವರ ಬಲಭಾಗದಲ್ಲಿ ಪಾನೀಯ ಮುಂತಾದವುಗಳ ಪಾತ್ರೆಗಳನ್ನೂ ಇಡಬೇಕು. ಆ ಒಂದೊಂದು ಪಾತ್ರೆಗಳಲ್ಲಿಯೂ ಒಂದುನೂರ ಅರವತ್ತು ಗುಲಗಂಜಿಯಷ್ಟು ಭಾರದಿಂದ ಯುಕ್ತವಾಗಿರುವಷ್ಟು ನೀರುಗಳನ್ನು ಪುಷ್ಪಸಹಿತವಾಗಿ ತುಂಬಿಸಬೇಕು. ಆಯಾಯಾ ಪಾತ್ರೆಗಳಲ್ಲಿ ತುಂಬಿಸಬೇಕಾದ ದ್ರವ್ಯಗಳಿಲ್ಲದಿದ್ದರೆ ತುಳಸೀದಲವನ್ನು ಹಾಕಿ ನೀರನ್ನು ಹಾಕಬೇಕು."

### ಮಧುಪರ್ಕ ಸಾಮಾನುಗಳು

"ಸಕ್ಕರೆ, ಮೊಸರು, ಜೇನುತುಪ್ಪ, ತುಪ್ಪ ಈ ನಾಲ್ಕು ಪದಾರ್ಥಗಳನ್ನು ಒಟ್ಟುಗೂಡಿಸಿದರೆ ಮಧುಪರ್ಕವೆನಿಸುತ್ತದೆ."

### ಅರ್ಘ್ಯಾದಿಗಳಿಗೆ ಅಭಿಮಾನಿ ದೇವತೆಗಳು

ಅರ್ಘ್ಯಸ್ಯ ದೇವತಾ ಲಕ್ಷ್ಮೀಃ ಪಿತರಃ ಪಾದ್ಯದೇವತಾಃ |
ಆಚಾಮೇ ಚ ರತಿರ್ದೇವೀ ಸ್ನಾನಸ್ಯ ವರುಣಸ್ತಥಾ ||
ನಾರಾಯಣಃ ಪ್ರೋಕ್ಷಣೀಯೇ ಮ್ಯಧ್ಯಸ್ಥೇ ಮಧುಪರ್ಕಕೇ |
ತತ್ರ ದೇವಾನಥಾವಾಹ್ಯ ನಿಧಾಯ ತುಲಸೀದಲಮ್ ||
ಧೇನುಮುದ್ರಾಂ ಪ್ರದರ್ಶ್ಯಾಥ ಪೀಠಪೂಜಾಂ ಪ್ರಕಲ್ಪಯೇತ್ |

ಅರ್ಘ್ಯಕ್ಕೆ ಮಹಾಲಕ್ಷ್ಮೀದೇವಿಯೂ ಪಾದ್ಯಕ್ಕೆ ಪಿತೃಗಳೂ ಆಚಮನಕ್ಕೆ ರತಿದೇವಿಯೂ ಸ್ನಾನಜಲಕ್ಕೆ ವರುಣನೂ ಪ್ರೋಕ್ಷಣೀಯಜಲಕ್ಕೂ ಮಧುಪರ್ಕಕ್ಕೂ ನಾರಾಯಣನೂ ಅಭಿಮಾನೀದೇವತೆಗಳು. ಆಯಾಯಾ ಪಾತ್ರೆಗಳಲ್ಲಿ ಅಭಿಮಾನಿ ದೇವತೆಗಳನ್ನು ಆವಾಹನೆ ಮಾಡಿ ಎಲ್ಲಾ ಪಾತ್ರೆಗಳಲ್ಲಿಯೂ ತುಳಸೀದಲವನ್ನು ಹಾಕಿ ಧೇನುಮುದ್ರೆಯನ್ನು ತೋರಿಸಬೇಕು. ಅನಂತರದಲ್ಲಿ ಪೀಠಪೂಜೆಯನ್ನು ಮಾಡಬೇಕು.

### ಪೀಠಪೂಜಾ

ಅಷ್ಟಾಕ್ಷರೇಣ ಸಂಪೂಜ್ಯ ಪ್ರಥಮಂ ದೇವತಾಂ ಪರಾಮ್ |
ಮಧ್ಯೇ ಸವ್ಯೇ ಗುರೂಂಶ್ಚೈವ ದಕ್ಷಿಣೇ ಸರ್ವದೇವತಾಃ ||
ಪುನಃ ಸವ್ಯೇ ಸರ್ವಗುರೂನಾಗ್ನೇಯಾದಿಷು ಚ ಕ್ರಮಾತ್ |
ಗರುಡಂ ವ್ಯಾಸದೇವಂ ಚ ದುರ್ಗಾಂ ಚೈವ ಸರಸ್ವತೀಮ್ ||
ಧರ್ಮಂ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚೈವ ಕೋಣಗಾನ್ |
ತದಂತಃ ಪೂರ್ವದಿಕ್ಪೂರ್ವಮಧರ್ಮಾದೀಂಶ್ಚ ಪೂಜಯೇತ್ ||
ಅಪೂಜಿತಾ ಅಧರ್ಮಾದಿದಾತಾರಸ್ತೇ ತಥಾಭಿಧಾಃ |
ನಿರ್ಋತಿಶ್ಚೈವ ದುರ್ಗಾ ಚ ಕಾಮೋ ರುದ್ರಶ್ಚ ದೇವತಾಃ ||
ಯಮವಾಯುಶಿವೇಂದ್ರಾಶ್ಚ ಜ್ಞೇಯಾ ಧರ್ಮಾದಿದೇವತಾಃ |
ಪರಮಃ ಪುರುಷೋ ಮಧ್ಯೇ ಶಕ್ತಿರಾಧಾರರೂಪಿಣೀ ||

ಕೂರ್ಮೋಽನಂತಶ್ಚ ಪೃಥಿವೀ ಕ್ಷೀರಸಾಗರ ಏವ ಚ |
ಶ್ವೇತದ್ವೀಪೋ ಮಂಟಪಶ್ಚ ದಿವ್ಯರತ್ನಮಯೋ ಮಹಾನ್ ||
ಪದ್ಮಮೇತತ್ತ್ರಯಂ ದೇವೀ ರಮ್ಯೈವ ಬಹುರೂಪಿಣೀ |
ಸೂರ್ಯಸೋಮಹುತಾಶಾಶ್ಚ ಪದ್ಮೇ ಶ್ರೀಸ್ತ್ರಿಗುಣಾತ್ಮಿಕಾ ||
ಆತ್ಮಾಂತರಾತ್ಮಪರಮಜ್ಞಾನಾತ್ಮಾನಶ್ಚ ಮೂರ್ತಯಃ |
ವಿಮಲೋತ್ಕರ್ಷಿಣೀ ಜ್ಞಾನಕ್ರಿಯಾಯೋಗಾ ತಥೈವ ಚ ||
ಪ್ರಹ್ವೀಸತ್ಯಾ ತಥೇಶಾನಾನುಗ್ರಹಾ ಚೇತಿ ಶಕ್ತಯಃ |
ಅಷ್ಟದಿಕ್ಷು ಚ ಮಧ್ಯೇ ಚ ಸ್ವರೂಪಾಣ್ಯೇನ ತಾ ಹರೇಃ ||
ತತೋಽನಂತಂ ಯೋಗಪೀಠಸ್ವರೂಪಂ ಪೂಜಯೇದ್ಧರೇಃ |

ಪೀಠವನ್ನು ಸ್ಥಾಪಿಸುವ ಸ್ಥಳದಲ್ಲಿ ಮಧ್ಯಪ್ರದೇಶದಲ್ಲಿ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ನಾರಾಯಣನನ್ನು ಆವಾಹಿಸಬೇಕು. ನಾರಾಯಣನ ಎಡಭಾಗದಲ್ಲಿ ಪೀಠಕ್ಕಿಂತ ಹೊರಗೆ ಸರ್ವರಿಗೂ ಗುರುಗಳಾಗಿರುವ ಮುಖ್ಯಪ್ರಾಣದೇವರನ್ನು ಆವಾಹಿಸಬೇಕು. ಬಲಭಾಗದಲ್ಲಿ ಸರ್ವರಿಗೂ ದೇವತೆಗಳಾಗಿರುವ ಬ್ರಹ್ಮ, ವಿಷ್ಣು, ರುದ್ರರನ್ನು ಆವಾಹಿಸಬೇಕು. ಪುನಃ ಎಡಭಾಗದಲ್ಲಿ ಸನಕ, ಸನತ್ಕುಮಾರ, ಸನಂದನ, ಸನಾತನ ಎಂಬ ಸರ್ವರಿಗೂ ಗುರುಗಳನ್ನೂ, ತತ್ತ್ವೋಪದೇಶಕರಾಗಿರುವ ಗುರುಗಳನ್ನೂ ಆವಾಹಿಸಬೇಕು. ಹೀಗೆ ಗುರುಗಳನ್ನು ಪೂಜಿಸಿ ಅವರಿಂದ ಅನುಜ್ಞೆಯನ್ನು ಪಡೆಯಬೇಕು. ಇದು ಪೀಠಪೂಜಾಂಗಗುರುಪೂಜೆಯೆನಿಸುತ್ತದೆ.

ಇನ್ನು ಮುಂದೆ ಪೀಠದ ಪಾದದ ಕೆಳಗಿರುವ ದೇವತೆಗಳನ್ನು ಕ್ರಮವಾಗಿ ಪೂಜಿಸಬೇಕು. ಪ್ರಧಾನದೇವತೆಯಾಗಿರುವ ನಾರಾಯಣನಿಗೂ, ತನಗೂ ಮಧ್ಯದಲ್ಲಿರುವ ಪ್ರದೇಶವನ್ನು ನಾರಾಯಣನಿಗೆ ಪೂರ್ವದಿಕ್ಕು ಎಂದು ತಿಳಿದು ಅಲ್ಲಿಂದ ಆಗ್ನೇಯ ಮುಂತಾದ ಎಂಟು ದಿಕ್ಕುಗಳನ್ನು ತಿಳಿಯಬೇಕು. ನಾರಾಯಣನ ಆಗ್ನೇಯ ದಿಕ್ಕಿನಲ್ಲಿ ಗರುಡ, ನೈರ್ಋತ್ಯ ದಿಕ್ಕಿನಲ್ಲಿ ವ್ಯಾಸದೇವ, ವಾಯವ್ಯದಿಕ್ಕಿನಲ್ಲಿ ದುರ್ಗಾ, ಈಶಾನ್ಯ ದಿಕ್ಕಿನಲ್ಲಿ ಸರಸ್ವತೀ, ಎಂಬ ನಾಲ್ಕು ದೇವತೆಗಳನ್ನೂ ಪೀಠದ ಕಾಲುಗಳ ಕೆಳಗೆ ಪೂಜಿಸಬೇಕು.

ಆಗ್ನೇಯದಿಕ್ಕಿನಲ್ಲಿರುವ ಪೀಠದ ಕಾಲಿನ ಮೇಲೆ ಧರ್ಮಾಭಿಮಾನಿಯಾದ ಯಮನೂ, ನೈಋತ್ಯದಿಕ್ಕಿನಲ್ಲಿರುವ ಕಾಲಿನ ಮೇಲೆ ಜ್ಞಾನಾಭಿಮಾನಿಯಾದ ವಾಯುವೂ, ವಾಯವ್ಯದಿಕ್ಕಿನಲ್ಲಿರುವ ಕಾಲಿನ ಮೇಲೆ ವೈರಾಗ್ಯಾಭಿಮಾನಿಯಾಗಿರುವ ರುದ್ರನೂ, ಈಶಾನ್ಯ ದಿಕ್ಕಿನಲ್ಲಿರುವ ಕಾಲಿನ ಮೇಲೆ ಐಶ್ವರ್ಯಾಭಿಮಾನಿಯಾದ ಇಂದ್ರನೂ ಇರುವರು.

ಪೂರ್ವದಿಕ್ಕಿನಲ್ಲಿರುವ ಪಾದದ ಮೇಲೆ ಅಧರ್ಮಾಭಿಮಾನಿಯಾದ ನಿಋತಿಯನ್ನೂ, ದಕ್ಷಿಣದಿಕ್ಕಿನಲ್ಲಿರುವ ಕಾಲಿನ ಮೇಲೆ ಅಜ್ಞಾನಕ್ಕೆ ಅಭಿಮಾನಿಯಾಗಿರುವ ದುರ್ಗಾದೇವಿಯನ್ನೂ, ಪಶ್ಚಿಮದಿಕ್ಕಿನಲ್ಲಿರುವ ಕಾಲಿನ ಮೇಲೆ ಅವೈರಾಗ್ಯಕ್ಕೆ ಅಭಿಮಾನಿಯಾಗಿರುವ ಕಾಮನನ್ನೂ, ಉತ್ತರದಿಕ್ಕಿನಲ್ಲಿರುವ ಕಾಲಿನ ಮೇಲೆ ಅನೈಶ್ವರ್ಯಕ್ಕೆ ಅಭಿಮಾನಿಯಾಗಿರುವ ರುದ್ರನನ್ನೂ ಪೂಜಿಸಬೇಕು.

ಪೀಠವನ್ನು ಸ್ಥಾಪಿಸಿದ ಸ್ಥಳದ ಕೆಳಗೆ ಪೀಠದ ಸಮಸೂತ್ರದಲ್ಲಿ ಬ್ರಹ್ಮಾಂಡ ಕಟಾಹದ ಹೊರಗೆ ಪರಮಪುರುಷನು ಕುಳಿತಿರುವನು. ಅವನು ಬ್ರಹ್ಮಾಂಡವನ್ನು ತಲೆಯಲ್ಲಿ ಧರಿಸಿದವನಾಗಿ ಪದ್ಮಾಸನವನ್ನು ಹಾಕಿಕೊಂಡು ಪೂರ್ವಾಭಿಮುಖನಾಗಿ ಕುಳಿತಿರುವನು. ಅವನ ಮೇಲೆ ಬ್ರಹ್ಮಾಂಡಕ್ಕೆ ಸಾಕ್ಷಾತ್ ಆಧಾರರೂಪಳಾಗಿರುವ ಶಕ್ತಿ ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವ ಲಕ್ಷ್ಮೀದೇವಿಯರು ಇರುವರು. ಅವಳ ಮೇಲೆ ಕೂರ್ಮರೂಪಿಯಾದ ಮಹಾವಿಷ್ಣುವು ಇರುವನು. ಅವನ ಮೇಲೆ ಬ್ರಹ್ಮಾಂಡವು

ಇರುತ್ತದೆ. ಆ ಕೂರ್ಮನ ಬೆನ್ನಿನಲ್ಲಿರುವ ಬ್ರಹ್ಮಾಂಡದಲ್ಲಿ ಆವರಣಜಲಕ್ಕೆ ಆಧಾರನಾದ ಕೂರ್ಮರೂಪಿಯಾದ ವಿಷ್ಣುವು ಇರುವನು. ಆ ಎರಡನೆಯ ಕೂರ್ಮರೂಪಿಯಾದ ವಿಷ್ಣುವಿನ ಬೆನ್ನಿನಲ್ಲಿ ಕೂರ್ಮರೂಪಿಯಾದ ವಾಯುದೇವರು ಇರುವರು. ಆ ಕೂರ್ಮರೂಪಿಯಾದ ವಾಯುದೇವರ ಬಾಲದಲ್ಲಿ ಅನಂತ ಎಂಬ ಹೆಸರಿನಿಂದ ಶೇಷದೇವನು ಇರುವನು. ಆ ಶೇಷದೇವನ ತಲೆಯಲ್ಲಿ ಭೂಮಿಯೂ, ಆ ಭೂಮಿಗೆ ಅಭಿಮಾನಿಯೂ ಇರುವರು. ಆ ಭೂಮಿಯಲ್ಲಿ ಕ್ಷೀರಸಮುದ್ರಕ್ಕೆ ಅಭಿಮಾನಿಯಾಗಿರುವ ವರುಣನು ಇರುವನು. ಆ ವರುಣನ ಮೇಲೆ ಶ್ವೇತದ್ವೀಪವು ಇರುತ್ತದೆ. ಆ ಶ್ವೇತದ್ವೀಪದ ಮೇಲೆ ದಿವ್ಯರತ್ನಖಚಿತವಾದ ಮಂಟಪವು ಇರುತ್ತದೆ. ಆ ಮಂಟಪದ ಮೇಲೆ ನಮ್ಮ ಮನೆಯ ಪೂಜಾಮಂಟಪವು ಇದೆ ಎಂದು ತಿಳಿಯಬೇಕು. ಪರಮಪುರುಷನನ್ನು ಆರಂಭಿಸಿ ನಮ್ಮ ಮನೆಯಲ್ಲಿರುವ ಪೀಠದವರೆಗಿರುವ ಎಲ್ಲಾ ಪೀಠದೇವತೆಗಳನ್ನೂ ನಮ್ಮ ಮನೆಯಲ್ಲಿರುವ ಪೀಠದ ಕೆಳಗೆ ಪೂಜಿಸಬೇಕು.

ನಮ್ಮ ಮನೆಯಲ್ಲಿರುವ ಚತುಷ್ಕೋಣ ಪೀಠದ ಮಧ್ಯದಲ್ಲಿ ಷಟ್ಕೋಣಮಂಡಲವನ್ನೂ, ಆ ಷಟ್ಕೋಣ ಮಂಡಲದ ಮಧ್ಯದಲ್ಲಿ ಅಷ್ಟದಳ ಪದ್ಮವನ್ನೂ ಸ್ಮರಿಸಬೇಕು. ಹಿಂದೆ ಹೇಳಿರುವ ಶ್ವೇತದ್ವೀಪ, ಅಲ್ಲಿರುವ ಮಂಟಪ. ಈಗ ಹೇಳಿರುವ ಅಷ್ಟದಳ ಪದ್ಮ. ಈ ಮೂರೂ ಬಹುರೂಪವನ್ನು ಸ್ವೀಕರಿಸಿರುವ ರಮಾದೇವಿಯರೇ ಆಗಿರುವರು.

ಷಟ್ಕೋಣ ಮಂಡಲದಲ್ಲಿ ಪೂರ್ವದಿಕ್ಕಿನಲ್ಲಿರುವ ಮೂರು ಕೋಣಗಳಲ್ಲಿ ಎಡಭಾಗದ ಕೋಣದಲ್ಲಿ ಸೂರ್ಯನೂ, ಮಧ್ಯಭಾಗದಲ್ಲಿರುವ ಕೋಣದಲ್ಲಿ ಚಂದ್ರನೂ, ಬಲಭಾಗದಲ್ಲಿರುವ ಕೋಣದಲ್ಲಿ ಅಗ್ನಿಯೂ ದೀಪದಂತೆ ಬೆಳಗುತ್ತಿರುವರು. ಹಿಂಭಾಗದಲ್ಲಿರುವ ಮೂರು ಕೋಣಗಳಲ್ಲಿ ಎಡಭಾಗದಲ್ಲಿರುವ ಕೋಣದಲ್ಲಿ ಸತ್ವಾಭಿಮಾನಿನಿಯಾಗಿರುವ ಶ್ರೀದೇವಿಯೂ, ಮಧ್ಯದಲ್ಲಿರುವ ಕೋಣದಲ್ಲಿ ರಜೋಗುಣಾಭಿಮಾನಿಯಾಗಿರುವ ಭೂದೇವಿಯೂ, ಬಲಭಾಗದಲ್ಲಿರುವ ಕೋಣದಲ್ಲಿ ತಮೋಗುಣಗಳಿಗೆ ಅಭಿಮಾನಿನಿಯಾಗಿರುವ ದುರ್ಗಾದೇವಿಯೂ ಇರುವರು.

ಈ "ಶ್ರೀ" "ಭೂ" "ದುರ್ಗಾ" ಎಂಬ ಮೂರು ದೇವಿಯರೂ ಲಕ್ಷ್ಮೀದೇವಿಯರೇ ಆಗಿರುವರು. ಅವರು ಕ್ರಮವಾಗಿ ಪೂರ್ವಭಾಗದಲ್ಲಿ ಮೂರು ಕೋಣಗಳಲ್ಲಿರುವ ಸೂರ್ಯ, ಚಂದ್ರ, ಅಗ್ನಿಗಳಿಂದ ಪ್ರಕಾಶಿಸುತ್ತಿರುವರು.

ಈ ಪದ್ಮದ ಮೇಲೆ ಏರುವುದಕ್ಕಾಗಿ ಪೂರ್ವ ಮುಂತಾದ ನಾಲ್ಕು ದಿಕ್ಕುಗಳಲ್ಲಿ ಮೆಟ್ಟಲುಗಳು ಇರುತ್ತವೆ. ಪೂರ್ವದ ಮೆಟ್ಟಲಿನಲ್ಲಿ "ಆತ್ಮ" ಎಂಬುವನೂ ದಕ್ಷಿಣದ ಮೆಟ್ಟಲಿನಲ್ಲಿ "ಅಂತರಾತ್ಮ" ಎಂಬುವನೂ, ಪಶ್ಚಿಮದ ಮೆಟ್ಟಲಿನಲ್ಲಿ "ಪರಮಾತ್ಮ" ಎಂಬುವನೂ, ಉತ್ತರದ ಮೆಟ್ಟಲಿನಲ್ಲಿ "ಜ್ಞಾನಾತ್ಮ" ಎಂಬುವನೂ ಇರುವರು. ಇವರೆಲ್ಲರೂ ಭಗವಂತನ ಮೂರ್ತಿಗಳು.

ಷಟ್ಕೋಣಮಂಡಲದ ಮೇಲೆ ಅಷ್ಟದಳಪದ್ಮವನ್ನು ಸ್ಮರಿಸಬೇಕೆಂದು ಹಿಂದೆ ಹೇಳಿದ್ದೆವು. ಆ ಅಷ್ಟದಳ ಪದ್ಮದಲ್ಲಿರುವ ಪೂರ್ವದಿಕ್ಕಿನ ದಳವನ್ನು ಆರಂಭಿಸಿ ಎಂಟು ದಳಗಳಲ್ಲಿಯೂ ಮಧ್ಯದಲ್ಲಿಯೂ ಹೀಗೆ ಒಂಭತ್ತು ಸ್ಥಳಗಳಲ್ಲಿ ಭಗವಂತನ ಒಂಭತ್ತು ಮೂರ್ತಿಗಳನ್ನು ಪೂಜಿಸಬೇಕು. ಆ ಮೂರ್ತಿಗಳಿಗೆ ಅನಂತಶಕ್ತಿಗಳಿಂದ ಪೂರ್ಣರಾಗಿರುವುದರಿಂದ "ಶಕ್ತಿ" ಎಂಬ ಹೆಸರುಗಳು ಪ್ರಸಿದ್ಧವಾಗಿವೆ. ಈ ಹೆಸರುಗಳು ಲಕ್ಷ್ಮೀದೇವರು, ಬ್ರಹ್ಮದೇವರು, ವಾಯುದೇವರು, ಶೇಷದೇವರು, ಗರುಡದೇವರು ಈ ಐವರಿಗೂ ಇವೆ. ಈ ಐವರಿಗೂ ಇತರರಲ್ಲಿರುವ ಶಕ್ತಿಗಿಂತ ಅಧಿಕವಾದ ಶಕ್ತಿಯು ಇವರಲ್ಲಿರುವುದರಿಂದ ಇವರಿಗೂ ಶಕ್ತಿ ಎಂಬ ಹೆಸರು ಇರುತ್ತದೆ. ಎಂಟು ದಳಗಳಲ್ಲಿ "ವಿಮಲಾ" ಮುಂತಾದ ಎಂಟು ಶಕ್ತಿಗಳನ್ನು ಪೂಜಿಸುವಾಗ ಮೇಲ್ಕಂಡ ಎಂಟು ಜನರನ್ನೂ ಪೂಜಿಸಬೇಕು. ಒಂಭತ್ತನೆಯ "ಅನುಗ್ರಹಾ" ಎಂಬ ಶಕ್ತಿಯನ್ನು ಪೂಜಿಸುವಾಗ ಶ್ರೀಹರಿಯ "ಅನುಗ್ರಹಾ" ಎಂಬ ರೂಪವನ್ನು ಒಂದನ್ನು ಮಾತ್ರ ಪೂಜಿಸಬೇಕು.

ತತೋಽನಂತಂ ಯೋಗಪೀಠಸ್ವರೂಪಂ ಪೂಜಯೇದ್ಧರೇ |
ಮಂಟಪಸ್ಥಂ ಹರಿಂ ಧ್ಯಾಯೇತ್ತತೋ ಮಂಟಪಮಾಸ್ಮರೇತ್ ||

ಶ್ವೇತದ್ವೀಪದ ಮಧ್ಯದಲ್ಲಿ ದಿವ್ಯರತ್ನಮಯವಾದ ಮಂಟಪವು ನಮ್ಮ ಮನೆಯಲ್ಲಿರುವ ಪೂಜಾಮಂಟಪದಲ್ಲಿ ಸನ್ನಿಹಿತವಾಗಿ ಇರುವುದಾಗಿ ಹಿಂದೆ ಹೇಳಿದ್ದೆವು. ಆ ಮಂಟಪದ ಮಧ್ಯದಲ್ಲಿ ಅಷ್ಟದಳ ಪದ್ಮದ ಮಧ್ಯದಲ್ಲಿ "ಅನುಗ್ರಹಾ" ಎಂಬ ವಿಷ್ಣುಸ್ವರೂಪವಾಗಿರುವ ಶಕ್ತಿಯನ್ನು ಆಶ್ರಯಿಸಿಕೊಂಡು ಶೇಷದೇವನು ಇರುವನು. ನಮ್ಮ ಮನೆಯಲ್ಲಿರುವವರ ದೇವರಪೀಠದಲ್ಲಿ ಶೇಷದೇವನು ಸನ್ನಿಹಿತನಾಗಿರುವನು ಎಂದು ಭಾವಿಸಬೇಕು. ಆ ಶೇಷದೇವನನ್ನು ಪೂಜಿಸಬೇಕು. ಶ್ರೀಹರಿಯು ಮಂಟಪದಲ್ಲಿರುವುದಾಗಿ ಭಾವಿಸಿ ಮಂಟಪವನ್ನು ಹಿಂದೆ ಹೇಳಿದಂತೆ ಸ್ಮರಿಸಬೇಕು.

## ಷೋಡಶೋಪಚಾರ ಪೂಜೆ

ತತ್ರಾವಾಹ್ಯ ಹರಿಂ ಚಾರ್ಘ್ಯಂ ಪಾದ್ಯಮಾಚಮನೀಯಕಮ್ |
ಮಧುಪರ್ಕಂ ಪುನಶ್ಚಾಚಾಂ ಸ್ನಾನಂ ವಾಸೋ ವಿಭೂಷಣಮ್ ||
ಉಪವೀತಾಸನೇ ದತ್ವಾ ಗಂಧಪುಷ್ಪೇ ತಥೈವ ಚ |
ಇತ್ಯುಕ್ತಂ ತಂತ್ರಸಾರೇ ಯದ್ವಿಷ್ಣೋರಾವಾಹನಾದಿಕಮ್ ||
ತತ್ರ ಚಾವಾಹನಾದ್ಯೇಷು ಪ್ರಕಾರೋ ವಕ್ಷ್ಯತೇ ಮಯಾ |

ಅನಂತಾಸನದಲ್ಲಿರುವ ಪ್ರತಿಮೆಯಲ್ಲಿ ಶ್ರೀಹರಿಯನ್ನು ಆವಾಹನೆ ಮಾಡಬೇಕು. ಆ ಶ್ರೀಹರಿಗೆ ಅರ್ಘ್ಯ, ಪಾದ್ಯ, ಆಚಮನೀಯ, ಮಧುಪರ್ಕ, ಪುನರಾಚಮನ, ಸ್ನಾನ, ವಸ್ತ್ರ, ಆಭರಣ, ಉಪವೀತ, ಆಸನ, ಗಂಧ, ಪುಷ್ಪ ಮುಂತಾದ ಉಪಚಾರಗಳನ್ನು ಸಮರ್ಪಿಸಬೇಕು ಎಂದು ತಂತ್ರಸಾರದಲ್ಲಿ ಹೇಳಿರುವರು. ಆವಾಹನ ಮುಂತಾದವುಗಳಲ್ಲಿ ಪ್ರಕಾರವು ತನ್ನಿಂದ ಈಗ ಹೇಳಲ್ಪಡುತ್ತದೆ.

## ಆವಾಹನಪ್ರಕಾರ

ಅಧೋಮುಖಸ್ಥಂ ಹೃತ್ಪದ್ಮಮುನ್ಮುಖೀಕೃತ್ಯ ವಾ ಪುನಃ |
ಉದ್ವೃತ್ಯ ಪ್ರಣವೇನಾಥ ವಿಕಾಸ್ಯ ಜ್ಞಾನಭಾನುನಾ ||
ನಾರಾಯಣಂ ತನ್ಮಧ್ಯಸ್ಥಂ ಧ್ಯಾಯೇತ್ಪ್ರಯತಮಾನಸಃ |

ಹೃದಯಕಮಲದ ಅಗ್ರಭಾಗವು ಒಳಮುಖವಾಗಿ ಸ್ವಲ್ಪ ಬಗ್ಗಿರುತ್ತದೆ. "ಓಂ ಯಂ" ಎಂಬ ವಾಯುಬೀಜಾಕ್ಷರವನ್ನು ಹೇಳುತ್ತಾ ಆ ಕಮಲವು ಊರ್ಧ್ವಮುಖವಾಗುವಂತೆ ಮಾಡಬೇಕು. "ಓಂ" ಎಂಬ ಪ್ರಣವಮಂತ್ರದಿಂದ ತನಗೆ ಅಭಿಮುಖವಾಗುವಂತೆ ಮಾಡಬೇಕು. ತನ್ನಲ್ಲಿರುವ ಜ್ಞಾನ ಎಂಬ ಸೂರ್ಯನ ಕಿರಣಗಳಿಂದ ಅರಳುವಂತೆ ಮಾಡಬೇಕು. ನಿರ್ಮಲಮನಸ್ಸಿನಿಂದ ಹೃದಯಕಮಲದ ಮಧ್ಯದಲ್ಲಿ ನಾರಾಯಣನನ್ನು ಧ್ಯಾನಿಸಬೇಕು.

ಉದ್ಯದ್ಭಾಸ್ವತ್ಸಮಾಭಾಸಶ್ಚಿದಾನಂದೈಕದೇಹವಾನ್ |
ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ||
ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ |
ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ ||
ಸೇವ್ಯಮಾನೋಽಧಿಕಂ ಭಕ್ತ್ಯಾನಿತ್ಯನಿಶ್ಶೇಷಶಕ್ತಿಮಾನ್ |
ಇತಿ ಧ್ಯಾತ್ವಾ ಚ ತುಲಸೀಂ ಗೃಹೀತ್ವಾತ್ಮಾರ್ಥಮೇವ ಚ ||

ಆತ್ಮಾ ದೇವೇತಿ ಚ ಋಚಾ ಮೂಲೇನಾತ್ಮಸ್ಥಿತಂ ಹರಿಮ್ ।
ಪರಾರ್ಥೇ ಧ್ಯೇಯ ಇತ್ಯಾದ್ಯಾ ಧ್ಯಾತ್ವಾ ಸೂರ್ಯಗತಂ ಹರಿಮ್ ॥
ಪೀಠಸ್ಥಪ್ರತಿಮಾಯಾಂ ತು ಏಹ್ಯೇಹೀತಿ ಚ ಮುದ್ರಯಾ ।
ದ್ವಿರ್ದ್ವಿರಾವಾಹಯಾಮೀತ್ಯುಕ್ತ್ವಾ ಮುದ್ರಾಃ ಪ್ರದರ್ಶಯೇತ್ ॥

ಮೂಲಮೂರ್ತಿಯಾಗಿರುವ ನಾರಾಯಣನನ್ನು ಧ್ಯಾನಿಸುವ ಕ್ರಮವನ್ನು ವಿವರಿಸುವೆನು. "ಉದಯಿಸುವ ಸೂರ್ಯನಂತೆ ಪ್ರಕಾಶಿಸುತ್ತಿರುವವನೂ, ಜ್ಞಾನ, ಆನಂದ, ಮುಂತಾದ ಗುಣಾತ್ಮಕವಾದ ದೇಹದಿಂದ ಯುಕ್ತನಾಗಿರುವವನೂ, ನಾಲ್ಕು ಕೈಗಳಲ್ಲಿ ಚಕ್ರ, ಶಂಖ, ಗದಾ, ಪದ್ಮಗಳನ್ನು ಧರಿಸಿರುವವನೂ, ಒಂದು ಪಾರ್ಶ್ವದಲ್ಲಿ ಲಕ್ಷ್ಮೀದೇವಿಯರಿಂದಲೂ, ಇನ್ನೊಂದು ಪಾರ್ಶ್ವದಲ್ಲಿ ಭೂದೇವಿಯರಿಂದಲೂ ಆಲಿಂಗಿಸಲ್ಪಟ್ಟವನೂ, ತನ್ನ ಮೂರ್ತಿಗಳ ಸಮೂಹದ ಮಧ್ಯದಲ್ಲಿರುವವನೂ, ಬ್ರಹ್ಮ, ವಾಯು, ಶಿವ, ಶೇಷ, ಗರುಡ, ದೇವೇಂದ್ರ ಮುಂತಾದವರುಗಳಿಂದ ಅತ್ಯಂತ ಭಕ್ತಿಯಿಂದ ಸೇವಿಸಲ್ಪಡುತ್ತಿರುವವನೂ, ಯಾವಾಗಲೂ ಪೂರ್ಣವಾದ ಶಕ್ತಿಗಳಿಂದ ಯುಕ್ತನೂ, ಆಗಿರುವ ನಾರಾಯಣನನ್ನು ತನ್ನ ಹೃದಯದಲ್ಲಿ ಧ್ಯಾನಿಸುತ್ತಾ "ಆತ್ಮದೇವಾನಾಂ" ಎಂಬ ಋಕ್ಕನ್ನು ಹೇಳುತ್ತಾ ತುಳಸೀದಳವನ್ನು ತನಗಾಗಿ ಪೂಜೆಯನ್ನು ಮಾಡುವುದಾಗಿದ್ದರೆ ಪ್ರತಿಮೆಯಲ್ಲಿ ಸಮರ್ಪಿಸಬೇಕು. ಇತರರಿಗಾಗಿ ಪೂಜೆಯನ್ನು ಮಾಡುವುದಾಗಿದ್ದರೆ ಸೂರ್ಯಗತನಾದ ಶ್ರೀಹರಿಯನ್ನು ಮೇಲ್ಕಂಡ ಶ್ಲೋಕದಲ್ಲಿ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ಹೇಳಿದಂತೆ ಧ್ಯಾನಿಸುತ್ತಾ ಪೀಠದಲ್ಲಿರುವ ಪ್ರತಿಮೆಯಲ್ಲಿ ಸಮರ್ಪಿಸಬೇಕು. "ಏಹ್ಯೇಹಿ" ಎಂದು ಎರಡು ಸಲ ಹೇಳುತ್ತಾ ಆವಾಹನೀಮುದ್ರೆಯನ್ನು ತೋರಿಸಬೇಕು. ಇದು ಆವಾಹನವೆನಿಸುತ್ತದೆ.

ಸ್ಥಾಪನಾದಾವಪಿ ಹ್ಯೇವಂ ದ್ವಿರ್ದ್ವಿರುಚ್ಚಾರಯೇದ್ಬುಧಃ ।

ಆವಾಹನದಲ್ಲಿ ಹೇಳಿದಂತೆ ಸ್ಥಾಪನ ಮುಂತಾದವುಗಳನ್ನು ಮಾಡುವಾಗಲೂ "ಸ್ಥಾಪಯಾಮಿ, ಸ್ಥಾಪಯಾಮಿ" ಮುಂತಾದ ರೀತಿಯಿಂದ ಎರಡು ಎರಡು ಸಲ ಹೇಳುತ್ತಾ ಸ್ಥಾಪನ ಮುಂತಾದವುಗಳಿಗೆ ಹೇಳಿರುವ ಮುದ್ರೆಗಳನ್ನು ಎರಡೆರಡು ಸಲ ತೋರಿಸಬೇಕು.

ಸಮ್ಮುಖೀಕರಣಂ ಚೈವ ಅವಗುಂಠನಮೇವ ಚ ।

ಆವಾಹನ, ಸ್ಥಾಪನ, ಸಾನ್ನಿಧ್ಯ, ಸನ್ನಿರೋಧನ, ಸಮ್ಮುಖೀಕರಣ, ಅವಗುಂಠನ, ಎಂದು ಆರು ವಿಧವಾದ ಮುದ್ರೆ.

ಆವಾಹನಂ ಸ್ಥಾಪನಂ ಚ ಸಾನ್ನಿಧ್ಯಂ ಸನ್ನಿರೋಧನಮ್ ।
ಸಮ್ಮುಖೀಕರಣಂ ಚೈವ ಅವಗುಂಠನಮೇವ ಚ ॥
ಇತಿ ಷಣ್ಮುದ್ರಿಕಾಃ ಪ್ರೋಕ್ತಾಸ್ತಾಸಾಂ ಲಕ್ಷಣಮುಚ್ಯತೇ ।

"(1) ಆವಾಹನಮುದ್ರಾ, (2) ಸ್ಥಾಪನಮುದ್ರಾ, (3) ಸಾನ್ನಿಧ್ಯಮುದ್ರಾ, (4) ಸನ್ನಿರೋಧನಮುದ್ರಾ, (5) ಸಮ್ಮುಖೀಕರಣ ಮುದ್ರಾ, (6) ಅವಗುಂಠನಮುದ್ರಾ ಎಂದು ಆರು ಮುದ್ರೆಗಳಿವೆ. ಈಗ ಅವುಗಲ ಲಕ್ಷಣಗಳು ಹೇಳಲ್ಪಡುತ್ತವೆ."

ಉತ್ತಾನೌ ತು ಕರೌ ಕೃತ್ವಾ ಕಿಂಚಿತ್ಸಂಕುಚಿತಾಂಗುಲೀ ।
ಆವಾಹನೀ ಸಮುದ್ದಿಷ್ಟಾ ಕಾಶ್ಯಪ ದ್ವಿಜಸತ್ತಮ ॥

"ಎರಡು ಅಂಗೈಗಳನ್ನು ಮೇಲ್ಮುಖವಾಗುವಂತೆ ಮಾಡಿಕೊಳ್ಳಬೇಕು. ಎರಡು ಕೈಗಳನ್ನು ಒಂದಕ್ಕೊಂದು ತಗಲಿಸಬೇಕು. ಎರಡು ಕೈಗಳ ಬೆರಳುಗಳನ್ನು ಸ್ವಲ್ಪ ಬಗ್ಗಿಸಬೇಕು. ಇದು ಆವಾಹನೀಮುದ್ರೆಯೆನಿಸುತ್ತದೆ."

### ಸ್ಥಾಪನೀಮುದ್ರಾಲಕ್ಷಣ

ಅಧೋಮುಖೀಕೃತಾ ಸೈವ ಪ್ರೋಕ್ತಾ ಸ್ಥಾಪನಕರ್ಮಣಿ |

"ಆವಾಹನೀ ಮುದ್ರೆಯೇ ಕೆಳಮುಖವಾಗಿ ಬೆರಳುಗಳನ್ನು ಇಟ್ಟುಕೊಂಡರೆ ಸ್ಥಾಪನೀಮುದ್ರೆಯೆನಿಸುತ್ತದೆ."

### ಸನ್ನಿಧಾಯಿನೀಮುದ್ರೆಯ ಲಕ್ಷಣ

ಆಶ್ಲಿಷ್ಟಮುಷ್ಟಿಯುಗಲಾ ಪ್ರೋತ್ತಾನಾಂಗುಷ್ಠಯುಗ್ಮಕಾ |
ಸನ್ನಿಧಾನೀ ಸಮುದ್ದಿಷ್ಟಾ ಮುದ್ರೇಯಂ ತತ್ತ್ವವೇದಿಭಿಃ ||

"ಎರಡು ಕೈಗಳ ಮುಷ್ಟಿಗಳನ್ನು ಒಟ್ಟುಗೂಡಿಸಬೇಕು. ಎರಡು ಕೈಗಳ ಅಂಗುಷ್ಠಗಳನ್ನು ಮೇಲೆ ಚಾಚಬೇಕು. ಇದು ಸನ್ನಿಧಾಯಿನೀಮುದ್ರೆಯೆನಿಸುತ್ತದೆ."

### ಸನ್ನಿರೋಧಮುದ್ರೆ

ಅಂಗುಷ್ಠಗರ್ಭಿಣೀ ಸೈವ ಸನ್ನಿರೋಧಃ ಸಮೀರಿತಾ |

"ಎರಡು ಕೈಗಳ ಮುಷ್ಟಿಗಳ ಮಧ್ಯದಲ್ಲಿ ಆಯಾ ಕೈಗಳ ಅಂಗುಷ್ಠಗಳು ಸೇರಿದರೆ ಸನ್ನಿರೋಧ ಮುದ್ರೆಯೆನಿಸುತ್ತದೆ."

### ಸಮ್ಮುಖೀಕರಣಮುದ್ರಾ

ಸಮ್ಮುಖೌ ಸಮ್ಮುಖಾವಿಷ್ಟೌ ಸ್ಪೃಷ್ಟಾಯಾ ಚ ಪರಸ್ಪರಮ್ |
ಅಂಜಲೀಂ ನಾಮ ಸಂಪ್ರೋಕ್ತಾ ಸಂಮುಖೀಕರಣೇ ಸ್ಮೃತಾ ||

"ಬಲ ಅಂಗೈಯನ್ನು ಎಡ ಅಂಗೈಯ ಮೇಲೆಯೂ ಎಡ ಅಂಗೈಯನ್ನು ಬಲ ಅಂಗೈಯ ಮೇಲೆಯೂ ತಲೆಕೆಳಗಾಗಿ ಇಡಬೇಕು. ಇದು ಸಮ್ಮುಖೀಕರಣಮುದ್ರೆಯೆನಿಸುತ್ತದೆ."

### ಅವಗುಂಠನಮುದ್ರೆ

ಸವ್ಯಹಸ್ತಗತಾ ಮುಷ್ಟಿರ್ದೀರ್ಘಾಧೋಮುಖತರ್ಜನೀ |
ಅವಗುಂಠನಮುದ್ರೇಯಮಭಿತೋಽನಾಮಿಕಾ ಸ್ಮೃತಾ ||

### ತತ್ತ್ವನ್ಯಾಸಾದಿಗಳು

ಇತಿ ಕೃತ್ವಾವಾಹನಾದಿ ತತ್ತ್ವನ್ಯಾಸಾದಿಕಂ ಹರೌ |
ಪ್ರತಿಮಾಸ್ಥೇ ಸ್ವಾತ್ಮನೀವ ಕುರ್ಯಾನ್ನಿಯತಮಾನಸಃ ||

"ಆವಾಹನ ಮುಂತಾದವುಗಳನ್ನು ಮಾಡಿದ ಮೇಲೆ ತನ್ನ ದೇಹದಲ್ಲಿ ಮಾಡಿದಂತೆ ಪ್ರತಿಮೆಯಲ್ಲಿರುವ ಶ್ರೀಹರಿಯಲ್ಲಿಯೂ ತತ್ತ್ವನ್ಯಾಸ ಮುಂತಾದ ನ್ಯಾಸಗಳನ್ನು ಮಾಡಬೇಕು."

ವಿಷ್ಣೋರಂಗೇಷು ತತ್ತ್ವಸ್ಥದೇವತಾಸ್ಮರಣಾಯ ಚ |
ಮಾತೃಕಾಷ್ಟಾಕ್ಷರಾದೀನಾಂ ನ್ಯಾಸಂ ಕೃತ್ವಾ ಯಥಾವಿಧಿ ||
ಮೂರ್ತಿಧ್ಯಾನಂ ತತಃ ಕೃತ್ವಾ ದಿಗ್ಬಂಧಂ ಪರಿತೋ ನ್ಯಸೇತ್ |

"ವಿಷ್ಣುವಿನ ಅವಯವಗಳಲ್ಲಿ ತತ್ತ್ವಾಭಿಮಾನಿಗಳಾದ ದೇವತೆಗಳನ್ನು ಸ್ಮರಿಸುವುದಕ್ಕಾಗಿ ಮಾತೃಕಾನ್ಯಾಸ, ಅಷ್ಟಾಕ್ಷರನ್ಯಾಸ ಮುಂತಾದವುಗಳನ್ನು ಮಾಡಬೇಕು. ಅನಂತರದಲ್ಲಿ ಮೂರ್ತಿಯಲ್ಲಿರುವ ಶ್ರೀಹರಿಯನ್ನು ಧ್ಯಾನಿಸಿ ಎಲ್ಲಾ ದಿಕ್ಕುಗಳಲ್ಲಿಯೂ ದಿಗ್ಬಂಧನವನ್ನು ಮಾಡಬೇಕು."

## ದಿಗ್ಬಂಧನ

ಅಭಿಮೃಶ್ಯ ಯಥಾಶಕ್ತಿ ಸನ್ನಿಧಾನಜಪಂ ಚರೇತ್ ||

## ಸನ್ನಿಧಾನಪ್ರಾಪ್ತಿಗಾಗಿ ಪ್ರಾರ್ಥನೆ

ಸುದರ್ಶನೇನ ಮಂತ್ರೇಣ ಪ್ರತಿಮಾಂ ಹೃದಿ ಪಾದಯೋಃ |

"ಪ್ರತಿಮೆಯ ಹೃದಯದಲ್ಲಿಯೂ, ಪಾದಗಳಲ್ಲಿಯೂ ಮುಟ್ಟಿ ಸುದರ್ಶನಮಂತ್ರದಿಂದ ಯಥಾಶಕ್ತಿ ಸನ್ನಿಧಾನವು ಬರುವುದಕ್ಕಾಗಿ ಜಪವನ್ನು ಮಾಡಬೇಕು."

ಅಷ್ಟೋತ್ತರಶತಂ ವಾಪಿ ಮೂಲಮಂತ್ರೇಣ ಮಂತ್ರವಿತ್ |
ತತಃ ಸಂಪ್ರಾರ್ಥಯೇದ್ದೇವಂ ಸನ್ನಿಧಾನಾರ್ಥಮಾದರಾತ್ ||

"ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ನೂರ ಎಂಟು ಸಲ ಜಪಿಸಬೇಕು. ಆದರಪೂರ್ವಕವಾಗಿ ಶ್ರೀಹರಿಯ ಸನ್ನಿಧಾನವು ಪ್ರಾಪ್ತವಾಗುವುದಕ್ಕೋಸ್ಕರ ಪ್ರಾರ್ಥಿಸಬೇಕು.

ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ಕರೋ ಭವ |
ವಿಭೋ ಸಕಲಲೋಕೇಶ, ವಿಷ್ಣೋ ಜಿಷ್ಣೋ ಪ್ರಭೋ ಹರೇ |
ತ್ವಾಂ ಭಕ್ತ್ಯಾ ಪೂಜಯಾಮ್ಯದ್ಯ ಅರ್ಘ್ಯಪಾದ್ಯಾದಿಭಿಃ ಕ್ರಮಾತ್ ||

"ಓ ದೇವೇಶ, ಸನ್ನಿಹಿತನಾಗು. ಓ ಸಕಲಲೋಕೇಶ, ವಿಷ್ಣೋ, ವಿಭೋ, ಜಿಷ್ಣೋ, ಪ್ರಭೋ, ಹರೇ, ಭಕ್ತಿಯಿಂದ ನಿನ್ನನ್ನು ಪೂಜಿಸುವೆನು. ಸರ್ವಸಂಪತ್ತುಗಳನ್ನೂ ಕೊಡು" ಎಂದು ಪ್ರಾರ್ಥಿಸುತ್ತಾ ಅರ್ಘ್ಯಪಾದ್ಯ ಮುಂತಾದ ಪೂಜೆಗಳನ್ನು ಮಾಡಬೇಕು."

ಯುಗಾವಸಾನಪರ್ಯಂತಮತ್ರ ಸ್ಥಿತ್ವಾ ಜನಾರ್ದನ |
ಭಕ್ತಸ್ಯ ಮಮ ಪೂಜಾಂ ತ್ವಂ ಗೃಹೀತ್ವಾ ಪಾಹಿ ಮಾಂ ಪ್ರಭೋ ||

"ಓ ಪ್ರಭೋ, ಈ ಯುಗವು ಮುಗಿಯುವವರೆಗೂ ಈ ಪ್ರತಿಮೆಯಲ್ಲಿ ನೀನು ಸನ್ನಿಹಿತನಾಗಿದ್ದು ಭಕ್ತನಾದ ನನ್ನ ಪೂಜೆಯನ್ನು ಸ್ವೀಕರಿಸಿ ನನ್ನನ್ನು ರಕ್ಷಿಸು." ಹೀಗೆ ಶ್ರೀಹರಿಯನ್ನು ಪ್ರಾರ್ಥಿಸಬೇಕು."

## ಅರ್ಘ್ಯಸಮರ್ಪಣ

ತತಃ ಪ್ರಾಗರ್ಚಿತಾರ್ಘ್ಯಾದಿಪಾತ್ರಂ ಸಂಗೃಹ್ಯ ಉತ್ಥಿತಃ |
ಮೂಲೇನ ದೇವಸ್ಯ ಕರೇ ಇದಮರ್ಘ್ಯಂ ದದಾಮಿ ತೇ ||
ಇತ್ಯುಕ್ತ್ವಾ ಚ ತತಃ ಪಾತ್ರೇ ದತ್ವಾ ಪ್ರಕ್ಷಾಲಯೇತ್ಕರೌ |
ತತಃ ಸಕೃದ್ದೇವತಾಯೈ ಅರ್ಪಯತ್ಪುಷ್ಪಮಂಜಸಾ ||

"ಹಿಂದೆ ಪೂಜಿಸಲ್ಪಟ್ಟ ಅರ್ಘ್ಯಾದಿಪಾತ್ರಗಳನ್ನು ತೆಗೆದುಕೊಂಡು ನಿಲ್ಲಬೇಕು. "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ದೇವರ ಕೈಯಲಿ "ಇದಮರ್ಘ್ಯಂ ದದಾಮಿ ತೇ" ಎಂದು ಹೇಳುತ್ತಾ ಅರ್ಘ್ಯಪಾತ್ರದಲ್ಲಿ ಅರ್ಘ್ಯವನ್ನು ಕೊಟ್ಟು ಕೈಗಳನ್ನು ತೊಳೆದುಕೊಳ್ಳಬೇಕು. ಆ ಮೇಲೆ ಒಮ್ಮೆ ದೇವರಿಗೆ ಪುಷ್ಪವನ್ನು ಸಮರ್ಪಿಸಬೇಕು."

## ಪಾದ್ಯಸಮರ್ಪಣ

ಏವಂ ಕ್ರಮೇಣ ತ್ವೈ ವಿಷ್ಣುಗಾಯತ್ರ್ಯಾಪಃ ಪುನಂತ್ವಿತಿ |
ಪದೇ ಪಾದ್ಯಂ ಕರೇ ಚಾರ್ಘ್ಯಮರ್ಪಯೇತ್ತು ಯಥಾವಿಧಿ ||

"ಹೀಗೆಯೇ ಕ್ರಮದಿಂದ ವಿಷ್ಣುಗಾಯತ್ರೀಮಂತ್ರದಿಂದಲೂ "ಆಪಃ ಪುನಂತು" ಎಂಬ ಮಂತ್ರದಿಂದಲೂ ಶ್ರೀಹರಿಯ ಎರಡು ಕಾಲುಗಳಲ್ಲಿ ಪಾದ್ಯವನ್ನೂ, ಎರಡು ಕೈಗಳಲ್ಲಿ ಅರ್ಘ್ಯವನ್ನೂ ಸಮರ್ಪಿಸಬೇಕು."

**ಮಧುಪರ್ಕಸಮರ್ಪಣ**

ಮಧುಪರ್ಕಂ ತತೋ ದದ್ಯಾತ್ಪೂರ್ವೋಕ್ತದ್ರವ್ಯಸಂಯುತಮ್ |
ದೇವಸ್ಯ ದಕ್ಷಿಣೇ ಹಸ್ತೇ ತ್ರಿವಾರಂ ಮೂಲಮಂತ್ರತಃ ||
ಇದಂ ಹ್ಯದ್ಯಂ ಗೃಹಾಣೇತಿ ಪುನರಾಚಾಮಂ ಪ್ರಕಲ್ಪಯೇತ್ |

"ಹಿಂದೆ ಹೇಳಿರುವ ಮಧುಪರ್ಕವಸ್ತುಗಳನ್ನು ಸ್ವೀಕರಿಸಬೇಕು. ದೇವರ ಬಲಗೈಯಲ್ಲಿ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ಮೂರು ಸಲ ಮಧುಪರ್ಕವನ್ನು ಕೊಡಬೇಕು. "ಇದಂ ಹ್ಯದ್ಯಂ ಗೃಹಾಣ" ಎಂದು ಹೇಳುತ್ತಾ ಪುನರಾಚಮನವನ್ನು ಕೊಡಬೇಕು.

**ಸ್ನಾನ**

ಸ್ನಾನಾರ್ಥಂ ಮಜ್ಜನಗೃಹಮಾಗಚ್ಛೇತಿ ತಮರ್ಥಯೇತ್ |
ತದಾ ಉತ್ಥಾನಸಮಯೇ ಇದಂ ವಿಷ್ಣುರಿತಿ ಋಚಾ ||
ದತ್ವಾಥ ಪಾದುಕೇ ತಸ್ಯ ಉತ್ತಿಷ್ಠ ಬ್ರಹ್ಮಣಸ್ಪತೇ |
ಇತಿ ಮಂತ್ರೇಣ ಚೋತ್ಥಾಪ್ಯ ಭದ್ರಂ ಕರ್ಣೇತಿ ಮಂತ್ರತಃ ||
ಸ್ನಾನಪೀಠೇ ನಿವೇಶ್ಯಾಥ ಮೂಲೇನ ಪರಿಕಲ್ಪಯೇತ್ |
ದಂತಧಾವನಗಂಡೂಷಂ ದರ್ಪಣಸ್ಯಾವಲೋಕನಮ್ ||
ಅಭ್ಯಂಗಂ ಗಂಧತೋಯೇನೋದ್ವರ್ತನಾದಿ ತತಃ ಪರಮ್ |

"ಸ್ನಾನಾರ್ಥಂ ಮಜ್ಜನಗೃಹಮಾಗಚ್ಛ" ಅಂದರೆ "ಸ್ನಾನಕ್ಕಾಗಿ ಸ್ನಾನಗೃಹಕ್ಕೆ ಬಾ" ಎಂದು ಶ್ರೀಹರಿಯನ್ನು ಪ್ರಾರ್ಥಿಸಬೇಕು. ಸ್ನಾನಕ್ಕಾಗಿ ಏಳುವಾಗ "ಇದಂ ವಿಷ್ಣುರ್ವಿಚಕ್ರಮೇ" ಎಂಬ ಋಕ್ಕಿನಿಂದ ಎರಡು ಪಾದುಕೆಗಳನ್ನು ಕೊಟ್ಟು "ಉತ್ತಿಷ್ಠ ಬ್ರಹ್ಮಣಸ್ಪತೇ" ಎಂಬ ಮಂತ್ರದಿಂದ ಎಬ್ಬಿಸಬೇಕು. "ಭದ್ರಂ ಕರ್ಣೇಭಿಃ" ಎಂಬ ಮಂತ್ರದಿಂದ ಸ್ನಾನಪೀಠದಲ್ಲಿ ಕೂಡಿಸಬೇಕು. "ಓಂ ನಮೋ ನಾರಾಯಣಾಯ" ಎಂಬ ಮೂಲ ಮಂತ್ರದಿಂದ ದಂತಧಾವನ, ಗಂಡೂಷ, ಕನ್ನಡಿಯನ್ನು ನೋಡುವುದು ಮುಂತಾದವುಗಳನ್ನು ಮಾಡಿಸಬೇಕು. ಅನಂತರದಲ್ಲಿ ಗಂಧದ ಜಲದಿಂದ ಅಭ್ಯಂಗವನ್ನು ಮಾಡಿಸಬೇಕು. ಅನಂತರದಲ್ಲಿ ಮೈಯನ್ನು ಉಜ್ಜುವುದು ಮುಂತಾದವುಗಳನ್ನು ಮಾಡಿಸಬೇಕು.

**ಪಂಚಾಮೃತಾಭಿಷೇಕ**

ಪಂಚಾಮೃತೇನ ಸ್ನಪನಂ ಗವಾಂ ಕ್ಷೀರಾದಿನಾಚರೇತ್ |
ಕ್ಷೀರಾದಿಸ್ನಪನೇ ವಿಷ್ಣೋಃ ಪುರಾಣೇ ಫಲಮೀರಿತಮ್ ||

ದನದ ಹಾಲು ಮುಂತಾದವುಗಳಿಂದ ಪಂಚಾಮೃತಸ್ನಾನವನ್ನು ಮಾಡಿಸಬೇಕು. ಹಾಲು ಮುಂತಾದವುಗಳಿಂದ ಸ್ನಾನವನ್ನು ಮಾಡಿಸಿದ್ದಕ್ಕೆ ಪುರಾಣದಲ್ಲಿ ಫಲವು ಹೇಳಲ್ಪಟ್ಟಿದೆ.

**ಕ್ಷೀರಾಭಿಷೇಕಫಲ**

ಕಪಿಲಾಕ್ಷೀರಮಾದಾಯ ಶಂಖೇ ಕೃತ್ವಾ ಜನಾರ್ದನಮ್ |
ಯಜ್ಞಾಯುತಸಹಸ್ರಸ್ಯ ಸ್ನಾಪಯಿತ್ವಾ ಲಭೇತ್ಫಲಮ್ ||

ಕುರ್ವಂತಿ ಕ್ಷೀರಸ್ನಪನಂ ಯೇ ನರಾಃ ಕೃಷ್ಣಮೂರ್ಧನಿ |
ಜ್ಞಾತ್ವಾಶ್ವಮೇಧಜಂ ಪುಣ್ಯಂ ಬಿಂದುನಾ ಬಿಂದುನಾ ಸ್ಮೃತಮ್ ||
ಕ್ಷೀರಾದ್ದಶಗುಣಂ ದಧ್ನೋ ಘೃತಂ ಚೈವ ದಶೋತ್ತರಮ್ |
ಘೃತಾದ್ದಶಗುಣಂ ಕ್ಷೌದ್ರಂ ಸ್ವಾದೂದಂ ಚ ದಶೋತ್ತರಮ್ ||
ಪುಷ್ಪೋದಕಂ ಚ ರತ್ನೋದಂ ವರ್ತತೇ ಚ ದಶೋತ್ತರಮ್ |
ಮಂತ್ರೋದಕಂ ಚ ಗಂಧೋದಂ ತಥೈವ ಋಷಿಸತ್ತಮ ||
ಇಕ್ಷುರಸಂ ಚೂತರಸಂ ದಶವಾಜಿಮಖೈಃ ಸಮಮ್ |
ತುಲಸೀದಲಸಂಯುಕ್ತಂ ಸುಚಂದನವಿಮಿಶ್ರಿತಮ್ ||
ಸ್ನಾನಾರ್ಥಮುದಕಂ ದತ್ವಾ ಸರ್ವತೀರ್ಥಫಲಂ ಲಭೇತ್ |
ತುಲಸೀಚಂದನೋನ್ಮಿಶ್ರಸುಚಂದನಜಲೇನ ವೈ ||
ಶಂಖೇನ ಸ್ನಾಪನಂ ವಿಷ್ಣೋಃ ಬ್ರಹ್ಮಹತ್ಯಾಶತಂ ದಹೇತ್ |

ಕಪಿಲಾ ಗೋವಿನ ಹಾಲನ್ನು ಶಂಖದಲ್ಲಿ ತುಂಬಿಸಿ ಜನಾರ್ದನನಿಗೆ ಸ್ನಾನವನ್ನು ಮಾಡಿದರೆ ಹತ್ತು ಲಕ್ಷ ಯಜ್ಞಗಳನ್ನು ಮಾಡಿದ ಫಲವು ಬರುತ್ತದೆ. ಶ್ರೀಕೃಷ್ಣನ ತಲೆಯಲ್ಲಿ ಕ್ಷೀರಾಭಿಷೇಕವನ್ನು ಯಾರು ಮಾಡುವರೋ ಅವರಿಗೆ ಒಂದೊಂದು ಬಿಂದುವಿಗೂ ಅಶ್ವಮೇಧಯಾಗದ ಫಲವು ಬರುತ್ತದೆ. ಕ್ಷೀರಾಭಿಷೇಕ, ಮೊಸರಿನ ಅಭಿಷೇಕ, ತುಪ್ಪದ ಅಭಿಷೇಕ, ಸಿಹಿನೀರಿನ ಅಭಿಷೇಕ, ಪುಷ್ಪೋದಕದ ಅಭಿಷೇಕ, ರತ್ನೋದಕದ ಅಭಿಷೇಕ, ಮಂತ್ರೋದಕದ ಅಭಿಷೇಕ, ಗಂಧೋದಕದ ಅಭಿಷೇಕ, ಕಬ್ಬಿನ ಹಾಲಿನ ಅಭಿಷೇಕ, ಮಾವಿನ ಹಣ್ಣಿನ ರಸದ ಅಭಿಷೇಕ, ಇವುಗಳೆಲ್ಲವೂ ಹಿಂದಿನ ವಸ್ತುಗಳ ಅಭಿಷೇಕಗಳಿಗಿಂತ ಮುಂದಿನ ರಸಗಳ ಅಭಿಷೇಕಗಳ ಹತ್ತರಷ್ಟು ಅಧಿಕ ಫಲವನ್ನು ಕೊಡುತ್ತವೆ. ಮಾವಿನ ಹಣ್ಣಿನ ರಸದ ಅಭಿಷೇಕವು ಹತ್ತು ಅಶ್ವಮೇಧಗಳಿಗೆ ಸಮವೆನಿಸುತ್ತದೆ.

ತುಲಸೀದಳಗಳಿಂದ ಯುಕ್ತವಾಗಿರುವ ಉತ್ತಮವಾದ ಚಂದನ ಜಲವನ್ನು ಸ್ನಾನಕ್ಕಾಗಿ ಶಂಖದಲ್ಲಿ ತುಂಬಿಸಿ ಶ್ರೀಹರಿಗೆ ಯಾವನು ಕೊಡುವನೋ ಅವನು ಸರ್ವತೀರ್ಥಗಳಲ್ಲಿ ಸ್ನಾನ ಮಾಡಿಸಿದ ಫಲವನ್ನು ಪಡೆಯುವನು. ನೂರು ಬ್ರಹ್ಮಹತ್ಯೆಗಳನ್ನು ಮಾಡಿದ್ದರೂ ಅವೆಲ್ಲವೂ ದೂರವಾಗುತ್ತವೆ.

**ಏಕಾದಶೀ ಮುಂತಾದ ವಿಶೇಷ ದಿನಗಳಲ್ಲಿ ಹಾಲಿನಿಂದ ಸ್ನಾನವನ್ನು ಮಾಡಿಸಿದ ಫಲ**

ಕ್ಷೀರಸ್ನಾನಂ ತು ಯಃ ಕುರ್ಯಾದೇಕಾದಶ್ಯಾಂ ಸಮಾಹಿತಃ |
ದ್ವಾದಶ್ಯಾಂ ತದ್ವಥಾ ವಿಷ್ಣೋಃ ಸರ್ವಪಾತಕನಾಶನಮ್ ||
ಪೌರ್ಣಮಾಸ್ಯಾಮಮಾವಾಸ್ಯಾಮಯನೇ ವಿಷುವೇ ತಥಾ |
ವೈಧೃತ್ಯಾಂ ಚ ವ್ಯತೀಪಾತೇ ಪುಷ್ಯರ್ಕ್ಷೇ ಶ್ರವಣೇ ತಥಾ ||
ದಧಿಕ್ಷೀರಘೃತಾದ್ಯೈರ್ವಾ ತಥಾ ಪಂಚಾಮೃತೇನ ಚ |
ಸಕೃಚ್ಚ ಸ್ನಪನಂ ವಿಷ್ಣೋಃ ಕ್ರಿಯತೇ ಪಿತೃಕಾರಣಾತ್ ||
ಕಲ್ಪಕೋಟಿಂ ದಿವಂ ಪ್ರಾಪ್ಯ ಮುಕ್ತಿಂ ಯಾಂತಿ ಪಿತಾಮಹಾಃ |
ಕ್ಷೀರಾದಿಗಂಗಾತೀರ್ಥಂ ವಾ ತ್ರೈಲೋಕ್ಯೇ ತೀರ್ಥವಾರ್ಯಪಿ ||

### ಶಂಖದಲ್ಲಿ ಅಭಿಷೇಕವನ್ನು ಮಾಡಬೇಕು

ಶಂಖೇ ಕೃತ್ವಾ ಸ್ನಾಪನಂ ಸ್ಯಾದನ್ಯಥಾ ನಿಷ್ಫಲಂ ಭವೇತ್ |
ಶಂಖಸ್ಥಿತೇನ ತೋಯೇನ ಯಃ ಸ್ನಾಪಯತಿ ಕೇಶವಮ್ ||
ಕಪಿಲಾಶತದಾನಸ್ಯ ಫಲಂ ಪ್ರಾಪ್ನೋತಿ ಮಾನವಃ |
ನದೀತಟಾಕಜಂ ವಾಪಿ ವಾಪೀಕೂಪಹ್ರದಾದಿಜಮ್ ||
ಶಂಖಸ್ಥಿತಂ ತು ಗಾಂಗೇಯಂ ತೋಯಮಾಹ ಜನಾರ್ದನಃ |

ಏಕಾದಶೀ, ದ್ವಾದಶೀ, ಹುಣ್ಣಿಮೆ, ಅಮಾವಾಸ್ಯೆ, ದಕ್ಷಿಣಾಯನಪುಣ್ಯಕಾಲ, ಉತ್ತರಾಯಣಪುಣ್ಯಕಾಲ, ಮೇಷಸಂಕ್ರಮಣಕಾಲ, ತುಲಾಸಂಕ್ರಮಣಕಾಲ, ವೈಧೃತಿಯೋಗ, ವ್ಯತೀಪಾತಯೋಗ, ಪುಷ್ಯನಕ್ಷತ್ರ, ಶ್ರವಣನಕ್ಷತ್ರ, ಈ ದಿನಗಳಲ್ಲಿ ಹಾಲಿನಿಂದಲಾಗಲೀ, ಮೊಸರಿನಿಂದಲಾಗಲೀ, ತುಪ್ಪದಿಂದಲಾಗಲೀ, ಪಂಚಾಮೃತದಿಂದಲಾಗಲೀ ಪಿತೃಗಳಿಗೆ ತೃಪ್ತಿಯಾಗುವುದಕ್ಕೋಸ್ಕರ ಒಮ್ಮೆ ಶ್ರೀಹರಿಗೆ ಸ್ನಾನವನ್ನು ಮಾಡಿಸುವವನ ಪಿತಾಮಹರು ಕೋಟಿಕಲ್ಪಗಳವರೆಗೆ ಸ್ವರ್ಗದಲ್ಲಿದ್ದು ಕೊನೆಗೆ ಮುಕ್ತಿಯನ್ನು ಪಡೆಯುವರು.

ಹಾಲು ಮುಂತಾದ ವಸ್ತುಗಳಿಂದಲಾಗಲೀ, ಗಂಗಾತೀರ್ಥದಿಂದಲಾಗಲೀ, ಮೂರು ಲೋಕಗಳಲ್ಲಿರುವ ಯಾವುದೋ ಒಂದು ತೀರ್ಥಜಲದಿಂದಲಾಗಲೀ, ಶಂಖದಿಂದ ಶ್ರೀಹರಿಗೆ ಅಭಿಷೇಕವನ್ನು ಮಾಡಬೇಕು. ಹಾಗೆಯೇ ಶಂಖವಿಲ್ಲದೆ ಮಾಡಿದರೆ ನಿಷ್ಫಲವಾಗುತ್ತದೆ. ಶಂಖದಲ್ಲಿ ನೀರನ್ನು ತುಂಬಿಸಿ ಅಭಿಷೇಕವನ್ನು ಮಾಡುವವನು ನೂರು ಕಪಿಲಾಗೋವುಗಳನ್ನು ದಾನ ಮಾಡಿದ ಫಲವನ್ನು ಹೊಂದುವನು.

ನದೀಜಲವಾಗಲೀ, ಕೆರೆಯ ಜಲವಾಗಲೀ, ಹಳ್ಳದ ಜಲವಾಗಲೀ, ಬಾವಿಯ ಜಲವಾಗಲೀ ಮಡುವಿನ ಜಲವಾಗಲೀ ಶಂಖದಲ್ಲಿ ಹಾಕಿದ ಕೂಡಲೇ ಗಂಗಾಜಲಕ್ಕೆ ಸಮವಾಗುತ್ತದೆ ಎಂದು ಜನಾರ್ದನನು ಹೇಳಿರುವನು.

ಶಂಖೇ ತೀರ್ಥೋದಕಂ ಕೃತ್ವಾ ಯಃ ಸ್ನಾಪಯತಿ ಮಾನವಃ |
ಬಿಂದುಮಾತ್ರಸ್ಯ ದ್ವಾದಶ್ಯಾಂ ಕುಲಾನಾಂ ತಾರಯೇಚ್ಛತಮ್ ||

ಶಂಖದಲ್ಲಿ ಗಂಗೆ ಮುಂತಾದ ತೀರ್ಥ ಜಲಗಳನ್ನು ತುಂಬಿಸಿ ದ್ವಾದಶೀ ದಿನದಲ್ಲಿ ಶ್ರೀಹರಿಗೆ ಅಭಿಷೇಕವನ್ನು ಮಾಡಬೇಕು. ಒಂದೊಂದು ಬಿಂದುವಿನ ಅಭಿಷೇಕದಿಂದ ಅವನ ಕುಲದಲ್ಲಿ ಹುಟ್ಟಿರುವ ನೂರು ಜನರು ಸದ್ಗತಿಯನ್ನು ಪಡೆಯುವರು.

### ಶಂಖವಿಲ್ಲದೆ ಅಭಿಷೇಕವನ್ನು ಮಾಡಕೂಡದು

ಶಂಖಂ ವಿನಾಭಿಷೇಕಂ ತು ಯಃ ಕರೋತಿ ಹರೇರ್ದ್ವಿಜಃ |
ಸಕೋಟಿಕುಲಸಂಯುಕ್ತೋ ನರಕೇ ಪಚ್ಯತೇ ಧ್ರುವಮ್ ||
ಏವಂ ಪಾದ್ಮೇ ಚ ಹಾರೀತೇ ನಾರದೀಯೇ ಸಮೀರಿತಮ್ |

ಶಂಖವಿಲ್ಲದಂತೆ ಶ್ರೀಹರಿಗೆ ಅಭಿಷೇಕವನ್ನು ಮಾಡುವವನು ತನ್ನ ಕುಲದಲ್ಲಿ ಹುಟ್ಟಿರುವ ಕೋಟಿ ಜನರಿಂದ ಸಹಿತನಾಗಿ ನರಕದಲ್ಲಿ ಯಾತನೆಯನ್ನು ಅನುಭವಿಸುವನು. ಇದು ನಿಶ್ಚಯ. ಈ ವಿಷಯವು ಪಾದ್ಮಪುರಾಣ, ಹಾರೀತಸ್ಮೃತಿ, ನಾರದೀಯಪುರಾಣ ಮುಂತಾದ ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ.

### ಅಭಿಷೇಕಕಾಲದಲ್ಲಿ ಅಗುರುಗಂಧದ ಫಲ

ಸ್ನಾನಕಾಲೇ ತು ಕೃಷ್ಣಸ್ಯ ಅಗರುಂ ದಾಹಯೇಚ್ಚ ಯಃ |
ಪ್ರವಿಷ್ಟೇ ನಾಸಿಕಾಂ ಗಂಧೇ ಪಾಪಂ ಜನ್ಮಾರ್ಜಿತಂ ವ್ರಜೇತ್ ||

ಶ್ರೀಕೃಷ್ಣನ ಅಭಿಷೇಕಕಾಲದಲ್ಲಿ ಅಗುರುಗಂಧದ ಕಟ್ಟಿಗೆಯನ್ನು ಯಾರು ಸುಡುವನೋ ಆ ಅಗುರು ಕಟ್ಟಿಗೆಯ ಪರಿಮಳವು ಮೂಗನ್ನು ಪ್ರವೇಶಿಸಿದರೆ ಒಂದು ಜನ್ಮದಲ್ಲಿ ಮಾಡಿಯುವ ಅವನ ಪಾಪವು ದೂರವಾಗುತ್ತದೆ.

**ಕುಂಭಾಭಿಷೇಕ**

ಆವಾಹಿತಸ್ಯ ಕುಂಭಸ್ಯ ಜಲಂ ಚಾಥೋಽಭಿಷೇಚಯೇತ್ |
ಅಥಾಭಿಷೇಕಸಮಯೇ ಸೂಕ್ತಾನುಚ್ಚೈರುದೀರಯೇತ್ ||
ಸ್ವಸ್ಯ ಘರ್ಮಾನುವಾಕೇನ ಮಹಾಪುರುಷವಿದ್ಯಯಾ |
ಪೌರುಷೇಣಾಪಿ ಸೂಕ್ತೇನ ನ ತೇ ವಿಷ್ಣೋ ಇತಿ ತೃಚಾ ||
ಆಪೋಹಿಷ್ಠೇತಿ ತಿಸೃಭಿರತೋ ದೇವಾ ಅವಂತ್ವಿತಿ |
ಕಂಕತೋನ ಋಚಾ ಕೇಶೇ ಕಲಶೈಃ ಸ್ನಾಪಯೇತ್ತತಃ ||
ಹಿರಣ್ಯವರ್ಣಾಂ ಹರಿಣೀಮಸ್ಯವಾಮೇತಿ ಮಂತ್ರತಃ |
ಹಿರಣ್ಯವರ್ಣಾಃ ಶುಚಯಃ ಪಾವಕಾ ಇತಿ ಚತಸೃಭಿಃ ||
ಸ್ನಾನಕಾಲೇ ತು ಕೃಷ್ಣಸ್ಯ ಪಠನ್ನಾಮಸಹಸ್ರಕಮ್ |
ಪ್ರತ್ಯಹಂ ಲಭತೇ ಪುಣ್ಯಂ ಕಪಿಲಾಗೋಶತೋದ್ಭವಮ್ ||
ಫಲಮೇತನ್ಮಹೀಪಾಲ ಗೀತಾನಾಂ ಪರಿಕೀರ್ತನಾತ್ |
ಬ್ರಹ್ಮಸೂತ್ರೋಪನಿಷತ್ಪಠನಾತ್ಪಾವಿತಂ ಕುಲಮ್ ||

ಹಿಂದೆ ಪೂರ್ಣಕುಂಭದಲ್ಲಿ ಮೂಲಮೂರ್ತಿಯನ್ನು ಆವಾಹಿಸಿರುವೆವು. ಆ ಕುಂಭದ ಜಲವನ್ನು ಕೊನೆಗೆ ಅಭಿಷೇಕ ಮಾಡಬೇಕು. ಅಭಿಷೇಕ ಸಮಯದಲ್ಲಿ ಸೂಕ್ತಗಳನ್ನು ಗಟ್ಟಿಯಾಗಿ ಹೇಳಬೇಕು. ನಾರಾಯಣನ ಮಹಿಮೆಯನ್ನು ಹೇಳುತ್ತಿರುವ ಘರ್ಮಸೂಕ್ತ, ವಿಷ್ಣುಗಾಯತ್ರೀ, ಪುರುಷಸೂಕ್ತ, "ನ ತೇ ವಿಷ್ಣೋ" ಎಂಬ ಮೂರು ಋಕ್ಕುಗಳು, "ಆಪೋ ಹಿ ಷ್ಠಾ" ಎಂಬ ಮೂರು ಋಕ್ಕುಗಳು, "ಅತೋ ದೇವಾ ಅವಂತು" ಎಂಬ ಮೂರು ಋಕ್ಕುಗಳು, ಈ ಮಂತ್ರಗಳನ್ನು ಗಟ್ಟಿಯಾಗಿ ಉಚ್ಚರಿಸಬೇಕು.

"ಕಂಕತೋನ" ಎಂಬ ಋಕ್ಕಿನಿಂದ ಶ್ರೀಹರಿಯ ತಲೆಯ ಕೂದಲುಗಳನ್ನು ತೊಳೆಯಬೇಕು. "ಹಿರಣ್ಯವರ್ಣಾಂ ಹರಿಣೀಂ" "ಅಸ್ಯ ವಾಮೇ", "ಹಿರಣ್ಯವರ್ಣಾಃ ಶುಚಯಃ ಪಾವಕಾಃ" ಎಂಬ ನಾಲ್ಕು ಋಕ್ಕುಗಳನ್ನೂ ಗಟ್ಟಿಯಾಗಿ ಪಠಿಸಬೇಕು.

ಶ್ರೀಕೃಷ್ಣನ ಅಭಿಷೇಕಕಾದಲ್ಲಿ ವಿಷ್ಣುಸಹಸ್ರನಾಮವನ್ನು ಪಠಿಸಿದರೆ ಒಂದೊಂದು ದಿನದಲ್ಲಿಯೂ ನೂರು ಕಪಿಲಾ ಗೋವುಗಳ ದಾನದಿಂದ ಬರುವ ಫಲವು ಬರುತ್ತದೆ. ಇದೇ ಫಲವು ಭಗವದ್ಗೀತೆಯನ್ನು ಅಭಿಷೇಕ ಕಾಲದಲ್ಲಿ ಪಠಿಸಿದವರಿಗೂ ಬರುತ್ತದೆ. ಬ್ರಹ್ಮಸೂತ್ರಗಳನ್ನೂ, ಉಪನಿಷತ್ತುಗಳನ್ನೂ ಪಠಿಸಿದರೂ ಇದೇ ಫಲವೇ ಬರುತ್ತದೆ. ಪಠಿಸುವವನ ಕುಲವು ಪಾವನವಾಗುತ್ತದೆ.

**ಪೂಜಾಕಾಲದಲ್ಲಿ ಗಂಟೆಯನ್ನು ಬಾರಿಸಬೇಕು**

ತದಾ ಘಂಟಾನಾದಾನಾಂ ಫಲಮುಕ್ತಂ ಹಿ ನಾರದನೇ |
ಸ್ನಾನಾರ್ಚನಕ್ರಿಯಾಕಾಲೇ ಘಂಟಾನಾದಂ ಕರೋತಿ ಯಃ ||
ಪುರತೋ ವಾಸುದೇವಸ್ಯ ತಸ್ಯ ಪುಣ್ಯಫಲಂ ಶೃಣು |
ವರ್ಷಕೋಟಿಸಹಸ್ರಾಣಿ ವರ್ಷಕೋಟಿ ಶತಾನಿ ಚ ||

ವಸತೇ ದೇವಲೋಕೇಷು ಅಪ್ಸರೋ ಗಣಸೇವಿತಃ |
ಸರ್ವವಾದ್ಯಮಯೀ ಘಂಟಾ ಕೇಶವಸ್ಯ ಸದಾ ಪ್ರಿಯಾ ||
ವಾದನಾಲ್ಲಭತೇ ಪುಣ್ಯಂ ಯಜ್ಞಕೋಟಿಶತೋದ್ಭವಮ್ |
ವಾದಿತ್ರಾಣಾಂ ನಿನಾದೈಸ್ತು ಗೀತಾಮಂಗಲಸಂಸ್ತವೈಃ ||
ಯಃ ಸ್ನಾಪಯತಿ ದೇವೇಶಂ ಜೀವನ್ಮುಕ್ತೋ ಭವೇದ್ಧಿ ಸಃ |
ವಾದಿತ್ರಾಣಾಮಭಾವೇ ತು ಘಂಟಾನಾದಂ ಕರೋತಿ ಯಃ ||
ತಸ್ಯ ವಿಷ್ಣುಃ ಪ್ರಸೀದೇತ ಸರ್ವವಾದ್ಯಮಯೀ ಯತಃ |
ಸರ್ವವಾದ್ಯಮಯೀ ಘಂಟಾ ದೇವದೇವಸ್ಯ ವಲ್ಲಭಾ ||
ತಸ್ಮಾತ್ಸರ್ವಪ್ರಯತ್ನೇನ ಘಂಟಾನಾದಂ ಹಿ ಕಾರಯೇತ್ |
ಮನ್ವಂತರಸಹಸ್ರಾಣಿ ಮನ್ವಂತರಶತಾನಿ ಚ |
ಘಂಟಾನಾದೇನ ದೇವೇಶಃ ಪ್ರೀತೋ ಭವತಿ ಕೇಶವಃ ||

ಶ್ರೀಹರಿಯ ಅಭಿಷೇಕಕಾಲದಲ್ಲಿ ಘಂಟೆ ಮುಂತಾದ ವಾದ್ಯಗಳನ್ನು ಬಾರಿಸುವುದಕ್ಕೆ ಫಲವು ಹೇಳಲ್ಪಟ್ಟಿದೆ. ಅಭಿಷೇಕಕಾಲದಲ್ಲಿಯೂ ಅರ್ಚನೆಯನ್ನು ಮಾಡುವ ಕಾಲದಲ್ಲಿಯೂ ಶ್ರೀಹರಿಯ ಮುಂಭಾಗದಲ್ಲಿ ಘಂಟಾಧ್ವನಿಯನ್ನು ಮಾಡುವವನು ದೇವಲೋಕದಲ್ಲಿ ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುತ್ತಾ ಕೋಟಿ ಸಹಸ್ರ ಮತ್ತು ಕೋಟಿ ಶತವರ್ಷಗಳವರೆಗೆ ದೇವಲೋಕದಲ್ಲಿ ವಾಸಿಸುವನು. ಘಂಟೆಯು ಸರ್ವವಾದ್ಯಮಯವಾದುದು. ಆದ್ದರಿಂದ ಶ್ರೀಕೇಶವನಿಗೆ ಯಾವಾಗಲೂ ಪ್ರಿಯವಾದುದು. ಆದ್ದರಿಂದ ಘಂಟೆಯನ್ನು ಬಾರಿಸಿದ್ದರಿಂದ ಬರುವ ಪುಣ್ಯವು ಕೋಟಿಶತಯಜ್ಞಗಳಿಂದ ಬರುವ ಪುಣ್ಯಕ್ಕೆ ಸಮವಾಗುತ್ತದೆ.

ವಾದ್ಯಗಳು ಇಲ್ಲದಿದ್ದರೆ ಘಂಟಾಧ್ವನಿಯನ್ನು ಮಾಡಬೇಕು. ಸರ್ವವಾದ್ಯಮಯವಾಗಿರುವ ಈ ಘಂಟೆಯ ಧ್ವನಿಯಿಂದ ಶ್ರೀಹರಿಯು ಪ್ರೀತನಾಗುವನು. ವಾದ್ಯಗಳ ಧ್ವನಿಗಳಿಂದಲೂ ಗೀತೆಯ ಮಂಗಲಕರವಾದ ಸ್ತೋತ್ರಗಳಿಂದಲೂ ದೇವೇಶನಾದ ಶ್ರೀಹರಿಗೆ ಅಭಿಷೇಕವನ್ನು ಮಾಡುವವನು ಜೀವನ್ಮುಕ್ತನೆನಿಸುವನು. ದೇವೇಶನಾದ ಶ್ರೀಹರಿಯು ಒಂದು ಸಹಸ್ರ ಮನ್ವಂತರ ಮತ್ತು ಒಂದು ನೂರು ಮನ್ವಂತರಗಳವರೆಗೆ ಪ್ರೀತನಾಗುವನು.

### ದೇವರನ್ನು ವಸ್ತ್ರದಿಂದ ಒರೆಸುವುದು

ತತಃ ಸ್ನಾಪ್ಯ ಹರಿಂ ಯಸ್ತು ವಸ್ತ್ರೇಣ ಪರಿಮಾರ್ಜಯೇತ್ |
ತಸ್ಯ ಜನ್ಮಾರ್ಜಿತಸ್ಯಾಪಿ ಲಭತೇ ಪಾಪಮಾರ್ಜನಮ್ ||

ದೇವರಿಗೆ ಸ್ನಾನವನ್ನು ಮಾಡಿಸಿ ವಸ್ತ್ರದಿಂದ ಅವನನ್ನು ಒರೆಸುವವನು ಹಿಂದಿನ ಜನ್ಮದಲ್ಲಿ ಮಾಡಿರುವ ಪಾಪಗಳೆಲ್ಲವನ್ನು ಕಳೆದುಕೊಳ್ಳುವನು.

### ಶಾಲಿಗ್ರಾಮವನ್ನು ಒರೆಸಕೂಡದು

ಶಾಲಿಗ್ರಾಮಾಭಿಷೇಕಂ ತು ಕೃತ್ವಾ ವಸ್ತ್ರೇಣ ಮಾರ್ಜನಮ್ |

ಶಾಲಿಗ್ರಾಮಗಳಿಗೆ ಅಭಿಷೇಕವನ್ನು ಮಾಡಿ ಯಾವ ಮೂಢನು ವಸ್ತ್ರಗಳಿಂದ ಒರೆಸುವನೋ ಅವನು ಘೋರವಾದ ಅಂಧತಮೋನರಕವನ್ನು ಪಡೆಯುವನು.

## ಅಲಂಕಾರ ಪೂಜಾ

ತತೋऽಲಂಕಾರಪೀಠೇ ತ್ವಮಾಗಚ್ಛೇತಿ ಚಾರ್ಚಯೇತ್ |
ಸ್ನಾನಾಂಗತ್ವೇನಾಪಿ ತದಾ ಪಾದ್ಯಮಾಚಮನಂ ಚರೇತ್ ||

ಅನಂತರದಲ್ಲಿ "ಹೇ ಈಶ ತ್ವಂ ಅಲಂಕಾರಪೀಠೇ ಆಗಚ್ಛ" ಅಂದರೆ "ಎಲೋ ಸ್ವಾಮಿಯೇ, ನೀನು ಅಲಂಕಾರ ಪೀಠದಲ್ಲಿ ಕುಳಿತುಕೊಳ್ಳು" ಎಂದು ಪ್ರಾರ್ಥಿಸಬೇಕು. ಸ್ನಾನಕ್ಕೆ ಅಂಗವಾಗಿರುವ ಪಾದ್ಯವನ್ನೂ ಆಚಮನವನ್ನು ಕೊಡಬೇಕು.

### ಆಚಮನೀಯವನ್ನು ಸಮರ್ಪಿಸಬೇಕಾದ ಸಂದರ್ಭಗಳು

ಸ್ನಾನೇ ವಸ್ತ್ರೇ ಚ ನೈವೇದ್ಯೇ ದದ್ಯಾದಾಚಮನೀಯಕಮ್ |
ಧೂಪೇ ದೀಪೇ ಚ ಪಾದ್ಯೇ ಚ ತಾಂಬೂಲೇ ದಂತಧಾವನೇ ||

ಸ್ನಾನಕಾಲ, ವಸ್ತ್ರಸಮರ್ಪಣ, ನೈವೇದ್ಯಸಮರ್ಪಣ, ಧೂಪಕಾಲ, ದೀಪಸಮರ್ಪಣಕಾಲ, ಪಾದ್ಯ, ತಾಂಬೂಲ ಸಮರ್ಪಣಕಾಲ, ದಂತಧಾವನಕಾಲ - ಈ ಎಂಟು ಸಮಯಗಳಲ್ಲಿ ಆಚಮನೀಯವನ್ನು ಸಮರ್ಪಿಸಬೇಕು.

ದದ್ಯಾತ್ತು ವಿಷ್ಣುಗಾಯತ್ರ್ಯಾ ದ್ವೇ ವಸ್ತ್ರೇ ಧೌತನಿರ್ಮಲೇ |
ಯಜ್ಞೋಪವೀತಾಲಂಕಾರೌ ತತೋ ದದ್ಯಾತ್ಸುನಿರ್ಮಲೌ ||

ಒಗೆದಿರುವ ಮತ್ತು ನಿರ್ಮಲವಾಗಿರುವ ಎರಡು ವಸ್ತ್ರಗಳನ್ನು ವಿಷ್ಣುಗಾಯತ್ರಿಯಿಂದ ಸಮರ್ಪಿಸಬೇಕು. ಅನಂತರದಲ್ಲಿ ಅತಿನಿರ್ಮಲವಾಗಿರುವ ಯಜ್ಞೋಪವೀತವನ್ನೂ, ಅಲಂಕಾರಗಳನ್ನೂ ಸಮರ್ಪಿಸಬೇಕು.

ಪ್ರಣವೇನ ಬ್ರಹ್ಮಸೂತ್ರಮುತ್ತರೀಯಂ ಚ ಕಲ್ಪಯೇತ್ |
ಆಚಾಂತಮುತ್ಥಿತಾಯಾಥ ಪಾದುಕೇ ಮಧ್ಯಮಾಸನೇ ||

"ಓಂ" ಎಂಬ ಪ್ರಣವ ಮಂತ್ರದಿಂದ ಯಜ್ಞೋಪವೀತವನ್ನೂ ಹೊದ್ದುಕೊಳ್ಳುವ ಬಟ್ಟೆಯನ್ನೂ ಸಮರ್ಪಿಸಬೇಕು. ಆಚಮನವನ್ನು ಸಮರ್ಪಿಸಬೇಕು. ಎದ್ದು ಮಧ್ಯಮವಾದ ಆಸನದಲ್ಲಿ ಕುಳಿತಿರುವ ಶ್ರೀಹರಿಗೆ ಎರಡು ಪಾದುಕೆಗಳನ್ನು ಸಮರ್ಪಿಸಬೇಕು.

ಸುಖಾಸೀನಾಯ ದೇವಾಯ ಪ್ರಾಗ್ವದರ್ಘ್ಯಾದಿ ನಿರ್ವಪೇತ್ |
ಆದರ್ಶಂ ದರ್ಶಯಿತ್ವಾಥ ಪೂಜಾಪೀಠೇ ನಿವೇಶಯೇತ್ ||

ಸುಖವಾಗಿ ಕುಳಿತಿರುವ ಶ್ರೀಹರಿಗೆ ಹಿಂದೆ ಹೇಳಿದಂತೆ ಅರ್ಘ್ಯ ಮುಂತಾದವುಗಳನ್ನು ಸಮರ್ಪಿಸಬೇಕು. ಕನ್ನಡಿಯಲ್ಲಿ ದೇವರ ಮುಖವನ್ನು ತೋರಿಸಬೇಕು. ಅನಂತರದಲ್ಲಿ ಪೂಜಾಪೀಠದಲ್ಲಿ ಕುಳ್ಳಿರಿಸಬೇಕು.

ಉಪಚಾರಾಂಸ್ತತೋ ದತ್ವಾ ದದ್ಯಾದಾಚಮನೀಯಕಮ್ |
ಋಚಾ ಮೂರ್ಧಾನಮಿತಿ ತು ಕೇಶಾನ್ ಸಂಶೋಧಯೇತ್ತತಃ ||

"ಅನಂತರದಲ್ಲಿ ಎಲ್ಲಾ ಉಪಚಾರಗಳನ್ನೂ, ಉಪಚಾರಗಳ ಅನಂತರದಲ್ಲಿ ಆಚಮನೀಯವನ್ನೂ ಸಮರ್ಪಿಸಬೇಕು. "ಮೂರ್ಧಾನಂ" ಎಂಬ ಋಕ್ಕಿನಿಂದ ತಲೆಯನ್ನು ಶೋಧಿಸಬೇಕು."

ಕಿರೀಟಂ ಮುಕುಟಂ ಹಾರಂ ಮಕರೇ ಕುಂಡಲೇ ತಥಾ |
ಕಟಕಾಂಗುಲೀಯವಲಯಮೇಖಲಾನೂಪುರಾದಿಕಮ್ ||
ಭೂಷಣಾನಿ ತತೋ ದತ್ವಾ ಭೋಗಸಿಂಹಾಸನೇ ವ್ರಜ |
ಇತಿ ಪ್ರಾರ್ಥ್ಯ ತತೋ ದದ್ಯಾದ್ಗಂಧಪುಷ್ಪೇ ತಥೈವ ಚ ||

"ಕಿರೀಟ, ರುಮಾಲು, ಮುತ್ತಿನಸರ, ಉಡುದಾರ, ಕಾಲುಗಡಗ, ಬಳೆ, ಉಂಗುರ, ಮೊಸಳೆಯ ಆಕಾರವುಳ್ಳ ಕರ್ಣಕುಂಡಲಗಳು, ಮುಂತಾದ ಆಭರಣಗಳನ್ನು ಸಮರ್ಪಿಸಬೇಕು. ಅನಂತರದಲ್ಲಿ "ಭೋಗಸಿಂಹಾಸನಕ್ಕೆ ಹೊರಡು" ಎಂದು ಪ್ರಾರ್ಥಿಸಬೇಕು. ಭೋಗಸಿಂಹಾಸನದಲ್ಲಿ ಕುಳಿತಿರುವ ಶ್ರೀಹರಿಗೆ ಗಂಧ ಮತ್ತು ಪುಷ್ಪಗಳನ್ನು ಸಮರ್ಪಿಸಬೇಕು.

ಶ್ರೀಗಂಧಂ ಕುಂಕುಮಂ ವಾಪಿ ತುಲಸೀಕಾಷ್ಠಚಂದನಮ್ ।
ಕರ್ಪೂರಾಗುರುಸಮ್ಮಿಶ್ರಂ ದದ್ಯಾತ್ಕೇಶವತೋಷಣಮ್ ॥

"ಶ್ರೀಗಂಧ, ಕೇಸರಿ, ತುಲಸೀಕಾಷ್ಠಚಂದನ, ಪಚ್ಚಕರ್ಪೂರ, ಅಗುರು, ಇವುಗಳನ್ನೆಲ್ಲವನ್ನೂ ಒಟ್ಟಿಗೆ ಸೇರಿಸಿ ಶ್ರೀಹರಿಗೆ ಸಮರ್ಪಿಸಬೇಕು. ಇದರಿಂದ ಶ್ರೀಕೇಶವನಿಗೆ ಸಂತೋಷವು ಏರ್ಪಡುತ್ತದೆ."

ತತೋಽಪ್ಯಾದರ್ಶಂ ಸುಗಂಧಂ ತು ತುಲಸೀದಲಮಿಶ್ರಿತಮ್ ।
ಇದಂ ವಿಷ್ಣುರ್ವಿಮಂತ್ರೇಣ ಚಾರ್ಚಯೇನ್ಮಾರ್ಜಯೇತ್ಪರಮ್ ॥

"ಅನಂತರದಲ್ಲಿ "ಇದಂ ವಿಷ್ಣುರ್ವಿಚಕ್ರಮೇ" ಎಂಬ ಮಂತ್ರದಿಂದ ಸುಗಂಧವಸ್ತುಗಳಿಂದ ಯುಕ್ತವಾಗಿರುವ ಕನ್ನಡಿಯನ್ನು ಶ್ರೀಹರಿಗೆ ಸಮರ್ಪಿಸಬೇಕು. ನೀರನ್ನು ಶ್ರೀಹರಿಗೆ ಪ್ರೋಕ್ಷಿಸಬೇಕು."

ತತಃ ಪುಷ್ಪಂ ಚ ತುಲಸೀಮಿಶ್ರಮೇವ ಸಮರ್ಪಯೇತ್ ।
ಜಾತ್ಯಾದೀನಿ ಸುಗಂಧೀನಿ ತುಲಸೀಮಿಶ್ರಿತಾನಿ ಚ ॥
ದತ್ವಾ ಪುಣ್ಯಮವಾಪ್ನೋತಿ ಮಹಚ್ಚ ಹರಿತುಷ್ಟಿದಮ್ ।

"ಅನಂತರದಲ್ಲಿ ತುಲಸಿಯಿಂದ ಮಿಶ್ರಿತವಾಗಿಯೇ ಇರುವ ಪುಷ್ಪವನ್ನು ಸಮರ್ಪಿಸಬೇಕು. ಜಾಜಿ ಮುಂತಾದ ಸುಗಂಧವಾದ ಪುಷ್ಪಗಳನ್ನು ತುಲಸೀ ಮಿಶ್ರಿತವಾಗಿಯೇ ಶ್ರೀಹರಿಗೆ ಸಮರ್ಪಿಸಿದರೆ ಶ್ರೀಹರಿಗೆ ಸಂತೋಷಕರವಾಗಿರುವ ಅಧಿಕವಾದ ಪುಣ್ಯವು ಬರುತ್ತದೆ."

ಸುಮಂಜರೀದಲೈರ್ಯುಕ್ತೈಃ ಕೋಮಲೈಸ್ತುಲಸೀದಲೈಃ ।
ಯೇ ಕುರ್ವಂತಿ ಹರೇಃ ಪೂಜಾಂ ತೇ ಕೃತಾರ್ಥಾಃ ಕಲೌ ಯುಗೇ ॥

"ಒಳ್ಳೆಯ ಮಂಜರೀದಲಗಳಿಂದ ಸಹಿತವಾಗಿರುವ ಮೃದುವಾದ ತುಲಸೀದಲಗಳಿಂದ ಶ್ರೀಹರಿಯ ಪೂಜೆಯನ್ನು ಯಾರು ಮಾಡುವರೋ ಅವರು ಕಲಿಯುಗದಲ್ಲಿ ಕೃತಾರ್ಥರಾಗುವರು."

ಪ್ರತ್ಯೇಕಂ ಪುಷ್ಪಮಾದಾಯ ತುಲಸೀಂ ವಾ ಸಮರ್ಪಯೇತ್ ।
ಪ್ರತ್ಯೇಕಂ ಮೂಲಮಂತ್ರೇಣ ಯುಗಪನ್ನಾರ್ಪಯೇನ್ನಮ ॥
ಯಾವಂತಿ ಯುಗಪದ್ದದ್ಯಾತ್ತಾವದೇಕಮಿತೀರಿತಮ್ ।
ಇತಿ ವಾರಾಹವಚನಾತ್ಪೃಥಗೇವಾರ್ಪಯೇದ್ಬಲಮ್ ॥

"ಒಂದೊಂದು ಸಲ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರವನ್ನು ಹೇಳುತ್ತಾ ಒಂದೊಂದು ಪುಷ್ಪವನ್ನಾಗಲೀ, ತುಳಸಿಯನ್ನಾಗಲೀ ಶ್ರೀಹರಿಗೆ ಸಮರ್ಪಿಸಬೇಕು. ಒಂದೊಂದು ಮಂತ್ರವನ್ನು ಹೇಳುತ್ತಾ ಒಮ್ಮೆ ಪುಷ್ಪಗಳ ಅಥವಾ ತುಲಸೀಗಳ ಸಮೂಹವನ್ನು ಸಮರ್ಪಿಸಕೂಡದು. ವಾರಾಹಪುರಾಣದಲ್ಲಿ "ಒಮ್ಮೆ ಸಮರ್ಪಿಸಲ್ಪಟ್ಟ ವಸ್ತುಗಳು ಎಷ್ಟಿದ್ದರೂ ಅವುಗಳು ಒಂದೇ ಎಂದು ಹೇಳಲ್ಪಡುತ್ತವೆ" ಎಂದು ಹೇಳಲ್ಪಟ್ಟಿದೆ. ಆದ್ದರಿಂದ ಒಮ್ಮೆ ಅನೇಕ ಪುಷ್ಪಗಳನ್ನಾಗಲೀ, ತುಲಸೀದಳಗಳನ್ನಾಗಲೀ ಸಮರ್ಪಿಸಿದ್ದರಿಂದ ಅಧಿಕಫಲವು ಬರಲಾರದು. ಬೇರೆ ಬೇರೆ ಪುಷ್ಪಗಳನ್ನಾಗಲೀ, ತುಳಸಿಗಳನ್ನಾಗಲೀ ಬೇರೆ ಬೇರೆ ಮೂಲಮಂತ್ರಗಳಿಂದಲೇ ಸಮರ್ಪಿಸಬೇಕು."

ಯಃ ಪುನಸ್ತುಲಸೀಪತ್ರೈಃ ಕೋಮಲೈರ್ಮಂಜರೀಯುತೈಃ |
ಪೂಜಯೇತ್ಸೂತ್ರಬದ್ಧೈಸ್ತು ಕೃಷ್ಣಂ ಮುಚ್ಯೇತ ಬಂಧನಾತ್ ||

"ಕೋಮಲವಾದ ಮತ್ತು ಮಂಜರೀಗಳಿಂದ ಯುಕ್ತವಾಗಿರುವ ತುಲಸೀದಳಗಳನ್ನು ಹಗ್ಗದಿಂದ ಕಟ್ಟಿ ಶ್ರೀಕೃಷ್ಣನಿಗೆ ಯಾವನು ಸಮರ್ಪಿಸುವನೋ ಅವನು ಸಂಸಾರಬಂಧನದಿಂದ ಬಿಡುಗಡೆಯನ್ನು ಪಡೆಯುವನು."

ಆಪೀಠಾಂತಂ ಮಹೇಶಾನಂ ತುಲಸೀದಲಮಾಲಯಾ |
ಸಂಛಾದಯತಿ ಯೋ ವಿಷ್ಣುಂ ಗವಾಂ ಕೋಟಿಫಲಂ ಲಭೇತ್ ||

ಶ್ರೀಕೃಷ್ಣನ ಕಂಠದಿಂದ ಆರಂಭಿಸಿ ಪೀಠದವರೆಗಿನ ಪ್ರದೇಶವನ್ನು ತುಲಸೀದಲಮಾಲೆಯಿಂದ ಯಾವನು ಮುಚ್ಚುವನೋ ಅವನು ಒಂದು ಕೋಟಿ ಗೋದಾನಗಳನ್ನು ಮಾಡಿದ ಫಲವನ್ನು ಹೊಂದುವನು.

ಶುಷ್ಕಂ ಪರ್ಯುಷಿತಂ ಚಾರ್ದ್ರಂ ಕಾಷ್ಠಂ ವಾ ತುಲಸೀ ಸತಾಮ್ |
ಅರ್ಚನೇ ವಾಸುದೇವಸ್ಯ ಲಕ್ಷಕೋಟಿಗುಣಂ ಭವೇತ್ ||

"ಒಣಗಿದ ತುಳಸಿ, ಹಳಸಿದ ತುಲಸಿ, ಹಸಿತುಲಸಿ, ತುಳಸೀಗಿಡದಲ್ಲಿರುವ ಕಾಷ್ಠ ಮುಂತಾದವುಗಳನ್ನು ವಾಸುದೇವನನ್ನು ಪೂಜಿಸಿದರೆ ಲಕ್ಷ ಅಥವಾ ಕೋಟಿಯಷ್ಟು ಫಲಗಳನ್ನು ಕೊಡುತ್ತವೆ."

ತುಲಸೀದಲನಿರ್ಮುಕ್ತಪುಷ್ಪೇಣಾಭ್ಯರ್ಚನೇ ಹರೇಃ |
ಶತಜನ್ಮಾರ್ಜಿತಂ ಪುಣ್ಯಂ ಕ್ಷಣಾದೇವ ವಿನಶ್ಯತಿ ||

"ತುಳಸಿಯಿಲ್ಲದೆ ಪುಷ್ಪಗಳಿಂದ ಅರ್ಚಿಸಿದರೆ ನೂರು ಜನ್ಮಗಳವರೆಗೆ ಮಾಡಿರುವ ಪುಣ್ಯವು ಅದೇ ಕ್ಷಣದಲ್ಲಿ ನಶಿಸುತ್ತದೆ."

ಪುಷ್ಪಾದಿಭಿರಲಂಕೃತ್ಯ ತುಲಸ್ಯಾಷ್ಟೋತ್ತರಂ ಶತಮ್ |
ಅಷ್ಟೋತ್ತರಸಹಸ್ರಂ ವಾ ಮೂಲೇನ ತು ಸಮರ್ಚಯೇತ್ ||

ಪುಷ್ಪ ಮುಂತಾದವುಗಳಿಂದ ಶ್ರೀಕೃಷ್ಣನನ್ನು ಅಲಂಕರಿಸಬೇಕು. ಮೂಲಮಂತ್ರವನ್ನು ಹೇಳುತ್ತಾ ತುಲಸಿಯಿಂದ ನೂರ ಎಂಟು ಸಲ ಅಥವಾ ಸಾವಿರದ ಎಂಟು ಸಲ ಅರ್ಚನೆ ಮಾಡಬೇಕು.

ಸಹಸ್ರನಾಮಭಿರ್ವಾಪಿ ಕೇಶವಾದಿಭಿರೇವ ವಾ |
ತತಃ ಪಂಚಾಯುಧಾನಾಂ ಚ ಪೂಜಾಂ ಕುರ್ಯಾದ್ಯಥಾವಿಧಿ ||
ಶಂಖಚಕ್ರಗದಾಪದ್ಮಧನೂಂಷಿ ಚ ಯಥಾಕ್ರಮಮ್ |

ಸಹಸ್ರನಾಮಗಳಿಂದ ಅಥವಾ ಕೇಶವ ಮುಂತಾದ ಇಪ್ಪತ್ತನಾಲ್ಕು ಹೆಸರುಗಳಿಂದ ಶ್ರೀಹರಿಯನ್ನು ತುಲಸೀದಲಗಳಿಂದ ಪೂಜಿಸಬೇಕು. ಅನಂತರದಲ್ಲಿ ಶ್ರೀಹರಿಯ ಐದು ಆಯುಧಗಳನ್ನು ಪೂಜಿಸಬೇಕು. ಶಂಖ, ಚಕ್ರ, ಗದಾ, ಪದ್ಮ, ಶಾರ್ಙ್ಗಧನುಸ್ಸುಗಳನ್ನು ಕ್ರಮವಾಗಿ ಪೂಜಿಸಬೇಕು.

ದ್ವಿಹಸ್ತಾನ್ ಪುರುಷಾಕಾರಾನ್ ಸ್ವಚಿಹ್ನಾಂಕಿತಮಸ್ತಕಾನ್ |
ತತ್ತತ್ಸವ್ಯೇ ಸ್ಥಾಪಯಿತ್ವಾ ಗಂಧಪುಷ್ಪಾಕ್ಷತಾದಿಭಿಃ ||

ಹಿಂದೆ ಹೇಳಿದ ಆಯುಧಗಳ ಎಡಭಾಗದಲ್ಲಿ ಎರಡು ಕೈಗಳಿಂದಲೂ ಪುರುಷಾಕಾರಗಳಿಂದಲೂ ತಮ್ಮ ತಮ್ಮ ತಲೆಗಳಲ್ಲಿ ತಮ್ಮ ತಮ್ಮ ಆಯುಧಗಳಿಂದಲೂ ಯುಕ್ತವಾಗಿರುವ ಶ್ರೀಹರಿಯ ಆಯುಧಗಳನ್ನು ಗಂಧ, ಪುಷ್ಪ, ಮಂತ್ರಾಕ್ಷತೆ ಮುಂತಾದವುಗಳಿಂದ ಪೂಜಿಸಬೇಕು.

ತತೋ ಮೂಲೇನ ಸಂಧ್ಯಾಂಗಂ ದೇಯಾದರ್ಘ್ಯತ್ರಯಂ ಪುನಃ |
ದೇವಾಯ ದತ್ವಾ ಕುರ್ಯಾತ್ತು ತದಾವರಣಪೂಜನಮ್ ||
ಕರಿಷ್ಯ ಇತಿ ಸಂಕಲ್ಪ್ಯ ತುಲಸ್ಯಾಂಜಲಿನಾ ತಥಾ |

ಅನಂತರದಲ್ಲಿ ಮೂಲಮಂತ್ರದಿಂದ ಶ್ರೀಹರಿಗೆ ಮೂರು ಅರ್ಘ್ಯಗಳನ್ನು ಸಮರ್ಪಿಸಬೇಕು. ತುಲಸೀದಲವನ್ನು ತನ್ನ ಕೈಗಳನ್ನು ಬೊಗಸೆಗಳಾಗಿ ಮಾಡಿಕೊಂಡು ಆವರಣಪೂಜೆಯನ್ನು ಮಾಡಬೇಕು.

ಲಕ್ಷ್ಮೀಧರೇ ಯಜೇತ್ತತ್ರ ಪಾರ್ಶ್ವಯೋರುಭಯೋರಪಿ |
ಹಿರಣ್ಯದೂರ್ವಾವರ್ಣೇತಿ ಸರ್ವಾಭರಣಭೂಷಿತೇ ||
ವೀಜಚ್ಚಾಮರಹಸ್ತೇ ಚ ತನ್ಮುಖನ್ಯಸ್ತಲೋಚನೇ |
ಹೃದಯಾದೀಂಸ್ತಥೇಂದ್ರಾದಿದಿಕ್ಷ್ವಸ್ತ್ರಂ ಕೋಣಕೇಷು ಚ ||

ಶ್ರೀಹರಿಯ ಬಲಭಾಗದಲ್ಲಿ ಬಂಗಾರದ ಬಣ್ಣದಿಂದ ಯುಕ್ತಳಾಗಿರುವ ಲಕ್ಷ್ಮೀ ದೇವಿಯನ್ನೂ ಎಡಭಾಗದಲ್ಲಿ ಗರಿಕೆ ಹುಲ್ಲಿನ ಬಣ್ಣದಿಂದ ಯುಕ್ತಳಾಗಿರುವ ಭೂದೇವಿಯನ್ನೂ ಪೂಜಿಸಬೇಕು. ಆ ದೇವಿಯರಿಬ್ಬರೂ ಸರ್ವಾಭರಣಗಳಿಂದ ಅಲಂಕೃತರಾಗಿರಬೇಕು. ಕೈಗಳಿಂದ ಚಾಮರಗಳನ್ನು ತೆಗೆದುಕೊಂಡು ಶ್ರೀಹರಿಯನ್ನು ಬೀಸುತ್ತಿರಬೇಕು. ಶ್ರೀಹರಿಯ ಮುಖವನ್ನು ಎವೆಯಿಕ್ಕದೆ ನೋಡುತ್ತಿರಬೇಕು. ಪೂರ್ವದಲ್ಲಿ ಹೃದಯದಲ್ಲಿರುವ ಕ್ರುದ್ಧೋಲ್ಕನನ್ನೂ, ದಕ್ಷಿಣ ದಿಕ್ಕಿನಲ್ಲಿ ಶಿರಸ್ಸಿನಲ್ಲಿರುವ ಮಹೋಲ್ಕನನ್ನೂ, ಪಶ್ಚಿಮ ದಿಕ್ಕಿನಲ್ಲಿ ಶಿರಸ್ಸಿನಲ್ಲಿರುವ ವೀರೋಲ್ಕನನ್ನೂ, ಉತ್ತರ ದಿಕ್ಕಿನಲ್ಲಿ ಕವಚದಲ್ಲಿರುವ ದ್ಯೂಲ್ಕನನ್ನೂ, ಆಗ್ನೇಯ, ನೈಋತ್ಯ, ವಾಯವ್ಯ, ಐಶಾನ್ಯ ಎಂಬ ವಿದಿಕ್ಕುಗಳಲ್ಲಿ ಅಸ್ತ್ರದಲ್ಲಿರುವ ಸಹಸ್ರೋಲ್ಕನನ್ನೂ ಪೂಜಿಸಬೇಕು.

ವಾಸುದೇವಾದಿಕಾನ್‌ದಿಕ್ಷು ಯಥಾರಾಶಿಕ್ರಮೇಣ ತು |
ಕೇಶವಾದೀನ್ ದ್ವಾದಶೈವ ಸರ್ವಲಕ್ಷಣಸಂಯುತಾನ್ ||

ವಾಸುದೇವನನ್ನು ಪೂರ್ವದಲ್ಲಿರುವ ಮೇಷ, ವೃಷಭ, ಮಿಥುನರಾಶಿಗಳಲ್ಲಿಯೂ ಸಂಕರ್ಷಣನನ್ನು, ದಕ್ಷಿಣದಲ್ಲಿರುವ ಕರ್ಕಾಟಕ, ಸಿಂಹ, ಕನ್ಯಾರಾಶಿಗಳಲ್ಲಿಯೂ ಪ್ರದ್ಯುಮ್ನನನ್ನು, ಪಶ್ಚಿಮದಲ್ಲಿರುವ ತುಲಾ, ವೃಶ್ಚಿಕ, ಧನುಸ್ಸು ರಾಶಿಗಳಲ್ಲಿಯೂ ಅನಿರುದ್ಧನನ್ನು, ಉತ್ತರ ದಿಕ್ಕಿನಲ್ಲಿರುವ ಮಕರ, ಕುಂಭ, ಮೀನ ರಾಶಿಗಳಲ್ಲಿಯೂ ಪೂಜಿಸಬೇಕು.

ಕೇಶವ ಮುಂತಾದ ಹನ್ನೆರಡು ಮೂರ್ತಿಗಳನ್ನು ಪೂರ್ವದಿಕ್ಕಿನಿಂದ ಹನ್ನೆರಡು ದಿಕ್ಕುಗಳಲ್ಲಿಯೂ ಪೂಜಿಸಬೇಕು. ಈ ಎಲ್ಲಾ ಭಗವನ್ಮೂರ್ತಿಗಳೂ ಸರ್ವಲಕ್ಷಣಗಳಿಂದ ಯುಕ್ತವಾಗಿರಬೇಕು.

ಮತ್ಸ್ಯಕೂರ್ಮವರಾಹಾಂಶ್ಚ ನಾರಸಿಂಹಂ ಚ ವಾಮನಮ್ |
ಭಾರ್ಗವಂ ರಾಘವಂ ಕೃಷ್ಣಂ ಬುದ್ಧಂ ಕಲ್ಕಿನಮೇವ ಚ ||
ಅನಂತಂ ವಿಶ್ವರೂಪಂ ಚ ತದ್ಬಹಿಃ ಪೂಜಯೇತ್ಕ್ರಮಾತ್ ||

"ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ದಾಶರಥಿರಾಮ, ಕೃಷ್ಣ, ಬುದ್ಧ, ಅನಂತ, ವಿಶ್ವರೂಪ, ಎಂಬ ಹನ್ನೆರಡು ಭಗವನ್ಮೂರ್ತಿಗಳನ್ನು ಕೇಶವಾದಿಮೂರ್ತಿಗಳ ಆವರಣಕ್ಕಿಂತ ಹೊರಗೆ ಪೂಜಿಸಬೇಕು."

ಅನಂತಬ್ರಹ್ಮವಾಯ್ವೀಶಾನ್ ವೀಶಂ ಚಾಗ್ರೇ ಪ್ರಪೂಜಯೇತ್ |
ವಾರುಣೀಂ ಚೈವ ಗಾಯತ್ರೀಂ ಭಾರತೀಂ ಗಿರಿಜಾಮಪಿ ||
ಕೋಣೇಷು ವೀಂದ್ರವಾಮೇ ಚ ಸೌಪರ್ಣೀಂ ಚ ಪ್ರಪೂಜಯೇತ್ ||

"ಮತ್ಸ್ಯ ಮುಂತಾದ ಆವರಣದೇವತೆಗಳ ಹೊರಗೆ ಪೂರ್ವದಲ್ಲಿ ಶೇಷನನ್ನೂ, ದಕ್ಷಿಣದಲ್ಲಿ ಬ್ರಹ್ಮನನ್ನೂ ಪಶ್ಚಿಮದಲ್ಲಿ

ವಾಯುವನ್ನೂ, ಉತ್ತರದಲ್ಲಿ ರುದ್ರನನ್ನೂ, ಎಲ್ಲರಿಗಿಂತಲೂ ಮುಂದೆ ಗರುಡನನ್ನೂ ಶೇಷನ ಎಡಭಾಗದಲ್ಲಿ ವಾರುಣೀದೇವಿಯನ್ನೂ ಬ್ರಹ್ಮನ ಎಡಭಾಗದಲ್ಲಿ ಗಾಯತ್ರೀದೇವಿಯನ್ನೂ ವಾಯುವಿನ ಎಡಭಾಗದಲ್ಲಿ ಭಾರತೀದೇವಿಯನ್ನೂ, ರುದ್ರನ ಎಡಭಾಗದಲ್ಲಿ ಗಿರಿಜಾದೇವಿಯನ್ನೂ ಗರುಡನ ಎಡಭಾಗದಲ್ಲಿ ಸೌಪರ್ಣೀದೇವಿಯನ್ನೂ ಪೂಜಿಸಬೇಕು."

ಇಂದ್ರಮಗ್ನಿಂ ಯಮಂ ಚೈವ ನಿರ್ಋತಿಂ ವರುಣಂ ತಥಾ |
ವಾಯುಂ ಕುಬೇರಂ ಚೇಶಾನಮಷ್ಟದಿಕ್ಷು ಪ್ರಪೂಜಯೇತ್ ||

"ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ ಎಂಬ ಎಂಟು ದಿಕ್ಪಾಲಕರನ್ನು ಎಂಟು ದಿಕ್ಕುಗಳಲ್ಲಿ ಪೂಜಿಸಬೇಕು."

ಇಂದ್ರೇಶಾನದಿಶೋರ್ಮಧ್ಯೇ ಬ್ರಹ್ಮಾಣಂ ಸಪರಿಗ್ರಹಮ್ |
ಮಧ್ಯೇ ವರುಣನಿರ್ಋತ್ಯೋರನಂತಂ ಸಪರಿಗ್ರಹಮ್ ||

"ಪೂರ್ವದಿಕ್ಕು, ಈಶಾನ್ಯದಿಕ್ಕುಗಳ ಮಧ್ಯದಲ್ಲಿ ಪರಿವಾರಸಹಿತನಾದ ಬ್ರಹ್ಮನನ್ನೂ, ಪಶ್ಚಿಮ ಮತ್ತು ನೈಋತ್ಯ ದಿಕ್ಕುಗಳ ಮಧ್ಯದಲ್ಲಿ ಪರಿವಾರಸಹಿತನಾದ ಶೇಷನನ್ನೂ ಪೂಜಿಸಬೇಕು."

ಐಶ್ವರ್ಯಾದ್ಯಧಿಪಾನ್ ಸರ್ವಾನ್ ಸಭಾರ್ಯಾನ್ ಸ್ವಾಯುಧೈರ್ಯುತಾನ್ |
ಸವಾಹನಾನ್ ಸ್ವಸ್ವಪರಿಗ್ರಹಯುಕ್ತಾಂಸ್ತಥೈವ ಚ ||
ಶ್ರೀವಿಷ್ಣುಪಾರ್ಷದಾನ್ ಸಮ್ಯಙ್ನಮೋಂತೈಃ ಪೂಜಯೇತ್ಕ್ರಮಾತ್ |

"ತಮ್ಮ ತಮ್ಮ ವಾಹನಗಳು, ಪರಿವಾರಗಳು, ಪತ್ನಿಯರು, ಆಯುಧಗಳು, ಇವುಗಳಿಂದ ಯುಕ್ತರಾಗಿರುವ, ಐಶ್ವರ್ಯಾದಿಗಳಿಗೆ ಅಭಿಮಾನಿಗಳಾಗಿರುವ ವಿಷ್ಣುಪಾರ್ಷದದೇವತೆಗಳನ್ನು ನಮಃ ಎಂಬ ಶಬ್ದಗಳು ಕೊನೆಗೆ ಇರುವ ಅವರವರ ಹೆಸರುಗಳಿಂದ ಪೂಜಿಸಬೇಕು."

ಧೂಪದೀಪೌ ತತೋ ದತ್ವಾ ನೈವೇದ್ಯಂ ಮೂಲಮಂತ್ರತಃ |
ಅನೇನ ಕ್ರಮಯೋಗೇನ ಜುಹುಯಾತ್ಸಂಸ್ಕೃತೇಽನಲೇ ||
ಪುಷ್ಪಾಂಜಲಿಶ್ಚ ಹೋಮಶ್ಚ ಮೂಲೇನಾಷ್ಟೋತ್ತರಂ ಶತಮ್ |
ಸಕೃತ್ಸಕೃತ್ಪುಷ್ಪಮನ್ಯೈರ್ಹೋಮಸ್ತಸ್ಯ ಚತುರ್ಭುಜಃ ||
ವಿಸರ್ಜಯಿತ್ವಾ ನೈವೇದ್ಯಂ ಮೂಲೇನ ತ್ರಿಃ ಸಮರ್ಚಯೇತ್ |
ಧೂಪದೀಪೌ ಪುನರ್ದತ್ವಾ ಪುನರ್ಮೂಲೇನ ಪೂರ್ವವತ್ ||
ಅರ್ಚಯಿತ್ವಾ ಹರಿಂ ಧ್ಯಾತ್ವಾ ಜಪೇದಷ್ಟೋತ್ತರಂ ಶತಮ್ |
ಪುನರ್ಧ್ಯಾಯೇದ್ಧರಿಂ ಸರ್ವದೇವದೇವೇಶ್ವರಂ ಪ್ರಭುಮ್ ||
ಇತ್ಯೇವಂ ತಂತ್ರಸಾರೋಕ್ತರೀತ್ಯಾಽಽವರಣದೇವತಾಃ |
ಸಂಪೂಜ್ಯ ಧೂಪದೀಪಾದಿ ನೈವೇದ್ಯಾದಿ ಸಮಾಚರೇತ್ ||

ಮೂಲಮಂತ್ರದಿಂದ ಧೂಪ, ದೀಪ, ನೈವೇದ್ಯ ಸಮರ್ಪಣಗಳನ್ನು ಮಾಡಬೇಕು. ಇದೇ ಕ್ರಮದಿಂದ ಸಂಸ್ಕರಿಸಲ್ಪಟ್ಟ ಅಗ್ನಿಯಲ್ಲಿ "ಮೂಲಮಂತ್ರದಿಂದ ಪುಷ್ಪಾಂಜಲಿಯನ್ನೂ, ಹೋಮವನ್ನೂ ಸಮರ್ಪಿಸಬೇಕು. ಒಂದೊಂದು ಪುಷ್ಪಗಳನ್ನು ಒಮ್ಮೊಮ್ಮೆ ಸಮರ್ಪಿಸಬೇಕು. ಒಂದೊಂದು ಪುಷ್ಪಾಂಜಲಿಗೆ ನಾಲ್ಕು ನಾಲ್ಕು ಹೋಮಗಳನ್ನು ಮಾಡಬೇಕು."

"ಅನಂತರದಲ್ಲಿ ನೈವೇದ್ಯವಿಸರ್ಜನೆಯನ್ನು ಮಾಡಬೇಕು. ಮೂಲಮಂತ್ರದಿಂದ ಮೂರು ಸಲ ಶ್ರೀಹರಿಯನ್ನು ಅರ್ಚಿಸಬೇಕು. ಶ್ರೀಹರಿಯನ್ನು ಧ್ಯಾನಿಸುತ್ತಾ ನೂರ ಎಂಟು ಸಲ ಜಪಿಸಬೇಕು. ಸರ್ವದೇವದೇವೇಶ್ವರನಾದ ಶ್ರೀಹರಿಯನ್ನು ಪುನಃ ಧ್ಯಾನಿಸಬೇಕು. ಹೀಗೆ ತಂತ್ರಸಾರದಲ್ಲಿ ಹೇಳಿರುವ ಆವರಣದೇವತೆಗಳನ್ನು ಪೂಜಿಸಿ ಧೂಪ, ದೀಪ, ನೈವೇದ್ಯ ಮುಂತಾದವುಗಳನ್ನು ಮಾಡಬೇಕು."

ಮೂಲ - ಪ್ರಣಮ್ಯ ದೇವಾನ್ವಿಪ್ರಾಂಶ್ಚ ಗುರೂಂಶ್ಚ ಹರಿಪಾರ್ಷದಾನ್ |
ಏವಂ ಸರ್ವೋತ್ತಮಂ ವಿಷ್ಣುಂ ಧ್ಯಾಯನ್ನೇವಾರ್ಚಯೇದ್ಧರಿಮ್ || 10 ||

"ದೇವತೆಗಳನ್ನೂ, ಬ್ರಾಹ್ಮಣರನ್ನೂ, ಗುರುಗಳನ್ನೂ, ವಿಷ್ಣುಪಾರ್ಷದರನ್ನೂ ನಮಸ್ಕರಿಸಬೇಕು. ಹೀಗೆ ಸರ್ವೋತ್ತಮನಾದ ವಿಷ್ಣುವನ್ನು ಧ್ಯಾನಿಸುತ್ತಾ ಶ್ರೀಹರಿಯನ್ನು ಪೂಜಿಸಬೇಕು."

ಮೂಲ - ಧ್ಯಾನಪ್ರವಚನಾಭ್ಯಾಂ ಚ ಯಥಾಯೋಗ್ಯಮುಪಾಸನಮ್ |
ಧರ್ಮೇಣೇಜ್ಯಾಸಾಧನಾನಿ ಸಾಧಯಿತ್ವಾ ವಿಧಾನತಃ ||
ಸ್ನಾತ್ವಾ ಸಂಪೂಜಯೇದ್ವಿಷ್ಣುಂ ವೇದತಂತ್ರೋಕ್ತಮಾರ್ಗತಃ || 11 ||

"(1) ಭಾಗವತದ್ವಿತೀಯಸ್ಕಂಧದಲ್ಲಿ ಹೇಳಿದಂತೆ ಭಗವಂತನನ್ನು ಧ್ಯಾನಿಸುವ ಶಕ್ತಿಯುಳ್ಳವರು ಧ್ಯಾನಿಸಬೇಕು. ಶ್ರೀಹರಿಯ ಗುಣಗಳನ್ನು ಸಮರ್ಥಿಸುವ ನ್ಯಾಯಸುಧಾ ಮುಂತಾದ ಗ್ರಂಥಗಳನ್ನು ಪ್ರವಚನ ಮಾಡುವ ಶಕ್ತಿಯುಳ್ಳವರು ಈ ಗ್ರಂಥಗಳ ಪ್ರವಚನವನ್ನು ಮಾಡಬೇಕು. ಅವರವರ ಯೋಗ್ಯತೆಯನ್ನು ಅನುಸರಿಸಿ ಈ ದ್ವಿವಿಧವಾದ ಉಪಾಸನೆಯನ್ನು ಮಾಡಬೇಕು."

"(2) ಧರ್ಮಕಾರ್ಯವನ್ನು ಮಾಡುತ್ತಾ ಹಣವನ್ನು ಸಂಪಾದಿಸಬೇಕು. ಆ ಹಣದಿಂದ ಭಗವಂತನ ಪೂಜೆಗೆ ಬೇಕಾದ ವಸ್ತುಗಳನ್ನು ಸಂಗ್ರಹಿಸಬೇಕು. ಪ್ರತಿದಿನಗಳಲ್ಲಿಯೂ ಸ್ನಾನವನ್ನು ಮಾಡಬೇಕು. ವೇದಗಳಲ್ಲಿಯೂ ಪಾಂಚರಾತ್ರಾಗಮ ಮುಂತಾದ ತಂತ್ರಗಳಲ್ಲಿಯೂ ಹೇಳಿರುವ ಮಾರ್ಗದಿಂದ ಶ್ರೀಹರಿಯನ್ನು ಪೂಜಿಸಬೇಕು."

ಮೂಲ - ವೈಶ್ವದೇವಂ ಬಲಿಂ ಚೈವ ಕುರ್ಯಾನ್ನಿತ್ಯಂ ತದರ್ಪಣಮ್ |
ಇಷ್ಟಂ ದತ್ತಂ ಹುತಂ ಜಪ್ತಂ ಪೂರ್ತಂ ಚೈವಾತ್ಮನಃ ಪ್ರಿಯಮ್ ||
ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್ || 12 ||

"(1) ತಮ್ಮ ತಮ್ಮ ಸೂತ್ರಗಳಲ್ಲಿ ಹೇಳಿದಂತೆ ವೈಶ್ವದೇವವನ್ನು ಮಾಡಬೇಕು. ಈ ವೈಶ್ವದೇವವು ನಿತ್ಯವೆನಿಸುತ್ತದೆ. (2) ಬಲಿಹರಣವನ್ನೂ ಗೋಗ್ರಾಸ ಮುಂತಾದವುಗಳನ್ನೂ ಮಾಡಬೇಕು. (3) ತನ್ನಿಂದ ಮಾಡಲ್ಪಟ್ಟ ಎಲ್ಲಾ ಕಾರ್ಯಗಳನ್ನೂ ಶ್ರೀಹರಿಗೆ ಸಮರ್ಪಿಸಬೇಕು. (4) ತನಗೆ ಇಷ್ಟವಾಗಿರುವ ಪ್ರಯಾಜ ಮುಂತಾದ ಯಾಗಗಳನ್ನು ಮಾಡಿ ಸಮರ್ಪಿಸಬೇಕು. (5) ದಾನ ಕೊಟ್ಟ ವಸ್ತುಗಳನ್ನೂ ಶ್ರೀಹರಿಗೆ ಸಮರ್ಪಿಸಬೇಕು. (6) ಅಗ್ನಿಯಲ್ಲಿ ಹೋಮ ಮಾಡಿರುವ ಔಪಾಸನಾದಿಗಳನ್ನು ಗಾಯತ್ರೀಮಂತ್ರ ಮುಂತಾದವುಗಳಿಂದ ಮಾಡಿರುವ ಜಪಗಳನ್ನು ಕೆರೆ, ಭಾವಿ ಮುಂತಾದ ಪೂರ್ತಗಳನ್ನು ತನಗೆ ಪ್ರಿಯವಾಗಿರುವ ಎಲ್ಲಾ ವಸ್ತುಗಳನ್ನೂ ಅಂದರೆ ಪತ್ನಿಯರು, ಮಕ್ಕಳು ಮುಂತಾದ ತಮಗೆ ಅತ್ಯಂತ ಪ್ರಿಯರನ್ನು ಹೆಚ್ಚೇಕೆ? ಪ್ರಿಯವಾದ ಪ್ರಾಣಗಳನ್ನೂ ಸರ್ವೇಶ್ವರನಾದ ಶ್ರೀಹರಿಗೆ ಸಮರ್ಪಿಸಬೇಕು."

## ಧೂಪಲಕ್ಷಣ

ಚಂದನಾಗುರುಕರ್ಪೂರಂ ದೇವದಾರುಸಗುಗ್ಗುಲಮ್ |
ಜಾತೀಫಲಂ ಶ್ರೀಫಲಂ ಚ ಉಶೀರಂ ಕೋಷ್ಠಮೇವ ಚ ||

ತತ್ರೈವ ಸಾಲನಿರ್ಯಾಸಂ ದಶಾಂಗಂ ಧೂಪಮುಚ್ಯತೇ |

"ಚಂದನ, ಅಗುರು, ಪಚ್ಚಕರ್ಪೂರ, ದೇವದಾರು, ಗುಗ್ಗುಲ, ಜಾಜಿಕಾಯಿ, ಶ್ರೀಫಲ, ಚಂಗಲ್‌ಕೋಷ್ಠ, ಸಾಲವೃಕ್ಷದ ಅಂಟು, ಈ ಹತ್ತು ವಸ್ತುಗಳನ್ನು ಒಟ್ಟಿಗೆ ಸೇರಿಸಿದರೆ ದಶಾಂಗವೆನಿಸುತ್ತದೆ. ಈ ದಶಾಂಗವನ್ನು ಧೂಪಕ್ಕೆ ಉಪಯೋಗಿಸಬೇಕು."

ಗುಗ್ಗುಲಂ ಮಹಿಷಾಕ್ಷಂ ಚ ಸಾರನಿರ್ಯಾಸಮೇವ ಚ |
ಅಗುರುಂ ದೇವದಾರುಂ ಚ ಉಶೀರಂ ಶ್ರೀಫಲಂ ತಥಾ ||
ಹ್ರೀಬೇರಂ ಚಂದನಂ ಚೈವ ದಶಾಂಗಂ ಧೂಪಮುಚ್ಯತೇ |
ಗವಾಜ್ಯೇನ ಚ ಸಂಯೋಜ್ಯ ತಥಾ ಧೂಪಂ ಪ್ರವಾಸಿತಮ್ ||

"ಗುಗ್ಗುಲ, ಮಹಿಷಾಕ್ಷ, ಸಾರವುಳ್ಳ ಮರಗಳ ಸೂನೆ, ಅಗುರು, ದೇವದಾರು, ಲಾವಂಚ, ಶ್ರೀಫಲ, ಹ್ರೀಬೇರ, ಚಂದನ, ದನದ ತುಪ್ಪ ಈ ಹತ್ತು ವಸ್ತುಗಳು ಒಟ್ಟುಗೂಡಿದರೆ ದಶಾಂಗವೆನಿಸುತ್ತದೆ.

### ಧೂಪವಸ್ತುಗಳ ಪರಿಮಾಣ

ಷಡ್ಭಾಗಕುಷ್ಠಂ ದ್ವಿಗುಣಾಗುರುಶ್ಚ
ಲಾಕ್ಷಾತ್ರಯಂ ಪಂಚನಖಸ್ಯ ಭಾಗಮ್ |
ಹರೀತಕೀಸರ್ಜರಸಸ್ಯ ಮಾಷೀ
ಭಾಗೈಕಮೇಕಂ ದ್ವಿಪಲಾಕ್ಷಜಸ್ಯ |
ಘನಸ್ಯ ಚತ್ವಾರಿ ಪರಸ್ಯ ಚೈಕಂ
ಧೂಪೋದರಾಂಗಂ ಕಥಿತಂ ಮುನೀಂದ್ರೈಃ ||

" ಆರು ಭಾಗ ಚಂಗಲ್‌ಕೋಷ್ಠ, ಎರಡು ಭಾಗ ಅಗುರು, ಮೂರು ಭಾಗ ಅರಗು, ಐದು ಭಾಗ ನಖ, ಒಂದು ಮಾಸೆ ಅಳಲೆಕಾಯಿ, ಒಂದು ಮಾಸೆ ಸರ್ಜರಸ, ಒಂದೊಂದು ಭಾಗ ನೆಲ್ಲಿಕಾಯಿ ಮತ್ತು ಶಾಂತಿಕಾಯಿ, ಒಂದು ಭಾಗ ಘನಸಾರ ಹೀಗೆ ದಶಾಂಗದ ಪರಿಮಾಣವು ಹೇಳಲ್ಪಟ್ಟಿದೆ. ಹೀಗೆ ಮೇಲೆ ಹೇಳಿದಂತೆ ದಶಾಂಗ ವಸ್ತುಗಳನ್ನು ಸಂಗ್ರಹಿಸಬೇಕು. ಅಡಿಗೆ ಮನೆಯಲ್ಲಿ ಧೂಪಪಾತ್ರೆಯಲ್ಲಿ ಕೆಂಡವನ್ನು ತುಂಬಿಸಬೇಕು. ದೇವರ ಮುಂದೆ ಇಡಬೇಕು. ಕೆಂಡದಲ್ಲಿ ಧೂಪವನ್ನು ಹಾಕಬೇಕು. ಬೀಸಣಿಗೆಯಿಂದ ಬೀಸಬೇಕು."

### ವಸ್ತ್ರದಿಂದ ಧೂಪವನ್ನು ಬೀಸಬಾರದು

"ವಸ್ತ್ರ, ಬಾಯಿ, ಕೈಗಳು ಇವುಗಳ ಗಾಳಿಯಿಂದ ಧೂಪವನ್ನು ಬೀಸಕೂಡದು."

**ಭಾಗವತ ಶ್ಲೋಕಗಳು —**

ಧ್ಯೇಯಂ ಸದಾ ಪರಿಭವಘ್ನಮಭೀಷ್ಟದೋಹಂ
ತೀರ್ಥಾಸ್ಪದಂ ಶಿವವಿರಿಂಚಿಸುತಂ ಶರಣ್ಯಮ್ |
ಭೃತ್ಯಾರ್ತಿಹಂ ಪ್ರಣತಭಕ್ತಭವಾಬ್ಧಿಪೋತಂ
ವಂದಾಮಹೇ ಪುರುಷ ತೇ ಚರಣಾರವಿಂದಮ್ ||
ತ್ಯಕ್ತ್ವಾ ಸುದುಸ್ತ್ಯಜಸುರೇಪ್ಸಿತರಾಜ್ಯಲಕ್ಷ್ಮೀಂ
ಧರ್ಮಿಷ್ಠ ಆರ್ಯವಚಸಾ ಯದಗಾದರಣ್ಯಮ್ |
ಮಾಯಾಮೃಗಂ ದಯಿತಯೇಪ್ಸಿತಮನ್ವಧಾವದ್ವಂ
ದಾಮಹೇ ಪುರುಷ ತೇ ಚರಣಾರವಿಂದಮ್ ||

ಮಹಾಭಾರತತಾತ್ಪರ್ಯನಿರ್ಣಯ ಶ್ಲೋಕಗಳು —

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ |
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ||
ಆಸೀದುದಾರಗುಣವಾರಿಧಿರಪ್ರಮೇಯೋ
ನಾರಾಯಣಃ ಪರತಮಃ ಪರಮಾತ್ಮ ಏಕಃ |
ಸಂಶಾಂತಸಂವಿದಖಿಲಂ ಜಠರೇ ನಿಧಾಯ
ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಚಾಗ್ರೇ ||
ತಸ್ಯೋದರಸ್ಥಜಗತಃ ಸದಮಂದಸಾಂದ್ರ
ಸ್ವಾನಂದತುಷ್ಟವಪುಷೋಽಪಿ ರಮಾರಮಸ್ಯ |
ಭೂತ್ಯೈ ನಿಜಾಶ್ರಿತಜನಸ್ಯ ಹಿ ಸೃಜ್ಯಸೃಷ್ಟ್ಯಾ
ವೀಕ್ಷಾ ಬಭೂವ ಪರನಾಮನಿಮೇಷಕಾಂತೇ ||
ನಾರಾಯಣಂ ಸುರಗುರುಂ ಜಗದೇಕನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ |
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ||
ಜಯತಿ ಹರಿರಚಿಂತ್ಯಃ ಸರ್ವದೇವೈಕವಂದ್ಯಃ
ಪರಮಗುರುಭೀಷ್ಟಾವಾಪ್ತಿದಃ ಸಜ್ಜನಾನಾಂ |
ನಿಖಿಲಗುಣಗಣಾರ್ಣೋ ನಿತ್ಯನಿರ್ಮುಕ್ತದೋಷಃ
ಸರಸಿಜನಯನೋಽಸೌ ಶ್ರೀಪತಿರ್ಮಾನದೋ ನಃ ||

"ಅನಂತರದಲ್ಲಿ ಹಿಂದೆ ಹೇಳಿರುವ ಭಾಗವತ ಶ್ಲೋಕಗಳನ್ನೂ, ಮಹಾಭಾರತ ತಾತ್ಪರ್ಯನಿರ್ಣಯ ಶ್ಲೋಕಗಳನ್ನೂ ದ್ವಾದಶಸ್ತೋತ್ರ ಮುಂತಾದ ಸ್ತೋತ್ರಗಳನ್ನೂ ಪಠಿಸಬೇಕು."

"ಶ್ರೀಹರಿಗೆ ಧೂಪಮುದ್ರೆಯನ್ನು ತೋರಿಸಬೇಕು. ಧೂಪವನ್ನು ಸಮರ್ಪಿಸಬೇಕು. ಶಂಖದಲ್ಲಿ ನೀರನ್ನು ತುಂಬಿಸಬೇಕು. ಮೂಲಮಂತ್ರವನ್ನು ಹೇಳುತ್ತಾ "ಧೂಪಂ ಸಮರ್ಪಯಾಮಿ" ಎಂದು ಹೇಳಿ ಬೇರೆ ಪಾತ್ರದಲ್ಲಿ ನೀರನ್ನು ಹಾಕಬೇಕು. ಶ್ರೀಹರಿಗೆ ಒಮ್ಮೆ ಪುಷ್ಪವನ್ನು ಸಮರ್ಪಿಸಬೇಕು. ಅಗ್ನಿಯಲ್ಲಿರುವ ದೇವತೆಗಳಿಂದ ಸಹಿತನಾಗಿ ಶ್ರೀಹರಿಯ ಮೂಗಿಗೆ ಅಭಿಮುಖವಾಗಿ ಮೂಲಮಂತ್ರವನ್ನು ಜಪಿಸುತ್ತಾ ಮೂರು ಸಲ ಗಂಟೆಯನ್ನು ತಿರುಗಿಸುತ್ತಾ ಬಾರಿಸಬೇಕು. ಧೂಪವನ್ನು ವಿಸರ್ಜನೆ ಮಾಡಬೇಕು. ತನ್ನ ಕೈಗಳನ್ನು ತೊಳೆದುಕೊಳ್ಳಬೇಕು."

### ಧೂಪದ ಕಾಲದಲ್ಲಿ ಶ್ರೀಹರಿಯ ದರ್ಶನಫಲ

ಧೂಪಕಾಲೇ ಹರೇರ್ವಕ್ತ್ರಂ ಧೂಪಧೂಮ್ರಂ ಮನೋಹರಮ್ |
ಚಾರುಹಾಸಂ ಪ್ರಪಶ್ಯಂತಿ ತೇಷಾಂ ಪುಣ್ಯಮನಂತಕಮ್ ||

ರಾಜಸೂಯಸಹಸ್ರೇಣ ದೀಕ್ಷಿತಸ್ಯ ಮಹಾತ್ಮನಃ |
ತತ್ಫಲಂ ಸಮವಾಪ್ನೋತಿ ಮೋದತೇ ಹರಿಮಂದಿರೇ || (ಸ್ಕಾಂದ ವಚನ)

"ಧೂಪವನ್ನು ಮಾಡುತ್ತಿರುವಾಗ ಶ್ರೀಹರಿಯ ಮುಖವನ್ನು ನೋಡಬೇಕು. ಶ್ರೀಹರಿಯ ಮುಖದ ಸುತ್ತಲೂ ಧೂಪದ ಹೊಗೆಯು ವ್ಯಾಪಿಸಿರುತ್ತದೆ. ಆಗ ಮಂದಹಾಸದಿಂದ ಯುಕ್ತವಾಗಿರುವ ಶ್ರೀಹರಿಯ ಮುಖವು ತುಂಬಾ ಸುಂದರವಾಗಿ ಕಾಣಿಸುತ್ತದೆ. ಆ ದೃಶ್ಯವನ್ನು ಯಾರು ನೋಡುತ್ತಾರೆಯೋ ಅವರಿಗೆ ಅನಂತ ಪುಣ್ಯವು ಬರುತ್ತದೆ. ಸಹಸ್ರ ರಾಜಸೂಯಯಾಗಗಳಲ್ಲಿ ದೀಕ್ಷಿತನಾಗಿರುವ ಮಹಾತ್ಮನಿಗೆ ಬರುವ ಪುಣ್ಯವು ಧೂಪಕಾಲದಲ್ಲಿ ಶ್ರೀಹರಿಯನ್ನು ನೋಡುವವನಿಗೆ ಬರುತ್ತದೆ. ಶ್ರೀಹರಿಯ ಮಂದಿರದಲ್ಲಿ ಸುಖಿಸುವನು."

### ಘಂಟಾನಾದವಿಲ್ಲದೆ ಧೂಪವನ್ನು ಮಾಡಕೂಡದು

ಘಂಟಾನಾದಂ ವಿನಾ ಧೂಪಂ ನ ವಿದ್ವಾನ್ ಕರ್ತುಮರ್ಹತಿ |
ಧೂಪೋಪಚಾರನೈವೇದ್ಯಂ ಘಂಟಾನಾದಸಮನ್ವಿತಮ್ ||
ವಿಭವಾಯ ಭವೇನ್ನೋ ಚೇತ್ಪೂಜಾ ಸ್ಯಾದಾಸುರೀ ಕೃತಾ | (ಪಾದ್ಮಸಂಹಿತಾವಾಕ್ಯ)

"ಘಂಟಾಧ್ವನಿಯಿಲ್ಲದಂತೆ ಧೂಪವನ್ನು ಮಾಡಕೂಡದು. ಧೂಪ, ಉಪಚಾರಗಳು, ನೈವೇದ್ಯ ಇವುಗಳನ್ನು ಶ್ರೀಹರಿಯ ವೈಭವವನ್ನು ತಿಳಿಸುವುದಕ್ಕಾಗಿ ಘಂಟಾಧ್ವನಿಯೊಡನೆಯೇ ಮಾಡಬೇಕು. ಘಂಟಾಧ್ವನಿಯಿಲ್ಲದ ಪೂಜೆಯು ಅಸುರಪೂಜೆಯೆನಿಸುತ್ತದೆ."

ಸ್ನಾನೇ ಧೂಪೇ ತಥಾ ದೀಪೇ ನೈವೇದ್ಯೇ ಶಯನೇ ತಥಾ |
ಬೋಧನೇ ಭೂಷಣೇ ಚೈವ ಕುರ್ಯಾದ್ಘೋಷಂ ಸದಾ ನರಃ || (ವಾಸಿಷ್ಠ ವಚನ)

"ಸ್ನಾನಕಾಲ, ಧೂಪಕಾಲ, ದೀಪಕಾಲ, ನೈವೇದ್ಯಕಾಲ, ಶಯನಕಾಲ, ಎಬ್ಬಿಸುವ ಕಾಲ, ಅಲಂಕಾರಗಳನ್ನು ಧರಿಸುವ ಕಾಲ, ಈ ಕಾಲಗಳಲ್ಲಿ ಯಾವಾಗಲೂ ಘಂಟಾಧ್ವನಿಯನ್ನು ಮಾಡಬೇಕು."

### ದೀಪದ ಬತ್ತಿಯ ಲಕ್ಷಣ

ಕೃತ್ವಾ ವರ್ತಿತ್ರಯಕಂ ಘೃತಾಭ್ಯಕ್ತಂ ಪ್ರದೀಪಯೇತ್ | (ವಿಷ್ಣುತೀರ್ಥೀಯ ವಚನ)

"ಮೂರು ಬತ್ತಿಗಳನ್ನು ತುಪ್ಪದಲ್ಲಿ ಮುಳುಗಿಸಬೇಕು. ಆ ಮೇಲೆ ದೀಪವನ್ನು ಹಚ್ಚಬೇಕು."

ಕಾರ್ಪಾಸಮಕ್ಷತೋಯಂ ಚ ಶಾಲ್ಮಲೀಕ್ಷೀರಿಕೋದ್ಭವಮ್ |
ಅಂಭೋಜಂ ಕುಟಜಂ ಕಾಶಂ ದೀಪಮಷ್ಟಾಂಗಮುಚ್ಯತೇ ||

"ಹತ್ತಿ, ಬೂರುಗದ ಹತ್ತಿ, ಎಕ್ಕೆ ಹತ್ತಿ, ಕಮಲ, ಕಾಶ, ಕುಟಜ ಮುಂತಾದ ಎಂಟು ಅಂಗಗಳಿಂದ ಯುಕ್ತವಾದದ್ದು. ಬತ್ತಿಗೆ ಉಪಯುಕ್ತವಾದವುಗಳು ಎಂದು ತಿಳಿಯಬೇಕು."

ಕ್ಷೌಮಂ ಕಾರ್ಪಾಸಕಂ ಕಾಶಂ ಕರ್ಣಿಕಾರಶ್ಚ ಶಾಲ್ಮಲಿಃ |
ಅಭೋಜಂ ಕ್ಷೀರವಟಜಂ ದೀಪಮಷ್ಟಾಂಗಮುಚ್ಯತೇ ||
ಗೋಘೃತೇನ ಸಮಾಯುಕ್ತಂ ದೀಪಂ ಚ ವಿನಿಯೋಜಯೇತ್ || (ವಾಸಿಷ್ಠ ವಚನ)

"ರೇಷ್ಮೆ, ಹತ್ತಿ, ಕಾಶ ಅಂದರೆ ದರ್ಭೆ, ಕರ್ಣಿಕಾರ, ಶಾಲ್ಮಲಿ ಅಂದರೆ ಬೂರುಗದ ಹತ್ತಿ, ಕಮಲ, ಆಲದ ಹಾಲು, ಈ ಎಂಟು ಪದಾರ್ಥಗಳಿಂದ ಭಗವಂತನಿಗೆ ದೀಪವನ್ನು ಹಚ್ಚಬಹುದು. ಗೋವಿನ ತುಪ್ಪದಿಂದ ಹಚ್ಚಬೇಕು."

ಗವಾಜ್ಯಂ ತಿಲತೈಲಂ ಚ ಕುಸುಮೈಶ್ಚ ಸುವಾಸಿತಮ್ |
ಸಂಯೋಜ್ಯ ವರ್ತಿನಾ ದೀಪಂ ಭಕ್ತ್ಯಾ ವಿಷ್ಣೋರ್ನಿವೇದಯೇತ್ || (ಹಾರೀತರ ವಚನ)

"ದನದ ತುಪ್ಪ, ಎಳ್ಳಿನ ಎಣ್ಣೆ, ಇವುಗಳ ಜೊತೆಯಲ್ಲಿ ಹೂಗಳನ್ನು ಮಿಶ್ರಣ ಮಾಡಿ ಸುಗಂಧವಾಗುವಂತೆ ಮಾಡಬೇಕು. ಶ್ರೀಹರಿಯಲ್ಲಿ ಭಕ್ತಿಯಿಂದ ದೀಪವನ್ನು ಸಮರ್ಪಿಸಬೇಕು."

### ದೀಪವನ್ನು ಹಚ್ಚುವಾಗ ದೀಪಮುದ್ರೆಯನ್ನು ತೋರಿಸಬೇಕು

ಊರ್ಧ್ವಂ ತು ತತ್ಸಂಗ್ರಾಹ್ಯಂ ಕೃತ್ವಾ ವಾಮಾಂಗುಷ್ಠಮೇವ ಚ |
ತರ್ಜನ್ಯನಾಮಿಕಾಭ್ಯಾಂ ತು ಸಮುದ್ಧೃತ್ಯ ಕನಿಷ್ಠಿಕಾಮ್ ||
ಅವಾಙ್ಮುಖೇನ ವಾಮೇನ ಸಂಹತ್ಯಾಂಗುಲಿಭಿನಾ ಸಹ |
ಉತ್ತಾನಿತೇನ ಹಸ್ತೇನ ದೀಪಮುದ್ರಾಂ ಪ್ರಚಕ್ಷತೇ ||

"ಈಗ ಹೇಳಿರುವ ದೀಪಮುದ್ರೆಯಿಂದ ದೀಪವನ್ನು ಶ್ರೀಹರಿಯ ಕಣ್ಣುಗಳಿಗೆ ಕಾಣಿಸುವಂತೆ ಹಚ್ಚಬೇಕು."

### ದೀಪವನ್ನು ಸಮರ್ಪಿಸುವ ಕ್ರಮ

ಆಪಾದಮೌಲಿಪರ್ಯಂತಂ ಪ್ರಾದಕ್ಷಿಣ್ಯೇನ ದೀಪಕಮ್ |
ಭ್ರಾಮ್ಯ ಪ್ರದರ್ಶ್ಯ ದೇವಾಯ ತಂ ದೀಪಂ ನಿರ್ವಾಪೇತ್ತತಃ ||
ಸ್ವಯಂ ನಿರ್ವಾಪಿತಾನಾಂ ತು ಧೂಪಂ ಜಿಘ್ರಂತಿ ರಾಕ್ಷಸಾಃ |
ತಸ್ಮಾನ್ನಿರ್ವಾಪಯೇದ್ದೇವ ವೃದ್ಧ್ಯೈ ನೈವ ಪ್ರದರ್ಶಯೇತ್ || (ವಿಷ್ಣುತೀರ್ಥೀಯ ವಚನ)

"ಶ್ರೀಹರಿಯ ಪಾದದಿಂದ ಆರಂಭಿಸಿ ತಲೆಯವರೆಗೆ ಪ್ರದಕ್ಷಿಣವಾಗಿ ದೀಪವನ್ನು ತೋರಿಸಬೇಕು. ಕೊನೆಗೆ ಆ ದೀಪವನ್ನು ಆರಿಸಬೇಕು. ನಾವು ಆರಿಸಿದ ದೀಪಗಳಿಂದ ಹೊರಡುತ್ತಿರುವ ಸುಗಂಧವನ್ನು ರಾಕ್ಷಸರು ಮೂಸುವರು. ತಾನೇ ಆರಿ ಹೋದ ದೀಪಗಳಿಂದ ಹೊರಡುತ್ತಿರುವ ಗಂಧವನ್ನು ರಾಕ್ಷಸರು ಮೂಸುವರು. ಆದ್ದರಿಂದ ನಮಗೆ ವೃದ್ಧಿಯಾಗುವುದಕ್ಕೋಸ್ಕರವೂ ರಾಕ್ಷಸರ ನಾಶಕ್ಕೋಸ್ಕರವೂ ದೀಪವನ್ನು ಆರಿಸಬಾರದು."

### ನೈವೇದ್ಯಗಳಿಲ್ಲದಿದ್ದರೆ ಧೂಪದೀಪಗಳಿಲ್ಲ

ನೈವೇದ್ಯಂ ನಾಸ್ತಿ ಚೇದ್ಧೂಪದೀಪೌ ನೈವ ಪ್ರದರ್ಶಯೇತ್ |

"ನೈವೇದ್ಯವನ್ನು ಮಾಡದಿದ್ದರೆ ಧೂಪ ಮತ್ತು ದೀಪಗಳನ್ನು ತೋರಿಸಬಾರದು."

### ಧೂಪಾದಿಗಳು ಇಲ್ಲದಿದ್ದರೆ ಹಾನಿ

ಧೂಪಹೀನೇ ಶ್ರಿಯಂ ಹಂತಿ ದೀಪಹೀನೇ ಮತಿಭ್ರಮಃ |
ನೈವೇದ್ಯಹೀನೇ ದುರ್ಭಿಕ್ಷಂ ಮಂತ್ರಹೀನೇ ವಿನಾಶನಮ್ ||

"ಧೂಪವನ್ನು ಮಾಡದಿದ್ದರೆ ಲಕ್ಷ್ಮೀನಾಶ, ದೀಪವನ್ನು ತೋರಿಸದಿದ್ದರೆ ಬುದ್ಧಿಭ್ರಮ, ನೈವೇದ್ಯಸಮರ್ಪಣೆ ಮಾಡದಿದ್ದರೆ ದುರ್ಭಿಕ್ಷ, ಮಂತ್ರವನ್ನು ಹೇಳದಿದ್ದರೆ ನಾಶ, ಈ ಫಲಗಳು ಬರುತ್ತವೆ."

### ನೈವೇದ್ಯಸಮರ್ಪಣ ವಿಧಿ

ಸೌವರ್ಣಾದೀನಿ ಪಾತ್ರಾಣಿ ವಿಷ್ಣುಗಾಯತ್ರಿಯಾ ತತಃ |
ಕ್ಷಾಲಿತಾನಿ ಪರಾಮೃಶ್ಯ ಪ್ರಣವೇನಾಜ್ಯಧಾರಯಾ ||

ಪಾತ್ರಾಣಿ ಸಿದ್ಧಮಂತ್ರಾಣಿ ತಥಾ ದದ್ಯಾದ್ಧವಿಂಷಿ ಚ |
ಆದಾಯ ನಿಕ್ಷಿಪೇನ್ಮಂತ್ರೈರ್ದ್ರೋಣಾಂ ವಾಥ ತದರ್ಧಕಮ್ ||
ಪಾದಂ ತದರ್ಧಪಾದಂ ವಾ ತದರ್ಧಂ ವಾ ಪರಂ ಮತಮ್ |
ಪ್ರತಿಸ್ಥಾಲಾಂ ಪಾಯಸಾದಿ ಭಕ್ತಮನ್ನಂ ಚತುರ್ಮುಖ ||
ಯಥಾ ಯಥಾ ವ್ಯಂಜನಾನಿ ನಿಕ್ಷೇಪ್ಯಾನಿ ಘೃತೈಃ ಸಹ |
ಘೃತೈಃ ಸಹೈವ ದಧ್ಯಾಚ್ಚ ಸೂಪಕವ್ಯಂಜನಾನಿ ಚ ||
ನಿರ್ವೇದಯೇಯುರ್ದೇವಾಯ ಯಾನಿ ಕಾನಿ ತು ಪೂಜಕಾಃ |
ಚೋಷ್ಯಾಣಿ ಲೇಹ್ಯಖಾದ್ಯಾನಿ ಯಥಾವಿಭವವಿಸ್ತರಂ || (ಪಾದ್ಮಸಂಹಿತಾ ವಚನ)

ಬಂಗಾರ, ಬೆಳ್ಳಿ ಮುಂತಾದ ವಸ್ತುಗಳಿಂದ ನಿರ್ಮಿತವಾದ ಪಾತ್ರೆಗಳನ್ನು ವಿಷ್ಣುಗಾಯತ್ರೀ ಮಂತ್ರದಿಂದ ತೊಳೆಯಬೇಕು. ಪ್ರಣವಮಂತ್ರದಿಂದ ಆ ಪಾತ್ರೆಗಳನ್ನು ಮುಟ್ಟಬೇಕು. ಮಂತ್ರಜಪದಿಂದ ಶುದ್ಧವಾಗಿರುವ ಪಾತ್ರೆಗಳಲ್ಲಿ ತುಪ್ಪದ ಧಾರೆಯಿಂದ ಒದ್ದೆ ಮಾಡಬೇಕು. ಪಾತ್ರೆಗಳನ್ನು ಮಂತ್ರಗಳನ್ನು ಜಪಿಸಿ ಶುದ್ಧವಾಗುವಂತೆ ಮಾಡಬೇಕು. ಒಂದೊಂದು ಪಾತ್ರೆಗಳಲ್ಲಿಯೂ ಒಂದೊಂದು ದ್ರೋಣದಷ್ಟು ಅನ್ನವನ್ನಾಗಲೀ, ಅರ್ಧ ದ್ರೋಣದಷ್ಟು ಅನ್ನವನ್ನಾಗಲೀ ಕಾಲು ದ್ರೋಣದಷ್ಟು ಅನ್ನವನ್ನಾಗಲೀ 1/8 ದ್ರೋಣದಷ್ಟು ಅನ್ನವನ್ನಾಗಲೀ, 1/16 ದ್ರೋಣದಷ್ಟು ಅನ್ನವನ್ನಾಗಲೀ ಬಡಿಸಬೇಕು. ಒಂದೊಂದು ಪಾತ್ರೆಯಲ್ಲಿಯೂ ಅನ್ನಕ್ಕೆ ಯೋಗ್ಯವಾಗಿರುವ ಪಾಯಸ ಮುಂತಾದವುಗಳನ್ನೂ ತೊವ್ವೆ ಮುಂತಾದವುಗಳನ್ನೂ ಬಡಿಸಬೇಕು. ಲೇಹ್ಯ, ಖಾದ್ಯ, ಚೋಷ್ಯ ಮುಂತಾದ ವಸ್ತುಗಳನ್ನೂ ಬಡಿಸಬೇಕು.

### ಯತಿಯು ನೈವೇದ್ಯಸಮರ್ಪಣೆ ಮಾಡುವುದು

ಅಥ ದೇವೋಪಹಾರಾರ್ಥಂ ಗಚ್ಛೇನ್ಮಾಧುಕರಾದಿಕಮ್ |
ಮಾಧೂಕರಸುಯೋಗ್ಯಾಶ್ಚ ಸ್ಮೃತಾ ವ್ಯಾಸೇನ ಧೀಮತಾ ||
ಭೈಕ್ಷ್ಯಂ ಚ ಬಹುಧಾ ಪ್ರೋಕ್ತಂ ತಸ್ಯಾಮೇವ ಸ್ಮೃತೌ ಸ್ವಯಮ್ |
ತತೋ ದೇವಸ್ಯ ದತ್ವಾ ತು ತತ್ಸರ್ವಂ ........ || (ವಿಷ್ಣುತೀರ್ಥೀಯ ವಚನ)

"ದೇವರಿಗೆ ನೈವೇದ್ಯವನ್ನು ಮಾಡುವುದಕ್ಕಾಗಿ ಮಧುಕರವೃತ್ತಿಯನ್ನು ಮಾಡಬೇಕು. ಮಧುಕರವೃತ್ತಿಗೆ ಯೋಗ್ಯವಾಗಿರುವ ವಸ್ತುಗಳನ್ನು ಶ್ರೀವ್ಯಾಸರು ವ್ಯಾಸಸ್ಮೃತಿಯಲ್ಲಿ ಹೇಳಿರುವರು. ನಾನಾವಿಧವಾದ ಭಕ್ಷ್ಯಗಳ ಹೆಸರುಗಳನ್ನು ಶ್ರೀವ್ಯಾಸಸ್ಮೃತಿಯಿಂದ ತಿಳಿದು ಅವುಗಳನ್ನೆಲ್ಲವನ್ನೂ ಶ್ರೀಹರಿಗೆ ಸಮರ್ಪಿಸಬೇಕು."

ನೈವೇದ್ಯಂ ಮೂಲಮಂತ್ರತಃ | (ತಂತ್ರಸಾರವಚನ)

"ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ನೈವೇದ್ಯ ಸಮರ್ಪಣೆಯನ್ನು ಮಾಡಬೇಕು. ನೈವೇದ್ಯವನ್ನು ಪ್ರತ್ಯೇಕವಾಗಿ ತೆಗೆಯಬೇಕು. ದೇವರ ಮುಂದೆ ಬಲಭಾಗದಲ್ಲಿ ಇಡಬೇಕು. ಹೋಮಕ್ಕೆ ಬೇಕಾದಷ್ಟು ಅನ್ನವನ್ನು ಅನ್ನಪಾತ್ರೆಯಿಂದ ತೆಗೆದಿಡಬೇಕು. ನೈವೇದ್ಯಕ್ಕೆ ಇಟ್ಟಿರುವ ಸ್ಥಳವನ್ನು ಶುದ್ಧ ಮಾಡಬೇಕು. ಅದೇ ಸ್ಥಳದಲ್ಲಿ "ಶ್ರೀ" ಎಂಬ ಅಕ್ಷರವನ್ನಾಗಲೀ "ಓಂ" ಎಂಬ ಅಕ್ಷರವನ್ನಾಗಲೀ ಬರೆಯಬೇಕು. ಅದರ ಮೇಲೆ ಬಂಗಾರದ ಪೀಠವನ್ನು ಇಡಬೇಕು. ಬಂಗಾರ ಮುಂತಾದವುಗಳಿಂದ ನಿರ್ಮಿತವಾದ ಪಾತ್ರೆಗಳಲ್ಲಿರುವ ಅನ್ನವನ್ನೂ, ವಿಷ್ಣುಗಾಯತ್ರೀ ಮಂತ್ರದಿಂದ ಪಲ್ಯ ಮುಂತಾದವುಗಳನ್ನೂ ಬಡಿಸಬೇಕು. "ಘೃತಂ ಮಿಮಿಕ್ಷೇ" ಎಂಬ ಮಂತ್ರದಿಂದ ತುಪ್ಪವನ್ನೂ, ಮೊಸರು ಚಟ್ನಿ ಮುಂತಾದ ವ್ಯಂಜನಗಳನ್ನೂ ಸಮರ್ಪಿಸಬೇಕು. ಅಡಿಗೆ ಮಾಡಿರುವ ಪದಾರ್ಥಗಳನ್ನು ಬೇರೆ ಪಾತ್ರೆಗಳಲ್ಲಿ ನೈವೇದ್ಯಕ್ಕೆ ಇಡುವ

ಸಂಪ್ರದಾಯವು ಕೆಲವು ಸ್ಥಳಗಳಲ್ಲಿದೆ. ಆ ಕ್ರಮವು ಈಗ ವಿವರಿಸಲ್ಪಟ್ಟಿತು. ಇನ್ನು ಮುಂದೆ ಅಡಿಗೆ ಮಾಡಿರುವ ಎಲ್ಲಾ ಪದಾರ್ಥಗಳನ್ನೂ ನೈವೇದ್ಯಕ್ಕೆ ಇಡುವ ಸಂಪ್ರದಾಯವನ್ನು ಈಗ ವಿವರಿಸುವೆವು. ಇದು ಸರ್ವ ಸಮರ್ಪಣ ಸಂಪ್ರದಾಯವೆನಿಸುತ್ತದೆ."

### ಸರ್ವಸಮರ್ಪಣಾ ಸಂಪ್ರದಾಯ

"ಎಲ್ಲಾ ಅಡಿಗೆಯನ್ನು ಮಾಡಿರುವ ಎಲ್ಲಾ ಪಾತ್ರೆಗಳನ್ನೂ ದೇವರ ಮುಂದೆ ಇಡಬೇಕು. ತುಲಸೀದಲಗಳನ್ನು ಎಲ್ಲಾ ಪಾತ್ರೆಗಳ ಮೇಲೆ ಹಾಕಬೇಕು."

ಅದ್ಯ ತಿಷ್ಠತಿ ಯತ್ಕಿಂಚಿತ್ ಕಲ್ಪಿತಂ ಚಾಪರಂ ಗೃಹೇ |
ಪಕ್ವಮನ್ನಂ ಸಪಾನೀಯಂ ಸರ್ವೋಪಸ್ಕರಸಂಯುತಮ್ ||
ಯಥಾಕಾಲಂ ಮನುಷ್ಯಾರ್ಥೈರ್ಮೋಕ್ಷ್ಯಮಾಣಂ ಶರೀರಿಭಿಃ |
ತತ್ಸರ್ವಂ ವಿಷ್ಣುಪೂಜಾಸ್ತು ಪ್ರೀಯತಾಂ ಮೇ ಜನಾರ್ದನ ||
ಸೌವರ್ಣೇ ಸ್ಥಾಲಿವರ್ಯೇ ಮಣಿಗಣಖಚಿತೇ ಗೋಘೃತಾಕ್ತಾನ್ ಸುಪಕ್ವಾನ್
ಭಕ್ಷ್ಯಾನ್ ಭೋಜ್ಯಾಂಶ್ಚ ಲೇಹ್ಯಾನಪರಿಮಿತಮಿದಂ ಚೋಷ್ಯಮನ್ನಂ ನಿಧಾಯ |
ನಾನಾಶಾಕೈರುಪೇತಂ ದಧಿಮಧುರಘೃತಕ್ಷೀರಪಾನೀಯಯುಕ್ತಂ
ತಾಂಬೂಲಂ ಚಾಸ್ಯ ವಿಷ್ಣೋಃ ಪ್ರತಿದಿವಸಮಹಂ ಮಾನಸೇ ಕಲ್ಪಯಾಮಿ ||

"ಈ ಮಂತ್ರಗಳನ್ನು ಹೇಳುತ್ತಾ ಅನ್ನವನ್ನು ಪ್ರೋಕ್ಷಿಸಬೇಕು. ಶಂಖೋದಕದಿಂದ ಪ್ರೋಕ್ಷಿಸಕೂಡದು."

### ಶಂಖೋದಕದಿಂದ ಪ್ರೋಕ್ಷಿಸಕೂಡದು

ನ ಪಿಬೇಚ್ಛಂಖತೋಯಂ ಚ ನ ಚ ಭೂಮೌ ವಿನಿಕ್ಷಿಪೇತ್ |
ನ ಪ್ರೋಕ್ಷಯೇಚ್ಚ ನೈವೇದ್ಯಂ ಭುಂಜಾನಸ್ತ್ವಘವಾನ್ ಭವೇತ್ ||
ಶಂಖತೋಯಂ ಪಿಬೇನ್ಮೂಢಃ ಶಂಖಂ ಕೃತ್ವಾ ತು ಭೂತಲೇ |
ನ ಪ್ರೋಕ್ಷಯೇಚ್ಚ ನೈವೇದ್ಯಂ ಭುಂಜಾನೋಽಪ್ಯಘವಾನ್ ಭವೇತ್ ||

"ಶಂಖದಲ್ಲಿರುವ ನೀರನ್ನು ಕುಡಿಯಬಾರದು. ಶಂಖವನ್ನು ಭೂಮಿಯಲ್ಲಿ ಇಡಬಾರದು. ಶಂಖದಲ್ಲಿರುವ ನೀರಿನಿಂದ ನೈವೇದ್ಯವನ್ನು ಪ್ರೋಕ್ಷಿಸಕೂಡದು. ಶಂಖದಲ್ಲಿರುವ ನೀರನ್ನು ಮೂಢತನದಿಂದ ಕುಡಿಯುವವನು ಪಾಪವನ್ನು ಪಡೆಯುವನು."

### ಬೇರೆ ನೀರಿನಿಂದ ಪ್ರೋಕ್ಷಿಸಬೇಕು

ಅಭ್ಯುಕ್ಷ್ಯ ಮೂಲಮಂತ್ರೇಣ ತಾನ್ಮಾಲಭ್ಯಾಷ್ಟಧಾ ಜಪೇತ್ |
ಸಮಾಪ್ರೋಕ್ತಪ್ರಕಾರೇಣ .......... || (ವಿಷ್ಣುತೀರ್ಥೀಯ ವಚನ)
ಅಷ್ಟವಾರಂ ಜಪೇನ್ಮಂತ್ರಂ .......... | (ವಿಷ್ಣುತೀರ್ಥೀಯ ವಚನ)

"ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ನೈವೇದ್ಯವನ್ನು ಪ್ರೋಕ್ಷಿಸಬೇಕು. ಎಂಟು ಸಲ ಮೂಲಮಂತ್ರದಿಂದ ಜಪಿಸಬೇಕು. ಹನ್ನೆರಡು ಸಲ ಮೂಲಮಂತ್ರದಿಂದ ಜಪಿಸಿ ನೈವೇದ್ಯದ ಮೇಲೆ "ಅಮೃತಂ ದುರ" ಎಂದು ಹೇಳಬೇಕು. ಕಾಮಧೇನು ಮಂತ್ರವನ್ನು ಎಂಟು ಸಲ ಜಪಿಸಬೇಕು. "ಓಂ ವಂ ಅಮೃತದ್ರಾವಿಣ್ಯೈ ಸುರಭ್ಯೈ ನಮಃ" ಇದು ಕಾಮಧೇನು ಮಂತ್ರ.

"ಓಂ ರಂ ಸಹಸ್ರಾರ ಹುಂ ಫಟ್ ಓಂ" ಎಂಬ ಸುದರ್ಶನ ಮಂತ್ರವನ್ನು ಹೇಳುತ್ತಾ ನೈವೇದ್ಯಕ್ಕೆ ಪ್ರೋಕ್ಷಣವನ್ನು

ಮಾಡಬೇಕು. ಸಮರ್ಪಣೆಯನ್ನು ಮಾಡಬೇಕು. ಮೇರು ಮುದ್ರೆಯನ್ನು ಕುಳಿತುಕೊಂಡು ತೋರಿಸಬೇಕು. ನೈವೇದ್ಯವನ್ನು ಬೆಳೆಯಿಸಬೇಕು. "ಓಂ ಸತ್ಯಂ ತ್ವರ್ತೇನ ಪರಿಷಿಂಚಾಮಿ ಓಂ" ಎಂಬ ಮಂತ್ರದಿಂದಲೂ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದಲೂ ಪರಿಷೇಚನವನ್ನು ಮಾಡಬೇಕು. "ಸುಧಾರಸಂ ಸುವಿಪುಲಮಾಪೋಶನಮಿದಂ ತವ | ಗೃಹಾಣ ಕಲಶಾನೀತಂ ಯಥೇಷ್ಟಮುಪಭುಜ್ಯತಾಮ್ " ಎಂಬ ಮಂತ್ರದಿಂದ ಪ್ರಾರ್ಥಿಸಬೇಕು. ತ್ವದ್ದಕ್ಷಿಣಕರೇ ಲಕ್ಷ್ಮ್ಯಾ ದೀಯಮಾನಂ ಸುಧಾರೂಪಮಾಪೋಶನಂ ಪಿಬ" ಎಂದು ಅನುಸಂಧಾನಪೂರ್ವಕವಾಗಿ ಹೇಳಬೇಕು. "ಅಮೃತೋಪಸ್ತರಣಮಸಿ" ಎಂದು ಹೇಳುತ್ತಾ ಹಿಂದೆ ನೈವೇದ್ಯವನ್ನು ಪ್ರೋಕ್ಷಿಸಿ ಉಳಿದಿರುವ ನೀರನ್ನು ಬೇರೆ ಪಾತ್ರದಲ್ಲಿ ಹಾಕಬೇಕು.

ದದ್ಯಾದಾಪೋಶನಂ ತತಃ ಪ್ರಾಣಾಹುತೀರ್ದದ್ಯಾತ್ |
ತತಃ ಪ್ರಾಣಾದ್ಯಾಹುತಯೋ ಹೋತವ್ಯಾಃ ಪರಮಾತ್ಮನಿ || (ಹಾರೀತ ವಚನ)

"ಅನಂತರದಲ್ಲಿ ಶ್ರೀಹರಿಗೆ ಆಪೋಶವನ್ನು ಕೊಡಬೇಕು. ಅನಂತರದಲ್ಲಿ ಪ್ರಾಣಾದಿ ಪಂಚ ಆಹುತಿಗಳನ್ನು ಕೊಡಬೇಕು."

## ಪ್ರಾಣ ಮುಂತಾದ ಆಹುತಿಗಳನ್ನು ಕೊಡುವ ಕ್ರಮ

"ಎರಡು ಕೈಗಳಿಂದ ತುಲಸೀದಳವನ್ನು ಸ್ವೀಕರಿಸಬೇಕು. ಉಪದೇಶಕ್ರಮದಿಂದ "ಓಂ ನಾರಾಯಣ ಸ್ವಾಹಾ" ಎಂಬ ಮಂತ್ರದಿಂದ ಶ್ರೀಹರಿಯ ಬಲಗೈಯಲ್ಲಿ ಸಮರ್ಪಿಸಬೇಕು. "ಮಧು ವಾತಾ" "ಸ್ವಾದುಃ ಪವಸ್ವ" "ಭೋಜಂ ತ್ವಾಮಿಂದ್ರ" ಎಂಬ ಮೂರು ಮಂತ್ರಗಳನ್ನೂ ನೂರ ಎಂಟು ಸಲ ನಾರಾಯಣಾಷ್ಟಾಕ್ಷರಮಂತ್ರವನ್ನೂ ಜಪಿಸಬೇಕು.

ಮೂಲಮಂತ್ರಂ ಜಪೇದ್ಬ್ರಹ್ಮನ್ ಸ್ಮರನ್ನಾರಾಯಣಾತ್ಮಕಮ್ | (ಭಾಗವತ ವಚನ)

"ನಾರಾಯಣವನ್ನು ಸ್ಮರಿಸುತ್ತಾ ಮೂಲಮಂತ್ರವನ್ನು ಜಪಿಸಬೇಕು." ಲಕ್ಷ್ಮೀದೇವಿಯರು ಬಡಿಸುತ್ತಿರುವಂತೆಯೂ, ಭಾರತೀದೇವಿಯರು ಮುಂತಾದವರು ಪರಿಚಾರಕರಾಗಿಯೂ ಮುಖ್ಯಪ್ರಾಣದೇವರು ಬೀಸುತ್ತಲೂ ನಾರಾಯಣನು ಭೋಜನ ಮಾಡುತ್ತಲೂ, ಇರುವಂತೆ ಸ್ಮರಿಸಬೇಕು."

ಪಾನೀಯಪಾತ್ರಂ ಸೌವರ್ಣಮಥ ವಾ ಕಲಧೌತಕಮ್ |
ವೃತ್ತಾಯತಂ ಸುವೃತ್ತಂ ವಾ ಭವೇದಾಯತಮೇವ ವಾ ||
ಪ್ರಸ್ಥಾವರಪ್ರಮಾಣಂ ತಂ ಪೂರಯೇಚ್ಚಾಂತಗಂ ಜಲಮ್ | (ಪಾದ್ಮತಂತ್ರ ವಚನ)

"ನೀರಿಗಾಗಿ ಇಟ್ಟಿರುವ ಪಾತ್ರವು ಬಂಗಾರ ಅಥವಾ ಬೆಳ್ಳಿಯಿಂದ ಮಾಡಲ್ಪಟ್ಟಿರಬೇಕು. ಎರಡು ಪಾರ್ಶ್ವದಲ್ಲಿ ವರ್ತುಲವಾಗಿಯೂ, ಉಳಿದ ಎರಡು ಪಾರ್ಶ್ವದಲ್ಲಿ ಉದ್ದವಾಗಿಯೂ ಇರಬೇಕು. ಅಥವಾ ವರ್ತುಲಾಕಾರವಾಗಿಯಾಗಲೀ ಉದ್ದವಾಗಿಯಾಗಲೀ ಇರಬೇಕು. ಆ ಪಾತ್ರೆಯೊಳಗೆ ಕಡಿಮೆ ಪಕ್ಷ ಒಂದು ಪ್ರಸ್ಥದಷ್ಟು ನೀರನ್ನು ತುಂಬಿಸಬೇಕು."

## ಪವಿತ್ರವಾದ ತರಕಾರಿಗಳು

ನಿವೇದ್ಯಂತೇ ಪವಿತ್ರಾಣಿ ಶಾಕಾದೀನೀ ನಿವೇದನೇ |
ಉಪಾದೇಯಾನಿ ಶಾಕಾನಿ ಭಕ್ಷ್ಯಾಣಿ ಚ ಫಲಾನಿ ಚ ||
ಸುಪಕ್ವಾನಿ ಸುರುಚ್ಯಾನಿ ಪವಿತ್ರಾಣಿ ನಿವೇದಯೇತ್ |
ಕದಲೀ ಕಾರವಲ್ಲೀ ಚ ಪಟೋಲಾ ಬೃಹತೀದ್ವಯಮ್ ||
ಕೂಷ್ಮಾಂಡಂ ಕಕುಜಂ ಚೈವ ಉರ್ವಾರುದ್ವಯಮೇವ ಚ |
ಪನಸಂ ನಾರಿಕೇಳಂ ಚ ಧಾತ್ರೀ ಚ ಬದರೀಫಲಮ್ ||

ಕಪಿತ್ಥಂ ಕ್ಷುದ್ರವೃಂತಾಕಂ ಆಮ್ರಮಾಮ್ರಾತಕಂ ತದಾ |
ಮದನಂ ಕಟುಜೋದರ್ಕಂ ಮಧುಕಂ ದ್ರಾಕ್ಷಮೇವ ಚ ||
ಆರ್ದ್ರಕಂ ಪಿಪ್ಪಲೀ ಚೈವ ಜಂಬೀರಂ ತಿಂತ್ರಿಣೀದ್ವಯಮ್ |
ಸಿತಕಂದದ್ವಯಂ ಚೈವ ನಾಗಂ ಸೂರಣಂ ತಥಾ ||
ದೀರ್ಘಮೂಲಂ ಕಾಲಕಂದಂ ಶ್ಯಾಮಲೀಕಂದಮೇವ ಚ |
ದ್ರುಮಶಾಕಂ ಮಹಾಶಾಕಂ ಶಾಲ್ಮಲೀದ್ವಯಮೇವ ಚ ||
ಶುಕಶಾಕದ್ವಯಂ ಚೈವ ಶ್ರೀತಾರಾಮಂ ತಥೈವ ಚ |
ಏವಮಾದೀನಿ ಶಾಕಾನಿ ಪವಿತ್ರಾಣಿ ನಿವೇದಯೇತ್ ||

"ಪವಿತ್ರವಾದ ತರಕಾರಿಗಳು, ಹಣ್ಣುಗಳು, ಭಕ್ಷ್ಯಗಳು ಶ್ರೀಹರಿಯ ನೈವೇದ್ಯ ಸಮರ್ಪಣಕ್ಕೆ ಅರ್ಹವಾಗುತ್ತವೆ. ಅವುಗಳನ್ನು ಈಗ ತಿಳಿಸುವೆವು. ಪವಿತ್ರವಾಗಿಯೂ, ಒಳ್ಳೇ ಪಕ್ವವಾಗಿಯೂ ಅತ್ಯಂತ ರುಚಿಯುಳ್ಳವುಗಳೂ ಆಗಿರುವ ಹಣ್ಣು ಮುಂತಾದವುಗಳನ್ನು ಶ್ರೀಹರಿಗೆ ಸಮರ್ಪಿಸಬೇಕು. ಬಾಳೆಹಣ್ಣು, ಬಾಳೆಕಾಯಿ, ಕಾರವಲ್ಲೀ ಪಡುವಲಕಾಯಿ, ಕಿರುನೆಲ್ಲಿ, ದೊಡ್ಡನೆಲ್ಲಿ, ಬೂದಿಕುಂಬಳಕಾಯಿ, ಸೌತೆಕಾಯಿ, ಶಿದ್ದೋಟಿ ಹಣ್ಣು, ಹಲಸಿನ ಹಣ್ಣು, ಹಲಸಿನ ಕಾಯಿ, ತೆಂಗಿನ ಕಾಯಿ, ಬೋರೆ ಹಣ್ಣು, ಬೇಲದ ಹಣ್ಣು, ಬೇಲದ ಕಾಯಿ, ವಾದಿರಾಜಗುಳ್ಳ, ಮಾವಿನ ಹಣ್ಣು, ಮಾವಿನ ಕಾಯಿ, ದ್ರಾಕ್ಷಾಫಲ, ಪಿಪ್ಪಲೀ, ಅಂಬೆ ಹಣ್ಣು, ಹುಣಸೇ ಕಾಯಿ, ಹುಣಸೇ ಹಣ್ಣು, ಸೂರಣಗೆಡ್ಡೆ, ಬಿಳಿಬಣ್ಣದ ಗೆಡ್ಡೆಗಳು, ಕರಿಗೆಡ್ಡೆಗಳು, ದೀರ್ಘಮೂಲಗೆಡ್ಡೆ, ಮಹಾಶಾಕ, ದ್ರುಮಶಾಕ ಮುಂತಾದ ತರಕಾರಿಗಳೂ ಗೆಡ್ಡೆಗಳೂ ಫಲಗಳೂ ಪವಿತ್ರವಾದವುಗಳು."

## ನಿಷಿದ್ಧಶಾಕಗಳು

ಅಭಕ್ಷ್ಯಾಣಿ ನಿಷಿದ್ಧಾನಿ ಸರ್ವಾಲಾಭೇ ವಿವರ್ಜಯೇತ್ |
ಕೋದ್ರವಾಣಿ ಕುಲಿತ್ಥಾನಿ ನಿಷ್ಪಾವಂ ಚ ಮಸೂರಕಮ್ ||
ಕೃಷ್ಣಾನಿ ಯಾವನಾಲಾನಿ ಚೋಟಕಾನ್ಯಪಿ ವರ್ಜಯೇತ್ |
ಮೂಲಕಂ ತಿಲಪಿಷ್ಟಂ ಚ ನಳಿಕಾಂ ಶಿಗ್ರುಮೇವ ಚ ||
ನಿಂಬದ್ವಯಮಲಾಬುಂ ಚ ಪೀಲುಕೌಶಾತಕೀಂ ತಥಾ |
ವಾರ್ತಾಕಂ ಗುಣಪುಷ್ಪಂ ಚ ಅಶ್ವತ್ಥೋದುಂಬರಂ ವಟಮ್ ||
ಪ್ಲಕ್ಷಂ ಚ ಕನಕಂ ಬೈಲ್ವಂ ಕಾಲಿಂಗಂ ತಂಡುಲೀಯಕಮ್ |
ಶ್ಲೇಷ್ಮಾತಕಂ ಕೋವಿದಾರಂ ಮಂತ್ರಶಾಕಂ ಚ ಭೌತಿಕಮ್ ||
ವೃಂತಾಕಕಟಕಾಲಿಂಗಬಿಲ್ವೋದುಂಬರ ಭಿಸ್ಸಟಾಃ |
ಯಸ್ಯೋದರೇ ಪ್ರವರ್ತಂತೇ ತಸ್ಯ ದೂರತರೋ ಹರಿಃ ||

"ಯಾವ ಆಹಾರವು ಸಿಗದಿದ್ದರೂ ಶಾಸ್ತ್ರನಿಷಿದ್ಧವಾದ ಆಹಾರವನ್ನು ತಿನ್ನಲೇ ಕೂಡದು. ಹುರುಳಿ, ಅವರೆ, ಮೂಲಂಗಿ, ನುಗ್ಗೇಕಾಯಿ, ರಾಗಿ, ಬದನೇಕಾಯಿ, ಅಶ್ವತ್ಥದ ಬೀಜ, ಆಲದ ಬೀಜ, ಬಿಲ್ವಫಲ, ಮುಂತಾದ ವಸ್ತುಗಳು ನಿಷಿದ್ಧವಾದವುಗಳು. ಇವುಗಳು ಯಾವನ ಹೊಟ್ಟೆಯಲ್ಲಿ ಸೇರುವವೋ ಶ್ರೀಹರಿಯು ಅವನ್ನು ಬಿಟ್ಟು ದೂರಕ್ಕೆ ಹೋಗುವನು."

## ಪಾಕವಿಧಿ

"ಶಾಸ್ತ್ರದಲ್ಲಿ ವಿಹಿತವಾಗಿರುವ ತರಕಾರಿ ಮುಂತಾದವುಗಳನ್ನು ಸಂಗ್ರಹಿಸಬೇಕು. ಅವುಗಳನ್ನು ಶುದ್ಧವಾಗುವಂತೆ ಮಾಡಬೇಕು. ತೊಳೆಯಬೇಕು. ಆ ಮೇಲೆ ಬೇಯಿಸಬೇಕು."

ಪಾಚಯೇಚ್ಛಾಕಮೂಲಾನಿ ಮರೀಚಿಸ್ನೇಹಮಿಶ್ರಿತಮ್ |
ಆಜ್ಯಂ ಪಯೋ ದಧಿ ಗ್ರಾಹ್ಯಂ ಗವ್ಯಮೇವ ಸುನಿರ್ಮಲಮ್ ||
ನೈವೇದ್ಯಂ ಹೃದ್ಯಮನ್ನಾದ್ಯಂ ಸಸೂಪಂ ವ್ಯಂಜನಾದಿಕಮ್ |
ಪಾಯಸಂ ಭಕ್ಷ್ಯಭೋಜ್ಯಂ ಚ ಪಾನಕಂ ಚ ನಿವೇದಯೇತ್ ||
ನಟಕಾದಿರಸಾದೀಂಶ್ಚಾಪೂಪಶಷ್ಕುಲಿಕಾ ಅಪಿ |
ಚೋಷ್ಯಾಣಿ ಲೇಹ್ಯಖಾದ್ಯಾನಿ ಪೇಯಾನಿ ವಿವಿಧಾನಿ ಚ ||

"ತರಕಾರಿಗಳನ್ನೂ ಗೆಡ್ಡೆಗಳನ್ನೂ, ಮೆಣಸುಗಳನ್ನೂ, ಎಣ್ಣೆಯನ್ನೂ ಮಿಶ್ರ ಮಾಡಿ ಬೇಯಿಸಬೇಕು. ದನದ ತುಪ್ಪ, ಹಾಲು ಮತ್ತು ಮೊಸರುಗಳನ್ನು ಅಡಿಗೆಗೆ ಉಪಯೋಗಿಸಬೇಕು. ಅನ್ನ ಮುಂತಾದ ರುಚಿಕರವಾದ ಆಹಾರವನ್ನು ತಯಾರಿಸಬೇಕು. ತೊವ್ವೆ, ಸಾರು, ಹುಳಿ ಮುಂತಾದವುಗಳನ್ನು ತಯಾರಿಸಬೇಕು. ಪಾಯಸ, ಭಕ್ಷ್ಯಗಳು, ಮತ್ತು ಭೋಜ್ಯಗಳನ್ನು ತಯಾರಿಸಬೇಕು. ಪಾನಕವನ್ನು ಸಮರ್ಪಿಸಬೇಕು. ವಡೆ, ಅಪ್ಪ, ಚಕ್ಕುಲಿ, ರಸಾಯನ ಮುಂತಾದವುಗಳನ್ನು ತಯಾರಿಸಬೇಕು."

ಯದ್ಯದಿಷ್ಟತಮಂ ಲೋಕೇ ಯಚ್ಚಾತಿಪ್ರಿಯಮಾತ್ಮನಃ |
ತತ್ತನ್ನಿವೇದಯೇದ್ವಿಷ್ಣೋಸ್ತದಾನಂತ್ಯಾಯ ಕಲ್ಪತೇ ||

"ಲೋಕದಲ್ಲಿ ತನಗೆ ಬಹಳ ಇಷ್ಟವಾಗಿರುವ ವಸ್ತುಗಳನ್ನೂ ತನಗೆ ತುಂಬಾ ಪ್ರಿಯವಾದ ವಸ್ತುಗಳನ್ನೂ ಶ್ರೀಹರಿಗೆ ಸಮರ್ಪಿಸಬೇಕು. ಹೀಗೆ ಮಾಡಿದರೆ ಅನಂತ ಫಲವು ಬರುತ್ತದೆ."

ನವನೀತಂ ದಧಿ ಕ್ಷೀರಂ ಶರ್ಕರಾಜ್ಯಂ ಯಥಾಕ್ರಮಾತ್ |
ನಂದಾ ಭದ್ರಾ ಜಯಾ ರಿಕ್ತಾಪೂರ್ಣಾಸು ಚ ನಿವೇದಯೇತ್ ||

ಪ್ರತಿಪತ್ ಷಷ್ಠೀ ಏಕಾದಶೀ ತಿಥಿಗಳಲ್ಲಿ ಬೆಣ್ಣೆಯನ್ನೂ, ದ್ವಿತೀಯಾ ಸಪ್ತಮೀ ದ್ವಾದಶೀ ತಿಥಿಗಳಲ್ಲಿ ಮೊಸರನ್ನೂ, ತೃತೀಯಾ ಅಷ್ಟಮೀ ತ್ರಯೋದಶೀ ತಿಥಿಗಳಲ್ಲಿ ಹಾಲನ್ನೂ, ಚತುರ್ಥೀ ನವಮೀ ಚತುರ್ದಶೀ ತಿಥಿಗಳಲ್ಲಿ ಸಕ್ಕರೆಯನ್ನೂ, ಪಂಚಮೀ ದಶಮೀ ಪೂರ್ಣಿಮಾ ಅಮಾವಾಸ್ಯಾ ತಿಥಿಗಳಲ್ಲಿ ತುಪ್ಪವನ್ನೂ ಸಮರ್ಪಿಸಬೇಕು.

ಏವಮನ್ನಾದಿಕಂ ಸರ್ವಂ ಪಕ್ತ್ವಾ ವಿಕೃತಮಂಜಸಾ |
ಸ್ಥಲಶುದ್ಧಿಂ ತತಃ ಕೃತ್ವಾ ದೇವಸ್ಯಾಗ್ರೇ ಲಿಖೇಚ್ಛ್ರಿಯಃ ||
ಬೀಜಂ ತತ್ರ ಚ ನೈವೇದ್ಯಂ ತತ್ತತ್ಪಾತ್ರಸ್ಥಮೇವ ಚ |
ಆನೀಯ ಸ್ಥಾಪ್ಯ ತುಲಸೀಂ ತತ್ರ ನಿಕ್ಷಿಪ್ಯ ಮೂಲತಃ ||
ಭೋಜ್ಯಪೀಠಂ ಸಮಾಗಚ್ಛ ಇತಿ ವಿಜ್ಞಾಪ್ಯ ತಂ ಹರಿಮ್ |
ಪೂರ್ವಂ ಪಾತ್ರೇ ಸ್ಥಿತಂ ತೋಯಂ ತುಲಸೀಸಹಿತಂ ಕರೇ ||
ಗೃಹೀತ್ವಾ ಮೂಲಮಂತ್ರೇಣ ಅಷ್ಟವಾರಂ ಪ್ರಜಪ್ಯ ಚ |
ತಾನ್ ಪ್ರೋಕ್ಷ್ಯ ಸಂಸ್ಪೃಶ್ಯ ತತೋಽಪ್ಯಷ್ಟವಾರಂ ಜಪೇತ್ತತಃ ||

ಕಾಮಧೇನುಮಪಿ ಧ್ಯಾಯೇನ್ನೈವೇದ್ಯಾರ್ಥಂ ದುಹಾಮೃತಮ್ |
ಸುರಭ್ಯೈ ನಮ ಇತ್ಯೇವಂ ಧೇನುಮುದ್ರಾಂ ಪ್ರದರ್ಶ್ಯ ಚ ||
ಚಕ್ರಮಂತ್ರೇಣ ಮುದ್ರಾಶ್ಚ ಚತಸ್ರಃ ಸಂಪ್ರದರ್ಶ್ಯ ಚ |
ನೈವೇದ್ಯರಕ್ಷಣಾರ್ಥಾಯ ವರ್ಧಯೇನ್ಮೇರುಮುದ್ರಯಾ ||
ಸತ್ಯಂ ತ್ವರ್ತೇತಿ ಮಂತ್ರೇಣ ಪರಿಷಿಚ್ಯ ಮನುಂ ಸ್ಮರೇತ್ |

ಅನ್ನ ಮುಂತಾದ ನೈವೇದ್ಯಸಮರ್ಪಣೆಗೆ ಬೇಕಾದ ಎಲ್ಲಾ ಪದಾರ್ಥಗಳನ್ನೂ ಪತ್ನಿಯೇ ತಯಾರಿಸಬೇಕು. ಅನಂತರದಲ್ಲಿ ದೇವರ ಮುಂದೆ ಸ್ಥಳಶುದ್ಧಿಯನ್ನು ಮಾಡಬೇಕು. "ಶ್ರೀಃ" ಎಂದು ಬರೆಯಬೇಕು. ಅದರ ಮೇಲೆ ನೈವೇದ್ಯವನ್ನು ಇಡಬೇಕು. ಅದರ ಮೇಲೆ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ತುಳಸಿಯನ್ನು ಇಡಬೇಕು. ಶ್ರೀಹರಿಯನ್ನು ನೋಡಿ "ಭೋಜ್ಯಪೀಠಂ ಸಮಾಗಚ್ಛ" ಅಂದರೆ "ಭೋಜ್ಯಪೀಠಕ್ಕೆ ಬಾ" ಎಂದು ಪ್ರಾರ್ಥಿಸಬೇಕು. ಭೋಜನಕ್ಕಾಗಿ ಪಾತ್ರದಲ್ಲಿ ಇಟ್ಟಿರುವ ನೀರನ್ನು ತುಲಸೀಸಹಿತವಾಗಿ ತೆಗೆದುಕೊಳ್ಳಬೇಕು. ಎಂಟು ಸಲ ಮೂಲಮಂತ್ರದಿಂದ ಜಪಿಸಬೇಕು. ನೈವೇದ್ಯಕ್ಕಾಗಿ ಇಟ್ಟಿರುವ ಎಲ್ಲಾ ವಸ್ತುಗಳನ್ನೂ ಪ್ರೋಕ್ಷಿಸಬೇಕು. ಮುಟ್ಟಿ ಎಂಟು ಸಲ ಮೂಲಮಂತ್ರದಿಂದ ಜಪಿಸಬೇಕು. "ನೈವೇದ್ಯಾರ್ಥಂ ಮಹಾಮೃತಂ ದುಹ" ಅಂದರೆ ನೈವೇದ್ಯಕ್ಕಾಗಿ ಅಮೃತವನ್ನು ಸುರಿಸು ಎಂದು ಹೇಳುತ್ತಾ "ಸುರಭ್ಯೈ ನಮಃ" ಎಂದು ಧೇನುಮುದ್ರೆಯನ್ನು ತೋರಿಸಬೇಕು. "ನೈವೇದ್ಯ ರಕ್ಷಣಕ್ಕಾಗಿ ಚಕ್ರ ಮುದ್ರೆಯನ್ನು ತೋರಿಸುತ್ತಾ ಉಳಿದ ನಾಲ್ಕು ಮುದ್ರೆಗಳನ್ನೂ ತೋರಿಸಬೇಕು. ಮೇರು ಮುದ್ರೆಯನ್ನು ತೋರಿಸುತ್ತಾ ನೈವೇದ್ಯವನ್ನು ವೃದ್ಧಿ ಮಾಡಬೇಕು. "ಸತ್ಯಂ ತ್ವರ್ತೇನ ಪರಿಷಿಂಚಾಮಿ" ಎಂಬ ಮಂತ್ರದಿಂದ ಪರಿಷೇಚನವನ್ನು ಮಾಡಬೇಕು. ಅನಂತರದಲ್ಲಿ ಮೂಲಮಂತ್ರವನ್ನು ಜಪಿಸುತ್ತಾ ಶ್ರೀಹರಿಯು ಬೋಜನವನ್ನು ಮಾಡುತ್ತಿರುವಂತೆ ಸ್ಮರಿಸಬೇಕು."

## ಹೋಮ

ಅಥಾಗ್ನೌ ಜುಹುಯಾತ್ಸುಧೀಃ | (ವಿಷ್ಣುತೀರ್ಥೀಯ ವಚನ)
ಅನೇನ ಕ್ರಮಯೋಗೇನ ಜುಹುಯಾತ್ಸಂಸ್ಕೃತೇಽನಲೇ | (ತಂತ್ರಸಾರ ವಚನ)

"ಇದೇ ಕ್ರಮದಿಂದ ಸಂಸ್ಕಾರ ಮಾಡಲ್ಪಟ್ಟ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು."

## ಹೋಮವಿಧಿ

ಸ್ನಾನೇ ಧೂಪೇ ತಥಾ ದೀಪೇ ನೈವೇದ್ಯೇ ಶಯನೇ ತಥಾ |
ವೀಜನೇ ಭೂಷಣೇ ಚೈವ ಕುರ್ಯಾದ್ಘೋಷಂ ಸಮಾಪಯೇತ್ | (ವಾಸಿಷ್ಠವಚನ)

"ಸ್ನಾನ, ಧೂಪ, ದೀಪ, ನೈವೇದ್ಯ, ಶಯನ, ಬೀಸಣಿಗೆಯಿಂದ ಬೀಸುವುದು, ಅಲಂಕರಿಸುವುದು ಮುಂತಾದ ಕಾಲಗಳಲ್ಲಿ ವಾದ್ಯಧ್ವನಿಯನ್ನು ಮಾಡಬೇಕು."

## ಸ್ನಾನಾದಿಕಾಲಗಳಲ್ಲಿ ಶ್ರೀಹರಿಯನ್ನು ನೋಡಿದ್ದರಿಂದ ಫಲ

ಪರಂ ವೈ ಪಶ್ಯತಾಂ ಪುಣ್ಯಪರಿಮಾಣಂ ಮಹಾಮತೇ |
ನ ಜಾನೇಽಹಂ ನಾಪಿ ವೇದೋ ನ ಪುರಾಣಂ ನ ಯೋಗಿನಃ ||
ಬ್ರಹ್ಮಣೋ ಮಮ ವಿಷ್ಣೋಶ್ಚ ಪ್ರಿಯಾಸ್ತೇ ನರಸತ್ತಮ |
ಸೋಪಹಾಸಂ ಹರಿಂ ದೃಷ್ಟ್ವಾ ಯಾತಿ ವಿಷ್ಣೋಃ ಸರೂಪತಾಮ್ ||

"ಶ್ರೀಹರಿಯನ್ನು ನೈವೇದ್ಯ ಸಮರ್ಪಣಕಾಲದಲ್ಲಿ ನೋಡುವವರಿಗೆ ಬರುವ ಪುಣ್ಯದ ಪರಿಮಾಣವನ್ನು ನಾನಾಗಲೀ,

ವೇದವಾಗಲೀ, ಪುರಾಣವಾಗಲೀ ಯೋಗಿಗಳಾಗಲೀ ತಿಳಿಯಲು ಶಕ್ತರಲ್ಲ. ಅವರೆಲ್ಲರೂ ಬ್ರಹ್ಮನಿಗೂ ನನಗೂ ವಿಷ್ಣುವಿಗೂ ಪ್ರಿಯರಾಗುವರು. ಅಪಹಾಸವನ್ನು ಮಾಡುತ್ತಾ ನೋಡಿದವರೂ ವಿಷ್ಣುವಿನ ಸಾರೂಪ್ಯವನ್ನು ಪಡೆಯುವರು. ಹೀಗಿರುವಾಗ ಭಕ್ತಿಯಿಂದ ನೋಡಿದವರು ವಿಷ್ಣುಸಾರೂಪ್ಯವನ್ನು ಪಡೆಯುವರು ಎಂದು ಹೇಳಬೇಕಾದ್ದೇನಿದೆ. ಇದು ವಸಿಷ್ಠರು ಭಕ್ತನಿಗೆ ಹೇಳಿದ ವಚನ.

## ನೈವೇದ್ಯ ವಿಸರ್ಜನೆ

ವಿಸರ್ಜಯಿತ್ವಾ ನೈವೇದ್ಯಂ ಮೂಲೇನ ತ್ರಿಃ ಸಮರ್ಚ್ಯ ಚ |
ಧೂಪದೀಪೌ ತತೋ ದತ್ವಾ ಪುನಃ ಪೂರ್ವವದಾಚರೇತ್ || (ತಂತ್ರಸಾರವಚನ)

"ನೈವೇದ್ಯವಿಸರ್ಜನೆಯನ್ನು ಮಾಡಬೇಕು. ಮೂಲಮಂತ್ರದಿಂದ ಮೂರು ಸಲ ಶ್ರೀಹರಿಯನ್ನು ಪೂಜಿಸಬೇಕು. ಧೂಪ, ದೀಪಗಳನ್ನು ಪುನಃ ಸಮರ್ಪಿಸಬೇಕು. ಪುನಃ ಹಿಂದಿನಂತೆ ಮಾಡಬೇಕು. ಅಂದರೆ "ಹಸ್ತಪ್ರಕ್ಷಾಲನಾರ್ಥಮಾಗಚ್ಛ" ಅಂದರೆ "ಕೈಗಳನ್ನು ತೊಳೆದುಕೊಳ್ಳುವುದಕ್ಕೆ ಬಾ" ಎಂದು ಪ್ರಾರ್ಥಿಸಬೇಕು. ಕಾಲುಗಳಿಗೆ ಪಾದುಕೆಗಳನ್ನು ಕೊಡಬೇಕು. ಬೇರೆ ಪೀಠದಲ್ಲಿ ಶ್ರೀಹರಿಯನ್ನು ಕುಳ್ಳಿರಿಸಬೇಕು. "ಹಸ್ತಪ್ರಕ್ಷಾಲನಂ ಸಮರ್ಪಯಾಮಿ" ಎಂದು ಹೇಳುತ್ತಾ ಹೆಸರಿನ ಹಿಟ್ಟು ಮುಂತಾದವುಗಳಿಂದ "ಕರೋದ್ವರ್ತನಂ ಸಮರ್ಪಯಾಮಿ" "ಗಂಡೂಷಂ ಸಮರ್ಪಯಾಮಿ" ಎಂದು ಹೇಳುತ್ತಾ ಕೈಗಳನ್ನು ತೊಳೆಯುವುದು ಮುಂತಾದವುಗಳನ್ನು ಮಾಡಬೇಕು. ಪಾತ್ರದಲ್ಲಿರುವ ನೀರನ್ನು ಉದ್ಧರಣೆಯಿಂದ ತೆಗೆದುಕೊಂಡು "ಪಾದ್ಯಂ ಸಮರ್ಪಯಾಮಿ" "ಆಚಮನೀಯಂ ಸಮರ್ಪಯಾಮಿ" ಮುಂತಾದ ಮಂತ್ರಗಳನ್ನು ಹೇಳುತ್ತಾ ಪಾದ್ಯ ಮುಂತಾದವುಗಳನ್ನು ಸಮರ್ಪಿಸಬೇಕು.

## ತಾಂಬೂಲ ಸಮರ್ಪಣೆ

ಸಪೂಗೀ ಫಲಕರ್ಪೂರನಾಗವಲ್ಲೀ ದಲೈರ್ಯುತಮ್ |
ದದ್ಯಾಚ್ಚೂರ್ಣೇನ ಸಂಯುಕ್ತಂ ತಾಂಬೂಲಂ ಸುಮನೋಹರಮ್ ||

"ಅಡಿಕೆ, ಪಚ್ಚಕರ್ಪೂರ, ಸುಣ್ಣ ಇವುಗಳಿಂದ ಯುಕ್ತವಾಗಿರುವ ವೀಳ್ಯದೆಲೆಯನ್ನು ಶ್ರೀಹರಿಗೆ ಸಮರ್ಪಿಸಬೇಕು. "ತಾಂಬೂಲಂ ಸಮರ್ಪಯಾಮಿ" ಎಂದು ಹೇಳುತ್ತಾ ಸಮರ್ಪಿಸಬೇಕು." ಪುನಃ ಧೂಪವನ್ನೂ ದೀಪವನ್ನೂ ಸಮರ್ಪಿಸಿ ಪೂಜಿಸಬೇಕು.

**ಮಹಾಭಾರತತಾತ್ಪರ್ಯನಿರ್ಣಯ ಶ್ಲೋಕಗಳು —**

ಜಯತ್ಯಜೋಽಖಂಡಗುಣೋರುಮಂಡಲಃ
ಸದೋದಿತೋ ಜ್ಞಾನಮರೀಚಿಮಾಲೀ |
ಸ್ವಭಕ್ತಹಾರ್ದೋಚ್ಚತಮೋನಿಹಂತಾ
ವ್ಯಾಸಾವತಾರೋ ಹರಿರಾತ್ಮಭಾಸ್ಕರಃ ||
ಜಯತ್ಯಜೋಽಕ್ಷೀಣಸುಖಾತ್ಮಬಿಂಬಃ
ಸ್ವೈಶ್ವರ್ಯಕಾಂತಿಪ್ರತತಃ ಸದೋದಿತಃ |
ಸ್ವಭಕ್ತಹಾರ್ದೋಚ್ಚತಮೋನಿಹಂತಾ
ರಾಮಾವತಾರೋ ಹರಿರೀಶಚಂದ್ರಮಾಃ ||

ಜಯತ್ಯಸಂಖ್ಯೋರುಬಲಾಂಬುಪೂರೋ
ಗುಣೋಚ್ಚರತ್ನಾಕರ ಆತ್ಮವೈಭವಃ |
ಸದಾ ಸದಾತ್ಮಜ್ಞನದೀಭಿರಾಪ್ಯಃ
ಕೃಷ್ಣಾವತಾರೋ ಹರಿರೇಕಸಾಗರಃ ||

"ಈ ಮಹಾಭಾರತ ತಾತ್ಪರ್ಯನಿರ್ಣಯಗತವಾದ ಶ್ಲೋಕಗಳನ್ನು ಪಠಿಸಬೇಕು."

## ನೀರಾಂಜನ

ನೀರಾಜನಂ ತತಃ ಪಶ್ಚಾದ್ದದ್ಯಾದ್ದೇವಾಯ ಶಾರ್ಙ್ಗಿಣೇ || (ಹಾರೀತ ವಚನ)

"ಅನಂತರದಲ್ಲಿ ಶ್ರೀಹರಿಗೆ "ನೀರಾಜನ" ಅಂದರೆ ಮಹಾಮಂಗಳಾರತಿಯನ್ನು ಮಾಡಬೇಕು." ಅದರ ಲಕ್ಷಣ ಮತ್ತು ಪ್ರಕಾರಗಳನ್ನು ಹೇಳುವೆವು."

ಚತುರಷ್ಟಾಂಗುಲೋತ್ಸೇಧಂ ದೀಪವರ್ತಿವಿರಾಜಿತಮ್ |
ಉಚ್ಚೈರಾದಾಯ ಹಸ್ತಾಭ್ಯಾಮಾಪಾದತಲಮಸ್ತಕಮ್ ||
ತ್ರಿಃ ಪರಿಭ್ರಾಮ್ಯ ದೇವೇಶಂ ಬಹಿರೇತಂ ನಯೇತ್ತತಃ | (ಪಾದ್ಮತಂತ್ರವಚನ)

"ನಾಲ್ಕು ಅಥವಾ ಎಂಟು ಅಂಗುಲದಷ್ಟು ಎತ್ತರವಾಗಿರಬೇಕು. ದೀಪಗಳಿಂದ ಯುಕ್ತವಾಗಿರುವ ಬತ್ತಿಗಳಿಂದ ಶೋಭಿಸುತ್ತಿರಬೇಕು. ಇಂತಹ ಕಾಲು ದೀಪಗಳನ್ನು ಎರಡು ಕೈಗಳಿಂದ ಎತ್ತಬೇಕು. ಶ್ರೀಹರಿಯ ಪಾದಗಳಿಂದ ಆರಂಭಿಸಿ ತಲೆಯವರೆಗೆ ಮೂರು ಸಲ ಪ್ರದಕ್ಷಿಣಾಕಾರವಾಗಿ ಸುತ್ತಿಸಬೇಕು. ಕೊನೆಗೆ ಹೊರಗೆ ತೆಗೆದುಕೊಂಡು ಹೋಗಬೇಕು. ಹೀಗೆ ನೀರಾಜನವನ್ನು ಸಮರ್ಪಿಸಿ ಕೈಗಳನ್ನು ತೊಳೆದುಕೊಳ್ಳಬೇಕು."

## ನೀರಾಜನದರ್ಶನ ಫಲ

ಏವಂ ನೀರಾಜನಂ ಘೋರಶಾಂತ್ಯರ್ಥಂ ಪುಷ್ಟಿವರ್ಧನಮ್ | (ಪಾದ್ಮತಂತ್ರ ವಚನ)

"ಘೋರವಾದ ಅನಿಷ್ಟಗಳ ಶಾಂತಿಗೋಸ್ಕರವೂ ಪುಷ್ಟಿವೃದ್ಧಿಗೂ ನೀರಾಜನವನ್ನು ಮಾಡಬೇಕು."

ನೀರಾಜನೇ ಮಹಾವಿಷ್ಣೋರ್ಮುಖಂ ಚಂದ್ರಸಮಪ್ರಭಮ್ |
ಮಂದಸ್ಮಿತಂ ಮಹಾಪುಣ್ಯಂ ಸ್ಮರಸ್ಯಾಪಿ ವಿಮೋಹನಮ್ ||
ಕೋಟಯೋ ಬ್ರಹ್ಮಹತ್ಯಾನಾಮಗಮ್ಯಾಗಮಕೋಟಯಃ |
ನಶ್ಯಂತ್ಯಾಲೋಕಮಾತ್ರೇಣ ವಿಷ್ಣೋಃ ಸ್ಯಾರಾರ್ತಿಕಂ ಮುಖಮ್ || (ಸ್ಕಾಂದವಚನ)

"ಶ್ರೀಹರಿಯ ಮುಖವು ಚಂದ್ರನಂತೆ ಪ್ರಕಾಶಿಸುತ್ತದೆ. ಮುಗುಳುನಗೆಯಿಂದ ಯುಕ್ತವೂ ಮನ್ಮಥನಿಗೂ ಮೋಹಕವೂ ಆಗಿರುತ್ತದೆ. ಮಹಾಪುಣ್ಯಕರವಾಗಿರುವ ಶ್ರೀಹರಿಯ ಮುಖವನ್ನು ನೋಡಿದ ಮಾತ್ರದಿಂದ ಕೋಟಿ ಬ್ರಹ್ಮಹತ್ಯೆಗಳೂ ಕೋಟಿ ಅಗಮ್ಯಾಗಮನದಿಂದ ಬಂದಿರುವ ಪಾಪಗಳೂ ದೂರವಾಗುತ್ತವೆ."

## ಮಂತ್ರಪುಷ್ಪ ಸಮರ್ಪಣೆ

ಸರ್ವೈಶ್ಚ ವೈಷ್ಣವೈರ್ಮಂತ್ರೈಃ ಕುರ್ಯಾತ್ಪುಷ್ಪಾಂಜಲಿಂ ತತಃ |
ಸೂಕ್ತೈಶ್ಚ ವಿಷ್ಣುದೈವತ್ಯೈರ್ನಾಮಭಿಃ ಶಾರ್ಙ್ಗಿಣಸ್ತಥಾ || (ಹಾರೀತವಚನ)

"ವಿಷ್ಣುವಿನ ಮಹಿಮೆಗಳನ್ನು ಹೇಳುವ ಎಲ್ಲಾ ಮಂತ್ರಗಳಿಂದಲೂ, ಸೂಕ್ತಗಳಿಂದಲೂ, ವಿಷ್ಣುಸಹಸ್ರನಾಮ ಮುಂತಾದವುಗಳಿಂದಲೂ ಶ್ರೀಹರಿಗೆ ಮಂತ್ರಪುಷ್ಪವನ್ನು ಸಮರ್ಪಿಸಬೇಕು." "ತದ್ವಿಷ್ಣೋಃ" ಮುಂತಾದ ಮಂತ್ರಗಳಿಂದ ಮಂತ್ರಪುಷ್ಪವನ್ನು ಸಮರ್ಪಿಸಬೇಕು. ಮೂಲಮಂತ್ರದಿಂದ ಮೂರು ಸಲ ಪುಷ್ಪವನ್ನು ಸಮರ್ಪಿಸಬೇಕು.

## ಛತ್ರ ಮುಂತಾದ ಉಪಚಾರಗಳ ಸಮರ್ಪಣೆ

ಛತ್ರ, ಚಾಮರ, ದರ್ಪಣ, ವ್ಯಜನ, ವಾಹನ ಮುಂತಾದ ರಾಜೋಪಚಾರಗಳನ್ನು ಮೂಲಮಂತ್ರದಿಂದ ಸಮರ್ಪಿಸಬೇಕು. ಈ ಒಂದೊಂದು ಉಪಚಾರಗಳನ್ನೂ ಶಂಖೋದಕ ಅಥವಾ ಪುಷ್ಪಗಳಿಂದ ಸಮರ್ಪಿಸಬೇಕು. ಒಂದೊಂದು ಉಪಚಾರಗಳನ್ನು ಸಮರ್ಪಿಸಿದ ಕೂಡಲೇ ಕೈಗಳನ್ನು ತೊಳೆದುಕೊಳ್ಳಬೇಕು.

## ಶಂಖಭ್ರಮಣ

ಹಿಂದೆ ತಂದಿರುವ ಜಲವನ್ನು ಶಂಖದಲ್ಲಿ ತುಂಬಿಸಬೇಕು. ತುಲಸೀದಲವನ್ನು ಶಂಖದ ಮೇಲೆ ಇಡಬೇಕು. ಹಿಂದೆ ಹೇಳಿರುವ ಧೇನುಮುದ್ರೆ ಮುಂತಾದವುಗಳನ್ನು ಶಂಖಕ್ಕೆ ತೋರಿಸಬೇಕು. ಶಂಖವನ್ನು ಮುಟ್ಟಿಕೊಂಡು ಪ್ರಣವಮಂತ್ರದಿಂದಲೂ, ಮೂಲಮಂತ್ರದಿಂದಲೂ ಹನ್ನೆರಡು ಸಲ ಜಪಿಸಬೇಕು.

"ಇಮಾ ಆಪಃ ಶಿವಾಃ ಶುದ್ಧಾಃ ಶೀತಲಾಃ ಸಂತು ಪೂತಾಃ ಸೂರ್ಯಸ್ಯ ರಶ್ಮಿಭಿಃ" ಎಂಬ ಆಗಮಖಿಲಮಂತ್ರದಿಂದ ಜಪಿಸಬೇಕು. ಅನಂತರದಲ್ಲಿ ದುಷ್ಟವಾದ ಶರೀರ, ಇಂದ್ರಿಯ, ದ್ರವ್ಯಸಂಸ್ಪರ್ಶ, ಬಿಂಬೋಪಹತಿ ದೋಷಪರಿಹಾರಕ್ಕಾಗಿ ಸಂಸ್ಕೃತವಾದ ಜಲವನ್ನು ಮೂಲಮಂತ್ರದಿಂದ ಶ್ರೀಹರಿಯ ಪಾದದಿಂದ ಆರಂಭಿಸಿ ತಲೆಯವರೆಗೆ ಎರಡು ಸಲ, ಹೃದಯದವರೆಗೆ ಒಮ್ಮೆ ಪ್ರದಕ್ಷಿಣಾಕಾರವಾಗಿ ಸುತ್ತಿಸಬೇಕು. ಅನಂತರದಲ್ಲಿ ಶ್ರೀಹರಿಯನ್ನು ಧ್ಯಾನಿಸುತ್ತಾ ನೂರ ಎಂಟು ಸಲ ಮೂಲಮಂತ್ರವನ್ನು ಜಪಿಸಬೇಕು.

## ಕೃಷ್ಣಾರ್ಪಣ

"ಮದ್ದೇಹೇಂದ್ರಿಯಪ್ರಾಣಮನಶ್ಚೇತನಪೂರ್ವಕಂ ಹರಿಣಾ ಪ್ರೇರಿತೋ ದೋಷಹತಯೇಽಹಂ ಸಮರ್ಪಯೇ"

"ನನ್ನ ದೇಹ, ಇಂದ್ರಿಯ, ಪ್ರಾಣಗಳು, ಮನಸ್ಸು, ಚೇತನದಿಂದ ಆರಂಭಿಸಿ ಎಲ್ಲಾ ವಸ್ತುಗಳಲ್ಲಿಯೂ ನಿಯಾಮಕನಾಗಿರುವ ಶ್ರೀಹರಿಯಿಂದ ಪ್ರೇರಿಸಲ್ಪಟ್ಟ ನಾನು ಮಾಡಿರುವ ಎಲ್ಲಾ ಕರ್ಮಗಳನ್ನೂ ಶ್ರೀಹರಿಗೆ ಸಮರ್ಪಿಸುವೆನು."

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞಕ್ರಿಯಾದಿಷು |
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ||
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ |
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ||

"ಶ್ರೀಹರಿಯ ಸ್ಮರಣದಿಂದಲೂ ನಾಮೋಚ್ಚಾರಣದಿಂದಲೂ ತಪಸ್ಸು, ಯಜ್ಞ, ಕ್ರಿಯೆಗಳಲ್ಲಿ ನ್ಯೂನವಾದದ್ದು ಯಾವುದೂ ಇದ್ದರೆ ಸಂಪೂರ್ಣವಾಗುತ್ತದೆ. ಅಚ್ಯುತನಾಮಕನಾದ ಶ್ರೀಹರಿಯನ್ನು ಕೂಡಲೇ ನಮಸ್ಕರಿಸುವೆನು. ಮಂತ್ರಲೋಪ, ಕ್ರಿಯಾಲೋಪ, ಭಕ್ತಿಲೋಪಗಳು ಏರ್ಪಟ್ಟಿದ್ದರೆ ಅವುಗಳೆಲ್ಲವೂ ನಿನ್ನ ದಯೆಯಿಂದ ಪರಿಪೂರ್ಣವಾಗಲಿ."

"ಅನಯಾ ಯಥಾಸಂಭವಂ ತಂತ್ರಸಾರೋಕ್ತಪೂಜಯಾ ಶ್ರೀಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸೀ ಅನಂತಕಲ್ಯಾಣಗುಣಪರಿಪೂರ್ಣಃ ಕ್ಷೀರಾಬ್ಧಿಶಾಯೀ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್" ಎಂದು ಕೃಷ್ಣಾರ್ಪಣವನ್ನು ಬೇರೆ ಪಾತ್ರೆಯಲ್ಲಿ ಬಿಡಬೇಕು. ಅನಂತರದಲ್ಲಿ ಶ್ರೀಹರಿಭಕ್ತರಿಗೆ "ಶಂಖತೀರ್ಥ" ಮುಂತಾದ ಪ್ರಸಾದವನ್ನು ಕೊಡಬೇಕು.

ನಿವೇದಿತಾನ್ನಂ ತುರ್ಯಾಂಶಂ ವಿಷ್ವಕ್ಸೇನಾಯ ದಾಪಯೇತ್ | (ಪಂಚರಾತ್ರವಚನ)

"ಶ್ರೀಹರಿಗೆ ಸಮರ್ಪಿಸಿರುವ ಅನ್ನದಲ್ಲಿ ನಾಲ್ಕನೆಯ ಒಂದು ಭಾಗವನ್ನು ವಿಷ್ವಕ್ಸೇನನಿಗೆ ಸಮರ್ಪಿಸಬೇಕು."

ರಮಾಬ್ರಹ್ಮಾದಯೋ ದೇವಾಃ ಸನಕಾದ್ಯಾಃ ಶುಕಾದಯಃ |
ಶ್ರೀನೃಸಿಂಹಪ್ರಸಾದೋಽಯಂ ಸರ್ವೇ ಗೃಹ್ಣಂತು ವೈಷ್ಣವಾಃ ||

ಈ ಮಂತ್ರವನ್ನು ಹೇಳುತ್ತಾ "ಶಂಖತೀರ್ಥ ಮುಂತಾದ ಪ್ರಸಾದಶೇಷವನ್ನು ಅವರವರಿಗೆ ಯೋಗ್ಯವಾದಷ್ಟು ಸ್ವೀಕರಿಸಲಿ" ಎಂದು ಹೇಳುತ್ತಾ ಬೇರೆ ಪಾತ್ರದಲ್ಲಿ ಸ್ವಲ್ಪಭಾಗವನ್ನು ಬಿಡಬೇಕು.

### ದೇವಕ್ಷಮಾಪಣ

ಆಸನಾದಿ ಚ ಯಾಗಾಂತಮರ್ಚನಂ ಯನ್ಮಯಾ ಕೃತಮ್ |
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಮಭಕ್ತಿಕಮ್ ||
ತತ್ಸರ್ವಂ ಕ್ಷಮ್ಯತಾಂ ದೇವ ದೀನಂ ಮಾಮಾತ್ಮಸಾತ್ಕುರು |
ಆಪಾದಮೌಲಿಪರ್ಯಂತಂ ಪಶ್ಯತಃ ಪುರುಷೋತ್ತಮಮ್ ||
ಪಾತಕಾನಿ ವಿನಶ್ಯಂತಿ ಕಿಂ ಪುನಶ್ಚೋಪಪಾತಕಮ್ |
ಮಾ ಗಯಾಂ ಯಾಹಿ ಕೌರವ್ಯ ಮಾ ಕಾಶೀಂ ಮಾ ಚ ಪುಷ್ಕರಮ್ ||
ಸಂಪೂಜಿತಂ ಹರಿಂ ದೃಷ್ಟ್ವಾ ಕೃತಕೃತ್ಯೋ ಭವಿಷ್ಯಸಿ |

ಆಸನದಿಂದ ಆರಂಭಿಸಿ ಅನುಯಾಗದವರೆಗೆ ನಿನ್ನ ಪೂಜೆಯನ್ನು ಮಾಡಿದೆನು. ಆ ಪೂಜೆಯಲ್ಲಿ ಏರ್ಪಟ್ಟಿರುವ ಮಂತ್ರಲೋಪ, ಕ್ರಿಯಾಲೋಪ, ಭಕ್ತಿಲೋಪ ಭಕ್ತಿಯಿಲ್ಲದಿರುವಿಕೆ ಇವುಗಳನ್ನೆಲ್ಲವನ್ನೂ ಕ್ಷಮಿಸು. ದೀನನಾದ ನನ್ನನ್ನು ನಿನ್ನವನಾಗಿ ಮಾಡಿಕೊಳ್ಳು. ಕಾಲಿನಿಂದ ಆರಂಭಿಸಿ ತಲೆಯವರೆಗೆ ಶ್ರೀಹರಿಯನ್ನು ನೋಡುವವನ ಪಾಪಗಳೆಲ್ಲವೂ ಓಡಿ ಹೋಗುವುದರಲ್ಲಿ ಸಂಶಯವೇನಿದೆ. ಶ್ರೀಹರಿಯನ್ನು ಪೂಜಿಸುವಾಗ ನೋಡುವವನು ಗಯಾ, ಕಾಶೀ, ಪುಷ್ಕರಕ್ಷೇತ್ರಗಳಿಗೆ ಹೋಗಬೇಕಾಗಿಲ್ಲ. ಕೃತಕೃತ್ಯನಾಗುವನು. ಹೀಗೆ ಹೇಳುತ್ತಾ ಚೆನ್ನಾಗಿ ದೇವನನ್ನು ನೋಡಬೇಕು.

ಅನಂತರದಲ್ಲಿ "ವಿಭಕ್ತಸ್ವಾವತಾರಾಯ ಸ್ವಪಾದಾಶ್ರಿತಸಶ್ರೀಕಪರಿವಾರಾಯ ಶ್ರೀಮತೇ ನಾರಾಯಣಾಯ ನಮಃ" ಎಂದು ಹೇಳುತ್ತಾ ದೇವರ ಎದುರಿನಲ್ಲಿ ಪುಷ್ಪವನ್ನು ಸಮರ್ಪಿಸಬೇಕು. "ಆವರಣದೇವತಾ ಯಥಾಸ್ಥಾನಂ ಗಚ್ಛಂತು" ಎಂದು ಹೇಳುತ್ತಾ ಆವರಣ ದೇವತೆಗಳನ್ನು ವಿಸರ್ಜನೆ ಮಾಡಬೇಕು. ಅನಂತರದಲ್ಲಿ ದೇವನಿಗೆ ಮಾತೃಕಾನ್ಯಾಸ ಮತ್ತು ಪಂಚಾಂಗ ನ್ಯಾಸಗಳನ್ನು ಮಾಡಬೇಕು. ತಾನೂ ಮಾಡಿಕೊಳ್ಳಬೇಕು. "ಉದ್ಯದ್ಭಾಸ್ವತ್ಸಮಾಭಾಸಃ" ಮುಂತಾದ ಮಂತ್ರಗಳಲ್ಲಿ ಹೇಳಿದಂತೆ ದೇವನನ್ನು ಧ್ಯಾನಿಸಬೇಕು. ಆವಾಹನ ಮುದ್ರೆಯಿಂದ "ಏಹ್ಯೇಹಿ ನಾರಾಯಣ ಪುನರಾವಾಹಯಾಮಿ" ಎಂದು ಹೇಳುತ್ತಾ ತನ್ನ ಹೃದಯದಲ್ಲಿ ನಾರಾಯಣನನ್ನು ಆವಾಹನ ಮಾಡಬೇಕು. ಇದು ತನ್ನ ಮನೆಯಲ್ಲಿ ಮಾಡುವ ಪೂಜಾಕ್ರಮ.

### ಪರಾರ್ಥಪೂಜೆ

ರವಿಮಂಡಲಮಧ್ಯಸ್ಥಮಾವಾಹ್ಯ ಚ ವಿಸರ್ಜಯೇತ್ || (ಕಪಿಂಜಲಸಂಹಿತಾ)

"ಸೂರ್ಯಮಂಡಲದ ಮಧ್ಯದಲ್ಲಿರುವ ಶ್ರೀಹರಿಯನ್ನು ಆವಾಹನೆ ಮಾಡಬೇಕು ಮತ್ತು ವಿಸರ್ಜನೆ ಮಾಡಬೇಕು.

### ದೇವಪ್ರಾರ್ಥನೆ

ಯಾಚೇಽಹಂ ತ್ವಾಂ ಹೃಷೀಕೇಶ ನಮಾಮಿ ಪುರುಷೋತ್ತಮ |
ಹೃದಯೇ ಕುರು ಸಂವಾಸಂ ಶ್ರಿಯಾ ಸಹ ಜಗತ್ಪತೇ ||

"ಓ ಹೃಷಿಕೇಶನೇ, ನನ್ನ ಹೃದಯದಲ್ಲಿ ಲಕ್ಷ್ಮೀಸಹಿತನಾಗಿ ವಾಸಿಸು" ಎಂದು ಬೇಡುತ್ತಿರುವೆನು. ಹಾಗೆಯೇ ಮಾಡು" ಎಂದು ಪ್ರಾರ್ಥಿಸಬೇಕು. ಅನಂತರದಲ್ಲಿ ತಾನೂ ಅಂಗನ್ಯಾಸವನ್ನು ಮಾಡಿಕೊಳ್ಳಬೇಕು. ಹೃದಯದಲ್ಲಿರುವ ಶ್ರೀಹರಿಯನ್ನು ಹಿಂದೆ ಹೇಳಿದಂತೆ ಧ್ಯಾನಿಸಬೇಕು. ಅವನನ್ನು ತಾನೂ ನಮಸ್ಕರಿಸಬೇಕು. ವಿಧಿಪ್ರಕಾರವಾಗಿ ಪ್ರಾಣಾಯಾಮವನ್ನು ಮಾಡಬೇಕು. ಗುರುಗಳು ಮುಂತಾದವರನ್ನು ನಮಸ್ಕರಿಸಬೇಕು.

## ಕ್ಷಮಾಪಣೆ

ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಮ್ |
ತಥಾಪಿ ಮತ್ಕೃತಾ ಪೂಜಾ ತತ್ಪ್ರಸಾದೇನ ನಾನ್ಯಥಾ ||
ತದ್ಭಕ್ತಿಸ್ತತ್ಫಲಂ ಮಹ್ಯಂ ತತ್ಪ್ರಸಾದಃ ಪುನಃ ಪುನಃ |
ಕರ್ಮನ್ಯಾಸೋ ಹರಾವೇವಂ ವಿಷ್ಣೋಃ ಪ್ರೀತಿಕರಃ ಸದಾ ||
ನ ಜಾನೇ ಕರ್ಮ ಯತ್ಕಿಂಚಿನ್ನಾಪಿ ವೈದಿಕಲೌಕಿಕೇ |
ನ ನಿಷೇಧವಿಧೀ ಕಿಂಚಿತ್ತವ ದಾಸೋಽಸ್ಮಿ ಕೇವಲಮ್ ||

"ನಾನು ಕರ್ತನಲ್ಲ, ಶ್ರೀಹರಿಯೇ ಕರ್ತನಾಗಿರುವನು. ನನ್ನಿಂದ ನಡೆಯುವ ಸಕಲ ಕರ್ಮಗಳೂ ಶ್ರೀಹರಿಯ ಪೂಜೆಯೆನಿಸುತ್ತವೆ. ನಾನು ಮಾಡಿರುವ ಈ ಕರ್ಮಗಳಿಗೆ ಶ್ರೀಹರಿಯಲ್ಲಿ ಭಕ್ತಿಯು ಫಲವಾಗಿ ಬರಲಿ. ಆ ಭಕ್ತಿಯಿಂದ ಶ್ರೀಹರಿಯ ಅನುಗ್ರಹವು ಪುನಃ ಪುನಃ ಹೆಚ್ಚಲಿ. ಈ ವಿಧವಾದ ಸಕಲ ಕರ್ಮಗಳ ಸಮರ್ಪಣೆಯು ಶ್ರೀಹರಿಗೆ ಯಾವಾಗಲೂ ಪ್ರೀತಿಕರವಾದುದು.

ನಾನು ಯಾವ ಕರ್ಮಗಳನ್ನು ಮಾಡುವ ವಿಧಿಯನ್ನು ತಿಳಿದವನಲ್ಲ. ನಿಷೇಧವನ್ನೂ ತಿಳಿದವನಲ್ಲ. ವೇದೋಕ್ತ ಕರ್ಮಗಳನ್ನೂ ತಿಳಿದವನಲ್ಲ. ಲೌಕಿಕ ಕರ್ಮಗಳನ್ನೂ ತಿಳಿದವನಲ್ಲ. ನಾನು ನಿನ್ನ ದಾಸನು ಎಂಬ ವಿಷಯವನ್ನು ತಿಳಿದಿರುವೆನು."

ಮಾದೃಶೋ ನ ಪರಃ ಪಾಪೀ ತ್ವಾದೃಶೋ ನ ದಯಾಪರಃ |
ಇತಿ ಮತ್ವಾ ಜಗನ್ನಾಥ ರಕ್ಷ ಮಾಂ ಗರುಡಧ್ವಜ ||

"ಓ ಗರುಡಧ್ವಜನೇ, ನನ್ನಷ್ಟು ದೊಡ್ಡ ಪಾಪಿಯಿಲ್ಲ. ನಿನ್ನಷ್ಟು ದೊಡ್ಡ ದಯಾಳುವಿಲ್ಲ. ಹೀಗೆ ತಿಳಿದು ನನ್ನನ್ನು ರಕ್ಷಿಸು."

## ಪ್ರದಕ್ಷಿಣ ಮತ್ತು ನಮಸ್ಕಾರಗಳು

ನತಮಿತ್ಯಾದಿಮಂತ್ರೇಣ ಪ್ರದಕ್ಷಿಣನತಿಸ್ತುತೀಃ |
ಕೃತ್ವಾ ತು ಚತುರಾವೃತ್ತ್ಯಾ ತತೋ ದೇವಂ ಕ್ಷಮಾಪಯೇತ್ ||

"ನತಂ" ಮುಂತಾದ ಮಂತ್ರದಿಂದ ಪ್ರದಕ್ಷಿಣ, ನಮಸ್ಕಾರ, ಸ್ತುತಿಗಳು ಇವುಗಳನ್ನು ನಾಲ್ಕು ನಾಲ್ಕು ಸಲ ಮಾಡಬೇಕು. ಕೊನೆಗೆ ಅಪರಾಧಕ್ಷಮಾಪಣೆಯನ್ನು ಬೇಡಬೇಕು."

ಪರಿಣೀಯ ಪ್ರಣಮ್ಯಾಥ ಸ್ತುತ್ವಾ ಸ್ತುತಿಭಿರುತ್ತಮೈಃ | (ಪಾದ್ಮವಚನ)

"ಶ್ರೀಹರಿಗೆ ಪ್ರದಕ್ಷಿಣೆ ಮಾಡಬೇಕು. ಉತ್ತಮವಾದ ಸ್ತುತಿಗಳಿಂದ ಸ್ತುತಿಸಬೇಕು. ನಮಸ್ಕರಿಸಬೇಕು."

## ಪ್ರದಕ್ಷಿಣ ನಿಯಮದ ಫಲ

ವಿಷ್ಣೋರಾಯತನಂ ನಿತ್ಯಂ ಸಾಯಂ ಪ್ರಾತರ್ದಿನೇ ದಿನೇ |
ಪ್ರದಕ್ಷಿಣಂ ಸ್ವಯಂ ಕುರ್ಯಾದಶ್ವಮೇಧಫಲಂ ಲಭೇತ್ || (ಸಂಗ್ರಹವಚನ)

"ಶ್ರೀಹರಿಯ ಮಂದಿರದಲ್ಲಿ ಪ್ರತಿದಿನದಲ್ಲಿಯೂ ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ತಾನೇ ಪ್ರದಕ್ಷಿಣವನ್ನು ಮಾಡುವವನು ಅಶ್ವಮೇಧಯಾಗದ ಫಲವನ್ನು ಪಡೆಯುವನು."

ಕವಾಟಂ ಬಂಧಯೇತ್ಪಶ್ಚಾದ್ಗೇಹಂ ಕೃತ್ವಾ ಪ್ರದಕ್ಷಿಣಮ್ |
ಸಂಧ್ಯಯೋರಂತರೇ ಕಾಲೇ ಕವಾಟಂ ನ ವಿಮೋಚಯೇತ್ || (ಕಪಿಂಜಲಸಂಹಿತಾ)

"ಪ್ರಾತಃಕಾಲದಲ್ಲಿಯೂ, ಸಾಯಂಕಾಲದಲ್ಲಿಯೂ, ಪೂಜೆಯು ಮುಗಿದು ದೇವಾಲಯದ ಬಾಗಿಲನ್ನು ಹಾಕಿದ ಮೇಲೆ ಪ್ರದಕ್ಷಿಣೆಯನ್ನು ಮಾಡಕೂಡದು. ಬಾಗಿಲನ್ನು ತೆರೆಯಲೂ ಬಾರದು."

## ಪ್ರದಕ್ಷಿಣ ಕ್ರಮ

ನಮೇತ್ಪೂರ್ವಂ ಪ್ರತಿದಿಶಂ ವಾಗ್ಯತೋ ಧ್ಯಾನತತ್ಪರಃ |
ಅಸಂಸಕ್ತೋ ವದನ್ ಕಿಂಚಿನ್ಮಂತ್ರಂ ಕುರ್ಯಾತ್ಪ್ರದಕ್ಷಿಣಮ್ ||
ಆಸನ್ನಪ್ರಸವಾ ನಾರೀ ಜಲಪೂರ್ಣಂ ಯಥಾಘಟಮ್ |
ಉದ್ಧರಂತೀ ಶನೈರ್ಯಾತಿ ತಥಾ ಕುರ್ಯಾತ್ಪ್ರದಕ್ಷಿಣಮ್ || (ಶಾಂಡಿಲ್ಯರ ವಚನ)

"ಒಂದೊಂದು ದಿಕ್ಕುಗಳನ್ನೂ ಮೌನಧಾರಿಯಾಗಿ ಶ್ರೀಹರಿಯನ್ನು ಧ್ಯಾನಿಸುತ್ತಾ ನಮಸ್ಕರಿಸಬೇಕು. ಪ್ರದಕ್ಷಿಣ ಮಾಡುತ್ತಿರುವಾಗ ಯಾರಾದರೂ ಏನನ್ನಾದರೂ ಕೇಳಿದರೆ ಆಸಕ್ತಿಯಿಲ್ಲದೆ ಅತ್ಯವಶ್ಯವಾದ ವಿಷಯಗಳನ್ನು ಕುರಿತು ಸಂಕ್ಷಿಪ್ತವಾದ ಉತ್ತರವನ್ನು ಕೊಡಬೇಕು. ಪ್ರದಕ್ಷಿಣ ಮಾಡುತ್ತಿರುವಾಗ ಮಂತ್ರಗಳನ್ನು ಹೇಳುತ್ತಿರಬೇಕು. ಪ್ರಸವಕಾಲವು ಸಮೀಪಿಸಿದಾಗ ನೀರಿನಿಂದ ತುಂಬಲ್ಪಟ್ಟ ಗಡಿಗೆಯನ್ನು ಎತ್ತಿಕೊಂಡು ಗರ್ಭಿಣಿಯು ಮೆಲ್ಲನೆ ನಡೆಯುತ್ತಿರುವಂತೆ ಪ್ರದಕ್ಷಿಣೆಯನ್ನು ಮಾಡಬೇಕು."

## ಪ್ರದಕ್ಷಿಣ ನಿಯಮ

ಚಕ್ರವದ್ಭ್ರಮಯೇನ್ನಾಗ್ರೇ ಪೃಷ್ಠಭಾಗಂ ನ ದರ್ಶಯೇತ್ |
ನ ಕುರ್ಯಾತ್ಸ್ತ್ರೀಷು ಸಂಲಾಪಂ ನ ಚೋಚ್ಚೈಃ ಪ್ರಲಪೇತ್ಸದಾ ||
ದೈವೀಂ ದ್ವಿಜೋತ್ತಮಚ್ಛಾಯಾಂ ನ ಕ್ರಮೇನ್ನ ಚ ಲಂಘಯೇತ್ |
ಪ್ರದಕ್ಷಿಣಾರ್ಥಂ ತಚ್ಛಾಯಾಂ ಲಂಘಯೇನ್ನಾತ್ರ ದೋಷಭಾಕ್ ||
ತತ್ಪ್ರದಕ್ಷಿಣಮಾಕಾಂಕ್ಷನ್ ಪುರುಷೋ ನಿಯಮೇನ ತು |
ತ್ರಿಧಾ ಕೃತ್ವಾ ತು ತಚ್ಛಾಯಾಂ ಪೂರ್ವಭಾಗೇನ ಸಂವ್ರಜೇತ್ || (ಶಾಂಡಿಲ್ಯರ ವಚನ)

"ಚಕ್ರವು ಸುತ್ತಿದಂತೆ ಅತಿವೇಗದಿಂದ ಪ್ರದಕ್ಷಿಣವನ್ನು ಮಾಡಕೂಡದು. ದೊಡ್ಡವರಿಗಿಂತ ಮುಂದೆ ಹೋಗಕೂಡದು. ಮುಂದೆ ಹೋಗುತ್ತಾ ಬೆನ್ನನ್ನು ತೋರಿಸಕೂಡದು. ಹೆಂಗಸರ ಜೊತೆಯಲ್ಲಿ ಸಂಭಾಷಣಗಳನ್ನು ಮಾಡುತ್ತಾ ಪ್ರದಕ್ಷಿಣವನ್ನು ಮಾಡಕೂಡದು. ಗಟ್ಟಿಯಾಗಿ ಹರಟೆಯನ್ನು ಹರಟುತ್ತಾ ಪ್ರದಕ್ಷಿಣವನ್ನು ಮಾಡಕೂಡದು. ದೇವರ ಮತ್ತು ಬ್ರಾಹ್ಮಣೋತ್ತಮರ ನೆರಳುಗಳನ್ನು ದಾಟಬಾರದು ಮತ್ತು ತುಳಿಯಬಾರದು. ದೊಡ್ಡವರಿಗೆ ಪ್ರದಕ್ಷಿಣೆ ಮಾಡುವ ಉದ್ದೇಶದಿಂದ ಅವರ ನೆರಳುಗಳನ್ನು ದಾಟಿದ್ದರಿಂದ ದೋಷವಿಲ್ಲ. ಅವರುಗಳ ನೆರಳನ್ನು ದಾಟುವ ಸಂದರ್ಭದಲ್ಲಿ ಅವರ ನೆರಳನ್ನು ಮೂರು ಬಾಗ ಮಾಡಬೇಕು. ಕಾಲಿನ ಭಾಗದಲ್ಲಿ ಬರುವ ಮೂರನೆಯ ಭಾಗವನ್ನು ದಾಟಬೇಕು."

ಪ್ರದಕ್ಷಿಣತ್ರಯಂ ಕೃತ್ವಾ ನಮಸ್ಕೃತ್ವಾ ಜನಾರ್ದನಮ್ |
ಪುನಃ ದಕ್ಷಿಣಂ ಕೃತ್ವಾ ವಿಷ್ಣುಲೋಕೇ ಚಿರಂ ವಸೇತ್ || (ಪಾದ್ಮ ವಚನ)

"ಜನಾರ್ದನನಿಗೆ ಮೂರು ಪ್ರದಕ್ಷಿಣೆಗಳನ್ನು ಮಾಡಿ ನಮಸ್ಕರಿಸಬೇಕು. ಪುನಃ ಪ್ರದಕ್ಷಿಣೆ ಮಾಡಬೇಕು. ಹೀಗೆ ಮಾಡುವವನು ವಿಷ್ಣುಲೋಕದಲ್ಲಿ ಬಹುಕಾಲವರೆಗೆ ವಾಸಿಸುವನು."

ಚತುಃ ಪ್ರದಕ್ಷಿಣಂ ಕೃತ್ವಾ ಚತುರ್ದಿಕ್ಷು ಪ್ರಣಮ್ಯ ಚ | (ಬ್ರಹ್ಮಾಂಡವಚನ)

"ನಾಲ್ಕು ಪ್ರದಕ್ಷಿಣೆಗಳನ್ನು ಮಾಡಬೇಕು. ಒಂದೊಂದು ಪ್ರದಕ್ಷಿಣಕ್ಕೂ ಒಂದೊಂದು ದಿಕ್ಕುಗಳಂತೆ ನಾಲ್ಕು ದಿಕ್ಕುಗಳಲ್ಲಿ ನಮಸ್ಕರಿಸಬೇಕು."

ದ್ವಿಚತುಃ ಷಡ್ವಶಾಷ್ಟಾದಿ ಕುರ್ಯಾದ್ದೇವಪ್ರದಕ್ಷಿಣಮ್ |
ದೇವಸ್ಯ ನಿಕಟೇ ಕಾರ್ಯಂ ಸದ್ಭಿಃ ಸಾರ್ಧಂ ಪ್ರದಕ್ಷಿಣಮ್ ||
ಪ್ರದಕ್ಷಿಣೇನ ಚೈಕೇನ ದೇವದೇವಸ್ಯ ಮಂದಿರೇ |
ಕೃತೇನ ಯತ್ಫಲಂ ನೃಣಾಂ ತಚ್ಛೃಣುಷ್ವ ದ್ವಿಜೋತ್ತಮ ||
ಪೃಥ್ವೀಪ್ರದಕ್ಷಿಣಫಲಂ ತೇನ ಪ್ರಾಪ್ಯ ಹರಿಂ ವ್ರಜೇತ್ |
ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ |
ತಾನಿ ತಾನಿ ಪ್ರಣಶ್ಯಂತಿ ಪ್ರದಕ್ಷಿಣಂ ಪದೇ ಪದೇ ||

"ಎರಡು, ನಾಲ್ಕು, ಆರು, ಎಂಟು, ಹತ್ತು ಮುಂತಾದ ಪ್ರದಕ್ಷಿಣೆಗಳನ್ನು ದೇವರ ಸಮೀಪದಲ್ಲಿ ಸಜ್ಜನರೊಡನೆ ಮಾಡಬೇಕು. ಹೀಗೆ ಮಾಡಿರುವ ಒಂದು ಪ್ರದಕ್ಷಿಣೆಯಿಂದ ಬರುವ ಫಲವನ್ನು ಹೇಳುವೆನು. ಈ ಪ್ರದಕ್ಷಿಣದಿಂದ ಭೂಪ್ರದಕ್ಷಿಣ ಫಲವು ಬರುತ್ತದೆ. ಕೊನೆಗೆ ಶ್ರೀಹರಿಯ ಸನ್ನಿಧಾನವು ಸಿಗುತ್ತದೆ. ಹಿಂದಿನ ಜನ್ಮಗಳಲ್ಲಿ ಮಾಡಿರುವ ಎಲ್ಲಾ ಪಾಪಗಳನ್ನೂ ಒಂದೊಂದು ಹೆಜ್ಜೆಗೂ ಕಳೆದುಕೊಳ್ಳುವನು."

ಕೃತ್ವಾ ಪ್ರದಕ್ಷಿಣಂ ಭಕ್ತ್ಯಾ ದೇವದೇವಸ್ಯ ಮಂದಿರೇ |
ಆಧಾನಫಲಮಾಪ್ನೋತಿ ವಿನಾ ಕ್ಲೇಶೇನ ಮಾನವಃ || (ಭಾಗವತವಚನ)

"ದೇವದೇವನ ಮಂದಿರದಲ್ಲಿ ಭಕ್ತಿಯಿಂದ ಪ್ರದಕ್ಷಿಣವನ್ನು ಮಾಡುವವನು ಕ್ಲೇಶವಿಲ್ಲದೆ ಆಧಾನ ಫಲವನ್ನು ಪಡೆಯುವನು."

ವಿಷ್ಣುಂ ಪ್ರದಕ್ಷಿಣೀಕುರ್ವನ್ ಸಕೃದಾವರ್ತತೇ ನರಃ |
ತದೇವಾವರ್ತನಂ ತಸ್ಯ ಪುನರಾವರ್ತನೇ ಭವೇತ್ ||
ವಿಷ್ಣೋರ್ವಿಮಾನಂ ಯಃ ಕುರ್ಯಾತ್ಸಕೃದ್ಭಕ್ತ್ಯಾ ಪ್ರದಕ್ಷಿಣಮ್ |
ಅಶ್ವಮೇಧಸಹಸ್ರಸ್ಯ ಫಲಮಾಪ್ನೋತಿ ಮಾನವಃ || (ನಾರದೀಯವಚನ)

"ಒಮ್ಮೆ ಶ್ರೀಹರಿಯ ಪ್ರದಕ್ಷಿಣವನ್ನು ಮಾಡುವವನು ಮುಂದೆ ಒಮ್ಮೆ ಹುಟ್ಟುವನು. ಆಗಲೂ ಪ್ರದಕ್ಷಿಣವನ್ನು ಮಾಡುವವನು. ಪುನಃ ಸಂಸಾರದಲ್ಲಿ ಬರುವುದಿಲ್ಲ. ವಿಷ್ಣುವಿನ ಮಂದಿರದಲ್ಲಿ ಭಕ್ತಿಯಿಂದ ಒಮ್ಮೆ ಪ್ರದಕ್ಷಿಣವನ್ನು ಮಾಡುವವನು ಒಂದು ಸಾವಿರ ಅಶ್ವಮೇಧಯಾಗಗಳ ಫಲವನ್ನು ಪಡೆಯುವನು."

ಪ್ರದಕ್ಷಿಣಂ ತು ಯಃ ಕುರ್ಯಾದ್ಧರಿಂ ಭಕ್ತ್ಯಾ ಸಮನ್ವಿತಃ |
ಹಂಸಯುಕ್ತವಿಮಾನೇನ ವಿಷ್ಣುಲೋಕಂ ಸ ಗಚ್ಛತಿ || (ಕೃಷ್ಣಾಮೃತಮಹಾರ್ಣವವಚನ)

"ಭಕ್ತಿಯಿಂದ ಶ್ರೀಹರಿಯ ಪ್ರದಕ್ಷಿಣೆಯನ್ನು ಮಾಡುವವನು ಹಂಸಯುಕ್ತವಿಮಾನದಿಂದ ವಿಷ್ಣುಲೋಕಕ್ಕೆ ಹೋಗುವನು."

ಉತ್ಸವೇ ಬಲಿದಾನೇ ಚ ಯಥಾ ಕುರ್ವನ್ ಪ್ರದಕ್ಷಿಣಮ್ |
ಪದೇ ಪದೇಽಶ್ವಮೇಧಸ್ಯ ಫಲಂ ದಶಗುಣಂ ಭವೇತ್ || (ಪಂಚರಾತ್ರವಚನ)

ಶ್ರೀಹರಿಯ ಉತ್ಸವಕಾಲದಲ್ಲಿಯೂ ಬಲಿದಾನಕಾಲದಲ್ಲಿಯೂ ಪ್ರದಕ್ಷಿಣೆಯನ್ನು ಮಾಡುವವನು, ಒಂದೊಂದು ಹೆಜ್ಜೆಗೂ ಹತ್ತು ಹತ್ತು ಅಶ್ವಮೇಧಯಾಗಗಳ ಫಲವನ್ನು ಪಡೆಯುವನು.

ಪ್ರಾಸಾದೋ ಗರ್ಭಗೇಹಂ ಚ ಪ್ರತಿಮಾ ಪೀಠಮೇವ ಚ |
ಶರೀರಂ ದೇವದೇವಸ್ಯ ಸ್ಮೃತಮೇತಚ್ಚತುಷ್ಟಯಮ್ || (ವಿಷ್ಣುಧರ್ಮೋತ್ತರವಚನ)

"ದೇವಾಲಯ, ಗರ್ಭಗೃಹ, ದೇವರ ಪೀಠ, ಪ್ರತಿಮಾ ಈ ನಾಲ್ಕು ವಸ್ತುಗಳು ಶ್ರೀಹರಿಯ ಶರೀರವೆನಿಸುತ್ತವೆ."

### ನಮಸ್ಕಾರದಲ್ಲಿ ವಿಧಿನಿಯಮಗಳು

ಅಗ್ರೇ ಪೃಷ್ಠೇ ವಾಮಭಾಗೇ ಸಮೀಪೇ ಗರ್ಭಮಂದಿರೇ |
ಜಪಹೋಮನಮಸ್ಕಾರಾನ್ನ ಕುರ್ಯಾತ್ಕೇಶವಾಲಯೇ || (ಪಾದ್ಮವಚನ)

ದೇವರ ಗರ್ಭಗೃಹದಲ್ಲಿ ದೇವರ ಮುಂದೆಯೂ, ಹಿಂದೆಯೂ, ಎಡಭಾಗದಲ್ಲಿಯೂ, ತುಂಬಾ ಸಮೀಪದಲ್ಲಿಯೂ, ಜಪವನ್ನೂ ಹೋಮವನ್ನೂ ನಮಸ್ಕಾರಗಳನ್ನೂ ಮಾಡಕೂಡದು.

### ನಮಸ್ಕಾರಾದಿಗಳ ಕ್ರಮ

ಪ್ರಣಾಮ್ಯ ಚ ತತೋ ಭಕ್ತ್ಯಾ ರಮ್ಯೈಃ ಸ್ತೋತ್ರೈರ್ಮನೋರಮ್ಯೈಃ |
ಪ್ರಸಾರ್ಯ ಪಾದೌ ಬಾಹೂ ಚ ಬದ್ಧೇನಾಂಜಲಿನಾ ಸಹ ||
ಸ್ತುವನ್ವೇದೈಶ್ಚತುರ್ಭಿಸ್ತು ಪ್ರಣಾಮೋ ದೀರ್ಘ ಉಚ್ಯತೇ |
ನತ್ವಾ ದೀರ್ಘಪ್ರಣಾಮೈಶ್ಚ ಸ್ತುತ್ವಾ ಸ್ತುತಿಭಿರೇವ ಚ || (ಹಾರೀತವಚನ)

"ಶ್ರೀಹರಿಯನ್ನು ಭಕ್ತಿಯಿಂದ ನಮಸ್ಕರಿಸಬೇಕು. ಮನಸ್ಸನ್ನು ಆಕರ್ಷಿಸುವ ರಮ್ಯವಾದ ಸ್ತುತಿಗಳನ್ನು ಮಾಡಬೇಕು. ಎರಡು ಕಾಲುಗಳನ್ನು ನೀಳವಾಗಿ ಚಾಚಬೇಕು. ಎರಡು ಕೈಗಳನ್ನು ಚಾಚಬೇಕು. ಎರಡು ಅಂಗೈಗಳನ್ನು ಒಟ್ಟುಗೂಡಿಸಿ ಬೊಗಸೆಯನ್ನು ಮಾಡಿಕೊಳ್ಳಬೇಕು. ನಾಲ್ಕು ವೇದಗಳಿಂದ ಸ್ತುತಿಸುತ್ತಿರಬೇಕು. ಇದೇ ದೀರ್ಘ ಪ್ರಣಾಮವೆನಿಸುತ್ತದೆ.

### ಭಗವತ್ಕಥೆಯನ್ನು ಕೇಳುವಾಗ ಭಕ್ತನು ಇರಬೇಕಾದ ಸ್ಥಿತಿ

ಬದ್ಧಾಂಜಲಿಪುಟಃ ಸಮ್ಯಗ್ದಕ್ಷಃ ಕೃತ್ವಾ ಭುಜಾಂತರೇ |
ಶ್ರುತ್ವಾ ವಿಷ್ಣುಕಥಾಂ ಪುಣ್ಯಾಂ ತಥಾ ಸಂಕೀರ್ತಯೇದ್ಧರಿಮ್ ||
ಪ್ರಣಾಮೇದ್ದಂಡವದ್ಭೂಮಾವುತ್ಥಾಯೋತ್ಥಾಯ ತನ್ಮನಾಃ |
ಸ್ವಾಧ್ಯಾಯವದನಃ ಕುರ್ಯಾದಷ್ಟಾಂಗೇನ ನಮಸ್ಕ್ರಿಯಾಮ್ ||
ಪಾದೌ ಶಿರಸ್ತಥಾ ಹಸ್ತೌ ನಿಕುಂಚ್ಯ ಮುಕುಲಾಕೃತೀ |
ಮನೋಬುದ್ಧ್ಯಭಿಮಾನೈಶ್ಚ ಪ್ರಣಾಮೋಽಷ್ಟಾಂಗಸಂಜ್ಞಕಃ || (ಸ್ಮೃತಿವಚನ)

"ಚೆನ್ನಾಗಿ ಎರಡು ಕೈಗಳನ್ನು ಜೋಡಿಸಿಕೊಳ್ಳಬೇಕು. ವಿಷ್ಣುಕಥೆಯನ್ನು ದಕ್ಷತೆಯಿಂದ ಕೇಳಬೇಕು. ಕೈಗಳ ಮಧ್ಯದಲ್ಲಿ ತನ್ನ ಎಲ್ಲಾ ಶರೀರವನ್ನೂ ಇಟ್ಟುಕೊಳ್ಳಬೇಕು. ಮಧ್ಯ ಮಧ್ಯದಲ್ಲಿ ಶ್ರೀಹರಿನಾಮಗಳನ್ನು ಹೇಳುತ್ತಿರಬೇಕು. ಶ್ರೀಹರಿಯನ್ನು ಸ್ಮರಿಸುತ್ತಾ ಎದ್ದು ಆಗ್ಗಾಗ್ಗೆ ನಿಲ್ಲುತ್ತಾ ದಂಡದಂತೆ ಬಿದ್ದು ನಮಸ್ಕರಿಸುತ್ತಾ ಇರಬೇಕು. ವೇದಮಂತ್ರಗಳನ್ನು ಬಾಯಿಯಿಂದ ಹೇಳುತ್ತಾ ಸಾಷ್ಟಾಂಗ ನಮಸ್ಕಾರವನ್ನು ಮಾಡಬೇಕು. ಎರಡು ಕಾಲುಗಳನ್ನೂ, ಎರಡು ಕೈಗಳನ್ನೂ, ತಲೆಯನ್ನೂ ಬಗ್ಗಿಸಿ ಎರಡು ಕೈಗಳನ್ನು ಬೊಗಸೆಯಂತೆ ಮಾಡಿಕೊಂಡು ಮನಸ್ಸನ್ನೂ, ಬುದ್ಧಿಯನ್ನೂ, ಅಭಿಮಾನವನ್ನೂ, ಶ್ರೀಹರಿಯಲ್ಲಿ ಸಮರ್ಪಿಸುವುದು ಸಾಷ್ಟಾಂಗ ಪ್ರಣಾಮವೆನಿಸುತ್ತದೆ."

ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ |

ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ || (ಕೃಷ್ಣಾಮೃತಮಹಾರ್ಣವವಚನ)

"ಎದೆಯನ್ನು ನೆಲಕ್ಕೆ ಮುಟ್ಟಿಸುವುದು, ತಲೆಯನ್ನೂ, ಕೈಗಳನ್ನೂ, ಕಾಲುಗಳನ್ನೂ, ಮೊಣಕಾಲುಗಳನ್ನೂ, ನೆಲಕ್ಕೆ ಮುಟ್ಟಿಸುವುದು. ಕಣ್ಣುಗಳಿಂದ ಶ್ರೀಹರಿಯನ್ನು ನೋಡುತ್ತಾ, ಮನಸ್ಸಿನಿಂದ ಶ್ರೀಹರಿಯನ್ನು ಸ್ಮರಿಸುತ್ತಾ, ಬಾಯಿಯಿಂದ ಶ್ರೀಹರಿಯನ್ನು ಸ್ತುತಿಸುತ್ತಾ, ಇರಬೇಕು. ಇದು ಸಾಷ್ಟಾಂಗ ಪ್ರಣಾಮವೆನಿಸುತ್ತದೆ."

## ನಮಸ್ಕಾರದ ಫಲ

ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ |

ಯೇ ನಮಸ್ಯಂತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ || (ಸ್ಮೃತಿ ವಚನ)

"ಅಗಸೆಯ ಪುಷ್ಪದಂತೆ ನೀಲವರ್ಣದಿಂದ ಯುಕ್ತನಾಗಿಯೂ, ಪೀತಾಂಬರ ಧಾರಿಯಾಗಿಯೂ, ಇರುವ ಗೋವಿಂದನನ್ನು ನಮಸ್ಕರಿಸುವವನಿಗೆ ನರಕ ಭಯವಿಲ್ಲ."

ದಂಡಪ್ರಣಾಮಂ ಯಃ ಕುರ್ಯಾದ್ದೇವಮುದ್ದಿಶ್ಯ ಸನ್ನಿಧೌ |

ವರ್ಷಾಣಿ ವಸತೇ ಸ್ವರ್ಗೇ ಪ್ರತ್ಯೇಕಂ ರೇಣುಸಂಖ್ಯಯಾ || (ಪಾದ್ಮವಚನ)

ಶ್ರೀಹರಿಯನ್ನು ಉದ್ದೇಶಿಸಿ ದಂಡಾಕಾರವಾಗಿ ನಮಸ್ಕಾರವನ್ನು ಯಾವನು ಮಾಡುವನೋ, ನಮಸ್ಕಾರ ಕಾಲದಲ್ಲಿ ಅವನ ದೇಹದಲ್ಲಿ ಅಂಟಿಕೊಂಡಿರುವ ಧೂಳಿಗಳ ಸಂಖ್ಯೆಯಷ್ಟು ವರ್ಷಗಳವರೆಗೆ ಸ್ವರ್ಗದಲ್ಲಿ ವಾಸಿಸುವನು."

ಪ್ರಣಮ್ಯ ಕೃಷ್ಣಂ ಸಹಸಾ ಪಾಂಸುಕೃಷ್ಟೇ ಮಹೀತಲೇ |

ನಿಷ್ಕಲ್ಮಷೋ ಭವೇತ್ಸದ್ಯೋ ಲಲಾಟೇ ಪಾಂಸುಸಂಗಮಾತ್ ||

ರೇಣುಗುಂಠಿತಗಾತ್ರಸ್ಯ ಕಣಾ ಯಾವಂತಿ ಭಾರತ |

ತಾವದ್ವರ್ಷಸಹಸ್ರಾಣಿ ವಿಷ್ಣುಲೋಕೇ ಮಹೀಯತೇ || (ವಿಷ್ಣುಧರ್ಮೋತ್ತರವಚನ)

"ಉತ್ತ ನೆಲದಂತೆ ಧೂಳಿಯಿಂದ ಯುಕ್ತವಾದ ನೆಲದಲ್ಲಿ ವೇಗವಾಗಿ ಬಿದ್ದು ನಮಸ್ಕರಿಸಬೇಕು. ಅವನ ಹಣೆಯಲ್ಲಿ ಧೂಳಿಯು ಅಂಟಿಕೊಳ್ಳಬೇಕು. ಹೀಗೆ ನಮಸ್ಕರಿಸುವವನ ಎಲ್ಲಾ ಪಾಪಗಳೂ ಅವನನ್ನು ಬಿಟ್ಟು ಹೋಗುವವು ದೇಹದಲ್ಲಿ ಧೂಳಿಗಳು ಅಂಟಿಕೊಳ್ಳುವಂತೆ ನಮಸ್ಕರಿಸಬೇಕು. ದೇಹದಲ್ಲಿ ಅಂಟಿಕೊಳ್ಳುವ ಧೂಳಿಗಳ ಸಂಖ್ಯೆಗೆ ಸಮವಾಗಿರುವ ಸಹಸ್ರವರ್ಷಗಳವರೆಗೆ ವಿಷ್ಣುಲೋಕದಲ್ಲಿ ಪೂಜಿಸಲ್ಪಡುವನು."

ಅಂಗೇ ಲಗ್ನಾಶ್ಚ ಯಾವಂತೋ ಭೂರೇಣುಪರಮಾಣವಃ |

ತಾವತ್ಕಲ್ಪಸಹಸ್ರೇಷು ವಸತೇ ಹರಿಮಂದಿರೇ || (ಪಾದ್ಮವಚನ)

"ನಮಸ್ಕರಿಸುವಾಗ ದೇಹದಲ್ಲಿ ಎಷ್ಟು ಪರಮಾಣುಗಳು ಅಂಟಿಕೊಂಡಿರುವವೋ ಅಷ್ಟು ಕಲ್ಪಗಳವರೆಗೆ ಶ್ರೀಹರಿಯ ಮಂದಿರದಲ್ಲಿ ವಾಸಿಸುವನು."

ವಿಷ್ಣೋಃ ಪಾದಪ್ರಣಾಮಾರ್ಥಂ ಭಕ್ತೇನ ಪತತಾ ಭುವಿ |

ಪತಿತಂ ಪಾತಕಂ ಕೃತ್ಸ್ನಂ ನೋತ್ತಿಷ್ಠತಿ ಪುನಃ ಸಹ || (ನಾರದೀಯವಚನ)

"ವಿಷ್ಣುವಿನ ಪಾದಗಳನ್ನು ನಮಸ್ಕರಿಸುವುದಕ್ಕೋಸ್ಕರ ಕೆಳಗೆ ಬಿದ್ದರೆ ಆಗ ಅವನ ಎಲ್ಲಾ ಪಾಪಗಳೂ ಬಿಟ್ಟು ಬಿಡುತ್ತವೆ. ಪುನಃ ಆ ಭಕ್ತನು ಏಳುವಾಗ ಅವನ ಪಾಪಗಳು ಮೇಲೆ ಏಳಲಾರವು."

ಏಕೋಽಪಿ ಕೃಷ್ಣಸ್ಯ ಕೃತಃ ಪ್ರಣಾಮೋ ದಶಾಶ್ವಮೇಧಾವಭೃಥೇನ ತುಲ್ಯಃ |
ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೀ ನ ಪುನರ್ಭವಾಯ || (ವಿಷ್ಣುಧರ್ಮವಚನ)

"ಶ್ರೀಕೃಷ್ಣದೇವನಿಗೆ ಒಮ್ಮೆ ನಮಸ್ಕರಿಸುವುದೂ ಹತ್ತು ಅಶ್ವಮೇಧಯಾಗಗಳನ್ನು ಮಾಡಿ ಅವಭೃಥಸ್ನಾನವನ್ನು ಮಾಡುವುದೂ ಸಮವೆನಿಸುತ್ತದೆ. ಆದರೆ ದಶಾಶ್ವಮೇಧಯಾಗಗಳನ್ನು ಮಾಡಿದವನಿಗೂ ಪುನರ್ಜನ್ಮವುಂಟು, ಕೃಷ್ಣನನ್ನು ನಮಸ್ಕರಿಸಿದವನಿಗೆ ಪುನಃ ಜನ್ಮವಿಲ್ಲ."

ವಿಷ್ಣೋರ್ದೇವಾಧಿದೇವಸ್ಯ ಜಗದ್ಧಾತುಃ ಪ್ರಜಾಪತೇಃ |
ಪ್ರಣಾಮಂ ಯೇಽಪಿ ಕುರ್ವಂತಿ ತೇಷಾಮಪಿ ನಮೋ ನಮಃ ||
ತೀರ್ಥಕೋಟಿ ಸಹಸ್ರಾಣಿ ವ್ರತಕೋಟಿ ಶತಾನಿ ಚ |
ನಾರಾಯಣಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್ ||
ಶಾಠ್ಯೇನಾಪಿ ನಮಸ್ಕಾರಂ ಕುರ್ವತಃ ಶಾರ್ಙ್ಗಪಾಣಯೇ |
ಶತಜನ್ಮಾರ್ಜಿತಂ ಪಾಪಂ ನಶ್ಯತ್ಯೇವ ನ ಸಂಶಯಃ || (ಯಮನ ವಚನ)

"ಎಲ್ಲಾ ದೇವತೆಗಳಿಗೂ ಪ್ರಭುವಾಗಿಯೂ ಜಗತ್ತಿಗೆ ಪ್ರಭುವಾಗಿಯೂ ಇರುವ ಶ್ರೀಕೃಷ್ಣನನ್ನು ಯಾರು ನಮಸ್ಕರಿಸುವರೋ ಅವರನ್ನೂ ನಮಸ್ಕರಿಸುವೆವು. ಕೋಟಿಸಹಸ್ರತೀರ್ಥಗಳಲ್ಲಿ ಸ್ನಾನವನ್ನು ಮಾಡಿದರೂ, ಕೋಟಿಶತಸಂಖ್ಯಾಕವಾದ ವ್ರತಗಳನ್ನು ಮಾಡಿದರೂ, ನಾರಾಯಣನ ನಮಸ್ಕಾರದಿಂದ ಬರುವ ಪುಣ್ಯದಲ್ಲಿ ಹದಿನಾರರಲ್ಲಿ ಒಂದು ಭಾಗವೂ ಏರ್ಪಡಬಾರದು. ಭಕ್ತಿಯಿಲ್ಲದೆ ಬರೇ ಶಾಠ್ಯದಿಂದ ಶ್ರೀಹರಿಗೆ ನಮಸ್ಕಾರವನ್ನು ಮಾಡುವವನೂ, ನೂರು ಜನ್ಮಗಳಲ್ಲಿ ಸಂಪಾದಿಸಿದ ಪಾಪಗಳನ್ನು ಕಳೆದುಕೊಳ್ಳುವನು."

ಕರೇಣ್ಯೆಕೇನ ದೇವೇಶಂ ವಿಷ್ಣುಂ ಬ್ರಹ್ಮಾಣಮಚ್ಯುತಮ್ |
ಯೋ ಮೋಹಾತ್ಪ್ರಣಮೇತ್ತಸ್ಯ ಕರಚ್ಛೇದೋ ನ ಸಂಶಯಃ || (ಪಾದ್ಮವಚನ)

"ಗುಣಪೂರ್ಣನೂ, ದೋಷರಹಿತನೂ, ಆಗಿರುವ ಶ್ರೀಹರಿಯನ್ನು ಒಂದು ಕೈಯಿಂದ ನಮಸ್ಕರಿಸುವವನ ಕೈಗಳನ್ನು ಕತ್ತರಿಸಬೇಕು. ಈ ವಿಷಯದಲ್ಲಿ ಸಂಶಯವಿಲ್ಲ."

ಏಕೇನ ಪಾಣಿನಾ ಯೋ ವೈ ಪ್ರಣಮೇದ್ದೇವಮಚ್ಯುತಮ್ |
ತಸ್ಯ ದಂಡಂ ಕರಚ್ಛೇದ ಇತಿ ವೇದವಿದೋ ವಿದುಃ ||
ತಸ್ಮಾದುಭಾಭ್ಯಾಂ ಪಾಣಿಭ್ಯಾಂ ಪ್ರಣಮೇತ್ಸ್ವಾಮಿನಂ ನರಃ |
ಯಥಾಯೋಗಂ ಚ ನಮತಸ್ತನ್ಮೇ ಪ್ರಿಯತರಂ ಭವೇತ್ || (ಭಾಗವತವಚನ)

"ಸಕಲ ದೋಷರಹಿತನಾದ ಶ್ರೀಹರಿಯನ್ನು ಯಾವನು ಒಂದು ಕೈಯಿಂದ ನಮಸ್ಕರಿಸುವನೋ, ಅವನಿಗೆ ಕೈಗಳನ್ನು ಕತ್ತರಿಸುವುದೇ ಶಿಕ್ಷೆಯೆನಿಸುತ್ತದೆ. ಈ ವಿಷಯವನ್ನು ಮಹಾಜ್ಞಾನಿಗಳಾದ ವೇದಜ್ಞರು ಹೇಳಿರುವರು. ಅದಕ್ಕಾಗಿ ಎರಡು ಕೈಗಳಿಂದ ಮಹಾಸ್ವಾಮಿಯನ್ನು ನಮಸ್ಕರಿಸಬೇಕು. ಅವರವರ ಶಕ್ತಿಯನ್ನು ಅನುಸರಿಸಿ ನಮಸ್ಕರಿಸಬೇಕು. ಇಂತಹ ನಮಸ್ಕಾರವು ನನಗೆ ತುಂಬಾ ಪ್ರಿಯವಾಗಿದೆ.

ಭಗವನ್ಮಂದಿರೇ ವೃದ್ಧಾನ್ ಪೂಜ್ಯಾನ್ ಜ್ಞಾನಾದಿಭಿರ್ಯುತಾನ್ |
ವಿನಾ ಭಾಗವತಶ್ರೇಷ್ಠಾನ್ ಪ್ರಣಮೇದ್ವಾ ನ ಚಾರ್ಚಯೇತ್ ||

ವಿಷ್ಣೋರ್ಗೀತಂ ನ ನೃತ್ತಂ ಚ ನಟನಂ ಚ ವಿಶೇಷತಃ |
ಬ್ರಹ್ಮಬ್ರಾಹ್ಮಣಜಾತೀನಾಂ ಕರ್ತವ್ಯಂ ನಿತ್ಯಕರ್ಮವತ್ ||
ನೃತ್ಯತಾಂ ಶ್ರೀಪತೇರಗ್ರೇ ಕರಸಂಸ್ಫೋಟನಾದಿಭಿಃ |
ಉಡ್ಡೀಯಂತೇ ಶರೀರಸ್ಥಮಹಾಪಾತಕಪಕ್ಷಿಣಃ || (ಸಂಗ್ರಹವಚನ)

"ಶ್ರೀಹರಿಯ ಮಂದಿರದಲ್ಲಿ ವಯೋವೃದ್ಧರನ್ನೂ, ಜ್ಞಾನವೃದ್ಧರನ್ನೂ, ಪೂಜ್ಯರನ್ನೂ, ಬಿಟ್ಟು ಉಳಿದವರನ್ನು ನಮಸ್ಕರಿಸಿದರೂ ಭಾಗವತ ಶ್ರೇಷ್ಠರನ್ನು ನಮಸ್ಕರಿಸಿ ಪೂಜಿಸದಿದ್ದರೂ ಶ್ರೀಹರಿಯು ತೃಪ್ತನಾಗಲಾರನು. ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಗಳನ್ನು ಪ್ರತಿದಿನದಲ್ಲಿಯೂ ಮಾಡುತ್ತಿರುವಂತೆ ವಿಷ್ಣುವಿನ ಮಂದಿರದಲ್ಲಿ ಗೀತ, ನೃತ್ಯ, ನಟನ ಮುಂತಾದ ಕಾರ್ಯಗಳನ್ನು ಮಾಡುತ್ತಿರಬೇಕು. ಇನ್ನೊಬ್ಬರು ನರ್ತನವನ್ನು ಮಾಡುತ್ತಿರುವ ಕಾಲದಲ್ಲಿ ಚಪ್ಪಾಳೆ ಹಾಕುತ್ತಾ ಭಕ್ತ್ಯುದ್ರೇಕವನ್ನು ಯಾರು ವ್ಯಕ್ತಪಡಿಸುತ್ತಾರೆಯೋ ಅವರ ಶರೀರದಲ್ಲಿರುವ ಮಹಾ ಪಾತಕ ಎಂಬ ಪಕ್ಷಿಗಳು ಓಡಿಹೋಗುತ್ತವೆ."

ಪ್ರಣಮ್ಯ ದಂಡವದ್ಭೂಮೌ ನಮಸ್ಕಾರೇಣ ಯೋರ್ಚಯೇತ್ |
ಸ ಯಾಂ ಸದ್ಗತಿಮಾಪ್ನೋತಿ ನ ತಾಂ ಕ್ರತುಶತೈರಪಿ ||
ತಸ್ಮಾದ್ವಿಷ್ಣೋಃ ಪ್ರಣಾಮಂ ಚ ವಿಧಿನಾ ಚ ವಿಶೇಷತಃ |
ಅಶೇಷಪಾಪಮುಕ್ತಃ ಸ್ಯಾದಕ್ಷಯ್ಯಾಂ ಮುಕ್ತಿಮಾಪ್ನುಯಾತ್ || (ಸಂಗ್ರಹವಚನ)

"ದಂಡಾಕಾರವಾಗಿ ಭೂಮಿಯಲ್ಲಿ ಬೀಳುವುದೇ ವಿಷ್ಣುವಿನ ಪೂಜೆಯೆನಿಸುತ್ತದೆ. ಅವನಿಗೆ ಸಿಗುವ ಸದ್ಗತಿಯು ನೂರು ಯಜ್ಞಗಳಿಂದಲೂ ಸಿಗಲಾರದು. ಆದ್ದರಿಂದ ಶ್ರೀಹರಿಯನ್ನು ನಮಸ್ಕರಿಸಬೇಕು. ವಿಧಿಯಿಂದ ಅವನನ್ನು ನಮಸ್ಕರಿಸಿದವನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿದವನಾಗಿ ಅಕ್ಷಯ್ಯವಾದ ಮುಕ್ತಿಯನ್ನು ಹೊಂದುವನು."

ವಸ್ತ್ರೇಣಾಚ್ಛಾದಯನ್ ದೇಹಂ ಯಃ ಕುರ್ಯಾನ್ನಮನಂ ಮಮ |
ಕುಷ್ಠಯುಗ್ಜಾಯತೇ ಜಂತುಸ್ತ್ರಿಷು ಜನ್ಮಸು ಭಾರತ || (ವಾರಾಹವಚನ)

"ತನ್ನ ಶರೀರವನ್ನು ವಸ್ತ್ರದಿಂದ ಮುಚ್ಚಿಕೊಂಡು ಯಾವನು ನನ್ನನ್ನು ನಮಸ್ಕರಿಸುವನೋ, ಅವನು ಮೂರು ಜನ್ಮಗಳಲ್ಲಿ ಕುಷ್ಠರೋಗಿಯಾಗಿ ಹುಟ್ಟುವನು."

ವೈಖಾನಸಸಂಹಿತಾಯಾಂ ಬ್ರಹ್ಮನಾರದಸಂವಾದೇ ಜಿತಂತೇ ಸ್ತೋತ್ರಮ್

ಜಿತಂತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ |
ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ ||
ವಿಜ್ಞಾಪನಮಿದಂ ದೇವ ಶೃಣುಷ್ವ ಪುರುಷೋತ್ತಮ |
ನರನಾರಾಯಣಾಭ್ಯಾಂ ಚ ಶ್ವೇತದ್ವೀಪನಿವಾಸಿಭಿಃ ||
ನಾರದಾದ್ಯೈರ್ಮುನಿಗಣೈಃ ಸನಕಾದ್ಯೈಶ್ಚ ಯೋಗಿಭಿಃ |
ಬ್ರಹ್ಮೇಶಾದ್ಯೈಃ ಸುರಗಣೈಃ ಪಂಚಕಾಲಪರಾಯಣೈಃ ||
ಪೂಜ್ಯಸೇ ಪುಂಡರೀಕಾಕ್ಷ ದಿವ್ಯೈರ್ಮಂತ್ರೈರ್ಮಹಾತ್ಮಭಿಃ |
ಪಾಷಂಡಧರ್ಮಸಂಕೀರ್ಣೇ ಭಗವದ್ಭಕ್ತಿವರ್ಜಿತೇ ||
ಕಲೌ ಜಾತೋಽಸ್ಮಿ ದೇವೇಶ ಸರ್ವಧರ್ಮಬಹಿಷ್ಕೃತೇ |
ಕಥಂ ತ್ವಾಮಸಮಾಚಾರಃ ಪಾಪಪ್ರಸವಭೂರಹಮ್ ||

ಅರ್ಚಯಾಮಿ ದಯಾಸಿಂಧೋ ಪಾಪಪ್ರಸವಭೂರಹಮ್ |
ಅರ್ಚಯಾಮಿ ದಯಾಸಿಂಧೋ ಪಾಹಿ ಮಾಂ ಶರಣಾಗತಮ್ ||
ತಾಪತ್ರಯದಾವಾಗ್ನೌ ದಹ್ಯಮಾನಂ ಮಾಂ ಸದಾ ವಿಭೋ |
ಪಾಹಿ ಮಾಂ ಪುಂಡರೀಕಾಕ್ಷ ಕೇವಲಂ ಕೃಪಯಾ ತವ ||
ಜನ್ಮಮೃತ್ಯುಜರಾವ್ಯಾಧಿಮೃತ್ಯುಸಂತಪ್ತದೇಹಿನಮ್ |
ಪಾಲಯಾಶು ದೃಶಾ ದೇವ ತವ ಕಾರುಣ್ಯಗರ್ಭಯಾ ||
ಇಂದ್ರಿಯಾಣಿ ಮಯಾ ಜೇತುಂ ನ ಶಕ್ಯಂ ಪುರುಷೋತ್ತಮ |
ಶರೀರಂ ಮಮ ದೇವೇಶ ವ್ಯಾಧಿಭಿಃ ಪರಿಪೀಡಿತಮ್ ||
ಮನೋ ಮೇ ಪುಂಡರೀಕಾಕ್ಷ ವಿಷಯಾನೇವ ಧಾವತಿ |
ವಾಣೀ ಮಮ ಹೃಷೀಕೇಶ ಮಿಥ್ಯಾಪಾರುಷ್ಯದೂಷಿತಾ ||
ಇತ್ಥಂ ಸಾಧನಹೀನೋಽಹಂ ಕಿಂ ಕರಿಷ್ಯಾಮಿ ಕೇಶವ |
ರಕ್ಷ ಮಾಂ ಕೃಪಯಾ ಕೃಷ್ಣ ಭವಾಬ್ಧೌ ಪತಿತಂ ಸದಾ ||
ಅಪರಾಧಸಹಸ್ರಾಣಾಂ ಸಹಸ್ರಮಯುತಂ ತಥಾ |
ಅರ್ಬುದಂ ಚಾಪ್ಯಸಂಖ್ಯೇಯಂ ಕರುಣಾಬ್ಧೇ ಕ್ಷಮಸ್ವ ಮೇ ||
ಯಚ್ಚಾಪರಾಧಂ ಕೃತವಾನಜ್ಞಾನಾತ್ಪುರುಷೋತ್ತಮ |
ಅಜ್ಞಸ್ಯ ಮಮ ದೇವೇಶ ತತ್ಸರ್ವಂ ಕ್ಷಂತುಮರ್ಹಸಿ ||
ಅಜ್ಞತ್ವಾದಲ್ಪಶಕ್ತಿತ್ವಾದಾಲಸ್ಯಾದ್ದುಷ್ಟಭಾವನಾತ್ |
ಕೃತಾಪರಾಧಂ ಕೃಪಣಂ ಕ್ಷಂತುಮರ್ಹಸಿ ಮಾಂ ವಿಭೋ ||
ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ |
ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಮಧುಸೂದನ ||
ಉಪಚಾರಾಪದೇಶೇನ ಕೃತಾನಹರಹರ್ಮಯಾ |
ಅಪಚಾರಾನಿಮಾನ್ ಸರ್ವಾನ್ ಕ್ಷಮಸ್ವ ಪುರುಷೋತ್ತಮ ||
ಯಜ್ಜನ್ಮನಃ ಪ್ರಭೃತಿ ಮೋಹವಶಂ ಗತೇನ |
ನಾನಾಪರಾಧಶತಮಾಚರಿತಂ ಮಯಾ ತೇ ||
ಅಂತರ್ಬಹಿಶ್ಚ ಸಕಲಂ ತವ ಪಶ್ಯತೋಽಪಿ |
ಕ್ಷಂತುಂ ತ್ವಮರ್ಹಸಿ ಹರೇ ಕರುಣಾವಶೇನ ||
ಕರ್ಮಣಾ ಮನಸಾ ವಾಚಾ ಯಾ ಚೇಷ್ಟಾ ಮಮ ನಿತ್ಯಶಃ |
ಕೇಶವಾರಾಧನೇ ಸಾ ಸ್ಯಾಜ್ಜನ್ಮಜನ್ಮಾಂತರೇಷ್ವಪಿ ||

# ವೈಶ್ವದೇವ ವಿಧಿ

ಮೂಲ - ವೈಶ್ವದೇವಂ ಬಲಿಂ ಚೈವ ಕುರ್ಯಾನ್ನಿತ್ಯಂ ತದರ್ಪಣಮ್ |

ಪದಚ್ಛೇದ - ವೈಶ್ವದೇವಂ, ಬಲಿಂ, ಚ, ಏವ ಕುರ್ಯಾತ್, ನಿತ್ಯಂ ತದರ್ಪಣಮ್.

ಅನ್ವಯ - ನಿತ್ಯಂ ವೈಶ್ವದೇವಂ ಕೃತ್ವಾ ತದರ್ಪಣಂ ಕುರ್ಯಾತ್.

ಅನ್ವಯಾರ್ಥ - "ಪ್ರತಿದಿನದಲ್ಲಿಯೂ ತನ್ನ ತನ್ನ ಶಾಖೆಗೆ ಹೇಳಿದಂತೆ ವೈಶ್ವದೇವ ಮತ್ತು ಬಲಿಹರಣ ಮುಂತಾದವುಗಳನ್ನು ಮಾಡಿ ಶ್ರೀಹರಿಗೆ ಸಮರ್ಪಿಸಬೇಕು."

ವಿಷ್ಣೋರರ್ಥೇ ಕರಿಷ್ಯಾಮಿ ಬಾಹರಾಮಿ ದದಾಮಿ ಚ |
ನಾತ್ಮಾರ್ಥಮಿತಿ ವೈ ಕ್ವಾಪಿ ವದನ್ ಕರ್ಮ ಕರೋತಿ ಯಃ ||
ಶ್ರುತಿಸ್ಮೃತೀ ಹರೇರಾಜ್ಞಾ ತಸ್ಯಾಹಮನುಗಃ ಸದಾ |
ತಸ್ಯ ಹ್ಯಾಜ್ಞಾಧರೋ ಭೂತ್ವಾ ಯಾವಜ್ಜೀವಂ ವಸಾಮ್ಯಹಮ್ ||
ಇತ್ಥಂ ಜಪನ್ ಸದಾ ಕುರ್ವನ್ ಧ್ಯಾಯೇದ್ವಿಷ್ಣುಮತಂದ್ರಿತಃ | (ಆದಿತ್ಯಪುರಾಣ ವಚನ)

"ವಿಷ್ಣುವಿನ ಪ್ರೀತಿಗಾಗಿ ಎಲ್ಲಾ ಕಾರ್ಯಗಳನ್ನು ಮಾಡುವೆನು. ತೆಗೆದುಕೊಳ್ಳುವೆನು, ಕೊಡುವೆನು, ನನಗಾಗಿ ಯಾವ ಕಾರ್ಯವನ್ನೂ ಮಾಡುತ್ತಿಲ್ಲ. ಶ್ರುತಿ ಮತ್ತು ಸ್ಮೃತಿಗಳು ಶ್ರೀಹರಿಯ ಆಜ್ಞಾರೂಪವಾಗಿವೆ. ಶ್ರೀಹರಿಯ ಆಜ್ಞೆಯನ್ನು ತಲೆಯಲ್ಲಿ ಧರಿಸಿದವನಾಗಿ ಬದುಕಿರುವವರೆಗೂ ವಾಸಿಸುವೆನು. ಹೀಗೆ ಜಪಿಸುತ್ತಾ, ಕರ್ಮಗಳನ್ನು ಮಾಡುತ್ತಾ, ಆಲಸ್ಯವಿಲ್ಲದೆ ಶ್ರೀಹರಿಯನ್ನು ಯಾವಾಗಲೂ ಧ್ಯಾನಿಸುತ್ತಿರಬೇಕು."

ಹರೇರ್ನೈವೇದ್ಯಶೇಷೇಣ ಜುಹುಯಾದ್ವಹ್ನಿಮಂಡಲೇ | (ಪಾದ್ಮವಚನ)

"ಶ್ರೀಹರಿಗೆ ನೈವೇದ್ಯ ಸಮರ್ಪಣೆಯನ್ನು ಮಾಡಿದ ಮೇಲೆ ನೈವೇದ್ಯ ಶೇಷದಿಂದ ಅಗ್ನಿಮಂಡಲದಲ್ಲಿ ಹೋಮವನ್ನು ಮಾಡಬೇಕು."

ತದೇವ ಜುಹುಯಾದ್ವಹ್ನೌ ಭುಂಜೀಯಾತ್ತು ತದೇವ ಹಿ | (ಹಾರೀತರವಚನ)

"ಯಾವ ಆಹಾರವನ್ನು ಸ್ವೀಕರಿಸುವೆವೋ ಆ ಆಹಾರಪದಾರ್ಥಗಳನ್ನು ಅಗ್ನಿಯಲ್ಲಿ ಹೋಮ ಮಾಡಿ ಸ್ವೀಕರಿಸಬೇಕು."

ವಿಷ್ಣೋರ್ನಿವೇದಿತಾನ್ನೇನ ಯಷ್ಟವ್ಯಂ ದೇವತಾಂತರಮ್ |
ಪಿತೃಭ್ಯಶ್ಚಾಪಿ ತದ್ದೇಯಂ ತದಾನಂತ್ಯಾಯ ಕಲ್ಪತೇ || (ಪಾದ್ಮಸಂಹಿತಾವಚನ)

"ವಿಷ್ಣುವಿಗೆ ಸಮರ್ಪಿಸಲ್ಪಟ್ಟ ಅನ್ನದಿಂದ ಇತರ ದೇವತೆಗಳನ್ನು ಕುರಿತು ಯಜ್ಞ ಮುಂತಾದವುಗಳಲ್ಲಿ ಆಹುತಿಯನ್ನು ಕೊಡಬೇಕು. ಪಿತೃಗಳಿಗಾಗಿ ಸಮರ್ಪಿಸುವ ಪಿಂಡ ಮುಂತಾದವುಗಳನ್ನೂ ಶ್ರೀಹರಿ ನೈವೇದ್ಯದಿಂದಲೇ ಮಾಡಬೇಕು. ಇದರಿಂದ ದೇವತೆಗಳಿಗೆ ಕೊಟ್ಟಿರುವ ಆಹುತಿಗಳೂ, ಪಿತೃಗಳಿಗೆ ಸಮರ್ಪಿಸಿದ ಪಿಂಡದಾನವೂ, ಅನಂತಫಲವನ್ನು ಕೊಡುತ್ತವೆ."

ಹರೇರ್ನೈವೇದ್ಯವಿಶೇಷೇಣ ಪಂಚಯಜ್ಞಾನ್ ಸಮಾಚರೇತ್ |
ವೈದಿಕೇ ಲೌಕಿಕೇ ವಾಪಿ ದೇವೇಭ್ಯೋ ಜುಹುಯಾದ್ದ್ವಿಃ ||
ಪರಿಷಿಚ್ಯ ಪರಿಸ್ತೀರ್ಯ ಸಮಿಧೌ ದ್ವೇ ವಿನಿಕ್ಷಿಪೇತ್ |
ತತ ಔಪಾಸನೋಕ್ತಂ ತು ಜುಹುಯಾದಾಹುತಿದ್ವಯಮ್ ||
ಸೋಮೋ ವನಸ್ಪತಿಶ್ಚಾಗ್ನಿರಗ್ನಿಷೋಮೌ ತಥೈವ ಚ |
ದ್ಯಾವಾಪೃಥಿವ್ಯಾವಿಂದ್ರಾಗ್ನಿರಿಂದ್ರೋ ಧನ್ವಂತರಿಸ್ತಥಾ ||

ಬ್ರಹ್ಮಾ ಚ ವಿಶ್ವೇದೇವಾಶ್ಚ ಸಾಧ್ಯಾಶ್ಚೈವ ಮರುದ್ಗಣಾಃ ||
ವಸುಭ್ಯಶ್ಚೈವ ರುದ್ರೇಭ್ಯ ಆದಿತ್ಯೇಭ್ಯಸ್ತಥೈವ ಚ |
ಏತಾನುದ್ದಿಶ್ಯ ಹೋತವ್ಯಮನ್ನಂ ವಿಷ್ಣೋರ್ನಿವೇದಿತಮ್ ||
ಸ ಏಷ ದೇವಯಜ್ಞಸ್ತು ಮುನಿಭಿಃ ಪರಿಕೀರ್ತಿತಃ |
ತತಃ ಪಿತೃಭ್ಯೋ ದಾತವ್ಯಮರ್ಚನಾದಿ ಸಮನ್ವಿತಮ್ ||
ಭೂತೇಭ್ಯಶ್ಚ ಬಲಿಂ ದದ್ಯಾದತಿಥಿಭ್ಯಸ್ತಥೈವ ಚ | (ವಾಸಿಷ್ಠವಚನ)

ಶ್ರೀಹರಿಯ ನೈವೇದ್ಯಶೇಷದಿಂದ ಪಂಚಯಜ್ಞಗಳನ್ನು ಮಾಡಬೇಕು. ವೈದಿಕಕಾರ್ಯಗಳಲ್ಲಿ ಅಥವಾ ಲೌಕಿಕ ಕಾರ್ಯಗಳಲ್ಲಿ ದೇವತೆಗಳಿಗಾಗಿ ಹವಿಸ್ಸುಗಳನ್ನು ಸಮರ್ಪಿಸಬೇಕು. ಮೊದಲು ಅಗ್ನಿಪರಿಷೇಚನವನ್ನು ಮಾಡಬೇಕು. ಅನಂತರದಲ್ಲಿ ಪರಿಸ್ತರಣವನ್ನು ಮಾಡಿ ಎರಡು ಸಮಿತ್ತುಗಳನ್ನು ಅಗ್ನಿಯಲ್ಲಿ ಹಾಕಬೇಕು. ಅನಂತರದಲ್ಲಿ ಔಪಾಸನಹೋಮದಲ್ಲಿ ಕೊಡುವ ಎರಡು ಆಹುತಿಗಳನ್ನು ಸಮರ್ಪಿಸಬೇಕು. (1) ಸೋಮ (2) ವನಸ್ಪತಿ (3) ಅಗ್ನಿ (4) ಅಗ್ನಿಷ್ಟೋಮ (5) ದ್ಯಾವಾಪೃಥಿವಿಗಳು (6) ಇಂದ್ರಾಗ್ನಿಗಳು (7) ಇಂದ್ರ (8) ಧನ್ವಂತರಿ (9) ಬ್ರಹ್ಮ (10) ವಿಶ್ವೇದೇವತೆಗಳು (11) ಸಾಧ್ಯರು (12) ಮರುದ್ಗಣಗಳು (13) ವಸುಗಳು (14) ರುದ್ರರು (15) ಆದಿತ್ಯರು ಇಷ್ಟು ದೇವತೆಗಳನ್ನು ಉದ್ದೇಶಿಸಿ ಶ್ರೀಹರಿಗೆ ಸಮರ್ಪಿಸಲ್ಪಟ್ಟ ನೈವೇದ್ಯದ ಆಹುತಿಗಳನ್ನು ಸಮರ್ಪಿಸಬೇಕು. ಇದು ದೇವಯಜ್ಞವೆನಿಸುತ್ತದೆ.

ಅನಂತರದಲ್ಲಿ ಪಿತೃಗಳಿಗೆ ಪೂಜೆ ಮುಂತಾದವುಗಳನ್ನು ಮಾಡಿ ಪಿತೃಗಳಿಗೆ ಶ್ರೀಹರಿ ನೈವೇದ್ಯವನ್ನು ಸಮರ್ಪಿಸಬೇಕು. ಅನಂತರದಲ್ಲಿ ಭೂತಬಲಿಯನ್ನು ಕೊಡಬೇಕು. ಅನಂತರದಲ್ಲಿ ಅತಿಥಿ ಸತ್ಕಾರವನ್ನು ಶ್ರೀಹರಿ ನೈವೇದ್ಯದಿಂದ ಮಾಡಬೇಕು.

ಶ್ರೀಹರಿಯ ನೈವೇದ್ಯಶೇಷದಿಂದ ತಮ್ಮ ತಮ್ಮ ಸೂತ್ರದಲ್ಲಿ ಹೇಳಿದಂತೆ ವೈಶ್ವದೇವವನ್ನು ಮುಗಿಸಬೇಕು. ಪ್ರದಕ್ಷಿಣಾಕಾರವಾಗಿ ಮನೆಯಿಂದ ಹೊರಡಬೇಕು. ಮನೆಯ ಸಮೀಪದಲ್ಲಿ ವಾಸಿಸುವ ನಾಯಿಗಳು, ಪತಿತನಾದವನು, ಭೂತಗಳು, ಕಾಗೆ ಮುಂತಾದವರಿಗೋಸ್ಕರ "ಯೇ ಭೂತಾಃ ಪ್ರಚರಂತಿ ದಿವಾ ನಕ್ತಂ ಬಲಿಮಿಚ್ಛಂತಃ" ಮುಂತಾದ ಮಂತ್ರಗಳನ್ನು ಹೇಳುತ್ತಾ ಶುದ್ಧವಾದ ಭೂಮಿಯಲ್ಲಿ ಬಲಿಯನ್ನು ಇಟ್ಟು ಅದರ ಮೇಲೆ ಸ್ವಲ್ಪ ನೀರನ್ನು ಹಾಕಬೇಕು.

ಅನಂತರದಲ್ಲಿ ದನವನ್ನು ಕರೆಯುವವರೆಗೆ ಅತಿಥಿಗಳನ್ನು ನಿರೀಕ್ಷಿಸಬೇಕು. ಕೈಗಳನ್ನೂ, ಕಾಲುಗಳನ್ನೂ, ತೊಳೆದುಕೊಂಡು "ಶಾಂತಾ ಪೃಥಿವೀ ಶಿವಮಂತರಿಕ್ಷಂ" ಮುಂತಾದ ಮಂತ್ರಗಳಿಂದ ಶಾಂತಿಯನ್ನು ಜಪಿಸಬೇಕು.

### ಅತಿಥಿಪೂಜಾ

ಶಾಂತಿಮಂತ್ರಗಳನ್ನು ಜಪಿಸುತ್ತಿರುವಾಗ ಬಂದ ಅತಿಥಿಗಳನ್ನು ಪೂಜಿಸಬೇಕು. ಪಿತೃಗಳಿಗಾಗಿ ಮಾಡುವ ಶ್ರಾದ್ಧ ಕಾಲದಲ್ಲಿ ಹಿಂದೆ ಹೇಳಿರುವ ಸ್ಮೃತಿಗಳಲ್ಲಿ ಹೇಳಿದಂತೆ ಪಿಂಡಪ್ರದಾನದವರೆಗೆ ಮತ್ತು ಬ್ರಾಹ್ಮಣ ಭೋಜನದವರೆಗಿನ ಕಾರ್ಯಗಳನ್ನೂ ಬಲಿಯನ್ನೂ ಕೊಟ್ಟ ಅನಂತರದಲ್ಲಿ ಅತಿಥಿಯನ್ನು ಪೂಜಿಸಬೇಕು.

ಮೂಲ - ಇಷ್ಟಂ ದತ್ತಂ ಹುತಂ ಜಪ್ತಂ ಪೂರ್ತಂ ಯಚ್ಚಾತ್ಮನಃ ಪ್ರಿಯಮ್ |
ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್ || 12 ||
ಭುಕ್ತಶೇಷಂ ಭಗವತೋ ಭೃತ್ಯಾತಿಥಿಪುರಃಸರಃ |
ಭುಂಜೀತ ಹೃದ್ಗತಂ ವಿಷ್ಣುಂ ಸ್ಮರಂಸ್ತದ್ಗತಮಾನಸಃ ||
ಆಚಮ್ಯ ಮೂಲಮಂತ್ರೇಣ ಕೋಷ್ಠಂ ಸಮಭಿಮಂತ್ರಯೇತ್ || 13 ||

ಪದಭೇದ - ಇಷ್ಟಂ, ದತ್ತಂ, ಹುತಂ, ಜಪ್ತಂ, ಪೂರ್ತಂ, ಯತ್, ಚ, ಪ್ರಿಯಂ, ದಾರಾನ್, ಸುತಾನ್, ಪ್ರಿಯಾನ್, ಪ್ರಾಣಾನ್, ಪರಸ್ಮೈ, ಸನ್ನಿವೇದಯೇತ್.

ಅನ್ವಯಾರ್ಥ - "ಇಷ್ಟಂ" ಯಜ್ಞಗಳಲ್ಲಿ ಸಮರ್ಪಿಸಿದ ಆಹುತಿ ವಸ್ತುಗಳನ್ನೂ, "ಹುತಂ" ಔಪಾಸನ ಮುಂತಾದವುಗಳಲ್ಲಿ ಸಮರ್ಪಿಸಿದ ಆಹುತಿಗಳನ್ನೂ, "ದತ್ತಂ" ದಾನಕಾಲದಲ್ಲಿ ದಾನ ಮಾಡಿರುವುದನ್ನೂ, "ಜಪ್ತಂ" ಗಾಯತ್ರೀ ಮುಂತಾದವುಗಳ ಜಪಗಳನ್ನೂ "ಪೂರ್ತಂ" ಕೆರೆ, ಬಾವಿ ಮುಂತಾದವುಗಳ ನಿರ್ಮಾಣಗಳನ್ನೂ, "ಆತ್ಮನಃ" ತನಗೆ "ಪ್ರಿಯಂ" ಪ್ರಿಯವಾದ ವಸ್ತುಗಳನ್ನೂ, "ಪ್ರಿಯಾನ್" ತನಗೆ ಪ್ರಿಯರಾಗಿರುವ, "ದಾರಾನ್"ಪತ್ನಿಯರನ್ನೂ, "ಸುತಾನ್" ಮಕ್ಕಳನ್ನೂ, "ಪ್ರಾಣಾನ್" ಪ್ರಾಣಗಳನ್ನೂ, "ಪರಸ್ಮೈ" ಸರ್ವೋತ್ತಮನಾದ ಶ್ರೀಹರಿಗಾಗಿ "ಸನ್ನಿವೇದಯತ್" ಸಮರ್ಪಿಸಬೇಕು. "ಭಗವತಃ" ಶ್ರೀಹರಿಗೆ "ಭುಕ್ತಶೇಷಂ" ಸಮರ್ಪಿಸಿದ ಮೇಲೆ ಉಳಿದಿರುವ ಆಹಾರವನ್ನು "ಭೃತ್ಯಾತಿಥಿಪುರಃಸರಃ" ಸೇವಕರನ್ನೂ ಅತಿಥಿಗಳನ್ನೂ ಮುಂದೆ ಮಾಡಿಕೊಂಡು "ತದ್ಗತಮಾನಸಃ" ಶ್ರೀಹರಿಯಲ್ಲಿಯೇ ಮನಸ್ಸನ್ನು ನಿಲ್ಲಿಸಿದವನಾಗಿ "ವಿಷ್ಣುಃ ಸ್ಮರನ್" ವಿಷ್ಣುವನ್ನು ಸ್ಮರಿಸುತ್ತಾ "ಭುಂಜೀತ" ಭೋಜನವನ್ನು ಮಾಡಬೇಕು.

**ತಾತ್ಪರ್ಯ** - ತಾನು ಮಾಡಿರುವ ಸಕಲ ಪುಣ್ಯಕಾರ್ಯಗಳನ್ನೂ, ತನಗೆ ಪ್ರಿಯರಾಗಿರುವ ಪತ್ನೀ ಮುಂತಾದವರನ್ನೂ, ಶ್ರೀಹರಿಗೆ ಸಮರ್ಪಿಸಬೇಕು. ತನ್ನ ಮನೆಯಲ್ಲಿರುವ ಸೇವಕರೇ ಮೊದಲಾದವರಲ್ಲಿಯೂ, ಅತಿಥಿಗಳಲ್ಲಿಯೂ, ಶ್ರೀಹರಿಯು ಸನ್ನಿಹಿತನಾಗಿರುವನೆಂದು ಭಾವಿಸಿ ಅವರೆಲ್ಲರೂ, ಭೋಜನವನ್ನು ಮಾಡಿ ಮುಗಿಸಿದ ಮೇಲೆ ಶ್ರೀಹರಿಯನ್ನು ಸ್ಮರಿಸುತ್ತಾ ತಾನು ಭೋಜನವನ್ನು ಮಾಡಬೇಕು. ಅನಂತರ ಆಚಮನ ಮಾಡಿ "ಓಂ ನಮೋ ನಾರಾಯಣಾಯ" ಎಂಬ ಮೂಲಮಂತ್ರದಿಂದ ತನ್ನ ಹೊಕ್ಕಳಿನ ಭಾಗವನ್ನು ಅಭಿಮಂತ್ರಿಸಬೇಕು.

ಸ್ವೋಚಿತೇನ ತು ಮಾರ್ಗೇಣ ವಿಷ್ಣುಪೂಜಾಮೃತೇ ಕ್ವಚಿತ್ |
ನ ಪ್ರವೃತ್ತಿಃ ಪ್ರವೃತ್ತಿರ್ವಾ ಯತ್ತದ್ಧರ್ಮಃ ಸ ವೈಷ್ಣವಃ ||
ತತ್ಪ್ರೀತ್ಯರ್ಥಂ ವಿನಾನ್ಯಸ್ಮೈ ನೋದಬಿಂದುಂ ನ ತಂಡುಲಮ್ |
ದದ್ಯಾನ್ನಿರಾಶೀಶ್ಚ ಭವೇತ್ಸದಾ ಭಕ್ತಶ್ಚ ಕೇಶವೇ ||

ತನಗೆ ಯೋಗ್ಯವಾದ ಮಾರ್ಗದಿಂದ ವಿಷ್ಣುಪೂಜಾರೂಪಗಳಾದ ಕಾರ್ಯಗಳನ್ನೇ ಮಾಡಬೇಕು. ಬೇರೆ ಕಾರ್ಯಗಳಲ್ಲಿ ಪ್ರವೃತ್ತಿಯನ್ನು ಮಾಡಕೂಡದು. ವಿಷ್ಣುಪ್ರೀತ್ಯರ್ಥವಾಗಿಯೇ ಸರ್ವಕಾರ್ಯಗಳನ್ನೂ ಮಾಡಬೇಕು. ವಿಷ್ಣು ಪ್ರೀತಿಯನ್ನು ಉದ್ದೇಶಿಸದೆ ಒಂದು ಜಲಬಿಂದುವನ್ನಾಗಲೀ ಒಂದು ಅಕ್ಕಿಕಾಳನ್ನಾಗಲೀ ಕೊಡಕೂಡದು. ಎಲ್ಲಾ ಆಸನಗಳನ್ನೂ ತೊಳೆದವನಾಗಿ ಯಾವಾಗಲೂ ವಿಷ್ಣುವಿನಲ್ಲಿ ಭಕ್ತಿಯನ್ನು ಮಾಡಬೇಕು.

ಕುರ್ಯಾತ್ಪಂಚಮಹಾಯಜ್ಞಾನಪಿ ಗೃಹ್ಯೋಕ್ತವರ್ತ್ಮನಾ |
ಅತಿಥೀನಪಿ ತತ್ಕಾಲೇ ಯಥಾಶಕ್ತಿ ಸಮರ್ಚಯೇತ್ || (ಪಾದ್ಮಸಂಹಿತಾ ವಚನ)

ತನ್ನ ಗೃಹ್ಯಸೂಕ್ತದಲ್ಲಿ ಹೇಳಿದ ರೀತಿಯಿಂದ ಪಂಚಮಹಾಯಜ್ಞಗಳನ್ನು ಮಾಡಬೇಕು. ಆ ಕಾಲದಲ್ಲಿ ಬಂದಿರುವ ಅತಿಥಿಗಳನ್ನೂ ಯಥಾಶಕ್ತಿ ಪೂಜಿಸಬೇಕು.

ತತ್ರಾಗತೇಭ್ಯೋ ವಿಪ್ರೇಭ್ಯೋ ದದ್ಯಾಚ್ಛಕ್ತ್ಯನುಸಾರತಃ |
ಚೋರೋ ವಾ ಯದಿ ಚಾಂಡಾಲೋ ವಿಪ್ರಘ್ನಃ ಪಿತೃಘಾತಕಃ ||
ವೈಶ್ವದೇವೇ ತು ಸಂಪ್ರಾಪ್ತಃ ಸೋಽತಿಥಿಃ ಸ್ವರ್ಗಸಂಗ್ರಹಃ | (ವಾಸಿಷ್ಠ ವಚನ)

"ವೈಶ್ವದೇವ ಕಾಲದಲ್ಲಿ ಬಂದಿರುವ ಬ್ರಾಹ್ಮಣರಿಗೆ ಶಕ್ತ್ಯನುಸಾರವಾಗಿ ಅನ್ನದಾನವನ್ನು ಮಾಡಬೇಕು. ವೈಶ್ವದೇವ

ಕಾಲದಲ್ಲಿ ಬಂದಿರುವವನು ಕಳ್ಳನಾಗಿದ್ದರೂ, ಹೊಲೆಯನಾಗಿದ್ದರೂ, ಪಿತೃಹತ್ಯೆಯನ್ನು ಮಾಡಿದ್ದರೂ, ಪಿತೃಘಾತಕನಾಗಿದ್ದರೂ ಸ್ವರ್ಗವನ್ನು ಕೊಡುವನು."

### ಸಾಮಾನ್ಯವಾಗಿ ಅತಿಥಿಸತ್ಕಾರ

ದೂರಾಧ್ವೋಪಗತಃ ಶ್ರಾಂತೋ ವೈಶ್ವದೇವೇ ಸಮಾಗತಃ |
ಅತಿಥಿಂ ತಂ ವಿಜಾನೀಯಾನ್ನಾತಿಥಿಃ ಪೂರ್ವಮಾಗತಃ ||
ಅತಿಥಿರ್ಯಸ್ಯ ಭಗ್ನಾಶೋ ಗೃಹಾಪ್ರತಿನಿವರ್ತತೇ |
ಸ ತಸ್ಮೈ ದುಷ್ಕೃತಂ ದತ್ವಾ ಪುಣ್ಯಮಾದಾಯ ಗಚ್ಛತಿ ||
ತಸ್ಮಾತ್ತತ್ರಾಗತಾನ್ ವಿಪ್ರಾನ್ ಪೂಜಯೇದವಿಚಾರತಃ |
ನ ಪೃಚ್ಛೇದ್ಗೋತ್ರಚರಣೇ ನ ಸ್ವಾಧ್ಯಾಯಂ ಶ್ರುತಂ ತಥಾ ||
ತತ್ರ ಸಂಸ್ಥಂ ಹರಿಂ ಜ್ಞಾತ್ವಾ ಪೂಜಯೇದವಿಚಾರತಃ | (ಪರಾಶರ ವಚನ)

"ಮೊದಲು ಬಂದಿರುವವರೇ ಅತಿಥಿ ಎಂದು ತಿಳಿಯಬಾರದು. (1) ದೂರದಿಂದ ಬಂದಿರುವವರು (2) ತುಂಬಾ ಆಯಾಸದಿಂದ ಯುಕ್ತರಾದವರು (3) ವೈಶ್ವದೇವಕಾಲದಲ್ಲಿ ಬಂದಿರುವವರು. ಇವರನ್ನು ಅತಿಥಿಯೆಂದು ತಿಳಿಯಬೇಕು. ಅತಿಥಿಯು ನಮ್ಮ ಮನೆಗೆ ಬಂದು ಅವರ ಆಸೆಯು ಭಗ್ನವಾಗಿ ಹಿಂದಿರುಗಿದರೆ ತಾವು ಮಾಡಿರುವ ಪಾಪವನ್ನು ನಮಗೆ ಕೊಟ್ಟು ನಾವು ಮಾಡಿರುವ ಪುಣ್ಯವನ್ನು ತೆಗೆದುಕೊಂಡು ಹೋಗುವರು. ಆದ್ದರಿಂದ ವೈಶ್ವದೇವ ಕಾಲದಲ್ಲಿ ಬಂದಿರುವ ಅತಿಥಿಗಳನ್ನು ವಿಚಾರ ಮಾಡದಂತೆ ಪೂಜಿಸಬೇಕು. ಅವರ ಗೋತ್ರ, ಆಚಾರ, ವ್ಯಾಕರಣ ಮುಂತಾದ ಶಾಸ್ತ್ರಗಳ ಜ್ಞಾನವನ್ನು ಕೇಳಕೂಡದು. ಅವರಲ್ಲಿ ಶ್ರೀಹರಿಯ ವಿಶೇಷ ಸನ್ನಿಧಾನವನ್ನು ತಿಳಿದು ವಿಚಾರ ಮಾಡದಂತೆ ಅವರನ್ನು ಪೂಜಿಸಬೇಕು. ಇದೆಲ್ಲವೂ ಸಾಮಾನ್ಯಾತಿಥಿಗಳ ವಿಷಯವಾಗಿ ಹೇಳಿದ್ದು, ವಿಶಿಷ್ಟ ವೈಷ್ಣವರ ವಿಷಯದಲ್ಲಿ ಮುಂದೆ ಹೇಳುವೆವು."

ವಿಶಿಷ್ಟಾ ವೈಷ್ಣವಾ ವಿಪ್ರಾ ಗೃಹಂ ಪ್ರತ್ಯಾಗತಾ ಯದಿ |
ಪ್ರತ್ಯುದ್ಗಮ್ಯ ಪ್ರಣಮ್ಯಾಶು ಪೂಜಯೇತ್ತಾನ್ ವಿಧಾನತಃ ||
ಪಾದಪ್ರಕ್ಷಾಳನಂ ಕುರ್ಯಾಚ್ಛುಭೇ ಪಾತ್ರಾಂತರೇ ದ್ವಿಜಃ |
ಉಪವೇಶ್ಯಾಸನೇ ರಮ್ಯೇ ಮಧುಪರ್ಕೇಣ ಪೂಜಯೇತ್ ||
ಭೋಜಯೇದನ್ನಪಾನಾದ್ಯೈರತಿಥೀನ್ ಶ್ರೋತ್ರಿಯಾನ್ ದ್ವಿಜಾನ್ |
ಆಸೀನಾನ್ ಸಮನುವ್ರಜ್ಯ ನಮಸ್ಕೃತ್ಯ ವಿಸರ್ಜಯೇತ್ || (ಪರಾಶರ ವಚನ)

"ಉತ್ತಮರಾದ ವೈಷ್ಣವರು ಮನೆಗೆ ಬಂದರೆ ದೂರದಲ್ಲಿ ಬರುತ್ತಿರುವಾಗಲೇ ಎದ್ದು ನಿಲ್ಲಬೇಕು. ಓಡುತ್ತಾ ಅವರ ಸಮೀಪಕ್ಕೆ ಬರಬೇಕು. ನಮಸ್ಕರಿಸಬೇಕು. ವಿಧಿಪ್ರಕಾರವಾಗಿ ಬೇಗನೆ ಪೂಜಿಸಬೇಕು. ಉತ್ತಮವಾದ ಹರಿವಾಣದ ಮೇಲೆ ಅವರ ಕಾಲುಗಳನ್ನಿಟ್ಟು ತೊಳೆಯಬೇಕು. ರಮ್ಯವಾದ ಆಸನದಲ್ಲಿಕುಳ್ಳಿರಿಸಬೇಕು. ಮಧುಪರ್ಕದಿಂದ ಪೂಜಿಸಬೇಕು. ಶ್ರೋತ್ರಿಯರಾದ ಆ ಬ್ರಾಹ್ಮಣರಿಗೆ ಬೇಕಾದ ಅನ್ನಗಳನ್ನೂ, ಪಾನೀಯ ವಸ್ತುಗಳನ್ನೂ, ಬಡಿಸಿ ಭೋಜನವನ್ನು ಮಾಡಿಸಬೇಕು. ವಿಶ್ರಾಂತಿಯನ್ನು ತೆಗೆದುಕೊಂಡ ಮೇಲೆ ಅವರ ಹಿಂದೆಯೇ ಸ್ವಲ್ಪ ದೂರದವರೆಗೆ ಹೋಗಿ ಅವರನ್ನು ಕಳುಹಿಸಿಕೊಡಬೇಕು."

ಅಧ್ವಶ್ರಾಂತಮವಿಜ್ಞಾತಮತಿಥಿಂ ಕ್ಷುತ್ಪಿಪಾಸಿತಮ್ |
ಯೋ ನ ಪೂಜಯತೇ ಶಕ್ತ್ಯಾ ತಮಾಹುರ್ಬ್ರಹ್ಮಘಾತಕಮ್ ||

"ಹಾದಿ ನಡೆದು ಶ್ರಾಂತರಾಗಿರುವವರೂ, ಹಿಂದೆ ನೋಡಲ್ಪಡದವರೂ ಹಸಿವು ನೀರಡಿಕೆಗಳಿಂದ ಯುಕ್ತರೂ ಆಗಿರುವವರನ್ನು ಅತಿಥಿಗಳೆಂದು ಕರೆಯಬೇಕು. ಶಕ್ತ್ಯನುಸಾರವಾಗಿ ಅವರನ್ನು ಪೂಜಿಸದವನು ಬ್ರಹ್ಮಘಾತಕನೆನಿಸುವನು."

ದೈವಂ ಭೂತಂ ಪೈತೃಕಂ ಚ ಮಾನುಷಾಣಾಂ ಚ ವಿಧಾನತಃ |
ಪ್ರೀತಯೇ ಸರ್ವಯಜ್ಞಸ್ಯ ಭೋಕ್ತುರ್ವಿಷ್ಣೋರ್ಯಜೇತ್ತತಃ ||
ಚತುರ್ವಿಧೇಭ್ಯೋ ಭೂತೇಭ್ಯೋ ಬಲಿಂ ಪಶ್ಚಾದ್ವಿನಿಕ್ಷಿಪೇತ್ |
ದ್ವಾರಿ ಗೋದೋಹನಂ ಮಾತ್ರಂ ತಿಷ್ಠೇದತಿಥಿವಾಂಛಯಾ ||
ಭೋಜಯೇಚ್ಛಾಗತಾನ್ ವಿಪ್ರಾನ್ ಫಲಮೂಲಾಶನಾದಿಭಿಃ |
ಮಹಾಭಾಗವತಾನ್ ವಿಪ್ರಾನ್ವಿಶೇಷೇಣೈವ ಪೂಜಯೇತ್ ||

"ಸರ್ವಯಜ್ಞಗಳಿಗೂ ಪ್ರಭುವಾಗಿರುವ ಶ್ರೀಹರಿಯ ಪ್ರೀತ್ಯರ್ಥವಾಗಿ ದೇವಾದಿಗಳನ್ನು ವೈಶ್ವದೇವದಿಂದಲೂ, ಪಿತೃಗಳನ್ನು ತರ್ಪಣಾದಿಗಳಿಂದಲೂ, ಭೂತಗಳನ್ನು ಭೂತಬಲಿ ಮುಂತಾದವುಗಳಿಂದಲೂ, ಮನುಷ್ಯರನ್ನು ಅತಿಥಿ ಸತ್ಕಾರಾದಿಗಳಿಂದಲೂ, ತೃಪ್ತಿಪಡಿಸಬೇಕು. ಆ ಕಾಲದಲ್ಲಿ ಬಂದವರನ್ನು ಹಣ್ಣುಗಳಿಂದಾಗಲೀ ಗೆಡ್ಡೆಗಳಿಂದಲಾಗಲೀ ಭಕ್ಷ್ಯಭೋಜ್ಯಾದಿಗಳಿಂದಲಾಗಲೀ ತೃಪ್ತಿಪಡಿಸಬೇಕು. ಮಹಾಭಾಗವತರನ್ನು ವಿಶೇಷವಾಗಿ ಪೂಜಿಸಬೇಕು.

ಮಧುಪರ್ಕಪ್ರದಾನೇನ ಪಾದ್ಯಾರ್ಘ್ಯಾಚಮನಾದಿಭಿಃ |
ಗಂಧೈಃ ಪುಷ್ಪೈಶ್ಚ ತಾಂಬೂಲೈರ್ಧೂಪೈರ್ದೀಪೈರ್ನಿವೇದನ್ಯೆಃ ||
ಬ್ರಹ್ಮಾಸನೇ ನಿವೇಶ್ಯಾಥ ಪೂಜಯೇಚ್ಛ್ರದ್ಧಯಾನ್ವಿತಃ |
ಸಕೃತ್ಸಂಪೂಜಿತೈರ್ವಿಪ್ರೈರ್ಮಹಾಭಾಗವತೋತ್ತಮೈಃ ||
ಷಷ್ಟಿರ್ವರ್ಷಸಹಸ್ರಾಣಿ ಹರಿಃ ಸಂಪೂಜಿತೋ ಭವೇತ್ |
ಮೋಹಾದನರ್ಚಯನ್ಯಸ್ತು ಮಹಾಭಾಗವತೋತ್ತಮಮ್ ||
ಕೋಟಿಜನ್ಮಜಿತಾತ್ಪುಣ್ಯಾದ್ಭ್ರಶ್ಯತೇ ನಾತ್ರ ಸಂಶಯಃ |

"ಮಹಾಭಾಗವತರು ಬಂದಿರುವಾಗ ಮಧುಪರ್ಕವನ್ನು ಕೊಡಬೇಕು. ಪಾದ್ಯ, ಅರ್ಘ್ಯ, ಆಚಮನೀಯವನ್ನು ಸಮರ್ಪಿಸಬೇಕು. ಗಂಧ, ಪುಷ್ಪ, ತಾಂಬೂಲ, ಧೂಪ, ದೀಪ, ನೈವೇದ್ಯ ಮುಂತಾದವುಗಳನ್ನು ಶ್ರೇಷ್ಠವಾದ ಬ್ರಹ್ಮಾಸನದಲ್ಲಿ ಕುಳ್ಳಿರಿಸಿ ಕೊಡಬೇಕು. ಶ್ರದ್ಧೆಯಿಂದ ಪೂಜಿಸಬೇಕು.

ಮಹಾಭಾಗವತರನ್ನು ಒಂದು ದಿನದಲ್ಲಿ ಮೇಲ್ಕಂಡ ರೀತಿಯಿಂದ ಪೂಜಿಸಿದರೂ ಶ್ರೀಹರಿಯನ್ನು ಅರವತ್ತು ಸಾವಿರ ವರ್ಷಗಳವರೆಗೆ ಪೂಜಿಸಿದ್ದಕ್ಕೆ ಸಮಾನವಾಗುತ್ತದೆ. ಮೋಹದಿಂದ ಯಾವನು ಮಹಾಭಾಗವತರನ್ನು ಪೂಜಿಸುವುದಿಲ್ಲವೋ ಅವನು ಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯದಿಂದ ಭ್ರಷ್ಟನಾಗುವನು."

ಗೃಹೇ ತಸ್ಯ ನ ಚಾಶ್ನಾತಿ ಶತವರ್ಷಾಣಿ ಕೇಶವಃ |
ಮುಖಂ ಹಿ ಸರ್ವದೇವಾನಾಂ ಮಹಾಭಾಗವತೋತ್ತಮಃ ||
ತಸ್ಮಿನ್ ಸಂಪೂಜಿತೇ ವಿಪ್ರೇ ಪೂಜಿತಂ ಸ್ಯಾಜ್ಜಗತ್ತ್ರಯಮ್ |
ಅರ್ಥಪಂಚಕತತ್ತ್ವಜ್ಞಃ ಪಂಚಸಂಸ್ಕಾರಸಂಸ್ಕೃತಃ ||
ನವಭಕ್ತಿಸಮಾಯುಕ್ತೋ ಮಹಾಭಾಗವತಃ ಸ್ಮೃತಃ |
ಕಾಲೇ ಸಮಾಗತೇ ತಸ್ಮಿನ್ ಪೂಜಿತೇ ಮಧುಸೂದನಃ ||

ಕ್ಷಣಾದೇವ ಪ್ರಸನ್ನಃ ಸ್ಯಾದೀಪ್ಸಿತಾನಿ ಪ್ರಯಚ್ಛತಿ |
ಮಹಾಭಾಗವತಾನಾಂ ಚ ಪಿಬೇತ್ಪಾದೋದಕಂ ತು ಯಃ ||
ಶಿರಸಾ ಧಾರಯೇದ್ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ |
ಯಸ್ಮಿನ್ ಕಸ್ಮಿಂಶ್ಚ ವಸತಿ ಮಹಾಭಾಗವತೋತ್ತಮೇ ||
ಅಪ್ಯೇಕರಾತ್ರಮಥ ವಾ ತದ್ದೇಶಸ್ತೀರ್ಥಸಮ್ಮಿತಃ |
ಭೋಜಯಿತ್ವಾ ಮಹಾಭಾಗಾನ್ವೈಷ್ಣವಾನತಿಥೀನಪಿ ||
ತತೋ ಬಾಲಸುಹೃದ್ವೃದ್ಧಾನ್ ಬಾಂಧವಾಂಶ್ಚ ಸಮಾಗತಾನ್ |
ಭೋಜಯಿತ್ವಾ ಯಥಾಶಕ್ತ್ಯಾ ಯಥಾಕಾಲಂ ಜಿತಕ್ಷುಧಃ ||
ಭಿಕ್ಷಾಂ ದದ್ಯಾತ್ಪ್ರಯತ್ನೇನ ಯತೀನಾಂ ಬ್ರಹ್ಮಚಾರಿಣಾಮ್ |
ಶೂದ್ರೋ ವಾ ಪ್ರತಿಲೋಮೋ ವಾ ಪಥಿ ಶ್ರಾಂತಃ ಕ್ಷುಧಾತುರಃ ||
ಭೋಜಯೇತ್ತಂ ಪ್ರಯತ್ನೇನ ಗೃಹಮಭ್ಯಾಗತೋ ಯದಿ |
ಪಾಷಂಡಾಃ ಪತಿತಾ ವಾಪಿ ಕ್ಷುಧಾರ್ತಾ ಗೃಹಮಾಗತಾಃ ||
ನೈವ ದದ್ಯಾತ್ಸುಪಕ್ವಾನ್ನಮಾಮಂ ವಾಪಿ ಪ್ರದಾಪಯೇತ್ |
ಸ್ವಶಕ್ತ್ಯಾ ತರ್ಪಯಿತ್ವೈವ ಅತಿಥೀನಾಗತಾನ್ ಗೃಹೇ ||

ಮಹಾಭಾಗವತರಲ್ಲಿ ಉತ್ತಮನು ಸಕಲ ದೇವತೆಗಳಿಗೂ ಮುಖದಂತಿರುವನು. ಯಾವನ ಮನೆಯಲ್ಲಿ ಮಹಾಭಾಗವತನು ಭೋಜನ ಮಾಡುವುದಿಲ್ಲವೋ ಅವನ ಮನೆಯಲ್ಲಿ ಶ್ರೀಹರಿಯು ನೂರು ವರ್ಷಗಳವರೆಗೆ ಭೋಜನವನ್ನು ಮಾಡುವುದಿಲ್ಲ. ಮಹಾಭಾಗವತನು ಪೂಜಿಸಲ್ಪಟ್ಟರೆ ಮೂರು ಲೋಕಗಳಲ್ಲಿರುವ ಸರ್ವರೂ ಪೂಜಿಸಲ್ಪಡುವರು. ಮಹಾಭಾಗವತನು ಮನೆಗೆ ಬರಬೇಕು. ಅವನು ಭಕ್ತಿಯಿಂದ ಪೂಜಿಸಲ್ಪಡಬೇಕು. ಶ್ರೀಹರಿಯು ಅದೇ ಕ್ಷಣದಲ್ಲಿಯೇ ಪ್ರಸನ್ನನಾಗಿ ಅಭೀಷ್ಟಗಳನ್ನು ಕೊಡುವನು. ಮಹಾಭಾಗವತರ ಪಾದೋದಕವನ್ನು ಕುಡಿಯಬೇಕು. ತಲೆಯಲ್ಲಿ ಧರಿಸಬೇಕು. ಹೀಗೆ ಮಾಡುವವನ ಎಲ್ಲಾ ಪಾಪಗಳೂ ದೂರವಾಗುವವು. ಯಾವ ದೇಶದಲ್ಲಿ ಒಂದು ದಿನವಾದರೂ ಮಹಾಭಾಗವತನು ವಾಸಿಸುತ್ತಾನೆಯೋ ಆ ದೇಶವು ತೀರ್ಥಕ್ಷೇತ್ರಕ್ಕೆ ಸಮವಾಗುವುದು.

ಮಹಾಭಾಗವತರಾದ ಅತಿಥಿಗಳಿಗೆ, ಶಕ್ತಿಯನ್ನು ಅನುಸರಿಸಿ ಭೋಜನವನ್ನು ಮಾಡಿಸಬೇಕು. ಅವರ ಹಸಿವು ಅಡಗುವಂತೆ ಮಾಡಬೇಕು. ಯತಿಗಳಿಗೂ, ಬ್ರಹ್ಮಚಾರಿಗಳಿಗೂ, ಭಿಕ್ಷೆಯನ್ನು ಪ್ರಯತ್ನದಿಂದ ಹಾಕಬೇಕು. ಹಾಗೆಯೇ ಶೂದ್ರನಾಗಲೀ, ಉತ್ತಮಸ್ತ್ರೀಯರಲ್ಲಿ ನೀಚಜಾತಿಯವನಿಂದ ಹುಟ್ಟಿದವನಾಗಲೀ, ಬಹುದೂರದಿಂದ ಬಂದಿರುವುದರಿಂದ ಆಯಾಸದಿಂದಲೂ, ಹಸಿವಿನಿಂದಲೂ, ಪೀಡಿತನಾದರೆ ಅವನು ಮನೆಗೆ ಬಂದರೆ ಅವನಿಗೆ ಹಸಿವು ಅಡಗುವಂತೆ ಭೋಜನವನ್ನು ಮಾಡಿಸಬೇಕು.

ವೇದನಿಂದಕರು ಪತಿತರು ಹಸಿವಿನಿಂದ ಪೀಡಿತರಾಗಿ ಮನೆಗೆ ಬಂದಿರುವಾಗ ಅವರಿಗೆ ಪಕ್ವವಾದ ಅನ್ನವನ್ನು ಹಾಕದಿದ್ದರೆ ಹಸಿ ಆಹಾರಗಳನ್ನಾದರೂ ಕೊಡಬೇಕು. ಹೀಗೆ ಮನೆಗೆ ಬಂದಿರುವ ಅತಿಥಿಗಳನ್ನು ಶಕ್ತ್ಯನುಸಾರವಾಗಿ ತೃಪ್ತಿಪಡಿಸಬೇಕು.

### ಯತಿಭಿಕ್ಷೆ

ಯತಿಶ್ಚ ಬ್ರಹ್ಮಚಾರೀ ಚ ವಿದ್ಯಾರ್ಥೀ ಗುರುಪೋಷಕಃ |
ಅಧ್ವಗಃ ಕ್ಷೀಣವೃತ್ತಿಶ್ಚ ಷಡೇತೇ ಭಿಕ್ಷುಕಾಃ ಸ್ಮೃತಾಃ ||

"ಯತಿ, ಬ್ರಹ್ಮಚಾರಿ, ವಿದ್ಯಾರ್ಥಿ, ಗುರುಗಳನ್ನು ಪೋಷಿಸುವವನು, ಹಾದಿ ನಡೆಯುವವನು, ತನ್ನ ಜೀವನೋಪಾಯವನ್ನು ಕಳೆದುಕೊಂಡವನು. ಈ ಆರು ಜನರು ಭಿಕ್ಷುಕರು ಎಂದೆನಿಸುವರು.

ವ್ಯಾಧಿತಸ್ಯಾರ್ಥಹೀನಸ್ಯ ಕುಟುಂಬಾತ್ಪ್ರಚ್ಯುತಸ್ಯ ಚ |
ಅಧ್ವಾನಂ ಪ್ರತಿಪನ್ನಸ್ಯ ಭಿಕ್ಷಾಚರ್ಯಾ ವಿಧೀಯತೇ ||
ಯತಯೇ ಕಾಂಚನಂ ದದ್ಯಾತ್ತಂಡುಲಂ ಬ್ರಹ್ಮಚಾರಿಣೇ |
ಪಕ್ವಾನ್ನಂ ತು ಗೃಹಸ್ಥಸ್ಯ ದಾತಾ ದುರ್ಗಾಣಿ ಗಚ್ಛತಿ ||

"ವ್ಯಾಧಿಯಿಂದ ಪೀಡಿತನಾದವನಿಗೂ, ಹಣವಿಲ್ಲದವನಿಗೂ, ಕುಟುಂಬದಿಂದ ಬಿಡುಗಡೆಯನ್ನು ಹೊಂದಿದವನಿಗೂ, ಹಾದಿ ನಡೆಯುವವನಿಗೂ, ಭಿಕ್ಷಾಚರಣವು ವಿಹಿತವಾಗಿದೆ."

"ವೈಶ್ವದೇವವನ್ನು ಮಾಡುವುದಕ್ಕಿಂತ ಮುಂಚಿತವಾಗಿ ಅಥವಾ ಭೋಜನಕಾಲದಲ್ಲಿ ಮೇಲೆ ಹೇಳಿದ ಆರು ವಿಧವಾದ ಭಿಕ್ಷುಕರಲ್ಲಿ ಯಾರಾದರೂ ಬಂದರೆ ಅವರಿಗೆ ಭಿಕ್ಷೆಯನ್ನು ನೀಡಬೇಕು."

ಕಾಲೇ ವಾ ಯದ್ಯಕಾಲೇ ವಾ ಭಿಕ್ಷುಕೇ ಗೃಹಮಾಗತೇ |
ಭಿಕ್ಷಾಂ ದದ್ಯಾತ್ಪ್ರಯತ್ನೇನ ಯತಯೇ ಬ್ರಹ್ಮಚಾರಿಣೇ || (ಶಾತಾತಪರ ವಚನ)

"ವೈಶ್ವದೇವಕಾಲದಲ್ಲಾಗಲೀ, ಅಕಾಲದಲ್ಲಾಗಲೀ ಭಿಕ್ಷುಕರು ಮನೆಗೆ ಬಂದರೆ ಯತಿಗಳಿಗೂ, ಬ್ರಹ್ಮಚಾರಿಗಳಿಗೂ, ಪ್ರಯತ್ನದಿಂದ ಭಿಕ್ಷೆಯನ್ನು ಕೊಡಬೇಕು."

ಭಿಕ್ಷುಕರಿಗೆ ವೈಶ್ವದೇವಕ್ಕಿಂತ ಪೂರ್ವದಲ್ಲಿಯೇ ಭಿಕ್ಷೆಯನ್ನು ನೀಡಬೇಕು

ವೈಶ್ವದೇವೇ ತು ಸಂಪ್ರಾಪ್ತೇ ಭಿಕ್ಷುಕೇ ಗೃಹಮಾಗತೇ |
ಉದ್ಧೃತ್ಯ ವೈಶ್ವದೇವಾರ್ಥಂ ಭಿಕ್ಷುಕಂ ತು ವಿಸರ್ಜಯೇತ್ ||

"ವೈಶ್ವದೇವವನ್ನು ಮಾಡಬೇಕು. ಆಗ ಭಿಕ್ಷುಕರು ಬಂದು ಬಿಟ್ಟರೆ ವೈಶ್ವದೇವಕ್ಕೆ ಬೇಕಾಗಿರುವ ಅನ್ನವನ್ನು ಪ್ರತ್ಯೇಕವಾಗಿ ತೆಗೆದಿಟ್ಟು ಭಿಕ್ಷುಕರನ್ನು ಕಳುಹಿಸಿಕೊಡಬೇಕು."

ವೈಶ್ವದೇವಕೃತಂ ದೋಷಂ ಶಕ್ತೋ ಭಿಕ್ಷುರ್ವ್ಯಪೋಹಿತುಮ್ |
ನ ತು ಭಿಕ್ಷುಕೃತಂ ದೋಷಂ ವೈಶ್ವದೇವಂ ವ್ಯಪೋಹಯೇತ್ || (ಶಾತಾತಪರ ವಚನ)

"ಸಕಾಲದಲ್ಲಿ ವೈಶ್ವದೇವವನ್ನು ಮಾಡದಿರುವುದರಿಂದ ಬರುವ ದೋಷವನ್ನು, ಭಿಕ್ಷುಕರು ಪರಿಹರಿಸಲು ಶಕ್ತರಾಗಿರುವರು. ಭಿಕ್ಷುಕರಿಗೆ ಸಕಾಲದಲ್ಲಿ ಆತಿಥ್ಯವನ್ನು ಮಾಡದಿರುವುದರಿಂದ ಬರುವ ದೋಷವನ್ನು ವೈಶ್ವದೇವವು ಪರಿಹರಿಸಲಾರದು."

ಅಕೃತೇ ವೈಶ್ವದೇವೇ ತು ಭಿಕ್ಷುಕೇ ಗೃಹಮಾಗತೇ |
ಉದ್ಧೃತ್ಯ ವೈಶ್ವದೇವಾರ್ಥಂ ಭಿಕ್ಷಾಂ ದತ್ವಾ ವಿಸರ್ಜಯೇತ್ ||

"ವೈಶ್ವದೇವವನ್ನು ಮಾಡುವುದಕ್ಕಿಂತ ಮುಂಚಿತವಾಗಿ ಭಿಕ್ಷುಕರು ಬಂದರೆ ವೈಶ್ವದೇವಕ್ಕೆ ಬೇಕಾಗಿರುವ ಅನ್ನವನ್ನು ಪ್ರತ್ಯೇಕವಾಗಿ ತೆಗೆದಿಟ್ಟು ಭಿಕ್ಷುಕರಿಗೆ ಭಿಕ್ಷೆಯನ್ನು ಕೊಟ್ಟು ಕಳುಹಿಸಬೇಕು."

ಶ್ರಾದ್ಧವಿಷಯದಲ್ಲಿ ವಿಶೇಷನಿಯಮ

ಗೃಹ್ಯಾಗ್ನಿಶಿಶುದೇವಾನಾಂ ಯತೀನಾಂ ಬ್ರಹ್ಮಚಾರಿಣಾಮ್ |
ಶ್ರಾದ್ಧಪಾಕೋ ನ ದಾತವ್ಯೋ ಯಾವತ್ಪಿಂಡಾನ್ನ ನಿರ್ವಪೇತ್ ||

"ಗೃಹ್ಯಾಗ್ನಿ, ಶಿಶುಗಳು, ದೇವತೆಗಳು, ಯತಿಗಳು, ಬ್ರಹ್ಮಚಾರಿಗಳು, ಇಷ್ಟು ಜನರಿಗೆ ಶ್ರಾದ್ಧಕ್ಕಾಗಿ ಮಾಡಿರುವ ಪಾಕವನ್ನು ಪಿಂಡದಾನಕ್ಕಿಂತ ಪೂರ್ವದಲ್ಲಿ ಬಡಿಸಬಾರದು."

ಇದರಲ್ಲಿ ಅಪವಾದ

ಅದತ್ವಾ ಭಿಕ್ಷವೇ ಭಿಕ್ಷಾಂ ಯಃ ಶ್ರಾದ್ಧಂ ಕುರುತೇ ದ್ವಿಜಃ |
ತ್ರಯಸ್ತೇ ನರಕಂ ಯಾಂತಿ ದಾತಾ ಭೋಕ್ತಾ ತಥಾ ಪಿತಾ || (ಸಂಗ್ರಹವಚನ)

"ಭಿಕ್ಷುಕರು ಶ್ರಾದ್ಧಕಾಲದಲ್ಲಿ ಬಂದರೆ ಅವರಿಗೆ ಭಿಕ್ಷೆಯನ್ನು ನೀಡದೆ ಶ್ರಾದ್ಧವನ್ನು ಮಾಡಿದರೆ ಶ್ರಾದ್ಧವನ್ನು ಮಾಡುವ ಮಗನೂ, ಭೋಜನವನ್ನು ಮಾಡುವವನೂ, ತಂದೆಯೂ ಈ ಮೂವರೂ ನರಕವನ್ನು ಹೊಂದುವರು."

ಭಿಕ್ಷಾಂ ಪುರಸ್ತಾದಪ್ರಯೋಜಿತಾಂ ಭೋಜ್ಯಮತೀವ ದುಷ್ಕೃತಕರ್ಮಣಃ | (ಆಪಸ್ತಂಬರ ವಚನ)

"ಭಿಕ್ಷೆಯನ್ನು ಪೂರ್ವದಲ್ಲಿ ಕೊಡದೆ ಶ್ರಾದ್ಧದಲ್ಲಿ ಭೋಜನವನ್ನು ಮಾಡಕೂಡದು."

ನ ತಸ್ಯ ಪಿತರೋಽಶ್ನಂತಿ ದಶವರ್ಷಾಣಿ ಪಂಚ ಚ |
ನ ಚ ಹವ್ಯಂ ವಹತ್ಯಗ್ನಿರ್ಯಸ್ತಾನಭ್ಯವಮನ್ಯತೇ || (ಪ್ರಜಾಪತಿ ವಚನ)

"ಭಿಕ್ಷುಕರಿಗೆ ಭಿಕ್ಷೆಯನ್ನು ನೀಡದೆ ತಂದೆತಾಯಿಗಳ ಶ್ರಾದ್ಧವನ್ನು ಮಾಡಿದರೆ ಪಿತೃಗಳು ಪಿಂಡವನ್ನು ಹದಿನೈದು ವರ್ಷಗಳವರೆಗೆ ಸ್ವೀಕರಿಸುವುದಿಲ್ಲ. ಅವನು ಮಾಡುವ ಹೋಮಗಳಲ್ಲಿ ಕೊಡುವ ಆಹುತಿಗಳನ್ನು ಅಗ್ನಿಯು ದೇವತೆಗಳಿಗೆ ಸೇರಿಸಲಾರನು."

ಅದುಷ್ಟಂ ಪಥಿಕಂ ಸಾಧುಂ ಯತಿಂ ಯಃ ಪರಿವರ್ಜಯೇತ್ |
ಸ ತಸ್ಯ ಸುಕೃತಂ ದತ್ವಾ ದುಷ್ಕೃತಂ ಪ್ರತಿಪದ್ಯತೇ ||
ತಥೈವ ಚ ಗೃಹಸ್ಥಸ್ಯ ನಿರಾಶೋ ಭಿಕ್ಷುಕೋ ಗತಃ |
ಇಷ್ಟಂ ದತ್ತಂ ತಪೋಽಧೀತಂ ಸರ್ವಮಾದಾಯ ಗಚ್ಛತಿ || (ವೃದ್ಧಕಾತ್ಯಾಯನ ವಚನ)

"ಅದುಷ್ಟರೂ, ಸಾಧುಗಳೂ, ಆಗಿರುವ ಪಥಿಕರನ್ನು ಬಿಟ್ಟುಬಿಡುವವನು ತನ್ನ ಎಲ್ಲಾ ಪುಣ್ಯಗಳನ್ನೂ ಬಿಟ್ಟು ಬಿಟ್ಟು, ಪಥಿಕನಲ್ಲಿರುವ ಪಾಪಗಳನ್ನು ಹೊಂದುವನು. ಭಿಕ್ಷುಕರು ನಿರಾಶರಾಗಿ ಹೋಗುವಾಗ ಯಜಮಾನನಲ್ಲಿರುವ ಯಜ್ಞ, ದಾನ, ತಪಸ್ಸು, ಅಧ್ಯಯನ ಮುಂತಾದವುಗಳಿಂದ ಸಂಪಾದಿಸಿದ ಪುಣ್ಯವನ್ನು ತೆಗೆದುಕೊಂಡು ಹೋಗುವರು.

ಸನ್ಯಾಸಿಗಳಿಗೆ ಅನ್ನದಾನದ ಫಲ

ಯತಿಹಸ್ತೇ ಜಲಂ ದದ್ಯಾದ್ಭೈಕ್ಷಂ ದದ್ಯಾತ್ಪುನರ್ಜಲಮ್ |
ತದನ್ನಂ ಮೇರುಣಾ ತುಲ್ಯಂ ತಜ್ಜಲಂ ಸಾಗರೋಪಮಮ್ || (ಪರಾಶರರ ವಚನ)

"ಯತಿಗಳ ಕೈಯಲ್ಲಿ ನೀರನ್ನು ಕೊಡಬೇಕು. ಅನಂತರದಲ್ಲಿ ಭಿಕ್ಷಾನ್ನವನ್ನು ಕೊಡಬೇಕು. ಅನಂತರದಲ್ಲಿ ಪುನಃ ನೀರನ್ನು ಕೊಡಬೇಕು. ಭಿಕ್ಷಾನ್ನವು ಮೇರುಪರ್ವತದಂತೆ ಅಧಿಕವೆಂದೂ, ಅವರ ಕೈಯಲ್ಲಿ ಹಾಕುವ ನೀರು ಸಮುದ್ರಜಲದಂತೆ ಅಪಾರವೆಂದೂ ತಿಳಿಯಬೇಕು."

ಸನ್ಯಾಸಿಗಳಿಗೆ ಅನ್ನದಾನವನ್ನು ಮಾಡದವನಿಗೆ ಅನರ್ಥ

ಯತಿಶ್ಚ ಬ್ರಹ್ಮಚಾರೀ ಚ ಸಿದ್ಧಾನ್ನಸ್ವಾಮಿನಾವುಭೌ |
ತಯೋರನ್ನಮದತ್ವಾ ತು ಭುಕ್ತ್ವಾ ಚಾಂದ್ರಾಯಣಂ ಚರೇತ್ || (ಪರಾಶರರ ವಚನ)

"ಯತಿ ಮತ್ತು ಬ್ರಹ್ಮಚಾರಿಯು ಸಿದ್ಧಾನ್ನಕ್ಕೆ ಸ್ವಾಮಿಗಳೆನಿಸುವರು. ಅವರಿಬ್ಬರಿಗೆ ಅನ್ನವನ್ನು ಕೊಡದೆ ಊಟ ಮಾಡುವವನು ಚಾಂದ್ರಾಯಣ ಪ್ರಾಯಶ್ಚಿತ್ತವನ್ನು ಮಾಡಬೇಕು.

ಆತ್ಮಾರ್ಥಂ ಪಾಚಯೇದನ್ನಂ ನ ದೇವಾತಿಥಿಕಾರಣಾತ್ |
ಪೂತಿಗಂಧಃ ಸ್ಮಶಾನೇ ಚ ಸ ಭವೇದ್ಬ್ರಹ್ಮರಾಕ್ಷಸಃ ||

ತನಗಾಗಿ ಅನ್ನವನ್ನು ಬೇಯಿಸುವವನು ಮತ್ತು ದೇವತೆಗಳಿಗಾಗಿಯೂ ಅತಿಥಿಗಳಿಗಾಗಿಯೂ ಅನ್ನವನ್ನು ಬೇಯಿಸದವನು ಅಮೇಧ್ಯದ ದುರ್ವಾಸನೆಯಿಂದ ಯುಕ್ತವಾಗಿರುವ ಸ್ಮಶಾನದಲ್ಲಿ ಬ್ರಹ್ಮರಾಕ್ಷಸನಾಗಿ ಹುಟ್ಟುವನು.

ವಟೌ ತು ಸಮದತ್ತಂ ಸ್ಯಾದ್ಗೃಹಸ್ಥೇ ದ್ವಿಗುಣಂ ಭವೇತ್ |
ವಾನಪ್ರಸ್ಥೇ ಶತಗುಣಂ ಯತೌ ದತ್ತಮನಂತಕಮ್ ||
ಬ್ರಹ್ಮಚಾರಿಸಹಸ್ರೇಣ ವಾನಪ್ರಸ್ಥಶತೇನ ಚ |

ಬ್ರಹ್ಮಚಾರಿಗಳಿಗೆ ಭಿಕ್ಷೆಯನ್ನು ಹಾಕಿದರೆ ಸಮವಾದ ಫಲವು ಸಿಗುತ್ತದೆ. ಒಬ್ಬ ಗೃಹಸ್ಥನಿಗೆ ಅನ್ನದಾನವನ್ನು ಮಾಡಿದರೆ, ದ್ವಿಗುಣ ಫಲವು ಬರುತ್ತದೆ. ಒಬ್ಬ ವಾನಪ್ರಸ್ಥನಿಗೆ ಅನ್ನದಾನವನ್ನು ಮಾಡಿದರೆ ನೂರರಷ್ಟು ಫಲವು ಬರುತ್ತದೆ. ಒಬ್ಬ ಯತಿಗಳಿಗೆ ಭಿಕ್ಷೆಯನ್ನು ಹಾಕಿದರೆ ಅನಂತ ಫಲವು ಬರುತ್ತದೆ.

ಬ್ರಹ್ಮಚಾರಿಸಹಸ್ರೇಣ ವಾನಪ್ರಸ್ಥಶತೇನ ಚ |
ಗೃಹಸ್ಥಾನಾಂ ತಥಾ ಕೋಟ್ಯಾ ಯತಿರೇಕೋ ವಿಶಿಷ್ಯತೇ ||

"ಒಂದು ಸಾವಿರ ಬ್ರಹ್ಮಚಾರಿಗಳು, ನೂರು ವಾನಪ್ರಸ್ಥರು, ಕೋಟಿ ಗೃಹಸ್ಥರು, ಇವರುಗಳಿಗಿಂತ ಒಬ್ಬ ಯತಿಯು ಅಧಿಕ ಫಲವನ್ನು ಕೊಡುವನು."

ಕುಟೀಚಕೋ ಬಹೂದಕೋ ಹಂಸಃ ಪರಮಹಂಸಕಃ |
ಏತೇಭ್ಯಃ ಕ್ರಮಶೋ ದತ್ತಂ ವಿಜ್ಞೇಯಂ ಪೂರ್ವವತ್ಫಲಮ್ || (ದೇವಲರ ವಚನ)

ಮಗನ ಮನೆಯಲ್ಲಿ ಪರ್ಣಕುಟೀ ಅಂದರೆ ಪರ್ಣಶಾಲೆಯನ್ನು ಕಟ್ಟಿಕೊಂಡು ಶ್ರೀಹರಿಯನ್ನು ಆರಾಧಿಸುತ್ತಿರುವವರು "ಕುಟೀಚಕ" ಎಂದೆನಿಸುವರು. ಯಾವಾಗಲೂ ತೀರ್ಥಯಾತ್ರೆಯನ್ನು ಮಾಡುತ್ತಿರುವವರು "ಬಹೂದಕ" ಎಂದೆನಿಸುವರು. ತ್ರಿದಂಡಿಸನ್ಯಾಸಿಯು "ಹಂಸ" ಎಂದೆನಿಸುವರು. ಏಕದಂಡಿ ಸನ್ಯಾಸಿಯು "ಪರಮಹಂಸ" ಎಂದೆನಿಸುವರು. ಇವರುಗಳಲ್ಲಿ ಕುಟೀಚಕರಿಗೆ ಭಿಕ್ಷೆಯನ್ನು ಸಮರ್ಪಿಸುವುದರಿಂದ ಏರ್ಪಡುವ ಫಲಕ್ಕಿಂತ ಬಹೂದಕರಿಗೆ ಭಿಕ್ಷೆಯನ್ನು ಸಮರ್ಪಿಸುವುದರಿಂದ ಅಧಿಕ ಫಲವೂ, ಬಹೂದಕರಿಗಿಂತ ಹಂಸರಿಗೆ ಭಿಕ್ಷೆಯನ್ನು ಸಮರ್ಪಿಸುವುದರಿಂದ ಅಧಿಕಫಲವೂ ಹಂಸರಿಗಿಂತ ಪರಮಹಂಸರಿಗೆ ಭಿಕ್ಷೆಯನ್ನು ಸಮರ್ಪಿಸಿದ್ದರಿಂದ ಬರುವ ಫಲವು ಕ್ರಮವಾಗಿ ಅಧಿಕವಾಗುತ್ತದೆ.

ಯತ್ರ ಭಿಕ್ಷುರಹಂ ತತ್ರ ತಂ ಚ ಮಾಂ ವಿದ್ಧಿ ಪಾಂಡವ |
ಪೂಜಿತೇ ಪೂಜಿತೋ ಹಂಸೇ ಪೂಜಿತಾಃ ಸರ್ವದೇವತಾಃ || (ಭಾಗವತವಚನ)

ಎಲ್ಲಿ ಸನ್ಯಾಸಿಯು ಇರುವನೋ ಅಲ್ಲಿ ನಾನಿರುವೆನು. ಸನ್ಯಾಸಿಯನ್ನು ನಾನೆಂದು ತಿಳಿದುಕೊಳ್ಳು, ಅವನನ್ನು ಪೂಜಿಸಿದರೆ ನನ್ನನ್ನೂ ಎಲ್ಲಾ ದೇವತೆಗಳನ್ನೂ ಪೂಜಿಸಿದಂತಾಗುತ್ತದೆ.

### ತೀರ್ಥಧಾರಣ ಮತ್ತು ಪ್ರಾಶನಗಳ ಫಲಗಳು

ಗುರು ಮುಂತಾದವರಿಗೆ ತೀರ್ಥ ಮತ್ತು ಶಂಖೋದಕಗಳನ್ನು ಕೊಟ್ಟು ತಾನು ಕುಳಿತುಕೊಂಡು ತೀರ್ಥವನ್ನು ಸ್ವೀಕರಿಸಬೇಕು.

ಸಮಸ್ತಜಗದಾಧಾರ ಶಂಖಚಕ್ರಗದಾಧರ |
ದೇವ ದೇಹಿ ಮಮಾನುಜ್ಞಾಂ ಯುಷ್ಮತ್ತೀರ್ಥನಿಷೇವಣೇ ||

"ಸಮಸ್ತಜಗತ್ತಿಗೂ ಆಧಾರನಾಗಿರುವ ಶಂಖ ಚಕ್ರ ಗದಾಧರನೇ, ನಿನ್ನ ತೀರ್ಥವನ್ನು ಸೇವಿಸಲು ಅನುಜ್ಞೆಯನ್ನು ಕೊಡು" ಎಂದು ಹೇಳುತ್ತಾ ತೀರ್ಥವನ್ನು ಸ್ವೀಕರಿಸಬೇಕು."

### ಶಂಖೋದಕ

ಅನುಗ್ರಚರಕೂಷ್ಮಾಂಡಾಃ ಪಿಶಾಚೋರಗರಾಕ್ಷಸಾಃ |
ದೃಷ್ಟ್ವಾ ಶಂಖೋದಕಂ ಮೂರ್ಧ್ನಿ ವಿದ್ರವಂತಿ ದಿಶೋ ದಶ ||
ಶಂಖಮಧ್ಯಸ್ಥಿತಂ ತೋಯಂ ಭ್ರಾಮಿತಂ ಕೇಶವೋಪರಿ |
ಅಂಗಲಗ್ನಂ ಮನುಷ್ಯಾಣಾಂ ಬ್ರಹ್ಮಹತ್ಯಾಯುತಂ ದಹೇತ್ ||

"ಶಂಖದ ಮಧ್ಯದಲ್ಲಿ ನೀರನ್ನು ತುಂಬಿಸಬೇಕು. ಆ ನೀರಿನಿಂದ ಶ್ರೀಹರಿಯ ಮುಂದೆ ಪ್ರದಕ್ಷಿಣಾಕಾರವಾಗಿ ಸುತ್ತಬೇಕು. ಆ ನೀರು ಶಂಖೋದಕವೆನಿಸುತ್ತದೆ. ಕೆಲವು ಭೂತಗಳು ಯಾವಾಗಲೂ ಭೂಮಿಯಲ್ಲಿ ಸುತ್ತುತ್ತಿರುತ್ತವೆ. ಅವುಗಳು ಶಾಂತ ಸ್ವಭಾವದಿಂದ ಯುಕ್ತವಾಗಿರುತ್ತವೆ. ಆ ಭೂತಗಳನ್ನು "ಅನುಗ್ರಚರಕೂಷ್ಮಾಂಡಗಣಗಳು" ಎಂದು ಕರೆಯುವುದುಂಟು. ಹಾಗೆಯೇ ಪಿಶಾಚಗಳೂ ಸರ್ಪಗಳೂ ರಾಕ್ಷಸರೂ ಎಲ್ಲಾ ಕಡೆಯೂ ಸುತ್ತುತ್ತಿರುವರು. ಈ ಕೂಷ್ಮಾಂಡ ಭೂತಗಣ ಮುಂತಾದವುಗಳು ಶಂಖೋದಕವನ್ನು ನೋಡಿದ ಕೂಡಲೇ ಹತ್ತು ದಿಕ್ಕುಗಳಿಗೂ ಓಡುತ್ತಿರುತ್ತವೆ. ಮನುಷ್ಯರ ದೇಹದಲ್ಲಿ ಈ ಶಂಖೋದಕವು ಬಿದ್ದರೆ ಆ ಮನುಷ್ಯನು ಹತ್ತು ಸಾವಿರ ಬ್ರಹ್ಮಹತ್ಯೆಗಳನ್ನು ಮಾಡಿದ್ದರೂ ಅವನು ಅವುಗಳಿಂದ ಬಿಡುಗಡೆಯನ್ನು ಪಡೆಯುವನು."

### ತೀರ್ಥದ ಲಕ್ಷಣ

ಶಾಲಿಗ್ರಾಮೋದ್ಭವಂ ತೀರ್ಥಂ ತೀರ್ಥಂ ಚ ದ್ವಾರಕೋದ್ಭವಮ್ |
ತುಲಸೀಮೂಲತೋಯಂ ಚ ಪೌಷ್ಕರಂ ಗಾಂಗಮೇವ ಚ ||
ಏತಾನಿ ಪಂಚ ತೀರ್ಥಾನಿ ಪಂಚಪಾತಕನಾಶನಮ್ |
ತೀರ್ಕಾರೋ ದೈತ್ಯನಾಶಾರ್ಥಂ ಥಕಾರೋ ಮೋಕ್ಷಸಾಧನಮ್ ||
ಅಕ್ಷರದ್ವಯಸಂಯುಕ್ತಂ ತೀರ್ಥನಾಮ ಇಹೋಚ್ಯತೇ |
ಆಜನ್ಮಕೃತಪಾಪಾನಾಂ ಪ್ರಾಯಶ್ಚಿತ್ತಂ ಯದೀಚ್ಛಸಿ ||
ಶಾಲಗ್ರಾಮಶಿಲಾವಾರಿ ಪಾಪಹಾರಿ ನಿಷೇವ್ಯತಾಮ್ |
ವಿಷ್ಣುಪಾದೋದಕಂ ಪುಣ್ಯಂ ಪೀತ್ವಾ ಯಸ್ತು ಸ್ವಮಸ್ತಕೇ ||
ಪ್ರಕ್ಷೇಪಣಂ ಪ್ರಕುರ್ವೀತ ಬ್ರಹ್ಮಹತ್ಯಾಂ ವ್ಯಪೋಹತಿ |

"(1) ಶಾಲಿಗ್ರಾಮತೀರ್ಥ (2) ಚಕ್ರಾಂಕಿತತೀರ್ಥ (3) ತುಳಸೀಗಿಡದ ಬುಡದಲ್ಲಿರುವ ನೀರು (4) ಪುಷ್ಕರ ಕ್ಷೇತ್ರದಲ್ಲಿರುವ ನೀರು (5) ಗಂಗಾಜಲ ಈ ಐದು ತೀರ್ಥಗಳೆನಿಸುತ್ತವೆ. ಈ ಐದು ತೀರ್ಥಗಳೂ ಬ್ರಹ್ಮಹತ್ಯಾ ಮುಂತಾದ ಐದು ಪಾಪಗಳನ್ನೂ ಪರಿಹರಿಸುತ್ತವೆ."

"ತೀರ್ಥ" ಎಂಬ ಪದದಲ್ಲಿ "ತೀರ್" ಎಂಬ ಅಕ್ಷರವೂ "ಥ" ಎಂಬ ಅಕ್ಷರವೂ ಇವೆ. ಅವುಗಳಲ್ಲಿ "ತೀರ್" ಎಂಬ ಅಕ್ಷರವು ದೈತ್ಯನಾಶಕ್ಕಾಗಿ ಉಪಯೋಗಿಸಲ್ಪಡುತ್ತದೆ. "ಥ" ಎಂಬ ಅಕ್ಷರವು "ಮೋಕ್ಷಸಾಧನ" ಎಂಬ ಅರ್ಥವನ್ನು ತಿಳಿಸುತ್ತದೆ. ಹುಟ್ಟಿದ ದಿನದಿಂದ ಆರಂಭಿಸಿ ಕೊನೆಯವರೆಗೆ ಮಾಡಿರುವ ಎಲ್ಲಾ ಪಾಪಗಳ ಪರಿಹಾರಕ್ಕಾಗಿ ಸಕಲ ಪಾಪಪರಿಹಾರಕಗಳಾಗಿರುವ ಶಾಲಗ್ರಾಮ ಶಿಲಾಜಲವನ್ನು ಸೇವಿಸಬೇಕು."

"ವಿಷ್ಣುಪಾದೋದಕವನ್ನು ಕುಡಿದು ತನ್ನ ತಲೆಯಲ್ಲಿ ಯಾವನು ಪ್ರೋಕ್ಷಿಸಿಕೊಳ್ಳುವನೋ ಅವನು ತಾನು ಮಾಡಿರುವ ಬ್ರಹ್ಮಹತ್ಯೆಯನ್ನು ಕಳೆದುಕೊಳ್ಳುವನು."

ಸ್ನಾನೇ ಪಾದೋದಕಂ ವಿಷ್ಣೋಃ ಪಿಬನ್ ಶಿರಸಿ ಧಾರಯೇತ್ |
ಸರ್ವಪಾಪವಿನಿರ್ಮುಕ್ತೋ ವೈಷ್ಣವೀಂ ಸಿದ್ಧಿಮಾಪ್ನುಯಾತ್ ||
ವಿಷ್ಣೋಃ ಪಾದೋದಕಂ ಪೂರ್ವಮಾಸಿಚ್ಯ ಚ ಶಿರೋಮುಖೇ |
ನೇತ್ರೇ ಚ ತ್ರಿಃ ಪಿಬೇತ್ತಸ್ಮಾತ್ತಾಪತ್ರಯನಿವಾರಣಮ್ || (ಕೃಷ್ಣಾಮೃತಮಹಾರ್ಣವ)

"ಸ್ನಾನಕಾಲದಲ್ಲಿ ವಿಷ್ಣುಪಾದೋದಕವನ್ನು ಕುಡಿದು ತಲೆಯಲ್ಲಿ ಧರಿಸಬೇಕು. ಇದರಿಂದ ಎಲ್ಲಾ ಪಾಪಗಳೂ ಹೋಗುತ್ತವೆ. ವಿಷ್ಣುವಿನ ಅನುಗ್ರಹದಿಂದ ಬರುವ ಸಿದ್ಧಿಯನ್ನು ಪಡೆಯುವನು."

ಸ್ನಾನಕಾಲದಲ್ಲಿ ವಿಷ್ಣುವಿನ ಪಾದೋದಕವನ್ನು ತಲೆಯಲ್ಲಿ ಸುರಿಯಬೇಕು. ಎರಡು ಕಣ್ಣುಗಳಿಂದಲೂ ಧರಿಸಬೇಕು. ಮೂರುಸಲ ಕುಡಿಯಬೇಕು. ಇದರಿಂದ ತಾಪತ್ರಯವು ದೂರವಾಗುತ್ತದೆ.

ವಿಷ್ಣೋಃ ಪಾದೋದಕಂ ದೇವಿ ಶಿರಸಾ ಧಾರಯೇತ್ಪಿಬನ್ |
ಯೋ ಧರೇದ್ವಸುಧೇ ನಿತ್ಯಂ ಸ ಯಾತಿ ಪರಮಾಂ ಗತಿಮ್ || (ವಾರಾಹ ವಚನ)

"ವಿಷ್ಣುವಿನ ಪಾದೋದಕವನ್ನು ಕುಡಿಯುತ್ತಾ ತಲೆಯಲ್ಲಿ ಧರಿಸಬೇಕು. ಹೀಗೆ ಮಾಡುವವನು ಉತ್ತಮವಾದ ಗತಿಯನ್ನು ಪಡೆಯುವನು."

ಪಾದಾಂಗುಷ್ಠನಖೋದ್ಭಿನ್ನಖರ್ಪರಾದ್ಗೋಲಕಸ್ಯ ಚ |
ತಥಾ ಬ್ರಹ್ಮಾಂಡಬಾಹ್ಯೋ ದಧಾರಾ ಯಾವದ್ವಿನಿಸ್ಸೃತಾ ||
ತಯೈವ ವಿಧಿವದ್ಧೃತ್ವಾ ಪೂಜಯಾಮಾಸ ಮತ್ಪದಮ್ |
ತತ್ತೀರ್ಥಂ ವಿಮಲಂ ಪುಣ್ಯಂ ನತ್ವಾ ಪೀತ್ವಾ ತು ಮಸ್ತಕೇ ||
ಧಾರಯೇದ್ಯಃ ಸ ಸರ್ವಜ್ಞೋ ವಿಧಿನಾ ವಿಧಿದರ್ಶಕಃ |
ನಿಧಾನಂ ಪ್ರಾಪ್ಯ ಯಃ ಕಶ್ಚಿದ್ಬಹಿಃಕ್ಷೇಪಂ ಕರೋತಿ ಕಿಮ್ ||
ತಥಾ ವಿಷ್ಣುಪದಂ ತೀರ್ಥಂ ಪಿಬನ್ ಪಶ್ಚಾದ್ಧಿ ಧಾರಯೇತ್ |
ನೃಸಿಂಹಚರಣಾಂಭೋಜಸಲಿಲಂ ಪರಮೋನ್ನತಮ್ ||
ಆದೌ ದತ್ವಾ ತಥಾ ಪೀತ್ವಾ ಶಿರಸಾ ಧಾರಯೇಚ್ಛುಚಿಃ |
ಯಸ್ತು ವಿಷ್ಣುಪದಂ ತೀರ್ಥಂ ನ ಪಿಬೇತ್ಪಾಪಶಂಕಯಾ ||
ಕೇವಲಂ ಶಿಖಯಾ ಗೃಹ್ಣನ್ ಸ ಗಚ್ಛೇನ್ನರಕಂ ಧ್ರುವಮ್ |
ಯಃ ಪುಮಾನ್ ಮಂದಬುದ್ಧಿತ್ವಾತ್ಪಿಬನ್ ವಿಷ್ಣುಪದೋದಕಮ್ ||
ನ ಕರೋತಿ ಪರಂ ಮೂರ್ಧ್ನಿ ತಮಾಹುರ್ಬ್ರಹ್ಮಘಾತಕಮ್ | (ವಾಯುಪುರಾಣವಚನ)

"ತ್ರಿವಿಕ್ರಮಾವತಾರವನ್ನು ಸ್ವೀಕರಿಸಿದಾಗ ನನ್ನ ಕಾಲನ್ನು ಭೂಮಿಯನ್ನು ಅಳೆಯುವು ದಕ್ಕಾಗಿ ಮೇಲೆ ಎತ್ತಿದನು. ಆಗ ನನ್ನ ಎಡಗಾಲಿನ ಅಂಗುಷ್ಠದ ತುದಿಯು ಬ್ರಹ್ಮಾಂಡ ಕಟಾಹಕ್ಕೆ ತಗಲಿತು. ಅದರಿಂದ ಬ್ರಹ್ಮಾಂಡ ಕಟಾಹವು ಬಿರಿಯಿತು. ಆ ಬಿರುಕಿನಲ್ಲಿ ಬ್ರಹ್ಮಾಂಡದ ಹೊರಗಿರುವ ನೀರು ಸುರಿಯಿತು. ಬ್ರಹ್ಮನು ಅದೇ ಜಲವನ್ನು ತನ್ನ ಕಮಂಡಲುವಿನಲ್ಲಿ ತುಂಬಿಸಿದನು. ಆ ಜಲದಿಂದ ನನ್ನ ಪಾದವನ್ನು ತೊಳೆದನು. ನನ್ನನ್ನು ಪೂಜಿಸಿದನು. ಆ ಜಲವು ಪರಮ ಪಾವನವಾದ ತೀರ್ಥವೆನಿಸಿತು."

"ಆ ಜಲವನ್ನು ನಮಸ್ಕರಿಸಬೇಕು. ಕುಡಿಯಬೇಕು. ತಲೆಯಲ್ಲಿ ಧರಿಸಬೇಕು. ಹೀಗ ಧರಿಸುವವನು ಸರ್ವರಿಗೂ ಮಾಡಬೇಕಾದ ವಿಧಿಯನ್ನು ತಿಳಿಸುವನು. ನಿಧಿಯು ನಮ್ಮ ಹಸ್ತಗತವಾದರೆ ಆ ನಿಧಿಯನ್ನು ಯಾರಾದರೂ ಬಿಸಾಡುವನೇ? ಅದರಂತೆ ನರಸಿಂಹರೂಪಿಯಾದ ಶ್ರೀತ್ರಿವಿಕ್ರಮದೇವನ ಪಾದೋದಕವನ್ನು ಇತರರಿಗೆ ಕೊಡಬೇಕು. ತಾನು ಪಾನ ಮಾಡಬೇಕು. ತನ್ನ ತಲೆಯಲ್ಲಿ ಧರಿಸಬೇಕು. ಇದರಿಂದ ಅತ್ಯಂತ ಪರಿಶುದ್ಧನಾಗುವನು. ವಿಷ್ಣುಪಾದೋದಕವನ್ನು ಕುಡಿದರೆ "ಪಾಪವು ಬರುತ್ತದೆ" ಎಂಬ ಶಂಕೆಯಿಂದ ಯಾವನು ಕುಡಿಯುವುದಿಲ್ಲವೋ ಜುಟ್ಟಿನಿಂದ ಮಾತ್ರ ಸ್ವೀಕರಿಸುವನೋ ಅವನು ನಿಶ್ಚಯವಾಗಿಯೂ ನರಕವನ್ನು ಹೊಂದುವನು. ಅದು ಮಾತ್ರವಲ್ಲ. ಯಾವನು ತನ್ನ ಮಂದಬುದ್ಧಿಯಿಂದ ನನ್ನ ಪಾದೋದಕವನ್ನು ತಲೆಯಲ್ಲಿ ಧರಿಸುವುದಿಲ್ಲವೋ ಅವನು ಬ್ರಹ್ಮಘಾತಕನೆನಿಸುವನು. ವಾಯುಪುರಾಣದಲ್ಲಿರುವ ವಚನವಿದು.

ತೀರ್ಥದ್ವಯಮಿದಂ ಸೇವ್ಯಮಂಹಸಾಂ ದೇವನಿರ್ಮಿತಮ್ |
ತದ್ರಹಸ್ಯಂ ಚ ಬಂಧುರ್ಯಸ್ತವ ಪುತ್ರಃ ಪಿತಾಮಹಃ ||
ತತಃ ಶಂಭುರ್ಮಹಾಪ್ರಾಜ್ಞೋ ಲೋಕಾನುಗ್ರಹವಿಗ್ರಹಃ |
ನತ್ವಾ ಪೀತ್ವಾ ಮಹಾಭಕ್ತ್ಯಾ ಶಿರಸಾ ಧಾರಯನ್ ಶುಚಿಃ ||

ಬ್ರಹ್ಮಾಂಡಕಟಾಹದಿಂದ ಹೊರಗೆ ಬಂದಿರುವ ಮತ್ತು ಬ್ರಹ್ಮಕಮಂಡಲುವಿನಿಂದ ಹೊರಗೆ ಬಂದಿರುವ ದ್ವಿವಿಧವಾದ ಈ ತೀರ್ಥವು ಸಕಲ ಪಾಪಪರಿಹಾರಕವಾದುದು. ಬ್ರಹ್ಮದೇವನು ಈ ತೀರ್ಥವನ್ನು ಸೇವಿಸಿದ್ದರಿಂದ ಧನ್ಯನಾದನು. ಅನಂತರದಲ್ಲಿ ರುದ್ರನು ಲೋಕಾನುಗ್ರಹವನ್ನು ಮಾಡುವುದಕ್ಕಾಗಿ ಅತ್ಯಂತ ಭಕ್ತಿಯಿಂದ ಈ ವಿಷ್ಣುಪಾದೋದಕವನ್ನು ನಮಸ್ಕರಿಸಿದನು. ಶಿರಸ್ಸಿನಲ್ಲಿ ಧರಿಸಿದನು. ಇದರಿಂದ ಶುದ್ಧನಾದನು.

ಯಃ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ |
ಮಮ ಪಾದೋದಕಂ ದಿವ್ಯಂ ಯಃ ಪಿಬೇತ್ಸತತಂ ನರಃ ||

ದಿವ್ಯವಾದ ನನ್ನ ಪಾದೋದಕವನ್ನು ಯಾವನು ಕುಡಿಯುವನೋ ಅವನು ಸರ್ವತೀರ್ಥಗಳಲ್ಲಿ ಸ್ನಾನ ಮಾಡಿದವನೆನಿಸುವನು. ಸರ್ವ ಯಜ್ಞಗಳಲ್ಲಿ ದೀಕ್ಷಿತನೆನಿಸುವನು.

ಸ್ನಾನಂ ಭೋಜನಮಿತ್ಯೇಕೇ ವದಂತಿ ಕೃತಿಕೋವಿದಾಃ |
ಅಪರೇ ಜ್ಞಾನನಿಪುಣಾಃ ಕೇವಲಾನಂದದಾಯಿನಃ ||
ಮತ್ಪಾದಾಂಬುಜತೀರ್ಥಂ ತು ಸ್ವಾದ್ವದಂತಿ ಸ್ವರೂಪಿಣಃ |
ತಸ್ಮಾದಾಂತರಶುದ್ಧ್ಯರ್ಥಂ ಬಹಿಃಶುದ್ಧಿಂ ಪ್ರಕುರ್ವತೇ ||

"ಮಹಾಜ್ಞಾನಿಗಳು ಕೆಲವರು ತೀರ್ಥಪ್ರಾಶನವೇ ಸ್ನಾನಕ್ಕೆ ಸಮಾನವೆಂದು ಹೇಳುವರು. ಮತ್ತೆ ಕಲವು "ಜ್ಞಾನಿಗಳು ತೀರ್ಥಪ್ರಾಶನವನ್ನು ಮಾಡಿಸಿ ಆ ತೀರ್ಥಪ್ರಾಶನದಿಂದ ಸ್ವರೂಪಸುಖವನ್ನು ಅನುಭವಿಸುವಂತೆ ಮಾಡುತ್ತಿರುವರು. ಮತ್ತೆ ಕೆಲವರು ನನ್ನ ಪಾದಾಂಬುಜತೀರ್ಥವನ್ನು ಪ್ರಾಶನ ಮಾಡಿ ಸ್ವರೂಪ ಸುಖವನ್ನು ಅನುಭವಿಸುತ್ತಿರುವರು. ಹೀಗೆ ಒಳಗಣ ಶುದ್ಧಿಗಾಗಿ ಹೊರಗಣಶುದ್ಧಿಯನ್ನು ಮಾಡುತ್ತಿರುವರು."

ಅಂತಃಶುದ್ಧಿನಿಮಿತ್ತಾನಿ ಹ್ಯಂಗಾನಿ ವಿವಿಧಾನಿ ಚ |
ತಸ್ಮಾದಾಂತರಮೇವಂ ತು ಸೇವ್ಯಂ ಮತ್ಪಾದಸಂಭವಮ್ ||
ನಿಧಾನಂ ಲಭತೇ ವಿದ್ವಾಂ ತಸ್ಮಾದ್ಯತ್ನಂ ಪ್ರಕಾರಯೇತ್ |
ಯಸ್ಮಿನ್ ಲಬ್ಧವಿಧಾನೇ ತು ದುರ್ಭಗತ್ವಂ ಕುತಸ್ತತಃ ||

"ಅಂತಃಶುದ್ಧಿಗೆ ಕಾರಣವಾಗಿರುವ ಅಸಂಖ್ಯನಿಮಿತ್ತಗಳಿವೆ. ಅವುಗಳಲ್ಲಿ ಅಂತಃಶುದ್ಧಿಗೆ ಪ್ರಧಾನ ಕಾರಣವಾಗಿರುವ ವಿದ್ಯೆಯನ್ನು ಸಂಪಾದಿಸಬೇಕು. ಅದಕ್ಕಾಗಿ ಪ್ರಯತ್ನವನ್ನು ಮಾಡಬೇಕು. ವಿದ್ಯೆಯು ಸ್ವಾಧೀನವಾದರೆ ದೌರ್ಭಾಗ್ಯವಿಲ್ಲ."

ಅನ್ಯಾನಿ ಯಾನಿ ಕರ್ಮಾಣಿ ದೇಹಶುದ್ಧಿಕರಾಣಿ ಚ |
ಮದಂಘ್ರಿಸಲಿಲಂ ದಿವ್ಯಂ ಕೇವಲಾನಂದದಂ ಪರಮ್ ||

"ದೇಹಶುದ್ಧಿಯನ್ನು ಕೊಡುವ ಎಷ್ಟೋ ಕರ್ಮಗಳಿವೆ. ನನ್ನ ಪಾದೋದಕವು ಕೇವಲಾನಂದದಾಯಕವಾದುದು."

ಯತ್ತು ಭಾಗವತೈರ್ದತ್ತಂ ಮೂರ್ಧ್ನಿ ಪಾದಾಂಬು ಧಾರಯೇತ್ |
ವಿಯುಕ್ತಃ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ || (ಈಶ್ವರಸಂಹಿತಾವಚನ)

"ಭಗವದ್ಭಕ್ತರಿಂದ ಕೊಡಲ್ಪಟ್ಟ ವಿಷ್ಣುಪಾದೋದಕವನ್ನು ತಲೆಯಲ್ಲಿ ಯಾವನು ಧರಿಸುವನೋ ಅವನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಪಡೆದು ವಿಷ್ಣುಲೋಕವನ್ನು ಹೊಂದುವನು."

ಶೃಣು ವತ್ಸ ತ್ವಯಾ ಧಾರ್ಯಂ ವಿಷ್ಣುಪಾದೋದಕಂ ದ್ವಿಜೈಃ |
ಶುಚಿಸ್ನಾತೈರ್ವ್ರತಪರೈಃ ಶುಭೈರ್ದತ್ತಂ ಶುಭೈಃ ಕರೈಃ ||
ಪಾದ್ಯಂ ದದ್ಯಾದ್ವಿಭೋಸ್ತಸ್ಮಾ ಗೃಹ್ಣೀಯಾತ್ಪಾದಧಾವನಮ್ |
ಶತಧಾರೇಣ ಮಂತ್ರೇಣ ಪಂಚರಾತ್ರೇ ಸ್ಥಿತೇನ ಚ ||
ಧೃತ್ವಾ ಶಿರಸಿ ಪಾದಾಂಬು ಮಹತ್ಫಲಮವಾಪ್ಯತೇ |
ಸದ್ಯಃ ಫಲಪ್ರದಂ ಪುಣ್ಯಂ ಮಹಾಪಾತಕನಾಶನಮ್ ||
ಸರ್ವಮಂಗಲಮಾಂಗಲ್ಯಂ ಸರ್ವಪಾವನಪಾವನಮ್ |
ದುಷ್ಟಗ್ರಹೋಪಶಮನಂ ಸರ್ವವ್ಯಾಧಿವಿನಾಶನಮ್ ||
ಸರ್ವದುಃಖಪ್ರಶಮನಂ ಸರ್ವವ್ಯಾಧಿನಿವಾರಣಮ್ |
ಸರ್ವಪಾಪೈಕಶಮಂ ಸರ್ವರೋಗೈಕಭೇಷಜಮ್ ||
ಸರ್ವಕಲ್ಯಾಣಸುಖದಂ ಸರ್ವಕಾಮಫಲಪ್ರದಮ್ |
ಸರ್ವಸಿದ್ಧಿಪ್ರದಂ ಸದ್ಯಃ ಸರ್ವಸೌಭಾಗ್ಯವರ್ಧನಮ್ ||
ಸರ್ವಶತ್ರುಪ್ರಶಮನಂ ಸರ್ವದೋಷನಿವಾರಣಮ್ |
ಸರ್ವತೀರ್ಥಫಲಂ ಸದ್ಯಃ ಪ್ರಾಪ್ಯತೇ ಮೂರ್ಧ್ನಿ ಧಾರಣಾತ್ ||

"ಸ್ನಾನ ಮಾಡಿ ಶುದ್ಧರಾಗಿರುವ ಮಹಾತ್ಮರಾದ ಬ್ರಾಹ್ಮಣರುಗಳು ಶ್ರೀಹರಿಗೆ ಪಾದ್ಯವನ್ನು ಸಮರ್ಪಿಸಬೇಕು. ಆ ಪಾದ್ಯಜಲವನ್ನು ಕುಡಿಯಬೇಕು. ಪಂಚರಾತ್ರದಲ್ಲಿರುವ "ಶತಧಾರ" ಎಂಬ ಮಂತ್ರದಿಂದ ತೀರ್ಥವನ್ನು ಕುಡಿದು ತಲೆಯಲ್ಲಿ ಧರಿಸಬೇಕು. ತತ್ಕ್ಷಣದಲ್ಲಿ ಫಲವು ಸಿಗುತ್ತದೆ. ಮಹಾಪಾಪಗಳೆಲ್ಲವೂ ದೂರವಾಗುತ್ತದೆ. ಸರ್ವಮಂಗಲಗಳೂ ವೃದ್ಧಿಯಾಗುತ್ತವೆ."

## ತಲೆಯಲ್ಲಿ ಧರಿಸುವ ಮಂತ್ರ

"ಭಗವಾನ್ ವಾಸುದೇವಃ ಪವಿತ್ರಂ ಶತಧಾರಂ ಸಹಸ್ರಧಾರಮಮಿತಧಾರಮಚ್ಛಿದ್ರಮನಂತಮಪರಿಮಿತಂ ಜಯತ್ಯಚ್ಯುತಂ ಪರಮಂ ಪವಿತ್ರಂ ಭಗವಾನ್ ವಾಸುದೇವಃ ಪುನಾತು" ಇದು ತೀರ್ಥವನ್ನು ತಲೆಯಲ್ಲಿ ಧರಿಸುವ ಮಂತ್ರ.

### ತೀರ್ಥಪ್ರಾಶನ ಲಕ್ಷಣ

ವಿಷ್ಣೋಃ ಪಾದೋದಕಂ ಲಬ್ಧ್ವಾ ದತ್ವಾ ಭಾಗವತಸ್ಯ ಚ |
ತಿಷ್ಠನ್ನೇವಾಥವಾಽಸೀನಃ ಪಿಬೇಚ್ಛುದ್ಧಿಶ್ಚ ನಾಪರಃ ||

"ವಿಷ್ಣುವಿನ ಪಾದೋದಕವು ಸಿಗಬೇಕು. ಅದನ್ನು ಭಗವದ್ಭಕ್ತರಿಗೆ ಕೊಡಬೇಕು. ನಿಂತುಕೊಂಡೋ ಅಥವಾ ಕುಳಿತುಕೊಂಡೋ ಆ ತೀರ್ಥವನ್ನು ಕುಡಿಯಬೇಕು. ಇದಕ್ಕಿಂತ ಬೇರೆ ಶುದ್ಧಿಯಿಲ್ಲ."

ವಸ್ತ್ರಯುಕ್ತೇನ ಹಸ್ತೇನ ಗೃಹ್ಣೀಯಾತ್ತೀರ್ಥಮಬ್ಜಜ |
ಚುಲಕಂ ತುಲಸೀಮಿಶ್ರಂ ಪಿಬೇತ್ಪಾದೋದಕಂ ಮಮ || (ಪಾದ್ಮಸಂಹಿತಾವಚನ)

"ವಸ್ತ್ರದಿಂದ ಯುಕ್ತವಾಗಿರುವ ಕೈಯಿಂದ ತೀರ್ಥವನ್ನು ತೆಗೆದುಕೊಳ್ಳಬೇಕು. ತುಳಸೀದಳದಿಂದ ಯುಕ್ತವಾಗಿರುವ ಬೊಗಸೆಯಿಂದ ತೀರ್ಥವನ್ನು ತೆಗೆದುಕೊಳ್ಳಬೇಕು."

ವಸ್ತ್ರಂ ಚ ತ್ರಿಗುಣೀಕೃತ್ಯ ಪಾಣೌ ಪಾಣಿಂ ಚ ವಿನ್ಯಸೇತ್ |
ತಸ್ಮಿಂಸ್ತೀರ್ಥಂ ಪ್ರತಿಷ್ಠಾಪ್ಯ ತ್ರಿಃ ಪಿಬೇಚ್ಛಬ್ದವರ್ಜಿತಮ್ ||
ಆದ್ಯಂ ಕಾಯಸ್ಯ ಶುದ್ಧ್ಯರ್ಥಂ ದ್ವಿತೀಯಂ ಧರ್ಮಸಾಧನಮ್ |
ತೃತೀಯಂ ಮೋಕ್ಷದಂ ಪ್ರೋಕ್ತಮೇವಂ ತೀರ್ಥಂ ತ್ರಿಧಾ ಪಿಬೇತ್ ||

ವಸ್ತ್ರವನ್ನು ಮೂರು ಮಡಿಕೆ ಮಡಿಸಬೇಕು. ಎಡಗೈಯಲ್ಲಿ ಬಟ್ಟೆಯ ಮೇಲೆ ಬಲಗೈಯನ್ನು ಇಡಬೇಕು. ಬಲಗೈಯಲ್ಲಿ ತೀರ್ಥವನ್ನು ಇಟ್ಟುಕೊಂಡು ಬಾಯಿಯಿಂದ ಶಬ್ದವನ್ನು ಮಾಡದಂತೆ ಕುಡಿಯಬೇಕು. (1) ದೇಹ ಶುದ್ಧ್ಯರ್ಥವಾಗಿಯೂ (2) ಧರ್ಮಪ್ರಾಪ್ತಿಗಾಗಿಯೂ (3) ಮುಕ್ತಿಪ್ರಾಪ್ತಿಗಾಗಿಯೂ ಕ್ರಮವಾಗಿ ಮೂರು ಸಲ ತೀರ್ಥವನ್ನು ಕುಡಿಯಬೇಕು.

### ತೀರ್ಥಪ್ರಾಶನಮಂತ್ರ

"ತದಸ್ಯ ಪ್ರಿಯಮಭಿ ಪಾಥೋ ಅಸ್ಯಾಮ್" ಎಂಬ ಮಂತ್ರ.

ಅಕಾಲಮೃತ್ಯುಶಮನಂ ಸರ್ವವ್ಯಾಧಿವಿನಾಶನಮ್ |
ಸರ್ವದುರಿತೋಪಶಮನಂ ವಿಷ್ಣುಪಾದೋದಕಂ ಶುಭಮ್ || (ಪಾದ್ಮಪುರಾಣೋಕ್ತಮಂತ್ರ)

### ತೀರ್ಥವನ್ನು ಕೆಳಗೆ ಚೆಲ್ಲಿದರೆ ಅನರ್ಥ

ಪರಮಾಣುಸಮಂ ತೀರ್ಥಂ ಯಸ್ತು ಭೂಮೌ ವಿನಿಕ್ಷಿಪೇತ್ |
ಬ್ರಹ್ಮಹತ್ಯಾಸಮಂ ತಸ್ಯ ಪಾಪಮಾಹುರ್ಮನೀಷಿಣಃ || (ಪಾದ್ಮವಚನ)

"ಪರಮಾಣುವಿನಷ್ಟು ಚಿಕ್ಕ ತೀರ್ಥದ ಬಿಂದುವನ್ನು ಭೂಮಿಯಲ್ಲಿ ಚೆಲ್ಲಿದರೆ ಬ್ರಹ್ಮಹತ್ಯೆಗೆ ಸಮವಾಗಿರುವ ಪಾಪವು ಬರುವುದಾಗಿ ಜ್ಞಾನಿಗಳು ಹೇಳುವರು."

ಪರಮಾಣುಸಮಂ ತೀರ್ಥಂ ಯಾವತ್ತು ಪತಿತಂ ಭುವಿ |
ಷಷ್ಟಿವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ||

"ಪರಮಾಣುವಿನಷ್ಟು ತೀರ್ಥವು ಭೂಮಿಯಲ್ಲಿ ಬಿದ್ದರೆ ಅರವತ್ತು ಸಹಸ್ರವರ್ಷಗಳವರೆಗೆ ಅಮೇಧ್ಯದಲ್ಲಿ ಕ್ರಿಮಿಯಾಗಿ ಹುಟ್ಟುವನು."

ಸಾಲಗ್ರಾಮಜಲಂ ಪೀತ್ವಾ ಕೋಟಿಯಜ್ಞಫಲಂ ಲಭೇತ್ |
ತಸ್ಮಾದಷ್ಟಗುಣಂ ಪಾಪಂ ಭೂಮೌ ಬಿಂದುನಿಪಾತನಾತ್ ||

"ಶಾಲಿಗ್ರಾಮದ ತೀರ್ಥವನ್ನು ಕುಡಿದವನು ಕೋಟಿ ಸಂಖ್ಯಾಕವಾದ ಯಜ್ಞಗಳ ಫಲವನ್ನು ಪಡೆಯುವನು. ಭೂಮಿಯಲ್ಲಿ ತೀರ್ಥದ ಬಿಂದುವು ಬಿದ್ದರೆ ಅದಕ್ಕಿಂತ ಎಂಟರಷ್ಟು ಅಧಿಕವಾದ ಪಾಪವನ್ನು ಪಡೆಯುವನು."

**ಏಕಾದಶೀ ದಿನದಲ್ಲಿ ತುಳಸೀ ಸಹಿತ ತೀರ್ಥವನ್ನು ತೆಗೆದುಕೊಳ್ಳಬಾರದು**

ತುಳಸೀಮಿಶ್ರಿತಂ ತೋಯಮೇಕಾದಶ್ಯಾಂ ಕದಾಚನ |
ನ ಗ್ರಾಹ್ಯಂ ವಿಷ್ಣುಭಕ್ತೈಸ್ತು ವ್ರತಂ ನಶ್ಯೇಚ್ಚ ಪಾರ್ವತಿ ||
ಏಕಾದಶ್ಯಾಂ ತಿಥೌ ಪುಣ್ಯೇ ತುಲಸೀಂ ಭಕ್ಷಯಂತಿ ಯೇ |
ತೇ ಯಾಂತಿ ನರಕಂ ಘೋರಂ ಮದ್ದ್ರೋಹೇಣ ನರಾಧಮಾಃ || (ಪಾದ್ಮ ವಚನ)

"ಏಕಾದಶೀ ದಿನದಲ್ಲಿ ತುಲಸೀದಳಗಳಿಂದ ಸಹಿತವಾದ ತೀರ್ಥವನ್ನು ಸ್ವೀಕರಿಸಕೂಡದು. ಅದರಿಂದ ಏಕಾದಶೀ ವ್ರತಕ್ಕೆ ಲೋಪವು ಬರುತ್ತದೆ. ಪರಮಪುಣ್ಯಾತಿಥಿಯಾಗಿರುವ ಏಕಾದಶೀತಿಥಿಯಲ್ಲಿ ತುಲಸಿಯನ್ನು ಯಾವನು ಭಕ್ಷಿಸುತ್ತಾನೆಯೋ ಅವನು ನನ್ನ ದ್ರೋಹದಿಂದ ಘೋರವಾದ ನರಕವನ್ನು ಹೊಂದುವನು."

**ಅವೈಷ್ಣವರ ಕೈಗಳಿಂದ ತೀರ್ಥಪ್ರಸಾದಗಳನ್ನು ಸ್ವೀಕರಿಸಕೂಡದು**

ಅವೈಷ್ಣವಸ್ಯ ಹಸ್ತಾತ್ತು ದಿವ್ಯದೇಶಾದುಪಾಗತಮ್ |
ಹರೇಃ ಪ್ರಸಾದತೀರ್ಥಾದ್ಯಂ ಯತ್ನೇನ ಪರಿವರ್ಜಯೇತ್ || (ಹಾರೀತ ವಚನ)

"ದಿವ್ಯದೇಶದಿಂದ ಬಂದಿರುವ ಶ್ರೀಹರಿಯ ಪ್ರಸಾದ, ತೀರ್ಥ ಮುಂತಾದ ವಸ್ತುಗಳನ್ನು ಅವೈಷ್ಣವನ ಕೈಯಿಂದ ತೆಗೆದುಕೊಳ್ಳುವುದನ್ನು ಪ್ರಯತ್ನದಿಂದ ಬಿಡಬೇಕು."

**ತೀರ್ಥವನ್ನು ತಲೆಯಲ್ಲಿ ಧರಿಸುವುದರಿಂದ ಬರುವ ಫಲ**

ಪೃಥಿವ್ಯಾಂ ಯಾನಿ ತೀರ್ಥಾನಿ ತೇಷು ಸ್ನಾತಸ್ಯ ಯತ್ಫಲಮ್ |
ವಿಷ್ಣೋಃ ಪಾದೋದಕಂ ಮೂರ್ಧ್ನಿ ಧಾರಯಂಸ್ತತ್ಸಮಾಪ್ನುಯಾತ್ || (ಪಾದ್ಮ ವಚನ)

"ಪೃಥಿವಿಯಲ್ಲಿರುವ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡುವವನಿಗೆ ಬರುವ ಫಲವು ವಿಷ್ಣುವಿನ ಪಾದೋದಕವನ್ನು ತಲೆಯಲ್ಲಿ ಧರಿಸುವವನಿಗೆ ಬರುತ್ತದೆ."

ತತ್ಪಾದತೀರ್ಥಮಾದಾಯ ಭಕ್ತೋ ವಿಷ್ಣುಮನುಸ್ಮರನ್ |
ಆತ್ಮಾನಂ ಪ್ರೋಕ್ಷಯೇದ್ಯಸ್ತು ಸರ್ವಪಾಪೈಃ ಪ್ರಮುಚ್ಯತೇ || (ವೈಖಾನಸವಚನ)

"ಭಕ್ತನು ವಿಷ್ಣುವನ್ನು ಸ್ಮರಿಸುತ್ತಾ ವಿಷ್ಣುಪಾದೋದಕದಿಂದ ತನ್ನನ್ನು ಪ್ರೋಕ್ಷಿಸಿಕೊಂಡರೆ ಸರ್ವಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು."

ವಿಷ್ಣುಪಾದಂ ಸಮಭ್ಯರ್ಚ್ಯ ತಸ್ಯ ಪಾದೋದಕಂ ಪರಮ್ |
ಧಾರಯೇಚ್ಛಿರಸಾ ಭಕ್ತ್ಯಾ ತತ್ತು ಗಂಗೋದಕೈಃ ಸಮಮ್ ||
ನ ಹಿ ತತ್ಸರ್ವತೀರ್ಥೇಷು ಸರಿತ್ಸು ಚ ನಿಮಜ್ಜನಾತ್ |
ಫಲಂ ಭವತಿ ವೈ ಪುತ್ರ ಯಾದೃಕ್ಪಾದಾಂಬುಧಾರಣಾತ್ || (ವಿಷ್ಣುಧರ್ಮೋತ್ತರ ವಚನ)

"ವಿಷ್ಣುವನ್ನು ಯಾವಾಗಲೂ ಭಕ್ತಿಯಿಂದ ಪೂಜಿಸಬೇಕು. ಉತ್ತಮವಾದ ವಿಷ್ಣುವಿನ ಪಾದೋದಕವನ್ನು ತಲೆಯಲ್ಲಿ ಧರಿಸಬೇಕು. ಹೀಗೆ ಧರಿಸುವ ವಿಷ್ಣುವಿನಪಾದೋದಕವು ಗಂಗೋದಕಗಳಿಗೆ ಸಮವಾದುದು. ತೀರ್ಥವನ್ನು ತಲೆಯಲ್ಲಿ ಧರಿಸುವುದರಿಂದ ಬರುವ ಫಲವು ಸರ್ವತೀರ್ಥಗಳಲ್ಲಿ ಸ್ನಾನದಿಂದ ಬರಲಾರದು."

ಯದ್ವೈವ ಪತಿತಂ ಮೂರ್ಧ್ನಿ ವಿಷ್ಣುಪಾದೋದಕಂ ನೃಣಾಮ್ ।
ತದ್ವೈವ ಪಿತರಸ್ತೇಷಾಂ ನೃತ್ಯಂತಿ ಪ್ರಪಿತಾಮಹಾಃ ॥
ಬ್ರಹ್ಮಾವರ್ತೇ ಚ ಕೇದಾರೇ ಕುರುಕ್ಷೇತ್ರೇ ತಥೈವ ಚ ।
ಗಂಗಾದ್ವಾರೇ ಕುಶಾವರ್ತೇ ಬಿಲ್ವಕೇ ನೀಲಪರ್ವತೇ ॥
ದಶಾಶ್ವಮೇಧೇ ಯತ್ಸ್ನಾನಂ ತಥಾ ಕುಶಜಲೇಷು ಚ ।
ಗಂಗಾಸಾಗರಯೋರ್ಮಧ್ಯೇ ತಥೈವೋತ್ತರಮಾನಸೇ ॥
ಸ್ನಾನಾತ್ಫಲಂ ಯದ್ಭವತಿ ತದ್ವೈ ಪಾದಾಂಬುಧಾರಣಾತ್ ।
ಅಪೇಯಂ ಪಿಬತೇ ಯಸ್ತು ಭುಂಕ್ತೇ ಯಚ್ಚಾಪ್ಯಭೋಜನಮ್ ॥
ಅಗಮ್ಯಾಗಾಮಿನೋ ಯೇಽಥಾಸದಾಚಾರಾಶ್ಚ ಯೇ ನರಾಃ ।
ತೇಽಪಿ ಪೂತಾ ಭವಂತ್ಯಾಶು ಯೇಷಾಂ ಪಾದಾಂಬು ಮೂರ್ಧನಿ ॥

"ಯಾವಾಗ ವಿಷ್ಣುಪಾದೋದಕವು ತಲೆಯಲ್ಲಿ ಬೀಳುತ್ತದೆಯೋ ಆ ಕ್ಷಣದಲ್ಲಿಯೇ ಅವನ ಪಿತೃಗಳು ಪಿತಾಮಹ ಮುಂತಾದವರು ಕುಣಿಯಲು ಆರಂಭಿಸುವರು."

"ಬ್ರಹ್ಮಾವರ್ತ, ಕೇದಾರ, ಕುರುಕ್ಷೇತ್ರ, ಗಂಗಾದ್ವಾರ, ಕುಶಾವರ್ತ, ಬಿಲ್ವಕ, ನೀಲಪರ್ವತ, ದಶಾಶ್ವಮೇಧ, ಕುಶಶರ, ಗಂಗಾಸಾಗರ ಸಂಗಮಸ್ಥಳ, ಉತ್ತರಮಾನಸ ಮುಂತಾದ ಪರಮಪಾವನ ಕ್ಷೇತ್ರಗಳಲ್ಲಿ ಸ್ನಾನವನ್ನು ಮಾಡಿದ್ದರಿಂದ ಬರುವ ಫಲವು ವಿಷ್ಣುಪಾದೋದಕವನ್ನು ತಲೆಯಲ್ಲಿ ಧರಿಸುವುದರಿಂದ ಬರುತ್ತದೆ."

"ಮದ್ಯ ಮುಂತಾದವುಗಳನ್ನು ಕುಡಿಯುತ್ತಿರುವವನೂ, ತಿನ್ನುವುದಕ್ಕೆ ಯೋಗ್ಯವಲ್ಲದ ವಸ್ತುಗಳನ್ನು ತಿನ್ನುತ್ತಿರುವವನೂ, ಸಂಗಕ್ಕೆ ಅಯೋಗ್ಯರಾಗಿರುವ ಸ್ತ್ರೀಯರ ಸಂಗವನ್ನು ಮಾಡುತ್ತಿರುವವನೂ, ದುರಾಚಾರದಿಂದ ಯುಕ್ತನಾಗಿರುವವನೂ, ಇವರೆಲ್ಲರೂ ವಿಷ್ಣುವಿನ ಪಾದೋದಕವನ್ನು ತಲೆಯಲ್ಲಿ ಧರಿಸಿದ್ದರಿಂದ ಪರಿಶುದ್ಧರಾಗುವರು."

ತಪ್ತಕೃಚ್ಛ್ರಾನ್ಮಹಾಕೃಚ್ಛ್ರಾತ್ಪಂಚಗವ್ಯಾದಿ ಶಿಷ್ಯತೇ ।
ಚಾಂದ್ರಾಯಣಾತ್ಸ್ವಕೃಚ್ಛ್ರಾತ್ತಾತಕಾದಪಿ ಸುವ್ರತ ॥

"ತೀರ್ಥವನ್ನು ತಲೆಯಲ್ಲಿ ಧರಿಸುವುದು ತಪ್ತಕೃಚ್ಛ್ರದಿಂದಲೂ, ಮಹಾಕೃಚ್ಛ್ರ, ಪಂಚಗವ್ಯ, ಚಾಂದ್ರಾಯಣ, ಸರ್ವಕೃಚ್ಛ್ರ ಮುಂತಾದ ಪ್ರಾಯಶ್ಚಿತ್ತಗಳಿಗಿಂತ ಉತ್ತಮವೆನಿಸುತ್ತದೆ."

ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ಯೋ ವಹೇಚ್ಛಿರಸಾ ನಿತ್ಯಂ ಶಾಲಗ್ರಾಮಶಿಲಾಜಲಮ್ ॥ (ಹಾರೀತರ ವಚನ)

"ಯಾವನು ಯಾವಾಗಲೂ ಶಾಲಿಗ್ರಾಮ ಶಿಲೆಗೆ ಅಭಿಷೇಕ ಮಾಡಿದ ಜಲವನ್ನು ತಲೆಯಲ್ಲಿ ಧರಿಸುವನೋ, ಅವನು ಸರ್ವತೀರ್ಥಗಳಲ್ಲಿ ಸ್ನಾನ ಮಾಡಿದವನೂ ಸರ್ವಯಜ್ಞಗಳಲ್ಲಿ ದೀಕ್ಷಿತನೂ ಆಗುವನು."

ಪಂಚಗವ್ಯಸಹಸ್ರೈಸ್ತು ಪ್ರಾಶಿತೈಃ ಕಿಂ ಪ್ರಯೋಜನಮ್ ।
ಬಹುಚಕ್ರಸಮಾಯುಕ್ತಂ ದ್ವಾರಕಾಪುರವಾಸಿನಮ್ ॥
ಸ್ನಾಪಯಿತ್ವಾ ತು ತತ್ತೋಯಂ ಪಿಬೇಚ್ಚಾನಮವಾಪ್ನುಯಾತ್ ।
ಆಸೀನೋ ವಾ ಶಯಾನೋ ವಾ ಯತ್ರ ಕುತ್ರ ಚ ತಿಷ್ಠತಿ ॥
ಸಮಾಗತೋ ಹರೇಸ್ತೀರ್ಥಂ ಪ್ರಾಶಯೇದವಿಚಾರಯನ್ ।

"ಒಂದು ಸಾವಿರಸಲ ಪಂಚಗವ್ಯವನ್ನು ಕುಡಿದದ್ದರಿಂದ ಪ್ರಯೋಜನವೇನು? ಅಸಂಖ್ಯ ಚಕ್ರಗಳಿಂದ ಯುಕ್ತವಾಗಿರುವ ದ್ವಾರಕೆಯಲ್ಲಿರುವ ಚಕ್ರಾಂಕಿತವನ್ನು ಸ್ನಾನ ಮಾಡಿಸಿ ಆ ಜಲವನ್ನು ಕುಡಿಯಬೇಕು. ಅವನಿಗೆ ಜ್ಞಾನವು ಬರುತ್ತದೆ. ಕುಳಿತಿದ್ದರೂ, ಮಲಗಿದ್ದರೂ ಎಲ್ಲೆಲ್ಲಿದ್ದರೂ ವಿಚಾರವನ್ನು ಮಾಡದಂತೆ ತೀರ್ಥವನ್ನು ಕುಡಿಯಬೇಕು."

ವಿಷ್ಣುಪಾದೋದಕಂ ಪುಣ್ಯಂ ಪ್ರಾಶಯೇದ್ಯೋ ದಿನೇ ದಿನೇ |
ದ್ವಾದಶಾಬ್ದೋಪವಾಸಸ್ಯ ಫಲಮಾಪ್ನೋತ್ಯಸಂಶಯಃ ||

"ದಿವ್ಯವಾದ ವಿಷ್ಣುಪಾದೋದಕವನ್ನು ಪ್ರತಿದಿನದಲ್ಲಿಯೂ ಕುಡಿಯುವವನು ಹನ್ನೆರಡು ವರ್ಷಗಳಲ್ಲಿ ಉಪವಾಸವನ್ನು ಮಾಡಿದವನಿಗೆ ಸಮಾನನಾಗುವನು. ಈ ವಿಷಯದಲ್ಲಿ ಸಂಶಯವಿಲ್ಲ."

ಅಸತೀಕಥನಂ ಹಿಂಸಾ ಅಭಕ್ಷ್ಯಾಣಾಂ ಚ ಭಕ್ಷಣಮ್ |
ಸಾಲಿಗ್ರಾಮಜಲಂ ಪೀತ್ವಾ ಸರ್ವಂ ದಹತಿ ತತ್ಕ್ಷಣಾತ್ ||

"ವ್ಯಭಿಚಾರಿಣಿಯರ ಮಾತುಗಳು, ಹಿಂಸೆ, ಅಭಕ್ಷ್ಯಭಕ್ಷಣ ಮುಂತಾದ ಎಲ್ಲಾ ದೋಷಗಳೂ ಶಾಲಿಗ್ರಾಮ ಶಿಲಾತೀರ್ಥವನ್ನು ಕುಡಿದ ಕೂಡಲೇ ಭಸ್ಮವಾಗುತ್ತದೆ."

ಜಲೇ ಚ ಗಾಂಗಂ ತುಲಸೀವಿಮಿಶ್ರಿತಂ
ಪಾದೋದಕಂ ಚಕ್ರಶಿಲಾ ಸಮುದ್ಭವಮ್ |
ನಿತ್ಯಂ ತ್ರಿಸಂಧ್ಯಂ ಪಿಬತೇ ಚ ಭಕ್ತ್ಯಾ
ಧನ್ಯೋ ಭವೇದ್ಧರ್ಮಬಹಿಷ್ಕೃತೋಽಪಿ ||

"ನೀರುಗಳಲ್ಲಿ ಗಂಗಾಜಲವೂ ಚಕ್ರಾಂಕಿತ ಶಿಲೆಗೆ ಅಭಿಷೇಕ ಮಾಡಿದ ಜಲವೂ ವಿಷ್ಣುಪಾದೋದಕವೆನಿಸುತ್ತದೆ. ಈ ವಿಷ್ಣುಪಾದೋದಕವನ್ನು ಪ್ರತಿದಿನದಲ್ಲಿಯೂ ಮೂರು ವೇಳೆಗಳಲ್ಲಿ ಸ್ವೀಕರಿಸುವವನು ಸರ್ವಧರ್ಮಬಹಿಷ್ಕೃತನಾಗಿದ್ದರೂ ಧನ್ಯನೆನಿಸುವನ."

## ತೀರ್ಥಮಹಿಮೆ

ತ್ರಿರಾತ್ರಫಲದಾ ನದ್ಯೋ ಯಾಃ ಕಾಶ್ಚಿದಸಯುದ್ರಗಾಃ |
ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ||
ಷಣ್ಮಾಸಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ |
ವಿಷ್ಣುಪಾದೋದಕಸ್ಯೈತಾಃ ಕಲಾಂ ನಾರ್ಹಂತಿ ಷೋಡಶೀಮ್ || (ಶ್ರೀಮದಾಚಾರ್ಯರ ವಚನ)

"ಸಮುದ್ರದಲ್ಲಿ ಸಾಕ್ಷಾತ್ತಾಗಿ ಸೇರದಿರುವ ಕೆಲವು ನದಿಗಳಿವೆ. ಈ ನದಿಗಳಲ್ಲಿ ಸ್ನಾನವನ್ನು ಮಾಡಿದರೆ ಮೂರು ದಿನಗಳಲ್ಲಿ ಸ್ನಾನವನ್ನು ಮಾಡಿದ್ದರಿಂದ ಬರುವ ಫಲವು ಬರುತ್ತದೆ. ಸಮುದ್ರದಲ್ಲಿ ಸಾಕ್ಷಾತ್ತಾಗಿ ಸೇರುವ ನದಿಗಳಲ್ಲಿ ಒಮ್ಮೆ ಸ್ನಾನವನ್ನು ಮಾಡಿದರೆ ಹದಿನೈದು ದಿನಗಳಲ್ಲಿ ಸ್ನಾನವನ್ನು ಮಾಡಿದ ಫಲವು ಬರುತ್ತದೆ. ಸಮುದ್ರದಲ್ಲಿ ಒಮ್ಮೆ ಸ್ನಾನವನ್ನು ಮಾಡಿದರೆ ಒಂದು ತಿಂಗಳಿನಲ್ಲಿ ಸ್ನಾನ ಮಾಡಿದ ಫಲವು ಬರುತ್ತದೆ. ಗೋದಾವರಿಯಲ್ಲಿ ಒಮ್ಮೆ ಸ್ನಾನವನ್ನು ಮಾಡಿದರೆ ಆರು ತಿಂಗಳುಗಳಲ್ಲಿ ಸ್ನಾನವನ್ನು ಮಾಡಿದ ಫಲವೂ, ಗಂಗೆಯಲ್ಲಿ ಒಮ್ಮೆ ಸ್ನಾನವನ್ನು ಮಾಡಿದರೆ ಒಂದು ವರ್ಷದಲ್ಲಿ ಸ್ನಾನವನ್ನು ಮಾಡಿದ ಫಲವೂ ಬರುತ್ತದೆ. ಆದರೆ ವಿಷ್ಣುಪಾದೋದಕದಲ್ಲಿ ಸ್ನಾನವನ್ನು ಮಾಡಿದ್ದರಿಂದ ಬರುವ ಫಲದಲ್ಲಿ ಹದಿನಾರರಲ್ಲಿ ಒಂದು ಭಾಗವೂ ಇಷ್ಟು ಫಲಗಳನ್ನು ಒಟ್ಟುಗೂಡಿಸಿದರೂ ಆಗಲಾರದು.

ಗಂಗಾಪ್ರಯಾಗಗಯಪುಷ್ಕರನೈಮಿಷಾಣಿ
ಸಂಸೇವಿತಾನಿ ಬಹುಶಃ ಕುರುಜಾಂಗಲಾನಿ |
ಕಾಲೇನ ತೀರ್ಥಸಲಿಲಾನಿ ಪುನಂತಿ ಪಾಪಂ
ಪಾದೋದಕಂ ಭಗವತಃ ಪ್ರಪುನಾತಿ ಸದ್ಯಃ ||

"ಗಂಗಾ, ಪ್ರಯಾಗ, ಗಯ, ಪುಷ್ಕರ, ನೈಮಿಷಾರಣ್ಯ, ಕುರುಜಾಂಗಲ ಮುಂತಾದ ತೀರ್ಥಗಳನ್ನು ಅನೇಕ ಸಂದರ್ಭಗಳಲ್ಲಿ ಸೇವಿಸಿದರೆ ಪಾಪಗಳು ಹೋಗುತ್ತವೆ. ವಿಷ್ಣುಪಾದೋದಕವನ್ನು ಸೇವಿಸಿದ ಕೂಡಲೇ ಎಲ್ಲಾ ಪಾಪಗಳೂ ಹೋಗುತ್ತವೆ"

ಯಾನಿ ಕಾನಿ ಚ ತೀರ್ಥಾನಿ ಬ್ರಹ್ಮಾಂಡಾಂತರ್ಗತಾನಿ ವೈ |
ವಿಷ್ಣುಪಾದೋದಕಸ್ಯೈತೇ ಕಲಾಂ ನಾರ್ಹಂತಿ ಷೋಡಶೀಮ್ ||

"ಬ್ರಹ್ಮಾಂಡದ ಒಳಗೆ ಇರುವ ಎಲ್ಲಾ ತೀರ್ಥಗಳೂ ವಿಷ್ಣುಪಾದೋದಕದ ಹದಿನಾರನೆಯ ಒಂದು ಭಾಗಕ್ಕೂ ಸಮವಾಗಲಾರವು."

ಆಶೌಚಂ ನೈವ ವಿದ್ಯೇತ ಸೂತಕೇ ಮೃತಕೇ ಮೃತಕೇ ತಥಾ |
ಯೇಷಾಂ ಪಾದೋದಕಂ ಮೂರ್ಧ್ನಿ ಧಾರಣಂ ಯೇ ಪ್ರಕುರ್ವತೇ ||
ಗೃಹೇ ಯಸ್ಮಿನ್ ಪ್ರಸೂತಾ ಸ್ತ್ರೀ ಶವೋ ವಾಽಸ್ಪೃಶ್ಯ ಏವ ವಾ |
ಉಕ್ಷಂತಃ ಸೋಽಪಿ ಪಾದಾಂಬುಬಿಂದುಭಿಃ ಶುದ್ಧಿಮಾಪ್ನುಯಾತ್ ||
ಅಂತ್ಯಕಾಲೇ ಚ ಯಸ್ಯಾಸ್ಯೇ ದೀಯತೇ ಪಾದಯೋರ್ಜಲಮ್ |
ಸೋಽಪಿ ಸದ್ಗತಿಮಾಪ್ನೋತಿ ಯದ್ಯಾಚಾರಬಹಿಷ್ಕೃತಃ || (ಪಾದ್ಮವಚನ)

"ಶ್ರೀವಿಷ್ಣುಪಾದೋದಕವನ್ನು ಯಾವನು ಶಿರಸ್ಸಿನಲ್ಲಿ ಧರಿಸುವನೋ ಅವನಿಗೆ ಪ್ರಸವ, ಮರಣಗಳಿಂದ ಏರ್ಪಡುವ ಆಶೌಚವಿಲ್ಲ. ವಿಷ್ಣುಪಾದೋದಕದ ಬಿಂದುಗಳಿಂದ ಪ್ರಸವಿಸಿದ ಸ್ತ್ರೀಯೂ ಶವವೂ ಅಸ್ಪೃಶರಾಗಿದ್ದರೂ ಶುದ್ಧರಾಗುವರು. ಅಂತ್ಯಕಾಲದಲ್ಲಿ ವಿಷ್ಣುಪಾದೋದಕವನ್ನು ಕುಡಿಯುವವನು ಎಲ್ಲಾ ಆಚಾರಗಳಿಂದಲೂ ಭ್ರಷ್ಟನಾಗಿದ್ದರೂ ಸದ್ಗತಿಯನ್ನು ಪಡೆಯುನು."

## ವಿಷ್ಣ್ವರ್ಪಿತಸ್ವೀಕಾರ ಫಲ

ಯಥಾ ಪಾದೋದಕಂ ವಿಷ್ಣೋರ್ನಿರ್ಮಾಲ್ಯಂ ಚಾನುಲೇಪನಮ್ |
ನೈವೇದ್ಯಂ ಧೂಪಶೇಷಶ್ಚ ಆರಾರ್ತಿಕಶ್ಚ ತಥಾ ಹರೇಃ ||
ತುಲಸ್ಯಾಸ್ತು ರಜೋ ಜುಷ್ಟಂ ನೈವೇದ್ಯಸ್ಯ ಚ ಭಕ್ಷಣಮ್ |
ನಿರ್ಮಾಲ್ಯಂ ಶಿರಸಾ ಧಾರ್ಯಂ ಮಹಾಪಾತಕನಾಶನಮ್ || (ಶ್ರೀಮದಾಚಾರ್ಯರ ವಚನ)

ವಿಷ್ಣುವಿನ ಪಾದೋದಕವನ್ನು ಧರಿಸಿದಂತೆ ನಿರ್ಮಾಲ್ಯವನ್ನೂ, ಅನುಲೇಪನವನ್ನೂ ಧರಿಸಬೇಕು. ಶ್ರೀಹರಿಗೆ ಸಮರ್ಪಿಸಿದ ನೈವೇದ್ಯವನ್ನೂ, ಧೂಪದ ಅಂಗಾರವನ್ನೂ, ಆರತಿಯನ್ನೂ ಸ್ವೀಕರಿಸಬೇಕು. ತುಳಸಿಯ ಧೂಳಿಯನ್ನೂ ನೈವೇದ್ಯ ಭಕ್ಷಣವನ್ನೂ ಮಾಡಬೇಕು. ನಿರ್ಮಾಲ್ಯ ತುಳಸಿಯನ್ನು ತಲೆಯಲ್ಲಿ ಧರಿಸಬೇಕು. ಇದು ಮಹಾಪಾತಕಗಳನ್ನು ಪರಿಹರಿಸುತ್ತದೆ.

ತ್ಯಕ್ತಪುಷ್ಪಾಣಿ ಶಿರಸಿ ಧಾರಯೇತ್ಕರ್ಣಯೋರಪಿ |
ಜಿಘ್ರನ್ ಘ್ರಾಣಾದಿನಾ ಶ್ಲೋಕಾನ್ ಪ್ರಮಾಣಾಯ ವದಾಮಿದಃ ||
ನಿರ್ಮಾಲ್ಯಂ ವಾಸುದೇವಸ್ಯ ಕರ್ಣಯೋರ್ಮೂರ್ಧ್ನಿ ವಾ ಗಲೇ |
ತುಲಸೀಂ ತು ವಿಶೇಷೇಣ ಯಾಮ್ಯಾಃ ಕಿಂ ತಸ್ಯ ಕುರ್ವತೇ ||

ಪೂರ್ವವಿದ್ಧಾಂ ಯಥಾ ನಂದಾಂ ಶತಜನ್ಮಾರ್ಜಿತಂ ತಥಾ |
ತಥಾ ದಹತಿ ಪಾಪಾನಿ ತುಲಸೀ ಮೂರ್ಧ್ನಿಸಂಸ್ಥಿತಾ || (ವಿಷ್ಣುತೀರ್ಥೀಯ ವಚನ)

"ಶ್ರೀಹರಿಯಿಂದ ಕೊಡಲ್ಪಟ್ಟ ಪುಷ್ಪಗಳನ್ನು ತಲೆಯಲ್ಲಿಯೂ ಎರಡು ಕಿವಿಗಳಲ್ಲಿಯೂ ಧರಿಸಬೇಕು. ಆ ಪುಷ್ಪಗಳನ್ನು ಮೂಸುತ್ತಾ ಮುಂದೆ ಹೇಳುವ ಶ್ಲೋಕಗಳನ್ನು ಹೇಳಬೇಕು. ಪ್ರಮಾಣಕ್ಕಾಗಿ ಆ ಶ್ಲೋಕಗಳನ್ನು ಸ್ಮರಿಸಿರಿ. "ವಾಸುದೇವನ ನಿರ್ಮಾಲ್ಯವನ್ನು ಎರಡು" ಕಿವಿಗಳಲ್ಲಿಯೂ, ಕಂಠದಲ್ಲಿಯೂ ಧರಿಸಬೇಕು. ವಿಶೇಷವಾಗಿ ತುಲಸಿಯನ್ನು ಧರಿಸಬೇಕು. ಅವನಿಗೆ ಯಮದೂತರು ಏನನ್ನು ಮಾಡಲು ಶಕ್ತರು. ಅಷ್ಟಮೀ ವಿದ್ಧವಾದ ನವಮೀ ತಿಥಿಯು ನೂರು ಜನ್ಮಗಳಲ್ಲಿ ಮಾಡಿರುವ ಪಾಪಗಳನ್ನೂ ಹೇಗೆ ಪರಿಹರಿಸುತ್ತದೆಯೋ ಅದರಂತೆ ತುಲಸಿಯು ತಲೆಯಲ್ಲಿದ್ದರೆ ಎಲ್ಲಾ ಪಾಪಗಳನ್ನೂ ಪರಿಹರಿಸುತ್ತದೆ."

ತುಲಸೀದಲಜಾಂ ಮಾಲಾಂ ಕೃಷ್ಣೋ ಜುಷ್ಟಾಂ ತು ಯೋ ವಹೇತ್ |
ಪದೇ ಪದೇಽಶ್ವಮೇಧಾನಾಂ ದಶಾನಾಂ ಲಭತೇ ಫಲಮ್ || (ಪಾದ್ಮ ವಚನ)

"ಶ್ರೀಕೃಷ್ಣದೇವನ ನಿರ್ಮಾಲ್ಯವಾಗಿರುವ ತುಲಸೀದಲಗಳ ಮಾಲೆಯನ್ನು ಯಾವನು ಕಂಠದಲ್ಲಿ ಧರಿಸುವನೊ ಅವನು ಒಂದೊಂದು ಹೆಜ್ಜೆಗೂ ಹತ್ತು ಅಶ್ವಮೇಧಯಾಗಗಳ ಫಲವನ್ನು ಪಡೆಯುವನು."

ತುಲಸೀದಲಜಾಂ ಮಾಲಾಂ ಕಂಠಸ್ಥಾಂ ಕುರುತೇ ಚ ಯಃ |
ತಸ್ಯ ನಶ್ಯಂತಿ ಪಾಪಾನಿ ಸಿಂಹತ್ರಸ್ತಾ ಇವ ದ್ವಿಪಾಃ ||

"ತುಲಸೀದಲಗಳಿಂದ ಮಾಡಲ್ಪಟ್ಟ ಮಾಲೆಯನ್ನು ಕಿವಿಗಳಲ್ಲಿ ಜೋಲಾಡಿಸುವವನ ಪಾಪಗಳು, ಸಿಂಹದಿಂದ ಹೆದರಿದ ಆನೆಗಳು ಓಡಿದಂತೆ ದೂರವಾಗುವುವು."

ಧಾರಿತಾಂ ವಿಷ್ಣುಮಾಲಾಂ ತು ಚಂದನಾದ್ಯುಪಲೇಪನಮ್ |
ಅಹರ್ನಿಶಂ ಧಾರಯತಾಂ ನ ಪುನರ್ಜನನಂ ಭವೇತ್ || (ಪಂಚರಾತ್ರವಚನ)

"ವಿಷ್ಣುವಿಗೆ ಸಮರ್ಪಿಸಿದ ಮಾಲೆಯನ್ನೂ, ಗಂಧ ಮುಂತಾದ ಲೇಪಿಸುವ ವಸ್ತುಗಳನ್ನೂ, ಹಗಲಿರುಳು ಧರಿಸುವವರಿಗೆ ಪುನರ್ಜನ್ಮವಿಲ್ಲ."

ನೈವೇದ್ಯಮುದರೇ ವಿಷ್ಣೋರ್ಮುಖೇ ನಾಮ ತಥೈವ ಚ |
ಪಾದೋದಕಂ ಚ ನಿರ್ಮಾಲ್ಯಂ ಮಸ್ತಕೇ ಯಸ್ಯ ಸೋಽಚ್ಯುತಃ || (ಭಾರತ ವಚನ)

"ಹೊಟ್ಟೆಯೊಳಗೆ ಶ್ರೀಹರಿಯ ನೈವೇದ್ಯವೂ, ಮುಖದಲ್ಲಿ ಶ್ರೀಹರಿಯ ನಾಮವೂ, ತಲೆಯಲ್ಲಿ ವಿಷ್ಣುಪಾದೋದಕ ಮತ್ತು ನಿರ್ಮಾಲ್ಯಗಳೂ, ಇವೆಯೋ ಅವನು ಅಚ್ಯುತನ ವಿಶೇಷ ಸನ್ನಿದಾನಕ್ಕೆ ಪಾತ್ರನಾಗಿರವನು."

ವಿಷ್ಣೋರ್ನಿರ್ಮಾಲ್ಯಶೇಷೇಣ ಯೋಽಂಗಾನಿ ಪರಿಮಾರ್ಜಯೇತ್ |
ದುರಿತಾನಿ ವಿನಶ್ಯಂತಿ ವ್ಯಾಧಯೋ ಯಾಂತಿ ಖಂಡಶಃ || (ಶ್ರೀಮದಾಚಾರ್ಯರ ವಚನ)

ವಿಷ್ಣುವಿನ ನಿರ್ಮಾಲ್ಯಶೇಷದಿಂದ ದೇಹದ ಅಂಗಗಳನ್ನೆಲ್ಲವನ್ನೂ ಒರೆಸುವವನ ಪಾಪಗಳೆಲ್ಲವೂ ದೂರವಾಗುವುವು. ವ್ಯಾಧಿಗಳೆಲ್ಲವೂ ಖಂಡ ಖಂಡವಾಗಿ ಹೋಗುವುವು.

ನ ಭಯಂ ವಿದ್ಯತೇ ತಸ್ಯ ದಿವಿ ಭೌಮಾಂತರಿಕ್ಷಜಮ್ |
ವಿಷ್ಣೋರ್ಧೂಪಸ್ಯ ಶೇಷೇಣ ಯಸ್ಯಾಂಗಂ ಚ ವಿಲೇಪಿತಮ್ ||
ಭವಂತಿ ಸಂಪದಸ್ತಸ್ಯ ನಾಪದಸ್ತಸ್ಯ ದೇಹಿನಃ |
ಹರೇರ್ದತ್ತಾವಶೇಷೇಣ ಧೂಪೇನ ಪರಿಮಾರ್ಜತಿ ||

ಪಿಶಾಚತೋ ಭಯಂ ನಾಸ್ತಿ ನ ಚೋರಾದಿಭಯಂ ಕ್ವಚಿತ್ |
ಸೇಚಯಿತ್ವಾ ಹರೇರ್ಧೂಪಂ ನಿರ್ಮಾಲ್ಯಂ ಪಾದಯೋರ್ಜಲಮ್ ||
ದೀಪಂ ನೀರಾಜನಂ ಕೃತ್ವಾ ದೇವದೇವಸ್ಯ ಚಕ್ರಿಣಃ |
ವರ್ಷಕೋಟಿಶತಂ ಸಾಗ್ರಂ ವಿಷ್ಣುಲೋಕೇ ವಸೇಚ್ಚಿರಮ್ || (ಪಾದ್ಮ ವಚನ)

"ಯಾವನ ದೇಹವು ವಿಷ್ಣುವಿಗೆ ಸಮರ್ಪಿಸಿದ ಧೂಪದ ಶೇಷದಿಂದ ಅಂದರೆ ಅಂಗಾರದಿಂದ ಲೇಪಿಸಲ್ಪಟ್ಟಿತೋ ಅವನಿಗೆ ಆಕಾಶದಲ್ಲಿಯೂ, ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಯಾವ ವಿಧವಾದ ಭಯವೂ ಇಲ್ಲ. ಅವನಿಗೆ ಯಾವಾಗಲೂ ಸಂಪತ್ತುಗಳೇ ಏರ್ಪಡುತ್ತವೆ. ಆಪತ್ತುಗಳು ಏರ್ಪಡುವುದಿಲ್ಲ. ಪಿಶಾಚದ ಭಯವಿಲ್ಲ. ಕಳ್ಳರೇ ಮೊದಲಾದವರ ಭಯವಿಲ್ಲ. ಶ್ರೀಹರಿಗೆ ಧೂಪವನ್ನು ಸಮರ್ಪಿಸಿ ಪಾದಗಳಿಗೆ ಜಲವನ್ನು ಸಮರ್ಪಿಸಬೇಕು. ದೀಪವನ್ನೂ, ಆರತಿಯನ್ನೂ, ಮಾಡಬೇಕು. ಇದರಿಂದ ನೂರು ಕೋಟಿ ವರ್ಷಗಳವರೆಗೂ ಅದಕ್ಕಿಂತ ಅಧಿಕ ವರ್ಷಗಳವರೆಗೂ ವಿಷ್ಣುಲೋಕದಲ್ಲಿ ವಾಸಿಸುವನು."

ಕೌತುಕಂ ಶೃಣು ಮೇ ದೇವಿ ವಿಷ್ಣೋರ್ನಿರ್ಮಾಲ್ಯವಹ್ನಿನಾ |
ತಾಪಿತಂ ನಾಶಮಾಯಾತಿ ಬ್ರಹ್ಮಹತ್ಯಾದಿಪಾತಕಮ್ || (ಪಾದ್ಮ ವಚನ)

"ವಿಷ್ಣುವಿನ ನಿರ್ಮಾಲ್ಯವಾಗಿರುವ ವಹ್ನಿಯಿಂದ ಸುಡಲ್ಪಟ್ಟ ಬ್ರಹ್ಮಹತ್ಯಾ ಮುಂತಾದ ಪಾಪಗಳು ನಶಿಸುತ್ತವೆ."

ತ್ವಯೋಪಭುಕ್ತಸ್ರಗ್ಗಂಧವಾಸೋಲಂಕಾರಚರ್ಚಿತಾಃ |
ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ || (ಭಾಗವತ ವಚನ)

"ಓ ಶ್ರೀಹರಿಯೇ, ನಿನ್ನಿಂದ ಸ್ವೀಕರಿಸಲ್ಪಟ್ಟ ಮಾಲೆಗಳನ್ನು ಧರಿಸುವೆವು. ಗಂಧಗಳನ್ನು ಹಚ್ಚಿಕೊಳ್ಳುವೆವು. ಅಲಂಕಾರಗಳನ್ನು ಧರಿಸುವೆವು. ನಿನಗೆ ಸಮರ್ಪಿಸಿದ ವಸ್ತುಗಳನ್ನು ತಿನ್ನುವೆವು. ಹೀಗೆ ನಿನ್ನ ದಾಸರಾಗಿದ್ದು ನಿನ್ನ ಮಾಯೆಯನ್ನು ಜಯಿಸುವೆವು."

### ವಿಷ್ಣುವಿಗೆ ಅರ್ಪಿಸದಿದರುವ ವಸ್ತುಗಳನ್ನು ಸ್ವೀಕರಿಸಕೂಡದು

ಅದತ್ವಾ ವಿಷ್ಣವೇ ಕಿಂಚಿನ್ನೈವ ಭುಂಜೀತ ಕಿಂಚನ | (ಪಾದ್ಮಸಂಹಿತಾ)

"ವಿಷ್ಣುವಿಗೆ ಸಮರ್ಪಿಸದೆ ಯಾವ ವಸ್ತುವನ್ನೂ ತಿನ್ನಲೇ ಕೂಡದು."

ಅನರ್ಪಯಿತ್ವಾ ಗೋವಿಂದೇ ಯೋ ಭುಂಕ್ತೇ ಧರ್ಮವರ್ಜಿತಃ |
ಶ್ವಾನವಿಷ್ಠಾಸಮಂ ಚಾನ್ನಂ ನೀರಂ ಚ ಸುರಯಾ ಸಮಮ್ || (ಮನು ವಚನ)

"ಗೋವಿಂದನಿಗೆ ಸಮರ್ಪಿಸದೆ ಭೋಜನವನ್ನು ಮಾಡುವವನು ಧರ್ಮವರ್ಜಿತನೆನಿಸುವನು. ಅವನು ತಿಂದಿರುವ ಅನ್ನವು ನಾಯಿಯ ಅಮೇಧ್ಯಕ್ಕೂ ನೀರುಗಳು ಹೆಂಡಕ್ಕೂ ಸಮವಾಗುತ್ತವೆ."

ವಿಷ್ಣೋರನರ್ಪಿತಂ ಯತ್ತು ದೇವಾನಾಮರ್ಪಿತಂ ತು ಯತ್ |
ಮದ್ಯಮಾಂಸಸಮಂ ಪ್ರೋಕ್ತಂ ನ ಭುಂಜೀಯಾತ್ಕದಾಚನ || (ಹಾರೀತರ ವಚನ)

"ವಿಷ್ಣುವಿಗೆ ಸಮರ್ಪಿಸದೆ ದೇವತೆಗಳಿಗೆ ಸಮರ್ಪಿಸಿದ ಅನ್ನವು ಮದ್ಯಕ್ಕೂ ಮಾಂಸಕ್ಕೂ ಸಮವಾದುದು. ಅದನ್ನು ಯಾವಾಗಲೂ ತಿನ್ನಕೂಡದು."

ಇತರೇಷಾಂ ತು ದೇವಾನಾಂ ನಿರ್ಮಾಲ್ಯಂ ಗರ್ಹಿತಂ ಭವೇತ್ |
ಸಕೃದೇವ ಹಿ ಯೋಽಶ್ನಾತಿ ಬ್ರಾಹ್ಮಣೋ ಜ್ಞಾನದುರ್ಬಲಃ ||
ನಿರ್ಮಾಲ್ಯಂ ಶಂಕರಾದೀನಾಂ ಸ ಚಂಡಾಲೋ ಭವೇದ್ಧ್ರುವಮ್ | (ಪಾದ್ಮ ವಚನ)

"ಶ್ರೀಹರಿಯನ್ನು ಬಿಟ್ಟು ಇತರ ದೇವತೆಗಳ ನಿರ್ಮಾಲ್ಯವು ನಿಂದ್ಯವೆನಿಸುತ್ತದೆ. ಜ್ಞಾನದುರ್ಬಲನಾದ ಬ್ರಾಹ್ಮಣನು ಒಮ್ಮೆ ಶಂಕರ ಮುಂತಾದ ದೇವತೆಗಳ ನಿರ್ಮಾಲ್ಯವನ್ನು ಭಕ್ಷಣ ಮಾಡಿದರೆ ನಿಶ್ಚಯವಾಗಿಯೂ ಚಾಂಡಾಲನೆನಿಸುವನು."

ನಿರ್ಮಾಲ್ಯಮಿತರೇಷಾಂ ತು ಭುಕ್ತ್ವಾ ಚಾಂದ್ರಾಯಣಂ ಚರೇತ್ | (ವಾಸಿಷ್ಠಸಂಹಿತಾ ವಚನ)

"ವಿಷ್ಣುವನ್ನು ಬಿಟ್ಟು ಇತರ ದೇವತೆಗಳ ನಿರ್ಮಾಲ್ಯವನ್ನು ಭಕ್ಷಿಸಿದರೆ ಚಾಂದ್ರಾಯಣವನ್ನು ಮಾಡಬೇಕು."

ಅನರ್ಪಿತಂ ಹರೇರ್ಯತ್ತು ಭೋಕ್ತವ್ಯಂ ನೇತರೈಃ ಕ್ವಚಿತ್ |
ಅನ್ನಾದ್ಯಂ ವ್ಯಂಜನಂ ತೋಯಮಪೂಪಾದ್ಯಂ ಫಲಾದಿಕಮ್ ||
ಅನರ್ಪಿತಂ ಹರೇರ್ಯತ್ತು ಭುಂಕ್ತೇ ತಚ್ಚ ಸುರಾಸಮಮ್ || (ಸ್ಮೃತಿ ವಚನ)

"ಶ್ರೀಹರಿಗೆ ಸಮರ್ಪಿಸದ ಅನ್ನ ಮುಂತಾದವುಗಳನ್ನೂ, ಚಟ್ನಿ ಮುಂತಾದ ವ್ಯಂಜನಗಳನ್ನೂ, ಅಪೂಪ ಮುಂತಾದ ವಸ್ತುಗಳನ್ನೂ, ಹಣ್ಣು ಮುಂತಾದವುಗಳನ್ನೂ ತಿನ್ನಬಾರದು. ಅವುಗಳೆಲ್ಲವೂ ಹೆಂಡಕ್ಕೆ ಸಮವೆಂದು ತಿಳಿಯಬೇಕು."

ಅನ್ನಚ್ಚ ಫಲಮೂಲಾದ್ಯಂ ಭಕ್ಷ್ಯಂ ಪಾನಾದಿಕಂ ಚ ಯತ್ |
ಸ್ರಕ್ಚಂದನಾದಿ ತಾಂಬೂಲಂ ಯೋ ಭುಂಕ್ತೇ ಹರ್ಯನರ್ಪಿತಮ್ ||
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ |
ನಿಮಜ್ಜ್ಯ ನರಕೇ ಘೋರೇ ರೇತೋವಿಣ್ಮೂತ್ರಭುಗ್ಭವೇತ್ || (ಹಾರೀತರ ವಚನ)

"ಹಣ್ಣುಗಳು, ಗೆಡ್ಡೆ ಗೆಣಸು ಮುಂತಾದವುಗಳನ್ನೂ, ಭಕ್ಷ್ಯ ವಸ್ತುಗಳನ್ನೂ, ಕುಡಿಯುವ ವಸ್ತುಗಳನ್ನೂ, ಮಾಲೆಗಳನ್ನೂ, ಗಂಧ ಮುಂತಾದ ವಸ್ತುಗಳನ್ನೂ, ಶ್ರೀಹರಿಗೆ ಅರ್ಪಿಸದೆ ಸ್ವೀಕರಿಸಿದರೆ ಕಲ್ಪಕೋಟಿ ಸಹಸ್ರಗಳವರೆಗೂ ಕಲ್ಪಕೋಟಿಶತಗಳವರೆಗೂ ಘೋರವಾದ ನರಕದಲ್ಲಿ ಮುಳುಗಿ ಮುಂದಿನ ಜನ್ಮದಲ್ಲಿ ರೇತಸ್ಸನ್ನೂ, ಅಮೇಧ್ಯವನ್ನೂ, ಮೂತ್ರವನ್ನೂ ತಿನ್ನುವವನಾಗಿ ಹುಟ್ಟುವನು."

ಭುಕ್ತ್ವಾಽನ್ಯದೇವನೈವೇದ್ಯಂ ದ್ವಿಜಶ್ಚಾಂದ್ರಾಯಣಂ ಚರೇತ್ | (ಸ್ಮೃತಿ ವಚನ)

"ಅನ್ಯದೇವರ ನೈವೇದ್ಯವನ್ನು ತಿಂದರೆ ಚಾಂದ್ರಾಯಣ ವ್ರತವನ್ನು ಮಾಡಬೇಕು."

ತಾಂಬೂಲಂ ಗಂಧಪುಷ್ಪಾದ್ಯಮಪಃ ಕ್ಷೀರಂ ಘೃತಂ ಮಧು |
ಫಲಾನಿ ಭಕ್ಷ್ಯಭೋಜ್ಯಾನಿ ವಸ್ತ್ರಾದ್ಯಾಭರಣಾನಿ ಚ ||
ವಿಷ್ಣೋರನರ್ಪಿತಂ ಮೋದಾದ್ಯೋ ಭುಂಕ್ತೇ ಪಾಪಕೃತ್ತಮಃ |
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ||
ಕೃಮಿರಾಶಿಮಯೇ ಘೋರೇ ನರಕೇ ಪೂಯಶೋಣಿತೇ |
ನಿಮಜ್ಜ್ಯ ಪಿತೃಭಿಃ ಸಾರ್ಧಂ ಪಶ್ಚಾತ್ಕಲ್ಪಶತತ್ರಯಮ್ ||
ಕೃಮಿರ್ಭೂತ್ವಾ ಚ ವಿಷ್ಠಾಯಾಂ ತತಶ್ಚಂಡಾಲತಾಂ ವ್ರಜೇತ್ |
ತಸ್ಮಾದನರ್ಪಿತಂ ವಿಷ್ಣೋರ್ನ ಸೇವೇತ ಕದಾಚನ ||
ಪರಮಾಪದ್ಗತೋ ವಾಪಿ ಮಹೋತ್ಸವಯುತೋಽಪಿ ವಾ |
ಅನರ್ಪಿತಂ ಹರೇರ್ಯತ್ತು ಭುಕ್ತಂ ತಚ್ಚ ಸುರಾಸಮಮ್ || (ಆತ್ರೇಯವಚನ)

"ತಾಂಬೂಲ, ಗಂಧ, ಪುಷ್ಪ ಮುಂತಾದವುಗಳು, ನೀರು, ಹಾಲು, ತುಪ್ಪ, ಜೇನುತುಪ್ಪ, ಫಲಗಳು, ಭಕ್ಷ್ಯಭೋಜ್ಯ ಮುಂತಾದವುಗಳು ವಸ್ತ್ರ ಮುಂತಾದವುಗಳು, ಆಭರಣಗಳು, ವಿಷ್ಣುವಿಗೆ ಅರ್ಪಿಸದೆ ಮೋಹದಿಂದ ಯಾವನು

ಅನುಭವಿಸುವನೋ ಅವನು ಪಾಪಿಗಳಲ್ಲಿ ಉತ್ತಮನೆನಿಸುವನು. ಆ ಪಾಪಿಯು ಕಲ್ಪಕೋಟಿ ಸಹಸ್ರಗಳವರೆಗೂ, ಕಲ್ಪಕೋಟಿಶತಗಳವರೆಗೂ, ಘೋರವಾದ ಕ್ರಿಮಿರಾಶಿಮಯವಾಗಿರುವ ಮತ್ತು ಕೀವು ರಕ್ತಮಯವಾಗಿರುವ ನರಕದಲ್ಲಿ ಪಿತೃಗಳೊಡನೆ ಮುಳುಗಿ ಮೂರು ಶತಕಲ್ಪಗಳವರೆಗೆ ಅಮೇಧ್ಯದಲ್ಲಿ ಕ್ರಿಮಿಯಾಗುವನು. ಶ್ರೀಹರಿಗೆ ಸಮರ್ಪಿಸದ ವಸ್ತುವು ಹೆಂಡಕ್ಕೆ ಸಮವಾದುದು."

ನಿರ್ಮಾಲ್ಯಂ ಧೂಪಶೇಷಂ ತು ಯದನ್ನಾದ್ಯಂ ದಿವೌಕಸಾಮ್ |
ಉಪಭುಜ್ಯ ನರೋ ಯಾತಿ ಬ್ರಹ್ಮಹತ್ಯಾಂ ನ ಸಂಶಯಃ || (ಸಂಗ್ರಹ ವಚನ)

"ಇತರ ದೇವತೆಗಳ ನಿರ್ಮಾಲ್ಯ, ಧೂಪಶೇಷ, ಅನ್ನ ಮುಂತಾದ ವಸ್ತುಗಳು ಇವುಗಳನ್ನು ಸ್ವೀಕರಿಸುವವನು ಬ್ರಹ್ಮಹತ್ಯೆಯನ್ನು ಮಾಡಿದವನೆನಿಸುವನು. ಈ ವಿಷಯದಲ್ಲಿ ಸಂಶಯವಿಲ್ಲ."

ಭಗವದ್ಭುಕ್ತಮನ್ನಾದ್ಯಪರಿಜ್ಞಾನಾದ್ಯೋಽವಮನ್ಯತೇ |
ಸ ಯೋನಿಂ ಸೌಕರೀಂ ಪ್ರಾಪ್ಯ ಜಾಯತೇ ಶ್ವಶರೀರಭಾಕ್ || (ವಾಸಿಷ್ಠಸಂಹಿತಾ ವಚನ)

ಭಗವಂತನಿಗೆ ಸಮರ್ಪಿತವಾದ ಅನ್ನವನ್ನು ಅಜ್ಞಾನದಿಂದ ಅಪಮಾನ ಮಾಡುವವನು ಹೇಲು ಹಂದಿಯ ಜನ್ಮವನ್ನು ಪಡೆದು, ಕೊನೆಗೆ ನಾಯಿಯ ಜನ್ಮವನ್ನು ಪಡೆಯುವನು.

ಅವೈಷ್ಣವಾನ್ನಂ ಯತ್ಯನ್ನಂ ಪತಿತಾನ್ನಂ ತಥೈವ ಚ |
ಅನರ್ಪಿತಂ ತದಾ ವಿಷ್ಣೋಃ ಶ್ವಮಾಂಸಸದೃಶಂ ಭವೇತ್ ||
ಯಕ್ಷರಾಕ್ಷಸಭೂತಾನ್ನಂ ಸುರಾಮಾಂಸಂ ಚ ಗೃಂಜನಮ್ |
ಯೋಽಶ್ನಾತಿ ನಿರಯಂ ಘೋರಂ ಪೂಯಶೋಣಿತಭೋಜನಮ್ ||
ಶೂದ್ರಸ್ಪೃಷ್ಟಂ ಚ ತದ್ಧೃತಂ ಚ ಶೂದ್ರೇಣ ಚ ನಿಮಂತ್ರಿತಮ್ |
ತತ್ಪ್ರೇರಿತಂ ಚ ಪಕ್ವಂ ಚ ಶೂದ್ರಾನ್ನಂ ಷಡ್ವಿಧಂ ಸ್ಮೃತಮ್ ||
ಯತ್ಯನ್ನಂ ಯತಿಪಾತ್ರಸ್ಥಂ ಯತಿನಾ ಪ್ರೇರಿತಂ ತಥಾ |
ಅನ್ನತ್ರಯಂ ನ ಭುಂಜೀತ ಭುಕ್ತ್ವಾ ಚಾಂದ್ರಾಯಣಂ ಚರೇತ್ ||

ಅವೈಷ್ಣವರ ಅನ್ನವನ್ನೂ, ಯತಿಯ ಅನ್ನವನ್ನೂ, ಪತಿತನ ಅನ್ನವನ್ನೂ ವಿಷ್ಣುವಿಗೆ ಅರ್ಪಿತವಾಗದಿರುವ ಅನ್ನವನ್ನೂ, ತಿನ್ನಕೂಡದು. ಶ್ರೀಹರಿಗೆ ಅರ್ಪಿಸಲ್ಪಡದ ಅನ್ನವು ನಾಯಿಯ ಮಾಂಸಕ್ಕೆ ಸಮವೆನಿಸುತ್ತದೆ. ಯಕ್ಷರಿಗೂ ರಾಕ್ಷಸರಿಗೂ ಭೂತಗಳಿಗೂ ಅರ್ಪಿಸಲ್ಪಟ್ಟ ಅನ್ನವು, ಹೆಂಡಕ್ಕೂ ಮಾಂಸಕ್ಕೂ ಸಮವೆನಿಸುತ್ತದೆ. ಆ ಅನ್ನವನ್ನೂ, ಬೆಳ್ಳುಳ್ಳಿಯನ್ನೂ ತಿನ್ನುವವನು ಕೀವುಗಳನ್ನೂ ರಕ್ತಗಳನ್ನೂ ತಿನ್ನುವ ಘೋರವಾದ ನರಕವನ್ನು ಪಡೆಯುವನು.

(1) ಯತಿಗಳ ಪಾತ್ರೆಯಲ್ಲಿರುವ ಅನ್ನ (2) ಯತಿಗಳಿಂದ ಪ್ರೇರಿಸಲ್ಪಟ್ಟು ಕೊಡುವ ಅನ್ನ, ಈ ಎರಡು ಅನ್ನಗಳು ಯತ್ಯನ್ನವೆನಿಸುತ್ತವೆ. ಹಿಂದೆ ಹೇಳಿರುವ ಯತ್ಯನ್ನ, ಪತಿತಾನ್ನ ಎಂಬ ಅನ್ನಗಳನ್ನು ತಿನ್ನಕೂಡದು.

### ಶ್ರೀಹರಿಗೆ ಅರ್ಪಿತವಾದ ಅನ್ನವನ್ನೇ ತಿನ್ನಬೇಕು

ತತೋ ದೇವಸ್ಯ ದತ್ವಾ ತತ್ಸರ್ವಂ ದೇವಾಭ್ಯನುಜ್ಞಯಾ |
ಭುಂಜೀತ ತತ್ಪ್ರಸಾದಾನ್ನಂ ಯಾವತಾ ಕರ್ಮ ಲುಪ್ಯತೇ || (ವಿಷ್ಣುತೀರ್ಥೀಯ ವಚನ)

"ಆದ್ದರಿಂದ ಶ್ರೀಹರಿಗೆ ಎಲ್ಲಾ ವಸ್ತುಗಳನ್ನೂ ಸಮರ್ಪಿಸಬೇಕು. ಶ್ರೀಹರಿಯ ಅನುಮತಿಯನ್ನು ಪಡೆದು ಶ್ರೀಹರಿಪ್ರಸಾದವನ್ನು ತಿನ್ನಬೇಕು. ಇದರಿಂದ ಎಲ್ಲಾ ಪಾಪಕರ್ಮಗಳೂ ಲುಪ್ತವಾಗುವುವು.

ತಸ್ಮಾದ್ವಿಷ್ಣೋಃ ಪ್ರಸಾದಾನ್ನಂ ಸೇವಿತ್ವಾ ಮೋಕ್ಷಭಾಗ್ಭವೇತ್ | (ಪಾದ್ಮ ವಚನ)

"ಪರಬ್ರಹ್ಮರೂಪಿಯಾದ ನಾರಾಯಣನು ಬ್ರಾಹ್ಮಣರಿಗೆ ಪರದೇವತೆಯೆನಿಸುವನು. ಅವನ ನೈವೇದ್ಯಶೇಷವು ಪಾವನವೆನಿಸುತ್ತದೆ."

ವಿಷ್ಣೋರ್ನಿವೇದಿತಂ ಶುದ್ಧಂ ಮುನಿಭಿರ್ಭೋಜ್ಯಮುಚ್ಯತೇ | (ವಾಸಿಷ್ಠಸಂಹಿತಾ)

"ವಿಷ್ಣುವಿಗೆ ಸಮರ್ಪಿಸಲ್ಪಟ್ಟ ವಸ್ತುವು ಅತ್ಯಂತ ಪರಿಶುದ್ಧವಾದುದು. ಇದನ್ನು ಅವಶ್ಯವಾಗಿ ತಿನ್ನಬೇಕೆಂದು ಮುನಿಗಳು ಹೇಳುತ್ತಿರುವರು."

ನೈವೇದ್ಯಭೋಜನಂ ಶ್ರೇಯಃ ಸರ್ವೇಷಾಂ ಚ ಯಥಾರ್ಥವತ್ | (ಸಂಗ್ರಹ ವಚನ)

"ಶ್ರೀಹರಿಯ ನೈವೇದ್ಯವನ್ನು ಭಕ್ಷಿಸುವುದು ಸರ್ವರಿಗೂ ಶ್ರೇಯಸ್ಕರವಾದುದು."

ವೇದಶಾಸ್ತ್ರ ವಿನೋದೇನ ಪ್ರೀಣಯನ್ ಪುರುಷೋತ್ತಮಮ್ |
ಅಹಃ ಶೇಷಂ ನಯೇತ್ ಸಂಧ್ಯಾಮುಪಾಸೀತಾಽಥ ಪೂರ್ವವತ್ || 14 ||

ಋಗ್ವೇದ ಮೊದಲಾದ ವೇದಗಳು, ವೇದಾಂತ ಮೊದಲಾದ ಶಾಸ್ತ್ರಗಳು ಇವುಗಳ ಪಾಠಪ್ರವಚನ ವಿಮರ್ಶೆಯೊಂದಿಗೆ ಸರ್ವತುಷ್ಟನಾದ ಶ್ರೀಹರಿಯನ್ನು ಸಂತೋಷಪಡಿಸುತ್ತಾ, ಹಗಲನ್ನು ಕಳೆಯಬೇಕು. ಅನಂತರ ಸೂರ್ಯಾಸ್ತಕ್ಕಿಂತ ಮೊದಲು ಶಾಸ್ತ್ರೋಕ್ತರೀತಿಯಲ್ಲಿ ಸಂಧ್ಯಾವಂದನೆ ಮಾಡಬೇಕು.

ವಿಶೇಷ ವಿಚಾರ :- ಮಧ್ಯಾಹ್ನ ಭೋಜನಾನಂತರದ ಕರ್ತವ್ಯವನ್ನು ಶ್ರೀಮದಾಚಾರ್ಯರು ಇಲ್ಲಿ ಉಲ್ಲೇಖಿಸಿದ್ದಾರೆ. ಶ್ರವಣಮನನಾದಿಗಳನ್ನು ಬಿಟ್ಟು ಕ್ಷಣಕಾಲವೂ ವ್ಯರ್ಥವಾಗಿ ಕಾಲ ಕಳೆಯಬಾರದು. ಸದಾಕಾಲ ಹರಿವಾಯುಗುರುಗಳ, ಹರಿಭಕ್ತರಾದ ಮಹಾತ್ಮರ ಮಹಿಮೆಗಳಿಂದಲೂ ಶಿಷ್ಯರಾದ ಸತ್ಪುರುಷರೊಡನೆಯೂ, ಸನ್ಮಿತ್ರರೊಡನೆಯೂ, ಬಂಧುಗಳೊಡನೆಯೂ ಕಾಲವನ್ನು ಕಳೆಯಬೇಕು. ರಾತ್ರಿ ಅನಿವಾರ್ಯವಾದಷ್ಟು ಮಾತ್ರ ನಿದ್ರೆ ಮಾಡಬೇಕು. ಹಗಲು ನಿದ್ರೆ ಆಯುಷ್ಯವನ್ನು ಕಡಿಮೆ ಮಾಡುತ್ತದೆ. ಹಗಲಿನಲ್ಲಿ ಸ್ತ್ರೀ ಸಂಪರ್ಕ ಪುಣ್ಯವನ್ನು ನಾಶ ಮಾಡುತ್ತದೆ. ವ್ಯರ್ಥ ವಿವಾದ, ಪರನಿಂದೆ ಮುಂತಾದವುಗಳನ್ನು ಯಾವಾಗಲೂ ಮಾಡಬಾರದು -

ಆಯುಃ ಕ್ಷೀಣಾ ದಿವಾ ನಿದ್ರಾ ದಿವಾಸ್ತ್ರೀ ಪುಣ್ಯನಾಶಿನೀ |
ವೃಥಾವಿವಾದವಾಕ್ಯಾನಿ ಪರೀವಾದಾನ್ ತಥಾ ತ್ಯಜೇತ್ ||

ಸಾಯಂಕಾಲ ಸಂಧ್ಯಾವಂದನೆ ಸೂರ್ಯಾಸ್ತಮದ ಮುಂಚೆ ಮಾಡಬೇಕು. ಸಕಾಲದಲ್ಲಿ ಮಾಡಿದ ಸಂಧ್ಯಾವಂದನೆಯ ಫಲವನ್ನು ಸ್ಮೃತಿಕಾರರು ಈ ರೀತಿ ಹೇಳಿದ್ದಾರೆ -

ಅನೃತಂ ಮದ್ಯಗಂಧಂ ಚ ದಿವಾಸ್ವಾಪಂ ಚ ಮೈಥುನಮ್ |
ಪುನಾತಿ ವೃಷಲಸ್ನಾನಂ ಸಾಯಂ ಸಂಧ್ಯಾ ಬಹಿಃ ಕೃತಾ ||
ಬಹಿಃ ಸಂಧ್ಯಾ ಶತಗುಣಾ ಗರ್ತಪ್ರಶ್ರವಣಾದಿಷು |
ತೀರ್ಥೇ ಶತಗುಣಂ ಜ್ಞೇಯಂ ಸಹಸ್ರಂ ಜಾಹ್ನವೀಜಲೇ ||

ಸುಳ್ಳು, ಮದ್ಯಗಂಧಸೇವನೆ ಮತ್ತು ಹಗಲು ನಿದ್ರೆ, ಮೈಥುನದೋಷ, ಅಯೋಗ್ಯಾನ್ನ ಸ್ವೀಕಾರ ದೋಷಗಳನ್ನು ಮನೆಯಿಂದ ಹೊರಗೆ ಆಚರಿಸಲ್ಪಟ್ಟ ಸಾಯಂಸಂಧ್ಯಾವಂದನೆಯು ಪರಿಹರಿಸುತ್ತದೆ.

ಮನೆಯಿಂದ ಹೊರಗೆ ತುಲಸೀಬೃಂದಾವನದ ಮುಂದೆ ಅಥವಾ ಸರೋವರ, ನದೀ ಮುಂತಾದ ಪವಿತ್ರ ಸ್ಥಳಗಳಲ್ಲಿ ಸಾಯಂಸಂಧ್ಯಾವಂದನೆ ಮಾಡುವುದು ಮನೆಯಲ್ಲಿ ಮಾಡುವುದಕ್ಕಿಂತ ನೂರುಪಟ್ಟು ಹೆಚ್ಚಿನ ಫಲವನ್ನು ನೀಡುತ್ತದೆ. ಗಂಗಾಸನ್ನಿಧಾನದಲ್ಲಿ ಮಾಡುವುದು ಸಹಸ್ರಪಟ್ಟು ಫಲವನ್ನು ನೀಡುತ್ತದೆ.

ಅನಂತರ ಶಾಸ್ತ್ರೋಕ್ತಕ್ರಮದಿಂದ ವಿಷ್ಣುಪೂಜೆಯನ್ನು ಮಾಡಿ ಗಂಧಪುಷ್ಪಾಕ್ಷತೆ ಫಲಲನ್ನಾದಿಗಳನ್ನು ಭಗವಂತನಿಗೆ ಸಮರ್ಪಿಸಿ, ಔಪಾಸನ ವೈಶ್ವದೇವಗಳನ್ನು ಮಾಡಬೇಕು.

ರಾತ್ರಿಭೋಜನ :- ಅತಿಥಿ ಮುಂತಾದವರಿಗೆ ತೀರ್ಥಗಂಧಪುಷ್ಪಾಕ್ಷತೆಗಳನ್ನು ಕೊಟ್ಟು ಅನ್ನದಾನವನ್ನು ಮಾಡಬೇಕು. ಹರಿಸಮರ್ಪಿತವಾದ ಹಿತಕರ ಆಹಾರವನ್ನೇ ಸೇವಿಸಬೇಕು. ಎಳ್ಳಿನ ಮತ್ತು ಮೊಸರಿನ ಪದಾರ್ಥಗಳನ್ನು ಸೇವಿಸಬಾರದು.

ಗೃಹಸ್ಥಾಶ್ರಮಿಗೆ ಹಗಲು ರಾತ್ರಿಗಳಲ್ಲಿ ಎರಡು ಭೋಜನವು ವಿಹಿತವಾಗಿದೆ. ಇದು ಅಗ್ನಿಹೋತ್ರ ಸಮವಾದದ್ದು ಎಂದು ಸ್ಮೃತಿಕಾರರು ಉಲ್ಲೇಖಿಸಿದ್ದಾರೆ.

ಸಾಯಂಪ್ರಾತರ್ದ್ವಿಜಾತೀನಾಮಶನಂ ಶ್ರುತಿಚೋದಿತಮ್ |
ನಾಂತರಾ ಭೋಜನಂ ಕುರ್ಯಾತ್ ಅಗ್ನಿಹೋತ್ರಸಮೋ ವಿಧಿಃ ||

ರಾತ್ರಿಭೋಜನದಲ್ಲಿ ದಿಙ್ನಿಯಮ :-

ಆಯುಷ್ಯಂ ಪ್ರಾಙ್ಮುಖೋ ಭುಂಕ್ತೇ ಯಶಸ್ಯಂ ದಕ್ಷಿಣಾಮುಖಃ |
ಶ್ರಿಯೈ ಪ್ರತ್ಯಙ್ಮುಖೋ ಭುಂಕ್ತೇ ನ ಕದಾಚಿದುದಙ್ಮುಖಃ ||

ಆಯುಷ್ಯವನ್ನು ಬಯಸುವವನು ರಾತ್ರಿ ಪೂರ್ವಾಭಿಮುಖವಾಗಿಯೂ, ಯಶಸ್ಸನ್ನು ಬಯಸುವವನು ದಕ್ಷಿಣಾಭಿಮುಖವಾಗಿಯೂ, ಸಂಪತ್ತನ್ನು ಬಯಸುವವನು ಪಶ್ಚಿಮಾಭಿಮುಖವಾಗಿಯೂ ಭೋಜನ ಮಾಡಬೇಕು. (ದಕ್ಷಿಣದಿಕ್ಕಿಗೆ ಅಭಿಮುಖವಾಗಿ ಭೋಜನ ಮಾಡಬಾರದೆಂಬ ಧರ್ಮಶಾಸ್ತ್ರವಾಕ್ಯಗಳು, ಜೀವನ್ಮಾತೃಕನಾದ ವ್ಯಕ್ತಿಯ ಹಗಲಿನ ಭೋಜನಕ್ಕೆ ಸಂಬಂಧಿಸಿದೆ.)

ತಾಂಬೂಲಚರ್ವಣ :- ಹರಿಗರ್ಪಿತವಾದ ತಾಂಬೂಲವನ್ನು ಬ್ರಾಹ್ಮಣಾದಿಗಳಿಗೆ ಕೊಟ್ಟು ತಾನು ಸ್ವೀಕರಿಸಬೇಕು.

ಹಗಲು ಭೋಜನಾನಂತರ ಮತ್ತು ರಾತ್ರಿ ಭೋಜನಾನಂತರ ತಾಂಬೂಲಚರ್ವಣವು ಸಂಪತ್ತಿಗೆ ಕಾರಣವಾಗಿದೆ.

ಪರ್ಣಮೂಲೇ ಭವೇದ್ವ್ಯಾಧಿಃ ಪರ್ಣಾಗ್ರೇ ಪಾಪಸಂಭವಃ |
ಚೂರ್ಣಪರ್ಣಂ ವರ್ಜಯಿತ್ವಾ ತಾಂಬೂಲಂ ಖಾದಯೇದ್ಬುಧಃ ||

ವೀಳ್ಯದೆಲೆಯ ಬುಡದಲ್ಲಿ ವ್ಯಾಧಿ, ತುದಿಯಲ್ಲಿ ಪಾಪ, (ತುಂಡನ್ನು ಸ್ವೀಕರಿಸಿದಲ್ಲಿ ಆಯುಷ್ಯನಾಶ), ಆದುದರಿಂದ ಇವುಗಳನ್ನು ತೆಗೆದು ತಾಂಬೂಲವನ್ನು ಸ್ವೀಕರಿಸಬೇಕು.

ಯಾರು ಸ್ವೀಕರಿಸಬಾರದು? :-

ವಿದ್ಯಾಕಾಮೋಽಹನಿ ರಾತ್ರೌ ತಾಂಬೂಲಂ ತು ನ ಭಕ್ಷಯೇತ್ |
ಯತಿಶ್ಚ ಬ್ರಹ್ಮಚಾರೀ ಚ ವಿಧವಾ ಚ ರಜಸ್ವಲಾ ||

ವಿದ್ಯೆ ಅಪೇಕ್ಷಿಸುವವನು, ಯತಿ, ಬ್ರಹ್ಮಚಾರಿ, ವಿಧವೆ, ರಜಸ್ವಲೆ, ಇವರು ತಾಂಬೂಲವನ್ನು ಭಕ್ಷಿಸಬಾರದು.

ತಾಂಬೂಲವು ಯಾವ ಕಾಲದಲ್ಲಿ ನಿಷಿದ್ಧವಾಗಿದೆ? -

ಮಾತಾಪಿತ್ರೋಃ ಕ್ಷಯೇ ಶ್ರಾದ್ಧೇ ತಥೈವ ಮೃತಸೂತಕೇ |
ತಾಂಬೂಲಂ ಚರ್ವಯೇತ್ ಯಸ್ತು ಪಿತೃಹಾ ಸ ನಿಗದ್ಯತೇ ||

ಸೂತಕ, ಶ್ರಾದ್ಧ, ಕ್ಷಯದಿನಗಳಲ್ಲಿ (ದಶಮಿ, ಏಕಾದಶಿ ಹಾಗೂ ದ್ವಾದಶಿಗಳಲ್ಲಿ), ಹಗಲು ರಾತ್ರಿಗಳಲ್ಲೂ ತಾಂಬೂಲವನ್ನು ಸ್ವೀಕರಿಸಕೂಡದು.

ರಾತ್ರಿದೀಪ :- ಮನೆಯಲ್ಲಿ ಸೂರ್ಯಾಸ್ತಮಯದಿಂದ ಆರಂಭಿಸಿ, ಮರುದಿನ ಸೂರ್ಯೋದಯದವರೆಗೆ ದೀಪವನ್ನಿಟ್ಟರೆ

ದಾರಿದ್ರ್ಯದೋಷವು ಆತನಿಗೆ ಬರಲಾರದು. ದೀಪವನ್ನು ಪೂರ್ವಾಭಿಮುಖವಾಗಿಟ್ಟರೆ ಆಯುಸ್ಸು, ಉತ್ತರಾಭಿಮುಖವಾಗಿ ಸಂಪತ್ತು, ಪಶ್ಚಿಮಾಭಿಮುಖವಾಗಿ ದುಃಖ, ದಕ್ಷಿಣಾಭಿಮುಖವಾಗಿ ಇಟ್ಟರೆ ಹಾನಿಯು ಸಂಭವಿಸುವುದು.

**ಯಾಮಾತ್ರರತ ಏವಾಥ ಸ್ವಪೇದ್ ಧ್ಯಾಯನ್ ಜನಾರ್ದನಮ್ |**
**ಅಂತರಾಲೇ ತತೋ ಬುದ್ಧ್ವಾ ಸ್ಮರೇತ ಬಹುಶೋ ಹರಿಮ್ || 15 ||**

ರಾತ್ರಿ ಒಂದು ಯಾಮದ ನಂತರ ದುಷ್ಟಜನ ಸಂಹಾರಕನಾದ ಪರಮಾತ್ಮನನ್ನು ಧ್ಯಾನಿಸುತ್ತಾ ಮಲಗಬೇಕು. ನಿದ್ರೆಯ ಮಧ್ಯದಲ್ಲಿ ಎಚ್ಚರವಾದಾಗಲೂ ಅನೇಕ ಬಾರಿ ಅನಂತರೂಪನಾದ ಶ್ರೀಹರಿಯನ್ನು ಸ್ಮರಿಸಬೇಕು.

ವಿಶೇಷ ವಿಚಾರ :- ರಾತ್ರಿ ಸುಮಾರು ಒಂಬತ್ತುಗಂಟೆಯ ನಂತರ ಕೈಕಾಲುಗಳನ್ನು ತೊಳೆದುಕೊಂಡು ಶ್ರೀಹರಿಯನ್ನು ಚಿಂತಿಸುತ್ತಾ, ರಾತ್ರಿಸೂಕ್ತ ಪಠಿಸಿ, ಹರಿವಾಯುಗುರುಗಳನ್ನು ನಮಸ್ಕರಿಸಿ, ಅಗಸ್ತ್ಯ, ಶಂಭು, ಮುಚುಕುಂದ, ಕಪಿಲ, ಆಸ್ತೀಕರನ್ನು ಸ್ಮರಿಸಿ ನಿದ್ರೆ ಮಾಡಬೇಕು.

ಅಗಸ್ತ್ಯೋ ಮಾಧವಶ್ಚೈವ ಮುಚುಕುಂದೋ ಮಹಾಮುನಿಃ |
ಕಪಿಲೋ ಮುನಿರಾಸ್ತೀಕಃ ಪಂಚೈತೇ ಸುಖಶಾಯಿನಃ ||

**ಶಯನಕಾಲದಲ್ಲಿ ದಿಙ್ನಿಯಮ :-**

ಪ್ರಾಕ್ಶಿರಾಃ ಶಯನೇ ವಿದ್ಯಾಂ ಧರ್ಮಮಾಯುಶ್ಚ ದಕ್ಷಿಣೇ |
ಪಶ್ಚಿಮೇ ಪ್ರಬಲಾ ಚಿಂತಾ ಹಾನಿರ್ಮೃತ್ಯುರಥೋತ್ತರೇ ||

ಪೂರ್ವದಿಕ್ಕಿಗೆ ತಲೆ ಮಾಡಿ ಮಲಗುವವನು ವಿದ್ಯೆಯನ್ನೂ, ದಕ್ಷಿಣ ದಿಕ್ಕಿಗೆ ತಲೆಯಿಟ್ಟು ಮಲಗುವವನು ಧರ್ಮ ಮತ್ತು ಆಯುಷ್ಯವನ್ನು, ಪಶ್ಚಿಮ ದಿಕ್ಕಿಗೆ ಮಲಗುವವನು ಪ್ರಬಲ ಚಿಂತೆಯನ್ನೂ, ಉತ್ತರದಿಕ್ಕಿಗೆ ತಲೆ ಹಾಕಿ ಮಲಗುವವನು ಹಾನಿ ಮತ್ತು ಮೃತ್ಯುವನ್ನು ಪಡೆಯುವವನು.

ಸ್ವಗೃಹೇ ಪ್ರಾಕ್ಶಿರಾಃ ಶೇತೇ ಶ್ವಾಶುರ್ಯೇ ದಕ್ಷಿಣೇ ಶಿರಃ |
ಪ್ರತ್ಯಕ್ಶಿರಾ ಪ್ರವಾಸೇ ತು ನ ಕದಾಚಿತ್ ಉದಕ್ಶಿರಾಃ ||

ತನ್ನ ಮನೆಯಲ್ಲಿ ಪೂರ್ವಕ್ಕೆ, ಮಾವನ ಮನೆಯಲ್ಲಿ ದಕ್ಷಿಣಕ್ಕೆ, ಪ್ರಯಾಣದಲ್ಲಿ ಪಶ್ಚಿಮಕ್ಕೆ ತಲೆ ಹಾಕಿ ಮಲಗಬೇಕು. ಯಾವಾಗಲೂ ಉತ್ತರದಿಕ್ಕಿಗೆ ತಲೆಹಾಕಿ ಮಲಗಬಾರದು.

ಶೂನ್ಯಾಗಾರೇ ಸ್ಮಶಾನೇ ಚ ಏಕವೃಕ್ಷೇ ಚತುಷ್ಪಥೇ |
ಮಹಾದೇವಗೃಹೇ ಚಾಪಿ ಮಾತೃವೇಶ್ಮನಿ ನ ಸ್ವಪೇತ್ ||

ಶೂನ್ಯಗೃಹ, ಸ್ಮಶಾನ, ಶಿವಮಂದಿರ ಹಾಗೂ ದೇವೀಮಂದಿರದಲ್ಲಿ ಮಲಗಕೂಡದು.

**ವ್ಯವಾಯಯಜ್ಞ:-**

'ಅಂತರಾಲೇ ತತೋ ಬುದ್ಧ್ವಾ' ಎಂಬ ವಾಕ್ಯವನ್ನು ಹೀಗೂ ವ್ಯಾಖ್ಯಾನಿಸಲಾಗಿದೆ - ತತಃ - ಹಾಸಿಗೆಯಲ್ಲಿ ಮಲಗಿದ ಮೇಲೆ, ಅಂತರಾಲೇ - ತನ್ನಲ್ಲಿ ಮತ್ತು ತನ್ನ ಮಡದಿಯಲ್ಲಿ ವಾಯುಭಾರತಿಯರನ್ನು ಅವರೊಳಗೆ ರಮಾನಾರಾಯಣರನ್ನು ಚಿಂತಿಸಿ, ಅವರೇ ನಮ್ಮ ದೇಹದಲ್ಲಿ ಭೋಗ ಮಾಡುತ್ತಿರುವರೆಂಬ ಅನುಸಂಧಾನದೊಂದಿಗೆ ಸ್ತ್ರೀಸಂಗವನ್ನು ಮಾಡಬೇಕು. ಆಗ ಈ ಕರ್ಮವು 'ವ್ಯವಾಯಯಜ್ಞ'ವೆನಿಸುತ್ತದೆ.

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ ಅನುಸೃತಃ ಸ್ವಭಾವಮ್ |**
**ಕರೋತಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯೇತತ್ || 16 ||**

"ಯಸ್ಮಿನ್ ಸರ್ವಾಣಿ ಕರ್ಮಾಣಿ" ಎಂಬ ಈ ಗ್ರಂಥದ ಮಂಗಳಾಚರಣಶ್ಲೋಕದಲ್ಲಿ ಆಚಾರ್ಯರು ಒಬ್ಬ ವ್ಯಕ್ತಿಯು ವಿಷ್ಣುಸ್ಮರಣಪೂರ್ವಕವಾಗಿ ಕರ್ಮಗಳನ್ನು ಅನುಷ್ಠಿಸಿ ಅವೆಲ್ಲಾ ಕರ್ಮಗಳನ್ನೂ ವಿಷ್ಣುವಿಗೆ ಅರ್ಪಿಸತಕ್ಕದ್ದು ಎಂದು ಹೇಳಿರುವರು - ಆ ವಿಷಯದಲ್ಲಿ ಮೇಲಿನ ಭಾಗವತ ಶ್ಲೋಕವನ್ನು ಪ್ರಮಾಣವಾಗಿ ಉದಾಹರಿಸುತ್ತಿದ್ದಾರೆ.

**ಪ್ರತಿಪದಾರ್ಥ :-** ಕಾಯೇನ = ಶರೀರದಿಂದ, ವಾಚಾ = ವಾಗಿಂದ್ರಿಯದಿಂದ, ಮನಸಾ = ಮನಸ್ಸಿನಿಂದ, ಇಂದ್ರಿಯೈಃ = ಇತರ ಇಂದ್ರಿಯಗಳಿಂದ, ಬುದ್ಧ್ಯಾ ವಾ = ವಿವೇಕಜ್ಞಾನದಿಂದಾಗಲೀ, ಸ್ವಭಾವಂ = ತನ್ನ ಯೋಗ್ಯತೆಯನ್ನು, ಅನುಸೃತಃ (ಪುಮಾನ್) = ಅನುಸರಿಸಿದ ಪುರುಷನು, ಆತ್ಮನಾ = ಅಂತರ್ಯಾಮಿಯಾದ ಭಗವಂತನ ಪ್ರೇರಣೆಯಿಂದ, ಯದ್ಯತ್ ಕರೋತಿ = ಯಾವ ಯಾವ ಕರ್ಮಗಳನ್ನು ಮಾಡುವನೋ, ತತ್ತತ್ = ಅವೆಲ್ಲವನ್ನೂ, ನಾರಾಯಣಾಯ ಇತಿ = ನಾರಾಯಣನಿಗೆ ಎಂದು, ಸಮರ್ಪಯೇತ್ = ಸಮರ್ಪಿಸತಕ್ಕದ್ದು.

**ತಾತ್ಪರ್ಯ :-** ಒಬ್ಬ ಪುರುಷನು ತನ್ನ ಶರೀರದಿಂದ ಮಾಡುವ ನಮಸ್ಕಾರವೇ ಮೊದಲಾದ ಕರ್ಮಗಳನ್ನು ವಾಗಿಂದ್ರಿಯದಿಂದ ಮಾಡುವ ಸ್ತೋತ್ರ ಮುಂತಾದವುಗಳನ್ನು, ಮನಸ್ಸಿನಿಂದ ಮಾಡುವ ಧ್ಯಾನಾದಿಗಳನ್ನು, ಉಳಿದ ಇಂದ್ರಿಯಗಳಿಂದ ಮಾಡುವ ದರ್ಶನ, ಶ್ರವಣ, ಸ್ಪರ್ಶನ, ಮೊದಲಾದ ಕರ್ಮಗಳನ್ನು ಹಾಗೆಯೇ ತನ್ನ ಯೋಗ್ಯತಾನುಸಾರವಾಗಿ ಭಗವಂತನ ಪ್ರೇರಣೆಯಿಂದ ತನ್ನ ವಿವೇಕವನ್ನನುಸರಿಸಿ ಮಾಡಿದ ಕರ್ಮಗಳೆಲ್ಲವನ್ನೂ ಶ್ರೀಹರಿಗೆ ಸಮರ್ಪಿಸತಕ್ಕದ್ದು.

**ವಿಶೇಷ ವಿಷಯಗಳು :-** 1. ಅನುಸೃತಃ ಸ್ವಭಾವಂ ಎಂಬ ಪದಗಳ ಬದಲು ಪ್ರಕೃತೇಃ ಸ್ವಭಾವಂ ಎಂಬ ಪಾಠಾಂತರವೂ ಇದೆ. ಇಲ್ಲಿ ಪ್ರಕೃತಿ ಎಂದರೆ ಚಿತ್‌ಪ್ರಕೃತಿ ಎಂದೆನಿಸುವ ಮಹಾಲಕ್ಷ್ಮಿಯಿಂದ ಅಭಿಮನ್ಯಮಾನವಾದ ಸತ್ತ್ವರಜಸ್ತಮೋಗುಣಾತ್ಮಕವಾದ ಜಡಪ್ರಕೃತಿ. ಅದರ ಸ್ವಭಾವವನ್ನನುಸರಿಸಿ - ಎಂದು ಅರ್ಥ. ಸತ್ವರಜಸ್ತಮೋಗುಣಗಳನ್ನನುಸರಿಸಿ ಎಂದು ತಾತ್ಪರ್ಯ. 2. ಜೀವನ ಯೋಗ್ಯತೆಯನ್ನನುಸರಿಸಿ ಪೂರ್ವಪೂರ್ವಕ್ರಮಾಧೀನನಾಗಿ ಉತ್ತರೋತ್ತರಕರ್ಮಗಳನ್ನು ಭಗವಂತನು ಮಾಡಿಸುವನೆಂದು "ಆತ್ಮನಾ ಅನುಸೃತಃ ಸ್ವಭಾವಂ" ಎಂಬ ಪದಗಳ ಆಶಯವಾಗಿದೆ. ಹೀಗೆ ಹೇಳುವುದರಿಂದ ಕೆಲವು ಜೀವರಿಗೆ ಸುಖವನ್ನು, ಇನ್ನಿತರ ಜೀವರಿಗೆ ದುಃಖವನ್ನು, ಕೊಡುವ ಭಗವಂತನು ವೈಷಮ್ಯ (ಪಕ್ಷಪಾತ), ನೈರ್ಘೃಣ್ಯ (ಕ್ರೌರ್ಯ) ದೋಷಗಳಿಗೆ ಪಾತ್ರನಾಗುವನೆಂಬ ಕೆಲವರ ಆಕ್ಷೇಪಕ್ಕೆ ಅವಕಾಶವಿಲ್ಲದಂತಾಗುವುದು. ಪೂರ್ವಪೂರ್ವ ಕರ್ಮಗಳಾಗಲೀ, ಜೀವನ ಯೋಗ್ಯತೆಯಾಗಲೀ, ಸ್ವತಂತ್ರಗಳಲ್ಲ. ಅವುಗಳು ಭಗವಂತನ ಅಧೀನಗಳೇ. ಆದ್ದರಿಂದ ಒಬ್ಬ ಜೀವನಿಗೆ ಸಾತ್ವಿಕ ಯೋಗ್ಯತೆಯನ್ನು ಕೊಟ್ಟು ಅವರಿಂದ ಸತ್ಕರ್ಮಗಳನ್ನು ಮಾಡಿಸಿ, ಶುಭಫಲಗಳನ್ನು ಕೊಡುವ ಅಂತೆಯೇ ಮತ್ತೊಬ್ಬ ಜೀವನಿಗೆ ರಾಜಸ ಅಥವಾ ತಾಮಸ ಯೋಗ್ಯತೆಯನ್ನು ನೀಡಿ ಅವನಿಂದ ದುಷ್ಕರ್ಮಗಳನ್ನು ಮಾಡಿಸಿ, ಅಶುಭ ಫಲಗಳನ್ನು ನೀಡುವ ಭಗವಂತನಿಗೆ ವೈಷಮ್ಯ, ನೈರ್ಘೃಣ್ಯ ದೋಷಗಳು ಅಪರಿಹಾರ್ಯವೆಂದು ಕೆಲವರು ಪುನಃ ಆಕ್ಷೇಪಿಸುವುದುಂಟು. ಆದರೆ ಪ್ರತಿಯೊಬ್ಬ ಜೀವನ ಯೋಗ್ಯತೆಯೂ ಆ ಜೀವನ ಸ್ವರೂಪವೇ ಆಗಿದ್ದು ಆ ಜೀವನಂತೆ ಅನಾದಿಯಾಗಿರುವುದು. ಆ ಯೋಗ್ಯತೆಯನ್ನು ಭಗವಂತನು ನಿರ್ಮಿಸಿದ್ದಲ್ಲ. ಹಾಗೆಯೇ ಜೀವನ ಪೂರ್ವಪೂರ್ವ ಕ್ರಮಗಳು ಪ್ರವಾಹತಃ ಅನಾದಿಗಳೇ ಆಗಿರುವುದು. ಯಾವ ಕರ್ಮವನ್ನೂ ಜೀವನ ಯೋಗ್ಯತೆ ಹಾಗೂ ಪೂರ್ವಕರ್ಮ ಇವುಗಳನ್ನು ಅಪೇಕ್ಷಿಸದೇ ಭಗವಂತನು ಸ್ವೇಚ್ಛಾನುಸಾರಿಯಾಗಿ ಮಾಡಿಸತಕ್ಕವನಲ್ಲ. ಆದ್ದರಿಂದ ಯೋಗ್ಯತೆ, ಕರ್ಮಗಳನ್ನನುಸರಿಸಿ ಜೀವರಿಗೆ ಶುಭಾಶುಭ ಫಲಗಳನ್ನೀಯುವ ಭಗವಂತನಿಗೆ ಯಾವ ದೋಷವೂ ಇಲ್ಲ.

ಹೀಗೆ ವೈಷಮ್ಯ, ನೈರ್ಘೃಣ್ಯ ದೋಷಗಳನ್ನು ಭಗವಂತನಲ್ಲಿ ಪರಿಹರಿಸಿದರೂ, ಜೀವನಿಗೆ ಶುಭಾಶುಭಫಲಗಳನ್ನು ನೀಡಲು ಅವರ ಯೋಗ್ಯತೆ ಪೂರ್ವಕರ್ಮಗಳನ್ನು ಅವಲಂಬಿಸುವುದರಿಂದ "ಪರಾಧೀನತೆ" ಎಂಬ ದೋಷವು ಈಶ್ವರನಿಗೆ ಅನಿವಾರ್ಯವೆಂದೇ ಕೆಲವರ ವಾದ. ಆದರೆ ಯೋಗ್ಯತೆ ಮೊದಲಾದವುಗಳು ಅನಾದಿಯಾದರೂ ಸ್ವತಂತ್ರಗಳಲ್ಲ. ಅವುಗಳು

ಈಶ್ವರನ ಅಧೀನಕ್ಕೆ ಒಳಪಟ್ಟಿದೆ. ಹೀಗೆ ತನ್ನ ಅಧೀನದಲ್ಲಿರುವ ಜೀವಯೋಗ್ಯತೆ ಅವನ ಪೂರ್ವಕರ್ಮಗಳು ಇವುಗಳನ್ನು ಅವಲಂಬಿಸುವುದು ಈಶ್ವರನ ನಿರತಿಶಯ ಸ್ವಾತಂತ್ರ್ಯಕ್ಕೆ ಸರ್ವಥಾ ಚ್ಯುತಿಯನ್ನುಂಟುಮಾಡುವುದಿಲ್ಲ. ಅದರ ಬದಲು ಈಶ್ವರನು ಜೀವಯೋಗ್ಯತಾದಿಗಳನ್ನು ಅವಲಂಬಿಸದೇ ಜೀವರಿಗೆ ಸುಖದುಃಖಾದಿಗಳನ್ನು ಕೊಡುವವನೆಂದು ಹೇಳಿದರೆ ಕರ್ಮಾದಿಗಳನ್ನನುಸರಿಸಿ ಫಲ ಕೊಡುವವನೆಂದು ಹೇಳುವ ವೇದವಾಕ್ಯಗಳಿಗೆ ಅಪ್ರಾಮಾಣ್ಯ ಬರುವ ಕಾರಣ ಅಂತಹ ಸ್ವಾತಂತ್ರ್ಯವನ್ನು ಭಗವಂತನಿಗೆ ಸರ್ವಥಾ ಒಪ್ಪತಕ್ಕದ್ದಲ್ಲ.

ಜೀವರ ರಾಜಸ, ತಾಮಸ ಯೋಗ್ಯತೆಗಳನ್ನು ನಾಶಪಡಿಸಿ ಸಾತ್ವಿಕ ಯೋಗ್ಯತೆಯನ್ನು ದಯಪಾಲಿಸುವ ವಿಲಕ್ಷಣ ಸಾಮರ್ಥ್ಯ ಪರಮಾತ್ಮನಿಗಿರುವುದರಿಂದ ಅತ್ಯಂತ ದಯಾಳುವಾದ ಅವನು ಹಾಗೆ ಮಾಡದಿದ್ದರೆ ಕ್ರೌರ್ಯ ಮೊದಲಾದ ದೋಷಗಳು ಅವನಿಗೆ ಬರುವುದೆಂದು ಕೆಲವರು ವಾದಿಸುವರು. ಆದರೆ ಲೋಕದಲ್ಲಿ ಮಹಾಯೋಗಸಾಮರ್ಥ್ಯವನ್ನು ಪಡೆದ ತಪಸ್ವಿಯೊಬ್ಬನು ಹಂಸವನ್ನು ಕಾಗೆಯನ್ನಾಗಿಸಿ, ಕಾಗೆಯನ್ನು ಹಂಸವನ್ನಾಗಿ ಬದಲಾಯಿಸುವ ಸಾಮರ್ಥ್ಯ ಹೊಂದಿರುವುದನ್ನು ನಾವು ನೋಡುತ್ತೇವೆ. ಆದರೂ ಹಾಗೆ ಬದಲಾಯಿಸದ ಯೋಗಿಯನ್ನು ಯಾರೂ ಪಕ್ಷಪಾತಿಯೆಂದು ಅಥವಾ ಕ್ರೂರವೆಂದು ನಿಂದಿಸುವುದನ್ನು ಲೋಕದಲ್ಲಿ ನಾವು ಕಂಡಿಲ್ಲ. ಅಂತೆಯೇ ಜೀವರ ಸ್ವಭಾವವೇ ಆದ ಯೋಗ್ಯತೆಯನ್ನು ಬದಲಾಯಿಸದೇ ಅವರವರ ಕರ್ಮಾನುಸಾರ ಫಲ ಕೊಡುವನೆಂಬ ವೇದವಾಣಿಗನುಸಾರವಾಗಿ ಭಗವಂತನಿಗೆ ಸುಖಾದಿಫಲದಾತೃತ್ವವನ್ನು ಹೇಳಿದರೆ ಯಾವ ದೋಷಕ್ಕೂ ಅವಕಾಶವಿಲ್ಲವೆನ್ನುವುದು ಶಾಸ್ತ್ರದ ಸಿದ್ಧಾಂತವಾಗಿದೆ. || 16 ||

"ನಿರಾಶೀರ್ನಿಮಮೋ ಯಾತಿ ಪರಂ ಜಯತಿ ಸೋಽಚ್ಯುತಃ" ಎಂದು ಮಂಗಲಶ್ಲೋಕದಲ್ಲಿ ಆಚಾರ್ಯರು "ಪರ" ಶಬ್ದದಿಂದ ಭಗವಂತನಿಗೆ ಸರ್ವೋತ್ತಮತ್ವವನ್ನು ಹೇಳಿರುವುದು. ಆ ವಿಷಯದಲ್ಲಿ ಪ್ರಮಾಣವಾಗಿ ಗೀತಾಶ್ಲೋಕಗಳನ್ನು ಉದಾಹರಿಸುತ್ತಿದ್ದಾರೆ -

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ |**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ || 17 ||**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ |**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ || 18 ||**
**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ |**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ || 19 ||**

ನಿಯಮ್ಯರಾದ ಚೇತನರ ಸಮೂಹವು ಕ್ಷರ ಮತ್ತು ಅಕ್ಷರ ಎಂಬ ಎರಡು ವಿಧವಾದ ಚೇತನರನ್ನು ಒಳಗೊಂಡಿದೆ. ಚತುರ್ಮುಖನೇ ಮೊದಲಾದ ಎಲ್ಲಾ ಜೀವರೂ ಕ್ಷರ ಚೇತನರೆಂದೆನಿಸುವರು. ಕೂಟಸ್ಥ ಅಂದರೆ ನಿರ್ವಿಕಾರಳಾದ ಲಕ್ಷ್ಮೀದೇವಿಯು ಅಕ್ಷರ ಚೇತನಳೆಂದೆನಿಸುವಳು. || 17 ||

ಯಾರು ಲೋಕತ್ರಯವನ್ನು ವ್ಯಾಪಿಸಿ ಆ ಎಲ್ಲಾ ಲೋಕಗಳನ್ನು ಪೋಷಿಸುವನೋ, ನಾಶರಹಿತನೋ, ನಿರವಧಿಕವಾದ ಐಶ್ವರ್ಯವನ್ನು ಪಡೆದಿರುವನೋ ಕ್ಷರ-ಅಕ್ಷರ ಚೇತನರಿಗಿಂತ ಭಿನ್ನನಾಗಿರುವ ಆ ಪುರುಷನು ಶ್ರುತಿ-ಸ್ಮೃತಿಗಳಲ್ಲಿ ಪರಮಾತ್ಮನೆಂದು ಹೇಳಲ್ಪಟ್ಟಿರುವನು. || 18 ||

ಹೀಗೆ ಕ್ಷರಚೇತನರನ್ನು ಮೀರಿರುವುದರಿಂದ ಅಕ್ಷರ ಚೇತನಕ್ಕಿಂತಲೂ ಉತ್ತಮನಾದುದರಿಂದ ಪೌರುಷೇಯ-ಅಪೌರುಷೇಯ ಗ್ರಂಥಗಳಲ್ಲಿ ನಾನು ಪುರುಷೋತ್ತಮನೆಂದು ಪ್ರಸಿದ್ಧನಾಗಿರುವೆನು. || 19 ||

ವಿಶೇಷ ವಿಷಯ :-

ಬ್ರಹ್ಮಾಶಿವಃ ಸುರಾದ್ಯಾಶ್ಚ ಶರೀರಕ್ಷರಣಾತ್ ಕ್ಷರಾಃ |
ಲಕ್ಷ್ಮೀರಕ್ಷರದೇಹತ್ವಾದಕ್ಷರಾತತ್ಪರೋ ಹರಿಃ ||

ಎಂಬ ಪ್ರಮಾಣವಚನದಲ್ಲಿ ಹೇಳಿದಂತೆ ಬ್ರಹ್ಮಾದಿ ಜೀವರು ಕ್ಷರ ಎಂದರೆ ನಾಶ ಹೊಂದುವ ದೇಹವುಳ್ಳವರಾದ್ದರಿಂದ ಕ್ಷರರೆಂದೆನಿಸುವರು. ನಿತ್ಯಮುಕ್ತಳಾದ ಶ್ರೀದೇವಿಯು ನಾಶವಿಲ್ಲದ ದೇಹವುಳ್ಳವಳಾದ್ದರಿಂದ ಅಕ್ಷರಳೆಂದೆನಿಸುವಳು. ಅವಳು ಕೂಟಸ್ಥಳು. ಕೂಟ = ಆಕಾಶದಂತೆ, ಸ್ಥ = ಇರತಕ್ಕವಳು. ಆಕಾಶದಂತೆ ವಿಕಾರರಹಿತಳೆಂದು ಭಾವ. ಅವಳು ಸ್ತ್ರೀಯಾದರೂ ಪುಂಶಕ್ತಿಯುಳ್ಳವಳಾದ್ದರಿಂದ "ಕೂಟಸ್ಥ:" ಎಂದು ಪುಲ್ಲಿಂಗಶಬ್ದದಿಂದ ಹೇಳಲ್ಪಡುವಳು.

ಎಲ್ಲಾ ಲೋಕಗಳನ್ನು ಭಗವಂತನು ವ್ಯಾಪಿಸಿರುವುದಾದರೆ ಲೋಕವೆಲ್ಲವೂ ನಾಶ ಹೊಂದಿದಾಗ ಅದರೊಳಗಿರುವ ಭಗವಂತನು ನಾಶ ಹೊಂದಬೇಕಲ್ಲವೇ ಎಂಬ ಶಂಕೆಯನ್ನು ನಿವಾರಿಸಲು ಅವ್ಯಯಃ = ನಾಶರಹಿತನು ಎಂದು ಹೇಳಲಾಗಿದೆ. ಇದು ಅಸಂಭಾವಿತವೆಂದೂ ಆಕ್ಷೇಪದ ಪರಿಹಾರಕ್ಕಾಗಿ ಗೀತೆಯು ಭಗವಂತನನ್ನು ಈಶ್ವರಃ - ದುರ್ಘಟವಾದುದನ್ನೂ ಘಟಿಸುವ ಸಾಟಿಯಿಲ್ಲದ ಸಾಮರ್ಥ್ಯವುಳ್ಳವನೆಂದು ಹೇಳಿದೆ.

"ಲೋಕೇ ವೇದೇ ಚ" ಎಂಬಲ್ಲಿ ಲೋಕ ಶಬ್ದವು ಪೌರುಷೇಯ ಗ್ರಂಥಗಳನ್ನು ಹೇಳುವುದು. || 19 ||

ಮೇಲಿನ ಶ್ಲೋಕಗಳಲ್ಲಿ ಹೇಳಿರುವ ಸರ್ವೋತ್ತಮತ್ವವು ತನಗೆ ಅಭಿಮತವಾದುದೆಂದು ತಿಳಿಸಲು ಭಗವಂತನ ಸರ್ವೋತ್ತಮತ್ವಜ್ಞಾನಿಗೆ ಲಭಿಸುವ ಫಲವನ್ನು ಶ್ರೀಕೃಷ್ಣನು ಹೇಳುತ್ತಿದ್ದಾನೆ -

**ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ |**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ || 20 ||**

ಯಾರು ನನ್ನನ್ನು ಈ ರೀತಿಯಾಗಿ ಭ್ರಾಂತಿಗೊಳಗಾಗದೆ ಪುರುಷೋತ್ತಮನೆಂದು ತಿಳಿಯುವನೋ ಅವನು ಎಲ್ಲವನ್ನು ತಿಳಿದವನು. ಅವನು ನನ್ನನ್ನು ಎಲ್ಲಾ ಪ್ರಕಾರಗಳಿಂದ ಸೇವಿಸುವವನು.

ವಿಶೇಷ ವಿಷಯ :- "ಪುರುಷೋತ್ತಮ" ಎಂಬ ಹೆಸರು, ಒಂದು ಜಾತಿಯ ಮರಗಳಿಗೆ ಅಶ್ವಕರ್ಣ ಎಂಬ ಹೆಸರಿನಂತೆ, ಭಗವಂತನಿಗೆ ಅರ್ಥವಿಲ್ಲದ ಸಂಜ್ಞೆಯಲ್ಲ. ಆ ಪದವು ಹಿಂದಿನ ಶ್ಲೋಕಗಳಲ್ಲಿ ಹೇಳಿದಂತೆ ಚರಾಚರ ಪುರುಷರಿಗಿಂತ ಉತ್ತಮ ಎಂದು ತಿಳಿಸುವ ಅರ್ಥಪೂರ್ಣವಾದ ಶಬ್ದವಾಗಿದೆ ಎಂದು ಇಲ್ಲಿ ಸೂಚಿತವಾಗಿದೆ. ಕೆಲವರು ಭಗವಂತನಿಗೆ ಸರ್ವೋತ್ತಮತ್ವವು ಪಾರಮಾರ್ಥಿಕ ಸತ್ಯವಲ್ಲವೆಂದು ಹೇಳುವರು. ಹಾಗೆ ಭ್ರಾಂತನಾಗದೇ ಭಗವಂತನ ಸರ್ವೋತ್ತಮತ್ವಗುಣವು ಪಾರಮಾರ್ಥಿಕಸತ್ಯವೆಂದು ತಿಳಿದವನೇ ಸರ್ವವಿತ್ - ಸರ್ವಜ್ಞನೆನಿಸುವನು. ಏಕೆಂದರೆ ಅದೇ ಸಕಲ ಶಾಸ್ತ್ರಗಳ ಸಾರವಾಗಿದೆ ಎಂದು ಶ್ರೀಕೃಷ್ಣನ ಆಶಯ. || 20 ||

ಈ ಪ್ರಮೇಯವು ಶಾಸ್ತ್ರರಹಸ್ಯವಾಗಿದ್ದು ಅದನ್ನು ಅಯೋಗ್ಯರಿಗೆ ಉಪದೇಶಿಸತಕ್ಕದ್ದಲ್ಲವೆಂದೂ ಈ ಪ್ರಮೇಯವನ್ನು ತಿಳಿದ ಜ್ಞಾನಿಗೆ ಪರಮಪುರುಷಾರ್ಥವಾದ ಮುಕ್ತಿಯೇ ಫಲವೆಂದು ಶ್ರೀಕೃಷ್ಣನು ಹೇಳುತ್ತಿದ್ದಾನೆ -

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ |**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ || 21 ||**

ಎಲೈ ಪಾಪರಹಿತನಾದ ಅರ್ಜುನ ! ಭಗವಂತನ ಸರ್ವೋತ್ತಮತ್ವರೂಪವಾದ ಪುರುಷೋತ್ತಮತ್ವವೆಂಬ ವಿಷಯವು ಗೋಪ್ಯವಾದ ಶಾಸ್ತ್ರಪ್ರಮೇಯವಾಗಿದೆ. ಇದನ್ನು ನಾನು ನಿನಗೆ ಉಪದೇಶಿಸಿರುವೆನು.

ಹೇ ಭಾರತ = ಹೇ ಭರತವಂಶಸ್ಥನಾದ ಪಾರ್ಥ ! ಇದನ್ನು ತಿಳಿದು ಅಧಿಕಾರಿಯು ಭಗವಂತನ ಅಪರೋಕ್ಷಜ್ಞಾನವನ್ನು ಪಡೆಯುವನು. ಅನಂತರ ಮುಕ್ತನೂ ಆಗುವನು.

ವಿಶೇಷ ವಿಷಯ :- ಸದಾಚಾರಸ್ಮೃತಿಯಲ್ಲಿ 17 ರಿಂದ 21ರವರೆಗಿನ ಶ್ಲೋಕಗಳು ಹೃಷೀಕೇಶತೀರ್ಥರ ಪಾಠದ ಪ್ರಕಾರ ಹೀಗಿವೆ -

ಯಸ್ಮಾತ್ ಕ್ಷರಮತೀತೋಽಸಾವಕ್ಷರಾಚ್ಚೋತ್ತಮೋ ಹರಿಃ |
ಅತೋ ಹಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ||
ಯಸ್ತಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ |
ಸ ಸರ್ವವಿದ್ ಭಜತಿ ತಂ ಸರ್ವಭಾವೇನ ಸರ್ವದಾ ||
ಇತಿ ಗುಹ್ಯತಮಂ ಶಾಸ್ತ್ರಂ ಇದಂ ತೇನೋಕ್ತಮೇವ ಚ |
ಏತದ್‌ಬುದ್ಧ್ವಾ ಬುದ್ಧಿಮಾನ್ ಕೃತಕೃತ್ಯಶ್ಚ ನಿತ್ಯದಾ || 21 ||

ರುದ್ರನೇ ಮೊದಲಾದ ಇತರ ದೇವತೆಗಳಿಗೂ ಸರ್ವೋತ್ತಮತ್ವವನ್ನು ಹೇಳುವ ವಾಕ್ಯಗಳಿರುವಾಗ ಶ್ರೀಹರಿಗೆ ಸರ್ವೋತ್ತಮತ್ವವನ್ನು ಒಪ್ಪಲು ಹೇಗೆ ಸಾಧ್ಯ ಎಂಬ ಆಕ್ಷೇಪವನ್ನು ನಿರಾಕರಿಸಲು ರುದ್ರಾದಿದೇವತೆಗಳಿಗೆ ಮುಖ್ಯವಾದ ಸರ್ವೋತ್ತಮತ್ವವಿಲ್ಲವೆಂದು ಶ್ರೀಹರಿಗೆ ಅದಿರುವುದೆಂದೂ ತಿಳಿಸುವ ಮಹಾಭಾರತ ವಾಕ್ಯವನ್ನು ಆಚಾರ್ಯರು ಉದಾಹರಿಸುತ್ತಿದ್ದಾರೆ -

**ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ |**
**ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ || 22 ||**

ಇಂದ್ರಾದಿ ದೇವತೆಗಳು ಸದಾಶಿವನನ್ನು ಆಶ್ರಯಿಸಿರುವರು. ಸದಾಶಿವನು ಚತುರ್ಮುಖನನ್ನು ಆಶ್ರಯಿಸಿರುವನು. ಚತುರ್ಮುಖಬ್ರಹ್ಮನು ರಮೆಯ ಮೂಲಕ ನನ್ನನ್ನು (ಶ್ರೀಹರಿಯನ್ನು) ಆಶ್ರಯಿಸಿದ್ದಾನೆ. ನಾನು ಯಾರನ್ನೂ ಆಶ್ರಯಿಸಿಲ್ಲ.

ವಿಶೇಷ ವಿಷಯ :- ಈ ಶ್ಲೋಕದಲ್ಲಿ ಶ್ರೀಹರಿಯು ತನ್ನಲ್ಲಿರುವ ಸರ್ವದೇವಾಶ್ರಯತ್ವ ಮತ್ತು ಅನನ್ಯಾಶ್ರಯತ್ವ - ತಾನು ಎಲ್ಲ ದೇವತೆಗಳಿಗೆ ಆಶ್ರಯನಾಗಿರುವುದು ಮತ್ತು ತಾನು ಯಾರನ್ನೂ ಆಶ್ರಯಿಸದಿರುವುದು - ಧರ್ಮಗಳಿಂದ ತನ್ನಲ್ಲಿ ರುದ್ರಾದಿಗಳಲ್ಲಿ ಇಲ್ಲದಿರುವ ನಿರುಪಚರಿತವಾದ ಸರ್ವೋತ್ತಮತ್ವವು ಇರುವುದೆಂದು ಸೂಚಿಸುತ್ತಿದ್ದಾನೆ.

ಇಲ್ಲಿ ಹೃಷೀಕೇಶತೀರ್ಥರ ಪಾಠ ಹೀಗಿದೆ -

ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ |
ಬ್ರಹ್ಮಾ ತಮಾಶ್ರಿತೋ ನಿತ್ಯಂ ನ ಹರಿಃ ಕಿಂಚಿದಾಶ್ರಿತಃ || 22 ||

ಭಗವಂತನನ್ನು ಸರ್ವೋತ್ತಮನೆಂದು ತಿಳಿದು ಶಾಸ್ತ್ರವಿಹಿತವಾದ ವೃತ್ತಿಯನ್ನು ಅನುಸರಿಸಿ ಭಕ್ತಿಯಿಂದ ಭಗವಂತನನ್ನು ಆರಾಧಿಸುವುದೇ ಪರಮ ಧರ್ಮ. ಭಗವಂತನ ಸರ್ವೋತ್ತಮತ್ವಜ್ಞಾನವಿಲ್ಲದಿದ್ದಾಗ ಮಾಡುವುದೆಲ್ಲವೂ ಅಧರ್ಮವೆಂದು ತಿಳಿಸುವ ಎರಡು ಶ್ಲೋಕಗಳನ್ನು ಆಚಾರ್ಯರು ಉದಾಹರಿಸುತ್ತಿದ್ದಾರೆ -

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ |**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ || 23 ||**
**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ |**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ || 24 ||**

ಯಾವ ಮಾನವರು ನನಗೆ ಅಭಿಮತವಾದ ಈ ಹಿಂದೆ ಹೇಳಿದ ವಿಷಯವನ್ನು ಶ್ರದ್ಧೆಯುಳ್ಳವರಾಗಿ ಅಸೂಯಾರಹಿತರಾಗಿ ಅನುಷ್ಠಾನ ಮಾಡುವರೋ ಅವರು ತಮ್ಮ ಕರ್ಮಗಳಿಂದ ಜ್ಞಾನದ್ವಾರಾ ಮುಕ್ತರಾಗುವರು.

ಇದಕ್ಕೆ ವಿಪರೀತವಾಗಿ ಯಾರು ನನ್ನ ಅಭಿಮತವನ್ನು ಅನುಷ್ಠಾನ ಮಾಡುವುದಿಲ್ಲವೋ ಎಲ್ಲಾ ವಿಷಯಗಳಲ್ಲೂ ಭ್ರಾಂತರಾದ ವಿವೇಕಜ್ಞಾನವಿಲ್ಲದ ಅವರನ್ನು ನಾಶ ಹೊಂದಿದವರೆಂದು ತಿಳಿ.

ವಿಶೇಷ ವಿಷಯ :- ಈ ಹಿಂದಿನ,

ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ |
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ||

ಎಂಬ ಶ್ಲೋಕದಲ್ಲಿ ಶ್ರೀಕೃಷ್ಣನು ಸರ್ವಕರ್ಮಗಳನ್ನು ಸರ್ವೋತ್ತಮನಾದ ತನ್ನಲ್ಲೇ ಅರ್ಪಿಸಬೇಕೆಂದು ಹೇಳಿರುವನು. ಶ್ರೀಕೃಷ್ಣನ ಈ ಅಭಿಮತವನ್ನು ಅನುಷ್ಠಾನ ಮಾಡುವ ವಿವೇಕಿಗಳಿಗೆ ದೊರಕುವ ಫಲವನ್ನು, ಅದನ್ನು ಅನುಷ್ಠಾನ ಮಾಡದವರಿಗೆ ಒದಗುವ ಅನರ್ಥವನ್ನು ಇಲ್ಲಿ ಭಗವಂತನು ಹೇಳುತ್ತಿದ್ದಾನೆ -

ಶ್ರದ್ಧಾವಂತಃ - "ಶ್ರದ್ಧಾ ತು ಆಸ್ತಿಕ್ಯಬುದ್ಧಿಃ ಸ್ಯಾತ್" ಎಂಬ ವಚನದಂತೆ ಶ್ರದ್ಧೆಯೆಂದರೆ ಆಸ್ತಿಕ್ಯಬುದ್ಧಿ. ಶ್ರೀಕೃಷ್ಣನು ಹೇಳಿರುವುದು ಸತ್ಯವಾದದ್ದು. ಇದರಿಂದ ನನಗೆ ಪ್ರಯೋಜನವಿದೆ ಎಂಬ ತಿಳುವಳಿಕೆಯೇ ಆಸ್ತಿಕ್ಯಬುದ್ಧಿ.

"ಕರ್ಮಭಿರ್ಮುಚ್ಯಂತೇ" ಎಂಬಲ್ಲಿ ಕರ್ಮಗಳು ಮುಕ್ತಿಗೆ ಸಾಧನವೆಂದು ತಿಳಿದರೂ ಅವು ಸಾಕ್ಷಾತ್ ಮೋಕ್ಷಸಾಧನವೆಂದು ಅಭಿಪ್ರಾಯವಲ್ಲ. ಭಗವಂತನಿಗೆ ಎಲ್ಲಾ ಕರ್ಮಗಳನ್ನು ಅರ್ಪಿಸಿದಾಗ ಅವು ನಿವೃತ್ತಕರ್ಮಗಳೆಂದೆನಿಸುವುವು. ಅವುಗಳು ಅಪರೋಕ್ಷಜ್ಞಾನ ದ್ವಾರಾ ಮುಕ್ತಿಗೆ ಸಾಧನವಾಗಿವೆ.

ಗೀತಾಭಾಷ್ಯದಲ್ಲಿ ಆಚಾರ್ಯರು ಈ ವಿಷಯದಲ್ಲಿ ನಾರಾಯಣಾಷ್ಟಾಕ್ಷರಕಲ್ಪದ ವಚನವನ್ನು ಉದಾಹರಿಸಿದ್ದಾರೆ-

ನಿವೃತ್ತಾದೀನಿ ಕರ್ಮಾಣಿ ಹ್ಯಾಪರೋಕ್ಷ್ಯೇಶದೃಷ್ಟಯೇ |
ಅಪರೋಕ್ಷ್ಯೇಣ ದೃಷ್ಟಿಶ್ಚ ಮುಕ್ತ್ಯೇಃ ಕಿಂಚಿನ್ನ ಮಾರ್ಗತೇ ||
ಸರ್ವಂ ತದಂತರಾಧಾಯ ಮುಕ್ತಯೇ ಸಾಧನಂ ಭವೇತ್ |
ನ ಕಿಂಚಿದಂತರಾಧಾಯ ನಿರ್ವಾಣಾಯಾಪರೋಕ್ಷದೃಕ್ ||

ಸದಾಚಾರಸ್ಮೃತಿಯಲ್ಲಿ ಉದಾಹರಿಸಿರುವ ಈ ಎರಡು ಭಗವದ್ಗೀತೆಯ ಶ್ಲೋಕಗಳೂ ಭಗವಂತನ ಸರ್ವೋತ್ತಮತ್ವಜ್ಞಾನಿಯ ಪ್ರಶಂಸೆ ಮತ್ತು ಅದರ ಅಜ್ಞಾನಿಯ ನಿಂದೆ - ಇವುಗಳ ಮೂಲಕ ಭಗವಂತನ ಸರ್ವೋತ್ತಮತ್ವದಲ್ಲಿ ಗೀತೆಯ ತಾತ್ಪರ್ಯವಿದೆಯೆಂದು ಸೂಚಿಸುತ್ತಿವೆ. ಈ ಎರಡು ಶ್ಲೋಕಗಳ ಹೃಷೀಕೇಶತೀರ್ಥರ ಪಾಠ ಹೀಗಿದೆ -

ಏತನ್ಮತಮಿದಂ ನಿತ್ಯಮನುತಿಷ್ಠಂತಿ ಸರ್ವದಾ |
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ಸಂಸೃತೇರ್ಭಯಾತ್ ||
ಏತ್ಯೇತದಭ್ಯಸೂಯಂತೋ ನಾನುತಿಷ್ಠಂತಿ ತನ್ಮತಮ್ |
ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧ್ಯಾನ್ನಷ್ಟಾನಚೇತಸಃ || 24 ||

ನನ್ನ ಮತವನ್ನು ಅನುಷ್ಠಾನ ಮಾಡುವವರು ಮತ್ತು ಮಾಡದಿರುವವರು ಎಂದು ಜೀವರಲ್ಲಿ ಎರಡು ಬಗೆಯನ್ನು ಶ್ರೀಕೃಷ್ಣನು ಹೇಳಿದನಷ್ಟೆ. ಇದಕ್ಕೆ ಈ ಜೀವರ ಸಾತ್ತ್ವಿಕ ತಾಮಸ ಸ್ವಭಾವಗಳೇ ಕಾರಣವೆಂದು ಈ ಮುಂದಿನ ಶ್ಲೋಕದಲ್ಲಿ ಹೇಳಲಾಗುವುದು -

ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ |
ವಿಷ್ಣುಭಕ್ತಿಪರೋ ದೈವೋ ವಿಪರೀತಸ್ತಥಾಽಸುರಃ || 25 ||

ಈ ಲೋಕದಲ್ಲಿ ಜೀವಸಮೂಹವು ಮುಕ್ತಿಯೋಗ್ಯರಾದ ಸಾತ್ವಿಕಜೀವರು ಮತ್ತು ಮುಕ್ತಿಯೋಗ್ಯರಲ್ಲದ ತಾಮಸಜೀವರು ಎಂದು ಎರಡು ಬಗೆಯ ಜೀವರನ್ನೊಳಗೊಂಡಿದೆ. ವಿಷ್ಣುಭಕ್ತಿಯುಕ್ತರಾದವರು ಸಾತ್ವಿಕಜೀವರೆಂದೂ, ವಿಷ್ಣುದ್ವೇಷಪರರಾದ ಜೀವರು ತಾಮಸರೆಂದೂ ಹೇಳಲ್ಪಡುವರು.

ವಿಶೇಷ ವಿಷಯ :- ಗೀತಾಭಾಷ್ಯದಲ್ಲಿ ಈ ವಿಷಯದ ಬಗ್ಗೆ ಕೆಳಗಿನ ಶ್ರುತಿಯನ್ನು ಉದಾಹರಿಸಲಾಗಿದೆ -

ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತಿ |
ಆಸುರೀಮೇವಾಸುರಾಃ ನೈತಯೋರಭಿಭವಃ ಕದಾಚಿತ್ ||

"ಸ್ವಭಾವ ಏವ ಹ್ಯವತಿಷ್ಠತೇ" ಹಾಗೆಯೇ ಸ್ಕಾಂದಪುರಾಣದಲ್ಲಿ ಈ ವಚನವಿದೆ -

ಅಸುರಾ ಆಸುರೇಣೈವ ಸ್ವಭಾವೇನ ಚ ಕರ್ಮಣಾ |
ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್ ||
ದೇವಾ ದೇವಸ್ವಭಾವೇನ ಕರ್ಮಣಾ ಚಾಪ್ಯಸಂಶಯಮ್ |
ಸಮ್ಯಕ್ ಜ್ಞಾನೇನ ಪರಮಾಂ ಗತಿಂ ಗಚ್ಛಂತಿ ವೈಷ್ಣವೀಮ್ |
ನಾನಯೋರನ್ಯಥಾಭಾವಃ ಕದಾಚಿತ್ ಕ್ವಾಽಪಿ ವಿದ್ಯತೇ ||

ಶ್ರೀ ಹೃಷೀಕೇಶತೀರ್ಥರ ಈ ಶ್ಲೋಕದ ಪಾಠ ಹೀಗಿದೆ -

ದ್ವಾವೇವ ಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ |
ವಿಷ್ಣುಭಕ್ತಿಪರೋ ದೈವೋ ವಿಪರೀತಸ್ತಥಾಽಸುರಃ ||

ಇದುವರೆಗೆ ಹೇಳಿದ್ದರ ಉಪಸಂಹಾರವನ್ನು ಆಚಾರ್ಯರು ಈ ಮುಂದಿನ ಭಾಗವತ ಶ್ಲೋಕದ ಮೂಲಕ ಮಾಡಿದ್ದಾರೆ-

ಸ್ಮರ್ತವ್ಯಸ್ಸತತಂ ವಿಷ್ಣುರ್ವಿಸ್ಮರ್ತವ್ಯೋ ನ ಜಾತುಚಿತ್ |
ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ || 26 ||

ಶ್ರೀಹರಿಯನ್ನು ನಿರಂತರವಾಗಿ ಸ್ಮರಿಸಬೇಕು. ಎಂದಿಗೂ ಮರೆಯತಕ್ಕದ್ದಲ್ಲ. ಈ ವಿಧಿನಿಷೇಧಗಳ ಮುಂದೆ ಇತರ ಎಲ್ಲಾ ವಿಧಿನಿಷೇಧಗಳು ಅಮುಖ್ಯವಾಗಿವೆ.

ವಿಶೇಷ ವಿಷಯ :- ಈ ಶ್ಲೋಕವನ್ನು ಗಮನಿಸಿದಾಗ ವಿಷ್ಣುಸ್ಮರಣೆಯೊಂದನ್ನು ನಿರಂತರ ಮಾಡುತ್ತಿದ್ದರೆ ಸಾಕು. ಉಳಿದ ಸಂಧ್ಯಾವಂದನಾದಿ ವಿಹಿತ ನಿತ್ಯಕರ್ಮಗಳು ಅಷ್ಟು ಮುಖ್ಯವಲ್ಲ. ಅಂತೆಯೇ ಇತರ ನಿಷಿದ್ಧ ಕರ್ಮಗಳನ್ನು ಮಾಡಿದರೂ ವಿಶೇಷವಾದ ಬಾಧಕವಿಲ್ಲ ಎಂದು ಅಭಿಪ್ರಾಯವಿರುವಂತೆ ಭಾಸವಾಗುವುದು. ಆದರೆ ಎಲ್ಲ ವಿಹಿತಕರ್ಮಗಳೂ ಭಗವಂತನ ಸ್ಮರಣಸಹಿತವಾಗಿಯೇ ಇರುತ್ತವೆ ಎಂಬ ವಿಷಯವನ್ನು ಗಮನಿಸಬೇಕು. ಆದ್ದರಿಂದ ಶ್ರುತಿಸ್ಮೃತಿ ವಿಹಿತವಾದ ನಿತ್ಯನೈಮಿತ್ತಿಕ ಕರ್ಮಗಳನ್ನು ತ್ಯಜಿಸಿದರೆ ವಿಷ್ಣುಸ್ಮರಣೆಯನ್ನೇ ತ್ಯಜಿಸಿದಂತೆ ಆಗುವುದಷ್ಟಲ್ಲದೇ ಶ್ರುತಿಸ್ಮೃತಿಗಳ ಆದೇಶಗಳನ್ನು ಉಲ್ಲಂಘಿಸಿದ ಪಾಪಕ್ಕೂ ಗುರಿಯಾಗುವೆವು. ಹಾಗೆಯೇ ನಿಷಿದ್ಧ ಕರ್ಮಗಳೆಲ್ಲವೂ ಭಗವಂತನ ಸ್ಮರಣೆಗೆ ಪ್ರತಿಬಂಧಕಗಳಾಗುತ್ತವೆ ಎಂಬ ಕಾರಣದಿಂದಲೇ ನಿಷೇಧಕ್ಕೊಳಗಾಗಿವೆ. ಆದ್ದರಿಂದ ಅವುಗಳನ್ನು ಆಚರಿಸಿದರೆ ಭಗವಂತನ ವಿಸ್ಮರಣೆಗೆ ಅವಕಾಶ ಮಾಡಿಕೊಟ್ಟಂತೆ ಆಗುವುದು. ಹೀಗೆ ಶ್ರುತ್ಯಾದಿ ಪ್ರಮಾಣಗಳಿಂದ ವಿಹಿತವಾದ ಕರ್ಮಗಳೆಲ್ಲವೂ ಭಗವಂತನ ಸ್ಮರಣೆಸಹಿತವಾಗಿದ್ದು, ನಿಷಿದ್ಧ ಕರ್ಮಗಳ ಪರಿತ್ಯಾಗವು ಭಗವಂತನ ವಿಸ್ಮರಣೆಯನ್ನು ನಿವಾರಿಸತಕ್ಕದ್ದಾಗಿ "ಸ್ಮರ್ತವ್ಯಃ ಸತತಂ ವಿಷ್ಣುಃ" ಎಂಬ

ಪ್ರಮಾಣವಚನವು ತಿಳಿಸುವ ವಿಷ್ಣು ವಿಸ್ಮರಣೆಯ ವಿಧಿ, ವಿಷ್ಣುಸ್ಮರಣೆಯ ನಿಷೇಧಗಳ ವ್ಯಾಪ್ತಿಗೆ ಒಳಪಡುತ್ತವೆ. ಇದನ್ನು ತಿಳಿದು ನಾವು ವಿಹಿತಕರ್ಮಾನುಷ್ಠಾನ ಮಾಡುವ ಸಂದರ್ಭಗಳಲ್ಲಿ ಭಗವಂತನ ಸ್ಮರಣೆ ಜಾಗೃತವಾಗಿರುವಂತೆ ಎಚ್ಚರ ವಹಿಸಬೇಕೆನ್ನುವುದು ಈ ಪ್ರಮಾಣವಚನದ ಆಶಯವಾಗಿದೆ. ||26||

ಭಗವದ್ಭಕ್ತಿಪೂರ್ವಕವಾಗಿ ಕರ್ಮಗಳನ್ನು ಅನುಷ್ಠಾನ ಮಾಡಿದಾಗ ಮಾತ್ರ ಅವು ಧರ್ಮವಾಗುವುದು ಇಲ್ಲದಿದ್ದರೆ ಧರ್ಮವಾಗುವುದಿಲ್ಲ ಎಂದು ಹೇಳುವ ಪ್ರಮಾಣವಚನವನ್ನು ಆಚಾರ್ಯರು ಉದಾಹರಿಸುತ್ತಿದ್ದಾರೆ -

**ಧರ್ಮೋ ಭವತ್ಯಧರ್ಮೋಽಪಿ ಕೃತೋ ಭಕ್ತೈಸ್ತವಾಚ್ಯುತ |**
**ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತೈಃ ಕೃತೋ ಹರೇಃ ||27||**

ಹೇ ಅಚ್ಯುತ ! ನಿನ್ನ ಭಕ್ತರು ಪ್ರಮಾಧ ಮೊದಲಾದ ದೋಷಗಳಿಂದ ಮಾಡಿದ ಅಧರ್ಮವೆಂದು ತೋರುವ ಕರ್ಮಗಳು ಧರ್ಮವೇ ಆಗಿರುತ್ತವೆ. ಹೇ ಹರೇ, ನಿನ್ನ ಭಕ್ತರಲ್ಲದವರು ಮಾಡಿದ ಧರ್ಮವೆಂದು ತೋರುವ ಕರ್ಮಗಳು ಅಧರ್ಮವೇ ಆಗಿರುತ್ತವೆ.

ವಿಶೇಷ ವಿಷಯ :- ಭಗವಂತನಲ್ಲಿ ದೃಢವಾದ ಭಕ್ತಿಯುಳ್ಳವರು ಸಾಮಾನ್ಯವಾಗಿ ಧರ್ಮಮಾರ್ಗದಲ್ಲೇ ಇರುವರು. ಕೆಲವೊಮ್ಮೆ ಲೋಕದ ದೃಷ್ಟಿಯಿಂದ ಅಧರ್ಮವೆಂದು ಕಾಣುವ ಕಾರ್ಯಗಳನ್ನು ಅವರು ಮಾಡಬಹುದು. ಪ್ರಮಾದರಿಂದಾಗಿ ಅಧರ್ಮವೆನಿಸುವ ಕಾರ್ಯಗಳನ್ನೂ ಅವರು ಮಾಡಬಹುದು. ಏಕಾದಶೀದಿನದಲ್ಲಿ ಶ್ರಾದ್ಧಪರಿತ್ಯಾಗ, ಸಾಮಾನ್ಯ ದೃಷ್ಟಿಯಲ್ಲಿ ಅಧರ್ಮವಾಗಿದೆ. ಆದರೆ ಭಗವದ್ಭಕ್ತರಿಗೆ ಅದು ಧರ್ಮದ ಫಲವನ್ನೇ ಕೊಡುವುದು. ಕೆಲವೊಮ್ಮೆ ಪ್ರಮಾದ ಅಜ್ಞಾನಗಳಿಂದ ಭಕ್ತರು ಅಧರ್ಮವನ್ನು ಆಚರಿಸಿದರೂ ಭಗವದ್ಭಕ್ತಿಯು ಪಶ್ಚಾತ್ತಾಪಕ್ಕೆ ಕಾರಣವಾಗಿ ಅಧರ್ಮದ ಅನರ್ಥಫಲವನ್ನು ನಿವಾರಿಸುತ್ತದೆ. ಆದರೆ ಭಗವದ್ಭಕ್ತರಲ್ಲದವರು ಮಾಡುವ ಧರ್ಮಗಳೆಂದು ತೋರುವ ಕರ್ಮಗಳು ಅಹಂಕಾರಪೂರ್ವಕವಾಗಿ ಮಾಡುವ ಪ್ರಯುಕ್ತ ಅಧರ್ಮದ ಫಲವನ್ನೇ ಕೊಡುತ್ತವೆ. ದುರ್ಯೋಧನ ಮೊದಲಾದ ಭಗವಂತನ ದ್ವೇಷಿಗಳು ಮಾಡಿದ ಧರ್ಮಗಳು ಅಧರ್ಮಗಳಾಗಿ ಪರಿಣಮಿಸಿದ್ದು ಇದಕ್ಕೆ ನಿದರ್ಶನವಾಗಿದೆ.

ಈ ಶ್ಲೋಕದಲ್ಲಿ ಕೃತೋ ಭಕ್ತೈಸ್ತವಾಚ್ಯುತ" ಎಂಬುದರ ಬದಲು "ಕೃತೋ ಭಕ್ತೈಸ್ತವೇಶಿತುಃ" ಎಂದು ಶ್ರೀ ಹೃಷೀಕೇಶತೀರ್ಥೀಯ ಪಾಠವಿದೆ. ||27||

ಭಗವದ್ಭಕ್ತರಿಗೆ ಮಾತ್ರ ಕರ್ಮಗಳಲ್ಲಿ ಅಧಿಕಾರ. ಆದ್ದರಿಂದ ಅವಶ್ಯ ಭಗವದ್ಭಕ್ತಿಯನ್ನು ಮಾಡಬೇಕು ಎಂದು ತಿಳಿಸುವ ಗೀತಾವಾಕ್ಯವನ್ನು ಆಚಾರ್ಯರು ಉದಾಹರಿಸುತ್ತಿದ್ದಾರೆ -

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು |**
**ನಿತ್ಯಂ ಭವೇಚ್ಚ ಮನ್ನಿಷ್ಠೋ ಬುಭೂಷುಃ ಪುರುಷಃ ಸದಾ ||28||**

ನನ್ನಲ್ಲಿಯೇ ಮನಸ್ಸಿಡು, ನನ್ನ ಭಕ್ತನಾಗು. ನನ್ನನ್ನು ಉದ್ದೇಶಿಸಿಯೇ ಯಜ್ಞಾದಿ ಸಕಲ ಕರ್ಮಗಳನ್ನು ಮಾಡು. ನನ್ನನ್ನು ಉದ್ದೇಶಿಸಿಯೇ ನಮಸ್ಕರಿಸು. ಭಗವಂತನ ಸ್ಮರಣದಿಂದ ಸಕಲ ಪುರುಷಾರ್ಥಗಳೂ ಲಭಿಸುವುದೆನ್ನುವುದು ಪ್ರಮಾಣಸಿದ್ಧವಾಗಿರುವುದರಿಂದ ಮುಮುಕ್ಷುವಾದ ಪುರುಷನು ಭಗವಂತನಲ್ಲೇ ದೃಢವಾದ ಭಕ್ತಿಯುಳ್ಳವನಾಗಬೇಕು.

**ವಿಶೇಷ ವಿಚಾರ :-** ಈ ಶ್ಲೋಕದ ಪೂರ್ವಾರ್ಧವು ಗೀತಾವಾಕ್ಯವಾಗಿದೆ. ಉತ್ತರಾರ್ಧವು ಹಿಂದೆ ಉದಾಹರಿಸಿದ ಪ್ರಮಾಣಗಳ ಆಧಾರದಿಂದ ಭಗವಂತನಲ್ಲಿಯೇ ಭಕ್ತಿಯನ್ನು ಮಾಡಬೇಕೆಂದು ಹೇಳುವ ಆಚಾರ್ಯರ ಆದೇಶವಾಕ್ಯವೆಂದು ಕೆಲವರ ಆಶಯ. ಮತ್ತೆ ಕೆಲವರು ಹಿಂದಿನ ಪ್ರಮಾಣವಾಕ್ಯದ ಒಂದು ಭಾಗವೆಂದೇ ಉತ್ತರಾರ್ಧವನ್ನು ಪರಿಗಣಿಸಿ ವ್ಯಾಖ್ಯಾನ ಮಾಡುವರು.

ಉತ್ತರಾರ್ಧದಲ್ಲಿ "ನಿತ್ಯಂ ಭವೇಚ್ಚ ಮನ್ನಿಷ್ಠೋ" ಎನ್ನುವುದರ ಬದಲು "ನಿತ್ಯಂ ಭವೇಚ್ಚ ತನ್ನಿಷ್ಠೋ" ಎಂದು ಹೃಷೀಕೇಶತೀರ್ಥರ ಪಾಠವಿದೆ. ||28||

ಗೃಹಸ್ಥರಿಗೆ ಹೇಳಿದ ಆಚಾರಗಳು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದವನಿಗೂ ಮತ್ತು ಕೆಲವು ಅಂಶಗಳಲ್ಲಿ ಸಂಕೋಚ ಮಾಡಿ ಬ್ರಹ್ಮಚಾರಿಗಳಿಗೂ ಸಮಾನವೆಂದು ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ -

ಏಷ ನಿತ್ಯಃ ಸದಾಚಾರೋ ಗೃಹಿಣೋ ವನಿನಸ್ತಥಾ |
ವೈಶ್ವದೇವಂ ಬಲಿ ದಂತಧಾವನಂ ಚಾಪ್ಯೃತೇ ವಟೋಃ || 29 ||

ಇದುವರೆಗೆ ಹೇಳಲಾದ ಶೌಚಾಚಾರ, ದೇವಪೂಜೆ, ಸತತ ವಿಷ್ಣುಸ್ಮರಣೆ ಮೊದಲಾದ ಗೃಹಸ್ಥಾಶ್ರಮಿಗಳ ಧರ್ಮಗಳು ವಾನಪ್ರಸ್ಥಾಶ್ರಮಿಗಳಿಗೂ ನಿತ್ಯದಲ್ಲಿ ಅನುಷ್ಠೇಯವಾಗಿವೆ. ವೈಶ್ವದೇವ, ಬಲಿಹರಣ, ದಂತಧಾವನಗಳನ್ನು ಬಿಟ್ಟು ಉಳಿದ ಸದಾಚಾರಗಳು ಬ್ರಹ್ಮಚಾರಿಗಳಿಗೂ ಅನುಷ್ಠಾನಯೋಗ್ಯವಾಗಿವೆ.

ವಿಶೇಷ ವಿಚಾರ :- ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವ ಕಾಲವನ್ನು ಶಂಖರು ಈ ರೀತಿ ಹೇಳಿದ್ದಾರೆ -

ಗೃಹಸ್ಥಸ್ತು ಯದಾ ಪಶ್ಯೇತ್ ವಲೀ ಫಲಿತಮಾತ್ಮನಃ |
ಅಪತ್ಯಸ್ಯೈವ ಚಾಪತ್ಯಂ ತದಾರಣ್ಯಂ ಸಮಾವಿಶೇತ್ ||

ಗೃಹಸ್ಥಾಶ್ರಮಿಯಾದವನು ತನ್ನ ತಲೆಗೂದಲು ನೆರೆತದ್ದನ್ನು ತಿಳಿದು ಹಾಗೆಯೇ ಮಗನಿಗೆ ಮಗನು ಜನಿಸಿರುವುದನ್ನು ನೋಡಿ ಅರಣ್ಯಕ್ಕೆ ಹೋಗಿ ಮಾಡತಕ್ಕದ್ದು.

ವಾನಪ್ರಸ್ಥನ ಧರ್ಮಗಳು :- ವಾನಪ್ರಸ್ಥನ ಧರ್ಮಗಳನ್ನು ಹೇಳುವ ಶಂಖರ ವಚನಗಳು ಹೀಗಿವೆ -

ಪುತ್ರೇ ದಾರಾನ್ ವಿನಿಕ್ಷಿಪ್ಯ ತಥಾ ವಾಽನುಗತೋ ವನಮ್ |
ಅಗ್ನೀನುಪಚರೋ ನಿತ್ಯಂ ವನ್ಯಮಾಹಾರಮಾಹರೇತ್ ||
ಯದಾಹಾರೋ ಭವೇತ್ತೇನ ಪೂಜಯೇತ್ ಪಿತೃದೇವತಾಃ |
ತೇನೈವ ಪೂಜಯೇದ್ ವಿದ್ವಾನ್ ಅತಿಥಿಂ ಸಮುಪಾಗತಮ್ ||
ಗ್ರಾಮಾದಾಹೃತ್ಯ ಚಾಶ್ನೀಯಾತ್ ಅಷ್ಟೌ ಗ್ರಾಸಾನ್ ಸಮಾಹಿತಃ |
ಸ್ವಾಧ್ಯಾಯಂ ಚ ತಥಾ ಕುರ್ಯಾತ್ ಜಟಾಶ್ಚ ಬಿಭೃಯಾತ್ತಥಾ ||
ತಪಸಾ ಶೋಷಯೇನ್ನಿತ್ಯಂ ಸ್ವಕಂ ಚೈವ ಕಲೇವರಮ್ |
ಆರ್ದ್ರವಾಸಾಸ್ತು ಹೇಮಂತೇ ಗ್ರೀಷ್ಮೇ ಪಂಚತಪಾಸ್ತಥಾ ||
ವರ್ಷಾಸ್ವಾಕಾಶಶಾಯೀ ಚ ನಕ್ತಾಶೀ ಚ ಸದಾ ಭವೇತ್ |
ಚತುರ್ಥಕಾಲಿಕೋ ವಾ ಸ್ಯಾತ್ ಷಷ್ಠಕಾಲಿಕ ಏವ ಚ ||
ಕೃಚ್ಛ್ರೈರ್ವಾಽಪಿ ನಯೇತ್ ಕಾಲಂ ಬ್ರಹ್ಮಚರ್ಯಂ ಚ ಪಾಲಯೇತ್ |
ಏವಂ ತೀರ್ತ್ವಾ ವನೇ ಕಾಲಂ ದ್ವಿಜೋ ಬ್ರಹ್ಮಾಶ್ರಮೀ ಭವೇತ್ || ಇತಿ ||

ಪತ್ನಿಯನ್ನು ಮಕ್ಕಳಿಗೊಪ್ಪಿಸಿ ಅಥವಾ ಅವಳೊಂದಿಗೆ ವನಕ್ಕೆ ತೆರಳಬೇಕು. ನಿತ್ಯವೂ ಅಗ್ನಿಹೋತ್ರವನ್ನು ನಡೆಸಬೇಕು. ವನದಲ್ಲಿ ಸಿಗುವ ಕಂದಮೂಲಾದಿ ಆಹಾರವನ್ನು ಸೇವಿಸಬೇಕು. ಯಾವ ಆಹಾರವು ಸಿಗುವುದೋ ಅದೇ ಆಹಾರದಿಂದ ಪಿತೃಗಳನ್ನು ದೇವತೆಗಳನ್ನು ಅರ್ಚಿಸಬೇಕು. ಬಂದ ಅತಿಥಿಗಳನ್ನು ಅದೇ ಆಹಾರದಿಂದ ಉಪಚರಿಸಬೇಕು. ಅಥವಾ ಗ್ರಾಮದಿಂದ ಆಹಾರವನ್ನು ತಂದು ಎಂಟು ಗ್ರಾಸಗಳನ್ನು ಮಾತ್ರ ಸಮಾಧಾನಚಿತ್ತನಾಗಿ ಸ್ವೀಕರಿಸಬೇಕು. ವೇದಾಧ್ಯಯನವನ್ನು

ಮಾಡಬೇಕು. ಜಟಾಧಾರಿಯಾಗಬೇಕು. ನಿತ್ಯವೂ ತಪಸ್ಸಿನಿಂದ ಶರೀರವನ್ನು ಶೋಷಿಸಬೇಕು. ಚಳಿಗಾಲದಲ್ಲಿ ಒದ್ದೆಯನ್ನುಟ್ಟು, ಬೇಸಿಗೆಯಲ್ಲಿ ಬಿಸಿಲಿನಲ್ಲಿ ನಾಲ್ಕು ಕಡೆಗೂ ಅಗ್ನಿಯನ್ನಿಟ್ಟುಕೊಂಡು, ಮಳೆಗಾಲದಲ್ಲಿ ಬಯಲಿನಲ್ಲಿ ಮಲಗಿ ತಪಸ್ಸು ಮಾಡಬೇಕು. ಆಶೆಗಳನ್ನು ತ್ಯಜಿಸಬೇಕು. ಕೃಚ್ಛ್ರಚಾಂದ್ರಾಯಣಾದಿವ್ರತಗಳನ್ನು ಅನುಷ್ಠಿಸುತ್ತಾ ಕಾಲವನ್ನು ಕಳೆಯಬೇಕು. ಬ್ರಹ್ಮಚರ್ಯವನ್ನು ಪರಿಪಾಲಿಸಬೇಕು. ಹೀಗೆ ವನದಲ್ಲಿ ಕಾಲವನ್ನು ಕಳೆದು ಕೊನೆಗೆ ಯತ್ಯಾಶ್ರಮವನ್ನು ಸ್ವೀಕರಿಸಬೇಕು. ವಾನಪ್ರಸ್ಥರ ಧರ್ಮಗಳನ್ನು ಭಾಗವತ ಸಪ್ತಮಸ್ಕಂದದಲ್ಲಿ ವಿವರವಾಗಿ ಹೇಳಲಾಗಿದೆ. ಯಾಜ್ಞವಲ್ಕ್ಯರು ಕಲಿಯುಗದಲ್ಲಿ ವಾನಪ್ರಸ್ಥಾಶ್ರಮವೆಂದು ವರ್ಜ್ಯವೆಂದು ಹೇಳಿದ್ದಾರೆ.

ಬ್ರಹ್ಮಚಾರಿಯ ಧರ್ಮಗಳು :- ವೈಶ್ವದೇವ, ಬಲಿಹರಣ, ದಂತಧಾವನ ಇವುಗಳನ್ನು ಬಿಟ್ಟು ಉಳಿದ ಗೃಹಸ್ಥಾಶ್ರಮಿಯ ಧರ್ಮಗಳು ಬ್ರಹ್ಮಚಾರಿಗೂ ಸಮಾನವಾಗಿದೆ. ಬ್ರಹ್ಮಯಜ್ಞವನ್ನು ಬಿಟ್ಟು ಉಳಿದ ಯಜ್ಞಗಳು ಬ್ರಹ್ಮಚಾರಿಗೆ ವಿಹಿತವಾಗಿರೆ.

ವಿಧವಾ ವಟುಕನ್ಯಾನಾಂ ನ ಕಾಷ್ಠೈರ್ದಂತಧಾವನಂ |
ತೃಣಪರ್ಣೈಃ ಸದಾ ಕುರ್ಯಾತ್ ಅಮಾನ್ ಏಕಾದಶೀ ವಿನಾ ||

ಎಂಬ ಪ್ರಮಾಣಾನುಸಾರ ಕಾಷ್ಠಗಳಿಂದ ಬ್ರಹ್ಮಚಾರಿಗೆ ದಂತಧಾವನವು ನಿಷಿದ್ಧ. ಮಾವಿನ ಎಲೆ ಮುಂತಾದ ಎಲೆಗಳಿಂದ ಅವನು ದಂತಗಳನ್ನು ಶುಭ್ರವಾಗಿಟ್ಟುಕೊಳ್ಳಬೇಕು. ಅಮಾವಾಸ್ಯೆ ಏಕಾದಶಿಗಳಲ್ಲಿ ಎಲೆಗಳಿಂದಲೂ ದಂತಧಾವನವು ನಿಷಿದ್ಧ.

ಯಾಜ್ಞವಲ್ಕ್ಯರು ಬ್ರಹ್ಮಚಾರಿಗೆ ನಿಷಿದ್ಧವಾದ ಕಾರ್ಯಗಳನ್ನು ಹೀಗೆ ಹೇಳಿದ್ದಾರೆ -

ಮಧುಮಾಂಸಾಂಜನೋಚ್ಛಿಷ್ಟಶುಕ್ತಂ ಸ್ತ್ರೀಪ್ರಾಣಿಹಿಂಸನಮ್ |
ಭಾಸ್ಕರಾಲೋಕನಾಶ್ಲೀಲಪರಿವಾದಾಂಶ್ಚ ವರ್ಜಯೇತ್ ||

ಮದ್ಯಸೇವನೆ, ಮಾಂಸಭೋಜನ, ಉಚ್ಛಿಷ್ಟಭೋಜನ, ಕಠೋರ ಮಾತುಗಳು, ಹಳಸಿದ ಅನ್ನ, ಸ್ತ್ರೀಯರನ್ನು ನೋಡುವುದು ಮತ್ತು ಮಾತನಾಡುವುದು, ಪ್ರಾಣಿಗಳನ್ನು ಹಿಂಸಿಸುವುದು, ಸೂರ್ಯನನ್ನು ನೋಡುವುದು, ಅಶ್ಲೀಲಮಾತುಗಳನ್ನಾಡುವುದು ಇವುಗಳನ್ನು ಬ್ರಹ್ಮಚಾರಿಯು ವರ್ಜಿಸಬೇಕು.

ವ್ಯಾಧಿಗ್ರಸ್ತನಾದ ಬ್ರಹ್ಮಚಾರಿಗೆ ನಿಷಿದ್ಧವಾದುದನ್ನು ಔಷಧರೂಪವಾಗಿ ಸ್ವೀಕರಿಸಲು ಅನುಮತಿ ಇದೆ ಎಂದು ವಸಿಷ್ಠರು ಹೇಳುತ್ತಾರೆ - "ಸ ಚೇತ್ ವ್ಯಾಧಿಪೀಡಿತಃ ಗುರೋರುಚ್ಛಿಷ್ಟಶೇಷಮೌಷಧಾರ್ಥಂ ಸರ್ವಂ ಪ್ರಾಶ್ನೀಯಾತ್" ಹಿಂದೆ ಹೇಳಿದ ಆಚಾರಗಳು ಕೆಲವು ವಿಷಯಗಳಲ್ಲಿ ಸಂಕೋಚದೊಂದಿಗೆ ಸನ್ಯಾಸಿಗಳಿಗೂ ಸಮಾನವಾಗಿದೆ ಎಂದು ಮುಂದಿನ ಶ್ಲೋಕದಲ್ಲಿ ಆಚಾರ್ಯರು ಹೇಳುತ್ತಿದ್ದಾರೆ -

ಏವಮೇವ ಯತೇಃ ಸ್ತ್ರೀಯವಿತ್ತೇನ ತು ವಿನಾ ಸದಾ |
ಮೂಲಮಂತ್ರೈಸ್ಸದಾ ಸ್ನಾನಂ ವಿಷ್ಣೋರೇವ ಚ ತರ್ಪಣಮ್ || 30 ||

ಇದೇ ರೀತಿ ಯತಿಗಳಿಗೂ ಕೂಡ ತಾವು ಸಂಪಾದಿಸಿದ ಹಣದಿಂದಲ್ಲದೇ, ಯಾಚನೆ ಮಾಡದೇ, ತತ್ಕಾಲದಲ್ಲಿ ಒದಗಿದ ಸಾಧನೆಗಳಿಂದ ದೇವಪೂಜಾದಿಗಳನ್ನು ಆಚರಿಸಬೇಕು. ಪ್ರಣವಾಷ್ಟಾಕ್ಷರಾದಿ ಮಹಾಮಂತ್ರಗಳಿಂದ ಮೂಲಮಂತ್ರಗಳಿಂದ ವಿಷ್ಣುವಿಗೆ ಸಾಕ್ಷಾತ್ ಅರ್ಪಣಗಳನ್ನು ಕೊಡತಕ್ಕದ್ದು. ಗೃಹಸ್ಥಾಶ್ರಮಗಳು ಕೊಡುವಂತೆ ಪಿತೃವಸು ಮೊದಲಾದವರ ಅಂತರ್ಯಾಮಿಯಾದ ಅನಿರುದ್ಧಾದಿಗಳಿಗೆ ತರ್ಪಣವನ್ನು ಕೊಡತಕ್ಕದ್ದಲ್ಲ. || 30 ||

ಯತಿಗಳು, ಕುಟೀಚಕ, ಬಹೂದಕ, ಹಂಸ, ಮತ್ತು ಪರಮಹಂಸರೆಂದು ನಾಲ್ಕು ವಿಧ. ಇವರೆಲ್ಲರಿಗೂ ಸಮಾನವಾದ ಧರ್ಮಗಳನ್ನು ಹಿಂದಿನ ಶ್ಲೋಕದಲ್ಲಿ ಹೇಳಲಾಯಿತು. ಹಂಸ, ಪರಮಹಂಸರಿಗೆ ಮಾತ್ರ ಸಂಬಂಧಿಸಿದ ವಿಶೇಷ ಆಚಾರಗಳನ್ನು ಈ ಮುಂದಿನ ಶ್ಲೋಕದಲ್ಲಿ ಆಚಾರ್ಯರು ನಿರೂಪಿಸುತ್ತಿದ್ದಾರೆ -

ವಿಶೇಷೋ ನಿಷ್ಕ್ರಿಯಯತೇರಜಲಾಂಜಲಿತಾ ತಥಾ |
ತರ್ಪಣಂ ತು ಹರೇರೇವ ಯತೇರನ್ಯಸ್ಯ ಚೋದಿತಮ್ |
ಸಮಿದ್ಧೋಮೋ ವಟೋಶ್ಚೈವ ಸ್ಮೃತ್ವಾ ವಿಷ್ಣುಂ ಹುತಾಶನೇ || 31 ||

ನಾಲ್ಕು ವಿಧರಾದ ಯತಿಗಳಲ್ಲಿ ಹೋಮಾದಿಕ್ರಿಯೆಗಳಿಲ್ಲದ ಹಂಸ, ಪರಮಹಂಸರಿಗೆ ಬ್ರಹ್ಮಯಜ್ಞ ಮೊದಲಾದ ಪಂಚಯಜ್ಞಗಳಿಲ್ಲದಿರುವುದು ವಿಶೇಷವಾಗಿದೆ. ಕುಟೀಚಕ, ಬಹೂದಕರಿಂದ ಅನ್ಯರಾದ ಹಂಸ, ಪರಮಹಂಸರು ಶ್ರೀಹರಿಗೆ ತರ್ಪಣವನ್ನು ಕೊಡತಕ್ಕದ್ದು ವಿಹಿತವಾಗಿದೆ. ಅಂತೆಯೇ ಸ್ನಾನ, ಗಾಯತ್ರೀಜಪ, ದೇವತಾರ್ಚನೆ ಮೊದಲಾದದ್ದು ವಿಹಿತವಾಗಿದೆ. ಬ್ರಹ್ಮಚಾರಿಗೆ ಅಗ್ನ್ಯಂತರ್ಗತ ಮುಖ್ಯಪ್ರಾಣಾಂತರ್ಗತ ಪರಶುರಾಮನನ್ನು ಸ್ಮರಿಸಿ ಸಮಿತ್ತುಗಳಿಂದ ಹೋಮ ಮಾಡುವುದು ವಿಹಿತವಾಗಿದೆ.

ವಿಶೇಷ ವಿಚಾರ :- ಕುಟೀಚಕ, ಬಹೂದಕ, ಹಂಸ, ಮತ್ತು ಪರಮಹಂಸರೆಂದು ಯತಿಗಳು ನಾಲ್ಕು ವಿಧ. ಶಿಖಾ, ಯಜ್ಞೋಪವೀತಗಳನ್ನು ಧರಿಸಿ, ತ್ರಿದಂಡಿಯಾಗಿ ಕಮಂಡಲುಯುಕ್ತನಾಗಿ ಜೀವಿಸುವ ಯತಿಗೆ ಮಕ್ಕಳು ಕೊಟ್ಟ ಅನ್ನವನ್ನು ಸ್ವೀಕರಿಸುವವರು ಕುಟೀಚಕರು. ತ್ರಿದಂಡಿಯಾಗಿ ಪುತ್ರರನ್ನು ಬಿಟ್ಟು ಅನ್ಯರಿಂದ ಭಿಕ್ಷಾನ್ನವನ್ನು ಸ್ವೀಕರಿಸುವವರು ಬಹೂದಕರು. ಏಕದಂಡಿಯಾಗಿ ಕೌಪೀನ ಧರಿಸಿ ಮಧುಕರವೃತ್ತಿಯಿಂದ ಜೀವಿಸುವವರು ಪರಮಹಂಸರು.

ಯತಿಗಳು ನಿಷ್ಕ್ರಿಯರೆಂದರೆ ಯಾವ ಕ್ರಿಯೆಗಳೂ ಇಲ್ಲವೆಂದರ್ಥವಲ್ಲ. ಪಂಚಯಜ್ಞಾದಿಕ್ರಿಯೆ ಇಲ್ಲದವರೆಂದಷ್ಟೇ ಅರ್ಥ. ಅರ್ಘ್ಯಪ್ರದಾನ, ಗಾಯತ್ರೀಜಪ, ಅವರಿಗೂ ಅವಶ್ಯ ಕರ್ತವ್ಯವಾಗಿದೆ. ಸನ್ಯಾಸಿಯ ಜೀವನಕ್ರಮವನ್ನು ಮನು ಹೀಗೆ ಹೇಳಿದ್ದಾನೆ -

ಯಥೋಕ್ತಾನ್ಯಕ್ರಮಾಣಿ ಪರಿಹಾಯ ದ್ವಿಜೋತ್ತಮಃ |
ಆತ್ಮಜ್ಞಾನೇ ಶಮೇ ಚ ಸ್ಯಾತ್ ವೇದಾಭ್ಯಾಸೇ ಚ ಯತ್ನವಾನ್ ||

ಯತಿಗಳಿಗೆ ವಿಹಿತವಾದ ಕರ್ಮಗಳನ್ನುಳಿದು ಇತರ ಕರ್ಮಗಳಲ್ಲಿ ತೊಡಗದೇ ಭಗವಂತನ ಜ್ಞಾನವನ್ನು ಪಡೆಯುವಲ್ಲಿ ಭಗವನ್ನಿಷ್ಠನಾಗಿರುವವನಲ್ಲಿ ಹಾಗೂ ವೇದಾಭ್ಯಾಸದಲ್ಲಿ ಯತಿಯು ಪ್ರಯತ್ನಶೀಲನಾಗಿರಬೇಕು.

ಯತಿಯ ವಿಷಯದಲ್ಲಿ ಸ್ಮೃತ್ಯಂತರದ ವಚನಗಳು ಹೀಗಿವೆ -

ನಾಭಿನಂದೇತ ಮರಣಂ ನಾಭಿನಂದೇತ ಜೀವಿತಮ್ |
ಕಾಲಮೇವ ಪ್ರತೀಕ್ಷೇತ ಕೃಷಿಕೋ ವರ್ಷಣಂ ಯಥಾ ||
ಅಭಿವಾದಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ |
ನ ಚ ಸಂದೇಹಮಾಶ್ರಿತ್ಯ ವೈರಂ ಕುರ್ವೀತ ಕುತ್ರಚಿತ್ ||
ಸನ್ನಿರುದ್ಧ್ಯೇಂದ್ರಿಯಗ್ರಾಮಂ ರಾಗದ್ವೇಷೌ ಪ್ರಹಾಯ ಚ |
ಭಯಂ ಹಿತ್ವಾ ಚ ಭೂತಾನಾಂ ಅಮೃತೀಭವತಿ ದ್ವಿಜಃ || ಇತಿ ||

ಯತಿಯು ಮರಣಕ್ಕಾಗಿ ಹಾತೊರೆಯಬಾರದು. ಬದುಕಿರುವುದಕ್ಕಾಗಿ ಸಂತೋಷಿಸಬಾರದು. ಕೃಷಿಕನು ಮಳೆಯನ್ನು ನಿರೀಕ್ಷಿಸುವಂತೆ ಕಾಲವನ್ನು ಎದುರು ನೋಡಬೇಕು. ಪ್ರಶಂಸೆಗಳನ್ನು ಸಮಚಿತ್ತನಾಗಿ ಸ್ವೀಕರಿಸಬೇಕು. ಯಾರನ್ನೂ ಅವಮಾನಿಸಕೂಡದು. ಸಂದೇಹದಿಂದ ಯಾರನ್ನೂ ದ್ವೇಷಿಸಬಾರದು. ತನ್ನ ಎಲ್ಲ ಇಂದ್ರಿಯಗಳನ್ನು ನಿಯಂತ್ರಿಸಿ ರಾಗದ್ವೇಷಗಳನ್ನು ಬಿಟ್ಟು ಎಲ್ಲ ಜೀವಿಗಳ ಭಯವನ್ನು ಕಳೆದು ಯತಿಯು ಅಮೃತತ್ವವನ್ನು ಪಡೆಯುವನು.

ಸರ್ವವರ್ಣಾಶ್ರಮೈರ್ವಿಷ್ಣುರೇಕ ಏವೇಜ್ಯತೇ ಸದಾ |
ರಮಾಬ್ರಹ್ಮಾದಯಸ್ತಸ್ಯ ಪರಿವಾರತ ಏವ ತು || 32 ||

ಬ್ರಾಹ್ಮಣಾದಿ ನಾಲ್ಕು ವರ್ಣದವರಿಂದ ಮತ್ತು ಬ್ರಹ್ಮಚಾರಿ, ಗೃಹಸ್ಥ, ಸನ್ಯಾಸ, ವಾನಪ್ರಸ್ಥ ಎಂಬ ನಾಲ್ಕು ಆಶ್ರಮದವರಿಂದಲೂ, ಸರ್ವೋತ್ತಮನಾದ ನಾರಾಯಣನೇ ಮುಖ್ಯವಾಗಿ ಪೂಜಿಸಲ್ಪಡುತ್ತಾನೆ. ಲಕ್ಷ್ಮೀದೇವಿಯು, ಚತುರ್ಮುಖಬ್ರಹ್ಮದೇವರು, ರುದ್ರಾದಿದೇವತೆಗಳು ಶ್ರೀವಿಷ್ಣುವಿನ ಪರಿವಾರವೆಂಬ ಅನುಸಂಧಾನದಿಂದಲೇ ಪೂಜಿಸಲ್ಪಡುತ್ತಾರೆ.

ವಿಶೇಷ ವಿಚಾರ :- ಸಕಲ ವರ್ಣಾಶ್ರಮದವರಿಗೂ ಸರ್ವೋತ್ತಮನಾದ ಶ್ರೀಮನ್ನಾರಾಯಣನೇ ಆರಾಧ್ಯನೆಂಬ ಪ್ರಮೇಯವನ್ನು ಪ್ರಮಾಣವಚನದ ಮೂಲಕ ಶ್ರೀಮದಾಚಾರ್ಯರು ಇಲ್ಲಿ ನಿರೂಪಿಸಿದ್ದಾರೆ. ನವರಾತ್ರಿ ಮೊದಲಾದ ವಿಶೇಷ ದಿನಗಳಲ್ಲಿಯೂ ಕೂಡ ಲಕ್ಷ್ಮೀ ಮೊದಲಾದ ದೇವತೆಗಳ ಅಂತರ್ಯಾಮಿಯಾದ ವಿಷ್ಣುವನ್ನೇ ಮುಖ್ಯವಾಗಿ ಪೂಜಿಸಿ ಆತನ ಪರಿವಾರರಾದ ಲಕ್ಷ್ಮೀ ಮೊದಲಾದ ದೇವತೆಗಳಿಗೆ ಭಗವಂತನಿಗೆ ಸಮರ್ಪಿತವಾದ ಆಹಾರವನ್ನು ಸಮರ್ಪಿಸಿ ಪೂಜಿಸಬೇಕು.

ಕವಿಂ ಪುರಾಣಮನುಶಾಸಿತಾರಮ್
ಅಣೋರಣೀಯಾಂಸಮನುಸ್ಮರೇದ್ ಯಃ |
ಸರ್ವಸ್ಯ ಧಾತಾರಮಚಿಂತ್ಯರೂಪಮ್
ಆದಿತ್ಯವರ್ಣಂ ತಮಸಃ ಪರಸ್ತಾತ್ || 33 ||
ವೇದಾಹಮೇತಂ ಪುರುಷಂ ಮಹಾಂತಮ್
ಆದಿತ್ಯವರ್ಣಂ ತಮಸಸ್ತು ಪಾರೇ |
ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ
ನಾಮಾನಿ ಕೃತ್ವಾಽಭಿವದನ್ ಯದಾಸ್ತೇ || 34 ||
ಧಾತಾ ಪುರಸ್ತಾದ್ಯಮುದಾಜಹಾರ
ಶಕ್ರಃ ಪ್ರವಿದ್ವಾನ್ ಪ್ರದಿಶಶ್ಚತಸ್ರಃ |
ತಮೇವಂ ವಿದ್ವಾನಮೃತ ಇಹ ಭವತಿ
ನಾನ್ಯಃ ಪಂಥಾ ಅಯನಾಯ ವಿದ್ಯತೇ || 35 ||

ಸಮಸ್ತ ಜ್ಞಾನವುಳ್ಳವನು, ನಿತ್ಯನೂತನನೂ, ಅಣುವಿಗಿಂತಲೂ ಸೂಕ್ಷ್ಮನೂ, ಸಮಗ್ರ ಪ್ರಪಂಚದ ನಿಯಾಮಕನೂ, ಮತ್ತು ಧಾರಕನೂ ಆದ ಅಪರಿಮಿತ ಮಹಿಮನಾದ (ತಿಳಿಯಲು ಅಸಾಧ್ಯವಾದ ಗುಣವುಳ್ಳ), ಉದಿಸುವ ಸೂರ್ಯನಂತೆ ಪ್ರಕಾಶಮಯನಾದ, ಪ್ರಕೃತಿಯಿಂದ ಭಿನ್ನನೂ, ಉತ್ತಮನೂ ಆದ ಶ್ರೀಮನ್ನಾರಾಯಣನನ್ನು ಯಾರು ಸ್ಮರಿಸುವರೋ ಅವನು ಶ್ರೀಹರಿಯ ಅನುಗ್ರಹದಿಂದ ಸಂಸಾರಬಂಧನಗಳಿಂದ ಬಿಡುಗಡೆ ಹೊಂದುವನು.

ಯಾವ ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನು ಚೇತನಾಚೇತನ ಪದಾರ್ಥಗಳನ್ನು ಸೃಷ್ಟಿಸಿ, ಅವುಗಳಿಗೆ ನಾಮರೂಪಗಳನ್ನು ನೀಡುತ್ತಿರುವನೋ, ಅಂತಹ ಮುಕ್ತಾಮುಕ್ತ ನಿಯಾಮಕನಾದ ಪ್ರಕೃತಿಯನ್ನು ಮೀರಿ ನಿಂತ ಸೂರ್ಯನಂತೆ ಪ್ರಕಾಶರೂಪವುಳ್ಳ, ಪರಿಪೂರ್ಣನಾದ ಶ್ರೀಹರಿಯನ್ನು ನಾನು (ವೇದಾಭಿಮಾನಿದೇವತೆ) ಪ್ರತ್ಯಕ್ಷವಾಗಿ ಕಂಡಿದ್ದೇನೆ.

ಚತುರ್ಮುಖಬ್ರಹ್ಮನು ಸೃಷ್ಟಿಯ ಮೊದಲು ಯಾವ ನಾರಾಯಣನನ್ನು ಸರ್ವೋತ್ತಮನೆಂದು ತಾನು ಕಂಡು ಉಪದೇಶಿಸಿದನೋ, ವಿಷ್ಣುವನ್ನು ಚೆನ್ನಾಗಿ ತಿಳಿದಿರುವ, ಶ್ರೇಷ್ಠ ಪ್ರವಚನಕಾರನಾದ ದೇವೇಂದ್ರನೂ, ಯಾವ ನಾರಾಯಣನನ್ನು ಸರ್ವೋತ್ತಮನೆಂದು ವರ್ಣಿಸುತ್ತಾನೋ, ಅಂತಹ ಪರಮಪುರುಷನನ್ನು ನಾನು ತಿಳಿದಿರುವೆನು. ಈ ಭಗವಂತನನ್ನು ಉತ್ತಮತ್ವಾದಿಗುಣವಿಶಿಷ್ಟನೆಂದು ಶ್ರವಣ, ಮನನ, ಧ್ಯಾನಗಳಿಂದ ಅರಿತು ಪ್ರತ್ಯಕ್ಷವಾಗಿ ಯಾವ ಸಾಧಕನು ಕಾಣುವನೋ ಅವನು ಮೋಕ್ಷವನ್ನು ಪಡೆಯುತ್ತಾನೆ. ಮೋಕ್ಷಕ್ಕೆ ಜ್ಞಾನಕ್ಕಿಂತ ಬೇರೆ ಉಪಾಯವಿಲ್ಲ.

ವಿಶೇಷ ವಿಚಾರ :- ಹರಿಯೇ ಸರ್ವೋತ್ತಮನೆಂಬ ಪ್ರಮೇಯವು ಶ್ರುತಿಸ್ಮೃತಿಪುರಾಣಗಳಲ್ಲಿ ಪ್ರಸಿದ್ಧವಾಗಿದೆಂಬುದನ್ನು ಸಾಧಕರಿಗೆ ತಿಳಿಸಲು ಆಚಾರ್ಯರು ವೇದವಾಕ್ಯಗಳನ್ನೇ ಉದಾಹರಿಸಿದ್ದಾರೆ. ಈ ವೇದಮಂತ್ರಗಳು ಭಗವಂತನು ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಕ್ಕೆ ಕಾರಣನಾಗಿದ್ದಾನೆ ಮತ್ತು ರಮಾ-ಬ್ರಹ್ಮಾದಿ ಸಕಲದೇವತೆಗಳಿಗಿಂತ ಉತ್ಕೃಷ್ಟನಾಗಿದ್ದಾನೆಂದು ಪ್ರತಿಪಾದಿಸುವುದರ ಜೊತೆಗೆ ಸತ್ಕರ್ಮಾನುಷ್ಠಾನದೊಂದಿಗೆ ಇಂತಹ ಜ್ಞಾನವನ್ನು ಹೊಂದಿದವನಿಗೆ ಮಾತ್ರವೇ ಮೋಕ್ಷವೆಂದು ತಿಳಿಸುತ್ತಿದೆ. ಇದರಿಂದ ಸರ್ವೋತ್ಕೃಷ್ಟನಾದ ಪರಮಾತ್ಮನ ಪ್ರೀತಿಗಾಗಿಯೇ ಸರ್ವಕರ್ಮಗಳನ್ನು ಸಮರ್ಪಿಸಬೇಕು. ಮತ್ತು ವಿಷ್ಣುವಿನ ಪರಿವಾರವೆಂಬ ಅನುಸಂಧಾನದಿಂದ ಲಕ್ಷ್ಮಿಯೇ ಮೊದಲಾದ ಸಕಲ ದೇವತೆಗಳನ್ನೂ ಪೂಜಿಸಬೇಕು. ಹಾಗೂ ಪರಮಾತ್ಮನ ಅನುಗ್ರಹವನ್ನು ಪಡೆಯಬೇಕಾದರೆ ಜ್ಞಾನವು ಅತ್ಯಾವಶ್ಯಕ ಎಂಬ ಪ್ರಮೇಯವನ್ನು "ನಾನ್ಯಃ ಪಂಥಾ ಅಯನಾಯ ವಿದ್ಯತೇ" ಎಂಬ ಶ್ರುತಿಯು ಪ್ರತಿಪಾದಿಸುತ್ತಿದೆ.

ಆನಂದತೀರ್ಥಮುನಿನಾ ವ್ಯಾಸವಾಕ್ಯಸಮುದ್ಧೃತಿಃ |
ಸದಾಚಾರಸ್ಯ ವಿಷಯೇ ಕೃತಾ ಸಂಕ್ಷೇಪತಃ ಶುಭಾ || 36 ||

ಸದಾಚಾರಕ್ಕೆ ಸಂಬಂಧಿಸಿದಂತೆ ಶ್ರೀವೇದವ್ಯಾಸರ ಮತ್ತು ವೇದಶಾಸ್ತ್ರಗಳ ವಾಕ್ಯಗಳನ್ನು ಈ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ. ಸಂಕ್ಷಿಪ್ತವೂ, ಸರ್ವಾಭೀಷ್ಟದಾಯಕವೂ ಆದ ಈ ಗ್ರಂಥ ಶಾಶ್ವತವಾದ ಆನಂದವನ್ನು ನೀಡುವ ಶಾಸ್ತ್ರವನ್ನು ರಚಿಸಿದ ಶ್ರೀಮಧ್ವರಿಂದ ನಿರ್ಮಿಸಲ್ಪಟ್ಟಿದೆ.

ವಿಶೇಷ ವಿಚಾರ :- ಶ್ರೀಮದಾಚಾರ್ಯರು ತಮ್ಮ ಅನೇಕ ಗ್ರಂಥಗಳಲ್ಲಿ ವೇದವ್ಯಾಸರ ವಾಕ್ಯವನ್ನು ಉದಾಹರಿಸಿರುವುದನ್ನು ನಾವು ಕಾಣುತ್ತೇವೆ. ಅದರಂತೆ ಈ ಗ್ರಂಥದಲ್ಲಿಯೂ ಕೂಡ "ವ್ಯಾಸವಾಕ್ಯಸಮುದ್ಧೃತಿಃ" ಎಂದು ವ್ಯಾಸರ ವಾಕ್ಯಗಳನ್ನು ಸಂಗ್ರಹಿಸಿ ಹೇಳಿದ್ದೇನೆಂದು ಉಲ್ಲೇಖಿಸಿದ್ದಾರೆ. ಇದು ಗಮನಾರ್ಹ ವಿಷಯವಾಗಿದೆ. ಇದರಿಂದ ಇದು ಕೇವಲ ಆಚಾರ್ಯರ ಅಭಿಪ್ರಾಯವಲ್ಲ, ಇದಕ್ಕೆ ಶ್ರೀವೇದವ್ಯಾಸದೇವರ ಸಮ್ಮತಿಯೂ ಇದೆ ಎಂಬುದನ್ನು ಅವರು ತಿಳಿಸಿದಂತಾಗಿದೆ.

ಅಶೇಷಕಲ್ಯಾಣಗುಣನಿತ್ಯಾನುಭವಸತ್ತನುಃ |
ಅಶೇಷದೋಷರಹಿತಃ ಪ್ರೀಯತಾಂ ಪುರುಷೋತ್ತಮಃ || 37 ||

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ ಸದಾಚಾರಸ್ಮೃತಿಃ ಸಮಾಪ್ತಾ.

ಮಂಗಳಸ್ವರೂಪನಾದ, ಅನಂತಕಲ್ಯಾಣಗುಣಪರಿಪೂರ್ಣನಾದ, ನಿರ್ಮಲ ದೇಹವುಳ್ಳ, ದುಃಖ, ಅಜ್ಞಾನವೇ ಮೊದಲಾದ ಸಕಲ ದೋಷಗಳಿಂದಲೂ ರಹಿತನಾದ, ಪುರುಷೋತ್ತಮನಾದ ನಾರಾಯಣನು ಪ್ರೀತನಾಗಲಿ.

ವಿಶೇಷ ವಿಚಾರ :- ಶ್ರೀಮದಾಚಾರ್ಯರು ತಮ್ಮ ಎಲ್ಲಾ ಮಂಗಳಶ್ಲೋಕಗಳಲ್ಲಿ ಸಕಲಗುಣಪರಿಪೂರ್ಣತ್ವವೆಂಬ ಪ್ರಮೇಯವನ್ನು ನಿರೂಪಿಸಿದ್ದಾರೆ. ಅದರಂತೆ ಈ ಗ್ರಂಥದಲ್ಲಿಯೂ ಕೂಡ ಪರಮಾತ್ಮನು ಅನಂತಕಲ್ಯಾಣಗುಣ ಪರಿಪೂರ್ಣನೆಂದೂ, ದಾಸ್ಯತ್ವವೇ ಮೊದಲಾದ ಸಮಸ್ತದೋಷರಹಿತನೂ ಎಂದು ಪ್ರತಿಪಾದಿಸುತ್ತಾ, ಕೊನೆಯಲ್ಲಿ "ಪ್ರೀಯತಾಂ ಪುರುಷೋತ್ತಮಃ" (ಪರಮಾತ್ಮನು ಸಂತುಷ್ಟನಾಗಲಿ) ಎಂದು ಹೇಳಿದ್ದಾರೆ. ಇದರಿಂದ ನಾವು ಕೂಡ ಯಾವುದೇ ಕರ್ಮವನ್ನು ಮಾಡಿದರೂ ಹರಿಪ್ರೀತಿಗಾಗಿ ಮಾಡಿ, ಸಮರ್ಪಿಸಬೇಕೆಂಬ ಮಹತ್ವಪೂರ್ಣವಾದ ಸಕಲಶಾಸ್ತ್ರಗಳ ಸಾರಸಂದೇಶವನ್ನು ತಿಳಿಸಿದಂತಾಗಿದೆ.

ಇಲ್ಲಿಗೆ ಸದಾಚಾರಸ್ಮೃತಿಯ ಕನ್ನಡ ಅನುವಾದ ಮುಗಿಯಿತು.

|| ಶ್ರೀಕೃಷ್ಣಾರ್ಪಣಮಸ್ತು ||

# ಅನುಷ್ಠಾನಮುಕ್ತಾವಲೀ

## ಪ್ರಾತಸ್ತೋತ್ರ

"ಸ್ಮೃತ್ವಾ ಹರಿಂ ಸಮುತ್ಥಾಯ" ಎಂಬುದಾಗಿ ಆಚಾರ್ಯರು ಭಗವಂತನನ್ನು ಸ್ಮರಿಸುತ್ತಲೇ ಬೆಳಿಗ್ಗೆ ಏಳಬೇಕೆಂದು ಸಂದೇಶಿಸಿದ್ದಾರೆ. ಪ್ರಾತಃಕಾಲದಲ್ಲಿ ಎದ್ದು ಮಂಗಳಸ್ವರೂಪಿಯಾದ ಭಗವಂತನ ಧ್ಯಾನವನ್ನು ಮಾಡುವುದರಿಂದ ಸಮಗ್ರವಾದ ದಿನವೂ ಮಂಗಳಮಯವಾಗುತ್ತದೆ. ನಮ್ಮ ಶಾಸ್ತ್ರಗಳಲ್ಲಿ ಪ್ರತಿಯೊಂದು ಸುಖದ ಹಿಂದೆ ಪುಣ್ಯವನ್ನು, ದುಃಖದ ಹಿಂದೆ ಪಾಪವನ್ನು ಹಿನ್ನೆಲೆಯಾಗಿ ಗುರುತಿಸಲಾಗಿದೆ. ಸುಖ ದೊರಕಲು ಪುಣ್ಯ ಕಾರ್ಯವನ್ನು ಅವಶ್ಯವಾಗಿ ನಡೆಸಬೇಕು. ದುಃಖ ಬರಬಾರದೆಂಬ ಇಚ್ಛೆ ಇರುವವರು ದುಃಖಕ್ಕೆ ಕಾರಣವಾದ ಪಾಪದಿಂದ ಬಿಡುಗಡೆ ದೊರಕಿಸಿಕೊಳ್ಳಬೇಕು. ಈ ಹಿನ್ನೆಲೆಯಲ್ಲಿ ಪ್ರಾತಃಕಾಲದಲ್ಲಿ ಎದ್ದಾಕ್ಷಣ ಅದುವರೆಗೆ ತಾನು ಒಳಗಾಗಿದ್ದ ಸ್ವಪ್ನಾವಸ್ಥೆಗೆ ಪ್ರೇರಕವಾದ ತೈಜಸನಾಮಕ ಭಗವದ್ರೂಪವನ್ನೂ, ನಿದ್ರಾವಸ್ಥೆಗೆ ಪ್ರೇರಕವಾದ ಪ್ರಾಜ್ಞನಾಮಕ ಭಗವದ್ರೂಪವನ್ನೂ ಸ್ಮರಿಸಿಕೊಂಡು, ಎಚ್ಚರದ ಅವಸ್ಥೆಯನ್ನು ಪ್ರೇರಿಸುವ ವಿಶ್ವನಾಮಕ ಭಗವದ್ರೂಪವನ್ನೂ ಸ್ಮರಿಸಬೇಕು. ಹೀಗೆ ನಾನಾ ರೂಪಗಳನ್ನು ಪರಮಾತ್ಮನ ಮತ್ತು ದೇವತೆಗಳ ಹಾಗೂ ಗುರುಗಳ ಸ್ಮರಣೆಯು ಪಾಪನಿವೃತ್ತಿಯನ್ನುಂಟುಮಾಡುವ ಜೊತೆಗೆ ಕಾರ್ಯಗಳು ನಿರ್ವಿಘ್ನವಾಗಿ ನೆರವೇರಿಸುವಂತೆ ಮಾಡುತ್ತರೆ.

ಶ್ರೀಮದ್ಭಾಗವತದ ಪ್ರಥಮಸ್ಕಂಧದ ಮೂರನೇ ಅಧ್ಯಾಯದಲ್ಲಿ ಭಗವಂತನ ಸನತ್ಕುಮಾರ, ಮತ್ಸ್ಯ, ಕೂರ್ಮ ಮೊದಲಾದ ಅನೇಕ ಅವತಾರಗಳ ವರ್ಣನೆಯನ್ನು ಮಾಡಿ ಇವುಗಳನ್ನು ಪ್ರಾತಃಕಾಲದಲ್ಲಿ ಸ್ಮರಿಸಲು ಸರ್ವಪಾಪಗಳಿಂದ ಬಿಡುಗಡೆಯಾಗುವುದೆಂದು ಫಲಶ್ರುತಿಯನ್ನು ಹೇಳಲಾಗಿದೆ.

ಅಷ್ಟಮಸ್ಕಂಧದಲ್ಲಿ ಮತ್ಸ್ಯಾವತಾರಕಥೆಯನ್ನು ವರ್ಣಿಸಿ ಪ್ರಾತಃಕಾಲದಲ್ಲಿ ಈ ರೂಪವನ್ನು ಚಿಂತಿಸಲು, ಬಯಸಿದ ಸಂಕಲ್ಪವು ಈಡೇರುವುದೆಂದು ತಿಳಿಸಲಾಗಿದೆ.

ಗಜೇಂದ್ರಮೋಕ್ಷದ ಕಥೆಯನ್ನು ವರ್ಣಿಸಿದ ಭಾಗವತವು ಬೆಳಗಿನ ಜಾವದಲ್ಲಿ ಈ ಸ್ತೋತ್ರವನ್ನು ಪಠಿಸಿದವರಿಗೆ ದುಃಸ್ವಪ್ನದ ಮೂಲಕ ಮುಂದೆ ಆಗಬಹುದಾದ ಅನರ್ಥ ಪರಂಪರೆಯ ನಿವೃತ್ತಿಯ ಜೊತೆಗೆ ಅವರ ಅಂತ್ಯಕಾಲದಲ್ಲಿ ನಾರಾಯಣ ಸ್ಮರಣೆಯು ಬಂದು, ಅದರಿಂದ ಮೋಕ್ಷಫಲವು ದೊರಕುವುದೆಂದು ವರ್ಣಿಸಲಾಗಿದೆ.

ನಮ್ಮ ದೈನಂದಿನ ಜೀವನದ ಪ್ರತಿಯೊಂದು ಕಾರ್ಯವೂ ಭಗವದಾರಾಧನರೂಪವಾದ ಯಜ್ಞವಾಗಿ ನಡೆಯಬೇಕು. ದಿನದ ಪ್ರತಿಯೊಂದು ಕ್ರಮವು ಭಗವಂತನ ಪೂಜಾರೂಪವಾಗಿ ನಡೆಯಬೇಕು. ಈ ಅನುಸಂಧಾನಕ್ಕೆ ಪೂರಕವಾದ ಪ್ರಸಿದ್ಧವಾದ ಪ್ರಾರ್ಥನೆ ಈ ರೀತಿಯಾಗಿದೆ -

ಪ್ರಾತಃಪ್ರಭೃತಿಸಾಯಾಂತಂ ಸಾಯಾದಿಪ್ರಾತರಂ ತಥಾ |
ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಮ್ ||

ಬೆಳಗ್ಗಿನಿಂದ ಸಾಯಂಕಾಲದವರೆಗೆ ಸಂಜೆಯಿಂದ ಮತ್ತು ಬೆಳಗಿನವರೆಗೆ ಯಾವನು ಏನೇನು ಕರ್ಮವನ್ನು ಮಾಡುವೆನೋ ಅದೆಲ್ಲವೂ ನಿನ್ನ ಪ್ರೀತಿಗೆ ಪ್ರಯೋಜಕವಾದ ಪೂಜೆಯಾಗಿ ಪರಿಣಮಿಸಲಿ. ಹೀಗೆ ಈ ಪ್ರಾರ್ಥನೆಯ ಜೊತೆಗೆ ಮಂಗಳಸ್ವರೂಪಿಯಾದ ಭಗವಂತನ ಮೂಲರೂಪ ಹಾಗೂ ನಾನಾ ಅವತಾರ ರೂಪಗಳ ಸ್ಮರಣೆ ಮತ್ತು ದೇವತಾಗುರುಗಳ ಸ್ಮರಣೆಗೆ ಅನುಕೂಲವಾಗುವಂತೆ ಬೆಳಗು ಜಾವದಲ್ಲಿ ಎದ್ದು ಪಠಿಸಬೇಕಾದ ಕೆಲವು ಮಂತ್ರಗಳ ಸಂಕಲನವನ್ನು ಸಜ್ಜನರ ಅನುಸಂಧಾನಕ್ಕಾಗಿ ಮುಂದೆ ನೀಡಲಾಗಿದೆ.

## ಪ್ರಾತಸ್ತೋತ್ರಮ್

ತಮದ್ಭುತಂ ಬಾಲಕಮಂಬುಜೇಕ್ಷಣಂ
ಚತುರ್ಭುಜಂ ಶಂಖ-ಗದಾದ್ಯುದಾಯುಧಮ್ |
ಶ್ರೀವತ್ಸ-ಲಕ್ಷ್ಮಂ ಗಲ-ಶೋಭಿ-ಕೌಸ್ತುಭಂ
ಪೀತಾಂಬರಂ ಸಾಂದ್ರ-ಪಯೋದ-ಸೌಭಗಮ್ ||1||

ಮಹಾರ್ಹ-ವೈಢೂರ್ಯ-ಕಿರೀಟ-ಕುಂಡಲ-
ತ್ವಿಷಾ ಪರಿಷ್ವಕ್ತ-ಸಹಸ್ರ-ಕುಂತಲಮ್ |
ಉದ್ದಾಮ-ಕಾಂಚ್ಯಂಗದ-ಕಂಕಣಾದಿಭಿ -
ರ್ವಿರೋಚಮಾನಂ ವಸುದೇವ ಐಕ್ಷತ ||2||

ಸ ವಿಸ್ಮಯೋತ್ಫುಲ್ಲ-ವಿಲೋಚನೋ ಹರಿಂ
ಸುತಂ ವಿಲೋಕ್ಯಾನಕದುಂದುಭಿಸ್ತದಾ |
ಕೃಷ್ಣಾವತಾರೋತ್ಸವ-ಸಂಭ್ರಮೋಽಸ್ಪೃಶ -
ನ್ಮುದಾ ದ್ವಿಜೇಭ್ಯೋಽಯುತಮಾಪ್ಲುತೋ ಗವಾಮ್ ||3||

ಅಂತಃಸರಸ್ಯುರು-ಬಲೇನ ಪದೇ ಗೃಹೀತೋ
ಗ್ರಾಹೇಣ ಯೂಥ-ಪತಿರಂಬುಜ-ಹಸ್ತ ಆರ್ತಃ |
ಆಹೇದಮಾದಿ-ಪುರುಷಾಖಿಲ-ಲೋಕ-ನಾಥ
ತೀರ್ಥಶ್ರವಃ ಶ್ರವಣ-ಮಂಗಲ-ನಾಮಧೇಯ ||4||

ಸ್ಮೃತ್ವಾ ಹರಿಸ್ತಮರಣಾರ್ಥಿನಮಪ್ರಮೇಯ -
ಶ್ಚಕ್ರಾಯುಧಃ ಪತಗರಾಜ-ಭುಜಾಧಿರೂಢಃ |
ಚಕ್ರೇಣ ನಕ್ರ-ವದನಂ ವಿನಿಪಾಟ್ಯ ತಸ್ಮಾದ್
ಹಸ್ತೇ ಪ್ರಗೃಹ್ಯ ಭಗವಾನ್ ಕೃಪಯೋಜ್ಜಹಾರ ||5||

ನಮೋಽಸ್ತ್ವನಂತಾಯ ಸಹಸ್ರ-ಮೂರ್ತಯೇ
ಸಹಸ್ರ-ಪಾದಾಕ್ಷಿ-ಶಿರೋರುಬಾಹವೇ |
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ
ಸಹಸ್ರ-ಕೋಟಿಯುಗ-ಧಾರಿಣೇ ನಮಃ ||6||

ನಮೋ ಬ್ರಹ್ಮಣ್ಯ-ದೇವಾಯ ಗೋ-ಬ್ರಾಹ್ಮಣ-ಹಿತಾಯ ಚ |
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ||7||

ಕೌಶೇಯ-ಪೀತ-ವಸನಾಮರವಿಂದ-ನೇತ್ರಾಂ
ಪದ್ಮ-ದ್ವಯಾಭಯ-ವರೋದ್ಯತ-ಪದ್ಮಹಸ್ತಾಮ್ |

ಉದ್ಯಚ್ಛತಾರ್ಕ-ಸದೃಶೀಂ ಪರಮಾಂಕ-ಸಂಸ್ಥಾಂ
ಧ್ಯಾಯೇದ್ ವಿಧೀಶ-ನತ-ಪಾದಯುಗಾಂ ಜನಿತ್ರೀಮ್ || 8 ||

ಯೋ ವಿಪ್ರಲಂಭ-ವಿಪರೀತ-ಮತಿ-ಪ್ರಭೂತಾನ್
ವಾದಾನ್ನಿರಸ್ಯ ಕೃತವಾನ್ ಭುವಿ ತತ್ತ್ವ-ವಾದಮ್ |
ಸರ್ವೇಶ್ವರೋ ಹರಿರಿತಿ ಪ್ರತಿಪಾದಯನ್ ತಮ್
ಆನಂದತೀರ್ಥ-ಮುನಿವರ್ಯಮಹಂ ನಮಾಮಿ || 9 ||

ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ
ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಮ್ |
ದೇವೀಂ ವಂದೇ ಸುಪರ್ಣೀಮಹಿಪತಿ-ದಯಿತಾಂ ವಾರುಣೀಮಪ್ಯುಮಾಂ ತಾ-
ಮಿಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾನ್ ತದ್ಗುರೂನ್ ಮದ್ಗುರೂಂಶ್ಚ || 10 ||

ಮಿಥ್ಯಾಸಿದ್ಧಾಂತ-ದುರ್ಧ್ವಾಂತ-ವಿಧ್ವಂಸನ-ವಿಚಕ್ಷಣಃ |
ಜಯತೀರ್ಥಾಖ್ಯ-ತರಣಿರ್ಭಾಸತಾಂ ನೋ ಹೃದಂಬರೇ || 11 ||

ಅರ್ಥಿಕಲ್ಪಿತ-ಕಲ್ಪೋಽಯಂ ಪ್ರತ್ಯರ್ಥಿ-ಗಜ-ಕೇಸರೀ |
ವ್ಯಾಸತೀರ್ಥ-ಗುರುರ್ಭೂಯಾದಸ್ಮದಿಷ್ಟಾರ್ಥ-ಸಿದ್ಧಯೇ || 12 ||

ತಪೋವಿದ್ಯಾ-ವಿರಕ್ತ್ಯಾದಿಸದ್ಗುಣೌಘಾಕರಾನಹಮ್ |
ವಾದಿರಾಜಗುರೂನ್ ವಂದೇ ಹಯಗ್ರೀವ-ದಯಾಶ್ರಯಾನ್ || 13 ||

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ |
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ || 14 ||

ಆಪಾದಮೌಳಿ-ಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ |
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ || 15 ||

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ |
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಂಽಘ್ರಿಯುಗಂ ಸ್ಮರಾಮಿ || 16 ||

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ |
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ || 17 ||

ಸರ್ವ-ಮಂಗಲ-ಮಾಂಗಲ್ಯೇ ಶಿವೇ ಸರ್ವಾರ್ಥ-ಸಾಧಿಕೇ |
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ || 18 ||

ಮಂಗಲಂ ನಿತ್ಯ-ಕಲ್ಯಾಣಂ ಲಕ್ಷ್ಮೀ-ಸೌಭಾಗ್ಯ-ವರ್ಧನಮ್ |
ಮನೋರಥ-ಪ್ರಾಪ್ತಿಕರಂ ಪಂಚಾಂಗಮವಧಾರಯ || 19 ||

ತಿಥೇಶ್ಚ ಶ್ರಿಯಮಾಪ್ನೋತಿ ವಾರಾದಾಯುಷ್ಯವರ್ಧನಮ್ |
ನಕ್ಷತ್ರಾದ್ಧರತೇ ಪಾಪಂ ಯೋಗಾದ್ ರೋಗ-ನಿವಾರಣಮ್ || 20 ||

ಕರಣಾತ್ ಕಾರ್ಯಸಿದ್ಧಿಃ ಸ್ಯಾತ್ ಪಂಚಾಂಗ-ಫಲಮುತ್ತಮಮ್ |
ಪಂಚಾಂಗಂ ಪಠತೇ ನಿತ್ಯಂ ಶ್ರೋತುಮಿಚ್ಛಂತಿ ಯೇ ನರಾಃ || 21 ||

ಅಗ್ನಿಷ್ಟೋಮ-ಫಲಂ ತೇಷಾಂ ಗಂಗಾಸ್ನಾನಂ ದಿನೇ ದಿನೇ |
ಸರ್ವೇ ಗ್ರಹಾಃ ಶುಭೈಕಾದಶ-ಸ್ಥಾನ-ಫಲದಾ ವರದಾ ಭವಂತು || 22 ||

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ |
ಗೋ-ಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಸ್ಸಮಸ್ತಾಃ ಸುಖಿನೋ ಭವಂತು || 23 ||

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ |
ದೇಶೋಽಯಂ ಕ್ಷೋಭ-ರಹಿತಃ ಸಜ್ಜನಾಃ ಸಂತು ನಿರ್ಭಯಾಃ || 24 ||

ಅಪುತ್ರಾಃ ಪುತ್ರಿಣಃ ಸಂತು ಪುತ್ರಿಣಃ ಸಂತು ಪೌತ್ರಿಣಃ |
ಅಧನಾಃ ಸಧನಾಃ ಸಂತು ಜೀವಂತು ಶರದಾಂ ಶತಮ್ || 25 ||

## ಶೌಚವಿಧಿ

ಪಾವಿತ್ರ್ಯದಿಂದ ಕೂಡಿದ ನಿರ್ಮಲತೆಯನ್ನು ಶಾಸ್ತ್ರಗಳಲ್ಲಿ ಶೌಚ ಎಂದು ಹೇಳಲಾಗಿದೆ. ಇಂತಹ ಶೌಚವು ಇಲ್ಲದೇ ನಡೆಸಿದ ಎಲ್ಲಾ ಕರ್ಮಗಳೂ ನಿಷ್ಫಲವಾಗುತ್ತದೆ ಎಂಬುದನ್ನು ಸ್ಮೃತಿಕಾರರು ಹೇಳಿದ್ದಾರೆ -

ಶೌಚಾಚಾರ ವಿಹೀನಸ್ಯ ಸಮಸ್ತಾ ನಿಷ್ಫಲಾಃ ಕ್ರಿಯಾಃ |

ತಲೆಗೆ ವಸ್ತ್ರವನ್ನು ಸುತ್ತಿಕೊಂಡು, ಮಲಮೂತ್ರವನ್ನು ವಿಸರ್ಜಿಸಬೇಕು. ಸೂರ್ಯ, ಅಗ್ನಿ, ಬ್ರಾಹ್ಮಣ, ಹಸು, ದೇವಸ್ಥಾನ, ಮುಂತಾದವುಗಳ ಮುಂದೆ ಮಲಮೂತ್ರ ವಿಸರ್ಜಿಸಬಾರದು. ಅನಂತರ ಶುದ್ಧವಾದ ಮಣ್ಣು ಮತ್ತು ನೀರಿನಿಂದ ಶೌಚವನ್ನು ಆಚರಿಸಬೇಕು. ಮೃತ್ತಿಕಾಶೌಚಕ್ಕೆ ಸಂಬಂಧಿಸಿದಂತೆ ಸಂಖ್ಯಾನಿಯಮವನ್ನು ಸ್ಮೃತಿಕಾರರು ಹೇಳಿದ್ದಾರೆ. ಅದು ಸಂಪೂರ್ಣ ನಿರ್ಮಲತೆಗಾಗಿ ನಿರೂಪಿಸಲ್ಪಟ್ಟಿದೆ. ನಿರ್ಮಲತೆ ಇದ್ದಷ್ಟು ಫಲಾಧಿಕ್ಯ. ಈ ಹಿನ್ನೆಲೆಯಲ್ಲಿ ಮೈ-ಕೈಗಳ ನೈರ್ಮಲ್ಯಕ್ಕೆ ಎಷ್ಟು ಬಾರಿ ತೊಳೆವುದು ಅವಶ್ಯವೋ ಅಷ್ಟು ಬಾರಿ ತೊಳೆಯಬೇಕು. ಈ ಮಾತನ್ನು "ದೇವಲರು" ಸ್ಪಷ್ಟಪಡಿಸಿದ್ದಾರೆ -

ಯಾವತ್ತು ಶುದ್ಧಿಂ ಮನ್ಯೇತ ತಾವಚ್ಛೌಚಂ ವಿಧೀಯತೇ |

ಈ ನೈರ್ಮಲ್ಯದ ವಿಧಿಸೂತ್ರಗಳನ್ನು ಆಚರಿಸಬೇಕೆಂಬುದಾಗಿ ಆಚಾರ್ಯರು "ಕೃತಶೌಚೋ ಯಥಾವಿಧಿ" ಎಂಬುದಾಗಿ ಹೇಳಿದ್ದಾರೆ.

## ಸ್ನಾನವಿಧಿ

"ಸ್ನಾನಮೂಲಾಃ ಕ್ರಿಯಾಃ ಸರ್ವಾಃ" ಎಂದು ಶಾಸ್ತ್ರದ ವಚನ. ಸಂಧ್ಯಾವಂದನೆ, ದೇವಪೂಜೆ, ತಪಸ್ಸು, ಯಜ್ಞ, ಇತ್ಯಾದಿಗಳು ಶ್ರುತಿಸ್ಮೃತಿಗಳಲ್ಲಿ ವಿಧಿಸಿರುವ ಎಲ್ಲಾ ಸತ್ಕರ್ಮಗಳೂ ಸ್ನಾನವನ್ನು ಮಾಡಿಯೇ ಮಾಡಬೇಕಾದವು. ಸ್ನಾನವಿಲ್ಲದ ವೈದಿಕಕರ್ಮಾನುಷ್ಠಾನವು ಧರ್ಮವಿರುದ್ಧವೆಂದು ಸ್ಮೃತಿಕಾರರು ಆದೇಶಿಸಿದ್ದಾರೆ. ಆದುದರಿಂದಲೇ ಎಲ್ಲಾ ಕರ್ಮಗಳಲ್ಲಿ ಸ್ನಾನವು ಅತ್ಯಂತ ಶ್ರೇಷ್ಠವೆನಿಸಿದೆ. ಚತುರ್ಮುಖಬ್ರಹ್ಮದೇವರು ಭಗವಂತನನ್ನು ಪೂಜಿಸಲು ಸೃಷ್ಟಿಯ ಆರಂಭದಲ್ಲಿ ನೀರನ್ನು ಸೃಷ್ಟಿಸಿದರು. ನೀರಿನಲ್ಲಿ ಸಕಲದೇವತೆಗಳ ಸಾನ್ನಿಧ್ಯವಿದೆ. ಆದ್ದರಿಂದಲೇ ಸ್ಮೃತಿಕಾರರು "ಆಪಃ ಸ್ವಭಾವತೋ ಮೇಧ್ಯಾಃ" ಎಂಬುದಾಗಿ ನೀರು ಸ್ವಾಭಾವಿಕ ಶುದ್ಧವೆಂದು ಸಾರಿದ್ದಾರೆ. ನಿತ್ಯವೂ ಗಂಗೆಯ ಸ್ನಾನವನ್ನು ಮಾಡುತ್ತೇವೆಂದು ಸಂಕಲ್ಪಪೂರ್ವಕವಾಗಿ ಗಂಗಾಜನಕ ಪ್ರಯಾಗ ಬಿಂದುಮಾಧವನ ಸ್ಮರಣೆಯೊಂದಿಗೆ ಸ್ನಾನವನ್ನು ಆಚರಿಸಿದರೆ ನಾವಿರುವ ಸ್ಥಳದಲ್ಲಿಯೇ ಗಂಗಾಸ್ನಾನದ ಫಲವನ್ನು ಪಡೆಯಬಹುದಾಗಿದೆ. ಇಂತಹ ಪವಿತ್ರವಾದ ಪ್ರಾತಸ್ಸ್ನಾನದಿಂದ ಬರುವ ಫಲವನ್ನು ಸ್ಮೃತಿ, ಪುರಾಣಗಳಲ್ಲಿ ಹೀಗೆ ವಿವರಿಸಿದ್ದಾರೆ -

**ಗುಣಾ ದಶ ಸ್ನಾನಪರಸ್ಯ ನಿತ್ಯಂ ರೂಪಂ ಚ ತೇಜಶ್ಚ ಬಲಂ ಚ ಶೌರ್ಯಮ್ |**
**ಆಯುಷ್ಯಮಾರೋಗ್ಯಮಲೋಲುಪತ್ವಂ ದುಸ್ಸ್ವಪ್ನನಾಶಶ್ಚ ತಪಶ್ಚ ಮೇಧಾ ||** (ಸ್ಕಾಂದಪುರಾಣ)

ಸೌಂದರ್ಯ, ತೇಜಸ್ಸು, ಬಲ, ಶೌರ್ಯ, ಆಯುಷ್ಯ, ಆರೋಗ್ಯ, ಅಲೋಲುಪತೆ, ದುಸ್ಸ್ವಪ್ನನಾಶ, ತಪಸ್ಸು, ಹಾಗೂ ಮೇಧಾ ಈ ಹತ್ತು ಗುಣಗಳು ಪ್ರಾತಃಸ್ನಾನದ ಫಲಗಳೆಂದು ಸ್ಕಾಂದಪುರಾಣದಲ್ಲಿ ಉಲ್ಲೇಖಿತವಾಗಿದೆ.

**ವಿಷ್ಣುಧರ್ಮೋತ್ತರದಲ್ಲಿ ಸ್ನಾನದ ಫಲಗಳನ್ನು ಈ ರೀತಿಯಾಗಿ ಸಂಗ್ರಹಿಸಲಾಗಿದೆ -**

**ಸ್ನಾತಃ ಶೌಚಮವಾಪ್ನೋತಿ ಸ್ನಾನಂ ತುಷ್ಟಿಕರಂ ಪರಮ್ |**
**ಬಾಹ್ಯಮಾಭ್ಯಂತರಂ ದೋಷಂ ಸ್ನಾನೇನ ಪ್ರಣುದತ್ಯಪಿ ||**
**ದುಸ್ಸ್ವಪ್ನಶಮನಂ ಸ್ನಾನಂ ಚಾಮಾಂಗಲ್ಯಪ್ರಣಾಶನಮ್ |**
**ಮಾಂಗಲ್ಯಜನನಂ ಮುಖ್ಯಂ ಮನಃಶೌಚಕರಂ ಪರಮ್ ||**
**ವಹ್ನಿವೃದ್ಧಿಕರಂ ಸ್ನಾನಂ ಸ್ನಾನಂ ಸೌಭಾಗ್ಯವರ್ಧನಮ್ |**
**ಅಲಕ್ಷ್ಮ್ಯಾಃ ಶಮನಂ ಸ್ನಾನಂ ಸ್ನಾನಂ ದುರಿತನಾಶನಮ್ ||**
**ಸ್ನಾತಃ ಕ್ರಿಯಾಸಮರ್ಥಶ್ಚ ತಥಾ ಭವತಿ ಮಾನವಃ ||** (ವಿಷ್ಣುಧರ್ಮೋತ್ತರ, 3-277-13...16)

ಪ್ರಾತಃಸ್ನಾನದಿಂದ ಶುದ್ಧಿ, ಮನಃಪ್ರಸನ್ನತೆ, ಬಾಹ್ಯ-ಅಂತರ ದೋಷಗಳ ಪರಿಹಾರ, ದುಸ್ಸ್ವಪ್ನನಾಶ, ಅಮಾಂಗಲ್ಯನಾಶ, ಮಾಂಗಲ್ಯದ ವೃದ್ಧಿ, ಮಾನಸಿಕ ಶುದ್ಧಿ, ಜಠರಾಗ್ನಿಯ ಶುದ್ಧಿ, ಸೌಭಾಗ್ಯವೃದ್ಧಿ, ಅಲಕ್ಷ್ಮಿಯ ನಾಶ, ದುರಿತಧ್ವಂಸ, ಕ್ರಿಯಾಸಾಮರ್ಥ್ಯ, ಇವೆಲ್ಲವೂ ಸಿದ್ಧಿಸುವುವು. ಹೀಗೆ ಪ್ರಾತಃಸ್ನಾನವು ಲೌಕಿಕ, ಧಾರ್ಮಿಕ, ಆಧ್ಯಾತ್ಮಿಕ ದೃಷ್ಟಿಯಿಂದಲೂ ಮಹತ್ತ್ವವುಳ್ಳದ್ದಾಗಿದೆ.

**ಪ್ರಾತಸ್ಸ್ನಾನದ ಪ್ರಧಾನಾಂಗಗಳು :-**

ಸಂಕಲ್ಪ, ಸೂಕ್ತಪಠನ, ಮಾರ್ಜನ, ಅಘಮರ್ಷಣ ಸ್ನಾನ, ದೇವ-ಋಷಿ - ಪಿತೃ-ಯಕ್ಷ್ಮ - ತರ್ಪಣ ಎಂಬುದಾಗಿ ಐದು ಅಂಗಗಳನ್ನು ಪ್ರಾತಃಸ್ನಾನವು ಒಳಗೊಂಡಿದೆ.

## ಸ್ನಾನಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ರೀಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮಚರಣೇ ಭಾರತವರ್ಷೇ, ಭರತಖಂಡೇ, ಜಂಬೂದ್ವೀಪೇ, ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇ ತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇನ ಚಾಂದ್ರಮಾನೇನ .... ನಾಮಸಂವತ್ಸರೇ, .... ಅಯನೌ, .... ಋತೌ, .... ಮಾಸೇ, .... ಪಕ್ಷೇ, .... ತಿಥೌ, .... ವಾಸರೌ, ಶುಭನಕ್ಷತ್ರ, ಶುಭಯೋಗ, ಶುಭಕರಣ, ಏವಂಗುಣವಿಶೇಷಣವಿಶಿಷ್ಟಾಯಾಂ ಶುಭಪುಣ್ಯತಿಥೌ ಶ್ರೀರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ತ್ರಿವಿಕ್ರಮವರಾಹಾಭಿನ್ನ ಧ್ರುವರೂಪೇ ಶ್ರೀಹರಿಪ್ರೇರಣಯಾ ಶ್ರೀಹರಿಪ್ರೀತ್ಯರ್ಥಂ, ಜ್ಞಾನಭಕ್ತಿವೈರಾಗ್ಯಸಿದ್ಧ್ಯರ್ಥಮ್ ಅಂತಃಕರಣಶುದ್ಧ್ಯರ್ಥಂ, ಶರೀರಶುದ್ಧ್ಯರ್ಥಂ, ಜ್ಞಾತಾಜ್ಞಾತದೋಷಪರಿಹಾರಾರ್ಥಮ್, ಅಶ್ವತ್ಥನಾರಾಯಣತುಲಸೀವಿಷ್ಣುವೈಷ್ಣವಸನ್ನಿಧೌ, ಭಾಗೀರಥ್ಯಾದಿ ಸಾರ್ಧತ್ರಿಕೋಟಿತೀರ್ಥಾಭಿಮಾನಿದೇವತಾಸನ್ನಿಧೌ ಅಸ್ಯಾಂ.... ನದ್ಯಾಂ ಪ್ರಾತಃಸ್ನಾನಮಹಂ ಕರಿಷ್ಯೇ ||

ಯಸ್ಯಾಂತಃ ಸರ್ವಮೇವೇದಮಚ್ಯುತಸ್ಯಾವ್ಯಯಾತ್ಮನಃ |
ತಮಾರಾಧಯ ಗೋವಿಂದಂ ಸ್ಥಾನಮಗ್ರ್ಯಂ ಯದೀಚ್ಛಸಿ ||

ನಾಶರಹಿತ ಸ್ವರೂಪವುಳ್ಳವನೂ, ವೃದ್ಧಿಹ್ರಾಸರಹಿತನೂ ಆದ ಯಾವ ಶ್ರೀನಾರಾಯಣನ ಉದರದೊಳಗೆ ಈ ಎಲ್ಲಾ ವಿಶ್ವವಿದೆಯೋ ಅಂತಹ ವೇದವೇದ್ಯ ವಿಷ್ಣುವನ್ನು, ಶ್ರೇಷ್ಠವಾದ ಸ್ಥಾನವನ್ನು ಬಯಸುವಿಯಾದರೆ ಪೂಜಿಸು.

## ಊರ್ಧ್ವಪುಂಡ್ರಧಾರಣೆ

ಊರ್ಧ್ವಲೋಕವನ್ನು ಬಯಸುವವರು ಊರ್ಧ್ವಪುಂಡ್ರವನ್ನು ಧರಿಸಬೇಕೆಂದು ನಾರದೀಯಪುರಾಣದಲ್ಲಿ ಉಲ್ಲೇಖವಾಗಿದೆ -

**ಊರ್ಧ್ವಗತ್ಯಾಂ ಹಿ ಯಸ್ಯೇಚ್ಛಾ ತಸ್ಯೋರ್ಧ್ವಂ ಪುಂಡ್ರಮುಚ್ಯತೇ |**
**ಊರ್ಧ್ವಗತ್ಯಾ ತು ದೇವತ್ವಂ ಪ್ರಾಪ್ನೋತೀಹ ನ ಸಂಶಯಃ ||**

ಇಂತಹ ಮುಕ್ತಿಯನ್ನೇ ಕೊಡುವ ಊರ್ಧ್ವಪುಂಡ್ರಧಾರಣೆಯನ್ನು ಯಾವ ರೀತಿಯಾಗಿ ಮಾಡಬೇಕೆನ್ನುವುದನ್ನು ಮತ್ತು ಅದರ ಮಹತ್ತ್ವವನ್ನು ಶ್ರೀಮದಾಚಾರ್ಯರು 'ಕೃಷ್ಣಾಮೃತಮಹಾರ್ಣವ'ದಲ್ಲಿ ಉಲ್ಲೇಖಿಸಿದ್ದಾರೆ -

**ಊರ್ಧ್ವಪುಂಡ್ರಮೃಜುಂ ಸೌಮ್ಯಂ ಲಲಾಟೇ ಯಸ್ಯ ದೃಶ್ಯತೇ |**
**ಸ ಚಂಡಾಲೋಽಪಿ ಶುದ್ಧಾತ್ಮಾ ಪೂಜ್ಯ ಏವ ನ ಸಂಶಯಃ ||**

"ಯಾರ ಹಣೆಯಲ್ಲಿ ಸರಳ ಹಾಗೂ ಸುಂದರವಾದ ಊರ್ಧ್ವಪುಂಡ್ರವನ್ನು ಕಾಣುತ್ತೇವೋ ಅವನು ಚಂಡಾಲನಾದರೂ ಪುಣ್ಯಾತ್ಮ ಮತ್ತು ಪೂಜ್ಯ. ಇದರಲ್ಲಿ ಸಂಶಯವಿಲ್ಲ."

**ಊರ್ಧ್ವಪುಂಡ್ರಂ ಲಲಾಟೇ ತು ದಂಡಾಕಾರಂ ಸುಶೋಭನಮ್ |**
**ಮಧ್ಯೇ ಛಿದ್ರೇಣ ಸಂಯುಕ್ತಂ ತಚ್ಛಿದ್ರಂ ಮಮ ಮಂದಿರಮ್ ||**

"ಹಣೆಯಲ್ಲಿರುವ ಊರ್ಧ್ವಪುಂಡ್ರವು ದಂಡಾಕಾರವಾಗಿ ಸುಂದರವಾಗಿ ಹಾಗೂ ಮಧ್ಯದಲ್ಲಿ ಛಿದ್ರ ಸಹಿತವಾಗಿ ಇರಬೇಕು. ಆ ಛಿದ್ರವೇ ನನ್ನ ವಾಸಸ್ಥಾನ."

**ನಾಸಿಕಾಮೂಲಮಾರಭ್ಯ ಲಲಾಟಾಂತಂ ತು ವಿನ್ಯಸೇತ್ |**
**ಅಂಗುಲಂ ದ್ವ್ಯಂಗುಲಂ ವಾಪಿ ಮಧ್ಯೇ ಛಿದ್ರಂ ಪ್ರಕಲ್ಪಯೇತ್ ||**

ವೃದ್ಧಹಾರೀತಸ್ಮೃತಿಯಲ್ಲಿ - ಹಣೆಯ ಪುಂಡ್ರವು ಮೂಗಿನ ಬುಡದಿಂದ ಅಂದರೆ ಹುಬ್ಬುಗಳ ನಡುವೆ ಸ್ವಲ್ಪ ಕೆಳಗಿನಿಂದ ಆರಂಭಗೊಳ್ಳಬೇಕು ಎಂಬುದನ್ನು ಸ್ಪಷ್ಟವಾಗಿ ಹೇಳಿದೆ.

**ಯಜ್ಞೋ ದಾನಂ ತಪಶ್ಚೈವ ಸ್ವಾಧ್ಯಾಯಃ ಪಿತೃತರ್ಪಣಮ್ |**
**ವ್ಯರ್ಥಂ ಭವತಿ ತತ್ಸರ್ವಮ್ ಊರ್ಧ್ವಪುಂಡ್ರಂ ವಿನಾ ಕೃತಮ್ ||**

ಊರ್ಧ್ವಪುಂಡ್ರವನ್ನು ಧರಿಸದೇ ಮಾಡಿದ ಯಾಗ, ದಾನ, ತಪಸ್ಸು, ವೇದಾಧ್ಯಯನ, ಪಿತೃತರ್ಪಣ ಈ ಎಲ್ಲಾ ಸತ್ಕರ್ಮಗಳೂ ವ್ಯರ್ಥವಾಗುತ್ತವೆ.

ಊರ್ಧ್ವಪುಂಡ್ರಧಾರಣೆ ಮಾಡದವರಿಗೆ ದೋಷವನ್ನು ಹೇಳಿದ್ದಾರೆ -

**ಊರ್ಧ್ವಪುಂಡ್ರವಿಹೀನಸ್ಯ ಸ್ಮಶಾನಸದೃಶಂ ಮುಖಮ್ |**
**ಅವಲೋಕ್ಯ ಮುಖಂ ತೇಷಾಮಾದಿತ್ಯಮವಲೋಕಯೇತ್ ||**

ಊರ್ಧ್ವಪುಂಡ್ರವಿಲ್ಲದ ಮುಖ ಸ್ಮಶಾನದಂತೆ. ಅಂತಹ ಮುಖವನ್ನು ಕಂಡರೆ ಪ್ರಾಯಶ್ಚಿತ್ತರೂಪವಾಗಿ ಸೂರ್ಯನನ್ನು ಕಾಣಬೇಕು. ಅಂದರೆ ಅವರ ದರ್ಶನದಿಂದ ಬರುವ ಪಾಪವನ್ನು ಕಳೆಯಲು ಸೂರ್ಯನನ್ನು ನೋಡಬೇಕು ಎಂಬುದಾಗಿ ಅರ್ಥ. ಹೀಗೆ ನಿತ್ಯವೂ ಊರ್ಧ್ವಪುಂಡ್ರವನ್ನು ಧರಿಸುವುದು ವೈಷ್ಣವ ದೀಕ್ಷೆಗೆ ಪೂರಕವಾಗಿದೆ.

**ಊರ್ಧ್ವಪುಂಡ್ರಧಾರಣೆಯ ವಿಧಾನ :-** ಆಚಮನ, ಪ್ರಾಣಾಯಾಮ ಮಾಡಿಕೊಂಡು ದೇಶಕಾಲೋಚ್ಚಾರಣೆ ಮಾಡಿ, ಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಗೋಪೀಚಂದನತಿಲಕಾಯುಧ-ತುಲಸೀಕಾಷ್ಠಮಾಲಾದಿಧಾರಣಂ ಕರಿಷ್ಯೇ ಎಂದು ಸಂಕಲ್ಪಿಸಬೇಕು. ಗಾಯತ್ರೀಮಂತ್ರದಿಂದ ಎಡಗೈಯಲ್ಲಿ ನಿರ್ಮಾಲ್ಯ

ತೀರ್ಥವನ್ನು ತೆಗೆದುಕೊಂಡು "ಓಂ ನಮೋ ನಾರಾಯಣಾಯ" ಈ ಮಂತ್ರದಿಂದ ಹಾಗೂ ವಿಷ್ಣುಸೂಕ್ತದಿಂದ ಗೋಪೀಚಂದನವನ್ನು ತೇಯಬೇಕು. ಅಲ್ಲಿ ಮೂಲಮಂತ್ರವನ್ನು ತುಳಸೀದಳದಿಂದ ಬರೆಯಬೇಕು. ಗದೆ ಹಾಗೂ ನಾರಾಯಣಮುದ್ರೆಯನ್ನು ಅದರಲ್ಲಿ ಮೂಡಿಸಬೇಕು. ಆಮೇಲೆ ಶುಕ್ಲಪಕ್ಷದಲ್ಲಿ ಕೇಶವಾದಿ ದ್ವಾದಶನಾಮಗಳಿಂದಲೂ, ಕೃಷ್ಣಪಕ್ಷದಲ್ಲಿ ಸಂಕರ್ಷಣಾದಿ ನಾಮಗಳಿಂದಲೂ ಲಲಾಟವೇ ಮೊದಲಾದ ಸ್ಥಾನಗಳಲ್ಲಿ ನಾಮಗಳನ್ನು ಧರಿಸಬೇಕು.

ಗೋಪೀಚಂದನಪ್ರಾರ್ಥನಾಮಂತ್ರ -

ಗೋಪೀಚಂದನಪಾಪಘ್ನ ವಿಷ್ಣುದೇಹ ಸಮುದ್ಭವ |
ಚಕ್ರಾಂಕಿತ ನಮಸ್ತುಭ್ಯಂ ಧಾರಣಾನ್ಮುಕ್ತಿದೋ ಭವ ||

| ಪುಂಡ್ರಸ್ಥಾನ | ಆಕಾರ | ಅಳತೆ | ನಾಮ (ಶುಕ್ಲಪಕ್ಷ) | ನಾಮ (ಕೃಷ್ಣಪಕ್ಷ) |
|---|---|---|---|---|
| ನೆತ್ತಿ | ಬಿದಿರಿನ ಎಲೆ | 4" | ಓಂ ವಾಸುದೇವಾಯ ನಮಃ | ಓಂ ವಾಸುದೇವಾಯ ನಮಃ |
| ಹಣೆ | ಬಿದಿರಿನ ಎಲೆ | 4" | ಓಂ ಕೇಶವಾಯ ನಮಃ | ಓಂ ಸಂಕರ್ಷಣಾಯ ನಮಃ |
| ಹೊಟ್ಟೆ (ಮಧ್ಯ) | ದೀಪಶಿಖೆ | 8" | ಓಂ ನಾರಾಯಣಾಯ ನಮಃ | ಓಂ ವಾಸುದೇವಾಯ ನಮಃ |
| ಎದೆ | ಕಮಲ ಹೂ | 8" | ಓಂ ಮಾಧವಾಯ ನಮಃ | ಓಂ ಪ್ರದ್ಯುಮ್ನಾಯ ನಮಃ |
| ಕುತ್ತಿಗೆ (ಎದುರು) | ಜಂಬೂಫಲ | 4" | ಓಂ ಗೋವಿಂದಾಯ ನಮಃ | ಓಂ ಅನಿರುದ್ಧಾಯ ನಮಃ |
| ಹೊಟ್ಟೆ (ಬಲ) | ದೀಪಶಿಖೆ | 8" | ಓಂ ವಿಷ್ಣವೇ ನಮಃ | ಓಂ ಪುರುಷೋತ್ತಮಾಯ ನಮಃ |
| ತೋಳು (ಬಲ) | ಬಿದಿರಿನ ಎಲೆ | 8" | ಓಂ ಮಧುಸೂದನಾಯ ನಮಃ | ಓಂ ಅಧೋಕ್ಷಜಾಯ ನಮಃ |
| ಕುತ್ತಿಗೆ (ಬಲ) | ಜಂಬೂಫಲ | 4" | ಓಂ ತ್ರಿವಿಕ್ರಮಾಯ ನಮಃ | ಓಂ ನಾರಸಿಂಹಾಯ ನಮಃ |
| ಹೊಟ್ಟೆ (ಎಡ) | ದೀಪಶಿಖೆ | 8" | ಓಂ ವಾಮನಾಯ ನಮಃ | ಓಂ ಅಚ್ಯುತಾಯ ನಮಃ |
| ತೋಳು (ಎಡ) | ಬಿದಿರಿನ ಎಲೆ | 8" | ಓಂ ಶ್ರೀಧರಾಯ ನಮಃ | ಓಂ ಜನಾರ್ದನಾಯ ನಮಃ |
| ಕುತ್ತಿಗೆ (ಎಡ) | ಜಂಬೂಫಲ | 4" | ಓಂ ಹೃಷೀಕೇಶಾಯ ನಮಃ | ಓಂ ಉಪೇಂದ್ರಾಯ ನಮಃ |
| ಬೆನ್ನು (ಕೆಳಗೆ) | ಜಂಬೂಫಲ | 8" | ಓಂ ಪದ್ಮನಾಭಾಯ ನಮಃ | ಓಂ ಹರಯೇ ನಮಃ |
| ಕುತ್ತಿಗೆ (ಹಿಂದೆ) | ಜಂಬೂಫಲ | 4" | ಓಂ ದಾಮೋದರಾಯ ನಮಃ | ಓಂ ಕೃಷ್ಣಾಯ ನಮಃ |
| (ಬಲ)ಸ್ತನದ ಮೇಲೆ | ಉದ್ದ ಉರುಟು | 2" | ಓಂ ಶ್ರೀವತ್ಸಾಯ ನಮಃ | ಓಂ ಶ್ರೀವತ್ಸಾಯ ನಮಃ |
| (ಎಡ)ಸ್ತನದ ಮೇಲೆ | ಉರುಟು | 1" | ಓಂ ಕೌಸ್ತುಭಾಯ ನಮಃ | ಓಂ ಕೌಸ್ತುಭಾಯ ನಮಃ |

ಪಂಚಮುದ್ರೆ :- ವೈಷ್ಣವ ಸಂಸ್ಕಾರವನ್ನು ಪಡೆದು ಕರ್ಮಗಳನ್ನು ಆಚರಿಸಬೇಕು. ವೈಷ್ಣವ ಸಂಸ್ಕಾರದಲ್ಲಿ ಪ್ರಮುಖವಾದುದು ವಾರ್ಷಿಕವಾಗಿ ಬರುವ ತಪ್ತಮುದ್ರಾಧಾರಣೆ. ಇದರ ಜೊತೆಗೆ ನಿತ್ಯದಲ್ಲಿ ಗೋಪೀಚಂದನದಿಂದ ಶಂಖಚಕ್ರಗದಾಪದ್ಮನಾರಾಯಣಮುದ್ರೆಗಳ ಧಾರಣೆಯೂ ಶಾಸ್ತ್ರಗಳಲ್ಲಿ ವಿಹಿತವಾಗಿವೆ. ನಾಮಮುದ್ರಾಧಾರಣೆಯಿಂದ ದೇಹ ಪವಿತ್ರವಾಗಿ ಭಗವಂತನ ಪೂಜೆಗೆ ಯೋಗ್ಯವಾಗುತ್ತದೆ.

ಮುದ್ರೆ ಧರಿಸದೆ ಮಾಡಿದ ಸಕಲ ಕರ್ಮಗಳೂ ನಿಷ್ಫಲವೆಂದು ವಾಸಿಷ್ಠಸ್ಮೃತಿಯಲ್ಲಿ ಉಲ್ಲೇಖವಾಗಿದೆ -.

ಅಧೃತ್ವಾ ವಿಧಿವಚ್ಚಕ್ರಂ ಯದಿ ಕರ್ಮ ಸಮಾಚರೇತ್ |
ನಿಷ್ಫಲಂ ತು ಭವೇತ್ ತಸ್ಯ ಇಷ್ಟಾಪೂರ್ತಂ ದ್ವಿಜೋತ್ತಮಾಃ ||

ವಿಶೇಷವಾದ ಭಗವಂತನ ಸಾನ್ನಿಧ್ಯಕ್ಕೆ ವೈಷ್ಣತ್ವ ಸಂಪಾದನೆಗೆ ಇನ್ನೂ ಅನೇಕ ಫಲಗಳು ಪಂಚಮುದ್ರಾಧಾರಣೆಯಿಂದ ಬರುತ್ತದೆ ಎಂಬುದಾಗಿ ಶಾಸ್ತ್ರಗಳು ಹೇಳಿವೆ -

**ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ |**
**ಯತ್ಫಲಂ ಶ್ರೂಯತೇ ತಚ್ಚ ಮದೀಯಾಯುಧಧಾರಣಾತ್ ||**

ಸಹಸ್ರ ಅಶ್ವಮೇಧ ಯಾಗಗಳು, ನೂರು ವಾಜಪೇಯ ಯಾಗಗಳಿಂದ ಏನು ಫಲ ಬರುತ್ತದೋ ಅಂತಹ ಫಲ ನನ್ನ ಮುದ್ರಾಧಾರಣದಿಂದ ಬರುತ್ತದೆ ಎಂದು ಭಗವಂತನೇ ಆಡಿದ ಮಾತು.

**ಸರ್ವಪಾಪವಿನಾಶಂ ಹಿ ರಥಾಂಗಸ್ಯ ಹಿ ಧಾರಣಮ್ |**
**ಸರ್ವಕಲ್ಯಾಣಮಿಹ ಚ ಪಶ್ಚಾತ್ ಸಂಸಾರನಾಶನಮ್ ||**

ಮುದ್ರಾಧಾರಣೆಯಿಂದ ಸರ್ವಪಾಪಗಳೂ ಪರಿಹಾರವಾಗುತ್ತವೆ. ಸರ್ವಮಂಗಳವುಂಟಾಗುತ್ತದೆ. ಅದಲ್ಲದೇ ಸಂಸಾರಬಂಧನವನ್ನೇ ಪರಿಹರಿಸುತ್ತದೆ.

ಕೇವಲ ಜಪಾದಿ ಅನುಷ್ಠಾನ ಮಾಡುವವರಷ್ಟೇ ಮುದ್ರಾಧಾರಣೆಯನ್ನು ಮಾಡುವುದಲ್ಲ. ಅನ್ನಪ್ರಾಶನವಾದ ನಂತರ ಸಕಲ ವರ್ಣದವರಿಗೂ, ಸಕಲ ಆಶ್ರಮದವರಿಗೂ, ಸ್ತ್ರೀಯರಿಗೂ ಸಹ ಮುದ್ರಾಂಕನವು ವಿಹಿತವಾಗಿದೆ. ಯಜಮಾನನು ಪತ್ನೀ, ಪುತ್ರ, ಮೊದಲಾದ ತನ್ನ ಕುಟುಂಬದ ಸಕಲರಿಗೂ ಮುದ್ರಾಧಾರಣ ಮಾಡಿಸಬೇಕು. ಮನೆಯ ಎಲ್ಲರೂ ಶಂಖಚಕ್ರಾಂಕಿತರಾಗಬೇಕು. ಮನೆಯ ದನಕರುಗಳು, ನಿತ್ಯ ಉಪಯೋಗಿಸುವ ಅಡಿಗೆ ಪಾತ್ರೆಗಳಿಗೂ ಮುದ್ರಾಧಾರಣೆಯನ್ನು ಮಾಡಿಸಿ ಭಗವಂತನಿಗೆ ಸಂಬಂಧಪಟ್ಟ ಹೆಸರನ್ನಿಟ್ಟು ಅವುಗಳನ್ನು ರಕ್ಷಣೆ ಮಾಡಬೇಕೆಂದು ಪುರಾಣಗಳಲ್ಲಿ ಉಲ್ಲೇಖವಾಗಿವೆ-

**ಕಲತ್ರಾಪತ್ಯಭೃತ್ಯೇಷು ಪಶ್ವಾದಿಷು ವಿಮುಕ್ತಯೇ |**
**ಪಶುಪುತ್ರಾದಿಕಂ ಸರ್ವಂ ಗೃಹೋಪಕರಣಾನಿ ಚ |**
**ಅಂಕಯೇತ್ ಚಕ್ರಶಂಖಾಭ್ಯಾಂ ನಾಮ ಕುರ್ಯಾಚ್ಚ ವೈಷ್ಣವಮ್ ||**

**ಚಕ್ರಾದಿಗಳ ಅಭಿಮಾನಿ ದೇವತೆಗಳು :-**

ದುರ್ಗಾ ಚಕ್ರಾಧಿದೇವೀ ಸ್ಯಾತ್ ಶ್ರೀಶ್ಚ ಶಂಖಾಧಿದೇವತಾ |
ವಾಯುರ್ಗದಾಧಿದೇವಸ್ಸ್ಯಾದ್ಭೂಮಿಃ ಪದ್ಮಾಭಿಮಾನಿನೀ ||

ಚಕ್ರಕ್ಕೆ ದುರ್ಗಾದೇವಿಯೂ, ಶಂಖಕ್ಕೆ ಶ್ರೀದೇವಿಯೂ, ಪದ್ಮಕ್ಕೆ ಭೂದೇವಿಯೂ, ಗದೆಗೆ ವಾಯುದೇವರೂ ಅಭಿಮಾನಿ ದೇವತೆಗಳಾಗಿರುವರು. ಆದ್ದರಿಂದ ಇಂತಹ ಚಕ್ರಾದಿಗಳ ಧಾರಣೆಯಿಂದ ಆಯಾ ಅಭಿಮಾನಿ ದೇವತೆಗಳ ವಿಶೇಷ ಅನುಗ್ರಹವಾಗುತ್ತದೆ. ಇದರಂತೆ ಕೃದ್ಧೋಲ್ಕಾದಿ ಐದು ರೂಪಗಳು ಪಂಚಮುದ್ರೆಗಳಿಗೆ ಅಭಿಮಾನಿ ಭಗವದ್ರೂಪಗಳು.

**ಚಕ್ರ ಮುದ್ರಾಧಾರಣ -**

**ಪ್ರಾರ್ಥನೆ -** **ಸುದರ್ಶನ ಮಹಾಜ್ವಾಲ ಕೋಟಿಸೂರ್ಯಸಮಪ್ರಭ |**
**ಅಜ್ಞಾನಾಂಧಸ್ಯ ಮೇ ನಿತ್ಯಂ ವಿಷ್ಣೋರ್ಮಾರ್ಗಂ ಪ್ರದರ್ಶಯ ||**

| | |
|---|---|
| ಚಕ್ರಮುದ್ರೆಯನ್ನು -ಬಲಕೆನ್ನೆಗೆ | 1 |
| ಹೃದಯಕ್ಕೆ | 3. |
| ಉದರಕ್ಕೆ | 5 |
| ಉದರದ ಬಲಭಾಗಕ್ಕೆ | 2 |

ಎದೆಯ ಬಲಭಾಗಕ್ಕೆ 3
ಬಲಭುಜದ ನಾಮದ ಮೇಲೆ ಅಕ್ಕಪಕ್ಕ 2
ಎಡಭುಜದ ನಾಮದ ಕೆಳಗೆ 1
ಬಲಕಿವಿಯ ಕೆಳಗೆ 1
ಕಂಠಕ್ಕೆ 1

ಹೀಗೆ ಒಟ್ಟು 19 ಚಕ್ರಮುದ್ರೆಗಳನ್ನು ಧರಿಸಬೇಕು.

ಶಂಖಮುದ್ರಾಧಾರಣ -

ಪ್ರಾರ್ಥನೆ - ಪಾಂಚಜನ್ಯ ನಿಜಧ್ಯಾನ ಧ್ವಸ್ತಪಾತಕಸಂಚಯ |
ಪಾಹಿ ಮಾಂ ಪಾಪಿನಂ ಘೋರಂ ಸಂಸಾರಾರ್ಣವಪಾತಿನಮ್ ||

ಶಂಖಮುದ್ರೆಯನ್ನು - ಎಡದ ಕೆನ್ನೆಗೆ 1
ಹೊಟ್ಟೆಯ ಎಡಗಡೆಗೆ 2
ಎದೆಯ ಎಡಭಾಗಕ್ಕೆ 3
ಎಡಭುಜದ ನಾಮದ ಮೇಲೆ ಅಕ್ಕಪಕ್ಕ 2
ಬಲಭುಜದ ನಾಮದ ಕೆಳಗೆ 1
ಎಡಕಿವಿಯ ಕೆಳಗೆ 1

ಹೀಗೆ ಒಟ್ಟು 10 ಮುದ್ರೆಗಳನ್ನು ಧರಿಸಬೇಕು.

ಗದಾಮುದ್ರಾಧಾರಣ -

ಪ್ರಾರ್ಥನೆ - ಬ್ರಹ್ಮಾಂಡ ಭುವನಾರಂಭ ಮೂಲಸ್ತಂಭೋ ಗದಾಧರಃ |
ಕೌಮೋದಕೀ ಕರೇ ಯಸ್ಯ ತಂ ನಮಾಮಿ ಗದಾಧರಮ್ ||

ಗದಾಮುದ್ರೆಯನ್ನು - ಹಣೆಗೆ 1
ಹೊಟ್ಟೆಯ ಎಡಭಾಗಕ್ಕೆ 1
ಎದೆಯ ಎಡಭಾಗಕ್ಕೆ 1
ಎಡಭುಜದ ನಾಮದ ಶಂಖದ ಅಕ್ಕಪಕ್ಕದಲ್ಲಿ ಅದರ ಕೆಳಗೆ 2

ಹೀಗೆ ಒಟ್ಟು 5 ಮುದ್ರೆಗಳನ್ನು ಧರಿಸಬೇಕು.

ಪದ್ಮಮುದ್ರಾಧಾರಣ -

ಪ್ರಾರ್ಥನೆ - ಸಂಸಾರಭಯಭೀತಾನಾಂ ಯೋಗೀನಾಮಭಯಪ್ರದ |
ಪದ್ಮಹಸ್ತಸ್ಥಿತೋ ವಿಷ್ಣೋ ಪಾಹಿ ಮಾಂ ಸರ್ವತೋಭಯಾತ್ ||

ಪದ್ಮಮುದ್ರೆಯನ್ನು - ಎದೆಗೆ 1
ಹೊಟ್ಟೆಯ ಬಲಭಾಗಕ್ಕೆ 1
ಎದೆಯ ಬಲಭಾಗಕ್ಕೆ 1
ಬಲಭುಜದ ನಾಮದ ಚಕ್ರದ ಅಕ್ಕ ಪಕ್ಕ ಕೆಳಗೆ 2

ಹೀಗೆ ಒಟ್ಟು 5 ಮುದ್ರೆಗಳನ್ನು ಧರಿಸವೇಕು.

**ನಾರಾಯಣಾಮುದ್ರಾಧಾರಣ -**

ಪ್ರಾರ್ಥನೆ - ನಾರಾಯಣ ನಮಸ್ತೇಽಸ್ತು ನಾಮಮುದ್ರಾಂಕಿತಂ ನರಮ್ |

ದೃಷ್ಟ್ವೈವ ಲಭತೇ ಮುಕ್ತಿಂ ಚಂಡಾಲೋ ಬ್ರಹ್ಮಘಾತಕಃ ||

ನಾರಾಯಣ ಮುದ್ರೆಯನ್ನು ಎಲ್ಲ ನಾಮಗಳ ಮೇಲೆ ಎರಡೂ ಕಪೋಲಗಳ ಮೇಲೆಯೂ ಎದೆಯ ಎರಡೂ ಬದಿಗಳಲ್ಲಿಯೂ ಒಟ್ಟು 51 ಬಾರಿ ಧರಿಸಬೇಕು. 12 + 19 + 10 + 5 + 5 = 51

ನಂತರ ಮುದ್ರೆಗಳನ್ನು ತೊಳೆದು ಆ ಜಲವನ್ನು "ಓಂ ನಮೋ ನಾರಾಯಣಾಯ" ಎಂದು ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಂಡು "ನಮೋ ಮುದ್ರಾಭ್ಯಃ" ಎಂದು ಹೇಳಿ ಎಲ್ಲ ಮುದ್ರೆಗಳನ್ನು ಪೆಟ್ಟಿಗೆ(ಪಾತ್ರೆ)ಯಲ್ಲಿ ಇಡಬೇಕು. ಮುದ್ರೆಗಳನ್ನು ಯಾವುದೇ ಕಾಲದಲ್ಲಿ ನೆಲದ ಮೇಲೆ ಇಡಬಾರದು. ಯಾವುದೇ ಕಾರಣಕ್ಕೂ ಬೇರೆಯವರ ಮುದ್ರೆಗಳನ್ನು ಹಚ್ಚಿಕೊಳ್ಳಬಾರದು. ಹಾಗೆ ಹಚ್ಚಿಕೊಂಡಲ್ಲಿ ನಾವು ಮಾಡಿದ ಎಲ್ಲ ಪುಣ್ಯಕರ್ಮಗಳ ಫಲವೂ ಅವರಿಗೆ ಸೇರುತ್ತದೆ.

**ತುಲಸೀ ಮಾಲಾಧಾರಣ -**

ಪ್ರಾರ್ಥನೆ - ತುಲಸೀಕಾಷ್ಠ ಸಂಭೂತೇ ಮಾಲೇ ಕೃಷ್ಣಜನಪ್ರಿಯೇ |

ಬಿಭರ್ಮಿ ತ್ವಾಮಹಂ ಕಂಠೇ ಕುರು ಮಾಂ ಕೃಷ್ಣವಲ್ಲಭಮ್ ||

ನಂತರ ತುಲಸೀ ಮಾಲೆಯನ್ನು ಕೊರಳಲ್ಲಿ ಧರಿಸಬೇಕು. ಹೀಗೆ ಗೋಪೀಚಂದನ ಮುದ್ರಾದಿಧಾರಣೆಯನ್ನು ಮಾಡಿದ ನಂತರವೇ ಸಕಲ ಕರ್ಮಗಳಿಗೆ ಅರ್ಹನೆನಿಸುತ್ತಾನೆ.

## ಪಾಪಪುರುಷವಿಸರ್ಜನಮ್

**ಪಾಪಪುರುಷನಿರಸನ :-** ಮಂತ್ರಜಪಗಳನ್ನು ಆರಂಭಿಸುವ ಮುನ್ನ ನಮ್ಮ ದೇಹದಲ್ಲಿ ಸಂಚಿತವಾಗಿರಬಹುದಾದ ಎಲ್ಲ ಬಗೆಯ ಪಾಪಗಳನ್ನು ಅನುಸಂಧಾನಪೂರ್ವಕವಾಗಿ ನಿಸ್ಸಾರಗೊಳಿಸಿ ದೇಹ-ಮನಸ್ಸುಗಳ ಶುದ್ಧಿಯನ್ನು ಸಂಪಾದಿಸಿಕೊಳ್ಳುವುದು ಅವಶ್ಯವಾಗಿದೆ. ಅದಕ್ಕಾಗಿ ಮಂತ್ರಜಪಗಳ ಆರಂಭದಲ್ಲಿ ಪಾಪಪುರುಷನೆನಿಸುವ ಕಲಿಯ ನಿರಾಸದ ಕ್ರಮವನ್ನು ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಉಲ್ಲೇಖಿಸಿದ್ದಾರೆ.

ಆದಾವೇವ ಜಪೇ ಕುರ್ಯಾಚ್ಛೋಷಣಂ ದಹನಂ ಪ್ಲುತಿಮ್ |

ವಾಯ್ವಗ್ನಿವಾರುಣೈರ್ಬೀಜೈರ್ಧ್ಯಾತ್ವಾ ತನ್ಮಂಡಲೇ ಹರಿಮ್ ||

ಜಪಕಾಲದ ಪೂರ್ವದಲ್ಲಿ ವಾಯುಬೀಜಾಕ್ಷರ ಎನಿಸಿರುವ "ಯಂ"ನಿಂದ ಹೊಟ್ಟೆಯಲ್ಲಿ, ಅಗ್ನಿಬೀಜಾಕ್ಷರ ಎನಿಸಿರುವ "ರಂ"ನಿಂದ ಹೃದಯದಲ್ಲಿ, ವಾರುಣಬೀಜಾಕ್ಷರ ಎನಿಸಿರುವ "ವಂ"ನಿಂದ ಶಿರಸ್ಸಿನಲ್ಲಿ, ಪ್ರದ್ಯುಮ್ನ, ಅನಿರುದ್ಧ, ವಾಸುದೇವರೂಪಗಳಲ್ಲಿ ಇರುವ ಶ್ರೀಹರಿಯನ್ನು ಧ್ಯಾನಿಸಿ, ಪಾಪಪುರುಷನ ಒಣಗಿಸುವಿಕೆ, ಸುಡುವಿಕೆಗಳನ್ನು ನಡೆಸಬೇಕು ಮತ್ತು ದೇಹದಲ್ಲಿ ಅಮೃತಧಾರೆಯನ್ನು ಸುರಿಸುವಂತೆ ಶ್ರೀಹರಿಯನ್ನು ಪ್ರಾರ್ಥಿಸಬೇಕು.

ಪಾಪಪುರುಷನ ಆಕೃತಿಯ ಕಲ್ಪನೆಯು ಈ ರೀತಿಯಾಗಿದೆ - ಬ್ರಹ್ಮಹತ್ಯೆಯೇ ಶಿರಸ್ಸು ; ಚಿನ್ನವನ್ನು ಕದಿಯುವಿಕೆಯೇ ಎರಡು ಭುಜಗಳಾಗಿ ಉಳ್ಳವನು ; ಮದ್ಯಪಾನ ಹೃದಯ ; ಗುರುಪತ್ನೀ ಗಮನ ಅವನ ಕಟಿ ; ಪಾತಕಿಗಳ ಸಹವಾಸರೂಪವಾದ ಪಾತಕವೇ ಅವನ ಕಾಲುಗಳು ; ಉಳಿದೆಲ್ಲ ಪಾತಕಗಳು ಅವನ ಅಂಗಾಂಗಗಳು. ಇಂತಹ ಪಾಪಪುರುಷನನ್ನು ಹೊಟ್ಟೆಯ ಎಡಬದಿಯಲ್ಲಿ ಚಿಂತಿಸಬೇಕು.

ವಾಮಕುಕ್ಷಿಂ ಸ್ಪೃಷ್ಟ್ವಾ (ಅನಂತರ ಎಡ ಬಗಲಿನ ಕೆಳಹೊಟ್ಟೆಯನ್ನು ಮುಟ್ಟಬೇಕು.)

ಬ್ರಹ್ಮಹತ್ಯಾ ಶಿರಸ್ಕಂ ಚ ಸ್ವರ್ಣಸ್ತೇಯಭುಜದ್ವಯಮ್ |
ಸುರಾಪಾನಹೃದಾಯುಕ್ತಂ ಗುರುತಲ್ಪಕಟಿದ್ವಯಮ್ |
ತತ್ಸಂಯೋಗಪದದ್ವಂದ್ವಮಂಗಪ್ರತ್ಯಂಗಪಾತಕಮ್ |
ಉಪಪಾತಕರೋಮಾಣಂ ರಕ್ತಶ್ಮಶ್ರುವಿಲೋಚನಮ್ ||
ಅಧೋಮುಖಂ ಕೃಷ್ಣವರ್ಣಮ್ ಅಂಗುಷ್ಠಪರಿಮಾಣಕಮ್ |
ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌ ಪಾಪಂ ವಿಚಿಂತಯೇತ್ ||

(ಎಂದು ಹೇಳಿ ಎಡಬಗಲಿನ ಕೆಳ ಭಾಗದಲ್ಲಿ ಪಾಪಪುರುಷನಿರುವಂತೆ ಚಿಂತಿಸಬೇಕು. ಅನಂತರ ಪಾಪಪುರುಷನು ಹೊಕ್ಕಳಿಗೆ ಬಂದಂತೆ ಭಾವಿಸಿ ಹೊಕ್ಕಳನ್ನು ಮುಟ್ಟಬೇಕು.)

ನಾಭೌ ಷಟ್ಕೋಣವಾಯುಮಂಡಲಮಧ್ಯಸ್ಥೋ ನೀಲವರ್ಣೋ ವಾಯುಬೀಜವಾಚ್ಯಃ ವಾಯ್ವಂತರ್ಯಾಮೀ ಪ್ರದ್ಯುಮ್ನೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ವಾಯುನಾ ಶೋಷಯತು | ಎಂದು ಹೇಳಿ "ಶ್ರೀಂ ಯಂ ಶ್ರೀಂ" ಎಂದು 6 ಸಲ ಹೇಳಿ ಆ ಪಾಪಪುರುಷನನ್ನು ಒಣಗಿದಂತೆ ಭಾವಿಸಬೇಕು.

ತತಸ್ತಂ ಹೃದಯದೇಶಮಾನೀಯ ಹೃದಯೇ ತ್ರಿಕೋಣವಹ್ನಿಮಂಡಲಮಧ್ಯಸ್ಥೋ ರಕ್ತವರ್ಣೋ ಅಗ್ನಿಸ್ಥಃ ಅಗ್ನಿಬೀಜವಾಚ್ಯಃ ಸಂಕರ್ಷಣೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಮ್ ಅಗ್ನಿನಾ ನಿರ್ದಹತು | ಎಂದು ಹೇಳಿ "ಶ್ರೀಂ ರಂ ಶ್ರೀಂ" ಎಂದು 12 ಸಲ ಜಪಿಸಿ ಆ ಪಾಪಪುರುಷನನ್ನು ಸುಟ್ಟು ಹೋದಂತೆ ಭಾವಿಸಿ ಎಡದ ಮೂಗಿನಿಂದ ಶ್ವಾಸ ಬಿಟ್ಟು ಆ ಬೂದಿಯನ್ನು ಹೊರಗೆ ಹೋದಂತೆ ಭಾವಿಸಬೇಕು.

ಅನಂತರ-ಶಿರಸ್ಸನ್ನು ಮುಟ್ಟಿ - ಶಿರಸಿ ವರ್ತುಲಚಂದ್ರಮಂಡಲಮಧ್ಯಸ್ಥೋ ಶ್ವೇತವರ್ಣೋ ವರುಣಸ್ಥೋ ವರುಣಬೀಜ ವಾಚ್ಯಃ ಶ್ರೀವಾಸುದೇವೋ ಭಗವಾನ್ ಮಚ್ಛರೀರಮ್ ಆಪಾದಮಸ್ತಕಮ್ ಅಮೃತವೃಷ್ಟ್ಯಾ ಆಪ್ಲಾವಯತು | ಎಂದು ಹೇಳಿ "ಶ್ರೀಂ ವಂ ಶ್ರೀಂ" ಎಂದು 24 ಸಲ ಜಪಿಸಿ ಶಿರಸ್ಸಿನಲ್ಲಿರುವ ವಾಸುದೇವನು ಅಮೃತವನ್ನು ವರ್ಷಿಸಿ ಶರೀರವನ್ನು ಪವಿತ್ರಗೊಳಿಸಿದನೆಂದು ಭಾವಿಸಬೇಕು.

ಅಥ ಪುಣ್ಯಪುರುಷಧ್ಯಾನಮ್ :-

ದಕ್ಷಿಣಕುಕ್ಷಿಂ ಸ್ಪೃಷ್ಟ್ವಾ (ಬಲ ಹೊಟ್ಟೆಯ ಬಲಭಾಗವನ್ನು ಮುಟ್ಟಿ) -

ಅಶ್ವಮೇಧಶಿರಸ್ಕಂ ಚ ಮಹಾದಾನಭುಜದ್ವಯಮ್ |
ಸೋಮಪಾನಹೃದಾಯುಕ್ತಂ ಬ್ರಹ್ಮಚರ್ಯಕಟಿದ್ವಯಮ್ ||
ತತ್ಸಂಯೋಗಪದದ್ವಂದ್ವಂ ಸಾಂಗೋಪಾಂಗಶುಭಕ್ರಿಯಮ್ |
ಸರ್ವವ್ರತಾಂಗರೋಮಾಣಂ ಗುರುಸೇವಾದಿಲೋಚನಮ್ ||
ಸಿಂಹಾಸನೇ ಸಮಾಸೀನಂ ಸ್ವರ್ಣವರ್ಣಂ ಕಿರೀಟಿನಮ್ |
ಗೀರ್ವಾಣನುತಪಾದಾಬ್ಜಂ ಪುಣ್ಯಂ ತಂ ಚ ವಿಭಾವಯೇ ||

ಎಂದು ಪುಣ್ಯಪುರುಷನನ್ನು ಧ್ಯಾನಿಸಬೇಕು.

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಜಪಕ್ರಿಯಾದಿಷು |
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ||

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ |**
**ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ||**

ಅನೇನ ಗುರುಮಂತ್ರಜಪೇನ ಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀಲಕ್ಷ್ಮೀವೆಂಕಟೇಶಃ ಪ್ರೀಯತಾಂ ಪ್ರೀತೋ ವರದೋ ಭವತು || ಶ್ರೀಕೃಷ್ಣಾರ್ಪಣಮಸ್ತು |(ಎಂದು ಕೈಯಲ್ಲಿ ನೀರನ್ನು ಹಾಕಿಕೊಂಡು ಬಿಡಬೇಕು.)

(ಪತಿ ನಿಯಾಮಕ ಎಂದು ಸ್ತ್ರೀಯರೂ, ಗುರುನಿಯಾಮಕ ಎಂದು ಪುರುಷರೂ ಹೇಳಬೇಕು. ಪತಿಯು ಮೃತನಾದಲ್ಲಿ ಮಾತ್ರ ಪತ್ಯಂತರ್ಗತ ಎಂದೂ, ಗುರುಗಳು ಮೃತವಾಗಿದ್ದಲ್ಲಿ ಗುರ್ವಂತರ್ಗತ ಎಂದೂ ಹೇಳಬೇಕು.)

## ಗುರುಮಂತ್ರ

ಯಾವುದೇ ಮಂತ್ರಜಪಗಳು ಜಪಿಸುವವನಿಗೆ ಸಿದ್ಧಿಯಾಗಬೇಕಾದರೆ ಅವನು ಆ ವಿದ್ಯೆಯ ಉಪದೇಶಕ್ಕೆ ಸಂಬಂಧಿಸಿದ ಗುರುಪರಂಪರೆಯನ್ನು ಸ್ಮರಿಸಬೇಕೆಂಬುದನ್ನು ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಉಲ್ಲೇಖಿಸಿದ್ದಾರೆ -

**ಸ್ಮೃತ್ವಾ ಗುರುಂ ಪೂರ್ವಗುರುಮಾದಿಮೂಲಗುರುಂ ತಥಾ |**
**ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೇ ತು ಸಿದ್ಧಿಭಾಕ್ ||**

ವಿದ್ಯೆಯನ್ನು ಉಪದೇಶಿಸಿದ ಗುರುಗಳನ್ನೂ, ಅವರ ಗುರುಗಳನ್ನೂ, ಅಂದರೆ ತನ್ನ ಪರಮಗುರುಗಳನ್ನೂ, ಆ ವಿದ್ಯೆಗಳ ಸಂಪ್ರದಾಯ ಪ್ರವರ್ತಕರಾದ ಆದಿಗುರುಗಳೆನಿಸಿರುವ ಶ್ರೀಮಧ್ವಾಚಾರ್ಯರನ್ನೂ ಆ ವಿದ್ಯೆಯನ್ನೊಳಗೊಂಡ ಸಕಲ ವಿದ್ಯೆಗಳ ಮೊಟ್ಟಮೊದಲ ಅಭಿವ್ಯಕ್ತಿಗೆ ಕಾರಣರಾದ ಮೂಲಗುರುಗಳೆನಿಸಿರುವ ಶ್ರೀವೇದವ್ಯಾಸರು, ಭಾರತಿ, ಸರಸ್ವತಿ, ವಾಯು, ಲಕ್ಷ್ಮೀನಾರಾಯಣರ ಮತ್ತು ಆ ವಿದ್ಯೆಯಿಂದ ಪ್ರತಿಪಾದ್ಯನಾದ ದೇವತೆಯನ್ನೂ, ವಿದ್ಯೆಯ ಮುಖ್ಯಫಲವಾದ ಮೋಕ್ಷಪುರುಷಾರ್ಥವನ್ನೂ ಅನುಗ್ರಹಿಸುವ ಲಕ್ಷ್ಮೀನಾರಾಯಣರ ಸ್ಮರಣೆಯನ್ನು ನಡೆಸಿ, ವಿದ್ಯಾಭ್ಯಾಸದಲ್ಲಿ ತೊಡಗುವವನು ವಿದ್ಯಾಭ್ಯಾಸದ ಸಿದ್ಧಿಯನ್ನು ಹೊಂದುವನೆಂದು ಸಂದೇಶಿಸಿದ್ದಾರೆ.

ಸಂಧ್ಯಾವಂದನೆ, ದೇವರಪೂಜೆ, ಮಂತ್ರಜಪಗಳು ಅನುಸಂಧಾನಪೂರ್ವಕವಾಗಿ ನಡೆಸಬೇಕಾದುದರಿಂದ ಅಂತಹ ಅರ್ಥಾನುಸಂಧಾನಕ್ಕೆ ಶಾಸ್ತ್ರೀಯ ಚಿಂತನೆ ಆವಶ್ಯಕತೆ ಇದೆ. ಆದುದರಿಂದ ಮಂತ್ರಗಳ ಜಪವು ವಿದ್ಯಾಭ್ಯಾಸದ ವ್ಯಾಪ್ತಿಯಲ್ಲಿ ಸೇರಿಕೊಳ್ಳುವುದು. ಹೀಗೆ ವಿದ್ಯಾಭ್ಯಾಸದ ರೂಪದಲ್ಲಿರುವ ಈ ಮಂತ್ರಜಪಗಳು ಜಪಿಸುವವನಿಗೆ ಸಿದ್ಧಿಸಬೇಕಾದರೆ ಅವನು ವಿದ್ಯೆಗೆ ಸಂಬಂಧಿಸಿದ ಗುರುಪರಂಪರೆಯನ್ನು ಭಕ್ತಿಪೂರ್ವಕವಾಗಿ ಸ್ಮರಿಸಿಕೊಳ್ಳಬೇಕು. ಈ ಹಿನ್ನೆಲೆಯಲ್ಲಿ ಎಲ್ಲಾ ಸ್ತ್ರೀಪುರುಷರು ಜಪಿಸುವ ಪೂರ್ವದಲ್ಲಿ ಗುರುನಮಸ್ಕಾರವನ್ನು ಅವಶ್ಯವಾಗಿ ನಡೆಸಬೇಕು. "ಸ್ತ್ರೀಯರು ಶ್ರೀಕಾರವನ್ನು, ಪುರುಷರು ಓಂಕಾರವನ್ನು **ಹೇಳಬೇಕು."**

ಶ್ರೀಗುರುಭ್ಯೋ ನಮಃ | ದ್ವಿರಾಚಮ್ಯ (ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತು ಎರಡು ಸಲ ಆಚಮನ ಮಾಡಬೇಕು.)

ಓಂ ಕೇಶವಾಯ ಸ್ವಾಹಾ | ಓಂ ಸಂಕರ್ಷಣಾಯ ನಮಃ |
ಓಂ ನಾರಾಯಣಾಯ ಸ್ವಾಹಾ | ಓಂ ವಾಸುದೇವಾಯ ನಮಃ |
ಓಂ ಮಾಧವಾಯ ಸ್ವಾಹಾ | ಓಂ ಪ್ರದ್ಯುಮ್ನಾಯ ನಮಃ |
ಓಂ ಗೋವಿಂದಾಯ ನಮಃ | ಓಂ ಅನಿರುದ್ಧಾಯ ನಮಃ |
ಓಂ ವಿಷ್ಣವೇ ನಮಃ | ಓಂ ಪುರುಷೋತ್ತಮಾಯ ನಮಃ |
ಓಂ ಮಧುಸೂದನಾಯ ನಮಃ | ಓಂ ಅಧೋಕ್ಷಜಾಯ ನಮಃ |

ಓಂ ತ್ರಿವಿಕ್ರಮಾಯ ನಮಃ | ಓಂ ನಾರಸಿಂಹಾಯ ನಮಃ |
ಓಂ ವಾಮನಾಯ ನಮಃ | ಓಂ ಅಚ್ಯುತಾಯ ನಮಃ |
ಓಂ ಶ್ರೀಧರಾಯ ನಮಃ | ಓಂ ಜನಾರ್ದನಾಯ ನಮಃ |
ಓಂ ಹೃಷೀಕೇಶಾಯ ನಮಃ | ಓಂ ಉಪೇಂದ್ರಾಯ ನಮಃ |
ಓಂ ಪದ್ಮನಾಭಾಯ ನಮಃ | ಓಂ ಹರಯೇ ನಮಃ |
ಓಂ ದಾಮೋದರಾಯ ನಮಃ | ಓಂ ಶ್ರೀಕೃಷ್ಣಾಯ ನಮಃ || (ಎಂದು ಹೇಳಿ ಕೈಮುಗಿಯಬೇಕು.)

ಶುಭೇ ಶೋಭನಮುಹೂರ್ತೇ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ, ಶ್ರೀಶ್ವೇತವರಾಹಕಲ್ಪೇ, ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮಚರಣೇ ಗೋದಾವರ್ಯಾಃ ದಕ್ಷಿಣೇ/ಉತ್ತರೇ ತೀರೇ, ಶಾಲಿವಾಹನಶಕೇ ಬೌದ್ಧಾವತಾರೇ, ಸಂವತ್ಸರೇ .... ಅಯನೇ .... ಋತೌ .... ಮಾಸೇ .... ಪಕ್ಷೇ .... ತಿಥೌ .... ವಾಸರೇ ಶುಭನಕ್ಷತ್ರ, ಶುಭಯೋಗ, ಶುಭಕರಣ, ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಗುರುಮಂತ್ರಜಪಂ ಕರಿಷ್ಯೇ.

ಭೂತೋಚ್ಚಾಟನಮ್ :- ಮಮ ಶರೀರಸ್ಥ ಅಂತರ್ಯಾಮೀ ಋಷಿಃ | ಸತ್ಯೋ ದೇವತಾ | ಪ್ರಕೃತಿಶ್ಛಂದಃ | ಸಮಸ್ತಭೂತೋಚ್ಚಾಟನೇ ವಿನಿಯೋಗಃ |

ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ |
ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ||
ಅಪಕ್ರಾಮಂತು ಭೂತಾದ್ಯಾಃ ಕ್ರೂರಾಶ್ಚೈವ ತು ರಾಕ್ಷಸಾಃ |
ಯೇ ಚಾತ್ರ ನಿವಸಂತ್ಯತ್ರ ದೇವತಾ ಭುವಿ ಸಂತತಮ್ ||
ತೇಷಾಮಪ್ಯವಿರೋಧೇನ ಬ್ರಹ್ಮಕರ್ಮ ಸಮಾರಭೇ ||

ಇತಿ ವಾಮಭಾಗೇ ಭೂತೋಚ್ಚಾಟನಂ ಕೃತ್ವಾ | ಈ ಮಂತ್ರವನ್ನು ಹೇಳಿ ನಮ್ಮ ಸಮೀಪದಲ್ಲಿರುವ ರಾಕ್ಷಸರು ಮೊದಲಾದವರನ್ನು ಒಂದು ಕೈ ಚಿಟಿಕಿಯಿಂದ ಓಡಿಸಬೇಕು.

ಆಸನಶುದ್ಧಿ :- ಪೃಥ್ವೀತಿ ಮೇರುಪೃಷ್ಠ ಋಷಿಃ | ಕೂರ್ಮೋ ದೇವತಾ | ಸುತಲಂ ಛಂದಃ | ಆಸನೇ ವಿನಿಯೋಗಃ |

ಪೃಥ್ವಿ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ |
ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಂ ||
ಮಾಂ ಚ ಪೂತಂ ಕುರು ಧರೇ ನತೋಽಸ್ಮಿ ತ್ವಾಂ ಸುರೇಶ್ವರಿ ||

ಇತಿ ಪೃಥಿವೀಂ ಪ್ರಾರ್ಥಯಿತ್ವಾ (ಈ ಮಂತ್ರವನ್ನು ಹೇಳಿ ಭೂದೇವಿಗೆ ನಮಸ್ಕಾರ ಮಾಡಬೇಕು.)

ನಿರಸ್ತಃ ಪರಾವಸುಃ | ಇದಮಹಮರ್ವಾವಸೋಸ್ಸದನೇ ಸೀದಾಮಿ | ಆಸನೇ ಸೋಮಮಂಡಲೇ ಕೂರ್ಮಸ್ಕಂದೇ ಉಪವಿಷ್ಟಾಸ್ಮಿ (ಎಂದು ಆಸನದಲ್ಲಿ ಕೂಡಬೇಕು.) ಭೂರ್ಭುವಸ್ಸುವಃ (ಎಂದು ಆಸನವನ್ನು ಮುಟ್ಟಬೇಕು).

ಶ್ರೀಮ್ ಅಮ್ ಅನಂತಾಸನಾಯ ನಮಃ | ಶ್ರೀಂ ಮಂ ಮಂಡೂಕಾಯ ನಮಃ |
ಶ್ರೀಂ ಕೂಂ ಕೂರ್ಮಾಯ ನಮಃ | ಶ್ರೀಂ ವಂ ವರಾಹಾಯ ನಮಃ |
ಶ್ರೀಂ ಶೇಂ ಶೇಷಾಯ ನಮಃ | ಶ್ರೀ ಕಾಂ ಕಾಲಾಗ್ನಿರುದ್ರಾಯ ನಮಃ |
ಓಂ ವಂ ವಜ್ರಾಯ ನಮಃ |

ದಿಗ್ಬಂಧನಮ್ :-

ಐಂದ್ರ್ಯಾದಿದಿಕ್ಷು ಬಧ್ನಾಮಿ ನಮಃ |

ಓಂ ನಮಃ ಚಕ್ರಾಯ ಸ್ವಾಹಾ | ಅಸ್ತ್ರಾಯ ಫಟ್ |

ಇತಿ ದಿಗ್ಬಂಧಃ |

ಸುದರ್ಶನಾಯ ವಿದ್ಮಹೇ ಮಹಾಜ್ವಾಲಾಯ ಧೀಮಹಿ | ತನ್ನಶ್ಚಕ್ರಃ ಪ್ರಚೋದಯಾತ್ || (ಎಂದು ಹೇಳುತ್ತಾ ಜಪಕ್ಕೆ ತೊಂದರೆ ಮಾಡುವ ರಾಕ್ಷಸರು ಮೊದಲಾದವರು ಬಾರದಂತೆ ಚೊಟ್ಟನ್ನು ನಾಲ್ಕು ದಿಕ್ಕಿಗೂ ತೋರಿಸಿ ತನ್ನ ನಡುತಲೆಗಿಡಬೇಕು.)

ಕರಶುದ್ಧಿ :-

ಮಣಿಬಂಧೇ ಪ್ರಕೋಷ್ಠೇ ಚ ಕೂರ್ಪರೇ ಹಸ್ತಸಂಧಿಷು |
ತತ್ಪೃಷ್ಠಪಾರ್ಶ್ವಯೋಶ್ಚೈವ ಕರಶುದ್ಧಿರುದಾಹೃತಾ || (ಸ್ಮೃತಿ)

ಶ್ರೀಂ ಯಂ ಶ್ರೀಂ ಎಂದು ಆರು ಸಲವೂ, ಶ್ರೀಂ ರಂ ಶ್ರೀಂ ಎಂದು ಆರು ಸಲವೂ, ಶ್ರೀಂ ವಂ ಶ್ರೀಂ ಎಂದು ಆರು ಸಲವೂ ಜಪಿಸುತ್ತಾ ಮುಂಗೈ ಮೊದಲು ಬೆಟ್ಟುಗಳ ಕೊನೆವರೆಗೆ ಎರಡು ಕೈಗಳ ಮೇಲೂ ಆರು ಸಲ ಸವರಬೇಕು.

ಗುರುನಮಸ್ಕಾರ :- (ಅನಂತರ ಈ ಮುಂದೆ ಹೇಳುವ 12 ಮಂದಿ ಗುರುಗಳಿಗೂ ನಮಸ್ಕಾರ ಮಾಡಬೇಕು.)

1. ಶ್ರೀ ಗುರುಭ್ಯೋ ನಮಃ | 2. ಪರಮಗುರುಭ್ಯೋ ನಮಃ |
3. ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ |
4. ಶ್ರೀವೇದವ್ಯಾಸಾಯ ನಮಃ | 5. ಶ್ರೀ ಭಾರತ್ಯೈ ನಮಃ |
6. ಶ್ರೀ ಸರಸ್ವತ್ಯೈ ನಮಃ | 7. ಶ್ರೀ ವಾಯವೇ ನಮಃ |
8. ಶ್ರೀ ಬ್ರಹ್ಮಣೇ ನಮಃ | 9. ಶ್ರೀ ಲಕ್ಷ್ಮ್ಯೈ ನಮಃ |
10. ಶ್ರೀ ನಾರಾಯಣಾಯ ನಮಃ | 11.ಶ್ರೀ ತತ್ತನ್ ಮಂತ್ರದೇವತಾಯೈ ನಮಃ |
12. ಶ್ರೀ ವಾಸುದೇವಾಯ ನಮಃ | ಶ್ರೀಂ |

ಹೃತ್ಕಮಲಸ್ಥಿತಪರಮಾತ್ಮಾನಂ ಸುಷುಮ್ನಾಮಾರ್ಗೇಣ ಮೂರ್ಧ್ನಿ ವಿನ್ಯಸೇತ್ | (ಅನಂತರ ಹೃದಯಕಮಲದಲ್ಲಿರುವ ನಾರಾಯಣದೇವರನ್ನು "ಸುಷುಮ್ನಾ" ಎಂಬ ನಾಡೀ ಮಾರ್ಗವಾಗಿ ಶಿರಸ್ಸಿಗೆ ತಂದು ನಿಲ್ಲಿಸಿದಂತೆ ಭಾವಿಸಬೇಕು.)

ಪ್ರಾಪ್ನೋತ್ಯಾರಾಧಿತೇ ವಿಷ್ಣೌ ಮನಸಾ ಯದ್ಯದಿಚ್ಛತಿ |
ತ್ರೈಲೋಕ್ಯಾಂತರ್ಗತಂ ಸ್ಥಾನಂ ಕಿಮು ಲೋಕೋತ್ತರೋತ್ತರಾನ್ ||
ವಿಷ್ಣುವನ್ನು ಪೂಜಿಸಿದ ಜನರು ಮನಸ್ಸಿನಿಂದ ಮೂರು ಲೋಕಗಳಲ್ಲಿರುವ ಏನೇನನ್ನು ಬಯಸುತ್ತಾರೋ ಅದನ್ನು ಹೊಂದುತ್ತಾರೆ. ಅಂತೆಯೇ ಮೂರು ಲೋಕೋತ್ತರೋತ್ತರವಾದ ವೈಕುಂಠವನ್ನು ಪಡೆಯುವರು.

## ಸಂಧ್ಯಾವಂದನೆ

ಹಗಲು ರಾತ್ರಿಗಳ ಮತ್ತು ಪೂರ್ವಾಹ್ನ ಅಪರಾಹ್ನಗಳ ಕೂಡುವ ಕಾಲವೇ ಸಂಧ್ಯೆ. ಇಲ್ಲಿ ಮಾಡುವ ದೇವತಾವಂದನೆಯೇ ಸಂಧ್ಯಾವಂದನೆ. ಪ್ರಾತಃ, ಮಧ್ಯಾಹ್ನ, ಸಾಯಂ ಎಂದು ಮೂರು ಸಂಧ್ಯೆಗಳು. ಸೂರ್ಯಮಂಡಲಮಧ್ಯವರ್ತಿಯಾದ ಸವಿತೃನಾಮಕ ನಾರಾಯಣನು ಈ ಮೂರು ಸಂಧ್ಯೆಗಳಿಗೆ ನಿಯಾಮಕನು.

**ಯಾಂ ಸದಾ ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ |**
**ಸಾಯಂ ಪ್ರಾತರ್ನಮಸ್ಯಂತಿ ಸಾ ಮಾಂ ಸಂಧ್ಯಾ ಅಭಿರಕ್ಷತು ||**

ಎಲ್ಲಾ ಚರಾಚರ ಸರ್ವಪ್ರಾಣಿಗಳೂ ಸಾಯಂಕಾಲ ಮತ್ತು ಪ್ರಾತಃಕಾಲದಲ್ಲಿ ಯಾರನ್ನು ನಮಸ್ಕರಿಸುತ್ತಿವೆಯೋ ಅಂತಹ ಸಂಧ್ಯೆ ನನಗೆ ರಕ್ಷಣೆಯನ್ನು ನೀಡಲಿ ಎಂಬ ಪ್ರಸಿದ್ಧವಾದ ಪ್ರಾರ್ಥನೆಯಿಂದಲೂ, ಸಂಧ್ಯಾ ಅಂದರೆ ಕೇವಲ ಜಡಕಾಲವಾಗಿರದೆ ಅದನ್ನೂ ನಿಯಂತ್ರಿಸುವ ಭಗವಂತನೇ ಎಂದು ತಿಳಿಯುವುದು. ಇಂತಹ ಭಗವಂತನು ಗಾಯತ್ರೀ, ಸಾವಿತ್ರೀ, ಸರಸ್ವತೀ ರೂಪಗಳಿಂದ ಇದ್ದು ಸಂಧ್ಯೆ ಎನಿಸಿಕೊಳ್ಳುವನು. ಇಂತಹ ಸಂಧ್ಯಾ ಎನಿಸುವ ಭಗವಂತನಿಗೆ ಅರ್ಘ್ಯಪ್ರದಾನ, ಗಾಯತ್ರೀ ಜಪ, ಉಪಸ್ಥಾನ ರೂಪದಲ್ಲಿ ವಂದನೆ ಮಾಡುವುದೇ ಸಂಧ್ಯಾವಂದನೆ.

**ದಿವಾ ವಾ ಯದಿ ವಾ ರಾತ್ರೌ ಯದಜ್ಞಾನಕೃತಂ ಭವೇತ್ |**
**ತ್ರಿಕಾಲಸಂಧ್ಯಾಕರಣಾತ್ ಸರ್ವಂ ತದ್ಧಿ ಪ್ರಣಶ್ಯತಿ ||**

ಹಗಲಿನಲ್ಲಾಗಲೀ, ರಾತ್ರಿಯಲ್ಲಾಗಲೀ ಅಜ್ಞಾನದಿಂದ ಯಾವ ಪಾಪಗಳನ್ನು ಮಾಡಿದ್ದೇವೆಯೋ ಅವೆಲ್ಲವೂ ತ್ರಿಕಾಲಸಂಧ್ಯೆಯ ಆಚರಣೆಯಿಂದ ನಾಶವಾಗುವುವು.

**ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಃ ಸರ್ವಕರ್ಮಸು |**
**ಅನರ್ಹಃ ಕರ್ಮಣಾಂ ವಿಪ್ರಃ ಸಂಧ್ಯಾಹೀನೋ ಯತಃ ಸ್ಮೃತಃ ||**

ಸಂಧ್ಯಾವಂದನೆಯನ್ನು ಎಂತಹ ಸಂದರ್ಭದಲ್ಲಿಯೂ ಬಿಡಬಾರದು. ಸಂಧ್ಯಾವಂದನೆ ಮಾಡದವನಿಗೆ ವೇದೋಕ್ತವಾದ ಯಾವ ಕರ್ಮದಲ್ಲಿಯೂ ಅರ್ಹತೆ ಇರುವುದಿಲ್ಲ. ಆದುದರಿಂದಲೇ ಅವನು ಉಳಿದ ಯಾವುದೇ ಶಾಸ್ತ್ರೀಯ ಕರ್ಮವನ್ನು ಆಚರಿಸಿದರೂ ಅದರ ಫಲವನ್ನು ಹೊಂದುವುದಿಲ್ಲ ಎಂಬುದಾಗಿ ಸೂಚಿತವಾಗುವುದು.

ನಮ್ಮ ಪ್ರಾಚೀನರು ಎಂತಹ ಸಂದರ್ಭದಲ್ಲಿಯೂ ಸಂಧ್ಯಾವಂದನೆ ಬಿಡುತ್ತಿರಲಿಲ್ಲ. ಪ್ರಯಾಣ ಸಂದರ್ಭದಲ್ಲಿ ಸ್ಥಳಾವಕಾಶವಿಲ್ಲದೇ ಇರುವ ಪ್ರಸಂಗದಲ್ಲಿ ಶುದ್ಧವಾದ ಜಲ ಸಿಗದೇ ಇರುವ ಪ್ರಸಂಗದಲ್ಲಿಯೂ ಸಂಧ್ಯಾವಂದನೆಯನ್ನು ಯಥಾಶಕ್ತಿ ಮಾಡುತ್ತಿದ್ದರು. ಮಹಾಭಾರತಯುದ್ಧದಲ್ಲಿ ಯೋಧರು ಕಾಲಕ್ಕೆ ಸರಿಯಾಗಿ ಕೇವಲ ಮಣ್ಣಿನ ಧೂಳಿನಿಂದ ಸೂರ್ಯಾರ್ಘ್ಯವನ್ನು ಕೊಡುತ್ತಿದ್ದರು. ಇದರಿಂದ ಸಂಧ್ಯಾವಂದನೆಯ ಕಾಲದ ಮಹತ್ವ ತಿಳಿಯುತ್ತದೆ.

**ಋಷಯೋ ದೀರ್ಘಸಂಧ್ಯಾತ್ವಾತ್ ದೀರ್ಘಮಾಯುರವಾಪ್ನುಯುಃ |**
**ಪ್ರಜ್ಞಾಂ ಯಶಶ್ಚ ಕೀರ್ತಿಂ ಚ ಬ್ರಹ್ಮವರ್ಚಸಮೇವ ಚ ||** (ಮನುಸ್ಮೃತಿ, 4-94)

ಹಿಂದೆ ಋಷಿಗಳು ಸಂಧ್ಯಾವಂದನೆಯನ್ನು ಆಚರಿಸಿ ಪಡೆದ ಫಲ - ದೀರ್ಘಾಯುಷ್ಯ, ಪ್ರಜ್ಞೆ, ಯಶಸ್ಸು, ಕೀರ್ತಿ, ಬ್ರಹ್ಮವರ್ಚಸ್ಸು. ಇದನ್ನು ಉಲ್ಲೇಖಿಸಿ ಮನುಸ್ಮೃತಿಯು ತ್ರಿಕಾಲಸಂಧ್ಯೆಯನ್ನಾಚರಿಸುವ ದ್ವಿಜರೆಲ್ಲರೂ ಈ ಫಲವನ್ನು ಪಡೆಯುವರೆಂದು ಸೂಚಿಸುತ್ತದೆ.

ಸಂಧ್ಯಾವಂದನೆಯ ಆಚರಣೆಗೆ ನಮ್ಮ ಪ್ರಾಚೀನರು ಕೊಟ್ಟಿರುವ ಮಹತ್ತ್ವಕ್ಕೆ ಕಾರಣ, ಅದು ಅತ್ಯಂತ ವೈಶಿಷ್ಟ್ಯಪೂರ್ಣವಾದ ಪ್ರಾರ್ಥನೆಯಾಗಿರುವುದು. ತನ್ನ ಶರೀರದ ಪ್ರತಿಯೊಂದು ಭಾಗದಲ್ಲೂ ಭಗವಂತನು ನೆಲಸಿದ್ದಾನೆಂಬ

ಅನುಸಂಧಾನ ಪೂರ್ವಕವಾದ ಆಚಮನ, ದೇವತೆಗಳು ತನ್ನ ಶರೀರವನ್ನು ಶುದ್ಧಗೊಳಿಸಲೆಂಬ ಭಾವದ ವೇದ ಮಂತ್ರಗಳಿಂದ ಪ್ರೋಕ್ಷಣೆ, ಜಗತ್ತಿನ ಸ್ಥಿತಿಗೆ ಪ್ರಮುಖ ಕಾರಣವಾದ ಸೂರ್ಯಮಂಡಲದ ಒಳಗಿರುವ ಸೂರ್ಯದೇವತೆಯಲ್ಲದೆ ಅವನಿಗೂ ನಿಯಾಮಕನಾಗಿರುವ ಅವನ ಅಂತರ್ಗತನಾದ ಸೂರ್ಯನಾರಾಯಣನಿಗೆ ಅರ್ಘ್ಯಪ್ರದಾನ, ಸದ್‌ಬುದ್ಧಿಯನ್ನು ಪ್ರೇರಿಸಲೆಂಬ ಉದ್ದೇಶದ ಗಾಯತ್ರೀ ಜಪ, ಎಲ್ಲೆಡೆಯಲ್ಲಿರುವ ದೇವತೆಗಳಿಗೆ, ಗುರು-ಹಿರಿಯರಿಗೆ, ಮಾತಾ-ಪಿತೃಗಳಿಗೆ ಅಭಿವಾದನ, ಮತ್ತೊಮ್ಮೆ ಭಗವಂತನಿಗೆ ಅಭಿವಂದನೆ ಈ ಎಲ್ಲಾ ಅಂಶಗಳನ್ನೊಳಗೊಂಡ ಸಂಧ್ಯಾವಂದನೆ ಒಂದು ಪರಿಪೂರ್ಣವಾದ ಪ್ರಾರ್ಥನೆಯಾಗಿದೆ. ಇಂತಹ ಪ್ರಾರ್ಥನೆಯನ್ನು ವಿಹಿತ ರೀತಿಯಲ್ಲಿ ಆಚರಿಸುವ ದ್ವಿಜರಿಗೆ ಬ್ರಹ್ಮವರ್ಚಸ್ಸು, ತೀಕ್ಷ್ಣವಾದ ಮೇಧಾಶಕ್ತಿ ಮೊದಲಾದ ಗುಣಗಳು ಲಭಿಸುವುದರಲ್ಲಿ ಹಾಗೂ ಅದನ್ನು ಬಿಟ್ಟಲ್ಲಿ ಬ್ರಾಹ್ಮಣ್ಯಾ ಹೋಗುವುದರಲ್ಲಿಯೂ ಆಶ್ಚರ್ಯವೇನಲ್ಲ.

ಪ್ರತಿಗ್ರಹಾತ್ ಅನ್ನದೋಷಾತ್ ಯದಜ್ಞಾನಕೃತಂ ಭವೇತ್ |
ಗಾಯತ್ರೀ ಪ್ರೋಚ್ಯತೇ ತಸ್ಮಾತ್ ಗಾಯಂತಂ ತ್ರಾಯತೇ ಯತಃ ||

ಪ್ರತಿಗ್ರಹದಿಂದ ಬರುವ ಪಾಪ, ಅನ್ನದೋಷದಿಂದಾಗುವ ಪಾಪ, ಪಾತಕ, ಉಪಪಾತಕ ಇವುಗಳಿಂದ, ಗಾಯತ್ರಿಯು ತನ್ನನ್ನು ಜಪಿಸುವವನನ್ನು ರಕ್ಷಿಸುವುದು. ಆದ್ದರಿಂದಲೇ ಆ ಮಂತ್ರಕ್ಕೆ ಗಾಯತ್ರೀ ಎಂದು ಹೆಸರು.

**ಗಾಯತ್ರೀ ಜಪಕಾಲದಲ್ಲಿ ಅನುಸರಿಸಬೇಕಾದ ನಿಯಮ :-**

1. ಇತರರೊಂದಿಗೆ ಸಂಭಾಷಣೆ, ನಗುವುದು, ಮನಸ್ಸಿನಲ್ಲಿ ಇತರ ವಿಷಯಗಳನ್ನು ಚಿಂತಿಸುವುದು, ಸುತ್ತಮುತ್ತ ನೋಡುವುದು, ನಾಭಿಯ ಕೆಳಪ್ರದೇಶ ಮುಟ್ಟುವುದು ಇತ್ಯಾದಿಗಳನ್ನು ಬಿಡಬೇಕು.

2. ಗಾಯತ್ರೀಮಂತ್ರದ ಅರ್ಥವನ್ನು ಅನುಸಂಧಾನ ಮಾಡುತ್ತ, ಕೋಪತಾಪಗಳಿಲ್ಲದೆ ಶಾಂತ ಮನಸ್ಸಿನಿಂದ ಜಪವನ್ನು ಮಾಡಬೇಕು.

3. ಪ್ರಾತಃಸಂಧ್ಯೆಯ ಗಾಯತ್ರೀಜಪವನ್ನು ಸೂರ್ಯೋದಯವಾಗುವವರೆಗೆ ಪೂರ್ವಾಭಿಮುಖವಾಗಿ ನಿಂತುಕೊಂಡು ಮಾಡತಕ್ಕದ್ದು. ಅನಂತರ ನಿಂತು ಅಥವಾ ಕುಳಿತು ಜಪಿಸಬಹುದು. ಮಾಧ್ಯಾಹ್ನಿಕ ಮತ್ತು ಸಾಯಂ ಸಂಧ್ಯೆಯ ಜಪಗಳನ್ನು ಕುಳಿತುಕೊಂಡು ಮಾಡಬೇಕು.

4. ಜಪಕಾಲದಲ್ಲಿ ಕೈಗಳನ್ನು ವಸ್ತ್ರದಿಂದ ಮುಚ್ಚಿಕೊಂಡು, ಬೆರಳುಗಳನ್ನು ರಂಧ್ರವನ್ನು ಬಿಡದಂತೆ ಜೋಡಿಸಿಕೊಂಡು ಬೇರೆಯವರಿಗೆ ಕಾಣದಂತೆ ಸಂಖ್ಯಾಕ್ರಮದಿಂದ ಜಪಿಸಬೇಕು.

5. ಜಪಕಾಲದಲ್ಲಿ ಗಾಯತ್ರಿಯನ್ನು ಕೆಳಗೆ ತೋರಿಸಿದಂತೆ ಐದು ಸ್ಥಳಗಳಲ್ಲಿ ನಿಲ್ಲಿಸಿ ಉಚ್ಚರಿಸಬೇಕು. - 1. ಓಂ. 2. ಭೂರ್ಭುವಃ ಸ್ವಃ. 3. ತತ್ಸವಿತುರ್ವರೇಣ್ಯಮ್. 4. ಭರ್ಗೋ ದೇವಸ್ಯ ಧೀಮಹಿ. 5. ಧಿಯೋ ಯೋ ನಃ ಪ್ರಚೋದಯಾತ್.

6. ಜಪವು ಮೂರು ವಿಧ - 1. ವಾಚಿಕ - ಇತರರಿಗೆ ಕೇಳಿಸುವಂತೆ ಗಟ್ಟಿಯಾಗಿ ಹೇಳುವುದು. 2. ಉಪಾಂಶು - ತುಟಿಗಳನ್ನು ಚಲಿಸುತ್ತ ಮೆಲ್ಲಗೆ ಉಚ್ಚರಿಸುವುದು. 3. ಮಾನಸ - ಕೇವಲ ಮನಸ್ಸಿನಲ್ಲಿ ಅರ್ಥಾನುಸಂಧಾನ ಪೂರ್ವಕವಾಗಿ ಮಂತ್ರವನ್ನು ಜಪಿಸುವುದು. ಇವುಗಳಲ್ಲಿ ಮಾನಸ ಜಪವು ಅತ್ಯುತ್ತಮ. ವಾಚಕಕ್ಕಿಂತ ಉಪಾಂಶುಜಪವು ಉತ್ತಮವಾದದ್ದು.

7. ಅನಾಮಿಕಾಂಗುಲಿಯ ಮಧ್ಯ ಗ್ರಂಥಿಯಿಂದಾರಂಭಿಸಿ (ಗಂಟಿನಿಂದ) ಪ್ರದಕ್ಷಿಣಾಕಾರವಾಗಿ ಹತ್ತು ಗ್ರಂಥಿಗಳನ್ನು ಎಣಿಸಿ ಜಪಿಸಬೇಕು. ಮಧ್ಯಮಾಂಗುಲಿಯ ಮಧ್ಯ ಮತ್ತು ಕೆಳಗಿನ ಗ್ರಂಥಿಗಳನ್ನು ಬಿಡಬೇಕು.

8. ಪ್ರಾತಃಸಂಧ್ಯೆಯ ಜಪವನ್ನು ನಾಭಿಗೆ ಎದುರಾಗಿ ಕೈಗಳನ್ನು ಇಟ್ಟುಕೊಂಡು ಮಾಡಬೇಕು. ಮಾಧ್ಯಾಹ್ನಿಕ ಮತ್ತು ಸಾಯಂ ಸಂಧ್ಯೆಯ ಜಪಗಳನ್ನು ಮಾಡುವಾಗ ಕೈಗಳನ್ನು ಕ್ರಮವಾಗಿ ವಕ್ಷಃಸ್ಥಳದ ಎದುರಿಗೆ ಮತ್ತು ನಾಸಿಕಾಗ್ರದ ಎದುರಿಗೆ ಇಟ್ಟುಕೊಳ್ಳಬೇಕು.

9. ಸಂಧ್ಯೆಯನ್ನು ಆರಂಭಿಸಿದ ಸ್ಥಳದಲ್ಲಿಯೇ ಜಪವನ್ನೂ ಮುಗಿಸಬೇಕು.

10. ಗಾಯತ್ರೀಂ ತು ಪರಿತ್ಯಜ್ಯ ಯೇಽನ್ಯಮಂತ್ರಮುಪಾಸತೇ |
ಮಂಡೂಕರಾವಾಸ್ತೇ ಜ್ಞೇಯಾ ಇತಿ ವೇದವಿದೋ ವಿದುಃ ||

11. ಗಾಯತ್ರೀಮಂತ್ರವನ್ನು ಯಾವುದೇ ಕಾರಣದಿಂದಲೂ ಜಪಮಾಲೆಯಲ್ಲಿ ಮಾಡಬಾರದು. ಹಾಗಾದಲ್ಲಿ ಅದು ನರಕಪ್ರಾಪ್ತಿಗೆ ಕಾರಣವಾಗುವುದು.

ಗಾಯತ್ರಿಯನ್ನು ಪರಿತ್ಯಜಿಸಿ ಯಾರು ಬೇರೆ ಮಂತ್ರಗಳನ್ನು ಜಪಿಸುತ್ತಾರೋ ಅವರ ಆ ಜಪ ಕಪ್ಪೆಗಳ ಶಬ್ದಕ್ಕೆ ಸಮಾನವೆಂದು ವೇದವಿದರು ತಿಳಿದಿದ್ದಾರೆ.

ಕುರ್ಯಾದನ್ಯಂ ನ ವಾ ಕುರ್ಯಾತ್ ಮೈತ್ರೋ ಬ್ರಾಹ್ಮಣ ಉಚ್ಯತೇ |
ತಸ್ಮಾನ್ನಿತ್ಯಂ ಹರಿಂ ಧ್ಯಾಯನ್ ಕುರ್ಯಾತ್ ಸ್ವಾಧ್ಯಾಯಮಂಜಸಾ ||

ಉಳಿದುದನ್ನು ಮಾಡಲಿ ಅಥವಾ ಬಿಡಲಿ. ತ್ರಿಕಾಲಗಳಲ್ಲಿ ಗಾಯತ್ರೀಯನ್ನು ಜಪಿಸಿದರೆ ಸಾಕು, ಅವನು ಬ್ರಾಹ್ಮಣನೆನಿಸುತ್ತಾನೆ. ಆದ್ದರಿಂದ ನಿತ್ಯವೂ ಹರಿಯನ್ನು ಧ್ಯಾನಿಸುತ್ತ ಗಾಯತ್ರೀಯನ್ನು ಜಪಿಸಬೇಕು.

ಏಕಾಹಂ ಜಪಹೀನಶ್ಚ ಸಂಧ್ಯಾಹೀನೋ ದಿನತ್ರಯೇ |
ದ್ವಾದಶಾಹಮ್ ಅನಗ್ನಿಶ್ಚ ಶೂದ್ರ ಏವ ನ ಸಂಶಯಃ ||

ಒಂದು ದಿನ ಜಪವನ್ನು ಬಿಟ್ಟವನು, ಮೂರು ದಿನ ಸಂಧ್ಯೆಯನ್ನು ತ್ಯಜಿಸಿದವನು, ವಟುವಾದವನು ಹನ್ನೆರಡು ದಿನ ಅಗ್ನಿಕಾರ್ಯವನ್ನು ಮಾಡದವನು (ಗೃಹಸ್ಥನಾದಲ್ಲಿ ಔಪಾಸನ ಮಾಡದವನು) ಶೂದ್ರನೇ, ಸಂಶಯವಿಲ್ಲ.

ಈ ಮೇಲಿನ ಪ್ರಮಾಣಗಳು ಗಾಯತ್ರೀಜಪದ ಮಹತ್ತ್ವವನ್ನು ಸಾರಿ ಹೇಳುತ್ತವೆ.

12. ಗಾಯತ್ರೀಮಂತ್ರದ ಮೂರರಷ್ಟು ನಾರಾಯಣಾಷ್ಟಾಕ್ಷರಮಂತ್ರವನ್ನು ಜಪಿಸಲೇಬೇಕು.

ಸಂಧ್ಯಾವಂದನೆಯ ಪ್ರಮುಖ ಅಂಗಗಳು :- 1. ಆಚಮನ, 2. ಪ್ರಾಣಾಯಾಮ, 3. ಸಂಕಲ್ಪ, 4. ಮಾರ್ಜನ, 5. ಪುನರ್ಮಾರ್ಜನ, 6. ಪಾಪಪುರುಷವಿಸರ್ಜನ, 7. ಅರ್ಘ್ಯಪ್ರದಾನ, 8. ಭೂತೋಚ್ಚಾಟನ, 9. ಅಂಗನ್ಯಾಸ, 10. ದಿಗ್ಬಂಧನ, 11. ಗಾಯತ್ರೀಜಪ, 12. ಸಂಧ್ಯೋಪಸ್ಥಾನ, 13. ದಿಙ್ನಮಸ್ಕಾರ, 14. ಸರ್ವಮಂಗಲ ಚಿಂತನ, 15. ಗೋಬ್ರಾಹ್ಮಣ ನಮಸ್ಕಾರ, 16. ಗೋತ್ರೋಚ್ಚಾರಣಪೂರ್ವಕ ಅಭಿವಾದನ, 17. ಕ್ಷಮಾಪಣ, 18. ಸಮರ್ಪಣೆ.

ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ |
ಏತಾನಿ ಮಾನ್ಯಸ್ಥಾನಾನಿ ಗರೀಯೋ ಯದ್ಯದುತ್ತರಮ್ ||
ಸಂಪತ್ತು, ಬಾಂಧವ್ಯ, ವಯಸ್ಸು, ಕರ್ಮಾನುಷ್ಠಾನ ಹಾಗೂ ಐದನೆಯದ್ದು ವಿದ್ಯೆ. ಇವು ಗೌರವಕ್ಕೆ ಕಾರಣಗಳು. ಅವುಗಳಲ್ಲೂ ಮೊದಲನೆಯದಕ್ಕಿಂತ ಅನಂತರದ್ದು ಶ್ರೇಷ್ಠವಾದುದು.

## ಋಗ್ವೇದೀಯಸಂಧ್ಯಾವಂದನಮ್
### ಪ್ರಾತಸಂಧ್ಯಾವಂದನಮ್

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ |
ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಶ್ಶುಚಿಃ ||

(ಈ ಮಂತ್ರದಿಂದ ನೀರನ್ನು ತಲೆಯ ಮೇಲೆ ಪ್ರೋಕ್ಷಣೆ ಮಾಡಿಕೊಳ್ಳಬೇಕು.)

**ಆಚಮನಮ್ :-**

1. ಓಂ ಕೇಶವಾಯ ಸ್ವಾಹಾ (ಪಂಚಪಾತ್ರೆಯಲ್ಲಿರುವ ನೀರನ್ನು ಉದ್ಧರಣೆಯಿಂದ ಬಲ ಅಂಗೈಯಲ್ಲಿ ಹಾಕಿಕೊಂಡು ಪ್ರಾಶನ ಮಾಡಬೇಕು.)
2. ಓಂ ನಾರಾಯಣಾಯ ಸ್ವಾಹಾ (ಪಂಚಪಾತ್ರೆಯಲ್ಲಿರುವ ನೀರನ್ನು ಉದ್ಧರಣೆಯಿಂದ ಬಲ ಅಂಗೈಯಲ್ಲಿ ಹಾಕಿಕೊಂಡು ಪ್ರಾಶನ ಮಾಡಬೇಕು.)
3. ಓಂ ಮಾಧವಾಯ ಸ್ವಾಹಾ (ಪಂಚಪಾತ್ರೆಯಲ್ಲಿರುವ ನೀರನ್ನು ಉದ್ಧರಣೆಯಿಂದ ಬಲ ಅಂಗೈಯಲ್ಲಿ ಹಾಕಿಕೊಂಡು ಪ್ರಾಶನ ಮಾಡಬೇಕು.)
4. ಓಂ ಗೋವಿಂದಾಯ ನಮಃ | (ಬಲಗೈಯನ್ನು ತೊಳೆಯಬೇಕು.)
5. ಓಂ ವಿಷ್ಣವೇ ನಮಃ | (ಎಡಗೈಯನ್ನು ತೊಳೆಯಬೇಕು.)
6. ಓಂ ಮಧುಸೂದನಾಯ ನಮಃ | (ಮೇಲಿನ ತುಟಿ ಸ್ಪರ್ಶಿಸಬೇಕು.)
7. ಓಂ ತ್ರಿವಿಕ್ರಮಾಯ ನಮಃ | (ಕೆಳಗಿನ ತುಟಿ ಸ್ಪರ್ಶಿಸಬೇಕು.)
8. ಓಂ ವಾಮನಾಯ ನಮಃ | (ಬಲಗಲ್ಲವನ್ನು ಸ್ಪರ್ಶಿಸಬೇಕು.)
9. ಓಂ ಶ್ರೀಧರಾಯ ನಮಃ | (ಎಡಗಲ್ಲವನ್ನು ಸ್ಪರ್ಶಿಸಬೇಕು.)
10. ಓಂ ಹೃಷೀಕೇಶಾಯ ನಮಃ | (ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸಬೇಕು.)
11. ಓಂ ಪದ್ಮನಾಭಾಯ ನಮಃ | (ಎರಡು ಮೊಣಕಾಲುಗಳನ್ನು ಮುಟ್ಟಬೇಕು.)
12. ಓಂ ದಾಮೋದರಾಯ ನಮಃ | (ಶಿರಸ್ಸನ್ನು ಸ್ಪರ್ಶಿಸಬೇಕು.)
13. ಓಂ ಸಂಕರ್ಷಣಾಯ ನಮಃ | (ಮೂಗಿನ ತುದಿಯನ್ನು ಮುಟ್ಟಬೇಕು.)
14. ಓಂ ವಾಸುದೇವಾಯ ನಮಃ | (ಮೂಗಿನ ಬಲಭಾಗವನ್ನು ಮುಟ್ಟಬೇಕು.) ಅಂಗುಷ್ಠ + ತರ್ಜನಿ ಬೆರಳು
15. ಓಂ ಪ್ರದ್ಯುಮ್ನಾಯ ನಮಃ | (ಮೂಗಿನ ಎಡಭಾಗವನ್ನು ಮುಟ್ಟಬೇಕು.) ಅಂಗುಷ್ಠ + ತರ್ಜನಿ ಬೆರಳು
16. ಓಂ ಅನಿರುದ್ಧಾಯ ನಮಃ | (ಬಲಗಣ್ಣನ್ನು ಮುಟ್ಟಬೇಕು.) ಅಂಗುಷ್ಠ + ಮಧ್ಯಮ ಬೆರಳು
17. ಓಂ ಪುರುಷೋತ್ತಮಾಯ ನಮಃ | (ಎಡಗಣ್ಣನ್ನು ಮುಟ್ಟಬೇಕು.) ಅಂಗುಷ್ಠ + ಮಧ್ಯಮ ಬೆರಳು
18. ಓಂ ಅಧೋಕ್ಷಜಾಯ ನಮಃ | (ಬಲಗಿವಿಯನ್ನು ಮುಟ್ಟಬೇಕು.) ಅಂಗುಷ್ಠ + ಅನಾಮಿಕ ಬೆರಳು
19. ಓಂ ನಾರಸಿಂಹಾಯ ನಮಃ | (ಎಡಗಿವಿಯನ್ನು ಮುಟ್ಟಬೇಕು.) ಅಂಗುಷ್ಠ + ಅನಾಮಿಕ ಬೆರಳು
20. ಓಂ ಅಚ್ಯುತಾಯ ನಮಃ | (ನಾಭಿಯನ್ನು ಮುಟ್ಟಬೇಕು.) ಅಂಗುಷ್ಠ + ತರ್ಜನಿ ಬೆರಳು
21. ಓಂ ಜನಾರ್ದನಾಯ ನಮಃ | (ಹೃದಯವನ್ನು ಅಂಗೈಯಿಂದ ಮುಟ್ಟಬೇಕು.)
22. ಓಂ ಉಪೇಂದ್ರಾಯ ನಮಃ | (ಬೆರಳುಗಳನ್ನು ಮಡಚಿ ಶಿರಸ್ಸನ್ನು ಮುಟ್ಟಬೇಕು.)

23. ಓಂ ಹರಯೇ ನಮಃ |(ಬಲಭುಜವನ್ನು ಮುಟ್ಟಬೇಕು.)

24. ಓಂ ಶ್ರೀಕೃಷ್ಣಾಯ ನಮಃ || (ಎಡಭುಜವನ್ನು ಮುಟ್ಟಬೇಕು.)

(ಹೀಗೆ ಎರಡು ಸಲ ಆಚಮನ ಮಾಡಬೇಕು.)

**ಪ್ರಾಣಾಯಾಮಃ :-**

ಪ್ರಣವಸ್ಯ ಪರಬ್ರಹ್ಮ ಋಷಿಃ | ಪರಮಾತ್ಮಾ ದೇವತಾ | ದೈವೀ ಗಾಯತ್ರೀಛಂದಃ | ಪ್ರಾಣಾಯಾಮೇ ವಿನಿಯೋಗಃ |

ಓಂ ಭೂಃ | ಓಂ ಭುವಃ | ಓಂ ಸ್ವಃ | ಓಂ ಮಹಃ | ಓಂ ಜನಃ | ಓಂ ತಪಃ | ಓಂ ಸತ್ಯಂ || ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ | ಧಿಯೋ ಯೋ ನಃ ಪ್ರಚೋದಯಾತ್ || ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಃಸ್ವರೋಮ್ ||

ಯತಿ ಮತ್ತು ಬ್ರಹ್ಮಚಾರಿಗಳು ಬಲಗೈಯ ಕನಿಷ್ಠ, ಅನಾಮಿಕ ಮತ್ತು ಅಂಗುಷ್ಠ ಮತ್ತು ಅಂಗುಷ್ಠ (ಕಿರುಬೆರಳು, ಉಂಗುರಬೆರಳು ಮತ್ತು ಹೆಬ್ಬೆರಳು) ಈ ಮೂರು ಬೆರಳುಗಳಿಂದ, ಗೃಹಸ್ಥ ಮತ್ತು ವಾನಪ್ರಸ್ಥರು ಐದೂ ಬೆರಳುಗಳಿಂದ, ಅಥವಾ ಅಂಗುಷ್ಠ, ಮಧ್ಯಮ, ತರ್ಜನೀ ಬೆರಳುಗಳಿಂದ ನಾಸಾಗ್ರವನ್ನು ಹಿಡಿದು ರೇಚಕ, ಪೂರಕ ಮತ್ತು ಕುಂಭಕಗಳಿಂದ ಪ್ರಾಣಾಯಾಮವನ್ನು ಮಾಡಬೇಕು. ಒಳಗಿನ ವಾಯುವನ್ನು ಎಡನಾಸಿಕಾರಂಧ್ರದಿಂದ ಒಳಗೆ ತೆಗೆದುಕೊಂಡು ಪೂರಕವೆಂತಲೂ, ಎರಡೂ ನಾಸಿಕಾ ರಂಧ್ರಗಳನ್ನು ಮೇಲೆ ತಿಳಿಸಿದಂತೆ ಬೆರಳುಗಳಿಂದ ಗಟ್ಟಿಯಾಗಿ ಹಿಡಿದು ಧಾರಣಮಾಡುವುದು ಕುಂಭಕವೆಂತಲೂ ತಿಳಿಯಲ್ಪಡುತ್ತದೆ. ವಾಯುವನ್ನು ಕುಂಭಕದಿಂದ ಧಾರಣ ಮಾಡಿದಾಗ ವ್ಯಾಹೃತಿಗಳನ್ನು ಮತ್ತು ಗಾಯತ್ರೀ ಶಿರೋಮಂತ್ರಗಳನ್ನು ಏಕಚಿತ್ತದಿಂದ ಮನಸ್ಸಿನಲ್ಲಿ ಜಪಿಸಬೇಕು. (ಪ್ರಾಣಾಯಾಮದ ಮಂತ್ರಗಳನ್ನು ಬಾಯಿಯಿಂದಲೇ ಗಟ್ಟಿಯಿಂದ ಉಚ್ಚರಿಸದೇ ಮನಸ್ಸಿನಲ್ಲೇ ಜಪಿಸಬೇಕು.)

**ಸಂಕಲ್ಪಃ :-**

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇ ತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ.... ಸಂವತ್ಸರೇ.... ಅಯನೇ.... ಋತೌ..... ಮಾಸೇ.... ಪಕ್ಷೇ..... ತಿಥೌ.... ವಾಸರಯುಕ್ತಾಯಾಂ ಶುಭನಕ್ಷತ್ರ-ಶುಭಯೋಗ-ಶುಭಕರಣ ಏವಂಗುಣವಿಶೇಷಣ-ವಿಶಿಷ್ಟಾಯಾಂ ಶುಭತಿಥೌ ಸೂರ್ಯಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಪ್ರಾತಃಸಂಧ್ಯಾಮುಪಾಸಿಷ್ಯೇ |

ಎರಡೂ ಕೈಗಳನ್ನು ಜೋಡಿಸಿ ಎಡಗೈ ಕೆಳಗೆ ಬಲಗೈ ಮೇಲೆ ಮಾಡಿ ಬಲತೊಡೆಯ ಮೇಲಿಟ್ಟುಕೊಂಡು ಸಂಕಲ್ಪ ಮಾಡಬೇಕು. ಸಂಕಲ್ಪ ಮಾಡದೇ ಕಾರ್ಯ ಮಾಡಿದರೆ ನಿಷ್ಫಲವಾಗುವದು. ಇಂಥ ದೇಶಕಾಲಗಳಲ್ಲಿ ಇಂಥ ಕರ್ಮವನ್ನು ಶ್ರೀಹರಿವಾಯುಗುರುಗಳ ಪ್ರೇರಣೆಯಿಂದ ಮಾಡುತ್ತೇನೆಂದು ಮನಸ್ಸನ್ನು ದೃಢಪಡಿಸುವುದೇ ಸಂಕಲ್ಪವಾಗಿರುತ್ತದೆ. ಮೇಲಿನಂತೆ ಪ್ರಕೃತದಲ್ಲಿರುವ ಸಂವತ್ಸರಾದಿಗಳನ್ನು ಮತ್ತು ಅಂದಿನ ತಿಥ್ಯಾದಿಗಳನ್ನು ಉಚ್ಚರಿಸಿ ಪಂಚಪಾತ್ರೆಯಲ್ಲಿಯ ನೀರನ್ನು ಉದ್ಧರಣೆಯಿಂದ ಬಲಗೈಯಲ್ಲಿ ಹಾಕಿಕೊಂಡು ಅರ್ಘ್ಯಪಾತ್ರೆಯಲ್ಲಿ ಬಿಡಬೇಕು.

(ಈ ಸಂಕಲ್ಪವನ್ನು ನೀರಿರುವ ಪಾತ್ರೆಯನ್ನು ಮುಟ್ಟಿಕೊಂಡು ಅಥವಾ ಎಡಗೈಯನ್ನು ಬಲಗೈಯಿಂದ ಮುಚ್ಚಿ, ಬಲತೊಡೆಯ ಮೇಲಿಟ್ಟುಕೊಂಡು ಮಾಡಬೇಕು.)

**ಮಾರ್ಜನಮ್ :-**

**(ಉದ್ಧರಣೆಯಲ್ಲಿ ನೀರನ್ನು ತೆಗೆದುಕೊಂಡು ತುಳಸೀದಳದಿಂದ ಮುಂದೆ ಹೇಳುವ ಮಂತ್ರವನ್ನು ಉಚ್ಚರಿಸುತ್ತ ಪ್ರೋಕ್ಷಣ ಮಾಡಿಕೊಳ್ಳಬೇಕು. ಮೊದಲನೆಯ ಋಕ್ಕಿನ ಮೂರು ಪಾದಗಳಿಂದ ಕ್ರಮವಾಗಿ ಪಾದ, ಶಿರಸ್ಸು, ಹೃದಯ ; ಎರಡನೆಯ ಋಕ್ಕಿನ ಮೂರು ಪಾದಗಳಿಂದ ಕ್ರಮವಾಗಿ ಹೃದಯ, ಪಾದ, ಶಿರಸ್ಸು ; ಮೂರನೆಯ ಋಕ್ಕಿನ ಮೂರು ಪಾದಗಳಿಂದ ಕ್ರಮವಾಗಿ ಶಿರಸ್ಸು, ಹೃದಯ, ಪಾದ ಇವುಗಳನ್ನು ಪ್ರೋಕ್ಷಿಸಬೇಕು. ಈ ಮಾರ್ಜನದಿಂದ ದೇಹಶುದ್ಧಿಯಾಗುವುದು.)**

ಆಪೋ ಹಿ ಷ್ಠೇತಿ ತ್ರ್ಯೃಚಸ್ಯ ಸೂಕ್ತಸ್ಯ ಅಂಬರೀಷ ಸಿಂಧುದ್ವೀಪ ಋಷಿಃ | ಗಾಯತ್ರೀ ಛಂದಃ | ಆಪೋ ದೇವತಾ | ಮಾರ್ಜನೇ ವಿನಿಯೋಗಃ |

ಓಂ ಆಪೋ ಹಿಷ್ಠಾ ಮಯೋ ಭುವಃ । ತಾ ನ ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ॥ ೧ ॥

ಯೋ ವಃ ಶಿವತಮೋ ರಸಃ । ತಸ್ಯ ಭಾಜಯತೇ ಹನಃ । ಉಶತೀರಿವ ಮಾತರಃ ॥ ೨ ॥

ತಸ್ಮಾ ಅರಂಗಮಾಮ ವಃ । ಯಸ್ಯ ಕ್ಷಯಾಯ ಜಿನ್ವಥ । ಆಪೋ ಜನಯಥಾ ಚ ನಃ ॥ ೩ ॥

(ಋ.ಮಂ. 10-9)

**ಜಲಾಭಿಮಂತ್ರಣಮ್ :-**

**ಗೋಕರ್ಣಾಕೃತಿಯ ಬಲಗೈಯಲ್ಲಿ ಉದ್ದಿನಕಾಳು ಮುಳುಗುವಷ್ಟು ನೀರನ್ನು ಹಾಕಿಕೊಂಡು, ನಾವು ಮಾಡುವ ಸಕಲವಿಧವಾದ ಪಾಪಗಳ ಪರಿಹಾರದ ಉದ್ದೇಶದಿಂದ ಅರ್ಥಾನುಸಂಧಾನಪೂರ್ವಕ ಸೂರ್ಯಶ್ಚ ಎಂಬ ಮಂತ್ರವನ್ನು ಪಠಿಸಿ ಸ್ವಾಹಾ ಎಂದು ಹೇಳಿದಾಗ ಪ್ರಾಶನ ಮಾಡಿ ಪಾಪಗಳೆಲ್ಲವೂ ಪರಿಹೃತವಾದವೆಂದು ಭಾವಿಸಬೇಕು.**

ಸೂರ್ಯಶ್ಚೇತ್ಯಸ್ಯ ಮಂತ್ರಸ್ಯ ನಾರಾಯಣ ಋಷಿಃ | ಸೂರ್ಯಮಾಮನ್ಯು ಮನ್ಯುಪತಯೋ ರಾತ್ರಿರ್ದೇವತಾ | ಪ್ರಕೃತಿಶ್ಛಂದಃ | ಜಲಾಭಿಮಂತ್ರಣೇ ವಿನಿಯೋಗಃ |

ಓಂ ಸೂರ್ಯಶ್ಚ ಮಾ ಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ । ಪಾಪೇಭ್ಯೋ ರಕ್ಷಂತಾಮ್ । ಯದ್ರಾತ್ರ್ಯಾ ಪಾಪಮಕಾರ್ಷಮ್ । ಮನಸಾ ವಾಚಾ ಹಸ್ತಾಭ್ಯಾಮ್ । ಪದ್ಭ್ಯಾಮುದರೇಣ ಶಿಶ್ನಾ । ರಾತ್ರಿಸ್ತದವಲುಂಪತು । ಯತ್ಕಿಂಚ ದುರಿತಂ ಮಯಿ । ಇದಮಹಂ ಮಾಮಮೃತಯೋನೌ । ಸೂರ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ ॥ಓಂ॥

**(ಈ ಮಂತ್ರವನ್ನು ಹೇಳಿ ಜಲವನ್ನು ಪ್ರಾಶನ ಮಾಡಿ, ಆಚಮನ ಮಾಡಿ, ಆಪೋ ಹಿಷ್ಠಾ ಎಂಬ ಮಂತ್ರದಿಂದ ಪುನಃ ಮಾರ್ಜನ ಮಾಡಿಕೊಳ್ಳಬೇಕು.)**

**ಪುನರ್ಮಾರ್ಜನಮ್ :-**

ಆಪೋಹಿಷ್ಠೇತಿ ನವರ್ಚಸ್ಯ ಸೂಕ್ತಸ್ಯ ಅಂಬರೀಷಃ ಸಿಂಧುದ್ವೀಪ ಋಷಿಃ | ಗಾಯತ್ರೀ ಛಂದಃ | ಆಪೋ ದೇವತಾ | ಪಂಚಮೀ ವರ್ಧಮಾನಾ | ಸಪ್ತಮೀ ಪ್ರತಿಷ್ಠಾ | ಅಂತ್ಯೇ ದ್ವೇ ಅನುಷ್ಟುಭೌ | ಪುನರ್ಮಾರ್ಜನೇ ವಿನಿಯೋಗಃ |

(ಈ ಮಂತ್ರಗಳ ಅರ್ಥವನ್ನು, ಇವುಗಳಿಂದ ಮಾರ್ಜನಕ್ರಮವನ್ನೂ ಹಿಂದೆ ಹೇಳಿದೆ.)

೧. ೨. ೩. ಓಂ ಆಪೋ ಹಿ ಷ್ಠಾ ..... ಜನಯಥಾ ಚ ನಃ ।

೪. ಓಂ ಶಂ ನೋ ದೇವೀರಭೀಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥

೫. ಈಶಾನಾ ವಾರ್ಯಾಣಾಂ ಕ್ಷಯಂತೀಶ್ಚರ್ಷಣೀನಾಮ್ । ಅಪೋ ಯಾಚಾಮಿ ಭೇಷಜಮ್ ॥

೬. ಅಪ್ಸು ಮೇ ಸೋಮೋ ಅಬ್ರವೀದಂತರ್ವಿಶ್ವಾನಿ ಭೇಷಜಾ । ಅಗ್ನಿಂ ಚ ವಿಶ್ವಶಂಭುವಮ್ ॥

೭. ಆಪಃ ಪೃಣೀತ ಭೇಷಜಂ ವರೂಥಂ ತನ್ವೇ೩ಮಮ । ಜ್ಯೋಕ್ಚ ಸೂರ್ಯಂ ದೃಶೇ ॥

೮. ಇದಮಾಪಃ ಪ್ರವಹತ ಯತ್ಕಿಂಚ ದುರಿತಂ ಮಯಿ । ಯದ್ವಾಹಮಭಿದುದ್ರೋಹ ಯದ್ವಾ ಶೇಪ ಉತಾನೃತಮ್॥

೯. ಆಪೋ ಅದ್ಯಾನ್ವಚಾರಿಷಂ ರಸೇನ ಸಮಗಸ್ಮಹಿ । ಪಯಸ್ವಾನಗ್ನ ಆಗಹಿ ತಂ ಮಾ ಸಂಸೃಜ ವರ್ಚಸಾ ॥

ಸಸ್ರುಷೀರಿತ್ಯಸ್ಯ ಆಪೋ ದೇವತಾ । ಅನುಷ್ಟುಪ್ ಛಂದಃ । ಮಾರ್ಜನೇ ವಿನಿಯೋಗಃ ।

೧೦. ಓಂ ಸಸ್ರುಷೀಸ್ತದಪಸೋ ದಿವಾನಕ್ತಂ ಚ ಸಸ್ರುಷೀಃ । ವರೇಣ್ಯಕ್ರತೂರಹಮಾ ದೇವೀರವಸೇ ಹುವೇ ॥

(ಋ.ಮಂ. 10-9)

**ಪಾಪಪುರುಷವಿಸರ್ಜನಮ್ (ಅಘಮರ್ಷಣಮ್) :-**

ಬಲ ಅಂಗೈಯಲ್ಲಿ ನೀರನ್ನು ಹಾಕಿಕೊಂಡು ಈ ಕೆಳಗಿನ ಮಂತ್ರವನ್ನು ಹೇಳಿ ನೀರನ್ನು ಮೂಸಿ ಈಶಾನ್ಯದಿಕ್ಕಿಗೆ ನೀರನ್ನು ಚೆಲ್ಲಿ ಪಾಪಪುರುಷನ ವಿಸರ್ಜನೆಯಾಯಿತೆಂದು ಭಾವಿಸಬೇಕು. ಅಘ ಎಂದರೆ ಪಾಪಗಳಿಗೆ ಅಭಿಮಾನಿ ಕಲಿಪುರುಷ. ಅವನ ಮರ್ಷಣ ಎಂದರೆ ವಿಸರ್ಜನೆ.

ಋತಂ ಚೇತ್ಯಸ್ಯ ಸೂಕ್ತಸ್ಯ ಅಘಮರ್ಷಣ ಋಷಿಃ | ಅನುಷ್ಟುಪ್ ಛಂದಃ | ಭಾವವೃತ್ತೋ ದೇವತಾ | ಪಾಪಪುರುಷವಿಸರ್ಜನೇ ವಿನಿಯೋಗಃ |

ಓಂ ಋತಂ ಚ ಸತ್ಯಂ ಚಾಭೀದ್ಧಾತ್ ತಪಸೋಽಧ್ಯಜಾಯತ ।

ತತೋ ರಾತ್ರ್ಯಜಾಯತ ತತಃ ಸಮುದ್ರೋ ಅರ್ಣವಃ ॥

ಸಮುದ್ರಾದರ್ಣವಾದಧಿ ಸಂವತ್ಸರೋ ಅಜಾಯತ ।

ಅಹೋರಾತ್ರಾಣಿ ವಿದಧದ್ವಿಶ್ವಸ್ಯ ಮಿಷತೋ ವಶೀ ।

ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್ ।

ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸ್ವಃ ॥ (ಅನಂತರ ಆಚಮನ ಮಾಡಬೇಕು.)

**ಅರ್ಘ್ಯಪ್ರದಾನಮ್ :-**




ಅರ್ಘ್ಯಪ್ರದಾನವು ಸಂಧ್ಯಾವಂದನೆಯ ಒಂದು ಪ್ರಧಾನವಾದ ಅಂಗ. ಪ್ರಾತಃ ಮತ್ತು ಮಾಧ್ಯಾಹ್ನಿಕ ಸಂಧ್ಯಾಂಗವಾದ ಅರ್ಘ್ಯವನ್ನು ಸೂರ್ಯಾಭಿಮುಖವಾಗಿ ಎದ್ದು ನಿಂತು ಅಂಗುಷ್ಠವನ್ನು ಬೇರೆ ಮಾಡಿದ ಬೊಗಸೆಯಲ್ಲಿ ನೀರನ್ನು ತುಂಬಿಕೊಂಡು ಗೋಶೃಂಗ (ಹಸುವಿನ ಕೊಂಬು)ದಷ್ಟು ಕೈ ಎತ್ತಿ ಕೊಡಬೇಕು. ಸಾಯಂಕಾಲದ ಅರ್ಘ್ಯವನ್ನು ಪಶ್ಚಿಮಾಭಿಮುಖವಾಗಿ ಕುಳಿತು ಕೊಡಬೇಕು. ಬಹ್ವೃಚರು (ಋಗ್ವೇದಿಗಳು) ತ್ರಿಸಂಧ್ಯೆಯಲ್ಲೂ ನಿಂತೇ ಅರ್ಘ್ಯಪ್ರದಾನ ಮಾಡಬೇಕೆಂದು ವಚನವಿದೆ. ಆಚಮನ ಮಾಡಿದ ನೀರಿನಲ್ಲಿ ಅರ್ಘ್ಯ ಕೊಡಬಾರದು. ಪ್ರತ್ಯೇಕ ಜಲವನ್ನು ಅರ್ಘ್ಯಕ್ಕಾಗಿ ತೆಗೆದಿಟ್ಟುಕೊಳ್ಳಬೇಕು. ಆ ಜಲದಲ್ಲಿ ಕೆಳಗೆ ಬರೆದಂತೆ ಯಂತ್ರವನ್ನು ಕಿರುಬೆರಳಿನ ತುದಿಯಿಂದ ಬರೆದು ಅರ್ಘ್ಯ ಕೊಡಬೇಕು.

ಪ್ರಣವಸ್ಯ ಪರಬ್ರಹ್ಮ ಋಷಿಃ ..... ಭೂರ್ಭುವಃ ಸ್ವರೋಮ್ | (ಈ ಮಂತ್ರದಿಂದ ಪ್ರಾಣಾಯಾಮ ಮಾಡಿ)

ಪೂರ್ವೋಕ್ತೈವಂಗುಣವಿಶೇಷಣವಿಶಿಷ್ಟಾಯಾಂ ..... ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಪ್ರಾತರರ್ಘ್ಯಪ್ರದಾನಮಹಂ ಕರಿಷ್ಯೇ || ಎಂದು ಅರ್ಘ್ಯ ಪ್ರದಾನಕ್ಕೆ ಸಂಕಲ್ಪವನ್ನು ಮಾಡಬೇಕು.

ಪ್ರಣವಸ್ಯ ಪರಬ್ರಹ್ಮ ಋಷಿಃ | ಪರಮಾತ್ಮಾ ದೇವತಾ | ದೈವೀಗಾಯತ್ರೀ ಛಂದಃ | ವ್ಯಾಹೃತೀನಾಂ ಪ್ರಜಾಪತಿ ಋಷಿಃ | ಅಗ್ನಿವಾಯುಸೂರ್ಯಾ ದೇವತಾಃ | ಗಾಯತ್ರ್ಯುಷ್ಣಿಗನುಷ್ಟುಭಃ ಛಂದಾಂಸಿ | ಗಾಯತ್ರ್ಯಾಃ ವಿಶ್ವಾಮಿತ್ರ ಋಷಿಃ | ಸವಿತಾ ದೇವತಾ | ಗಾಯತ್ರೀ ಛಂದಃ | ಪ್ರಾತರರ್ಘ್ಯಪ್ರದಾನೇ ವಿನಿಯೋಗಃ |

ಓಂ ಭೂರ್ಭುವಃ ಸ್ವಃ । ತತ್ಸವಿತುರ್ವರೇಣ್ಯ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್॥

(ಇತಿ ತ್ರಿವಾರಮ್ - ಮೂರು ಬಾರಿ)

ಸಕಾಲದಲ್ಲಿ ಅರ್ಘ್ಯಪ್ರದಾನ ಮಾಡದಿದ್ದಲ್ಲಿ ಪ್ರಾಯಶ್ಚಿತ್ತಾರ್ಥವಾಗಿ ನಾಲ್ಕನೆಯ ಅರ್ಘ್ಯವನ್ನು ಕೊಡಬೇಕು. ಕಾಲಾತೀತದೋಷ ಪ್ರಾಯಶ್ಚಿತ್ತಾರ್ಥಂ ಚತುರ್ಥ ಅರ್ಘ್ಯಪ್ರದಾನಮಹಂ ಕರಿಷ್ಯೇ ಎಂದು ಸಂಕಲ್ಪಿಸಿ, ಗಾಯತ್ರಿಯನ್ನು ಹೇಳಿ 'ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಃ ಸ್ವರೋಮ್' ಎಂಬ ಗಾಯತ್ರೀಶಿರಸ್ಸನ್ನೂ ಹೇಳಿ ಕೊಡಬೇಕು.

**ಪ್ರಾಯಶ್ಚಿತ್ತಾರ್ಘ್ಯಮ್ :-**

ಸಂಧ್ಯಾಕಾಲಾತೀತದೋಷಪ್ರಾಯಶ್ಚಿತ್ತಾರ್ಥಮ್ ಅರ್ಘ್ಯಪ್ರದಾನಮಹಂ ಕರಿಷ್ಯೇ ||

ಓಂ ಭೂರ್ಭುವಃ ಸ್ವಃ । ತತ್ಸವಿತುರ್ವರೇಣ್ಯಮ್ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್। ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಃ ಸ್ವರೋಮ್ || (ಅರ್ಘ್ಯವನ್ನು ಬಿಡಬೇಕು.)

ಅರ್ಘ್ಯವನ್ನು ಕೊಟ್ಟ ನಂತರ ಈ ಮಂತ್ರವನ್ನು ಹೃದಯದಲ್ಲಿ ಬಲಗೈ ಇಟ್ಟುಕೊಂಡು ಜಪಿಸಬೇಕು. ಅರ್ಘ್ಯಾಧಿಕಾರಸಿದ್ಧಿ ಮತ್ತು ಆತ್ಮಸಂರಕ್ಷಣೆ ಈ ಮಂತ್ರಜಪದ ಫಲ.

ಪ್ರತಿಚಕ್ಷ್ವ ವಿಚಕ್ಷ್ವೇತಸ್ಯ ಮಂತ್ರಸ್ಯ ವಸಿಷ್ಠ ಋಷಿಃ | ರಕ್ಷೋಹಣಾವಿಂದ್ರಾಸೋಮೌ ದೇವತೇ | ಅನುಷ್ಟುಪ್ ಛಂದಃ | ಅರ್ಘ್ಯಾಧಿಕಾರಾರ್ಥೇ ಆತ್ಮಸಂರಕ್ಷಣಾರ್ಥೇ ಚ ಜಪೇ ವಿನಿಯೋಗಃ.

ಓಂ ಪ್ರತಿಚಕ್ಷ್ವ ವಿ ಚಕ್ಷ್ವೇಂದ್ರಶ್ಚ ಸೋಮ ಜಾಗೃತಂ । ರಕ್ಷೋಭ್ಯೋ ವಧಮಸ್ಯತಮಶನಿಂ ಯಾತುಮದ್ಭ್ಯಃ॥

**ಗಾಯತ್ರ್ಯಾಕರ್ಷಣಮ್ :-**

ಉತ್ತಿಷ್ಠ ದೇವಿ ಗಂತವ್ಯಂ ಪುನರಾಗಮನಾಯ ಚ |
ಗಾಯತ್ರಿ ಚ ಮಹಾದೇವಿ ಪ್ರವಿಶ್ಯ ಹೃದಯಂ ಮಮ ||

ಅಸಾವಾದಿತ್ಯೋ ಬ್ರಹ್ಮ | ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಃ ಸ್ವರೋಮ್ || (ಈ ಮಂತ್ರ ಹೇಳುತ್ತಾ ಕೈಯಲ್ಲಿ ನೀರನ್ನು ತೆಗೆದುಕೊಂಡು ಪ್ರದಕ್ಷಿಣೆ ಹಾಕಬೇಕು. ಅನಂತರ ಮೂರು ಸಲ ಆಚಮನ ಮಾಡಬೇಕು.)

**ದೇವತಾ ತರ್ಪಣಮ್ :-**

ಶುಕ್ಲಪಕ್ಷದಲ್ಲಿ ಈ ಮಂತ್ರಗಳನ್ನು ಹೇಳುತ್ತಾ ಬಲಗೈ ಬೆರಳುಗಳ ತುದಿಯಿಂದ ದೇವತೀರ್ಥದಿಂದ ತರ್ಪಣ ಕೊಡಬೇಕು.

(ಶುಕ್ಲಪಕ್ಷದಲ್ಲಿ) ಓಂ ಕೇಶವಂ ತರ್ಪಯಾಮಿ | ನಾರಾಯಣಂ ತರ್ಪಯಾಮಿ | ಮಾಧವಂ ತರ್ಪಯಾಮಿ | ಗೋವಿಂದಂ ತರ್ಪಯಾಮಿ | ವಿಷ್ಣುಂ ತರ್ಪಯಾಮಿ | ಮಧುಸೂದನಂ ತರ್ಪಯಾಮಿ | ತ್ರಿವಿಕ್ರಮಂ ತರ್ಪಯಾಮಿ | ವಾಮನಂ ತರ್ಪಯಾಮಿ | ಶ್ರೀಧರಂ ತರ್ಪಯಾಮಿ | ಹೃಷೀಕೇಶಂ ತರ್ಪಯಾಮಿ | ಪದ್ಮನಾಭಂ ತರ್ಪಯಾಮಿ | ದಾಮೋದರಂ ತರ್ಪಯಾಮಿ | (ಆಚಮನ ಮಾಡಬೇಕು)

**ಕೃಷ್ಣಪಕ್ಷದಲ್ಲಿ ತರ್ಪಣ ಕೊಡುವಾಗ ಈ ಮಂತ್ರಗಳನ್ನು ಹೇಳಬೇಕು :-**

(ಕೃಷ್ಣಪಕ್ಷದಲ್ಲಿ) ಓಂ ಸಂಕರ್ಷಣಂ ತರ್ಪಯಾಮಿ | ವಾಸುದೇವಂ ತರ್ಪಯಾಮಿ | ಪ್ರದ್ಯುಮ್ನಂ ತರ್ಪಯಾಮಿ | ಅನಿರುದ್ಧಂ ತರ್ಪಯಾಮಿ | ಪುರುಷೋತ್ತಮಂ ತರ್ಪಯಾಮಿ | ಅಧೋಕ್ಷಜಂ ತರ್ಪಯಾಮಿ | ನರಸಿಂಹಂ ತರ್ಪಯಾಮಿ | ಅಚ್ಯುತಂ ತರ್ಪಯಾಮಿ | ಜನಾರ್ದನಂ ತರ್ಪಯಾಮಿ | ಉಪೇಂದ್ರಂ ತರ್ಪಯಾಮಿ | ಹರಿಂ ತರ್ಪಯಾಮಿ | ಶ್ರೀಕೃಷ್ಣಂ ತರ್ಪಯಾಮಿ |

ಅನಂತರ - ಇಂದ್ರಂ ತರ್ಪಯಾಮಿ | ಅಗ್ನಿಂ ತರ್ಪಯಾಮಿ | ಯಮಂ ತರ್ಪಯಾಮಿ | ನಿರ್ಋತಿಂ ತರ್ಪಯಾಮಿ | ವರುಣಂ ತರ್ಪಯಾಮಿ | ವಾಯುಂ ತರ್ಪಯಾಮಿ | ಕುಬೇರಂ ತರ್ಪಯಾಮಿ | ಈಶಾನಂ ತರ್ಪಯಾಮಿ | ಎಂದು ಅಷ್ಟದಿಕ್ಪಾಲಕರಿಗೂ, ಭಾನುಂ ತರ್ಪಯಾಮಿ | ಸೋಮಂ ತರ್ಪಯಾಮಿ | ಮಂಗಳಂ ತರ್ಪಯಾಮಿ | ಬುಧಂ ತರ್ಪಯಾಮಿ| ಗುರುಂ ತರ್ಪಯಾಮಿ | ಶುಕ್ರಂ ತರ್ಪಯಾಮಿ | ಶನಿಂ ತರ್ಪಯಾಮಿ | ಎಂದು ವಾರಾಭಿಮಾನಿ ದೇವತೆಗಳಿಗೂ ತರ್ಪಣವನ್ನು ಕೊಡಬೇಕು. ಏಕಾದಶೀದಿನದಲ್ಲಿ ದೇವರಿಗೆ ಮಾತ್ರ ತರ್ಪಣ. ಉಳಿದವರಿಗೆ ಇಲ್ಲ. (ಎರಡು ಬಾರಿ ಆಚಮನ ಮಾಡಬೇಕು.)

**ಭೂತೋಚ್ಚಾಟನಮ್ :-**

ಅಪಸರ್ಪಂತ್ವಿತ್ಯಸ್ಯ ಮಂತ್ರಸ್ಯ ವಾಮದೇವ ಋಷಿಃ | ಭೂತಾನಿ ದೇವತಾಃ | ಅನುಷ್ಟುಪ್ ಛಂದಃ | ಸಮಸ್ತಭೂತೋಚ್ಚಾಟನೇ ವಿನಿಯೋಗಃ |

(i) ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿಸಂಸ್ಥಿತಾಃ |
ಯೇ ಭೂತಾ ವಿಘ್ನಕರ್ತಾರಸ್ತೇ ನಶ್ಯಂತು ಶಿವಾಜ್ಞಯಾ ||

(ii) ಅಪಕ್ರಾಮಂತು ತೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ |
ಯೇ ಚಾತ್ರ ನಿವಸಂತ್ಯೇವ ದೇವತಾ ಭುವಿ ಸಂತತಮ್ ||

(iii) ಭೂತಪ್ರೇತಪಿಶಾಚಾ ಯೇ ಯೇ ಚಾನ್ಯೇ ಭುವಿ ಭಾರಕಾಃ |
ತೇಷಾಮಪ್ಯವಿರೋಧೇನ ಬ್ರಹ್ಮಕರ್ಮ ಸಮಾರಭೇ ||

(iv) ಏರಸ್ತ್ಃ ಪರಾವಸುಃ | ಇದಮಹಮರ್ವಾವಸೋಃ ಸದನೇ ಸೀದಾಮಿ |

ಉಟ್ಟ ವಸ್ತ್ರದ ಎಳೆಯೊಂದನ್ನು ತೆಗೆದುಕೊಂಡು ಎರಡು ಭಾಗ ಮಾಡಿ ಎಡಗೈಲಿರುವುದನ್ನು ಎಡಕ್ಕೆ ಹಾಕಿ ಬಲಗೈಲಿರುವುದನ್ನು ಆಸನದ ಕೆಳಗೆ ಹಾಕಬೇಕು.

**ಆಸನಶುದ್ಧಿಃ :-**

ಜಪವನ್ನು ಮಾಡಲು ಶುದ್ಧವಾದ ಆಸನವನ್ನು ಕೊಡು, ನನ್ನನ್ನೂ ಶುದ್ಧನನ್ನಾಗಿ ಮಾಡು ಎಂದು ಭೂಮಿಯನ್ನು ಪ್ರಾರ್ಥಿಸುವುದು ಈ ಮಂತ್ರದ ಉದ್ದೇಶ.

ಪೃಥ್ವೀತಿ ಮಂತ್ರಸ್ಯ ಮೇರುಪೃಷ್ಠ ಋಷಿಃ | ಸುತಲಂ ಛಂದಃ | ಕೂರ್ಮೋ ದೇವತಾ | ಆಸನೇ ವಿನಿಯೋಗಃ |

ಪೃಥ್ವಿ ತ್ವಯಾ ಧೃತಾ ಲೋಕಾಃ ದೇವಿ ತ್ವಂ ವಿಷ್ಣುನಾ ಧೃತಾ |
ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ |
ಮಾಂ ಚ ಪೂತಂ ಕುರು ಧರೇ ನತೋಽಸ್ಮಿ ತ್ವಾಂ ಸುರೇಶ್ವರಿ ||

ಆಸನೇ ಸೋಮಮಂಡಲೇ ಕೂರ್ಮಸ್ಕಂಧೇ ಉಪವಿಷ್ಟೋಽಸ್ಮಿ | ಶೇಷಾಯ ನಮಃ | ಕಾಲಾಗ್ನಿರುದ್ರಾಯ ನಮಃ | ವರಾಹಾಯ ನಮಃ | ಅನಂತಾಸನಾಯ ನಮಃ | ಕೂರ್ಮಾಸನಾಯ ನಮಃ |

**ಕರಶುದ್ಧಿ :-**

**ಈ ಕೆಳಗಿನ ಮಂತ್ರವನ್ನು ಹೇಳುತ್ತಾ ಎರಡೂ ಕೈಗಳ ಮುಂಗೈ, ಅಂಗೈ ಮತ್ತು ಬೆರಳು ತುದಿಯನ್ನು ಹಿಂಬದಿ ಮತ್ತು ಮುಂಬದಿಯಲ್ಲಿ ಮುಟ್ಟುವುದರಿಂದ ಕರಶುದ್ಧಿಯಾಗುವುದು.**

ಓಂ ಯಂ | ಓಂ ರಂ | ಓಂ ವಂ | (ನಾಲ್ಕು ಬಾರಿ ಮಾಡಬೇಕು.) ಓಂ ನಮಃ ಚಕ್ರಾಯ ಸ್ವಾಹಾ | ಅಸ್ತ್ರಾಯ ಫಟ್ | **(ಚಪ್ಪಾಳೆ ಹೊಡೆಯಬೇಕು.)**

**ಗುರುನಮಸ್ಕಾರ :-**

ಶ್ರೀ ಗುರುಭ್ಯೋ ನಮಃ | ಪರಮಗುರುಭ್ಯೋ ನಮಃ | ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ |

**ಯಾವುದೇ ಕರ್ಮಾನುಷ್ಠಾನದ ಮೊದಲು ಗುರುಗಳಿಗೆ ನಮಸ್ಕರಿಸುವುದು ವಿಹಿತ. ಆದ್ದರಿಂದ ಗಾಯತ್ರೀಮಂತ್ರಜಪಕ್ಕೆ ಮುಂಚಿತವಾಗಿ ಗುರುನಮಸ್ಕಾರವನ್ನು ಮಾಡಬೇಕು.**

**ಪಾಪಪುರುಷಧ್ಯಾನ ಮತ್ತು ನಿರಾಸ :-**

**ಪ್ರತಿಯೊಬ್ಬರ ಶರೀರವನ್ನು ಆಶ್ರಯಿಸಿರುವ ಪಾಪಾಭಿಮಾನಿಪುರುಷನನ್ನು ಚಿಂತಿಸಿ ಅವನನ್ನು ನಾಶಗೊಳಿಸುವುದು ಈ ಮಂತ್ರದ ಉದ್ದೇಶ.**

ಬ್ರಹ್ಮಹತ್ಯಾಶಿರಸ್ಕಂ ಚ ಸ್ವರ್ಣಸ್ತೇಯ ಭುಜದ್ವಯಮ್ |
ಸುರಾಪಾನಹೃದಾ ಯುಕ್ತಂ ಗುರುತಲ್ಪಕಟಿದ್ವಯಮ್ ||
ತತ್ಸಂಯೋಗಪದದ್ವಂದ್ವಮಂಗಪ್ರತ್ಯಂಗಪಾತಕಮ್ |
ಉಪಪಾತಕರೋಮಾಣಂ ರಕ್ತಸ್ಮಶ್ರುವಿಲೋಚನಮ್ ||
ಅಧೋಮುಖಂ ಕೃಷ್ಣವರ್ಣಮಂಗುಷ್ಠಪರಿಮಾಣಕಮ್ |
ಖಡ್ಗಚರ್ಮಧರಂ ಪಾಪಂ ವಾಮಕುಕ್ಷೌ ವಿಚಿಂತಯೇತ್ ||

**(ಈ ಮಂತ್ರವನ್ನು ಹೇಳಿ ವಾಮಕುಕ್ಷಿಯಲ್ಲಿರುವ (ಎಡ ಹೊಟ್ಟೆಯಲ್ಲಿರುವ) ಪಾಪಪುರುಷನನ್ನು ಚಿಂತಿಸಿ ನಂತರ ಅವನನ್ನು ನಾಭಿಪ್ರದೇಶಕ್ಕೆ ತಂದಂತೆ ಭಾವಿಸಬೇಕು.)**

**ಬ್ರಹ್ಮಹತ್ಯಾ ಮೊದಲಾದ ಮಹಾಪಾತಕಗಳೇ ಪಾಪಪುರುಷನ ಪ್ರಧಾನ ಅವಯವಗಳೆಂದೂ, ಪಾತಕಗಳೇ ಅವನ ಇತರ ಅಂಗ, ಪ್ರತ್ಯಂಗಗಳೆಂದೂ, ಉಪಪಾತಕಗಳೇ ಅವನ ರೋಮಗಳೆಂದೂ ಇಲ್ಲಿ ವರ್ಣಿಸಲಾಗಿದೆ.**

**ನಾಭಿಗೆ (ಹೊಕ್ಕಳಿಗೆ) ಕರೆತಂದ ಪಾಪಪುರುಷನನ್ನು 'ಓಂ ಯಂ ಓಂ' ಎಂಬ ಬೀಜಮಂತ್ರವನ್ನು ಆರು ಸಲ ಉಚ್ಚರಿಸಿ ಅವನು ಒಣಗಿ ಹೋಗುವನೆಂದು ಚಿಂತಿಸಬೇಕು.**

ಓಂ ಯಂ ಓಂ (ನಾಭಿಯನ್ನು ಸ್ಪರ್ಶಿಸಿ) ಷಟ್ಕೋಣಮಂಡಲವಾಯುಮಧ್ಯಸ್ಥೋ ನೀಲವರ್ಣೋ ವಾಯ್ವಂತರ್ಗತಃ, ವಾಯುಬೀಜವಾಚ್ಯ ಶ್ರೀಪ್ರದ್ಯುಮ್ನೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ವಾಯುನಾ ಶೋಷಯತು | ಓಂ ಯಂ ಓಂ **(6 ಸಲ ಹೇಳಬೇಕು.)**

ಕೋಷಿತನಾದ ಪಾಪಪುರುಷನನ್ನು ಹೃದಯಸ್ಥಾನಕ್ಕೆ ತಂದು ಓಂ ರಂ ಓಂ ಎಂಬ ಬೀಜವನ್ನು ಹನ್ನೆರಡು ಸಲ ಉಚ್ಚರಿಸಿ ದಗ್ಧನಾದನೆಂದು ಭಾವಿಸಬೇಕು.

ಓಂ ರಂ ಓಂ (ಹೃದಯವನ್ನು ಸ್ಪರ್ಶಿಸಿ) ತ್ರಿಕೋಣವಹ್ನಿಮಂಡಲಮಧ್ಯಸ್ಥೋ ರಕ್ತವರ್ಣೋ ವಹ್ನ್ಯಂತರ್ಗತಃ, ವಹ್ನಿಬೀಜವಾಚ್ಯಃ ಶ್ರೀಮದನಿರುದ್ಧೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ವಹ್ನಿನಾ ನಿರ್ದಹತು | ಓಂ ರಂ ಓಂ (12 ಸಲ ಹೇಳಬೇಕು)

ನಾಸಾಗ್ರಸ್ಥಃ ಸಂಕರ್ಷಣೋ ಭಗವಾನ್ ಮಚ್ಛರೀರಸ್ಥಿತ ದಗ್ಧಸ್ಯ ಪಾಪಪುರುಷಸ್ಯ ಭಸ್ಮ ನಿಃಸಾರಯತು | (ಎಡಮೂಗಿನ ಹೊಳ್ಳೆಯಿಂದ ದಗ್ಧನಾದ ಪಾಪಪುರುಷನ ಭಸ್ಮವನ್ನು ವಾಯುವಿನ ಮೂಲಕ ಹೊರಹಾಕಿದಂತೆ ಭಾವಿಸಬೇಕು.)

ಓಂ ವಂ ಓಂ (ಶಿರಸ್ಸನ್ನು ಸ್ಪರ್ಶಿಸಿ) ವರ್ತುಲಚಂದ್ರಮಂಡಲಮಧ್ಯಸ್ಥಃ ಶ್ವೇತವರ್ಣೋ ವರುಣಾಂತರ್ಗತಃ, ವರುಣಬೀಜವಾಚ್ಯಃ ಶ್ರೀವಾಸುದೇವೋ ಭಗವಾನ್ ಮಚ್ಛರೀರಮ್ ಅಮೃತವೃಷ್ಟ್ಯಾ ಆಪ್ಲಾವಯತು | ಓಂ ವಂ ಓಂ (24 ಸಲ ಹೇಳಬೇಕು) ಶಿರಸ್ಸಿನಲ್ಲಿರುವ ವಾಸುದೇವನು ನನ್ನ ಶರೀರವನ್ನು ಅಮೃತವೃಷ್ಟಿಯಿಂದ ಶುದ್ಧಿ ಮಾಡುತ್ತಾನೆಂದು ಚಿಂತಿಸಬೇಕು.

ಗಾಯತ್ರೀಜಪಃ :-

೧. ಓಮಿತ್ಯೇಕಾಕ್ಷರಂ ಬ್ರಹ್ಮ । ಅಗ್ನಿರ್ದೇವತಾ ಬ್ರಹ್ಮ ಇತ್ಯಾರ್ಷಮ್ । ಗಾಯತ್ರಂ ಛಂದಂ ಪರಮಾತ್ಮಂ ಸರೂಪಮ್ । ಸಾಯುಜ್ಯಂ ವಿನಿಯೋಗಮ್ ।

೨. ಆಯಾತ್ವಿತ್ಯಸ್ಯ ಮಂತ್ರಸ್ಯ ಅಂತರ್ಯಾಮಿ ವಾಸುದೇವ ಋಷಿಃ । ಗಾಯತ್ರೀಪ್ರತಿಪಾದ್ಯ ಶ್ರೀನಾರಾಯಣೋ ದೇವತಾ। ಅನುಷ್ಟುಬ್ ಛಂದಃ । ಗಾಯತ್ರ್ಯಾಹ್ವಾನೇ ವಿನಿಯೋಗಃ ॥

೩. ಓಮ್ ಆಯಾತು ವರದಾ ದೇವೀ ಅಕ್ಷರಂ ಬ್ರಹ್ಮ ಸಮ್ಮಿತಮ್ । ಗಾಯತ್ರೀಂ ಛಂದಸಾಂ ಮಾತೇದಂ ಬ್ರಹ್ಮ ಜುಷಸ್ವ ಮೇ ॥ ಯದಹ್ನಾತ್ಕುರುತೇ ಪಾಪಂ ತದಹ್ನಾತ್ಪ್ರತಿಮುಚ್ಯತೇ ॥ ಯದ್ರಾತ್ರ್ಯಾತ್ಕುರುತೇ ಪಾಪಂ ತದ್ರಾತ್ರ್ಯಾತ್ಪ್ರತಿಮುಚ್ಯತೇ॥ ಸರ್ವವರ್ಣೇ ಮಹಾದೇವಿ ಸಂಧ್ಯಾವಿದ್ಯೇ ಸರಸ್ವತಿ ॥

೪. ಓಜೋऽಸಿ ಸಹೋऽಸಿ ಬಲಮಸಿ ಭ್ರಾಜೋऽಸಿ ದೇವಾನಾಂ ಧಾಮ ನಾಮಾಸಿ ವಿಶ್ವಮಸಿ ವಿಶ್ವಾಯುಃ ಸರ್ವಮಸಿ ಸರ್ವಾಯುರಭಿಭೂರೋಂ ಗಾಯತ್ರೀಮಾವಾಹಯಾಮಿ ಸಾವಿತ್ರೀಮಾವಾಹಯಾಮಿ ಸರಸ್ವತೀಮಾವಾಹಯಾಮಿ ಛಂದರ್ಷೀನಾವಾಹಯಾಮಿ ಶ್ರಿಯಮಾವಾಹಯಾಮಿ ಬಲಮಾವಾಹಯಾಮಿ ॥

ಗಾಯತ್ರ್ಯಾ ಗಾಯತ್ರೀ ಛಂದೋ ವಿಶ್ವಾಮಿತ್ರ ಋಷಿಃ ಸವಿತಾ ದೇವತಾ ಅಗ್ನಿರ್ಮುಖಂ ಬ್ರಹ್ಮಾ ಶಿರಃ | ವಿಷ್ಣುರ್ಹೃದಯಂ ರುದ್ರಃ ಶಿಖಾ ಪೃಥಿವೀ ಯೋನಿಃ ಪ್ರಾಣೋಪಾನವ್ಯಾನೋದಾನಸಮಾನಾ ಸಪ್ರಾಣಾ (ಪ್ರಾತಃ ರಕ್ತವರ್ಣಾ, ಮಧ್ಯಾಹ್ನೇ ಶ್ವೇತವರ್ಣಾ, ಸಾಯಂ ಕೃಷ್ಣವರ್ಣಾ) ಸಾಂಖ್ಯಾಯನ ಸಗೋತ್ರಾ, ಗಾಯತ್ರೀ ಚತುರ್ವಿಂಶತ್ಯಕ್ಷರಾ ತ್ರಿಪದಾ ಷಟ್ಕುಕ್ಷಿಃ ಪಂಚಶೀರ್ಷೋಪನಯನೇ ವಿನಿಯೋಗಃ ॥

ಮೇಲಿನ 1, 2 ಮತ್ತು 3 ನೇ ಮಂತ್ರಗಳನ್ನು ಹೇಳುತ್ತ ಗಾಯತ್ರೀದೇವತೆಯನ್ನು ಆಹ್ವಾನಿಸಿ ತನ್ನ ಅಂಗೈಗಳನ್ನು ಜೋಡಿಸಿ

4ನೇ ಮಂತ್ರದಿಂದ ಆ ಗಾಯತ್ರೀದೇವತೆಯನ್ನು ಓಜೋಽಸಿ ಸಹೋಽಸಿ ಇತ್ಯಾದಿ ಬಲಮಾವಾಹಯಾಮಿ ಎನ್ನುವವರೆಗೆ ಹೇಳುತ್ತ ಜೋಡಿಸಿದ ಅಂಗೈಯನ್ನು ತನ್ನ ಎದೆಗೆ ಎದುರಾಗಿ ತಿರುಗಿಸುತ್ತ ಆಹ್ವಾನಿಸಬೇಕು.

1. ಓಜೋsಸಿ, 2. ಸಹೋsಸಿ, 3. ಬಲಮಸಿ, 4. ಭ್ರಾಜೋsಸಿ, 5. ದೇವಾನಾಂ ಧಾಮ ನಾಮಾಸಿ, 6. ವಿಶ್ವಮಸಿ ವಿಶ್ವಾಯುಃ, 7. ಸರ್ವಮಸಿ ಸರ್ವಾಯುಃ, 8. ಅಭಿಭೂರೋಂ, 9. ಗಾಯತ್ರೀಮ್ ಆವಾಹಯಾಮಿ, 10. ಸಾವಿತ್ರೀಮ್ ಆವಾಹಯಾಮಿ, 11. ಸರಸ್ವತೀಮ್ ಆವಾಹಯಾಮಿ, 12. ಛಂದರ್ಷೀನ್ ಆವಾಹಯಾಮಿ, 13. ಶ್ರಿಯಮ್ ಆವಾಹಯಾಮಿ, 14. ಬಲಮ್ ಆವಾಹಯಾಮಿ ಎಂದು ಒಟ್ಟು ಹದಿನಾಲ್ಕು ಸಲ, ಜೋಡಿಸಿದ ಅಂಗೈಗಳನ್ನು ತನ್ನ ಎದೆಗೆ ಎದುರಾಗಿ ತಿರುಗಿಸಬೇಕು. ಗಾಯತ್ರೀ ಮಂತ್ರದ ಛಂದಸ್ಸು, ಋಷಿ ಹಾಗೂ ದೇವತೆಗಳನ್ನು ಉಚ್ಚರಿಸಬೇಕು. ಅನಂತರ ಬಲ ಅಂಗೈಯಿಂದ "ಅಗ್ನಿರ್ಮುಖಂ" ಎಂದು ಹೇಳಿ ಮುಖವನ್ನು ಮುಟ್ಟಬೇಕು. 'ಬ್ರಹ್ಮಾ ಶಿರಃ' ಎಂದು ಹೇಳಿ ಶಿರಸ್ಸನ್ನು, 'ವಿಷ್ಣು: ಹೃದಯಮ್' ಎಂದು ಹೇಳಿ ಹೃದಯವನ್ನು, 'ರುದ್ರ: ಶಿಖಾ' ಎಂದು ಹೇಳಿ ಶಿಖಾವನ್ನು, 'ಪೃಥಿವೀ ಯೋನಿಃ' ಎಂದು ಅನ್ನುತ್ತ ಪೃಥಿವಿಯನ್ನು ಮುಟ್ಟಬೇಕು. ಅನಂತರ 'ಪ್ರಾಣೋಽಪಾನವ್ಯಾನೋದಾನಸಮಾನಾ ಸಪ್ರಾಣಾ' ಇತ್ಯಾದಿ ಹೇಳುತ್ತ ತಲೆಯ ಸುತ್ತಲೂ ಹಿಂದಿನಂತೆ ಪ್ರದಕ್ಷಿಣಾಕಾರವಾಗಿ ಚಿಟಿಕೆಯನ್ನು ಹೊಡೆದು ನಂತರ ಎಡ ಅಂಗೈಯ ಮೇಲೆ ಬಲ ಅಂಗೈಯಿಂದ ಒಂದು ಸಲ ಚಪ್ಪಾಳೆ ತಟ್ಟಬೇಕು.

**ಪ್ರಾಣಾಯಾಮಃ :-**

ಪ್ರಣವಸ್ಯ..... ವಿನಿಯೋಗಃ | ಓಂ ಭೂಃ .... ಭೂರ್ಭುವಸ್ವರೋಮ್ |

**ಋಷಿಛಂದೋದೇವತಾಃ :-**

ಅಸ್ಯ ಶ್ರೀ ಗಾಯತ್ರೀಮಹಾಮಂತ್ರಸ್ಯ ವಿಶ್ವಾಮಿತ್ರ ಋಷಿಃ | ದೈವೀಗಾಯತ್ರೀ ಛಂದಃ | ಸವಿತಾ ದೇವತಾ |

**ಕರನ್ಯಾಸಃ :-**

೧. ಓಂ ತತ್ಸವಿತುಃ ಅಂಗುಷ್ಠಾಭ್ಯಾಂ ನಮಃ | ೨. ಓಂ ವರೇಣ್ಯಂ ತರ್ಜನೀಭ್ಯಾಂ ನಮಃ | ೩. ಓಂ ಭರ್ಗೋ ದೇವಸ್ಯ ಮಧ್ಯಮಾಭ್ಯಾಂ ನಮಃ | ೪. ಓಂ ಧೀಮಹಿ ಅನಾಮಿಕಾಭ್ಯಾಂ ನಮಃ | ೫. ಓಂ ಧಿಯೋ ಯೋ ನಃ ಕನಿಷ್ಠಿಕಾಭ್ಯಾಂ ನಮಃ | ೬. ಓಂ ಪ್ರಚೋದಯಾತ್ ಕರತಲಕರಪೃಷ್ಠಾಭ್ಯಾಂ ನಮಃ ||

1ನೆಯ ಮಂತ್ರವನ್ನು ಅನ್ನುತ್ತ ಎರಡೂ ಕೈಗಳ ತೋರುಬೆರಳುಗಳಿಂದ ಆ ಆ ಕೈಗಳ ಹೆಬ್ಬೆರಳಿನ ಒಳಭಾಗವನ್ನು ಕೆಳಗಿನಿಂದ ಮೇಲಿನವರೆಗೆ ಸವರಬೇಕು. 2ನೆಯ ಮಂತ್ರವನ್ನು ಹೇಳುತ್ತ ಎರಡೂ ಕೈಗಳ ಹೆಬ್ಬೆರಳಿನಿಂದ ಆ ಆ ಕೈಯ ತೋರುಬೆರಳುಗಳ ಒಳಭಾಗವನ್ನು ಕೆಳಗಿನಿಂದ ಮೇಲಿನವರೆಗೆ ಸವರಬೇಕು. ಇದರಂತೆಯೇ 3ನೆಯ ಮಂತ್ರವನ್ನು ಹೇಳುತ್ತ ಹೆಬ್ಬೆರಳಿನಿಂದ ಮಧ್ಯದ ಬೆರಳುಗಳನ್ನು, 4ನೆಯ ಮಂತ್ರದಿಂದ ಅನಾಮಿಕಾ (ಉಂಗುರ ಇಡುವ ಬೆರಳು) ಬೆರಳನ್ನು ಮತ್ತು 5ನೆಯ ಮಂತ್ರದಿಂದ ಕಿರುಬೆರಳನ್ನು ಬಲ ಅಂಗೈಯಿಂದ ಎಡ ಮುಂಗೈ, ಎಡ ಅಂಗೈಯಿಂದ ಬಲಮುಂಗೈಗೆ ಸವರಿಕೊಳ್ಳಬೇಕು. ಕರನ್ಯಾಸವೆಂದರೆ ಜಪ ಮಾಡುವಾಗ ಎಣಿಸುವ ಬೆರಳುಗಳನ್ನು ಶುದ್ಧೀಕರಿಸುವುದೆಂಬ ಭಾವ.

**ಅಂಗನ್ಯಾಸಃ :-**

೧. ಓಂ ತತ್ಸವಿತುಃ ಹೃದಯಾಯ ನಮಃ | ೨. ಓಂ ವರೇಣ್ಯಂ ಶಿರಸೇ ಸ್ವಾಹಾ | ೩. ಓಂ ಭರ್ಗೋ ದೇವಸ್ಯ ಶಿಖಾಯೈ ವೌಷಟ್ | ೪. ಓಂ ಧೀಮಹಿ ಕವಚಾಯ ಹುಮ್ | ೫. ಓಂ ಧಿಯೋ ಯೋ ನಃ ನೇತ್ರಾಭ್ಯಾಂ ವೌಷಟ್ | ೬. ಓಂ ಪ್ರಚೋದಯಾತ್ ಅಸ್ತ್ರಾಯ ಫಟ್ | ೭. ಓಂ ಭೂರ್ಭುವಃ ಸ್ವರೋಮ್ (ಇತಿ ದಿಗ್ಬಂಧಃ) ||

1ನೆಯ ಮಂತ್ರವನ್ನು ಹೇಳುತ್ತ ಬಲಗೈ ಹೆಬ್ಬೆರಳು ಬಿಟ್ಟು ಉಳಿದ ನಾಲ್ಕು ಬೆರಳುಗಳಿಂದ ಎದೆಯ ಮಧ್ಯಭಾಗವನ್ನು ಮುಟ್ಟಿಕೊಳ್ಳಬೇಕು. 2ನೆಯ ಮಂತ್ರವನ್ನು ಹೇಳಿ ತಲೆಯ ಮಧ್ಯಭಾಗವನ್ನು ಸ್ಪರ್ಶ ಮಾಡಬೇಕು. 3ನೆಯ ಮಂತ್ರವನ್ನು ಹೇಳುತ್ತ ಬಲಗೈ ನಾಲ್ಕು ಬೆರಳುಗಳಿಂದ ಶಿಖಾವನ್ನು (ಜುಟ್ಟನ್ನು) ಮುಟ್ಟಿಕೊಂಡು ಎಡ ಅಂಗೈ ಮೇಲೆ ಬಲಗೈಯ ತೋರು ಮತ್ತು ಮಧ್ಯದ ಬೆರಳುಗಳಿಂದ ಹೊಡೆಯಬೇಕು. 4ನೆಯ ಮಂತ್ರವನ್ನು ಹೇಳುತ್ತ ಎಡರಟ್ಟೆಯನ್ನು ಬಲಗೈಯಿಂದ ಮತ್ತು ಬಲರಟ್ಟೆಯನ್ನು ಎಡಗೈಯಿಂದ ಏಕಕಾಲಕ್ಕೆ ಮುಟ್ಟಿಕೊಳ್ಳಬೇಕು. 5ನೆಯ ಮಂತ್ರವನ್ನು ಹೇಳಿ ಬಲಗೈ ತೋರುಬೆರಳಿನಿಂದ ಆ ಎರಡು ಬೆರಳುಗಳಿಂದ ಹೊಡೆಯಬೇಕು. 6ನೆಯ ಮಂತ್ರವನ್ನು ಅನ್ನುತ್ತ ಇನ್ನೊಂದು ಸಲ ಹೀಗೆಯೇ ಚಪ್ಪಾಳೆ ತಟ್ಟಬೇಕು. ನಂತರ 7ನೆಯ ಮಂತ್ರವನ್ನು ಹೇಳುತ್ತ ಬಲಗೈಯ ತೋರು ಮತ್ತು ಮಧ್ಯದ ಬೆರಳುಗಳನ್ನು ಜೋಡಿಸಿ ಎಂಟು ದಿಕ್ಕುಗಳಿಗೂ ತೋರಿಸಿ ದಿಗ್ಬಂಧನ ಮಾಡಬೇಕು.

ಅಂಗನ್ಯಾಸಾದಿಗಳನ್ನು ಮಾಡದಿದ್ದರೆ ದೋಷವಿದೆ.

ಧ್ಯಾನಮ್ :-

ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ ಸರಸಿಜಾಸನಸನ್ನಿವಿಷ್ಟಃ |
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ ||

ಭಾರತೀರಮಣಮುಖ್ಯಪ್ರಾಣಾಂತರ್ಗತ ಸವಿತೃ ನಾಮಕ ಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಯಥಾಶಕ್ತಿ ಗಾಯತ್ರೀಮಂತ್ರಜಪಂ ಕರಿಷ್ಯೇ.

ಓಂ ಭೂರ್ಭುವಃ ಸ್ವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್।

(ಮಂತ್ರವನ್ನು ಹೀಗೆ ಐದು ಸ್ಥಳಗಳಲ್ಲಿ ನಿಲ್ಲಿಸಿ ಉಚ್ಚರಿಸಬೇಕು.) (1000, 100 ಅಥವಾ 10 ಸಲ ಯಥಾಶಕ್ತಿ ಜಪಿಸಬೇಕು.)

ಅನೇನ ಗಾಯತ್ರೀಮಂತ್ರಜಪೇನ ಭಗವಾನ್ ಭಾರತೀರಮಣಮುಖ್ಯಪ್ರಾಣಾಂತರ್ಗತ ಸವಿತೃನಾಮಕಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್ |

ನಂತರ ಗಾಯತ್ರೀಮಂತ್ರವನ್ನು ಹೇಳಿ ಹತ್ತು ಜಪಕ್ಕೆ ಒಂದರಂತೆ ತರ್ಪಣ ಕೊಡಬೇಕು. ಇಲ್ಲದಿದ್ದರೆ ಜಪವು ಅಪೂರ್ಣವಾಗುತ್ತದೆ. ಪುನಃ ಷಡಂಗನ್ಯಾಸ, ಕರನ್ಯಾಸ, ಋಷಿಛಂದೋದೇವತೆಗಳು, ಪ್ರಾಣಾಯಾಮ, ಧ್ಯಾನಗಳನ್ನು ಕ್ರಮವಾಗಿ ಮಾಡಿ ಕೃಷ್ಣಾರ್ಪಣ ಬಿಡಬೇಕು.

|| ಶ್ರೀ ಕೃಷ್ಣಾರ್ಪಣಮಸ್ತು ||

ಸಂಧ್ಯೋಪಸ್ಥಾನಮ್ :-

(ಪೂರ್ವಾಭಿಮುಖವಾಗಿ ನಿಂತು)

ಜಾತವೇದಸ ಇತ್ಯಸ್ಯ ಮಂತ್ರಸ್ಯ ಕಶ್ಯಪ ಋಷಿಃ | ದುರ್ಗಾಜಾತವೇದೋಽಗ್ನಿರ್ದೇವತಾ | ತ್ರಿಷ್ಟುಪ್ ಛಂದಃ | ಸಂಧ್ಯೋಪಸ್ಥಾನೇ ವಿನಿಯೋಗಃ |

ಓಂ ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ। ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥ (ಋ.ಮಂ. 1-99-1)

ತಚ್ಛಂಯೋರಿತ್ಯಸ್ಯ ಮಂತ್ರಸ್ಯ ಶಂಯು ಋಷಿಃ ವಿಶ್ವೇದೇವಾಃ ದೇವತಾಃ | ಶಕ್ವರೀ ಛಂದಃ | ಉಪಸ್ಥಾನೇ ವಿನಿಯೋಗಃ |

ಓಂ ತಚ್ಛಂಯೋರಾವೃಣೀಮಹೇ । ಗಾತುಂ ಯಜ್ಞಾಯ । ಗಾತುಂ ಯಜ್ಞ ಪತಯೇ । ದೈವೀಃ ಸ್ವಸ್ತಿರಸ್ತು ನಃ । ಸ್ವಸ್ತಿರ್ಮಾನುಷೇಭ್ಯಃ । ಊರ್ಧ್ವಂ ಜಿಗಾತು ಭೇಷಜಮ್ । ಶಂ ನೋ ಅಸ್ತು ದ್ವಿಪದೇ । ಶಂ ಚತುಷ್ಪದೇ ॥

ನಮೋ ಬ್ರಹ್ಮಣ ಇತ್ಯಸ್ಯ ಮಂತ್ರಸ್ಯ ಪ್ರಜಾಪತಿ ಋಷಿಃ | ವಿಶ್ವೇದೇವಾ ದೇವತಾ | ಜಗತೀ ಛಂದಃ | ಪ್ರದಕ್ಷಿಣೇ ವಿನಿಯೋಗಃ |

ಓಂ ನಮೋ ಬ್ರಹ್ಮಣೇ ನಮೋಽಸ್ತ್ವಗ್ನಯೇ ನಮಃ ಪೃಥಿವ್ಯೈ ನಮ ಓಷಧೀಭ್ಯಃ । ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಬೃಹತೇ ಕರೋಮಿ ॥ **(ಈ ಮಂತ್ರವನ್ನು ಹೇಳುತ್ತಾ ಒಂದನೇ ಪ್ರದಕ್ಷಿಣೆಯಲ್ಲಿ ಎಂಟು ದಿಕ್ಕಿಗೆ ದಂಡ ಹಾಕಿರುವ ಕಡೆಯಲ್ಲಿ ನಿಲ್ಲಿಸಿ, ಪ್ರದಕ್ಷಿಣೆಗೆ ಎರಡೆರಡು ದಂಡಗಳನ್ನು ಸೇರಿಸಿ ಮೂರನೆಯದರಲ್ಲಿ ಒಟ್ಟಿಗೆ ಅರ್ಧರ್ಧ ಋಕ್ಕಿಗೆ ಪ್ರದಕ್ಷಿಣೆ ಮಾಡೇಕು. ಮೂರು ಸಲ ಪ್ರದಕ್ಷಿಣೆ ಮಾಡಬೇಕು.)**

**ದಿಙ್ನಮಸ್ಕಾರಃ :-**

ಓಂ ನಮಃ ಪ್ರಾಚ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮಃ ।

ಓಂ ನಮಃ ದಕ್ಷಿಣಾಯ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮಃ ।

ಓಂ ನಮಃ ಪ್ರತೀಚ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮಃ ।

ಓಂ ನಮಃ ಉದೀಚ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮಃ ।

ಓಂ ನಮಃ ಊರ್ಧ್ವಾಯ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮಃ ।

ಓಂ ನಮೋಽಧರಾಯ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮಃ ।

ಓಂ ನಮಃ ಅಂತರಿಕ್ಷಾಯ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮಃ ।

ಓಂ ನಮೋಽವಾಂತರಾಯ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮಃ ।

ಓಂ ಸಂಧ್ಯಾಯ್ಯೈ ನಮಃ ।

ಓಂ ಸಾವಿತ್ರ್ಯೈ ನಮಃ ।

ಓಂ ಗಾಯತ್ರ್ಯೈ ನಮಃ ।

ಓಂ ಸರಸ್ವತ್ಯೈ ನಮಃ ।

ಓಂ ಸರ್ವಾಭ್ಯೋ ನಮಃ ।

ಓಂ ದೇವೀಭ್ಯೋ ನಮಃ ।

ಓಂ ಋಷಿಭ್ಯೋ ನಮಃ ।

ಓಂ ಗುರುಭ್ಯೋ ನಮಃ ।

ಓಂ ಮಾತೃಭ್ಯೋ ನಮಃ ।

ಓಂ ಪಿತೃಭ್ಯೋ ನಮಃ ।

ಓಂ ಆಚಾರ್ಯೇಭ್ಯೋ ನಮಃ ।

ಓಂ ಕಾಮೋಽಕಾರ್ಷೀತ್ ಮನ್ಯುರಕಾರ್ಷೀನ್ನಮೋ ನಮಃ ।

ಓಂ ನಮೋ ಭಗವತೇ ವಾಸುದೇವಾಯ |

ಯಾಂ ಸದಾ ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ |
ಸಾಯಂ ಪ್ರಾತರ್ನಮಸ್ಯಂತಿ ಸಾ ಮಾ ಸಂಧ್ಯಾಽಭಿರಕ್ಷತು ||
ಸಾ ಮಾ ಸಂಧ್ಯಾ ಅಭಿರಕ್ಷತು ಓಂ ನಮೋ ನಮಃ ||
ಬ್ರಹ್ಮಣ್ಯೋ ದೇವಕೀಪುತ್ರೋ ಬ್ರಹ್ಮಣ್ಯೋ ಮಧುಸೂದನಃ |
ಬ್ರಹ್ಮಣ್ಯಃ ಪುಂಡರೀಕಾಕ್ಷೋ ಬ್ರಹ್ಮಣ್ಯೋ ವಿಷ್ಣುರಚ್ಯುತಃ ||
ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ |
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ||
ಕ್ಷೀರೇಣ ಸ್ನಾಪಿತೇ ದೇವಿ ಚಂದನೇನ ವಿಲೇಪಿತೇ |
ಬಿಲ್ವಪತ್ರಾರ್ಚಿತೇ ದೇವಿ ದುರ್ಗೇಽಹಂ ಶರಣಂ ಗತಃ ||
ಶ್ರೀ ದುರ್ಗೇಽಹಂ ಶರಣಂ ಗತ ಓಂ ನಮೋ ನಮಃ |

ಗಾಯತ್ರ್ಯುದ್ವಾಸನಮ್ :-

ಅಸ್ಯ ಶ್ರೀಗಾಯತ್ರ್ಯುದ್ವಾಸನಮಂತ್ರಸ್ಯ ವಾಮದೇವ ಋಷಿಃ | ಗಾಯತ್ರೀ ದೇವತಾ | ಅನುಷ್ಟುಪ್ ಛಂದಃ | ಗಾಯತ್ರ್ಯುದ್ವಾಸನೇ ವಿನಿಯೋಗಃ |

ಉತ್ತಮೇ ಶಿಖರೇ ಜಾತೇ ಭೂಮ್ಯಾಂ ಪರ್ವತಮೂರ್ಧನಿ । ಬ್ರಾಹ್ಮಣೇಭ್ಯೋಽಭ್ಯನುಜ್ಞಾತಾ ಗಚ್ಛ ದೇವಿ ಯಥಾಸುಖಮ್ ॥ ಶ್ರೀ ಗಚ್ಛ ದೇವಿ ಯಥಾಸುಖಮ್ | ಓಂ ನಮೋ ನಮಃ | (ಇತ್ಯುದ್ವಾಸ್ಯ)

ಸರ್ವವೇದೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ ಫಲಮ್ |
ತತ್ ಫಲಂ ಸಮವಾಪ್ನೋತಿ ಸ್ತುತ್ವಾ ದೇವಂ ಜನಾರ್ದನಮ್ ||
ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್ |
ಸರ್ವದೇವನಮಸ್ಕಾರಃ ಕೇಶವಂ ಪ್ರತಿಗಚ್ಛತಿ ||

ಶ್ರೀ ಕೇಶವಂ ಪ್ರತಿಗಚ್ಛತ್ಯೋಂ ನಮೋ ನಮಃ

ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ |
ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ||

ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ ಸಹಸ್ರಪಾದಾಕ್ಷಿಶಿರೋರುಬಾಹವೇ |
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ಸಹಸ್ರಕೋಟೀಯುಗಧಾರಿಣೇ ನಮಃ ||

**ಗೋತ್ರಾಭಿವಾದನಮ್ :-**

ಓಂ ಭದ್ರಂ ನೋ ಅಪಿ ವಾತಯ ಮನಃ । ಓಂ ಶಾಂತಿಃ ಶಾಂತಿಃ ಶಾಂತಿಃ | ಸರ್ವಾರಿಷ್ಟಶಾಂತಿರಸ್ತು | ಸಮಸ್ತಮಂಗಲಾವಾಪ್ತಿರಸ್ತು | ಚತುಃಸಾಗರಪರ್ಯಂತಂ ಗೋಬ್ರಾಹ್ಮಣೇಭ್ಯಃ ಶುಭಂ ಭವತು |

ಬಲಗೈಯಲ್ಲಿ ಬಲಗಿವಿಯನ್ನು, ಎಡಗೈಯಲ್ಲಿ ಎಡಗಿವಿಯನ್ನು ಹಿಡಿದು ಗೋತ್ರಪ್ರವರಗಳನ್ನು ಉಚ್ಚರಿಸಿ ಆಯಾ ಕಾಲುಗಳಿಗೇ ಸ್ಪರ್ಶ ಮಾಡಬೇಕು.

.... ಪ್ರವರಾನ್ವಿತಃ .... ಗೋತ್ರಃ ಆಶ್ವಲಾಯನ ಸೂತ್ರಃ ಋಕ್‌ಶಾಖಾಧ್ಯಾಯೀ ... ಶರ್ಮಾ ಅಹಂ ಭೋ .... ಅಭಿವಾದಯೇ |

**ಸಮಾಪನಮ್ :-**

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಸ್ಸಂಧ್ಯಾಕ್ರಿಯಾದಿಷು |
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ||
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ |
ಯತ್ ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ||

ಅನೇನ ಪ್ರಾತಃಸಂಧ್ಯಾವಂದನೇನ ಭಗವಾನ್ ಶ್ರೀಮಾನ್ ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸೀ ಅನಂತಕಲ್ಯಾಣಗುಣಪರಿಪೂರ್ಣಃ ಕ್ಷೀರಾಬ್ಧಿಶಾಯೀ ನಿರ್ದೋಷಜ್ಞಾನಾನಂದಾತ್ಮಕಃ ಭಾರತೀರಮಣಮುಖ್ಯಪ್ರಾಣಾಂತರ್ಗತ ಸವಿತೃನಾಮಕ ಶ್ರೀಲಕ್ಷ್ಮೀ ನಾರಾಯಣಃ ಪ್ರೀಯತಾಮ್ | ಪ್ರೀತೋ ವರದೋ ಭವತು | ಶ್ರೀಕೃಷ್ಣಾರ್ಪಣಮಸ್ತು |

(ಆಚಮ್ಯ) ಮಧ್ಯೇ ಮಂತ್ರತಂತ್ರಸ್ವರವರ್ಣಲೋಪದೋಷಪ್ರಾಯಶ್ಚಿತ್ತಾರ್ಥಂ ನಾಮತ್ರಯಮಂತ್ರಜಪಂ ಕರಿಷ್ಯೇ | ಅಚ್ಯುತಾಯ ನಮಃ | ಅನಂತಾಯ ನಮಃ | ಗೋವಿಂದಾಯ ನಮಃ | ಅಚ್ಯುತಾಯ ನಮಃ | ಅನಂತಾಯ ನಮಃ | ಗೋವಿಂದಾಯ ನಮಃ | ಅಚ್ಯುತಾನಂತಗೋವಿಂದೇಭ್ಯೋ ನಮಃ |

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ |
ಕರೋಮಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ||
ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ಚ ಯದ್ಭವೇತ್ |
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ||

ಋಗ್ವೇದೀಯ ಆಶ್ವಲಾಯನ ಪ್ರಾತಃಸಂಧ್ಯಾವಂದನಂ ಸಂಪೂರ್ಣಮ್.

|| ಶ್ರೀಕೃಷ್ಣಾರ್ಪಣಮಸ್ತು ||

## ಮಾಧ್ಯಾಹ್ನಿಕ ಸಂಧ್ಯಾವಂದನಮ್

ಮಾಧ್ಯಾಹ್ನಿಕ ಸಂಧ್ಯಾವಂದನೆಗೆ ಬೆಳಿಗ್ಗೆ 10-30 ರಿಂದ ಮಧ್ಯಾಹ್ನ 4-00ರವರೆಗೆ ಪ್ರಶಸ್ತವಾದ ಕಾಲ. ಆ ಕಾಲದಲ್ಲಿ ಮಾಡುವುದಾಗದಿದ್ದಲ್ಲಿ ಬೆಳಿಗ್ಗೆ ಪ್ರಾತಃಸಂಧ್ಯಾವಂದನೆಯ ನಂತರ, ರಾತ್ರಿ 9-00 ಗಂಟೆಯವರೆಗೂ ಅವಕಾಶವಿದೆ. ರಾತ್ರಿ 9-00 ಗಂಟೆ ಮೀರಿದ ಮೇಲೂ ಸಂಧ್ಯಾವಂದನೆ ಬಿಡಬಾರದು. ಮಾರನೇ ದಿನ ಪ್ರಾಯಶ್ಚಿತ್ತವಾಗಿ 100 ಗಾಯತ್ರೀ ಹೆಚ್ಚು ಮಾಡಬೇಕು. ಮಧ್ಯಾಹ್ನದ ಸಂಧ್ಯೆ ಬಿಟ್ಟಲ್ಲಿ ಸೂರ್ಯಹತ್ಯೆಯ ಪಾಪ ಬರುತ್ತದೆ. ಬ್ರಾಹ್ಮಣ್ಯವೇ ಹೋಗುತ್ತದೆ. ಅಥವಾ ಸಾಯಂಕಾಲ ಸಾಯಂಸಂಧ್ಯಾವಂದನದ ನಂತರವಾದರೂ ಮಾಡುವುದು ಯೋಗ್ಯ.

ಎರಡು ಬಾರಿ ಆಚಮನ ಮಾಡಿ ಪ್ರಾಣಾಯಾಮವನ್ನೂ ಮಾಡಿ ಪ್ರಾತಃಸಂಧ್ಯಾವಂದನೆಯಲ್ಲಿ ಹೇಳಿದಂತೆ ದೇಶಕಾಲಗಳನ್ನು ಉಚ್ಚರಿಸಿ 'ಮಾಧ್ಯಾಹ್ನಿಕಸಂಧ್ಯಾಮ್ ಉಪಾಸಿಷ್ಯೇ' ಎಂದು ಸಂಕಲ್ಪ ಮಾಡಬೇಕು. ಅನಂತರ ಪ್ರಾತಃಸಂಧ್ಯೆಯಲ್ಲಿ ಮಾಡಿದಂತೆ ಋಷಿದೇವತಾ ಛಂದಸ್ಸುಗಳನ್ನು ಹೇಳಿ 'ಆಪೋ ಹಿಷ್ಠಾ' ಇತ್ಯಾದಿ ಸೂಕ್ತದಿಂದ ಮಾರ್ಜನವನ್ನು ಮಾಡಿಕೊಳ್ಳಬೇಕು.

**ಜಲಾಭಿಮಂತ್ರಣ, ಅಪಾಂಪ್ರಾಶನಂ ಚ :-**

ಆಪಃ ಪುನಂತ್ವಿತ್ಯಸ್ಯ ಮಂತ್ರಸ್ಯ ಪೂತನಾಮಕ ನಾರಾಯಣ ಋಷಿಃ | ಅಷ್ಟೀ ಛಂದಃ | ಆಪೋ ದೇವತಾ | ಅಪಾಂ ಪ್ರಾಶನೇ ವಿನಿಯೋಗಃ |

ಓಂ ಆಪಃ ಪುನಂತು ಪೃಥಿವೀಂ ಪೃಥಿವೀ ಪೂತಾ ಪುನಾತು ಮಾಮ್ । ಪುನಂತು ಬ್ರಹ್ಮಣಸ್ಪತಿರ್ಬ್ರಹ್ಮ ಪೂತಾ ಪುನಾತು ಮಾಮ್ । ಯದುಚ್ಛಿಷ್ಟಮಭೋಜ್ಯಂ ಯದ್ವಾ ದುಶ್ಚರಿತಂ ಮಮ । ಸರ್ವಂ ಪುನಂತು ಮಾಮಾಪೋಽಸತಾಂ ಚ ಪ್ರತಿಗ್ರಹಗ್‌ಂ ಸ್ವಾಹಾ ॥ ಓಂ ॥

**ಮಾಧ್ಯಾಹ್ನಿಕ ಸಂಧ್ಯಾರ್ಘ್ಯಪ್ರದಾನಮ್ :-**

ಅನಂತರ ಪುನರ್ಮಾರ್ಜನೆಯನ್ನು ಪ್ರಾತಃಸಂಧ್ಯಾವಿಧಿಯಲ್ಲಿ ತಿಳಿಸಿದಂತೆ 'ಆಪೋ ಹಿಷ್ಠೇತಿ ನವರ್ಚಸ್ಯ' ಎಂದು ಆರಂಭಿಸಿ 'ಅಂತರಿಕ್ಷಮಥೋ ಸ್ವಃ' ಎಂಬಲ್ಲಿಯವರೆಗೆ ಮಂತ್ರವನ್ನುಚ್ಚರಿಸುತ್ತ ಮಾಡಬೇಕು. ಅನಂತರ ಆಚಮನ ಪ್ರಾಣಾಯಾಣ ಸಂಕಲ್ಪ ಮಾಡಬೇಕು.

ಪ್ರಣವಸ್ಯ ಪರಬ್ರಹ್ಮ ಋಷಿಃ .... ಸ್ವರೋಮ್ | ಪೂರ್ವೋಕ್ತೈವಂಗುಣ ವಿಶೇಷಣವಿಶಿಷ್ಟಾಯಾಂ ..... ಮಾಧ್ಯಾಹ್ನಿಕಾರ್ಘ್ಯಪ್ರದಾನಂ ಕರಿಷ್ಯೇ. (ಎದ್ದು ನಿಂತು ಕೆಳಗಿನ ಮಂತ್ರಗಳಿಂದ ಅರ್ಘ್ಯವನ್ನು ಕೊಡಬೇಕು.)

ಹಂಸಃ ಶುಚಿಷದಿತ್ಯಸ್ಯ ಮಂತ್ರಸ್ಯ ಗೌತಮಪುತ್ರೋ ವಾಮದೇವ ಋಷಿಃ | ಜಗತೀ ಛಂದಃ | ಸೂರ್ಯೋ ದೇವತಾ | ಮಾಧ್ಯಾಹ್ನಿಕಾರ್ಘ್ಯಪ್ರದಾನೇ ವಿನಿಯೋಗಃ |

ಓಂ ಹಂಸಃ ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ । ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಮ್ ಓಂ ॥ (ಋ.ಮಂ. 40-40-5)

2. ಆಕೃಷ್ಣೇನ ರಜಸೇತ್ಯಸ್ಯ ಮಂತ್ರಸ್ಯ ಹಿರಣ್ಯಸ್ತೂಪ ಋಷಿಃ | ತ್ರಿಷ್ಟುಪ್ ಛಂದಃ | ಸವಿತಾ ದೇವತಾ | ..... ಅರ್ಘ್ಯಪ್ರದಾನೇ ವಿನಿಯೋಗಃ |

ಓಂ ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ । ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ ಭುವನಾನಿ ಪಶ್ಯನ್ ॥ ಓಂ ॥ (ಋ.ಮಂ. 1-35-2)

3. ವಿಶ್ವಾಮಿತ್ರ ಋಷಿಃ | ಸವಿತಾ ದೇವತಾ | ದೈವೀ ಗಾಯತ್ರೀ ಛಂದಃ | ..... ಅರ್ಘ್ಯ ಪ್ರದಾನೇ ವಿನಿಯೋಗಃ |

ಓಂ ಭೂರ್ಭುವಃಸ್ವಃ | ತತ್ಸವಿತುಃ .... ಪ್ರಚೋದಯಾತ್ ಓಂ ||

**ಪ್ರಾಯಶ್ಚಿತ್ತಾರ್ಘ್ಯಮ್ :-**

**(ಮಧ್ಯಾಹ್ನ 4 ಘಂಟೆಯನ್ನೂ ಮೀರಿ ಮಾಧ್ಯಾಹ್ನಿಕ ಸಂಧ್ಯೆಯನ್ನು ಆಚರಿಸುವ ಸಂದರ್ಭ ಬಂದಾಗ ಪ್ರಾಯಶ್ಚಿತ್ತಾರ್ಘ್ಯವನ್ನು ಕೊಡಬೇಕು.) ಈ ಪ್ರಾಯಶ್ಚಿತ್ತಾರ್ಘ್ಯವು ಬೆಳಗ್ಗೆ 9-00 ಗಂಟೆಗಿಂತ ಮುಂಚೆ ಕೊಡಲು ಬರುವುದಿಲ್ಲ. ಕಾಲವು ಕಳೆದ ಮೇಲೆ ಮಾತ್ರವೇ ಪ್ರಾಯಶ್ಚಿತ್ತವೇ ಹೊರತು ಕಾಲವೇ ಬರದೆ ಕಾಲಾತೀತ ಪ್ರಾಯಶ್ಚಿತ್ತ ಕೊಡುವುದಿಲ್ಲ.**

ಉತಾಯಾತೇತ್ಯಸ್ಯ ಮಂತ್ರಸ್ಯ ಭೌಮೋಽತ್ರಿ ಋಷಿಃ | ತ್ರಿಷ್ಟುಪ್ ಛಂದಃ | ಅಶ್ವಿನೌ ದೇವತಾ | ಮಾಧ್ಯಾಹ್ನಿಕ-**ಕಾಲಾತಿಕ್ರಮದೋಷಪ್ರಾಯಶ್ಚಿತ್ತಾರ್ಥಮ್ ಅರ್ಘ್ಯಪ್ರದಾನಮಹಂ ಕರಿಷ್ಯೇ |**

ಓಂ ಉತಾ ಯಾತಂ ಸಂಗವೇ ಪ್ರಾತರಹ್ನೋ ಮಧ್ಯಂದಿನ ಉದಿತಾ ಸೂರ್ಯಸ್ಯ ।

ದಿವಾ ನಕ್ತಮವಸಾ ಶಂತಮೇನ ನೇದಾನೀಂ ಪೀತಿರಶ್ವಿನಾ ತತಾನ । (ಋ.ಮಂ. 5-76-3)

**(ಈ ಮಂತ್ರದಿಂದ ಒಂದು ಅರ್ಘ್ಯವನ್ನು ಕೊಡಬೇಕು.)**

**ಗಾಯತ್ರ್ಯಾಕರ್ಷಣಮ್ :-**

ಏಹಿ ತ್ವಂ ದೇವಿ ಶೀಘ್ರಂ ವೈ ಗಾಯತ್ರಿ ಬ್ರಹ್ಮರೂಪಿಣಿ |
ಜಪಾನುಷ್ಠಾನಸಿದ್ಧ್ಯರ್ಥಂ ಪ್ರವಿಶ್ಯ ಹೃದಯಂ ಮಮ ||

ಓಮಾಪೋಜ್ಯೋತೀರಸೋಽಮೃತಂ ಬ್ರಹ್ಮಭೂರ್ಭುವಃ ಸ್ವರೋಮ್ | ಅಸಾವಾದಿತ್ಯೋ ಬ್ರಹ್ಮ | **(ಕುಳಿತುಕೊಂಡು ಮೂರು ಆಚಮನ ಮಾಡಬೇಕು.)**

**ತರ್ಪಣಮ್ :-**

ಓಂ ಧಾತಾರಂ ತರ್ಪಯಾಮಿ | ಓಮ್ ಅರ್ಯಮಣಂ ತರ್ಪಯಾಮಿ | ಓಂ ಮಿತ್ರಂ ತರ್ಪಯಾಮಿ | ಓಂ ವರುಣಂ ತರ್ಪಯಾಮಿ | ಓಮ್ ಅಂಶುಂ ತರ್ಪಯಾಮಿ | ಓಂ ಭಗಂ ತರ್ಪಯಾಮಿ | ಓಂ ಇಂದ್ರಂ ತರ್ಪಯಾಮಿ | ಓಂ ವಿವಸ್ವಂತಂ ತರ್ಪಯಾಮಿ | ಓಂ ಪೂಷಣಂ ತರ್ಪಯಾಮಿ | ಓಂ ತ್ವಷ್ಟಾರಂ ತರ್ಪಯಾಮಿ | ಓಂ ಪರ್ಜನ್ಯಂ ತರ್ಪಯಾಮಿ | ಓಂ ವಿಷ್ಣುಂ ತರ್ಪಯಾಮಿ || (ದ್ವಿರಾಚಮ್ಯ)

**ಸೂರ್ಯೋಪಸ್ಥಾನಮ್ :-**

ಉದುತ್ಯಮಿತಿ ತ್ರಯೋದಶರ್ಚಸ್ಯ ಸೂಕ್ತಸ್ಯ ಕಾಣ್ವಃ ಪ್ರಸ್ಕಣ್ವಋಷಿಃ | ನವಾದ್ಯಾ ಗಾಯತ್ರ್ಯಃ, ಅಂತ್ಯಾಶ್ಚತಸ್ರೋಽನುಷ್ಟುಭಃ | ಸೂರ್ಯೋ ದೇವತಾ | ಚಿತ್ರಂ ದೇವಾನಾಮಿತಿ ಷಳರ್ಚಸ್ಯ ಸೂಕ್ತಸ್ಯ ಆಂಗೀರಸಃ ಕುತ್ಸ ಋಷಿಃ | ತ್ರಿಷ್ಟುಪ್ ಛಂದಃ | ಸೂರ್ಯೋ ದೇವತಾ | ಸೂರ್ಯೋಪಸ್ಥಾನೇ ವಿನಿಯೋಗಃ |

ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ।

ದೃಶೇ ವಿಶ್ವಾಯ ಸೂರ್ಯಮ್ ॥ ೧ ॥

ಅಪ ತ್ಯೇ ತಾಯವೋ ಯಥಾ ನಕ್ಷತ್ರಾ ಯಂತ್ಯಕ್ತುಭಿಃ ।
ಸೂರಾಯ ವಿಶ್ವಚಕ್ಷಸೇ ॥ ೨ ॥
ಅದೃಶ್ರಮಸ್ಯ ಕೇತವೋ ವಿ ರಶ್ಮಯೋ ಜನಾ೯ ಅನು ।
ಭ್ರಾಜಂತೋ ಅಗ್ನಯೋ ಯಥಾ ॥ ೩ ॥
ತರಣಿರ್ವಿಶ್ವದರ್ಶತೋ ಜ್ಯೋತಿಷ್ಕೃದಸಿ ಸೂರ್ಯ ।
ವಿಶ್ವಮಾ ಭಾಸಿ ರೋಚನಮ್ ॥ ೪ ॥
ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ ।
ಪ್ರತ್ಯಙ್ ವಿಶ್ವಂ ಸ್ವರ್ದೃಶೇ ॥ ೫ ॥
ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾ೯ ಅನು ।
ತ್ವಂ ವರುಣ ಪಶ್ಯಸಿ ॥ ೬ ॥
ವಿ ದ್ಯಾಮೇಷಿ ರಜಸ್ಪೃಥ್ವಹಾ ಮಿಮಾನೋ ಅಕ್ತುಭಿಃ ।
ಪಶ್ಯಂ ಜನ್ಮಾನಿ ಸೂರ್ಯ ॥ ೭ ॥
ಸಪ್ತ ತ್ವಾ ಹರಿತೋ ರಥೇ ವಹಂತಿ ದೇವ ಸೂರ್ಯ ।
ಶೋಚಿಷ್ಕೇಶಂ ವಿಚಕ್ಷಣ ॥ ೮ ॥
ಅಯುಕ್ತ ಸಪ್ತ ಶುಂಧ್ಯುವಃ ಸೂರೋ ರಥಸ್ಯ ನಪ್ತ್ಯಃ ।
ತಾಭಿರ್ಯಾತಿ ಸ್ವಯುಕ್ತಿಭಿಃ ॥ ೯ ॥

ಇಲ್ಲಿಯವರೆಗೆ ಎರಡು ಕೈಗಳನ್ನು ಭುಜದ ಮೇಲೆ ಇಟ್ಟು ಹೇಳಬೇಕು. ಇಲ್ಲಿಂದ ಮೂರು ಮಂತ್ರಗಳನ್ನು ಕೈಮುಗಿದು ಹೇಳಬೇಕು.

ಉದ್ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಮ್ ।
ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಮ್ ॥ ೧೦ ॥
ಉದ್ಯನ್ನದ್ಯ ಮಿತ್ರಮಹ ಆರೋಹನ್ನುತ್ತರಾಂ ದಿವಮ್ ।
ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ॥ ೧೧ ॥

ಶುಕೇಷು ಮೇ ಹರಿಮಾಣಂ ರೋಪಣಾಕಾಸು ದಧ್ಮಸಿ ।

ಅಥೋ ಹಾರಿದ್ರವೇಷು ಮೇ ಹರಿಮಾಣಂ ನಿ ದಧ್ಮಸಿ ॥ ೧೨ ॥

ಉದಗಾದಯಮಾದಿತ್ಯೋ ವಿಶ್ವೇನ ಸಹಸಾ ಸಹ ।

ದ್ವಿಷಂತಂ ಮಹ್ಯಂ ರಂಧಯನ್ ಮೋ ಅಹಂ ದ್ವಿಷತೇ ರಧಮ್ ॥ ೧೩ ॥ (ಋ.ಮಂ.1, ಸೂ.50, 1-13)

ಎದೆಯನ್ನು ಮುಟ್ಟಿ ಈ ಸೂಕ್ತವನ್ನು ಹೇಳಬೇಕು.

ಓಂ ಚಿತ್ರಂ ದೇವಾನಾಮುದಗಾದನೀಕಂ

ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।

ಆಪ್ರಾದ್ಯಾವಾಪೃಥಿವೀ ಅಂತರಿಕ್ಷಂ

ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥ ೧ ॥

ಸೂರ್ಯೋ ದೇವೀಮುಷಸಂ ರೋಚಮಾನಾಂ

ಮರ್ಯೋ ನ ಯೋಷಾಮಭ್ಯೇತಿ ಪಶ್ಚಾತ್ ।

ಯತ್ರಾ ನರೋ ದೇವಯಂತೋ ಯುಗಾನಿ

ವಿತನ್ವತೇ ಪ್ರತಿ ಭದ್ರಾಯ ಭದ್ರಮ್ ॥ ೨ ॥

ಭದ್ರಾ ಅಶ್ವಾ ಹರಿತಃ ಸೂರ್ಯಸ್ಯ ಚಿತ್ರಾ

ಏತಗ್ವಾ ಅನುಮಾದ್ಯಾಸಃ ।

ನಮಸ್ಯಂತೋ ದಿವ ಆ ಪೃಷ್ಠಮಸ್ಥುಃ

ಪರಿ ದ್ಯಾವಾಪೃಥಿವೀ ಯಂತಿ ಸದ್ಯಃ ॥ ೩ ॥

ತತ್ ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ

ಮಧ್ಯಾ ಕರ್ತೋರ್ವಿತತಂ ಸಂ ಜಭಾರ ।

ಯದೇದಯುಕ್ತ ಹರಿತಃ ಸಧಸ್ಥಾದಾದ್ರಾತ್ರೀ

ವಾಸಸ್ತನುತೇ ಸಿಮಸ್ಮೈ ॥ ೪ ॥

ತನ್ಮಿತ್ರಸ್ಯ ವರುಣಸ್ಯಾಭಿಚಕ್ಷೇ ಸೂರ್ಯೋ ರೂಪಂ

ಕೃಣುತೇ ದ್ಯೋರುಪಸ್ಥೇ ।

ಅನಂತಮನ್ಯದ್ ರುಶದಸ್ಯ ಪಾಜಃ ಕೃಷ್ಣಮನ್ಯದ್ಧರಿತಃ ಸಂ ಭರಂತಿ ॥ ೫ ॥

ಅದ್ಯಾ ದೇವಾ ಉದಿತಾ ಸೂರ್ಯಸ್ಯ ನಿರಂಹಸಃ

ಪಿಪೃತಾ ನಿರವದ್ಯಾತ್ ।

ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ

ಸಿಂಧುಃ ಪೃಥಿವೀ ಉತ ದ್ಯೌಃ ।

ಓಂ ನಾಸತ್ಯಾಭ್ಯಾಂ ಬರ್ಹಿರಿವ ಪ್ರವೃಂಜೇ ॥ ೬ ॥ (ಋ. 1-115 - 1 ರಿಂದ 6)

ಸವಿತಾ ಪಶ್ಚಾತಾದಿತ್ಯಸ್ಯ ಲುಶೋ ಧಾನಾಕಃ । ವಿಶ್ವೇದೇವಾಃ । ತ್ರಿಷ್ಟುಪ್ । ಉಪಸ್ಥಾನೇ ವಿನಿಯೋಗಃ ।

ಓಂ ಸವಿತಾ ಪಶ್ಚಾತಾತ್ ಸವಿತಾ ಪುರಸ್ತಾತ್

ಸವಿತೋತ್ತರಾತ್ತಾತ್ ಸವಿತಾಧರಾತ್ತಾತ್ ।

ಸವಿತಾ ನಃ ಸುವತು ಸರ್ವತಾತಿಂ

ಸವಿತಾ ನೋ ರಾಸತಾಂ ದೀರ್ಘಮಾಯುಃ ॥ ಓಮ್ ॥ (ಋ. 10-36-14)

ಓಂ ಶಾಂತಿಃ ಶಾಂತಿಃ ಶಾಂತಿಃ | ಚತುಃಸಾಗರಪರ್ಯಂತಂ ಗೋಬ್ರಾಹ್ಮಣೇಭ್ಯಃ ಶುಭಂ ಭವತು | .... ಪ್ರವರಾನ್ವಿತಃ .... ಗೋತ್ರಃ ಆಶ್ವಲಾಯನಸೂತ್ರಃ ಋಕ್‌ಶಾಖಾಧ್ಯಾಯೀ .... ಶರ್ಮಾ ಅಹಂ ಭೋ ಅಭಿವಾದಯೇ | (ಕುಳಿತುಕೊಂಡು ಪ್ರಾತಸ್ಸಂಧ್ಯೆಯಲ್ಲಿ ಹೇಳಿದಂತೆ ಆಸನ, ಪ್ರಾಣಾಯಾಮ ಇತ್ಯಾದಿಗಳನ್ನಾಚರಿಸಿ ಯಥಾಶಕ್ತಿ ಗಾಯತ್ರೀಮಂತ್ರ, ನಾರಾಯಣಮಂತ್ರಗಳನ್ನು ಜಪಿಸಬೇಕು.)

ಯಸ್ಯ ಸ್ಮೃತ್ಯಾ ಚ ...... ತದಸ್ತು ಮೇ ||

ಅನೇನ ಮಾಧ್ಯಾಹ್ನಿಕಸಂಧ್ಯಾವಂದನೇನ .... ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್ | ಸುಪ್ರೀತೋ ವರದೋ ಭವತು|

ತಚ್ಚಕ್ಷುಃ ದೇವಹಿತಂ ಪುರಸ್ತಾತ್ .....

(ಆಚಮನ ಮಾಡಿ ನಾಮತ್ರಯಮಂತ್ರವನ್ನು ಜಪಿಸಬೇಕು)

ಮಾಧ್ಯಾಹ್ನಿಕ ಸಂಧ್ಯಾವಂದನಂ ಸಂಪೂರ್ಣಮ್

|| ಶ್ರೀಕೃಷ್ಣಾರ್ಪಣಮಸ್ತು ||

## ಸಾಯಂ ಸಂಧ್ಯಾವಂದನಮ್

(ಸಾಯಂಕಾಲದ ಸಂಧ್ಯಾವಂದನೆಯನ್ನು ಸೂರ್ಯಾಸ್ತಮಯಕ್ಕೆ ಅರ್ಧ ಅಥವಾ ಮುಕ್ಕಾಲು ಘಂಟೆಗೆ ಮುಂಚೆ ಮಾಡುವುದು ಪ್ರಶಸ್ತ. ಉತ್ತರಾಭಿಮುಖವಾಗಿ ಕುಳಿತು ಸಾಯಂಸಂಧ್ಯಾವಂದನವನ್ನು ಮಾಡಬೇಕು. ಅರ್ಘ್ಯವನ್ನು ಪಶ್ಚಿಮಾಭಿಮುಖವಾಗಿ ಕೊಡಬೇಕು. ನದೀತೀರದಲ್ಲಿ ಮಾಡುವಾಗ ನೀರನ್ನು ಬಂಡೆಯ ಮೇಲೆ ಹಾಕಬೇಕು. ನೀರಿನಲ್ಲಿ ಹಾಕಬಾರದು. ಗಾಯತ್ರೀಜಪವನ್ನೂ ಪಶ್ಚಿಮಾಭಿಮುಖವಾಗಿ ಮಾಡಬೇಕು.)

(ಆಚಮನ, ಪ್ರಾಣಾಯಾಮ ಸಂಕಲ್ಪಗಳನ್ನು ಪ್ರಾತಃಸಂಧ್ಯಾವಂದನದಂತೆ ಮಾಡಬೇಕು) .... ಶ್ರೀ ಲಕ್ಷ್ಮೀನಾರಾಯಣಪ್ರೀತ್ಯರ್ಥಂ ಸಾಯಂ ಸಂಧ್ಯಾಮುಪಾಸಿಷ್ಯೇ.

(ಆಪೋ ಹಿಷ್ಠಾ ಇತ್ಯಾದಿ ಮಂತ್ರಗಳಿಂದ ಪ್ರಾತಃಸಂಧ್ಯೆಯಂತೆ ಮಾರ್ಜನವನ್ನು ಮಾಡತಕ್ಕದ್ದು)

**ಜಲಾಭಿಮಂತ್ರಣ ಮತ್ತು ಅಪಾಂ ಪ್ರಾಶನ :-**

ಅಗ್ನಿಶ್ಚೇತ್ಯಸ್ಯ ಮಂತ್ರಸ್ಯ ಹಿರಣ್ಯಗರ್ಭ ಋಷಿಃ | ಅಗ್ನಿರ್ಮಾಮನ್ಯು ಮನ್ಯುಪತಯೋ ಅಹರ್ದೇವತಾ | ಪ್ರಕೃತಿಶ್ಛಂದಃ | ಜಲಾಭಿಮಂತ್ರಣೇ ವಿನಿಯೋಗಃ |

ಓಂ ಅಗ್ನಿಶ್ಚ ಮಾ ಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ । ಪಾಪೇಭ್ಯೋ ರಕ್ಷಂತಾಮ್ । ಯದಹ್ನಾ ಪಾಪಮಕಾರ್ಷಮ್। ಮನಸಾ ವಾಚಾ ಹಸ್ತಾಭ್ಯಾಮ್ । ಪದ್ಭ್ಯಾಮುದರೇಣ ಶಿಶ್ನಾ । ಅಹಸ್ತದವಲುಂಪತು । ಯತ್ಕಿಂಚ ದುರಿತಂ ಮಯಿ । ಇದಮಹಂ ಮಾಮಮೃತಯೋನೌ । ಸತ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ ॥ಓಂ॥

(ಈ ಮಂತ್ರವನ್ನು ಹೇಳಿ ಅಂಗೈಯಲ್ಲಿ ಹಾಕಿಕೊಂಡಿದ್ದ ನೀರನ್ನು ಪ್ರಾಶನ ಮಾಡಿ ಎರಡು ಆಚಮನ ಮಾಡಬೇಕು. ಅನಂತರ ಪುನರ್ಮಾರ್ಜನಾದಿಗಳನ್ನು ಅರ್ಘ್ಯಪ್ರದಾನದವರೆಗೆ ಪ್ರಾತಃಸಂಧ್ಯೆಯಂತೆ ಆಚರಿಸಬೇಕು.)

**ಅರ್ಘ್ಯಪ್ರದಾನಮ್ - ಗಾಯತ್ರೀ ಜಪಃ :-**

(ಆಚಮನ, ಪ್ರಾಣಾಯಾಮಗಳನ್ನು ಮಾಡಿ) ಅದ್ಯ ಪೂರ್ವೋಕ್ತೈವಂಗುಣವಿಶೇಷಣ ವಿಶಿಷ್ಟಾಯಾಂ ಶುಭತಿಥೌ.... ಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಸಾಯಂ ಸಂಧ್ಯಾವಂದನಾಂಗಾರ್ಘ್ಯಪ್ರದಾನಮಹಂ ಕರಿಷ್ಯೇ (ಎಂದು ಸಂಕಲ್ಪಿಸಿ ಪ್ರಾತಃಸಂಧ್ಯೆಯಂತೆ ಮೂರು ಅರ್ಘ್ಯಗಳನ್ನು, ಕಾಲಾತಿಕ್ರಮವಾಗಿದ್ದಲ್ಲಿ ಪ್ರಾಯಶ್ಚಿತ್ತಾರ್ಘ್ಯವನ್ನೂ ಕೊಡಬೇಕು. ಅನಂತರ ಗಾಯತ್ರ್ಯಾಕರ್ಷಣ, ಭೂತೋಚ್ಚಾಟನ, ಆಸನಶುದ್ಧಿ ಗುರುಮಂತ್ರ ಇವುಗಳನ್ನು ಆಚರಿಸಿ ಪ್ರಾತಃ ಸಂಧ್ಯೆಯಂತೆ ಪ್ರಾಣಾಯಾಮ, ಅಂಗನ್ಯಾಸ, ಕರನ್ಯಾಸ, ಧ್ಯಾನ ಇತ್ಯಾದಿಗಳನ್ನು ಮಾಡಿ ಗಾಯತ್ರೀಜಪವನ್ನು ಶಕ್ತ್ಯನುಸಾರ ಮಾಡಬೇಕು. ಜಪಾನಂತರ ಪುನಃ ಅಂಗನ್ಯಾಸ, ಪ್ರಾಣಾಯಾಮಾದಿಗಳನ್ನು ಆಚರಿಸಬೇಕು.)

### ಸಂಧ್ಯೋಪಸ್ಥಾನ ಮತ್ತು ದಿಙ್ನಮಸ್ಕಾರ ಇತ್ಯಾದಿ

(ಪಶ್ಚಿಮಾಭಿಮುಖವಾಗಿ ಎದ್ದು ನಿಂತು ಪ್ರಾತಃಕಾಲದಲ್ಲಿದ್ದಂತೆಯೇ ಜಾತವೇದಸೇ ಇತ್ಯಾದಿ ಮಂತ್ರಗಳಿಂದ ಸಂಧ್ಯೋಪಸ್ಥಾನವನ್ನು ಆಚರಿಸಬೇಕು. ಓಂ ನಮಃ ಪ್ರತೀಚ್ಯೈ ದಿಶೇ ಇತ್ಯಾದಿ ಮಂತ್ರಗಳಿಂದ ಪಶ್ಚಿಮದಿಕ್ಕಿನಿಂದಾರಂಭಿಸಿ ಕ್ರಮವಾಗಿ ದಿಙ್ನಮಸ್ಕಾರವನ್ನು ಮಾಡತಕ್ಕದ್ದು. ಅನಂತರ ಓಂ ಸಂಧ್ಯಾಯೈ ನಮಃ ಇತ್ಯಾದಿಯಾಗಿ ಸಂಧ್ಯಾದಿದೇವತೆಗಳಿಗೆ ನಮಸ್ಕರಿಸಿ ಗೋತ್ರಾಭಿವಾದನವನ್ನು ಮಾಡಬೇಕು.)

**ಸಮಾಪನಮ್ :-**

ಯಸ್ಯ ಸ್ಮೃತ್ಯಾ ಚ .... ತಮಚ್ಯುತಮ್ ॥ ಮಂತ್ರಹೀನಂ.... ತದಸ್ತು ಮೇ ॥ ಅನೇನ ಸಾಯಂ ಸಂಧ್ಯಾವಂದನೇನ .... ಶ್ರೀಕೃಷ್ಣಾರ್ಪಣಮಸ್ತು. (ಆಚಮನ ಮಾಡಿ ನಾಮತ್ರಯಮಂತ್ರವನ್ನು ಜಪಿಸಬೇಕು.) ಕಾಯೇನ ವಾಚಾ .... ಸಮರ್ಪಯಾಮಿ ಯದಕ್ಷರ .... ನಮೋಽಸ್ತು ತೇ ॥

॥ ಸಾಯಂ ಸಂಧ್ಯಾವಂದನಂ ಸಂಪೂರ್ಣಮ್ ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಯಜುರ್ವೇದೀಯ ತ್ರಿಕಾಲಸಂಧ್ಯಾವಂದನವಿಧಿಃ

### ॥ ಪ್ರಾತಸಂಧ್ಯಾವಂದನಮ್ ॥

॥ ಶ್ರೀಗುರುಭ್ಯೋ ನಮಃ ॥ ಹರಿಃ ಓಂ ॥ ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ | ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥

೧. ಆಚಮನಮ್ :-

1. ಓಂ ಕೇಶವಾಯ ಸ್ವಾಹಾ (ಪಂಚಪಾತ್ರೆಯಲ್ಲಿರುವ ನೀರನ್ನು ಉದ್ಧರಣೆಯಿಂದ ಬಲ ಅಂಗೈಯಲ್ಲಿ ಹಾಕಿಕೊಂಡು ಪ್ರಾಶನ ಮಾಡಬೇಕು.)

2. ಓಂ ನಾರಾಯಣಾಯ ಸ್ವಾಹಾ (ಪಂಚಪಾತ್ರೆಯಲ್ಲಿರುವ ನೀರನ್ನು ಉದ್ಧರಣೆಯಿಂದ ಬಲ ಅಂಗೈಯಲ್ಲಿ ಹಾಕಿಕೊಂಡು ಪ್ರಾಶನ ಮಾಡಬೇಕು.)

3. ಓಂ ಮಾಧವಾಯ ಸ್ವಾಹಾ (ಪಂಚಪಾತ್ರೆಯಲ್ಲಿರುವ ನೀರನ್ನು ಉದ್ಧರಣೆಯಿಂದ ಬಲ ಅಂಗೈಯಲ್ಲಿ ಹಾಕಿಕೊಂಡು ಪ್ರಾಶನ ಮಾಡಬೇಕು.)

4. ಓಂ ಗೋವಿಂದಾಯ ನಮಃ (ಬಲಗೈಯನ್ನು ಎಡಗೈಯಿಂದ ಮುಟ್ಟಬೇಕು.)

5. ಓಂ ವಿಷ್ಣವೇ ನಮಃ (ಎಡಗೈಯನ್ನು ಬಲಗೈಯಿಂದ ಮುಟ್ಟಬೇಕು.)

6. ಓಂ ಮಧುಸೂದನಾಯ ನಮಃ (ಬಲಗೈಯಿಂದ ಮೇಲಿನ ತುಟಿಯನ್ನು ಸ್ಪರ್ಶ ಮಾಡಬೇಕು.)

7. ಓಂ ತ್ರಿವಿಕ್ರಮಾಯ ನಮಃ (ಕೆಳಗಿನ ತುಟಿಯನ್ನು ಸ್ಪರ್ಶಗೊಳಿಸಬೇಕು.)

8. ಓಂ ವಾಮನಾಯ ನಮಃ (ಬಲಗಲ್ಲವನ್ನು ಮುಟ್ಟಬೇಕು.)

9. ಓಂ ಶ್ರೀಧರಾಯ ನಮಃ (ಎಡಗಲ್ಲವನ್ನು ಮುಟ್ಟಬೇಕು.)

10. ಓಂ ಹೃಷೀಕೇಶಾಯ ನಮಃ (ಎರಡೂ ಕೈಗಳನ್ನು ಜೋಡಿಸಿ ನಮಸ್ಕರಿಸಬೇಕು.)

11. ಓಂ ಪದ್ಮನಾಭಾಯ ನಮಃ (ಎರಡೂ ಮೊಳಕಾಲುಗಳನ್ನು ಮುಟ್ಟಬೇಕು.)

12. ಓಂ ದಾಮೋದರಾಯ ನಮಃ (ಶಿರಸ್ಸನ್ನು ಮಧ್ಯಮ ಬೆರಳಿನಿಂದ ಮುಟ್ಟಬೇಕು.)

13. ಓಂ ಸಂಕರ್ಷಣಾಯ ನಮಃ (ಗಲ್ಲವನ್ನು ಮಧ್ಯಮ ಬೆರಳಿನಿಂದ ಮುಟ್ಟಬೇಕು.)

14. ಓಂ ವಾಸುದೇವಾಯ ನಮಃ (ಬಲ ಘ್ರಾಣಮೂಲವನ್ನು ಮುಟ್ಟಬೇಕು.)

15. ಓಂ ಪ್ರದ್ಯುಮ್ನಾಯ ನಮಃ (ಎಡ ಘ್ರಾಣಮೂಲವನ್ನು ಮುಟ್ಟಬೇಕು.)

16. ಓಂ ಅನಿರುದ್ಧಾಯ ನಮಃ (ಬಲಗಣ್ಣನ್ನು ಮುಟ್ಟಬೇಕು.)

17. ಓಂ ಪುರುಷೋತ್ತಮಾಯ ನಮಃ (ಎಡಗಣ್ಣನ್ನು ಮುಟ್ಟಬೇಕು.)

18. ಓಂ ಅಧೋಕ್ಷಜಾಯ ನಮಃ (ಬಲ ಕಿವಿಯನ್ನು ಮುಟ್ಟಬೇಕು.)

19. ಓಂ ನಾರಸಿಂಹಾಯ ನಮಃ (ಎಡ ಕಿವಿಯನ್ನು ಮುಟ್ಟಬೇಕು.)

20. ಓಂ ಅಚ್ಯುತಾಯ ನಮಃ (ನಾಭಿಪ್ರದೇಶವನ್ನು ಮುಟ್ಟಬೇಕು.)

21. ಓಂ ಜನಾರ್ದನಾಯ ನಮಃ (ಹೃದಯವನ್ನು ಅಂಗೈಯಿಂದ ಮುಟ್ಟಬೇಕು.)

22. ಓಂ ಉಪೇಂದ್ರಾಯ ನಮಃ (ಶಿರಸ್ಸನ್ನು ಕೈಯಿಂದ ಮುಟ್ಟಬೇಕು.)

23. ಓಂ ಹರಯೇ ನಮಃ (ಬಲಭುಜವನ್ನು ಮುಟ್ಟಬೇಕು.)

24. ಓಂ ಶ್ರೀಕೃಷ್ಣಾಯ ನಮಃ (ಎಡಭುಜವನ್ನು ಮುಟ್ಟಬೇಕು.)

**೨. ಪ್ರಾಣಾಯಾಮಃ :-**

ಪ್ರಣವಸ್ಯ ಪರಬ್ರಹ್ಮ ಋಷಿಃ | ಪರಮಾತ್ಮಾ ದೇವತಾ | ದೈವೀ ಗಾಯತ್ರೀ ಛಂದಃ | ಪ್ರಾಣಾಯಾಮೇ ವಿನಿಯೋಗಃ |

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ। ಓಂ ಸತ್ಯಮ್ । ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಃ ಸ್ವರೋಮ್ ॥

ಯತಿ ಮತ್ತು ಬ್ರಹ್ಮಚಾರಿಗಳು ಬಲಗೈಯ ಕನಿಷ್ಠ, ಅನಾಮಿಕ ಮತ್ತು ಅಂಗುಷ್ಠ ಮತ್ತು ಅಂಗುಷ್ಠ (ಕಿರುಬೆರಳು, ಉಂಗುರಬೆರಳು ಮತ್ತು ಹೆಬ್ಬೆರಳು) ಈ ಮೂರು ಬೆರಳುಗಳಿಂದ, ಗೃಹಸ್ಥ ಮತ್ತು ವಾನಪ್ರಸ್ಥರು ಐದೂ ಬೆರಳುಗಳಿಂದ, ಅಥವಾ ಅಂಗುಷ್ಠ, ಮಧ್ಯಮ, ತರ್ಜನೀ ಬೆರಳುಗಳಿಂದ ನಾಸಾಗ್ರವನ್ನು ಹಿಡಿದು ರೇಚಕ, ಪೂರಕ ಮತ್ತು ಕುಂಭಕಗಳಿಂದ ಪ್ರಾಣಾಯಾಮವನ್ನು ಮಾಡಬೇಕು. ಒಳಗಿನ ವಾಯುವನ್ನು ಎಡನಾಸಿಕಾರಂಧ್ರದಿಂದ ಒಳಗೆ ತೆಗೆದುಕೊಂಡು ಪೂರಕವೆಂತಲೂ, ಎರಡೂ ನಾಸಿಕಾ ರಂಧ್ರಗಳನ್ನು ಮೇಲೆ ತಿಳಿಸಿದಂತೆ ಬೆರಳುಗಳಿಂದ ಗಟ್ಟಿಯಾಗಿ ಹಿಡಿದು ಧಾರಣಮಾಡುವುದು ಕುಂಭಕವೆಂತಲೂ ತಿಳಿಯಲ್ಪಡುತ್ತದೆ. ವಾಯುವನ್ನು ಕುಂಭಕದಿಂದ ಧಾರಣ ಮಾಡಿದಾಗ ವ್ಯಾಹೃತಿಗಳನ್ನು ಮತ್ತು ಗಾಯತ್ರೀ ಶಿರೋಮಂತ್ರಗಳನ್ನು ಏಕಚಿತ್ತದಿಂದ ಮನಸ್ಸಿನಲ್ಲಿ ಜಪಿಸಬೇಕು. (ಪ್ರಾಣಾಯಾಮದ ಮಂತ್ರಗಳನ್ನು ಬಾಯಿಯಿಂದರೇ ಗಟ್ಟಿಯಿಂದ ಉಚ್ಚರಿಸದೇ ಮನಸ್ಸಿನಲ್ಲೇ ಜಪಿಸಬೇಕು.)

**೩. ಸಂಕಲ್ಪಃ :-**

(ಶ್ರೀವಿಷ್ಣು ವಿಷ್ಣು ಶ್ರೀಗೋವಿಂದ ಗೋವಿಂದ) ಶ್ರೀಮದ್ಭಗವತೋ ಮಹಾಪುರುಷಸ್ಯ ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ರೀಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಚರಣೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇ/ ಉತ್ತರೇ ತೀರೇ (ಪಾರ್ಶ್ವೇ) ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ.... ಸಂವತ್ಸರೇ... ಅಯನೇ..... ಋತೌ...... ಮಾಸೇ.... ಪಕ್ಷೇ .... ತಿಥೌ .... ವಾಸರೇ.... ನಕ್ಷತ್ರೇ.... (ಶುಭನಕ್ಷತ್ರೇ), ಶುಭಯೋಗೇ ಶುಭಕರಣೇ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಅಸ್ಮದ್ಗುರ್ವಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಪ್ರಾತಃಸಂಧ್ಯಾಮುಪಾಸಿಷ್ಯೇ ||

ಎರಡೂ ಕೈಗಳನ್ನು ಜೋಡಿಸಿ ಎಡಗೈ ಕೆಳಗೆ ಬಲಗೈ ಮೇಲೆ ಮಾಡಿ ಬಲತೊಡೆಯ ಮೇಲಿಟ್ಟುಕೊಂಡು ಸಂಕಲ್ಪ ಮಾಡಬೇಕು. ಸಂಕಲ್ಪ ಮಾಡದೇ ಕಾರ್ಯ ಮಾಡಿದರೆ ನಿಷ್ಫಲವಾಗುವದು. ಇಂಥ ದೇಶಕಾಲಗಳಲ್ಲಿ ಇಂಥ ಕರ್ಮವನ್ನು ಶ್ರೀಹರಿವಾಯುಗುರುಗಳ ಪ್ರೇರಣೆಯಿಂದ ಮಾಡುತ್ತೇನೆಂದು ಮನಸ್ಸನ್ನು ದೃಢಪಡಿಸುವುದೇ ಸಂಕಲ್ಪವಾಗಿರುತ್ತದೆ. ಮೇಲಿನಂತೆ ಪ್ರಕೃತದಲ್ಲಿರುವ ಸಂವತ್ಸರಾದಿಗಳನ್ನು ಮತ್ತು ಅಂದಿನ ತಿಥ್ಯಾದಿಗಳನ್ನು ಉಚ್ಚರಿಸಿ ಪಂಚಪಾತ್ರೆಯಲ್ಲಿಯ ನೀರನ್ನು ಉದ್ಧರಣೆಯಿಂದ ಬಲಗೈಯಲ್ಲಿ ಹಾಕಿಕೊಂಡು ಅರ್ಘ್ಯಪಾತ್ರೆಯಲ್ಲಿ ಬಿಡಬೇಕು.

**೪. ಮಾರ್ಜನಮ್ :-**

ಓಂ ಆಪೋ ಹಿಷ್ಠೇತಿ ತ್ರ್ಯೃಚಸ್ಯ ಸೂಕ್ತಸ್ಯ | ಸಿಂಧುದ್ವೀಪ ಋಷಿಃ | ಆಪೋ ದೇವತಾ | ಗಾಯತ್ರೀ ಛಂದಃ | ಮಾರ್ಜನೇ ವಿನಿಯೋಗಃ ||

ಓಮ್ ಆಪೋ ಹಿಷ್ಠಾ ಮಯೋ ಭುವಃ । ತಾ ನ ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ॥

ಯೋ ವಃ ಶಿವತಮೋ ರಸಃ । ತಸ್ಯ ಭಾಜಯತೇ ಹನಃ । ಉಶತೀರಿವ ಮಾತರಃ ॥

ತಸ್ಮಾ ಅರಂ ಗಮಾಮ ವಃ । ಯಸ್ಯ ಕ್ಷಯಾಯ ಜಿನ್ವಥ । ಆಪೋ ಜನಯಥಾ ಚ ನಃ ॥ ಓಂ ॥

ಎಡಗೈಯಲ್ಲಿ ಉದ್ಧರಣೆಯೊಳಗೆ ಪಂಚಪಾತ್ರೆಯೊಳಗಿನ ನೀರನ್ನು ಇಟ್ಟುಕೊಂಡು ನಿರ್ಮಾಲ್ಯತುಳಸೀದಳ ಸಹಿತ ತರ್ಜನೀ ಮಧ್ಯಮ ಬೆರಳುಗಳಿಂದ ಕ್ರಮವಾಗಿ ಮಾರ್ಜನಮಂತ್ರದ ಒಂದೊಂದು ಪಾದವನ್ನು ಉಚ್ಚರಿಸುತ್ತ ಕ್ರಮವಾಗಿ ಮಾರ್ಜನಮಂತ್ರದ ಒಂದೊಂದು ಪಾದವನ್ನು ಉಚ್ಚರಿಸುತ್ತ ಕ್ರಮವಾಗಿ ಪಾದ, ಶಿರಸ್ಸು, ಹೃದಯ; ಹೃದಯ, ಪಾದ, ಶಿರಸ್ಸು; ಶಿರಸ್ಸು, ಹೃದಯ, ಪಾದ ಈ ಸ್ಥಳಗಳಿಗೆ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಪ್ರೋಕ್ಷಣೆ ಮಾಡಿಕೊಂಡ ಮೇಲೆ ಉಳಿದ ನೀರನ್ನು ಅರ್ಘ್ಯಪಾತ್ರೆಯಲ್ಲಿ ಹಾಕಿ ಉದ್ಧರಣೆಯನ್ನು ಪಂಚಪಾತ್ರೆಯೊಳಗೆ ಇಡಬೇಕು. ಮಾರ್ಜನೆಯಿಂದ ದೇಹದ ಬಹಿಃ ಶುದ್ಧಿಯಾಗುವುದು.

೫. ಜಲಾಭಿಮಂತ್ರಣಮ್ :-

೧. ಸೂರ್ಯಶ್ಚೇತ್ಯಸ್ಯ ಮಂತ್ರಸ್ಯ ಯಾಜ್ಞವಲ್ಕ್ಯ ಋಷಿ | ಸೂರ್ಯಮಾಮನ್ಯು ಮನ್ಯುಪತಯಶ್ಚ ದೇವತಾಃ | ಪ್ರಕೃತಿಶ್ಛಂದಃ | ಜಲಾಭಿಮಂತ್ರಣೇ ವಿನಿಯೋಗಃ |

ಓಂ ಸೂರ್ಯಶ್ಚ ಮಾ ಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ । ಪಾಪೇಭ್ಯೋ ರಕ್ಷಂತಾಮ್ । ಯದ್ರಾತ್ರ್ಯಾ ಪಾಪಮಕಾರ್ಷಮ್ । ಮನಸಾ ವಾಚಾ ಹಸ್ತಾಭ್ಯಾಮ್। ಪದ್ಭ್ಯಾಮುದರೇಣ ಶಿಶ್ನಾ । ರಾತ್ರಿಸ್ತದವಲುಂಪತು । ಯತ್ಕಿಂಚ ದುರಿತಂ ಮಯಿ । ಇದಮಹಂ ಮಾಮಮೃತಯೋನೌ । ಸೂರ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ ॥ (ಇತಿ ಪ್ರಾಶ್ಯ)

೨. ಆಚಮನಮ್ :- ಓಂ ಕೇಶವಾಯ ಸ್ವಾಹಾ, ಓಂ ನಾರಾಯಣಾಯ ಸ್ವಾಹಾ, ಓಂ ಮಾಧವಾಯ ಸ್ವಾಹಾ, ಓಂ ಗೋವಿಂದಾಯ ನಮಃ ..... ಓಂ ಶ್ರೀಕೃಷ್ಣಾಯ ನಮಃ || ಇತಿ ದ್ವಿರಾಚಮ್ಯ ||

1. ಆಚಮನ ಪಾತ್ರೆಯಲ್ಲಿಯ ನೀರನ್ನು ಎಡಗೈಯಲ್ಲಿ ಹಿಡಿದ ಉದ್ಧರಣೆಯಿಂದ ತೆಗೆದುಕೊಂಡು ಬಲಗೈಯ ಅಂಗೈಯಲ್ಲಿ ಹಾಕಿಕೊಂಡು ಮೇಲೆ ಹೇಳಿರುವ ಜಲಾಭಿಮಂತ್ರಣದ ಮಂತ್ರವನ್ನು ಹೇಳಿ ಬಲಗೈಯಲ್ಲಿಯ ನೀರನ್ನು ಅಭಿಮಂತ್ರಿಸಿ ಮಂತ್ರಾರ್ಥವನ್ನು ಚೆನ್ನಾಗಿ ಮನಸ್ಸಿನಲ್ಲಿ ತಂದುಕೊಂಡು, ಅಂಗೈ ಮುಂಭಾಗದಿಂದ ಪ್ರಾಶನ ಮಾಡಬೇಕು. ಇದರಿಂದ ಪಾಪಕ್ಷಯವಾಗುವದು. 2. ನಂತರ ಎರಡು ಸಲ ಆಚಮನ ಮಾಡಿಕೊಳ್ಳಬೇಕು. ಆಚಮನದ ವಿಧಿಯನ್ನು ಪ್ರಾರಂಭದಲ್ಲೇ ಹೇಳಲಾಗಿದೆ.

೬. ಪುನರ್ಮಾರ್ಜನಮ್ :-

೧. ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ ।

ಸುರಭಿನೋ ಮುಖಾ ಕರತ್ಪ್ರಣ ಆಯೂಗ್ಂಷಿ ತಾರಿಷತ್ ॥

೨. ಓಮ್ ಆಪೋ ಹಿಷ್ಠಾ ಮಯೋಭುವಃ । ತಾ ನ ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ॥ ಯೋ ವಶ್ಶಿವತಮೋ ರಸಃ । ತಸ್ಯ ಭಾಜಯತೇ ಹನಃ । ಉಶತೀರಿವ ಮಾತರಃ ॥ ತಸ್ಮಾ ಅರಂ ಗಮಾಮ ವಃ । ಯಸ್ಯ ಕ್ಷಯಾಯ ಜಿನ್ವಥ। ಆಪೋ ಜನಯಥಾ ಚ ನಃ ॥ ಓಮ್ ॥

೩. ಹಿರಣ್ಯವರ್ಣಾಃ ಶುಚಯಃ ಪಾವಕಾ ಯಾಸು ಜಾತಃ ಕಶ್ಯಪೋ ಯಾಸ್ವಿಂದ್ರಃ। ಅಗ್ನಿಗ್ಂ ಯಾ ಗರ್ಭಂ ದಧಿರೇ ವಿರೂಪಾಸ್ತಾ ನ ಆಪಃ ಶಗ್ಗ್‌ಸ್ಯೋನಾ ಭವಂತು॥

೪. ಯಾಸಾಗ್ಂ ರಾಜಾ ವರುಣೋ ಯಾತಿ ಮಧ್ಯೇ ಸತ್ಯಾನೃತೇ ಅವಪಶ್ಯನ್ ಜನಾನಾಮ್ । ಮಧುಶ್ಚುತಃ ಶುಚಯೋ ಯಾಃ ಪಾವಕಾಸ್ತಾ ನ ಆಪಃ ಶಗ್ಗ್‌ಸ್ಯೋನಾ ಭವಂತು ॥

೫. ಯಾಸಾಗುಂ ದೇವಾ ದಿವಿ ಕೃಣ್ವಂತಿ ಭಕ್ಷಂ ಅಂತರಿಕ್ಷೇ ಬಹುಧಾ ಭವಂತಿ। ಯಾಃ ಪೃಥಿವೀಂ ಪಯಸೋಂದಂತಿ ಶುಕ್ರಾಸ್ತಾ ನ ಆಪಃ ಶಗ್ಗ್‌ಸ್ಯೋನಾ ಭವಂತು॥

**1-5. ಓಂ ದಧಿಕ್ರಾವ್ಣ್ಣೋಽಕಾರಿಷಂ .... ಎಂಬ ಮೇಲಿನ ಒಂದನೆಯ ಮಂತ್ರವನ್ನು ಹೇಳಿ ನಂತರ ಎಡಗೈಯಲ್ಲಿಯ ಉದ್ಧರಣೆಯೊಳಗೆ ಪಂಚಪಾತ್ರೆಯೊಳಗಿನ ನೀರನ್ನು ತೆಗೆದುಕೊಂಡು ನಿರ್ಮಾಲ್ಯ.ತುಳಸೀದಳಸಹಿತ ತರ್ಜನೀ-ಮಧ್ಯಮ ಬೆರಳುಗಳಿಂದ ಪುನರ್ಮಾರ್ಜನ ಮಂತ್ರವಾದ 'ಆಪೋ ಹಿ ಷ್ಠಾ ಮಯೋಭುವಃ .....' ಇತ್ಯಾದಿ 2 ನೆಯ ಮಂತ್ರದ ಒಂದೊಂದು ಪಾದವನ್ನು ಉಚ್ಚರಿಸುತ್ತ ಕ್ರಮವಾದ ಪಾದ, ಶಿರಸ್ಸು, ಹೃದಯ; ಹೃದಯ, ಪಾದ, ಶಿರಸ್ಸು; ಶಿರಸ್ಸು, ಹೃದಯ, ಪಾದ ಈ ಅಂಗಗಳಿಗೆ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಅನಂತರ 3, 4, 5 ರಲ್ಲಿಯ ಮಂತ್ರಗಳನ್ನು ಹೇಳುತ್ತಾ ಉದ್ಧರಣೆಯೊಳಗಿನ ಜಲವನ್ನು ಒಂದೊಂದು ಮಂತ್ರಕ್ಕೆ ಒಂದೊಂದು ಸಲದಂತೆ ಪ್ರೋಕ್ಷಣೆ ಮಾಡಿಕೊಳ್ಳಬೇಕು. ನಿರ್ಮಾಲ್ಯ ತುಳಸೀ, ಉದ್ಧರಣೆಯೊಳಗಿನ ಉಳಿದ ಜಲವನ್ನು ಅರ್ಘ್ಯಪಾತ್ರೆಯಲ್ಲಿ ವಿಸರ್ಜಿಸಬೇಕು. ಪುನರ್ಮಾರ್ಜನದಿಂದ ವಿಶೇಷವಾದ ಪಾಪಗಳ ನಾಶವಾಗಿ ಹೆಚ್ಚಿನ ಅಂತಃಶುದ್ಧಿಯುಂಟಾಗುವುದು.**

**೭. ಅಘಮರ್ಷಣಮ್ (ಪಾಪಪುರುಷ ವಿಸರ್ಜನಮ್) :- ಕೈಯಲ್ಲಿ ನೀರು ಹಿಡಿದು**

೧. (ಹಸ್ತೇ ಜಲಂ ಗೃಹೀತ್ವಾ) ಶಿವೇನ ಮಾ ಚಕ್ಷುಷಾ ಪಶ್ಯತಾಽಽಪಃ ಶಿವಯಾ ತನುವೋಪಸ್ಪೃಶತ ತ್ವಚಂ ಮೇ। ಸರ್ವಾಗಮ್ ಅಗ್ನೀಗ್ಂ ರಪ್ಸುಷದೋ ಹುವೇ ವೋ ಮಯಿ ವರ್ಚೋ ಬಲಮೋಜೋ ನಿ ಧತ್ತ ॥ (ತಜ್ಜಲಂ ನಾಸಿಕಯಾ ಆಘ್ರಾಯ)

೨. ದ್ರುಪದಾದಿವ ಮುಂಚಂತು ॥ (ಇತ್ಯುಕ್ತ್ವಾ ತಜ್ಜಲಂ ವಿಸೃಜೇತ್) **ಈಶಾನ್ಯಾಭಿಮುಖವಾಗಿ ವಿಸರ್ಜಿಸಬೇಕು.**

೩. (ಪುನರ್ಜಲಂ ಹಸ್ತೇನಾದಾಯ) ದ್ರುಪದಾದಿವೇನ್ಮುಮುಚಾನಃ । ಸ್ವಿನ್ನಃ ಸ್ನಾತ್ವೀ ಮಲಾದಿವ । ಪೂತಂ ಪವಿತ್ರೇಣೈವಾಜ್ಯಮ್ । ಆಪಃ ಶುಂಧಂತು-ಮೈನಸಃ ॥ (ಪುನರಾಘ್ರಾಯ ವಿಸೃಜೇತ್)

**1-2. ಅನಂತರ ಪಂಚಪಾತ್ರೆಯೊಳಗಿಂದ ಒಂದು ಸೌಟು ನೀರನ್ನು ಉದ್ಧರಣೆಯಿಂದ ಬಲ ಅಂಗೈಯಲ್ಲಿ ಹಾಕಿಕೊಂಡು 'ಶಿವೇನ ಮಾ ಚಕ್ಷುಷಾ....' ಇತ್ಯಾದಿ ಮೇಲಿನ 1ನೆಯ ಮಂತ್ರವನ್ನು ಉಚ್ಚರಿಸಿ ಆ ನೀರನ್ನು ಮೂಗಿನ ಬಲಹೊಳ್ಳೆಯಿಂದ ಮೂಸಿ ನೋಡಿ 'ದ್ರುಪದಾದಿವ ಮುಂಚಂತು' (2ನೆಯ ಮಂತ್ರ) ಎಂದು ಹೇಳಿ ಮೂಗಿನ ಎಡ ಹೊಳ್ಳೆಯಿಂದ ಆ ನೀರನ್ನು ಶ್ವಾಸ ಬಿಟ್ಟು ಆ ನೀರನ್ನು ತನ್ನ ಎಡಭಾಗದಲ್ಲಿ ಚೆಲ್ಲಬೇಕು.**

**3. ಮೇಲಿನಂತೆ ಇನ್ನೊಮ್ಮೆ ನೀರನ್ನು ಉದ್ಧರಣೆಯಿಂದ ಬಲ ಅಂಗೈಯಲ್ಲಿ ಹಾಕಿಕೊಂಡು 'ದ್ರುಪದಾದಿವೇನ್ಮುಮುಚಾನಃ .....' ಇತ್ಯಾದಿ ಮೂರನೆಯ ಮಂತ್ರವನ್ನು ಹೇಳಿ ಆ ಜಲವನ್ನು ಪುನಃ ಮೂಗಿನ ಬಲ ಹೊಳ್ಳೆಯಿಂದ ಆಘ್ರಾಣಿಸಿ (ಮೂಸಿ**

ನೋಡಿ), ಮೂಗಿನ ಎಡ ಹೊಳ್ಳೆಯಿಂದ ಆ ನೀರನ್ನು ಶ್ವಾಸಬಿಟ್ಟು ಆ ನೀರನ್ನು ಎಡಭಾಗದಲ್ಲಿ ಚೆಲ್ಲಬೇಕು. ಅನಂತರ ಎರಡು ಸಲ ಆಚಮನ ಮಾಡಬೇಕು.

ಪಾಪ ಪುರುಷನು ಸುಟ್ಟುಹೋದನೆಂದು ಅವನ ಭಸ್ಮವು ನೀರಿನ ದ್ವಾರಾ ಹೊರಗೆ ಹೋಯಿತೆಂದೂ, ಇನ್ನು ಮುಂದೆ ತನ್ನ ದೇಹವು ವೈದಿಕ ಕರ್ಮಗಳನ್ನು ಮಾಡಲು ಶುದ್ಧವಾಯಿತೆಂದೂ ಭಾವಿಸಬೇಕು.

೮. ಆಚಮನಮ್ :-

ಓಂ ಕೇಶವಾಯ ಸ್ವಾಹಾ, ಓಂ ನಾರಾಯಣಾಯ ಸ್ವಾಹಾ, ಓಂ ಮಾಧವಾಯ ಸ್ವಾಹಾ, ಓಂ ಗೋವಿಂದಾಯ ನಮಃ ...... ಓಂ ಶ್ರೀಕೃಷ್ಣಾಯ ನಮಃ || ಎಂದು ಆಚಮನ ಮಾಡಬೇಕು.

೯. ಅರ್ಘ್ಯಪ್ರದಾನಮ್ :-

೧. ಆಚಮನಮ್ : ಓಂ ಕೇಶವಾಯ ಸ್ವಾಹಾ, ಓಂ ನಾರಾಯಣಾಯ ಸ್ವಾಹಾ, ಓಂ ಮಾಧವಾಯ ಸ್ವಾಹಾ, ಓಂ ಗೋವಿಂದಾಯ ನಮಃ .... ಓಂ ಶ್ರೀಕೃಷ್ಣಾಯ ನಮಃ ||

1. ಆಚಮನಮ್ : ಮೇಲಿನಂತೆ ಇನ್ನೊಮ್ಮೆ ಆಚಮನ ಮಾಡಬೇಕು.

೨. ಪ್ರಾಣಾಯಾಮಃ : ಪ್ರಣವಸ್ಯ ಪರಬ್ರಹ್ಮ ಋಷಿಃ | ಪರಮಾತ್ಮಾ ದೇವತಾ | ದೈವೀ ಗಾಯತ್ರೀ ಛಂದಃ | ಪ್ರಾಣಾಯಾಮೇ ವಿನಿಯೋಗಃ ||

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ। ಓಂ ಸತ್ಯಮ್ । ಓಂ ತತ್ಸವಿತುರ್ವರೇಣ್ಯಮ್। ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಃ ಸ್ವರೋಮ್ ॥ ಈ ಮಂತ್ರಗಳನ್ನು ಮನಸ್ಸಿನಲ್ಲಿ ಹೇಳುತ್ತ ಹಿಂದೆ ಹೇಳಿದಂತೆ ಪ್ರಾಣಾಯಾಮವನ್ನು ಮಾಡಿಕೊಳ್ಳಬೇಕು.

೩. ಸಂಕಲ್ಪ : ಅದ್ಯ ಪೂರ್ವೋಕ್ತ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಪ್ರಾತಃಸಂಧ್ಯಾಂಗ ಅರ್ಘ್ಯಪ್ರದಾನಮಹಂ ಕರಿಷ್ಯೇ || (ಇತಿ ಸಂಕಲ್ಪ್ಯ)

ಶ್ರೀಹರಿಯ ಪ್ರೀತಿ ಸಂಪಾದನೆಗಾಗಿ ನಾನು ಪ್ರಾತಃ ಸಂಧ್ಯಾವಂದನೆಯ ಅಂಗವಾದ ಅರ್ಘ್ಯವನ್ನು ಕೊಡುತ್ತೇನೆ ಎಂದು ಸಂಕಲ್ಪ ಮಾಡಿ ಅರ್ಘ್ಯಥಾಲಿಯೊಳಗಿನ ನೀರನ್ನು ಉದ್ಧರಣೆಯಿಂದ ಬಲ ಅಂಗೈಯಿಂದ ಹಾಕಿಕೊಂಡು ಅರ್ಘ್ಯಪಾತ್ರೆಯಲ್ಲಿ ಬಿಡಬೇಕು.

೪. ಯಂತ್ರಲೇಖನಂ : ಕೋಣಮಧ್ಯೇ ತು ಹ್ರೀಂಕಾರಂ ಕೋಣಾಗ್ರೇ ಪ್ರಣವಂ ನ್ಯಸೇತ್ | ದಲೇಷು ವ್ಯಾಹೃತೀಶ್ಚೈವ ಮಧ್ಯೇ ವರುಣದೈವತಮ್ | ಲಿಖಿತ್ವಾ ಮಂತ್ರರಾಜಂ ತು ಪಶ್ಚಾದರ್ಘ್ಯಂ ಸಮಾಚರೇತ್|| (ಇತಿ ಲಿಖಿತ್ವಾ ತಿಷ್ಠನ್)




ಲೇಖನವಿಧಿ : ತಂಬಿಗೆಯಲ್ಲಿಯ ನೀರನ್ನೂ ತಟ್ಟೆಯ ತುಂಬಾ ಹಾಕಿ ಈ ನೀರಿನಲ್ಲಿ ಯಂತ್ರಲೇಖನಮಂತ್ರವನ್ನು ಹೇಳುತ್ತ ಕಿರುಬೆರಳಿನಿಂದ ಉಗುರು ತಾಕಿಸದೆ ಕೆಳಗೆ ತೋರಿಸಿದಂತೆ ಕ್ರಮವಾಗಿ ಯಂತ್ರವನ್ನು ಬರೆಯಬೇಕು. (ಅರ್ಘ್ಯತಾಲಿಯಲ್ಲೇ ಯಂತ್ರವನ್ನು ಬರೆದು ಉದ್ಧರಣೆಯಿಂದ ಬಲಗೈಯಲ್ಲಿ ನೀರನ್ನು ಹಾಕಿಕೊಂಡು ಬೊಗಸೆಯಿಂದ ಅರ್ಘ್ಯವನ್ನು ಕೊಡಬಹುದು.)

ಅರ್ಘ್ಯಪ್ರದಾನ ವಿಧಿ : ಹೆಬ್ಬೆಟ್ಟನ್ನು ತರ್ಜನಿಗಳಿಗೆ ತಾಗಿಸದೇ (ದೂರ ಸರಿಸಿ) ಬೊಗಸೆಯಲ್ಲಿ ತಟ್ಟೆಯಲ್ಲಿಯ ಯಂತ್ರ

ಬರೆದ ನೀರನ್ನು ತೆಗೆದುಕೊಂಡು ಸೂರ್ಯಾಭಿಮುಖವಾಗಿ ನಿಂತುಕೊಂಡು, ಸೂರ್ಯನನ್ನು ನೋಡುತ್ತ, ಕೆಳಗಿನ ಅರ್ಘ್ಯಪ್ರದಾನ ಮಂತ್ರವನ್ನು ಹೇಳಿ ನಂತರ ಬೊಗಸೆಯನ್ನು ನಿಂತ ಆಕಳಿನ ಕೋಡಿನಷ್ಟು ಮೇಲೆತ್ತಿ ಬೆರಳುಗಳ ಕೊನೆಯಿಂದ ಅರ್ಘ್ಯಪಾತ್ರೆಯ ಜಲದಲ್ಲಿ ಬಿಡಬೇಕು. ಈ ಕ್ರಮದಲ್ಲಿ ಕೆಳಗಿನ ಅರ್ಘ್ಯಪ್ರದಾನ ಮಂತ್ರವನ್ನು ಹೇಳಿ ಅರ್ಘ್ಯ ಕೊಡುವುದನ್ನು ಮೂರು ಸಲ ಮಾಡಬೇಕು. ಒಂದು ಸಲ ಅರ್ಘ್ಯವನ್ನು ಕೊಟ್ಟ ಮೇಲೆ ಗಂಗಾ ಸನ್ನಿಧಾನಕ್ಕಾಗಿ ಬಲಗಿವಿ, ಮೂಗಿನ ಬಲಭಾಗವನ್ನು ಬಲಗೈ ಬೆರಳುಗಳಿಂದ ಮುಟ್ಟಿಕೊಳ್ಳಬೇಕು. ಈ ಮಂತ್ರದ ಅರ್ಥವನ್ನು ಹಿಂದೆಯೇ ತಿಳಿಸಲಾಗಿದೆ.

೫. ಅರ್ಘ್ಯಪ್ರದಾನಮಂತ್ರಃ :

ಓಂ ಭೂರ್ಭುವಃಸ್ವಃ । ಓಂ ತತ್ಸವಿತುರ್ವರೇಣ್ಯಮ್ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮ್ ॥ (ಇತಿ ತ್ರೀಣಿ ಅರ್ಘ್ಯಾಣಿ ದದ್ಯಾತ್ ॥) (ಹೀಗೆ ಮೂರು ಬಾರಿ ಅರ್ಘ್ಯವನ್ನು ಕೊಡಬೇಕು.)

೬. ಪ್ರಾಯಶ್ಚಿತ್ತಾರ್ಘ್ಯಮ್ : ಕಾಲಾತೀತದೋಷಪ್ರಾಯಶ್ಚಿತ್ತಾರ್ಥಂ ಪ್ರಾಯಶ್ಚಿತ್ತಾರ್ಘ್ಯಪ್ರದಾನಮಹಂ ಕರಿಷ್ಯೇ ॥

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ। ಓಂ ಸತ್ಯಮ್ । ಓಂ ತತ್ಸವಿತುರ್ವರೇಣ್ಯಮ್। ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಃ ಸ್ವರೋಮ್ ॥ ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ। ಓಂ ಸತ್ಯಮ್ । ಓಮ್ ॥ (ಇತ್ಯರ್ಘ್ಯಮೇಕಂ ದದ್ಯಾತ್)

**ಅರ್ಘ್ಯಪ್ರದಾನದ ಹಿನ್ನೆಲೆ :** ಮಹಾಭೀಕರ ಸ್ವರೂಪಿಗಳಾದ ಅತಿ ಬಲಿಷ್ಠರಾದ ಮೂರುವರೆ ಕೋಟಿ ಮಂದೇಹರೆಂಬ ರಾಕ್ಷಸರು ಪ್ರತಿದಿನ ಪ್ರತಿಸಂಧ್ಯಾಕಾಲದಲ್ಲಿಯೂ ಸೂರ್ಯನೊಡನೆ ಯುದ್ಧ ಮಾಡಿ ಸೂರ್ಯನನ್ನು ತಿನ್ನಲು ಬರುವರು. ಈ ರಾಕ್ಷಸರಿಗೆ ಪ್ರತಿನಿತ್ಯ ಜನನ ಮತ್ತು ಮರಣಕ್ಕೆ ಬ್ರಹ್ಮದೇವರಿಂದ ವರ ಮತ್ತು ಶಾಪವು ಕೊಡಲ್ಪಟ್ಟಿದೆ. ಈ ರಾಕ್ಷಸರ ಸಂಹಾರಕ್ಕಾಗಿ ಪ್ರತಿಸಂಧ್ಯಾಕಾಲದಲ್ಲಿ ಓಂಕಾರ ಸಹಿತವಾದ ಗಾಯತ್ರೀಮಂತ್ರದಿಂದ ಅಭಿಮಂತ್ರಿತವಾದ ವಜ್ರೀಭೂತವಾದ ಅರ್ಘ್ಯ ಜಲದಿಂದ ಮೂರು ಅರ್ಘ್ಯಗಳನ್ನು ಕೊಡಬೇಕು. ಮೊದಲನೆಯ ಅರ್ಘ್ಯವು ಆ ರಾಕ್ಷಸರ ವಾಹನ ನಾಶಕ್ಕಾಗಿ, ಎರಡನೆಯದು ಅವರ ಶಸ್ತ್ರನಾಶಕ್ಕಾಗಿ ಹಾಗೂ ಮೂರನೆಯದು ಆ ರಾಕ್ಷಸರ ಸಂಹಾರಕ್ಕಾಗಿ ಎಂದು ಅನುಸಂಧಾನ ಮಾಡಿಕೊಂಡು ಮೂರು ಸಲ ಅರ್ಘ್ಯಗಳನ್ನು ಕೊಡಬೇಕು. ಪ್ರತಿದಿನ ಸಂಧ್ಯಾಕಾಲದಲ್ಲಿ ವಾಲಖಿಲ್ಯಾದಿಬ್ರಾಹ್ಮಣಶ್ರೇಷ್ಠರು ಈ ಪ್ರಕಾರ ಅರ್ಘ್ಯಗಳನ್ನು ಕೊಡುವುದರಿಂದ ಮಂದೇಹರಾಕ್ಷಸರು ಸುಟ್ಟು ಹೋಗುವರು ಮತ್ತು ಸೂರ್ಯನು ರಕ್ಷಿತನಾಗಿ ಈ ಪ್ರಪಂಚವನ್ನು ಪಾಲಿಸುವನು ಎಂದು ವಿಷ್ಣುಪುರಾಣ (ಅ.8) ವಚನವಿದೆ. ನಾವು ಸೂರ್ಯನಿಂದ ಪಡೆಯುತ್ತಿರುವ ಉಪಕಾರಕ್ಕಾಗಿ ಕೃತಜ್ಞತಾರೂಪವಾಗಿ ಇದನ್ನು ಸಲ್ಲಿಸಬೇಕು. ಈ ಪ್ರಕಾರ ನಮ್ಮ ಅರ್ಘ್ಯಪ್ರದಾನದಿಂದ ಪರಮಾತ್ಮನು ಪ್ರೀತನಾಗುವನು ಮತ್ತು ಲೋಕೋಪಕಾರವು ಆಗುತ್ತದೆ.

ಸೂರ್ಯೋದಯವಾದ ಮೇಲೆ ಅರ್ಘ್ಯವನ್ನು ಕೊಡುವ ಪ್ರಸಂಗವಿದ್ದಾಗ ಪ್ರಾಯಶ್ಚಿತ್ತಾರ್ಘ್ಯಮಂತ್ರವನ್ನು ಹೇಳಿ 4ನೆಯ ಅರ್ಘ್ಯವನ್ನು ಕೊಡಬೇಕು.

೧೦. ಉದ್ಯಂತಮಸ್ತಮಯಂತಮ್ ಆದಿತ್ಯಮಭಿಧ್ಯಾಯನ್ ಕುರ್ವನ್ ಬ್ರಾಹ್ಮಣೋ ವಿದ್ವಾನ್ ಸಕಲಂ ಭದ್ರಮಶ್ನುತೇ ।

ಅಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ | ಯ ಏವಂ ವೇದ | ಅಸಾವಾದಿತ್ಯೋ ಬ್ರಹ್ಮ | (ಇತಿ ಸ್ವಯಂ ಹಸ್ತೇನ ಜಲಂ ಗೃಹೀತ್ವಾ ಪ್ರದಕ್ಷಿಣೀಕೃತ್ಯ ಉತ್ಸೃಜ್ಯ ದ್ವಿರಾಚಾಮೇತ್ |)

೧೧. ಆಚಮನಮ್ :-

ಓಂ ಕೇಶವಾಯ ಸ್ವಾಹಾ, ಓಂ ನಾರಾಯಣಾಯ ಸ್ವಾಹಾ, ಓಂ ಮಾಧವಾಯ ಸ್ವಾಹಾ, ಓಂ ಗೋವಿಂದಾಯ ನಮಃ ..... ಶ್ರೀಕೃಷ್ಣಾಯ ನಮಃ ||

ವಿಧಿ : ಪಂಚಪಾತ್ರೆಯಲ್ಲಿರುವ ನೀರನ್ನು ಬಲಗೈಯಲ್ಲಿ ಹಾಕಿಕೊಂಡು ಮೇಲಿನ ಮಂತ್ರವನ್ನು ಹೇಳಿ ನಿಂತುಕೊಂಡೇ ತನ್ನ ಸುತ್ತಲೂ ಪ್ರದಕ್ಷಿಣಾಕಾರವಾಗಿ ನೀರು ಚೆಲ್ಲುತ್ತ ತಿರುಗಿ, ಆಮೇಲೆ ಮೊದಲಿನಂತೆ ಆಸನದ ಮೇಲೆ ಕುಳಿತು ಎರಡು ಸಲ ಆಚಮನವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಆ ದೈತ್ಯರ ಹತ್ಯಾಪಾಪವು ಪರಿಹಾರವಾಗಿ ದೇಹರಕ್ಷಣೆಯಾಗುವುದು.

೧೨. ತರ್ಪಣಮ್ :-

೧. ಶುಕ್ಲಪಕ್ಷೇ - ಓಂ ಕೇಶವಂ ತರ್ಪಯಾಮಿ | ಓಂ ನಾರಾಯಣಂ ತರ್ಪಯಾಮಿ | ಓಂ ಮಾಧವಂ ತರ್ಪಯಾಮಿ | ಓಂ ಗೋವಿಂದಂ ತರ್ಪಯಾಮಿ | ಓಂ ವಿಷ್ಣುಂ ತರ್ಪಯಾಮಿ | ಓಂ ಮಧುಸೂದನಂ ತರ್ಪಯಾಮಿ | ಓಂ ತ್ರಿವಿಕ್ರಮಂ ತರ್ಪಯಾಮಿ | ಓಂ ವಾಮನಂ ತರ್ಪಯಾಮಿ | ಓಂ ಶ್ರೀಧರಂ ತರ್ಪಯಾಮಿ | ಓಂ ಹೃಷಿಕೇಶಂ ತರ್ಪಯಾಮಿ | ಓಂ ಪದ್ಮನಾಭಂ ತರ್ಪಯಾಮಿ | ಓಂ ದಾಮೋದರಂ ತರ್ಪಯಾಮಿ || (ಆಚಮ್ಯ)

೨. ಕೃಷ್ಣಪಕ್ಷೇ : ಓಂ ಸಂಕರ್ಷಣಂ ತರ್ಪಯಾಮಿ | ಓಂ ವಾಸುದೇವಂ ತರ್ಪಯಾಮಿ | ಓಂ ಪ್ರದ್ಯುಮ್ನಂ ತರ್ಪಯಾಮಿ | ಓಂ ಅನಿರುದ್ಧಂ ತರ್ಪಯಾಮಿ | ಓಂ ಪುರುಷೋತ್ತಮಂ ತರ್ಪಯಾಮಿ | ಓಂ ಅಧೋಕ್ಷಜಂ ತರ್ಪಯಾಮಿ | ಓಂ ನಾರಸಿಂಹಂ ತರ್ಪಯಾಮಿ | ಓಂ ಅಚ್ಯುತಂ ತರ್ಪಯಾಮಿ | ಓಂ ಜನಾರ್ದನಂ ತರ್ಪಯಾಮಿ | ಓಂ ಉಪೇಂದ್ರಂ ತರ್ಪಯಾಮಿ | ಓಂ ಹರಿಂ ತರ್ಪಯಾಮಿ | ಓಂ ಶ್ರೀಕೃಷ್ಣಂ ತರ್ಪಯಾಮಿ || (ಆಚಮ್ಯ)

ಬಲಗೈಯ ತೋರು ಮತ್ತು ಮಧ್ಯಬೆರಳುಗಳ ಮಧ್ಯದಲ್ಲಿ ನಿರ್ಮಾಲ್ಯ ತುಳಸೀದಳವನ್ನು ಇಟ್ಟುಕೊಂಡು, ಅರ್ಘ್ಯಥಾಲಿಯೊಳಗಿನ ನೀರನ್ನು ಉದ್ಧರಣೆಯಲ್ಲಿ ಎಡಗೈಯಿಂದ ತೆಗೆದುಕೊಂಡು ಬಲ ಅಂಗೈಯಲ್ಲಿ ಹಾಕಿಕೊಂಡು ಶುಕ್ಲಪಕ್ಷದಲ್ಲಿ "ಓಂ ಕೇಶವಂ ತರ್ಪಯಾಮಿ" ಎಂದು ಉಚ್ಚರಿಸುತ್ತ ಅರ್ಘ್ಯಪಾತ್ರೆಯಲ್ಲಿ ಬಿಡಬೇಕು. ಇದರಂತೆ ಹನ್ನೆರಡು ಹೆಸರುಗಳನ್ನು ಹೇಳಿ ಒಂದೊಂದು ಸಲ ತರ್ಪಣವನ್ನು ಕೊಡಬೇಕು. ಕೃಷ್ಣಪಕ್ಷದಲ್ಲಿ "ಓಂ ಸಂಕರ್ಷಣಂ ತರ್ಪಯಾಮಿ" ಎಂದು ಮುಂತಾಗಿ ಹನ್ನೆರಡು ಹೆಸರುಗಳನ್ನು ಉಚ್ಚರಿಸುತ್ತ ಒಂದೊಂದು ಹೆಸರಿಗೆ ಒಂದು ಸಲದಂತೆ ಹನ್ನೆರಡು ಸಲ ತರ್ಪಣವನ್ನು ಕೊಡಬೇಕು.

ಅನಂತರ ಎರಡು ಬಾರಿ ಆಚಮನ ಮಾಡಬೇಕು.

೧೩. ಆಚಮನಮ್ :-

ಓಂ ಕೇಶವಾಯ ಸ್ವಾಹಾ, ಓಂ ನಾರಾಯಣಾಯ ಸ್ವಾಹಾ, ಓಂ ಮಾಧವಾಯ ಸ್ವಾಹಾ, ಓಂ ಗೋವಿಂದಾಯ ನಮಃ ..... ಓಂ ಶ್ರೀಕೃಷ್ಣಾಯ ನಮಃ ||

೧೪. ಭೂತೋಚ್ಚಾಟನಮ್ :-

೧. ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ |
ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ||

ತಸ್ಯ ಮಧ್ಯೇ ಮಹಾನಗ್ನಿರ್ವಿಶ್ವಾರ್ಚಿರ್ವಿಶ್ವತೋಮುಖಃ ।
ಸೋಽಗ್ರಭುಗ್ವಿಭಜನ್‌ತಿಷ್ಠನ್ನಾಹಾರಮಜರಃ ಕವಿಃ ।
ತಿರ್ಯಗೂರ್ಧ್ವಮಧಶ್ಶಾಯೀ ರಶ್ಮಯಸ್ತಸ್ಯ ಸಂತತಾ ।
ಸಂತಾಪಯತಿ ಸ್ವಂ ದೇಹಮಾಪಾದತಲಮಸ್ತಕಃ ।
ತಸ್ಯ ಮಧ್ಯೇ ವಹ್ನಿಶಿಖಾ ಅಣೀಯೋರ್ಧ್ವಾ ವ್ಯವಸ್ಥಿತಾ ।
ನೀಲತೋಯದಮಧ್ಯಸ್ಥಾದ್ವಿ-ದ್ಯುಲ್ಲೇಖೇವ ಭಾಸ್ವರಾ ।
ನೀವಾರಶೂಕವತ್ತನ್ವೀ ಪೀತಾ ಭಾಸ್ವತ್ಯಣೂಪಮಾ ।
ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।
ಸಬ್ರಹ್ಮ ಸಶಿವಃ ಸಹರಿಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್ ।
ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ ।
ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ ॥

**॥ ಇತಿ ನಾರಾಯಣಸೂಕ್ತಂ ಸಮಾಪ್ತಮ್ ॥**

## ಶ್ರೀವಿಷ್ಣುಸೂಕ್ತ

"ಅತೋ ದೇವಾ ಅವಂತು" - "ಮೂರು ಪಾದಗಳ ನೆಪದಿಂದ ಅಖಂಡ ಬ್ರಹ್ಮಾಂಡದಲ್ಲಿ ತನ್ನ ವ್ಯಾಪ್ತಿಯನ್ನು ಭಗವಂತನಾದ ವಿಷ್ಣುವು ತೋರಿದ್ದಾನೆ. ಅವನು ಇಂದ್ರನಿಗೆ ಅನುಗ್ರಾಹಕನಾಗಿದ್ದಾನೆ. ಅಂತಹ ಪರದೇವತೆಯನ್ನು ಜ್ಞಾನಿಗಳು ಎಲ್ಲಾ ಕಾಲದಲ್ಲಿಯೂ ಕೂಡ ನೋಡಬಲ್ಲರು. "ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ" ಆ ಭಗವಂತನ ಸಾಕ್ಷಾತ್ಕಾರಕ್ಕೆ ಕಾರಣವಾಗುವ ಮಹಿಮೆಯನ್ನು ಈ ಸೂಕ್ತದಲ್ಲಿ ಹೇಳಲಾಗಿದೆ."

"ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ" ಎಂಬುದಾಗಿ ವಿಷ್ಣುವಿನ ಪಾರಮ್ಯವನ್ನು ಕೊಂಡಾಡುತ್ತಿದೆ. "ಚತುರ್ಮುಖಬ್ರಹ್ಮನು ಬ್ರಹ್ಮಾಂಡದ ಒಳಗಿರುವ ಪರಮಾಣುವನ್ನು ಲೆಕ್ಕ ಮಾಡುವವನಾದರೂ ವಿಷ್ಣುವಿನ ಉಗುರಿನಲ್ಲಿರುವ ಗುಣಗಳನ್ನು ಲೆಕ್ಕ ಮಾಡಲು ಅಸಮರ್ಥನಾಗಿದ್ದಾನೆಂಬುದಾಗಿ ಈ ಮಂತ್ರವು ನಮಗೆ ತಿಳಿಸಿಕೊಡುತ್ತಿದೆ." ಉರುಕ್ರಮನಾದ ವಿಶ್ವವ್ಯಾಪಿಯಾದ ಆ ಪರಮಾತ್ಮನ ಮಹಿಮೆಯನ್ನು ಪ್ರಾಣದೇವರು (ಶ್ರೀಮದಾಚಾರ್ಯರು) ಚೆನ್ನಾಗಿ ತಿಳಿದಿದ್ದಾರೆ. ಅವರಿಗೆ ಅವನು ಅತ್ಯಂತ ಪ್ರಿಯನಾದವನು ಎಂದು ಈ ಸೂಕ್ತವು ಪ್ರತಿಪಾದಿಸುತ್ತಿದೆ.

ಎಲ್ಲಾ ವಸ್ತುಗಳಲ್ಲಿಯೂ ಆಯಾ ರೂಪದಿಂದ ನಾಮಗಳಿಂದ ನಿರ್ವಿಕಾರನಾಗಿ ಭಗವಂತನು ಅಸ್ತಿತ್ವವನ್ನು ಪಡೆದಿದ್ದಾನೆ ಎಂಬುದಾಗಿ ಈ ಸೂಕ್ತವು ತಿಳಿಸುತ್ತಿದೆ. "ಪರೋ ಮಾತ್ರಯಾ ತನ್ವಾ ವೃಧಾನಾ ನ ತೇ ಮಹಿತ್ವಮನ್ವಶ್ನುವಂತಿ" ಆ ಪರಮಾತ್ಮನು ವಿಶ್ವವ್ಯಾಪಿಯಾಗಿದ್ದಾನೆ. ಅವನ ಹಿರಿಮೆ ಗರಿಮೆಗಳಿಗೆ ಮಿತಿ ಇಲ್ಲ. ಅವನ ದಿವ್ಯ ಮಂಗಳ ರೂಪವೇ ಎಲ್ಲೆಡೆ ಇದೆ. ಅವನ

ಮಹಿಮೆಯನ್ನು ಈಗಿರುವ ಬ್ರಹ್ಮರುದ್ರರೇ ಪೂರ್ಣವಾಗಿ ತಿಳಿದಿಲ್ಲ. ಮುಂದೆ ಹುಟ್ಟುವವರಾಗಲೀ, ಹಿಂದಿನವರಾಗಲೀ ತಿಳಿದಿಲ್ಲ ಎಂಬುದಾಗಿ ಈ ಮಂತ್ರವು ವಿಷ್ಣುವಿನ ಅಗಣಿತ ಮಹಿಮೆಯನ್ನು ವರ್ಣಿಸುತ್ತಿದೆ.

ಈ ಸೂಕ್ತವನ್ನು ಪ್ರತಿನಿತ್ಯ ದೇವಪೂಜೆಯ ಸಂದರ್ಭದಲ್ಲಿ ಅಭಿಷೇಕ ಮಾಡುವಾಗ ಪಠಿಸುವ ಪದ್ಧತಿ ಇದೆ.

## ಶ್ರೀವಿಷ್ಣುಸೂಕ್ತಮ್

### ಋಗ್ವೇದಸಂಹಿತಾ, ಅಭಿಷೇಕಸೂಕ್ತಾನಿ - 2

ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ । ಪೃಥಿವ್ಯಾಃ ಸಪ್ತಧಾಮಭಿಃ ॥ ೧ ॥

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಮ್ । ಸಮೂಳ್ಹಮಸ್ಯ ಪಾಂಸುರೇ ॥ ೨ ॥

ತ್ರೀಣಿ ಪದಾ ವಿ ಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ । ಅತೋ ಧರ್ಮಾಣಿ ಧಾರಯನ್ ॥ ೩ ॥

ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ । ಇಂದ್ರಸ್ಯ ಯುಜ್ಯಃ ಸಖಾ ॥ ೪ ॥

ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಮ್ ॥ ೫ ॥

ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ । ವಿಷ್ಣೋರ್ಯತ್ಪರಮಂ ಪದಮ್ ॥ ೬ ॥

## ಪುರುಷಸೂಕ್ತ

ಶ್ರೀಮದಾಚಾರ್ಯರು "ಯಥಾ ಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧೀಯತೇ" ಎಂಬುದಾಗಿ ಸಮಗ್ರ ಪುರುಷಸೂಕ್ತವು ವಿಷ್ಣುವಿನ ಮಹಿಮೆಯನ್ನು ಕೊಂಡಾಡುವುದೆಂದು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. "ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್" ಎಂಬುದಾಗಿ ಆರಂಭವಾಗುವ ಸೂಕ್ತವು ಭಗವಂತನು ಅನಂತಶಿರಸ್ಸುಳ್ಳವನು, ಅನಂತ ಕಣ್ಣುಗಳುಳ್ಳವನು, ಅನಂತ ಕೈಗಳುಳ್ಳವನು, ಅನಂತ ಪಾದಗಳುಳ್ಳವನು, ಇಡೀ ಭೂಮಂಡಲವನ್ನು ಹದಿನಾಲ್ಕು ಲೋಕಗಳನ್ನು ವ್ಯಾಪಿಸಿ ನಿಂತವನೆಂದು ಈ ಪುರುಷಸೂಕ್ತ ಅವನ ಮಹಿಮೆಯನ್ನು ವರ್ಣಿಸುತ್ತಿದೆ.

"ಯದ್‌ಭೂತಂ ಯಚ್ಚ ಭವ್ಯಂ ಉತಾಮೃತತ್ವಸ್ಯೇಶಾನಃ" ಈ ಎಲ್ಲ ವಿಶ್ವವು ಹಿಂದೆ ಹುಟ್ಟಿದ, ಈಗಿರುವ, ಮುಂದೆ ಹುಟ್ಟಲಿರುವ ಅನಾದ್ಯನಂತಕಾಲದ ವಿಶ್ವವು ಅವನ ನಿಯಂತ್ರಣಕ್ಕೆ ಒಳಪಟ್ಟಿದೆ. ಈ ಹಿನ್ನೆಲೆಯಲ್ಲಿ "ಪುರುಷ ಏವ" ಅವನೇ ವಿಶ್ವ ಎಂಬುದಾಗಿ ವೇದಮಂತ್ರಗಳು ವರ್ಣಿಸುತ್ತಿವೆ. ಆ ಭಗವಂತನೇ ಮುಕ್ತಿಪ್ರದನಾಗಿದ್ದಾನೆ. ಸಮಗ್ರ ಚರಾಚರಾತ್ಮಕ ಪ್ರಪಂಚವು ಭಗವಂತನ ಆವಾಸಭೂಮಿಯಾಗಿದೆ. ಇಂತಹ ಪರಮಾತ್ಮನಿಂದಲೇ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳು ಅಭಿವೃದ್ಧಿಗೊಂಡಿರುತ್ತವೆ. ಅವನಿಂದಲೇ ನಾನಾ ಬಗೆಯಾದ ಪಶುಪಕ್ಷಿಗಳು ಉತ್ಪತ್ತಿಯಾಗಿವೆ. ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರವೆಂಬ ನಾಲ್ಕು ವರ್ಗಗಳು ಭಗವಂತನ ಸೇವೆಗಾಗಿ ಅವನ ಶರೀರದಿಂದ ಉತ್ಪತ್ತಿಗೊಂಡಿವೆ. ಮುಖದಿಂದ ಇಂದ್ರಾದಿ ದೇವತೆಗಳು ಉತ್ಪತ್ತಿಯಾಗಿದ್ದಾರೆ. ಪ್ರಾಣದಿಂದ ಮುಖ್ಯಪ್ರಾಣನು, ನಾಭಿಯಿಂದ ಗಣಪತಿಯು ಜನ್ಮವನ್ನು ತಾಳಿದ್ದಾರೆ. ಶಿರೋಭಾಗದಿಂದ ದ್ಯುಲೋಕಾಭಿಮಾನಿ ದೇವತೆಗಳು ಜನ್ಮತಾಳಿದ್ದಾರೆ. ಹೀಗೆ ಸಮಗ್ರ ಚರಾಚರಾತ್ಮಕ ಪ್ರಪಂಚವು ಪುರುಷನಾಮಕ ಭಗವಂತನಿಂದ ಉತ್ಪತ್ತಿಯನ್ನು ಪಡೆದಿದೆ. ಪುರುಷರೂಪಿಯಾದ ಭಗವಂತನ ಮಹಿಮೆಯನ್ನು ಈ ಪುರುಷಸೂಕ್ತವು ನಿರೂಪಿಸುತ್ತಿದೆ. "ತಮೇವಂ ವಿದ್ವಾನ್ ಅಮೃತ ಇಹ ಭವತಿ. ನಾನ್ಯಃ ಪಂಥಾ ಅಯನಾಯ ವಿದ್ಯತೇ"

ಎಂಬುದಾಗಿ ಆ ಭಗವಂತನನ್ನು ಸಾಕ್ಷಾತ್ಕರಿಸಿದಾಗ ಮಾತ್ರವೇ ಸಂಸಾರದಿಂದ ಬಿಡುಗಡೆ ಉಂಟಾಗಬಲ್ಲದು. ಇದನ್ನು ಹೊರತುಪಡಿಸಿ ಇನ್ನೊಂದು ಉಪಾಯವಿಲ್ಲವೆಂದು ಪರಮಾತ್ಮನ ಧ್ಯಾನವನ್ನು ಎಲ್ಲರೂ ಮಾಡಬೇಕೆಂದು ಉಪನಿಷತ್ತು ಸಂದೇಶಿಸುತ್ತಿದೆ. ಇದಲ್ಲದೇ ಪುರುಷಶಬ್ದವು ಚತುರ್ಮುಖಬ್ರಹ್ಮನನ್ನಾಗಲೀ, ರುದ್ರನನ್ನಾಗಲೀ, ಇನ್ನೊಬ್ಬ ದೇವತೆಯನ್ನಾಗಲೀ ಅಥವಾ ಜೀವನನ್ನಾಗಲೀ ಇಲ್ಲಿ ವರ್ಣಿಸುತ್ತಿಲ್ಲ ಎಂಬುದನ್ನು ಈ ವೇದವು ತುಂಬ ಸ್ಫುಟವಾದ ಭಾಷೆಯಲ್ಲಿ ಉಲ್ಲೇಖಿಸಿದೆ. "ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ ಅಹೋ ರಾತ್ರೇ ಪಾರ್ಶ್ವೇ" ಎಂಬುದಾಗಿ ಶ್ರೀಪತಿತ್ವ, ಲಕ್ಷ್ಮೀಪತಿತ್ವರೂಪವಾದ ಅಸಾಧಾರಣಧರ್ಮವು ಇಲ್ಲಿ ಶ್ರುತವಾಗಿದೆ. ಇದು ಕೇವಲ ವಿಷ್ಣುವಿನಲ್ಲಿರುವ ಮಹಿಮೆಯಾಗಿದೆ. ಈ ದೃಷ್ಟಿಯಿಂದ ಪುರುಷಶಬ್ದವು ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ಭಗವಂತನನ್ನೇ ತಿಳಿಸುತ್ತಿದೆ. ಈ ಪುರುಷಸೂಕ್ತಮಂತ್ರದಿಂದ ನಿತ್ಯ ಅಭಿಷೇಕ ನಡೆಸಬೇಕು. ಅವಸರವಿರುವಾಗ ಕನಿಷ್ಠ ಪುರುಷಸೂಕ್ತವೊಂದರಿಂದಲಾದರೂ ಪೂಜೆಯನ್ನು ನಡೆಸಬೇಕೆಂದು ಸಂಕ್ಷಿಪ್ತಪೂಜಾಪದ್ಧತಿಯನ್ನು ವಸುಧೇಂದ್ರತೀರ್ಥರೇ ಮೊದಲಾದ ಜ್ಞಾನಿಗಳು ನಿರೂಪಿಸಿದ್ದಾರೆ.

## ಪುರುಷಸೂಕ್ತಮ್

### ತೈತ್ತಿರೀಯಾರಣ್ಯಕಮ್, ಪ್ರಶ್ನೆ - 3

ಓಂ ತಚ್ಛಂ ಯೋರಾವೃಣೀಮಹೇ । ಗಾತುಂ ಯಜ್ಞಾಯ । ಗಾತುಂ ಯಜ್ಞಪತಯೇ । ದೈವೀ ಸ್ವಸ್ತಿರಸ್ತು ನಃ । ಸ್ವಸ್ತಿರ್ಮಾನುಷೇಭ್ಯಃ । ಊರ್ಧ್ವಂ ಜಿಗಾತು ಭೇಷಜಮ್ । ಶಂ ನೋ ಅಸ್ತು ದ್ವಿಪದೇ । ಶಂ ಚತುಷ್ಪದೇ । ಓಂ ಶಾಂತಿಃ ಶಾಂತಿಃ ಶಾಂತಿಃ ॥

ಓಂ ಸಹಸ್ರಶೀರ್ಷಾ ಪುರುಷಃ । ಸಹಸ್ರಾಕ್ಷಸ್ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾ । ಅತ್ಯತಿಷ್ಠದ್ದಶಾಂಗುಲಮ್। ಪುರುಷ ಏವೇದಗ್ಂ ಸರ್ವಮ್ । ಯದ್ಭೂತಂ ಯಚ್ಚ ಭವ್ಯಮ್ । ಉತಾಮೃತತ್ವಸ್ಯೇಶಾನಃ । ಯದನ್ನೇನಾತಿರೋಹತಿ। ಏತಾವಾನಸ್ಯ ಮಹಿಮಾ । ಅತೋ ಜ್ಯಾಯಾಗ್‌ಶ್ಚ ಪೂರುಷ ॥ ೧ ॥

ಪಾದೋಽಸ್ಯ ವಿಶ್ವಾ ಭೂತಾನಿ । ತ್ರಿಪಾದಸ್ಯಾಮೃತಂ ದಿವಿ । ತ್ರಿಪಾದೂರ್ಧ್ವ ಉದೈತ್‌ಪುರುಷಃ । ಪಾದೋಽಸ್ಯೇಹಾಭವಾತ್ಪುನಃ । ತತೋ ವಿಷ್ವಙ್‌ವ್ಯಕ್ರಾಮತ್ । ಸಾಶನಾನಶನೇ ಅಭಿ । ತಸ್ಮಾದ್ವಿರಾಡಜಾಯತ । ವಿರಾಜೋ ಅಧಿ ಪೂರುಷಃ । ಸ ಜಾತೋ ಅತ್ಯರಿಚ್ಯತ । ಪಶ್ಚಾದ್ಭೂಮಿಮಥೋ ಪುರಃ ॥ ೨ ॥

ಯತ್‌ಪುರುಷೇಣ ಹವಿಷಾ । ದೇವಾ ಯಜ್ಞಮತನ್ವತ । ವಸಂತೋ ಅಸ್ಯಾಸೀದಾಜ್ಯಮ್ । ಗ್ರೀಷ್ಮ ಇಧ್ಮಶ್ಶರದ್ಧವಿಃ। ಸಪ್ತಾಸ್ಯಾಸನ್ ಪರಿಧಯಃ । ತ್ರಿಸ್ಸಪ್ತ ಸಮಿಧಃ ಕೃತಾಃ । ದೇವಾ ಯದ್ಯಜ್ಞಂ ತನ್ವಾನಾಃ । ಅಬಧ್ನನ್ ಪುರುಷಂ ಪಶುಮ್। ತಂ ಯಜ್ಞಂ ಬರ್‌ಹಿಷಿ ಪ್ರೌಕ್ಷನ್ । ಪುರುಷಂ ಜಾತಮಗ್ರತಃ ॥ ೩ ॥

ತೇನ ದೇವಾ ಅಯಜಂತ । ಸಾಧ್ಯಾ ಋಷಯಶ್ಚ ಯೇ। ತಸ್ಮಾದ್ಯಜ್ಞಾಥ್ಸರ್ವಹುತಃ । ಸಂಭೃತಂ ಪೃಷದಾಜ್ಯಮ್। ಪಶೂಗ್‌ಸ್ತಾಗ್‌ಶ್ಚಕ್ರೇ ವಾಯವ್ಯಾನ್ । ಆರಣ್ಯಾನ್ ಗ್ರಾಮ್ಯಾಶ್ಚ ಯೇ । ತಸ್ಮಾದ್ಯಜ್ಞಾಥ್ಸರ್ವಹುತಃ । ಋಚಸ್ಸಾಮಾನಿ ಜಜ್ಞಿರೇ । ಛಂದಾಗ್‌ಂಸಿ ಜಜ್ಞಿರೇ ತಸ್ಮಾತ್ । ಯಜುಸ್ತಸ್ಮಾದಜಾಯತ ॥ ೪ ॥

ತಸ್ಮಾದಶ್ವಾ ಅಜಾಯಂತ । ಯೇ ಕೇ ಚೋಭಯಾದತಃ । ಗಾವೋ ಹ ಜಜ್ಞಿರೇ ತಸ್ಮಾತ್ । ತಸ್ಮಾಜ್ಜಾತಾ ಅಜಾವಯಃ । ಯತ್ಪುರುಷಂ ವ್ಯದಧುಃ । ಕತಿಧಾ ವ್ಯಕಲ್ಪಯನ್ । ಮುಖಂ ಕಿಮಸ್ಯ ಕೌ ಬಾಹೂ । ಕಾವೂರೂ ಪಾದಾವುಚ್ಯೇತೇ। ಬ್ರಾಹ್ಮಣೋಽಸ್ಯ ಮುಖಮಾಸೀತ್ । ಬಾಹೂ ರಾಜನ್ಯಃ ಕೃತಃ ॥ ೫ ॥

ಊರೂ ತದಸ್ಯ ಯದ್ವೈಶ್ಯಃ । ಪದ್ಭ್ಯಾಗ್‌ಂ ಶೂದ್ರೋ ಅಜಾಯತ । ಚಂದ್ರಮಾ ಮನಸೋ ಜಾತಃ । ಚಕ್ಷೋಸ್ಸೂರ್ಯೋ ಅಜಾಯತ । ಮುಖಾದಿಂದ್ರಶ್ಚಾಗ್ನಿಶ್ಚ । ಪ್ರಾಣಾದ್ವಾಯುರಜಾಯತ। ನಾಭ್ಯಾ ಆಸೀದಂತರಿಕ್ಷಮ್ । ಶೀರ್ಷ್ಣೋ ದ್ಯೌಸ್ಸಮವರ್ತತ। ಪದ್ಭ್ಯಾಂ ಭೂಮಿರ್ದಿಶಶ್ಶ್ರೋತ್ರಾತ್ । ತಥಾ ಲೋಕಾಗ್‌ಂ ಅಕಲ್ಪಯನ್ ॥ ೬ ॥

ವೇದಾಹಮೇತಂ ಪುರುಷಂ ಮಹಾಂತಮ್। ಆದಿತ್ಯವರ್ಣಂ ತಮಸಸ್ತು ಪಾರೇ । ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ । ನಾಮಾನಿ ಕೃತ್ವಾಽಭಿವದನ್, ಯದಾಸ್ತೇ। ಧಾತಾ ಪುರಸ್ತಾದ್ಯಮುದಾಜಹಾರ । ಶಕ್ರಃ ಪ್ರವಿದ್ವಾನ್ ಪ್ರದಿಶಶ್ಚತಸ್ರಃ। ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ಅಯನಾಯ ವಿದ್ಯತೇ । ಯಜ್ಞೇನ ಯಜ್ಞಮಯಜಂತ ದೇವಾಃ। ತಾನಿ ಧರ್ಮಾಣಿ ಪ್ರಥಮಾನ್ಯಾಸನ್। ತೇ ಹ ನಾಕಂ ಮಹಿಮಾನಸ್ಸಚಂತೇ । ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ॥ ೭ ॥

ಅದ್ಭ್ಯಸ್ಸಂಭೂತಃ ಪೃಥಿವ್ಯೈ ರಸಾಚ್ಚ । ವಿಶ್ವಕರ್ಮಣಸ್ಸಮವರ್ತತಾಧಿ । ತಸ್ಯ ತ್ವಷ್ಟಾ ವಿದಧದ್ರೂಪಮೇತಿ। ತತ್ಪುರುಷಸ್ಯ ವಿಶ್ವಮಾಜಾನಮಗ್ರೇ । ವೇದಾಹಮೇತಂ ಪುರುಷಂ ಮಹಾಂತಮ್ । ಆದಿತ್ಯವರ್ಣಂ ತಮಸಃ ಪರಸ್ತಾತ್। ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ವಿದ್ಯತೇಽಯನಾಯ । ಪ್ರಜಾಪತಿಶ್ಚರತಿ ಗರ್ಭೇ ಅಂತಃ । ಅಜಾಯಮಾನೋ ಬಹುಧಾ ವಿಜಾಯತೇ ॥ ೮ ॥

ತಸ್ಯ ಧೀರಾಃ ಪರಿಜಾನಂತಿ ಯೋನಿಮ್ । ಮರೀಚೀನಾಂ ಪದಮಿಚ್ಛಂತಿ ವೇಧಸಃ । ಯೋ ದೇವೇಭ್ಯ ಆತಪತಿ। ಯೋ ದೇವಾನಾಂ ಪುರೋಹಿತಃ । ಪೂರ್ವೋ ಯೋ ದೇವೇಭ್ಯೋ ಜಾತಃ । ನಮೋ ರುಚಾಯ ಬ್ರಾಹ್ಮಯೇ । ರುಚಂ ಬ್ರಾಹ್ಮಂ ಜನಯಂತಃ । ದೇವಾ ಅಗ್ರೇ ತದಬ್ರುವನ್ । ಯಸ್ತ್ವೈವಂ ಬ್ರಾಹ್ಮಣೋ ವಿದ್ಯಾತ್ । ತಸ್ಯ ದೇವಾ ಅಸನ್ವಶೇ ॥ ೯ ॥

ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ । ಅಹೋರಾತ್ರೇ ಪಾರ್ಶ್ವೇ । ನಕ್ಷತ್ರಾಣಿ ರೂಪಮ್। ಅಶ್ವಿನೌ ವ್ಯಾತ್ತಮ್ । ಇಷ್ಟಂ ಮನಿಷಾಣ । ಅಮುಂ ಮನಿಷಾಣ । ಸರ್ವಂ ಮನಿಷಾಣ ॥ ೧೦ ॥

ಓಂ ತಚ್ಛಂ ಯೋರಾವೃಣೀಮಹೇ । ..... ಓಂ ಶಾಂತಿಃ ಶಾಂತಿಃ ಶಾಂತಿಃ ॥

## ಋಗ್ವೇದೀಯ ಶ್ರೀಸೂಕ್ತ

"ಹಿರಣ್ಯವರ್ಣಾಮ್" ಎಂಬ ಹದಿನೈದು ಋಚೆಗಳ ಸೂಕ್ತಕ್ಕೆ ಇಂದ್ರ, ಅನಂತರ ಅನೇಕ ಋಷಿಗಳು ಈ ಮಂತ್ರದರ್ಶನವನ್ನು ಪಡೆದರು. ಈ ಜಗತ್ತಿನ ಮಾತಾಪಿತೃಗಳಾದ ಲಕ್ಷ್ಮೀನಾರಾಯಣರು ಈ ಸೂಕ್ತದ ಪ್ರತಿಪಾದ್ಯದೇವತೆಗಳು. ಮೊದಲಿನ ಮೂರು ಋಚೆಗಳ ಛಂದಸ್ಸು ಅನುಷ್ಟುಪ್, ನಾಲ್ಕನೆಯದು ಬೃಹತಿ, ಐದು ಮತ್ತು ಆರನೆಯದು ತ್ರಿಷ್ಟುಪ್, ಪುನಃ ಏಳರಿಂದ ಹದಿನಾಲ್ಕರ ತನಕ ಎಂಟು ಮಂತ್ರಗಳು ಅನುಷ್ಟುಪ್, ಕೊನೆಯದು ಪ್ರಸ್ತಾರಪಂಕ್ತಿ. ಜಪಕ್ಕೆ ಈ ಸೂಕ್ತ ವಿಹಿತವಾಗಿದೆ.

"ವೇದಪ್ರತಿಪಾದ್ಯನಾದ ಶ್ರೀಮನ್ನಾರಾಯಣನೇ ನಿನ್ನ ಅರ್ಧಾಂಗಿಯಾದ ಲಕ್ಷ್ಮೀದೇವಿಯ ಕರುಣಾಪೂರ್ಣವಾದ ಅನುಗ್ರಹದೃಷ್ಟಿ ನನ್ನೆಡೆಗೆ ಹರಿಯುವಂತೆ ಮಾಡು." ಈ ಲಕ್ಷ್ಮೀದೇವಿಯು ಬಂಗಾರದ ಬಣ್ಣವುಳ್ಳವಳು. ಚಂದ್ರಮಂಡಲದ ಒಳಗೆ ಇರುವವಳು. ಆಹ್ಲಾದಕರವಾದ ಕಾಂತಿಯುಳ್ಳವಳು. ಬಂಗಾರದ ಅಭಿಮಾನದೇವತೆಯು. ಅವಳು ನಮ್ಮ ಮನ ಮತ್ತು ಮನೆಯಲ್ಲಿ ಸನ್ನಿಹಿತಳಾಗಲಿ ಎಂದು ಪ್ರಾರ್ಥಿಸಲಾಗಿದೆ.

ಲಕ್ಷ್ಮೀದೇವಿಯ ಉಪಸ್ಥಿತಿ ಆದೊಡನೆ ಅಮಂಗಲ, ಅನೈತಿಕತೆಗೆ ಕಾರಣವಾಗುವ ಅಲಕ್ಷ್ಮಿಯು ಮನೆಯಿಂದ ಸರಳವಾಗಿ ಹೊರಟುಹೋಗುತ್ತಾಳೆ. ಅದಕ್ಕೋಸ್ಕರವೇ "ಕ್ಷುತ್‌ಪಿಪಾಸಾಮಲಾಂ ಜ್ಯೇಷ್ಠಾಮ್ ಅಲಕ್ಷ್ಮೀಂ ನಾಶಯಾಮ್ಯಹಮ್" ಎಂಬುದಾಗಿ ಹಸಿವು, ನೀರಡಿಕೆ ಇವೇ ಮೊದಲಾದ ಅಮಂಗಲ ಸ್ವರೂಪಳಾದ ಜ್ಯೇಷ್ಠಲಕ್ಷ್ಮಿ ಎಂದು ಕರೆಯುವ ಈ ಅಲಕ್ಷ್ಮಿಯನ್ನು ನನ್ನ ಮನೆಯಿಂದ ಹೊರಹಾಕು ಎಂದು ಪ್ರಾರ್ಥಿಸಲಾಗಿದೆ.

ಲಕ್ಷ್ಮೀದೇವಿಯು ನಮ್ಮ ಮನೆಯಲ್ಲಿ ಅನುಗ್ರಹವನ್ನು ಮಾಡಿ "ಪುತ್ರಪೌತ್ರಧನಂ ಧಾನ್ಯಂ ಹಸ್ತ್ಯಶ್ವಾದಿಗವೇರಥಮ್" ಮಕ್ಕಳು, ಮೊಮ್ಮಕ್ಕಳು, ಧನ, ಧಾನ್ಯ, ಆನೆ, ಕುದುರೆ, ರಥ ಮೊದಲಾದ ನಾನಾವಿಧ ಸಂಪತ್ತನ್ನು, ಕೊಟ್ಟು ನನ್ನನ್ನು ದೀರ್ಘಾಯುಷ್ಯನನ್ನಾಗಿ ಮಾಡಲಿ ಎಂಬುದಾಗಿ ಪ್ರಾರ್ಥನೆಯನ್ನು ಇಲ್ಲಿ ಸಲ್ಲಿಸಲಾಗಿದೆ. ಸಾಮಾನ್ಯವಾಗಿ ಮಾನವರಿಗೆ ಅವರ ಉನ್ನತಿಯನ್ನು ತಡೆಯೊಡ್ಡುವ ಕಾಮಕ್ರೋಧಾದಿಲೋಭಗಳು ಹಾನಿಕಾರಕವಾಗಿದೆ. ಅಂತಹ ಅವಗುಣಗಳಿಂದ ನನ್ನನ್ನು ಮುಕ್ತನನ್ನಾಗಿ ಮಾಡಲಿ ಎಂಬುದಾಗಿಯೂ ಇಲ್ಲಿ ಲಕ್ಷ್ಮೀದೇವಿಯನ್ನು ಪ್ರಾರ್ಥಿಸಲಾಗಿದೆ.

"ನ ಕ್ರೋಧೋ ನ ಚ ಮಾತ್ಸರ್ಯಂ ನ ಲೋಭೋ ನಾಶುಭಾ ಮತಿಃ" ಶ್ರೀದೇವಿಯ ಮಂಗಳಸೂಕ್ತವನ್ನು ಜಪಿಸುವ ವ್ಯಕ್ತಿಗೆ ಅಮಂಗಳಗುಣಗಳು ಎಂದಿಗೂ ಬರಲಾರವು. ಇಂತಹ ವಿಷ್ಣುಪತ್ನಿಯಾಗಿರತಕ್ಕಂತಹ ಶ್ರೀದೇವಿಯು ಭಕ್ತರನ್ನು ವಾತ್ಸಲ್ಯದಿಂದ ಅನುಗ್ರಹಿಸುತ್ತಾಳೆ. ಅಂತಹ ಲಕ್ಷ್ಮೀದೇವಿಯು ನಮಗೆಲ್ಲ ಮಂಗಳವನ್ನು ಕರುಣಿಸಲಿ ಎಂಬುದಾಗಿ ಈ ಸೂಕ್ತದಲ್ಲಿ ಪ್ರಾರ್ಥನೆ ಮಾಡಲಾಗಿದೆ. ಇಂತಹ ಶ್ರೀಸೂಕ್ತದ ನಿತ್ಯಪಠನವು ಸಕಲವಿಧಸಂಪತ್ತಿಗೆ ಕಾರಣವಾಗಿದೆ.

## ಶ್ರೀಗುರುಭ್ಯೋ ನಮಃ

ಹಿರಣ್ಯವರ್ಣಾಮಿತಿ ಪಂಚದಶರ್ಚಸ್ಯ ಸೂಕ್ತಸ್ಯ ಆನಂದಕರ್ದಮಚಿಕ್ಲೀತೇಂದಿರಾಸುತಾ ಋಷಯಃ | ಆದ್ಯಾಸ್ತಿಸ್ರೋಽನುಷ್ಟುಭಃ | ಚತುರ್ಥೀ ಬೃಹತೀ | ಪಂಚಮೀಷಷ್ಠ್ಯೌ ತ್ರಿಷ್ಟುಭೌ | ತತೋಽಷ್ಟಾವನುಷ್ಟುಭಃ | ಅಂತ್ಯಾ ಪ್ರಸ್ತಾರಪಂಕ್ತಿಃ | ಶ್ರೀರಗ್ನಿಶ್ಚೇತ್ಯುಭೇ ದೇವತೇ | ಲಕ್ಷ್ಮೀಪ್ರಸಾದಸಿದ್ಧ್ಯರ್ಥೇ ಜಪೇ ವಿನಿಯೋಗಃ ||

ಹರಿಃ ಓಮ್ ॥ ಹಿರಣ್ಯರೂಪಃ ಸಹಿರಣ್ಯಸಂದೃಗಪಾಂನಪಾತ್ಸೇದುಹಿರಣ್ಯವರ್ಣಃ ।
ಹಿರಣ್ಯಯಾತ್ಪರಿಯೋನೇರ್ನಿಷದ್ಯಾ ಹಿರಣ್ಯದಾದದತ್ಯನ್ನಮಸ್ಮೈ ॥
ಓಂ ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಮ್ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥ ೧ ॥
ತಾಂ ಮ ಆವಹ ಜಾತವೇದೋ ಲಕ್ಷ್ಮೀಮನಪಗಾಮಿನೀಮ್ ।
ಯಸ್ಯಾಂ ಹಿರಣ್ಯಂ ವಿಂದೇಯಂ ಗಾಮಶ್ವಂ ಪುರುಷಾನಹಮ್ ॥ ೨ ॥
ಅಶ್ವಪೂರ್ವಾಂ ರಥಮಧ್ಯಾಂ ಹಸ್ತಿನಾದಪ್ರಬೋಧಿನೀಮ್ ।
ಶ್ರಿಯಂ ದೇವೀಮುಪಹ್ವಯೇ ಶ್ರೀರ್ಮಾ ದೇವೀರ್ಜುಷತಾಮ್ ॥ ೩ ॥
ಕಾಂ ಸೋಸ್ಮಿತಾಂ ಹಿರಣ್ಯಪ್ರಾಕಾರಾಮಾರ್ದ್ರಾಂ ಜ್ವಲಂತೀಂ ತೃಪ್ತಾಂ ತರ್ಪಯಂತೀಮ್ ।
ಪದ್ಮೇ ಸ್ಥಿತಾಂ ಪದ್ಮವರ್ಣಾಂ ತಾಮಿಹೋಪಹ್ವಯೇ ಶ್ರಿಯಮ್ ॥ ೪ ॥
ಚಂದ್ರಾಂ ಪ್ರಭಾಸಾಂ ಯಶಸಾ ಜ್ವಲಂತೀಂ ಶ್ರಿಯಂ ಲೋಕೇ ದೇವಜುಷ್ಟಾಮುದಾರಾಮ್ ।
ತಾಂ ಪದ್ಮಿನೀಮೀಂ ಶರಣಮಹಂ ಪ್ರಪದ್ಯೇ ಅಲಕ್ಷ್ಮೀರ್ಮೇ ನಶ್ಯತಾಂ ತ್ವಾಂ ವೃಣೇ ॥ ೫ ॥
ಆದಿತ್ಯವರ್ಣೇ ತಪಸೋಽಧಿಜಾತೋ ವನಸ್ಪತಿಸ್ತವ ವೃಕ್ಷೋಽಥ ಬಿಲ್ವಃ ।
ತಸ್ಯ ಫಲಾನಿ ತಪಸಾ ನುದಂತು ಮಾ ಯಾಂತರಾ ಯಾಶ್ಚ ಬಾಹ್ಯಾ ಅಲಕ್ಷ್ಮೀಃ ॥ ೬ ॥
ಉಪೈತು ಮಾಂ ದೇವಸಖಃ ಕೀರ್ತಿಶ್ಚ ಮಣಿನಾ ಸಹ ।
ಪ್ರಾದುರ್ಭೂತೋಽಸ್ಮಿ ರಾಷ್ಟ್ರೇಽಸ್ಮಿನ್ ಕೀರ್ತಿಮೃದ್ಧಿಂ ದದಾತು ಮೇ ॥ ೭ ॥
ಕ್ಷುತ್ಪಿಪಾಸಾಮಲಾಂ ಜ್ಯೇಷ್ಠಾಮಲಕ್ಷ್ಮೀಂ ನಾಶಯಾಮ್ಯಹಮ್ ।
ಅಭೂತಿಮಸಮೃದ್ಧಿಂ ಚ ಸರ್ವಾಂ ನಿರ್ಣುದ ಮೇ ಗೃಹಾತ್ ॥ ೮ ॥

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ ।
ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಮ್ ॥ ೯ ॥
ಮನಸಃ ಕಾಮಮಾಕೂತಿಂ ವಾಚಃ ಸತ್ಯಮಶೀಮಹಿ ।
ಪಶೂನಾಂ ರೂಪಮನ್ನಸ್ಯ ಮಯಿ ಶ್ರೀಃ ಶ್ರಯತಾಂ ಯಶಃ ॥ ೧೦ ॥
ಕರ್ದಮೇನ ಪ್ರಜಾಭೂತಾ ಮಯಿ ಸಂಭವ ಕರ್ದಮ ।
ಶ್ರಿಯಂ ವಾಸಯ ಮೇ ಕುಲೇ ಮಾತರಂ ಪದ್ಮಮಾಲಿನೀಮ್ ॥ ೧೧ ॥
ಆಪಃ ಸೃಜಂತು ಸ್ನಿಗ್ಧಾನಿ ಚಿಕ್ಲೀತ ವಸ ಮೇ ಗೃಹೇ ।
ನಿ ಚ ದೇವೀಂ ಮಾತರಂ ಶ್ರಿಯಂ ವಾಸಯ ಮೇ ಕುಲೇ ॥ ೧೨ ॥
ಆರ್ದ್ರಾಂ ಪುಷ್ಕರಿಣೀಂ ಪುಷ್ಟಿಂ ಸುವರ್ಣಾಂ ಹೇಮಮಾಲಿನೀಮ್ ।
ಸೂರ್ಯಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥ ೧೩ ॥
ಆರ್ದ್ರಾಂ ಯಃ ಕರಿಣೀಂ ಯಷ್ಟಿಂ ಪಿಂಗಲಾಂ ಪದ್ಮಮಾಲಿನೀಮ್ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥ ೧೪ ॥
ತಾಂ ಮ ಆವಹ ಜಾತವೇದೋ ಲಕ್ಷ್ಮೀಮನಪಗಾಮಿನೀಮ್ ।
ಯಸ್ಯಾಂ ಹಿರಣ್ಯಂ ಪ್ರಭೂತಂ ಗಾವೋ ದಾಸ್ಯೋಽಶ್ವಾನ್ ವಿಂದೇಯಂ ಪುರುಷಾನಹಮ್ ॥ ಓಮ್ ॥ ೧೫ ॥

॥ ಇತಿ ಶ್ರೀಸೂಕ್ತಂ ಸಂಪೂರ್ಣಮ್ ॥

## ಭಾಗ್ಯಸೂಕ್ತ

ಸಾಧಕನು ಸೂರ್ಯ, ಅಗ್ನಿ, ಗಾಯತ್ರೀ ಮೊದಲಾದ ಪ್ರತೀಕಗಳಲ್ಲಿ ಮೂಲಕ ಭಗವಂತನ ಆರಾಧನೆಯನ್ನು ನಡೆಸುತ್ತಾನೆ. ಈ ಮೂರು ಪ್ರತೀಕಗಳಲ್ಲಿ ಬಹಳ ಪ್ರಮುಖವಾದದ್ದು ಅಗ್ನಿಯ ಮೂಲಕ ಭಗವಂತನ ಆರಾಧನೆಯನ್ನು ನಡೆಸುವಂಥದು. ಆದ್ದರಿಂದ "ಪ್ರಾತರಗ್ನಿಂ ಪ್ರಾತರಿಂದ್ರಂ ಹವಾಮಹೇ" ಎಂದು ಬೆಳಗು ಜಾವದಲ್ಲಿ ಎದ್ದು ಅಗ್ನಿ, ಇಂದ್ರ, ಮಿತ್ರ, ವರುಣ, ಅಶ್ವಿನೀದೇವತೆಗಳು, ಪೂಷಣ, ಬೃಹಸ್ಪತಿ, ಸೋಮ, ರುದ್ರ, ಮೊದಲಾದ ದೇವತೆಗಳನ್ನು ಕುರಿತು ಅವರ ಸಂಪ್ರೀತಿಗಾಗಿ ವೇದಮಂತ್ರಗಳಿಂದ ಹೋಮವನ್ನು ಮಾಡುತ್ತೇನೆಂದು ಈ ಮಂತ್ರವು ಆರಂಭಗೊಳ್ಳುತ್ತದೆ. ಅನಂತಕಲ್ಯಾಣಗುಣಪರಿಪೂರ್ಣನಾದ ದೇವತೆಗಳ ಒಳಗೆ ನಿಯಾಮಕನಾಗಿರುವ ಪರಮಾತ್ಮನನ್ನು ಯಾರು ಚೆನ್ನಾಗಿ ಉಪಾಸನೆ ಮಾಡುತ್ತಾರೋ ಅವರು ಭಗವಂತನೇ ಆಗುತ್ತಾರೆ. ಅಂದರೆ ಭಗವಂತನಂತಹ ವ್ಯಕ್ತಿತ್ವವನ್ನು ಪಡೆದುಕೊಳ್ಳುತ್ತಾರೆ ಎಂಬುದಾಗಿ ಈ ಮಂತ್ರವು ಹೇಳುತ್ತದೆ.

## ಭಾಗ್ಯಸೂಕ್ತಮ್

### ತೈತ್ತಿರೀಯ ಬ್ರಾಹ್ಮಣ, ಅಷ್ಟಕ - 2, ಪ್ರಶ್ನೆ - 8, ಅನುವಾಕ - 9

ಪ್ರಾತರಗ್ನಿಂ ಪ್ರಾತರಿಂದ್ರಗ್ಂ ಹವಾಮಹೇ ಪ್ರಾತರ್ಮಿತ್ರಾವರುಣಾ ಪ್ರಾತರಶ್ವಿನಾ ।
ಪ್ರಾತರ್ಭಗಂ ಪೂಷಣಂ ಬ್ರಹ್ಮಣಸ್ಪತಿಂ ಪ್ರಾತಸ್ಸೋಮಮುತ ರುದ್ರಗ್ಂ ಹುವೇಮ ॥ ೧ ॥
ಪ್ರಾತರ್ಜಿತಂ ಭಗಮುಗ್ರಗ್ಂ ಹುವೇಮ ವಯಂ ಪುತ್ರಮದಿತೇರ್ಯೋ ವಿಧರ್ತಾ ।
ಆಧ್ರಶ್ಚಿದ್ಯಂ ಮನ್ಯಮಾನಸ್ತುರಶ್ಚಿದ್ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹ ॥ ೨ ॥
ಭಗ ಪ್ರಣೇತರ್ಭಗ ಸತ್ಯರಾಧೋ ಭಗೇಮಾಂ ಧಿಯಮುದವದದನ್ನಃ ।
ಭಗಪ್ರಣೋ ಜನಯ ಗೋಭಿರಶ್ವೈರ್ಭಗಪ್ರನೃಭಿರ್ನೃವಂತಸ್ಸ್ಯಾಮ ॥ ೩ ॥
ಉತೇದಾನೀಂ ಭಗವಂತಸ್ಸ್ಯಾಮೋತ ಪ್ರಪಿತ್ವ ಉತ ಮಧ್ಯೇ ಅಹ್ನಾಮ್ ।
ಉತೋದಿತಾ ಮಘವನ್ಥ್ಸೂರ್ಯಸ್ಯ ವಯಂ ದೇವಾನಾಗ್ಂ ಸುಮತೌ ಸ್ಯಾಮ ॥ ೪ ॥
ಭಗ ಏವ ಭಗವಾಗ್ಂ ಅಸ್ತು ದೇವಾಸ್ತೇನ ವಯಂ ಭಗವಂತಸ್ಸ್ಯಾಮ ।
ತಂ ತ್ವಾ ಭಗ ಸರ್ವ ಇಜ್ಜೋಹವೀಮಿ ಸನೋ ಭಗ ಪುರ ಏತಾ ಭವೇಹ ॥ ೫ ॥
ಸಮಧ್ವರಾಯೋಷಸೋಽನಮಂತ ದಧಿಕ್ರಾವೇವ ಶುಚಯೇ ಪದಾಯ ।
ಅರ್ವಾಚೀನಂ ವಸುವಿದಂ ಭಗನ್ನೋ ರಥಮಿವಾಶ್ವಾ ವಾಜಿನ ಆವಹಂತು ॥ ೬ ॥
ಅಶ್ವಾವತೀರ್ಗೋಮತೀರ್ನ ಉಷಾಸೋ ವೀರವತೀಸ್ಸದಮುಚ್ಛಂತು ಭದ್ರಾಃ ।
ಘೃತಂ ದುಹಾನಾ ವಿಶ್ವತಃ ಪ್ರಪೀನಾಯೂಯಂ ಪಾತ ಸ್ವಸ್ತಿಭಿಸ್ಸದಾ ನಃ ॥ ೭ ॥
ಯೋ ಮಾಽಗ್ನೇ ಭಾಗಿನಗ್ಂ ಸಂತಮಥಾಭಾಗಂ ಚಿಕೀರ್ಷತಿ ।
ಅಭಾಗಮಗ್ನೇ ತಂ ಕುರು ಮಾಮಗ್ನೇ ಭಾಗಿನಂ ಕುರು ॥ ೮ ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

## ರಾತ್ರೀಸೂಕ್ತಮ್

ರಾತ್ರಿಸೂಕ್ತವು ಮುಖ್ಯವೃತ್ತಿಯಿಂದ ದುರ್ಗಾದೇವಿಯನ್ನು ಪರಮಮುಖ್ಯವೃತ್ತಿಯಿಂದ ನರಸಿಂಹದೇವರನ್ನು ಹೇಳುತ್ತಿದೆ. "**ಓರ್ವ ಪ್ರ ಅಮರ್ತ್ಯಾ ನಿವತೋ ದೇವ್ಯುದ್ವತಃ | ಜ್ಯೋತಿಷಾ ಬಾಧತೇ ತಮಃ**" ಈ ರಾತ್ರಿಸೂಕ್ತವು ಭಗವಂತನ ಮಹಿಮೆಯನ್ನು ಕೊಂಡಾಡುತ್ತಿದೆ. ಆ ಭಗವಂತನು ಎಲ್ಲಾ ಬ್ರಹ್ಮಾದಿ ಜೀವರನ್ನು ಬಹುಪ್ರಕಾರವಾಗಿ ಜ್ಞಾನದಿಂದ ಅನುಗ್ರಹಿಸಿರುವನು.

ಅವನೇ ಜ್ಞಾನದಿಂದ ಜೀವರ ಅಜ್ಞಾನವನ್ನು ಪರಿಹರಿಸುತ್ತಾನೆ. "**ನಿರುಸ್ವಸಾರಮಸ್ಕೃತೋಷಸಂ ದೇವ್ಯಾ ಯತಿ | ಅಪೇದುಹಾಸತೇ ತಮಃ**" ಆ ಭಗವಂತನು ತನ್ನದೇ ಆದ ಉಷಸ್ ಎಂಬ ಹೆಸರಿನ ಶುಭ್ರವರ್ಣದ ಉತ್ತಮ ಸ್ತ್ರೀರೂಪವನ್ನು ತನ್ನ ತಂಗಿಯನ್ನಾಗಿ ಮಾಡಿಕೊಂಡನು. ಸೂರ್ಯಾದಿದೇವತೆಗಳಲ್ಲಿದ್ದು ಅವನೇ ಸದಾ ಕತ್ತಲೆಯನ್ನು ಹೋಗಲಾಡಿಸುತ್ತಾನೆ. ಸಾಲಗಾರನು ಸಾಲವನ್ನು ತೀರಿಸುವಂತೆ ಭಗವಂತನು ಆ ಅಜ್ಞಾನವನ್ನು ಕಳೆಯುತ್ತಾನೆ. "**ಉಪ ತೇ ಗಾ ಇವಾಕರಂ ವೃಣೀಷ್ವ ದುಹಿತರ್ದಿವಃ. ರಾತ್ರಿಸ್ತೋಮಂ ನ ಜಿಗ್ಯುಷೇ**" ಜಯಶಾಲಿಯಾದ ರಾಜನಿಗೆ ಪ್ರಜೆಗಳು ಸ್ತೋತ್ರ ಮಾಡುವಂತೆ ಬ್ರಾಹ್ಮಣನಿಗೆ ಗೋವುಗಳನ್ನು ದಾನ ಮಾಡುವಂತೆ ನಿನಗೆ ಈ ಸ್ತೋತ್ರವನ್ನು ಅರ್ಪಿಸುತ್ತೇನೆ. ಅದನ್ನು ಸ್ವೀಕರಿಸು ಎಂಬುದಾಗಿ ಈ ರಾತ್ರಿಸೂಕ್ತದಲ್ಲಿ ಭಗವಂತನ ಮಹಿಮೆ, ಪ್ರಾರ್ಥನೆಯು ಅಡಕವಾಗಿದೆ. ಇಂತಹ ರಾತ್ರಿಸೂಕ್ತವನ್ನು ಯತಿಗಳೂ ಕೂಡ ಪಠಿಸಬೇಕು. ಅವರೂ ಪಠಿಸಬೇಕೆಂದಾಗ ಬ್ರಹ್ಮಚಾರಿ, ಗೃಹಸ್ಥರು ಪಠಿಸಬೇಕೆಂಬುದಾಗಿ ಒತ್ತಿ ಹೇಳಬೇಕಾಗಿಲ್ಲ. ಇಂತಹ ರಾತ್ರಿಸೂಕ್ತ ಪಾರಾಯಣದಿಂದ ಸಾಧನ ಮಾರ್ಗದಲ್ಲಿ ಬರುವ ಅಡೆತಡೆ, ದುಃಖ, ಚೋರಭಯ, ವಿಷಭಯ, ಪ್ರಾಣಭಯ, ಇವೇ ಮೊದಲಾದ ವಿಪತ್ತುಗಳು ಪರಿಹಾರವಾಗುತ್ತವೆ.

## ರಾತ್ರೀಸೂಕ್ತಮ್

### ಋಗ್ವೇದಸಂಹಿತಾ, ಮಂಡಲ - 10, ಅಷ್ಟಕ - 8, ಸೂಕ್ತ - 127

ಓಂ ರಾತ್ರೀ ವ್ಯಖ್ಯದಾಯತೀ ಪುರುತ್ರಾ ದೇವ್ಯ (ಅ) ೧ ಕ್ಷಭಿಃ । ವಿಶ್ವಾ ಅಧಿ ಶ್ರಿಯೋಧಿತ ॥ ೧ ॥

ಓರ್ವಪ್ರಾ ಅಮರ್ತ್ಯಾ ನಿವತೋ ದೇವ್ಯು (ಉ) ೧ ದ್ವತಃ । ಜ್ಯೋತಿಷಾ ಬಾಧತೇ ತಮಃ ॥ ೨ ॥

ನಿರುಸ್ವಸಾರಮಸ್ಕೃತೋಷಸಂ ದೇವ್ಯಾಯತೀ । ಅಪೇದು ಹಾಸತೇ ತಮಃ ॥ ೩ ॥

ಸಾನೋ ಅದ್ಯಯಸ್ಯಾ ವಯಂ ನಿ ತೇ ಯಾಮನ್ನವಿಕ್ಷ್ಮಹಿ । ವೃಕ್ಷೇ ನ ವಸತಿಂ ವಯಃ ॥ ೪ ॥

ನಿ ಗ್ರಾಮಾಸೋ ಅವಿಕ್ಷತ ನಿ ಪದ್ವಂತೋ ನಿ ಪಕ್ಷಿಣಃ । ನಿ ಶ್ಯೇನಾಸಶ್ಚಿದರ್ಥಿನಃ ॥ ೫ ॥

ಯಾವಯಾ ವೃಕ್ಯ (ಅಂ) ೧ ವೃಕಂ ಯವಯಸ್ತೇನಮೂರ್ಮ್ಯೇ । ಅಥಾ ನಃ ಸುತರಾ ಭವ ॥ ೬ ॥

ಉಪ ಮಾ ಪೇಪಿಶತ್ತಮಃ ಕೃಷ್ಣಂ ವ್ಯಕ್ತಮಸ್ಥಿತ। ಉಷ ಋಣೇವ ಯಾತಯ ॥ ೭ ॥

ಉಪ ತೇ ಗಾ ಇವಾಕರಂ ವೃಣೀಷ್ವ ದುಹಿತರ್ದಿವಃ । ರಾತ್ರಿಸ್ತೋಮಂ ನ ಜಿಗ್ಯುಷೇ ॥ ೮ ॥

## ಅಂಭೃಣೀಸೂಕ್ತ

ಅಂಭೃಣೀಸೂಕ್ತವು ಋಗ್ವೇದದ ಹತ್ತನೆಯ ಮಂಡಲದ 120ನೇ ಸೂಕ್ತವಾಗಿದೆ. "**ಅಂ ಬಿಭರ್ತಿ ನಯತಿ ಚ**" ಎಂಬ ವ್ಯುತ್ಪತ್ತ್ಯನುಸಾರ ಮಹಾಲಕ್ಷ್ಮಿಯೇ ಅಂಭೃಣೀಶಬ್ದವಾಚ್ಯಳೆಂದು ಸಿದ್ಧವಾಗುತ್ತದೆ. ಪೈಂಗೀಶ್ರುತಿಯ ವಚನವು "**ಶ್ರೀ ಭೂದುರ್ಗಾಂಭೃಣೀ**" ಎಂದು ಅಂಭೃಣೀ ಲಕ್ಷ್ಮಿಯೇ ಎನ್ನುತ್ತದೆ. ಇದಲ್ಲದೆ ಆಚಾರ್ಯರು ತಂತ್ರಸಾರಸಂಗ್ರಹದಲ್ಲಿನ "**ವಾಚೋಽಂಭೃಣ್ಯಾಃ ಶ್ರಿಯಃ**" ಎಂಬ ವಚನವೂ ಪುಷ್ಟೀಕರಿಸುತ್ತದೆ.

ಈ ಸೂಕ್ತದ ಮೊದಲ ಆರು ಋಕ್ಕುಗಳು ಲಕ್ಷ್ಮೀದೇವಿಯ ಮಹಿಮೆಯನ್ನು ಉಳಿದ ಮೂರು ಋಕ್ಕುಗಳು ಪತಿಯಾದ ವಿಷ್ಣುವಿನ ಮಹಿಮೆಯನ್ನು ಹೇಳುತ್ತದೆ.

**"ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ಕರೋಮಿ"** ನಾನು ಬ್ರಹ್ಮ, ರುದ್ರ ಮೊದಲಾದ ದೇವತೆಗಳ ಸೃಷ್ಟಿ, ಸ್ಥಿತಿ, ಲಯಾದಿ ಕಾರಣಕರ್ತಳು, ಅವರಿಗೆ ಐಶ್ವರ್ಯಪ್ರದಳೂ, ಮೋಕ್ಷವನ್ನು ಕೊಡುವವಳೂ ಎಂದು ಹೇಳುತ್ತಾ ನನಗೆ ಕಾರಣಕರ್ತನು (ಮಮ ಯೋನಿರಪ್ಸ್ವಂತಃ ಸಮುದ್ರೇ) ಪರಮಾತ್ಮನೆಂದು ಹೇಳುವ ಮೂಲಕ ನನ್ನ ಅನುಗ್ರಹ ಪರಮಾತ್ಮನ ಸಹಿತ ಉಪಾಸನೆಯಿಂದ ಮಾತ್ರವೇ ಸಾಧ್ಯ ಎಂಬ ಸಾರವನ್ನು ಉಪದೇಶಿಸಿದ್ದಾಳೆ.

## ಅಂಭೃಣೀಸೂಕ್ತಮ್

**ಹರಿಃ ಓಮ್** ॥ ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈಃ । ಅಹಂ ಮಿತ್ರಾವರುಣೋಭಾಭಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿನೋಭಾ ॥

ಅಹಂ ಸೋಮಮಾ ಹನಸಂ ಭಿಭರ್ಮ್ಯಹಂ ತ್ವಷ್ಟಾರಮುತ ಪೂಷಣಂ ಭಗಮ್ । ಅಹಂ ದಧಾಮಿ ದ್ರವಿಣಂ ಹವಿಷ್ಮತೇ ಸುಪ್ರಾವ್ಯೇ ೩ ಯಜಮಾನಾಯ ಸುನ್ವತೇ ॥

ಅಹಂ ರಾಷ್ಟ್ರೀ ಸಂಗಮನೀ ವಸೂನಾಂ ಚಿಕಿತುಷೀ ಪ್ರಥಮಾ ಯಜ್ಞಿಯಾನಾಮ್ । ತಾಂ ಮಾ ದೇವಾ ವ್ಯದಧುಃ ಪುರುತ್ರಾ ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್ ॥

ಮಯಾಸೋ ಅನ್ನಮತ್ತಿ ಯೋ ವಿಪಶ್ಯತಿ ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್ ॥

ಅಮಂತವೋ ಮಾಂ ತ ಉಪಕ್ಷಿಯಂತಿ ಶ್ರುಧಿ ಶ್ರುತ ಶ್ರದ್ಧಿವಂತೇ ವದಾಮಿ ॥

ಅಹಮೇವ ಸ್ವಯಮಿದಂ ವದಾಮಿ ಜುಷ್ಟಂ ದೇವೇಭಿರುತ ಮಾನುಷೇಭಿಃ । ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ ॥ ೧ ॥

ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ । ಅಹಂ ಜನಾಯ ಸಮದಂ ಕೃಣೋಮ್ಯಹಂ ದ್ಯಾವಾಪೃಥಿವೀ ಆವಿವೇಶ ॥

ಅಹಂ ಸುವೇ ಪಿತರಮಸ್ಯ ಮೂರ್ಧನ್ಮಮ ಯೋನಿರಪ್ಸ್ವಅಂತಃ ಸಮುದ್ರೇ । ತತೋ ವಿತಿಷ್ಠೇ ಭುವನಾನು ವಿಶ್ವೋತಾಮೂಂ ದ್ಯಾಂ ವರ್ಷ್ಮಣೋಪಸ್ಪೃಶಾಮಿ ॥

ಅಹಮೇವ ವಾತ ಇವ ಪ್ರವಾಮ್ಯಾರಭಮಾಣಾ ಭುವನಾನಿ ವಿಶ್ವಾ । ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂಬಭೂವ ॥ ೨ ॥

## ಬಳಿತ್ಥಾ ಸೂಕ್ತ

"ಪ್ರಾಣಾಗ್ನೇಃ ಸೂಕ್ತಮುಚ್ಯತೇ" ಎಂಬುದಾಗಿ ಜಗದ್ಗುರು ಶ್ರೀಮಧ್ವಾಚಾರ್ಯರು ಬಳಿತ್ಥಾಸೂಕ್ತವು ಪ್ರಾಣ ಮತ್ತು ಅಗ್ನಿ ಎಂಬ ಎರಡು ಹೆಸರಿನ ಮುಖ್ಯಪ್ರಾಣವನ್ನು ವರ್ಣಿಸುವ ಸೂಕ್ತವೆಂದು ತಂತ್ರಸಾರಸಂಗ್ರಹ ಮೊದಲಾದ ಗ್ರಂಥಗಳಲ್ಲಿ ಹೇಳಿದ್ದಾರೆ. ಈ ಬಳಿತ್ಥಾಸೂಕ್ತವು ಮುಖ್ಯಪ್ರಾಣನ ಮೂರು ರೂಪಗಳನ್ನು ಕೊಂಡಾಡುವ ಪರಮಪವಿತ್ರವಾದ ಸೂಕ್ತವಾಗಿದೆ. ಈ ಮುಖ್ಯಪ್ರಾಣರೂಪವು ಜ್ಞಾನಪ್ರದವಾಗಿದೆ. ಶ್ರೀಮನ್ನಾರಾಯಣನಿಂದ ಜನ್ಮವನ್ನು ಪಡೆದಿದೆ. ಮೂರು ರೂಪಗಳೊಂದಿಗೆ ಅವತಾರರೂಪವು ಇರುತ್ತದೆಂದು ಈ ಸೂಕ್ತವು ಸಂದೇಶಿಸಿದೆ. ಮುಖ್ಯಪ್ರಾಣನ ಮೊದಲ ರೂಪವು ಹನುಮಂತನೆಂದು ಪುರಾಣಗಳಲ್ಲಿ ಕೊಂಡಾಡಲ್ಪಟ್ಟಿದೆ. ಅದರ ಪ್ರಮುಖ ಕಾರ್ಯವನ್ನು ವೇದವು ಹೀಗೆ ಸಂಗ್ರಹಿಸಿದೆ - "ಋತಸ್ಯ ಧೇನಾ ಅನಯಂತ ಸಸ್ರುತಃ" ಋತಸ್ಯ = ಗುಣಪೂರ್ಣನಾದ ರಾಮನ, ಧೇನಾಃ = ಮಾತುಗಳನ್ನು, ಅನಯಂತ = ಸೀತಾದೇವಿಯ ಬಳಿಗೆ ತಲುಪಿಸುವಂತಹ ಕಾರ್ಯವನ್ನು ನೆರವೇರಿಸಿದೆ.

"ಪೃಕ್ಷೋ ವಪುಃ ಪಿತುಮಾನ್ ನಿತ್ಯ ಆಶಯೇ" ಎರಡನೇ ಶರೀರವು ಭೀಮಸೇನನೆನಿಸಿದ್ದು ಪೃಕ್ಷಃ = ಅಪಾರವಾದ ಸೈನ್ಯವನ್ನು ನಾಶಮಾಡುವಂತಹ, ಬಲಿಷ್ಠವಾದ ದೇಹವಾಗಿದೆ.

"ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ" ಈ ವಾಯುದೇವರ ಮೂರನೇ ರೂಪವು ದಶಪ್ರಮತಿ = ಪೂರ್ಣಪ್ರಮತಿ ಎಂದು ಕರೆಸಿಕೊಳ್ಳಲ್ಪಟ್ಟಿದೆ. ಹನುಮ-ಭೀಮ-ಮಧ್ವಾವತಾರಗಳಲ್ಲಿ "ಜನಯಂತ ಯೋಷಣಃ " ಶ್ರೀ ಭೂ ದುರ್ಗಾರೂಪದಿಂದ ಲಕ್ಷ್ಮೀದೇವಿಯೇ ಮುಖ್ಯಪ್ರಾಣನಿಗೆ ಜನ್ಮವನ್ನು ನೀಡಿದ್ದಾಳೆ. ಈ ಮುಖ್ಯಪ್ರಾಣರೂಪವು ಮಧ್ವಾಚಾರ್ಯರಾಗಿ ಅವತರಿಸಿ ನಾಲ್ಕು ವೇದಗಳು, ಇತಿಹಾಸ, ಪುರಾಣ, ಪಂಚರಾತ್ರಗಳಲ್ಲಿ ಹೇಳಿರುವ ಭಗವಂತನ ಮಾಹಾತ್ಮ್ಯವನ್ನು ಜಗತ್ತಿಗೆ ನಿರೂಪಣೆ ಮಾಡಿದೆ. ಹೀಗೆ ಮುಖ್ಯಪ್ರಾಣದೇವರನ್ನು ಕೊಂಡಾಡುವ ಪರಮ ಪಾವನ ಸೂಕ್ತ ಇದಾಗಿದೆ.

## ಬಳಿತ್ಥಾ ಸೂಕ್ತಮ್

ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ ದೇವಸ್ಯ ಭರ್ಗಃ ಸಹಸೋ ಯತೋ ಜನಿ ।
ಯದೀಮುಪಹ್ವರತೇ ಸಾಧತೇ ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ ॥ ೧ ॥
ಪೃಕ್ಷೋ ವಪುಃ ಪಿತುಮಾನ್ ನಿತ್ಯ ಆಶಯೇ ದ್ವಿತೀಯ ಮಾ ಸಪ್ತಶಿವಾಸು ಮಾತೃಷು ।
ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ ॥ ೨ ॥
ನಿರ್ಯದೀಂ ಬುಧ್ನಾನ್ ಮಹಿಷಸ್ಯ ವರ್ಪಸ ಈಶಾನಾಸಃ ಶವಸಾಕ್ರಂತ ಸೂರಯಃ ॥
ಯದೀಮನು ಪ್ರದಿವೋ ಮಧ್ವ ಆಧವೇ ಗುಹಾ ಸಂತಂ ಮಾತರಿಶ್ವಾ ಮಥಾಯತಿ ॥ ೩ ॥
ಪ್ರಯತ್ಪಿತುಃ ಪರಮಾನ್ನೀಯತೇ ಪರ್ಯಾ ಪೃಕ್ಷುಧೋ ವೀರುಧೋದಂಸು ರೋಹತಿ ।
ಉಭಾ ಯದಸ್ಯ ಜನುಷಂ ಯದಿನ್ವತ ಆದಿದ್ಯವಿಷ್ಠೋ ಅಭವದ್ಘೃಣಾ ಶುಚಿಃ ॥ ೪ ॥

ಆದಿನ್ಮಾತ್ರೂರಾವಿಶದ್ಯಾ ಸ್ವಾ ಶುಚಿರಹಿಂಸ್ಯಮಾನ ಉರ್ವಿಯಾವಿವಾವೃಧೇ ।

ಅನು ಯತ್ಪೂರ್ವಾ ಅರುಹತ್ಸನಾಜುವೋ ನಿ ನವ್ಯಸೀಷ್ವವರಾಸು ಧಾವತೇ ॥ ೫ ॥

॥ ಇತಿ ಬಳಿತ್ಥಾಸೂಕ್ತಮ್ ॥

## ಪವಮಾನಸೂಕ್ತಮ್

ಶ್ರೀಮದ್ಭಾಗವತದಲ್ಲಿ ಶ್ರೀಕೃಷ್ಣನು ತನ್ನ ಪೂಜೆಯನ್ನು ನಿರ್ವಹಿಸಿ, ಪೂಜಾವಸಾನಕಾಲದಲ್ಲಿ, "ಧಾಮನೀರಾಜನಾದಿಭಿಃ" ಎಂಬುದಾಗಿ ಧಾಮಸೂಕ್ತ ಹಾಗೂ ಪವಮಾನಸೂಕ್ತದಿಂದ ತನ್ನ ಆರಾಧನೆಯನ್ನು ನಡೆಸಬೇಕೆಂಬುದಾಗಿ ಆದೇಶವನ್ನು ನೀಡಿದ್ದಾನೆ. ಇಲ್ಲಿ ನೀರಾಜನಸೂಕ್ತವೆಂದರೆ ಪವಮಾನಸೂಕ್ತವೆಂದು ಅರ್ಥವಾಗಿದೆ. ಈ ಪವಮಾನಸೂಕ್ತವು ಮುಖ್ಯಪ್ರಾಣ ಹಾಗೂ ಅವನ ಅಂತರ್ಯಾಮಿಯಾದ ಭಗವಂತನ ಗುಣಗಳನ್ನು ಕೊಂಡಾಡುವ ಋಗ್ವೇದದ ಸಾರಭಾಗವೆನಿಸಿದೆ. ಏಳು ಅಧ್ಯಾಯಗಳನ್ನು ಒಳಗೊಂಡ ಈ ಮಂಡಲದಲ್ಲಿ ಪ್ರಧಾನವಾಗಿ ನಾಲ್ಕು ಅಧ್ಯಾಯಗಳನ್ನು ಪಾರಾಯಣ ಹಾಗೂ ವಿಶೇಷವಾಗಿ ಹೋಮಗಳಿಗೆ ಬಳಸಲಾಗುವುದು.

ಈ ಪವಮಾನಸೂಕ್ತ ಮಹಿಮೆಯನ್ನು ವರ್ಣಿಸಲು ದೇವತೆಗಳಿಂದಲೂ ಸಾಧ್ಯವಿಲ್ಲ. ಗರ್ಭದಲ್ಲಿರುವಾಗ ನಾವು ನಾನಾವಿಧ ಹಿಂಸೆಗಳನ್ನು ತಾಯಿಗೆ ನೀಡಿರುತ್ತೇವೆ. ಪುಟ್ಟ ಮಗುವಿದ್ದಾಗ ತಂದೆತಾಯಿಗಳಿಗೆ ಅನೇಕ ಬಗೆಯ ತೊಂದರೆಯನ್ನು ನೀಡಿರುತ್ತೇವೆ. ದೊಡ್ಡವರಾದ ಮೇಲೆ ಅವರ ಮಾತನ್ನು ಮೀರುವ ಮೂಲಕ ಅವರಿಗೆ ದುಃಖವನ್ನು ನೀಡಿರುತ್ತೇವೆ. ಅಷ್ಟಲ್ಲದೇ ಪಶುಗಳ ಹಿಂಸೆ, ಸ್ತ್ರೀಯರಿಗೆ ನೋವು ಕೊಡುವಂಥದ್ದು, ನಾನಾ ರೀತಿಯಾದ ಪಾಪಗಳನ್ನು ಮಾಡಿರುತ್ತೇವೆ. ಬ್ರಹ್ಮಹತ್ಯಾ, ಸುರಾಪಾನ, ಸ್ವರ್ಣಸ್ತೇಯ, ವೃಷಳಿಗಮನ, ಉಚ್ಚ ಸ್ತ್ರೀಯರ ಸಂಗ, ಅಯೋಗ್ಯವಸ್ತುಗಳ ಕ್ರಯವಿಕ್ರಯ, ಸ್ತ್ರೀದೋಷ, ಅಯೋಗ್ಯರ ಮನೆಯಲ್ಲಿ ಭೋಜನ ಮಾಡುವುದು, ಅಯೋಗ್ಯರಿಗೆ ಯಜ್ಞಯಾಗವನ್ನು ಮಾಡಿಸುವುದು, ಉಪದೇಶ ಮಾಡುವುದು, ಅವಸರದಲ್ಲಿ ಮಂತ್ರಗಳನ್ನು ಹೇಳದೇ ಹೋಮವನ್ನು ಮಾಡುವುದು ಈ ಮೊದಲಾದ ಪಾಪಗಳನ್ನು (ಅಜ್ಞಾನದಿಂದ) ಮಾಡಿದ ಮಾನವರು ಶ್ರದ್ಧಾಭಕ್ತಿಯಿಂದ ಪವಮಾನಸೂಕ್ತದ ಪಾರಾಯಣ ಮಾಡಿದಾಗ ಪಾಪಗಳಿಂದ ವಿನಿರ್ಮುಕ್ತಿಯಾಗುವುದೆಂದು ಶಾಸ್ತ್ರಕಾರರ ಅಭಿಪ್ರಾಯವಾಗಿದೆ. "ಪಾವಮಾನೀಃ ಸ್ವಸ್ತ್ಯಯನೀಃ" ಪವಮಾನಸೂಕ್ತದ ಪಾರಾಯಣವು ಮಂಗಳಕ್ಕೆ ಕಾರಣವಾಗಿದೆ.

"ಪಾವಮಾನಂ ಪರಂ ಬ್ರಹ್ಮ ಯೇ ಪಠಂತಿ ಮನೀಷಿಣಃ |

ಸಪ್ತಜನ್ಮ ಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ ||"

ಈ ಪವಮಾನಸೂಕ್ತವನ್ನು ಪಾರಾಯಣ ಮಾಡುವ ವ್ಯಕ್ತಿಯು ಏಳು ಜನ್ಮ ಸತತವಾಗಿ ಬ್ರಾಹ್ಮಣನಾಗಿ ಹುಟ್ಟಿ ಸಂಪನ್ನನೂ, ವೇದಪಾರಗನೂ ಆಗುತ್ತಾನೆ. ತನ್ನ ಪಿತೃ, ಪಿತೃಮಹ, ಪ್ರಪಿತಾಮಹರೇ ಆಗಿರತಕ್ಕಂತಹ ವ್ಯಕ್ತಿಗಳನ್ನು ಪಾಪಗಳಿಂದ ಬಿಡುಗಡೆಗೊಳಿಸುತ್ತಾನೆ. ಪವಮಾನಪಾರಾಯಣವನ್ನು ಕೇಳುವುದೂ ಕೂಡ ಅತ್ಯಂತ ಪುಣ್ಯಕರವಾದ ಕಾರ್ಯವಾಗಿದೆ -

"ಏತತ್ಪುಣ್ಯಂ ಪಾಪಹರಂ ಘೋರಮೃತ್ಯುಭಯಾಪಹಮ್ |

ಪಠತಾಂ ಶೃಣ್ವತಾಂಶ್ಚೈವ ದದಾತಿ ಪರಮಾಂ ಗತಿಮ್ ||"

ಹೇಳುವವರಿಗೂ, ಕೇಳುವವರಿಗೂ ಪಾಪವನ್ನು ಪರಿಹರಿಸಿ ಪುಣ್ಯವನ್ನು ಕೊಡುತ್ತದೆ. ಅಲ್ಲದೇ ಅಪಮೃತ್ಯುವಿನ ಭಯವನ್ನು ಪರಿಹರಿಸಿ ಮೋಕ್ಷವನ್ನು ಕೊಡುತ್ತದೆ. ಈ ಕಾರಣದಿಂದಲೇ ನಾಲ್ಕು ಅಧ್ಯಾಯಗಳ ಪಾರಾಯಣವನ್ನು ಮಾಡಲೇಬೇಕು. ಕನಿಷ್ಠಪಕ್ಷ ಒಂದು ಸೂಕ್ತವನ್ನಾದರೂ ಪಠಿಸಲೇಬೇಕು.

## ಪವಮಾನಸೂಕ್ತಮ್

ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ । ಇಂದ್ರಾಯ ಪಾತವೇ ಸುತಃ ॥ ೧ ॥

ರಕ್ಷೋಹಾ ವಿಶ್ವಚರ್ಷಣಿರಭಿ ಯೋನಿಮಯೋಹತಮ್ । ದ್ರುಣಾಸಧಸ್ಥ ಮಾಸದತ್ ॥ ೨ ॥

ವರಿವೋಧಾತಮೋ ಭವ ಮಂಹಿಷ್ಠೋ ವೃತ್ರಹಂತಮಃ । ಪರ್ಷಿರಾಧೋ ಮಘೋನಾಮ್ ॥ ೩ ॥

ಅಭ್ಯರ್ಷ ಮಹಾನಾಂ ದೇವಾನಾಂ ವೀತಿಮಂಧಸಾ । ಅಭಿ ವಾಜಮುತ ಶ್ರವಃ ॥ ೪ ॥

ತ್ವಾಮಚ್ಛಾ ಚರಾಮಸಿ ತದಿದರ್ಥಂ ದಿವೇದಿವೇ । ಇಂದೋ ತ್ವೇ ನ ಆಶಸಃ ॥ ೫ ॥

ಪುನಾತಿ ತೇ ಪರಿಸ್ರುತಂ ಸೋಮಂ ಸೂರ್ಯಸ್ಯ ದುಹಿತಾ । ವಾರೇಣ ಶಶ್ವತಾ ತನಾ ॥ ೬ ॥

ತಮೀಮಣ್ವೀಃ ಸಮರ್ಯ ಆ ಗೃಭ್ಣಂತಿ ಯೋಷಣೋ ದಶ । ಸ್ವಸಾರಃ ಪಾರ್ಯೇ ದಿವಿ ॥ ೭ ॥

ತಮೀಂ ಹಿನ್ವಂತ್ಯಗ್ರುವೋ ಧಮಂತಿ ಬಾಕುರಂ ದೃತಿಮ್ । ತ್ರಿಧಾತು ವಾರಣಂ ಮಧು ॥ ೮ ॥

ಅಭೀ (ಈ) ೩ ಮಮಘ್ನ್ಯಾ ಉತ ಶ್ರೀಣಂತಿ ಧೇನವಃ ಶಿಶುಮ್ । ಸೋಮಮಿಂದ್ರಾಯ ಪಾತವೇ ॥ ೯ ॥

ಅಸ್ಯೇದಿಂದ್ರೋ ಮದೇಷ್ವಾ ವಿಶ್ವಾ ವೃತ್ರಾಣಿ ಜಿಘ್ನತೇ । ಶೂರೋ ಮಘಾ ಚ ಮಂಹತೇ ॥ ೧೦ ॥

## ಮಂತ್ರಪುಷ್ಪ

ಕೆಳಗಿನ ಕಕ್ಷೆಯ ದೇವತೆಗಳು ಮೇಲಿನ ಕಕ್ಷೆಯ ದೇವತೆಗಳ ಅನುಗ್ರಹದಿಂದ ಕಾರ್ಯವನ್ನು ನಡೆಸುತ್ತಾರೆ. ಅಂತಿಮವಾಗಿ ಎಲ್ಲ ದೇವತೆಗಳೂ ಸರ್ವೋತ್ತಮನಾದ ಶ್ರೀಹರಿಯ ಆಸರೆಯನ್ನು ಪಡೆದುಕೊಂಡು ತಮ್ಮ ಕಾರ್ಯವನ್ನು ನಡೆಸುತ್ತಾರೆಂದು ಈ ಮಂತ್ರಪುಷ್ಪದ ಸೂಕ್ತಗಳು ತಿಳಿಸುತ್ತಿದೆ.

## ಮಂತ್ರಪುಷ್ಪಮ್

ಯೋಽಪಾಂ ಪುಷ್ಪಂ ವೇದ । ಪುಷ್ಪವಾನ್ ಪ್ರಜಾವಾನ್ ಪಶುಮಾನ್ ಭವತಿ । ಚಂದ್ರಮಾ ವಾ ಅಪಾಂ ಪುಷ್ಪಮ್ । ಪುಷ್ಪವಾನ್ ಪ್ರಜಾವಾನ್ ಪಶುಮಾನ್ ಭವತಿ । ಯ ಏವಂ ವೇದ । ಯೋಽಪಾಮಾಯತನಂ ವೇದ । ಆಯತನವಾನ್ ಭವತಿ ।

ಅಗ್ನಿರ್ವಾ ಅಪಾಮಾಯತನಮ್ । ಆಯತನವಾನ್ ಭವತಿ । ಯೋಽಗ್ನೇರಾಯತನಂ ವೇದ ॥ ಆಯತನವಾನ್ ಭವತಿ । ಆಪೋ ವಾ ಅಗ್ನೇರಾಯತನಮ್ । ಆಯತನವಾನ್ ಭವತಿ । ಯ ಏವಂ ವೇದ । ಯೋಽಪಾಮಾಯತನಂ ವೇದ। ಆಯತನವಾನ್ ಭವತಿ । ವಾಯುರ್ವಾ ಅಪಾಮಾಯತನಮ್ । ಆಯತನವಾನ್ ಭವತಿ । ಯೋ ವಾಯೋರಾಯತನಂ ವೇದ । ಆಯತನವಾನ್ ಭವತಿ । ಯೋ ವಾಯೋರಾಯತನಂ ವೇದ । ಆಯತನವಾನ್ ಭವತಿ ॥

ಆಪೋ ವೈ ವಾಯೋರಾಯತನಮ್ । ಆಯತನವಾನ್ ಭವತಿ । ಯ ಏವಂ ವೇದ । ಯೋಽಪಾಮಾಯತನಂ ವೇದ । ಆಯತನವಾನ್ ಭವತಿ । ಅಸೌ ವೈ ತಪನ್ನಪಾಮಾಯತನಮ್ । ಆಯತನವಾನ್ ಭವತಿ । ಯೋಽಮುಷ್ಯ ತಪತ ಆಯತನಂ ವೇದ । ಆಯತನವಾನ್ ಭವತಿ । ಆಪೋ ವಾ ಅಮುಷ್ಯ ತಪತ ಆಯತನಮ್ ॥

ಆಯತನವಾನ್ ಭವತಿ । ಯ ಏವಂ ವೇದ । ಯೋಽಪಾಮಾಯತನಂ ವೇದ । ಆಯತನವಾನ್ ಭವತಿ । ಚಂದ್ರಮಾ ವಾ ಅಪಾಮಾಯತನಮ್ । ಆಯತನವಾನ್ ಭವತಿ । ಯಶ್ಚಂದ್ರಮಸ ಆಯತನಂ ವೇದ । ಆಯತನವಾನ್ ಭವತಿ । ಆಪೋ ವೈ ಚಂದ್ರಮಸ ಆಯತನಮ್ । ಆಯತನವಾನ್ ಭವತಿ । ಆಪೋ ವೈ ಚಂದ್ರಮಸ ಆಯತನಮ್। ಆಯತನವಾನ್ ಭವತಿ ॥

ಯ ಏವಂ ವೇದ । ಯೋಽಪಾಮಾಯತನಂ ವೇದ । ಆಯತನವಾನ್ ಭವತಿ । ನಕ್ಷತ್ರಾಣಿ ವಾ ಅಪಾಮಾಯತನಮ್। ಆಯತನವಾನ್ ಭವತಿ । ಯೋ ನಕ್ಷತ್ರಾಣಾಮಾಯತನಂ ವೇದ । ಆಯತನವಾನ್ ಭವತಿ । ಆಪೋ ವೈ ನಕ್ಷತ್ರಾಣಾಮಾಯತನಮ್ । ಆಯತನವಾನ್ ಭವತಿ । ಯ ಏವಂ ವೇದ ॥

ಯೋಽಪಾಮಾಯತನಂ ವೇದ । ಆಯತನವಾನ್ ಭವತಿ । ಪರ್ಜನ್ಯೋ ವಾ ಅಪಾಮಾಯತನಮ್ । ಆಯತನವಾನ್ ಭವತಿ । ಯಃ ಪರ್ಜನ್ಯಸ್ಯಾಯತನಂ ವೇದ । ಆಯತನವಾನ್ ಭವತಿ । ಆಪೋ ವೈ ಪರ್ಜನ್ಯಸ್ಯಾಯತನಮ್ । ಆಯತನವಾನ್ ಭವತಿ । ಯ ಏವಂ ವೇದ । ಯೋಽಪಾಮಾಯತನಂ ವೇದ ॥

ಆಯತನವಾನ್ ಭವತಿ । ಸಂವತ್ಸರೋ ವಾ ಅಪಾಮಾಯತನಮ್ । ಆಯತನವಾನ್ ಭವತಿ । ಯಸ್ಸಂವತ್ಸರಸ್ಯಾಯತನಂ ವೇದ । ಆಯತನವಾನ್ ಭವತಿ । ಆಪೋ ವೈ ಸಂವತ್ಸರಸ್ಯಾಯತನಮ್ । ಆಯತನವಾನ್ ಭವತಿ । ಯ ಏವಂ ವೇದ । ಯೋಽಪ್ಸುನಾವಂ ಪ್ರತಿಷ್ಠಿತಾಂ ವೇದ । ಪ್ರತ್ಯೇವ ತಿಷ್ಠತಿ ॥

## ಪೂಜೆಯ ಕೊನೆಯಲ್ಲಿ ಪಠಿಸುವ ಸೂಕ್ತ

ಓಂ ॥ ಧ್ರುವಾದ್ಯೌರ್ಧ್ರುವಾ ಪೃಥಿವೀ ಧ್ರುವಾಸಃ ಪರ್ವತಾ ಇಮೇ ।
ಧ್ರುವಂ ವಿಶ್ವಮಿದಂ ಜಗದ್ಧ್ರುವೋ ರಾಜಾ ವಿಶಾಮಯಮ್ ।
ಧ್ರುವಂ ತೇ ರಾಜಾ ವರುಣೋ ಧ್ರುವಂ ದೇವೋ ಬೃಹಸ್ಪತಿಃ ।
ಧ್ರುವಂತ ಇಂದ್ರಶ್ಚಾಗ್ನಿಶ್ಚ ರಾಷ್ಟ್ರಂ ಧಾರಯತಾಂ ಧ್ರುವಮ್ ॥

ಓಂ ಸಾಮ್ರಾಜ್ಯಂ ಭೋಜ್ಯಂ ಸ್ವಾರಾಜ್ಯಂ ವೈರಾಜ್ಯಂ ಪಾರಮೇಷ್ಠ್ಯಂ ರಾಜ್ಯಂ ಮಹಾರಾಜ್ಯಮಾಧಿಪತ್ಯಮಯಂ ಸಮಂತ ಪರ್ಯಾಯೀ ಸ್ಯಾತ್ । ಸಾರ್ವಭೌಮಃ ಸಾರ್ವಾಯುಷ ಆಂತಾದಾ ಪರಾರ್ಧಾತ್ । ಪೃಥಿವ್ಯೈ ಸಮುದ್ರಪರ್ಯಂತಾಯಾ ..... ಏಕರಾಳಿತಿ । ತದಪ್ಯೇಷ ಶ್ಲೋಕೋಽಭಿಗೀತೋ ಮರುತಃ ಪರಿವೇಷ್ಟಾರೋ । ಮರುತ್ತಸ್ಯಾ ವಸನ್ ಗೃಹೇ । ಆವಿಕ್ಷಿತಸ್ಯ ಕಾಮಪ್ರೇರ್ವಿಶ್ವೇ ದೇವಾಸ್ಸಭಾಸದ ಇತಿ ॥

ಯೋ ನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ ।
ಯೋ ದೇವಾನಾಂ ನಾಮಧಾ ಏಕ ಏವಂ ತಂ ಸಂಪ್ರಶ್ನಂ ಭುವನಾಯಂತ್ಯನ್ಯಾ ಸ್ವಸ್ತಿ ॥
ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾತ್ ।
ಸಂ ಬಾಹುಭ್ಯಾಂ ಧಮತಿ ಸಂಪತತ್ರೈರ್ದ್ಯಾವಾಭೂಮೀ ಜನಯನ್ ದೇವ ಏಕಃ ॥
ರಾಜಾಧಿರಾಜಾಯ ಪ್ರಸಹ್ಯಸಾಹಿನೇ ನಮೋ ವಯಂ ವೈಶ್ರವಣಾಯ ಕುರ್ಮಹೇ ।
ಸ ಮೇ ಕಾಮಾನ್ ಕಾಮ ಕಾಮಾಯ ಮಹ್ಯಂ ಕಾಮೇಶ್ವರೋ ವೈಶ್ರವಣೋ ದಧಾತು ।
ಕುಬೇರಾಯವೈ ವೈಶ್ರವಣಾಯ ಮಹಾರಾಜಾಯ ನಮಃ ॥
ಸಕ್ತುಮಿವತಿತ ಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ ।
ಅತ್ರಾ ಸಖಾಯಸ್ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿವಾಚಿ ॥
ನಿಷುಸೀದ ಗಣಪತೇ ಗಣೇಷು ತ್ವಾಮಾಹುಃ ವಿಪ್ರತಮಂ ಕವೀನಾಂ ।
ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವಂ ಚಿತ್ರಮರ್ಚ ।
ಸನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ । ಸಚಃ ಸ್ವಾನಃ ಸ್ವಸ್ತಯೇ ॥
ಪರ್ಯಾಪ್ತ್ಯಾ ಅನಂತರಾಯಾಯ ಸರ್ವಸ್ತೋಮೋಽತಿರಾತ್ರ ಉತ್ತಮಮಹರ್ಭವತಿ ॥
ಸರ್ವಸ್ಯಾಪ್ತ್ಯೈ ಸರ್ವಸ್ಯ ಜಿತ್ಯೈ ಸರ್ವಮೇವ ತೇನಾಪ್ನೋತಿ ಸರ್ವಂ ಜಯತಿ ॥
ಸಂಸೃಷ್ಟಂ ಧನಮುಭಯಂ ಸಮಾಕೃತಮಸ್ಮಭ್ಯಂ ದತ್ತಾಂ ವರುಣಶ್ಚ ಮನ್ಯುಃ ।
ಭಿಯಂ ದಧಾನಾ ಹೃದಯೇಷು ಶತ್ರವಃ ಪರಾಜಿತಾ ಸೋ ಅಪನಿಲಯಂತಾಮ್ ॥
ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ ಲೋಕಾಸ್ಸಮಸ್ತಾಃ ಸುಖಿನೋ ಭವಂತು ॥

## ಮಂತ್ರಾಕ್ಷತೆಮಂತ್ರ

ನಾರಾಯಣಾಷ್ಟಾಕ್ಷರಮಂತ್ರದಿಂದ ಅಭಿಮಂತ್ರಿಸಿದ ನೀರನ್ನು ಶಂಖದಲ್ಲಿ ಹಾಕಿ, ಪಾದದಿಂದ ಮುಡಿಯವರೆಗೆ ಮೂರು ಬಾರಿಗೆ ವರ್ತುಲಾಕಾರವಾಗಿ ಅಭಿಮಂತ್ರಿಸಿದ ಜಲವು ಶಂಖೋದಕವೆನಿಸಿ ಪರಮಪಾವನವಾಗಿದ್ದು ನಮ್ಮ ಪಾಪಗಳನ್ನು ಪರಿಹರಿಸುತ್ತದೆ. ಅದರಂತೆಯೇ ಮಂಗಳದ್ರವ್ಯವೆನಿಸಿದ ಅರಿಶಿನ, ಕುಂಕುಮ, ಸುಣ್ಣಗಳ ಸಂಪರ್ಕವನ್ನು ಪಡೆದ ಮಂತ್ರಾಕ್ಷತೆಯು ವೇದಮಂತ್ರಗಳೊಂದಿಗೆ ಭಗವದ್ರೂಪಗಳ ವಿಶಿಷ್ಟ ಸನ್ನಿಧಾನ ಪ್ರಾಪ್ತವಾಗಿದ್ದು ಪರಮಾತ್ಮನಿಗೆ ಸಮರ್ಪಿತವಾದ ನಿರ್ಮಾಲ್ಯದಂತೆ ಅತ್ಯಂತ ಪವಿತ್ರವೆನಿಸಿದೆ. ಇಂತಹ ಮಂತ್ರಾಕ್ಷತೆಯ ಧಾರಣೆಯಿಂದ ಭಗವಂತನಿಗೆ ಅರ್ಪಿತವಾದ ತುಳಸೀ, ಹೂವುಗಳನ್ನು ಧಾರಣೆ ಮಾಡುವವರ ದೇಹ ಮನಸ್ಸುಗಳಿಗೆ ಪಾವಿತ್ರ್ಯವು ದೊರಕುವಂತೆ ಮಂತ್ರಾಕ್ಷತೆ ಧಾರಣೆಯಿಂದಲೂ ಕೂಡ ದೇಹ ಮನಸ್ಸುಗಳು ಮಾಲಿನ್ಯವನ್ನು ಕಳೆದುಕೊಂಡು ಪಾವಿತ್ರ್ಯವನ್ನು ಪಡೆಯುತ್ತವೆ. ಈ ಹಿನ್ನೆಲೆಯಲ್ಲಿ ವೇದಮಂತ್ರಗಳನ್ನು ಪಠಿಸಿ, ಮಂತ್ರಾಕ್ಷತೆಯನ್ನು ಭಗವಂತನಿಗೆ ಅರ್ಪಿಸಿ, ಯತಿಗಳು ಸ್ವೀಕರಿಸಿ, ಭಕ್ತರಿಗೆಲ್ಲಾ ವಿತರಿಸುತ್ತಾರೆ. ಇಂತಹ ಮಂತ್ರಾಕ್ಷತೆಯನ್ನು ಮಂತ್ರಿಸುವಾಗ ಈ ಮಂತ್ರವನ್ನು ಪಠಿಸುವ ಕ್ರಮವಿದೆ.

### ಮಂತ್ರಾಕ್ಷತಮಂತ್ರಃ

ಓಮ್ ॥ ಇಂದ್ರ ಶ್ರೇಷ್ಠಾನಿ ದ್ರವಿಣಾನಿ ಧೇಹಿ ಚಿತ್ತಿಂ ದಕ್ಷಸ್ಯ ಸುಭಗತ್ವಮಸ್ಮೇ ।
ಪೋಷಂ ರಯೀಣಾಮರಿಷ್ಟಿಂ ತನೂನಾಂ ಸ್ವಾದ್ಮಾನಂ ವಾಚಃ ಸುದಿನತ್ವಮಹ್ನಾಮ್ ॥ ೧ ॥
ಸಹಸ್ರಾಕ್ಷೇಣ ಶತಶಾರದೇನ ಶತಾಯುಷಾ ಹವಿಷಾಹಾರ್ಷಮೇನಮ್ ।
ಶತಂ ಯಥೇಮಂ ಶರದೋ ನ ಯಾತೀಂದ್ರೋ ವಿಶ್ವಸ್ಯ ದುರಿತಸ್ಯ ಪಾರಮ್ ॥ ೨ ॥
ಶತಂ ಜೀವ ಶರದೋ ವರ್ಧಮಾನಃ ಶತಂ ಹೇಮಂತಾಚ್ಛತಮುವಸಂತಾನ್ ।
ಶತಮಿಂದ್ರಾಗ್ನೀ ಸವಿತಾ ಬೃಹಸ್ಪತಿಃ ಶತಾಯುಷಾ ಹವಿಷೇಮಂ ಪುನರ್ದುಃ ॥ ೩ ॥
ಆಹಾರ್ಷಂ ತ್ವಾವಿದಂ ತ್ವಾ ಪುನರಾಗಾಃ ಪುನರ್ನವ ।
ಸರ್ವಾಂಗಸರ್ವಂ ತೇ ಚಕ್ಷುಃ ಸರ್ವಮಾಯುಶ್ಚ ತೇ ವಿದಮ್ ॥ ೪ ॥
ಸರ್ವಸ್ಯಾಪ್ತ್ಯೈ ಸರ್ವಸ್ಯಜಿತ್ಯೈ ಸರ್ವಮೇವ ತೇನಾಪ್ನೋತಿ ಸರ್ವಂ ಜಯತಿ ॥ ೫ ॥
ಋಧ್ಯಾಸ್ಮಹವ್ಯೈರ್ನಮಸೋಪಸದ್ಯಮಿತ್ರಂ ಧೇಯಂ ಮಿತ್ರಧೇಯನ್ನೋ ಅಸ್ತು ।
ಅನುರಾಧಾನ್ ಹವಿಷಾ ವರ್ಧಯಂತಃ ಶತಂ ಜೀವೇಮ ಶರದಃ ಸವೀರಾಃ ॥ ೬ ॥
ನವೋನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಮ್ ।
ಭಾಗಂ ದೇವೇಭ್ಯೋ ವಿ ದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ ॥ ೭ ॥

## ತ್ರಿಸುಪರ್ಣಸೂಕ್ತ

ಪ್ರತಿನಿತ್ಯ ಬ್ರಾಹ್ಮಣರು ಭೋಜನ ಮಾಡುವಾಗ ಇದನ್ನು ಪಠಿಸುವ ಕ್ರಮವಿದೆ. ಧರ್ಮಶಾಸ್ತ್ರಗಳು, "ಆಸನಾತ್ ಶಯನಾತ್ ಧ್ಯಾನಾತ್ ಸಲ್ಲಾಪಾತ್ ಭೂರಿಭೋಜನಾತ್ ಸಂಕ್ರಮಂತೀಹ ಪಾಪಾನಿ ತೈಲಬಿಂದುರಿವಾಂಭಸಿ" ಎಂಬುದಾಗಿ ಅವರ ಪಾಪಗಳು ಸೋಂಕುವುದೆಂದು ಈ ಮಂತ್ರವು ಹೇಳಿದೆ. ಈ ದೃಷ್ಟಿಯಿಂದ ನಾನಾ ವ್ಯಕ್ತಿಗಳ ಜೊತೆಗೆ ಭೋಜನ ಮಾಡುವುದರಿಂದ ಬರುವ ಪಾಪಗಳಿಂದ ಬಿಡುಗಡೆಗೊಳಿಸಲು ಹಾಗೂ ಅನ್ನದಲ್ಲಿರುವ ಸಮಸ್ತ ದೋಷಗಳನ್ನು ಹೋಗಲಾಡಿಸಲು ಈ ತ್ರಿಸುಪರ್ಣಸೂಕ್ತವು ಅತ್ಯಂತ ಶ್ರೇಷ್ಠ ಸಾಧನವಾಗಿದೆ.

ಇದರ ಆರಂಭ ಹೀಗಿದೆ - "ಬ್ರಹ್ಮಮೇತು ಮಾಮ್ | ಮಧುಮೇತು ಮಾಮ್ |" ಪರಬ್ರಹ್ಮನು ನಮ್ಮ ಬಳಿ ಬರಲಿ. ಆ ಪರಬ್ರಹ್ಮನು ಎಂದೆಂದಿಗೂ ಕೂಡ ತತ್ತ್ವಜ್ಞಾನದ ಕಡೆಗೆ ಮನಸ್ಸನ್ನು ಸ್ಥಿರವಾಗಿ ನಿಲ್ಲುವಂತೆ ಪ್ರೇರೇಪಿಸಲಿ. ದುಃಸ್ವಪ್ನದುರುಕ್ತಿಗಳಿಂದ ಯಾವಾಗಲೂ ದೂರವಿರುವಂತೆ ಮಾಡಲಿ ಎಂಬ ಪ್ರಾರ್ಥನೆಯು ಈ ಸೂಕ್ತದಲ್ಲಿ ಅಡಗಿದೆ.

ಈ ತ್ರಿಸುಪರ್ಣಸೂಕ್ತವನ್ನು ಪ್ರತಿನಿತ್ಯ ಪಠಿಸುವ ಬ್ರಾಹ್ಮಣನು "ಆಸಹಸ್ರಾತ್ ಪಂಕ್ತಿಂ ಪುನಂತಿ" ಸಾವಿರಾರು ಜನ ಪಂಕ್ತಿಯಲ್ಲಿರುವಾಗ ಒಬ್ಬ ಬ್ರಾಹ್ಮಣನು ಈ ಪವಿತ್ರವಾದ ಸೂಕ್ತವನ್ನು ಪಠಿಸಿದಲ್ಲಿ ಅಲ್ಲಿರುವ ಎಲ್ಲಾ ವ್ಯಕ್ತಿಗಳಿಗೂ ಶುದ್ಧಿಯನ್ನು ತಂದುಕೊಡುತ್ತಾನೆ ಎಂದು ಈ ಮಂತ್ರದ ಮಹಿಮೆಯನ್ನು ಸ್ವತಃ ವೇದವೇ ಕೊಂಡಾಡಿದೆ. ಇಂತಹ ತ್ರಿಸುಪರ್ಣಸೂಕ್ತವನ್ನು ಸದಾಚಾರಸಂಪನ್ನನಾಗಿರುವ ಬ್ರಾಹ್ಮಣನಿಗೆ ಉಪದೇಶಿಸಬೇಕೆಂಬುದಾಗಿಯೂ ಆದೇಶವಿದೆ. "ತ್ರಿಸುಪರ್ಣಮಯಾಚಿತಂ ಬ್ರಾಹ್ಮಣಾಯ ದದ್ಯಾತ್ | ಭ್ರೂಣಹತ್ಯಾಂ ವಾ ಏತೇ ಘ್ನಂತಿ | ಯೇ ಬ್ರಾಹ್ಮಣಾ ತ್ರಿಸುಪರ್ಣಂ ಪಠಂತಿ ತೇ ಸೋಮಂ ಪ್ರಾಪ್ನುವಂತಿ |" ಭ್ರೂಣಹತ್ಯೆ ಮೊದಲಾದ ದೋಷಗಳನ್ನು ಮಾಡಿದಂತಹ ವ್ಯಕ್ತಿಗಳು ಇಂತಹ ಪಾಪಗಳಿಂದ ಬಿಡುಗಡೆ ಪಡೆದುಕೊಳ್ಳಬಹುದಾಗಿದೆ. ಈ ದೃಷ್ಟಿಯಿಂದ ಈ ಪವಿತ್ರವಾದ ಸೂಕ್ತವನ್ನು ನಿತ್ಯವಾಗಿ ಪಠಿಸುವುದು ಅತ್ಯಂತ ಅವಶ್ಯವಾಗಿದೆ.

## ತ್ರಿಸುಪರ್ಣಸೂಕ್ತಮ್

ಬ್ರಹ್ಮ ಮೇತು ಮಾಮ್ । ಮಧು ಮೇತು ಮಾಮ್ । ಬ್ರಹ್ಮಮೇವ ಮಧುಮೇತು ಮಾಮ್ । ಯಾಸ್ತೇ ಸೋಮ ಪ್ರಜಾವಥ್ಸೋಽಭಿಸೋ ಅಹಮ್ । ದುಃಷ್ಟಪ್ನಹನ್ ದುರುಷ್ಷಹ । ಯಾಸ್ತೇ ಸೋಮ ಪ್ರಾಣಾಗ್‌ಸ್ತಾಂಜುಹೋಮಿ । ತ್ರಿಸುಪರ್ಣಮಯಾಚಿತಂ ಬ್ರಾಹ್ಮಣಾಯ ದದ್ಯಾತ್ । ಬ್ರಹ್ಮಹತ್ಯಾಂ ವಾ ಏತೇ ಘ್ನಂತಿ । ಯೇ ಬ್ರಾಹ್ಮಣಾಸ್ತ್ರಿಸುಪರ್ಣಂ ಪಠಂತಿ । ತೇ ಸೋಮಂ ಪ್ರಾಪ್ನುವಂತಿ । ಆಸಹಸ್ರಾತ್ ಪಂಕ್ತಿಂ ಪುನಂತಿ ॥

ಓಮ್ । ಬ್ರಹ್ಮ ಮೇಧಯಾ । ಮಧು ಮೇಧಯಾ । ಬ್ರಹ್ಮಮೇವ ಮಧು ಮೇಧಯಾ । ಅದ್ಯಾ ನೋ ದೇವ ಸವಿತಃ ಪ್ರಜಾವಥ್ಸಾವೀಸ್ಸೌಭಾಗಮ್ । ಪರಾ ದುಷ್ಟ್ವಪ್ನಿಯಗ್‌ಂ ಸುವ । ವಿಶ್ವಾನಿ ದೇವ ಸವಿತರ್ದುರಿತಾನಿ ಪರಾಸುವ । ಯದ್ಭದ್ರಂ ತನ್ಮ ಆಸುವ । ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ । ಮಾಧ್ವೀರ್ನಸ್ಸಂತ್ವೋಷಧೀಃ । ಮಧು ನಕ್ತಮುತೋಷಸಿ ಮಧುಮತ್ಪಾರ್ಥಿವಗ್‌ಂ ರಜಃ । ಮಧುದ್ಯೌರಸ್ತು ನಃ ಪಿತಾ । ಮಧುಮಾನ್ನೋ ವನಸ್ಪತಿರ್ಮಧುಮಾಗ್‌ಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥ ಯ ಇಮಂ ತ್ರಿಸುಪರ್ಣಮಯಾಚಿತಂ

ಬ್ರಾಹ್ಮಣಾಯ ದದ್ಯಾತ್ । ಭ್ರೂಣಹತ್ಯಾಂ ವಾ ಏತೇ ಘ್ನಂತಿ । ಯೇ ಬ್ರಾಹ್ಮಣಾಸ್ತ್ರಿಸುಪರ್ಣಂ ಪಠಂತಿ । ತೇ ಸೋಮಂ ಪ್ರಾಪ್ನುವಂತಿ । ಆಸಹಸ್ರಾತ್ ಪಂಕ್ತಿಂ ಪುನಂತಿ ॥

ಓಮ್ । ಬ್ರಹ್ಮಮೇಧವಾ। ಮಧು ಮೇಧವಾ । ಬ್ರಹ್ಮಮೇವ ಮಧುಮೇಧವಾ । ಬ್ರಹ್ಮಾ ದೇವಾನಾಂ ಪದವೀಃ ಕವೀನಾಮೃಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಮ್ । ಶ್ಯೇನೋ ಗೃದ್ಧ್ರಾಣಾಗ್ ಸ್ವಧಿತಿರ್ವನಾನಾಗ್ಂ ಸೋಮಃ ಪವಿತ್ರಮತ್ಯೇತಿ ರೇಭನ್ನ್ । ಹಗ್ಂಸಶ್ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ । ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ । ಋಚೇ ತ್ವಾ ರುಚೇ ತ್ವಾ ಸಮಿತ್ಸ್ರವಂತಿ ಸರಿತೋ ನ ಧೇನಾಃ । ಅಂತರ್ ಹೃದಾ ಮನಸಾ ಪೂಯಮಾನಾಃ । ಘೃತಸ್ಯ ಧಾರಾ ಅಭಿಚಾಕಶೀಮಿ। ಹಿರಣ್ಯಯೋ ವೇತಸೋ ಮಧ್ಯ ಆಸಾಮ್ । ತಸ್ಮಿನ್ಸ್ಸುಪರ್ಣೋ ಮಧುಕೃತ್ ಕುಲಾಯೀ ಭಜನ್ನಾಸ್ತೇ ಮಧು ದೇವತಾಭ್ಯಃ । ತಸ್ಯಾಸತೇ ಹರಯಸ್ಸಪ್ತತೀರೇ ಸ್ವಧಾಂ ದುಹಾನಾ ಅಮೃತಸ್ಯ ಧಾರಾಮ್ । ಯ ಇದಂ ತ್ರಿಸುಪರ್ಣಮಯಾಚಿತಂ ಬ್ರಾಹ್ಮಣಾಯ ದದ್ಯಾತ್ । ವೀರಹತ್ಯಾಂ ವಾ ಏತೇ ಘ್ನಂತಿ । ಯೇ ಬ್ರಾಹ್ಮಣಾಸ್ತ್ರಿಸುಪರ್ಣಂ ಪಠಂತಿ । ತೇ ಸೋಮಂ ಪ್ರಾಪ್ನುವಂತಿ । ಆಸಹಸ್ರಾತ್ ಪಂಕ್ತಿಂ ಪುನಂತಿ ॥ ಓಮ್ ॥

## ವಿರಜಾಸೂಕ್ತ

ಹೆಸರಿಗೆ ತಕ್ಕಂತೆ ಜಪಿಸುವ ಸಾಧಕನ ಮನಸ್ಸಿನ ಒಳಗೆ ರಜಸ್ಸು ಎಂದರೆ ನಾನಾ ಬಗೆಯ ವಿಕಾರಗಳನ್ನು, ರಜೋಗುಣದ ಕಾರ್ಯವಾಗಿರತಕ್ಕಂತಹ ಕಾಮಕ್ರೋಧಾದಿ ವಿಕಾರಗಳನ್ನು ದೂರಮಾಡುವ ಪವಿತ್ರ ಮಂತ್ರವಾಗಿದೆ. ಎಂದೆಂದಿಗೂ ರಜೋಗುಣವನ್ನು ಮೀರಿ ನಿಂತ ರಮಾನಾರಾಯಣರನ್ನು ಆರಾಧಿಸಲು ಈ ಮಂತ್ರಗಳನ್ನು ಬಳಸಲಾಗುವುದು. ಇದರೊಡನೆ ಪವಿತ್ರವಾಗಿರತಕ್ಕಂತಹ ಎಳ್ಳು ಮತ್ತು ತುಪ್ಪವನ್ನು ಬಳಸಿ ಈ ವೇದಮಂತ್ರಗಳಿಂದ ಹೋಮವನ್ನು ನಡೆಸಲಾಗುತ್ತದೆ. ಇಂತಹ ಮಂತ್ರಪಠನವು ನಮ್ಮಲ್ಲಿ ವಿಶಿಷ್ಟವಾಗಿರುವ ಪರಮಾತ್ಮನ ಸನ್ನಿಧಾನವನ್ನು ತಂದುಕೊಡುತ್ತದೆ.

ತಿಳಿದೋ ತಿಳಿಯದೆಯೋ ನಮ್ಮ ಜೀವನದಲ್ಲಿ ನಾವು ಕಳ್ಳರ ಅನ್ನವನ್ನು ಸ್ವೀಕರಿಸುತ್ತೇವೆ. ಶ್ರಾದ್ಧಭೋಜನವನ್ನು ಮಾಡುತ್ತೇವೆ. ಬ್ರಹ್ಮಜ್ಞಾನಿಗಳಿಗೆ ನಮ್ಮಿಂದ ಅಪಚಾರವಾಗುತ್ತದೆ. ಅಯೋಗ್ಯಸ್ತ್ರೀಸಂಗವನ್ನು ಮಾಡುವಂತಹ ಅಪಾಯಗಳಿದ್ದಾವೆ. ಗೋಹಿಂಸೆ, ಕಳ್ಳತನ, ಸುರಾಪಾನ, ಭ್ರೂಣಹತ್ಯೆ ಮೊದಲಾದ ಪಾಪಗಳಿಗೆ ಈ ಮಂತ್ರಪಠನವು ಮತ್ತು ಹೋಮವು ವಿಮುಕ್ತಿಯನ್ನು ಕೊಡುತ್ತದೆ.

**ಚೋರಸ್ಯಾನ್ನಂ ನವಶ್ರಾದ್ಧಂ ಬ್ರಹ್ಮಹಾ ಗುರುತಲ್ಪಗಃ |**
**ಗೋಸ್ತೇಯಂ ಚ ಸುರಾಪಾನಂ ಭ್ರೂಣಹತ್ಯಾ ತಿಲಾಶಾಂತಿಗುಂ ಶಮಯಂತು ಸ್ವಾಹಾ ||**

ಇತ್ಯಾದಿ ಮಂತ್ರಗಳು ಈ ವಿರಜಾ ಸೂಕ್ತದಲ್ಲಿ ಇರುತ್ತಿದ್ದು ನಮ್ಮಲ್ಲಿರುವ ಪಾಪವನ್ನು ನಾಶಮಾಡುತ್ತದೆ. ಶ್ರದ್ಧಾ, ಮೇಧಾ, ಪ್ರಜ್ಞಾ, ಇವುಗಳನ್ನು ನಮ್ಮಲ್ಲಿ ತಂದುಕೊಡುತ್ತದೆ. ನಮ್ಮ ಇಂದ್ರಿಯಗಳಲ್ಲಿ ಪ್ರಧಾನವಾಗಿ ಜ್ಞಾನೇಂದ್ರಿಯಗಳು

ಭಗವಂತನೆಡೆಗೆ ಸಾಗಬೇಕಿದೆ. ಈ ನಿಟ್ಟಿನಲ್ಲಿ "ವಾಙ್ಮನಶ್ಚಕ್ಷುಶ್ರೋತ್ರಜಿಹ್ವಾಘ್ರಾಣರೇತೋಬುದ್ಧ್ಯಾಕೂತಿಸಂಕಲ್ಪಾ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ" ಎಂಬ ಮಂತ್ರದ ಮೂಲಕ ವಾಗಿಂದ್ರಿಯ ಮನಸ್ಸು, ಕಣ್ಣು, ಕಿವಿ, ನಾಲಿಗೆ, ಘ್ರಾಣೇಂದ್ರಿಯ, ಜನನೇಂದ್ರಿಯ, ಬುದ್ಧಿ, ಪಂಚವಿಧವಾಗಿರತಕ್ಕಂತಹ ಮನಸ್ಸು ಇವೆಲ್ಲವೂ ಕೂಡ ಶುದ್ಧಿಯನ್ನು ಪಡೆದುಕೊಳ್ಳಲಿ ಎಂಬುದಾಗಿ ಇಲ್ಲಿ ಪ್ರಾರ್ಥನೆಯನ್ನು ನೆರವೇರಿಸಲಾಗುವುದು. ದೇಹದ ಒಳಗಿರುವ ಸಪ್ತಧಾತುಗಳು, ತ್ವಕ್, ಚರ್ಮ, ಮಾಂಸ, ರುಧಿರ, ಮೇಧಸ್ಸು, ಮಜ್ಜಾ, ಸ್ನಾಯು, ಅಸ್ಥಿ, ಇವುಗಳ ಶುದ್ಧಿಪ್ರಾರ್ಥನೆಯು ಈ ಮಂತ್ರದಲ್ಲಿ ಅಡಗಿದೆ. ತ್ವಕ್‌ಚರ್ಮ "..... ಸ್ವಾಹಾ." ಇದರಂತೆ ಕರ್ಮೇಂದ್ರಿಯಗಳಿಂದಲೂ ಕೂಡ ಆಗಬಹುದಾದ ಪಾಪಗಳಿಂದ ಬಿಡುಗಡೆಗಾಗಿ ಪ್ರಾರ್ಥಿಸಲಾಗಿದೆ. ಪಂಚತನ್ಮಾತ್ರಗಳು (ಶಬ್ದ, ಸ್ಪರ್ಶ, ರೂಪ, ರಸ, ಗಂಧ) ಶುದ್ಧವಾಗಲಿ, ನಮ್ಮ ಎಲ್ಲ ಇಂದ್ರಿಯಗಳೂ ಕೂಡ ಶುದ್ಧವಾಗಲಿ ಎಂಬ ಪ್ರಾರ್ಥನೆ ಇದರಲ್ಲಡಗಿದೆ. ಈ ಪವಿತ್ರ ಮಂತ್ರದ ಪ್ರಾರ್ಥನೆಯಿಂದ ಜೀವಿಯು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಕೋಶಗಳ ಒಳಗಿರುವ ಭಗವಂತನು, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಮತ್ತು ಇದರ ಒಳಗಿರುವ ಜೀವನಿಗೆ ಶುದ್ಧಿಯನ್ನು ತರುವುದಕ್ಕೆ ಪರಮಾನುಗ್ರಹ ಮಾಡುತ್ತಾನೆ. ಈ ದೃಷ್ಟಿಯಿಂದ ಈ ಮಂತ್ರದ ಪಠನವು ಅತ್ಯಂತ ಆವಶ್ಯಕವಾಗಿದೆ.

## ವಿರಜಾಸೂಕ್ತಮ್

ತಿಲಾಂ ಜುಹೋಮಿ ಸರಸಾಗ್ಂ ಸಪಿಷ್ಟಾನ್ ಗಂಧಾರ ಮಮ ಚಿತ್ತೇ ರಮಂತು ಸ್ವಾಹಾ । ಗಾವೋ ಹಿರಣ್ಯಂ ಧನಮನ್ನಪಾನಗ್ಂ ಸರ್ವೇಷಾಗ್ ಶ್ರಿಯೈ ಸ್ವಾಹಾ । ಶ್ರಿಯಂ ಚ ಲಕ್ಷ್ಮೀಂ ಚ ಪುಷ್ಟಿಂ ಚ ಕೀರ್ತಿಂ ಚಾನೃಣ್ಯತಾಮ್ । ಬ್ರಹ್ಮಣ್ಯಂ ಬಹುಪುತ್ರತಾಮ್ । ಶ್ರದ್ಧಾಮೇಧೇ ಪ್ರಜಾಸ್ಸಂದದಾತು ಸ್ವಾಹಾ ॥

ತಿಲಾಃ ಕೃಷ್ಣಾಸ್ತಿಲಾಶ್ಶ್ವೇತಾಸ್ತಿಲಾಸ್ಸೌಮ್ಯಾವಶಾನುಗಾಃ । ತಿಲಾಃ ಪುನಂತು ಮೇ ಪಾಪಂ ಯತ್ಕಿಂಚಿದ್ದುರಿತಂ ಮಯಿ ಸ್ವಾಹಾ । ಚೋರಸ್ಯಾನ್ನಂ ನವಶ್ರಾದ್ಧಂ ಬ್ರಹ್ಮಹಾ ಗುರುತಲ್ಪಗಃ । ಗೋಸ್ತೇಯಗ್ಂ ಸುರಾಪಾನಂ ಭ್ರೂಣಹತ್ಯಾ ತಿಲಾ ಶಾಂತಿಗ್ಂ ಶಮಯಂತು ಸ್ವಾಹಾ । ಶ್ರೀಶ್ಚ ಲಕ್ಷ್ಮೀಶ್ಚ ಪುಷ್ಟೀಶ್ಚ ಕೀರ್ತಿಂ ಚಾನೃಣ್ಯತಾಮ್ । ಬ್ರಹ್ಮಣ್ಯಂ ಬಹುಪುತ್ರತಾಮ್। ಶ್ರದ್ಧಾ ಮೇಧೇ ಪ್ರಜ್ಞಾ ತು ಜಾತವೇದಸ್ಸಂದದಾತು ಸ್ವಾಹಾ ॥

ಪ್ರಾಣಾಪಾನವ್ಯಾನೋದಾನಸಮಾನಾ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ। ವಾಙ್ಮನಶ್ಚಕ್ಷುಶ್ರೋತ್ರಜಿಹ್ವಾಘ್ರಾಣರೇತೋ ಬುದ್ಧ್ಯಾಕೂತಿಸ್ಸಂಕಲ್ಪಾ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ । ತ್ವಕ್‌ಚರ್ಮಮಾಗ್ಂಸರುಧಿರಮೇದೋಮಜ್ಜಾ ಸ್ನಾಯವೋಽಸ್ಥೀನಿ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ । ಶಿರಃಪಾಣಿಪಾದಪಾರ್ಶ್ವಪೃಷ್ಠೋದರಜಂಘಶಿಶ್ನೋಪಸ್ಥಪಾಯವೋ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ ।

ಉತ್ತಿಷ್ಠ ಪುರುಷ ಹರಿತಪಿಂಗಲ ಲೋಹಿತಾಕ್ಷಿ ದೇಹಿ ದೇಹಿ ದದಾಪಯಿತಾ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ । ಪೃಥಿವ್ಯಾಪಸ್ತೇಜೋ ವಾಯುರಾಕಾಶಾ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ । ಶಬ್ದ ಸ್ಪರ್ಶ ರೂಪ ರಸ ಗಂಧಾ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ । ಮನೋ ವಾಕ್ಕಾಯ ಕರ್ಮಾಣಿ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ । ಅವ್ಯಕ್ತ ಭಾವೈರಹಂಕಾರೈರ್ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ ।

ಆತ್ಮಾ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ । ಅಂತರಾತ್ಮಾ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ । ಪರಮಾತ್ಮಾ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ । ಕ್ಷುಧೇ ಸ್ವಾಹಾ । ಕ್ಷುತ್ಪಿಪಾಸಾಯ ಸ್ವಾಹಾ । ವಿವಿಟ್ಯೈ ಸ್ವಾಹಾ । ಋಗ್ವಿಧಾನಾಯ ಸ್ವಾಹಾ । ಕಷೋತ್ಕಾಯ ಸ್ವಾಹಾ । ಕ್ಷುತ್ಪಿಪಾಸಾಮಲಂ ಜ್ಯೇಷ್ಠಾಮಲಕ್ಷ್ಮೀರ್ನಾಶಯಾಮ್ಯಹಮ್ । ಅಭೂತಿಮಸಮೃದ್ಧಿಂ ಚ ಸರ್ವಾನ್ನಿರ್ಣುದ ಮೇ ಪಾಪ್ಮಾನಗ್ಂ ಸ್ವಾಹಾ । ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯಮಾನಂದಮಯಮಾತ್ಮಾ ಮೇ ಶುಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ ॥

## ಮೇಧಾಸೂಕ್ತ

ಮೇಧಾ ಶಬ್ದವು ವೇದಾಂತದ ರಹಸ್ಯ ವಿಜ್ಞಾನವನ್ನು ಪರಮಾತ್ಮನ ಮಂಗಲಸ್ವರೂಪವನ್ನೂ, ಬುದ್ಧಿಯಲ್ಲಿ ಧರಿಸಲು ಕಾರಣವಾದ ಧಾರಣಾಸಾಮರ್ಥ್ಯವನ್ನು ತಿಳಿಸುತ್ತದೆ. ಇಂತಹ ಮೇಧಾಶಕ್ತಿಯನ್ನು ಪರಮಾತ್ಮನು ಲಕ್ಷ್ಮೀದೇವಿಯೂ, ಸರಸ್ವತೀ, ಭಾರತೀಯರು ಕರುಣಿಸಬೇಕೆಂದು ಪ್ರಾರ್ಥಿಸುವ ಸೂಕ್ತವೇ ಮೇಧಾಸೂಕ್ತವಾಗಿದೆ. ಮೇಧಾಶಕ್ತಿಯ ಅಭಿಮಾನಿ ದೇವತೆಯು ಲಕ್ಷ್ಮೀ ಹಾಗೂ ಭಾರತೀಯರಾಗಿರುವರು. ಪರಮಾತ್ಮನ ಬಗ್ಗೆ ಗುರುಮುಖದಿಂದ ಕೇಳಿದ ಜ್ಞಾನವು ಮನಸ್ಸಿನಿಂದ ಹೊರಹೋಗದಂತೆ ಸತ್ಕಾರ್ಯದಲ್ಲಿ ಸದಾ ಜಾಗೃತವಾಗಿರುವಂತೆ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸಲಾಗಿದೆ. ಎಲ್ಲಾ ದೇವತೆಗಳೂ ಉತ್ತಮಾಧಿಕಾರಿಗಳೆನಿಸಿದ್ದು, ಋಷಿಗಳಿಗೆ, ಚಕ್ರವರ್ತಿಗಳಿಗೆ, ಮನುಷ್ಯೋತ್ತಮನಿಗೆ, ಪ್ರಜ್ಞಾ, ಮೇಧಾ, ವಿದ್ಯಾ, ಧೃತಿ, ಸ್ಮಿತಿ, ಬುದ್ಧಿ, ಮೊದಲಾದ ಸದ್ಗುಣಗಳಿಗೆ ಪ್ರೇರಕರಾಗಿದ್ದಾರೆ. ಅಂತಹ ಧಾರಣಾಶಕ್ತಿಯನ್ನು ಪ್ರಾರ್ಥಿಸುವ ಹಿನ್ನಲೆಯಲ್ಲಿ ಈ ಮಂತ್ರವು ಪ್ರವೃತ್ತವಾಗಿದೆ.

## ಮೇಧಾಸೂಕ್ತಮ್

ಮೇಧಾದೇವೀ ಜುಷಮಾಣಾ ನ ಆಗಾದ್ವಿಶ್ವಾಚೀ ಭದ್ರಾ ಸುಮನಸ್ಯಮಾನಾ । ತ್ವಯಾ ಜುಷ್ಟಾ ನುದಮಾನಾ ದುರುಕ್ತಾನ್ ಬೃಹದ್ವದೇಮ ವಿದಥೇ ಸುವೀರಾಃ । ತ್ವಯಾ ಜುಷ್ಟ ಋಷಿರ್ಭವತಿ ದೇವಿ ತ್ವಯಾ ಬ್ರಹ್ಮಾಗತಶ್ರೀರುತ ತ್ವಯಾ । ತ್ವಯಾ ಜುಷ್ಟಶ್ಚಿತ್ರಂ ವಿಂದತೇ ವಸು ಸಾ ನೋ ಜುಷಸ್ವ ದ್ರವಿಣೋ ನ ಮೇಧೇ ॥

ಮೇಧಾಂ ಮ ಇಂದ್ರೋ ದದಾತು ಮೇಧಾಂ ದೇವೀ ಸರಸ್ವತೀ । ಮೇಧಾಂ ಮೇ ಅಶ್ವಿನಾವುಭಾವಾಧತ್ತಾಂ ಪುಷ್ಕರಸ್ರಜಾ । ಅಪ್ಸರಾಸು ಚ ಯಾ ಮೇಧಾ ಗಂಧರ್ವೇಷು ಚ ಯನ್ಮನಃ । ದೈವೀಂ ಮೇಧಾ ಸರಸ್ವತೀ ಸಾ ಮಾಂ ಮೇಧಾ ಸುರಭಿರ್ಜುಷತಾಗ್ ಸ್ವಾಹಾ ॥

ಆಮಾಂ ಮೇಧಾ ಸುರಭಿರ್ವಿಶ್ವರೂಪಾ ಹಿರಣ್ಯವರ್ಣಾ ಜಗತೀ ಜಗಮ್ಯಾ । ಊರ್ಜಸ್ವತೀ ಪಯಸಾ ಪಿನ್ವಮಾನಾ ಸಾ ಮಾಂ ಮೇಧಾ ಸುಪ್ರತೀಕಾ ಜುಷಂತಾಮ್ ॥ ಮಯಿ ಮೇಧಾಂ ಮಯಿ ಪ್ರಜಾಂ ಮಯ್ಯಗ್ನಿಸ್ತೇಜೋ ದಧಾತು ಮಯಿ ಮೇಧಾಂ ಮಯಿ ಪ್ರಜಾಂ ಮಯೀಂದ್ರ ಇಂದ್ರಿಯಂ ದಧಾತು ಮಯಿ ಮೇಧಾಂ ಮಯಿ ಪ್ರಜಾಂ ಮಯಿ ಸೂರ್ಯೋ ಭ್ರಾಜೋ ದಧಾತು ॥

## ಆಯುಷ್ಯರ್ಚಃ

### ಋಗ್ವೇದಸಂಹಿತಾ

ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಂ ಸಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ ॥ ೧ ॥

ಪುನಃ ಪುನರ್ಜಾಯಮಾನಾ ಪುರಾಣೀ ಸಮಾನಂ ವರ್ಣಮಭಿಶುಂಭಮಾನಾ । ಶ್ವಘ್ನೀವ ಕೃತ್ನುರ್ವಿಜ ಆಮಿನಾನಾ ಮರ್ತಸ್ಯ ದೇವೀ ಜರಯಂತ್ಯಾಯುಃ ॥ ೨ ॥

ದ್ರವಿಣೋದಾ ದ್ರವಿಣಸಸ್ತುರಸ್ಯ ದ್ರವಿಣೋದಾಃ ಸನರಸ್ಯ ಪ್ರಯಂಸತ್ । ದ್ರವಿಣೋದಾ ವೀರವತೀಮಿಷಂ ನೋ ದ್ರವಿಣೋದಾ ರಾಸತೇ ದೀರ್ಘಮಾಯುಃ ॥ ೩ ॥

ಉದೀರ್ಧ್ವಂ ಜೀವೋ ಅಸುರ್ನ ಆಗಾದಪಪ್ರಾಗಾತ್ತಮ ಆ ಜ್ಯೋತಿರೇತಿ । ಆರೈಕ್ಪಂಥಾಂ ಯಾತವೇ ಸೂರ್ಯಾಯಾಗನ್ಮ ಯತ್ರ ಪ್ರತಿರಂತ ಆಯುಃ ॥ ೪ ॥

ದಕ್ಷಿಣಾವತಾಮಿದಿಮಾನಿ ಚಿತ್ರಾ ದಕ್ಷಿಣಾವತಾಂ ದಿವಿ ಸೂರ್ಯಾಸಃ । ದಕ್ಷಿಣಾವಂತೋ ಅಮೃತಂ ಭಜಂತೇ ದಕ್ಷಿಣಾವಂತಂ ಪ್ರತಿರಂತ ಆಯುಃ ॥ ೫ ॥

ಇಮೇ ಭೋಜಾ ಅಂಗಿರಸೋ ವಿರೂಪಾ ದಿವಸ್ಪುತ್ರಾಸೋ ಅಸುರಸ್ಯ ವೀರಾಃ । ವಿಶ್ವಾಮಿತ್ರಾಯ ದದತೋ ಮಘಾನಿ ಸಹಸ್ರಸಾವೇ ಪ್ರತಿರಂತ ಆಯುಃ ॥ ೬ ॥

ಯಥಾ ಹ ತ್ಯದ್ವಸವೋ ಗೌರ್ಯಂ ಚಿತ್ಪದಿ ಷಿತಾಮಮುಂಚತಾ ಯಜತ್ರಾಃ । ಏವೋ ಷ್ವ (ಅ) ೧ ಸ್ಮನ್ಮುಂಚತಾ ವ್ಯಂಹಃ ಪ್ರತಾರ್ಯಗ್ನೇ ಪ್ರತರಂ ನ ಆಯುಃ ॥ ೭ ॥

ಯಶಸ್ಕರಂ ಬಲವಂತಂ ಪ್ರಭುತ್ವಂ ತಮೇವ ರಾಜಾಧಿಪತಿರ್ಬಭೂವ । ಸಂಕೀರ್ಣನಾಗಾಶ್ವಪತಿರ್ನರಾಣಾಂ ಸುಮಂಗಲ್ಯಂ ಸತತಂ ದೀರ್ಘಮಾಯುಃ ॥ ೮ ॥

ಗೋಮಾಯುರದಾದಜಮಾಯುರದಾತ್ಪೃಶ್ನಿರದಾದ್ಧರಿತೋ ನೋ ವಸೂನಿ । ಗವಾಂ ಮಂಡೂಕಾ ದದತಃ ಶತಾನಿ ಸಹಸ್ರಸಾವೇ ಪ್ರತಿರಂತ ಆಯುಃ ॥ ೯ ॥

ಇಂದ್ರಾ ವರುಣಾ ಸೌಮನಸಮದೃಪ್ತಂ ರಾಯಸ್ಪೋಷಂ ಯಜಮಾನೇಷು ಧತ್ತಮ್ । ಪ್ರಜಾಂ ಪುಷ್ಟಿಂ ಭೂತಿಮಸ್ಮಾಸು ಧತ್ತಂ ದೀರ್ಘಾಯುತ್ವಾಯ ಪ್ರತಿರತಂ ನ ಆಯುಃ ॥ ೧೦ ॥

ವೃಷ್ಟಿಂ ದಿವಃ ಶತಧಾರಃ ಪವಸ್ವ ಸಹಸ್ರಸಾ ವಾಜಯುರ್ದೇವವೀತೌ । ಸಂ ಸಿಂಧುಭಿಃ ಕಲಶೇ ವಾವಶಾನಃ ಸಮುಸ್ರಿಯಾಭಿಃ ಪ್ರತಿರನ್ನ ಆಯುಃ ॥ ೧೧ ॥

ಸವಿತಾ ಪಶ್ಚಾತ್ತಾತ್ಸವಿತಾ ಪುರಸ್ತಾತ್ಸವಿತೋತ್ತರಾತ್ತಾತ್ಸವಿತಾಧರಾತ್ತಾತ್ । ಸವಿತಾ ನಃ ಸುವತು ಸರ್ವತಾತಿಂ ಸವಿತಾ ನೋ ರಾಸತಾಂ ದೀರ್ಘಮಾಯುಃ ॥ ೧೨ ॥

ನವೋ ನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಮ್ । ಭಾಗಂ ದೇವೇಭ್ಯೋ ವಿದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ ॥ ೧೩ ॥

ವಿದ್ಯುನ್ನ ಯಾ ಪತಂತೀ ದವಿದ್ಯೋದ್ಭರಂತೀ ಮೇ ಅಪ್ಯಾ ಕಾಮ್ಯಾನಿ । ಜನಿಷ್ಟೋ ಅಪೋ ನರ್ಯಃ ಸುಜಾತಃ ಪ್ರೋರ್ವಶೀ ತಿರತ ದೀರ್ಘಮಾಯುಃ ॥ ೧೪ ॥

ಉಚ್ಚಾ ದಿವಿ ದಕ್ಷಿಣಾವಂತೋ ಅಸ್ಥುರ್ಯೇ ಅಶ್ವದಾಃ ಸಹತೇ ಸೂರ್ಯೇಣ । ಹಿರಣ್ಯದಾ ಅಮೃತತ್ವಂ ಭಜಂತೇ ವಾಸೋದಾಃ ಸೋಮ ಪ್ರತಿರಂತ ಆಯುಃ ॥ ೧೫ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

# ಆಚಾರಮುಕ್ತಾವಲೀ

## ಏಕಾದಶೀವ್ರತ

ಏಕಾದಶೀವ್ರತ ಪ್ರತಿಯೊಬ್ಬ ಮನುಷ್ಯನಿಗೂ ಕಡ್ಡಾಯವಾಗಿ ವಿಧಿಸಲ್ಪಟ್ಟ ವ್ರತವಾಗಿದೆ. ಏಕಾದಶೀವ್ರತವನ್ನು ಆಚರಿಸುವುದು ಮಹಾಪುಣ್ಯಕರವಾಗಿರುವಂತೆ ಏಕಾದಶೀವ್ರತವನ್ನು ಆಚರಿಸದೇ ಇರುವುದೂ ಮಹಾಪಾಪಕರವೂ ಹೌದು.

ಶ್ರೀಮಧ್ವಾಚಾರ್ಯರು ಕೃಷ್ಣಾಮೃತಮಹಾರ್ಣವದಲ್ಲಿ ಶ್ರುತಿಸ್ಮೃತಿಗಳನ್ನು ಉದಾಹರಿಸುವ ಮೂಲಕ ಏಕಾದಶೀಮಹತ್ವವನ್ನು, ಇದರ ವೈಶಿಷ್ಟ್ಯವನ್ನು ವರ್ಣಿಸಿದ್ದಾರೆ -

**ಉಪವಾಸದ ಮಹತ್ವ**

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ |
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಮ್ ||

ಸಾವಿರಾರು ಅಶ್ವಮೇಧಯಾಗಗಳು, ನೂರಾರು ವಾಜಪೇಯ ಯಾಗಗಳು, ಏಕಾದಶೀ ಉಪವಾಸದ ಹದಿನಾರನೆಯ ಒಂದಂಶಕ್ಕೂ ಸಾಟಿಯಾಗಲಾರದು. ಹಾಗೆಯೇ ಸಾವಿರಾರು ಗ್ರಹಣಗಳು, ವ್ಯತೀಪಾತಗಳು, ಲಕ್ಷಗಟ್ಟಲೆ ಅಮಾವಾಸ್ಯೆಯಾಗಲೀ, ಏಕಾದಶೀವ್ರತದ ಒಂದಂಶಕ್ಕೂ ಸಾಟಿಯಾಗುವುದಿಲ್ಲ.

ರಟಂತೀಹ ಪುರಾಣಾನಿ ಭೂಯೋ ಭೂಯೋ ವರಾನನೇ |
ನ ಭೋಕ್ತವ್ಯಂ ನ ಭೋಕ್ತವ್ಯಂ ಸಂಪ್ರಾಪ್ತೇ ಹರಿವಾಸರೇ ||

ರುದ್ರದೇವರು ಹೇಳುತ್ತಾರೆ - ಎಲ್ಲಾ ಸಾತ್ವಿಕಪುರಾಣಗಳೂ, ಪುನಃ ಪುನಃ ಸಾರುತ್ತಿರುವ ವಿಷಯಗಳೆಂದರೆ ಏಕಾದಶಿಯಂದು ಉಣ್ಣಲೇಬಾರದು.

**ಏಕಾದಶೀದಿನದಂದು ಏಕೆ ಆಹಾರವರ್ಜ್ಯ ?**

ಪೃಥಿವ್ಯಾನಿ ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ |
ಅನ್ನಮಾಶ್ರಿತ್ಯ ತಿಷ್ಠಂತಿ ಸಂಪ್ರಾಪ್ತೇ ಹರಿವಾಸರೇ ||

ಜಗತ್ತಿನಲ್ಲಿ ಪ್ರಸಿದ್ಧವಿರುವ ಬ್ರಹ್ಮಹತ್ಯೆ ಮೊದಲಾದ ಎಲ್ಲಾ ಪಾತಕಗಳೂ ಏಕಾದಶೀದಿನದಂದು ತಿನ್ನುವ ಆಹಾರದಲ್ಲಿ ನೆಲೆಸಿರುತ್ತದೆ. ಆದ್ದರಿಂದ ಈ ದಿನದ ಅನ್ನವನ್ನು ಉಣ್ಣುವ ಜೀವಿಯು ಪಾಪವನ್ನು ಹೊಂದುತ್ತಾನೆ.

**ಏಕಾದಶೀ ಉಪವಾಸಕ್ಕೆ ವಯೋಮಾನ**

ಅಷ್ಟವರ್ಷಾಧಿಕೋ ಯಸ್ತು ಅಶೀತಿರ್ನಹಿ ಪೂರ್ಯತೇ |
ಯೋ ಭುಂಕ್ತೇ ಮಾನವಃ ಪಾಪೋ ವಿಷ್ಣೋರಹನಿ ಚಾಗತೇ ||

ರುಕ್ಮಾಂಗದರಾಜನು - ಎಂಟು ವರ್ಷಕ್ಕಿಂತ ಮೇಲೆ, ಎಂಬತ್ತು ವರ್ಷದೊಳಗಿನ ಜೀವಿಯು ಶ್ರೀಹರಿಯ ದಿನವಾದ ಏಕಾದಶಿಯಂದು ಊಟ ಮಾಡುವನೋ ಅವನು ಪಾಪಿ (ದಂಡಾರ್ಹ) ಎಂಬುದಾಗಿ ಹೇಳಿದ್ದಾನೆ. ಆದ್ದರಿಂದ 8 ರಿಂದ 80 ವರ್ಷಗಳ ವಯೋಮಾನದವರು ಉಪವಾಸವನ್ನು ಮಾಡಲೇಬೇಕು.

**ಉಪವಾಸಕ್ಕೆ ಅಧಿಕಾರಿಗಳು**

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತಥಾ |
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ಭರ್ತೃಮತೀ ತಥಾ ||

ಅಭರ್ತೃಕಾ ತಥಾಽನ್ಯೇ ವಾ (ಚ) ಸೂತವೈದೇಹಿಕಾದಯಃ |
ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ||

ಚತುರಾಶ್ರಮಿಗಳಾದ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಹಾಗೂ ಸಂನ್ಯಾಸಿಗಳು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಸವರ್ಣದವರು, ಸ್ತ್ರೀಯರಲ್ಲಿ ಸುಮಂಗಲಿಯರು, ವಿಧವೆಯರು, ವರ್ಣಬಾಹ್ಯರೂ ಒಟ್ಟಾರೆ ಎಲ್ಲರೂ ಉಪವಾಸಕ್ಕೆ ಅಧಿಕಾರಿಗಳು.

ಇಂತಹ ಪವಿತ್ರವಾದ ಏಕಾದಶೀತಿಥಿಗೆ ಅಭಿಮಾನಿ ದೇವತೆಯು ಸಾಕ್ಷಾತ್ ಹರಿಯೇ ಆಗಿದ್ದಾನೆ. ಆದ್ದರಿಂದಲೇ ಇದಕ್ಕೆ "ಹರಿದಿನ" ಎಂದೂ ಹೆಸರು. ಹರಿದಿನ ಎಂಬ ಕಾರಣದಿಂದಲೇ ಏಕಾದಶೀದಿನಕ್ಕೆ ಹೆಚ್ಚಿನ ಮಹತ್ವವೂ ಕೂಡ. ಉಪವಾಸದ ಜೊತೆಗೆ ವಿಷಯಭೋಗಗಳನ್ನು ತ್ಯಜಿಸಿ ಆ ದಿನದಂದು ಭಗವಂತನ ಪೂಜೆ, ಸಚ್ಛಾಸ್ತ್ರಗಳ ಶ್ರವಣ, ಮನನಗಳಲ್ಲಿ ಕಳೆಯುವುದು ಈ ಏಕಾದಶೀ ವ್ರತದ ಮುಖ್ಯಕಾರ್ಯವಾಗಿದೆ.

**ಸಂಕಲ್ಪ**

ದಶಮಿ ದಿನ ಏಕಭುಕ್ತರಾಗಿ ಸಾಯಂಕಾಲ ದೇವರ ಪೂಜೆ ಮಾಡಿ, ಸಂಕಲ್ಪ ಮಾಡಬೇಕು -

....ಶುಭತಿಥೌ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಮ್ ಏಕಾದಶ್ಯಾಮ್ ಉಪವಾಸಂ, ಪರಶ್ವಃ ದ್ವಾದಶ್ಯಾಂ ಪಾರಣಂ ಚ ಕರಿಷ್ಯೇ.

ಏಕಾದಶ್ಯಾಂ ನಿರಾಹಾರಃ ದ್ವಾದಶ್ಯಾಂ ತು ಪರೇಽಹನಿ |
ಭೋಕ್ಷ್ಯಾಮಿ ಪುಂಡರೀಕಾಕ್ಷ ಪ್ರಸನ್ನೋ ಭವ ಮೇಽಚ್ಯುತ ||

ಎಂದು ಪ್ರಾರ್ಥಿಸಬೇಕು.

ಏಕಾದಶಿಯಂದು ದೇವಪೂಜೆಯಲ್ಲಿ ರಮಾಬ್ರಹ್ಮಾದಿಗಳಿಗೆ, ಕಲಶ ಶಂಖ ಪ್ರಾಣದೇವರು ಮತ್ತು ವೃಂದಾವನಗಳಿಗೆ ಒಂದು ಸಲ ತೀರ್ಥ ನಿರ್ಮಾಲ್ಯ ತುಲಸಿಗಳನ್ನರ್ಪಿಸಬೇಕು. ಗಂಧ ಪುಷ್ಪ ಅಲಂಕಾರ ಮತ್ತು ನೈವೇದ್ಯವಿಲ್ಲ. ದೇವರಿಗೂ ಅನ್ನ ಭಕ್ಷ್ಯಗಳನ್ನು ನಿವೇದಿಸಕೂಡದು. (ಸ್ವಯಂವ್ಯಕ್ತ ಪ್ರತಿಮೆಗಳನ್ನು ಹೊರತುಪಡಿಸಿ) ಹಾಲು ಹಣ್ಣು ನಿವೇದಿಸುವ ಸಂಪ್ರದಾಯವು ಕೆಲವು ಕಡೆ ಇದೆ. ತೀರ್ಥದಲ್ಲಿ ಗಂಧೋದಕ ಬೆರಸಬಾರದು. ನಾವೂ ತೀರ್ಥವನ್ನು ಒಮ್ಮೆ ಮಾತ್ರ ಸೇವಿಸಬೇಕು. ತುಲಸೀದಲಭಕ್ಷಣ, ತರ್ಪಣ, ತಿಲೋದಕ, ಶ್ರಾದ್ಧ ಪಿಂಡದಾನಾದಿಗಳಿಲ್ಲ. ದಂತಧಾವನ, ಅಭ್ಯಂಗ, ಅಲಂಕಾರ, ನಿದ್ರಾ ಇತ್ಯಾದಿ ವರ್ಜ್ಯ.

ದ್ವಾದಶಿ ಪಾರಣಾನಂತರ,

ಏಕಾದಶ್ಯುಪವಾಸೇನ ದ್ವಾದಶ್ಯಾಂ ಪಾರಣೇನ ಚ |
ಯದಾರ್ಜಿತಂ ಮಯಾ ಪುಣ್ಯಂ ತೇನ ಪ್ರೀಣಾತು ಕೇಶವಃ ||

"ಮಯಾ ಕೃತೇನ ಏಕಾದಶ್ಯುಪವಾಸೇನ ದ್ವಾದಶೀಪಾರಣೇನ ಚ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್" ಎಂದು ಕೃಷ್ಣಾರ್ಪಣ ಬಿಡಬೇಕು.

## ಗ್ರಹಣ ವಿಚಾರ

ಗ್ರಹಣದ ಹಿನ್ನಲೆ :-

ದೇವತೆಗಳು ಮತ್ತು ದೈತ್ಯರು ಸಮುದ್ರ ಮಥನ ನಡೆಸಿದಾಗ ಕೊನೆಯಲ್ಲಿ ಅಮೃತವು ಪ್ರಾದುರ್ಭಾವವಾಗುತ್ತದೆ. ಅದನ್ನು ಭಗವಂತನು ಮೋಹಿನೀ ರೂಪವನ್ನು ತಾಳಿ ದೇವತೆಗಳು ಮತ್ತು ದೈತ್ಯರನ್ನು ಪ್ರತ್ಯೇಕವಾಗಿ ಕುಳ್ಳಿರಿಸಿ ದೈತ್ಯರು ಕಣ್ಣುಮುಚ್ಚುವಂತೆ ಮಾಡಿ ದೇವತೆಗಳಿಗೆ ಮಾತ್ರ ಅಮೃತವನ್ನು ಉಣಬಡಿಸುತ್ತಾನೆ. ಈ ನಡುವೆ ಅಮೃತಪಾನಕ್ಕಾಗಿ ಸಾವಿರ ಜನ್ಮಗಳಲ್ಲಿ ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿ ವರ ಪಡೆದಿದ್ದ ರಾಹುವೆಂಬ ರಾಕ್ಷಸನು ಮಾಯೆಯಿಂದ ದೇವತಾರೂಪವನ್ನು ಧರಿಸಿ ದೇವತೆಗಳ ಸಾಲಿನ ಕೊನೆಯಲ್ಲಿ ಕುಳಿತ. ಮೋಹಿನಿಯು ಅವನ ಕೈಗೆ ಅಮೃತವನ್ನು ಹಾಕಿದಾಗ ಅತಿಯಾದ ಸಂತೋಷದಿಂದ ಒಂದು ಕ್ಷಣ ಮೈಮರೆತ. ಇದನ್ನು ಮುಂಚೆಯೇ ನೋಡಿದ ಸೂರ್ಯಚಂದ್ರರು ಭಗವಂತನಿಗೆ ದೈತ್ಯನೆಂದು ಸೂಚಿಸಿದರು. ಭಗವಂತ ಪುರುಷರೂಪವನ್ನು ತಳೆದು ರಾಹುವಿನ ಶಿರಸ್ಸನ್ನು ಛೇದ ಮಾಡಿದ. ಆದರೆ ಅಷ್ಟರಲ್ಲಿ ರಾಹು ಅಮೃತಪಾನ ಮಾಡಿಯಾಗಿತ್ತು. ಶಿರಸ್ಸು ತುಂಡಾದರೂ ಕ್ಷಣಕಾಲ ಮುಂಡದ ಮೇಲೆ ಅದು ನಿಂತಿದ್ದರಿಂದ ಅಮೃತ ಕೆಳಭಾಗಕ್ಕೂ ಇಳಿಯಿತು. ಹೀಗೆ ರುಂಡ-ಮುಂಡಗಳೆರಡೂ ಚಿರಕಾಲ ಉಳಿಯುವಂತಾಯಿತು. ಆ ರುಂಡವು ನೂರು ಮಂದಿ ಕೇತುವೆಂಬ ಹೆಸರಿನ ದೇವತೆಗಳಿಂದ ಆವಿಷ್ಟವಾಗಿ ಗ್ರಹವಾಯಿತು. ಕೆಳಭಾಗವನ್ನು ಭಗವಂತನು ಸಮುದ್ರಕ್ಕೆಸೆದನು. ಹೀಗೆ ಗ್ರಹವಾದ ರಾಹುವಿನ ಶಿರಸ್ಸಿನಲ್ಲಿ ದೇವತೆಗಳು ಸನ್ನಿಹಿತರಾಗಿದ್ದರೂ ಅಲ್ಲಿ ರಾಹುವಿನ ಅಂಶವೂ ಇರುವುದರಿಂದ ಅವನು ಮಾತ್ರ ತನ್ನ ಈ ದುರವಸ್ಥೆಗೆ ಕಾರಣರಾದ ಸೂರ್ಯ ಮತ್ತು ಚಂದ್ರರನ್ನು ಅವರು ಸಂತೋಷವಾಗಿರುವ ಪರ್ವಕಾಲದಲ್ಲಿ ದ್ವೇಷದಿಂದ ನುಂಗಲು ಬರುತ್ತಾನೆ. ಹೀಗೆ ನುಂಗಿದರೂ ಜೀರ್ಣಿಸಿಕೊಳ್ಳಲು ಬೇಕಾಗುವ ಜಠರ ಅವನಲ್ಲಿ ಇಲ್ಲದಿರುವುದರಿಂದ ಬಾಯಲ್ಲಿ ಒಳ ಹೋದ ಸೂರ್ಯಚಂದ್ರರು ಕಂಠದಿಂದ ಹೊರ ಬರುತ್ತಾರೆ. ಇದನ್ನೇ ಲೋಕದಲ್ಲಿ ಗ್ರಹಣ ಎಂದು ವ್ಯವಹರಿಸುತ್ತಾರೆ.

ಜ್ಯೋತಿಶ್ಶಾಸ್ತ್ರದ ಅಭಿಪ್ರಾಯ - ಯಾವಾಗಲೂ ಸಂಚಾರಶೀಲರಾದ ಗ್ರಹರು ಆಕಾಶದಲ್ಲಿ ಸಂಚರಿಸುತ್ತಿರುತ್ತಾರೆ. ಹೀಗೆ ಸಂಚರಿಸುವ ಸಮಯದಲ್ಲಿ ಭೂಮಿ, ಸೂರ್ಯ ಹಾಗೂ ಚಂದ್ರರು ಒಂದೇ ರೇಖೆಯಲ್ಲಿ ಬರುತ್ತಾರೋ ಆಗಲೇ ಗ್ರಹಣ ಸಂಭವಿಸುವುದು. ಹೀಗೆ ಬರುವಾಗ "ಸೂರ್ಯ ಹಾಗೂ ಭೂಮಿಯ ನಡುವೆ ಚಂದ್ರನು ಬಂದರೆ ಇದು ಸೂರ್ಯಗ್ರಹಣ." "ಚಂದ್ರ ಹಾಗೂ ಸೂರ್ಯರ ನಡುವೆ ಭೂಮಿ ಬಂದರೆ ಅದು ಚಂದ್ರಗ್ರಹಣ."

ಹೀಗೆ ರಾಹುವು ಸೂರ್ಯಚಂದ್ರರನ್ನು ಹಿಡಿಯುವ ಕಾಲವನ್ನು ಜ್ಯೋತಿಷ್ಯಜ್ಞರು ಸಾಧಿಸಿ ತೋರಿಸುವುದರಿಂದ ಗ್ರಹಣಕಾಲವನ್ನು ಪೂರ್ವದಲ್ಲೇ ತಿಳಿದುಕೊಂಡು, ಆ ಕಾಲದಲ್ಲಿ ಯೋಗ್ಯ ರೀತಿಯಲ್ಲಿ ಸತ್ಕರ್ಮಾಚರಣೆಯನ್ನು ಮಾಡಲು ಸಾಧ್ಯವಾಗಿದೆ. ಈ ಗ್ರಹಣ ಕಾಲದಲ್ಲಿ ನಾವು ಮಾಡುವ ಸತ್ಕರ್ಮಗಳು ವಿಶೇಷ ಪುಣ್ಯವನ್ನು ನೀಡುತ್ತವೆ.

**ಸರ್ವಂ ಭೂಮಿಸಮಂ ದಾನಂ ಸರ್ವೇ ಬ್ರಹ್ಮ ಸಮಾ ದ್ವಿಜಾಃ |**
**ಸರ್ವಂ ಗಂಗಾಸಮಂ ತೋಯಂ ಗ್ರಹಣೇ ಚಂದ್ರಸೂರ್ಯಯೋಃ ||**

ಗ್ರಹಣಸಮಯದಲ್ಲಿ ನಾವು ಮಾಡಿದ ಎಲ್ಲಾ ದಾನವೂ ಭೂಮಿಯನ್ನೇ ದಾನ ಮಾಡಿದಂತೆ, ಎಲ್ಲ ಬ್ರಾಹ್ಮಣರು ಬ್ರಹ್ಮದೇವರಿಗೆ ಸದೃಶರು. ಎಲ್ಲಾ ನೀರು ಪವಿತ್ರವಾದ ಗಂಗೆಯ ನೀರಿಗೆ ಸಮನಾಗಿದೆ. ಹೀಗಾಗಿ ಎಲ್ಲರೂ ಪ್ರಯತ್ನಪೂರ್ವಕವಾಗಿ ಸತ್ಕರ್ಮಗಳನ್ನು ನಡೆಸಬೇಕು. ಭಾನುವಾರದಂದು ಸೂರ್ಯಗ್ರಹಣವಾದರೆ ಅಥವಾ ಸೋಮವಾರದಂದು ಚಂದ್ರಗ್ರಹಣವಾದರೆ ಇದನ್ನು ಚೂಡಾಮಣಿಯೋಗ ಎಂದು ಹೇಳುತ್ತಾರೆ. ಉಳಿದ ವಾರಗಳಲ್ಲಿ ಗ್ರಹಣ ಕಾಲಗಳಲ್ಲಿ ಏನೇನು ಸತ್ಕರ್ಮಗಳಿಂದ ಪುಣ್ಯ ಬರುತ್ತದೆಂದು ಹೇಳಿದ್ದಾರೋ ಅದರ ಕೋಟಿಪಟ್ಟು ಪುಣ್ಯಫಲವನ್ನು ಈ

ಚೂಡಾಮಣಿಯೋಗದಲ್ಲಿ ಪಡೆಯುತ್ತಾನೆ ಎಂಬುದಾಗಿ ವ್ಯಾಸಸ್ಮೃತಿಯಲ್ಲಿ ಹೇಳಲಾಗಿದೆ. ಇಂತಹ ಗ್ರಹಣದ ಸಂದರ್ಭದಲ್ಲಿ ಕೆಲವು ಕರ್ಮಗಳು ವರ್ಜಿಸಬೇಕಾದವು ಎಂಬುದಾಗಿ ಶಾಸ್ತ್ರಗಳಲ್ಲಿ ಹೇಳಿದೆ. ಅದರಲ್ಲಿ ಮುಖ್ಯವಾಗಿ ಆಹಾರ ಸೇವನೆ ಗ್ರಹಣಕಾಲದಲ್ಲಿ ವರ್ಜ್ಯವಾಗಿದೆ. ಅಂದರೆ ಗ್ರಹಣಕಾಲದಲ್ಲಿ ಉಪವಾಸವಿರಬೇಕು. ಅಷ್ಟಲ್ಲದೆ ಉಪವಾಸವು ಗ್ರಹಣಕ್ಕಿಂತ ಮೊದಲು ಕೆಲವು ಕಾಲ ವಿಹಿತವಾಗಿದೆ. ಸೂರ್ಯಗ್ರಹಣ ಕಾಲಕ್ಕಿಂತ ಮೊದಲು ನಾಲ್ಕು ಯಾಮಗಳಷ್ಟು ಕಾಲ ಊಟ ಮಾಡಬಾರದು. ಚಂದ್ರಗ್ರಹಣಕಾಲಕ್ಕಿಂತ ಮೊದಲು ಮೂರು ಯಾಮಗಳಲ್ಲಿ ಊಟ ಮಾಡಬಾರದು. ಒಂದು ಯಾಮ ಎಂದರೆ ಏಳೂವರೆ ಘಳಿಗೆ - 3 ಘಂಟೆಗಳಷ್ಟು ಕಾಲ.

**ಸೂರ್ಯಗ್ರಹೇ ತು ನಾಶ್ನೀಯಾತ್ ಪೂರ್ವಂ ಯಾಮಚತುಷ್ಟಯಮ್ |**
**ಚಂದ್ರಗ್ರಹೇ ತು ಯಾಮಾಂ ಸ್ತ್ರೀಂ ಬಾಲವೃದ್ಧಾತುರೈರ್ವಿನಾ ||**

ಆದರೆ ಮಕ್ಕಳಿಗೂ, ವೃದ್ಧರಿಗೂ ಹಾಗೂ ರೋಗಿಗಳಿಗೂ ರಿಯಾಯಿತಿ ಇದೆಯೆಂಬುದನ್ನು ಈ ಸ್ಮೃತಿಯಲ್ಲಿ ನಾವು ಕಾಣಬಹುದು. ಇದಲ್ಲದೇ ಗ್ರಹಣ ಕಾಲದಲ್ಲಿ ವರ್ಜ್ಯವಾದ ಇನ್ನೂ ಕೆಲವು ನಿಯಮಗಳು ಹೀಗಿವೆ.

ಗ್ರಹಣಕಾಲದಲ್ಲಿ ನಿದ್ರಿಸಬಾರದು. ಒಂದು ವೇಳೆ ನಿದ್ರೆ ಮಾಡಿದರೆ ರೋಗಗಳು ಬಾಧಿಸುತ್ತವೆ. ಹೀಗೆಯೇ ಮೂತ್ರವಿಸರ್ಜನೆ ಮಾಡಿದರೆ ಕ್ರಿಮಿ ಜನ್ಮವೂ, ಮೈಥುನ ಮಾಡಿದರೆ ಹಂದಿಯ ಜನ್ಮವೂ, ಅಭ್ಯಂಗ ಮಾಡಿದರೆ ಕುಷ್ಠ ರೋಗವೂ, ಭೋಜನ ಮಾಡಿದರೆ ಅಧೋಗತಿಯೂ, ಯಾರನ್ನಾದರೂ ಬಂಧಿಸಿದರೆ ಸರ್ಪ ಜನ್ಮವೂ, ಹಿಂಸೆಯನ್ನು ನಡೆಸಿದರೆ ನರಕಗಮನವೂ ಫಲವಾಗಿರುವುದರಿಂದ ಇವುಗಳನ್ನು ಅವಶ್ಯವಾಗಿ ಬಿಡಬೇಕು.

ಗ್ರಹಣಕಾಲದಲ್ಲಿ ಸಿದ್ಧ ಪಡಿಸಿದ ಅನ್ನಗಳಿಗೆ ಗ್ರಹಣ ಸೂತಕವಿರುವುದರಿಂದ ಯಾವುದೇ ರೀತಿಯ ಸಿದ್ಧಪಡಿಸಿದ ಅನ್ನವನ್ನು ನಂತರ ಉಪಯೋಗಿಸುವಂತಿಲ್ಲ. ಆದರೆ ಕೆಲವೊಂದು ವಸ್ತುಗಳಿಗೆ ರಿಯಾಯಿತಿ ಇದೆ. ಔಷಧೋಪಚಾರವಾದ ಗಂಜಿ, ತೀರ್ಥಯಾತ್ರೆಯ ಕಾಲದಲ್ಲಿ ಕಟ್ಟಿಕೊಂಡ ಬುತ್ತಿ ತುಪ್ಪದಲ್ಲಿ ಕರಿದ ಪದಾರ್ಥಗಳು, ಬಹಳ ಪ್ರಮಾಣದಲ್ಲಿ ಸಂಗ್ರಹಿಸಿದ ನೀರು, ನಿತ್ಯ ಬಹಳ ಮಂದಿಗೆ ಅನ್ನದಾನ ನಡೆಯುವ ಸ್ಥಳದಲ್ಲಿ ಉಳಿದಿರುವ ಬಹು ಪ್ರಮಾಣದ ಅನ್ನ, ಹಾಲಿನಖೋವ, ತುಪ್ಪ, ಹಿಟ್ಟುಗಳು, ಎಣ್ಣೆಯಲ್ಲಿ ಕರಿದ ಪದಾರ್ಥಗಳು, ಎಣ್ಣೆಗಳು, ಮೊಸರು, ಬೆಣ್ಣೆ, ಮಜ್ಜಿಗೆ ಇವುಗಳಿಗೆ ಗ್ರಹಣ ಸೂತಕ ದೋಷವಿರುವುದಿಲ್ಲ. ಆದರೆ ಇವೆಲ್ಲವನ್ನೂ ದರ್ಭೆಯಿಂದ ಮುಚ್ಚಿರಬೇಕು. ಮುಚ್ಚಿದ್ದ ದರ್ಭೆಯನ್ನು ನಂತರ ಬೇರೆ ಕಾರ್ಯಗಳಿಗೆ ಉಪಯೋಗಿಸುವಂತಿಲ್ಲ. ಮುಂದೆ ಉಪಯೋಗಿಸಬೇಕಾದ ದರ್ಭೆಯನ್ನು ಭೂಮಿಯಲ್ಲಿ ಸ್ವಾಭಾವಿಕವಾಗಿ ಇರುವ ನೀರಿನಲ್ಲಿ ಮುಳುಗಿಸಿ ಇಡಬೇಕೆಂದು ದೇಶಾಚಾರವಿದೆ.

ಗ್ರಹಣಕಾಲದಲ್ಲಿ ಎಲೆ, ಹುಲ್ಲು, ಮರ, ಹೂವುಗಳನ್ನು ಕೊಯ್ಯಬಾರದು. ಕೂದಲನ್ನಾಗಲೀ ಬಟ್ಟೆಯನ್ನಾಗಲೀ ಹಿಂಡಬಾರದು, ಹಲ್ಲುಗಳನ್ನು ಶೋಧಿಸಬಾರದು, ಬೈಗುಳ ಮೊದಲಾದ ಕಠಿಣ ಮಾತುಗಳನ್ನು ಆಡಬಾರದು. ಭೋಜನ ಹಾಗೂ ಸ್ತ್ರೀಪುರುಷ ಸಂಸರ್ಗ ಕೂಡದು. ಆನೆ, ಕುದುರೆ, ಮೊದಲಾದ "ವಾಹನಗಳನ್ನು" ಏರಬಾರದು. ಹಸು, ಎಮ್ಮೆ ಮೊದಲಾದ ಪ್ರಾಣಿಗಳ ಹಾಲನ್ನು ಹಿಂಡಬಾರದು. ಪ್ರಯಾಣ ಕೂಡದು. ಹಾಸಿಗೆಯನ್ನು ಬಳಸಬಾರದು (ನಿದ್ರಿಸಬಾರದು.)

ಗ್ರಹಣ ಕಾಲದಲ್ಲಿ ನಡೆಸಬೇಕಾದ ಕರ್ಮಗಳು ಹೀಗಿವೆ. ಪ್ರಧಾನವಾಗಿ ಗ್ರಹಣಕಾಲದಲ್ಲಿ ಸ್ನಾನ, ಜಪ, ದೇವತಾರ್ಚನೆ, ಹೋಮ ಹಾಗೂ ದಾನ ಮಾಡಬೇಕು. ಗ್ರಹಣಕಾಲದಲ್ಲಿ ಪ್ರತಿಯೊಂದು ಸತ್ಕರ್ಮಗಳು ವಿಶೇಷ ಫಲವನ್ನು ನೀಡುತ್ತದೆ.

ಗ್ರಹಣದ ಪ್ರಾರಂಭದಲ್ಲಿ ಒಮ್ಮೆ ಸ್ನಾನ, ಗ್ರಹಣ ಮುಗಿದ ನಂತರ ಇನ್ನೊಮ್ಮೆ ಸ್ನಾನ ಹೀಗೆ ಎರಡು ಬಾರಿ ಸ್ನಾನ ಗ್ರಹಣಕ್ಕೆ ಸಂಬಂಧಿಸಿದಂತೆ ವಿಹಿತವಾಗಿದೆ. ಗ್ರಹಣ ಹಿಡಿಯುತ್ತಿರಬೇಕಾದರೆ ಸ್ನಾನ ಮಾಡಬೇಕು. ನಂತರ ಜಪ, ಹೋಮಗಳನ್ನು ಮಾಡಬೇಕು. ಅಂತ್ಯದಲ್ಲಿ ದಾನವನ್ನು ಮಾಡಬೇಕು. ಗ್ರಹಣ ಮುಗಿದ ನಂತರ ಮತ್ತೆ ಸ್ನಾನ ಮಾಡಬೇಕು ಎಂಬುದಾಗಿ

ಸ್ಮೃತಿ ಹೇಳುತ್ತದೆ. ಗ್ರಹಣಕಾಲದಲ್ಲಿ ಮಾಡುವ ಸ್ನಾನವನ್ನು ಉಟ್ಟ ಬಟ್ಟೆಯೊಂದಿಗೆ ಮಾಡಬೇಕು. ಅದಲ್ಲದೇ ಸೂತಕ, ಮೃತಕ, ರಜಸ್ವಲಾ ಮೊದಲಾದ ಆಶೌಚವಿದ್ದರೂ ಗ್ರಹಣ ಪುಣ್ಯಕಾಲದಲ್ಲಿ ಅವರಿಗೆ ಆ ಪ್ರಯುಕ್ತ ಮೈಲಿಗೆಯಿಲ್ಲ. ಅವರು ಸ್ನಾನ ಮಾಡಿ ಜಪ, ಹೋಮಾದಿಗಳನ್ನು ಮಾಡಬೇಕು. ಎಲ್ಲಾ ವರ್ಣದವರಿಗೂ ಗ್ರಹಣದ ಮೈಲಿಗೆ ಇರುತ್ತದೆ. ಅದಕ್ಕಾಗಿ ಗ್ರಹಣದ ಆರಂಭದಲ್ಲಿ ಕರ್ಮ ನಡೆಸಲು ಬೇಕಾಗುವ ಶುದ್ಧಿಗಾಗಿ ಸ್ನಾನವನ್ನು ಮಾಡಬೇಕು. ಗ್ರಹಣ ಮುಗಿದ ನಂತರ ಗ್ರಹಣ ಸೂತಕದ ಶುದ್ಧಿಗಾಗಿ ಸ್ನಾನ ವಿಹಿತವಾಗಿದೆ. ಒಂದು ವೇಳೆ ಗ್ರಹಣ ಮುಗಿದ ಮೇಲೆ ಸ್ನಾನ ಮಾಡದೇ ಇದ್ದರೆ ಇನ್ನೊಂದು ಗ್ರಹಣ ಬರುವವರೆವಿಗೂ ಅವರಿಗೆ ಗ್ರಹಣದ ಅಶುದ್ಧಿ ಇದ್ದು, ಅವರು ಬೇರೆ ಯಾವ ಕರ್ಮಗಳನ್ನೂ ಮಾಡುವುದಕ್ಕೆ ಅರ್ಹರಾಗುವುದಿಲ್ಲ. ಆದ್ದರಿಂದ ಗ್ರಹಣಕಾಲದಲ್ಲಿ ಉಟ್ಟ ಬಟ್ಟೆಯೊಂದಿಗೆ ಸ್ನಾನ ಮಾಡಿ, ಗ್ರಹಣ ಮುಗಿದ ನಂತರ ಶುದ್ಧಿಸ್ನಾನವಾಗುವ ತನಕ ಬೇರೆ ಯಾವ ಪದಾರ್ಥಗಳನ್ನೂ ಮುಟ್ಟಬಾರದು.

ಸೂರ್ಯಗ್ರಹಣವಾಗಲೀ, ಚಂದ್ರಗ್ರಹಣವಾಗಲೀ ಉದಯಕ್ಕೆ ಮೊದಲೇ ಸಂಭವಿಸಿ ನಂತರ ಸೂರ್ಯೋದಯ, ಚಂದ್ರೋದಯಗಳು ಸಂಭವಿಸಿದರೆ ಗ್ರಹಣಾರಂಭ ಸ್ನಾನವನ್ನು ಗ್ರಹಣ ನೋಡಿಯೇ ಅಂದರೆ ಉದಯದ ನಂತರವೇ ಮಾಡಬೇಕು. ಅದೇ ರೀತಿ ಗ್ರಹಣ ಮುಗಿದ ನಂತರ ಮಾಡಬೇಕಾದ ಸ್ನಾನವನ್ನು ಶುದ್ಧ ರವಿಬಿಂಬ ಹಾಗೂ ಚಂದ್ರಬಿಂಬವನ್ನು ನೋಡಿಯೇ ಮಾಡಬೇಕು. ಅಂದರೆ ಒಂದು ವೇಳೆ ಗ್ರಹಣಯುಕ್ತರಾಗಿಯೇ ಸೂರ್ಯಚಂದ್ರರು ಅಸ್ತಂಗತರಾದರೆ ನಂತರ ಸೂರ್ಯೋದಯ ಅಥವಾ ಚಂದ್ರೋದಯವಾದ ನಂತರವೇ ಮುಕ್ತಿಸ್ನಾನ ಮಾಡಬೇಕು. ಈ ಸ್ನಾನದಿಂದಲೇ ಗ್ರಹಣಸೂತಕವು ಶುದ್ಧವಾಗುವುದು. ಆದರೆ ಮೋಡ ಮೊದಲಾದವುಗಳಿಂದ ಸೂರ್ಯೋದಯ ಕಾಲದಲ್ಲಿ ಅಥವಾ ಚಂದ್ರೋದಯ ಕಾಲದಲ್ಲಿ ಸೂರ್ಯಚಂದ್ರರ ಬಿಂಬವು ಕಾಣದೇ ಹೋದರೆ ಗಣಿತದಿಂದ ಉದಯಕಾಲವನ್ನು ತಿಳಿದು ಮುಕ್ತಿಸ್ನಾನ ಮಾಡಬೇಕು.

**ಗ್ರಹಣ ಕಾಲದಲ್ಲಿ ಸ್ನಾನ** :- ಗ್ರಹಣ ಕಾಲದಲ್ಲಿ ಮಾಡುವ ಸ್ನಾನಕ್ಕೆ ಮನೆಯ ಬಾವಿಯ ನೀರಿಗಿಂತ ಬೇರೆ ಕಡೆಯ ನೀರು ಶ್ರೇಷ್ಠ. ಅದರಲ್ಲಿಯೂ ಬಿಸಿ ನೀರಿಗಿಂತ ತಣ್ಣೀರು ಶ್ರೇಷ್ಠ. ಬೇರೆಯವರ ಮನೆಯ ನೀರಿಗಿಂತ ತನ್ನ ಮನೆಯ ನೀರು, ಸಂಗ್ರಹಿಸಿದ ನೀರಿಗಿಂತ ಭೂಮಿಯಲ್ಲಿ ನಿಂತ ನೀರು, ನಿಂತ ನೀರಿಗಿಂತ ಹರಿಯುವ ನೀರು, ಅದಕ್ಕಿಂತ ಸರೋವರದ ನೀರು, ಸರೋವರಕ್ಕಿಂತ ನದಿಯ ನೀರು, ನದಿಯ ನೀರಿಗಿಂತ ಪುಣ್ಯತೀರ್ಥಗಳ ನೀರು, ಅವುಗಳಿಗಿಂತ ಸಮುದ್ರ ಸೇರುವ ಮಹಾನದಿಗಳ ನೀರು ಅಂತಹ ಎಲ್ಲಾ ನದಿಗಳ ನೀರಿಗಿಂತ ಗಂಗಾ ನದಿಯ ನೀರು, ಗಂಗಾ ನದಿಯ ನೀರಿಗಿಂತಲೂ ಸಮುದ್ರದ ನೀರು, ಹೀಗೆ ಗ್ರಹಣ ಕಾಲದಲ್ಲಿ ಶ್ರೇಷ್ಠವಾಗಿವೆ.

**ಯತ್ರ ಪುಂಸಃ ಸಚೈಲಂ ಸ್ಯಾತ್ ಸ್ನಾನಂ ತತ್ರ ಸುವಾಸಿನೀ |**
**ಕುರ್ವೀತ್ಯೈವ ಶಿರಃಸ್ನಾನಂ ಶಿರೋರೋಗೀ ಜಟೀ ತಥಾ ||**

ಗ್ರಹಣಕಾಲದಲ್ಲಿ ತಣ್ಣೀರಿನಿಂದಲೇ ಸ್ನಾನ ಮಾಡಬೇಕು. ಆದರೆ ರೋಗಪೀಡಿತರು, ಗರ್ಭಿಣಿಯರು, ಅಶಕ್ತರು ಇಂತಹ ವ್ಯಕ್ತಿಗಳು ಬಿಸಿ ನೀರಿನ ಸ್ನಾನವನ್ನಾದರೂ ಮಾಡಬೇಕು. ಸುವಾಸಿನೀ ಸ್ತ್ರೀಯರು, ಜಟಾಧಾರಣೆ ಮಾಡಿದವರು, ಶಿರೋರೋಗಿಗಳು ತಲೆಯನ್ನು ಬಿಟ್ಟು ಕಂಠದವರೆಗೆ ಸ್ನಾನ ಮಾಡಬಹುದು.

**ಸ್ನಾನೇ ನೈಮಿತ್ತಿಕೇ ಪ್ರಾಪ್ತೇ ನಾರೀ ಯದಿ ರಜಸ್ವಲಾ |**
**ಪಾತ್ರಾಂತರಿತತೋಯೇನ ಸ್ನಾನಂ ಕೃತ್ವಾ ವ್ರತಂ ಚರೇತ್ ||**

ರಜಸ್ವಲೆಯರಿಗೆ ಮೂರು ದಿನಗಳಲ್ಲಿ ಸ್ನಾನ ವರ್ಜ್ಯವಾಗಿದ್ದರೂ ಗ್ರಹಣ ಕಾಲದಲ್ಲಿ ಪಾತ್ರೆಗಳಲ್ಲಿ ಸಂಗ್ರಹಿಸಿದ ನೀರಿನಿಂದ ಅವರೂ ಸ್ನಾನ ಮಾಡಲೇಬೇಕು. ಆದರೆ ಅವರು ದೇಹ ಒದ್ದೆಯಾಗಲು ಎಷ್ಟು ನೀರು ಬೇಕೋ ಅಷ್ಟೇ ನೀರನ್ನು ಬಳಸಬೇಕು. ಹಾಗೂ ವಸ್ತ್ರವನ್ನು ಹಿಂಡಬಾರದು. ಮತ್ತು ಬೇರೆ ವಸ್ತ್ರವನ್ನು ತೊಡಬಾರದು. ಒದ್ದೆ ವಸ್ತ್ರವನ್ನೇ ಉಳಿಸಿಕೊಳ್ಳಬೇಕು ಎಂಬುದಾಗಿ ಅರ್ಥ.

ಗ್ರಹಣಕಾಲದಲ್ಲಿ ಜಪ :- ಗ್ರಹಣ ಕಾಲದಲ್ಲಿ ಎಲ್ಲರೂ ಕೂಡ ಸ್ನಾನವಾದ ನಂತರ ತಮ್ಮ ತಮ್ಮ ಇಷ್ಟದೇವತಾ ಮಂತ್ರಗಳನ್ನು ಯಥಾಶಕ್ತಿ ಜಪ ಮಾಡಲೇಬೇಕು. ಅದರಲ್ಲೂ ವಿಶೇಷವಾಗಿ ಗಾಯತ್ರೀಮಂತ್ರವನ್ನು ಜಪಿಸಬೇಕು. ಅಲ್ಲದೆ ಉಪದೇಶವಿದ್ದ ಎಲ್ಲಾ ಮಂತ್ರಗಳನ್ನು ಜಪಿಸುವುದು ವಿಹಿತವಾಗಿದೆ. ಗ್ರಹಣಕಾಲದಲ್ಲಿ ಜಪಿಸದ ಮಂತ್ರವು ಅದರ ಪ್ರಭಾವವನ್ನು ಕಳೆದುಕೊಳ್ಳುತ್ತದೆ.

ಗ್ರಹಣವು ವಿಶೇಷ ಪುಣ್ಯಕಾಲವಾದ್ದರಿಂದ ಆ ಸಮಯದಲ್ಲಿ ಯೋಗ್ಯ ಗುರುಗಳಿಂದ ಮಂತ್ರೋಪದೇಶ ಪಡೆಯಬಹುದು. ಮಂತ್ರಸಿದ್ಧಿಯನ್ನು ಬಯಸುವವರು ಮನ್ಯುಸೂಕ್ತ ಪುರಶ್ಚರಣೆ, ವಾಯುಸ್ತುತಿ ಪುನಶ್ಚರಣೆ, ರಾಘವೇಂದ್ರ ಸ್ತೋತ್ರ ಪುನಶ್ಚರಣಾದಿಗಳನ್ನು ನಡೆಸಬಹುದು.

ಗ್ರಹಣಕಾಲದಲ್ಲಿ ದಾನ :- ಗ್ರಹಣಕಾಲದಲ್ಲಿ ಎಲ್ಲ ದಾನಗಳೂ ಭೂದಾನಕ್ಕೆ ಸಮನಾಗುತ್ತವೆ. ಎಲ್ಲಾ ಬ್ರಾಹ್ಮಣರೂ ಬ್ರಹ್ಮನಿಗೆ ಸದೃಶರು ಎಂಬುದಾಗಿ ದಾನಕ್ಕೆ ಬಹಳ ಮಹತ್ವವನ್ನು ನೀಡಿದ್ದಾರೆ. ಈ ಗ್ರಹಣಕಾಲದಲ್ಲಿ ದಾನಯೋಗ್ಯವಾದ ಬ್ರಾಹ್ಮಣನಿಗೆ ಯಾವುದೇ ದಾನ ಮಾಡುವುದಾದರೂ ದಕ್ಷಿಣೆ ಸಹಿತವಾಗಿ ದಾನವನ್ನು ಮಾಡಬೇಕು.

ದಾನ ಪಾತ್ರನಾದ ಬ್ರಾಹ್ಮಣನೆಂದರೆ ಒಳ್ಳೆಯ ರೀತಿಯ ವಿದ್ಯೆ ಹಾಗೂ ತಪಸ್ಸು ಇವೆರಡೂ ಇರುವವರು ಎಂದರ್ಥ. ಇಂತಹ ವ್ಯಕ್ತಿಗೆ ದಾನ ಮಾಡಿದರೆ ಅತಿಶಯವಾದ ಫಲ ಸಿಗುವುದು. ಗ್ರಹಣ ಕಾಲದಲ್ಲಿ ಶ್ರೋತ್ರಿಯನಾಗಲಿ, ಅಶ್ರೋತ್ರಿಯನಾಗಲಿ ಯಾವುದೇ ರೀತಿಯ ಸಂಸ್ಕಾರವಿಲ್ಲದೆ ಇರತಕ್ಕಂತಹ ಬ್ರಾಹ್ಮಣನೇ ಆಗಲಿ ಈ ಎಲ್ಲರೂ ಗ್ರಹಣ ಕಾಲದಲ್ಲಿ ದಾನಕ್ಕೆ ಯೋಗ್ಯರು.

ಹೀಗೆ ಗ್ರಹಣವು ಭಗವಂತನಿಂದ ಸಜ್ಜನರ ಅಭ್ಯುದಯಕ್ಕೋಸ್ಕರವೇ ನಿರ್ಮಿತವಾಗಿದ್ದು ಆ ಕಾಲದಲ್ಲಿ ಮಾಡುವ ಪ್ರತಿಯೊಂದು ಕರ್ಮಗಳೂ ಅನೇಕ ಪಟ್ಟು ಫಲಗಳನ್ನು ನೀಡುವುದರಿಂದ ಎಲ್ಲರೂ ಗ್ರಹಣಕಾಲದಲ್ಲಿ ವಿಹಿತವಾದ ಸತ್ಕರ್ಮಗಳನ್ನು ಪ್ರಯತ್ನಪೂರ್ವಕವಾಗಿ ಆಚರಿಸಿ ಭಗವಂತನ ವಿಶೇಷ ಅನುಗ್ರಹಕ್ಕೆ ಪಾತ್ರರಾಗಬೇಕು.

**ಸೂರ್ಯಗ್ರಹಣಸಮಯದಲ್ಲಿ ಸ್ನಾನ, ದಾನ ಕ್ರಮ :-**

**ಸ್ನಾನಸಂಕಲ್ಪ :-** ಆಚಮ್ಯ, ಪ್ರಾಣಾನಾಯಮ್ಯ, ಶ್ರೀ ಗೋವಿಂದ, ಗೋವಿಂದ .... ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭಪುಣ್ಯತಿಥೌ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಸೂರ್ಯಗ್ರಹಪೀಡಾಪರಿಹಾರಾರ್ಥಂ .... ನದೀಸ್ನಾನಮಹಂ ಕರಿಷ್ಯೇ ಎಂದು ಹೇಳಿ ಸ್ನಾನ ಮಾಡಿ ಅರ್ಘ್ಯಾದಿಗಳನ್ನು ಕೊಟ್ಟ ನಂತರ

"ನಾಗಪಾಶಧರೋ ದೇವೋ ವರುಣೋ ಮಕರವಾಹನಃ |
ಸಜಲಾಧಿಪತಿಃ ಸೂರ್ಯಗ್ರಹಪೀಡಾಂ ವ್ಯಪೋಹತು ||"

ಎಂದು ಅರ್ಘ್ಯವನ್ನು ಕೊಡಬೇಕು.

**ಗ್ರಹಣಶಾಂತಿ :-**

ಗರ್ಗಾಚಾರ್ಯಾದಿಗಳು ಹೇಳಿದಂತೆ ಗ್ರಹಣ ಶಾಂತಿ ಮಾಡಬೇಕು. ಅಥವಾ ಬೆಳ್ಳಿಯ ಸೂರ್ಯಬಿಂಬ, ಸ್ವರ್ಣದ ನಾಗಬಿಂಬ ಮಾಡಿ ತುಂಬಿದ ತಾಮ್ರ ಅಥವಾ ಕಂಚಿನ ಪಾತ್ರೆಯಲ್ಲಿಟ್ಟು ಪೂಜಿಸಿ ಸೂರ್ಯಾಂತರ್ಯಾಮಿ ಶ್ರೀಲಕ್ಷ್ಮೀನರಸಿಂಹಪ್ರೇರಣಯಾ ಶ್ರೀಲಕ್ಷ್ಮೀನರಸಿಂಹಪ್ರೀತ್ಯರ್ಥಂ ಸೂರ್ಯೋಪರಾಗಪೀಡಾಪರಿಹಾರಾರ್ಥಂ ಸನಾಗಸೂರ್ಯಬಿಂಬದಾನಮಹಂ ಕರಿಷ್ಯೇ ಎಂದು ಹೇಳುತ್ತಾ ಅಕ್ಷತೆ ನೀರು ಬಿಟ್ಟು,

"ತಮೋಮಯ ಮಹಾಭೀಮ ಸೋಮಸೂರ್ಯವಿಮರ್ದನ |
ಹೇಮತಾರಾಪ್ರದಾನೇನ ಮಮ ಶಾಂತಿಪ್ರದೋ ಭವ ||
ಅರ್ಧಕಾಯಂ ಮಹಾವೀರ್ಯಂ ಚಂದ್ರಾದಿತ್ಯವಿಮರ್ದನಮ್ |
ಸಿಂಹಿಕಾಗರ್ಭಸಂಭೂತಂ ತಂ ರಾಹುಂ ಪ್ರಣಮಾಮ್ಯಹಮ್ ||
ವಿಧುಂತುದ ನಮಸ್ತುಭ್ಯಂ ಸಿಂಹಿಕಾನಂದನಾಚ್ಯುತ |
ದಾನೇನಾನೇನ ನಾಗಸ್ಯ ರಕ್ಷ ಮಾಂ ವೇಧಜಾತ್ ಭಯಾತ್ ||"

ಎಂದು ದಕ್ಷಿಣಾಸಹಿತವಾಗಿ ದಾನ ಮಾಡಬೇಕು.

ಚಂದ್ರಗ್ರಹಣದಲ್ಲಿ ಸ್ನಾನಸಂಕಲ್ಪ :-

ಆಚಮ್ಯ ... ಪ್ರಾಣಾನಾಯಮ್ಯ.... ಶ್ರೀ ಗೋವಿಂದ ಗೋವಿಂದ.... ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭಪುಣ್ಯತಿಥೌ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ವಿಷ್ಣುಪ್ರೇರಣಯಾ ಶ್ರೀ ವಿಷ್ಣು ಪ್ರೀತ್ಯರ್ಥಂ ಚಂದ್ರಗ್ರಹಪೀಡಾಪರಿಹಾರಾರ್ಥಂ ..... ನದೀಸ್ನಾನಮಹಂ ಕರಿಷ್ಯೇ ಎಂದು ಹೇಳಿ ಸ್ನಾನ ಮಾಡಿ ಅರ್ಘ್ಯಾದಿಗಳನ್ನು ಕೊಟ್ಟ ನಂತರ

"ನಾಗಪಾಶಧರೋ ದೇವೋ ವರುಣೋ ಮಕರವಾಹನಃ |
ಸಜಲಾಧಿಪತಿಃ ಚಂದ್ರಗ್ರಹಪೀಡಾಂ ವ್ಯಪೋಹತು ||"

ಎಂದು ಅರ್ಘ್ಯವನ್ನು ಕೊಡಬೇಕು.

## ಆಶೌಚದಲ್ಲಿ ಧಾರ್ಮಿಕ ಆಚರಣೆ

ಜಾತಾಶೌಚ ಮತ್ತು ಮೃತಾಶೌಚದಲ್ಲಿ ಸಂಧ್ಯಾವಂದನೆಯ ಆಚರಣೆಯನ್ನು ಸ್ಮೃತಿಮುಕ್ತಾವಳೀಕಾರರಾದ ಶ್ರೀಕೃಷ್ಣಾಚಾರ್ಯರು ಹೀಗೆ ವಿವರಿಸಿದ್ದಾರೆ -

**ಸೂತಕೇ ಮೃತಕೇ ಕುರ್ಯಾತ್ ಪ್ರಾಣಾಯಾಮಂ ಅಮಂತ್ರಕಮ್ |**
**ತಥಾ ಮಾರ್ಜನಮಂತ್ರಾಂಸ್ತು ಮನಸೋಚ್ಚಾರ್ಯ ಮಾರ್ಜಯೇತ್ ||**
**ಗಾಯತ್ರೀಂ ಸಮ್ಯಗುಚ್ಚಾರ್ಯ ಸೂರ್ಯಾಯಾರ್ಘ್ಯಂ ನಿವೇದಯೇತ್ |**
**ಮಾರ್ಜನಂ ತು ನ ವಾ ಕುರ್ಯಾತ್ ಉಪಸ್ಥಾನಂ ನ ಚೈವ ಹಿ ||**

ಜಾತ ಮತ್ತು ಮೃತ ಎರಡೂ ಆಶೌಚದಲ್ಲಿ ಮಂತ್ರೋಚ್ಚಾರವಿಲ್ಲದೆ ಪ್ರಾಣಾಯಾಮ ಮನಸ್ಸಿನಿಂದ ಮಂತ್ರ ನೆನೆದು ಮಾರ್ಜನೆ, ಗಾಯತ್ರಿಯನ್ನುಚ್ಚರಿಸಿ ಸೂರ್ಯಾರ್ಘ್ಯ ಇಷ್ಟನ್ನು ಮಾಡಬಹುದು. ಮಾರ್ಜನವನ್ನು ಮಾಡದಿದ್ದರೂ ಸರಿಯೇ. ಇದರ ಹೊರತು ಬೇರಾವುದನ್ನೂ ಮಾಡಬಾರದು. ಧರ್ಮಸಿಂಧುವಿನಲ್ಲಿ **"ಅರ್ಘ್ಯಾಂತಾಂ ಮಾನಸೀಂ ಸಂಧ್ಯಾಂ ಇತ್ಯುಕ್ತೇಃ ಗಾಯತ್ರೀ ಜಪೋ ನ ಕಾರ್ಯಃ"** ಎಂಬುದಾಗಿ ಸ್ಪಷ್ಟವಾಗಿ ಗಾಯತ್ರೀ ಜಪವನ್ನು ನಿಷೇಧ ಮಾಡಲಾಗಿದೆ. ಅದೇ ಗ್ರಂಥದಲ್ಲಿ ಮುಂದೆ **"ಕೇಚಿತ್ ಮನಸಾ ದಶಗಾಯತ್ರೀ ಜಪಃ ಕಾರ್ಯಃ"** ಎಂದು ಹೇಳಿದೆ. ಕೆಲವರು ಮನಸ್ಸಿನಿಂದಲೇ ಹತ್ತು ಗಾಯತ್ರಿಯನ್ನು ಜಪಿಸಬೇಕು ಎಂಬುದಾಗಿ ಅಭಿಪ್ರಾಯ. ಈ ಮೇಲಿನ ಆಧಾರಗಳನ್ನು ಪರಿಶೀಲಿಸಿದರೆ ಗಾಯತ್ರಿಯನ್ನು ಜಪಿಸುವ ಸಂಪ್ರದಾಯವಿದ್ದವರು ಮಾತ್ರ ಅದನ್ನು ಮುಂದುವರೆಸಿಕೊಂಡು ಬರಬಹುದು ಎನಿಸುತ್ತದೆ. ಆದರೆ ಗಾಯತ್ರೀ

ಮಂತ್ರವನ್ನು ಸದಾಚಾರಸ್ಮೃತಿಯ ವ್ಯಾಖ್ಯಾನದಲ್ಲಿ ಆಹ್ನೀಕಕೌಸ್ತುಭ ಕೇಚಿತ್‌ಕಾರರ ಪಕ್ಷವನ್ನು ಹೇಳಿ ಇದು ಅಶಾಸ್ತ್ರೀಯ ಎಂದು ನಿಷೇಧಿಸಿರುವುದರಿಂದ ಎಲ್ಲರೂ ಜಪಿಸದಿರುವುದೇ ಸರಿಯಾದದ್ದು. ತಾಳವಾಚಾರದಲ್ಲಿರುವುದು ದಾಕ್ಷಿಣವ್ಯಾಖ್ಯಾನಕ್ಕೆ ಸಂಬಂಧ ಪಡುವುದಿಲ್ಲ. ಈ ನಿಯಮಕ್ಕೆ ವಿರುದ್ಧವಾಗಿ ಮಂತ್ರಗಳನ್ನು ಜಪಿಸಿದರೆ ಮಂತ್ರದ ಶಕ್ತಿ ಸಾಮರ್ಥ್ಯ ಕುಂದಿ ಇಷ್ಟಾರ್ಥ ಸಿದ್ಧಿಯಾಗುವುದಿಲ್ಲ.

**ವ್ರತಯಜ್ಞವಿವಾಹೇಷು ಶ್ರಾದ್ಧೇ ಹೋಮೇಽರ್ಚನೇ ಜಪೇ |**
**ಆರಬ್ಧೇ ಸೂತಕಂ ನ ಸ್ಯಾದನಾರಬ್ಧೇ ತು ಸೂತಕಮ್ ||**

ಆಶೌಚ ತಿಳಿಯುವ ಮೊದಲೇ ಜಪ, ಹೋಮ, ಮದುವೆ, ಶ್ರಾದ್ಧಾದಿಗಳು ಆರಂಭವಾಗಿದ್ದರೆ ಆ ದಿನದ ಆ ಕಾರ್ಯಕ್ಕೆ ಆಶೌಚದ ನಿಯಮ ಅನ್ವಯವಾಗುವುದಿಲ್ಲ ಎಂದು ಮತ್ಸ್ಯಪುರಾಣದಲ್ಲಿ ಉಲ್ಲೇಖವಾಗಿದೆ.

**ಆಶೌಚದಲ್ಲಿ ಸಾಲಿಗ್ರಾಮ ಸ್ಪರ್ಶ ನಿಷಿದ್ಧ**

**ಶಾಲಿಗ್ರಾಮೋ ನ ಸ್ಪ್ರಷ್ಟವ್ಯೋ ಹೀನವರ್ಣೈರ್ವಸುಂಧರೇ |**
**ಆಶೌಚಕರಸಂಸ್ಪರ್ಶೋ ವಜ್ರಸ್ಪರ್ಶಾಧಿಕೋ ಮತಃ ||**
**ಮೋಹಾದ್ಯಃ ಸಂಸ್ಪೃಶೇತ್ ಶೂದ್ರಃ ಯೋಷಿದ್ವಾಪಿ ಕದಾಚನ |**
**ಸ ಪತೇನ್ನರಕೇ ಘೋರೇ ಯಾವದಾಭೂತಸಂಪ್ಲವಮ್ ||**

ಆಶೌಚವಿದ್ದವರು ಮೋಹದಿಂದಾಗಲೀ, ಅಜ್ಞಾನದಿಂದಾಗಲೀ ಸಾಲಿಗ್ರಾಮವನ್ನು ಮುಟ್ಟಿದರೆ ಘೋರವಾದ ನರಕವನ್ನು ಹೊಂದುವರು. ಆಶೌಚದಲ್ಲಿ ಸ್ನಾನ ಮಾಡಿ ಮಾನಸಿಕ ಪೂಜೆಯನ್ನಷ್ಟೇ ಮಾಡಬೇಕು.

ಅಥ ಸೂತಕಿನಃ ಪೂಜಾಂ ವಕ್ಷ್ಯಾಮ್ಯಾಗಮಚೋದಿತಾಮ್ |
ಸ್ನಾತ್ವಾ ನಿತ್ಯಂ ಚ ನಿರ್ವರ್ತ್ಯ ಮಾನಸ್ಯಾ ಕ್ರಿಯಯಾ ತು ವೈ ||

ಕಂಕಣಬಂಧಪೂರ್ವಕ ದೀಕ್ಷೆ ಪಡೆದು ಪ್ರಾರಂಭ ಮಾಡಿದ ಪುನಶ್ಚರಣೆ, ಸ್ತೋತ್ರಪಾಠ, ಪುರಾಣಶ್ರವಣಗಳನ್ನು ಆಶೌಚದಲ್ಲಿ ಮುಂದುವರೆಸಬಹುದು. ಹೊರತು ನಿತ್ಯದ ಜಪಪಾರಾಯಣಗಳನ್ನು ನಿರ್ಣಯಸಿಂಧುವಿನಲ್ಲಿ ನಿಷೇಧಿಸಲಾಗಿದೆ. ಆದ್ದರಿಂದ ಆಶೌಚದಲ್ಲಿ ಹರಿನಾಮಸ್ಮರಣೆ, ದಾಸರಪದ ಪಠನಗಳನ್ನು ಬಿಟ್ಟು ಉಳಿದ ಯಾವ ಧಾರ್ಮಿಕ ಕ್ರಿಯೆಗಳನ್ನೂ ಮಾಡಬಾರದು.

ನಾನ್ನಪಾನಾದಿಕಂ ಶ್ರಾದ್ಧೇ ವಾರಯೇತ್ ಮುಖತಃ ಕ್ವಚಿತ್ |
ಅನಿಷ್ಟತ್ವಾದ್ ಬಹುತ್ವಾದ್ವಾ ವಾರಯೇತ್ ಹಸ್ತಸಂಜ್ಞಯಾ ||
ಅನ್ನಪಾನಾದಿಗಳನ್ನು ಶ್ರಾದ್ಧದಲ್ಲಿ ಬೇಡವೆಂದು ಬಾಯಿಯಿಂದ ಹೇಳಿ ನಿರಾಕರಿಸಬಾರದು. ದೇಹಕ್ಕೆ ಅಪಥ್ಯವಾದರೆ, ಹೆಚ್ಚಾದರೆ ಕೈಯಿಂದ ಸಂಜ್ಞೆಯ ಮೂಲಕ ನಿರಾಕರಿಸಬೇಕು.

## ಕ್ಷೌರ - ಆಯುಷ್ಕರ್ಮ

ಕ್ಷೌರವೂ ಸಹ ಒಂದು ಸಂಸ್ಕಾರ. ಈ ಸಂಸ್ಕಾರವನ್ನು ವಿಧಿಸಿದ ಕಾಲದಲ್ಲಿ ಮಾಡುವುದು ಎಷ್ಟು ಮುಖ್ಯವೋ, ಅನಂತರ ನಿಯಮದಂತೆ ಕ್ಷೌರ ಮಾಡಿಸುವುದೂ ಅಗತ್ಯವಾಗಿದೆ. ಈ ನಿತ್ಯ ಕ್ಷೌರಕ್ಕೂ ಶಾಸ್ತ್ರಗಳಲ್ಲಿ ಕೊಟ್ಟಿರುವ ಮಹತ್ವ ನೋಡಿದಾಗ ಇದರ ಪ್ರಾಮುಖ್ಯವನ್ನು ತಿಳಿಯಬಹುದು.

ಕ್ಷೌರ ವಿಷಯದಲ್ಲಿ ವಾರಫಲ ಈ ರೀತಿಯಾಗಿದೆ -

**ಚೌಲೇ ಭಯಂ ದಿನಕೃತೋ ದಿವಸಾಂಶಕೇಷು**
**ಚಂದ್ರಸ್ಯ ಕಾಂತಿರವನೀತನಯಸ್ಯ ಮೃತ್ಯುः |**
**ಚಾಂದ್ರೇಽಸ್ತು ರಾಜ್ಯವಿಭವೋ ವಿಜಯೋ ಗುರೋಶ್ಚ**
**ವ್ಯಾಧಿः ಶನೇರುಶನಸೋ ಭುವನಪ್ರಿಯತ್ವಮ್ ||** (ಮಾಧವೀಯ)

ಭಾನುವಾರ - ಭಯ, ಸೋಮವಾರ - ಕಾಂತಿ, ಮಂಗಳವಾರ - ಮೃತ್ಯು, ಬುಧವಾರ - ರಾಜ್ಯಸಂಪತ್ತು, ಗುರುವಾರ - ವಿಜಯ, ಶುಕ್ರವಾರ - ಲೋಕಪ್ರಿಯತೆ, ಶನಿವಾರ - ವ್ಯಾಧಿ. ಇದರಿಂದ ಸೋಮ, ಬುಧ, ಗುರು, ಶುಕ್ರ ಎಂಬ ನಾಲ್ಕು ಶುಭವಾರಗಳಲ್ಲಿ ಕ್ಷೌರ ಮಾಡಿಸಬಹುದೆಂದೂ, ಭಾನು, ಮಂಗಳ, ಶನಿ ಈ ಮೂರು ಅಶುಭ ವಾರಗಳಲ್ಲಿ ಕ್ಷೌರ ಮಾಡಿಸಬಾರದೆಂದು ತಿಳಿಯುತ್ತದೆ. ಆದರೆ ಭಾನುವಾರವೂ ಕ್ಷೌರ ಮಾಡಿಸಬಹುದೆಂದು ಶಾಸ್ತ್ರಕಾರರ ಅಭಿಪ್ರಾಯವಾಗಿದೆ.

**ಪಾಪಗ್ರಹಾಣಾಂ ವಾರೇಽಪಿ ವಿಪ್ರಾಣಾಂ ತು ಶುಭೋ ರವಿः |** (ಪ್ರಯೋಗಪಾರಿಜಾತ)
**ದೇವಕಾರ್ಯೇ ಪಿತುःಶ್ರಾದ್ಧೇ ರವೇರಂಶಪರೀಕ್ಷಯೋः |**
**ಕ್ಷೌರಕರ್ಮ ನ ಕುರ್ವೀತ ಜನ್ಮಮಾಸೇ ನ ಜನ್ಮಭೇ ||**

ದೇವಕಾರ್ಯ ಮತ್ತು ಪಿತೃಕಾರ್ಯ ದಿನಗಳಂದು, ಸಂಕ್ರಾಂತಿ, ಜನ್ಮಮಾಸ ಮತ್ತು ಜನ್ಮನಕ್ಷತ್ರ ಕ್ಷೌರ ಮಾಡಿಸಬಾರದು.

**ನಿಷಿದ್ಧ ತಿಥಿವಾರಾದೌ ಭೋಜನಾನಂತರಂ ಚ ಯः |**
**ಕ್ಷೌರಂ ಕರೋತಿ ತದ್ಗೇಹೇ ನಾಶ್ನಂತಿ ಪಿತರः ಸುರಾः ||**

ದಶಮೀ, ಏಕಾದಶೀ, ದ್ವಾದಶೀ ಈ ದಿನತ್ರಯಗಳಲ್ಲಿ, ಸಂಕ್ರಾಂತ್ಯಾದಿ ಪರ್ವದಿನಗಳಲ್ಲಿ, ಹುಣ್ಣಿಮೆ ಅಮಾವಾಸ್ಯಾದಿ ತಿಥಿಗಳು ಮತ್ತು ಊಟವಾದ ಮೇಲೆ, ಆಸನದಲ್ಲಿ ಕುಳಿತುಕೊಳ್ಳದೇ ಪ್ರಯಾಣಕ್ಕೆ ಹೊರಡುವ ಕಾಲದಲ್ಲಿ, ಒಮ್ಮೆ ಸ್ನಾನ ಮಾಡಿದ ನಂತರ, ಅಭ್ಯಂಗ ಸ್ನಾನದ ನಂತರ, ಬಂಗಾರಾದಿ ಒಡವೆ ಧರಿಸಿಕೊಂಡು, ಕ್ಷೌರವನ್ನು ಮಾಡಿಸುವವನ ಮನೆಗೆ ದೇವತೆಗಳು, ಪಿತೃಗಳು ಪ್ರವೇಶಿಸುವುದಿಲ್ಲ.

ಆದರೆ ಇದಕ್ಕೆ ಅಪವಾದವಾಗಿ ರಾಜಕಾರ್ಯದಲ್ಲಿ ನಿಯುಕ್ತರು, ನಟರು, ಸೌಂದರ್ಯದಿಂದ ಬದುಕುವವರು ಇವರಿಗೆ ಮೀಸೆ, ಕೂದಲು, ಉಗುರು ಕತ್ತರಿಸಲು ಸಮಯ ನಿಬಂಧನೆ ಇಲ್ಲ. (ಎಂದು ಬೇಕಾದರೂ ಕತ್ತರಿಸಬಹುದು)

**ರಾಜಕಾರ್ಯನಿಯುಕ್ತಾನಾಂ ನಟಾನಾಂ ರೂಪಜೀವಿನಾಮ್ |**
**ಶ್ಮಶ್ರುರೋಮನಖಚ್ಛೇದೇ ನಾಸ್ತಿ ಕಾಲವಿಧಿರ್ನೃಣಾಮ್ ||**

ತೀರ್ಥಾದಿಕ್ಷೇತ್ರ ನಿಮಿತ್ತವಾದ ಕ್ಷೌರವನ್ನು ನಿಷಿದ್ಧ ದಿನಗಳಲ್ಲಿಯೂ ಮಾಡಬಹುದು - "**ಕ್ಷೌರಂ ನೈಮಿತ್ತಿಕಂ ಕುರ್ಯಾತ್ ನಿಷೇಧೇ ಸತ್ಯಪಿ ಧ್ರುವಮ್**" ಎಂಬುದಾಗಿ ಶಾಸ್ತ್ರಗಳಲ್ಲಿ ಉಲ್ಲೇಖವಾಗಿವೆ.

ಹೀಗೆ ಕ್ಷೌರಕ್ಕೂ, ಆಯುಷ್ಯಕ್ಕೂ ಸಂಬಂಧವಿದೆ. ಆದ್ದರಿಂದಲೇ ಕ್ಷೌರಕ್ಕೆ ಆಯುಷ್ಕರ್ಮ ಎಂಬ ಶಬ್ದ ಪ್ರಸಿದ್ಧವಾಗಿದೆ. - "**ಚೌಲೇನೈವಾಯುಷೋವೃದ್ಧಿः ಚೌಲೇನೈವಾಯುಷः ಕ್ಷಯः**" ಆದ್ದರಿಂದ ಅಶುಭ ವಾರಗಳಲ್ಲಿ ಕ್ಷೌರವನ್ನು ಮಾಡಿಸಿದರೆ ಆಯುಷ್ಯ ಕ್ಷೀಣವಾಗುತ್ತದೆ. ಶುಭವಾರಗಳಲ್ಲಿ ಕ್ಷೌರವನ್ನು ಮಾಡಿಸುತ್ತಾ ದೀರ್ಘಾಯುಷ್ಯವನ್ನು ಹೊಂದಬಹುದು. ಆದ್ದರಿಂದಲೇ ಕ್ಷೌರವನ್ನು ಆಯುಷ್ಕರ್ಮ ಎನ್ನಲಾಗಿದೆ.

## ಧಾರ್ಮಿಕ ವಿಧಿಯಲ್ಲಿ ಉಂಗುರಧಾರಣೆ ಮಹತ್ವ

ಕೈಬೆರಳುಗಳಲ್ಲಿ ಉಂಗುರಗಳನ್ನು ಸಾಮಾನ್ಯವಾಗಿ ಎಲ್ಲರೂ ಧರಿಸುವವರು. ಆದರೆ ಅದು ಉಂಗುರಗಳ ಧಾರಣೆ ಶಾಸ್ತ್ರವಿಹಿತವೂ ಆಗಿದೆ.

**ಜಪೇ ಹೋಮೇ ತಥಾ ದಾನೇ ಸ್ವಾಧ್ಯಾಯೇ ಪಿತೃತರ್ಪಣೇ |**
**ಅನಾಮಿಕ್ಯಾಂ ಹೇಮ ಧಾರ್ಯಂ ತರ್ಜನ್ಯಂ ರೌಪ್ಯಮೇವ ಚ ||**

ಜಪ, ಹೋಮ, ದಾನ, ಸ್ವಾಧ್ಯಾಯ, ಪಿತೃತರ್ಪಣ ಮುಂತಾದ ಧಾರ್ಮಿಕ ಅಧ್ಯಾತ್ಮಿಕ ಕರ್ಮಗಳನ್ನು ನಡೆಸುವಾಗ ಕಿರುಬೆರಳು ಮತ್ತು ಮಧ್ಯಬೆರಳಿನ ನಡುವೆ ಇರುವ "ಉಂಗುರಬೆರಳು" ಎಂದು ಪ್ರಸಿದ್ಧವಾಗಿರುವ ಬೆರಳಿನಲ್ಲಿ ಚಿನ್ನದ ಪವಿತ್ರ ಉಂಗುರವನ್ನು ತೋರುಬೆರಳಿನಲ್ಲಿ ಬೆಳ್ಳಿಯ ಉಂಗುರವನ್ನು ಧರಿಸಬೇಕೆಂಬುದಾಗಿ ಶಾಸ್ತ್ರೋಕ್ತವಾಗಿದೆ. ಪಿತೃತರ್ಪಣವನ್ನು ನೀಡುವಾಗ ಉಂಗುರಗಳನ್ನು ಧರಿಸಿಕೊಂಡಲ್ಲಿ ಎಷ್ಟು ಪುಣ್ಯ ದೊರಕುವುದೆಂಬ ವಿಷಯವನ್ನು ಪದ್ಮಪುರಾಣದಲ್ಲಿ ಉಲ್ಲೇಖವಾಗಿದೆ :-

**ರೌಪ್ಯಾಂಗುಲೀಯಂ ತರ್ಜನ್ಯಾಂ ಧೃತ್ವಾ ಯತ್ತರ್ಪಯೇತ್ ಪಿತ್ನನ್ |**
**ಸರ್ವಂ ಚ ಶತಸಾಹಸ್ರಗುಣಂ ಭವತಿ ನಾನ್ಯಥಾ |**
**ತಥೈವಾನಾಮಿಕಾಯಾಂ ತು ಧೃತ್ವಾ ಸ್ವರ್ಣಾಂಗುಲೀಂ ಬುಧಃ |**
**ತರ್ಪಯೇತ್ ಪಿತೃಸಂದೋಹಂ ಲಕ್ಷಕೋಟಿಗುಣಂ ಭವೇತ್ ||**

ತೋರುಬೆರಳಿನಲ್ಲಿ ಬೆಳ್ಳಿಯ ಉಂಗುರವನ್ನು ಧರಿಸಿಕೊಂಡು ಪಿತೃಗಳಿಗೆ ತರ್ಪಣ ನೀಡಿದರೆ ಲಕ್ಷ ಪಟ್ಟು ಹೆಚ್ಚು ಪುಣ್ಯ ಲಭಿಸುತ್ತದೆ. ಉಂಗುರ ಬೆರಳಿನಲ್ಲಿ ಚಿನ್ನದ ಉಂಗುರವನ್ನು ಧರಿಸಿಕೊಂಡು ಪಿತೃತರ್ಪಣ ನಡೆಸಿದಲ್ಲಿ ಲಕ್ಷಕೋಟಿ ಪಟ್ಟು ಫಲ ದೊರಕುತ್ತದೆ. ಆದರೆ "ನ ರೂಪ್ಯಂ ಕೇವಲಂ ಧಾರ್ಯಂ ದೈವೇ ಪಿತ್ರೇ ಚ ಕರ್ಮಣಿ" ದೇವಕಾರ್ಯ ಮತ್ತು ಪಿತೃಕಾರ್ಯಗಳನ್ನು ನಡೆಸುವಾಗ ಕೇವಲ ಬೆಳ್ಳಿಯ ಉಂಗುರವನ್ನು ಧರಿಸಬಾರದೆಂದೂ ಎಚ್ಚರಿಸಲಾಗಿದೆ. ಹೀಗೆ ಉಂಗುರಧಾರಣೆಯ ಮಹತ್ವವನ್ನರಿತು ಉಂಗುರವನ್ನು ಧರಿಸಿ ಧಾರ್ಮಿಕಾನುಷ್ಠಾನ ನಡೆಸಿದಲ್ಲಿ ವಿಶೇಷ ಪುಣ್ಯ ಲಭಿಸುತ್ತದೆ. ಅಧಿಕಾರಿಗಳು ಮೂರು ಎಳೆ ಪವಿತ್ರದುಂಗುರವನ್ನೂ, ಉಳಿದವರು ಎರಡೆಳೆ ಪವಿತ್ರದುಂಗುರವನ್ನೂ ಧರಿಸತಕ್ಕದ್ದು.

**ಆತ್ಮ-ಶಯ್ಯಾ-ಆಸನಂ-ವಸ್ತ್ರಂ ಜಾಯಾಪತ್ಯಂ ಕಮಂಡಲುಃ |**
**ಶುಚೀನ್ಯಾತ್ಮನ ಏತಾನಿ ಪರೇಷಾಂ ಅಶುಚೀನಿ ತು ||**

ತಾನು, ಹಾಸಿಗೆ, ಆಸನ, ಬಟ್ಟೆ, ಪತ್ನಿ, ಮಕ್ಕಳು, ಜಲಪಾತ್ರೆ, ಇವು ಯಾರಿಗೆ ಸಂಬಂಧಿಸಿದೆಯೋ ಅದು ಅವರಿಗೆ ಶುದ್ಧ, ಮತ್ತೊಬ್ಬರಿಗೆ ಅಶುದ್ಧ.

## ಶಿಖಾ

ವಿಚಾರ - ಆಚಾರ - ವೇಷ - ಈ ಮೂರಕ್ಕೆ ಪರಸ್ಪರ ಪೂರಕತ್ವವನ್ನು ಪ್ರಾಚೀನರು ಕಂಡುಕೊಂಡಿದ್ದಾರೆ. ಹೆಚ್ಚಿನ ಸಂದರ್ಭಗಳಲ್ಲಿ ವೇಷವನ್ನು ಆಚಾರದಿಂದಲೇ ಗುರುತಿಸಲಾಗುವುದು. ಕೃಷ್ಣ, ಭೀಮ, ಅರ್ಜುನರು, ಜರಾಸಂಧನ ವಧೆಗೆ ಹೋಗುವಾಗ ನಿರಾಯುಧರಾಗಿ ಹೋಗಲು ನಿಶ್ಚಯಿಸಿದರಂತೆ. ಆದರೆ ಕ್ಷತ್ರಿಯವೇಷದಲ್ಲಿದ್ದಾಗ ಆಯುಧ ಇಲ್ಲದಿರುವುದು ತಪ್ಪು ಎಂಬ ಕಾರಣಕ್ಕೆ ಬ್ರಾಹ್ಮಣವೇಷದಲ್ಲಿ ಹೋಗಲು ನಿಶ್ಚಯಿಸಿದರಂತೆ. ಹೀಗೆ ಒಂದೊಂದು ವರ್ಣಕ್ಕೆ ಯೋಗ್ಯವಾದ ಕಾರ್ಯದಲ್ಲಿ ಅದಕ್ಕೆ ಹೊಂದುವ ವೇಷವನ್ನು ಧರಿಸುವುದು ಉಚಿತ ಎಂಬ ಆಶಯ ಇದರಿಂದ ತಿಳಿಯುವುದು. ಪ್ರಾಚೀನ ಕಾಲದಲ್ಲಿ ಬೇರೆ ಬೇರೆ ಶಾಖೆಯವರಿಗೆ ಬೇರೆ ಬೇರೆ ಸಂಖ್ಯೆಯ ಶಿಖೆಗಳು ಇದ್ದವು. ಇಂದು ಒಂದನ್ನಾದರೂ ಬಿಡುವುದು ಅತ್ಯವಶ್ಯ. ಇಂದಿಗೂ ಸೈನಿಕರಿಗೆ ಹೀಗೆ ತಲೆಕೂದಲನ್ನು ಕತ್ತರಿಸಬೇಕು, ಇಂತಹುದೇ ಸಮವಸ್ತ್ರವನ್ನು ಧರಿಸಬೇಕು ಎಂಬ ನಿಯಮಗಳನ್ನು ಗಮನಿಸಬಹುದು.

ಶಿಖಾಕ್ಕೆ ಸಂಬಂಧಿಸಿದಂತೆ ಕೆಲವು ಪ್ರಮಾಣಗಳನ್ನು ಇಲ್ಲಿ ನೀಡಲಾಗಿದೆ -

ಯಜ್ಞಸೂತ್ರವಿಹೀನಸ್ಸ್ಯಾದನರ್ಹಃ ಸರ್ವಕರ್ಮಸು |
ಸೂತ್ರಸ್ಯೈವ ಭವೇನ್ಮಂತ್ರಃ ಶಿಖಾಹೀನಶ್ಚ ತಾದೃಶಃ || (ಆಂಗೀರಸಸ್ಮೃತಿ)

ಶಿಖಾ ಮತ್ತು ಯಜ್ಞೋಪವೀತ ಇವೆರಡಕ್ಕೂ ಕರ್ಮಗಳಲ್ಲಿ ಸಮಾನ ಸ್ಥಾನವಿದೆ. ಇವೆರಡರಿಂದ ರಹಿತನಾದವನು ಎಲ್ಲ ಕರ್ಮಗಳ ಅನುಷ್ಠಾನಕ್ಕೂ ಅನಧಿಕಾರಿಯಾಗುತ್ತಾನೆ.

ಆಯುಷ್ಯ, ವಿದ್ಯಾ, ಬುದ್ಧಿ, ತೇಜಸ್ಸು, ಬಲ, ಇತ್ಯಾದಿಗಳನ್ನು ಬಯಸುವವರು ಈ ಶಿಖಾವನ್ನು ಧರಿಸಬೇಕೆಂದು ಆಹ್ನಿಕಕಾರಿಕಾದಲ್ಲಿ ಈ ರೀತಿಯಾಗಿ ಹೇಳಿದೆ -

ಚಿದ್ರೂಪಾಣಿಮಹಾಮಾಯೇ ದಿವ್ಯತೇಜಸಮನ್ವಿತೇ |
ತಿಷ್ಠ ದೇವಿ ಶಿಖಾಬಂಧೇ ತೇಜೋವೃದ್ಧಿಂ ಕುರುಷ್ವ ಮೇ ||

ಶಿಖಾಬಂಧನವೂ ಮುಖ್ಯ

ವಿನಾ ಯಜ್ಞೋಪವೀತೇನ ತಥಾ ಧೌತೇನ ವಾಸಸಾ |
ಶಿಖಾಂ ಮುಕ್ತ್ವಾ ವಾಪ್ಯಾಚಮೇತ್ ಕೃತಸ್ಯೈವ ಪುನಃ ಕ್ರಿಯಾ ||

ಯಜ್ಞೋಪವೀತವಿಲ್ಲದೇ, ಶಿಖಾಬಂಧನ ಮಾಡದೇ ಮಲಿನವಸ್ತ್ರಧಾರಣೆಯಿಂದ ಮಾಡಿದ ಸಕಲ ಕರ್ಮಗಳೂ ನಿಷ್ಫಲವಾಗುತ್ತವೆ. ಆದ್ದರಿಂದ ಎಲ್ಲಾ ಬ್ರಾಹ್ಮಣರೂ ಅವಶ್ಯವಾಗಿ ಶಿಖಾವನ್ನು ಧರಿಸಬೇಕು.

## ಹಸ್ತೋದಕ

"ಯತಿಶ್ಚ ಬ್ರಹ್ಮಚಾರೀ ಚ ಪಕ್ವಾನ್ನಸ್ವಾಮಿನಾವುಭೌ" ಎಂಬುದಾಗಿ ಸ್ಮೃತಿಕಾರರು - ಯತಿಗಳಿಗೆ ಅನ್ನದಾನವನ್ನು ಮಾಡದೇ ಗೃಹಸ್ಥರು ಭೋಜನವನ್ನು ಮಾಡುವಂತಿಲ್ಲ - ಎಂಬುದಾಗಿ ಆದೇಶಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಯತಿಗಳಿಗೆ ನಿತ್ಯವೂ ಅನ್ನದಾನವನ್ನು ಮಾಡಲೇಬೇಕು. ವಿಶೇಷವಾಗಿ ಅಪರೋಕ್ಷಜ್ಞಾನಿಗಳಾಗಿರತಕ್ಕಂತಹ ಶ್ರೀರಾಯರು, ವಿಜಯೀಂದ್ರರು, ಸುಧೀಂದ್ರತೀರ್ಥರು, ವಿಬುಧೇಂದ್ರತೀರ್ಥರು, ಜಿತಾಮಿತ್ರರೇ ಮೊದಲಾದ ಎಲ್ಲಾ ಅಪರೋಕ್ಷಜ್ಞಾನಿಗಳಿಗೆ ನಿತ್ಯವೂ ಮನೆಯಲ್ಲಿ ಹಸ್ತೋದಕವನ್ನು ಕೊಡುವಂಥದ್ದು ಅತ್ಯಂತ ಶ್ರೇಷ್ಠವಾಗಿದೆ. ಹಸ್ತೋದಕ ಸ್ವೀಕಾರವು ವೈಷ್ಣವರ ಮನೆಗಳಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿದೆ.

# ಸಂಗ್ರಹಮುಕ್ತಾವಲೀ

## ಕೆಲವು ಪಠನೀಯ ಶ್ಲೋಕಗಳು

**ವಿದ್ಯಾಸಿದ್ಧಿ**

'ಓಷ್ಠಾಪಿಧಾನಾ' ಎಂಬ ಋಕ್ಕನ್ನು ಪಠಿಸಿದರೆ ವಿದ್ಯಾಸಿದ್ಧಿಯಾಗುತ್ತದೆ.

**ಓಷ್ಠಾಪಿಧಾನಾ ನ ಕುಲೀ ದಂತ್ಯೈಃ ಪರಿವೃತಾ ಪವಿಃ |**
**ಸರ್ವಸ್ಮೈ ವಾಚ ಈಶಾನಾ ಚಾರು ಮಾಮಿಹ ವಾದಯೇತ್ ||**

ನಾಲಿಗೆಯಲ್ಲಿರುವ ವಿಷ್ಣುವಿನ ಸ್ತ್ರೀರೂಪಕ್ಕೆ ತುಟಿಗಳು ಬಾಗಿಲ ಕದಗಳಂತಿವೆ. ಆ ದೇವಿ ದೋಷದೂರಳು, ಸರ್ವರಕ್ಷಕಳು, ಸರ್ವೋತ್ತಮಳು. ಎಲ್ಲ ಶಬ್ದಗಳಿಗೂ ನಿಯಾಮಕಳು. ನನ್ನಿಂದ ಈ ಸಭೆಯಲ್ಲಿ ಆಕರ್ಷಕ ರೀತಿಯಲ್ಲಿ ಮಾತುಗಳನ್ನು ಆಡಿಸಲಿ.

(ಈ ಮಂತ್ರಜಪದಿಂದ ಉಪನ್ಯಾಸವು ಶ್ರೋತೃಗಳಿಗೆ ರುಚಿಸುವುದು. ಅದರಿಂದ ನಮಗೆ ಕೀರ್ತಿ ಲಭಿಸುವುದು.)

**ಅರ್ಜುನ ಪ್ರಾರ್ಥನಾ (ಸಿಡಿಲಿನ ಭಯಕ್ಕೆ)**

ಅರ್ಜುನಃ ಫಲ್ಗುನಃ ಪಾರ್ಥಃ ಕಿರೀಟೀ ಶ್ವೇತವಾಹನಃ |
ಭೀಭತ್ಸುರ್ವಿಜಯೋ ಜಿಷ್ಣುಃ ಸವ್ಯಸಾಚೀ ಧನಂಜಯಃ ||

**ಕಾರ್ತವೀರ್ಯಾರ್ಜುನ ಪ್ರಾರ್ಥನಾ (ಕಳೆದುಹೋದ ವಸ್ತು ದೊರೆಯಬೇಕಾದರೆ)**

ಕಾರ್ತವೀರ್ಯಾರ್ಜುನೋ ನಾಮ ರಾಜಾ ಬಾಹುಸಹಸ್ರಭಾಕ್ |
ತಸ್ಯ ಸ್ಮರಣಮಾತ್ರೇಣ ಗತಂ ನಷ್ಟಂ ಚ ಲಭ್ಯತೇ ||

**ಪ್ರಯಾಣೇ ಪ್ರಾರ್ಥನಾ**

ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ |
ಯೇಷಾಮಿಂದೀವರಶ್ಯಾಮೋ ಹೃದಯಸ್ಥೋ ಜನಾರ್ದನಃ ||
ಸನ್ನದ್ಧಃ ಕವಚೀ ಖಡ್ಗೀ ಚಾಪಬಾಣಧರೋ ಯುವಾ |
ಗಚ್ಛನ್ಮಮಾಗ್ರತೋ ನಿತ್ಯಂ ರಾಮಃ ಪಾತು ಸಲಕ್ಷ್ಮಣಃ ||
ಯಃ ಶಿವೋ ನಾಮರೂಪಾಭ್ಯಾಂ ಯಾ ದೇವೀ ಸರ್ವಮಂಗಲಾ |
ತಯೋಃ ಸಂಸ್ಮರಣಾತ್ಪುಂಸಾಂ ಸರ್ವತೋ ಜಯಮಂಗಲಮ್ ||

**ತೈಲಾಭ್ಯಂಜನೇ ಪ್ರಾರ್ಥನಾ**

ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ |
ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ||

**ವಿಜಯದಶಮೀದಿನೇ ಪ್ರಾರ್ಥನಾ**

ಶಮೀ ಶಮಯತೇ ಪಾಪಂ ಶಮೀ ಶತ್ರುವಿನಾಶಿನೀ |
ಧಾರಿಣ್ಯರ್ಜುನಬಾಣಾನಾಂ ರಾಮಸ್ಯ ಪ್ರಿಯದರ್ಶಿನೀ ||

**ಮಾತೃವಂದನ**

ತನುಜನ್ಮವೃದ್ಧಿ ಬುದ್ಧೀಃ ಪ್ರಾಪ್ಯಾಸ್ತೇ ಸರ್ವದೇವತಾಶಕ್ತ್ಯಾ |
ದೇವ್ಯಾಯಯಾ ವಿಕಲಯಾ ಮಾತ್ರೇ ತಸ್ಯೈ ನಮೋಽಸ್ತು ಭಗವತ್ಯೈ ||

**ಪಿತೃವಂದನ**

ಯಸ್ಮಾತ್ಪಾರ್ಥಿವದೇಹಃ ಪ್ರಾದುರಭೂದ್ಯೇನ ಭಗವತಾ ಗುರುಣಾ |
ಸಂತು ನಮಾಂಸಿ ಸಹಸ್ರಂ ತಸ್ಮೈ ಸರ್ವಜ್ಞಮೂರ್ತಯೇ ಪಿತ್ರೇ ||

**ಸಪ್ತಋಷಿಗಳು**

ಕಶ್ಯಪೋಽತ್ರಿರ್ಭರದ್ವಾಜಃ ವಿಶ್ವಾಮಿತ್ರೋಽಥ ಗೌತಮಃ |
ಜಮದಗ್ನಿರ್ವಸಿಷ್ಠಶ್ಚ ಸಪ್ತೈತೇ ಋಷಯಃ ಸ್ಮೃತಾಃ ||

**(ಪಂಚಮಹಾ)ಪತಿವ್ರತಾಸ್ಮರಣ**

ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ |
ಪಂಚಕನ್ಯಾಃ ಸ್ಮರೇನ್ನಿತ್ಯಂ ಮಹಾಪಾತಕನಾಶನಮ್ ||

**(ಸಪ್ತ)ಚಿರಂಜೀವಿಸ್ಮರಣ**

ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ |
ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ||
ಸಪ್ತೈತಾನ್ ಸಂಸ್ಮರೇನ್ನಿತ್ಯಂ ಮಾರ್ಕಂಡೇಯಮಥಾಷ್ಟಮಮ್ ||

**ತುಲಸ್ಯಾಹರಣಮಂತ್ರ**

ತುಲಸ್ಯಮೃತಜನ್ಮಾಽಸಿ ಸದಾ ತ್ವಂ ಕೇಶವಪ್ರಿಯೇ |
ಕೇಶವಾರ್ಥಂ ಚಿನೋಮಿ ತ್ವಾಂ ಕ್ಷಮಸ್ವ ಹರಿವಲ್ಲಭೇ ||

**ಅಶ್ವತ್ಥವಂದನಮಂತ್ರ**

ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣುರೂಪಿಣೇ |
ಅಗ್ರತಃ ಶಿವರೂಪಾಯ ವೃಕ್ಷರಾಜಾಯ ತೇ ನಮಃ ||
ಮಧ್ಯಸ್ಥಕೃಷ್ಣ ಪರಿಪಾಲಯ ಭಕ್ತವರ್ಗಂ
ರುದ್ರಾಶ್ರಿತಾಗ್ರ ರುಜಮರ್ದಯ ಸೇವಕಸ್ಯ |
ಪದ್ಮಾಸನಾವಸಥಮೂಲ ಸೃಜಾಸ್ಯ ತಂತುಂ
ಸದ್ಯಂದ್ಯ ಪಿಪ್ಪಲತರೋ ವಿತರಾಖಿಲೇಷ್ಟಮ್ ||

**ಶಯನಮಂತ್ರ**

ಅಗಸ್ತ್ಯೋ ಮಾಧವಶ್ಚೈವ ಮುಚುಕುಂದೋ ಮಹಾಮುನಿಃ |
ಕಪಿಲೋ ಮುನಿರಾಸ್ತೀಕಃ ಪಂಚೈತೇ ಸುಖಶಾಯಿನಃ ||

**ದುಃಸ್ವಪ್ನನಾಶನಮಂತ್ರ**

ರಾಮಂ ಸ್ಕಂದಂ ಹನೂಮಂತಂ ವೈನತೇಯಂ ವೃಕೋದರಮ್ |
ಪಂಚೈತಾನ್ ಯಃ ಸ್ಮರೇನ್ನಿತ್ಯಂ ದುಃಸ್ವಪ್ನಂ ತಸ್ಯ ನಶ್ಯತೇ ||

**ಔಷಧಪ್ರಾಶನಮಂತ್ರ**

• ಶರೀರೇ ಜರ್ಝರೀಭೂತೇ ವ್ಯಾಧಿಗ್ರಸ್ತೇ ಕಲೇವರೇ |
ಔಷಧೋ ಜಾಹ್ನವೀತೋಯಂ ವೈದ್ಯೋ ನಾರಾಯಣೋ ಹರಿಃ ||

**ಸುರಕ್ಷಿತಪ್ರಯಾಣಕ್ಕೆ ಮಂತ್ರ**

ಅಗ್ರತೋ ನಾರಸಿಂಹಶ್ಚ ಪೃಷ್ಠತೋ ಗೋಪಿನಂದನಃ |
ಉಭಯೋಃ ಪಾರ್ಶ್ವಯೋರಾಸ್ತಾಂ ಸಶರೌ ರಾಮಲಕ್ಷ್ಮಣೌ ||
ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ |
ಯೇಷಾಮಿಂದೀವರಶ್ಯಾಮೋ ಹೃದಯಸ್ಥೋ ಜನಾರ್ದನಃ ||
ಸನ್ನದ್ಧಃ ಕವಚೀ ಖಡ್ಗೀ ಚಾಪಬಾಣಧರೋ ಯುವಾ |
ಗಚ್ಛನ್ಮಮಾಗ್ರತೋ ನಿತ್ಯಂ ರಾಮಃ ಪಾತು ಸಲಕ್ಷ್ಮಣಃ ||
ಯಃ ಶಿವೋ ನಾಮರೂಪಾಭ್ಯಾಂ ಯಾ ದೇವೀ ಸರ್ವಮಂಗಲಾ |
ತಯೋಃ ಸಂಸ್ಮರಣಾತ್ಪುಂಸಾಂ ಸರ್ವತೋ ಜಯಮಂಗಲಮ್ ||

**ಸರ್ಪಭಯನಿವಾರಣೆಗೆ ಹೇಳಬೇಕಾದ ಮಂತ್ರ**

ಅಸಿತಂ ಚಾರ್ತಿಮಂತಂ ಚ ಸುನೀಥಂ ಚಾಪಿ ಯಃ ಸ್ಮರೇತ್ |
ದಿವಾ ವಾ ಯದಿ ವಾ ರಾತ್ರೌ ನಾಸ್ಯ ಸರ್ಪಭಯಂ ಭವೇತ್ ||
ಸರ್ಪಾಪಸರ್ಪ ಭದ್ರಂ ತೇ ಗಚ್ಛ ಸರ್ಪ ಮಹಾವಿಷ |
ಜನಮೇಜಯಸ್ಯ ಯಜ್ಞಾಂತೇ ಆಸ್ತೀಕವಚನಂ ಸ್ಮರ ||

**ನವ ವೃಂದಾವನ ಸ್ತೋತ್ರ**

ಪದ್ಮನಾಭಂ ಜಯಮುನಿಂ ಕವೀಂದ್ರಂ ವಾಕ್ಪತಿಂ ತಥಾ |
ಗೋವಿಂದ ಭಿಕ್ಷುಕಂ ಚೈವ ವ್ಯಾಸರಾಜಂ ತಪೋನಿಧಿಮ್ ||
ಶ್ರೀನಿವಾಸಂ ರಾಮತೀರ್ಥಂ ಸುಧೀಂದ್ರಂ ಭಾಸ್ಕರದ್ಯುತಿಮ್ |
ನವ ವೃಂದಾವನೇ ಧ್ಯಾಯೇತ್ ನವಭಕ್ತಿಪ್ರಚೋದಕಾನ್ ||

**ಧರ್ಮಮಾರ್ಗದ ಪ್ರೇರಣೆಗಾಗಿ ತಾತ್ತ್ವಿಕದೇವತೆಗಳಲ್ಲಿ ಪ್ರಾರ್ಥನೆ**

ನಮೋ ವಸ್ತಾತ್ತ್ವಿಕಾಃ ದೇವಾಃ ವಿಷ್ಣುಭಕ್ತಿಪರಾಯಣಾಃ |
ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವ ಹಿ ||

**ವಿಘ್ನಪರಿಹಾರಕ್ಕಾಗಿ ಶ್ರೀವಿಷ್ಣುವಿನ ಸ್ಮರಣೆ**

ಸರ್ವವಿಘ್ನಪ್ರಶಮನಂ ಸರ್ವಸಿದ್ಧಿಕರಂ ಪರಮ್ |
ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್ ||

ಪ್ರಣತರ ಕ್ಲೇಶನಾಶಕನಾದ ಶ್ರೀಕೃಷ್ಣನಿಗೆ ನಮನಗಳು

ಕೃಷ್ಣಾಯ ವಾಸುದೇವಾಯ ಹರಯೇ ಪರಮಾತ್ಮನೇ |
ಪ್ರಣತಕ್ಲೇಶನಾಶಾಯ ಗೋವಿಂದಾಯ ನಮೋ ನಮಃ ||

ಸಕಲರೋಗನಿವಾರಕ ನಾಮತ್ರಯ

ಅಚ್ಯುತಾನಂತ ಗೋವಿಂದ ನಾಮೋಚ್ಚಾರಣಭೀಷಿತಾಃ |
ನಶ್ಯಂತಿ ಸಕಲಾಃ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ||

ಪ್ರಯಾಣಕಾಲದಲ್ಲಿ ಕಾರ್ಯಸಿದ್ಧಿಗಾಗಿ ಗರುಡಾರೂಢನ ಸ್ಮರಣೆ

ಪ್ರಯಾಣೇ ಗರುಡಾರೂಢಂ ಪಾರಿಜಾತಹರಂ ಹರಿಮ್ |
ಸತ್ಯಯಾ ಸಹಿತಂ ಧ್ಯಾಯೇದಿಷ್ಟಕಾರ್ಯಾರ್ಥಸಿದ್ಧಯೇ ||

ಮೃತ್ಯುಂಜಯ ಪ್ರಾರ್ಥನೆ

ಮೃತ್ಯುಂಜಯ ನಮಸ್ತುಭ್ಯಂ ಮೃತ್ಯುಂ ಹರ ನಮಾಮ್ಯಹಮ್ |
ಸರ್ವಮೃತ್ಯುವಿನಾಶಾಯ ಮೃತ್ಯುಂಜಯ ನಮೋ ನಮಃ ||

## ಪೂಜಾವ್ರತಗಳು

| | | | |
|---|---|---|---|
| 1. | ಇಂದ್ರಧ್ವಜಪೂಜಾಪದ್ಧತಿಃ | 2. | ಗೌರೀ ತೃತೀಯಾ |
| 3. | ಮೃಣ್ಮಯ ವೃಷಭ ಪೂಜಾವಿಧಿಃ | 4. | ಚಾತುರ್ಮಾಸ್ಯದಲ್ಲಿ ಆಚರಿಸುವ ವ್ರತಗಳು |
| 5. | ಶ್ರೀಮಂಗಲಗೌರೀವ್ರತಮ್ | 6. | ನಾಗಪೂಜಾಪದ್ಧತಿಃ |
| 7. | ಶಿರಿಯಾಳ ಷಷ್ಠೀ | 8. | ಶ್ರೀವರಮಹಾಲಕ್ಷ್ಮೀವ್ರತಮ್ |
| 9. | ಶ್ರೀಕೃಷ್ಣಜಯಂತೀ-ಶ್ರೀಕೃಷ್ಣಾಷ್ಟಮೀಪೂಜಾಪದ್ಧತಿಃ | 10. | ಶ್ರೀಸ್ವರ್ಣಗೌರೀಪೂಜಾಪದ್ಧತಿಃ |
| 11. | ಶ್ರೀವರಸಿದ್ಧಿವಿನಾಯಕಪೂಜಾಪದ್ಧತಿಃ | 12. | ಚಾತುರ್ಮಾಸ್ಯವ್ರತಸಂಕಲ್ಪಃ |
| 13. | ಋಷಿಪಂಚಮೀವ್ರತಪೂಜಾಪದ್ಧತಿಃ | 14. | ಶ್ರೀಜ್ಯೇಷ್ಠಾದೇವೀವ್ರತಮ್ |
| 15. | ಶ್ರೀಅನಂತಚತುರ್ದಶೀ | 16. | ನವರಾತ್ರೋತ್ಸವಸಂಕಲ್ಪಃ |
| 17. | ಸರಸ್ವತೀಪೂಜಾಪದ್ಧತಿಃ | 18. | ಮಹಾನವಮೀ |
| 19. | ವಿಜಯದಶಮ್ಯಾಂ ಶಮೀಪೂಜಾ | 20. | ಜಲಪೂರಣ ತ್ರಯೋದಶೀ |
| 21. | ನರಕಚತುರ್ದಶ್ಯಾಂ ತೈಲಾಭ್ಯಂಗವಿಧಿಃ | 22. | ಲಕ್ಷ್ಮೀಪೂಜಾ |
| 23. | ಬಲೀಂದ್ರಪೂಜಾ | 24. | ಯಮದ್ವಿತೀಯಾ |
| 25. | ಪ್ರಬೋಧೋತ್ಸವಃ, ತುಲಸೀವಿವಾಹಃ, ತುಲಸೀಪೂಜಾಪದ್ಧತಿಶ್ಚ | | |
| 26. | ರಥಸಪ್ತಮೀ | 27. | ಭೀಷ್ಮಾಷ್ಟಮೀ |
| 28. | ಶ್ರೀಸತ್ಯನಾರಾಯಣವ್ರತಮ್ | 29. | ಅಶೂನ್ಯಶಯನವ್ರತಮ್ |
| 30. | ಪಯೋವ್ರತಮ್ | 31. | ಲಕ್ಷಪ್ರದಕ್ಷಿಣಾವ್ರತಮ್ |
| 32. | ಲಕ್ಷನಮಸ್ಕಾರವ್ರತಮ್ | 33. | ಲಕ್ಷವರ್ತಿವ್ರತಂ ತಥಾ ಲಕ್ಷದೀಪವ್ರತಮ್ |

## ಅಷ್ಟಾವಧಾನ

ದೇವಸ್ಥಾನಗಳು ಹಾಗೂ ಮಠಗಳಲ್ಲಿ ಪಲ್ಲಕ್ಕಿಸೇವಾ, ಉತ್ಸವಗಳು ನಡೆದ ನಂತರ ಅಷ್ಟಾವಧಾನ ಎಂಬ ಹೆಸರಿನ ವಿಶಿಷ್ಟ ಕಾರ್ಯಕ್ರಮ ನಡೆಯುತ್ತದೆ. ಸನ್ನಿಧಾನಲ್ಲಿರುವ ಭಗವಂತನನ್ನು ಸಂಬೋಧಿಸಿ "ಬಹು ಪರಾಕ್" ಎಂದು ಹೇಳಿ, "ನಾಲ್ಕು ವೇದಗಳು, ವೇದಾಂತಾದಿ ವಿದ್ಯೆಗಳು, ಸ್ತೋತ್ರ, ಪುರಾಣ, ಪಂಚಾಂಗ, ಸಂಗೀತಾದಿಗಳನ್ನು ಒಪ್ಪಿಸುವ ಆಕರ್ಷಕ ಕಾರ್ಯಕ್ರಮವನ್ನು ಅಷ್ಟಾವಧಾನ" ಎನ್ನುವ ವಾಡಿಕೆ ಇದೆ. ನಿಜವಾಗಿ ನೋಡಿದರೆ, ಇದರಲ್ಲಿ ಅಷ್ಟ=ಎಂಟಕ್ಕಿಂತ ಹೆಚ್ಚು ಅಂಶಗಳು ಸೇರಿವೆ. ಅಲ್ಲದೇ ಸ್ಮರಣಶಕ್ತಿಯ ಪರೀಕ್ಷೆಯಾಗಿ ಬೆಳೆದುಬಂದ ಅವಧಾನಕಲೆಯ ಅವಧಾನ=ಗಮನ ವಹಿಸುವುದು ಎಂಬ ಅಂಶವು ಇದರಲ್ಲಿಲ್ಲ. ಅಷ್ಟಾವಧಾನದಂತೆ ಇಲ್ಲೂ ನಾನಾವಿದ್ಯೆಗಳ ಪ್ರದರ್ಶನ ನಡೆಯುವುದರಿಂದ ವ್ಯವಹಾರದಲ್ಲಿ ಈ ಹೆಸರು ಬಳಕೆಯಾಗಿರಬೇಕು. ಆದ್ದರಿಂದಲೇ ಈ ಬಗ್ಗೆ ಮಾಹಿತಿ ನೀಡುವ ತಂತ್ರಸಾರ-ಅದರ ವ್ಯಾಖ್ಯಾನಗಳು-ಭಾಗವತದ ಏಕಾದಶಸ್ಕಂದದಲ್ಲಿ ಈ ಹೆಸರಿನ ಬಳಕೆ ಇಲ್ಲ.

ಶ್ರೀಮಧ್ವಾಚಾರ್ಯರು ತಂತ್ರಸಾರದಲ್ಲಿ ಪ್ರತಿಷ್ಠಾವಿಧಿಯ ಸಂದರ್ಭದಲ್ಲಿ ಹೀಗೆ ಹೇಳಿದ್ದಾರೆ -

**"ಗೀತನೃತ್ತೈಶ್ಚ ವಾದ್ಯೈಶ್ಚ ಪುರಾಣೈರಿತಿಹಾಸಕೈಃ |**
**ಸೂಕ್ತೈಃ (ಸ್ತೋತ್ರೈಃ) ಮಂಗಲಘೋಷೈಶ್ಚ ವೈದಿಕೈರ್ದಿನಸಪ್ತಕಮ್ ||** (3-110)

"ಯತ್ರಾಪಿ ಪೂರ್ವವತ್ ತತ್ರಾಪ್ಯುತ್ಸವೇಷು ಚ ಸರ್ವಶಃ" ಪ್ರತಿಷ್ಠಾ ಕಾಲದಲ್ಲಿ ನಡೆಸುವುದನ್ನು ಉತ್ಸವಕಾಲದಲ್ಲೂ ನಡೆಸಬೇಕು ಎಂದು ತಿಳಿಸಿದ್ದಾರೆ. ಉತ್ಸವ ಎಂದರೆ ವರ್ಷಕ್ಕೊಮ್ಮೆ ನಡೆಸುವ ಉತ್ಸವವಷ್ಟೇ ಅಲ್ಲ, ಪ್ರತಿನಿತ್ಯ ನಡೆಸುವ ಉತ್ಸವಗಳೂ ಹೌದು. ಇಂತಹ ಸಂದರ್ಭಗಳಲ್ಲಿ ನಡೆಸಲೇಬೇಕಾದ ಕಾರ್ಯಕ್ರಮ-ಅಷ್ಟಾವಧಾನ.

## ಅಷ್ಟಾವಧಾನ

ದೇವದೇವೋತ್ತಮ ದೇವತಾಸಾರ್ವಭೌಮ ಅಖಿಲಾಂಡಕೋಟಿಬ್ರಹ್ಮಾಂಡನಾಯಕ ಶ್ರೀಶ್ರೀಮದ್ರಾಘವೇಂದ್ರತೀರ್ಥ ಗುರ್ವಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತಸೀತಾಪತಿಶ್ರೀಮನ್ಮೂಲರಾಮಚಂದ್ರಸ್ವಾಮಿನ್ ಬಹುಪರಾಕ್.... ಎನ್ನುವ ಈ ಪರಾಕನ್ನು ಪ್ರತಿಯೊಂದು ಅವಧಾನಸೇವೆಯ ಪ್ರಾರಂಭದಲ್ಲಿ ಹೇಳಬೇಕು.

**೧. ಋಗ್ವೇದಪ್ರಿಯ ಋಗ್ವೇದಸೇವಾಮವಧಾರಯ**

ಓಮ್ ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಮ್ । ಹೋತಾರಂ ರತ್ನಧಾತಮಂ ॥ ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋ ನೂತನೈರುತ । ಸ ದೇವಾ© ಏಹ ವಕ್ಷತಿ ॥ ಅಗ್ನಿನಾ ರಯಿಮಶ್ನವತ್ಪೋಷಮೇವ ದಿವೇದಿವೇ । ಯಶಸಂ ವೀರವತ್ತಮಮ್ । ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ । ಸ ಇದ್ದೇವೇಷು ಗಚ್ಛತಿ ॥ ಅಗ್ನಿರ್ಹೋತಾ ಕವಿಕ್ರತುಃ ಸತ್ಯಶ್ಚಿತ್ರಶ್ರವಸ್ತಮಃ । ದೇವೋ ದೇವೇಭಿರಾಗಮತ್ ॥ ೧ ॥ ಯದಂಗ ದಾಶುಷೇ ತ್ವಮಗ್ನೇ ಭದ್ರಂ ಕರಿಷ್ಯಸಿ । ತವೇತ್ತತ್ಸತ್ಯಮಂಗಿರಃ ॥ ಉಪ ತ್ವಾಗ್ನೇ ದಿವೇ ದಿವೇ ದೋಷಾವಸ್ತರ್ಧಿಯಾ ವಯಮ್। ನಮೋ ಭರಂತ ಏಮಸಿ । ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಮ್ । ವರ್ಧಮಾನಂ ಸ್ವೇ ದಮೇ ॥ ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ । ಸಚಸ್ವಾ ನಃ ಸ್ವಸ್ತಯೇ ॥ ಓಂ ಸ್ವಸ್ತಿ ।

೨. ಯಜುರ್ವೇದಪ್ರಿಯ ಯಜುರ್ವೇದಸೇವಾಮವಧಾರಯ

ಓಮ್ ಇಷೇ ತ್ವೋರ್ಜೇ ತ್ವಾ ವಾಯವಃ ಸ್ಥೋಪಾಯವಃ ಸ್ಥ ದೇವೋ ವಃ ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣ ಆ ಪ್ಯಾಯಧ್ವಮಘ್ನಿಯಾ ದೇವಭಾಗಮೂರ್ಜಸ್ವತೀಃ ಪಯಸ್ವತೀಃ ಪ್ರಜಾವತೀರನಮೀವಾ ಅಯಕ್ಷ್ಮಾ ಮಾ ವಃ ಸ್ತೇನ ಈಶತ ಮಾಽಘಶಗ್ಂ ಸೋ ರುದ್ರಸ್ಯ ಹೇತಿಃ ಪರಿ ವೋ ವೃಣಕ್ತು ಧ್ರುವಾ ಅಸ್ಮಿನ್ ಗೋಪತೌ ಸ್ಯಾತ ಬಹ್ವೀರ್ಯಜಮಾನಸ್ಯ ಪಶೂನ್ ಪಾಹಿ ॥ ಓಂ ಸ್ವಸ್ತಿ ।

೩. ಸಾಮವೇದಪ್ರಿಯ ಸಾಮವೇದಸೇವಾಮವಧಾರಯ

ಓಮ್ ಅಗ್ನ ಆ ಯಾಹಿ ವೀತಯೇ ಗೃಣಾನೋ ಹವ್ಯದಾತಯೇ । ನಿಹೋತಾ ಸತ್ಸಿ ಬರ್ಹಿಷಿ ।

ಹರಿಃ ಓಮ್ । ಏತತ್ ಸಾಮ ಗಾಯನ್ನಾಸ್ತೇ । ಹಾಽ ಉಹಾಽ ಉಹಾಽಽ ಉ । ಅಹಮನ್ನ ಮಹಮನ್ನ - ಮಹಮನ್ನಮ್ । ಅಹಮನ್ನಾದೋ೨ಹಮಽಹನ್ನಾದೋ೨ಽಹಮನ್ನಾದಃ । ಅಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃತ್ । ಅಹಮಸ್ಮಿ ಪ್ರಥಮಜಾ ಋತಾ೩ಸ್ಯ । ಪೂರ್ವಂ ದೇವೇಭ್ಯೋ ಅಮೃತಸ್ಯ ನಾ೩ಭಾಯಿ । ಯೋ ಮಾ ದದಾತಿ ಸ ಇದೇವ ಮಾ೩ವಾಃ । ಅಹಮನ್ನಮನ್ನಮದಂತಮಾ೩ದ್ಮಿ । ಅಹಂ ವಿಶ್ವಂ ಭುವನಮಭ್ಯಭವಾಮ್ । ಸುವರ್ಣಜ್ಯೋತೀಃ ॥ ಯ ಏವಂ ವೇದ । ಇತ್ಯುಪನಿಷತ್ ॥ ಓಂ ಸ್ವಸ್ತಿ ।

೪. ಅಥರ್ವಣವೇದಪ್ರಿಯ ಅಥರ್ವಣವೇದಸೇವಾಮವಧಾರಯ

ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿ ಸ್ರವಂತು ನಃ । ಭದ್ರಂ ನೋ ಅಪಿ ವಾತಯ ಮನಃ । ಮರುತಾ ವೋಜಸೇ ಸ್ವಾಹಾ । ಇಂದ್ರೋ ವಿಶ್ವಸ್ಯ ರಾಜಸಿ । ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ ॥ ೬ ॥ ಓಂ ಸ್ವಸ್ತಿ ।

**ಸಚ್ಛಾಸ್ತ್ರ**

ದೇವ .... ಸಚ್ಛಾಸ್ತ್ರಸೇವಾಮವಧಾರಯ. ಓಮ್ ಓಮ್ ಅಥಾತೋ ಬ್ರಹ್ಮಜಿಜ್ಞಾಸಾ ಓಮ್. ಓಮ್ ಅಥ - ಅಧಿಕಾರ ಸಂಪತ್ಯನಂತರಂ, ಅತಃ - ಶ್ರವಣಮನನಾದಿರೂಪಜಿಜ್ಞಾಸಾಜನ್ಯ, ಜ್ಞಾನಜನ್ಯ ಪ್ರಸಾದಜನ್ಯ ಮೋಕ್ಷಾಖ್ಯಫಲಸದ್ಭಾವಾತ್ ಓಂ ಬ್ರಹ್ಮಣಃ ಗುಣಪೂರ್ಣಸ್ಯ ವಿಷ್ಣ್ವಾಖ್ಯಸ್ಯ ಬ್ರಹ್ಮಣಃ ಜಿಜ್ಞಾಸಾ ಶ್ರವಣಾದಿರೂಪಾ ಕರ್ತವ್ಯಾ ಇತಿ ಸೂತ್ರಾರ್ಥಃ.

**ವ್ಯಾಕರಣ**

ದೇವ .... ವ್ಯಾಕರಣಶಾಸ್ತ್ರಪ್ರಿಯ ವ್ಯಾಕರಣಶಾಸ್ತ್ರಸೇವಾಮವಧಾರಯ.

ಗಂಧೋದಕಂ ಗಂಧ + ಉದಕಮ್ ಇತಿ ಸ್ಥಿತೇ ಆದ್ಗುಣಃ ಇತಿ ಸೂತ್ರೇಣ ಪೂರ್ವಪರಯೋಃ ಅಕಾರೋಕಾರಯೋಃ ಸ್ಥಾನೇ ಓಕಾರರೂಪಗುಣಾದೇಶೇ ಗಂಧೋದಕಮ್ ಇತಿ ರೂಪಂ ಭವತಿ ॥ ಓಂ ಸ್ವಸ್ತಿ ।

ನ್ಯಾಯಶಾಸ್ತ್ರ

ದೇವ.... ಪ್ರಕೃತಾನುಮಿತಿ ಪ್ರತಿಬಂಧಕತಾ ವೃತ್ತಿರೂಪಾವಚ್ಛಿನ್ನಾ ಅನುಯೋಗಿತಾಕಾ ಪರ್ಯಾಪ್ತಿಕಾವಚ್ಛೇದಕತಾಕ-ವಿಷಯಿತಾ ನಿರೂಪಿತಾ ನಿರೂಪಕತಾವಚ್ಛೇದಕತಾಶ್ರಯತ್ವರೂಪಂ ಯದ್ರೂಪಂ ತಾದೃಶರೂಪವತ್ವಂ ಹೇತ್ವಾಭಾಸಸಾಮಾನ್ಯ-ಲಕ್ಷಣಮ್.

ಪ್ರತಿಬಂಧಕತಾವೃತ್ತಿತ್ವಂ ಚ - ಸ್ವಾವಚ್ಛಿನ್ನಾನುಯೋಗಿತಾಪರ್ಯಾಪ್ತಿಕಾವಚ್ಛೇದಕತಾಕನಿರೂಪಕತಾಕವಿಷಯಿತ್ವ ಸಮಾನಾಧಿಕರಣಭೇದಪ್ರತಿಯೋಗಿತಾವಚ್ಛೇದಕತ್ವಸಂಬಂಧಾವಚ್ಛಿನ್ನಸ್ವನಿಷ್ಠಾವಚ್ಛೇದಕತಾಕಭೇದವತ್ವಸಂಬಂಧೇನ. ಓಂ ಸ್ವಸ್ತಿ.

ಮೀಮಾಂಸಾ

ದೇವ .... ಮೀಮಾಂಸಾಶಾಸ್ತ್ರಸೇವಾಮವಧಾರಯ. "ಲಿಂಗಕ್ರಮಸಮಾಖ್ಯಾನಾತ್ ಕಾಮ್ಯಯುಕ್ತಂ ಸಮಾಮ್ನಾತಮ್" ಇತಿ ಜೈಮಿನೀಯೇ ತೃತೀಯಾಧ್ಯಾಯೇ ಸಪ್ತಮಮ್ ಅಧಿಕರಣಮ್ | ಮಂತ್ರಕಾಂಡೇ ಸಮಾಮ್ನಾತಾನಾಮ್ "ಇಂದ್ರಾಗ್ನೀರೋಚನಾದಿವ" ಇತ್ಯಾದೀನಾಂ ಮಂತ್ರಾಣಾಂ ಕಿಂ ಲಿಂಗೇನ ಸರ್ವತ್ರ ವಿನಿಯೋಗಃ ಅಥವಾ ಇಷ್ಟಿಕಾಂಡೇ. ಆಮ್ನಾತಾಸು ಇಷ್ಟಿಸು ಕ್ರಮಸಮಾಖ್ಯಾಭ್ಯಾಮ್ ಇತಿ ಸಂಶಯೇ ಲಿಂಗೇನ ಸರ್ವತ್ರ ವಿನಿಯೋಗಃ ಇತಿ ಪೂರ್ವಪಕ್ಷಃ |

ಸಿದ್ಧಾಂತಸ್ತು - ತಥಾ ಸತಿ ಮಂತ್ರಾಣಾಮ್ ಅರ್ಥಪ್ರಕಾಶನರೂಪಫಲಪ್ರಾಪ್ತೇಃ | ತತ್ಪ್ರಾಪ್ತಯೇ ಕ್ರಮಸಮಾಖ್ಯಾನು-ಸಾರೇಣ ಇಷ್ಟಿಷ್ವೇವ ವಿನಿಯೋಗಃ ಇತಿ ಸಿದ್ಧಾಂತಃ |

ಅಲಂಕಾರಶಾಸ್ತ್ರ

ದೇವ .... ಅಲಂಕಾರಶಾಸ್ತ್ರಪ್ರಿಯ ಅಲಂಕಾರಶಾಸ್ತ್ರಸೇವಾಮವಧಾರಯ.

ವಿಭಾವನಾ ವಿನಾಽಪಿ ಸ್ಯಾತ್ಕಾರಣಂ ಕಾರ್ಯಜನ್ಮಚೇತ್ |
ಅಪ್ಯಲಾಕ್ಷಾರಸಾಸಿಕ್ತಂ ರಕ್ತಂ ತ್ವಚ್ಚರಣದ್ವಯಮ್ ||

ಯತ್ರ ಕಾರಣಂ ವಿನಾ ಕಾರ್ಯೋತ್ಪತ್ತಿಃ ವರ್ಣ್ಯತೇ ತತ್ರ ವಿಭಾವನಾಲಂಕಾರಃ |

ಉದಾ :- ಹೇ ತನ್ವಿ ! ತ್ವಚ್ಚರಣದ್ವಯಂ ಅಲಾಕ್ಷಾರಸಾಸಿಕ್ತಮಪಿ ರಕ್ತಮ್ ಇತಿ ವರ್ಣನಾತ್ ವಿಭಾವನಾಲಂಕಾರಃ || ಓಂ ಸ್ವಸ್ತಿ |

ಪುರಾಣ

ದೇವ .... ಪುರಾಣಪ್ರಿಯ ಪುರಾಣಸೇವಾಮವಧಾರಯ

ಓಂ ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯಂ ಸೂರಯಃ |
ತೇಜೋ ವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ || ಓಂ ಸ್ವಸ್ತಿ |

**ಪಂಚಾಂಗ**

ದೇವ .... ಪಂಚಾಂಗಪ್ರಿಯ ಪಂಚಾಂಗಸೇವಾಮವಧಾರಯ.

ತಿಥಿರ್ವಿಷ್ಣುಸ್ತಥಾ ವಾರೋ ನಕ್ಷತ್ರಂ ವಿಷ್ಣುರೇವ ಚ |
ಯೋಗಶ್ಚ ಕರಣಂ ಚೈವ ಸರ್ವಂ ವಿಷ್ಣುಮಯಂ ಜಗತ್ ||
ತಿಥೇಶ್ಚ ಶ್ರಿಯಮಾಪ್ನೋತಿ ವಾರಾದಾಯುಷ್ಯವರ್ಧನಮ್ |
ನಕ್ಷತ್ರಾದ್ಧರತೇ ಪಾಪಂ ಯೋಗಾದ್ ರೋಗನಿವಾರಣಮ್ |
ಕರಣಾತ್ ಕಾರ್ಯಸಿದ್ಧಿಶ್ಚ ಪಂಚಾಂಗಫಲಮುಚ್ಯತೇ || ಓಂ ಸ್ವಸ್ತಿ ||

**ಸ್ತೋತ್ರ**

ದೇವ .... ಸ್ತೋತ್ರಪ್ರಿಯ ಸ್ತೋತ್ರಪ್ರಿಯಸೇವಾಮವಧಾರಯ.

ಪ್ರೋಷ್ಠೀಶವಿಗ್ರಹಸುನೀಷ್ಠೀವನೋದ್ಧತವಿಶಿಷ್ಟಾಂಬುಚಾರಿಜಲಧೇ
ಕೋಷ್ಠಾಂತರಾಹಿತವಿಚೇಷ್ಟಾಗಮೌಘ ಪರಮೇಷ್ಠೀಡಿತತ್ತ್ವಮವಮಾಮ್ |
ಪ್ರೇಷ್ಠಾರ್ಕಸೂನುಮನುಚೇಷ್ಟಾರ್ಥಮಾತ್ಮವಿದತೀಷ್ಟೋಯುಗಾಂತಸಮಯೇ
ಸ್ಥೇಷ್ಠಾತ್ಮಶೃಂಗಧೃತ ಕಾಷ್ಠಾಂಬುವಾಹನ ವರಾಷ್ಟಾಪದಪ್ರಭತನೋ || ಓಂ ಸ್ವಸ್ತಿ |

**ಗದ್ಯ**

ದೇವ .... ಗದ್ಯಸೇವಾಮವಧಾರಯ. ಸೂರ್ಯವಂಶಧ್ವಜ ರಘುಕುಲತಿಲಕ ಲಕ್ಷ್ಮಣಭರತಶತ್ರುಘ್ನಾಗ್ರಜ ಶ್ರೀಮದ್ಧನುಮದುಪಾಸಿತಚರಣ ಸೀತಾಪತೇ ಶ್ರೀರಾಮಚಂದ್ರ ! ತ್ವದಾಜ್ಞಯಾ ತ್ವತ್ ಪ್ರಸಾದಾತ್ ತ್ವತ್ ಪ್ರೇರಣಯಾ ತ್ವತ್ ಪ್ರೀತ್ಯರ್ಥಂ ತ್ವದುಪಾಸಕೇನ ಶ್ರೀಮುಖ್ಯಪ್ರಾಣೇನ ಪ್ರೇರಿತಸ್ಸನ್ ತ್ವತ್‌ಸಂಸ್ಮೃತಿಪೂರ್ವಕಂ ಶಯನಾತ್ ಸಮುತ್ಥಾಯ ಆದ್ಯತನ ಸ್ವವರ್ಣಾಶ್ರಮೋಚಿತಂ ದೇಶಕಾಲಾವಸ್ಥೋಚಿತಮ್ ನಿತ್ಯನೈಮಿತ್ತಿಕಕಾಮ್ಯಭೇದೇನ ತ್ರಿವಿಧಂ ತ್ವತ್ ಪೂಜಾತ್ಮಕಂ ಕರ್ಮ ಯಥಾಶಕ್ತಿ ಯಥಾಜ್ಞಪ್ತಿ ಯಥಾವೈಭವಂ ಕರಿಷ್ಯೇ || ಓಂ ಸ್ವಸ್ತಿ ||

**ಸಂಗೀತ**

ದೇವ .... ಸಂಗೀತಪ್ರಿಯ ಸಂಗೀತಪ್ರಿಯಸೇವಾಮವಧಾರಯ.

ಮಧ್ವ ಮತದ ಸಿದ್ಧಾಂತದ ಪದ್ಧತಿ ಬಿಡಬ್ಯಾಡಿ ಬಿಡಬ್ಯಾಡಿ |
ಬಿಟ್ಟು ಕೆಡಬ್ಯಾಡಿ ಕೆಡಬ್ಯಾಡಿ ||
ಹರಿಸರ್ವೋತ್ತಮನಹುದೆಂಬೋ ಜ್ಞಾನವ |
ತಾರತಮ್ಯದಿಂದ ತಿಳಿಸೋ ಮಾರ್ಗವ || 1 ||
ಘೋರ ಯಮನ ಭಯ ದೂರ ಓಡಿಸಿ |
ಮುರಾರಿಯ ಚರಣವ ತೋರೋ ಮಾರ್ಗವ || 2 ||
ಭಾರತೀಶ ಮುಖ್ಯ ಪ್ರಾಣಾಂತರ್ಗತ |
ನೀರಜಾಕ್ಷ ನಮ್ಮ ಪುರಂದರವಿಠಲನ || 3 || ಓಂ ಸ್ವಸ್ತಿ |

ನರ್ತನ

ದೇವ .... ನರ್ತನಪ್ರಿಯ ನರ್ತನಸೇವಾಮವಧಾರಯ

ಡಂಗುರವ ಸಾರಿರಯ್ಯ ಡಿಂಗರಿಗರೆಲ್ಲರು ಭೂ |
ಮಂಡಲಕ್ಕೆ ಪಾಂಡುರಂಗ ವಿಠಲನೇ ಪರದೈವವೆಂದು || ಪ ||
ಹರಿಯು ಮುಡಿದ ಹೂವು ಹರಿವಾಣದೊಳಗಿಟ್ಟುಕೊಂಡು
ಹರುಷದಿಂದ ಹಾಡಿಪಾಡಿ ಕುಣಿದು ಚಪ್ಪಾಳಿಕ್ಕುತ || 1 ||
ಒಡಲು ಜಾಂಗಟೆಯ ಮಾಡಿ ನುಡಿವನಾಲಿಗೆ ಘಂಟೆ ಪಿಡಿದು
ಬಿಡದೆ ಧಣ್‌ಧಣ್‌ಧಣ್ ಎಂದು ಹೊಡೆದು ಚಪ್ಪಾಳಿಕ್ಕುತ || 2 ||
ಇಂತು ಲೋಕಕ್ಕೆಲ್ಲ ಲಕ್ಷ್ಮೀಕಾಂತನಲ್ಲದಿಲ್ಲವೆಂದು
ಸಂತತ ಶ್ರೀಪುರಂದರವಿಠಲನೇ ಪರದೈವವೆಂದು || 3 || ಓಂ ಸ್ವಸ್ತಿ |

ಲಾಲಿ

ದೇವ .... ಲಾಲಿಪ್ರಿಯಾ ಲಾಲಿಸೇವಾಮವಧಾರಯ

ತೂಗಿರೆ ರಂಗನ ತೂಗಿರೆ ಕೃಷ್ಣನ |
ತೂಗಿರೆ ಅಚ್ಯುತಾನಂತನ || ಪ ||
ತೂಗಿರೆ ವರಗಿರಿ ಅಪ್ಪ ತಿಮ್ಮಪ್ಪನ |
ತೂಗಿರೆ ಕಾವೇರಿ ರಂಗಯ್ಯನ || ಅ.ಪ. ||
ನಾಗಲೋಕದಲ್ಲಿ ನಾರಾಯಣ ಮಲಗ್ಯಾನೆ |
ನಾಗಕನ್ನಿಕೆಯರು ತೂಗಿರೆ ||
ನಾಗವೇಣಿಯರು ನೇಣು ಪಿಡಿದುಕೊಂಡು |
ಬೇಗನೆ ತೊಟ್ಟಿಲ ತೂಗಿರೆ || 1 ||
ಇಂದ್ರಲೋಕದಲ್ಲಿ ಉಪೇಂದ್ರ ಮಲಗ್ಯಾನೆ |
ಇಂದುಮುಖಿಯರೆಲ್ಲ ತೂಗಿರೆ ||
ಇಂದ್ರಕನ್ನಿಕೆಯರು ಚಂದದಿ ಬಂದು |
ಕುಂದನ ತೊಟ್ಟಿಲ ತೂಗಿರೆ || 2 ||
ಆಲದೆಲೆಯ ಮೇಲೆ ಶ್ರೀಲೋಲ ಮಲಗ್ಯಾನೆ |
ನೀಲಕುಂತಳೆಯರು ತೂಗಿರೆ |
ವ್ಯಾಲಶಯನ ಹರಿ ಮಲಗು ಮಲಗು ಎಂದು |
ಬಾಲಕೃಷ್ಣಯ್ಯನ ತೂಗಿರೆ || 3 ||
ಸಾಸಿರನಾಮನೆ ಸರ್ವೋತ್ತಮನೆಂದು |
ಸೂಸುತ್ತ ತೊಟ್ಟಿಲ ತೂಗಿರೆ ||

ಲೇಸಾಗಿ ಮಡುವಿನೋಳ್ ಶೇಷನ ತುಳಿದಿಟ್ಟ |
ದೋಷವಿದೂರನ್ನ ತೂಗಿರೆ || 4 ||
ಅರಳೆಲೆ ಮಾಗಾಯಿ ಕೊರಳ ಮುತ್ತಿನ ಸರ |
ತರಳನ ತೊಟ್ಟಿಲ ತೂಗಿರೆ ||
ಸಿರಿದೇವಿರಮಣನೆ ಪುರಂದರವಿಠಲನೆ |
ಕರುಣಾದಿ ಮಲಗೆಂದು ತೂಗಿರೆ || 5 || ಓಂ ಸ್ವಸ್ತಿ ||

ನಾನಾವಾದ್ಯ

ದೇವ .... ನಾನಾವಾದ್ಯಪ್ರಿಯ ನಾನಾವಾದ್ಯಸೇವಾಮವಧಾರಯ.

ಈ ಸಂದರ್ಭದಲ್ಲಿ ತಾಳ, ಜಾಗಟೆ, ಶಂಖ, ಮದ್ದಳೆ, ನಗಾರಿ, ಢಕ್ಕೆ, ಮೃದಂಗ, ಕಹಳೆ, ಓಲಗ, ಕೊಳಲು, ತಂಬೂರಿ, ವೀಣೆ, ಪಿಟೀಲು, ಬಂಜರಿ ಇತ್ಯಾದಿ ಮಂಗಳವಾದ್ಯಗಳನ್ನು ನುಡಿಸಬೇಕು. || ಓಂ ಸ್ವಸ್ತಿ ||

## ಅಲಂಕಾರಬ್ರಾಹ್ಮಣಪದ್ಧತಿ

ಶ್ರೀಮದಾಚಾರ್ಯರ ಅತ್ಯಂತ ಪ್ರೀತಿಪಾತ್ರರಾದ ವಿಷ್ಣುತೀರ್ಥರು ಸನ್ಯಾಸಪದ್ಧತಿಯಲ್ಲಿ ಅಲಂಕಾರಪದ್ಧತಿಯ ಬಗ್ಗೆ ಅಪೂರ್ವವಾದ ಮಾಹಿತಿಯನ್ನು ಅನುಗ್ರಹಿಸಿದ್ದಾರೆ. "ಏಕೈಕಮೂರ್ತೇಃ ಶತಮೇವ ಸಾಷ್ಟಂ ದ್ವಿದ್ವಾದಶದ್ವಾದಶಾರ್ಧಂ ತತೋಽಪಿ ...." ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ರೂಪ ಎಂಬ ಐದು ರೂಪಗಳನ್ನೂ ಐದು ಜನ ಬ್ರಾಹ್ಮಣರಲ್ಲಿ ಅಥವಾ ನಾಲ್ಕು ರೂಪಗಳನ್ನು ನಾಲ್ಕು ಜನ ಬ್ರಾಹ್ಮಣರಲ್ಲಿ ಆವಾಹನೆ ಮಾಡಿ ಅಂತರ್ಯಾಮಿಯಾದ ಪರಮಾತ್ಮನ ಪ್ರೀತಿಗಾಗಿ ಪಂಚಭಕ್ಷ್ಯಪರಮಾನ್ನವನ್ನು ಮಾಡಿ ಬೃಂದಾವನಸ್ಥರಾದ ಯತಿಗಳ ಒಳಗಿರುವ ಪರಮಾತ್ಮನ ಅನುಗ್ರಹಕ್ಕಾಗಿ ಇಂತಹ ಆರಾಧನೆಯನ್ನು ನಡೆಸಬೇಕು. ಬ್ರಾಹ್ಮಣರನ್ನು ಪ್ರತಿಮೆಯನ್ನಾಗಿಟ್ಟುಕೊಂಡು ಅಂತರ್ಯಾಮಿಯಾದ ಪರಮಾತ್ಮನಿಗೆ ವಸ್ತ್ರ, ಪಂಚಭಕ್ಷ್ಯಪರಮಾನ್ನ ಹಾಗೂ ಯಥೋಚಿತವಾದ ದಕ್ಷಿಣೆ ಮುಂತಾದವುಗಳನ್ನು ನೀಡುವುದರಿಂದ ಅಂತರ್ಯಾಮಿಯಾದ ಪರಮಾತ್ಮನು ಸಂತುಷ್ಟನಾಗುವನು. ಹೀಗೆ ಅಲಂಕಾರವನ್ನು ನಡೆಸಬೇಕೆಂದು ವಿಷ್ಣುತೀರ್ಥರು ಆದೇಶಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಪಂಚರೂಪಾತ್ಮಕನಾದ ಪರಮಾತ್ಮನನ್ನು ಆವಾಹಿಸಿ ಬ್ರಾಹ್ಮಣರ ಒಳಗಿರುವ ಭಗವಂತನನ್ನು ಆರಾಧಿಸುವುದೇ "ಅಲಂಕಾರಪದ್ಧತಿ" ಎನಿಸಿದೆ. ಇದನ್ನು ವಿಷ್ಣುತೀರ್ಥರು ಸನ್ಯಾಸಪದ್ಧತಿಯಲ್ಲಿ ಉಲ್ಲೇಖಿಸಿದ್ದಾರೆ. ಅನುಕೂಲವಿಲ್ಲದೇ ಇದ್ದಾಗ ಒಬ್ಬ ಬ್ರಾಹ್ಮಣನಿಗಾದರೂ ಆರಾಧನೆಯ ದಿವಸ ಯಥೋಚಿತವಾದ ಸತ್ಕರ್ಮವನ್ನು ನಡೆಸಬೇಕು.

## ಅಲಂಕಾರಬ್ರಾಹ್ಮಣಸಮಾರಾಧನಪ್ರಯೋಗಃ

1. ಸಂಕಲ್ಪ ಆಚಮ್ಯ - ಪ್ರಾಣಾನಾಯಮ್ಯ - ದೇಶಕಾಲೌ ಸಂಕೀರ್ತ್ಯ .... ಸಂವತ್ಸರಸ್ಯ .... ಅಯನೇ .... ಋತೌ .... ಮಾಸೇ .... ಪಕ್ಷೇ .... ತಿಥೌ .... ವಾಸರಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭಕರಣ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀಮೂಲರಾಮಚಂದ್ರಪ್ರೇರಣಯಾ ಸೀತಾಪತಿ ಶ್ರೀಮೂಲರಾಮಚಂದ್ರಪ್ರೀತ್ಯರ್ಥಂ

ಶ್ರೀಮದ್ರಾಘವೇಂದ್ರತೀರ್ಥಗುರೂಣಾಂ (ಆಯಾ ಯತಿಗಳ ಆರಾಧನೆಯಲ್ಲಿ ತತ್ತನ್ನಾಮಗಳನ್ನು ಹೇಳಬೇಕು.) ಪೂರ್ವಾರಾಧನಾಂಗ / ಮಧ್ಯಾರಾಧನಾಂಗ / ಉತ್ತರಾರಾಧನಾಂಗ / ಬ್ರಾಹ್ಮಣಸಮಾರಾಧನಂ ಕರಿಷ್ಯೇ |

2 ಆದೌ ಶ್ರೀಮದಾನಂದತೀರ್ಥಾದಿಗುರುಪಾದಪ್ರಕ್ಷಾಲನಂ ಕರಿಷ್ಯೇ | ಶ್ರೀಮದಾನಂದತೀರ್ಥಗುರ್ವಂತರ್ಗತಸೀತಾಪತಿ ಶ್ರೀಮೂಲರಾಮಚಂದ್ರಾಯ ನಮಃ ಇದಂ ತೇ ಪಾದ್ಯಂ ಸುಪಾದ್ಯಮ್ | ಅಸ್ಮಿನ್ ರಾಷ್ಟ್ರೇ ಶ್ರಿಯಮಾವೇಶಯಾಮ್ಯತೋ ದೇವೀಃ ಪ್ರತಿಪಶ್ಯಾಮ್ಯಾಪಃ |

ದಕ್ಷಿಣಂ ಪಾದಮವನೇ ನಿಜೇಽಸ್ಮಿನ್ ರಾಷ್ಟ್ರ ಇಂದ್ರಿಯಂ ದಧಾಮಿ |
ಸವ್ಯಂ ಪಾದಮವನೇ ನಿಜೇಽಸ್ಮಿನ್ ರಾಷ್ಟ್ರ ಇಂದ್ರಿಯಂ ವರ್ಧಯಾಮಿ |
ಪೂರ್ವಮನ್ಯಮಪರಮನ್ಯಂ ಪಾದಾವವನೇ ನಿಜೇ |
ದೇವಾ ರಾಷ್ಟ್ರಸ್ಯ ಗುಪ್ತ್ಯಾ ಅಭಯಸ್ಯಾವರುದ್ಧ್ಯೈ |
ಆಪಃ ಪಾದಾವನೇ ಜನೀರ್ದ್ವಿಷಂತಂ ನಿರ್ದಹಂತು ಮೇ |

ಇದರಂತೆ ಶ್ರೀಪದ್ಮನಾಭತೀರ್ಥರಿಂದ ಆರಂಭಿಸಿ, ಅಂತಿಮವಾಗಿ ವೃಂದಾವನಸ್ಥರಾದ ಯತಿಗಳ ಪರ್ಯಂತ ಪಾದಪ್ರಕ್ಷಾಲನೆ ಮಾಡಬೇಕು.

3. ತದಂಗತ್ವೇನ ಬ್ರಾಹ್ಮಣಪಾದಪ್ರಕ್ಷಾಲನಂ ಚ ಕರಿಷ್ಯೇ |

1. ಅನಿರುದ್ಧಾಯ ನಮಃ ಇದಂ ತೇ ಪಾದ್ಯಂ ಸುಪಾದ್ಯಮ್ |
ಅಸ್ಮಿನ್ ರಾಷ್ಟ್ರೇ .... ನಿರ್ದಹಂತು ಮೇ |
2. ಪ್ರದ್ಯುಮ್ನಾಯ ನಮಃ ಇದಂ ತೇ ಪಾದ್ಯಂ ಸುಪಾದ್ಯಮ್ |
ಅಸ್ಮಿನ್ ರಾಷ್ಟ್ರೇ .... ನಿರ್ದಹಂತು ಮೇ |
3. ಸಂಕರ್ಷಣಾ ನಮಃ ಇದಂ ತೇ ಪಾದ್ಯಂ ಸುಪಾದ್ಯಮ್ |
ಅಸ್ಮಿನ್ ರಾಷ್ಟ್ರೇ .... ನಿರ್ದಹಂತು ಮೇ |
4. ವಾಸುದೇವಾಯ ನಮಃ ಇದಂ ತೇ ಪಾದ್ಯಂ ಸುಪಾದ್ಯಮ್ |
ಅಸ್ಮಿನ್ ರಾಷ್ಟ್ರೇ .... ನಿರ್ದಹಂತು ಮೇ |
5. ನಾರಾಯಣಾಯ ನಮಃ ಇದಂ ತೇ ಪಾದ್ಯಂ ಸುಪಾದ್ಯಮ್ |
ಅಸ್ಮಿನ್ ರಾಷ್ಟ್ರೇ .... ನಿರ್ದಹಂತು ಮೇ |

4. ಬ್ರಾಹ್ಮಣಾನಾಮ್ ಆಸನಮ್ |

1. ಅನಿರುದ್ಧಾಯ ನಮಃ ಇದಮಿದಮಾಸನಮ್ |
2. ಪ್ರದ್ಯುಮ್ನಾಯ ನಮಃ ಇದಮಿದಮಾಸನಮ್ |
3. ಸಂಕರ್ಷಣಾಯ ನಮಃ ಇದಮಿದಮಾಸನಮ್ |
4. ವಾಸುದೇವಾಯ ನಮಃ ಇದಮಿದಮಾಸನಮ್ |
5. ನಾರಾಯಣಾಯ ನಮಃ ಇದಮಿದಮಾಸನಮ್ |

5. ಆವಾಹನಮ್ |

1. ಅನಿರುದ್ಧಂ ಭವತ್ಸು ಆವಾಹಯಿಷ್ಯೇ |

2. ಪ್ರದ್ಯುಮ್ನಂ ಭವತ್ಸು ಆವಾಹಯಿಷ್ಯೇ |

3. ಸಂಕರ್ಷಣಂ ಭವತ್ಸು ಆವಾಹಯಿಷ್ಯೇ |

4. ವಾಸುದೇವಂ ಭವತ್ಸು ಆವಾಹಯಿಷ್ಯೇ |

5. ನಾರಾಯಣಂ ಭವತ್ಸು ಆವಾಹಯಿಷ್ಯೇ |

6. ಅರ್ಘ್ಯಮ್ |

1. ಅನಿರುದ್ಧಾಯ ನಮಃ ಇದಂ ತೇ ಅರ್ಘ್ಯಮ್ |

2. ಪ್ರದ್ಯುಮ್ನಾಯ ನಮಃ ಇದಂ ತೇ ಅರ್ಘ್ಯಮ್ |

3. ಸಂಕರ್ಷಣಾಯ ನಮಃ ಇದಂ ತೇ ಅರ್ಘ್ಯಮ್ |

4. ವಾಸುದೇವಾಯ ನಮಃ ಇದಂ ತೇ ಅರ್ಘ್ಯಮ್ |

5. ನಾರಾಯಣಾಯ ನಮಃ ಇದಂ ತೇ ಅರ್ಘ್ಯಮ್ |

7. ಗಂಧಾದಿದಾನಮ್ (ಬ್ರಾಹ್ಮಣರಿಗೆ ಗಂಧಾಕ್ಷತೆ - ಅಂಗಾರ)

8. ಪರಿವೇಷಣಮ್ (ಎರಡೆರಡು ಕುಡಿ ಬಾಳೇದೆಲೆ ಹಾಕಿ ಬಡಿಸುವುದು) ಬಡಿಸುವಾಗ ಗುರುಗುಣಸ್ತವನವನ್ನು ಹೇಳಬೇಕು. ಶ್ರೀವಾದೀಂದ್ರತೀರ್ಥರ ಆರಾಧನಾ ದಿವಸ ಗುರುಗುಣಸ್ತವನದ ಬದಲಾಗಿ ಶ್ರೀರಾಘವೇಂದ್ರವಿಜಯ ಹೇಳುವುದು ಸಂಪ್ರದಾಯ.

9. ಬ್ರಾಹ್ಮಣಾನಾಂ ವಸ್ತ್ರದಾನಮ್ (ವಸ್ತ್ರಾದಿಗಳನ್ನು ಕೊಡಬೇಕು) ಪುಷ್ಪಮಾಲೆಯನ್ನು ಹಾಕಬೇಕು.

10. ತ್ಯಕ್ತ (ನೀರನ್ನು ಬಿಡಬೇಕು.)

ಓಂ ಭೂರ್ಭುವಸ್ಸುವಃ | ತತ್ಸವಿತುರ್ವರೇಣ್ಯಮ್ | ಭರ್ಗೋ ದೇವಸ್ಯ ಧೀಮಹಿ | ಧಿಯೋ ಯೋ ನಃ ಪ್ರಚೋದಯಾತ್ | ನಾನಾಪಾತ್ರೇಷು ಪೃಥಕ್ ಪೃಥಕ್ ಪರಿವೇಷಿತಾನ್ನಂ ತೇಭ್ಯಸ್ತೇಭ್ಯಃ ಸಂಪ್ರದದೇ ನ ಮಮ ನ ಮಮ |

ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ |
ತ್ರೀನ್ಲೋಕಾನ್ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ||

ಅನೇನ ಬ್ರಾಹ್ಮಣಸಮಾರಾಧನೇನ ಭಗವಾನ್ ಶ್ರೀಶ್ರೀಮದ್ರಾಘವೇಂದ್ರತೀರ್ಥ ಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತಸೀತಾಪತಿ ಶ್ರೀಮನ್ಮೂಲರಾಮಚಂದ್ರಃ ಪ್ರೀಯತಾಂ ಪ್ರೀತೋ ವರದೋ ಭವತು ಶ್ರೀಕೃಷ್ಣಾರ್ಪಣಮಸ್ತು | ಮಂತ್ರಾಕ್ಷತೆ ನೀರು ಬಿಡಬೇಕು.

11. ಹಸ್ತೋದಕ

ಯತಿಹಸ್ತೇ ಜಲಂ ದದ್ಯಾತ್ ಭೈಕ್ಷ್ಯಂ ದದ್ಯಾತ್ಪುನರ್ಜಲಮ್ |
ತದನ್ನಂ ಮೇರುಣಾ ತುಲ್ಯಂ ತಜ್ಜಲಂ ಸಾಗರೋಪಮಮ್ ||
ವಟೌ ತು ಸಮದತ್ತಂ ಸ್ಯಾತ್ ಗೃಹಸ್ಥೇ ದ್ವಿಗುಣಂ ಭವೇತ್ |
ವಾನಪ್ರಸ್ಥೇ ಶತಗುಣಂ ಯತೌ ದತ್ತಮನಂತಕಮ್ ||
ಯತಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಹರಿಃ ಸ್ವಯಮ್ |
ಹರಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಜಗತ್ತ್ರಯಮ್ ||

12. ಹಸ್ತೋದಕವಾದ ಮೇಲೆ ಅಲಂಕಾರ ಬ್ರಾಹ್ಮಣರಿಗೆ ತೀರ್ಥ ಕೊಡಬೇಕು. ಅನಂತರ ತಾಂಬೂಲಾದಿಗಳನ್ನು ಕೊಡಬೇಕು.

13. ಮಂತ್ರಾಕ್ಷತೆ

ಈ ಕೆಳಕಂಡ ಮಂತ್ರ ಹೇಳುತ್ತಾ ಅಲಂಕಾರಬ್ರಾಹ್ಮಣರ ಕೈಯಲ್ಲಿ ಮಂತ್ರಾಕ್ಷತೆ ಕೊಟ್ಟು ಪುನಃ ಮಂತ್ರಾಕ್ಷತೆ ತಟ್ಟೆಗೆ ಹಾಕಿಸಿಕೊಳ್ಳಬೇಕು.

ಓಮ್ ॥ ಇಂದ್ರ ಶ್ರೇಷ್ಠಾನಿ ದ್ರವಿಣಾನಿ ಧೇಹಿ ಚಿತ್ತಿಂ ದಕ್ಷಸ್ಯ ಸುಭಗತ್ವಮಸ್ಮೇ ।
ಪೋಷಂ ರಯೀಣಾಮರಿಷ್ಟಿಂ ತನೂನಾಂ ಸ್ವಾದ್ಮಾನಂ ವಾಚಃ ಸುದಿನತ್ವಮಹ್ನಾಮ್ ॥ ೧ ॥
ಸಹಸ್ರಾಕ್ಷೇಣ ಶತಶಾರದೇನ ಶತಾಯುಷಾ ಹವಿಷಾಹಾರ್ಷಮೇನಮ್ ।
ಶತಂ ಯಥೇಮಂ ಶರದೋ ನ ಯಾತೀಂದ್ರೋ ವಿಶ್ವಸ್ಯ ದುರಿತಸ್ಯ ಪಾರಮ್ ॥ ೨ ॥
ಶತಂ ಜೀವ ಶರದೋ ವರ್ಧಮಾನಃ ಶತಂ ಹೇಮಂತಾಚ್ಛತಮುವಸಂತಾನ್ ।
ಶತಮಿಂದ್ರಾಗ್ನೀ ಸವಿತಾ ಬೃಹಸ್ಪತಿಃ ಶತಾಯುಷಾ ಹವಿಷೇಮಂ ಪುನರ್ದುಃ ॥ ೩ ॥
ಆಹಾರ್ಷಂ ತ್ವಾವಿದಂ ತ್ವಾ ಪುನರಾಗಾಃ ಪುನರ್ನವ ।
ಸರ್ವಾಂಗಸರ್ವಂ ತೇ ಚಕ್ಷುಃ ಸರ್ವಮಾಯುಶ್ಚ ತೇ ವಿದಮ್ ॥ ೪ ॥
ಸರ್ವಸ್ಯಾಪ್ತ್ಯೈ ಸರ್ವಸ್ಯಜಿತ್ಯೈ ಸರ್ವಮೇವ ತೇನಾಪ್ನೋತಿ ಸರ್ವಂ ಜಯತಿ ॥ ೫ ॥

ಶ್ರೀಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀಮನ್ಮೂಲರಾಮಚಂದ್ರಪ್ರಸಾದೋ ಅಸ್ತು | ಸಮಸ್ತಸನ್ಮಂಗಳಾನಿ ಭವಂತು |

ಶ್ರೀಗಳವರು ಮಂತ್ರಾಕ್ಷತೆಯಲ್ಲಿ ಬೀಜಾಕ್ಷರಗಳನ್ನು ಬರೆಯುವಾಗ ಈ ಕೆಳಗಿನ ಸ್ವಸ್ತಿಮಂತ್ರಗಳನ್ನು ಹೇಳಬೇಕು.

1. ಸ್ವಸ್ತಿಮಂತ್ರಾರ್ಥಾಃ ಸತ್ಯಾಃ ಸಫಲಾಃ ಸಂತ್ವಿತಿ ಭವಂತೋ ಮಹಾಂತೋಽನುಗೃಹ್ಣಂತು | ತಥಾಽಸ್ತು |
2. ಏತನ್ಮಂತ್ರಪ್ರತಿಪಾದ್ಯೌ ಶ್ರೀಮನ್ಮೂಲರಘುಪತಿವೇದವ್ಯಾಸೌ ಪ್ರಸನ್ನೌ ಭೂಯಾಸ್ತಾಮಿತಿ ಭವಂತೋ ಮಹಾಂತೋಽನುಗೃಹ್ಣಂತು |
3. ದೀರ್ಘಾಯುಷ್ಯಮಸ್ತು | ತಥಾಽಸ್ತು |
4. ಗುರೂಣಾಂ ಕೃಪಾ ವೃದ್ಧಿರಸ್ತು | ತಥಾಽಸ್ತು |
5. ಸಮಸ್ತಸನ್ಮಂಗಳಾನಿ ಭವಂತು | ತಥಾಽಸ್ತು |
6. ಸರ್ವೇ ಜನಾಃ ಸುಖಿನೋ ಭವಂತು | ತಥಾಽಸ್ತು |

14. ಎಲೆಗೆ ತೀರ್ಥವನ್ನು ಹಾಕಬೇಕು.

ಶ್ರೀಶಾದಿದೇವತಾರಂಭಾಂ .....

ಶ್ರೀಮದ್ಧಂ ಪದ್ಮನಾಭಂ .....

ಬ್ರಹ್ಮಾಂತಾಃ ಗುರವಸ್ಸಾಕ್ಷಾತ್ .... ಪುನಃ ದುರ್ವಾದಿಧ್ವಾಂತರವಯೇ ....

ಅನೇನ ಬ್ರಾಹ್ಮಣಸಮಾರಾಧನೇನ ಭಗವಾನ್ ಶ್ರೀಶ್ರೀಮದ್ರಾಘವೇಂದ್ರತೀರ್ಥ ಗುರ್ವಂತರ್ಗತಭಾರತೀರಮಣ ಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀಮನ್ಮೂಲರಾಮಚಂದ್ರಃ ಪ್ರೀಯತಾಂ ಪ್ರೀತೋ ವರದೋ ಭವತು ಶ್ರೀಕೃಷ್ಣಾರ್ಪಣಮಸ್ತು

## ಚಾತುರ್ಮಾಸ್ಯವ್ರತಸಂಕಲ್ಪ

**1) ಶಾಕವ್ರತ : ಆಷಾಢ ಶುದ್ಧ 11 ರಿಂದ ಶ್ರಾವಣ ಶುದ್ಧ 10**

**ಸಂಕಲ್ಪ :-** ಆಚಮ್ಯ, ಪ್ರಾಣಾನಾಯಾಮ್ಯ, ದೇಶಕಾಲಾದಿ ಸಂಕೀರ್ತ್ಯ

ವಾಸುದೇವಶುಚೌ ಮಾಸೇ ಶಾಕವ್ರತಮನುತ್ತಮಮ್ |
ತ್ವತ್ಪ್ರೀತ್ಯರ್ಥಂ ಕರಿಷ್ಯೇಽಹಂ ನಿರ್ವಿಘ್ನಂ ಕುರು ಮಾಧವ ||

**ಸಮರ್ಪಣೆ :-**

ವಾಸುದೇವ ನಮಸ್ತುಭ್ಯಂ ಪ್ರಥಮೇ ಮಾಸಿ ಮತ್ಕೃತಮ್ |
ಶಾಕವ್ರತಂ ಮಯಾ ತೇನ ಸಂತುಷ್ಟೋ ಭವ ಮಾಧವ ||

**2) ದಧಿವ್ರತ :- ಶ್ರಾವಣ ಶುದ್ಧ 11 ರಿಂದ ಭಾದ್ರಪದ ಶುದ್ಧ 10**

**ಸಂಕಲ್ಪ :-**

ಸಂಕರ್ಷಣಾರವಿಂದಾಕ್ಷ ಕರಿಷ್ಯೇಽಹಂ ದಧಿವ್ರತಮ್ |
ದ್ವಿತೀಯೇ ಮಾಸಿ ದೇವೇಶ ನಿರ್ವಿಘ್ನಂ ಕುರು ಮೇ ಪ್ರಭೋ ||

**ಸಮರ್ಪಣೆ :-**

ಸಂಕರ್ಷಣ ನಮಸ್ತುಭ್ಯಂ ಶ್ರಾವಣೇ ಮತ್ಕೃತೇನ ಚ |
ದಧಿವ್ರತೇನ ದೇವೇಶ ತುಷ್ಟೋ ಭವ ಜನಾರ್ದನ ||

**3) ಕ್ಷೀರವ್ರತ :- ಭಾದ್ರಪದ ಶುದ್ಧ 11 ರಿಂದ ಆಶ್ವೀನ ಶುದ್ಧ 10**

**ಸಂಕಲ್ಪ :-**

ಪ್ರದ್ಯುಮ್ನ ತವ ತುಷ್ಟ್ಯರ್ಥಂ ಪ್ರೋಷ್ಠಪದ್ಯಾಂ ತೃತೀಯಕೇ |
ನಿರ್ವಿಘ್ನಂ ಕುರು ಮೇ ದೇವ ಕರಿಷ್ಯೇಽಹಂ ಪಯೋವ್ರತಮ್ ||

**ಸಮರ್ಪಣೆ :-**

ಶ್ರೀಪ್ರದ್ಯುಮ್ನ ನಮಸ್ತುಭ್ಯಂ ಮಾಸಮಾರಭ್ಯ ಯತ್ಕೃತಮ್ |
ಇಷ್ಟದೋ ಭವ ಸರ್ವೇಷಾಂ ಗೃಹೀತ್ವಾ ತು ಪಯೋವ್ರತಮ್ ||

**4) ದ್ವಿದಲವ್ರತ :- ಆಶ್ವೀನ ಶುದ್ಧ 11 ರಿಂದ ಕಾರ್ತೀಕ ಶುದ್ಧ 10**

**ಸಂಕಲ್ಪ :-**

ಅನಿರುದ್ಧ ಸುರೈರ್ವಂದ್ಯ ದ್ವಿದಲವ್ರತಮುತ್ತಮಮ್ |
ಕರೋಮ್ಯಹಮಿಷೇ ಮಾಸೇ ನಿರ್ವಿಘ್ನಂ ಕುರು ಮೇ ಪ್ರಭೋ ||

**ಸಮರ್ಪಣೆ :-**

ಅನಿರುದ್ಧ ನಮಸ್ತುಭ್ಯಂ ದ್ವಿದಲಾಖ್ಯವ್ರತೇನ ಚ |
ಮತ್ಕೃತೇನಾಶ್ವಿನೇ ಮಾಸೇ ಪ್ರೀತ್ಯರ್ಥಂ ಫಲದೋ ಭವ ||

## ಸ್ನಾನಕಾಲೇ ಭಗವದ್ರೂಪಾನುಸಂಧಾನಕ್ರಮ

ಸಾರ್ಧ ತ್ರಿಕೋಟಿ ತೀರ್ಥಾಂತರ್ಯಾಮಿ ಅನಿರುದ್ಧಪ್ರದ್ಯುಮ್ನಸಂಕರ್ಷಣನಾರಾಯಣಾತ್ಮಕ ಗಂಗಾಂತರ್ಯಾಮಿ ಮಾಧವರೂಪಾತ್ಮಕ, ಗೋದಾವರ್ಯಂತರ್ಯಾಮಿ ನಾರಾಯಣರೂಪಾತ್ಮಕ, ಕೃಷ್ಣಾಂತರ್ಯಾಮಿ ಕೃಷ್ಣರೂಪಾತ್ಮಕ, ಸರಸ್ವತ್ಯಂತರ್ಯಾಮಿ ಪದ್ಮನಾಭರೂಪಾತ್ಮಕ, ಕಾವೇರ್ಯಂತರ್ಯಾಮಿ ರಂಗನಾಥರೂಪಾತ್ಮಕ, ನರ್ಮದಾಂತರ್ಯಾಮಿ ವಿಷ್ಣುರೂಪಾತ್ಮಕ, ತುಂಗಭದ್ರಾಂತರ್ಯಾಮಿ ವರಾಹರೂಪಾತ್ಮಕ, ಸಮುದ್ರಾಂತರ್ಯಾಮಿ ಕ್ಷೀರಾಬ್ಧಿಶಾಯಿ, ಪದ್ಮನಾಭರೂಪಾತ್ಮಕ, ಭವನಾಶಿನ್ಯಂತರ್ಯಾಮಿ ನರಹರಿರೂಪಾತ್ಮಕ, ಕುಮುದ್ವತ್ಯಂತರ್ಯಾಮಿ, ತ್ರಿವಿಕ್ರಮರೂಪಾತ್ಮಕ, ವಂಜುಲಾಂತರ್ಯಾಮಿ ಹಯಗ್ರೀವರೂಪಾತ್ಮಕ, ಭೀಮರಥ್ಯಂತರ್ಯಾಮಿ ನರಸಿಂಹರೂಪಾತ್ಮಕ, ತಾಮ್ರಪರ್ಣ್ಯಂತರ್ಯಾಮಿ ಅನಂತರೂಪಾತ್ಮಕ, ಮಲಾಪಹಾಂತರ್ಯಾಮಿ ಚಕ್ರಪಾಣಿರೂಪಾತ್ಮಕ, ಸ್ನಾತುಃ ಪುರುಷಸ್ಯ ಶರೀರಾಂತರ್ಯಾಮಿ ಅನಿರುದ್ಧಪ್ರದ್ಯುಮ್ನಸಂಕರ್ಷಣವಾಸುದೇವನಾರಾಯಣಾತ್ಮಕ ದ್ವಾಸಪ್ತತಿಸಹಸ್ರನಾಡ್ಯಂತರ್ಗತ ಬೃಹತೀಸಹಸ್ರಸ್ವರವ್ಯಂಜನ ಪ್ರತಿಪಾದ್ಯ ದ್ವಾಸಪ್ತತಿಸಹಸ್ರಸಂಖ್ಯಾವಿಶಿಷ್ಟ ವಿಶ್ವಾದಿ ಸಹಸ್ರರೂಪಾತ್ಮಕ, ಪಂಚಕೋಶಸ್ಥ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯರೂಪಾತ್ಮಕ, ಚತುರ್ವಿಂಶತಿತತ್ತ್ವಾಂತರ್ಯಾಮಿ ಕೇಶವಾದಿ ಚತುರ್ವಿಂಶತಿ ರೂಪಾತ್ಮಕ, ಅಸ್ಥ್ಯಂತರ್ಗತ ಆದಿನಾರಾಯಣಶಬ್ದವಾಚ್ಯಹಂಸರೂಪಾತ್ಮಕ, ಮಜ್ಜಾಂತಸ್ಥ ವಷಟ್ಕಾರಾಖ್ಯ ವಾಸುದೇವಾಭಿನ್ನಸಾರರೂಪಾತ್ಮಕ, ಮೇಧಾಂತಸ್ಥ ನಿಧನಾಖ್ಯ ನಾರಾಯಣಾಭಿನ್ನ ಷಡ್ಗುಣರೂಪಾತ್ಮಕ, ಮಾಂಸಾಂತರ್ಗತಪ್ರತೀಹಾರಾಖ್ಯ ಸಂಕರ್ಷಣರೂಪಾತ್ಮಕ, ತ್ವಗಂತಸ್ಥಪ್ರಸ್ತಾವಾಖ್ಯ ಅನಿರುದ್ಧಾಭಿನ್ನರಾಮರೂಪಾತ್ಮಕ, ರೋಮಕೂಪಾಂತಸ್ಥ ಪ್ರದ್ಯುಮ್ನಾಭಿನ್ನ ಸಂಕರ್ಷಣರೂಪಾತ್ಮಕ, ದಶೇಂದ್ರಿಯಸ್ಥ ಮತ್ಸ್ಯಾದಿದಶರೂಪಾತ್ಮಕ, ಅಜಾದಿ ಪಂಚಾಶದ್ರೂಪಾತ್ಮಕ, ಸರ್ವಶರೀರಾರಾಂತಸ್ಥ ಪುರುಷರೂಪಾತ್ಮಕ, ಮಮ ಹೃದಯಾಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತವಿಶ್ವತೈಜಸಪ್ರಾಜ್ಞ ತುರ್ಯಾತ್ಮಾಂತರಾತ್ಮ ಪರಮಾತ್ಮಜ್ಞಾನಾತ್ಮೇತ್ಯಷ್ಟರೂಪಾತ್ಮಕ ಸಕಲ ಭಗವದ್ರೂಪಾಣಾಂ ಮಮ ಹೃದಯಾಂತರ್ಯಾಮಿ ಭಾ. ಮುಖ್ಯಪ್ರಾಣಾಂತಸ್ಥಬಿಂಬರೂಪೇಣ ಐಕ್ಯಚಿಂತನಪೂರ್ವಕಂ ಭಗವತಃ ಮಂದಿರಭೂತಸ್ಯ ಅಸ್ಯ ದೇಹಸ್ಯ ಪ್ರಕ್ಷಾಲನಾತ್ಮಕಂ ಪ್ರಾತಃಸ್ನಾನಮಹಂ ಕರಿಷ್ಯೇ ||

|| ಇತಿ ಶ್ರೀಗುರುಜಗನ್ನಾಥದಾಸಾರ್ಯವಿರಚಿತ ಭಗವದ್ರೂಪಾನುಸಂಧಾನಕ್ರಮಃ ಸಂಪೂರ್ಣಮ್ ||

### ಷೋಡಶಸಂಸ್ಕಾರಗಳು

| | | | |
|---|---|---|---|
| 1. | ಗರ್ಭಾಧಾನ | 2. | ಪುಂಸವನ |
| 3. | ಸೀಮಂತೋನ್ನಯನ | 4. | ಜಾತಕರ್ಮ |
| 5. | ನಾಮಕರಣ | 6. | ನಿಷ್ಕ್ರಮಣ |
| 7. | ಅನ್ನಪ್ರಾಶನ | 8. | ಚೂಡಾಕರ್ಮ |
| 9. | ಕರ್ಣವೇಧ | 10. | ಉಪನಯನ |
| 11. | ವೇದಾರಂಭ | 12. | ಸಮಾವರ್ತನ |
| 13. | ವಿವಾಹ | 14. | ವಾನಪ್ರಸ್ಥ |
| 15. | ಸಂನ್ಯಾಸ | 16. | ಅಂತ್ಯೇಷ್ಟಿ |

## ಕಾಲನಾಮಕನ ಉಪಾಸನೆ

### ಸ್ಮರಣೀಯ ಭಗವದ್ರೂಪಗಳು

| | |
|---|---|
| ಪ್ರಾತಃಕಾಲದಲ್ಲಿ | ಶ್ರೀಕೇಶವಾಯ ನಮಃ |
| ಮಧ್ಯಾಹ್ನಕಾಲದಲ್ಲಿ | ಶ್ರೀವಿಷ್ಣವೇ ನಮಃ |
| ಮಧ್ಯಾಹ್ನದ ನಂತರ ಸಾಯಂಕಾಲದವರೆಗೆ | ಶ್ರೀಮಧುಸೂದನಾಯ ನಮಃ |
| ಸಾಯಂಕಾಲದಲ್ಲಿ | ಶ್ರೀಮಧುನಾಮಕ ಪರಮಾತ್ಮನೇ ನಮಃ |
| ರಾತ್ರಿಯ ಪ್ರಾರಂಭದಲ್ಲಿ | ಶ್ರೀಹೃಷೀಕೇಶಾಯ ನಮಃ |
| ಸಂಗಮಕಾಲದಲ್ಲಿ | ಶ್ರೀಗೋವಿಂದಾಯ ನಮಃ |
| ರಾತ್ರಿಯ ಮೊದಲನೇಭಾಗದಲ್ಲಿ | ಶ್ರೀಪದ್ಮನಾಭಾಯ ನಮಃ |
| ರಾತ್ರಿ ಎರಡನೇ ಭಾಗದಲ್ಲಿ | ಶ್ರೀವತ್ಸಾಯ ನಮಃ |

## ನಿತ್ಯಕರ್ಮಗಳಲ್ಲಿ ಭಗವದ್ರೂಪಗಳ ಚಿಂತನೆ

1) **ಪ್ರಾತಃಕಾಲದಲ್ಲಿ ಏಳುವಾಗ :** ಭಾರತೀರಮಣಮುಖ್ಯಪ್ರಾಣಾಂತರ್ಗತ ನಾರಾಯಣಾಯ ನಮಃ

2) **ಮಲಮೂತ್ರವಿಸರ್ಜನೆಯ ಕಾಲದಲ್ಲಿ :** ಕೇಶವಾಯ ನಮಃ

3) **ಮೃತ್ತಿಕಾಶೌಚ ಕಾಲದಲ್ಲಿ :** ತ್ರಿವಿಕ್ರಮಾಯ ನಮಃ

4) **ಹಲ್ಲುಜ್ಜುವಾಗ :** ಶ್ರೀಹರಯೇ ನಮಃ

5) **ಮುಖತೊಳೆಯುವಾಗ :** ಮಾಧವಾಯ ನಮಃ

6) **ಆಕಳಿಗೆ ನಮಸ್ಕರಿಸುವಾಗ :** ಉದ್ಗೀಥಾಭಿನ್ನ ಶ್ರೀಕೃಷ್ಣಾಯ ನಮಃ

7) **ಹಾಲು ಹಿಂಡುವಾಗ :** ಗೋಪಾಲಕೃಷ್ಣಾಯ ನಮಃ

8) **ತುಲಸಿಗೆ ನಮಸ್ಕರಿಸುವಾಗ :** ವಿಷ್ಣವೇ ನಮಃ

9) **ಸ್ನಾನ ಮಾಡುವಾಗ :** ತ್ರಿವಿಕ್ರಮ ವರಾಹಾಭಿನ್ನದವರೂಪಿ ಶ್ರೀಹರಯೇ ನಮಃ

10) **ವಸ್ತ್ರ ಉಡುವಾಗ :** ಉಪೇಂದ್ರಾಯ ನಮಃ

11) **ಆಹ್ನೀಕಕ್ಕೆ ಕೂಡುವಾಗ :** ಶನ್ಯೈಶ್ಚರಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಕೃಷ್ಣಾಯ ನಮಃ

12) **ಗೋಪೀಚಂದನವನ್ನು ಧರಿಸುವಾಗ :** ರತಿಪತಿ ಮನ್ಮಥಾಂತರ್ಗತ ಉಮಾಪತಿ ರುದ್ರಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಭೂವರಾಹಾಯ ನಮಃ

13) **ದ್ವಾದಶನಾಮಗಳನ್ನು ಧರಿಸುವಾಗ :** ಶುಕ್ಲಪಕ್ಷದಲ್ಲಿ ಕೇಶವಾದಿ ದಾಮೋದರ ಪರ್ಯಂತವಿರುವ 12 ನಾಮಗಳನ್ನು ಸ್ಮರಿಸಬೇಕು. ಕೃಷ್ಣಪಕ್ಷದಲ್ಲಿ ಸಂಕರ್ಷಣಾದಿ ಶ್ರೀಕೃಷ್ಣಾಂತವಿರುವ 12 ನಾಮಗಳನ್ನು ಸ್ಮರಿಸಬೇಕು.

14) **ಚಕ್ರಮುದ್ರೆ ಧರಿಸುವಾಗ :** ಕಾಮಾಂತರ್ಗತ ದ್ಯುನಾಮಕ ಭಾರತೀಪತಿ ಪ್ರಾಣಾಂತರ್ಗತ ಹಿಂಕಾರಾಭಿನ್ನಕೃದ್ಧೋಲ್ಕಾಯ ನಮಃ

15) **ಶಂಖಮುದ್ರೆ ಧರಿಸುವಾಗ :** ಪೃಥ್ವಿನಾಮಕ ಭಾರತೀಪತಿ ಅಪಾನಾಂತರ್ಗತ ಅಂಭೃಣೀಪತಿ ಮಹೋಲ್ಕಾಯ ನಮಃ

16) **ಗದಾಮುದ್ರೆ ಧರಿಸುವಾಗ :** ದಿಗ್‌ನಾಮಕ ಭಾರತೀಪತಿ ವ್ಯಾನಾಂತಗಂತ ಲಕ್ಷ್ಮೀಪತಿ ನಿಧನಾಭಿನ್ನ ವೀರೋಲ್ಕಾಯ ನಮಃ

17) ಪದ್ಮ ಮುದ್ರೆ ಧರಿಸುವಾಗ : ವಾಙ್ನಾಮಕ ಭಾರತೀಪತಿ ಉದಾನಾಂತರ್ಗತ ದಕ್ಷಿಣಾಪತಿ ಪ್ರಸ್ಥಾವಾಭಿನ್ನದ್ಯುಲ್ಕಾಯ ನಮಃ

18) ನಾರಾಯಣ ಮುದ್ರೆ ಧರಿಸುವಾಗ : ವಿದ್ಯುನ್ನಾಮಕ ಭಾರತೀಪತಿಸಮಾನಾಂತರ್ಗತ ಜಯಂತೀಪತಿ ಉದ್ಗೀಥಾಭಿನ್ನ ಸಹಸ್ರೋಲ್ಕಾಯ ನಮಃ

19) ನಿರ್ಮಾಲ್ಯತೀರ್ಥ ತೆಗೆದುಕೊಳ್ಳುವಾಗ : ವಿಶ್ವಾಯ ನಮಃ ತೈಜಸಾಯ ನಮಃ ಪ್ರಾಜ್ಞಾಯ ನಮಃ

20) ನಿರ್ಮಾಲ್ಯತೀರ್ಥ ಪ್ರೋಕ್ಷಿಸಿಕೊಳ್ಳುವಾಗ : ತುರ್ಯಾಭಿನ್ನ ಮುಕುಂದಾಯ ನಮಃ

21) ಸಂಧ್ಯಾವಂದನೆ ಮಾಡುವಾಗ : ಶ್ರೀರಾಮಾಯ ನಮಃ

22) ಯಜ್ಞೋಪವೀತಧಾರಣ ಕಾಲದಲ್ಲಿ : ಶ್ರೀವಾಮನಾಯ ನಮಃ

23) ಶಂಖೋದಕವನ್ನು ಪ್ರೋಕ್ಷಿಸಿಕೊಳ್ಳುವಾಗ : ಮುಕುಂದಾಯ ನಮಃ

24) ತೀರ್ಥ ತೆಗೆದುಕೊಳ್ಳುವಾಗ : ರಾಮಾಯ ನಮಃ ಕೃಷ್ಣಾಯ ನಮಃ ವೇದವ್ಯಾಸಾಯ ನಮಃ

25) ಭಜನೆ ಮಾಡುವಾಗ : ಯೋಗೀಶ್ವರಾಯ ನಮಃ

26) ತುಳಸಿಯನ್ನು ಧರಿಸುವಾಗ, ತಿನ್ನುವಾಗ : ರಾಮಾಯ ನಮಃ

27) ಗುರುಹಿರಿಯರಿಗೆ ನಮಸ್ಕರಿಸುವಾಗ : ಗರುಡಾಂತರ್ಗತ ಶ್ರೀಹರಯೇ ನಮಃ

28) ಪ್ರದಕ್ಷಿಣೆ ಮಾಡುವಾಗ : ಶೇಷಾಂತರ್ಗತ ಹರಯೇ ನಮಃ

29) ದಾನ ಕೊಡುವಾಗ : ಪರಶುರಾಮಾಯ ನಮಃ

30) ದಾನ ತೆಗೆದುಕೊಳ್ಳುವಾಗ : ಶ್ರೀವಾಮನಾಯ ನಮಃ

31) ಹಾದಿ ನಡೆಯುವಾಗ : ಭೂವರಾಹಾಯ ನಮಃ

32) ನದಿಗಳನ್ನು ದಾಟುವಾಗ, ನೀರಿನಲ್ಲಿರುವಾಗ : ಮತ್ಸ್ಯಾಯ ನಮಃ

33) ಅಡವಿಯಲ್ಲಿ ಪ್ರಯಾಣಿಸುವಾಗ : ನಾರಸಿಂಹಾಯ ನಮಃ

34) ಆಕಾಶದಲ್ಲಿ ಪ್ರಯಾಣಿಸುವಾಗ : ತ್ರಿವಿಕ್ರಮಾಯ ನಮಃ

35) ಪರ್ವತಗಳಲ್ಲಿ ನಡೆಯುವಾಗ : ಪರಶುರಾಮಾಯ ನಮಃ

36) ರೋಗಾದಿಗಳು ಬಂದಾಗ : ಧನ್ವಂತರಯೇ ನಮಃ

37) ಔಷಧಿ ತೆಗೆದುಕೊಳ್ಳುವಾಗ : ವೈದ್ಯರೂಪ ನಾರಾಯಣಾಯ ನಮಃ

38) ಹೂವು ಮುಡಿಯುವಾಗ : ಕಪಿಲಾಯ ನಮಃ

39) ಮಗುವನ್ನು ಮುದ್ದಿಸುವಾಗ : ಕೃಷ್ಣಾಯ ನಮಃ

40) ತಾಂಬೂಲ ಮೆಲ್ಲುವಾಗ : ಪ್ರದ್ಯುಮ್ನಾಯ ನಮಃ

41) ಆಟಗಳನ್ನು ಆಡುವಾಗ : ಗೋವಿಂದಾಯ ನಮಃ

42) ಆನಂದದಲ್ಲಿರುವಾಗ, ಹರಿಕಥೆ ಕೇಳುವಾಗ : ಹಯವದನಾಯ ನಮಃ ವೇದವ್ಯಾಸಾಯ ನಮಃ

43) ಏಕಾಂತದಲ್ಲಿರುವಾಗ : ಗೋಪೀಜನಜಾರ ಕೃಷ್ಣಾಯ ನಮಃ

44) ಮಲಗುವಾಗ : ಪದ್ಮನಾಭಾಯ ನಮಃ

## ಅಡಿಗೆಯ ಉಪಕರಣಗಳಲ್ಲಿ ಭಗವದ್ರೂಪಗಳು

1. ಅಡಿಗೆ ಮಾಡುವ ಒಲೆಗಳಲ್ಲಿ : ಅಗ್ನಯೇ ನಮಃ ಭಾರ್ಗವಾಯ ನಮಃ
2. ಕುರುಳು, ಕಟ್ಟಿಗೆ, ಇದ್ದಲುಗಳಲ್ಲಿ : ವಸಂತ, ಭಾರ್ಗವ
3. ಅಡಿಗೆ ಮಾಡುವ ಪಾತ್ರೆಗಳಲ್ಲಿ : ವಾರುಣಿ, ಅನಂತ
4. ಭೋಜನ ಮಾಡುವ ಬಾಳೆದೆಲೆ ಮುಂತಾದವುಗಳಲ್ಲಿ : ದುರ್ಗಾ, ಸತ್ಯ
5. ತುಪ್ಪದ ಬಟ್ಟಲಿನಲ್ಲಿ : ಸೌವರ್ಣೀ, ದತ್ತ

## ನಿತ್ಯತೃಪ್ತನಿಗೆ ಆಹಾರಪದಾರ್ಥಗಳನ್ನು ಸಿದ್ಧಗೊಳಿಸುವ ನಿರ್ಜರರು

1. ಅನ್ನವನ್ನು : ಸರಸ್ವತೀ ರಮೇಷ್ಠಿಯರು ಮಾಡುತ್ತಾರೆ.
2. ತೊವ್ವೆಯನ್ನು : ಶ್ರೀದೇವಿ ಮಾಡುತ್ತಾಳೆ.
3. ಭಕ್ಷ್ಯಗಳನ್ನು : ಚತುರ್ಮುಖ ಬ್ರಹ್ಮದೇವರು ಮಾಡುತ್ತಾರೆ.
4. ಪರಮಾನ್ನಗಳನ್ನು : ಭಾರತೀದೇವಿಯು ಮಾಡುತ್ತಾಳೆ.
5. ಕಾಯಿಪಲ್ಯಗಳನ್ನು : ಚಂದ್ರನು ಮಾಡುತ್ತಾನೆ.
6. ಅಡಿಗೆ ಮಾಡುವವರಲ್ಲಿ ಶ್ರೀದೇವಿಯು ಇರುತ್ತಾಳೆ. ಅವಳಲ್ಲಿ ವಿಶ್ವಂಭರ ನಾಮಕ ಪರಮಾತ್ಮನು ಇರುತ್ತಾನೆ.
7. ನೈವೇದ್ಯಕ್ಕಾಗಿ ಆಹಾರ ಪದಾರ್ಥಗಳನ್ನು ಇಡುವ ಮಂಡಲದಲ್ಲಿ ಭೂದೇವಿಯು ಇರುತ್ತಾಳೆ. ಅವಳ ಅಂತರ್ಯಾಮಿಯಾಗಿ ಭೂವರಾಹ ದೇವರು ಇರುತ್ತಾರೆ.
8. ಕರ್ಮಾಭಿಮಾನಿಯಾದ ಪುಷ್ಕರನು ಮಾಡಿದ ಪದಾರ್ಥಗಳನ್ನು ಉದ್ಧಿ ಮಾಡುವನು.
9. ಆಹಾರ ಪದಾರ್ಥಗಳ ಮೇಲೆ ಹೊದಿಸುವ ಬಟ್ಟೆಯಲ್ಲಿ ಗಣಪತಿ ಹಾಗೂ ಸನತ್ಕುಮಾರರಿರುತ್ತಾರೆ.
10. ಆಹಾರ ಪದಾರ್ಥಗಳಲ್ಲಿ ಹಾಕುವ ತುಳಸಿಯಲ್ಲಿ ಶ್ರೀರಮಾದೇವಿಯು ಇರುತ್ತಾಳೆ. ಇವಳ ಅಂತರ್ಯಾಮಿಯಾಗಿ ಕಪಿಲನಿರುತ್ತಾನೆ.
11. ನೈವೇದ್ಯ ಇಟ್ಟಾಗ ಹಾಕಿದ ಪರದೆಯಲ್ಲಿ ವಿಷ್ವಕ್ಸೇನನು ಇರುತ್ತಾನೆ. ಇವನಲ್ಲಿ ಅಂತರ್ಯಾಮಿಯಾಗಿ ಪುರುಷನಾಮಕ ಪರಮಾತ್ಮ ಇರುತ್ತಾನೆ.

## ಆಹಾರಪದಾರ್ಥಗಳಲ್ಲಿರುವ ದೇವತೆಗಳ ಹಾಗೂ ಭಗವಂತನ ರೂಪಗಳು

| | ಆಹಾರಪದಾರ್ಥಗಳು | ದೇವತೆಗಳು | ಭಗವಂತ |
|---|---|---|---|
| 1. | ಉಪ್ಪು | ನಿಋತಿ | ಜನಾರ್ದನ |
| 2. | ಚಟ್ನಿಣಿ ಮುಂತಾದ ವ್ಯಂಜನಗಳು | ಬ್ರಹ್ಮ-ಬೃಹಸ್ಪತಿ | ಪ್ರದ್ಯುಮ್ನ |
| 3. | ಕಾಯಿಗಳಿಂದ ಮಾಡಿದ ಪಲ್ಯಗಳು | ಶೇಷದೇವರು | ಪದ್ಮನಾಭ |
| 4. | ತೊಪ್ಪಲುಗಳಿಂದ ಮಾಡಿದ ಪಲ್ಯಗಳು | ಮಿತ್ರನಾಮಕಸೂರ್ಯ | ಹೃಷೀಕೇಶ |
| 5. | ತೊವ್ವೆ | ಗರುಡ | ಶ್ರೀಧರ |
| 6. | ಹುಳಿಯಿಲ್ಲದ ಪದಾರ್ಥಗಳು | ರುದ್ರ | ಸಂಕರ್ಷಣ |

| | | | |
|---|---|---|---|
| 7. | ಒಗರು ಪದಾರ್ಥಗಳು | ಯಮ | ಅನಿರುದ್ಧ |
| 8. | ಪರಮಾನ್ನ | ಭಾರತಿ | ನಾರಾಯಣ |
| 9. | ಹುಳಿಪದಾರ್ಥಗಳು, ಚಿತ್ರಾನ್ನಾದಿಗಳು | ಗೌರಿ | ದಾಮೋದರ |
| 10. | ಭಕ್ಷ್ಯಗಳು | ಸೂರ್ಯ | ಮಾಧವ |
| 11. | ಮಂಡಿಗೆ | ಬ್ರಹ್ಮ | ಮಧುಸೂದನ |
| 12. | ಸಕ್ಕರೆ-ಬೆಲ್ಲ | ಇಂದ್ರ | ವಾಸುದೇವ |
| 13. | ಎಣ್ಣೆ-ತುಪ್ಪಗಳಿಂದ ಕರಿದ ಪದಾರ್ಥಗಳು | ಜಯಂತ, ಬುಧ | ಅಧೋಕ್ಷಜ |
| 14. | ಉದ್ದಿನಬೇಳೆಗಳಿಂದ ಮಾಡಿದ ಒಡೆ ಮುಂತಾದವು | ಸ್ವಾಯಂಭುವಮನು | ಅಚ್ಯುತ |
| 15. | ಕುಂಬಳಕಾಯಿ, ಎಳ್ಳು, ಉದ್ದಿನಿಂದ ಮಾಡಿದ ಸಂಡಿಗೆ, ಹಪ್ಪಳ ಮುಂತಾದವುಗಳಲ್ಲಿ | ದಕ್ಷಪ್ರಜೇಶ್ವರ | ನಾರಸಿಂಹ |
| 16. | ಹಣ್ಣುಗಳಿಗೆ ಸಂಬಂಧಿಸಿದ ರಸಗಳು | ಪ್ರಾಣ | ಉಪೇಂದ್ರ |
| 17. | ಅನ್ನದಲ್ಲಿ | ಚಂದ್ರ | ಕೇಶವ |
| 18. | ತುಪ್ಪ | ಲಕ್ಷ್ಮೀ | ಗೋವಿಂದ |
| 19. | ಬೆಣ್ಣೆ | ಮುಖ್ಯಪ್ರಾಣ | ತ್ರಿವಿಕ್ರಮ |
| 20. | ಹಾಲು | ಸರಸ್ವತಿ | ವಿಷ್ಣು |
| 21. | ಮೊಸರು | ಚಂದ್ರ | ವಾಮನ |
| 22. | ಕುಡಿಯುವ ನೀರು | ಬುಧ | ಕೃಷ್ಣ |
| 23. | ಸಾಸುವೆ, ಇಂಗು, ಯಾಲಕ್ಕಿ, ಕೇಸರಿ, ಕರ್ಪೂರ, ಜೀರಿಗೆ ಮುಂತಾದ ಪರಿಮಳ ಪದಾರ್ಥಗಳು | ಮನ್ಮಥ | ಪುರುಷೋತ್ತಮ |
| 24. | ಪಾನಕ | ರತಿ | ವಿಶ್ವ |
| 25. | ತಾಂಬೂಲ | ಗಂಗಾ | ಹರಿ |

## ಆಹಾರಪದಾರ್ಥಗಳನ್ನು ಉಣ್ಣುವಾಗ ಸ್ಮರಿಸಬೇಕಾದ ಭಗವದ್ರೂಪಗಳು

1. ಪರಮಾನ್ನವನ್ನು - ಕೃತಿಪತಿ ಪ್ರದ್ಯುಮ್ನನನ್ನು
2. ಅನ್ನವನ್ನು - ಮಾಯಾಪತಿ ವಾಸುದೇವನನ್ನು
3. ಕಾಯಿಪಲ್ಯಗಳನ್ನು - ವಾಮನ, ಧನ್ವಂತ್ರಿಯರನ್ನು
4. ತೊವ್ವೆ ಹುಳಿಗಳನ್ನು - ಗರುಡಾರೂಢ ನಾರಾಯಣನನ್ನು
5. ಭಕ್ಷ್ಯಗಳನ್ನು - ಜಯಾಪತಿ ಸಂಕರ್ಷಣ, ಅಚ್ಯುತರನ್ನು

6. ಬೆಣ್ಣೆ ತುಪ್ಪಗಳನ್ನು - ಶಾಂತೀಪತಿ ಅನಿರುದ್ಧ, ತಾಂಡವ ಕೃಷ್ಣರನ್ನು
7. ಎಣ್ಣೆಯಲ್ಲಿ, ಕರಿದ ಪದಾರ್ಥಗಳನ್ನು - ವೈಕುಂಠಪತಿ ವೆಂಕಟೇಶನನ್ನು
8. ಮೊಸರನ್ನವನ್ನು - ಶ್ರೀನಿವಾಸನನ್ನು
9. ಹಣ್ಣುಗಳನ್ನು - ಬಾಲಕೃಷ್ಣನನ್ನು
10. ನೀರು ಕುಡಿಯುವಾಗ - ವಿಷ್ಣುವನ್ನು
11. ತುತ್ತುತುತ್ತಿಗೂ - ಗೋವಿಂದಾ ಗೋವಿಂದಾ ಎಂದು ಸ್ಮರಿಸಬೇಕು
12. ವಾಯುಸ್ಥ ಇಂದಿರಾರಮಣ ಮುಕುಂದನನ್ನು ಸ್ಮರಿಸುತ್ತಾ ಉತ್ತರಾಪೋಶನವನ್ನು ತೆಗೆದುಕೊಳ್ಳಬೇಕು.

## ಮಗುವಿನ ಲಾಲನೆ-ಪಾಲನೆಗಳಲ್ಲಿ ಭಗವದ್ರೂಪಗಳ ಚಿಂತನೆ

1. ಮಗುವನ್ನು ಎಬ್ಬಿಸುವಾಗ 'ನಾರಾಯಣ' ಎಂದು ಹೇಳಬೇಕು.
2. ಮಗುವನ್ನು ಮುದ್ದಿಸುವಾಗ 'ಕೃಷ್ಣನಾಮ'ಸಂಕೀರ್ತನೆಯನ್ನು ಮಾಡಬೇಕು.
3. ಮಗುವಿಗೆ ಎಣ್ಣೆಯನ್ನು ಹಚ್ಚುವಾಗ 'ಲಕ್ಷ್ಮೀಪತಿ ನಾರಾಯಣ' ಎಂದು ಹೇಳಬೇಕು.
4. ಮಗುವಿಗೆ ನೀರೆರೆಯುವಾಗ 'ಗಂಗಾಂತರ್ಗತ ವಿಷ್ಣುವನ್ನು' ಸ್ಮರಿಸಬೇಕು.
5. ಮಗುವಿಗೆ ವಿಧವಿಧವಾಗಿ ವಸ್ತ್ರಗಳನ್ನು ತೊಡಿಸಿ ಆಭರಣಗಳಿಟ್ಟು ಅಲಂಕರಿಸುವಾಗ 'ಮಾರನಯ್ಯ ಗೋಪಾಲನನ್ನು' ಸ್ಮರಿಸಬೇಕು.
6. ಮಗುವಿಗೆ ಊಟ ಮಾಡಿಸುವಾಗ 'ಗೋವಿಂದನ' ನಾಮವನ್ನು ಹೇಳುತ್ತಿರಬೇಕು.
7. ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುವಾಗ 'ಪದ್ಮನಾಭನ' ನಾಮವನ್ನು ಸ್ಮರಿಸಬೇಕು.
8. ಮಗುವಿನೊಡನೆ ಆಟಪಾಟಗಳನ್ನು ಆಡುವಾಗ 'ಗೋವಿಂದನ' ನಾಮವನ್ನು ನೆನೆಯುತ್ತಿರಬೇಕು.

## ಮಗುವಿಗೆ ಶ್ರೀರಂಗನ ರಕ್ಷೆ

ತಾಯಿ ಮಗುವಿನ ರಕ್ಷಣೆಗಾಗಿ ಪ್ರತಿದಿವಸ ಭಗವಂತನ ನಾಮಗಳನ್ನು ಪಠಿಸುತ್ತಾ ಅವಯವಗಳಿಗೆ ರಕ್ಷೆಯನ್ನು ಇಡಬೇಕು.

| | | | |
|---|---|---|---|
| 1. | ಪಾದಗಳಿಗೆ | ಅಜನ | ರಕ್ಷೆ ಇರಲಿ |
| 2. | ಜಾನುಗಳಿಗೆ | ಅಣಿಮನ | ರಕ್ಷೆ ಇರಲಿ |
| 3. | ತೊಡೆಗಳಿಗೆ | ಯಜ್ಞನ | ರಕ್ಷೆ ಇರಲಿ |
| 4. | ಕಟಿಗೆ | ಅಚ್ಯುತನ | ರಕ್ಷೆ ಇರಲಿ |
| 5. | ಜಠರಕ್ಕೆ | ಹಯಗ್ರೀವನ | ರಕ್ಷೆ ಇರಲಿ |
| 6. | ನಾಭಿಗೆ | ಪದ್ಮನಾಭನ | ರಕ್ಷೆ ಇರಲಿ |
| 7. | ಗುಹ್ಯೇಂದ್ರಿಯಕ್ಕೆ | ಅನಿರುದ್ಧನ | ರಕ್ಷೆ ಇರಲಿ |
| 8. | ಹೃದಯಕ್ಕೆ | ಕೇಶವನ | ರಕ್ಷೆ ಇರಲಿ |
| 9. | ಎದೆಗೆ | ಈಶನ | ರಕ್ಷೆ ಇರಲಿ |

| | | | |
|---|---|---|---|
| 10. | ಭುಜಗಳಿಗೆ | ವಿಷ್ಣುವಿನ | ರಕ್ಷೆ ಇರಲಿ |
| 11. | ಬಾಯಿಗೆ | ಉರುಕ್ರಮನ | ರಕ್ಷೆ ಇರಲಿ |
| 12. | ಶಿರಸ್ಸಿಗೆ | ಈಶ್ವರನ | ರಕ್ಷೆ ಇರಲಿ |
| 13. | ಕ್ರಿಯೆ ಮಾಡುವಾಗ | ಗೋವಿಂದನ | ರಕ್ಷೆ ಇರಲಿ |
| 14. | ನಡೆಯುವಾಗ | ವೈಕುಂಠನ | ರಕ್ಷೆ ಇರಲಿ |
| 15. | ಕುಳಿತಾಗ | ಶ್ರೀಪತಿಯ | ರಕ್ಷೆ ಇರಲಿ |
| 16. | ದೃಷ್ಟಿ ತಾಕದಂತೆ | ನರಸಿಂಹನ | ರಕ್ಷೆ ಇರಲಿ |
| 17. | ಮುಂಭಾಗದಲ್ಲಿ | ಈಶ್ವರನ | ರಕ್ಷೆ ಇರಲಿ |
| 18. | ಬಲಭಾಗದಲ್ಲಿ | ಧನುರ್ಧಾರಿ ರಾಮನ | ರಕ್ಷೆ ಇರಲಿ |
| 19. | ಮೇಲ್ಭಾಗದಲ್ಲಿ | ಉಪೇಂದ್ರನ | ರಕ್ಷೆ ಇರಲಿ |
| 20. | ಕೆಳಗಡೆಯಲ್ಲಿ | ತಾರ್ಕ್ಷ್ಯನ | ರಕ್ಷೆ ಇರಲಿ |
| 21. | ಇಂದ್ರಿಯಗಳಿಗೆ | ಹೃಷೀಕೇಶನ | ರಕ್ಷೆ ಇರಲಿ |
| 22. | ಚಿತ್ತಕ್ಕೆ | ನಾರಾಯಣನ | ರಕ್ಷೆ ಇರಲಿ |
| 23. | ಮನಸ್ಸಿಗೆ | ಯೋಗೀಶ್ವರನ | ರಕ್ಷೆ ಇರಲಿ |

## ಹರಿಕಥಾಮೃತಸಾರದಲ್ಲಿ ನಿತ್ಯಾನುಸಂಧಾನಕ್ರಮ

ಶೌಚ :-

ಅಲಕುಮಿಯು ತಾ ನೀಚಳೆನಿಹಳು ಕಲಿ ಪರಮನೀಚಮನವನಿಂ
ದುಳಿದ ಪಾಪಿಗಳಿಲ್ಲ ನೋಡಲು ಈ ಜಗತ್ರಯದಿ |
ಮಲವಿಸರ್ಜನ ಕಾಲದಲಿ ಕತ್ತಲೆಯೊಳಗೆ ಕಶ್ಮಲ ಕುಮಾರ್ಗ
ಸ್ಥಳಗಳಲಿ ಚಿಂತನೆಯ ಮಾಳ್ಪುದು ಬಲ್ಲವರು ನಿತ್ಯ ||

ಸ್ನಾನ :-

ಶ್ರೀವರನಿಗಭಿಷೇಕವೆಂದರಿಯುವುದೀ ವಸುಂಧರೆಯೊಳಗೆ ಬಲ್ಲವ
ರಾವಜಲದಲಿ ಮಿಂದರೆಯು ಗಂಗಾದಿತೀರ್ಥಗಳು |
ತಾ ವೊಲಿದು ಬಂದಲ್ಲಿ ನೆಲೆಗೊಂಡೀವರಖಿಳಾರ್ಥಗಳನರಿಯದ
ಜೀವರಮರತರಂಗಿಣಿಯನ್ನೆದಿದರು ಫಲವೇನು || 7 ||

ವಸ್ತ್ರ ಉಡುವಾಗ :-

ವಾಸುದೇವನು ಕರೆಸುವನು ಕಾರ್ಪಾಸನಾಮದಿ ಸಂಕರುಷಣನು
ವಾಸವಾಗಿಹ ತೂಲದೊಳು ತಂತುಗನು ಪ್ರದ್ಯುಮ್ನ |
ವಾಸರೂಪನನಿರುದ್ಧದೇವನು ಭೂಷಣನು ತಾನಾಗಿ ತೋರ್ಪ ಪ
ರೇಶ ನಾರಾಯಣನು ಸರ್ವದಾ ಮಾನ್ಯಮಾನದನು ||

ಲಲನೆಯಿಂದೊಡಗೂಡಿ ಟೈಲಗಳೊಳಗೆ ಓತಪ್ರೋತರೂಪದಿ
ನೆಲಸಿಹನು ಚತುರಾತ್ಮಕ ಜಗನ್ನಾಥವಿಠಲನು |
ಧಳಿಬಿಸಿಲು ಮಳೆಗಾಳಿಯಿಂದರೆಘಳಿಗೆ ಬಿಡದಲೆ ಕಾವನೆಂದರಿ
ದಿಳೆಯುಳರ್ಚಿಸುತಿರು ಸದಾ ಸರ್ವಾಂತರಾತ್ಮಕನ ||

**ಗೋಪೀಚಂದನಧಾರಣೆ ಮಾಡುವಾಗ :-**

ಮಂದನಾದರು ಸರಿಯೆ ಗೋಪೀಚಂದನಶ್ರೀಮುದ್ರೆಗಳ ನಲು
ವಿಂದ ಧರಿಸುತ ಶ್ರೀತುಲಸಿ ಪದುಮಾಕ್ಷಿ ಸರಗಳನು |
ಕಂಧರದ ಮಧ್ಯದಲಿ ಧರಿಸಿ ಮುಕುಂದ ಶ್ರೀಭೂರಮಣ ತ್ರಿಜಗ -
ದ್ವಂದ್ಯ ಸರ್ವಸ್ವಾಮಿ ಮಮ ಕುಲ ದೈವವನೇ ಪೊರವ ||

**ಮುದ್ರೆ ಹಚ್ಚುವಾಗ :-**

ತೋರುತಿಪ್ಪನು ಚಕ್ರದಲಿ ಹಿಂಕಾರನಾಮಕ ಶಂಖದಲಿ ಪ್ರತಿ
ಹರ ಗದೆಯಲಿ ನಿಧನ ಪದ್ಮದಲಿಪ್ಪ ಪ್ರಸ್ತಾವ |
ಕಾರುಣಿಕನುದ್ಗೀಥನಾಮದಿ ಮಾರಮಣನೈರೂಪಗಳ ಶಂ
ಖಾರಿ ಮೊದಲಾದಾಯುಧಗಳೊಳು ಸ್ಮರಿಸಿ ಧರಿಸುತಿರು ||

**ಪಾಪಪುರುಷವಿಸರ್ಜನೆ :-**

ನಾಭಿಯಲಿ ಷಟ್ಕೋಣಮಂಡಲದೀಭವಿಷ್ಮದ್ಬ್ರಹ್ಮನೊಳು ಮು
ಕ್ತಾಭ ಶ್ರೀಪ್ರದ್ಯುಮ್ನನಿಪ್ಪನು ವಿಬುಧಗಣಸೇವ್ಯ |
ಶೋಭಿಸುತ ಕೌಸ್ತುಭವ ಮೊದಲಾದಾಭರಣ ಆಯುಧಗಳಿಂದ ಮ
ಹಾಭಯಂಕರ ಪಾಪಪುರುಷನ ಶೋಷಿಸುತ ನಿತ್ಯ ||
ಆ ನಳಿನ ಭವನಾಡಿಯೊಳಗೆ ತ್ರಿಕೋಣ ಚಕ್ರವು ಇಪ್ಪುದಲ್ಲಿ ಕೃ
ಶಾನುಮಂಡಲ ಮಧ್ಯಗನು ಸಂಕರುಷಣಾಹ್ವಯನು |
ಘನಪಾಪಾತ್ಮಕ ಪುರುಷನ ದಹನಗೈಸುತ ದಿನದಿನದಿ ವಿ
ಜ್ಞಾನಮಯ ಶ್ರೀವಾಸುದೇವನ ಐದಿಸುವ ಕರುಣೆ ||

**ಸ್ತೋತ್ರ :-**

ವಾಸುದೇವಗೆ ಸ್ವಪ್ನ ಸುಪ್ತಿ ಪಿಪಾಸೆ ಕ್ಷುದ್ಭಯಶೋಕ ದೇಹಾ
ಯಾಸ ವಿಸ್ಮೃತಿ ಮಾತ್ಸರಿಯ ಮದ ಪುಣ್ಯಪಾಪದಿ |
ದೋಷವರ್ಜಿತನೆಂದು ಬ್ರಹ್ಮಸದಾಶಿವಾದಿ ಸಮಸ್ತ ದಿವಿಜರು
ಪಾಸನೆಯ ಗೈದೆಲ್ಲಕಾಲದಿ ಮುಕ್ತರಾಗಿಹರು ||

**ಪ್ರಾರ್ಥನೆ :-**

ಆವ ದೇಹವ ಕೊಡಲಿ ಹರಿ ಮತ್ತಾವ ಲೋಕದೊಳಿಡಲಿ ತಾ ಮ
ತ್ತಾವ ದೇಶದೊಳಿರಲಿ ಆವಾವಸ್ಥೆಗಳು ಬರಲಿ |

ಈ ವಿಧದಿ ಜಡಚೇತನದೊಳು ಪರಾವರೇಶನ ರೂಪಗುಣಗಳ
ಭಾವಿಸುತ ಸುಜ್ಞಾನ ಭಕುತಿಯ ಬೇಡು ಕೊಂಡಾಡು ||

**ಉಪಕರಣಗಳು ತೊಳೆಯುವಾಗ :-**

ಕರಣನಿಯಾಮಕನು ತಾನುಪಕರಣದೊಳಗೈವತ್ತೆರಡು ಸಾ
ವಿರದ ಹದಿನಾಲ್ಕಧಿಕಶತ ರೂಪಂಗಳನೆ ಧರಿಸಿ |
ಇರುತಿಹನು ತದ್ರೂಪ ನಾಮಗಳರಿತು ಪೂಜಿಸುತಿಹರ ಪೂಜೆಯ
ನಿರುತ ಕೈಕೊಂಬನು ತೃಷಾರ್ತನು ಜಲವ ಕೊಂಬಂತೆ ||

ಉಪಕರಣಗಳಲ್ಲಿ 52,114 ಭಗವದ್ರೂಪಗಳು ಇರುತ್ತವೆ.

ಸಾಯಂಕಾಲದಲ್ಲಿ ತಾರತಮ್ಯಭಜನೆ ಮಾಡಬೇಕು. ಕೊನೆಯಲ್ಲಿ ಮಂಗಳ, ಲಾಲಿ, 'ನೆರೆನಂಬಿದೆ', 'ನಂದೇನದೋಸ್ವಾಮಿ', 'ತನು ನಿನ್ನದು', 'ಸಾಧನಕೆ ಬಗೆಗಾಣೆ', ಮುಂತಾದ ಹಾಡುಗಳನ್ನು ಹೇಳಬೇಕು.

**ಸರ್ವಕರ್ಮಸಮರ್ಪಣೆ :-**

ಚತುರವಿಧ ಪುರುಷಾರ್ಥಪಡೆವರೇ ಚತುರದಶಲೋಕಗಳ ಮಧ್ಯದೋ
ಳಿತರುಪಾಯಗಳಿಲ್ಲ ನೋಡಲು ಸಕಲಶಾಸ್ತ್ರದಲಿ |
ಸತತ ವಿಷಯೇಂದ್ರಿಯಗಳಲಿ ಪ್ರವಿತತನೆನಿಸಿ ರಾಜಿಸುವ ಲಕ್ಷ್ಮೀ
ಪತಿಗೆ ಸರ್ವಸಮರ್ಪಣೆಯೆ ಮಹಾಪೂಜೆ ಸದುಪಾಯ ||
ಹರಿಯೆ ಮುಖ್ಯನಿಯಾಮಕನು ಎಂದರಿತು ಪುಣ್ಯಾಪುಣ್ಯ ಹರುಷಾ
ಹರುಷ ಲಾಭಾಲಾಭ ಸುಖದುಃಖಾದಿ ದ್ವಂದ್ವಗಳ |
ನಿರುತ ಅವನಂಘ್ರಿಗೆ ಸಮರ್ಪಿಸಿ ನರಕ ಭೂಸ್ವರ್ಗಾಪವರ್ಗದಿ
ಕರಣನಿಯಾಮಕನ ಸರ್ವತ್ರದಲಿ ನೆನೆವುತಿರು ||
ಭೋಗ್ಯವಸ್ತುಗಳೊಳಗೆ ಯೋಗ್ಯಾಯೋಗ್ಯರಸಗಳನರಿತು ಯೋಗ್ಯಾ
ಯೋಗ್ಯದಲಿ ನೆಲೆಸಿಪ್ಪ ಹರಿಗೆ ಸಮರ್ಪಿಸನುದಿನದಿ |
ಭಾಗ್ಯಬಡತನ ಬರಲು ಹಿಗ್ಗದೆ ಕುಗ್ಗಿ ಸೊರಗದ ಸದ್ಭಕುತಿ ವೈ
ರಾಗ್ಯಗಳನೇ ಮಾಡು ನೀ ನಿರ್ಭಾಗ್ಯನೆನಿಸದಲೆ ||
ಇಂದ್ರಿಯಗಳಿಂ ಮಾಳ್ಪ ಕರ್ಮ ದ್ವಂದ್ವಗಳ ತನಗರ್ಪಿಸಲು ಗೋ
ವಿಂದ ಪುಣ್ಯವಕೊಂಡು ಪಾಪವ ಭಸ್ಮವನೇ ಮಾಳ್ಪ |
ಇಂದಿರೇಶನು ಭಕ್ತಜನರನು ನಿಂದಿಸುವರೊಳಗಿಪ್ಪ ಪುಣ್ಯವ
ತಂದು ತನ್ನವಗೀವ ಪಾಪಗಳವರಿಗುಣಿಸುವನು ||

**ರಾತ್ರಿಕಾಲದಲ್ಲಿ :-**

ಜ್ಯೋತಿಯೊಳಗಿಪ್ಪನು ಕಪಿಲ ಪುರುಹೂತಮುಖ ದಿಕ್ಪತಿಗಳಿಂದ ಸ
ಮೇತನಾಗೀ ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ |
ಶ್ವೇತವರ್ಣ ಚತುರ್ಭುಜನು ಸಂಪ್ರೀತಿಯಿಂದಲಿ ಸ್ಥೂಲವಿಷಯವ
ಚೇತನರಿಗುಂಡುಣಿಪ ಜಾಗ್ರತೆ ಇತ್ತು ನೃಗಜಾಸ್ಯ ||

ಚಿತ್ತಜೇಂದ್ರರು ಮನದೊಳಿಪ್ಪರು ಕೃತ್ತಿವಾಸನು ಅಹಂಕಾರದಿ
ಚಿತ್ತಚೇತನಮಾನಿಗಳು ವಿಹಗೇಂದ್ರಫಣಿಪರೊಳು |
ನಿತ್ಯದಲಿ ನೆಲೆಗೊಂಡು ಹತ್ತೊಂಭತ್ತು ಮೊಗತ್ಯೆಜಸನುಸ್ವಪ್ನಾ
ವಸ್ಥೆಯೈದಿಸಿ ಜೀವರನು ಪ್ರವಿವಿಕ್ತಭುಕುವೆನಿಪ ||

ಜ್ಞಾನಮಯ ತೈಜಸನು ಹೃದಯಸ್ಥಾನವೈದಿಸಿ ಪ್ರಾಜ್ಞನೆಂಬಭಿ
ಧಾನದಿಂ ಕರೆಸುತ್ತ ಚಿತ್ಸುಖವ್ಯಕ್ತಿಯನೆ ಕೊಡುತ |
ಆನತೇಷ್ಟಪ್ರದನು ಅನುಸಂಧಾನವೀಯದೆ ಸುಪ್ತಿಯೈದಿಸಿ
ತಾನೆ ಪುನರಪಿ ಸ್ವಪ್ನಜಾಗ್ರತೆ ಈವ ಚೇತನಕೆ ||

## ದೇವತಾತಾರತಮ್ಯ

ಸರ್ವೇಷಾಂ ಚ ಹರಿರ್ನಿತ್ಯಂ ನಿಯಂತಾ ತದ್ವಶಾಃ ಪರೇ |
ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ |
ಏತದ್ ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ ಕಥಂಚನ ||

1. ಪರಮಪುರುಷ ನಾರಾಯಣ.
2. ಪರಾಪ್ರಕೃತಿ ಶ್ರೀ-ಭೂ-ದುರ್ಗಾರೂಪಳಾದ ಲಕ್ಷ್ಮಿ.
3. ಚತುರ್ಮುಖ ಬ್ರಹ್ಮ ಮತ್ತು ಪ್ರಧಾನವಾಯು.
4. ಚತುರ್ಮುಖ ಪತ್ನಿ ಸರಸ್ವತಿ ಮತ್ತು ಪ್ರಧಾನವಾಯು ಪತ್ನಿಭಾರತಿ.
5. ಗರುಡ, ಶೇಷ ಮತ್ತು ರುದ್ರ (ಏಕಾದಶರುದ್ರರಲ್ಲಿ ಪ್ರಧಾನ)
6. ಕೃಷ್ಣಾವತಾರದಲ್ಲಿ ಷಣ್ಮಹಿಷಿಯರಾಗಿ ಅವತರಿಸಿದ ಆರು ಮಂದಿ ದೇವಿಯರು : ನೀಳಾ, ಭದ್ರಾ, ಮಿತ್ರವಿಂದಾ, ಕಾಳಿಂದೀ, ಲಕ್ಷಣಾ ಮತ್ತು ಜಾಂಬವತೀ
7. ಗರುಡ ಪತ್ನಿ ಸುಪರ್ಣ, ಶೇಷಪತ್ನಿ ವಾರುಣಿ ಮತ್ತು ರುದ್ರಪತ್ನಿ ಪಾರ್ವತಿ.
8. ಇಂದ್ರ ಮತ್ತು ವಿಷ್ಣುಪುತ್ರ ಕಾಮ. (ಈ ಕಾಮನೇ ಚತುರ್ಮುಖ ಬ್ರಹ್ಮಪುತ್ರನಾದ ಸನತ್‌ಕುಮಾರ ಮತ್ತು ರುದ್ರಪುತ್ರನಾದ ಷಣ್ಮುಖ ಅಥವಾ ಕುಮಾರ.)
9. ಅಹಂ ಪ್ರಾಣ (49 ಮರುತ್ತುಗಳಲ್ಲಿ ಪ್ರಧಾನ)
10. ಇಂದ್ರ ಪತ್ನಿ ಶಚಿ, ಕಾಮ ಪತ್ನಿ ರತಿ, ಕಾಮ ಪುತ್ರ ಅನಿರುದ್ಧ, ದೇವಗುರು ಬೃಹಸ್ಪತಿ, ಸ್ವಾಯಂಭುವ ಮನು ಮತ್ತು ದಕ್ಷಪ್ರಜಾಪತಿ.
11. ಪ್ರವಹವಾಯು (49 ಮರುತ್ತುಗಳಲ್ಲಿ ಎರಡನೆಯವ)
12. ಸೂರ್ಯ (12 ಆದಿತ್ಯರಲ್ಲಿ ಮೂರನೆಯವ. ಮೊದಲಿನವ ವಿಷ್ಣು ; ಎರಡನೆಯವ ಇಂದ್ರ. ಆದಿತ್ಯ ಗಣದಲ್ಲಿ ಇಂದ್ರನ ತಮ್ಮನಾಗಿ ಜನಿಸಿದ್ದರಿಂದಲೇ ವಿಷ್ಣುವನ್ನು ಉಪೇಂದ್ರ ಎಂದು ಕರೆಯುತ್ತಾರೆ. ಈ ಇಬ್ಬರು ಈ ಮೊದಲು 1ನೆಯ ಮತ್ತು 8ನೆಯ ಕಕ್ಷೆಯಲ್ಲಿ ಬಂದಿದ್ದಾರೆ.) ಚಂದ್ರ, ಯಮ (10 ಮಂದಿ ಪಿತೃಪತಿಗಳಲ್ಲಿ ಮೂವರು ಪ್ರಮುಖರು. ಅವರಲ್ಲು ಚಂದ್ರ-ಯಮ ಈ ಇಬ್ಬರು ಪ್ರಧಾನರು) ಮತ್ತು ಸ್ವಾಯಂಭುವಮನುವಿನ ಪತ್ನಿ ಶತರೂಪಾ.

13. ವರುಣ (12 ಆದಿತ್ಯರಲ್ಲಿ ನಾಲ್ಕನೆಯವ)
14. ನಾರದ.
15. ಅಗ್ನಿ (18 ವಸುಗಳಲ್ಲಿ ಪ್ರಧಾನ). ಭೃಗುಮಹರ್ಷಿ ಮತ್ತು ದಕ್ಷಪ್ರಜಾಪತಿಯ ಪತ್ನಿ ಪ್ರಸೂತಿ.
16. ವೈವಸ್ವತ ಮನು, ವಿಶ್ವಾಮಿತ್ರ ಮತ್ತು ಏಳು ಮಂದಿ ಪುರಾತನ ಸಪ್ತರ್ಷಿಗಳು : ಮರೀಚಿ, ಅತ್ರಿ, ಅಂಗಿರಸ್, ಪುಲಸ್ತ್ಯ, ಪುಲಹ, ಕ್ರತು ಮತ್ತು ವಸಿಷ್ಠ.
17. ಮಿತ್ರ (12 ಆದಿತ್ಯರಲ್ಲಿ ಐದನೆಯವ). ನಿಋತಿ, ಬೃಹಸ್ಪತಿಯ ಪತ್ನಿ ತಾರೆ ಮತ್ತು ಪ್ರವಹವಾಯುವಿನ ಪತ್ನಿ ಪ್ರಾವಹಿ.
18. ಗಣಪತಿ, ಕುಬೇರ, ವಾಯುಪುತ್ರನಾದ ವಿಷ್ವಕ್ಸೇನ, ಅಶ್ವಿಗಳು, (ವಸುಪ್ರಧಾನವಾದ ಅಗ್ನಿಯನ್ನು ಬಿಟ್ಟು ಉಳಿದ) 7 ಮಂದಿ ವಸುಗಳು. 6 ಮಂದಿ ಆದಿತ್ಯರು : ಧಾತಾ, ಅರ್ಯಮಾ, ತ್ವಷ್ಟಾ, ಸವಿತಾ, ಭಗ ಮತ್ತು ಪೂಷಾ, 10 ಮಂದಿ ವಿಶ್ವೇ ದೇವತೆಗಳು, (5ನೆಯ ಕಕ್ಷೆಯಲ್ಲಿ ಬಂದ ಪ್ರಧಾನ ರುದ್ರನನ್ನು ಬಿಟ್ಟು ಉಳಿದ) 10 ಮಂದಿ ರುದ್ರರು, (49 ಮಂದಿ ಮರುತ್ತುಗಳಲ್ಲಿ ಹಿಂದೆ ಹೇಳಿದ ಅಹಂಪ್ರಾಣ ಮತ್ತು ಪ್ರವಹನನ್ನು ಬಿಟ್ಟು ಉಳಿದ) 47 ಮಂದಿ ಮರುತ್ತುಗಳು, (ಮೂರು ಮಂದಿ ಪ್ರಧಾನ ಪಿತೃಗಳಲ್ಲಿ ಮೂರನೆಯವನಾದ) ಕವ್ಯವಾಹ, ಮೂರು ಮಂದಿ ಋಭುಗಳು (ಋಭು, ವಿಭ್ವಾ ಮತ್ತು ವಾಜ), ದ್ಯಾವಾಪೃಥಿವೀ ದೇವಿಯರು, ಮತ್ತು ಪ್ರಧಾನವಾಯುಪುತ್ರನಾದ ಮರೀಚಿ.
19. ಅಗ್ನಿಪುತ್ರನಾದ ಪಾವಕ, ಪಾದ ದೇವತೆಗಳಾದ ಇಂದ್ರಪುತ್ರ ಜಯಂತ ಮತ್ತು ಶಂಭು, ದೈತ್ಯಗುರು ಶುಕ್ರ, ಅವನ ಸೋದರನಾದ ಚ್ಯವನ, ಬೃಹಸ್ಪತಿಯ ಸೋದರನಾದ ಉಚಥ್ಯ (ಬ್ರಹ್ಮಮಾನಸ ಪುತ್ರರಾದ ಸನಕಾದಿಗಳಲ್ಲಿ 8ನೆಯ ಕಕ್ಷೆಯಲ್ಲಿ ಬಂದ ಸನತ್‌ಕುಮಾರನನ್ನು ಬಿಟ್ಟು ಉಳಿದ ಮೂವರಾದ)ಸನಕ, ಸನಂದನ, ಸನಾತನ ಮತ್ತು ಇತರ 7 ಮಂದಿ ಊರ್ಧ್ವರೇತಸ್ಕರು (ಈ ಹತ್ತು ಮಂದಿ ಮತ್ತು ಈ ಮೊದಲು ಬಂದ ಹತ್ತು ಮಂದಿ ವ್ಯಾಪ್ತದರ್ಶಿ ಋಷಿಗಳನ್ನು ಬಿಟ್ಟು ಉಳಿದ) 80 ಮಂದಿ ಕಶ್ಯಪನೇ ಮೊದಲಾದ ಗೃಹಸ್ಥಋಷಿಗಳು, ಭಾವಿ ಮನ್ವಂತರದ 7 ಮಂದಿ ಇಂದ್ರರು : ಬಲಿ, ಅದ್ಭುತ, ಶಂಭು, ವಿಧೃತಿ, ಋತಧಾಮ, ದಿವಸ್ಪತಿ ಮತ್ತು ಶುಚಿ. (ಈ ಮೊದಲು ಏಳು ಮನ್ವಂತರಗಳಲ್ಲಿ ಮೊದಲನೆಯದಾದ ಸ್ವಾಯಂಭುವ ಮನ್ವಂತರದ ಇಂದ್ರ ಯಜ್ಞನಾಮಕ ವಿಷ್ಣುವೇ. ಅವನು ಪ್ರಥಮ ಕಕ್ಷೆಯಲ್ಲಿ ಉಲ್ಲೇಖಗೊಂಡಿದ್ದಾನೆ. ಎರಡನೆಯ ಸ್ವಾರೋಚಿಷ ಮನ್ವಂತರದ ಇಂದ್ರ ರೋಚನ ನಾಮಕ ವಾಯು. ಇವನು ಮೂರನೆಯ ಕಕ್ಷೆಯಲ್ಲಿ ಉಲ್ಲೇಖಗೊಂಡಿದ್ದಾನೆ. ಮೂರನೆಯ ಉತ್ತಮ ಮನ್ವಂತರದ ಇಂದ್ರ ಸತ್ಯಜಿತ್ ನಾಮಕನಾದ ಯಮಧರ್ಮ. ಇವನು 12ನೆಯ ಕಕ್ಷೆಯಲ್ಲಿ ಬಂದಿದ್ದಾನೆ. ನಾಲ್ಕನೆಯ ತಾಪಸ ಮನ್ವಂತರದ ಇಂದ್ರ ತ್ರಿಶಿಖ. ಇವನು ಅಶ್ವಿಗಳಲ್ಲಿ ಎರಡನೆಯವನಾದ ದಸ್ರ, ಇವರಿಬ್ಬರೂ ಎಂಟನೆಯ ಕಕ್ಷೆಯಲ್ಲಿ ಬಂದ ಇಂದ್ರ ಸ್ವರೂಪರು). 11 ಮಂದಿ ಮನುಗಳು : ಸ್ವಾರೋಚಿಷ, ಉತ್ತಮ, ರೈವತ, ಚಾಕ್ಷುಷ (ಸೂರ್ಯ) ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ (14 ಮನುಗಳಲ್ಲಿ ಮೊದಲನೆಯವ ಸ್ವಾಯಂಭುವ ಮನು. ಅವನು 10ನೆಯ ಕಕ್ಷೆಯಲ್ಲಿ ಬಂದಿದ್ದಾನೆ. ನಾಲ್ಕನೆಯವ ತಾಪಸಮನು. ಅವನು ಸ್ವಯಂ ನಾರಾಯಣನ ಅವತಾರ. 7ನೆಯವ ವೈವಸ್ವತ ಮನು. ಅವನು 16ನೇ ಕಕ್ಷೆಯಲ್ಲಿ ಬಂದಿದ್ದಾನೆ. ಉಳಿದ 11 ಮಂದಿ ಈ ಕಕ್ಷೆಯಲ್ಲಿ ಬರುವವರು.) 7 ಮಂದಿ ಪಿತೃಪತಿಗಳು (10 ಮಂದಿಯಲ್ಲಿ ಮೂವರು ಪ್ರಧಾನರು ಈ ಮೊದಲೇ ಬಂದಿದ್ದಾರೆ. ಇಬ್ಬರು 12ನೆಯ ಕಕ್ಷೆಯಲ್ಲಿ. ಒಬ್ಬ.18ನೆಯ ಕಕ್ಷೆಯಲ್ಲಿ). 8 ಮಂದಿ ದ್ವಾರಪಾಲಕರು : ಜಯ, ವಿಜಯ, ಚಂಡ, ಪ್ರಚಂಡ, ನಂದ, ಸುನಂದ, ಕುಮುದ ಮತ್ತು ಕುಮುದೇಕ್ಷಣ, 8 ಮಂದಿ ಪ್ರಧಾನ ಗಂಧರ್ವರು, 8 ಮಂದಿ ಪ್ರಧಾನ ಅಪ್ಸರೆಯರು, ವಿಶ್ವಕರ್ಮ, ಚಿತ್ರಗುಪ್ತ ಸೂರ್ಯಸಾರಥಿ ಅರುಣ, ಐರಾವತ,

ನಂದಿ, ಸುರಭಿ, ಕಲ್ಪವೃಕ್ಷಾದಿ ದೇವತೆಗಳು, ಅಭಿಜಿತ್-ವಿಷುವದ್ ದೇವತೆಗಳು, ಓಷಧಿ ವನಸ್ಪತಿ ದೇವತೆಗಳು ಮತ್ತು ಕರ್ಮದೇವತೆಗಳಾದ 100 ಮಂದಿ ರಾಜರ್ಷಿಗಳು : ಪೃಥು, ಕಾರ್ತವೀರ್ಯ, ಶತಬಿಂದು, ಪ್ರಿಯವ್ರತ, ಉತ್ತಾನಪಾದ, ಮಾಂಧಾತಾ, ಗಯ, ಕಕುತ್‌ಸ್ಥ, ನಹುಷ, ಅಂಬರೀಷ, ದುಷ್ಯಂತ ಪುತ್ರನಾದ ಭರತ, ಋಷಭ ಪುತ್ರನಾದ ಭರತ, ಮರುತ್ತ, ಹರಿಶ್ಚಂದ್ರ, ಪ್ರಹ್ಲಾದ, ಪರೀಕ್ಷಿತ್ ಮೊದಲಾದವರು.

20. ಪರ್ಜನ್ಯ (12 ಆದಿತ್ಯರಲ್ಲಿ ಕೊನೆಯವ), ಅನಿರುದ್ಧಪತ್ನಿ ಉಷಾ (ವಿರಾಟ್), ಚಂದ್ರ ಪತ್ನಿ ರೋಹಿಣಿ, ಸೂರ್ಯ ಪತ್ನಿ ಸಂಜ್ಞೆ, ಯಮ ಪತ್ನಿ ಶ್ಯಾಮಲಾ ಮತ್ತು ವರುಣ ಪತ್ನಿ ಗಂಗಾ.

21. ಕೆಲ ಮಂದಿ (ಕೂರ್ಮಾದಿ) ಅನಾಖ್ಯಾತ ದೇವತೆಗಳು.

22. ಅಗ್ನಿಪತ್ನಿಯಾದ ಸ್ವಾಹಾ.

23. ಜಲಾಭಿಮಾನಿಯಾದ ಬುಧ.

24. ಅಶ್ವಿಗಳ ಪತ್ನಿಯಾದ ಉಷಸ್.

25. ಕುಜ.

26. ಪೃಥಿವಿಯ ಅಭಿಮಾನಿಯಾದ ಶನಿ.

27. ವರುಣ ಪುತ್ರ ಕರ್ಮಾಭಿಮಾನಿ ಪುಷ್ಕರ.

28. ಕೃಷ್ಣಪತ್ನಿಯರಾಗಿ ಜನಿಸಿದ 16,100 ಮಂದಿ ಅಗ್ನಿಪುತ್ರರು.

29. ಅನಾಖ್ಯಾತರಾದ ಆಜಾನಜ ದೇವತೆಗಳು. 100 ಮಂದಿ ಗಂಧರ್ವರು. 100 ಮಂದಿ ಅಪ್ಸರೆಯರು. (ಶತಕೋಟಿ ಋಷಿಗಳಲ್ಲಿ ಹಿಂದೆ ಹೇಳಿದ 100 ಮಂದಿಯನ್ನು ಬಿಟ್ಟು ಉಳಿದ) 99,99,900 ಮಂದಿ ಋಷಿಗಳ ಗಣ.

30. ಹಿಂದೆ ಹೇಳಿದ ಏಳು ಮಂದಿ ಪಿತೃಪತಿಗಳ ಸಂತತಿಯಾದ ಚಿರಪಿತೃಗಳ ಗಣ.

31. (ಹಿಂದೆ 19ನೆಯ ಕಕ್ಷೆಯಲ್ಲಿ ಬಂದ 8 ಮಂದಿ ಮತ್ತು 29ನೆಯ ಕಕ್ಷೆಯಲ್ಲಿ ಬಂದ 100 ಮಂದಿಯನ್ನು ಬಿಟ್ಟು ಉಳಿದ) ಗಂಧರ್ವರ ಮತ್ತು ಅಪ್ಸರೆಯರ ಗಣ.

32. ಮನುಷ್ಯ ಗಂಧರ್ವರು.

ಇದು ಶಾಸ್ತ್ರಗಳಲ್ಲಿ ಉಲ್ಲೇಖಗೊಂಡ ದೇವತಾ ಸಮುದಾಯ. ಇದರಲ್ಲಿ ಒಂದು ಕಕ್ಷೆಯ ಗುಂಪಿನಲ್ಲಿ ಬಂದವರೆಲ್ಲ ಯೋಗ್ಯತೆಯಲ್ಲಿ ಸಮಾನರು. ಕೆಳಗಿನ ಕಕ್ಷೆಯವರು ಮೇಲಿನ ಕಕ್ಷೆಯವರಿಗಿಂತ ಅಧಮರು. ಹೀಗೆ 32 ಕಕ್ಷೆಗಳಲ್ಲಿ, 32 ಮೆಟ್ಟಲುಗಳಲ್ಲಿ ಪ್ರಾಚೀನರು ದೇವತಾ ತಾರತಮ್ಯವನ್ನು ಗುರುತಿಸಿದ್ದಾರೆ. ಇಲ್ಲಿ ಬಂದ ಎಲ್ಲ ಪ್ರಮುಖ ದೇವತೆಗಳು ನಮ್ಮ ಅಂಗಾಂಗಗಳಲ್ಲಿದ್ದು ನಮ್ಮ ಬದುಕನ್ನು ನಿಯಂತ್ರಿಸುವವರು, ನಮ್ಮನ್ನು ಸಾಧನೆಯಲ್ಲಿ ಮುನ್ನಡೆಸುವವರು.

ಈ ಎಲ್ಲ ದೇವತೆಗಳಲ್ಲೂ ಅಂತರ್ಯಾಮಿಯಾಗಿರುವ ಭಗವಂತನೆ ಮುಖ್ಯ ಪ್ರೇರಕ, ಅನಂತರೂಪಗಳಿಂದ ಅವನು ಎಲ್ಲ ದೇವತೆಗಳ ಒಳಗೂ ಪ್ರವೇಶಿಸಿ ಅವರ ಹೃದಯದಲ್ಲಿ ನೆಲಸಿರುವುದರಿಂದ ಅವನು 'ವಿಶ್ವ'ನೆನಿಸಿದ್ದಾನೆ.

**ತೀರ್ಥಕೋಟಿ ಸಹಸ್ರಾಣಿ ವ್ರತಕೋಟಿ ಶತಾನಿ ಚ |**
**ನಾರಾಯಣ ಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್ ||**

## ನೈವೇದ್ಯ ಪದಾರ್ಥಗಳಿಗೆ ಅಭಿಮಾನಿ ದೇವತೆಗಳು

| ಪದಾರ್ಥದ ಹೆಸರು | ಅಭಿಮಾನಿ ದೇವತೆ | ನಿಯಾಮಕ ಭಗವದ್ರೂಪ |
|---|---|---|
| ಅನ್ನ | ಚಂದ್ರ | ಕೇಶವ |
| ಪರಮಾನ್ನ | ಭಾರತೀ | ನಾರಾಯಣ |
| ಭಕ್ಷ್ಯಗಳು | ಸೂರ್ಯ | ಮಾಧವ |
| ತುಪ್ಪ | ಲಕ್ಷ್ಮೀ | ಗೋವಿಂದ |
| ಹಾಲು | ಸರಸ್ವತೀ | ವಿಷ್ಣು |
| ಮಂಡಿಗೆ | ಚತುರ್ಮುಖ ಬ್ರಹ್ಮ | ಮಧುಸೂದನ |
| ಬೆಣ್ಣೆ | ವಾಯು | ತ್ರಿವಿಕ್ರಮ |
| ಮೊಸರು | ವರುಣ | ವಾಮನ |
| ತೊವ್ವೆ | ಗರುಡ | ಶ್ರೀಧರ |
| ಸೊಪ್ಪು | ಮಿತ್ರ ಸೂರ್ಯ | ಹೃಷೀಕೇಶ |
| ಕಾಯಿಪಲ್ಲೆ | ಶೇಷ | ಪದ್ಮನಾಭ |
| ಹುಳಿಪದಾರ್ಥ | ಗೌರೀ | ದಾಮೋದರ |
| ಹುಳಿಯಿಲ್ಲದ ಪದಾರ್ಥಗಳು | ರುದ್ರ | ಸಂಕರ್ಷಣ |
| ಸಕ್ಕರೆ, ಬೆಲ್ಲ | ಇಂದ್ರ | ವಾಸುದೇವ |
| ವ್ಯಂಜನ ಪದಾರ್ಥಗಳು | ಬೃಹಸ್ಪತಿ | ಪ್ರದ್ಯುಮ್ನ |
| ಕಟುದ್ರವ್ಯಗಳು | ಯಮ | ಅನಿರುದ್ಧ |
| ಇಂಗು, ಏಲಕ್ಕಿ, ಕರ್ಪೂರ | ಮನ್ಮಥ | ಪುರುಷೋತ್ತಮ |
| ಕರಿದ ಪದಾರ್ಥಗಳು | ಜಯಂತ | ಅಧೋಕ್ಷಜ |
| ಎಳ್ಳು, ಉದ್ದು, ಕುಂಬಳ | ದಕ್ಷ | ನಾರಸಿಂಹ |
| ಉದ್ದಿನ ಭಕ್ಷ್ಯಗಳು | ಸ್ವಾಯಂಭುವಮನು | ಅಚ್ಯುತ |
| ಉಪ್ಪು | ನಿರ್ಋತಿ | ಜನಾರ್ದನ |
| ಹಣ್ಣು, ಹಣ್ಣಿನ ರಸ | ಅಹಂಕಾರಿಕ ಪ್ರಾಣ | ಉಪೇಂದ್ರ |
| ತಾಂಬೂಲ | ಗಂಗಾ | ಶ್ರೀಹರಿ |
| ಸ್ವಾದೂದಕ | ಬುಧ | ಶ್ರೀಕೃಷ್ಣ |

## ಷಡ್ರಸಗಳ ಅಭಿಮಾನಿ ದೇವತೆಗಳು

1. ಮಧುರ - ರಮಾ, ವಾಯು
2. ಕಷಾಯ - ಸೌಪರ್ಣೀ, ಶಚೀ
3. ಆಮ್ಲ - ಭೂದೇವಿ, ಸರಸ್ವತೀ
4. ತಿಕ್ತ - ಉಮಾ, ಶಾಮಲಾ
5. ಕಟು - ಸೌಪರ್ಣೀ, ಸೂರ್ಯ, ವರುಣ
6. ಲವಣ - ಉದಾನ

ನಂದಿ, ಸುರಭಿ, ಕಲ್ಪವೃಕ್ಷಾದಿ ದೇವತೆಗಳು, ಅಭಿಜಿತ್-ವಿಷುವದ್ ದೇವತೆಗಳು, ಓಷಧಿ ವನಸ್ಪತಿ ದೇವತೆಗಳು ಮತ್ತು ಕರ್ಮದೇವತೆಗಳಾದ 100 ಮಂದಿ ರಾಜರ್ಷಿಗಳು : ಪೃಥು, ಕಾರ್ತವೀರ್ಯ, ಶತಬಿಂದು, ಪ್ರಿಯವ್ರತ, ಉತ್ತಾನಪಾದ, ಮಾಂಧಾತಾ, ಗಯ, ಕಕುತ್‌ಸ್ಥ, ನಹುಷ, ಅಂಬರೀಷ, ದುಷ್ಯಂತ ಪುತ್ರನಾದ ಭರತ, ಋಷಭ ಪುತ್ರನಾದ ಭರತ, ಮರುತ್ತ, ಹರಿಶ್ಚಂದ್ರ, ಪ್ರಹ್ಲಾದ, ಪರೀಕ್ಷಿತ್ ಮೊದಲಾದವರು.

20. ಪರ್ಜನ್ಯ (12 ಆದಿತ್ಯರಲ್ಲಿ ಕೊನೆಯವ), ಅನಿರುದ್ಧಪತ್ನಿ ಉಷಾ (ವಿರಾಟ್), ಚಂದ್ರ ಪತ್ನಿ ರೋಹಿಣಿ, ಸೂರ್ಯ ಪತ್ನಿ ಸಂಜ್ಞೆ, ಯಮ ಪತ್ನಿ ಶ್ಯಾಮಲಾ ಮತ್ತು ವರುಣ ಪತ್ನಿ ಗಂಗಾ.
21. ಕೆಲ ಮಂದಿ (ಕೂರ್ಮಾದಿ) ಅನಾಖ್ಯಾತ ದೇವತೆಗಳು.
22. ಅಗ್ನಿಪತ್ನಿಯಾದ ಸ್ವಾಹಾ.
23. ಜಲಾಭಿಮಾನಿಯಾದ ಬುಧ.
24. ಅಶ್ವಿಗಳ ಪತ್ನಿಯಾದ ಉಷಸ್.
25. ಕುಜ.
26. ಪೃಥಿವಿಯ ಅಭಿಮಾನಿಯಾದ ಶನಿ.
27. ವರುಣ ಪುತ್ರ ಕರ್ಮಾಭಿಮಾನಿ ಪುಷ್ಕರ.
28. ಕೃಷ್ಣಪತ್ನಿಯರಾಗಿ ಜನಿಸಿದ 16,100 ಮಂದಿ ಅಗ್ನಿಪುತ್ರರು.
29. ಅನಾಖ್ಯಾತರಾದ ಆಜಾನಜ ದೇವತೆಗಳು. 100 ಮಂದಿ ಗಂಧರ್ವರು. 100 ಮಂದಿ ಅಪ್ಸರೆಯರು. (ಶತಕೋಟಿ ಋಷಿಗಳಲ್ಲಿ ಹಿಂದೆ ಹೇಳಿದ 100 ಮಂದಿಯನ್ನು ಬಿಟ್ಟು ಉಳಿದ) 99,99,900 ಮಂದಿ ಋಷಿಗಳ ಗಣ.
30. ಹಿಂದೆ ಹೇಳಿದ ಏಳು ಮಂದಿ ಪಿತೃಪತಿಗಳ ಸಂತತಿಯಾದ ಚರಪಿತೃಗಳ ಗಣ.
31. (ಹಿಂದೆ 19ನೆಯ ಕಕ್ಷೆಯಲ್ಲಿ ಬಂದ 8 ಮಂದಿ ಮತ್ತು 29ನೆಯ ಕಕ್ಷೆಯಲ್ಲಿ ಬಂದ 100 ಮಂದಿಯನ್ನು ಬಿಟ್ಟು ಉಳಿದ) ಗಂಧರ್ವರ ಮತ್ತು ಅಪ್ಸರೆಯರ ಗಣ.
32. ಮನುಷ್ಯ ಗಂಧರ್ವರು.

ಇದು ಶಾಸ್ತ್ರಗಳಲ್ಲಿ ಉಲ್ಲೇಖಗೊಂಡ ದೇವತಾ ಸಮುದಾಯ. ಇದರಲ್ಲಿ ಒಂದು ಕಕ್ಷೆಯ ಗುಂಪಿನಲ್ಲಿ ಬಂದವರೆಲ್ಲ ಯೋಗ್ಯತೆಯಲ್ಲಿ ಸಮಾನರು. ಕೆಳಗಿನ ಕಕ್ಷೆಯವರು ಮೇಲಿನ ಕಕ್ಷೆಯವರಿಗಿಂತ ಅಧಮರು. ಹೀಗೆ 32 ಕಕ್ಷೆಗಳಲ್ಲಿ, 32 ಮೆಟ್ಟಲುಗಳಲ್ಲಿ ಪ್ರಾಚೀನರು ದೇವತಾ ತಾರತಮ್ಯವನ್ನು ಗುರುತಿಸಿದ್ದಾರೆ. ಇಲ್ಲಿ ಬಂದ ಎಲ್ಲ ಪ್ರಮುಖ ದೇವತೆಗಳು ನಮ್ಮ ಅಂಗಾಂಗಗಳಲ್ಲಿದ್ದು ನಮ್ಮ ಬದುಕನ್ನು ನಿಯಂತ್ರಿಸುವವರು, ನಮ್ಮನ್ನು ಸಾಧನೆಯಲ್ಲಿ ಮುನ್ನಡೆಸುವವರು.
ಈ ಎಲ್ಲ ದೇವತೆಗಳಲ್ಲೂ ಅಂತರ್ಯಾಮಿಯಾಗಿರುವ ಭಗವಂತನೆ ಮುಖ್ಯ ಪ್ರೇರಕ, ಅನಂತರೂಪಗಳಿಂದ ಅವನು ಎಲ್ಲ ದೇವತೆಗಳ ಒಳಗೂ ಪ್ರವೇಶಿಸಿ ಅವರ ಹೃದಯದಲ್ಲಿ ನೆಲಸಿರುವುದರಿಂದ ಅವನು 'ವಿಶ್ವ'ನೆನಿಸಿದ್ದಾನೆ.

ತೀರ್ಥಕೋಟಿ ಸಹಸ್ರಾಣಿ ವ್ರತಕೋಟಿ ಶತಾನಿ ಚ |
ನಾರಾಯಣ ಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್ ||

## ನೈವೇದ್ಯ ಪದಾರ್ಥಗಳಿಗೆ ಅಭಿಮಾನಿ ದೇವತೆಗಳು

| ಪದಾರ್ಥದ ಹೆಸರು | ಅಭಿಮಾನಿ ದೇವತೆ | ನಿಯಾಮಕ ಭಗವದ್ರೂಪ |
|---|---|---|
| ಅನ್ನ | ಚಂದ್ರ | ಕೇಶವ |
| ಪರಮಾನ್ನ | ಭಾರತೀ | ನಾರಾಯಣ |
| ಭಕ್ಷ್ಯಗಳು | ಸೂರ್ಯ | ಮಾಧವ |
| ತುಪ್ಪ | ಲಕ್ಷ್ಮೀ | ಗೋವಿಂದ |
| ಹಾಲು | ಸರಸ್ವತೀ | ವಿಷ್ಣು |
| ಮಂಡಿಗೆ | ಚತುರ್ಮುಖ ಬ್ರಹ್ಮ | ಮಧುಸೂದನ |
| ಬೆಣ್ಣೆ | ವಾಯು | ತ್ರಿವಿಕ್ರಮ |
| ಮೊಸರು | ವರುಣ | ವಾಮನ |
| ತೊವ್ವೆ | ಗರುಡ | ಶ್ರೀಧರ |
| ಸೊಪ್ಪು | ಮಿತ್ರ ಸೂರ್ಯ | ಹೃಷೀಕೇಶ |
| ಕಾಯಿಪಲ್ಲೆ | ಶೇಷ | ಪದ್ಮನಾಭ |
| ಹುಳಿಪದಾರ್ಥ | ಗೌರೀ | ದಾಮೋದರ |
| ಹುಳಿಯಿಲ್ಲದ ಪದಾರ್ಥಗಳು | ರುದ್ರ | ಸಂಕರ್ಷಣ |
| ಸಕ್ಕರೆ, ಬೆಲ್ಲ | ಇಂದ್ರ | ವಾಸುದೇವ |
| ವ್ಯಂಜನ ಪದಾರ್ಥಗಳು | ಬೃಹಸ್ಪತಿ | ಪ್ರದ್ಯುಮ್ನ |
| ಕಟುದ್ರವ್ಯಗಳು | ಯಮ | ಅನಿರುದ್ಧ |
| ಇಂಗು, ಏಲಕ್ಕಿ, ಕರ್ಪೂರ | ಮನ್ಮಥ | ಪುರುಷೋತ್ತಮ |
| ಕರಿದ ಪದಾರ್ಥಗಳು | ಜಯಂತ | ಅಧೋಕ್ಷಜ |
| ಎಳ್ಳು, ಉದ್ದು, ಕುಂಬಳ | ದಕ್ಷ | ನಾರಸಿಂಹ |
| ಉದ್ದಿನ ಭಕ್ಷ್ಯಗಳು | ಸ್ವಾಯಂಭುವಮನು | ಅಚ್ಯುತ |
| ಉಪ್ಪು | ನಿರ್ಋತಿ | ಜನಾರ್ದನ |
| ಹಣ್ಣು, ಹಣ್ಣಿನ ರಸ | ಅಹಂಕಾರಿಕ ಪ್ರಾಣ | ಉಪೇಂದ್ರ |
| ತಾಂಬೂಲ | ಗಂಗಾ | ಶ್ರೀಹರಿ |
| ಸ್ವಾದೂದಕ | ಬುಧ | ಶ್ರೀಕೃಷ್ಣ |

## ಷಡ್ರಸಗಳ ಅಭಿಮಾನಿ ದೇವತೆಗಳು

1. ಮಧುರ - ರಮಾ, ವಾಯು
2. ಕಷಾಯ - ಸೌಪರ್ಣೀ, ಶಚೀ
3. ಆಮ್ಲ - ಭೂದೇವಿ, ಸರಸ್ವತೀ
4. ತಿಕ್ತ - ಉಮಾ, ಶಾಮಲಾ
5. ಕಟು - ಸೌಪರ್ಣೀ, ಸೂರ್ಯ, ವರುಣ
6. ಲವಣ - ಉದಾನ

